ಸಂಪುಟ
೩೧



KARNATAKA ITIHASA ACADEMY
कर्नाटक इतिहास अकादमि

# ಇತಿಹಾಸ ದರ್ಶನ

## ೨೦೧೯


ಸಂಪಾದಕರು

ಡಾ. ದೇವರಕೊಂಡಾರೆಡ್ಡಿ

ಪ್ರೊ. ಜಿ.ಕೆ. ದೇವರಾಜಸ್ವಾಮಿ



ಕರ್ನಾಟಕ ಇತಿಹಾಸ ಅಕಾದೆಮಿ (ರಿ.), ಬೆಂಗಳೂರು

# ಇತಿಹಾಸ ದರ್ಶನ ಸಂಪುಟ ೩೦ರ ಬಿಡುಗಡೆ ಸಮಾರಂಭ




ವೇದಿಕೆಯಲ್ಲಿ : ಡಾ. ಲಿಂಗರಾಜು, ಡಾ. ದೇವರಕೊಂಡಾರೆಡ್ಡಿ, ಡಾ. ಆರ್. ಗೋಪಾಲ್, ಡಾ. ಎಂ.ಎಸ್. ಕೃಷ್ಣಮೂರ್ತಿ
ಡಾ. ಹಂಪ ನಾಗರಾಜಯ್ಯ, ಡಾ. ಪರಮಶಿವಮೂರ್ತಿ, ಶ್ರೀ ಎಂ. ಶ್ರೀನಿವಾಸ್, ಡಾ. ಎಂ.ಜಿ. ನಾಗರಾಜ್
ಪ್ರೊ. ಜೈಪ್ರಕಾಶ್ ಗೌಡ, ಡಾ. ಎಸ್. ಶಿವರಾಮ್

# ಇತಿಹಾಸ ದರ್ಶನ

## ITIHASA DARSANA - *Volume 31* / 2016

ಸಂಪುಟ ೩೧ / ೨೦೧೬

೨೦೧೫ರ ಅಕ್ಟೋಬರ್ ೨೯ರಿಂದ ೩೧ರವರೆಗೆ ಕರ್ನಾಟಕ ಇತಿಹಾಸ ಅಕಾದೆಮಿ ಹಾಗೂ ಮಂಡ್ಯ ಜಿಲ್ಲೆಯ ಕರ್ನಾಟಕ ಸಂಘ (ರಿ.) ಇವರ ಸಂಯುಕ್ತ ಆಶ್ರಯದಲ್ಲಿ ಹಿಂದಿ ಭವನ ಪ್ರೇಮ್‌ಚಂದ್ ಸಭಾಂಗಣ ಮಂಡ್ಯದಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ೨೯ನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ.

ಸಂಪಾದಕರು

**ಡಾ॥ ದೇವರಕೊಂಡಾರೆಡ್ಡಿ**

**ಪ್ರೊ. ಜಿ.ಕೆ. ದೇವರಾಜಸ್ವಾಮಿ**




**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

**ITIHĀSA DARŚANA** - ***Volume 31* / 2016**

The Volume of the Scholarly papers presented and the General body
Proceedings of the 29th Annual Conference of

**The Karnataka Ithihasa Academy** (Regd.,)
held at Karnataka Sangha (R.), Mandya Dist.
on 29th, 30th & 31st October 2015

ಪುಟಗಳು : ೫೭೨ + xxxii + Col. Photos XII

Pages : 572 + xxxii + Co. Photos XII



Edited by : **Dr. Devarakondareddy**
**Prof. G.K. Devarajaswamy**

Published by : Secretary
Karnataka Itihasa Academy (Regd.)
# 43/13, Mathru Krupa, 2nd Floor, 2nd Main Road
5th Cross, Mount Joy Extension, Hanumanthanagar, Bangalore - 560 019.

e-mail : **karnatakaitihasaacademy25@gmail.com**
Blog : **itihasaacademy.blogspot.in**
Web : **www.karnatakaitihasaacademy.org**

Price : ₹ **650**

ಬೆಲೆ : ₹ ೬೫೦

ಆರ್ಥಿಕ ನೆರವು : ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ.
ಶ್ರೀ ಜಗದ್ಗುರು ರಂಭಾಪುರಿ ವೀರಸಿಂಹಾಸನ ಮಹಾಸಂಸ್ಥಾನ ಪೀಠ, ಬಾಳೇಹೊನ್ನೂರು.

**ISBN No. 978-81-921255-6-5**

Printed at
ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA Bangalore
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



॥ಶ್ರೀ ಜಗದ್ಗುರು ರೇಣುಕಾಚಾರ್ಯ: ಪ್ರಸೀದತು॥

ಮಾನವ ಧರ್ಮಕ್ಕೆ ಜಯವಾಗಲಿ।
ಧರ್ಮದಿಂದಲೇ ವಿಶ್ವಕ್ಕೆ ಶಾಂತಿ॥



ಸಾಹಿತ್ಯ-ಸಂಸ್ಕೃತಿ ಸಂವರ್ಧಿಸಲಿ।
ಶಾಂತಿ-ಸಮೃದ್ಧಿ ಸರ್ವರಿಗಾಗಲಿ॥

ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ 1008 ಜಗದ್ಗುರು
ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು,

ಬಾಳೆಹೊನ್ನೂರು 577112 ಚಿಕ್ಕಮಗಳೂರು ಜಿಲ್ಲೆ ಕರ್ನಾಟಕ ರಾಜ್ಯ

ದಿನಾಂಕ : 22-7-2016. ವಾಸ್ತವ್ಯ : ಮಲಯಾಚಲ ತಪೋಭೂಮಿ

# ಶುಭಾಶೀರ್ವಾದ ಸಂದೇಶ

ಮಾನವೀಯ ಸಂಬಂಧಗಳ ಸರಪಳಿ ಗಟ್ಟಿಗೊಳ್ಳಬೇಕು. ಪ್ರಾಚೀನ ಇತಿಹಾಸ ಪರಂಪರೆಯ ಅರಿವು ಬೇಕು. ಧರ್ಮ ದೇವರು ನಂಬಿಕೆ ಶ್ರದ್ಧೆ ಇವೆಲ್ಲವುಗಳನ್ನು ಅಲ್ಲಗಳೆಯಲಾಗದು. ದೊಡ್ಡ ದೊಡ್ಡ ಮಾತುಗಳನ್ನು ಆಡುವುದರಿಂದ ಮನುಷ್ಯ ದೊಡ್ಡವನಾಗುವುದಿಲ್ಲ. ಸತ್ಯದ ನಿಜ ಸಂಗತಿಗಳನ್ನು ಅರಿತು ಬಾಳಿದಾಗ ಬದುಕು ಪ್ರಬುದ್ಧಗೊಳ್ಳಲು ಸಾಧ್ಯವಾಗುತ್ತದೆ. ಹಣತೆ ಬೆಳಗುವುದೇ ಹೊರತು ಉರಿಯುವುದಿಲ್ಲ. ಆದರೆ ಮನುಷ್ಯ ಉರಿಯುತ್ತಿದ್ದಾನೆ ಎಂಬುದನ್ನು ಅರಿಯಬೇಕಾಗಿದೆ. ಮೊದಲು ಮತ್ತು ಕೊನೆಗೆ ಉಳಿಯುವುದು ದೇವರು ಧರ್ಮ. ಇವೆರಡರ ನಡುವಿನ ಹಗ್ಗ ಜಗ್ಗಾಟ ಲೌಕಿಕದ ಬದುಕಾಗಿದೆ. ಈ ಬಾಳ ಬದುಕು ಸುಂದರಗೊಳ್ಳಲು ಬೆಳಕು ಬೇಕು.

ಹಗಲು-ರಾತ್ರಿ ಎಂಬ ರೈಲಿನಲ್ಲಿ ಎಲ್ಲರೂ ಪ್ರಯಾಣಿಸುತ್ತಿರುತ್ತಾರೆ. ರೈಲಿನಲ್ಲಿರುವ ಕುರ್ಚಿ ಶಾಶ್ವತವಲ್ಲ. ಒಳಗಿನವರು ಹೊರಗೆ ಹೊರಗಿನವರು ಒಳಗೆ ಬರಲೇಬೇಕಾಗುತ್ತದೆ. ಯಾವುದು ಯಾರೂ ಶಾಶ್ವತವಲ್ಲ. ಸಾವಿರಾರು ಜನ ಹತ್ತಿ ಇಳಿಯುತ್ತಿದ್ದರೂ ಚಾಲಕ ಯಾರ ಕಣ್ಣಿಗೂ ಕಾಣುವುದಿಲ್ಲ. ಹಾಗೆಯೇ ದೇವರು ನಮ್ಮೆಲ್ಲರ ಕಣ್ಣಿಗೆ ಕಾಣದಿದ್ದರೂ ಅವನ ಕಾರ್ಯ ನಿರಂತರ ಮಾಡುತ್ತಲೇ ಮುನ್ನಡೆದಿರುವುದನ್ನು ಕಾಣುತ್ತೇವೆ. ಇತಿಹಾಸದ ಗಂಧ ಗಾಳಿ ಗೊತ್ತಿಲ್ಲದವರು ಏನೇನೋ ಅಪಚಾರದ ಮಾತುಗಳನ್ನಾಡಿದರೂ ಅದಕ್ಕಿರುವ ಮೌಲ್ಯ ಕಡಿಮೆಯಾಗುವುದಿಲ್ಲ. ಆಧುನಿಕತೆ ಮತ್ತು ವೈಚಾರಿಕತೆಯ ಹೆಸರಿನಲ್ಲಿ ಇತಿಹಾಸ ಪರಂಪರೆ ಮತ್ತು ಮೌಲ್ಯಗಳನ್ನು ನಾಶ ಮಾಡುವುದು ಒಳ್ಳೆಯದಲ್ಲ.

ತಪ್ಪು ದಾರಿಯಲ್ಲಿ ನೂರು ಹೆಜ್ಜೆ ನಡೆದು ಹಿಂತಿರುಗುವುದಕ್ಕಿಂತ ಸರಿಯಾದ ಮಾರ್ಗದಲ್ಲಿ ಎರಡು ಹೆಜ್ಜೆ ಇರಿಸುವುದು ಒಳ್ಳೆಯದು. ಬೇರು ಆಳಕ್ಕೆ ಹೋಗಿರುವ ಮರಗಳು ಬಿರುಗಾಳಿ ಬೀಸಿದರೂ ಎದುರಿಸುತ್ತವೆ. ಬೇರುಗಳು ಗಟ್ಟಿಯಿಲ್ಲದ ಮರಗಳು ನೆಲಕ್ಕೆ ಉರುಳುತ್ತವೆ. ನಾವು ಇತಿಹಾಸ ಪರಂಪರೆಯಲ್ಲಿ ಗಟ್ಟಿಗೊಂಡು ನಡೆದರೆ ಯಾರೂ ಏನು ಮಾಡಲು ಸಾಧ್ಯವಿಲ್ಲ. ಗಟ್ಟಿಗೊಳಿಸುವ ಕಾರ್ಯದಲ್ಲಿ ಅರಿತವರು ಅರಿಯಲಾರದವರಿಗೆ ಅರಿವು ಮೂಡಿಸುವ ಮಹತ್ಕಾರ್ಯ ಮಾಡಬೇಕಾಗಿದೆ. ನಮ್ಮಿಂದ ತಪ್ಪಾಗಿದೆ ಎಂದು ತಿಳಿದ ಮೇಲೂ ಅದನ್ನು ತಿದ್ದಿಕೊಳ್ಳುವ ಪ್ರಯತ್ನ ಮಾಡದಿದ್ದರೆ ಮತ್ತೊಂದು ದೊಡ್ಡ ತಪ್ಪು ಮಾಡಿದಂತೆ. ತಪ್ಪು ತಪ್ಪಾಗಿಯೇ ಉಳಿಯಲು ಬಿಡದೇ ಸತ್ಯ ಇತಿಹಾಸ ಅರಿತು ಬಾಳಲು ಮುಂದಾಗಬೇಕಾಗಿದೆ.

ಕರ್ನಾಟಕ ಇತಿಹಾಸ ಅಕಾದೆಮಿ (ರಿ) ರಾಜ್ಯದಲ್ಲಿ ಅತ್ಯುತ್ತಮ ಕಾರ್ಯ ಮಾಡುತ್ತಿದೆ. ಪ್ರಾಚೀನ ಇತಿಹಾಸ-ಪರಂಪರೆ-ಶಾಸನಗಳ ಬಗೆಗೆ ಹೊಸ ಬೆಳಕು ಮೂಡಿಸುತ್ತಿರುವುದು ಸಂತಸದ ಸಂಗತಿ. ಕರ್ನಾಟಕ ಇತಿಹಾಸ ಅಕಾದೆಮಿ 30ನೇ ವಾರ್ಷಿಕ ಸಮ್ಮೇಳನ ಅಕ್ಟೋಬರನಲ್ಲಿ ನಡೆಯಲಿರುವುದು ಹೆಮ್ಮೆಯ ಸಂಗತಿ. 31ನೇ ಇತಿಹಾಸ ದರ್ಶನ ಸಂಪುಟ ಪ್ರಕಟಣೆಗಾಗಿ ಪ್ರತಿ ವರುಷದಂತೆ ಈ ವರ್ಷವೂ ಸಹ ಶ್ರೀ ಜಗದ್ಗುರು ರಂಭಾಪುರಿ ಪೀಠದಿಂದ ಇಪ್ಪತ್ತೈದು ಸಾವಿರ (25000/-) ರೂಪಾಯಿಗಳನ್ನು ದಯಪಾಲಿಸಲಾಗಿದೆ. ಮಹತ್ವ ಪೂರ್ಣ ಇತಿಹಾಸ ದರ್ಶನ ಸಂಪುಟ ರಚನೆಗಾಗಿ ಶ್ರಮಿಸಿದ ಲೇಖಕರಿಗೆ ಮತ್ತು ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೂ ಶುಭ ಹಾರೈಕೆಗಳು.

ಪರಮದಯಾಳು ಶ್ರೀ ಪಾರ್ವತಿ ಪರಮೇಶ್ವರರು, ಶ್ರೀ ಜಗದ್ಗುರು ರೇಣುಕಾಚಾರ್ಯರು ಹಾಗೂ ಕ್ಷೇತ್ರನಾಥ ಶ್ರೀ ವೀರಭದ್ರಸ್ವಾಮಿ ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಶುಭಾಶೀರ್ವಾದಗಳೊಂದಿಗೆ
ಶ್ರೀ ರಂಭಾಪುರಿ ಜಗದ್ಗುರುಗಳು
ಬಾಳೆಹೊನ್ನೂರು



ಪುರಾತತ್ವ ವಸ್ತುಗಳು ಜಡ ಪದಾರ್ಥಗಳು
ಅವು ಮೌನ. ತಾವಾಗಿಯೇ ಮಾತನಾಡುವುದಿಲ್ಲ
ಅವುಗಳನ್ನು ನಾವೇ ಮಾತಾಡಿಸಬೇಕು. ಆಗ ಮಾತ್ರ
ಪ್ರಾರಂಭಿಸುತ್ತವೆ, 'ಸಂವಾದ' ಇದೇ ಇತಿಹಾಸ

-ಡಾ. ಎಸ್.ಕೆ. ಜೋಷಿ



ಡಾ॥ ಹಂಪ ನಾಗರಾಜಯ್ಯ

ಕರ್ನಾಟಕ ಇತಿಹಾಸ ಅಕಾದೆಮಿಯ

ಇಪ್ಪತ್ತೊಂಬತ್ತನೆಯ ವಾರ್ಷಿಕ ಸಮ್ಮೇಳದ ಸರ್ವಾಧ್ಯಕ್ಷರು




ಕರ್ನಾಟಕ ಇತಿಹಾಸ ಅಕಾದೆಮಿಯ 29ನೆಯ ವಾರ್ಷಿಕ ಸಮ್ಮೇಳನದ ಉದ್ಘಾಟನಾ ಸಮಾರಂಭ ಕರ್ನಾಟಕ ಸಂಘ ಮಂಡ್ಯ




ಶ್ರೀ ಶಿವಪ್ಪ ನೀರಲಗಿ ಅವರ 'ತಾಳಿಯ ಕೋಟೆ' ಪುಸ್ತಕ ಬಿಡುಗಡೆ



ಸಮ್ಮೇಳನದಲ್ಲಿ ವಿದ್ವಾಂಸರ ಸಮೂಹ




ಶ್ರೀಮತಿ ವಸುಂಧರಾ ದೇಸಾಯಿ ಅವರ 'ಉಳಿದ ಹಂಪಿ ಮತ್ತು ಗುರು ಬೀಷ್ವಪ್ಪಯ್ಯನವರು' ಪುಸ್ತಕ ಬಿಡುಗಡೆ




ಸಮ್ಮೇಳನದ ಸರ್ವಾಧ್ಯಕ್ಷರಾದ ಡಾ. ಹಂಪ ನಾಗರಾಜಯ್ಯ ಅವರಿಗೆ ಸನ್ಮಾನ




'ಡಾ. ಬಾ.ರಾ. ಗೋಪಾಲ ಪ್ರಶಸ್ತಿ' ಪುರಸ್ಕೃತರಾದ ಡಾ. ಪರಮಶಿವಮೂರ್ತಿ ಅವರಿಗೆ ಸನ್ಮಾನ




'ನೊಳಂಬ ಶ್ರೀ ಪ್ರಶಸ್ತಿ' ಪುರಸ್ಕೃತರಾದ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರಿಗೆ ಸನ್ಮಾನ



ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಫ್ಯಾಮಿಲಿ ಚಾರಿಟಬಲ್ ಟ್ರಸ್ಟ್ ವತಿಯಿಂದ ‘ಇತಿಹಾಸ ಸಂಸ್ಕೃತಿ ಶ್ರೀ’ ಪ್ರಶಸ್ತಿ ಪುರಸ್ಕೃತರಾದ ಡಾ. ಎಂ.ಜಿ. ನಾಗರಾಜ್ ಅವರಿಗೆ ಶ್ರೀ ಅಶೋಕ್‌ಕುಮಾರ್ ಅವರಿಂದ ನಗದು ಅರ್ಪಣೆ



ಪ್ರಶಸ್ತಿ ಪುರಸ್ಕೃತ ವಿದ್ವಾಂಸರು ಮತ್ತು ಗಣ್ಯರು



ಪ್ರೊ. ಜೈಪ್ರಕಾಶ್ ಗೌಡ ಅವರಿಗೆ ಡಾ. ದೇವರಕೊಂಡಾರೆಡ್ಡಿ ಅವರಿಂದ ಸನ್ಮಾನ




ಮಂಡ್ಯ ಜಿಲ್ಲಾಧಿಕಾರಿ
ಶ್ರೀ ಎಂ.ಎನ್. ಅಜಯ್ ನಾಗಭೂಷಣ್ ಭಾ.ಆ.ಸೇ.
ಅವರಿಂದ ಸಮ್ಮೇಳನದಲ್ಲಿ ಭಾಷಣ




ಮಂಡ್ಯ ಕರ್ನಾಟಕ ಸಂಘ ಅಧ್ಯಕ್ಷರಾದ
ಪ್ರೊ. ಜೈಪ್ರಕಾಶಗೌಡ ಅವರಿಂದ
ಸ್ವಾಗತ ಭಾಷಣ




ಮೇಲಣ ಮಠದ ಲಿಂ. ಶ್ರೀ ವೇ.ಎಸ್. ಸಿದ್ದಣ್ಣಯ್ಯ
ಮತ್ತು ಲಿಂ. ಶ್ರೀಮತಿ ಗಂಗಮ್ಮ ಸ್ಮಾರಕ ಟ್ರಸ್ಟ್ (ರಿ.)
ಇದರ ಸಂಯೋಜಕರಾದ
ಶ್ರೀ ಪರಶಿವಮೂರ್ತಿ ಅವರಿಂದ "ನೊಳಂಬ ಶ್ರೀ'
ಪ್ರಶಸ್ತಿ ಬಗ್ಗೆ ಪ್ರಸ್ತಾವಿಕ ನುಡಿ



ಡಾ. ಪಿ.ಎನ್. ನರಸಿಂಹಮೂರ್ತಿ ಅವರಿಂದ ಸಮ್ಮೇಳನದಲ್ಲಿ ಪ್ರಸ್ತಾವಿಕ ನುಡಿ



ಡಾ. ಆರ್. ಗೋಪಾಲ್, ಆಯುಕ್ತರು
ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ
ಇಲಾಖೆ ಮೈಸೂರು ಇವರಿಂದ
ಉದ್ಘಾಟನಾ ಭಾಷಣ



ಗೋಷ್ಠಿಯ ಅಧ್ಯಕ್ಷರಾಗಿ ಎಂ.ಬಿ.ಪಾಟೇಲ್ ಅವರಿಂದ ಅನಿಸಿಕೆಗಳು




2015 ಪರಂಪರೆ ಉಳಿಸಿ ಕಾರ್ಯಕ್ರಮದ ಉದ್ಘಾಟನೆ
ಡಾ. ಆರ್. ಎಚ್. ಕುಲಕರ್ಣಿ
ಪ್ರಾಂಶುಪಾಲರು ಚಿತ್ರಕಲಾ ಪರಿಷತ್ತು



2015 ಪರಂಪರೆ ಉಳಿಸಿ ಭಿತ್ತಿ ಪತ್ರ ಬಿಡುಗಡೆ
ಡಾ. ಎಚ್.ಎಂ. ಸಿದ್ಧನಗೌಡರ್



ಪರಂಪರೆ ಉಳಿಸಿ ಕಾರ್ಯಕ್ರಮದಲ್ಲಿ
ಅಥಿತಿಗಳಿಗೆ ಡಾ. ಎಂ.ಜಿ. ನಾಗರಾಜ್
ಅವರಿಂದ ಸನ್ಮಾನ



ಗಣ್ಯರೊಂದಿಗೆ
ಪ್ರಶಸ್ತಿ ವಿಜೇತ ವಿದ್ಯಾರ್ಥಿಗಳು

# ಅಧ್ಯಕ್ಷರ ನುಡಿ

ಕರ್ನಾಟಕ ಇತಿಹಾಸ ಅಕಾದೆಮಿಯು ೩೦ ವರ್ಷಗಳನ್ನು ಪೂರೈಸಿ ೩೧ನೆಯ ವರ್ಷಕ್ಕೆ ಕಾಲಿಡುತ್ತಿದೆ ಇದಕ್ಕೆ ಕಾರಣರಾದ ಎಲ್ಲರಿಗೂ ಅಕಾದೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕರ್ನಾಟಕದಲ್ಲಿ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನ ಹಿಂದೆ ಬಿದ್ದಿರುವ ಸಂದರ್ಭದಲ್ಲಿ ಇತಿಹಾಸ ಅಕಾದೆಮಿಯು ಈ ಕೊರತೆಯನ್ನು ನೀಗಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಹೀಗಾಗಿ ನಾಡಿನ ಕರ್ನಾಟಕ ಅಧ್ಯಯನಾಸಕ್ತರಿಗೆ ಹಾಗೂ ಯುವ ಪೀಳಿಗೆಗೆ ಅಕಾದೆಮಿಯು ವೇದಿಕೆಯಾಗಿದೆ. ಕರ್ನಾಟಕವು ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನಕಾರರಿಗೆ ಎಂದೂ ಮುಗಿಯದ ಗಣಿ ಇದ್ದಂತೆ. ಆದರೆ ಹಿಂದಿನಿಂದಲ್ಲೂ ಬೇರೆರಾಜ್ಯದ ಇತಿಹಾಸ ಸಂಸ್ಕೃತಿ ಪ್ರಚಾರಕ್ಕೆ ಬಂದಷ್ಟು ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ಹೊರಕ್ಕೆ ಬಂದಿಲ್ಲ. ಭಾರತದ ಇತಿಹಾಸ ಹಾಗೂ ದಕ್ಷಿಣ ಭಾರತದ ಇತಿಹಾಸ ಗ್ರಂಥಗಳಲ್ಲಿ ಇದು ಎರಡನೆಯ ಹಂತದ ಇತಿಹಾಸವಾಗಿ ಕಾಣಿಸಿಕೊಂಡಿದೆ. ಈ ಬಗ್ಗೆ ಹಿಂದಿನ ಕೆಲವು ವಿದ್ವಾಂಸರು ಈ ಕೊರತೆಯನ್ನು ನೀಗಿಸಲು ಪ್ರಯತ್ನಪಟ್ಟಿದ್ದಾದರೂ ಅದು ಸಾಲದಾಗಿದೆ. ಹೀಗಾಗಿ ಆ ಕೊರತೆಯನ್ನು ನೀಗಿಸುವ ಕಾರ್ಯವನ್ನು ಇಂದಿನ ಯುವ ಪೀಳಿಗೆ ಮಾಡಬೇಕಿದೆ. ದಕ್ಷಿಣದಲ್ಲಿ ಪಲ್ಲವ ಒಂದನೆಯ ಮಹೇಂದ್ರವರ್ಮ ಗವಿದೇವಾಲಯವನ್ನು ಕೊರೆಯುವ ಮೊದಲೇ ಬಾದಾಮಿಯಲ್ಲಿ ಮಂಗಳೇಸ ಗವಿದೇವಾಲಯ ಕೊರೆಸಿದ್ದ. ಅದನ್ನು ಅಚ್ಚಕನ್ನಡದಲ್ಲಿ 'ಕಲ್ಮನೆ' ಎಂದೇ ಕರೆದಿದ್ದಾನೆ. ಇದಾದ ಮೇಲೆ ತಮಿಳು ನಾಡಿನಲ್ಲಿ ಗವಿದೇವಾಲಯಗಳ ಪ್ರಾರಂಭವಾದದ್ದು. ಬಸದಿಗಳನ್ನು ಕಟ್ಟಿಸಿದ ಉಲ್ಲೇಖವಿದೆ. ಹೀಗಾಗಿ ದೇವಾಲಯಗಳ ರಚನಾಕಾರ್ಯದಲ್ಲೂ ಕರ್ನಾಟಕವೇ ಆಧ್ಯವಾಗಿದೆ. ಯಾದರೂ ಈ ಸಮರ್ಪಕ ದೆಸೆಯಲ್ಲಿ ಯಾರೂ ಅಧ್ಯಯನ ನಡೆಸಿಲ್ಲ. ಇಂತಹ ನೂರಾರು ಅಧ್ಯಯನದ ಉಲ್ಲೇಖಗಳನ್ನು ನೀಡಬಹುದಾಗಿದೆ.

ಕರ್ನಾಟಕ ಇತಿಹಾಸ ಅಕಾದೆಮಿಯು ತನ್ನ ಕಾರ್ಯಕ್ರಮದಲ್ಲೂ ಈ ವರ್ಷ ಕೆಲವು ಬದಲಾವಣೆಗಳನ್ನು ತಂದಿದೆ. ಅದೆಂದರೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿ ಮಾತ್ರ ಮಾಡಲಾಗುತ್ತಿತ್ತು. ಅದನ್ನು ಕೈ ಬಿಟ್ಟು ಇತಿಹಾಸ ಪರಂಪರೆಯುಳ್ಳ ಕರ್ನಾಟಕದ ಯಾವುದಾದರೂ ಗ್ರಾಮದಲ್ಲಿ ಮಾಡಲು ತೀರ್ಮಾನಿಸಿ ಈ ವರ್ಷ (೨೦೧೬) ಅರಸೀಕರೆ ತಾಲೂಕಿನ ಹಾರನಹಳ್ಳಿ ಸೋಮೇಶ್ವರ ದೇವಾಲಯದ ಬಳಿ ಆಯೋಜಿಸಲಾಯಿತು. ಗ್ರಾಮದ ಜನರಿಗೆ ಅಲ್ಲಿನ ಸ್ಮಾರಕಗಳ ಬಗ್ಗೆ ತಿಳಿಸಿದೆವು. ಹೀಗಾಗಿ ನಮ್ಮ ಕಾರ್ಯಕ್ರಮ ಸಾರ್ಥಕವೆನಿಸಿದೆ. ಇದನ್ನನುಸರಿಸಿ ರಾಜ್ಯದ ಬೇರೆ ಬೇರೆ ಕಡೆಯ ಸದಸ್ಯರು ಪರಂಪರೆ ಉಳಿಸಿ ಕಾರ್ಯಕ್ರಮವನ್ನು ತಮಗೆ ಸಮೀಪದ ಯಾವುದಾದರೂ ಐತಿಹಾಸಿಕ ಪರಂಪರೆಯ ತಾಣದಲ್ಲಿ ನಡೆಸಲು ವಿನಂತಿಸಲಾಗಿದೆ. ಅದರಂತೆ ಕೆಲವರು ಈಗಾಗಲೇ ಇಂತಹ ಕಾರ್ಯವನ್ನು ನೆರವೇರಿಸಿದ್ದಾರೆ. ಶಾಲಾ ಕಾಲೇಜು ವಿದ್ಯಾರ್ಥಿಗಳು ಹಾಗೂ ಅಧ್ಯಾಪಕ ವೃಂದವನ್ನು ಈ ಚಳುವಳಿಯಲ್ಲಿ ಪಾಲ್ಗೊಳುವಂತೆ ಹೆಚ್ಚಿನ ಯೋಜನೆಗಳನ್ನು ರೂಪಿಸಬೇಕಾದ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ.

ಅಕಾದೆಮಿಯ ೩೦ನೆಯ ವಾರ್ಷಿಕ ಸಮ್ಮೇಳನವನ್ನು ನಡೆಸಲು ಈ ಬಾರಿ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ಪ್ರಮೋದ್ ಭೀ. ಗಾಯಿ ಅವರು ಒಪ್ಪಿಗೆ ಸೂಚಿಸಿರುತ್ತಾರೆ. ಇದರೊಂದಿಗೆ ಕನ್ನಡ ಸಂಶೋಧನಾ ಸಂಸ್ಥೆಯ ಅಮೃತ ಮಹೋತ್ಸವ ಕಾರ್ಯಕ್ರಮದ ಒಟ್ಟಿಗೆ ಈ ಇತಿಹಾಸ ಅಕಾದೆಮಿಯ ಈ ಸಮ್ಮೇಳನ ನಡೆಸಲು ತೀರ್ಮಾನಿಸಲಾಗಿದೆ. ಈ ಸಮ್ಮೇಳನ ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯ ಆಶ್ರಯದಲ್ಲಿ ನಡೆಯುವಂತೆ ಶ್ರಮಿಸಿದ ಸಂಸ್ಥೆಯ ಕ್ಯುರೇಟರ್ ಆಗಿರುವ ಡಾ ಮೇಲಕಾರ್ ಎಸ್.ಕೆ. ಅವರಿಗೂ ವಿಶ್ವವಿದ್ಯಾಲಯದ ರಿಜಿಸ್ಟಾರ್ ಅವರಿಗೂ ಅಕಾದೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಅಕಾದೆಮಿಯ ಜಾಲತಾಣವನ್ನು (Website) ಪುನರ್‌ಅಭಿವೃದ್ಧಿ ಪಡಿಸುತ್ತಿದ್ದು ಇದರ ಹರವು ವಿಸ್ತಾರಗೊಳ್ಳಲಿದೆ. ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧ ಪಟ್ಟಂತೆ ಸಿಗುವ ಮಾಹಿತಿಯನ್ನು ಇದರಲ್ಲಿ ಹಾಕಲು ಯೋಜಿಸಿದ್ದೇವೆ. ಇದಕ್ಕೆ ವಾರ್ಷಿಕವಾಗಿ ನೀಡಬೇಕಾದ ಶುಲ್ಕವನ್ನು ಕರ್ನಾಟಕ ಇತಿಹಾಸ ಅಕಾದೆಮಿಯಲ್ಲಿ ಡಾ. ದೇವರಕೊಂಡಾರೆಡ್ಡಿಯವರ ಅಭಿನಂದನಾ ಸಮಿತಿಯವರು ಇಟ್ಟಿರುವ ಮುದುವಟ್ಟಿನಿಂದ ಭರಿಸಲಾಗುತ್ತಿದೆ.

ಅಕಾದೆಮಿಯು ಹೊರತರುತ್ತಿರುವ ಇತಿಹಾಸ ದರ್ಶನ ೩೧ನೆಯ ಸಂಪುಟದ ಪ್ರಕಟಣೆಗೆ ಬಾಳೆಹೊನ್ನೂರಿನ ಶ್ರೀಮದ್ ವೀರಸಿಂಹಾನಾಧಿಶ್ವರ ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು ರೂ. ೨೫,೦೦೦/–ಗಳನ್ನು ಆಶೀರ್ವಾದ ಪೂರ್ವಕವಾಗಿ ನೀಡಿ, ಪ್ರೋತ್ಸಾಹಿಸುತ್ತಾ

ಬಂದಿದ್ದಾರೆ. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯು ರೂ. ೪,೦೦,೦೦೦ಗಳನ್ನು ನಮ್ಮ ಎಲ್ಲಾ ಕಾರ್ಯಕ್ರಮಗಳಿಗೆ ಸಹಾಯ ಧನವನ್ನು ನೀಡಿದೆ ಈ ಸಂಪುಟ ಪ್ರಕಟಣೆಗೆ ಧನ ಸಹಾಯ ಕೇಳಿ ದೆಹಲಿಯ ಖಅಊಖ ಸಂಸ್ಥೆಗೂ ಕೋರಿಕೆ ಸಲ್ಲಿಸಲಾಗಿದೆ. ಈ ಸಂಸ್ಥೆಗಳಿಗೆ ನಮ್ಮ ಕೃತಜ್ಞತೆಗಳು.

ಸಾಮಾನ್ಯ ಜನರಲ್ಲಿ ಕರ್ನಾಟಕದ ಸಾಂಸ್ಕೃತಿಕ ತಾಣಗಳ ಪರಿಚಯ ಹಾಗೂ ಜಾಗೃತಿ ಮೂಡಿಸುವ ಸಲುವಾಗಿ ನಾಲ್ಕುದಿನಗಳ ಅಧ್ಯಯನ ಪ್ರವಾಸವನ್ನು ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೇ, ತಾಳಗುಂದ, ಬಂದಳಿಕೆ, ಕುಪ್ಪಗದೆ, ಆನವಟ್ಟಿ, ಸಿರಸಿ ತಾಲ್ಲೂಕಿನ ಬಸವಾಸಿ, ತರೀಕೆರೆ ತಾಲೂಕಿನ ಅಮೃತಾಪುರ, ಅರಸೀಕೆರೆಯಲ್ಲಿನ ದೇವಾಲಯ ಹಾಗೂ ಬಸದಿಗಳಿಗೆ ಕೈಗೊಳ್ಳಲಾಯಿತು. ಜಿಲ್ಲಾ ಪ್ರತಿ ನಿಧಿಗಳೂ ಇಂತಹ ಕಾರ್ಯವನ್ನು ಕೈಗೊಂಡಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಆಸಕ್ತರಿಗೆ ಅನುಕೂಲವಾಗಲಿದೆ.

ಅಕಾದೆಮಿಯು ದಿನೇ ದಿನೇ ಗಟ್ಟಿಗೊಳ್ಳುತ್ತಿರುವ ಈ ದಿನಗಳಲ್ಲಿ ಈ ವರ್ಷದಿಂದ ಮತ್ತೊಂದು ಪುದುವಟ್ಟನ್ನು ಶ್ರೀಮತಿ ವಿ.ಗೌರಮ್ಮ, ಗಂಗಾಧರಯ್ಯ ಇವರ ಹೆಸರಿನಲ್ಲಿ ಅವರ ಮಕ್ಕಳಾದ ಡಾ॥ ಎಂ.ಜಿ. ನಾಗರಾಜ್, ಶ್ರೀಮತಿ ಪದ್ಮವಿರೂಪಾಕ್ಷಯ್ಯ ಮತ್ತು ಡಾ॥ ಎಂ.ಜಿ. ಚಂದ್ರಕಾಂತ್ ಅವರು ಇಟ್ಟಿದ್ದು, ಇದರಿಂದ ಪ್ರತಿವರ್ಷ ಒಬ್ಬ ಸಂಶೋಧಕರಿಗೆ 'ಸಂಶೋಧನಾ ಶ್ರೀ ' ಎಂಬ ಹೆಸರನಲ್ಲಿ ಪ್ರಶಸ್ತಿ ಪ್ರಧಾನದ ಜೊತೆಗೆ ರೂ. ೧೫೦೦೦ ಹಣವನ್ನು ನಗದಾಗಿ ನೀಡುವಂತೆ ತಿಳಿಸಿರುತ್ತಾರೆ. ಈ ದತ್ತಿ ಇಟ್ಟವರಿಗೆ ಅಕಾದೆಮಿ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಅಕಾದೆಮಿಯು ಮೂವತ್ತು ವರ್ಷಗಳನ್ನು ಎಲ್ಲರ ಸಹಕಾರದಿಂದ ಯಶಸ್ವಿಯಾಗಿ ಪೂರೈಸಿದೆ. ಮುಂದೆಯೂ ಇನ್ನೂ ಹೆಚ್ಚಿನ ರೀತಿಯಲ್ಲಿ ವಿಸ್ತರಿಕೊಂಡು ಬೆಳೆಯ ಬೇಕಾಗಿದೆ. ಇತಿಹಾಸ ಮತ್ತು ಸಂಸ್ಕೃತಿಯನ್ನು ಕಟ್ಟುವಲ್ಲಿ ಹೊಸ ವಿದ್ಯುನ್ಮಾನವನ್ನು ಬಳಸಿಕೊಂಡು ಸದಸ್ಯರ ಸಹಕಾರದೊಂದಿಗೆ ಮುಂದಿನ ಹೆಜ್ಜೆ ಇಡೋಣ. ಅಕಾದೆಮಿಯ ಬೆಳವಣಿಗೆಗೆ ಕಾರಣರಾದ ಎಲ್ಲರಿಗೂ ಧನ್ಯವಾದಗಳು

**ದೇವರಕೊಂಡಾರೆಡ್ಡಿ**

**ಅಧ್ಯಕ್ಷರು**

**ಕರ್ನಾಟಕ ಇತಿಹಾಸ ಅಕಾದೆಮಿ (ರಿ.)**

**೧೮ ಅಕ್ಟೋಬರ್, ೨೦೧೬**

**ಬೆಂಗಳೂರು**

# ಸಂಪಾದಕೀಯ

ಕರ್ನಾಟಕ ಇತಿಹಾಸ ಅಕಾದೆಮಿಯು ಈಗ ೩೦ ವರ್ಷಗಳನ್ನು ದಾಟಿ ೩೧ನೆಯ ವರ್ಷಕ್ಕೆ ಪದಾರ್ಪಣೆ ಮಾಡಿದೆ. ಇದರ ಬೆಳವಣಿಗೆಯಲ್ಲಿ ಅಕಾದೆಮಿಯ ಸದಸ್ಯರ, ಸಂಘಸಂಸ್ಥೆಗಳು, ಮಠಮಾನ್ಯಗಳ, ವ್ಯಕ್ತಿಗಳ, ಸರ್ಕಾರದ ಇಲಾಖೆಗಳ ಪಾತ್ರವಿದೆ. ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಮುಖ ಚಟುವಟಿಕೆಗಳಲ್ಲಿ 'ಇತಿಹಾಸ ದರ್ಶನ' ಪ್ರಕಟಣೆಯೂ ಒಂದು. ಸಮ್ಮೇಳನದಲ್ಲಿ ಮಂಡಿತವಾಗುವ ಪ್ರಬಂಧಗಳನ್ನು ಸಂಪಾದಿಸಿ ಇದರಲ್ಲಿ ಪ್ರಕಟಿಸಲಾಗುತ್ತಿದೆ.

೨೦೧೫ರಲ್ಲಿ ಮಂಡ್ಯದ ಕರ್ನಾಟಕ ಸಂಘದ ಆಶ್ರಯದಲ್ಲಿ ೨೯ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಲಾದ ಪ್ರಬಂಧಗಳ ಸಂಗ್ರಹವನ್ನು ಈ ಸಂಪುಟವು ಒಳಗೊಂಡಿದೆ. ಈ ಸಮ್ಮೇಳನದಲ್ಲಿ ೧೯೮ ಪ್ರಬಂಧಗಳು ಮಂಡನೆಯಾಗಿದ್ದವು. ಮುದ್ರಣಕ್ಕೆ ೧೬೦ ಪ್ರಬಂಧಗಳು ಬಂದಿವೆ. ಇವುಗಳನ್ನು ಸಂಪಾದಕ ಮಂಡಳಿಯ ಮುಂದೆ ಇರಿಸಿ ನಂತರ ೧೩೨ ಲೇಖನಗಳನ್ನು ಪ್ರಕಟಿಸಲಾಗಿದೆ.

ಈ ಸಂಪುಟದ ಮುದ್ರಣಕ್ಕೆ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಸಹಾಯ ನೀಡಿದೆ. ಶ್ರೀಮದ್‌ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು ವರ್ಷಂಪ್ರತಿ ರೂ. ೨೫೦೦೦ಗಳನ್ನು ಸಂಪುಟದ ಪ್ರಕಟಣೆಗೆ ಆಶೀರ್ವಾದ ಪೂರ್ವಕವಾಗಿ ನೀಡುತ್ತಾಬಂದಿದ್ದಾರೆ. ಕೇಂದ್ರ ಸರ್ಕಾರದ ಐ.ಸಿ.ಎಚ್.ಆರ್. ನವದೆಹಲಿ ಈ ಸಂಸ್ಥೆಗೂ ಧನಸಹಾಯಕ್ಕಾಗಿ ಕಾಗದ ಬರೆಯಲಾಗಿದೆ. ಸಂಪುಟದ ಮುದ್ರಣವೆಚ್ಚ ಮೊದಲಾದವು ಹೆಚ್ಚಾಗಿರುವ ಸಮಯದಲ್ಲಿ ಈ ಬೇಡಿಕೆ ಅನಿವಾರ್ಯವೆನಿಸಿದೆ. ಧನಸಹಾಯನೀಡಿ ಸಂಪುಟವು ಮೌಲಿಕವಾಗಿ ಸುಂದರವಾಗಿ ಬರಲು ಕಾರಣಕರ್ತರಾಗಿದ್ದಾರೆ.

ಇತಿಹಾಸ ದರ್ಶನದ ಸಂಶೋಧನಾ ಪ್ರಬಂಧಗಳು ತಿಜಭುಣಜ ಮೂಲಕ ದೇಶಾದ್ಯಂತ ಸಂಶೋಧಕರನ್ನು ಆಕರ್ಷಿಸಿದೆ. ಹಾಗೂ ಸಾಕಷ್ಟು ವಿಷಯ ಕುರಿತು ಮಾಹಿತಿ ಕೋರುತ್ತಿದ್ದಾರೆ. ಇತಿಹಾಸ, ಸಂಸ್ಕೃತಿಯನ್ನು ಕಟ್ಟುವ ಹಿನ್ನೆಲೆಯಲ್ಲಿ ನಮ್ಮ ಪ್ರಮಾಣಿಕ ಸಂಶೋಧನೆಗಳ ಅವಶ್ಯಕತೆ ಇದೆ. ಇತಿಹಾಸ ದರ್ಶನದಲ್ಲಿನ ಸಂಶೋಧನಾ ಪ್ರಬಂಧಗಳ ಗುಣಮಟ್ಟವನ್ನು ಕಾಪಾಡಿಕೊಳ್ಳುವಲ್ಲಿ ಹಿರಿಯ ಮತ್ತು ಕಿರಿಯ ಸಂಶೋಧಕರ ಜವಾಬ್ದಾರಿ ಹೆಚ್ಚಿದೆ.

ಇತಿಹಾಸ ದರ್ಶನ ಸಂಪುಟ ೩೧ ಹೊರತರಲು ನೆರವಾದ ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯಕಾರಿ ಸಮಿತಿ, ೨೯ನೆಯ ವಾರ್ಷಿಕ ಸಮ್ಮೇಳನದ ಸಹಯೋಗ ನೀಡಿದ್ದ ಮಂಡ್ಯದ ಕರ್ನಾಟಕ ಸಂಘದ ಆಡಳಿತ ಮಂಡಳಿ, ಇಂಟರ್‌ನೆಟ್‌ನಲ್ಲಿ ಬಂದಿದ್ದ ಲೇಖನಗಳನ್ನು ಸಂಕಲಿಸಿ ನೀಡಿದ ಶ್ರೀಮತಿ ನಿರ್ಮಲ ಗಣೇಶ್, ಕರಡಚ್ಚು ತಿದ್ದುವಲ್ಲಿ ಸಹಕರಿಸಿದ ಶ್ರೀ ಬಿ.ಎಸ್. ಗುರುಪ್ರಸಾದ್, ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಶ್ರೀ ಕೆ.ಎಸ್. ಮಂಜು ಅವರಿಗೂ ಡಿಟಿಪಿ ಮಾಡಿದ ಶ್ರೀ ಪಿ.ಎಸ್. ಸುಬ್ರಮಣಿಬಾಬು ಮತ್ತು ಶ್ರೀಮತಿ ಮಾಲಾ ಹಾಗೂ ಸಿಬ್ಬಂದಿ ವರ್ಗಕ್ಕೂ, ಇತಿಹಾಸ ದರ್ಶನದ ಸಂಪಾದಕ ಮಂಡಳಿಯ ಸದಸ್ಯರಾದ ಡಾ. ಎಂ.ಜಿ. ನಾಗರಾಜ್ ಮತ್ತು ಶ್ರೀ ಎಂ.ಎನ್. ಪ್ರಭಾಕರ್ ಇತರರಿಗೂ ನಮ್ಮ ಕೃತಜ್ಞತೆಗಳು.

**ಡಾ. ದೇವರಕೊಂಡಾರೆಡ್ಡಿ**
**ಪ್ರೊ. ಜಿ.ಕೆ. ದೇವರಾಜ ಸ್ವಾಮಿ**

೧೭ ಅಕ್ಟೋಬರ್ ೨೦೧೬
ಶಾಲಿವಾಹನ ಶಕ: ೧೯೩೮
ದುರ್ಮುಖಿನಾಮ ಸಂವತ್ಸರ ಆಶ್ವಯುಜ
ಬಹುಳ ಸೋಮವಾರ

**ಇತಿಹಾಸ ದರ್ಶನದ ಸಂಪಾದಕ ಮಂಡಳಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

**ಕಾರ್ಯಕಾರಿ ಸಮಿತಿ**

(೨೭.೦೯.೨೦೧೪ರಲ್ಲಿ ಆಯ್ಕೆಯಾದವರು)

**ಕಾರ್ಯಾಧ್ಯಕ್ಷರು**

ಡಾ॥ ದೇವರಕೊಂಡಾರೆಡ್ಡಿ

**ಉಪಾಧ್ಯಕ್ಷರು**

ಡಾ॥ ಎಂ.ಜಿ. ನಾಗರಾಜ್

ಡಾ॥ ಎಚ್.ಎಸ್. ಗೋಪಾಲರಾವ್

**ಪ್ರಧಾನ ಕಾರ್ಯದರ್ಶಿ**

ಪ್ರೊ. ಜಿ.ಕೆ. ದೇವರಾಜಸ್ವಾಮಿ

**ಕಾರ್ಯದರ್ಶಿಗಳು**

ಡಾ॥ ಪಿ.ವಿ. ಕೃಷ್ಣಮೂರ್ತಿ

ಡಾ॥ ಜಯಮ್ಮ ಎಚ್. ಕರಿಯಣ್ಣ

**ಕೋಶಾಧ್ಯಕ್ಷರು**

ಶ್ರೀ ಎಂ.ಬಿ. ಪಾಟೀಲ್

**ಸದಸ್ಯರು**

*ಡಾ॥ ಎ.ಕೆ. ಶಾಸ್ತ್ರಿ, ಶಿರಸಿ*

*ಡಾ॥ ವೆಂಕಟೇಶ್ ಜೋಯಿಸ್, ಕೆಳದಿ*

*ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಸಿಂಧನೂರು*

*ಡಾ॥ ಹನುಮಾಕ್ಷಿ ಗೋಗಿ, ಧಾರವಾಡ*

*ಡಾ॥ ಅಮರೇಶ್ ಯತಗಲ್, ಬಿಜಾಪುರ*

*ಡಾ॥ ಬಾಲಕೃಷ್ಣ ಹೆಗ್ಗಡೆ, ಶಿವಮೊಗ್ಗ*

*ಪ್ರೊ. ಮುರುಗೇಶಿ ಟಿ., ಉಡುಪಿ*

*ಶ್ರೀ ಪ್ರಭಾಕರ್ ಎಂ.ಎಸ್., ಮೈಸೂರು*

*ಶ್ರೀ ಗುರುಪ್ರಸಾದ್ ಬಿ.ಎಸ್., ಬೆಂಗಳೂರು*

*ಶ್ರೀ ಟಿ.ಎಚ್.ಎಂ. ಬಸವರಾಜ, ಬಳ್ಳಾರಿ*

*ಶ್ರೀ ಕಲ್ಲಪ್ಪ ಮಹದೇವಪ್ಪ ಗರಗ, ಗದಗ*

*ಶ್ರೀ ಸಿದ್ದಗಿರಿ ಓ.ಎಲ್. ಚಂದ್ರೇಗೌಡ, ಚಿಕ್ಕಮಗಳೂರು*

*ಡಾ॥ ಶರಣಬಸಪ್ಪ ಕೋಲ್ಕಾರ್, ಗಂಗಾವತಿ*

*ಪ್ರೊ॥ ರಾಮಚಂದ್ರ ಮಿಟ್ಟಿಮನಿ, ಧಾರವಾಡ*

*ಡಾ॥ ಬಿ. ನಂಜುಂಡಸ್ವಾಮಿ, ತುಮಕೂರು*

*ಡಾ॥ ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ, ಬೆಳಗಾವಿ*

*ಡಾ॥ ಎಫ್.ಟಿ. ಹಳ್ಳಿಕೇರಿ, ಯಾದಗಿರಿ*

*ಶ್ರೀ ಪಾಟೀಲ್ ಬಸನಗೌಡ, ಯಾದಗಿರಿ*

# ಪರಿವಿಡಿ


| | | | |
|---|---|---|---|
| ೧. | ಗಂಗಾವತಿ ತಾಲೂಕಿನ ನವಶೋಧಿತ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಕಲ್ಗೊಂಬೆಗಳು | ಡಾ. ಶರಣಬಸಪ್ಪ ಕೋಲ್ಕಾರ | ೧ |
| ೨. | ಮಾಗಡಿ ತಾಲ್ಲೂಕು ಅಳಲುಕುಪ್ಪೆಯ ಸಮೀಪ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ | ಹಂ.ಗು. ರಾಜೇಶ್ | ೭ |
| ೩. | "ಹುರುಳಿಹಾಳು ಮತ್ತು ಮಾಳೆಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು | ತಿಪ್ಪೇಶ ಹೆಚ್.ಎಂ. | ೧೦ |
| ೪. | ಹುತ್ತರಿದುರ್ಗ ಪರಿಸರದ ನವಶೋಧಿತ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿ ನೆಲೆಗಳು | ರೇವಣಸಿದ್ದಯ್ಯ.ಕೆ. | ೧೨ |
| ೫. | ಮಲಪ್ರಭಾ ನದಿ ತೀರದಲ್ಲಿ ಪ್ರಾಗಿತಿಹಾಸ ವರ್ಣಚಿತ್ರ ನೆಲೆ (ಕೆಂದೂರು) ಯ ಅನ್ವೇಷಣೆ ಮತ್ತು ಅದರ ಮಹತ್ವ | ಡಾ. ಮೋಹನ ರಾ | ೧೫ |
| ೬. | ಬಂಗಾರ ನಾಯಕನ ಬೆಟ್ಟದ ಪ್ರಾಗಿತಿಹಾಸ ರೇಖಾ ಚಿತ್ರಗಳ ಶೋಧ | ರವೀಶ ಜಿ.ಎನ್. | ೧೯ |
| ೭. | ಬೆಂಗಳೂರು ಪೂರ್ವ ತಾಲ್ಲೂಕು ಕೈಕೊಂಡ್ರಹಳ್ಳಿಯಲ್ಲಿ ನಾಗತ್ತರನ ಅಪ್ರಕಟಿತ ಶಾಸನ | ಆದಪ್ಪ ಪಾಸೋಡಿ | ೨೧ |
| ೮. | ಹಿರೇನಲ್ಲೂರಿನ ಅಪ್ರಕಟಿತ ಶಾಸನ ಹಾಗೂ ನವಶೋಧಿತ ಜೈನ ತೀರ್ಥಂಕರ ವರ್ಧಮಾನ ವಿಗ್ರಹ | ಹೆಚ್.ಆರ್. ಪಾಂಡುರಂಗ | ೩೧ |
| ೯. | ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ದೊರೆತ ರಾಷ್ಟ್ರಕೂಟರ ಕಾಲದ ಅಪ್ರಕಟಿತ ಶಾಸನಗಳು | ಡಾ. ಹನುಮಾಕ್ಷಿ ಗೋಗಿ | ೩೩ |
| ೧೦. | ಎಸ್. ನೇರಲಕೆರೆ ಗ್ರಾಮದಲ್ಲಿನ ಕಟ್ಟೆರಂಗನಾಥಸ್ವಾಮಿ ದೇವಾಲಯದ ಸುಕನಾಸಿಯ ಚಾವಣಿಯಲ್ಲಿರುವ ಕಲ್ಲಿನಲ್ಲಿರುವ ಶಾಸನ | ಸಿ.ಎಂ. ತಿಪ್ಪೇಸ್ವಾಮಿ | ೩೯ |
| ೧೧. | ಹೊಯ್ಸಳ ವೀರಸೋಮೇಶ್ವರನ ಅಪ್ರಕಟಿತ ತಾಮ್ರಪಟ | ಬಿ.ಎಸ್. ಗುರುಪ್ರಸಾದ್ | ೪೨ |
| ೧೨. | ಹೊಯ್ಸಳ ಮುಮ್ಮಡಿ ನರಸಿಂಹನ ಅಪ್ರಕಟಿತ ತಾಮ್ರಪಟ | ಪ್ರೊ. ಜಿ.ಕೆ. ದೇವರಾಜಸ್ವಾಮಿ | ೫೧ |
| ೧೩. | ಡಿ. ಹಿರೇಹಾಳ ಗ್ರಾಮದಲ್ಲಿ ದೊರೆತ ವಿಜಯನಗರದ ಕಾಲದ ಅಪ್ರಕಟಿತ ತಾಮ್ರಶಾಸನ | ವಿರೂಪಾಕ್ಷಿ ಎನ್.ಬಿ. | ೬೦ |
| ೧೪. | ಕೃಷ್ಣರಾಜಪೇಟೆ ತಾಲ್ಲೂಕಿನ ವಳಗೆರೆ ಮೆಣಸೆ ಗ್ರಾಮದಲ್ಲಿ ದೊರಕಿದ ಅಪ್ರಕಟಿತ ಶಾಸನಗಳು | ಡಾ. ಆರ್. ರಂಗಸ್ವಾಮಿ | ೬೪ |
| ೧೫. | ತಡಗಣಿ ಗ್ರಾಮದಲ್ಲಿ ಅನ್ವೇಷಿಸಿದ ಎರಡು ಹೊಸ ಶಾಸನಗಳು | ಮಧುಗಣಪತಿರಾವ್ ಮಡೆನೂರು | ೬೬ |
| ೧೬. | ಸಿದ್ದಾಪುರದ ಅಪ್ರಕಟಿತ ತಾಮ್ರ ಶಾಸನಗಳು | ಡಾ. ಎಸ್.ಕೆ. ಮೇಲಕಾರ<br>ಡಾ. ರಮಾ ಜಿ. ಗುಂಡುರಾವ್ | ೬೮ |
| ೧೭. | ಕೂಡ್ಲಿಗಿ ತಾಲ್ಲೂಕು ಮಾಕನಡುಕು ಕಂಚಿ ಓಬಳದೇವರಗುಡಿಯ ಕಂಚು ಮತ್ತು ತಾಮ್ರಪತ್ರಗಳು | ಪ್ರೊ. ಲಕ್ಷ್ಮಣ್ ತೆಲಗಾವಿ | ೭೨ |
| ೧೮. | ತಲೇಖಾನ್ ಗ್ರಾಮದ ಅಪ್ರಕಟಿತ ಶಾಸನಗಳು | ಡಾ. ಚನ್ನಬಸಪ್ಪ ಮಲ್ಕಂದಿನ್ನಿ | ೭೬ |
| ೧೯. | ತ್ರಿಭುವನಮಲ್ಲ ವಿಜಯಪಾಂಡ್ಯದೇವರ ಅಪ್ರಕಟಿತ ಶಾಸನ | ಡಾ. ಎಂ. ಕೊಟ್ರೇಶ | ೮೧ |
| ೨೦. | ಮೂರು ಅಪ್ರಕಟಿತ ಹೊಸ ಶಾಸನಗಳು | ಮೇಕನಗದ್ದೆ ಲಕ್ಷ್ಮಣಗೌಡ | ೮೪ |
| ೨೧. | ರಾಣಿಬೆನ್ನೂರು ತಾ॥ ಐರಣಿ ಗ್ರಾಮದಲ್ಲಿ ದೊರೆತ ಹೆಮ್ಮಾಡಿ ಗೌಡನ ಶಾಸನ | ಕೆ.ಎಂ. ರಾಘವೇಂದ್ರಚಾರ್ | ೮೭ |
| ೨೨. | ಸಿರಾ ತಾಲ್ಲೂಕಿನ ಗೊಲ್ಲಹಳ್ಳಿಯ ಅಪ್ರಕಟಿತ ಶಾಸನ | ಡಾ. ಎನ್. ನಂದೀಶ್ವರ | ೮೮ |

| | | |
|---|---|---|
| ೨೩. ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ಲಕ್ಷ್ಮೇಶ್ವರದ ಎರಡು ಜಯಪತ್ರಗಳು | ಶ್ರೀಮತಿ ಸ್ಮಿತಾರೆಡ್ಡಿ | ೯೧ |
| ೨೪. ಕೆಳದಿ ಅರಸರ ಕಾಲದ ಅಪ್ರಕಟಿತ ಮೂರು ಶಾಸನ/ದಾಖಲೆಗಳು | ಡಾ. ಕೆಳದಿ ವೆಂಕಟೇಶ್ ಜೋಯಿಸ್ | ೯೪ |
| ೨೫. ಮಂಡ್ಯ ಜಿಲ್ಲೆ ಗವಿಮಠದ ಸ್ವತಂತ್ರ ಸಿದ್ಧಲಿಂಗೇಶ್ವರ ಗದ್ದುಗೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಕೊಟ್ಟ ಮೂರು ನಿರೂಪಗಳು | ಡಾ. ಬಿ. ನಂಜುಂಡಸ್ವಾಮಿ | ೯೬ |
| ೨೬. ತೋಕಲಘಟ್ಟ ಗ್ರಾಮದ ಅಪ್ರಕಟಿತ ವೀರಗಲ್ಲು ಶಾಸನ | ವೇಮಗಲ್ ಸು. ಮೂರ್ತಿ | ೧೦೦ |
| ೨೭. ತಾಗರ್ತಿಯ ಶಾಸನ ಹಲ್ಮಿಡಿ ಶಾಸನಕ್ಕಿಂತ ಹಳೆಯದೆ? | ಡಾ. ಬಿ. ರಾಜಶೇಖರಪ್ಪ | ೧೦೨ |
| ೨೮. ಜಾರ್ಜ್ ಎಂ. ಮೊರೇಸ್ ಸಂಪಾದಿತ ಕೆಳದಿ ಇತಿಹಾಸದ ಪೋರ್ಚುಗೀಸ್ ಪತ್ರಗಳು | ಡಾ. ಕೆಳದಿ ಗುಂಡಾಜೋಯಿಸ್ | ೧೧೦ |
| ೨೯. ಪಾವಗಡ ಪಾಳೆಪಟ್ಟಿನ ಗ್ರಾಮಗಳು: ಮೆಕೆಂಜಿ ದಾಖಲೆಯನ್ನಾಧರಿಸಿ | ಪ್ರೊ. ಪ್ರಸನ್ನ | ೧೧೩ |
| ೩೦. 'ಹಂಡೆ' ಪದದ ನಿಷ್ಪತ್ತಿ: ಶಾಸನ ಮತ್ತು ಕೈಫಿಯತ್ತು ಅನುಲಕ್ಷಿಸಿ | ಸಂತೋಷ್‌ಕುಮಾರ್.ಜಿ. | ೧೧೬ |
| ೩೧. ಧಾರ್ಮಿಕ ವಿಧಿಗಳಲ್ಲಿ ಪಾತ್ರ–ಶಾಸನಗಳನ್ನು ಅನುಲಕ್ಷಿಸಿ | ಶ್ರೀಮತಿ ಸಂಧ್ಯಾ ವಿ. | ೧೧೮ |
| ೩೨. ಹರಿಹರದ ಶಾಸನಗಳಲ್ಲಿಯ ಸಂಗೀತದ ವಿಶ್ಲೇಷಣೆ | ಡಾ. ಹರಿಹರ ಶ್ರೀನಿವಾಸರಾವ್ | ೧೨೩ |
| ೩೩. ಮಂಡ್ಯ ಜಿಲ್ಲೆಯ ಚತುರ್ವೇದಿ ಮಂಗಲಗಳು | ಡಾ. ಕೆ. ವಸಂತಲಕ್ಷ್ಮಿ | ೧೨೫ |
| ೩೪. ಶಿವಮೊಗ್ಗ ಜಿಲ್ಲೆಯಲ್ಲಿನ ಶಾಸನೋಕ್ತ ರಾಮಾನುಜ ಕೂಟಗಳು | ಜಯಶ್ರೀ ಎನ್.<br>ಡಾ. ಶಲ್ವಪಿಳ್ಳೈ ಐಯ್ಯಂಗಾರ್ | ೧೩೧ |
| ೩೫. ಪುರವರ್ಗ ದಾನ | ಡಾ. ಎಚ್.ಎಸ್. ಉಷಾರಾಣಿ | ೧೩೬ |
| ೩೬. ಕಾವೇರಿ ನದಿಗೆ ಕಟ್ಟಿದ ಶಾಸನೋಕ್ತ ಅಣೆಕಟ್ಟುಗಳು | ಡಾ. ಕೋ.ವೆಂ. ರಾಮಕೃಷ್ಣೇಗೌಡ | ೧೪೦ |
| ೩೭. ಶಶಕಪುರ ವಾಸಂತಿಕಾದೇವಿ ಹಾಗೂ ಹೊಯ್ಸಳರ ಶಕ ಸ್ಥಾಪನಾ ಮೂಲ ಇತಿಹಾಸದ ಜಿಜ್ಞಾಸೆಗಳು | ಸಿದ್ದರಗಿರಿ ಒ.ಎಲ್. ಚಂದ್ರೇಗೌಡ | ೧೪೪ |
| ೩೮. ಮಂಡ್ಯ ಜಿಲ್ಲೆಯ ಹೊಯ್ಸಳರ ಕಾಲದ ಶಾಸನೋಕ್ತ ಕೆರೆ–ಕಟ್ಟೆಗಳು ಒಂದು ಅವಲೋಕನ | ಉಮಾ.ಡಿ.ಟಿ. | ೧೫೪ |
| ೩೯. ಹೊಯ್ಸಳ ಮಹಾಸಾಮಂತರ ಗೋವಿದೇವ ಮತ್ತು ಅವನ ವಂಶೀಯರು | ಎಸ್. ಗಂಗಾಬಿಕೆ | ೧೫೮ |
| ೪೦. ಎರಡನೇ ಬಲ್ಲಾಳನ ಆಡಳಿತದಲ್ಲಿ ಮಾವಂತ ಮನೆತನದ ಕೊಡುಗೆಗಳು | ಬಿ.ವಿ. ಸತೀಶ್‌ಕುಮಾರ್ | ೧೬೮ |
| ೪೧. ಎರಡನೆಯ ಬಲ್ಲಾಳನ ಕಾಲದ ಕನ್ನಡ ಶಾಸನಕವಿಗಳು | ಮಂಜುನಾಥ ಎಂ.ಕೆ.<br>ಸತೀಶ್‌ಕುಮಾರ್ ಬಿ.ವಿ. | ೧೭೪ |
| ೪೨. ಹೊಯ್ಸಳ ರಾಜ್ಯಾಡಳಿತದಲ್ಲಿ ಪಟ್ಟಣಸ್ವಾಮಿ ಒಂದು ಚಾರಿತ್ರಿಕ ಅಧ್ಯಯನ | ಮಹಾಂತೇಶ ಕುತನಿ<br>ಡಾ. ಎಸ್. ಶಿವರಾಮು | ೧೮೧ |
| ೪೩. ಶಾಸನೋಕ್ತ ನಿಡುವಣಿಯ ಈಶ್ವರಕವಿ: ಮೂಲಸ್ಥಳ ಕುರಿತು ಜಿಜ್ಞಾಸೆ | ಡಾ. ಅಮರೇಶ ಯತಗಲ್ | ೧೮೫ |
| ೪೪. ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಆಯಗಾರರು | ಮಂಜುಳಾ.ಎಂ. ಆಚಾರಿ | ೧೮೯ |
| ೪೫. ನಾಗಮಂಗಲ ತಾಲ್ಲೂಕಿನ ಜೈನ ಶಾಸನಗಳು | ಡಾ. ಡಿ.ಎಂ. ನಾಗರಾಜು | ೧೯೨ |
| ೪೬. ನಂಜನಗೂಡು ಪ್ರದೇಶದ ಶಾಸನೋಕ್ತ ನಾಡುಗಳು | ಡಾ. ಎಸ್. ಶಿವರಾಮು | ೧೯೫ |
| ೪೭. ಲಕ್ಕುಂಡಿ ಶಾಸನಗಳಲ್ಲಿ ಸ್ಥಳೀಯ ಅಧಿಕಾರಿಗಳು | ಡಾ. ಕೆ.ಎಸ್. ಪಾಟೀಲ | ೨೦೦ |
| ೪೮. ಸೂಡಿಯ 'ಟಂಕಶಾಲೆ' | ಡಾ. ಮಲ್ಲಿಕಾರ್ಜುನ ಕುಂಬಾರ | ೨೦೩ |
| ೪೯. ಕುರಿತೆರಿಗೆ : ಕೆಲವು ವಿಚಾರಗಳು | ಡಾ. ಎಫ್.ಟಿ. ಹಳ್ಳಿಕೇರಿ | ೨೦೪ |
| ೫೦. ಶಾಸನಗಳಲ್ಲಿ ಬೀರಪ್ಪ ಚಿತ್ರಣ | ಡಾ. ರಾಜಶ್ರೀ ಪಾಟೀಲ | ೨೦೯ |
| ೫೧. ಶಾಸನೋಕ್ತ ಮಾದಿಗರು | ಸುರೇಶ ವೈ. ಮಾದಾರ<br>ಡಾ. ಎಸ್.ಕೆ. ಮೇಲಕಾರ | ೨೧೨ |

| | | | |
|---|---|---|---|
| ೫೨. | ತುಮಕೂರು ಜಿಲ್ಲೆಯ ರಾಷ್ಟ್ರಕೂಟರ ಕಾಲದ ಶಾಸನಗಳ ಐತಿಹಾಸಿಕ ಮಹತ್ವ | ವಿಜಯಶಂಕರ ಬಿ.ಎನ್. ರವೀಶ ಜಿ.ಎನ್. | ೨೧೫ |
| ೫೩. | ಮುಡಿಗೊಣ್ಡ ಚೋಳಮಂಡಲ | ಎಸ್.ಹೆಚ್. ಗೋವರ್ಧನ | ೨೧೮ |
| ೫೪. | ಕದಂಬ ದೊರೆ ರವಿವರ್ಮ ಮತ್ತು ಮಹಾಮಂಡಳೇಶ್ವರಿ ಚೆನ್ನಭೈರಾದೇವಿಯ ಅಪರೂಪದ ನಾಣ್ಯಗಳು | ಮಂದರ್ಕೆ ನಿತ್ಯಾನಂದ ಪೈ | ೨೨೬ |
| ೫೫. | "ಬುದ್ಧನ ಚಿತ್ರವಿರುವ ನಾಣ್ಯ" | ಡಾ. ಬಿ. ಬಸವರಾಜ ತಗರಪುರ ಎಂ.ಎನ್. ನಿರ್ಮಲ | ೨೨೯ |
| ೫೬. | ದಾವಣಗೆರೆ ಜಿಲ್ಲೆಯ ಸೂರ್ಯ ಶಿಲ್ಪಗಳು | ಸಂತೇಬೆನ್ನೂರು ಸುಮತೀಂದ್ರ ನಾಡಿಗ್ | ೨೩೧ |
| ೫೭. | ಹಂಪಿಯ ಶಿಲ್ಪಗಳಲ್ಲಿ ಗ್ರಹಣದ ಶಿಲ್ಪಗಳು | ಧನುಂಜಯ ಸಿ. | ೨೩೪ |
| ೫೮. | ಹಂಪೆಯ ಅಪರೂಪದ ತುಲಾಪುರುಷ ಮಹಾದಾನದ ಶಿಲ್ಪ | ಡಾ. ಎಸ್. ನಾಗರಾಜಪ್ಪ | ೨೩೭ |
| ೫೯. | ಕೆಳದಿ ಕಾಲದಲ್ಲಿ ವಜ್ರಮುಷ್ಠಿ ಕಾಳಗ ಶಿಲ್ಪಗಳು | ಡಾ. ಜಗದೀಶ | ೨೪೦ |
| ೬೦. | ಉತ್ತರ ಕನ್ನಡ ಜಿಲ್ಲೆಯ ನೀರಲಗಾ ಗ್ರಾಮದಲ್ಲಿ ಇತ್ತೀಚಿಗೆ ಪತ್ತೆಯಾದ ಜೈನ ಶಿಲ್ಪಗಳು | ಭರಮಪ್ಪ ಭಾವಿ ಡಾ. ಎಸ್.ಕೆ. ಮೇಲಕಾರ | ೨೪೩ |
| ೬೧. | ಉಮ್ಮತ್ತೂರಿನ ಗಂಗಾಧರೇಶ್ವರ ಶಿಲ್ಪ | ಉಮೇಶ ಸಿ.ಜಿ. | ೨೪೫ |
| ೬೨. | ಹಂಪೆ ವಿರೂಪಾಕ್ಷ ದೇವಾಲಯದಲ್ಲಿರುವ ಪ್ರಾಣಿಭಕ್ತಿ ಶಿಲ್ಪಗಳು | ಶ್ರೀಶೈಲ ಮನಗುತ್ತಿ | ೨೪೭ |
| ೬೩. | ಕೊಪ್ಪಳ ಪ್ರದೇಶದ ವಿಜಯನಗರ ಕಾಲದ ಶಿಲ್ಪಗಳು | ಗೀತಾ ಸಿ. ಪೋಲಿಸ ಪಾಟೀಲ್ | ೨೪೯ |
| ೬೪. | "ಮಂಡ್ಯ ಮತ್ತು ಮದ್ದೂರು ತಾಲ್ಲೂಕಿನಲ್ಲಿ ಸಪ್ತಮಾತೃಕೆಯರ ಆರಾಧನೆ" | ಡಾ. ಬಿ.ಸಿ. ಸುರೇಶ | ೨೫೪ |
| ೬೫. | ಕರ್ನಾಟಕದಲ್ಲಿ ಚೋಳರ ಕಾಲದ ದೇವಾಲಯಗಳು ಅವುಗಳ ಬೆಳವಣಿಗೆ | ಎಂ.ಎನ್. ಪ್ರಭಾಕರ್ | ೨೬೨ |
| ೬೬. | ದೇವಾಲಯಗಳ ದ್ವಾರಗಳು ಮತ್ತು ವಿತಾನಗಳು ಒಂದು ಶಾಸ್ತ್ರೀಯ ವಿವರಣೆ | ಡಾ. ಕೂ.ಸ. ಅಪರ್ಣ | ೨೬೯ |
| ೬೭. | ಬೀದರ ಜಿಲ್ಲೆಯ ಬಿಜಾಪುರ ಆದಿಲ್‌ಶಾಹಿಗಳ ಧಾರ್ಮಿಕೇತರ ಕಟ್ಟಡಗಳು | ಪ್ರೊ. ಎಮ್.ಎನ್. ಬೆನ್ನೂರ | ೨೭೯ |
| ೬೮. | ದರಿಯಾ ದೌಲತ್ ಬಾಗ್-ಒಂದು ಐತಿಹಾಸಿಕ ಸ್ಮಾರಕ | ನಮಿತಾ.ಪಿ. | ೨೮೩ |
| ೬೯. | ಗುಳೇದಗುಡ್ಡ ಪರಿಸರದಲ್ಲಿ ವಸಾಹತು ಕಾಲದ ಚರ್ಚುಗಳು | ಲೋಕಣ್ಣ ಭಜಂತ್ರಿ | ೨೮೬ |
| ೭೦. | ಬಹುಮನಿ ಸುಲ್ತಾನ್ ಫಿರೋಜಶಾಹ ನಿರ್ಮಿಸಿದ ಹೊಸ ಬೇಸಿಗೆ ರಾಜಧಾನಿ : ಫಿರೋಜಬಾದ್ | ಪ್ರೊ. ಶಾಶ್ವತಸ್ವಾಮಿ ಮುಕ್ಕುಂದಿಮಠ | ೨೮೯ |
| ೭೧. | ಬಿಲ್ಲಿನಕೋಟೆಯಲ್ಲೊಂದು ಪ್ರಾಚೀನ ದೇವಾಲಯ | ಡಾ. ಎಚ್.ಎಸ್. ಗೋಪಾಲರಾವ್ | ೨೯೨ |
| ೭೨. | ಕರ್ನಾಟಕದಲ್ಲಿ ಪ್ರಾಕೃತ ಸಾಹಿತ್ಯದ ಕವಿಗಳು | ಡಾ. ಸಂತೋಷ ಹಾನಗಲ್ | ೨೯೫ |
| ೭೩. | ಕಲ್ಯಾಣ ಚಾಲುಕ್ಯರ ಕಾಲದ ಸಂಸ್ಕೃತ ಸಾಹಿತ್ಯ | ಡಾ. ಕೇಯೂರ ಕರಗುದರಿ | ೨೯೯ |
| ೭೪. | ಫ.ಗು. ಹಳಕಟ್ಟಿ: ಚಾರಿತ್ರಿಕ ಕಾವ್ಯ ಸಂಪಾದನೆ | ಡಾ. ಕೆ. ರವೀಂದ್ರನಾಥ್ | ೩೦೪ |
| ೭೫. | ಕೊಡಗಿನಲ್ಲಿ ಭಾಷೆ-ಸಾಹಿತ್ಯ ಪರಂಪರೆ ಮತ್ತು ಸಾಂಸ್ಕತಿಕ ಅನ್ವಯಗಳು | ಡಾ. ಎಂ.ಜಿ. ನಾಗರಾಜ್ | ೩೦೭ |
| ೭೬. | 'ಕಂಠೀರವ ನರಸರಾಜ ವಿಜಯ' ಕಾವ್ಯದಲ್ಲಿ ಕೋಟೆಕಾಳಗ | ಡಾ. ನಳಿನಿ ವೆಂಕಟೇಶ್ | ೩೧೭ |
| ೭೭. | ರಾಮನಗರ ಜಿಲ್ಲೆಯಲ್ಲಿ ತಮಿಳು ಭಾಷೆ ಮತ್ತು ಭಾಷಿಕರ ಪ್ರಾಚೀನತೆ | ಡಾ. ಕನ್ಯಾಕುಮಾರ್.ಪಿ. | ೩೨೧ |
| ೭೮. | ಸಂಸ್ಕೃತಿಯ ವಿಶ್ವರೂಪ-ಕರ್ನಾಟಕ | ಡಾ. ಎಸ್.ಕೆ. ಜೋಶಿ | ೩೨೫ |
| ೭೯. | ನೆಲಪಟ್ನ-'ಮರೆಯಾದ ಮಾಗಡಿ ಕೆಂಪೇಗೌಡ ಪ್ರಭುಗಳ ರಾಜಧಾನಿ' | ವಿ.ಪಿ. ಗುರುಶಾಂತ್ | ೩೨೯ |
| ೮೦. | ದಾವಣಗೆರೆ ಪರಿಸರದಲ್ಲಿರುವ ಪಾಳೆಯಗಾರರ ನೆಲೆಗಳು | ಭೋಜ್ಯನಾಯಕ ಎಲ್.ಎಚ್. | ೩೩೫ |

| | | | |
|---|---|---|---|
| ೮೧. | ವಿಜಯನಗರ ಸಾಮ್ರಾಜ್ಯದ ರಾಜಧಾನಿ ವಿಜಯನಗರ ಪಟ್ಟಣದ ಉಪನಗರ ಕಮಲಾಪುರ | ಶಶಿಕಲಾ ರಾ. ಇಂಜನಿ | ೩೩೮ |
| ೮೨. | ಕಾವೇರಿ ನದಿ ತೀರ ಪ್ರದೇಶದ ಮೇಲೆ ಚೋಳರ ಧಾರ್ಮಿಕ ಜೀವನದ ಒಂದು ನೋಟ ವಿಶೇಷವಾಗಿ ಕಾಳಾಮುಖ ಪಂಥದ ಪಾತ್ರ | ಡಾ. ಆರ್. ಕವಿತಾ | ೩೪೨ |
| ೮೩. | "ಮಧ್ಯಮಲೆನಾಡಿನಲ್ಲಿ ಜೈನಧರ್ಮದ ಬೆಳವಣಿಗೆ" | ಡಾ. ಕೆ.ಪಿ. ಪ್ರಕಾಶ್ | ೩೪೭ |
| ೮೪. | ಕನಕದಾಸರ ಮಹದೇವಪುರದ ಭೇಟಿ-ನೈಜ ಐತಿಹಾಸಿಕ ಸಂಗತಿಯೇ? | ಭೈರಪ್ಪ.ಎಂ.ಜಿ.<br>ಡಾ. ಶಲ್ವಪಿಳ್ಳೆ ಅಯ್ಯಂಗಾರ್ | ೩೫೦ |
| ೮೫. | ಕರಾವಳಿ ಕರ್ನಾಟಕ ಮತ್ತು ಪೋರ್ತುಗೀಜ ಭೌಗೋಳಿಕ ತಜ್ಞರು | ಡಾ. ಕೆ.ಜಿ. ವಸಂತಮಾಧವ | ೩೫೪ |
| ೮೬. | ತೆಕ್ಕಲಕೋಟೆ ಹರಿವಿನ ಮಲ್ಲಯ್ಯ (ಮೈಲಾರ): ಒಂದು ಅವಲೋಕನ | ನವೀನಕುಮಾರ್ ಪಿ. | ೩೫೯ |
| ೮೭. | "ಸರೂರ ಸಂಪ್ರದಾಯದ ಕೆಲವು ದಾಖಲೆಗಳು" | ಸಣ್ಣಪಾಲಯ್ಯ.ಎಸ್.ಎಂ. | ೩೬೨ |
| ೮೮. | ಹಂಪಿ ಪರಿಸರದಲ್ಲಿ ಮುಸ್ಲಿಂ ಸಂಸ್ಕೃತಿ | ಅಕ್ತರ್ ಖಾನಂ ಹೆಚ್.ಎಸ್. | ೩೬೪ |
| ೮೯. | ಮಾನ್ವರಮಸಲವಾಡ: ಸ್ಥಳನಾಮ ವಿಶ್ಲೇಷಣೆ | ಡಾ. ಎನ್.ಎಸ್. ವೀರೇಶ ಉತ್ತಂಗಿ | ೩೬೮ |
| ೯೦. | ಬರಗೂರು-ಒಂದು ಸಾಂಸ್ಕೃತಿಕ ಅಧ್ಯಯನ | ಹೆಚ್. ಗುಜ್ಜಾರಪ್ಪ | ೩೭೧ |
| ೯೧. | ಬಾಗಲಕೋಟ ಪ್ರದೇಶದ ಪ್ರವಾಸೋದ್ಯಮ ಧಾರ್ಮಿಕ ತಾಣಗಳು | ರಮೇಶ ಎಂ. ಮೊರಬ | ೩೭೫ |
| ೯೨. | ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ಮೈಸೂರು ಒಡೆಯರ ಕೊಡುಗೆಗಳು (ಕ್ರಿ.ಶ. ೧೬೧೦ರಿಂದ ೧೮೮೧) | ಆರ್.ಎನ್. ರಶ್ಮಿ | ೩೮೦ |
| ೯೩. | ಸ್ವಾತಂತ್ರ್ಯಪೂರ್ವ ದಕ್ಷಿಣ ಕನ್ನಡ ಜಿಲ್ಲೆಯ ರಾಜಕೀಯ ಪತ್ರಿಕೆಗಳಲ್ಲಿ ಸಾಮಾಜಿಕ ನಿಲುವುಗಳು | ಸೀತಾರಾಮ.ಪಿ. | ೩೮೪ |
| ೯೪. | ಸ್ವಾತಂತ್ರ್ಯ ಹೋರಾಟದಲ್ಲಿ ಇಂಗಳಗೊಂದಿ ಗ್ರಾಮದ ಪಾತ್ರ | ಕೃಷ್ಣಮೂರ್ತಿ ಸಿ.ಎನ್. | ೩೯೦ |
| ೯೫. | ಚಿತ್ರದುರ್ಗದಲ್ಲಿ ನಡೆದ ನಗರ ದಂಗೆಯ ಪ್ರಭಾವ ೧೮೩೦-೧೮೩೧ | ಡಾ. ಎಚ್.ಇ. ಬಸವರಾಜಪ್ಪ | ೩೯೩ |
| ೯೬. | "ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ-ಅವರು ತಂದ ಆಡಳಿತ ಸುಧಾರಣೆಗಳು" (೧೮೯೪-೧೯೦೨) | ಡಾ. ಮಹಾದೇವಿ<br>ಸಂತೋಷ್ ಶೆಟ್ಟಿ | ೩೯೬ |
| ೯೭. | ಮೈಸೂರು ಸಂಸ್ಥಾನ-ದ್ವಿತೀಯ ಮಹಾಯುದ್ಧ ಕಾಲದ ಕಾರ್ಮಿಕ ಕಲ್ಯಾಣ ಚಟುವಟಿಕೆಗಳು | ಡಾ. ಲಿಂಗರಾಜು | ೪೦೩ |
| ೯೮. | ಅರಮನೆ ಸತ್ಯಾಗ್ರಹ ಸಂದರ್ಭದಲ್ಲಿ ಹೊರಡಿಸಲಾದ ಫ್ರೀ ಮೈಸೂರ್ ಗೆಜೆಟ್ | ಪಿ. ನಾಗಭೂಷಣಗೌಡ | ೪೦೬ |
| ೯೯. | ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಶೋಷಿತ ವರ್ಗಗಳ ಪ್ರಗತಿ (೧೯೨೦-೧೯೪೭) | ಡಾ. ನಿರ್ಮಲ್ ರಾಜು | ೪೧೩ |
| ೧೦೦. | ವಸಾಹತುಷಾಹಿ ಚಿಕ್ಕಮಗಳೂರು ಜಿಲ್ಲೆಯ ಸಾರಿಗೆ ಮತ್ತು ಸಂಪರ್ಕದ ಅಭಿವೃದ್ಧಿಯಲ್ಲಿ ಮೈಸೂರು ಒಡೆಯರು ಮತ್ತು ಬ್ರಿಟಿಷರ ಪಾತ್ರ | ರವಿರಾಜ್.ಬಿ.ವಿ. | ೪೧೮ |
| ೧೦೧. | ಸ್ವಾತಂತ್ರ್ಯ ಹೋರಾಟದಲ್ಲಿ ಕುರುಬರು | ಡಾ. ರಾಘವೇಂದ್ರನಾಯ್ಕ ಎಸ್.ಡಿ. | ೪೨೨ |
| ೧೦೨. | ಬೆಳಗಾವಿಯ ಹೆಮ್ಮೆಯ ಪಾರಂಪರಿಕ ಸ್ಮಾರಕ-ಸ್ವಾಮಿ ವಿವೇಕಾನಂದರು ತಂಗಿದ್ದ ಮನೆ | ಸ್ಮಿತಾ ಸುರೇಬಾನಕರ | ೪೨೬ |
| ೧೦೩. | ಕರಿಭಂಟನಾಳದ ಶ್ರೀಗುರುಗಂಗಾಧರೇಶ್ವರರ ಸ್ವಾಮಿಗಳು ಮತ್ತು ಕಂಪನಿ ಸರ್ಕಾರದ ವಿರುದ್ಧ ಸ್ವತಂತ್ರ ಸಂಗ್ರಮದ ಹೋರಾಟ | ಪ್ರೊ. ಜಿ.ಎನ್. ಪಾಟೀಲ | ೪೨೯ |
| ೧೦೪. | "ಸಹಕಾರಿ ರಂಗದ ಭೀಷ್ಮ: ಶ್ರೀ ಕೆ.ಎಚ್. ಪಾಟೀಲರ ಸಾಧನೆಯ ಒಂದು ನೋಟ" | ಪ್ರೊ. ಕೆ.ಎಂ. ಗರಗ | ೪೩೮ |
| ೧೦೫. | ಮೈಸೂರು ಸಂಸ್ಥಾನದ ನೀರಾವರಿ ಮೇಜರ್ ಸ್ಯಾಂಕೆಯ ಕೊಡುಗೆಗಳು | ಡಾ. ಟಿ.ವಿ. ನಾಗರಾಜು | ೪೪೨ |

೧೦೬. ರಾಜನೀತಿ ಕುಶಲ ಮತ್ತು ಸಮರ್ಥ ಬ್ಯಾಂಕರ್ ಬೆನೆಗಲ್ ರಾಮರಾವ್ ಡಾ. ಸುಷಮಾ ಆರೂರ್ ೪೪೫
೧೦೭. ಬ್ರಜೇಂದ್ರನಾಥ್ ಸೀಲ್: ಒಂದು ಮರುಚಿಂತನೆ ಡಾ. ಲೀಲಾ.ಬಿ. ೪೪೯
೧೦೮. ಮಹಿಳೆಯರ ಸಬಲೀಕರಣದಲ್ಲಿ ಎಂ.ಆರ್. ಲಕ್ಷ್ಮಮ್ಮ ಅವರ ಪಾತ್ರ ಮಂಜುಳ.ಎ.ಸಿ. ೪೫೪
೧೦೯. ಮಂಗಸೂಳಿ ಪವಾರ ದೇಸಾಯಿ (ಧೈರ್ಯಶೀಲರಾವ್) ಡಾ. ಮಹಾನಂದ.ಎಂ.ಗೊಂದಿ ೪೫೮
೧೧೦. ಡಬ್ಲ್ಯು.ಆರ್. ಕೂಂಬೇಸ್ ಅವರ ಜ್ಞಾಪಕಾರ್ಥ ಸ್ಮಾರಕ ಕ್ರಿಸ್ತರಾಜ ಸಭೆ–ಹೊಸಪೇಟೆ ಸಣ್ಣಪಾಲಯ್ಯ ಬಿ.ಪಿ. ೪೬೩
೧೧೧. ಹಂಪೆ ಕೃಷ್ಣ ದೇವಾಲಯದಲ್ಲಿರುವ ಅಪರೂಪದ ನೃತ್ಯ ದುರ್ಗಾ ಶಿಲ್ಪ ಪದ್ಮಜಾ ದೇಸಾಯಿ ೪೬೫
೧೧೨. ಅಗ್ರಹಾರ ಬಾಚಹಳ್ಳಿಯ ಹುಣಿಸೇಶ್ವರ ದೇವಾಲಯದಲ್ಲಿರುವ ವೀರಗಲ್ಲು ಡಾ. ಎಚ್. ಜಯಮ್ಮ ಕರಿಯಣ್ಣ ೪೬೭
೧೧೩. ಮೊಳಕಾಲ್ಮೂರು ತಾಲೂಕಿನ ಮಾಚೇನಹಳ್ಳಿ ಗ್ರಾಮದ ವೀರಗಲ್ಲು ಮತ್ತು ವೀರಮಾಸ್ತಿಗಲ್ಲುಗಳು ಹೊನ್ನೂರುಸ್ವಾಮಿ ಹೆಚ್. ೪೭೦
೧೧೪. ಬಾಸವೂರು ಕಂಪಣದ ಜೈನ ಪ್ರಾಚ್ಯಾವಶೇಷಗಳು ಶಿವಯೋಗಿ ಕೋರಿಶೆಟ್ಟರ ೪೭೫
೧೧೫. ಪಾಂಡವಪುರ (ಫ್ರೆಂಚ್‌ರಾಕ್ಸ್) ತಾಲೂಕಿನ ಭೌಗೋಳಿಕ ಪರಿಸರದ ಪುರಾತತ್ವ ಅವಶೇಷಗಳ ಒಂದು ಶೋಧ ಶಶಿಕುಮಾರ್.ಎಸ್. ಡಾ. ಎಸ್.ಕೆ. ದೇವೇಗೌಡ ೪೭೯
೧೧೬. ಗೌಡೂರು–ಮಾಚನೂರು ಹಾಗೂ ವಂದಲಿ ಬೂದಿ ದಿಬ್ಬಗಳು ಒಂದು ಅಧ್ಯಯನ ಡಾ. ಹೆಚ್. ಚಂದ್ರಶೇಖರ ೪೮೫
೧೧೭. ಸೂಲವಾಡಿಯ ಬ್ರಹ್ಮೇಶ್ವರ ದೇವಾಲಯ: ಒಂದು ವಿಶ್ಲೇಷಣೆ ಕುಮಾರಸ್ವಾಮಿ.ಎಸ್.ಡಿ. ೪೮೮
೧೧೮. ಹೊನ್ನೂರು ಗ್ರಾಮದ ಭಗ್ನಗೊಂಡ ವೀರಭದ್ರ ದೇವಾಲಯ ಒಂದು ವಿಶ್ಲೇಷಣೆ ಅನಿಲ್.ಎಲ್. ೪೯೩
೧೧೯. ಆನೆಕೆರೆ ಗ್ರಾಮದ ಭಗ್ನಗೊಂಡ ಅಮೃತೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು: ಒಂದು ಅವಲೋಕನ ಡಾ. ಸಿ.ಇ. ಲೋಕೇಶ್ ೪೯೭
೧೨೦. ಆನೆಕೆರೆ ಗ್ರಾಮದ ಜನಾರ್ಧನ ದೇವಾಲಯ: ಒಂದು ಅವಲೋಕನ ಜಿ. ಕರಿಯಪ್ಪ ೫೦೦
೧೨೧. ಶ್ರೀ ವೀರಭದ್ರಾಪುರ ಅಗ್ರಹಾರ, ಶ್ರೀ ವೀರಭದ್ರೇಶ್ವರ ದೇವಾಲಯ ಮತ್ತು ಸುತ್ತಮುತ್ತಲ ಪರಿಸರದ ಪ್ರಾಚ್ಯಾವಶೇಷಗಳು ಟಿ. ಸರಸ್ವತಿ ಕೆಳದಿ ವೆಂಕಟೇಶ್ ಜೋಯಿಸ್ ೫೦೫
೧೨೨. ಬೆಟ್ಟಹಳ್ಳಿ ಪಾಳ್ಯದ ದೇವಸ್ಥಾನ–ದೇವಾಲಯ ವಿಸ್ತರಣೆಗೊಂದು ಉದಾಹರಣೆ ಮಮತಾ ರಾಣಿ ೫೦೯
೧೨೩. ಕೋಟಿ ಶಂಕರ ಮತ್ತು ಲಕ್ಷ್ಮೀನರಸಿಂಹ ದೇವಾಲಯ ಕೊಟ್ಟನಕಲ್ ನೆಲ್ಲುದ್ರಿ ಸದಾನಂದಪ್ಪ ೫೧೧
೧೨೪. ಸುಂಕಾತೊಣ್ಣೂರು ಗ್ರಾಮದ ಪ್ರಾಚ್ಯಾವಶೇಷಗಳು ಎಂ.ವಿ. ಭಾಸ್ಕರ ೫೧೪
೧೨೫. ಶೆಳ್ಳಗಿ ಮಾರುತಿ ಮಂಟಪ ಡಾ. ರಮೇಶ ನಾಯಕ ೫೧೬
೧೨೬. ಬೇಲಿಮಲ್ಲೂರು ಪರಿಸರದ ಪ್ರಾಚ್ಯಾವಶೇಷಗಳು ಡಾ. ಬಿ.ಸಿ. ರಾಕೇಶ್ ೫೧೯
೧೨೭. ಉಣಕಲ್ಲಿನ ಪ್ರಾಚ್ಯಾವಶೇಷಗಳು, ಉಣಕಲ್ಲಿನ ಐತಿಹ್ಯಗಳು ಪ್ರೊ. ಕೆ.ಪಿ. ಮಲ್ಲಿಗವಾಡ ೫೨೨
೧೨೮. ಮೈಸೂರಿನ ಸ್ಮಾರಕ ಶಿಲ್ಪಗಳು ಟಿ.ಎಲ್. ಜಗದೀಶ್ ೫೨೬
೧೨೯. ಚಿಕ್ಕಯಲ್ಲೂರು, ದೊಡ್ಡಯಲ್ಲೂರಿನ ಪ್ರಾಚೀನ ಸ್ಮಾರಕಗಳು ಕೆ. ಪುಟ್ಟಕಾಮಯ್ಯ ೫೩೦
೧೩೦. ಬೀರಲದಿನ್ನಿಯ ಪ್ರಾಚ್ಯಾವಶೇಷಗಳು ಶಿವಪ್ಪ ನ. ನೀರಲಗಿ ೫೩೫
೧೩೧. "ಹೊನ್ನೂರು ಗ್ರಾಮದ ಭಗ್ನಗೊಂಡ ವೀರಭದ್ರ ದೇವಾಲಯ: ಒಂದು ವಿಶ್ಲೇಷಣೆ" ಅನಿಲ್ ಎಲ್. ೫೩೮
೧೩೨. ಅಥಣಿ ತಾಲ್ಲೂಕಿನ ಮುಸ್ಲಿಂ ಸ್ಮಾರಕಗಳು ಸುರೇಶಕುಮಾರ ಪಾಂಗಿ ೫೪೧
* ವಾರ್ಷಿಕ ವರದಿ ೫೪೫

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ಸರ್ವಾಧ್ಯಕ್ಷರು / ದಿನಾಂಕ-ವರ್ಷ/ಸ್ಥಳ / ಆಶ್ರಯ/ಸಹಯೋಗ |
| --- | --- |
| ೧. | **ಡಾ|| ಎಂ. ಚಿದಾನಂದಮೂರ್ತಿ**<br>೧೫-೧೭ ಮೇ ೧೯೮೭<br>*ಕರ್ನಾಟಕ ಇತಿಹಾಸ ಅಕಾದೆಮಿ ಬೆಂಗಳೂರು* |
| ೨. | **ಡಾ|| ಜಿ. ಎಸ್. ಗಾಯಿ**<br>೨೩-೨೪ ಅಕ್ಟೋಬರ್ ೧೯೮೮<br>*ಸಿದ್ಧಗಂಗಾಕ್ಷೇತ್ರ : ಡಾ| ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು, ತುಮಕೂರು* |
| ೩. | **ಡಾ|| ಶ್ರೀನಿವಾಸ ರಿತ್ತಿ**<br>೧೦-೧೧ ಜೂನ್ ೧೯೮೯<br>*ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ* |
| ೪. | **ಡಾ|| ಎಸ್. ಆರ್. ರಾವ್**<br>೨೧-೨೨ ಜುಲೈ ೧೯೯೦<br>*ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ* |
| ೫. | **ಡಾ|| ಬಾ. ರಾ. ಗೋಪಾಲ್**<br>೧೨-೧೪ ಜುಲೈ ೧೯೯೧<br>*ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ* |
| ೬. | **ಡಾ|| ಕೆ. ವಿ. ರಮೇಶ್**<br>೧೧-೧೩ ಜುಲೈ ೧೯೯೨<br>*ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು* |
| ೭. | **ಡಾ|| ಅ. ಸುಂದರ**<br>೨೩-೨೫ ಜುಲೈ ೧೯೯೩<br>*ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು* |
| ೮. | **ಡಾ|| ಎಂ. ಎಂ. ಕಲಬುರ್ಗಿ**<br>೯-೧೦ ಜುಲೈ ೧೯೯೪<br>*ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ ಸೊಂಡೂರು* |
| ೯. | **ಡಾ|| ಎ.ವಿ. ನರಸಿಂಹಮೂರ್ತಿ**<br>೯-೧೧ ಸೆಪ್ಟೆಂಬರ್ ೧೯೯೫<br>*ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ ಬೆಳಗಾವಿ* |
| ೧೦. | **ಡಾ|| ಜಿ. ಎಸ್. ದೀಕ್ಷಿತ್**<br>೭-೯ ಜೂನ್ ೧೯೯೬<br>*ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ* |
| ೧೧. | **ಪ್ರೊ|| ಕೆ. ಅಭಿಶಂಕರ್**<br>೨೫-೨೭ ಅಕ್ಟೋಬರ್ ೧೯೯೭<br>*ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ ಶಿರಸಿ* |
| ೧೨. | **ಡಾ|| ಎಸ್. ನಾಗರಾಜು**<br>೧೪-೧೬ ನವೆಂಬರ್ ೧೯೯೮<br>*ಕರ್ನಾಟಕ ಇತಿಹಾಸ ಅಕಾದೆಮಿ ದಿ ಮಿಥಿಕ್ ಸೊಸೈಟಿ, ಬೆಂಗಳೂರು* |
| ೧೩. | **ಡಾ|| ಶ್ರೀನಿವಾಸ ಹಾವನೂರ**<br>೧೧-೧೩ ಜೂನ್ ೧೯೯೯<br>*ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ.ಬಾ.ಸದಾಶಿವಪ್ಪ ಸ್ವಾಗತ ಸಮಿತಿ, ಹರಪನಹಳ್ಳಿ* |
| ೧೪. | **ಶ್ರೀ ಸಿ. ಟಿ. ಎಂ. ಕೊಟ್ರಯ್ಯ**<br>೮-೧೦ ಜುಲೈ ೨೦೦೦<br>*ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ ಹಂಪಿ* |

| ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ |
|---|---|


| ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ |
|---|---|


೧೫. **ಡಾ|| ಜ್ಯೋತ್ಸ್ನಾ ಕಾಮತ್**
೧೩-೧೫ ಅಕ್ಟೋಬರ್ ೨೦೦೧
ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು
ಪೇಜಾವರ ಮಠಾಧೀಶರು, ಉಡುಪಿ



೧೬. **ಡಾ. ಎ.ಕೆ. ಶಾಸ್ತ್ರಿ**
೨೨-೨೪ ಸೆಪ್ಟೆಂಬರ್ ೨೦೦೨
ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು
ಶ್ರೀ ರಾಮಚಂದ್ರಾಪುರ ಮಠ
ಹೊಸನಗರ



೧೭. **ಡಾ. ಎಸ್. ರಾಜಶೇಖರ್**
೧೩-೧೫ ಸೆಪ್ಟೆಂಬರ್ ೨೦೦೩
ವಿಶ್ವಚೇತನ ಸಂಸ್ಥೆ
ಬಾದಾಮಿ



೧೮. **ಶ್ರೀ ಕೆಳದಿ ಗುಂಡಾ ಜೋಯಿಸ್**
೨೪-೨೬ ಸೆಪ್ಟೆಂಬರ್ ೨೦೦೪
ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ
ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ
ಹೊನ್ನಾಳಿ



೧೯. **ಡಾ. ಬಿ.ವ್ಹಿ. ಶಿರೂರ**
೧೧-೧೩ ಸೆಪ್ಟೆಂಬರ್ ೨೦೦೫
ಶ್ರೀ ಕೊತ್ತಲ ಬಸವೇಶ್ವರ
ಭಾರತೀಯ ಶಿಕ್ಷಣ ಸಂಸ್ಥೆ, ಸೇಡಂ



೨೦. **ಡಾ. ಸೂರ್ಯನಾಥ ಕಾಮತ್**
೯-೧೧ ಸೆಪ್ಟೆಂಬರ್ ೨೦೦೬
ಶ್ರೀ ರಾಘವೇಂದ್ರ ಸ್ವಾಮಿಗಳ ಮಠ
ನಂಜನಗೂಡು



೨೧. **ಪ್ರೊ. ಲಕ್ಷ್ಮಣ್ ತೆಲಗಾವಿ**
೮-೧೦ ಸೆಪ್ಟೆಂಬರ್ ೨೦೦೭
ಹಗರಿಬೊಮ್ಮನಹಳ್ಳಿಯ
ರಾಮನಗರ, ಹಗರಿಬೊಮ್ಮನಹಳ್ಳಿ
ಶ್ರೀರಾಮ ಯುವಕ ಸಂಘ



೨೨. **ಡಾ. ವಸುಂಧರಾ ಫಿಲಿಯೋಜಾ**
೧೮-೨೧ ಸೆಪ್ಟೆಂಬರ್ ೨೦೦೮
ಧರ್ಮಸ್ಥಳ ಮಂಜುನಾಥೇಶ್ವರ
ದೇವಾಲಯ ಸಂಸ್ಥೆ, ಧರ್ಮಸ್ಥಳ



೨೩. **ಡಾ. ಎಂ.ಜಿ. ನಾಗರಾಜ್**
೧೦-೧೨ ಅಕ್ಟೋಬರ್ ೨೦೦೯
ಶ್ರೀ ಜಗದ್ಗುರು ರಂಭಾಪುರಿ
ವೀರ ಸಿಂಹಾಸನ ಮಹಾಸಂಸ್ಥಾನ ಪೀಠ
ಬಾಳೆಹೊನ್ನೂರು



೨೪. **ಡಾ. ಎಂ.ಎಸ್. ಕೃಷ್ಣಮೂರ್ತಿ**
೧೩-೧೫ ನವೆಂಬರ್ ೨೦೧೦
ಶ್ರೀ ಆದಿಚುಂಚನಗಿರಿ
ಆದಿಚುಂಚನಗಿರಿ ಮಹಾ ಸಂಸ್ಥಾನ ಮಠ



೨೫. **ಡಾ. ಎಚ್.ಎಸ್.ಗೋಪಾಲರಾವ್**
೯-೧೧ ಸೆಪ್ಟೆಂಬರ್ ೨೦೧೧
ದಿ ಮಿಥಿಕ್ ಸೊಸೈಟಿ
ಬೆಂಗಳೂರು



೨೬. **ಡಾ. ಎಸ್.ವಿ. ವೆಂಕಟೇಶಯ್ಯ**
೨೨-೨೪ ಸೆಪ್ಟೆಂಬರ್ ೨೦೧೨
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಮ್
ಶೃಂಗೇರಿ



೨೭. **ಡಾ. ಎಸ್.ಕೆ. ಜೋಷಿ**
೨೧-೨೩ ಸೆಪ್ಟೆಂಬರ್ ೨೦೧೩
ದಿ ಮಿಥಿಕ್ ಸೊಸೈಟಿ
ಬೆಂಗಳೂರು



೨೮. **ಡಾ. ಕೆ.ಜಿ. ವಸಂತ ಮಾಧವ**
೨೬-೨೮ ಸೆಪ್ಟೆಂಬರ್ ೨೦೧೪
ಮೂಲ್ಕಿ ಸುಂದರರಾಮಶೆಟ್ಟಿ ಕಾಲೇಜು
ಶಿರ್ವ, ಉಡುಪಿ ಜಿಲ್ಲೆ
ಉಡುಪಿ



೨೯. **ನಾಡೋಜ ಪ್ರೊ. ಹಂಪ ನಾಗರಾಜಯ್ಯ**
೨೯-೩೧ ಅಕ್ಟೋಬರ್ ೨೦೧೫
ಕರ್ನಾಟಕ ಸಂಘ (ರಿ.) ಮಂಡ್ಯ
ಮಂಡ್ಯ ಜಿಲ್ಲೆ





# ಡಾ॥ ಬಾ.ರಾ. ಗೋಪಾಲ್ ಶಾಸನ ದತ್ತಿ ಪ್ರಶಸ್ತಿ ಸನ್ಮಾನಿತರು

| ಸಂಖ್ಯೆ | ದಿನಾಂಕ–ವರ್ಷ | ಸ್ಥಳ | ಸನ್ಮಾನಿತರು |
|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ, ಅಕ್ಟೋಬರ್ ೨೦೦೧ | ಉಡುಪಿ | ಡಾ. ಕೆ.ವಿ. ರಮೇಶ |
| ೨ | ೧೬ನೇ ವಾರ್ಷಿಕ ಸಮ್ಮೇಳನ, ಸೆಪ್ಟಂಬರ್ ೨೦೦೨ | ಹೊಸನಗರ | ಡಾ. ಶ್ರೀನಿವಾಸ ರತ್ತಿ |
| ೩ | ೧೭ನೇ ವಾರ್ಷಿಕ ಸಮ್ಮೇಳನ, ಸೆಪ್ಟಂಬರ್ ೨೦೦೩ | ಬಾದಾಮಿ | ಡಾ. ದೇವರಕೊಂಡಾರೆಡ್ಡಿ |
| ೪ | ೧೮ನೇ ಸಮ್ಮೇಳನ, ಸೆಪ್ಟಂಬರ್ ೨೦೦೪ | ಹೊನ್ನಾಳಿ | ಡಾ. ಬಿ. ರಾಜಶೇಖರಪ್ಪ |
| ೫ | ೧೯ನೇ ಸಮ್ಮೇಳನ, ಸೆಪ್ಟಂಬರ್ ೨೦೦೫ | ಸೇಡಂ | ಡಾ. ಕೆ.ಆರ್. ಗಣೇಶ್ |
| ೬ | ೨೦ನೇ ಸಮ್ಮೇಳನ, ಸೆಪ್ಟೆಂಬರ್ ೨೦೦೬ | ನಂಜನಗೂಡು | ಡಾ. ಎಂ.ಜಿ. ನಾಗರಾಜ್ |
| ೭ | ೨೧ನೇ ಸಮ್ಮೇಳನ, ಸೆಪ್ಟೆಂಬರ್ ೨೦೦೭ | ಹಗರಿಬೊಮ್ಮನಹಳ್ಳಿ | ಡಾ. ಎಚ್.ಎಸ್. ಗೋಪಾಲರಾವ್ |
| ೮ | ೨೨ನೇ ಸಮ್ಮೇಳನ, ಸೆಪ್ಟೆಂಬರ್ ೨೦೦೮ | ಧರ್ಮಸ್ಥಳ | ಡಾ. ಪಿ.ಎನ್. ನರಸಿಂಹಮೂರ್ತಿ |
| ೯ | ೨೩ನೇ ಸಮ್ಮೇಳನ, ಅಕ್ಟೋಬರ್ ೨೦೦೯ | ಬಾಳೇಹೊನ್ನೂರು | ಶ್ರೀಮತಿ ಹನುಮಾಕ್ಷಿ ಗೋಗಿ |
| ೧೦ | ೨೪ನೇ ಸಮ್ಮೇಳನ, ನವೆಂಬರ್ ೨೦೧೦ | ಆದಿಚುಂಚನಗಿರಿ | ಡಾ. ಪಿ.ವಿ. ಕೃಷ್ಣಮೂರ್ತಿ |
| ೧೧ | ೨೫ನೇ ಸಮ್ಮೇಳನ, ಸೆಪ್ಟೆಂಬರ್ ೨೦೧೧ | ಬೆಂಗಳೂರು | ಶ್ರೀ ಕೆ. ಮೊಹಮ್ಮದ್ ಶರೀಫ್ |
| ೧೨ | ೨೬ನೇ ಸಮ್ಮೇಳನ, ಸೆಪ್ಟೆಂಬರ್ ೨೦೧೨ | ಶೃಂಗೇರಿ | ಶ್ರೀ ಸೀತಾರಾಮ್ ಜಾಗೀರ್‌ದಾರ್ |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು |
|---|---|---|---|

೧೩ ***ಡಾ|| ಆರ್. ಶೇಷಶಾಸ್ತ್ರಿ***
೨೭ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೩
ಬೆಂಗಳೂರು



೧೪ ***ಶ್ರೀ ಎಚ್.ಎಂ. ನಾಗರಾಜರಾವ್***
೨೮ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೪
ಶಿರ್ವ, ಉಡುಪಿ ಜಿಲ್ಲೆ.



೧೫ ***ಡಾ. ಡಿ.ವಿ. ಪರಮಶಿವಮೂರ್ತಿ***
೨೯ನೇ ಸಮ್ಮೇಳನ
ಅಕ್ಟೋಬರ್ ೨೦೧೫
ಮಂಡ್ಯ, ಮಂಡ್ಯ ಜಿಲ್ಲೆ.



ಶ್ರೇಷ್ಠ ಇತಿಹಾಸ ತಜ್ಞರಿಗಾಗಿ ಬಿ.ಆರ್.ಆರ್. ಕುಟುಂಬದ ಸೇವಾ ಟ್ರಸ್ಟ್‌ನ ಸನ್ಮಾನ್ಯ ಶ್ರೀ ಅಶೋಕ್‌ಕುಮಾರ್ ಅವರು ಸ್ಥಾಪಿಸಿರುವ

## "ಇತಿಹಾಸ ಸಂಸ್ಕೃತಿಶ್ರೀ" ಪ್ರಶಸ್ತಿ

(ಒಂದು ಲಕ್ಷ ರೂಪಾಯಿಗಳ ನಗದು)

| | | | |
|---|---|---|---|
| ೧. ೨೬ನೆಯ ಸಮ್ಮೇಳನ<br>೨೨.೦೯.೨೦೧೨<br>ಶೃಂಗೇರಿ | ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ<br>ಮಹಾಸಂಸ್ಥಾನಮ್, ದಕ್ಷಿಣಾಮ್ನಾಯ<br>ಶ್ರೀ ಶಾರದಾ ಪೀಠಮ್, ಶೃಂಗೇರಿ | **ಪ್ರೊ. ಲಕ್ಷ್ಮಣ್ ತೆಲಗಾವಿ** |  |
| ೨. ೨೭ನೆಯ ಸಮ್ಮೇಳನ<br>೨೧.೦೯.೨೦೧೩<br>ಬೆಂಗಳೂರು | ದಿ ಮಿಥಿಕ್ ಸೊಸೈಟಿ, ಬೆಂಗಳೂರು | **ಡಾ. ಸೂರ್ಯನಾಥ ಕಾಮತ್** |  |
| ೩. ೨೮ನೆಯ ಸಮ್ಮೇಳನ<br>೨೬.೦೯.೨೦೧೪<br>ಶಿರ್ವ | ಮೂಲ್ಕಿ ಸುಂದರರಾಮ್‌ಶೆಟ್ಟಿ<br>ಕಾಲೇಜು, ಉಡುಪಿ ಜಿಲ್ಲೆ | **ಡಾ. ಅ. ಸುಂದರ** |  |
| ೪. ೨೯ನೆಯ ಸಮ್ಮೇಳನ<br>೨೯.೧೦.೨೦೧೫<br>ಮಂಡ್ಯ | ಕರ್ನಾಟಕ ಸಂಘ (ರಿ).<br>ಮಂಡ್ಯ ಜಿಲ್ಲೆ | **ಡಾ. ಎಂ.ಜಿ. ನಾಗರಾಜ್** |  |
| ೫. ೩೦ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | **ಡಾ. ಎಸ್. ರಾಜಶೇಖರ್** |  |

ಮೇಲಣ ಮಠದ ಲಿಂ. ಶ್ರೀ ವೇ.ಎಸ್. ಸಿದ್ದಣ್ಣಯ್ಯ ಮತ್ತು ಲಿಂ. ಶ್ರೀಮತಿ ಗಂಗಮ್ಮ ಸ್ಮಾರಕ ಟ್ರಸ್ಟ್ (ರಿ). ಅರಸೀಕೆರೆ, ಸ್ಥಾಪಿಸಿರುವ

## "ನೊಳಂಬಶ್ರೀ ಪ್ರಶಸ್ತಿ"

[ಪ್ರಾರಂಭ ೨೦೧೫ರಿಂದ ನಗದು ಹತ್ತು ಸಾವಿರ ರೂಪಾಯಿಗಳು]



| | | |
|---|---|---|
| ೧. ೨೯ನೆಯ ಸಮ್ಮೇಳನ<br>ಮಂಡ್ಯ<br>೨೯.೧೦.೨೦೧೫ | ಕರ್ನಾಟಕ ಸಂಘ (ರಿ).<br>ಮಂಡ್ಯ<br>ಮಂಡ್ಯ ಜಿಲ್ಲೆ. | **ಡಾ. ಎಂ.ಎಸ್. ಕೃಷ್ಣಮೂರ್ತಿ** |
| ೨. ೩೦ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | **ಡಾ. ಎಚ್. ಜಯಮ್ಮ ಕರಿಯಣ್ಣ** |



---

ಶ್ರೀಮತಿ ವಿ. ಗೌರಮ್ಮ, ಶ್ರೀ ಗಂಗಾಧರಯ್ಯ ಇವರ ಹೆಸರಿನಲ್ಲಿ ಅವರ ಮಕ್ಕಳಾದ ಡಾ. ಎಂ.ಜಿ. ನಾಗರಾಜ್, ಶ್ರೀಮತಿ ಪದ್ಮ ವಿರೂಪಾಕ್ಷಯ್ಯ ಮತ್ತು ಡಾ. ಎಂ.ಜಿ. ಚಂದ್ರಕಾಂತ್ ಇವರುಗಳು ಸ್ಥಾಪಿಸಿರುವ

## "ಸಂಶೋಧನಶ್ರೀ ಪ್ರಶಸ್ತಿ"

[ಪ್ರಾರಂಭ ೨೦೧೬ರಿಂದ ನಗದು ಹದಿನೈದು ಸಾವಿರ ರೂಪಾಯಿಗಳು]



| | | |
|---|---|---|
| ೧. ೩೦ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | **ಡಾ. ಬಿ. ರಾಜಶೇಖರಪ್ಪ** |

# ಕರ್ನಾಟಕ ಇತಿಹಾಸ ಅಕಾದೆಮಿ ೨೯ನೆಯ ವಾರ್ಷಿಕ ಸಮ್ಮೇಳನ

**ಕರ್ನಾಟಕ ಸಂಘ (ರಿ.) ಮಂಡ್ಯ ಜಿಲ್ಲೆ**

**ದಿನಾಂಕ ೨೯ ಅಕ್ಟೋಬರ್ ೨೦೧೫**

ಸಮ್ಮೇಳನಾಧ್ಯಕ್ಷರು : **ನಾಡೋಜ ಪ್ರೊ. ಹಂಪ ನಾಗರಾಜಯ್ಯ**

## ಅಧ್ಯಕ್ಷ ಭಾಷಣ

ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ಬಿಸ್ತಾರಿಸಿ ಹಸ್ತದಿಂದ ಪಿಡಿದು ತನ್ನ ಸರಣ್ಬುಗುವರ್ಗ್ಗೆ ಲೇಸುಮಂ ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಳ್

ಪಗಲಾವಳೊರ್ವಳಾ

ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ

–ದಾವಣಗೆರೆ ಶಾಸನ, ೧೨೮೦

ಇತಿಹಾಸ ಅಕಾದೆಮಿಯ ನೆಲೆವೀಡು ಬೆಂಗಳೂರಾದರೂ ವಾರ್ಷಿಕ ಸಮ್ಮೇಳನ ನಡೆಯುವ ಉಪ್ಪಯಣ ವೀಡುಗಳು ಹಲವಾರು. ಇತಿಹಾಸ ನಿರಂತರ ಪಯಣದಲ್ಲಿ ಮೂರು ದಿನಗಳ ಕಾಲ ಸಕ್ಕರೆಸೀಮೆ ಮಂಡ್ಯದಲ್ಲಿ ಕಬ್ಬು ಜಗಿಯುತ್ತ ಎಳನೀರು ಸವಿಯುತ್ತ ನೆಲದ ಮರೆಯ ನಿಧಾನದ ಪದರ ಪಾತಳಿಗಳನ್ನು ಬಿಡಿಸಿ ನೋಡುವುದು ಈ ಸಮ್ಮೇಳನದ ಕೇಂದ್ರ ಪ್ರಜ್ಞೆ.

ಮಂಡ್ಯ ಎಂದರೆ ಪುಟ್ಟ ಇಂಡಿಯಾ. ನನ್ನ ಭಾವಕೋಶದಲ್ಲಿ ಈ ನಗರ ಚಿರಸ್ಥಾಯಿ. ನನ್ನ ಬಾಲ್ಯದ ಆರು ವರ್ಷ ೧೯೪೬ ರಿಂದ ೧೯೫೧ ರ ತನಕ ವಿದ್ಯಾಭ್ಯಾಸ ನಡೆದದ್ದು ಇಲ್ಲಿ. ಅನಂತರ ಮಂಡ್ಯದ ಕಾಲೇಜಿನಲ್ಲಿ ಒಂದು ವರ್ಷ ೧೯೫೯–೬೦ ಅಧ್ಯಾಪಕನಾಗಿದ್ದೆ. ನನ್ನ ಚಿಕ್ಕಮ್ಮ–ಚಿಕ್ಕಪ್ಪ ತೋರಿದ ಅಕ್ಕರೆ ಮಂಡ್ಯದ ಸಕ್ಕರೆಗಿಂತ ಸವಿಯಾಗಿದ್ದುದನ್ನು ಮರೆಯಲಾರೆ. ತರುವಾಯದ ವರ್ಷಗಳಲ್ಲಿ ನೂರಾರು ಉಪನ್ಯಾಸಗಳನ್ನು ಮಾಡಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ೧೯೭೮ರಲ್ಲಿ ಅವಿರೋಧವಾಗಿ ಆಯ್ಕೆ ಆದಾಗ ಮಂಡ್ಯದ ಸಾಹಿತ್ಯ–ಸಂಸ್ಕೃತಿ ಅಭಿಮಾನಿಗಳು ನಗರದ ಮುಖ್ಯ ಬೀದಿಯಲ್ಲಿ ಮೆರವಣಿಗೆ ಮಾಡಿ ಮುದ್ದಾಡಿದ್ದನ್ನು ನೆನೆದಾಗ ಅಭಿಮಾನ ಉಕ್ಕಿ ಬರುತ್ತದೆ. ಇಂಥ ಮಧುರ ಸ್ಮೃತಿ ತರಂಗಗಳ ಮೇಲೆ ಇದೀಗ ಮತ್ತೊಂದು ತೆಪ್ಪ ತೇಲಿಬಿಟ್ಟಿದ್ದೀರಿ.

ಕರ್ನಾಟಕ ಇತಿಹಾಸ ಅಕಾದೆಮಿಯು ತನ್ನ ೨೯ನೆಯ ವಾರ್ಷಿಕ ಅಧಿವೇಶನದ ಮಣೆಯ ಮೇಲೆ ಕೂಡಿಸಿ ತೋರಿರುವ ಈ ಮನ್ನಣೆಗೆ ಅಂತಃಕರಣ ಆರ್ದ್ರಗೊಂಡು ಪ್ಲಾವಿತವಾಗಿದೆ. ಇತಿಹಾಸ ಅಕಾದೆಮಿ ಅಧ್ಯಕ್ಷರೂ ಶಾಸನ ಮತ್ತು ಲಿಪಿಶಾಸ್ತ್ರದ ಉದ್ದಾಮ ಪಂಡಿತರೂ ಆದ ಡಾ.ದೇವರಕೊಂಡಾ ರೆಡ್ಡಿಯವರನ್ನೂ ಅವರ ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರನ್ನೂ ನತಮಸ್ತಕನಾಗಿ ಕೈಮುಗಿಯುತ್ತೇನೆ. ಅದರಂತೆಯೇ ಕಳೆದ ಮೂವತ್ತೈದು ವರ್ಷಗಳಿಂದ ಮಂಡ್ಯದ ಎಲ್ಲ ಸಾಹಿತ್ಯ – ಸಂಸ್ಕೃತಿ ಚಟುವಟಿಕೆಗಳ ನೇತಾರರೂ ರೂವಾರಿಯೂ ಚೈತನ್ಯ ಚಿಲುಮೆಯೂ ಆಗಿರುವ ಜಯಪ್ರಕಾಶ ಗೌಡ ಮತ್ತು ಅವರ ಸಹೋದ್ಯೋಗಿಗಳ ಸ್ನೇಹ ಸೌರಭವನ್ನೂ ನೆನೆಯುತ್ತೇನೆ. ಜತೆಗೆ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರಾದ ಡಾ. ಆರ್. ಗೋಪಾಲರನ್ನು ನೆನೆಯುತ್ತೇನೆ.

ಈ ಸಮ್ಮೇಳನವನ್ನು ಸಂಯೋಜಿಸಿರುವ ಇತಿಹಾಸ ಅಕಾದೆಮಿಯ ಧ್ಯೇಯೋದ್ದೇಶ ಆಶಯಗಳಲ್ಲಿ ಶಾಸನಾದಿ ಶಾಸ್ತ್ರಗಳು, ಹಸ್ತಪ್ರತಿಗಳು ಮತ್ತು ಸಾಂಸ್ಕೃತಿಕ ವಿಚಾರಗಳ ಮಹತ್ವವನ್ನು ಪ್ರಚುರಪಡಿಸುವ ಕಾರ್ಯವೂ ಅಡಗಿವೆ. ಅದರಿಂದ ಈ ವಿಷಯಗಳನ್ನು ಗರ್ಭೀಕರಿಸಿದ ಕೆಲವು ಸಂಗತಿಗಳನ್ನು ಬಿಚ್ಚಳಿಸುತ್ತೇನೆ. [ನನ್ನ ಮುತ್ತಜ್ಜ ಪಜ್ಜರ್ಕಳು ಹಸ್ತಪ್ರತಿ ಮಾಡಿದ್ದು ಬೆಂಗಳೂರು ವಿಶ್ವವಿದ್ಯಾಲಯದಲ್ಲಿದೆ ಎಂಬುದನ್ನು ನಿಮ್ಮ ಗಮನಕ್ಕೆ ತರಲು ಹರ್ಷವಾಗುತ್ತದೆ].

ಬೆಟ್ಟ–ಬಂಡೆ–ಗೋಡೆಗಳನ್ನು ಕಂಡರೆ, ಶ್ರೀಸಾಮಾನ್ಯರ ಮಾತು ಹಾಗಿರಲಿ, ರಾಜಮಹಾರಾಜರಿಗೂ ತಮ್ಮ ಹೆಸರನ್ನಾದರೂ ಸರಿಯೆ ದಾಖಲಿಸುವ ಆಶೆ ಅಂಕುರಿಸುತ್ತದೆ. ಭರತವರ್ಷದ ಮೊತ್ತಮೊದಲ ಚಕ್ರವರ್ತಿ ಭರತಚಕ್ರವರ್ತಿಗೆ ವೃಷಭಗಿರಿಯನ್ನು ನೋಡಿದಾಗ ತನ್ನ ಪ್ರಶಸ್ತಿ ಬರೆಸುವ ಭಾವನೆ ಚಿಗುರಿತು: ಆ ವೃಷಭಾಚಲಾಧಿಮೇಖ ಲಾಭಿತ್ತಿಯೊಳಾತ್ಮೀಯ ವಿಶ್ವವಿಶ್ವಂಭರಾವಿಜಯ ಪ್ರಶ್ತಿಯನ ಬ್ತಿಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ–

ಅದಟೊಳನೇಕ ಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ

ದದ ಛಲದಾಯದಾಯತಿಯ ಚಾಗದ ಬೀರದ ಮಾತುಗಳ್

ಮೊದ

ಟ್ಟೊದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರ
ಚಕ್ರವರ್ತಿಯಾ.

ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಲರ ಪ್ರಶಸ್ತಿಗಳೊಳೊಂದಂ ದಂಡರತ್ನದಿಂ ತೊಡೆದು ಕಳೆದು ಜಿನ ಪ್ರಶಸ್ತಿಗೆಡೆಮಾಡಿ–

ಸ್ವಸ್ತಿ ಸಮಸ್ತ ನೃಪೇಶ್ವರ
ಮಸ್ತಕ ವಿನ್ಯಸ್ತಶಾಸನಂ ಸಕಲಜಗ
ದ್ವಿಸ್ತಾರಿತಯಶನನ್ವಯ ವಿ
ಸ್ತಾರಕನಾದಿದೇವನಗ್ರ ತನೂಜಂ. ೭೨.
ಭುವನವಿಶೇಷಕನಿಕ್ಷ್ವಾ
ಕುವಂಶ ಗಗನೇಂದು ಚಕ್ರರತ್ನಾಧೀಶಂ
ನವನಧಿವಲ್ಲಭನಾನತ
ದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ. ೭೩
ಅವನ ದಿಗ್ವಿಜಯದೊಳೈ
ರಾವತಗಜನಿಭಗಜಂಗಳಿಂ ಭುವನತಲಂ
ತೀವಿದುದಾವನ ಸೈನ್ಯದೋ
ಳಾವರಸಿದ ಧೂಳಿ ಪೊಟ್ದುದಂಭೋನಿಧಿಯಂ. ೭೪
ಆತಂ ಭರತೇಶ್ವರನಿಂ
ತೀತೆಱದಿ ನೆಗಟ್ದ ತನ್ನ ಕೀರ್ತಿಯನೀ ವಿ
ಖ್ಯಾತ ವೃಷಭಾದ್ರಿಯೊಳ್ ಸುರ
ಗೀತಯಶಂ ನಿಱಿಸಿದಂ ನೆಲಂ ನಿಲ್ವಿನೆಗಂ. ೭೭

ಎಂದು ಆತ್ಮೀಯವಿಜಯಪ್ರಶಸ್ತಿಯಾನಾ ವೃಷಭಾಗಿರಿಯೊಳಾ ವೃಷಭೇಶ್ವರನಂದನಂ ಕಾಕಿಣೀರತ್ನದಿಂ ಬರೆಯಿಸಿ(ದಂ).

[–ಪಂಪ, ೯೪೧, ಆದಿಪುರಾಣ, ೧೩ನೆಯ ಆಶ್ವಾಸ].

ಪಂಪ ಸಂಸ್ಕೃತ ಪ್ರಾಕೃತ ಕನ್ನಡ ಭಾಷಾಕೋವಿದನಾದ ಮಹಾಕವಿ, ಜತೆಗೆ ಆತ ಶಾಸನಶಾಸ್ತ್ರ ನಿಪುಣ. ಮನುಷ್ಯ ಸ್ವಭಾವದ ಸೂಕ್ಷ್ಮಗಳನ್ನು ಅರಿತವನು. ಧರ್ಮ, ತತ್ವಶಾಸ್ತ್ರ, ಛಂದಸ್ಸು, ಕಾವ್ಯ ಅಲಂಕಾರ ಮೊದಲಾದ ಜ್ಞಾನ ಶಾಖೆಗಳಲ್ಲಿ ಪರಿಣತನಾದ ಪಂಪಕವಿಯು ಇತಿಹಾಸ ಮತ್ತು ಶಾಸನ ವಿಜ್ಞಾನದಲ್ಲಿಯೂ ವಿಶಾರದನು. ರಾಷ್ಟ್ರಕೂಟ ಸಾಮ್ರಾಜ್ಯ–ಸಾಮ್ರಾಟರ ಚರಿತ್ರೆಯೊಂದಿಗೆ ವೆಂಗಿಮಂಡಲ ಚಾಲುಕ್ಯರ ರಾಜಾವಳಿಯ ಇತಿಹಾಸ ಆತನಿಗೆ ಮೇಲಣ ನೆಲ್ಲಿಕಾಯಿ. ತನ್ನ ಆಶ್ರಯದಾತ ಇಮ್ಮಡಿ ಅರಿಕೇಸರಿಯ ವಂಶಾವಳಿಯನ್ನು ಪಂಪ ದಾಖಲಿಸಿರುವುದು ಸಮಂಜಸವಾಗಿರುವುದನ್ನು ಪರಭಣಿ ಮತ್ತು ಕುರ್ಕ್ಯಾಲದ ಶಾಸನಗಳು ಸಮರ್ಥಿಸಿವೆ. ಆದಿಪುರಾಣದಿಂದ ಮೇಲೆ ಉದಾಹರಿಸಿರುವುದು ಪಂಪ ಬರೆದ ಶಾಸನವೆಂಬುದು ವಿಶೇಷ ಗಮನಕೊಡಬೇಕಾದ ವಿಷಯ. ಕನ್ನಡ ಆದಿಕವಿ ಹಾಗೂ ಅಗ್ರಕವಿಯಾದ ಪಂಪನು ಇತಿಹಾಸಕಾರನೂ ಶಾಸನಕಾರನೂ ಆಗಿರುವುದು ಚರಿತ್ರೆ ಮತ್ತು ಶಾಸನಕ್ಷೇತ್ರದಲ್ಲಿ ತೊಡಗಿರುವ ನಮಗೆಲ್ಲ ಅಭಿಮಾನ ಉಕ್ಕಿಸುವ ಹಾಗೂ ಹೆಮ್ಮೆ ತರುವ ಸಂಗತಿ. ನಮ್ಮ ಪಕ್ಷದಲ್ಲಿ ಪಂಪನೇ ನಾಯಕನಾಗಿ ನಿಂತಿರುವಾಗ ಸಂಶೋಧನ ಕ್ಷೇತ್ರದಲ್ಲಿ ನಾವು ಕ್ರಿಯಾಶೀಲರಾಗಲು ಸ್ಫೂರ್ತಿ ಬರುತ್ತದೆ. ಭರತ ಚಕ್ರವರ್ತಿಯೂ ಶಾಸನದ ಪ್ರೀತಿಯಿದ್ದವನು, ತನ್ನ ದಿಗ್ವಿಜಯದ ಪ್ರಶಸ್ತಿ ಶಾಸನ ಬರೆಯಿಸಿದವನು. ಹೀಗೆ ಸಾಮಾನ್ಯರೂ ಅಸಾಮಾನ್ಯರೂ ಚರಿತ್ರೆಯುದ್ದಕ್ಕೂ ಶಾಸನಗಳನ್ನು ಬರೆಸಿದ್ದು, ಓದಿದ್ದು ಮತ್ತು ಪೊರೆದದ್ದು ಕಂಡುಬರುತ್ತದೆ.

ಜ್ಞಾನಪಿಪಾಸುಗಳ ಮೀಹಕ್ಕೆ ಶಾಸನಕ್ಷೇತ್ರ ಅನ್ವೇಷಕರ ಆಡುಂಬೊಲ. ಅದು ತಕ್ಕ ಅರಿವಿನ ಸರೋವರ. ಮಿಂದವರು ಧನ್ಯರಾಗುವರು, ಹೊಕ್ಕವರು ಪ್ರಬುದ್ಧರಾಗುವರು. ವಿದ್ಯುತ್ತಿನ ಅಭಾವವನ್ನು ಹೇಗೂ ನಿವಾರಿಸಬಹುದು. ಆದರೆ ವಿದ್ವತ್ತಿನ ಒರತೆಗಳು ಬತ್ತಬಾರದು. ವಿದ್ವತ್ತಿಗೆ ಬರಗಾಲ ಬಂದರೆ ಮತ್ತೆ ಅದು ಹಸಿರಾಗಲು ಬಹಳ ಶ್ರಮ ಪಡಬೇಕಾಗುತ್ತದೆ. ಕರ್ನಾಟಕ ಇತಿಹಾಸ ಅಕಾದೆಮಿಯು ನಾಡಿನಲ್ಲಿ ಬಲ್ಲಿದರ ಪಡೆಯನ್ನು ಸಜ್ಜುಗೊಳಿಸುವ ಕಾರ್ಯದಲ್ಲಿ ಕ್ರಿಯಾಶೀಲ ವಾಗಿರುವುದು ಪ್ರಶಂಸನೀಯ.

ಶಾಸನಗಳು ಚಿರಂಜೀವಿಗಳು. ಶಾಸನಸಾಗರದ ಆಳ ಹರಹು ನೆಲಬಾನುಗಳನ್ನು ಆತುಕೊಂಡಿದೆ. ಒಂದೆರಡು ಶಬ್ದ ಸಾಲುಗಳಷ್ಟೇ ಇರುವ ಹಾಗೂ ಬಹುತ್ರುಟಿತವಾಗಿರುವ ಸಾವಿರಾರು ಶಾಸನಗಳನ್ನು ಪಕ್ಕಕ್ಕಿಟ್ಟು ಉಳಿದ ಶಾಸನಗಳನ್ನು ಎಣಿಸಿದರೂ ಸುಮಾರು ಇಪ್ಪತ್ತು ಸಾವಿರ ಶಾಸನಗಳು ಕನ್ನಡ ನಾಡಿನ ನಾಡಿಯಾಗಿವೆ. ಅವನ್ನು ಸಡ್ಡೆಯಿಂದ ಅಡಿಮುಡಿಯಾಗಿ ಹೊಸಕಾಲದ ತಿಳಿವಳಿಕೆಯ ಬೆಳಕಿಗೆ ಹಿಡಿದು ವಕ್ಕಾಣಿಸುವ ಕೆಲಸಕ್ಕೆ ಯುವ ಪೀಳಿಗೆಯವರು ಕೆಸರ್ಗಲ್ಲು ಇಟ್ಟಿರುವುದು ಲೇಸುಲೇಸು. ಕರ್ನಾಟಕದ ಎಲ್ಲ ಶಾಸನಗಳೂ ದೊರೆತುಬಿಟ್ಟಿವೆಯೆಂದಾಗಲಿ ಲಭ್ಯವಾಗಿರುವ ಎಲ್ಲ ಕಲ್ಬರೆಹ ತಾಮ್ರಬರೆಹಗಳನ್ನು ಓದಿದ್ದು ಮುಗಿಯಿತೆಂದಾಗಲಿ, ಇದುವರೆಗೆ ಅಚ್ಚಾಗಿರುವ ಶಾಸನ ಪಾಠಗಳೆಲ್ಲ ಸರ್ವಸಮರ್ಪಕವಾಗಿವೆಯೆಂದಾಗಲಿ, ತಿಳಿಯುವಂತಿಲ್ಲ ಶಾಸನಗಳು ಅಕ್ಷಯಭಂಡಾರ, ನೆಲದ ಮರೆಯ ನಿಧಾನ. ತಮ್ಮ ವಿದ್ವತ್ತಿನ ಕಾಕಿಣೀ ರತ್ನದಿಂದ ಶಾಸನಗಳ ರತ್ನಗುಹೆಯ ಕವಾಟೋದ್ಘಾಟನೆ ಮಾಡುವವರ ಪಾಲಿಗೆ ಕೈವೊಕ್ಕ ನಿಧಿ. ಹುಡುಕುತ್ತ ಬಯಸಿಬಂದ ಬಲ್ಲಿದರ ಜ್ಞಾನಾಂಜನ ಹಚ್ಚಿದ ಕಣ್ಣುಗಳಿಗೆ ಶಾಸನಗಳ ನಿಕ್ಷಿಪ್ತ ನಿಧಿ ಕಾಣುತ್ತದೆ. ಅರಸಿದಷ್ಟೂ ವಿಚಾರಗಳಿವೆ. ಶಾಸನಗಳು ಅರ್ಣವಂಬೊಲು ಅತಿ ಗಂಭೀರ, ನಿಚ್ಚಂ ಪೊಸತು – ಹೊಚ್ಚ ಹೊಸ ಶೋಧನಕಾರರಿಗೆ.

ಶಾಸನರಂಗ ಎಲ್ಲರಿಗು ಅಲ್ಲ ಎಂಬುದು ತುಸು ದಿಟ. ವಿದ್ವದ್ ಲೋಕವೆಂಬುದು ಅರಿವಿನ ಅರವಂಟಿಗೆ. ಇಲ್ಲಿ ಮಾಯಾಮಂತ್ರ ಜಾದುಗಳಿಲ್ಲ. ಸೋಮಾರಿತನಕ್ಕೆ ಎಡೆಯಿಲ್ಲ. ಬುರುಡೆ ಅಥವಾ ರೈಲುಬಿಡಲು ಆಗುವುದಿಲ್ಲ. ನಿರಂತರ ಪರಿಶ್ರಮ, ವ್ಯಾಪಕ ಪರಿಜ್ಞಾನ, ಪ್ರಾಮಾಣಿಕತೆ ಇವು ಇದ್ದವರು ಇಲ್ಲಿ ಸಲ್ಲುತ್ತಾರೆ. ಸೋಪಜ್ಞ ನಿಶಿತಮತಿ, ಬಹುಶ್ರುತತ್ವ ಮತ್ತು ಭಾಷಾಜ್ಞಾನ ಇದ್ದವರು ನಿಷ್ಣಾತರೆನಿಸಿ ಗೌರವ ಪಾತ್ರ ರಾಗುವರು. ಹೇಗಾದರೂ ಸರಿಯೆ ಬೇಗ ಪ್ರಸಿದ್ಧರಾಗ ಬೇಕೆನ್ನುವವರು ಈ ಕ್ಷೇತ್ರಕ್ಕೆ ಕಾಲಿಡುವುದು ಹಾಗಿರಲಿ, ಇತ್ತ ಮುಖ ಮಾಡುವುದಿಲ್ಲ. ಪ್ರಚಾರ ಗಿಟ್ಟವುದು ಕಷ್ಟ. ಪ್ರಸಿದ್ಧಿ ಬರಲಿ ಬರದಿರಲಿ ಧನ್ಯತೆ ಇರಲಿ. ಒಳ್ಳೆಯ ಕೆಲಸ ಮಾಡು ತ್ತಿದ್ದೇವೆಂಬ ನೆಮ್ಮದಿಗಿಂತ ಮಿಗಿಲಾದುದುಂಟೆ! ಹಾಗೆಂದು ಇತಿಹಾಸ ಶಾಸನಾದಿ ಶಾಸ್ತ್ರಕಾರ ಪ್ರಾಜ್ಞವರೇಣ್ಯರನ್ನು ಮಾಧ್ಯಮಗಳೂ ರಾಜ್ಯ-ಕೇಂದ್ರ ಸರಕಾರಗಳೂ ಕಡೆಗಣಿಸಿ ಮೂಲೆಗೊತ್ತಬಾರದು. ಪ್ರಾದೇಶಿಕ ಹಾಗೂ ರಾಷ್ಟ್ರೀಯ ಮನ್ನಣೆ ಪ್ರಶಸ್ತಿ ಪುರಸ್ಕಾರಗಳು ಅವರಿಗೂ ಸಲ್ಲಬೇಕು. ಹಾಗೆಯೇ ಶಾಲಾ ಕಾಲೇಜು ಪಠ್ಯಪುಸ್ತಕಗಳಲ್ಲಿ ಪರಿಚಯ – ಪಾಠ ಕಡ್ಡಾಯವಾಗಿ ಇರಬೇಕು.

ಹಾಲಿ ಉಪಲಬ್ಧವಿರುವ ಸಹಸ್ರಾರು ಸಂಖ್ಯೆಯ ಶಾಸನ ಸಂಪದವನ್ನು ನಾನಾ ನಿಟ್ಟಿನಿಂದ, ಬಹು ಪಾತಳಿ ಗಳಿಂದ ಸುಲಿದು ಬಿಡಿಸಿ ನೋಡಲು ಈಗಲೂ ಬಾಗಿಲು ತೆರೆದಿದೆ. ಕನ್ನಡದ ಸಂದರ್ಭದಲ್ಲಿ ಈ ದಿಕ್ಕಿನ ಕಡೆ ಹಿಂದಣ ಸೂರಿಗಳೂ ಇಂದಿನ ಜಾಣರೂ ಹುಡುಕಾಟ ಮಾಡಿದ್ದಾರೆ. ನಾನು ಕೂಡ ಕೆಲವು ಹೆಜ್ಜೆ ಹಾಕಿದ್ದೇನೆ.

ಸಾಹಿತ್ಯಕಾರರಿಗೂ ಶಾಸನಕಾರರಿಗೂ ಇತಿಹಾಸಕಾರ ರಿಗೂ ಹಸ್ತಪ್ರತಿಕಾರರಿಗೂ ಒಡನಾಟ, ಗೆಳೆತನ ಇದ್ದುವು. ಪರಸ್ಪರ ಅವಲಂಬನದಿಂದ ತಿಳಿವಳಿಕೆಯನ್ನು ಮಸೆಯು ತ್ತಿದ್ದರು. ಪೂರಕ ಕ್ಷೇತ್ರಗಳಿಂದ ಬೇಕಾದ ಮಾಹಿತಿಯನ್ನು ಸಂಚಯಿಸುತ್ತಿದ್ದರು. ಹಾಗೆಯೇ ಅನ್ಯಾನ್ಯ ವಲಯಗಳಿಗೆ ಆಕರಗಳನ್ನು ಪೂರೈಸುತ್ತಿದ್ದರು. ಶಾಸನಕಾರರು ಸಾಹಿತ್ಯ ಕೃತಿಗಳನ್ನಲ್ಲದೆ ಬೇರೆ ಶಾಸನಗಳನ್ನೂ ಅಧ್ಯಯನ ಮಾಡಿ ಸೂಕ್ತವಾದುವನ್ನು ತಮ್ಮ ರಚನೆಯಲ್ಲಿ ಅಳವಡಿಸಿಕೊಳ್ಳು ತ್ತಿದ್ದರು. ಭಾಷಾಪ್ರಯೋಗ, ವಿಷಯ ನಿರೂಪಣೆ ಮತ್ತು ಬಳಸಿದ ಛಂದಸ್ಸಿನಲ್ಲಿ ದಟ್ಟವಾದ ಪ್ರಭಾವ ಎದ್ದುಕಾಣುತ್ತಿತ್ತು. 'ಕೊಪ್ಪಳದ ಶಾಸನಗಳು' ಹೊತ್ತಗೆಯಲ್ಲಿ ಈ ಬಗೆಯ ಅಪರೂಪದ ಸಾದೃಶ್ಯಶ್ರೀಯು ಪ್ರಕಟವಾಗಿರುವ ನಿದರ್ಶನ ಗಳನ್ನು ತೋರಿಸಿದ್ದೇನೆ. ಇನ್ನೂ ಇಂತಹ ಹಲವಾರು ನಿದರ್ಶನಗಳು ಸಿಗುತ್ತವೆ. ಮಾದರಿಗಾಗಿ ಕೆಳಗಿನ ಎರಡು ವೃತ್ತ ಪದ್ಯಗಳನ್ನು ನೋಡಬಹುದು:

ಮಗಧಾಧೀಶನ ನೆತ್ತಿಯೊಳ್ ಮುಱಿದ ಕೂರ್ವಾಳ್ ಚೋಳ
ನೀರಳ್ಳೆ ಬಿ
ಟ್ಟಿಗೆ ಗೋದನ್ತಿರಲುರ್ಬಿನಿಂದ ಸಬಳಂ ನೇಪಾಳನಾ
ಬಾಯೊಳಾ
ಯಗವಡ್ಡಂನಿಲೆ ನಟ್ಟಿ ಕಟ್ಟಿದಲಗಾದಂ ತನ್ನ ದೋರ್ಗರ್ವ್ವಮಂ
ತ್ರಿಗುಣಂ ಮಾಡೆ.

–ಎಕ. XI. ದಾವಣಗೆರೆ ೩೫.ಕ್ರಿ.ಶ. ೧೧೬೦

ಚೋಳನ ನೆತ್ತಿಯೊಳ್ಮುಱಿದ ಕೂರಸಿಯಾಯಗವಾಂಕೆಯಾಗೆ
ಪಾಂ
ಚಾಳನ ಬಾಯನೆಯ್ದೆ ನೆಱೆನಟ್ಟಲಗು[ರ್ಬ್ಬಿ]ಗಗುರ್ಬ್ಬುವೆತ್ತ
ನೇ
ಪಾಳನ ಬೆಂನೊಳೆಯ್ದೆ ಬಳೆದಿರ್ದ್ದ ಮಹಾಸಬಳಂ ದಿಟಕ್ಕೆ ಬ
ಲ್ಲಾಳನು ಬೀರಮಂ ತ್ರಿಗುಣಿಸುತ್ತವೆ ಭೂತಳಾಗ್ರದೊಳು
[ಛಂದಸ್ಸು?]

–ಕಇ. ಸಂಪುಟ IV. ಸಂಖ್ಯೆ ೧. ಕ್ರಿ.ಶ. ೧೨೦೪

ದಾವಣಗೆರೆ ಶಾಸನದ ತಿರುಳನ್ನು ತುಂಬಿಕೊಂಡು ವೈಪಡೆದಿರುವ ಎರಡನೆಯ ಶಾಸನಕಾರನು ಮತ್ತೇಭವಿಕ್ರೀಡಿತ ಛಂದಸ್ಸನ್ನು ಉತ್ಪಲಮಾಲೆಗೆ ತಿರುಗಿಸಿರುವುದು ಗಮನಾರ್ಹ. ಎರಡೂ ವೃತ್ತಗಳ ವಸ್ತುರಾಜನು ಕತ್ತಿ ಮತ್ತು ಈಟಿ (ಬರ್ಬಿ) ಪ್ರಯೋಗ ನೈಪುಣ್ಯದಿಂದ ತೋರಿದ ಪರಾಕ್ರಮವನ್ನು ಬಿಂಬಿಸುವುದು. ಶಾಸನಕಾರರ ಸೃಜನ ಸಾಮರ್ಥ್ಯ ಪ್ರಭಾವಶಾಲಿಯಾಗಿ ಪ್ರಕಟವಾಗಿದೆ. ಶಾಸನಕಾರರು ಪ್ರಗಲ್ಭ ಪಂಡಿತರು. ಅವರದು ಪ್ರತಿಭಾ ದಾರಿದ್ರ್ಯ ಇರದ ಬಹುಮುಖಿ ವಿದ್ವತ್ತು ಅನೇಕಾನೇಕ ಶಾಸನಗಳಲ್ಲಿ ಅವರ ಭಾಷಾ ಪ್ರಭುತ್ವ, ಇತಿಹಾಸ ಪ್ರಜ್ಞೆ, ಛಂದಸ್ಸಿನ ಅರಿವು, ಕಾವ್ಯಶಕ್ತಿ, ಸಾಹಿತ್ಯದ ಅಧ್ಯಯನ, ಸಾಮಾಜಿಕ– ಸಾಂಸ್ಕೃತಿಕ ಎಚ್ಚರ ಪ್ರತಿಫಲಿತ ವಾಗಿವೆ. ಇದರಿಂದ ಪ್ರತೀತವಾಗುವಂತೆ ಶ್ರೇಷ್ಠ ಕಾವ್ಯ ಬರೆಯುವ ಕವಿಯು ಹೊಂದಿರುತ್ತಿದ್ದ ಅರ್ಹತೆ ಉತ್ಕೃಷ್ಟ ಶಾಸನಕಾರರಲ್ಲೂ ಇತ್ತು. ಇದನ್ನು ಇತಿಹಾಸಕಾರರು, ಸಂಶೋಧಕರು ಸಮಾಜಕ್ಕೆ ಮನಗಾಣಿಸಬೇಕು. ಇತಿಹಾಸದ ಹಾಸು ದೊಡ್ಡದೆಂಬುದನ್ನೂ ಎಷ್ಟು ವ್ಯಾಪಕವೆಂಬುದನ್ನೂ ಜನಕ್ಕೆ ಪರಿಚಯಿಸುವುದರೊಂದಿಗೆ ತನ್ನ ಮಹಾಮಣಿಹದಲ್ಲಿ ಜನತೆಯ ಪಾತ್ರವನ್ನು ತಿಳಿಸುವ ಶ್ಲಾಘ್ಯ ಕಾರ್ಯದಲ್ಲಿ ಕಟಿಬದ್ಧವಾಗಿರುವ ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಬೆಂಬಲಿಸುವುದೆಂದರೆ ನಮ್ಮ ಪರಂರೆಯ ನಿಧಿಯ ಸಂರಕ್ಷಣೆಗೆ ಮೊಲೆಯೂಡಿದಂತೆ.

ಬಿ.ಎಲ್. ರೈಸರು ಶಾಸನತಜ್ಞರೆಂದು ಹೆಚ್ಚು ಹೆಸರು ಗಳಿಸಿದ್ದರೂ ಅವರು ಬಹುಶ್ರುತರಿದ್ದರೆಂಬುದನ್ನು ಮರೆಯಲಾಗದು. ಇತಿಹಾಸ, ಗ್ರಂಥ ಸಂಪಾದನಶಾಸ್ತ್ರ ಮತ್ತು

ಶಿಕ್ಷಣ ಕ್ಷೇತ್ರಗಳಲ್ಲಿಯೂ ಪರಿಣತರಿದ್ದರು. ಇವಕ್ಕೂ ಮಿಗಿಲಾದದ್ದು ಅವರಿಗಿದ್ದ ಕನ್ನಡ ಭಾಷಾಜ್ಞಾನ, ಕನ್ನಡ ಮತ್ತು ಕರ್ನಾಟಕದ ಅಕ್ಕರೆ. ಆದಿಕವಿ ಪಂಪನನ್ನು ಕನ್ನಡಿಗರಿಗೂ ಕನ್ನಡೇತರರಿಗೂ ಮುಟ್ಟಿಸಿದ ಮೊತ್ತ ಮೊದಲಿಗರವರು. ಇಂದಿನ ಹಾಗೂ ಇನ್ನು ಮುಂದಿನ ಶಾಸನ – ಇತಿಹಾಸ ವಿಶಾರದರು ರೈಸರ ಹೃದಯ ವೈಶಾಲ್ಯ ಮತ್ತು ವಿದ್ವತ್ ಪ್ರಸರಣ ಮಾದರಿಗೆ ಮುಡಿಪಾಗಬೇಕು. ನಾನಾ ಪೂರಕ ಜ್ಞಾನಶಿಸ್ತುಗಳಲ್ಲಿ ಪ್ರವೇಶ ಹೊಂದಿದ್ದರೆ ಅಧ್ಯಯನದ ಅನುಸಂಧಾನಕ್ಕೆ ಆಯಾಮ ಬರುತ್ತದೆ.

ಪಂಪನನ್ನು ಕುರಿತು The Poet Pampa ಎಂಬ ಕವಿ–ಕಾವ್ಯ ಪರಿಚಯಾತ್ಮಕ ಲೇಖನವನ್ನು ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ೧೮೮೨ನೆಯ ಇಸವಿಯಲ್ಲಿ ಪ್ರಕಟಿಸಿದರು. ಇದೇ ಆಧುನಿಕ ಯುಗದಲ್ಲಿ ಪಂಪನನ್ನು ಎತ್ತಿ ನಿಲ್ಲಿಸಿದ ಪ್ರಥಮ ಲೇಖನ. ಆಮೇಲೆ ೧೮೯೮ರಲ್ಲಿ ಪಂಪಭಾರತವನ್ನು ಇಂಗ್ಲಿಷ್ ಉಪೋದ್ಘಾತ ಸಹಿತ ಹೊರತಂದರು. ಅದರ ಗ್ರಂಥ ಸಂಪಾದನ ಕಾರ್ಯದಲ್ಲಿ ಬ್ರಹ್ಮಸೂರಿ ಶಾಸ್ತ್ರಿಗಳ ಪಾತ್ರವೂ ಇದೆ. ಪುಣೆಯ ಡೆಕ್ಕನ್ ಕಾಲೇಜಿನ ಪರವಾಗಿ ರೈಸರು ಬ್ರಹ್ಮಸೂರಿ ಶಾಸ್ತ್ರಿಯವರಿಂದ ವಿಕ್ರಮಾರ್ಜುನ ವಿಜಯದ ಓಲೆಯ ಪ್ರತಿಯನ್ನು ೧೮೭೮ರಲ್ಲಿ ಕೊಂಡರು. ಅದರ ಇನ್ನೊಂದು ಪ್ರತಿ ಮಾಡಿಸಿ ಡೆಕನ್ ಕಾಲೇಜಿಗೆ ಒಪ್ಪಿಸಿದರು. ಆ ತಾಳೆಗರಿ ಪ್ರತಿಯಲ್ಲಿ ಮೊದಲನೆಯ ಆಶ್ವಾಸ ಇರಲಿಲ್ಲ. ಈ ಹಸ್ತಪ್ರತಿಯಲ್ಲದೆ ವಿದ್ವಾಂಸ ಬಿ. ಮಲ್ಲಪ್ಪನವರ ಹತ್ತಿರವೂ ಮತ್ತೊಂದು ಪ್ರತಿಯೂ ಮೈಸೂರು ಅರಮನೆಯ ಸರಸ್ವತೀ ಭಂಡಾರದಲ್ಲಿ ಸಂರಕ್ಷಿಸಲಾದ ಸಮಗ್ರ ಹಸ್ತಪ್ರತಿಯೂ ಇದ್ದುವು.

ವಿದೇಶಿ ವಿದ್ವಾಂಸರು ಕೂಡ ಸ್ವದೇಶಿ ಪಂಡಿತರ ಜ್ಞಾನವನ್ನು ಅವಗಣಿಸಲಿಲ್ಲ. ಹೊರಗಿನವರೂ ಒಳಗಿನವರೂ ಕೂಡಿ ಬಿತ್ತನೆ ಮಾಡಿದ್ದರ ಅರಿವಿನ ಬೆಳೆಯನ್ನು ನಾವು ಉಣ್ಣುತ್ತಿದ್ದೇವೆ. ಈ ರೀತಿಯಲ್ಲಿ ಬಿ.ಎಲ್. ರೈಸರ ಕೃಷಿಯಲ್ಲಿ ಕೈ ಜೋಡಿಸಿದ್ದ ಇಬ್ಬರು ಉದ್ದಾಮ ವಿದ್ವಾಂಸರನ್ನು ಪರಿಚಯಿಸುವುದು ಸೂಕ್ತವೆಂದಣಿಸಿದ್ದೇನೆ. ಏಕೆಂದರೆ ಇವರನ್ನು ಕುರಿತ ಮಾಹಿತಿ ವಿದ್ವತ್ ವಲಯದಲ್ಲಿ ಎಲ್ಲಿಯೂ ದಾಖಲಾಗಿಲ್ಲವಾದ ಕಾರಣ ಔಚಿತ್ಯವರಿತು ಉಪಯುಕ್ತ ವಿವರಗಳನ್ನು ಮಂಡಿಸುತ್ತೇನೆ.

ನೂರಿಪ್ಪತ್ತೈದು ವರ್ಷಗಳ ಹಿಂದಣ ಕಾಲ ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಕಾಲ. ಆ ವಸಾಹತುಶಾಹಿಯ ಅವಧಿಯಲ್ಲಿ ಅರ್ಧರಥ ಅತಿರಥ ಮಹಾರಥರೆನಿಸಿದ ಹಲವಾರು ಬಹುಶ್ರುತರು ಆಸೇತು ಹಿಮಾಚಲ ಆಗಿಹೋದರು. ಕನ್ನಡ ನಾಡಿನ ಇತಿಹಾಸದ ಸಂದರ್ಭದಲ್ಲಿ ಆಗಿಹೋದ, ಇತಿಹಾಸಕಾರರು ಮರೆಯಬಾರದ ಹಾಗೂ ಮರೆಯಲಾಗದ ಇಬ್ಬರು ಬಹುಶ್ರುತ ವಿದ್ವಾಂಸ ವರೇಣ್ಯರನ್ನು ಪರಿಚಯಿಸುವುದಕ್ಕೆ ಈ ಅಧ್ಯಕ್ಷ ಭಾಷಣದ ಬಹುಬೇಗ ಮೀಸಲಿರಿಸಿದ್ದೇನೆ. ಇವರಲ್ಲಿ ಒಬ್ಬರಾದ ಪದ್ಮರಾಜ ಪಂಡಿತರು ಭಾರತಕ್ಕೆ, ಅದರಲ್ಲಿಯೂ ಮುಖ್ಯವಾಗಿ ಹಳೆಯ ಮೈಸೂರು ವಲಯಯಕ್ಕೆ ಸೀಮಿತರಾದವರು. ಇನ್ನೊಬ್ಬರು ಬ್ರಹ್ಮಸೂರಿ ಶಾಸ್ತ್ರಿಯವರು ಕಡಲಾಚೆಗೂ ಕೀರ್ತಿಲತೆ ದಾಂಗುಡಿಯಿಟ್ಟ ವಿದ್ಯಾಪಾರಗರು. ಇವರಿಬ್ಬರ ವಿಚಾರವಾಗಿ ನಾವು–ನೀವು ಓದಿದ–ಓದುತ್ತಿರುವ ಇತಿಹಾಸ, ಹಸ್ತಪ್ರತಿ ಶಾಸ್ತ್ರ, ಶಾಸನ ಚರಿತ್ರೆ ಮತ್ತು ಸಂಶೋಧನೆಗೆ ಸೇರಿದ ಲೇಖನ ಹಾಗೂ ಪುಸ್ತಕದಲ್ಲಿ ಯಾವ ಮಾಹಿತಿಯೂ ಅಳವಟ್ಟಿಲ್ಲ.

ತುಳುನಾಡಿನ ಮೂಡಬಿದರೆಯ ಜೈನಮಠದ ಹಸ್ತಪ್ರತಿ ಭಂಡಾರದಲ್ಲಿ ಸಂರಕ್ಷಿಸಲಾಗಿರುವ ಮೂಲಪ್ರಾಕೃತ ಭಾಷೆಯಲ್ಲಿರುವ ಷಟ್–ಖಂಡ–ಆಗಮಕ್ಕೆ ಪಾಕೃತ ಸಂಸ್ಕೃತದಲ್ಲಿ ಬರೆದ ವ್ಯಾಖ್ಯಾನ ಗ್ರಂಥಗಳೇ ಧವಲಾ, ಜಯಧವಲಾ ಮತ್ತು ಮಹಾಧವಲಾದ ಪುರಾತನ ಹಸ್ತಪ್ರತಿಗಳು. ಅವನ್ನು ಓಲೆ (ತಾಳೆ) ಗರಿಯ ಮೇಲೆ ಬರೆಯಲಾಗಿದ್ದರೂ (ಭೂತಾಲ ಪತ್ರೋಪರಿ) ಕಠದ ಸಹಾಯದಿಂದ ಬರೆದಿಲ್ಲವೆಂಬುದು ಅದರ ಹೆಚ್ಚಳ. ಕಂಠವನ್ನು ಬಳಸುವ ಬದಲು ಮಷಿಯಿಂದ ಬರೆಯಲಾಗಿದೆ (ಮಷೀ ಲಿಖಿತೇ). ಕಾಡಿನ ಗಿಡಗಳ ಎಲೆಗಳಿಂದ (ವನಸ್ಪತಿ) ರಸವನ್ನು ತೆಗೆದು, ಬಿದಿರಿನ ಕಡ್ಡಿಯನ್ನು ಲೇಖಣಿಯಾಗಿಸಿ ಬರೆದಿದ್ದಾರೆ ಲಿಪಿಕಾರರು, ಇದು ಆ ಕಾಲಕ್ಕೇ ಅಲ್ಲದೆ ಈ ಕಾಲಕ್ಕೂ ಹಸ್ರಪ್ರತಿಗಳ ಇತಿಹಾಸದಲ್ಲಿ ಅಚ್ಚರಿ. ಈಗಲೂ ಉಳಿದುಬಂದಿರುವ ಏಕೈಕ ಹಸ್ತಪ್ರತಿಯು ಕ್ರಿ.ಶ. ೧೧೧೨ನೆಯ ಇಸವಿಯಲ್ಲಿ ಲಿಖಿತವಾದದ್ದು. ಪ್ರಾಕೃತ ಮೂಲವನ್ನು ಬರೆದವರು ಧರಸೇನ ಆಚಾರ್ಯರ ಶಿಷ್ಯರಾದ ಭೂತಬಲಿ ಮತ್ತು ಪುಷ್ಪದಂತ ಆಚಾರ್ಯರು. ಪ್ರಾಕೃತ ಸಂಸ್ಕೃತ ವ್ಯಾಖ್ಯಾನವನ್ನು ಬರೆದವರು ಗುರು–ಶಿಷ್ಯರಾದ ಮತ್ತು ಪಂಚಸ್ತೂಪಾನ್ವಯಕ್ಕೆ ವೀರಸೇನ ಮತ್ತು ಜೀನಸೇನ ಆಚಾರ್ಯರು. ಮೂಲಪಾಠ ಪ್ರಾಕೃತ – ಸಂಸ್ಕೃತ ಭಾಷೆಯಲ್ಲಿ ಇದ್ದರೂ ಕರ್ನಾಟಕದ ಲಿಪಿಕಾರರು ದೇವನಾಗರಿ ಲಿಪಿಯನ್ನು ಬಳಸದೆ ಕನ್ನಡ ಲಿಪಿಯಲ್ಲಿಯೇ ಪ್ರತಿ ಮಾಡಿರುವುದು ಮತ್ತೊಂದು ವಿಶೇಷ.

ಸಿದ್ಧಾಂತ ಗ್ರಂಥ ಸಮುಚ್ಚಯವಾದ ಜಯಧವಲಾದಿ ತಾಡಪ್ರತಿ ಗ್ರಂಥಗಳನ್ನು ಓದಬಲ್ಲ ಲಿಪಿಶಾಸ್ತ್ರಜ್ಞಾನಿಗಳಲ್ಲಿ ಅಗ್ರಗಣ್ಯರಾಗಿದ್ದವರು ಬ್ರಹ್ಮಸೂರಿ ಶಾಸ್ತ್ರಿಗಳು. ಧವಲಾದ ತಾಳೆಗರಿ ಹಸ್ತಪ್ರತಿಗಳಿರುವುದು ಮೂಡಬಿದ್ರಿಯಲ್ಲಿ. ಶಾಸ್ತ್ರಿಗಳಿರುವುದು ಜೈನಬಿದ್ರಿಯಲ್ಲಿ (ಶ್ರವಣಬೆಳಗೊಳಕ್ಕೆ ಜೈನಬಿದ್ರಿ ಎಂಬ ಸ್ಥಳನಾಮವೂ ರೂಢಿಯಲ್ಲಿದೆ). ಹಾಲಿ

ಇರುವ ಒಂದೇ ಒಂದು ಕೈಬರಹದ ಧವಲಾ ಹಸ್ತಪ್ರತಿ ಕಳೆದುಹೋದರೆ, ಮುರಿದು ಹೋದರೆ ಆಗಮಜ್ಞಾನ ವಾಹಿನಿಯ ನಿಧಿ ನಷ್ಟವಾಗುತ್ತದೆ. ಎಂದು ಹಿರಿಯರು ಅರಿತರು. ಜೈನಬಿದ್ರಿಯಿಂದ ಮೂಡಬಿದ್ರಿಗೆ ಬ್ರಹ್ಮಸೂರಿ ಶಾಸ್ತ್ರಿಯವರನ್ನು ೧೮೯೬ರಲ್ಲಿ ಬರಮಾಡಿಕೊಂಡು ಧವಲಾದಿ ಗ್ರಂಥಗಳ ಪ್ರತಿಯೆತ್ತುವ ಕೆಲಸ ವಹಿಸಿದರು. ತಿಂಗಳಿಗೆ ೧೨೫ ರೂಪಾಯಿ ಸಂಭಾವನೆ ನಿಗದಿಪಡಿಸಿದರು. ಜಯಧವಲಾ ವ್ಯಾಖ್ಯಾನದ ಹದಿನೈದು ಸಾವಿರ ಶ್ಲೋಕವನ್ನು ಕನ್ನಡ ಲಿಪಿಯಿಂದ ದೇವನಾಗರಿ ಲಿಪಿಗೆ ಬದಲಾಯಿಸಿ ಒಂದೂವರೆ ತಿಂಗಳಲ್ಲಿ ಬರೆದರು. ಅನಾರೋಗ್ಯದಿಂದಾಗಿ ಮುಂದುವರಿಸ ಲಿಲ್ಲ. ಅಲ್ಲಿಂದ ಮುಂದಕ್ಕೆ ಗಜಪತಿಶಾಸ್ತ್ರಿಯೆಂಬ ಲಿಪಿಶಾಸ್ತ್ರಜ್ಞರು ಸತತವಾಗಿ ಹದಿನಾರು (೧೬) ವರ್ಷದಲ್ಲಿ ಧವಲಾ–ಜಯಧವಲಾ–ಮಹಾಧವಲಾ ಕನ್ನಡ ಹಸ್ತಪ್ರತಿಗಳನ್ನು ದೇವನಾಗರಿಯಲ್ಲಿ ಬರೆದು ಪೂರೈಸಿದರು. ಭಾರತೀಯ ಹಸ್ತಪ್ರತಿ ಚರಿತ್ರೆಯಲ್ಲಿದು ರೋಚಕ ಅಧ್ಯಾಯ.

ಬಿ.ಎಲ್. ರೈಸರು ಶ್ರವಣಬೆಳಗೊಳ ಶಾಸನಗಳ ಸಂಗ್ರಹ ಹಾಗೂ ಪ್ರಕಟಣ ಕಾರ್ಯವನ್ನು ಕೈಗೆತ್ತಿಕೊಂಡಿದ್ದು ೧೮೮೫ರಲ್ಲಿ ಆಗ ಶಾಸನಗಳ ಶುದ್ಧಪಾಠ ನಿರ್ಧಾರದಲ್ಲಿ ಹಲವು ತೊಡಕುಗಳು ಅವರನ್ನು ಕಾಡತೊಡಗಿದುವು. ಸಿಕ್ಕು ಗಂಟುಗಳನ್ನು ಬಿಡಿಸಲು ರೈಸರ ನೆರವಿಗೆ ಒದಗಲ್ಲಾಗಿ ಒದಗಿದವರು ದೇಸೀ ಪಂಡಿತರಾದ ಬ್ರಹ್ಮಸೂರಿ ಶಾಸ್ತ್ರಿಗಳು. ರೈಸರು ಶ್ರವಣಬೆಳಗೊಳ ಸಂಪುಟಕ್ಕೆ ಸಜ್ಜಾಗುವ ವೇಳೆಗಾಗಲೇನೆ ಬ್ರಹ್ಮಸೂರಿಯವರು ಸ್ಥಳೀಯ ಶಾಸನಗಳಲ್ಲಿ ಅನೇಕವನ್ನು ಓದಿ ತಮ್ಮ ಸ್ವಂತ ಸಂಗ್ರಹಕ್ಕಾಗಿ ಪ್ರತಿ ಸಿದ್ಧಪಡಿಸಿ ಕೊಂಡಿದ್ದರೆಂಬುದು ವಿಶೇಷವಾಗಿ ಗಮನಿಸಬೇಕಾದ ಮಹತ್ವದ ಸಂಗತಿ. ಏಕೆಂದರೆ ರೈಸರಿಗಿಂತಲೂ ಮೊದಲೇ ಶಾಸನಗಳನ್ನು ಓದುವ, ಕಲೆಹಾಕುವ ಮತ್ತು ನಕಲುಪ್ರತಿ ಮಾಡಿಟ್ಟುಕೊಳ್ಳುವ ಹವ್ಯಾಸಿ ಶಾಸನ ಸಂಗ್ರಹಕಾರರಾಗಿದ್ದವರು ಬ್ರಹ್ಮಸೂರಿ ಶಾಸ್ತ್ರಿ. ರೈಸರಿಗೆ ಪರಿಚಯ ಏರ್ಪಡುವುದಕ್ಕೂ ಪೂರ್ವದಲ್ಲಿ ಅವರು ಇಡೀ ತೆಂಕಣ ಭಾರತದಲ್ಲಿ ಬಹು ಬಲ್ಲಿದರೆಂದೂ, ಪ್ರಾಚೀನ ಕಾಲದ ಲಿಪಿಯಲ್ಲಿರುವ ಕಲ್ಬರೆಹವನ್ನು ಅವಲೀಲೆಯಿಂದ ಕಣ್ಣಾಡಿಸುತ್ತ ಓದಬಲ್ಲ ಜ್ಞಾನಿಯೆಂದೂ ಹೆಸರು ಗಳಿಸಿದ್ದರು.

<< One of the main areas where Brahmasuri exerted his talents was epigraphy from Karnataka. The biography underlines that the old script of these inscriptions could not be read by anybody and that Brahmasuri studied it carefully on the basis of modern script. When `Res' alias Benjamin Lewis Rice (1837-1927), came to Shravanabelagola, he studied, corrected, got printed and published all the inscriptions, following the path shown by brahmasuri... Indeed Brahmasuri collaborated actively with Rice for the work relating to the Inscriptions at Shravanabelagola (1889)>>

ಬಿ.ಎಲ್. ರೈಸರು ಮುಕ್ತಕಂಠದಿಂದ ಬ್ರಹ್ಮಸೂರಿ ಶಾಸ್ತ್ರಿಗಳಿಂದ ತಮಗೆ ದೊರೆತ ನೆರವನ್ನು ನೆನೆದಿದ್ದಾರೆ :

<< ದಕ್ಷಿಣ ಭಾರತದಲ್ಲಿ ಪ್ರಕಾಂಡ ಪಂಡಿತರೆಂದು ಕೀರ್ತಿ ಸಂಪಾದಿಸಿರುವ ಬ್ರಹ್ಮಸೂರಿ ಶಾಸ್ತ್ರಿಯವರಿಂದ ನನಗೆ ತುಂಬ ಸಹಾಯವಾಗಿದೆ. ಅವರಿಗೆ ನನ್ನ ಎದೆಯಾಳದ ನೆನಕೆಗಳು >>

[Rice, Benjamin Lewis, Inscriptions at Sravana Belagola : a chief Seat of Jains Bangalore, 1889].

ವಿದ್ವದ್ವರೇಣ್ಯ ಬ್ರಹ್ಮಸೂರಿ ಶಾಸ್ತ್ರಿಯವರ ಮನೆತನ ತಮಿಳುನಾಡಿನ ಮೂಲದ್ದು. ಅಲ್ಲಿನ ಕಂಚಿಯಿಂದ ಶ್ರವಣಬೆಳಗೊಳಕ್ಕೆ ಬಂದ ಪುರೋಹಿತ ಮನೆತನ ಇವರದು. ಅರ್ಚಕ ಕುಟುಂಬಕ್ಕೆ ಸೇರಿದ ಜಿನ್ನಯ್ಯ ಉಪಾಧ್ಯಾಯ ಎಂಬುವರು ಶ್ರವಣಬೆಳಗೊಳ ಶ್ರೀಮಠದ ಪಟ್ಟಕ್ಕೆ ಆಯ್ಕೆಯಾಗಿ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕರಾದರು. ಅವರಿಗೆ ಅನಂತ ವಿಜಯ ಉಪಾಧ್ಯಾಯ ಎಂಬ ಹೆಸರಿನ ಒಬ್ಬ ತಮ್ಮನಿದ್ದರು. ಆ ಅನಂತವಿಜಯ ಉಪಾಧ್ಯಾಯರ ಮಗನೇ ಈ ಬ್ರಹ್ಮಸೂರಿ ಶಾಸ್ತ್ರಿ. ಇವರ ಮಗ ಆಸ್ಥಾನ ವಿದ್ವಾಂಸರಾಗಿದ್ದ ದೋರ್ಬಲಿ ಜಿನದಾಸ ಶಾಸ್ತ್ರಿ. ತಂದೆ–ಮಗ ಇಬ್ಬರೂ ತಮಿಳು. ಕನ್ನಡ ಸಂಸ್ಕೃತ, ಪ್ರಾಕೃತ ಮತ್ತು ಹಿಂದಿ ಭಾಷೆಯಲ್ಲಿ ನಿಪುಣ ರಾಗಿದ್ದರು.

ಪಂಡಿತರಾಜ ಬ್ರಹ್ಮಸೂರಿಶಾಸ್ತ್ರಿಗಳು (೧೮೩೯–೧೯೭೭) ಶಾಸನತಜ್ಞರೂ ಹಸ್ತಪ್ರತಿಶಾಸ್ತ್ರ ನಿಪುಣರೂ ಆಗಮಜ್ಞಾನ ವಿಶಾರದರೂ ಆಗಿದ್ದು ತಮ್ಮ ಸಮಕಾಲೀನ ಪಂಡಿತರ ಒಡನಾಟವಲ್ಲದೆ ದೇಶೀಯ ಮತ್ತು ವಿದೇಶೀಯ ವಿದ್ವಾಂಸರ ಸಾಹಚರ್ಯ ಹೊಂದಿದ್ದರು. ಸುಪ್ರಸಿದ್ಧ ಜರ್ಮನ್ ವಿದ್ವಾಂಸರಾದ ಲ್ಯೂಮನ್ನರು (Ernst Leumann : 1859-1931) ಭಾರತೀಯ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಉಪಯುಕ್ತ ಟಿಪ್ಪಣಿ ಬರೆದು ಸ್ಟ್ರಾಸ್‌ಬರ್ಗ್ (Strassburg) ವಿಶ್ವವಿದ್ಯಾಲಯಕ್ಕೆ ಕೊಡುತ್ತಿದ್ದರು. ಲ್ಯೂಮನ್ನರು ಖಾಸಗಿ ಪತ್ರಾಗಾರವೊಂದನ್ನು ಹೊಂದಿದ್ದರು. ತಾವು ಸ್ವಂತ ಪ್ರಯತ್ನ ದಿಂದ ಸಂಗ್ರಹಿಸಿದ ಹಸ್ತಪ್ರತಿಗಳ ಯಾದಿಯನ್ನು ಸಿದ್ಧಗೊಳಿಸಿ ದರು. ಭಾರತಕ್ಕೆ ಲ್ಯೂಮನರು ಒಮ್ಮೆಯೂ ಬಂದಿರಲಿಲ್ಲ ವಾದರೂ ಕೆಲವು ಭಾರತೀಯ ವಿದ್ವಾಂಸರೊಡನೆ ಪತ್ರವ್ಯವಹಾರ ಮೂಲಕ ಸಂಪರ್ಕ ಹೊಂದಿದ್ದರು. ಅವರ ಹಸ್ತಪ್ರತಿ ಭಂಡಾರಕ್ಕೆ ಭಾರತದಿಂದ ಹಸ್ತಪ್ರತಿಗಳನ್ನು ಒದಗಿಸಿದವರಲ್ಲಿ ಇಬ್ಬರು ಪ್ರಮುಖರು. ಭಗವನ್‌ದಾಸ್ ಕೇವಲದಾಸ್‌ರಿಂದ (೧೮೫೦–೧೯೦೦) ಗುಜರಾತು ಮತ್ತು ರಾಜಸ್ಥಾನ ಕಡೆಯ ಹಸ್ತಪ್ರತಿಗಳನ್ನು ಪಡೆದರು. ಹಾಗೆಯೇ

ಕರ್ನಾಟಕ ಮೂಲದ ಪ್ರಾಕೃತ-ಸಂಸ್ಕೃತ ಹಸ್ತಪ್ರತಿಗಳನ್ನು ಬ್ರಹ್ಮಸೂರಿಶಾಸ್ತ್ರಿ ಮತ್ತು ಈ ಹುಲ್ಷ್ (Eugen Hultzsch 1857-1927) ಮೂಲಕ ದೊರಕಿಸಿಕೊಂಡರು. <ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾಲಯದ ಗ್ರಂಥಾಲಯ ಹಾಗೂ ವೈಯಕ್ತಿಕವಾಗಿ ನಾನು ಹುಲ್ಷ್‌ರಿಗೆ ಕೃತಜ್ಞ, ಏಕೆಂದರೆ ಅವರ ಗೆಳೆತನದ ನೆರವಿನಿಂದಾಗಿ ಬ್ರಹ್ಮಸೂರಿಯವರಿಂದಲೂ ಅವರ ಮಗ ದೋರ್ಬಲಿ ಜಿನದಾಸರಿಂದಲೂ ಅಪಾರ ಸಂಖ್ಯೆಯ ದಿಗಂಬರ ಜೈನ ಹಸ್ತಪ್ರತಿಗಳನ್ನು ಪಡೆಯಲು ಸಾಧ್ಯವಾದದ್ದು > ಎಂಬುದಾಗಿ ಲ್ಯೂಮನರು ನಿವೇದಿಸಿಕೊಂಡಿದ್ದಾರೆ.

ಸ್ವತಃ ಶ್ರವಣಬೆಳಗೊಳದ ಮಠಾಧೀಶರಾದ ಸ್ವಸ್ತಿಶ್ರೀ ಚಾರುಕೀರ್ತಿ ಸ್ವಾಮಿಗಳವರೇ ಒಪ್ಪಿಗೆಯಿತ್ತು ಹಸ್ತಪ್ರತಿಯೊಂದನ್ನು ಕಳಿಸಿದ್ದರೆಂಬುದು ಕುತೂಹಲಕಾರಿಯಾಗಿದೆ. ಬ್ರಹ್ಮಸೂರಿಯವರು ಸಹ ತಮ್ಮದೇ ಆದ ಒಂದು ಗ್ರಂಥ ಭಂಡಾರವನ್ನು ಬೆಳಸಿದ್ದರು – < ಬ್ರಹ್ಮಸೂರಿ ಶಾಸ್ತ್ರೀ ಶ್ರುತ ಭಂಡಾರಸ್ಥ ತಾಳಪತ್ರ ಪುಸ್ತಕಾನಿ > ಈ ಸಂಗ್ರಹದಲ್ಲಿ ೧೫೩೩ ಶೀರ್ಷಿಕೆಗಳ ಗ್ರಂಥಗಳ ಪಟ್ಟಿಯಿದ್ದು, ಇದರಲ್ಲಿ ದಿಗಂಬರ ಸಂಪ್ರದಾಯದ ಪುರಾಣ, ಕಥೆ, ವ್ಯಾಕರಣ, ಶಾಸ್ತ್ರ, ವ್ಯಾಖ್ಯಾನ, ಇತ್ಯಾದಿ ನಾನಾ ಬಗೆಯ ಕೃತಿಗಳು ಸೇರಿವೆ. ಇದಲ್ಲದೆ ಬ್ರಹ್ಮಸೂರಿಶಾಸ್ತ್ರೀ ವಶಸ್ಥಿತ ಪತ್ರಿಕಾ ಪುಸ್ತಕಾನಿ ಎಂಬ ಇನ್ನೊಂದು ಪಟ್ಟಿ ಪ್ರಕಾರ ೩೯ ಶೀರ್ಷಿಕೆಗಳಿವೆ. ಮಲ್ಲಿಷೇಣಾಚಾರ್ಯ ವಿರಚಿತ ಕೃತಿಯ ಮತ್ತೊಂದು ಪ್ರತಿ ಬ್ರಹ್ಮಸೂರಿಶಾಸ್ತ್ರಿಯವರ ಸಂಗ್ರಹದಲ್ಲಿ ಇರುವುದು ತಮ್ಮ ಗಮನಕ್ಕೆ ಬಂದಿದೆಯೆಂದು ಕೆ.ಬಿ. ಪಾಠಕರು ತಿಳಿಸಿದ್ದಾರೆ (ಇಂಡಿಯನ್ ಆ್ಯಂಟಿಕ್ವೆರಿ, ಸಂಪುಟ ೪೦, ೧೯೧೧, ಪುಟ. ೪೬). ಈ ಎಲ್ಲ (೧೫೩೩+೩೯=೧೫೭೨) ಹಸ್ತಪ್ರತಿಗಳು ಸ್ಟ್ರಾಸ್‌ಬರ್ಗ್‌ನ ಗ್ರಂಥಾಲಯದಲ್ಲಿವೆ. ಇವುಗಳಲ್ಲಿ ಒಂದು ಮಾತ್ರ ತೆಲುಗು ಲಿಪಿಯಲ್ಲಿದ್ದು ಉಳಿದುವು ಕನ್ನಡ ಲಿಪಿಯಲ್ಲಿವೆ. ಆದರೆ ಕೃತಿಗಳ ಭಾಷೆ ಮಾತ್ರ ಪ್ರಾಕೃತ ಮತ್ತು ಸಂಸ್ಕೃತ. ಚಂದ್ರಬಲ್ ತ್ರಿಪಾಠಿ ಎಂಬ ವಿದ್ವಾಂಸರು ಇವುಗಳ ಪ್ರತ್ಯೇಕ ಪಟ್ಟಿ (ಕೆಟಲಾಗ್) ತಯಾರಿಸಿದ್ದಾರೆ. ಈ ಹಸ್ತಪ್ರತಿ ಸಂಗ್ರಹದಲ್ಲಿದ್ದ ಭಾವಸೇನ ವಿರಚಿತ ಮುಕ್ತಿ ವಿಚಾರ ಮತ್ತು ಕೇವಲಿ ಭುಕ್ತಿ ವಿಚಾರ ಕೃತಿಗಳನ್ನು ಅಂತರರಾಷ್ಟ್ರೀಯ ವಿದ್ವಾಂಸ ಪ್ರೊ. ಪದ್ಮನಾಭ ಜೈನಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ (೧೮೮೫/೮೬ ಮತ್ತು ೧೯೩೩ರಲ್ಲಿ). ಫಲ್ಟನ್ ನಗರದ ಮಾಣಿಕ ಚಂದ ಕೊಠಾರಿಯವರು ೧೮೮೭ರಲ್ಲಿ ಬ್ರಹ್ಮಸೂರಿ ಪಂಡಿತರಿಗೆ ಅಮಿತಗತಿ ಆಚಾರ್ಯವಿರಚಿತ ಸುಭಾಷಿತ ರತ್ನ ಸಂದೋಹ (ಬೋಲೀಲಾಲ ಮತ್ತು ಪನ್ನಾಲಾಲರ ವಚನಿಕಾಸಹಿತ ಗ್ರಂಥದ ಹಸ್ತಪ್ರತಿಯನ್ನು ನೀಡಿದ್ದರು. ಲ್ಯೂಮನ್ನರು ಸ್ಟ್ರಾಸ್‌ಬರ್ಗ್ ಗ್ರಂಥಾಲಯಕ್ಕಿತ್ತ ಸಂಗ್ರಹದಲ್ಲಿ ಇದೂ ಸೇರ್ಪಡೆ ಆಗಿದೆ.

ಲ್ಯೂಮನ್, ಹುಲ್ಷ್, ಬಿ.ಎಲ್. ರೈಸ್ ಮೊದಲಾದ ಹೊರನಾಡಿನ ಬಲ್ಲಿದರು ಬ್ರಹ್ಮಸೂರಿ ಶಾಸ್ತ್ರಿಯವರನ್ನು ಶ್ರೇಷ್ಠ ವಿದ್ವಾಂಸರೆಂದು ಪರಿಗಣಿಸಿದ್ದರು. ಅವರುಗಳು ಬ್ರಹ್ಮಸೂರಿ ಶಾಸ್ತ್ರಿಗಳಲ್ಲಿ ಬಹುಶ್ರುತತ್ವವನ್ನು ಕಂಡುಕೊಂಡರು. ಲ್ಯೂಮನರು ಜರ್ಮನಿಯಾಚೆಗೆ, ಕರ್ನಾಟಕಕ್ಕಾಗಲಿ ಭಾರತಕ್ಕಾಗಲಿ ಬಂದವರಲ್ಲ. ಬ್ರಹ್ಮಸೂರಿಯವರು ಕರ್ನಾಟಕ ದಾಟಿ ಉತ್ತರ ಭಾರತಕ್ಕಾಗಲಿ, ವಿದೇಶಕ್ಕಾಗಲಿ ಪ್ರಯಾಣಿಸಿದವರಲ್ಲ. ಯೋಗಾಯೋಗವೆಂದರೆ ಕನ್ನಡ ಅರಿಯದ, ಕನ್ನಡ ನಾಡಿಗೆ ಕಾಲಿಡದ ಯೂರೋಪಿನ ಲ್ಯೂಮನ್ನರಿಗೂ ತಾಯ್ನಾಡನ್ನು ಬಿಟ್ಟು ಹೊರನಾಡನ್ನು ಕಾಣದ ಬ್ರಹ್ಮಸೂರಿ ಶಾಸ್ತ್ರಿಯವರಿಗೂ ಸ್ನೇಹ-ಸಂಪರ್ಕ ಏರ್ಪಟ್ಟಿತು. ನೆನಪಿಡಬೇಕು, ಟಿ.ವಿ. ಆಗಲಿ, ಮೊಬೈಲ್ ಆಗಲಿ, ಕಂಪ್ಯೂಟರಾಗಲಿ ಇನ್ನೂ ಲೋಕ ಕಂಡಿರದ ಕಾಲವದು. ಆಮೆಗತಿಯಲ್ಲಿ ಹೋಗಿ ಬರುತ್ತಿದ್ದ ಪತ್ರವ್ಯವಹಾರವೊಂದೇ ಮುಖ್ಯ ಸಾಧನ. ಹೀಗಿದ್ದೂ ಕರಾವಳಿ ಕಡಲಿನ ಉಪ್ಪಿಗೂ ಜರ್ಮನಿ ಬೆಟ್ಟದ ನೆಲ್ಲಿಯ ಕಾಯಿಗೂ ನಂಟು ಉಂಟಾಯಿತು. ಇಬ್ಬರೂ ಇಪ್ಪತ್ತು ವರ್ಷಕಾಲ ಶಾಸ್ತ್ರ ಮತ್ತು ಹಸ್ತಪ್ರತಿ ವಿಚಾರವಾಗಿ ವಿನಿಮಯ ನಿರತರಾಗಿದ್ದರು. ಬ್ರಹ್ಮಸೂರಿ ಶಾಸ್ತ್ರಿಯವರು ತಮ್ಮ ಅಯ್ವತೊಂಬತ್ತನೆಯ ವಯಸ್ಸಿನಲ್ಲಿ ಅನಾರೋಗ್ಯ ಪೀಡಿತರಾಗಿ ೧೮೯೭ರಲ್ಲಿ ತೀರಿಹೋದರು. ವಿದ್ವಾಂಸ ಮಿತ್ರನ ಮರಣ ವಾರ್ತೆಯಿಂದ ಲ್ಯೂಮನ್ನರು ನೊಂದರು. ಬ್ರಹ್ಮಸೂರಿಶಾಸ್ತ್ರಿಯವರ ಬದುಕು-ಬರೆಹ ದಾಖಲೆಯಾಗಿ ನಿಲ್ಲಬೇಕೆಂದು ಬಯಸಿದರು. ಬ್ರಹ್ಮಸೂರಿಯವರ ಚಿರಂಜೀವಿ ಹಾಗೂ ತಂದೆಯಂತೆಯೇ ಉತ್ತಮ ವಿದ್ವಾಂಸರಾಗಿದ್ದ ದೋರ್ಬಲಿ ಜಿನದಾಸರಿಗೆ ಬ್ರಹ್ಮಸೂರಿಯವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಬರೆದು ಕೊಡಲು ಕೋರಿದರು. ತಂದೆ ಬ್ರಹ್ಮಸೂರಿಯವರೊಂದಿಗೆ ಹೇಗೊ ಹಾಗೆ ದೋರ್ಬುಲಿ ಜಿನದಾಸರೊಂದಿಗೂ ಲ್ಯೂಮನ್ನರು ಪತ್ರವ್ಯವಹಾರ ಮುಂದುವರಿಸಿದರು. ಅವರ ಒತ್ತಾಸೆಗೆ ಓಗೊಟ್ಟು ದೋರ್ಬಲಿ ಜಿನದಾಸರು ತಮ್ಮ ತೀರ್ಥರೂಪು ಬ್ರಹ್ಮಸೂರಿ ಶಾಸ್ತ್ರಿಯವರ ಜೀವನ ಚರಿತ್ರೆಯನ್ನು ಅತಿ ಸಂಗ್ರಹವಾಗಿ ಆರೂವರೆ ಪುಟಗಳಲ್ಲಿ, ಸಂಸ್ಕೃತ ಭಾಷೆಯಲ್ಲಿ ಮತ್ತು ದೇವನಾಗರಿ ಲಿಪಿಯಲ್ಲಿ ೧೯೦೫ರಲ್ಲಿ ಬರೆದರು. ಈ ಗ್ರಂಥ-ಪತ್ರ ಲ್ಯೂಮನ್ನರಿಗೆ ತಲಪಲು ತಡವಾಯಿತು.

ಉದಕ ಮಂಡಲದಲ್ಲಿ (ಊಟಿ) ಹುಲ್ಷ್ ಅವರ ಸಹಾಯಕ ಎಪಿಗ್ರಫಿಸ್ಟ್ ಆಗಿದ್ದ (ರಾವ್ ಬಹದೂರ್ ವಲಾಯತ್ತೂರ್) ವೆಂಕಯ್ಯನವರ ಮೂಲಕ ದೋರ್ಬಲಿ ಜಿನದಾಸರು ಬರೆದ ಜೀವನ ಚರಿತ್ರೆ ಹಸ್ತಪತ್ರಿ ೧೯೦೬ರಲ್ಲಿ ಲ್ಯೂಮನ್ನರಿಗೆ ತಲಪಿತು. ತಮ್ಮ ತಂದೆಯವರ ಜೀವನ ಚರಿತ್ರೆಯೊಂದಿಗೆ ದೋರ್ಬಲಿಯವರು ಒಂದು ಪತ್ರವನ್ನು

ಲಗತ್ತಿಸಿ 'ಈ ಜೀವನ ಚರಿತ್ರೆಯನ್ನು ಹೊರ ರಾಷ್ಟ್ರಗಳಲ್ಲಿ ಹರಡಿರಿ' ಎಂದೂ ಕೋರಿದ್ದರು. ಸಂಸ್ಕೃತದಲ್ಲಿ ಬರೆದಿರುವ ಜೀವನ ಚರಿತ್ರೆ ಮತ್ತು ಅದಕ್ಕೆ ರೋಮನ್ ಲಿಪಿಯಲ್ಲಿ ಲ್ಯೂಮನ್ನರು ಬರೆದಿರುವ ಟಿಪ್ಪಣಿ – ಈ ಹಸ್ತಪತ್ರಿಗಳು ಜರ್ಮನಿಯ ಹ್ಯಾಂಬರ್ಗ್‌ನ ಪತ್ರಾಗಾರದಲ್ಲಿ (ಒಡಿಭಿಖತಿಢ) ಸಂರಕ್ಷಿತವಾಗಿವೆ.

ಬ್ರಹ್ಮಸೂರಿ ಶಾಸ್ತ್ರಿಗಳ ಕಿರಿಯ ಸಮಕಾಲೀನರಾದ ಚಾಮರಾಜ ನಗರದ ಪದ್ಮರಾಜ ಪಂಡಿತರು (೧೮೬೧–೧೯೪೫) ವಿದ್ವತ್ತಿನ ಮೇರು ಎನಿಸಿದ್ದರು. ಅವರು ಬರೆಹಗಾರ, ಶಾಸನತಜ್ಞ, ಲಿಪಿಜ್ಞಾನ ಕುಶಲಿ, ಹಸ್ತಪ್ರತಿ ಶಾಸ್ತ್ರ ವಿಶಾರದ, ಗ್ರಂಥ ಸಂಪಾದಕ, ಪ್ರಕಾಶಕ, ಪತ್ರಕರ್ತ, ಜ್ಯೋತಿಷಿ, ಆಯುರ್ವೇದ ವೈದ್ಯ, ವಾಗ್ಮಿ, ಕಲಾವಿದ, ಛಾಯಾಚಿತ್ರಕಾರ ಸಾಬೂನು ಮತ್ತು ಹಲ್ಲುಪುಡಿ ತಯಾರಕರು – ಇವೆಲ್ಲವೂ ಆಗಿದ್ದರು. ಅವರಿಗೆ ಸದ್ಯೋಜಾತ ವಿಚಾರಗಳಲ್ಲಿ ಅಗಾಧ ಹಸಿವು ಹಾಗೂ ಹೊಸ ದಿಂಗತದತ್ತ ಸಾಗುವ ಹುರುಪು. ನೂರಾರು ಕನ್ನಡ ಮತ್ತು ಸಂಸ್ಕೃತ ಅಪ್ರಕಟಿತ ಹಸ್ತಪ್ರತಿಗಳನ್ನು ಹುಡುಕಿ, ಪ್ರತಿ ಮಾಡಿ ಮೊಟ್ಟ ಮೊದಲನೆಯ ಸಲ ಸಂಪಾದಿಸಿ ಪ್ರಕಟಿಸಿದರು. ಹಳಗನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನು ಧಾರಾವಾಹಿಯಾಗಿ ಮುದ್ರಿಸಲು ಕಾವ್ಯಕಲ್ಪದ್ರುಮ, ಕಾವ್ಯಾಂಬುಧಿ, ಬುಧಜನ ಮನೋರಂಜನಿ ಎಂಬ ಮಾಸಿಕ ಪತ್ರಿಕೆಗಳನ್ನು ಪ್ರಾರಂಭಿಸಿದರು. ಮತ್ತು ಸ್ವಂತ ಮುದ್ರಣಾಲಯ ತೆರೆದರು.

ಪದ್ಮರಾಜ ಪಂಡಿತರು ಮೈಸೂರಲ್ಲಿ ೧೯೨೬ರಲ್ಲಿ ತಾಳೆಗರಿ ಹಸ್ತಪ್ರತಿಗಳ ಗ್ರಂಥಾಲಯವನ್ನು ಪ್ರಾರಂಭಿಸಿದರು. ಅಪರೂಪದ ೯೪ ಓಲೆಗರಿ ಗ್ರಂಥಗಳಿಂದ ಕೂಡಿದ ಈ ಶ್ರುತಭಂಡಾರವನ್ನು ನೋಡಲು ಆರ್ಕಿಯಾಲಜಿ ಡೈರೆಕ್ಟರ್ ಆರ್. ಶಾಮಾಶಾಸ್ತ್ರಿ, ಮೇಲುಕೋಟೆ ಯತಿರಾಜ ಮಠದ ಪೂಜ್ಯ ಸ್ವಾಮಿಗಳು, ಪುರಾತತ್ವ ಇಲಾಖೆಯ ಆರ್. ನರಸಿಂಹಾಚಾರ್ಯರು, ಶ್ರವಣಬೆಳಗೊಳ ಭಟ್ಟಾರಕರು ಮುಂತಾದವರು ಆಗಮಿಸಿದ್ದರು.

ಪದ್ಮರಾಜರು ಶಾಸನಗಳ ಪ್ರಾಮುಖ್ಯವನ್ನು ಅರಿತಿದ್ದರು. ಎಷ್ಟೇ ಪ್ರಾಚೀನ ಲಿಪಿಯ ಶಾಸನವಾದರೂ ಲೀಲಾಜಾಲವಾಗಿ ಓದುತ್ತಿದ್ದುದನ್ನು ತಿಳಿದು, ಮೆಚ್ಚಿ ಬಿ.ಎಲ್ ರೈಸರು ಇವರನ್ನು ಮೈಸೂರು ಪುರಾತತ್ವ ಇಲಾಖೆಯಲ್ಲಿ ನೇಮಿಸಿಕೊಂಡರು. ೧೮೯೦ ರಿಂದ ೧೯೧೭ರ ವರೆಗೆ ಪದ್ಮರಾಜ ಪಂಡಿತರು ಪುರಾತತ್ವ ಇಲಾಖೆಯಲ್ಲಿದ್ದರು ಅನೇಕ ಕಡೆ ಸಂಚರಿಸಿ ಹೊಸ ಶಾಸನಗಳನ್ನೂ ಹಸ್ತಪತ್ರಿಗಳನ್ನೂ ಪತ್ತೆ ಮಾಡಿದ್ದು ಎಂಎಆರ್ ವಾರ್ಷಿಕ ವರದಿಗಳಲ್ಲಿ ನಮೂದಾಗಿದೆ. ಚಿಕ್ಕಮಗಳೂರು ಜಿಲ್ಲೆ ನರಸಿಂಹರಾಜಪುರ ಬಸ್ತಿ ಮಠದಲ್ಲಿದ್ದ ಗಂಗವಂಶದ ರಾಜ ಸೈಗೊಟ್ಟ ಶಿವಮಾರನ ಕ್ರಿ.ಶ. ೬೯೯ರ ಶಾಸನ, ರಾಷ್ಟ್ರಕೂಟರ ಕಂಬದೇವ–ಸ್ತಂಭ ರಾಜನ ಎಂಟನೆಯ ಶತಮಾನದ ಶಾಸನ, ಬೆಳಗಾವಿ ಜಿಲ್ಲೆಯ ಎಕ್ಕಂಬದ ಶಾಸನ, ಕೊಪ್ಪಳದ ಎರಡು ಶಾಸನ, ರಾಯಚೂರಲ್ಲಿ ೧೨೦೦ರ ಅವಧಿಯ ಶಾಸನ – ಮುಂತಾದುವು ಪದ್ಮರಾಜ ಪಂಡಿತರ ಶೋಧದ ಕೆಲವು ಉದಾಹರಣೆಗಳು. [ಇಂಗ್ಲಿಷಿನಲ್ಲೂ ಕನ್ನಡದಲ್ಲೂ ನಾನು ಬರೆದಿರುವ ಪುಸ್ತಕಗಳಲ್ಲಿ ಪದ್ಮರಾಜಪಂಡಿತರ ಸಾಧನೆಯನ್ನು ವಿಸ್ತಾರವಾಗಿ ತಿಳಿಸಿರುವುದರಿಂದ ಇಲ್ಲಿ ಕಿರು ಪರಿಚಯ ಕೊಟ್ಟಿದ್ದೇನೆ]. ಈ ಬಗೆಯಲ್ಲಿ ಎಂದುರೊ ಮಹಾನು ಭಾವಲು ದುಡಿದಿರುವುದನ್ನು ಇನ್ನೂ ದಾಖಲಿಸುವುದು ಸಾಕಷ್ಟಿದೆ.

ಶಾಸನಗಳಲ್ಲಿರುವ ಎಡಪಂಥೀಯವೂ ಜನಪರವೂ ಪರ್ಯಾಯ ಸಂಸ್ಕೃತಿಯವೂ ಪ್ರತಿಭಟನೆಯವೂ ಆದ ಮುಲುಕುಗಳ ಎಳೆಗಳನ್ನು ಹಿಡಿದು ನೋಡಲು ಇನ್ನೂ ಅವಕಾಶವಿದೆ. ನಾನಾ ಜ್ಞಾನಶಾಖೆಗಳಿಗೆ ಮಾತೃಸ್ಥಾನದಲ್ಲಿದ್ದು ಹಾಲೂಡುವ ಶಾಸನದೇವಿಗೆ ನನ್ನ ಮೊದಲ ಮಣಿಹ. ಮಹತ್ವದ ಸಂಗತಿಗಳನ್ನು ಹುಡುಕಿ ತೆಗೆದು ನನ್ನಿಯನ್ನು ತೋರಿಸುವ ಕೆಲಸ ಅಗಾಧವಾಗಿದೆ. ಇದರ ಅಧ್ಯಯನ ಬೋಧನೆ, ಪ್ರಕಟನೆಗಳು ವ್ಯವಸ್ಥಿತವಾಗಿಯೂ ವ್ಯಾಪಕವಾಗಿಯೂ ನಡೆಯಬೇಕಾಗಿದೆ. ಇದಕ್ಕಾಗಿಯೇ ಮೀಸಲಾದ ಪ್ರತ್ಯೇಕ ವಿಶ್ವವಿದ್ಯಾಲಯದ ಅಗತ್ಯವಿದೆ. ಈ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷನಾಗಿ, ಸಮಸ್ತ ಇತಿಹಾಸ ಆಸಕ್ತರ ಪರವಾಗಿ ಸರ್ಕಾರಕ್ಕೆ ನನ್ನ ಒತ್ತಾಯವಿದು– ೨೦೧೬ನೆಯ ಇಸವಿಯಿಂದ ಪ್ರತ್ಯೇಕವಾಗಿ ಸ್ವತಂತ್ರವಾದ "ಇತಿಹಾಸ ವಿಶ್ವವಿದ್ಯಾಲಯ"ವನ್ನು ಘನ ಕರ್ನಾಟಕ ಸರ್ಕಾರ ಪ್ರಾರಭಿಸಬೇಕು.

## ಸಂಕ್ಷಿಪ್ತ ಇತಿವೃತ್ತ

| | | |
|---|---|---|
| ಹೆಸರು | : | ಹಂಪಸಂದ್ರ ಪದ್ಮನಾಭಯ್ಯ ನಾಗರಾಜಯ್ಯ |
| ತಂದೆ | : | ಶ್ಯಾನುಭೋಗ್ ಪದ್ಮನಾಭಯ್ಯ |
| ತಾಯಿ | : | ಪದ್ಮಾವತಮ್ಮ |
| ಜನ್ಮ ದಿನಾಂಕ | : | 7-10-1936. |
| ಜನ್ಮ ಸ್ಥಳ | : | ಹಂಪಸಂದ್ರ, ಗೌರಿಬಿದನೂರು ತಾಲ್ಲೂಕು,<br>ಚಿಕ್ಕಬಳ್ಳಾಪುರ ಜಿಲ್ಲೆ. |
| ವಿದ್ಯಾಭ್ಯಾಸ | : | ಬಿ.ಎ. (ಆನರ್ಸ್) 1958<br>ಎಂ.ಎ. 1959, ಪಿಎಚ್.ಡಿ. 1984. |
| ವಿವಾಹ (ರಿಜಿಸ್ಟರ್ಡ್) | : | 1961 ಮಡದಿ : ಡಾ.ಕಮಲಾ ಹಂಪನಾ |
| ಅಧ್ಯಾಪನ | : | 1. ಮಹಾರಾಣಿ ಕಾಲೇಜು, ಮೈಸೂರು<br>2. ಸರ್ಕಾರಿ ಕಾಲೇಜು, ಮಂಡ್ಯ<br>3. ಡಿ.ಆರ್. ಎಂ.ಕಾಲೇಜು, ದಾವಣಗೆರೆ<br>4. ಸಹ್ಯಾದ್ರಿ ಕಾಲೇಜು, ಶಿವಮೊಗ್ಗ<br>5. ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜು, ಬೆಂಗಳೂರು<br>6. ಸೆಂಟ್ರಲ್ ಕಾಲೇಜು, ಬೆಂಗಳೂರು<br>7. ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ |
| ಮಕ್ಕಳು | : | (ಮಗ) ಎಚ್.ಎನ್. ಹರ್ಷವರ್ಧನ<br>ಬಿ.ಇ. (ಆರ್ಕಿಟೆಕ್ಚರ್)<br>(ಹಿರಿಯ ಮಗಳು) ಎಚ್.ಎನ್. ರಾಜ್ಯಶ್ರೀ<br>ಎಂ.ಎ., ಬಿ.ಎಸ್‌ಸಿ. ಪಿ.ಜಿ.ಡಿಪ್-ಇನ್-ಕಂಪ್ಯೂಟರ್ ಸೈನ್ಸ್<br>(ಕಿರಿಯ ಮಗಳು) ಎಚ್.ಎನ್.ಆರತಿ<br>ಎಂ.ಎಸ್. (ಕಮ್ಯುನಿಕೇಷನ್), ಎಂ.ಎ. |

## ನಿರ್ವಹಿಸಿದ ಸಾಂಸ್ಕೃತಿಕ ಜವಾಬ್ದಾರಿಗಳು

ಉಪಾಧ್ಯಕ್ಷರು : ಕರ್ನಾಟಕ ಸಂಘ, ಮಹಾರಾಜ ಕಾಲೇಜು ಮೈಸೂರು, 1985

ಕಾರ್ಯದರ್ಶಿ : ಮಂಡ್ಯ ಸರ್ಕಾರಿ ಕಾಲೇಜಿನ ಅಧ್ಯಾಪಕ ಸಂಘ, 1960–61
ಬೆಂಗಳೂರು ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜು, 1965–67
ಕನ್ನಡ ಸಾಹಿತ್ಯ ಪರಿಷತ್ತು (27–10–1966 ರಿಂದ 30–9–74) ಎಂಟು ವರ್ಷ

ನಿರ್ದೇಶಕರು : ಜೈನ ಸಂಶೋಧನ ಕೇಂದ್ರ, 1977–79
ಕನ್ನಡ ಅಧ್ಯಯನ ಕೇಂದ್ರ, 1992–94
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1993.

ಸಂಚಾಲಕರು : ಅಖಿಲ ಭಾರತ ಜನಪರ ಸಾಹಿತ್ಯ ಪರಿಷತ್ತು, 1988–2000

ಸಂಪಾದಕರು : 'ಜೀವನ' ಮಾಸಪತ್ರಿಕೆ 1969–75
ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, 1966
ಸಾಧನೆ 1977–78, 1992–94.

ಮ್ಯಾನೇಜಿಂಗ್ ಟ್ರಸ್ಟಿ : ಪ್ರಾಕೃತ ಜ್ಞಾನಭಾರತಿ ಎಜುಕೇಷನ್ ಟ್ರಸ್ಟ್ 1989–92.

ಅಧ್ಯಕ್ಷರು : 1. ಕನ್ನಡ ಸಾಹಿತ್ಯ ಪರಿಷತ್ತು, 1978–1986 ಫೆಬ್ರುವರಿವರೆಗೆ
2. ಕಾಸರಗೋಡು ಕನ್ನಡಿಗರ ಸಮ್ಮೇಳನ 1979 ಮಾರ್ಚ್.
3. ಹೈದರಾಬಾದು– ಸಿಕಂದರಾಬಾದು ಕನ್ನಡ ಸಾಹಿತ್ಯ ಸಮ್ಮೇಳನ 1979 ಮಾರ್ಚ್
4. ಬೆಳಗಾವಿ ಜಿಲ್ಲಾ ಸಾಹಿತ್ಯ ಸಮ್ಮೇಳನ 1984.
5. ಹೆಬ್ರಿ ಸಾಹಿತ್ಯ ಸಮ್ಮೇಳನ, ಡಿಸೆಂಬರ್ 1984.
6. ಅಖಿಲ ಕರ್ನಾಟಕ ಕನ್ನಡ ಶೀಘ್ರಲಿಪಿ–ಬೆರಳಚ್ಚುಗಾರರ ಸಂಘ 1983 ರಿಂದ 2008
7. ಕರ್ನಾಟಕ ಜೈನ ಸಾಹಿತ್ಯ ಪರಿಷತ್ತು, 1985–88.

8. ಕರ್ನಾಟಕ ಗ್ರಂಥ ಪ್ರಕಾಶನ ಸಂಸ್ಥೆ, 1980

9. ಕನ್ನಡ ಬಳಗ, ಬೆಂಗಳೂರು, 1982–84

10. ರಂಗ ಚೇತನ, ಬೆಂಗಳೂರು 1989–94.

11. ಸಾಹಿತ್ಯಗೋಷ್ಠಿ: ಸ್ಟೆಂಟ್ ಲೂಯಿಸ್, ಅಮೇರಿಕ 1990.

12. ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನ, ಚಿಕ್ಕಬಳ್ಳಾಪುರ, 1992

13. ಸಾಹಿತ್ಯಗೋಷ್ಠಿ: ಲಾಸ್ ಏಂಜಲೀಸ್, ಅಮೇರಿಕ 1990.

14. ಅಂತರ ವಿಶ್ವವಿದ್ಯಾಲಯ ಪ್ರಸಾರಾಂಗ ಪ್ರಕಟಣಾ ಸಲಹಾ ಸಮಿತಿ, 1992

15. 8ನೆಯ ಸಂಸ್ಕೃತಿ ಸಮ್ಮೇಳನ (ಕರ್ನಾಟಕ ವಿಶ್ವವಿದ್ಯಾಲಯ), ಧರ್ಮಸ್ಥಳ, 2004.

16. ಅಖಿಲ ಕರ್ನಾಟಕ ಜೈನ ಸಾಹಿತ್ಯ ಸಮ್ಮೇಳನ, ಶ್ರವಣ ಬೆಳಗೊಳ, ಅಕ್ಟೋಬರ್ 22,23,–2005

17. ಸಾಹಿತ್ಯ ಸಮ್ಮೇಳನ, ಧರ್ಮಸ್ಥಳ, 05–12–2010

18. 'ನುಡಿಸಿರಿ' ಸಮ್ಮೇಳನ, ಮೂಡಬಿದ್ರಿ, 2009

19. International Conference on 'Jainism Through The Ages', Mysore, 2010

ಉದ್ಘಾಟಕರು :

1. 43ನೇ ಧರ್ಮಸ್ಥಳ ಸಾಹಿತ್ಯ ಸಮ್ಮೇಳನ, 1978.

2. ಕಾರವಾರ ಜಿಲ್ಲಾ ಸಾಹಿತ್ಯ ಸಮ್ಮೇಳನ, 1979.

3. ಅಖಿಲ ಕರ್ನಾಟಕ ಗಮಕಿಗಳ ಸಮ್ಮೇಳನ ಮೈಸೂರು.1979

4. ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಳನ, ಕೃಷ್ಣರಾಜನಗರ, 1980

5. ಬೀದರ್ ಜಿಲ್ಲಾ ಸಾಹಿತ್ಯ ಸಮ್ಮೇಳನ, 1983, ಜೂನ್.

6. ಆಡಳಿತ ಭಾಷಾಗೋಷ್ಠಿ 51ನೇ ಕನ್ನಡ ಸಾಹಿತ್ಯ ಸಮ್ಮೇಳನ ಧರ್ಮಸ್ಥಳ, 1979

7. ನಾಟಕ ಗೋಷ್ಠಿ, 55ನೇ ಕನ್ನಡ ಸಾಹಿತ್ಯ ಸಮ್ಮೇಳನ, ಶಿರಸಿ. 1982.

8. ಸಮೂಹ ಮಾಧ್ಯಮ ಗೋಷ್ಠಿ, 56ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕೈವಾರ, 1984

ವಿಶೇಷೋಪನ್ಯಾಸಗಳು: ಬೆಂಗಳೂರು, ಮೈಸೂರು, ಕುವೆಂಪು, ಮಂಗಳೂರು, ಗುಲ್ಬರ್ಗಾ ಮತ್ತು ಕರ್ನಾಟಕ ವಿಶ್ವವಿದ್ಯಾಲಯ.

ಪ್ರಶಸ್ತಿಗಳು : ಮಕ್ಕಳ ಸಾಹಿತ್ಯ ರಚನೆಗಾಗಿ ರಾಷ್ಟ್ರೀಯ ಪುರಸ್ಕಾರ ದೆಹಲಿ 1990

: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1994.

: ಜಾನಪದ ಹಾಗೂ ಯಕ್ಷಗಾನ ಅಕಾಡೆಮಿ ಪ್ರಶಸ್ತಿ, 1995

: ಚಾವುಂಡರಾಯ ಪ್ರಶಸ್ತಿ: ಕನ್ನಡ ಸಾಹಿತ್ಯ ಪರಿಷತ್ತು, 1996

: 'ಧರ್ಮದಿವಾಕರ' ಬಿರುದು,ಚಿಕ್ಕೋಡಿಯ ಜನತೆಯಿಂದ (1-1-97)

: 'ಸಾಹಿತ್ಯಸಿಂಧು' ಬಿರುದು ಬಿಜಾಪುರ ಜಿಲ್ಲೆಯ ಇಂಡಿ ಜನತೆಯಿಂದ.

: ರಾಜ್ಯೋತ್ಸವ ಪ್ರಶಸ್ತಿ, 1998

: ಕಾವ್ಯಾನಂದ ಪ್ರಶಸ್ತಿ, 1999

: ಜ್ಞಾನೋದಯ ಪುರಸ್ಕಾರ, 1999 (ಇಂದೋರ್)

: ಬಾಬುಲಾಲ್ ಸುವರ್ಣ ಪದಕ, 2003 (ಅಹಮದಬಾದು)

: ಆಚಾರ್ಯ ಸುಮತಿ ಸಾಗರ ಪುರಸ್ಕಾರ, 2005 (ಸೋನಾಗಿರಿ, ಮಧ್ಯಪ್ರದೇಶ)

: ಶಾಸನ ಸಾಹಿತ್ಯ ಪ್ರಶಸ್ತಿ, ಶ್ರವಣಬೆಳಗೊಳ 2001

: ಜ್ಞಾನೋದಯ ಪ್ರಶಸ್ತಿ, ಇಂದೋರು (1999) 2000

: ಜ್ಞಾನ ಭಾಸ್ಕರ ಬಿರುದು, ಶಿವಮೊಗ್ಗ ನಾಗರಿಕರು, 2001

: ತಂಬಾಜೋಶಿ ಪ್ರಶಸ್ತಿ ಶಿವಮೊಗ್ಗ ಕರ್ನಾಟಕ ಸಂಘ, 2005

: ಕುವೆಂಪು ದೀಪ ಪ್ರಶಸ್ತಿ, ಹೊನ್ನಾವರ, 2004

: ನಿಡುಮಾಮಿಡಿ ಮಠದಿಂದ ಚಿನ್ನದ ಪದಕ ಮತ್ತು 'ಭಾಷಾಭೂಷಣ' ಬಿರುದು. ಶೃಂಗೇರಿಮಠ, ಚಿತ್ರದುರ್ಗದ ಮುರುಘಾಮಠ, ಶ್ರವಣಬೆಳಗೊಳ ಮಠ, ಸಾವಳಗಿಮಠಗಳ ವಿಶೇಷ ಪ್ರಶಸ್ತಿಗಳು

: ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಮೂಡಬಿದುರೆ, 2006

: ನಾಡೋಜ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006

: ಆಚಾರ್ಯ ಮಹಾಪ್ರಜ್ಞಾ ಸಾಹಿತ್ಯ ಪುರಸ್ಕಾರ, ಜುಲೈ, 2008

: ವಿಶ್ವಮಾನವ ಪ್ರಶಸ್ತಿ, ದೇಜಗೌ ಟ್ರಸ್ಟ್, ಮೈಸೂರು, 2011

**ಸಂಘ ಸಂಸ್ಥೆಗಳಿಂದ ಪ್ರಶಸ್ತಿಗಳು:**

: ಚಿಕ್ಕೇಶ್ವರ ಸಂಘ, ಬೆಂಗಳೂರು ತುಮಕೂರು, ಹುಬ್ಬಳ್ಳಿ ಮತ್ತು ಹಲವಾರು ಸಂಘ ಸಂಸ್ಥೆಗಳ ಪ್ರಶಸ್ತಿಗಳು.

**ಆಕಾಶವಾಣಿ** : ಸುಮಾರು 60ಕ್ಕೂ ಹೆಚ್ಚಿನ ಕಾರ್ಯಕ್ರಮಗಳು.

**ವೀಕ್ಷಕ ವಿವರಣೆ** : 1967, ಮತ್ತು 1981, 2006ರಲ್ಲಿ ಶ್ರವಣಬೆಳಗೊಳದಲ್ಲಿ, ನಡೆದ ಮಹಾ ಮಸ್ತಕಾಭಿಷೇಕ.

1982, ಮತ್ತು 1994ರಲ್ಲಿ ಧರ್ಮಸ್ಥಳದಲ್ಲಿ ನಡೆದ ಮಹಾಮಸ್ತಕಾಭಿಷೇಕ.

**ದೂರದರ್ಶನ ಸಂದರ್ಶನ :**

ಹೈದರಾಬಾದ್ ಮತ್ತು ಬೆಂಗಳೂರು ಕೇಂದ್ರಗಳಿಂದ ಇಂಗ್ಲಿಷ್ ಪ್ರಬಂಧ ಮಂಡಿಸಿದ ಸಮ್ಮೇಳನಗಳು.

: ಅಖಿಲ ಭಾರತ ದ್ರಾವಿಡ ಭಾಷಾ ಸಮ್ಮೇಳನ ಮದರಾಸು; 1974

: ಅಖಿಲ ಭಾರತ ಜೈನ ಸಮ್ಮೇಳನ, ಧಾರವಾಡ 1975

: ಅಖಿಲ ಭಾರತ ಭಾಷಾ ಸಮ್ಮೇಳನ, ಬೆಂಗಳೂರು 1977.

: ಬೇಸಿಗೆ ಶಿಬಿರ, ಬೊಂಬಾಯಿ 1966.

: ಅಮೆರಿಕ, ಇಂಗ್ಲಂಡ್, ಕೆನಡ ಮತ್ತು ಯೂರೋಪು ರಾಷ್ಟ್ರಗಳ ಹಲವಾರು ವಿಶ್ವ ವಿದ್ಯಾನಿಲಯಗಳಲ್ಲಿ

**ಪುಸ್ತಕ ಬಹುಮಾನಗಳು**

ರಾಜ್ಯಸಾಹಿತ್ಯ ಅಕಾಡೆಮಿ ಪ್ರಶಸ್ತಿ

1. ದ್ರಾವಿಡ ಭಾಷಾ ವಿಜ್ಞಾನ.
2. ಯಕ್ಷ ಯಕ್ಷಿಯರು.
3. ಬೆಂಗಳೂರು ವಿಶ್ವವಿದ್ಯಾಲಯ: ನೋಂಪಿಯ ಕಥೆಗಳು
4. ದೇವರಾಜ ಬಹದ್ದೂರ್ ಪುರಸ್ಕಾರ: ಕಮ್ಮಟದ ಕಿಡಿಗಳು
5. ಧಾರವಾಡ ವಿದ್ಯಾವರ್ಧಕ ಸಂಘ: ಫಣಿಕುಮಾರ ಕಥಾ ಸಾಹಿತ್ಯ.

**ಜನಪರ ಸಾಹಿತ್ಯ ಪರಿಷತ್ತಿನ ವತಿಯಿಂದ ಹಂಪನಾ ಪ್ರಕಟಿಸಿದ ಪುಸ್ತಕಗಳು :**

1. ಕೆಂಡ ತುಂಬಿದ ಪುಡಿಲು (ಕವನಸಂಕಲನ): ಹರಿಯಬ್ಬೆ ಕೆಂಚಮ್ಮ, 1989
2. ಜನಪರ (ಸ್ಮರಣಸಂಚಿಕೆ): (ಸಂ) ಟಿ.ಕೆ.ಮಹಮೂದ್, 1989.
3. ಸಿಟಿಬಸ್ಸು (ನಗೆಬರಹಗಳು): ಡಾ.ಸತ್ಯವತಿ. 1990
4. ವಡ್ಡಗೆರೆ ವೀರನಾಗಮ್ಮ (ಜಾನಪದ): (ಸಂ) ಡಿ.ಎನ್.ರಘುರಾಮ್, 1990.
5. ಜನಪರ ಸ್ಪಂದನ (ಸ್ಮರಣ ಸಂಚಿಕೆ): (ಸಂ) ಟಿ.ಕೆ.ಮಹಮೂದ್. 1990
6. ವನಸುಮ (ವ್ಯಕ್ತಿಚಿತ್ರ): ಯಳನಾಡು ಅಂಜನಪ್ಪ, 1991.
7. ಮುಂಬೈಮಳೆ (ಪ್ರಬಂಧ ಸಂಕಲನ): ಡಾ.ಜಿ.ಡಿ.ಜೋಶಿ. 1991.
8. ಸ್ನೇಹದ ನೆಲದಲ್ಲಿ (ಕವನ ಸಂಕಲನ): ಪ್ರೊ. ಸಂಜೀವಶೆಟ್ಟಿ, 1992.
9. ಮುತ್ತಣ್ಣನ ಕಥೆಗಳು (ಕಥಾ ಸಂಕಲನ): ಡಾ.ಐ.ಮಾ.ಮುತ್ತಣ್ಣ, 1992
10. ನೇಣು ಮತ್ತು ಇತರ ಕಥೆಗಳು (ಕಥಾ ಸಂಕಲನ): ಯಳನಾಡು ಅಂಜನಪ್ಪ
11. ಗಿನ್ನೀಸ್ ರೆಕಾರ್ಡ್ (ನಗೆ ನಾಟಕಗಳು): ಡಾ.ಸತ್ಯವತಿ, 1996.
12. ತೆಳ್ಳಗಿರಬಾರದಯ್ಯ ಲೋಕದೊಳಗೆ (ನಗೆಬರಹಗಳು): ಡಾ.ಸತ್ಯವತಿ 1996.

## ಕೃತಿಗಳು

**ಅನುವಾದ :**

ಆತ್ಮತತ್ತ್ವ ವಿಚಾರ, 1971.
ಕೃಷ್ಣ ಪಾಂಡವರು, 1971
ಭೀಮ ಭಕ್ತಿ ಪರೀಕ್ಷೆ, 1979.
ವೀರ ಜಿನೇಂದ್ರ ಚರಿತೆ, 1975.

**ಕಾದಂಬರಿ :**

ನಾಗಶ್ರೀ, 1965, 1975, 1995
ಸವ್ಯಸಾಚಿ ಪಂಪ, 1976, 1981, 1985, 1994, 2010

**ಗ್ರಂಥ ಸಂಪಾದನೆ :**

ಅಪ್ರತಿಮ ವೀರ ಚರಿತೆ, (+) 1975
ಚಂದ್ರಸಾಗರವರ್ಣಿ ಕೃತಿಗಳು, 1981.
ಜಯನೃಪ ಕಾವ್ಯಸಂಗ್ರಹ, 1967.
ತತ್ತ್ವಾರ್ಥಸೂತ್ರಾನುಗತ ಕರ್ಣಾಟ ಲಘುವೃತ್ತಿ, 1994.
ಧನ್ಯಕುಮಾರ ಚರಿತ್ರೆ, 1976
ನಾಗಕುಮಾರ ಷಟ್ಪದಿ, 1978.
ನೇಮಿನಾಥ ಪುರಾಣ, (+) 1981.
ಪಂಪ ಭಾರತ ಸಂಗ್ರಹ, (+ +) 1961.
ಪ್ರಾಚೀನ ಕಾವ್ಯಮಾರ್ಗ–ಭಾಗ 3, (+) 1992.
ಭರತೇಶ ವೈಭವ, (++) 1967.
ರತ್ನಾಕರನ ಹಾಡುಗಳು, 1976.
ವಡ್ಡಾರಾಧನೆ, 1993.
ಶಾಂತಿಪುರಾಣ, 1982.
ಸದಾಶಿವರ ಹನ್ನೆರಡು ಕಥೆಗಳು, 1985.
ಸಾಳ್ವ ಭಾರತ, 1976.
ಮೊದಲಾದುವು.

**ಜಾನಪದ :**

ಆಕಾಶ ಜಾನಪದ, 1985
ಕರ್ನಾಟಕದ ಜಾತ್ರೆಗಳು, 1985.
ಜನಪದ ಕಲಾವಿದರ ಸೂಚಿ, (ಸಂ) 1982.
ಜಾನಪದ ಅಧ್ಯಯನ ವಿಚಾರ ಸಂಕಿರಣ,(ಸಂ) 1980
ವಡ್ಡಾರಾಧನೆ ಮತ್ತು ಜಾನಪದ, 1997

**ಜೀವನ ಚರಿತ್ರೆ :**

ಅಜಾತಶತ್ರು, (+) 1968.
ಅತ್ತಿಮಬ್ಬೆ, 1994
ಗಡಿನಾಡು ಗಾಂಧಿ, (+) 1974.
ಗೋವಿಂದ ಪೈ ಬದುಕು ಬರಹ, (+) 1976.
ನೆನಪಿನಂಗಳದಲ್ಲಿ ಮಾಸ್ತಿ, 1992.
ಮಹಾವೀರ, 1974.
ಶಂಭವ ಸಾಗರ ಚರಿತೆ, 1968.
ಸಮ್ಮೇಳನಾಧ್ಯಕ್ಷರುಗಳು, 1983.
**ಪ್ರಚಾರೋಪನ್ಯಾಸ ಮಾಲೆ:**
ಮೂರನೆಯ ಮಂಗರಸ, 1986
ವಡ್ಡಾರಾಧನೆ, 1968.
ವಿ.ಕೃ.ಗೋಕಾಕ್, 1986.
ಸಿ.ವಿ.ರಾಮನ್, 1968.

**ಪ್ರಬಂಧ**

ಹಂಪನಾ ಆಯ್ದ ಪ್ರಬಂಧಗಳು, 1993
ಹೆಸರಿನ ಸೊಗಸು, 1974.

**ಭಾಷಾ ವಿಜ್ಞಾನ :**

ದ್ರಾವಿಡ ಭಾಷಾ ವಿಜ್ಞಾನ, 1966.
ದ್ರಾವಿಡ ಸಂಖ್ಯಾವಾಚಕಗಳು, 1973.
ಭಾರತದ ಭಾಷಾ ಸಮಸ್ಯೆ, 1968.
ಭಾಷೆ, 1973.
ಭಾಷಾ ವಿಜ್ಞಾನ, 1968.
ಭಾಷಾ ವಿಜ್ಞಾನಿಗಳು, 1977.

ವಿಮರ್ಶೆ :

ಫಣಿಕುಮಾರ ಕಥಾ ಸಾಹಿತ್ಯ, 1978.
ಪೈಯವರ ಮೂರು ನಾಟಕಗಳು, 1967.

ಶಿಶು ಸಾಹಿತ್ಯ :

ಕರ್ನಾಟಕ ಮತ್ತು ಜೈನಧರ್ಮ, 1981.
ದೇವರಾಯನ ದುರ್ಗ, 1973.
ನಾಡೋಜ ಪಂಪ, 1971.
ಬಸವಪ್ಪ ಶಾಸ್ತ್ರೀ, (+) 1975.
ಮಹಾಕವಿ ರನ್ನ, 1976.
ಮಹಾವೀರ, 1976.

ಸಂಶೋಧನೆ :

ಅನನ್ಯ, 2003
ಕಮ್ಮಟದ ಕಿಡಿಗಳು, 1980
ಕವಿವರ ಕಾಮಧೇನು, 1996
ಗೊಮ್ಮಟ ಬಾಹುಬಲಿ, 1981.
ಚಂದ್ರಕೊಡೆ, 1997
ನಾಗಚಂದ್ರನ ಕಾಲ ಸ್ಥಳ, 1989
ನೋಂಪಿಯ ಕಥೆಗಳು, 1976.
ಬಂಧುವರ್ಮನ ಇತಿವೃತ್ತ, 1993.
ಬಾಹುಬಲಿ: ರೂಪ, ಸ್ವರೂಪ, ವಿಶ್ವರೂಪ, 2006
ಯಕ್ಷ ಯಕ್ಷಿಯರು, 1976
ವಿಷ್ಣುವರ್ಧನ ವಿಜಯಾದಿತ್ಯ ಕೀರ್ತಿವರ್ಮ, 1996
ಶಾಸನಗಳಲ್ಲಿ ಎರಡು ವಂಶಗಳು, 1994.
ಸಾಂತರರು ಒಂದು ಅಧ್ಯಯನ 1997

ಸಂಪಾದಕರು

ಕನ್ನಡದ ಮೂವರು ಕಟ್ಟಾಳುಗಳು, 1979.
ಕುವೆಂಪು ಜ್ಯೋತಿ, 1970
ಕೈವಾರ ಸಾಹಿತ್ಯ ಸಮ್ಮೇಳನ, 1984.
ಚಿಕ್ಕಮಗಳೂರು ಸಾಹಿತ್ಯಸಮ್ಮೇಳನ 1981
ಧರ್ಮಸ್ಥಳ ಸಾಹಿತ್ಯ ಸಮ್ಮೇಳನ, 1980
ದಿವ್ಯಧ್ವನಿ, 1975.
ನೆನಪಿನ ಹೊತ್ತಗೆ, 1970
ಬೀದರ್ ಸಾಹಿತ್ಯ ಸಮ್ಮೇಳನ, 1985
ಬೆಳಗಾವಿ ಸಾಹಿತ್ಯ ಸಮ್ಮೇಳನ, 1980.
ಮಡಿಕೇರಿ ಸಾಹಿತ್ಯ ಸಮ್ಮೇಳನ, 1982
ಹೊಂಬುಜದ ಶಾಸನಗಳು, (+) 1977
[(+) ಈ ಗುರುತು ಇರುವ ಪುಸ್ತಕಗಳಿಗೆ ಸಹ ಸಂಪಾದಕರು ಉಂಟು]

(ಆಕರ : ಹಂಪನಾ ಕೃತಿಶ್ರೇಣಿ ಅರ್ಕಾವತಿ ಪ್ರಕಾಶನ, ಬೆಂಗಳೂರು)





# ಗಂಗಾವತಿ ತಾಲೂಕಿನ ನವಶೋಧಿತ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಕಲ್ಗೊಂಬೆಗಳು

ಡಾ. ಶರಣಬಸಪ್ಪ ಕೋಲ್ಕಾರ*

**ಕೊ**ಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಪ್ರಾಕ್ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹವಾದ ಪ್ರದೇಶವಾಗಿದೆ. ಈವರೆಗೆ ನಡೆದ ಸಂಶೋಧನೆಗಳಿಂದ ಇಲ್ಲಿ ಸೂಕ್ಷ್ಮಶಿಲಾಯುಗದ ಕಾಲದಿಂದಲೂ ಮಾನವ ವಾಸ್ತವ್ಯವಿತ್ತು ಎಂಬುದು ತಿಳಿದುಬಂದಿದೆ. ಸೂಕ್ಷ್ಮಶಿಲಾಯುಗ ಕಾಲದ ನೆಲೆಗಳೂ ಸಹಿತ ನಂತರದ ಶಿಲಾತಾಮ್ರಯುಗ (ನವಶಿಲಾಯುಗ) ಕಬ್ಬಿಣ ಯುಗದ ಬೃಹತ್ ಶಿಲಾಯುಗ ಹಾಗೂ ಆದಿ ಚಾರಿತ್ರಿಕ ಕಾಲಗಳಿಗೆ ಸಂಬಂಧಿಸಿದಂತೆ ಹಲವಾರು ನೆಲೆಗಳು, ಅವುಗಳಲ್ಲಿ ಪ್ರಾಚ್ಯಾವಶೇಷಗಳು, ಗವಿವರ್ಣ ಹಾಗೂ ಬಯಲು ಬಂಡೆಚಿತ್ರಗಳು ಕಂಡುಬಂದಿವೆ. ಇವುಗಳಿಂದ ಗಂಗಾವತಿ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗ ಕಾಲದಿಂದಲೂ (ಕ್ರಿ.ಪೂ. ೮೦೦೦-೪೦೦೦ದ ನಡುವಣ ಕಾಲ) ಮಾನವ ಜೀವನ ಸಂಸ್ಕೃತಿ ಅನುಚಾನವಾಗಿ ಬೆಳೆದುಬಂದಿರುವುದು ವಿದಿತವಾಗುತ್ತದೆ.[೧]

ಗಂಗಾವತಿ ತಾಲೂಕಿನಲ್ಲಿ ವಿಶೇಷವಾಗಿ ಏಳುಗುಡ್ಡ ಪ್ರದೇಶವು ಪ್ರಾಕ್ಚಾರಿತ್ರಿಕವಾಗಿ ಗಮನಾರ್ಹ ಪ್ರದೇಶವಾಗಿದೆ. ತಾಲೂಕಿನ ದಕ್ಷಿಣ ಮೇರೆಗುಂಟ ಹರಿದಿರುವ ತುಂಗಭದ್ರ ನದಿಯಿಂದ ಪ್ರಾರಂಭವಾಗಿ ಉತ್ತರಕ್ಕೆ ಸುಮಾರು ೨೦ ಕಿ.ಮೀ. ವಿಸ್ತಾರದಲ್ಲಿ ಹಾಗೂ ಪೂರ್ವದಿಕ್ಕಿನಲ್ಲಿ ಗಂಗಾವತಿ ನಗರದಿಂದ ಪ್ರಾರಂಭವಾಗಿ ಪಶ್ಚಿಮದಿಕ್ಕಿನಲ್ಲಿ ರಾಷ್ಟ್ರೀಯ ಹೆದ್ದಾರಿವರೆಗೆ (ಬೂದಗುಂಪಾ ಕ್ರಾಸ್) ಸುಮಾರು ३೦ ಕಿ.ಮೀ. ಉದ್ದವಾಗಿ ಏಳುಗುಡ್ಡೆಗಳೆಂದು ಸ್ಥಳೀಯವಾಗಿ ಕರೆಯುವ ಬೆಟ್ಟ ಪ್ರದೇಶವಿದೆ. ಈ ವಿಸ್ತಾರದ ಪ್ರದೇಶದ ಮಧ್ಯದಲ್ಲಿ ಅಲ್ಲಲ್ಲಿ ಬಯಲುಗಳಿದ್ದು, ಅನೇಕ ಗ್ರಾಮಗಳು ಬರುತ್ತವೆ. ಈ ಇಡೀ ವಿಸ್ತಾರದ ಪ್ರದೇಶವು ಪ್ರಸ್ತುತ ಆಗೋಲಿ ಹಿರೇಬೆಣಕಲ್ ಕಾಯ್ದಿಟ್ಟ ಅರಣ್ಯ (೬೬೪೭ ಹೆಕ್ಟೇರ್) ವಿರುಪಾಪುರಗಡ್ಡಿ ಕಾಯ್ದಿಟ್ಟ ಅರಣ್ಯ ಹಾಗೂ ಮಾದಿನಾಳ ಕಾಯ್ದಿಟ್ಟ ಅರಣ್ಯ (೪೦೩.೫ ಹೆಕ್ಟೇರ್) ವ್ಯಾಪ್ತಿಗೆ ಒಳಪಟ್ಟಿದೆ. ಈ ಏಳುಗುಡ್ಡ ಪರಿಸರದಲ್ಲಿಯೇ ಅತ್ಯಧಿಕ ನೂತನ ಹಾಗೂ ಶಿಲಾ ತಾಮ್ರಯುಗದ ಕಬ್ಬಿಣಯುಗ ಬೃಹತ್ ಶಿಲಾಯುಗ ಕಾಲಗಳ ಜನವಸತಿ ನೆಲೆಗಳು, ಗವಿವರ್ಣ ಚಿತ್ರಗಳು ಇವೆ.[೨] ವಿಶೇಷವೆಂದರೆ ಇದು ಕಬ್ಬಿಣಯುಗ ಬೃಹತ್‌ಶಿಲಾಯುಗ ಸಂಸ್ಕೃತಿಯ ಕಾಲಘಟ್ಟದ ಜನಪ್ರಿಯ ವಾಸ್ತವ್ಯದ ಪ್ರದೇಶವಾಗಿತ್ತೆಂಬುದು ಇಲ್ಲಿ ಕಂಡುಬರುವ ಹತ್ತು ಹಲವು ನೆಲೆಗಳಿಂದ ದೃಢಪಟ್ಟಿದೆ. ದಕ್ಷಿಣಭಾರತದಲ್ಲಿ ಕಬ್ಬಿಣಯುಗವು ಬೃಹತ್‌ಶಿಲಾಯುಗ ಸಂಸ್ಕೃತಿಯೊಂದಿಗೆ ಮಿಳಿತವಾಗಿದೆ. ಈ ಸಂಸ್ಕೃತಿಯ ಪ್ರಧಾನ ಲಕ್ಷಣವೆಂದರೆ ಸತ್ತವರಿಗಾಗಿ ಸಮಾಧಿಗಳ ನಿರ್ಮಾಣ ಹಾಗೂ ಕಬ್ಬಿಣದ ಬಳಕೆ. ಸಮಾಧಿಗಳ ನಿರ್ಮಾಣಕ್ಕೆ ಕಲ್ಲು, ಬಂಡೆಗಳು ಅವಶ್ಯಕತೆ ಇರುವುದರಿಂದ ಈ ಸಂಸ್ಕೃತಿಯ ಜನರು ಈ ಏಳುಗುಡ್ಡ ಪ್ರದೇಶದಲ್ಲಿ ಅಧಿಕ ಪ್ರಮಾಣದಲ್ಲಿ ನೆಲೆಸಿದ್ದರು. ಇಲ್ಲೆಲ್ಲ ಬೃಹತ್‌ಶಿಲಾ ಸಂಸ್ಕೃತಿಯ ಹಲವಾರು ನೆಲೆಗಳು ಶಿಲಾಸಮಾಧಿಗಳು ಹಾಗೂ ಕಲ್ಗೊಂಬೆಗಳು ಈಗಾಗಲೇ ಬೆಳಕಿಗೆ ಬಂದಿವೆ. ಮುಂದುವರೆದ ನನ್ನ ಶೋಧನೆಯಲ್ಲಿ ಮತ್ತಷ್ಟು ನೆಲೆಗಳು, ಸಮಾಧಿಗಳು ಹಾಗೂ ಕಲ್ಗೊಂಬೆಗಳು ಕಂಡುಬಂದಿದ್ದು ಅವುಗಳ ಕುರಿತಾಗಿ ಇಲ್ಲಿ ವಿಶ್ಲೇಷಿಸಲಾಗಿದೆ.

ಬೃಹತ್‌ಶಿಲಾ ಸಂಸ್ಕೃತಿಯ ಶಿಲಾಸಮಾಧಿಗಳೆಂದರೆ ತಕ್ಷಣ ನೆನಪಿಗೆ ಬರುವುದು ಹಿರೇಬೆಣಕಲ್ ನೆಲೆ. ಗಂಗಾವತಿ ತಾಲೂಕಿನ ಈ ನೆಲೆ ನೂರಾರು ಶಿಲಾಸಮಾಧಿಗಳನ್ನು ಹೊಂದಿದ್ದು, ಭಾರತದ ಪ್ರಾಗಿತಿಹಾಸಕಾಲದ ಮಹತ್ವದ ನೆಲೆಗಳಲ್ಲಿ ಒಂದೆನಿಸಿದೆ. ಈ ನೆಲೆಯನ್ನು ರೆ.ಜಿ. ಕೆಯಿಸ್‌ರವರು ಶೋಧಿಸಿದ ಸಂಗತಿಯನ್ನು ೧೮೩೫ರ ರಾಯಲ್ ಏಶಿಯಾಟಿಕ್ ಸೊಸಾಯಿಟಿ, ಬಾಂಬೆ ಶಾಖೆಯ ಜರ್ನಲ್ ಸಂ. ೪ರಲ್ಲಿ ಕರ್ನಲ್ ಮೆಡೋಸ್ ಟೈಲರ್‌ರವರು[೩] ಪ್ರಕಟಿಸುವುದರೊಂದಿಗೆ ಕರ್ನಾಟಕದಲ್ಲಿ ಬೃಹತ್‌ಶಿಲಾಯುಗದ ನೆಲೆಗಳ ಅಧ್ಯಯನ ಪ್ರಾರಂಭವಾಯಿತೆನ್ನಬಹುದು. ನಂತರ ಈ ಪ್ರದೇಶದಲ್ಲಿ (ಗಂಗಾವತಿ ತಾಲೂಕು) ನೂತನ ಶಿಲಾಯುಗದ, ಕಬ್ಬಿಣಯುಗ, ಬೃಹತ್‌ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಇನ್ನಷ್ಟು ನೆಲೆಗಳನ್ನು, ಸಾಂಸ್ಕೃತಿಕ ಅವಶೇಷಗಳನ್ನು, ಗವಿವರ್ಣ ಹಾಗೂ ಬಯಲುಬಂಡೆ

* ಪ್ರಾಚಾರ್ಯರು, ಕಲ್ಮಠ ಶ್ರೀ ಚನ್ನಬಸವಸ್ವಾಮಿ ಮಹಿಳಾ ಮಹಾವಿದ್ಯಾಲಯ, ಗಂಗಾವತಿ-೫೮೩೨೨೭.

ಚಿತ್ರಗಳನ್ನು ಹಿಂದಿನ ಹೈದ್ರಾಬಾದ್ ರಾಜ್ಯದ ಭೂ ವಿಜ್ಞಾನ ಸರ್ವೇಕ್ಷಣ ಇಲಾಖೆಯ ಅಧಿಕಾರಿ ಕ್ಯಾಪ್ಟನ್ ಲಿಯೋನಾರ್ಡ್ ಮನ್‌ರವರು, ನಂತರ ಗೋರ್ಡನ್ ಡಿ.ಹೆಚ್. ಆಲ್ಚಿನ್ ಎಫ್.ಆರ್. ಸುಂದರ. ಅ., ಷಡಕ್ಷರಯ್ಯ ಆರ್.ಎಂ., ಪಾಟೀಲ ಬಿ.ಸಿ. ಹಾಗೂ ಶರಣಬಸಪ್ಪ ಕೋಲ್ಕಾರ ಬೆಳಕಿಗೆ ತಂದು ಅಧ್ಯಯನ ಮಾಡಿದ್ದಾರೆ. ವಿಶೇಷವಾಗಿ ಡಾ. ಅ. ಸುಂದರ ಹಾಗೂ ಡಾ. ಶರಣಬಸಪ್ಪ ಕೋಲ್ಕಾರ ಈ ಪ್ರದೇಶದಲ್ಲಿ ರಾಜ್ಯದಲ್ಲಿಯೇ ಅತ್ಯಧಿಕ ಗವಿಚಿತ್ರಗಳನ್ನು ಶೋಧಿಸಿದ್ದಾರೆ. ಪರಿಣಾಮವಾಗಿ ಇದು ದಕ್ಷಿಣ ಭಾರತದ ಭಿಂಬೇಟ್ಕಾ ಎನಿಸಿದೆ.[೪]

ಹಿಂದಿನ ಈ ಎಲ್ಲಾ ಶೋಧನೆಗಳ ಪರಿಣಾಮ ಗಂಗಾವತಿ ತಾಲೂಕಿನಲ್ಲಿ ಹಿರೇಬೆಣಕಲ್ ಸಹಿತ ಚಿಕ್ಕಬೆಣಕಲ್, ಮಲ್ಲಾಪುರ, ಆನೆಗೊಂದಿ, ಆಗೋಲಿ, ಬಂಡ್ರಾಳ, ಗಡ್ಡಿ, ತಿಪ್ಪನಾಳ, ಗುಡೂರ, ಬಸರಿಹಾಳ, ಜೀರಾಳ ಕಲ್ಗುಡಿ ಗ್ರಾಮಗಳ ಪರಿಸರದಲ್ಲಿ ಬೃಹತ್ ಶಿಲಾಯುಗ ಕಾಲದ ನೆಲೆಗಳು ಕಂಡುಬಂದಿವೆ. ಆದರೆ ಈ ನೆಲೆಗಳಲ್ಲಿ ಹಿರಬೇಣಕಲ್ ನೆಲೆಯ ಬಗ್ಗೆ ಡಾ. ಸುಂದರವರು ವಿಸ್ತೃತ ಅಧ್ಯಯನ ಮಾಡಿದ್ದಾರೆ.[೫] ಉಳಿದ ನೆಲೆಗಳ ಬಗೆಗೆ ಕೇವಲ ಉಲ್ಲೇಖನಗಳಿವೆ ವಿನಃ ಯಾವುದೇ ಅಧ್ಯಯನಗಳಾಗಿಲ್ಲ. ಈ ಹಿನ್ನಲೆಯಲ್ಲಿ ನಾನು ಕ್ಷೇತ್ರಕಾರ್ಯ ಕೈಗೊಂಡು ಅನೇಕ ಹೊಸ ನೆಲೆಗಳನ್ನು ಶೋಧಿಸಿ ಹಾಗೂ ಉಲ್ಲೇಖಿತ ನೆಲೆಗಳ ಶಿಲಾಸಮಾಧಿಗಳ ಇತರ ಅವಶೇಷಗಳ ಬಗೆಗೆ ಅಧ್ಯಯನ ನಡೆಸಿ ಇಲ್ಲಿ ಪ್ರಸ್ತುಪಡಿಸುತ್ತಿದ್ದೇನೆ.

**ಆಗೋಲಿ:** ಆಗೋಲಿ ಗ್ರಾಮವು ಗಂಗಾವತಿ ನಗರದಿಂದ ವಾಯುವ್ಯಕ್ಕೆ ೩೦ ಕಿ.ಮೀ. ದೂರದಲ್ಲಿದೆ. ಗ್ರಾಮದ ಉತ್ತರ ಬದಿಯ ಬೆಟ್ಟಸಾಲುಗಳಲ್ಲಿ ೩ ಕಡೆ ಬೃಹತ್ ಶಿಲಾಯುಗದ ಸಮಾಧಿ ನೆಲೆಗಳಿವೆ. ಇವುಗಳಿಗೆ ಸ್ಥಳೀಯರು 'ಮೊರೇರ ಕಲ್ಲು' ಎಂದು ಕರೆಯುತ್ತಾರೆ.

ಮೊದಲನೆಯ ನೆಲೆಯು ಯರಡೋಣಿ ಲಿಂಗಪ್ಪ ಎಂಬುವರ ಹೊಲದಲ್ಲಿ ಕಂಡುಬರುತ್ತದೆ. ಸು. ೫ ಎಕರೆ ವಿಸ್ತಾರವುಳ್ಳ ಸ್ಥಳದಲ್ಲಿ ಹಿಂದೆ ನೂರಾರು ಶಿಲಾಸಮಾಧಿಗಳು ಇದ್ದವೆಂದು ಸ್ಥಳೀಯರು ತಿಳಿಸುತ್ತಾರೆ. ಆದರೆ ಪ್ರಸ್ತುತ ಅವನ್ನೆಲ್ಲಾ ನಾಶಪಡಿಸಿ ನೆಲೆಯನ್ನು ಕೃಷಿ ಭೂಮಿಯಾಗಿ ಬಳಸಲಾಗುತ್ತಿದೆ. ಆದಾಗ್ಯೂ ಇಡೀ ಪ್ರದೇಶದಲ್ಲಿ ಸಮಾಧಿಯ ಅವಶೇಷಗಳು ಹರಡಿದ್ದು ನೂರಾರು ಸಮಾಧಿಗಳಿದ್ದ ವೆಂಬುದಕ್ಕೆ ಸಾಕ್ಷಿಯಾಗಿವೆ.

ಈ ಅವಶೇಷಗಳ ಜೊತೆಗೆ (ಪೂರ್ವಬದಿ) ನೈಸರ್ಗಿಕ ಹಾಸಲು ಬಂಡೆಯೊಂದರ ಮೇಲೆ ಅಸಮಭುಜ ಶಿಲಾ ಕೋಣೆ (ಡಾಲ್ಮೆನ್) (Irregular Polygonal Chamber) ಯೊಂದು ಮಾತ್ರ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದೆ. ಸು. ೯ ಮೀ. ಎತ್ತರ ಹಾಗೂ ೭ ಮೀ. ಉದ್ದ, ೭ ಮೀ. ಅಗಲವಾಗಿದ್ದು, ಹಿರೇಬೆಣಕಲ್ ಶಿಲಾಕೋಣೆಯನ್ನು ಹೋಲುತ್ತದೆ. ನಾಲ್ಕುಕಡೆ ನಾಲ್ಕು ದೊಡ್ಡ ದೊಡ್ಡ ಬಂಡೆಗಳನ್ನಿಟ್ಟು ಅವುಗಳ ಮೇಲೆ ವೃತ್ತಾಕಾರದ ಕಲ್ಲು ಚಪ್ಪಡಿಯನ್ನಿಟ್ಟು ಈ ಕೋಣೆಯನ್ನು ನಿರ್ಮಿಸಲಾಗಿದೆ. ಒಂದು ಬದಿಯ ಬಂಡೆಯಲ್ಲಿ ನೆಲಹಂತದಲ್ಲಿ ಅರೆ ವೃತ್ತಾಕಾರದಲ್ಲಿ ಕಂಡಿ ಇದೆ. (Port hole) ಈ ಶಿಲಾ ಕೋಣೆಯ ಬಂಡೆಗಳನ್ನು ಸ್ವಸ್ತಿಕ್ ತಲವಿನ್ಯಾಸದಲ್ಲಿ ನಿಲ್ಲಿಸಲಾಗಿದೆ. ಇದರಿಂದ ಬಂಡೆಗಳು ಒಂದಕ್ಕೊಂದು ಆಧಾರವಾಗಿ ನಿಲ್ಲುವಲ್ಲಿ ಸಹಾಯಕವಾಗಿದೆ. ಹಿರೇಬೆಣಕಲ್‌ನಲ್ಲಿ ಇಂಥ ಶಿಲಾಕೋಣೆಗಳ ಎರಡು ಬದಿಯ ಬಂಡೆಗಳನ್ನು ಕಿತ್ತು ಹಾಕಿದ್ದರೂ ಉಳಿದೆರಡು ಬಂಡೆಗಳ ಮೇಲೆಯೇ ಛಾವಣಿ ಕಲ್ಲು ಹಾಗೇ ನಿಂತಿರುವುದು ಅಚ್ಚರಿದಾಯಕ ಸಂಗತಿ. ಇಲ್ಲಿ ಒಂದು ಬಂಡೆಯ ಮೇಲೆ ಸಣ್ಣ ಸಣ್ಣ ಕುಳಿಗಳನ್ನು ಸಾಲಾಗಿ ಹಾಕಿ ಅರ್ಧಚಂದ್ರಾಕೃತಿಯ ಅಥವಾ ಕಟ್ಟಿಗೆಯ ದೋಣಿ ಆಕಾರದಲ್ಲಿ ಚಿತ್ರವನ್ನು ಬಿಡಿಸಲಾಗಿದೆ. (೧.೪೩ ಮೀ. ಉದ್ದ, ಮಧ್ಯದಲ್ಲಿ ೬ ಸೆಂ.ಮೀ. ದಪ್ಪ) ಈ ರೀತಿಯ ಕುಳಿ ಚಿತ್ರಗಳನ್ನು ಬೃಹತ್ ಶಿಲಾಯುಗದ ಜನರು ರಚಿಸುತ್ತಿದ್ದರು. ಇಂಥ ಕುಳಿಯ ಬೇರೆ ಬೇರೆ ಆಕೃತಿಯ ಚಿತ್ರಗಳನ್ನು ಹಿರೇಬೆಣಕಲ್, ಸಿದ್ದಿಕೇರಿ (ಗಂಗಾವತಿ ತಾಲೂಕು)ಗಳಲ್ಲಿ ಕಾಣಬಹುದು.

ಮೊದಲ ನೆಲೆಯಿಂದ ಪೂರ್ವದಿಕ್ಕಿಗೆ ಸು. ೧ ಕಿ.ಮೀ. ಅಂತರದಲ್ಲಿ (ಶರಣಪ್ಪ ನಾಯಕ ತಿಪ್ಪನಾಳರ ಹೊಲ) ಮತ್ತೊಂದು ಶಿಲಾಸಮಾಧಿ ನೆಲೆ ಇದೆ. ಆದರೆ ಇಲ್ಲಿ ಯಾವ ಸಮಾಧಿಯು ಉಳಿದಿರುವುದಿಲ್ಲ. ಅವುಗಳನ್ನು ಕಿತ್ತುಹಾಕಿ ಆ ಜಾಗದಲ್ಲಿ ಸಾಗುವಳಿ ಮಾಡಲಾಗುತ್ತಿದೆ. ಸಮಾಧಿಯ ಬಂಡೆಗಳನ್ನು ಒಡೆದು ತುಂಡು ಮಾಡಿ ಹೊಲದ ಒಡ್ಡುಗಳಿಗಾಗಿ ಬಳಸಲಾಗಿದೆ. ಇಲ್ಲಿಯ ಬಂಡೆಯೊಂದರ ಮೇಲೆ ಬೆರಳುಗಳಿಲ್ಲದ ಜೋಡಿ ಚಿತ್ರವನ್ನು ಕೊರೆಯಲಾಗಿದೆ. ದೇವರ ಹಾಗೂ ಧಾರ್ಮಿಕ ಪುರುಷರ ಪಾದಗಳ ಪೂಜೆ ಇಂದು ಪ್ರಚಲಿತವಲ್ಲಿದೆ. ಈ ಆಚರಣೆಯ ಮೂಲ ರೂಪವೆಂದು ಬೃಹತ್ ಶಿಲಾಯುಗದ ಈ ಚಿತ್ರವನ್ನು ತರ್ಕಿಸಬಹುದು. ಆ ಕಾಲದಲ್ಲಿ ಕಬ್ಬಿಣದ ಶೋಧವಾದ್ದರಿಂದ ಅದರ ಸಹಾಯ ದಿಂದ ಉಳಿಗಳನ್ನು ಮಾಡಿಕೊಂಡು ಬಂಡೆಗಳನ್ನು ಕತ್ತರಿಸುವ, ಚಿತ್ರಗಳನ್ನು ಕೊರೆಯುವ ಪದ್ಧತಿ ಪ್ರಾರಂಭ ವಾಯ್ತು. ಇಂಥ ಒಂದು ಪ್ರಯತ್ನವೇ ಕೊರೆದ ಈ ಪಾದದ ಚಿತ್ರವೆನ್ನಬಹುದು. ಇಲ್ಲಿ ಬೆರಳುಗಳಂತಹ ಸೂಕ್ಷ್ಮ ಅಂಗಗಳ ರಚನೆ ಸಾಧ್ಯವಾಗಿಲ್ಲ. ಈ ಕಾಲದ ಬಂಡೆಯಲ್ಲಿ ಕೊರೆದ ಎತ್ತು, ಕಲ್ಗೊಂಬೆಗಳಿಗೂ ಕಣ್ಣು, ಕಿವಿ, ಬೆರಳುಗಳಂತಹ

ಸೂಕ್ಷ್ಮ ಭಾಗಗಳಿರುವುದಿಲ್ಲ. ಹಾಗೂ ಇಲ್ಲಿಯ ಬಂಡೆಯೊಂದರ ಮೇಲೆ ಕೆಂಪುವರ್ಣದ ಹತ್ತು ಹಸ್ತ ಮುದ್ರಿಕೆಯ ಚಿತ್ರಗಳಿವೆ. ಇಲ್ಲಿಯ ಸಮಾಧಿಗಳು ಸಂಪೂರ್ಣ ನಾಶವಾಗಿರುವುದರಿಂದ ಅವುಗಳ ರಚನೆ, ಸ್ವರೂಪ ಹಾಗೂ ಮಹತ್ವದ ಬಗ್ಗೆ ತಿಳಿಯಲಾಗುವುದಿಲ್ಲ.

ಎರಡನೆಯ ನೆಲೆಯಿಂದ ನೈರುತ್ಯಕ್ಕೆ ಸು. ೧ ಕಿ.ಮೀ. ದೂರದಲ್ಲಿ ಮತ್ತೊಂದು ನೆಲೆ ಇದ್ದು, ಅಲ್ಲೂ ಕೂಡಾ ಅನೇಕ ಶಿಲಾ ಸಮಾಧಿಗಳಿದ್ದವು. ಅವುಗಳಲ್ಲಿ ಬಹಳಷ್ಟು ಈಗ ನಾಶವಾಗಿವೆ. ಉಳಿದಿರುವ ಅವಶೇಷಗಳಿಂದ ಇವು ೬ ಸಮಭುಜ ಶಿಲಾಕೋಣೆಗಳು (Regular Polygonal Chamber) ಕಂಡಿರಹಿತ ಅಥವಾ ಸಹಿತ ಶಿಲಾಕೋಣೆಗಳು (Dolmen without & with porthole) ಎಂದು ಮುಂತಾದ ಸಮಾಧಿ ಪ್ರಕಾರಗಳಿರಬಹುದೆಂದು ತರ್ಕಿಸಬಹುದು. ಈ ಸಮಾಧಿಗಳು ಹಿರೇಬೆಣಕಲ್ ಸಮಾಧಿಯಂತೆ ಇವೆ.

**ಕಲ್ಗೊಂಬೆ:** ಇಲ್ಲಿಯ ಒಂದು ಶಿಲಾಸಮಾಧಿಯ ಮುಂಭಾಗದಲ್ಲಿ ಒಂದು ವಿಶಿಷ್ಟಾಕಾರದ ಕಲ್ಗೊಂಬೆ (Anthoropomarphic) ಹೀಗೆ ಸಮಾಧಿಗಳ ಮುಂಬದಿಯಲ್ಲಿ ಅಥವಾ ಸ್ವತಂತ್ರವಾಗಿ (ಪ್ರಾಯಶಃ ಹೂಳಿದ ಶವಕುಣಿಗಳ ಮೇಲೆ) ಕಲ್ಗೊಂಬೆಗಳನ್ನು ನಿಲ್ಲಿಸುವ ಪದ್ಧತಿ ಅಪರೂಪವಾಗಿ ಬೃಹತ್ ಶಿಲಾಯುಗದಲ್ಲಿತ್ತು. ಮೆಟ್ಟೂರು, ಕರ್ನಾಟಕದ ಕುಮತಿ, ಹುಲಿಕುಂಟೆ ಮತ್ತು ಹಿರೇಬೆಣಕಲ್‌ಗಳಲ್ಲಿ ಈಗಾಗಲೇ ಇಂಥ ಕಲ್ಗೊಂಬೆಗಳು ವಿವಿಧ ಆಕಾರದಲ್ಲಿ ದೊರೆತಿವೆ. ಮನುಷ್ಯನ ನೆರಳಿನಂತೆ ಏಕಶಿಲೆಯ ಬಂಡೆಯಲ್ಲಿ (ಚಪ್ಪಡಿ) ಗೊಂಬೆಯನ್ನು ನಿರ್ಮಿಸಲಾಗಿರುತ್ತದೆ. ಇವುಗಳು ತಲೆ, ಕತ್ತು, ಮುಂಡ, ಬುಜ ಸಂಯುಕ್ತವಾಗಿರುವ ಕಾಲಿನ ಭಾಗವನ್ನು ಹೊಂದಿರುತ್ತದೆ. ಮನುಷ್ಯನು ಎರಡು ಕೈಗಳನ್ನು ಭುಜದ ಸಮಾನಾಂತರದಲ್ಲಿ ಅಗಲಿಸಿ ಇಲ್ಲವೇ ಭುಜದಿಂದ ಸ್ವಲ್ಪ ಕೆಳಕ್ಕೆ ಇಳಿಜಾರಾಗಿಸಿ ಮುಂಗೈಗಳನ್ನು ಒಳಭಾಗಿಸಿದಂತೆ, ಅಥವಾ ಕೈಗಳು ಎರಡೂ ಬದಿಯಲ್ಲಿ ಪಕ್ಷಿಯ ರೆಕ್ಕೆಗಳಂತೆ (ಕುಮತಿ) ಇರುತ್ತದೆ. ಹೀಗೆ ತಲೆ, ಕತ್ತು, ಕೈಗಳು ಮುಂಡಭಾಗ, ಕಾಲಿನ ಭಾಗಗಳನ್ನು ಒಳಗೊಂಡಂತೆ ಎಲ್ಲವನ್ನು ಒಂದೇ ಶಿಲೆಯಲ್ಲಿ ನಿರ್ಮಿಸಲಾಗಿರುತ್ತದೆ. ಆದರೆ ಆಗೋಲಿಯ ಈ ಕಲ್ಗೊಂಬೆ ಉಳಿದವುಗಳಿಗಿಂತ ಭಿನ್ನವಾಗಿದೆ. ಇದಕ್ಕೆ ರುಂಡ ಮತ್ತು ಕತ್ತಿನ ಭಾಗದಲ್ಲಿ ಎರಡೂ ಕೈಗಳು ಬದಿಗೆ ಅಗಲಿಸಿವೆ. ಮುಂಡಭಾಗ ಕಾಲಿನ ಭಾಗ ಸಹಜವಾಗಿದ್ದು, ತಳಭಾಗದಲ್ಲಿ ಪಾದಗಳ ಸಾಂಕೇತಿಕ ಭಾಗವಿದೆ. ಈ ಗೊಂಬೆಯ ಇನ್ನೊಂದು ವಿಶೇಷವೆಂದರೆ ಇಡೀ ರಚನೆಯನ್ನು ಎರಡು ಪ್ರತ್ಯೇಕ ಬಂಡೆಗಳಲ್ಲಿ ನಿರ್ಮಿಸಿ ಅವೆರಡನ್ನು ಜೋಡಿಸಿ ನಿಲ್ಲಿಸಿರುವುದು ಒಂದು ಕೈ ಹಾಗೂ ಮುಂಡ, ಕಾಲುಗಳ ಅರ್ಧಭಾಗ, ಒಂದು ಶಿಲೆಯಲ್ಲಿದ್ದರೆ ಇದೇ ರೀತಿ ಇನ್ನೊಂದು ಶಿಲೆಯಲ್ಲಿವೆ. ಪ್ರತಿಯೊಂದು ಭಾಗಗಳು ೧.೮೬ ಮೀ. ಎತ್ತರ, ಮುಂಡ ೦.೭೪ ಮೀ. ಅಗಲ, ಪಾದಗಳು ೧.೩೫ ಮೀ. ಉದ್ದ, ಕೈಗಳು ೦.೩೩ ಮೀ. ಉದ್ದ ಹಾಗೂ ೦.೮೦ ಮೀ. ಅಗಲ (ರಟ್ಟೆಯ ಭಾಗದಲ್ಲಿ) ವಾಗಿವೆ. ಕಲ್ಗೊಂಬೆಯು ಕೆಂಪು ಕಣಶಿಲೆಯಲ್ಲಿದೆ. ಎರಡು ಜೋಡಿ ಶಿಲೆಗಳಲ್ಲಿ ಸದ್ಯ ಒಂದು ನೆಲಕ್ಕೆ ಉರುಳಿಬಿದ್ದಿದೆ. ಒಟ್ಟಿನಲ್ಲಿ ಇದೊಂದು ವಿಶಿಷ್ಟ ರೀತಿಯ ಕಲ್ಗೊಂಬೆ ಎಂದು ಹೇಳಬಹುದು.

ಗಡ್ಡಿ : ಗಡ್ಡಿ ಗ್ರಾಮವು ಮತ್ತು ನೈರತುಯ ದಿಕ್ಕಿನಲ್ಲಿ ಬೆಟ್ಟ ಪ್ರದೇಶವಿದೆ. ಗ್ರಾಮದಿಂದ ೨ ಕಿ.ಮೀ. ನೆಲಹಂತದ ಬಯಲು ಪ್ರದೇಶದಲ್ಲಿ ಶಿಲಸಮಾಧಿ ನೆಲೆ ಇದೆ. ಇಲ್ಲಿ ಸುಮಾರು ೧೦ಕ್ಕಿಂತ ಅಧಿಕ ಕಂಡಿಕೋಣೆ ಮಾದಿರಯ ಸಮಾಧಿಗಳಿದ್ದವು. ಆದರೆ ಅವೆಲ್ಲ ಈಗ ನಾಶವಾಗಿದ್ದು, ಸಮಾಧಿಯ ಶಿಲಾ ಅವಶೇಷಗಳು ಸುತ್ತೆಲ್ಲ ಹರಡಿವೆ. ಒಟ್ಟಿನಲ್ಲಿ ಈ ಸಮಾಧಿಗಳ ಬಗ್ಗೆಗೆ ಹೆಚ್ಚಿಗೆ ತಿಳಿದುಬರುವುದಿಲ್ಲ. ಇದೇ ಸ್ಥಳದಿಂದ ೨ ಕಿ.ಮೀ. ದೂರದಲ್ಲಿ ಇನ್ನೊಂದು ನೆಲೆ ಇದೆ. ಅದಕ್ಕೆ ಮೊರೇರಗುಡ್ಡ, ಮೊರೇರ ಮನೆ ಎಂದು ಸ್ಥಳಿಕರು ಕರೆಯುತ್ತಾರೆ. ಇಲ್ಲೂ ಕೂಡಾ ಹಲವಾರು ಸಮಾಧಿಗಳಿದ್ದ ಬಗ್ಗೆ ಅವಶೇಷಗಳು ಸೂಚಿಸುತ್ತವೆ. ಸದ್ಯ ಒಂದು ಕಂಡಿರಹಿತ ಶಿಲಾಕೋಣೆ (ಕಲ್ಮನೆ) ಮಾತ್ರ ಭಾಗಶಃ ಉಳಿದಿದೆ. ಈ ಶಿಲಾ ಕೋಣೆಯ ಸುಮಾರು ೭ ಫೀಟ್ ಎತ್ತರವಾಗಿದೆ. ನಾಲ್ಕು ಬದಿಯ ಗೋಡೆ ಕಲುಗಳಲ್ಲಿ ಒಂದುಬದಿಯ ಕಲ್ಲನ್ನು ಕಿತ್ತುಹಾಕಲಾಗಿದೆ. ಉಳಿದ ಮೂರುಬದಿಯ ಕಲ್ಲುಗಳ ಮೇಲೆ ವೃತ್ತಾಕಾರದ ಕಲ್ಲು ಚಪ್ಪಡಿ ಇದೆ. ಇದೂ ಕೂಡಾ ಅರ್ಧ ಒಡೆದಿದ್ದು ಅರೆ ವೃತ್ತಾಕಾರದಲ್ಲಿ ಉಳಿದಿದೆ.

**ಕಲ್ಲಪ್ಪನ ಕ್ಯಾಂಪ್ :** ಗಂಗಾವತಿಯಿಂದ ನೈರುತ್ಯಕ್ಕೆ ಸು. ೬ ಕಿ.ಮೀ. ದೂರದಲ್ಲಿ ಈ ಪುಟ್ಟ ಗ್ರಾಮವಿದೆ. ಗ್ರಾಮಕ್ಕೆ ಹೊಂದಿಕೊಂಡಂತೆ ಪಶ್ಚಿಮ ದಿಕ್ಕಿನಲ್ಲಿ ಸಮಾಧಿನೆಲೆ ಇದೆ. ಸದ್ಯ ಇಲ್ಲಿಯ ಸಮಾಧಿಗಳನ್ನು ಸಂಪೂರ್ಣ ನಾಶಗೊಳಿಸಿದ್ದು, ಆ ಜಾಗದಲ್ಲಿ ಉಳುಮೆ ಮಾಡಲಾಗುತ್ತಿದೆ. ಈ ನೆಲೆಯಲ್ಲಿ ಕೆಂಪು-ಕಪ್ಪು ಬಣ್ಣದ ಮಡಕೆಯ ಅವಶೇಷಗಳು ದೊರೆಯುತ್ತವೆ.

**ಕಲ್ಗೊಂಬೆ :** ಇಲ್ಲಿ ಒಂದು ಕಲ್ಗೊಂಬೆಯ ಅವಶೇಷ ಕಂಡುಬಂದಿದೆ. ಇಲ್ಲಿ ಇತರ ಹಲವಾರು ಕಲ್ಗೊಂಬೆಗಳಿದ್ದು ಅವನ್ನೆಲ್ಲಾ ಒಡೆದು ಹಾಕಲಾಗಿದೆ ಎಂದು ಸ್ಥಳೀಯರು ಹೇಳುತ್ತಾರೆ. ಭಾಗಶಃ ಉಳಿದಿರುವ ಒಂದು ಕಲ್ಗೊಂಬೆಯನ್ನು ಬನ್ನಿಮರದ ಕೆಳಗಿಟ್ಟು ಪೂಜಿಸುತ್ತಾರೆ. ಎರಡು ಕೈಗಳು ಹಾಗೂ ಮುಂಡದಲ್ಲಿ ಕಟಿಯ ಕೆಳಭಾಗ ತುಂಡಾಗಿರುವ ಈ ಕಲ್ಗೊಂಬೆಯಲ್ಲಿ ತಲೆ, ಕತ್ತು, ಎರಡು ಭುಜಗಳು ಎದೆಯಿಂದ ಕಟಿಯವರೆಗೆ ಮಾತ್ರ ಉಳಿದಿದೆ. ಉಳಿದ ಭಾಗದ





ಕಲ್ಗೊಂಬೆಯ ಎತ್ತರ ೧ ಮೀ. ಇದ್ದರೆ ಕಟಿಯ ಭಾಗ ೦.೩೯ ಮೀ. ಅಗಲವಾಗಿದೆ. ಅರೆವೃತ್ತಾಕಾರದ ತಲೆ (೦.೨೫ ಮೀ. ಎತ್ತರ, ೦.೩೧ ಮೀ. ಅಗಲ) ಕತ್ತು ಭುಜಗಳಿವೆ. ಎರಡೂ ಕೈಗಳು ಭುಜದಲ್ಲಿ ತುಂಡಾಗಿದೆ. ಒಂದು ಕೈಯ ತುಂಡು ನೆಲದಲ್ಲಿ ಬಿದ್ದಿದೆ. ಅದನ್ನು ಭುಜಕ್ಕೆ ಜೋಡಿಸಿದರೆ ಎರಡೂ ಕೈಗಳನ್ನು ಭುಜದಿಂದ ವಾರೆಯಾಗಿ ಕೆಳಕ್ಕೆ ಚಾಚಿದಂತೆ ಇವೆ. ಇದು ಹಿರೇಬೆಣಕಲ್ಲಿನ ಕಲ್ಗೊಂಬೆಯನ್ನು ಹೋಲುತ್ತದೆ ಆದರೆ ಅಷ್ಟು ದೊಡ್ಡ ಪ್ರಮಾಣದಲ್ಲಿ ಇಲ್ಲ.

ಸಮಾಧಿ ನೆಲೆಯಲ್ಲಿ ರೈತರು ಉಳುಮೆ ಮಾಡುವಾಗ ಅಸ್ತಿ ಅವಶೇಷಗಳೊಡನೆ ಮಡಕೆಗಳು ಕಂಡುಬಂದ ಬಗ್ಗೆ ತಿಳಿಸುತ್ತಾರೆ. ಇದರಿಂದ ಇಲ್ಲಿದ್ದ ಬೃಹತ್ ಶಿಲಾಯುಗ ಜನರು ಮೊದಲು ಶವವನ್ನು ದಹಿಸಿ ಇಲ್ಲವೇ ಹೂಳಿ ಅದರ ಅಸ್ತಿ ಅವಶೇಷಗಳನ್ನು ಒಂದು ಪಾತ್ರೆಯಲ್ಲಿಟ್ಟು (ಮೃತ್ಪಾತ್ರೆ) ಅದನ್ನು ನೆಲದಲ್ಲಿ ಹೂಳುತ್ತಿದ್ದರು. ಮತ್ತು ಆ ಸಮಾಧಿಯ ಮೇಲೆ ಸತ್ತ ಮನುಷ್ಯನ ಸಂಕೇತವಾಗಿ ಕಲ್ಲಿನ ಗೊಂಬೆಗಳನ್ನು ನಿರ್ಮಿಸುತ್ತಿದ್ದರೆಂದು ಹೇಳಬಹುದಾಗಿದೆ.

**ಎಮ್ಮಿಗುಡ್ಡ** : ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಗಂಗಾವತಿಯಿಂದ ೧೫ ಕಿ.ಮೀ. ದೂರದಲ್ಲಿ ಎಮ್ಮಿಗುಡ್ಡವಿದೆ. ಅದಕ್ಕೆ ಎದುರಿನ ಬೆಟ್ಟದ ಮೇಲೆ (ಹೆಚ್.ಜಿ. ರಾಮುಲು ನಗರದ ಎದುರಿಗೆ) ಬೃಹತ್ ಶಿಲಾಯುಗದ ಸಮಾಧಿಗಳಿವೆ. ಬೆಟ್ಟದ ಮೇಲಿನ ಬಯಲಿನಲ್ಲಿ ಸು. ೪೦ರಷ್ಟು ವಿವಿಧ ಅಳತೆಯ ಸಮಾಧಿಗಳಿವೆ. ಇವುಗಳಲ್ಲಿ ಮೂರು ಪ್ರಕಾರಗಳನ್ನು ಗುರುತಿಸಬಹುದು. ಅವು ಆಯತಾಕಾರದ ಶವಗುಣಿಗಳು, ಶವವನ್ನು ಹೂಳಿ ಸುತ್ತಲೂ ಕಲ್ಲಿನ ಫಲಕಗಳಿಂದ ಸ್ವಸ್ತಿಕ್ ವಿನ್ಯಾಸದಲ್ಲಿ ಸಮಾಧಿಗಳನ್ನು ನಿರ್ಮಿಸಲಾಗಿರುತ್ತದೆ. ಎರಡನೆಯದು ಕಂಡಿ ಸಹಿತ ಶಿಲಾಸಮಾಧಿಗಳು (Dolmen with porthole) ಇವು ೫ ಫೀಟ್ ಎತ್ತರವಿರುತ್ತವೆ. ಮೂರನೆಯದಾಗಿ ಇದೇ ರೀತಿಯ ಕಂಡಿಸಹಿತ ಶಿಲಾಸಮಾಧಿಗಳು ಆದರೆ ಇವು ೭ ಫೀಟ್ ಎತ್ತರದ (Stone Chambers) ವಾಗಿವೆ. ಈ ಮೂರು ಪ್ರಕಾರದ ಸಮಾಧಿಗಳು ಹಿರೇಬೆಣಕಲ್‌ನಲ್ಲಿವೆ. ಉಳಿದಂತೆ ಹೆಚ್ಚಿನ ಸಮಾಧಿಗಳು ನಾಶವಾಗಿವೆ.









ಹಿರೇಬೆಣಕಲ್ಲಿಗೆ ಈ ನೆಲೆ ಸಮೀಪದಲ್ಲಿರುವುದರಿಂದ ಅಲ್ಲಿನ ಜನರಿಗೂ ಮತ್ತು ಇವರಿಗೆ ಸಂಪರ್ಕ ಅಥವಾ ಸಂಬಂಧವಿದ್ದಂತೆ ತೋರುತ್ತದೆ. ಹಾಗಾಗಿ ಬಹುಮಟ್ಟಿಗೆ ಇಲ್ಲಿಯ ಸಮಾಧಿಗಳು ಹಿರೇಬೆಣಕಲ್ ಸಮಾಧಿಗಳನ್ನು ಹೋಲುತ್ತವೆ.

**ಹಳೇ ಬಸವಾಪಟ್ಟಣ:** ಹಳೇ ಬಸವಾಪಟ್ಟಣದ ಹಿರೇಕಣಿವೆ ದೇವಾಲಯದ ಪೂರ್ವಬದಿಯಲ್ಲಿ ಹಳೇಮಟ್ಟಿ ಗುಡ್ಡವಿದೆ. ಈ ಗುಡ್ಡದ ಕೆಳಭಾಗ ಹಾಗೂ ಮೇಲ್ಭಾಗದಲ್ಲಿ ವಿವಿಧ ರೀತಿಯ ಶಿಲಾಸಮಾಧಿಗಳಿವೆ. ಕೆಳಭಾಗದಲ್ಲಿ ಶಿಥಿಲಗೊಂಡಿರುವ ಶಿಲಾವೃತ್ತ ಸಮಾಧಿಗಳು, ಕಲ್ಗುಪ್ಪೆಗಳು ಮತ್ತು ನೆಲಸಮಾಧಿಗಳಿವೆ. ಇವುಗಳಲ್ಲಿ ಆಯತಾಕಾರದಲ್ಲಿರುವ ನೆಲಸಮಾಧಿಗಳ ರಚನೆ ವಿಶೇಷವಾಗಿದೆ. ೬ ಫೀಟ್ ಉದ್ದ ಹಾಗೂ ೧.೨೨ ಫೀಟ್ ಅಗಲವಾಗಿವೆ. ಇಷ್ಟು ಚಿಕ್ಕ ಅಗಲದ ಸಮಾಧಿಯಲ್ಲಿ ಶವಗಳನ್ನು ಹೇಗೆ ಹೂಳುತ್ತಿದ್ದರೋ ಪ್ರಾಯಶಃ ಶವವನ್ನು ಅಂಗಾತದ ಬದಲಿಗೆ ಬದಿಗೆ ಮಾಡಿ ಹೂಳುತ್ತಿರಬೇಕು. ಗಂಗಾವತಿ ಪರಿಸರದಲ್ಲಿ ಈ ರೀತಿಯ ಸಮಾಧಿಗಳು ಇಲ್ಲಿ ಮೊದಲ ಬಾರಿಗೆ ಕಾಣಿಸಿಕೊಳ್ಳುತ್ತವೆ.

ಈ ಬೆಟ್ಟಕ್ಕೆ ಹೊಂದಿಕೊಂಡಿರುವ ಹಳೇಮಟ್ಟಿ ಗುಡ್ಡದ ಮೇಲ್ತುದಿಯಲ್ಲಿ ಸುಮಾರು ೩೦ರಷ್ಟು ಶಿಲಾಸಮಾಧಿಗಳಿವೆ. ಆದರೆ ಬಹುಮಟ್ಟಿಗೆ ಅವೆಲ್ಲಾ ನಾಶವಾಗಿದ್ದು, ಅವಶೇಷಗಳು ಮಾತ್ರ ಉಳಿದಿವೆ. ಇವೆಲ್ಲ ಕಂಡಿಸಹಿತ ಶಿಲಾವೃತ್ತ ಸಮಾಧಿಗಳು (Portholed dolmenoid cist circles) ಮಧ್ಯಮ ಗಾತ್ರದ ಕಲ್ಲುಗುಂಡುಗಳನ್ನು ಒಂದು ಕಡೆ ಪ್ರವೇಶಕ್ಕೆ ದ್ವಾರವನ್ನೂ ಬಿಟ್ಟು ವೃತ್ತಾಕಾರದಲ್ಲಿ ಜೋಡಿಸಲಾಗುತ್ತಿತ್ತು. ಈ ಶಿಲಾವೃತ್ತವನ್ನು ಮುಚ್ಚುವ ಹಾಗೆ ಮೇಲೆ ವೃತ್ತಾಕಾರದ ದೊಡ್ಡ ಕಲ್ಲು ಚಪ್ಪಡಿಗಳನ್ನು ಇರಿಸಲಾಗುತ್ತಿತ್ತು. ಬಿಟ್ಟಿರುವ ಹಾದಿಯ ಮೂಲಕ ಇದರಲ್ಲಿ ಶವವನ್ನು ಇರಿಸುತ್ತಿದ್ದರು. ಅದರ ಮಾಂಸವನ್ನು ಪ್ರಾಣಿ ಪಕ್ಷಿಗಳು ತಿಂದ ಮೇಲೆ ಉಳಿದ ಅಸ್ತಿ ಅವಶೇಷಗಳನ್ನು ಸಂಗ್ರಹಿಸಿ ಅವುಗಳನ್ನು ದೊಡ್ಡ ಮಡಕೆಗಳಲ್ಲಿಟ್ಟು ಅವುಗಳ ಮೇಲೆ ಶಿಲಾಕೋಣೆ ಸಮಾಧಿಗಳನ್ನು ನಿರ್ಮಿಸುತ್ತಿದ್ದರೆಂಬ ಅಭಿಪ್ರಾಯವಿದೆ. ಇಲ್ಲಿಯ ಸಮಾಧಿಗಳಲ್ಲಿ ಎರಡು ನೈಸರ್ಗಿಕ ಗುಂಡುಗಳ ಮಧ್ಯದ ಅಂತರದಲ್ಲಿ ನಿರ್ಮಿಸಿರುವ ಒಂದು ಸಮಾಧಿ ಗಮನ ಸೆಳೆಯುತ್ತದೆ. ಸಮಾಧಿನೆಲೆಯ ಪೂರ್ವಕ್ಕೆ ಒಂದು ವಿಶಾಲವಾದ ನೈಸರ್ಗಿಕ ಕೆರೆ ಇದೆ.

**ಮಲ್ಲಾಪುರ :** ಗಂಗಾವತಿಯಿಂದ ದಕ್ಷಿಣಕ್ಕೆ ಮಲ್ಲಾಪುರ ಗ್ರಾಮವಿದ್ದು, ೧೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಿಂದ ವಾಯುವ್ಯಕ್ಕೆ ೧.೫ ಕಿ.ಮೀ. ಅಂತರದಲ್ಲಿ 'ಸಣ್ಣ ಮೊರಿಯರ ತಟ್ಟಿ' ಎಂದು ಕರೆಯುವ ನೆಲೆಯನ್ನು ಡಾ. ಅ. ಸುಂದರ ಅವರು ಈಗಾಗಲೇ ಗುರುತಿಸಿ ಅಧ್ಯಯನ ಮಾಡಿದ್ದಾರೆ.[೬]

ಇದೇ ಪರಿಸರದ ಮದ್ದಿನಮನೆ ಗುಡ್ಡದಲ್ಲಿ ಸುಮಾರು ೩೦ಕ್ಕೂ ಅಧಿಕ ಶಿಲಾಸಮಾಧಿಯ ಅವಶೇಷಗಳಿವೆ. ಇವೆಲ್ಲಾ ನೆಲದಡಿಯ ಆಯತಾಕಾರದ ಶವಗುಣಿಗಳು ಮತ್ತು ಕಂಡಿಕೋಣೆ ಮಾದರಿಯ ಸಮಾಧಿಗಳು ಆದರೆ ಈ ಸಮಾಧಿಗಳನ್ನು ಇದೀಗ ನಾಶಗೊಳಿಸಲಾಗಿದೆ. ಈ ನೆಲೆಯಲ್ಲಿ ಕಪ್ಪು-ಕೆಂಪು ಮಡಕೆ ಚೂರುಗಳು ಅಭ್ರಕಮುಕ್ತ ಮಣ್ಪಾತ್ರೆಗಳು ದೊರೆಯುತ್ತವೆ.

ಇಲ್ಲಿಗೆ ಸಮೀಪದ ಖಾನಸಾಬ ಗವಿಯಲ್ಲಿ ಕಿತ್ತಲಿ ಆಕಾರದ ಕಪ್ಪು ಬಣ್ಣದ ಮಡಕೆಯೊಂದು ದೊರೆತಿದೆ.

**ಚಿಕ್ಕಬೆಣಕಲ್ :** ಚಿಕ್ಕಬೆಣಕಲ್ ಗ್ರಾಮದ ಮಳೆಯಮ್ಮನ ಊಟಿ ಎಂಬ ಸ್ಥಳದಲ್ಲಿ ಕೂಡ ಹಲವಾರು ಶಿಲಾಸಮಾಧಿಗಳಿವೆ. ಅವು ಕಂಡಿಕೋಣೆ ಮಾದರಿಯ ಸಮಾಧಿಗಳು. ಆದರೆ ಇವು ಬಹುಮಟ್ಟಿಗೆ ನಾಶವಾಗಿದ್ದು ಅವಶೇಷಗಳು ಮಾತ್ರ ಉಳಿದಿವೆ. ಇಲ್ಲಿಯ ಕಲ್ಲಾಸರೆಯೊಂದರಲ್ಲಿ ಬೃಹತ್ ಗಾತ್ರದ ಕಾಡುಕೋಣದ ಚಿತ್ರಗಳಿವೆ.

**ಸಮಾರೋಪ :** ಪ್ರಾಗಿತಿಹಾಸಕಾಲದ ಸಂಸ್ಕೃತಿಗಳಲ್ಲಿ ಶಿಲಾ-ತಾಮ್ರ ಯುಗಗಳ ನಂತರ ಕಬ್ಬಿಣಯುಗ ಕಾಣಿಸಿಕೊಳ್ಳುತ್ತದೆ. ಜಗತ್ತಿನ ಬೇರೆ ಬೇರೆ ಪ್ರದೇಶಗಳಲ್ಲಿ ಈ

ಸಂಸ್ಕೃತಿ ಕಂಡುಬಂದಿದೆ. ಆದರೆ ದಕ್ಷಿಣ ಭಾರತದಲ್ಲಿ ಕಬ್ಬಿಣ ಯುಗವು ಬೃಹತ್ ಶಿಲಾ ಸಂಸ್ಕೃತಿಯೊಂದಿಗೆ ಸಂಯೋಜಿತ ಗೊಂಡು ಬೆಳೆದುಬಂದಿತು. ಹಾಗಾಗಿ ದಕ್ಷಿಣ ಭಾರತದ ಕಬ್ಬಿಣ ಯುಗ ಸಂಸ್ಕೃತಿಯ ಕಾಲದಲ್ಲಿ ಬೃಹದಾಕಾರದ ಶಿಲಾಗೋರಿಗಳು ಅಪಾರ ಸಂಖ್ಯೆಯಲ್ಲಿ ನಿರ್ಮಾಣವಾಗಿರುವುದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಗೋರಿ ಸಂಸ್ಕೃತಿ ಅಥವಾ ಬೃಹತ್ ಶಿಲಾಸಮಾಧಿ ಸಂಸ್ಕೃತಿ (ಕ್ರಿ.ಪೂ. ೧೨೦೦–೨೦೦) ಎಂದು ಕರೆಯಲ್ಪಟ್ಟಿದೆ. ಇದು ಇಲ್ಲಿಯ ಕರ್ನಾಟಕ, ಕೇರಳ, ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ ವ್ಯಾಪಕವಾಗಿ ಪ್ರಸರಣದಲ್ಲಿತ್ತು. ದಕ್ಷಿಣ ಭಾರತದಲ್ಲಿ ಕಬ್ಬಿಣಲೋಹದ ಆವಿಷ್ಕಾರವಾಗುತ್ತಿದಂತೆ ಸಂಘಟಿತ ಸಮಾಜ ರೂಪುಗೊಂಡು ಅನೇಕ ಪ್ರದೇಶಗಳಲ್ಲಿ ನೆಲೆಯೂರಿ ಬೃಹತ್ ಸಂಸ್ಕೃತಿಯನ್ನು ಬೆಳೆಸಿದರು ಎಂದು ವಿಸ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪುನರ್‌ಜನ್ಮದ ಬಗ್ಗೆ ನಂಬಿಕೆ ಹೊಂದಿದ್ದ ಸಮಾಜ ಇದು ಅದಕ್ಕಾಗಿ ಮರಣ ಹೊಂದಿದವರ ಮುಂದಿನ ಜನ್ಮಕ್ಕೆ ಉಪಯೋಗವಾಗಲಿ ಎಂಬ ಉದ್ದೇಶದಿಂದ ವಿವಿಧ ರೀತಿಯ ಸಮಾಧಿಗಳ ನಿರ್ಮಾಣ, ಅವುಗಳಲ್ಲಿ ಮಣ್ಣಿನ ಪಾತ್ರೆಗಳನ್ನು, ಆಂಯುಧೋಪ ಕರಣಗಳನ್ನು ಇಡುವ ಆಚರಣೆಗಳು ಇವರಲ್ಲಿ ಪ್ರಚಲಿತ ವಿದ್ದೆಂಬುವದಕ್ಕೆ ಸಮಾಧಿಗಳ ಉತ್ಖನನಗಳು ವಿಷದ ಪಡಿಸಿವ.[೭]

ಈ ಸಂಸ್ಕೃತಿಯ ಜನರ ವೈಶಿಷ್ಟ್ಯವೆಂದರೆ ಸತ್ತವರ ಸಂಸ್ಕಾರ ಕ್ರಮ ಸತ್ತವರಿಗಾಗಿ ಇವರು ಆಶ್ಚರ್ಯಕರವಾದ ರೀತಿಯಲ್ಲಿ ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದರು. ಇವರ ವಸತಿ ಪ್ರದೇಶಕ್ಕೆ ಸಮೀಪದಲ್ಲಿ ಕಂಡುಬರುವ ಸಮಾಧಿ ನೆಲೆಗಳಲ್ಲಿ ನೂರಾರು ವಿವಿಧ ರೀತಿಯ ಸಮಾಧಿಗಳಿರುತ್ತವೆ. ಹಾಗಾಗಿ ಈ ಸಮಾಧಿ ನೆಲೆಗಳನ್ನು ಮಾನವ ಇತಿಹಾಸದಲ್ಲಿ ಮೊತ್ತಮೊದಲ ವಿಸ್ಮಯದ ಸ್ಮಶಾನಗಳೆಂದು ಕರೆಯಬಹುದು.

ಇಂತ ವಿಸ್ಮಯದ ಸಂಸ್ಕೃತಿ ಕೊಪ್ಪಳ ಜಿಲ್ಲೆಯಲ್ಲಿ ವ್ಯಾಪಕವಾಗಿ ಪ್ರಕರಣದಲ್ಲಿತ್ತು. ಅದೂ ವಿಶೇಷವಾಗಿ ಗಂಗಾವತಿ ತಾಲೂಕಿನಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿತ್ತೆಂದು ಇಲ್ಲಿ ದೊರೆತ ನೆಲೆಗಳು ಸ್ಪಷ್ಟಿಕರಿಸುತ್ತವೆ. ಇಲ್ಲಿಯ ಹಿರೇಬೆಣಕಲ್ ನೆಲೆ ದಕ್ಷಿಣ ಭಾರತದಲ್ಲಿಯೇ ಒಂದು ಮಹತ್ವದ ನೆಲೆಯಾಗಿದೆ. ಈ ನೆಲೆಯ ಸುತ್ತಮುತ್ತಲೂ ಇನ್ನೂ ಹತ್ತು ಹಲವು ಶಿಲಾಸಮಾಧಿ ನೆಲೆಗಳು ಇವೆ. ಪರಸ್ಪರ ಸಮಾಧಿಗಳ ಸಾಮ್ಯತೆಯ ಹಿನ್ನೆಲೆಯಲ್ಲಿ ಈ ಏಳುಗುಡ್ಡ ಪ್ರದೇಶದಲ್ಲಿ ಬದುಕಿದ್ದ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಮೂಲತಃ ಒಂದೇ ಸಮುದಾಯಕ್ಕೆ ಸೇರಿದವರಾಗಿದ್ದರೆಂಬುದನ್ನು ತರ್ಕಿಸಬಹುದು. ಹಳೇಬಸವಾಪಟ್ಟಣದ ಹಳೇಮಟ್ಟಿ ಬೆಟ್ಟದ ಬುಡದಲ್ಲಿ ಕಂಡುಬಂದಿರುವ ಕೇವಲ ೧.೨೨ ಫೀಟ ಅಗಲದ ನೆಲ ಸಮಾಧಿಗಳು ಈ ಪರಿಸರದಲ್ಲಿ ಮೊದಲ ಬಾರಿಗೆ ಕಾಣಿಸಿಕೊಳ್ಳುತ್ತವೆ. ಹಾಗಾಗಿ ಈ ವಿಭಿನ್ನ ಸಮಾಧಿಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ಅವಶ್ಯ. ಇನ್ನು ಬೃಹತ್ ಶಿಲಾಯುಗದ ಕಲ್ಗೊಂಬೆಗಳು ಈ ವರೆಗೆ ಹಿರೇಬೆಣಕಲ್, ಐಹೊಳೆ, ಹುಲಿಕುಂಟೆಗಳಲ್ಲಿ ತಲಾ ಒಂದೊಂದರಂತೆ ಹಾಗೂ ಕುಮತಿಯಲ್ಲಿ ಐದು ಕಂಡುಬಂದಿವೆ. ಇವುಗಳ ಸಾಲಿಗೆ ಇದೀಗ ಮತ್ತೆರಡು ಕಲ್ಗೊಂಬೆಗಳು ಗಂಗಾವತಿ ತಾಲೂಕಿನಿಂದ ಸೇರ್ಪಡೆಯಾದಂತೆ ಆಯಿತು. ಅದರಲ್ಲೂ ಆಗೋಲಿಯ ಗೊಂಬೆ ವಿಶಿಷ್ಟ ರಚನೆಯಾಗಿದ್ದು, ದಕ್ಷಿಣಭಾರತದ ಕಲ್ಗೊಂಬೆಗಳಲ್ಲಿಯೇ ವಿಭಿನ್ನ, ವಿಶಿಷ್ಟ ಎನಿಸುತ್ತದೆ. ಇದೇ ನೆಲೆಯಲ್ಲಿ ದೊರೆತ ಕೊರೆದ ಬೆರಳುಗಳಿಲ್ಲದ ಪಾದದ ಚಿತ್ರವು ಪ್ರಾಯಶಃ ಧಾರ್ಮಿಕ ವ್ಯಕ್ತಿಗೆ ಸಂಬಂಧಿಸಿರಬೇಕು. ಚಾರಿತ್ರಿಕ ಕಾಲದ ಪಾದಗಳ ಚಿಹ್ನೆಗಳ ಆರಾಧನೆಯ ಮೂಲವನ್ನು ನಾವಿಲ್ಲಿ ಕಾಣಬಹುದಾಗಿದೆ. ಒಟ್ಟಿನಲ್ಲಿ ಪ್ರಸ್ತುತ ಶೋಧನೆ ಹಾಗೂ ಅಧ್ಯಯನದಿಂದ ಕರ್ನಾಟಕದ ಬೃಹತ್ ಶಿಲಾಯುಗ ಸಂಸೃತಿಯ ಬಗ್ಗೆ ಮತ್ತಷ್ಟು ಮಾಹಿತಿಯನ್ನು ತಿಳಿದುಕೊಳ್ಳಲು ಆಸ್ಪದವಾದಂತಾಗಿದೆ.



## ಆಧಾರಸೂಚಿ


೧. ಶರಣಬಸಪ್ಪ ಕೋಲ್ಕಾರ, ೧೯೯೫. "ಗಂಗಾವತಿ ತಾಲೂಕಿನ ಪ್ರಾಗಿತಿಹಾಸ" ಕಾಯಕಸಿರಿ ಸ್ಮರಣ ಸಂಚಿಕೆ, ಗಂಗಾವತಿ.

೨. ಸುಂದರ.ಅ, ೧೯೭೩, "ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು" ಕರ್ನಾಟಕ ಭಾರತಿ ೬–೧, ಧಾರವಾಡ ಹಾಗೂ ಶರಣಬಸಪ್ಪ ಕೋಲ್ಕಾರ, ೨೦೧೦. ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ, ಗುಲ್ಬರ್ಗಾ.

೩. ಅಭಿಶಂಕರ.ಕೆ(ಸಂ), ೧೯೭೦, ಕರ್ನಾಟಕ ಸ್ಟೇಟ್ ಗ್ಯಾಜಿಟಿಯರ್, ರಾಯಚೂರು ಡಿಸ್ಟ್ರಿಕ್ಟ್, ಬೆಂಗಳೂರು.

೪. ಶರಣಬಸಪ್ಪ ಕೋಲ್ಕಾರ, ೨೦೧೦, ಪೂರ್ವೋಕ್ತ.

೫. ಸುಂದರ.ಅ, ೧೯೮೩, ದಿ ಅರ್ಲಿ ಚೇಂಬರ್ ಟೂಮ್ಸ್ ಆಫ್ ಸೌತ್ ಇಂಡಿಯಾ, ಯೂನಿವರ್ಸಿಟಿ ಪಬ್ಲಿಷರ್ಸ್, ದೆಹಲಿ.

೬ ಅದೇ.

೭. ರಂಗರಾಜು.ನಾ.ಶಿ, ೨೦೦೭, "ಕರ್ನಾಟಕದ ಬೃಹತ್ ಶಿಲಾಸಂಸ್ಕೃತಿ ಒಂದು ಮರುಚಿಂತನೆ" ಪು. ೧೩ರಿಂದ ೨೧, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ, ಕನ್ನಡ ವಿವಿ ಹಂಪಿ ಹಾಗೂ ಅರುಣಿ ಎಸ್.ಕೆ. ಮತ್ತು ರಾಜೇಶ್ ಹಂ.ಗು. (ಸಂ) ೨೦೧೨, ಇತಿಹಾಸ ದರ್ಶನ, ಬೆಂಗಳೂರು.



# ಮಾಗಡಿ ತಾಲ್ಲೂಕು ಅಳಲುಕುಪ್ಪೆಯ ಸಮೀಪ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ

ಹಂ.ಗು. ರಾಜೇಶ್*

**ಮಾ**ಗಡಿ ತಾಲ್ಲೂಕಿನ ಹುಲಿಕಟ್ಟೆ ಸಮೀಪದ **ಅಳಲಕುಪ್ಪೆ** ಗ್ರಾಮದ ಪರಿಸರದಲ್ಲಿ ನಡೆಸಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ೧೫ಕ್ಕೂ ಹೆಚ್ಚು ಬೃಹತ್ ಶಿಲಾಯುಗದ 'ಕಲ್ಲುವೃತ್ತ'ದ (ಬೃಹತ್ ಶಿಲಾಯುಗದ ಹಲವು ನಮೂನೆಯ ಗೋರಿ/ಸಮಾಧಿಗಳಲ್ಲಿ ಕಲ್ಲುವೃತ್ತ ಮಾದರಿಯೂ ಒಂದು) ಗೋರಿ/ಸಮಾಧಿಗಳನ್ನು 'ಮೂರುಗುಡ್ಡೆ' ಎಂಬ ಹೆಸರಿನ ಗುಡ್ಡದ ಮೇಲೆ ಮತ್ತು ಉತ್ತರ ಹಾಗೂ ಪೂರ್ವ ಭಾಗದ ತಪ್ಪಲಿನಲ್ಲಿ ಪತ್ತೆಮಾಡಿದ್ದೇನೆ. ಅಳಲಕುಪ್ಪೆ ಗ್ರಾಮದ ದಕ್ಷಿಣಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿ 'ಮೂರುಗುಡ್ಡೆ' ಗುಡ್ಡವಿದೆ. ಈ ಗುಡ್ಡದ ದಕ್ಷಿಣ ತಪ್ಪಲಿನಲ್ಲಿ ಮಳೆಗಾಲದಲ್ಲಿ ಸ್ವಾಭಾವಿಕ ನೀರಿನ ಸೆಲೆಯೊಂದು ಹುಟ್ಟಿ ಹರಿಯುತ್ತದೆ. ಇದು ರಾಮನಗರ ಜಿಲ್ಲೆಯಲ್ಲಿ ಹರಿಯುವ 'ಕಣ್ವ' ನದಿಯ ಮೂಲಸೆಲೆಗಳಲ್ಲಿ ಒಂದಾಗಿದೆ. ಗುಡ್ಡದ ಆಗ್ನೇಯ ಭಾಗದಲ್ಲಿ ಇದೇ ನೀರಿನ ಸೆಲೆಯಿಂದ ನಿರ್ಮಾಣಗೊಂಡಿರುವ ಒಂದು ಕುಂಟೆ / ಕಟ್ಟೆ ಕೂಡ ಇದೆ. ಇದೆಲ್ಲವೂ ಭೌಗೋಳಿಕವಾಗಿ ಶಿಲಾಯುಗದ ಮಾನವರು ನೆಲೆಗೊಳ್ಳಲು ಬೇಕಾದ ಪೂರಕ ವಾತಾವರಣವು ಈ ಪರಿಸರದಲ್ಲಿ ನಿರ್ಮಾಣಗೊಂಡಿತ್ತು ಎಂಬುದನ್ನು ಸಾಬೀತುಪಡಿಸುತ್ತದೆ. ಅಲ್ಲದೆ, ಅಳಲಕುಪ್ಪೆ ಗ್ರಾಮದ ಸಮೀಪದಲ್ಲಿ ಕಬ್ಬಿಣದ ನಿಕ್ಷೇಪವುಳ್ಳ ಕರಿಕಲ್ಲುಗಳೂ ಕೂಡ ಕಂಡುಬರುತ್ತವೆ. ಈ ರೀತಿಯ ಕಲ್ಲುಗಳನ್ನು ಹುತ್ರಿದುರ್ಗದ ಬೆಟ್ಟದ ಮೇಲೆ ಬೃಹತ್ ಶಿಲಾಯುಗದ ಸಮಾಧಿಗಳನ್ನು ಶೋಧಿಸಿದ ಸಂದರ್ಭದಲ್ಲಿ ಕೂಡ ಗುರುತಿಸಿದ್ದೆ. 'ಮೂರುಗುಡ್ಡೆ'ಯ ಆಗ್ನೇಯಕ್ಕಿರುವ ಕರಿಗೌಡನ ದೊಡ್ಡಿಯಲ್ಲಿ ಇತ್ತೀಚಿನವರೆಗೂ ಕುಲುಮೆಗಳನ್ನು ಹೊಂದಿದ್ದ ಕಬ್ಬಿಣದ ಆಚಾರಿಗಳು ಇದ್ದರು. ಈ ಗುಡ್ಡದಿಂದ ನೈರುತ್ಯಕ್ಕೆ ಒಂದೂವರೆ ಕಿ.ಮೀ. ದೂರದಲ್ಲಿ ಆಚಾರಿಕಟ್ಟೆ ಎಂಬ ಕುಂಟೆಯೊಂದಿತ್ತು. ಈಗ ಅದು ಕಣ್ಮರೆಯಾಗಿದೆ. ಇಲ್ಲಿಂದ ಅರ್ಧ ಕಿ.ಮೀ. ದೂರದಲ್ಲಿ ಅಂದರೆ 'ಮೂರುಗುಡ್ಡೆ'ಯಿಂದ ಎರಡು ಕಿ.ಮೀ. ದೂರದಲ್ಲಿ ಹಂದಲಗೆರೆ (ಕುಣಿಗಲ್ ತಾಲ್ಲೂಕಿಗೆ ಸೇರಿದೆ) ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಊರಿನ ಸಮೀಪವಿರುವ 'ತಿಪ್ಪಾಳ' ಎಂಬ ಕಿರುಕುಂಟೆಯ ಮೇಲಿನ ಹೊಲಗಳಲ್ಲಿ ಇತ್ತೀಚೆಗೆ ನಡೆಸಿದ ಕ್ಷೇತ್ರಕಾರ್ಯದಲ್ಲಿ ಕುಲುಮೆ ಕಿಟ್ಟಗಳನ್ನು ಪತ್ತೆ ಮಾಡಿದ್ದೇನೆ (ಕಾಲವನ್ನು ನಿರ್ಧರಿಸಲಾಗಿಲ್ಲ). ಸಾಮಾನ್ಯವಾಗಿ ಬೃಹತ್ ಶಿಲಾಯುಗದ ನೆಲೆಗಳು ಕಂಡುಬರುವುದು ಬೆಟ್ಟಗುಡ್ಡಗಳ ಸಮತಟ್ಟು ಮತ್ತು ತಪ್ಪಲು ಪ್ರದೇಶಗಳಲ್ಲಿ. ಅದರಲ್ಲಿಯೂ ನೀರಿನ ಒರತೆಗಳು ಮತ್ತು ಕಬ್ಬಿಣದ ನಿಕ್ಷೇಪಗಳುಳ್ಳ ಪ್ರದೇಶಗಳಲ್ಲಿ ಕಂಡುಬರುತ್ತವೆ. ಇಲ್ಲಿಯೂ ಸ್ವಾಭಾವಿಕವಾದ ನೀರಿನ ಬುಗ್ಗೆಗಳು ಮತ್ತು ಕಬ್ಬಿಣದ ನಿಕ್ಷೇಪಗಳು ಕಂಡುಬರುವುದು ವಿಶೇಷ. ಒಟ್ಟಾರೆ, ಈ ಎಲ್ಲ ಅಂಶಗಳಿಂದ ಮೂರುಗುಡ್ಡೆಯ ಪರಿಸರವು ಕಬ್ಬಿಣ ಯುಗದ ಸಂಸ್ಕೃತಿಗೆ ಪೂರಕವಾಗಿತ್ತೆಂದು ಪರಿಗಣಿಸಬಹುದು.

ಬೃಹತ್ ಶಿಲಾಯುಗದ ಸಮಾಧಿಗಳನ್ನು ಕರ್ನಾಟಕದಲ್ಲಿ ಜನಸಾಮಾನ್ಯರು 'ಪಾಂಡವರ ಗುಡಿ', 'ಪಾರೇರಕಲ್ಲು', 'ಮೌರ್ಯರ ಕಲ್ಲು' ಎಂದೆಲ್ಲ ಕರೆಯುತ್ತಾರೆ. ಈ ಗ್ರಾಮದ ಜನರು ಇವನ್ನು 'ಪಾಂಡವರ ಗುಡಿ' ಎಂದು ಕರೆಯುವುದುಂಟು. ಈ ಸಮಾಧಿಗಳು ವೃತ್ತಾಕಾರವಾಗಿ ಜೋಡಿಸಿದ ಕಲ್ಲುಗಳಿಂದ ಆವೃತ್ತವಾಗಿದ್ದು, ಮಧ್ಯದಲ್ಲಿ ಪೆಟ್ಟಿಗೆಯಾಕಾರದಲ್ಲಿ ಕಲ್ಲು ಚಪ್ಪಡಿಗಳಿಂದ ಮಾಡಿದ ಕಲ್ಕೋಣೆಯ ಮೇಲೆ ದೊಡ್ಡ ಕಲ್ಲು ಚಪ್ಪಡಿಯನ್ನು ಹೊದ್ದಿಸಲಾಗಿದೆ. ಆ ಕೋಣೆಯ ಒಳಗೆ ವ್ಯಕ್ತಿಯ ಶವ ಮತ್ತು ಆತ ಬಳಸುತ್ತಿದ್ದಿರಬಹುದಾದ ಮಡಕೆಗಳು, ವಿವಿಧ ರೀತಿಯ ಕಬ್ಬಿಣದ ಆಯುಧಗಳು ಸಾಮಾನ್ಯವಾಗಿ ಇರುತ್ತವೆ.

ಈ ಮೊದಲು ನಾನು ಪತ್ತೆ ಮಾಡಿರುವ ಭೈರನಹಳ್ಳಿ[೧] ಮತ್ತು ಹುತ್ರಿದುರ್ಗ[೨] ಬೆಟ್ಟದ ಮೇಲಿನ ಬೃಹತ್ ಶಿಲಾಯುಗದ ಕಲ್ಲುವೃತ್ತದ ಸಮಾಧಿಗಳು ಈಗ ಪತ್ತೆಯಾಗಿರುವ ಸ್ಥಳದಿಂದ ಕೇವಲ ೮–೧೦ ಕಿ.ಮೀ. ಅಂತರದಲ್ಲಿವೆ. ಆದರೆ, ಈ ಎರಡು ಸ್ಥಳಗಳಲ್ಲಿನ ಸಮಾಧಿಗಳಿಗಿಂತಲೂ ಪ್ರಸ್ತುತ ಶೋಧಿಸಿರುವ ಸಮಾಧಿಗಳು ದೊಡ್ಡದಾಗಿರುವುದು ವಿಶೇಷ. ಭೈರನಹಳ್ಳಿ

* # ೩೩/ಎ, ಐ.ಟಿ.ಐ. ಕಾಲೇಜು ಹತ್ತಿರ, ಕೆಂಪೇಗೌಡನಗರ, ವಿಶ್ವನೀಡಂ ಅಂಚೆ, ಬೆಂಗಳೂರು–೫೬೦೦೯೧.



ಅಳಲಕುಪ್ಪೆಯ ಬೃಹತ್ ಶಿಲಾಸಮಾಧಿಯಲ್ಲಿ ದೊರೆತ ಮಡಕೆಯ ಅವಶೇಷ



ಬೆಟ್ಟದ ಮೇಲಿರುವ ಬೃಹತ್ ಶಿಲಾಯುಗದ ಸಮಾಧಿ

ಮತ್ತು ಹುತ್ರಿದುರ್ಗ ಪ್ರದೇಶದ ಬೃಹತ್ ಶಿಲಾಯುಗದ ಸಮಾಧಿಗಳು ೧೫-೨೦ ಅಡಿಗಳಷ್ಟು ವ್ಯಾಸವುಳ್ಳ ವೃತ್ತಾಕಾರದ ಸಮಾಧಿಗಳಾಗಿವೆ. ಆದರೆ ಮೂರುಗುಡ್ಡೆಯಲ್ಲಿ ಪತ್ತೆ ಮಾಡಲಾಗಿರುವ ಸಮಾಧಿಗಳು ೨೫-೩೦ ಅಡಿಗಳಷ್ಟು ವ್ಯಾಸವಿದೆ. ೧೮೮೧ರಲ್ಲಿ ಬ್ರಾನ್ ಫೀಲ್ ಅವರು ಸಾವನದುರ್ಗದ ಇಟ್ಟಿಗೆಬಯಲಿನಲ್ಲಿ ಶೋಧಿಸಿದ ಸಮಾಧಿಗಳು ಕೂಡ ೨೫-೩೦ ಅಡಿಗಳ ವ್ಯಾಸವಿರುವುದು ಇಲ್ಲಿ ಉಲ್ಲೇಖನೀಯ.[೩] ಎಷ್ಟೇ ದೊಡ್ಡದಾದ ಸಮಾಧಿಗಳು ಇದೇ ತಾಲ್ಲೂಕಿನ ಹೂಜಿಗಲ್ಲಿನಲ್ಲಿ ದೊರೆತಿರುವುದು ವಿಶೇಷ.[೪]

ಮೂರುಗುಡ್ಡೆ ಪ್ರದೇಶದಲ್ಲಿ ನಾನು ಕ್ಷೇತ್ರಕಾರ್ಯ ಕೈಗೊಂಡಾಗ ಸ್ಥಳೀಯರು ಒಂದು ಸಮಾಧಿಯನ್ನು ಅಗೆದು ಮಳೆನೀರು ಹರಿದುಹೋಗುವ ಟ್ರಂಚ್ ಮಾಡಿದ್ದರು. ಆಗ ಅಲ್ಲಿನ ಮಣ್ಣನ್ನು ಸರಿಸಿ ನೋಡಿದಾಗ ಈ ಗೋರಿಗಳಲ್ಲಿ ಕಪ್ಪು ಮತ್ತು ಕೆಂಪು ದ್ವಿವರ್ಣದ ಮಡಕೆಗಳು, ಪೂರ್ಣ ಕಪ್ಪು ಹಾಗೂ ಪೂರ್ಣ ಕೆಂಪು ಬಣ್ಣದ ಮಡಕೆಗಳ ಚೂರುಗಳು ದೊರೆತವು. ಇವು ಎಲ್ಲಾ ಬೃಹತ್ ಶಿಲಾಸಂಸ್ಕೃತಿಯ ನೆಲೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಮಡಕೆಗಳಾಗಿವೆ. ಈ ಮಡಕೆಗಳ ಮೇಲೆ ಗೀರು ಚಿತ್ರಗಳು (ಗ್ರಾಫಿಟಿ ಮಾರ್ಕ್) ಇರುವುದು ವಿಶೇಷ. ಬ್ರಾನ್ ಫೀಲ್ ಅವರು ಸಾವನದುರ್ಗದ ಇಟ್ಟಿಗೆಬಯಲಿನಲ್ಲಿ ಶೋಧಿಸಿದ ಸಮಾಧಿಗಳಲ್ಲಿಯೂ ಮೂರೂ ರೀತಿಯ ಮಡಕೆಗಳು ಕಂಡುಬಂದಿವೆ. ಅಲ್ಲದೆ, ಗ್ರಾಫಿಟಿ ಮಾರ್ಕ್ ಕೂಡ ಮಡಕೆಗಳ ಮೇಲೆ ಕಂಡುಬಂದಿವೆ. ಕರ್ನಾಟಕ ಮತ್ತು ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿ ಮಡಕೆಗಳ ಮೇಲೆ ಕಂಡುಬಂದಿರುವ ಈ ಕಾಲದ ಗೀರು ಚಿತ್ರಗಳಿಗೂ, ಬ್ರಾಹ್ಮಿ ಲಿಪಿಗಳಿಗೂ ಸಂಬಂಧವಿದೆ ಎಂದು ಕೆಲವು ವಿದ್ವಾಂಸರು ಗುರುತಿಸಿದ್ದಾರೆ.[೫]

ಬೃಹತ್ ಶಿಲಾಯುಗದ ಸಮಾಧಿಗಳು **ಕಬ್ಬಿಣಯುಗಕ್ಕೆ** ಸೇರಿದವಾಗಿದ್ದು, ದಕ್ಷಿಣ ಕರ್ನಾಟಕದಲ್ಲಿ ಇವುಗಳ ಕಾಲವನ್ನು **ಕ್ರಿಪೂ. ೧೨೦೦ ರಿಂದ ಕ್ರಿಪೂ. ೨೫೦** ಎಂದು ಪುರಾತತ್ವತಜ್ಞರು ಗುರುತಿಸಿದ್ದಾರೆ.[೬] ಬೃಹತ್ ಶಿಲಾಯುಗದ ಗೋರಿಗಳು ಗುಡ್ಡಗಳ ಮೇಲೆ ಕಂಡುಬರುವುದು ಅಪರೂಪವಾಗಿದೆ. ಅಂತಹ ಅಪರೂಪದ ನೆಲೆಗಳಲ್ಲಿ 'ಮೂರುಗುಡ್ಡೆ'ಯೂ ಒಂದಾಗಿದೆ. ಹಿರೇಬೆನಕಲ್ಲು ಮತ್ತು ಸಂಗನಕಲ್ಲು ಉಲ್ಲೇಖಿಸಬಹುದಾದ ಇಂತಹ ಪ್ರಮುಖ ನೆಲೆಗಳಾಗಿವೆ.[೭]

ಪ್ರಾಕೃತಿಕವಾಗಿ ಮಾಗಡಿ ತಾಲ್ಲೂಕ್ ಸಾಕಷ್ಟು ಬೆಟ್ಟಗುಡ್ಡ, ಕಣಿವೆಗಳಿಂದ ಕೂಡಿರುವ ಪ್ರದೇಶ. ಆದ್ದರಿಂದ ಅಲ್ಲಲ್ಲಿ ನೀರಿನ ಹೊರತೆಗಳು ಕಂಡುಬರುತ್ತವೆ. ಇವುಗಳಿಂದ ಅನೇಕ ಕಿರು ತೊರೆಗಳು, ಅರ್ಕಾವತಿ, ಕಣ್ವದಂತಹ ಉಪನದಿಗಳು ಇಲ್ಲಿ ಹರಿಯುತ್ತವೆ. ಈ ರೀತಿಯ ಪರಿಸರ ಶಿಲಾಯುಗದ ಮಾನವರಿಗೆ ಹೇಳಿ ಮಾಡಿಸಿದ ತಾಣ ಎನ್ನುವ ಮಟ್ಟಿಗೆ ಸೂಕ್ತವಾಗಿವೆ. ಆದರೆ, ಈ ತಾಲ್ಲೂಕಿನಲ್ಲಿ ಹೆಚ್ಚಿನ ಪುರಾತತ್ವ



ಬೆಟ್ಟದ ತಪ್ಪಲಿನಲ್ಲಿರುವ ಬೃಹತ್ ಶಿಲಾಯುಗದ ಸಮಾಧಿ

ಅಧ್ಯಯನಗಳು ನಡೆದಿಲ್ಲದಿರುವುದರಿಂದ ಹಲವು ನೆಲೆಗಳು ಅಜ್ಞಾತವಾಗಿಯೇ ಉಳಿದಿವೆ. ರಾಜ್ಯದ ರಾಜಧಾನಿಯ ಸಮೀಪದಲ್ಲಿಯೇ ಪುರಾತತ್ವ ಅಧ್ಯಯನದ ಕೊರತೆ ಇರುವುದು ವಿಷಾದನೀಯ. ಈ ಕಡೆಗೆ ಸಂಬಂಧಪಟ್ಟ ಇಲಾಖೆಗಳು ಮತ್ತು ಸಂಶೋಧಕರು ಹೆಚ್ಚಿನ ಗಮನಹರಿಸಿದಲ್ಲಿ ಮತ್ತಷ್ಟು ನೆಲೆಗಳು ಬೆಳಕು ಕಾಣಲು ಸಾಧ್ಯ.

[ಸನ್ಮಿತ್ರ ಸುಂಕಂ ಗೋವರ್ಧನ ಅವರಿಗೂ, ಎಸ್.ಕೆ. ಅರುಣಿ, ಐ.ಸಿ.ಎಚ್.ಆರ್, ನವದೆಹಲಿ ಅವರಿಗೂ ನನ್ನ ಕೃತಜ್ಞತೆಗಳು. ವಿಶೇಷವಾಗಿ ಅಳಲುಕುಪ್ಪೆಯ ಗ್ರಾಮಸ್ಥರಿಗೂ ಹೃತ್ಪೂರ್ವಕ ಕೃತಜ್ಞತೆಗಳು.]



## ಅಡಿಟಿಪ್ಪಣಿ

೧. ಇತಿಹಾಸ ದರ್ಪಣ, ಮಸ್ತಕ- ೨, ಜುಲೈ-ಸೆಪ್ಟಂಬರ್, ೨೦೦೯ರ ಹಿಂಬದಿ ಒಳರಕ್ಷಾ ಪುಟದಲ್ಲಿ ಚಿತ್ರಸಹಿತ ಸುದ್ದಿಯನ್ನು ಪ್ರಕಟಿಸಲಾಗಿದೆ.

೨. ಹಂ.ಗು.ರಾಜೇಶ್, ೨೦೧೪, 'ಹುತ್ರಿದುರ್ಗದಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು: ಹೊಸ ಹುಡಕಾಟ', ಇತಿಹಾಸ ದರ್ಪಣ, ಮಸ್ತಕ-೨೧-೨೨, ಏಪ್ರಿಲ್- ಸೆಪ್ಟಂಬರ್, ೨೦೧೪, ಪು: ೯-೧೬.

೩. B.K. Gururaja Rao, 1972, The Megalithic Culture in south India, Pp:140-142.

೪. ಗೋಪಾಲ್‌ರಾವ್ ಎಚ್.ಎಸ್., ೧೯೯೪, 'ಬೃಹತ್ ಶಿಲಾಯುಗದಿಂದ ೧೬ನೆಯ ಶತಮಾನದವರೆಗೆ ಹೂಜಿಗಲ್ಲು-ಒಂದು ಶೋಧನೆ' ಇತಿಹಾಸ ದರ್ಶನ ಸಂಪುಟ-೯, ಪು:೩-೪.

೫. B.K. Gururaja Rao, ಪೂರ್ವೋಕ್ತ.

೬ ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪು:೨೦.

೭. ಸುಂದರ.ಅ (ಸಂ.), ೧೯೯೭, ಕರ್ನಾಟಕ ಚರಿತ್ರ ಸಂ-೧.

## ಪೂರಕ ಗ್ರಂಥಗಳು

೧. ಸುಂದರ.ಅ (ಸಂ.), ೧೯೯೭, ಕರ್ನಾಟಕ ಚರಿತ್ರ ಸಂ-೧, ಪ್ರಸಾರಾಂಗ, ಕನ್ನಡ ವಿ.ವಿ

೨. ___"___ ೨೦೦೯, ಇತಿಹಾಸ ಮತ್ತು ಪುರಾತತ್ವ, ಪ್ರಸಾರಾಂಗ, ಮೈಸೂರು ವಿ.ವಿ.

೩. ಕೆ.ಬಿ.ಶಿವತಾರಕ್, ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿ.ವಿ

೪. ಎ.ವಿ.ನರಸಿಂಹ ಮೂರ್ತಿ, ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ. ಮೈಸೂರು.

೫. ಹಂ.ಗು.ರಾಜೇಶ್ (ಸಂ.) ಇತಿಹಾಸ ದರ್ಪಣ ಮಸ್ತಕ-೨ ಮತ್ತು ೨೧-೨೨.

೬ B.K. Gururaja Rao, 1972, The Megalithic Culture in south India, Prasaranga, Mysore university.

7. D.V. Devaraj, B.R. Gopal (Ed.) 1995, Seshachandrika, Directorate of Archeology and Museums in Karnataka, Mysore.

8. M.S.Mudhol, 1997, A Technical Study of Megalithic Metal Object, Directorate of Archeology and Museums in Karnataka, Mysore.

9. Upindar Singh, 2009, History of Ancient and early medieval India, Pearson, New Dehli.




# "ಹುರುಳಿಹಾಳು ಮತ್ತು ಮಾಳೆಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು"

ತಿಪ್ಪೇಶ ಹೆಚ್.ಎಂ.*

ಕರ್ನಾಟಕದ ದಖನ್ನಿನ ಉತ್ತರ ಇಳಿಜಾರಿನಲ್ಲಿರುವ ಕೂಡ್ಲಿಗಿ ತಾಲೂಕು ೨೦೦೦ ಅಡಿ ಎತ್ತರದಲ್ಲಿ ಈಶಾನ್ಯದ ಕಡೆಗೆ ಇಳಿಜಾರಾಗಿದೆ. ತಾಲೂಕಿನ ಬಹುಭಾಗ ಬಯಲು ಸೀಮೆಯಾಗಿದ್ದು, ಅಲ್ಪಪ್ರಮಾಣದಲ್ಲಿ ಕುರುಚಲು ಕಾಡುಗಳಿಂದ ಬೆಟ್ಟಗುಡ್ಡಗಳಿಂದ ಕೂಡಿದೆ. ತಾಲೂಕಿನಲ್ಲಿ ಎರಡು ಬೆಟ್ಟ ಸಾಲು (೨೩೭೮) ಅಡಿ ಎತ್ತರಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿ ಪ್ರಾರಂಭವಾಗಿ ತಾಲೂಕಿನ ಉತ್ತರ ಮತ್ತು ಪೂರ್ವದ ಕಡೆಗೆ ಹಬ್ಬಿ ಜರಿಮಲೆ ದುರ್ಗದ ಬಳಿ (೨೭೪೩) ಅಡಿ ಕೊನೆಗೊಳ್ಳುತ್ತದೆ. ಎರಡನೆಯ ಗುಡೇಕೋಟೆ ಬೆಟ್ಟಗಳ ಸಾಲು ಸಂಡೂರು ತಾಲೂಕಿನ ಚೋರುನೂರು ಬಳಿ ಪ್ರಾರಂಭವಾಗಿ ಆಗ್ನೇಯಕ್ಕೆ ತಿರುಗಿ ಗುಡೇಕೋಟೆಯ (೨೩೦೦) ಅಡಿ ಮೂಲಕ ಹಾಯ್ದು ಚಿನ್ನಹಗರಿ ಕಣಿವೆಯನ್ನು ಪ್ರವೇಶಿಸಿ ಚಿತ್ರದುರ್ಗ ಜಿಲ್ಲೆಯಲ್ಲಿ ಕೊನೆಗೊಳುತ್ತದೆ. ಹಾಗೂ ತಾಲೂಕಿನ ಬಹುಭಾಗ ಬೆಣಚುಕಲ್ಲು ಮತ್ತು ಗ್ರಾನೈಟ್ ಶಿಲೆಗಳಿಂದ ಕೂಡಿದೆ.

ನೈಸರ್ಗಿಕವಾಗಿ ಇಲ್ಲಿಯ ನೆಲ ಕೆಂಪು ಮತ್ತು ಮರಳು ಮಿಶ್ರಮಣ್ಣಾಗಿದ್ದು ಮರಳಿನ ರೂಪದಲ್ಲಿದೆ. ತಾಲೂಕಿನಲ್ಲಿ ಹೆಸರಾಂತ ನದಿಗಳಿಲ್ಲವಾದರೂ ತುಂಗಭದ್ರ ಉಪನದಿಗಳಾದ ಚಿಕ್ಕಹಗರಿ ಮತ್ತು ಚಿನ್ನಹಗರಿ (ಜನಿಗಳ್ಳಗಳು) ಹರಿಯುತ್ತಿದ್ದು ಅಲ್ಪ ಸ್ವಲ್ಪ ನೀರಾವರಿಗೆ ನೆರವಾಗಿದೆ. ಈ ರೀತಿಯ ಭೌಗೋಳಿಕ ಪರಿಸರವನ್ನು ಹೊಂದಿರುವ ಈ ತಾಲೂಕು ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವ ನೆಲೆಸುತ್ತಾ ಬಂದಿರುವುದು ಪ್ರಾಚೀನ ಕುರುಹುಗಳಿಂದ ಸಾಬೀತಾಗಿದೆ. ಪ್ರಸ್ತುತ ಅಧ್ಯಯನವನ್ನು ಕೂಡ್ಲಿಗಿ ತಾಲೂಕಿನಲ್ಲಿರುವ "ಹುರುಳಿಹಾಳು ಮತ್ತು ಮಾಳೆಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು" ಎಂಬ ವಿಷಯಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ.

ಕರ್ನಾಟಕದಲ್ಲಿ ಏಳು ಪ್ರಕಾರದ ಶವ ಸಂಸ್ಕಾರದ ಶಿಲಾ ಸಮಾದಿಗಳಿವೆ. ಅವುಗಳಲ್ಲಿ ಹಾದಿಕೋಣೆ ಸಮಾದಿ, ಕಂಡಿಕೋಣೆ ಸಮಾದಿ, ನಿಲುಸುಕಲ್ಲು ಸಮಾದಿ, ಚೆಕ್ಕೆಕಲ್ಲುಗಳಿಂದ ತುಂಬಿದ ಕಲ್ಲು ವೃತ್ತಗಳು, ವರ್ತುಲಗಡ್ಡೆಗಳು, ಶವಕುಣಿಗಳು,[೧] ಪ್ರಮುಖ ವೆನಿಸಿವೆ. ಈ ರೀತಿಯ ಸಮಾದಿಗಳಲ್ಲಿ ಕೆಲವು ಮಾದರಿಗಳು ಕೂಡ್ಲಿಗಿ ತಾಲೂಕಿನಲ್ಲಿಯೂ ಸಹ ಕಂಡುಬಂದಿವೆ.

**ಹುರುಳಿಹಾಳು :** ಹುರುಳಿಹಾಳು ಗ್ರಾಮವು ಕೂಡ್ಲಿಗಿ ತಾಲೂಕಿನಿಂದ ದಕ್ಷಿಣಕ್ಕೆ ೩೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಉತ್ತರಕ್ಕೆ ಓಬಳಶೆಟ್ಟಿಹಳ್ಳಿ, ದಕ್ಷಿಣಕ್ಕೆ ಜುಮ್ಮೋಬನಹಳ್ಳಿ ಪೂರ್ವಕ್ಕೆ ಮೀನಕೆರೆ, ಚಿರತಗುಂಡು, ವಲಸೆ ಹಾಗೂ ಪಶ್ಚಿಮಕ್ಕೆ ಗುಂಡುಮುಣಗು, ಚಿಕ್ಕಜೋಗಿಹಳ್ಳಿ ನೆರೆಯ ಗ್ರಾಮಗಳಾಗಿವೆ.

'ಹುರುಳಿಹಾಳು'ಗೆ ಪ್ರಾಚೀನತೆಯಿದ್ದು ಬುಡಕಟ್ಟು ಸಂಸ್ಕೃತಿಯ ನೆಲೆಗಳಲ್ಲಿ ಒಂದಾಗಿದೆ. ಹುರುಳಿಹಾಳು ಹಿಂದೆ ಈಗಿರುವ ಸ್ಥಳದಲ್ಲಿ ಇರಲಿಲ್ಲ. ಪ್ರಾಚೀನ ಗ್ರಾಮಗಳೆರಡು ನಿರ್ಮಾಣಗೊಂಡು ನಂತರ ನಾಶವಾದ ಮೇಲೆ ಅಲ್ಲಿನ ಜನ ಹೊಸದಾಗಿ ನೆಲೆಗೊಂಡಿದ್ದಾರೆ. ಹುರುಳಿಹಾಳಿನ ಪ್ರಾಚೀನ ಹೆಸರು 'ಪಿಲ್ಲಿಪಾತಿ' ಎಂಬುದಾಗಿತ್ತು.[೨] ಪ್ಲೇಗು ಬಂದಾಗ ಜನ ಈ ಊರನ್ನು ತೊರೆದು ಮತ್ತೊಂದು ಗ್ರಾಮ ನಿರ್ಮಿಸಿ ಅದಕ್ಕೆ ಸುಂದಹಳ್ಳಿ ಎಂದು ಕರೆದರು. ಇವೆರಡು ಗ್ರಾಮಗಳು ಇಂದು ನಶಿಸಿಹೋಗಿದ್ದು ಅವಶೇಷಗಳು ಮಾತ್ರ ಉಳಿದಿವೆ. ಈಗಿರುವ ಗ್ರಾಮದ ಈಶಾನ್ಯ ದಿಕ್ಕಿಗೆ ಹುರುಳಿಹಾಳು ನಿಂದ ಎಕ್ಕೆಗುಂದಿಗೆ ಹೋಗುವ ಮಾರ್ಗವಾಗಿ (೨ ಕಿ.ಮೀ ದೂರದಲ್ಲಿ) ಬಲ ಬದಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಹಾದಿಕೋಣೆ ಸಮಾಧಿಯನ್ನು ಗುರುತಿಸಲಾಗಿದೆ. ಶಿಲಾ ಸಮಾಧಿಯ ರಚನೆಗೆ ಗ್ರಾನೈಟ್ ಶಿಲೆಯ ನಾಲ್ಕು ಚಪ್ಪಡಿಕಲ್ಲುಗಳನ್ನು ಬಳಸಿ ನಿರ್ಮಾಣಮಾಡಲಾಗಿದೆ. ಮೂರು ಚಪ್ಪಡಿಕಲ್ಲುಗಳನ್ನು ಪರಸ್ಪರ ಅಭಿಮುಖವಾಗಿ ನಿಲ್ಲಿಸಿ ಅವುಗಳ ಮೇಲೆ ಮುಚ್ಚಳ ರೂಪದಲ್ಲಿ ಬಂಡೆಯನ್ನು ಹಾಸಲಾಗಿದೆ. ಸಮಾಧಿಯ

* ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

ಅಳತೆಯು ೫ ಅಡಿ ಉದ್ದ, ೩೧/೨ ಅಡಿ ಅಗಲ, ೨೧/೨ ಅಡಿ ಎತ್ತರವಿದ್ದು ಒಂದು ಕೋಣೆಯರೂಪದಲ್ಲಿದೆ. ವಿಶೇಷವಾಗಿ ಮೇಲ್ಭಾಗದ ಚಪ್ಪಡಿಕಲ್ಲಿನಲ್ಲಿ ೧೫ ಕಲ್ಗುಳಿಗಳಿರುದನ್ನು ಗುರುತಿಸಲಾಗಿದೆ. ಸ್ಥಳೀಯವಾಗಿ ಜನರು ಈ ಸಮಾಧಿಯನ್ನು ಉಜ್ಜಿನಪ್ಪನ ಪಾದಗಟ್ಟೆ ಎಂಬ ನಂಬಿಕೆಯಿಂದ ಪೂಜಿಸುತ್ತಿದ್ದಾರೆ.

ಒಟ್ಟಿನಲ್ಲಿ ಹುರುಳಿಹಾಳು ನೆಲೆಯು ಬೃಹತ್ ಶಿಲಾಯುಗ ಕಾಲದ ಸ್ಮಶಾನ ನೆಲೆಯಾಗಿದ್ದು, ಇದರ ಸಮೀಪದಲ್ಲಿ ಪ್ರಾಚೀನ ಕುಲುಮೆ ಅವಶೇಷಗಳು ಮತ್ತು ಕಪ್ಪು ವರ್ಣದ ಮಡಿಕೆ ಚೂರುಗಳು ಕಂಡುಬಂದಿರುವುದರಿಂದ ಇದು ಬೃಹತ್ ಶಿಲಾಯುಗದ ನೆಲೆ ಎಂದು ನಿರ್ಧರಿಸಬಹುದಾಗಿದೆ.

**ಮಾಳೆಹಳ್ಳಿ :** ಕೂಡ್ಲಿಗಿ ತಾಲೂಕು ಕೇಂದ್ರದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿರುವ ಈ ನೆಲೆಯು ಕಲ್ಲಹಳ್ಳಿಯ –ಮಹಜರ್ (ಉಪಗ್ರಾಮ) ವಾಗಿದೆ. ಹಾಗೂ ಬಯಲು ಪ್ರದೇಶದಿಂದ ಕೂಡಿದ್ದು, ದಕ್ಷಿಣಕ್ಕೆ ಚಿನ್ನಹಗರಿ ನದಿ ದಂಡೆಯಿದೆ. ಮಾಳೆಹಳ್ಳಿಯ ದಕ್ಷಿಣಕ್ಕೆ ಕಲ್ಲಹಳ್ಳಿ, ಉತ್ತರಕ್ಕೆ ತಿಪ್ಪೇಹಳ್ಳಿ, ಪಶ್ಚಿಮಕ್ಕೆ ಪ್ರಜಾರಹಳ್ಳಿಗಳು ನೆರೆಯ ಗ್ರಾಮಗಳಾಗಿವೆ.

ಮಾಳೆಹಳ್ಳಿಯ ಕೆರೆಯ ಉತ್ತರಕ್ಕೆ ಹಾಗೂ ತಿಪ್ಪೇಹಳ್ಳಿಗೆ ಹೋಗುವ ದಾರಿಯ ಎಡಬದಿಯಲ್ಲಿ ಕಾಣುವ ಎತ್ತರದ ಹೆಬ್ಬಂಡೆಗಳಿದ್ದು ಇವುಗಳನ್ನು 'ದವನಪ್ಪನ ಗುಂಡು' ಎಂದು ಕರೆಯಲಾಗುತ್ತದೆ.[೩] ಈ ಬಂಡೆಯ ಮಧ್ಯಭಾಗದಲ್ಲಿ ಕುಟ್ಟಿ ರಚಿಸಿದ ಜಿಂಕೆ ಮತ್ತು ಹಾವಿನ ಚಿತ್ರಗಳು ಕಂಡುಬಂದಿವೆ. ಜಿಂಕೆಯ ಚಿತ್ರವು ಉದ್ದವಾದ ಬಾಗಿದ ಕೋಡುಗಳಿಂದ ಗಿಡ್ಡ ದೇಹವನ್ನು ಹಾಗೂ ಕಾಲುಗಳು ಅಸ್ಪಷ್ಟವಾಗಿರುವಂತೆ ಚಿತ್ರಿಸಲಾಗಿದೆ. ದವನ ಎಂಬ ಪದವು ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ; ಹಬ್ಬದ ಹೂ ಎಂಬ ಅರ್ಥವನ್ನು ಸೂಚಿಸುತ್ತದೆ.

ಒಟ್ಟಾರೆಯಾಗಿ ಮಾಳೆಹಳ್ಳಿಯು ಸಮೀಪದಲ್ಲಿ ಕಲ್ಲಹಳ್ಳಿಯು (ನವಶಿಲಾಯುಗ, ಶಿಲಾ–ತಾಮ್ರಯುಗ, ಹಾಗೂ ಬೃಹತ್‌ಶಿಲಾಯುಗ) ನೆಲೆಯಾಗಿದೆ. ಜುಮ್ಮೋಬನಹಳ್ಳಿ,[೪] (ಆದಿಹಳೇಶಿಲಾಯುಗ/ಸೂಕ್ಷ್ಮಶಿಲಾಯುಗದನೆಲೆ) ಕುಮತಿ ಮತ್ತು ಹುಲಿಕುಂಟೆ[೫] (ಬೃಹತ್‌ಶಿಲಾಯುಗದ ನೆಲೆಗಳು) ಮಾಳೆಹಳ್ಳಿಯ ದವನಪ್ಪನ ಗುಂಡುಗಳು ಕಂಡುಬರುವುದರಿಂದ ಮಾಳೆಹಳ್ಳಿಯು ಸಹ ಬೃಹತ್ ಶಿಲಾಯುಗದ ನೆಲೆಯಾಗಿದ್ದು, ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಈ ಸಂಸ್ಕೃತಿಯು ಕ್ರಿ.ಪೂ ೧೩೦೦ ರಿಂದ ಕ್ರಿ.ಶ. ೨೦೦ ಪ್ರವರ್ಧಮಾನದವರೆಗೆ ಅಸ್ತಿತ್ವದಲ್ಲಿತ್ತೆಂದು ಅಲ್ಲಿ ದೊರೆಯುವ ಅವಶೇಷಗಳ ಆಧಾರದ ಮೇಲೆ ಗುರುತಿಸ ಬಹುದಾಗಿದೆ.

ಒಟ್ಟಾರೆಯಾಗಿ ಕೂಡ್ಲಿಗಿ ತಾಲೂಕಿನಲ್ಲಿ ಇದುವರೆಗೆ ದೊರೆತಿರುವ ಎಲ್ಲಾ ನೆಲೆಗಳಲ್ಲಿ ಬೃಹತ್ ಶಿಲಾಯುಗದ ಸ್ಮಶಾನ ನೆಲೆಗಳ ಅವಶೇಷಗಳೇ ಹೆಚ್ಚಾಗಿ ಕಂಡುಬಂದಿವೆ. ಆದರೆ ಈ ಕಾಲದ ವಸತಿಯ ಕುರುಹುಗಳು ನಮಗೆ ದೊರೆತಿರುವುದಿಲ್ಲ.

**[ಕೃತಜ್ಞತೆಗಳು : ನನ್ನ ಎಂ.ಫಿಲ್, ಪಿಎಚ್.ಡಿ. ಅಧ್ಯಯನದ ಸಂಶೋಧನಾ ಮಾರ್ಗದರ್ಶಕರುಗಳಾದ ಪ್ರೊ. ಸಿ. ಮಹದೇವ ಮತ್ತು ಡಾ. ರಮೇಶನಾಯಕ, ಡಾ. ವಿರುಪಾಕ್ಷಿ ಪೂಜಾರಹಳ್ಳಿ ಡಾ. ಹೆಚ್. ತಿಪ್ಪೇಸ್ವಾಮಿಯವರಿಗೂ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಪತ್ರಕರ್ತರಾದ ಭೀಮಸಮುದ್ರ ರಂಗನಾಥ್, ಗೆಳೆಯರಾದ ಎ.ಸಿ. ಸುರೇಶ ಮತ್ತು ಎನ್.ಓ. ಕುಮಾರ ಇವರೆಲ್ಲರಿಗೂ ಕೃತಜ್ಞ]**



## ಆಧಾರಸೂಚಿ


೧. ಷೇಕ್ ಅಲಿ ಬಿ. ಮತ್ತು ಸುಂದರ ಅ., ೧೯೯೭, ಕರ್ನಾಟಕ ಚರಿತ್ರೆ ಸಂಪುಟ–೧, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ಸಂ, ೨೩೩

೨. ವಿರುಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಪುಟ ಸಂ. ೬೪

೩. ಶ್ರೀನಿವಾಸ ಎಲ್., ೨೦೧೦, ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ಪುಟ ಸಂ, ೫೩

೪. ತಿಪ್ಪೇಸ್ವಾಮಿ ಹೆಚ್., ೨೦೦೦, ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು., ಇತಿಹಾಸ ದರ್ಶನ (ಸಂ.೧೬) ಪುಟ ಸಂ, ೧.

೫. ಅದೇ, ೧೯೯೯, ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇತಿಹಾಸ ದರ್ಶನ (ಸಂ. ೧೪), ಪುಟ ಸಂ. ೨೦.



# ಹುತ್ತರಿದುರ್ಗ ಪರಿಸರದ ನವಶೋಧಿತ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿ ನೆಲೆಗಳು

ರೇವಣಸಿದ್ದಯ್ಯ.ಕೆ.*

**ತು**ಮಕೂರು ಜಿಲ್ಲೆಯ ಕುಣಿಗಲ್ ತಾಲೂಕು ಮೂಲತಃ ಬಯಲುಸೀಮೆಯಾಗಿದ್ದು ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶವಾಗಿದೆ. ಇಲ್ಲಿನ ಜನರ ಮೂಲ ಕಸುಬು ವ್ಯವಸಾಯವಾಗಿದ್ದು ಇದರ ಜೊತೆಗೆ ಪಶುಪಾಲನಾ ವೃತ್ತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಕುಣಿಗಲ್ ತಾಲೂಕಿನಲ್ಲಿ ಒಟ್ಟು ೬ ಹೋಬಳಿಗಳಿದ್ದು ಅವುಗಳಲ್ಲಿ ಹುತ್ತರಿದುರ್ಗವು ಒಂದಾಗಿದೆ. ಕರ್ನಾಟಕದ ಗಿರಿದುರ್ಗಗಳಲ್ಲಿ ಹುತ್ತರಿದುರ್ಗವು ಒಂದಾಗಿದ್ದು, ಸಮುದ್ರ ಮಟ್ಟದಿಂದ ೩.೭೦೮ ಅಡಿ ಎತ್ತರ ದಲ್ಲಿದೆ ಹಾಗೂ ೧೨° ಅಕ್ಷಾಂಶ ಮತ್ತು ೭೭° ರೇಖಾಂಶವನ್ನು ಒಳಗೊಂಡಿದೆ.

ಹುತ್ತರಿದುರ್ಗಕ್ಕೆ ದೊಡ್ಡಬೆಟ್ಟವೆಂತಲೂ ಕರೆಯುವುದು ವಾಡಿಕೆಯಲ್ಲಿದ್ದು, ಈ ಬೆಟ್ಟದ ನೈರುತ್ಯಕ್ಕೆ ಬಸವನ ಬೆಟ್ಟವಿದೆ. ಈ ಎರಡು ಬೆಟ್ಟಗಳ ನಡುವೆ ಹುತ್ರಿ ಎಂಬ ಗ್ರಾಮವಿದ್ದು ಸುಮಾರು ೫೦ ಕುಟುಂಬಗಳು ವಾಸಮಾಡುತ್ತಿವೆ. ಈ ಹುತ್ತರಿದುರ್ಗವು ತಾಲೂಕು ಕೇಂದ್ರ ಕುಣಿಗಲ್‌ನಿಂದ ಸುಮಾರು ೧೮ ಕಿ.ಮೀ ದೂರದಲ್ಲಿದೆ.

ಹುತ್ರಿದುರ್ಗ ಪರಿಸರದಲ್ಲಿ ಆದಿಮಾನವನ ಕಾರ್ಯ ಚಟುವಟಿಕೆಗಳು ನಡೆದಿರುವ ಬಗ್ಗೆ ಅನೇಕ ಕುರುಹುಗಳು ಕಂಡುಬಂದಿದ್ದು ಇದಕ್ಕೆ ಸಂಬಂದಿಸಿದಂತೆ ವಸತಿನೆಲೆಗಳು, ಕಬ್ಬಿಣದ ಕಿಟ್ಟ, ಕಪ್ಪು ಮತ್ತು ಕೆಂಪುವರ್ಣದ ಮಡಿಕೆಗಳು ಹಾಗೂ ವಿವಿದ ನಮೂನೆಯ ಸಮಾಧಿಗಳು ಬೆಳಕಿಗೆ ಬಂದಿವೆ. ವಿಶೇಷವಾಗಿ ಹುತ್ರಿದುರ್ಗ, ಹುಲಿಯೂರುದುರ್ಗ, ಮಾಗಡಿ, ಸಾವನದುರ್ಗ ಮತ್ತು ರಾಮನಗರ ಪ್ರದೇಶಗಳು ಪ್ರಾಗಿತಿಹಾಸ ಕಾಲದ ಸಂಸ್ಕೃತಿಗೆ ಸಂಬಂಧಿಸಿದಂತೆ ಮೂಲನೆಲೆಯಾಗಿತ್ತು ಎಂಬುದು ಇತಿಹಾಸತಜ್ಞರ ಅಭಿಪ್ರಾಯವಾಗಿದೆ.

ನವಶಿಲಾಯುಗದ ಯಾವುದೇ ಶಿಲಾಯುಧಗಳು ದೊರೆಯಲಿಲ್ಲ, ಈ ಪ್ರದೇಶದಲ್ಲಿ ಮತ್ತಷ್ಟು ಕ್ಷೇತ್ರಕಾರ್ಯ ನಡೆಸಿದರೆ ಶಿಲಾಯುಧಗಳು ಸಿಗುವ ಸಾದ್ಯತೆಗಳಿದ್ದು, ಶೋಧನೆಗೊಂಡರೆ ಇಲ್ಲಿನ ಇತಿಹಾಸ ಸಾವಿರಾರು ವರ್ಷಗಳಷ್ಟು ಹಿಂದಕ್ಕೆ ಸರಿದು ಮಹತ್ವ ಪಡೆದುಕೊಂಡಂತಾಗುತ್ತದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ವಿವಿದ ನಮೂನೆಯ ಶಿಲಾ ಸಮಾಧಿಗಳನ್ನು ಪತ್ತೆಹಚ್ಚಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಸ್ಥಳೀಯ ಜನಪದರು ಈ ಸಮಾಧಿಗಳನ್ನು ಪಾಂಡವರ ಗುಡಿ, ಮೋರಿಯರ ಕಲ್ಲು, ಕಲ್ಲುಗುಚ್ಚು ಹಾಗೂ ಪಾಳುಮಂಟಪ ಎಂಬುದಾಗಿ ಕರೆಯುವುದು ರೂಡಿಯಲ್ಲಿದೆ.

* ಸಂತೇಪೇಟೆ ಗ್ರಾಮದ ಪೂರ್ವದಿಕ್ಕಿನಿಂದ ವಡೇಘಟ್ಟಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿ ಸುಮಾರು ೮ ಡಾಲ್ಮೆನ್ ಮಾದರಿಯ ಶಿಲಾಸಮಾಧಿಗಳಿದ್ದು, ಭೂಮಟ್ಟದ ಮೇಲೆ ಸುಮಾರು ಅರ್ಧ ಅಡಿ ದಪ್ಪದ ಗ್ರಾನೈಟ್ ಕಲ್ಲುಚಪ್ಪಡಿಗಳನ್ನು ಬಳಸಿಕೊಂಡು ಸಮಾಧಿಗಳನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ. ಇತ್ತೀಚೆಗೆ ನಿಧಿಗಳ್ಳರ ಹಾವಳಿಯಿಂದ ಕೆಲವು ಸಮಾಧಿಗಳು ಹಾಳಾಗಿವೆ.

* ಅದೇ ರಸ್ತೆಯಲ್ಲಿ ಸ್ವಲ್ಪ ಮುಂದೆ ಸಾಗಿದರೆ ಎಡಭಾಗದಲ್ಲಿ ಆನೆಘಟ್ಟ ಬಯಲು ಎಂಬ ಪ್ರದೇಶದಲ್ಲಿ ಸುಮಾರು ೧೦ ಅಡಿ ಎತ್ತರ ಹಾಗೂ ೬ ಅಡಿ ಅಗಲ ವಿಸ್ತೀರ್ಣದ ಒಂದು ನಿಲುಸುಗಲ್ಲು (ಮೆನ್ಹೇರ್) ಇದೆ. ಮಾಗಡಿ ಕೆಂಪೇಗೌಡರು ಆನೆಗಳನ್ನು ಕಟ್ಟುತ್ತಿದ್ದಂತಹ ಕಂಬ ಎಂಬುದಾಗಿ ಸ್ಥಳೀಯ ಜನಪದರು ಈ ನಿಲುಸುಗಲ್ಲನ್ನು ಗುರ್ತಿಸುವುದು ವಾಡಿಕೆಯಲ್ಲಿದೆ.

* ಹುತ್ರಿ ಗ್ರಾಮದಿಂದ ಪೂರ್ವದಿಕ್ಕಿಗೆ ಕಣಿವೆಕಟ್ಟೆಯಿಂದ ಬಿಸಿಲುಬಸವಣ್ಣ ಮಂಟಪದ ಕಡೆ ಹೋಗುವ ರಸ್ತೆಯ ಬಲಭಾಗದಲ್ಲಿ ಶಂಕರಪ್ಪ ಅವರ ಕೃಷಿ ಜಮೀನಿನಲ್ಲಿ ಎರಡು ಆಯತಾಕಾರದ ಸಮತಲ ಸಮಾಧಿಗಳಿದ್ದು, ರಚನೆಯನ್ನು ಗಮನಿಸಿದರೆ ನಾಲ್ಕುದಿಕ್ಕಿಗೂ ಕಲ್ಲುಚಪ್ಪಡಿಗಳನ್ನು ಆಯತಾಕಾರವಾಗಿ ನಿಲ್ಲಿಸಿ ಮದ್ಯಭಾಗದಲ್ಲಿ ಸಮಾಧಿ ಮಾಡಿ ಮೇಲ್ಭಾಗವನ್ನು ಮತ್ತೊಂದು ಕಲ್ಲುಚಪ್ಪಡಿಯಿಂದ ಸಮತಲವಾಗಿ ಮುಚ್ಚಲಾಗಿದೆ. ಇತ್ತೀಚೆಗೆ ಈ ಸಮಾಧಿಗಳಿರುವ ಪ್ರದೇಶವು ಕೃಷಿ ಚಟುವಟಿಕೆಗೆ ಒಳಪಟ್ಟಿರುವುದರಿಂದ ಸಮಾಧಿಗಳ ಸ್ವಲ್ಪ ಭಾಗ ನಶಿಸಿದೆ.

* ಪಿಹೆಚ್.ಡಿ. ಸಂಶೋಧನಾರ್ಥಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ–೭೬.



ಶಿಲಾಯುಗದ ಸಮಾಧಿ



ಆನೆಘಟ್ಟ ಬಯಲಿನಲ್ಲಿರುವ ನಿಲುಸುಗಲ್ಲು (ಮೆನ್ಹೆರ್) ಸಮಾಧಿ



ಆಯತಾಕಾರದ ಸಮತಲ ಸಮಾಧಿ





ಬೃಹತ್ ಶಿಲಾವೃತ್ತ ಸಮಾಧಿಗಳು



ಕಣಿವೆಕಟ್ಟೆ ತೀರದಿಂದ ಕಾಣುವ ಹುತ್ತರೀದುರ್ಗ ಬೆಟ್ಟ



ಬೃಹತ್ ಶಿಲಾಯುಗದ ಕಲ್ಲುಕುಳಿ



ಹಾಳಾಗಿರುವ ಶಿಲಾಸಮಾಧಿ

* ಅದೇ ಪರಿಸರದಲ್ಲಿ ಶಂಕರಪ್ಪ ಅವರ ಕೃಷಿ ಜಮೀನಿನ ಸಮೀಪ ದಿಣ್ಣೆಯ ಮೇಲೆ ಒಂದೇಕಡೆ ಎದುರು ಬದುರಿಗಿರುವ ಎರಡು ಶಿಲಾವೃತ್ತ ಸಮಾಧಿಗಳು (ಸಾರ್ಕೋಫೋಗಸ್) ಶೋಧನೆಯಾಗಿವೆ. ಈ ಎರಡೂ ಸಮಾಧಿಗಳು ವಿಸ್ತೀರ್ಣದಲ್ಲಿ ದೊಡ್ಡದಾಗಿದ್ದು ಸುಮಾರು ೨೫ ರಿಂದ ೩೦ ಅಡಿ ವ್ಯಾಸವನ್ನು ಒಳಗೊಂಡಿವೆ. ಈ ಪ್ರದೇಶದಲ್ಲಿ ಇಷ್ಟೊಂದು ವಿಸ್ತೀರ್ಣದ ಶಿಲಾವೃತ್ತ ಸಮಾಧಿಗಳು ಸಿಕ್ಕಿರುವುದು ವಿಶೇಷ ಎಂದು ಹೇಳಬವುದು.

ಈ ಎರಡೂ ಸಮಾಧಿಗಳ ರಚನೆಯನ್ನು ಗಮನಿಸುವುದಾದರೆ, ಸಮಾಧಿಯ ನಿರ್ಮಾಣಕ್ಕೆ ಗ್ರಾನೈಟ್ ಶಿಲೆಯನ್ನು ಬಳಸಿಕೊಳ್ಳಲಾಗಿದ್ದು, ಕಲ್ಲುಗುಂಡುಗಳನ್ನು ವೃತ್ತಾಕಾರವಾಗಿ ಜೋಡಿಸಿ ಮಧ್ಯಭಾಗದಲ್ಲಿ ಬೃಹತ್ ಗಾತ್ರದ ಕಲ್ಲುಚಪ್ಪಡಿಯನ್ನು ಇಟ್ಟು ಅದರ ಸುತ್ತಲೂ ಸಣ್ಣ ಸಣ್ಣ ಕಲ್ಲುಗಳಿಂದ ಮುಚ್ಚಿ ಶವಸಂಸ್ಕಾರ ಮಾಡಲಾಗಿದೆ.

ಇಷ್ಟೊಂದು ಬೃಹದಾಕಾರದಲ್ಲಿ ಸಮಾಧಿ ನಿರ್ಮಾಣ ಮಾಡಿರುವುದನ್ನು ಗಮನಿಸಿದರೆ ಆಗಿನ ಜನಾಂಗದ ಮುಖಂಡನಗಾಗಿ ನಿರ್ಮಿಸಿರುವ ಸಮಾಧಿಯಾಗಿರಬಹುದು ಎಂಬುದು ನನ್ನ ಗ್ರಹಿಕೆಯಾಗಿದೆ. ಈ ಎರಡೂ ಸಮಾಧಿಗಳ ಸಮೀಪದಲ್ಲಿಯೇ ಒಂದು ಕಲ್ಲಿನ ಗುಂಡಿನ ಮೇಲೆ **ಕಪ್ ಮಾರ್ಕ್ಸ** ಅಂದರೆ ಕಲ್ಲುಕುಳಿಯ ಗುರುತು ಇರುವುದು

ಕುತೂಹಲ ಕೆರಳಿಸಿದೆ. ಬೃಹತ್ ಶಿಲಾಯುಗದ ಸಮಾಧಿಗಳ ಪಕ್ಕದಲ್ಲಿ ಕಪ್‌ಮಾರ್ಕ್ಸ್‌ನ ಗುರುತುಗಳು ಇರಲು ಕಾರಣವೇನು ಎಂಬುದಕ್ಕೆ ವಿದ್ವಾಂಸರು ಖಚಿತವಾದ ಮಾಹಿತಿಯನ್ನು ವ್ಯಕ್ತಪಡಿಸಿಲ್ಲ. ಸಾಮಾನ್ಯವಾಗಿ ಈ ಕಲ್ಗುಳಿಗಳು ಬಟ್ಟಲಾಕೃತಿಯಲ್ಲಿದ್ದು ಇವು ನೈಸರ್ಗಿಕವಾಗಿರುವ ಕಲ್ಗುಳಿಗಳಿಗಿಂತ ಭಿನ್ನವಾಗಿದ್ದು ಮಾನವ ನಿರ್ಮಿತವಾಗಿವೆ. ಆಸ್ಟ್ರೇಲಿಯಾದ ಹೆಸರಾಂತ ವರ್ಣ/ರೇಖಾಚಿತ್ರ ವಿದ್ವಾಂಸರಾದ **ರಾಬರ್ಟ್ ಜಿ ಬೆಡ್ನ್‌ರಿಕ್** ಅವರು ಅವುಗಳ ಗುಣ ವೈಶಿಷ್ಟ್ಯತೆಯನ್ನು ಸಮಗ್ರವಾಗಿ ವಿವರಿಸಿದ್ದಾರೆ. ಇವರು ವೈಜ್ಞಾನಿಕವಾಗಿ ಅಧ್ಯಯನ ನಡೆಸಿ ಇವುಗಳ ಇತಿಹಾಸವನ್ನು ಆದಿ ಹಳೇ ಶಿಲಾಯುಗಕ್ಕೆ ಕೊಂಡೊಯ್ಯುತ್ತಾರೆ.[೧]

ಈ ಹಿಂದೆ ಹಂ ಗು ರಾಜೇಶ್ ಅವರು ಹುತ್ತರಿದುರ್ಗ ಕೋಟೆಯ ಪೂರ್ವದಿಕ್ಕಿನಲ್ಲಿರುವ ಮುಚ್ಚಾಲಮ್ಮನ ಗುಡಿಯ ಮುಂಬಾಗ ಹಾಗೂ ಬಿಸಿಲುಬಸವಣ್ಣ ಮಂಟಪದ ಸಮೀಪದಲ್ಲಿ ಶಿಲಾವೃತ್ತ ಸಮಾಧಿಗಳನ್ನು ಶೋಧಿಸಿ ಬೆಳಕಿಗೆ ತಂದಿದ್ದಾರೆ. ಈ ಶಿಲಾವೃತ್ತ ಸಮಾಧಿಗಳು ವಿಸ್ತೀರ್ಣದಲ್ಲಿ ೧೨ ಅಡಿ ವ್ಯಾಸವನ್ನು ಹೊಂದಿದ್ದು, ಸಮಾಧಿಯ ಒಳಭಾಗದಲ್ಲಿ ಕಪ್ಪು ಮತ್ತು ಕೆಂಪುವರ್ಣದ ಮಡಿಕೆಗಳು ದೊರೆತ ಬಗ್ಗೆ ವರದಿಮಾಡಿದ್ದಾರೆ.[೨]

### ಕಲ್ಲುಸೇವೆ ಪದ್ಧತಿ

ಮಾಗಡಿ ಮತ್ತು ಹುತ್ತರಿದುರ್ಗ ಪರಿಸರದಲ್ಲಿ ಇಂದಿಗೂ ಸಹ ಕಲ್ಲು ಸೇವೆಪದ್ದತಿ ಎಂಬ ವಿಶಿಷ್ಟ ಆಚರಣೆ ಇದೆ. ತೊನ್ನುರೋಗ ಅಥವಾ ದೀರ್ಘಕಾಲದಿಂದ ಕಾಯಿಲೆಯಿಂದ ನರಳಿ ಸತ್ತಂತಹ ಶವಗಳನ್ನು ಸುಡುವುದಾಗಲಿ ಅಥವಾ ಹೂಳುವುದಾಗಲಿ ಮಾಡದೇ ಬೆಟ್ಟದ ನಿರ್ಜನ ಪ್ರದೇಶದಲ್ಲಿ ಬಂಡೆಗಳ ಮೇಲೆ ಸತ್ತವ್ಯಕ್ತಿಯ ಶವವನ್ನು ಇಟ್ಟು ಮಡಿಕೆಯಲ್ಲಿ ನೀರನ್ನು ಇರಿಸಿ ಪ್ರಾಣಿಪಕ್ಷಿಗಳಿಗೆ ಆಹಾರವಾಗಿರಿಸಲಾಗುತ್ತದೆ. ಕೆಲವು ದಿನಗಳು ಕಳೆದ ನಂತರ ಅಳಿದುಳಿದ ಮೂಳೆಗಳನ್ನು ಗ್ರಾಮದವರು ಸಂಗ್ರಹಿಸಿ ಶವಸಂಸ್ಕಾರ ಪದ್ದತಿಯಂತೆ ಹೂಳಲಾಗುತ್ತದೆ. ಸ್ಥಳೀಯರು ಈ ಪ್ರದೇಶವನ್ನು **ಬುರುಡೆ ಗುಡ್ಡದ** ಬಯಲು ಎಂಬುದಾಗಿ ಕರೆಯುವುದು ರೂಢಿ ಯಲ್ಲಿದೆ.

ಈ ಕಲ್ಲುಸೇವೆ ನಡೆಯುವ ಬೆಟ್ಟದ ಪಕ್ಕದಲ್ಲಿಯೇ ಕಬ್ಬಿಣಯುಗದ ಸಮಾಧಿಗಳಿರುವುದು ವಿಶೇಷವಾಗಿದ್ದು, ಕಬ್ಬಿಣಯುಗದ ಶವಸಂಸ್ಕಾರ ಪದ್ದತಿಗೂ ಈ ಕಲ್ಲುಸೇವೆ ಶವಸಂಸ್ಕಾರ ಪದ್ದತಿಗೂ ಸಾಮ್ಯತೆಗಳಿರುವುದರಿಂದ ಈ ಕಲ್ಲುಸೇವೆಯೇ ೩೦೦೦ ವರ್ಷಗಳ ಹಿಂದಿನ ಪದ್ದತಿಯ ಮುಂದುವರಿಕೆಯಾಗಿರುವ ಸಾಧ್ಯತೆಗಳಿವೆ ಎಂಬ ಸತ್ಯವನ್ನು ತಳ್ಳಿಹಾಕುವಂತಿಲ್ಲ.[೩] ಈ ಶವಸಂಸ್ಕಾರ ಪದ್ದತಿಯು ನಾಡಿನ ಅನೇಕ ಭಾಗಗಳಲ್ಲಿ ಇಂದಿಗೂ ಜೀವಂತವಾಗಿದ್ದು ವಿಶಿಷ್ಟ ರೂಪಗಳನ್ನು ಪಡೆದುಕೊಂಡಿದೆ. ವಿಶೇಷ ಅಂದರೆ ಕೆಲವು ಬುಡಕಟ್ಟು ಜನಾಂಗಗಳಲ್ಲಿ ಕಲ್ಲಪ್ಪನ ಆಚರಣೆ ಎಂಬ ಶವಸಂಸ್ಕಾರ ಪದ್ಧತಿ ಆಚರಣೆಯಲ್ಲಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆ ಹೇಳುವುದಾದರೆ ಹುತ್ತರಿದುರ್ಗ ಪರಿಸರವು ನವಶಿಲಾಯುಗ ಸಂಸ್ಕೃತಿಯ ನೆಲೆಯಾಗಿತ್ತೆಂಬುದು ಮೇಲ್ನೋಟಕ್ಕೆ ಕಂಡುಬಂದಿದ್ದು ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಈ ಸಂಸ್ಕೃತಿಯ ಮುಂದುವರಿಕೆಯ ಭಾಗವಾಗಿ ಬೃಹತ್ ಶಿಲಾಯುಗದೊಂದಿಗೆ ಸಂಬಂಧ ಹೊಂದಿರುವುದು ಅವರು ಬಿಟ್ಟುಹೋಗಿರುವ ಕುರುಹುಗಳಾದ ಶಿಲಾ ಸಮಾಧಿಗಳು, ಕಬ್ಬಿಣದ ಕಿಟ್ಟ ಹಾಗೂ ಮಡಿಕೆ–ಕುಡಿಕೆಗಳು ಶೋಧನೆಗೊಂಡಿದ್ದು ಇವುಗಳ ಜೊತೆ ಜೊತೆಗೆ ಅಂದಿನ ಸಮಾಜದಲ್ಲಿದ್ದ ಶವಸಂಸ್ಕಾರ ಪದ್ದತಿ ಹಾಗೂ ನಂಬಿಕೆ–ಆಚರಣೆಗಳು ಪ್ರಸ್ತುತ ಸಂದರ್ಭದಲ್ಲಿಯೂ ಜೀವಂತವಾಗಿರುವುದನ್ನು ಗಮನಿಸಬಹುದಾಗಿದೆ.



### ಆಧಾರಸೂಚಿ


೧. ಮೋಹನ ರಾ (ಲೇ), ಧರ್ಮಪುರ: ಕಲ್ಗುಳ್ಳಿ ನೆಲೆಯ ಅನ್ವೇಷಣೆ ಮತ್ತು ಸಮಗ್ರ ಅಧ್ಯಯನ, ಇತಿಹಾಸ ದರ್ಶನ, ಸಂ. ೩೦, ಪು. ೧೩, ೨೦೧೫.

೨. ಹಂ ಗು ರಾಜೇಶ್ (ಸಂ), ಇತಿಹಾಸ ದರ್ಪಣ, ಸಂಯುಕ್ತ ಸಂಚಿಕೆ, ೨೧–೨೨, ಪು. ೧೦, ೨೦೧೪.

೩. ವಿಜಯ ಕರ್ನಾಟಕ ಪತ್ರಿಕಾ ವರದಿ, ೨೦.೦೭.೨೦೧೪, ಬೆಂಗಳೂರು.



# ಮಲಪ್ರಭಾ ನದಿ ತೀರದಲ್ಲಿ ಪ್ರಾಗಿತಿಹಾಸ ವರ್ಣಚಿತ್ರ ನೆಲೆ (ಕೆಂದೂರು) ಯ ಅನ್ವೇಷಣೆ ಮತ್ತು ಅದರ ಮಹತ್ವ

ಡಾ. ಮೋಹನ ರಾ*

ಮಲಪ್ರಭಾ ನದಿ ತೀರವು ಯುಗಯುಗಾಂತರಗಳಿಂದಲೂ ಅಂದರೆ ಶಿಲಾಯುಗದಿಂದ ಇತ್ತೀಚಿನ ಕಾಲದವರೆಗೂ ಶ್ರೇಷ್ಠ ಸಂಸ್ಕೃತಿಯ ತಾಣವಾಗಿದ್ದು, ಮಾನವನು ನಡೆದು ಬಂದ ದಾರಿಯ ಕಿರುನೋಟವನ್ನು ಒದಗಿಸುತ್ತದೆ. ಅದರಲ್ಲೂ ಮುಖ್ಯವಾಗಿ ಅಸಂಖ್ಯಾತ ಗವಿ/ಕಲ್ಲಾಸರೆಗಳಿಂದ ಕೂಡಿದ ಇಲ್ಲಿಯ ಪರ್ವತ ಶ್ರೇಣಿಗಳಲ್ಲಿಯ ಸಮತಟ್ಟಿನ ಸ್ಥಳಗಳು ಪ್ರಾಗಿತಿಹಾಸ ಜನಸಮುದಾಯಗಳ ವಸತಿಗೆ, ಪ್ರಕೃತಿದತ್ತವಾದ ಆಹಾರ ಸಂಗ್ರಹಣೆ, ಕೃಷಿ, ಪಶುಸಂಗೋಪನೆ ಲೋಹ ತಂತ್ರಗಾರಿಕೆ ಮೊದಲಾದ ತಮ್ಮ ಕಸುಬುಗಳಿಗೆ ತುಂಬ ಅನುಕೂಲಕರವಾಗಿತ್ತು. ವಾಕನ್‌ಕರ್ (೧೯೭೬) ಅವರಿಂದ ಹಿಡಿದು ಇತ್ತೀಚಿನವರೆಗಿನ ಅಧ್ಯಯನಗಳ ಆಧಾರದ ಮೇಲೆ ೩೬ ಸ್ಥಳಗಳ ೧೦೦ಕ್ಕೂ ಹೆಚ್ಚು ನೆಲೆಗಳ ವರ್ಣ/ರೇಖಾಚಿತ್ರಗಳ ಕಾಲಾನುಕ್ರಮತೆಯನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

* ಹಳೇ ಅಂತಿಮ ಶಿಲಾಯುಗ
* ಸೂಕ್ಷ್ಮ ಶಿಲಾಯುಗ
* ನೂತನ-ತಾಮ್ರ ಶಿಲಾಯುಗ
* ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ
* ಇತಿಹಾಸ ಯುಗ

ಸಂಶೋಧನೆಯ ಲೇಖನಗಳು, ವೈಜ್ಞಾನಿಕ ವರದಿಗಳು, ಮಹಾ ಪ್ರಬಂಧಗಳು ಇವೆಲ್ಲವನ್ನು ಬಹುಮಟ್ಟಿಗೆ ಗಮನಿಸಿ ತುಲನಾತ್ಮಕವಾಗಿ ನೋಡಿದಾಗ ಮಲಪ್ರಭಾ ನದಿ ಪ್ರದೇಶ ಭಾರತದಲ್ಲೆ ಅತ್ಯಂತ ಪ್ರಮುಖವಾದ ಕೆಲವೇ ಪ್ರದೇಶಗಳಲ್ಲಿ ಒಂದು ಎನ್ನುವುದು ಸ್ಪಷ್ಟವಾಗುತ್ತದೆ. ಈ ಪ್ರದೇಶ ವಿಶೇಷವಾಗಿ ಪ್ರಾಗಿತಿಹಾಸ ಶಿಲಾ ಸಂಸ್ಕೃತಿ ಕಾಲದ ಗವಿ/ಬಂಡೆ ಚಿತ್ರಗಳ ಮಹಾ ಆಗರ. ಈ ನದಿ ತೀರದ ವರ್ಣಕಲೆಯು ಭೀಮ್ಬೇಟ್ಕ ಪ್ರದೇಶಕ್ಕಿಂತ ಪ್ರಾಚೀನದೆಂದು ಹೇಳಬಹುದು.

ಕೆಂದೂರು ನೆಲೆಯು ಸ್ಥಳೀಯವಾಗಿ ಕೆಂದೂರು ಕೆರೆ ಗೊಂದಿಯೆಂದು ಕರೆಯಲ್ಪಡುತ್ತದೆ. ಈ ನೆಲೆಯು ಮಲಪ್ರಭಾ ನದಿಯ ಎಡದಂಡೆಯಲ್ಲಿದ್ದು ಕೆಂದೂರಿನಿಂದ ೨.೫ ಕಿ.ಮೀ. ಹಾಗೂ ೧೩ ಕಿ.ಮೀ. ಬಾದಾಮಿಯಿಂದ ಈಶಾನ್ಯಕ್ಕಿದೆ. ಹಾಗೆಯೇ ಬಾದಾಮಿಯಿಂದ ಪಟ್ಟದಕಲ್ಲಿಗೆ ಹಾದು ಹೋಗುವ ರಸ್ತೆಯ ಎಡಭಾಗದಲ್ಲಿ ಉತ್ತರ-ದಕ್ಷಿಣಾಭಿಮುಖವಾಗಿ ಸು. ೧.೫ ಕಿ.ಮೀ. ಚಾಚಿಕೊಂಡಿರುವ ಮರಳುಗಲ್ಲು ಗುಡ್ಡದಲ್ಲಿನ ಘಡಿಗಳಲ್ಲಿ ಪ್ರಾಗಿತಿಹಾಸ ವರ್ಣಚಿತ್ರಗಳನ್ನು ೨೦೧೩ರ ಜನವರಿಯಲ್ಲಿ ಶೋಧಿಸಲಾಗಿದೆ.

## ವರ್ಣಚಿತ್ರಗಳ ವಿವರಣೆ

**ವಜ್ರಾಕೃತಿ** – ಕೆಂದೂರು ನೆಲೆ(ಚಿತ್ರ ೧)ಯಲ್ಲಿ ಹಾಗೂ ಹುಲ್ಲಿಗೆಮ್ಮ ಕೊಳ್ಳ, ಹೀರೆ ಗುಡ್ಡ, ತಿಮ್ಮಪ್ಪ ಗುಡ್ಡ, ಅರೆ ಗುಡ್ಡ, ಹಂಸನೂರು, ಹುಲಿ ಘಡಿ, ಮತ್ತು ಐಹೊಳೆ ನೆಲೆಗಳಲ್ಲಿ ದೊರೆತಿರುವ ವಜ್ರಾಕೃತಿ ವರ್ಣಚಿತ್ರಗಳ ಜೊತೆಗೆ ತಟಕೋಟಿಯಲ್ಲಿ ದೊರೆತಿರುವ ರೇಖಾಚಿತ್ರವು ಮಲಪ್ರಭ



ಚಿತ್ರ ೧. ವಜ್ರಾಕೃತಿ ಕೆಂಪು ವರ್ಣಚಿತ್ರ

ತೀರದಲ್ಲಿ ಸಾಮಾನ್ಯವಾಗಿದ್ದು ವೈಶಿಷ್ಟತೆಯನ್ನು ಬೀರಿವೆ. ವಿಶೇಷವೇನೆಂದರೆ ಇಂತಹ ವರ್ಣ/ರೇಖಾ ಚಿತ್ರಗಳು ದಕ್ಷಿಣ ಭಾರತದಲ್ಲಿ ಇದುವರೆಗೂ ಕಂಡುಬಂದಿರುವ ಯಾವುದೇ

* ಡೆಕ್ಕನ್ ಕಾಲೇಜ್, ಪೋಸ್ಟ್ ಗ್ರಾಜ್ಯುಯೇಟ್ ಆ್ಯಂಡ್ ರಿಸರ್ಚ್ ಇನ್ಸ್ಟಿಟ್ಯೂಟ್, ಪುಣೆ-೪೧೧೦೦೬.

ದಾಖಲೆಯಿಲ್ಲ. ಅಷ್ಟೆಯಲ್ಲದೆ ಭಾರತದಲ್ಲೂ ತುಂಬಾ ವಿರಳ ಉದಾಹರಣೆಗೆ ಚಂದ್ರವತಿ ನೆಲೆ (ಗುಜರಾತ್) ಯಲ್ಲಿ ದೊರೆತ ಹಳೆ ಅಂತಿಮ ಶಿಲಾಯುಗದ ತಿರುಳಿನ ಮೇಲೆ ಇಂತಹ ವಜ್ರಾಕೃತಿ ರೇಖಾಚಿತ್ರಗಳಿದ್ದು ಇವು ಈ ಘಟ್ಟಕ್ಕೆ ಸೇರಿದ್ದವೆಂಬುದು ಪ್ರೊ. ಸೊನವನೆ (೧೯೮೭) ಅವರ ಅಭಿಪ್ರಾಯ. ಹಾಗೆಯೇ ಪ್ರಪಂಚದ ಎಲ್ಲಾ ಭಾಗದ ವಿಧ್ವಾಂಸರು ಅಭಿಪ್ರಾಯಪಟ್ಟಿರುವಂತೆ ಇಂತಹ ವರ್ಣ/ರೇಖಾ ಚಿತ್ರಗಳು ಪ್ರಾರಂಭದ ಹಂತಕ್ಕೆ ಸೇರುತ್ತವೆ. ಈ ಹಿನ್ನಲೆಯಲ್ಲಿ ನೋಡುವುದಾದರೆ ಇಂತಹ ಚಿಹ್ನೆಗಳು ಆದಿ ಮಾನವರ ಮೊದಲ ಪ್ರಯತ್ನವೆಂದರೆ ತಪ್ಪಾಗಲಾರದು. ಈ ಚಿಹ್ನೆಗಳು ಹೆಚ್ಚು ಗೂಢತೆಯಿಂದ ಕೂಡಿದ್ದರೂ ಆದಿ ಮಾನವರ ಭಾವನೆಗಳ ಸಾರಾಂಶವನ್ನು ಬಿಂಬಿಸುವ ಮೊದಲ ಹಂತ.

ಈ ವಜ್ರಾಕೃತಿಗಳ ಜೊತೆಗೆ ಹಲವು ಅಪರೂಪದ ಚಿಹ್ನೆ/ರೇಖೆಗಳನೊಳಗೊಂಡ ವರ್ಣಚಿತ್ರಗಳನ್ನು ಚಿತ್ರಿಸಿದ್ದಾರೆ (ಚಿತ್ರ ೨).

**ಕಪ್ಪೆ** – ಕಪ್ಪೆಯು ಕೆಂಪು ವರ್ಣದಲ್ಲಿದ್ದು ಅದನ್ನು ನೈಸರ್ಗಿಕವಾಗಿಯೇ ತೋರಿಸಲಾಗಿದೆ. ಈ ವರ್ಣಚಿತ್ರವು ಹೆಚ್ಚು ಗಮನಾರ್ಹವಾಗಿದ್ದು ಭಾರತೀಯ ವರ್ಣಚಿತ್ರಗಳಲ್ಲಿ ವಿಶೇಷ ಸ್ಥಾನವನ್ನು ಪಡೆದುಕೊಂಡಿದೆ. ಯಾಕೆಂದರೆ ಇದುವರೆಗೂ ಬಹುಶಃ ಯಾವುದೇ ನೆಲೆಯಲ್ಲಾಗಲಿ ಕಂಡುಬಂದಿರುವ ನಿದರ್ಶನಗಳಿಲ್ಲ.



ಚಿತ್ರ ೪. ಕಪ್ಪೆಯ ವರ್ಣಚಿತ್ರ

**ಗೂಳಿ** – ಇಲ್ಲಿ ಕಂಡುಬಂದಿರುವ ಗೂಳಿಯು ಹೆಚ್ಚು ವೈಶಿಷ್ಠತೆಯಿಂದ ಕೂಡಿದ್ದು ಪ್ರಾಯಶಃ ಅದರ ತಲೆಯು ಕಂಡುಬರುತ್ತಿಲ್ಲ. (ಹಿಂಭಾಗಕ್ಕೆ ಮುಖ ಮಾಡಿದಂತಿದೆ). ಇದರ ಗುಣಲಕ್ಷಣಗಳನ್ನು ಗಮನಿಸಿದರೆ ಇದು ಅಂತ್ಯ ಶಿಲಾಯುಗ/ಸೂಕ್ಷ್ಮಶಿಲಾಯುಗಕ್ಕೆ ಸೇರಿದೆ. ಆದರೆ ಈ ಹಂತದಲ್ಲಿ ದನ–ಗೂಳಿಯ ವರ್ಣ/ರೇಖಾ ಚಿತ್ರಗಳು







ಚಿತ್ರ ೨. ಚಿಹ್ನೆ/ರೇಖೆಗಳನೊಳಗೊಂಡ ವರ್ಣಚಿತ್ರಗಳು

**ಜಿಂಕೆ** – ಜಿಂಕೆಯು ಆನಾದಿ ಕಾಲದಿಂದಲೂ ಬೇಟೆಯಾಡಿಕೊಂಡಿರುವ ಪ್ರಾಣಿಗಳಲ್ಲಿ ಒಂದಾಗಿದ್ದು ಇಂದಿಗೂ ಅದರ ಪ್ರವೃತಿ ಮುಂದುವರೆದುಕೊಂಡು ಬಂದಿದೆ. ಇಲ್ಲಿನ ಜಿಂಕೆಯು ತುಂಬ ಸರಳರೇಖೆಗಳಿಂದ ಕೂಡಿದ್ದರೂ



ಚಿತ್ರ ೩. ಜಿಂಕೆಯ ವರ್ಣಚಿತ್ರ

ಹೆಚ್ಚು ವೈಶಿಷ್ಠತೆಯಿಂದ ಕೂಡಿದೆ (ಚಿತ್ರ ೩). ಹಾಗೆಯೇ ಈ ನದಿ ತೀರದಲ್ಲಿ ಇದುವರೆಗೂ ಸುಮಾರು ೨೮ಕ್ಕೂ ಹೆಚ್ಚು ಜಿಂಕೆಗಳನ್ನು ಗುರುತಿಸಿದ್ದು ಇವೆಲ್ಲವೂ ವಿಶೇಷವಾಗಿ ಕೆಂಪು ವರ್ಣದಲ್ಲಿವೆ.



ಚಿತ್ರ ೫. ಗೂಳಿಯ ವರ್ಣಚಿತ್ರ

ಬಹಳ ವಿರಳ. ಅವು ಸ್ಪಷ್ಟವಾಗಿ ಸಾಕು ಪ್ರಾಣಿಗಳಾಗಿರದೆ ಕಾಡಿನವಾಗಿರುತ್ತವೆ. ಅನಂತರದ ಕಾಲಘಟ್ಟಗಳಲ್ಲಿ ಅಂದರೆ ನೂತನ ಶಿಲಾಯುಗ–ತಾಮ್ರಶಿಲಾಯುಗ ಮತ್ತು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯಲ್ಲಿ ಈ ಪ್ರಾಣಿಗಳು ಸಮೃದ್ಧವಾಗಿ ಕಂಡುಬರುತ್ತವೆ. ಈ ಕಾಲಘಟ್ಟದಲ್ಲಿ ಹೆಚ್ಚಾಗಿ ಸಾಕುಪ್ರಾಣಿಗಳನ್ನು ಕಾಣುತ್ತೇವೆ.

**ಉಷ್ಟ್ರಪಕ್ಷಿ** – ಉಷ್ಟ್ರಪಕ್ಷಿಯು ಪಕ್ಷಿಗಳಲಿಯೇ ಅತಿ ದೊಡ್ಡದಾಗಿದ್ದು ಅದರ ಸಂತತಿಯು ಭಾರತದಲ್ಲಿ ಸಂಪೂರ್ಣವಾಗಿ ನಶಿಸಿಹೋಗಿದೆ. ಅದು ಹೆಚ್ಚಾಗಿ ಆಫ್ರಿಕಾ ಹಾಗೂ ಆಸ್ಟ್ರೇಲಿಯಾ ಖಂಡಗಳಲ್ಲಿ ಕಂಡುಬರುತ್ತದೆ. ಭಾರತದಲ್ಲಿ ಈ ಸಂತತಿಯು ಪೂರ್ವದಲ್ಲಿದ್ದುದ್ದಕ್ಕೆ



ಚಿತ್ರ ೬. ಉಷ್ಟ್ರಪಕ್ಷಿಯ ವರ್ಣಚಿತ್ರ

ಸಾಕಷ್ಟು ಪುರಾವೆಗಳಿವೆ. ಮೊಟ್ಟೆಚಿಪ್ಪು, ಮಣಿಗಳ ರೂಪದಲ್ಲಿ ಉತ್ತರ ಭಾರತದಲ್ಲಿ ದೊರೆತಿವೆ, ಉದಾಹರಣೆಗೆ ಮಹಾರಾಷ್ಟ್ರದ ಪಟ್ನ್ (ಸಾಲಿ ೧೯೮೪), ಮಧ್ಯ ಪ್ರದೇಶದ ಖಾಪರ್‌ಖೇಡ, ರಾಜಸ್ಥಾನದ ಕತೋಅಟಿ (ಬ್ಲಿಕಾಮ್ & ಇತರರು ೨೦೧೪) ಆದರೆ ದಕ್ಷಿಣ ಭಾರತದಲ್ಲಿ ಇದುವರೆಗೂ ಅಂಥಹ ಯಾವುದೇ ಪುರಾವೆಗಳಿಲ್ಲ. ಈ ದೃಷ್ಟಿಯಿಂದ ಕೆಂದೂರು ನೆಲೆಯಲ್ಲಿ ಕಂಡುಬಂದಿರುವ ಉಷ್ಟ್ರಪಕ್ಕಿಯ ವರ್ಣಚಿತ್ರವು (ಚಿತ್ರ ೭) ಹೊಸ ಸಂಚಲವನ್ನುಂಟುಮಾಡಿದೆ.

**ಮನುಷ್ಯರ ಚಿತ್ರಗಳು** – ಮನುಷ್ಯರ ಚಿತ್ರಗಳು ಪ್ರಾಣಿಚಿತ್ರಗಳಂತೆ ವರ್ಣಚಿತ್ರಗಳಲ್ಲಿ ಸಾಮಾನ್ಯವಾಗಿದ್ದು ವಿಭಿನ್ನವಾಗಿವೆ. ಇದು ಮನುಷ್ಯರ ಹಾಗು ಪ್ರಾಣಿಗಳ ನಡುವೆ ಇದ್ದ ಒಡನಾಟವನ್ನು ಬಿಂಬಿಸುತ್ತದೆ. ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಮಾನವನು ಅನಾದಿ ಕಾಲದಿಂದಲೂ ತನ್ನ ಜೀವನೋಪಾಯಕ್ಕಾಗಿ ಅವನು ಪ್ರಾಣಿಗಳ ಮೇಲೆ ಅವಲಂಬಿತನಾಗಿದ್ದನೆಂದು ಇದರಿಂದ ಅರ್ಥೈಯಿಸಬಹುದು. ಈ ನೆಲೆಯಲ್ಲಿ ಆರು ಮನುಷ್ಯರ ಕೆಂಪು ವರ್ಣಚಿತ್ರಗಳಿವೆ (ಚಿತ್ರ ೭).

**ಪರಿಸರ** – ಈ ನೆಲೆಯ ಸುತ್ತಮುತ್ತಲ್ಲಿನ ಪ್ರದೇಶವು ಅಂದಿನ ಜೀವನಾಂಶಕ್ಕೆ ಬೇಕಾಗುವ ನೈಸರ್ಗಿಕ ಪದಾರ್ಥಗಳನ್ನು ಸಂಗ್ರಹಣೆ ಮಾಡುವುದರ ಜೊತೆಗೆ ಬೇಟೆಯಾಡಲು ಸೂಕ್ತವಾದ ಪರಿಸರವನ್ನು ಒದಗಿಸುತ್ತದೆ. ಈ ಭಾಗದಲ್ಲಿ ಬೇಟೆಯಾಡುವ ಪ್ರವೃತಿಯು ಇಂದಿಗೂ ಮುಂದುವರೆದುಕೊಂಡು ಬಂದಿದೆ.

ಇಲ್ಲಿ ಘಡಿಗಳ ಕೂಗಳತೆಯ ದೂರದಲ್ಲಿಯೇ ಕೇಲವು ನೀರಿನ ಬುಗ್ಗೆಗಳು ಹಾಗು ಒಂದು ಪ್ರಾಚೀನ ಕೆರೆ ಇದೆ ಸ್ಥಳೀಯ ಜನರು ಕುಡಿಯಲು ಉಪಯೋಗಿಸುತ್ತಾರೆ.

ಈ ಮೇಲೆ ವಿವರಣೆ ನೀಡಿದ ಎಲ್ಲಾ ವರ್ಣಚಿತ್ರಗಳ ವಿನ್ಯಾಸ, ರೀತಿ, ಕ್ರಮ, ವೈಶಿಷ್ಠತೆ ಹಾಗೂ ಇತರ ಲಕ್ಷಣಗಳನ್ನು ಗಮನಿಸಿದರೆ ಹೆಚ್ಚಿನ ವರ್ಣಚಿತ್ರಗಳು ಅಂತ್ಯ ಹಳೇ ಶಿಲಾಯುಗ/ಸೂಕ್ಷ್ಮ ಶಿಲಾಯುಗಕ್ಕೆ ಸೇರಿವೆ. ಇಲ್ಲಿನ ವರ್ಣಚಿತ್ರಗಳು ವಿಭಿನ್ನವಾಗಿದ್ದು ಪುರಾತತ್ವ ಅಧ್ಯಯನ ದೃಷ್ಠಯಲ್ಲಿ ಹೆಚ್ಚು ಮೆರುಗನ್ನುಂಟುಮಾಡಿವೆ.



**ಚಿತ್ರ ೭. ಮನುಷ್ಯರ ಕೆಂಪು ವರ್ಣಚಿತ್ರಗಳು**



## ಆಧಾರ ಗ್ರಂಥಗಳು


೧. ಬ್ಲಿಕಾಮ್ ಜೆ, ಹೇಮ ಎ, ಆ್ಯಂಡ್ ಪೆಟ್ರಗ್ಲಿಯ, ಎಮ್. ೨೦೧೫. ಆಸ್ಟ್ರಿಚ್ ಎಕ್ಸಪ್ಯಾಸನ್ ಇನ್‌ಟು ಇಂಡಿಯ ಡ್ಯೂರಿಂಗ್ ದಿ ಲೇಟ್ ಪ್ಲೆಸ್ಟೋಸಿನ್: ಇಮ್‌ಪ್ಲಿಕೇಷನ್ ಫಾರ್ ಕಾಂಟಿನೆಂಟಲ್ ಕಂಟ್ರಿ, ಪ್ಯಾಲಿಯೋಗ್ರಫಿ, ಪ್ಯಾಲಿಯೋಚಿಮಟೊಲಜಿ, ಪ್ಯಾಲಿಯೋಎಕಲಜಿ ೪೧೭: ೮೦–೯೦.

೨. ಫೂಟ್, ಆರ್.ಬಿ. ೧೯೧೬. ದಿ ***ಫೂಟ್ ಕಲೆಕ್ಷನ್ ಆಫ್ ದಿ ಇಂಡಿಯನ್ ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್: ನೋಟ್ಸ್ ಆನ್ ದೇರ್ ಏಜಸ್*** ಆ್ಯಂಡ್ ಡಿಸ್ಟ್ರಿಬ್ಯೂಷನ್ಸ್, ಮದ್ರಾಸ್ ಸರಕಾರ, ಮದ್ರಾಸ್.

೩. ಜೋಶಿ, ಆರ್.ವಿ. ೧೯೫೫. ***ಪ್ಲಿಸ್ಟೋಸಿನ್ ಸ್ಟಡೀಸ್ ಇನ್ ದಿ ಮಲಪ್ರಭ ಬೇಸಿನ್***, ಡೆಕ್ಕನ್ ಕಾಲೇಜ್, ಪೊ.ಗ್ರಾ.ರಿ.ಇ. ಪುಣೆ ಮತ್ತು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಜೋಶಿ, ಆರ್.ವಿ. ೧೯೫೬. ಮಾರ್ಫಾಲಜಿಕಲ್ ಅನಲೆಸಿಸ್ ಆಫ್ ಮಲಪ್ರಭ ಬೇಸಿನ್ (ಇನ್ ಮೈಸೂರು ಸ್ಟೇಟ್) ಬಾಂಬೆ, ಜಿಯೋಗ್ರಾಫಿಕಲ್ ಮ್ಯಗಜಿನ್ ೫೧(೧): ೩೩–೩೯.

೫. ಮೋಹನ ಆರ್. ೨೦೧೩. ನ್ಯೂಲಿ ಡಿಸ್ಕವರಿಡ್ ರಾಕ್ ಅರ್ಟ್ ಸೈಟ್ಸ್ ಇನ್ ನಾರ್ಥ್ ಕರ್ನಾಟಕ. ಅನುರ ಮನತುಂಗ ಆ್ಯಂಡ್ ಸಿ.ಡಿ.ಎಸ್. ವೆಟ್ಟೆವ (***ಏಷ್ಯನ್ ಅರ್ಟ್, ಕಲ್ಚರ್ ಆ್ಯಂಡ್ ಹೆರಿಟೇಜ್***) ಪುಟ ೧೯೧–೧೯೮. ಇಂಟರ್‌ನ್ಯಾಷನಲ್ ಅಸೋಸಿಯೆಷನ್ ಫಾರ್ ಏಷ್ಯನ್ ಹೆರಿಟೇಜ್, ಸಂಟರ್ ಫಾರ್ ಏಷ್ಯನ್ ಸ್ಟಡೀಸ್, ಯೂನಿವರ್ಸಿಟಿ ಆಫ್ ಕೆಲಾನಿಯ, ಶ್ರೀ ಲಂಕಾ.

೭. ಮೋಹನ ಆರ್. ೨೦೧೪. ಮುಲ್ಲೂರು, ಚಿಂಚಖಂಡಿ ಮತ್ತು ಈಶ್ವರಪ್ಪನ ಕೊಳ್ಳದ ಶಿಲಾಯುಗ ಸಂಸ್ಕೃತಿಯ ಒಂದು ಪುರಾತಾತ್ವಿಕ ಅಧ್ಯಯನ. ಇತಿಹಾಸ ದರ್ಶನ ಸಂ. ೨೯: ಪುಟ ೧೦–೧೨.

೮. ಮೋಹನ ಆರ್. ೨೦೧೫ᵃ. ಹಂಸನೂರು: ಪ್ರಾಗೈತಿಹಾಸಿಕ ವರ್ಣಚಿತ್ರಕಲೆನೆಲೆಯ ಅನ್ವೇಷಣೆ. ಇತಿಹಾಸ ದರ್ಪಣ ಸಂ. ೨೪: ಪುಟ ೧೧–೧೭.

೮. ಮೋಹನ ಆರ್. ೨೦೧೫ᵇ. ***ರೀಡಿಂಗ್ ರಾಕ್ ಅರ್ಟ್: ಇಂಟರ್‌ಪ್ರಿಟೀಂಗ್ ಟೆಂಪರಲ್ ಆ್ಯಂಡ್ ಜಿಯೊಗ್ರಾಫಿಕ್ ವ್ಯಾರಿಯಬಿಲಿಟಿ ಇನ್ ದಿ ಲೋಯರ್ ಮಲಪ್ರಭ ಬೇಸಿನ್***, ಕರ್ನಾಟಕ. ಪಿಎಚ್.ಡಿ. ಮಹಾ ಪ್ರಬಂಧ (ಅಪ್ರಕಟಿತ), ಡೆಕ್ಕನ್ ಕಾಲೇಜ್, ಪೋಸ್ಟ್ ಗ್ರಾಜ್ಯೇಟ್ ಅಂಡ್ ರೀಸರ್ಚ್ ಇನ್ಸ್ಟಿಟ್ಯೂಟ್, ಪುಣೆ

೯. ಮೋಹನ ಆರ್. ಮುತ್ತು ಹೇಮಂತ್ ದಳವಿ ೨೦೧೫. ಜಿಯೋಗ್ರಾಫಿಕಲ್ ಡಿಸ್ಟ್ರಿಬ್ಯೂಷನ್ ಆಫ್ ರಾಕ್ ಆರ್ಟ್ಸ್ ಕರ್ನಾಟಕ. ಪೋಸ್ಟರ್ ಪ್ರೆಸೆನ್‌ಟೆಡ್ ಇನ್ ನ್ಯಾಷನಲ್ ಕಾನ್ಫರೆನ್ಸ್ ಆನ್ ಏಷಿಯನ್ ಸೈನ್ಸ್ ಆ್ಯಂಡ್ ಟೆಕ್ನಾಲಜಿ ರೆಟ್ರಾಸ್ಪೆಕ್ಷನ್ ಆ್ಯಸ್ಪಿರೇಷನ್ ೧೧–೧೨ ಜನವರಿ, ೨೦೧೫, ಪುಣೆ.

೧೦. ನ್ಯೂಮಯರ್, ಇ. ೧೯೯೩. ***ಲೈನ್ಸ್ ಆನ್ ಸ್ಟೋನ್ಸ್: ದಿ ಪ್ರಿ ಹಿಸ್ಟಾರಿಕ್ ರಾಕ್ ಆಫ್ ಇಂಡಿಯ***. ಮನೋಹರ್ ಪ್ರಕಾಶನ ಆ್ಯಂಡ್ ಡಿಸ್ಟ್ರಿಬ್ಯೂಷನ್ಸ್, ನ್ಯೂ ಡೆಲ್ಲಿ.

೧೧. ಕೋರಿ ಶೆಟ್ಟರ್ ರವಿ ಮುತ್ತು ಪೆಟ್ರಗ್ಲಿಯ ೧೯೯೩. ಎಕ್ಸ್‌ಪ್ಲೊರೇಷನ್‌ಇನ್ ಮಲಪ್ರಭ ವ್ಯಾಲಿ, ಕರ್ನಾಟಕ, ಮ್ಯಾನ್ ಆ್ಯಂಡ್ ಎನ್‌ಫಿರಾನ್‌ಮೆಂಟ್ XVIII(1): ೪೩–೪೮.

೧೨. ಪಪ್ಪು ಆರ್. ಎಸ್. ಮುತ್ತು ಎಸ್. ಈ. ದೇವ್. ೧೯೯೪. ***ಮ್ಯಾನ್‌ಲ್ಯಾಂಡ್ ರಿಲೇಶನ್‌ಶಿಪ್ಸ್ ಡ್ಯೂರಿಂಗ್ ಪೇಲಿಯೊಲಿಥಿಕ್ ಟೈಮ್ಸ್*** ಇನ ***ದಿ ಕಲ್ದಗಿ ಬೇಸಿನ್***. ಡೆಕ್ಕನ್ ಕಾಲೇಜ್, ಪೊ.ಗ್ರಾ.ರಿ.ಇ. ಪುಣೆ.

೧೩. ಸಾಲಿ, ಎಸ್.ಎ. ೧೯೮೪. ರೋಲ್ ಆಫ್ ಒಪನ್ ಏರ್ ಸೈಟ್ಸ್ ಇನ್ ದಿ ರೀಜನ್ ಆಫ್ ರಾಕ್ ಶೆಲ್ಟರ್ ಸೈಟ್ಸ್. ಕೆ.ಕೆ. ಚಕ್ರವರ್ತಿ (***ರಾಕ್ ಆರ್ಟ್ ಆಫ್ ಇಂಡಿಯ***), ಪುಟ ೧೧೨–೧೧೯. ನ್ಯೂ ಡೆಲ್ಲಿ, ಅರ್ನಲ್ಡ್–ಹೈನೆಮನ್.

೧೪. ಸುಂದರ ಅ. ೧೯೭೫. ***ದಿ ಅರ್ಲಿ ಚೆಂಬರ್ ಟೂಂಬ್ಸ್ ಆಫ್ ಸೌತ್*** ಇಂಡಿಯ, ಕಂನ್ಸೆಪ್ಟ್ ಪಬ್ಲೀಷ್ ಕಂಪನಿ, ನ್ಯೂ ಡೆಲ್ಲಿ.

೧೫. ಸುಂದರ ಅ. ೧೯೯೪. ***ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ***. ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.



# ಬಂಗಾರ ನಾಯಕನ ಬೆಟ್ಟದ ಪ್ರಾಗಿತಿಹಾಸ ರೇಖಾ ಚಿತ್ರಗಳ ಶೋಧ

ರವೀಶ ಜಿ.ಎನ್.*

**ಪಾ**ವಗಡ ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೨ ಕಿ.ಮೀ. ದೂರದಲ್ಲಿರುವ ಬಂಗಾರ ನಾಯಕನ ಬೆಟ್ಟದಲ್ಲಿ ಹೊಸದಾಗಿ ದೊರೆತ ಪ್ರಾಗಿತಿಹಾಸ ಕಾಲದ ರೇಖಾ ಚಿತ್ರಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ವಿಶೇಷವೆಂದರೆ ಈ ವರ್ಣ ಚಿತ್ರಗಳನ್ನು ವರ್ಷಕ್ಕೊಮ್ಮೆ ತಮ್ಮ ಹೆಣ್ಣು ಮಕ್ಕಳಿಗೆ ಯಾವುದೇ ರೀತಿಯಲ್ಲಿ ಕೇಡಾಗದಿರಲೆಂದು ಬೇಡ ಸಮುದಾಯದವರು ಇಂದಿಗೂ ಆರಾಧಿಸುವ ಪರಂಪರೆಯನ್ನು ರೂಡಿಗತ ಮಾಡಿ ಕೊಂಡಿದ್ದಾರೆ. ಅಂದರೆ ಈ ಬೆಟ್ಟದಲ್ಲಿರುವ ನಾಗರ ಹೆಡೆಯಂತಹ ಹೆಬ್ಬಂಡೆಯಲ್ಲಿ ಪ್ರತಿ ತಿಂಗಳ ಅಮಾವಾಸ್ಯೆ ದಿನ ರಕ್ತದ ಗಡ್ಡೆಗಳು ಹಾಗೂ ಪ್ರತಿ ತಿಂಗಳಿಗೊಮ್ಮೆ ಹೆಣ್ಣಿಗೆ ಋತುಸ್ರಾವ ಆದಂತೆ ಈ ಬೆಟ್ಟಕ್ಕೆ ಆಗುತ್ತದೆ ಎಂಬ ನಂಬಿಕೆ ಇಲ್ಲಿನ ಸ್ಥಳೀಯರಲ್ಲಿದ್ದು, ವರ್ಷಕ್ಕೊಮ್ಮೆ ಈ ನಾಗರ ಕಲ್ಲಿಗೆ ಪೂಜೆ ಸಲ್ಲಿಸಿ ಅಲ್ಲಿಯೇ ಸಮೀಪ ಇರುವ ಬೂದು ಗುಂಡು ಎಂಬ ಕಲ್ಲಾಸರೆಯಲ್ಲಿ ಪ್ರಾಗಿತಿಹಾಸ ಚಿತ್ರಗಳಿಗೆ ಸುಣ್ಣ ಬಳಿದು ಅವುಗಳನ್ನು ಪೂಜಿಸುತ್ತಾರೆ. ಹಾಗಾಗಿ ಈ ಬೆಟ್ಟವನ್ನು ಇಂದಿಗೂ ಹೆಣ್ಣು ಬೆಟ್ಟ ಎಂತಲೇ ಕರೆಯುತ್ತಾರೆ. ಈ ಐತಿಹ್ಯಕ್ಕೆ ಪೂರಕವಾಗಿಯೆ ಈ ವರ್ಣ ಚಿತ್ರಗಳಲ್ಲಿ ನಾಗರ ಹೆಡೆ, ಸ್ತ್ರೀಯ ಪ್ರಸೂತಿಗೆ ಸಂಬಂಧಿಸಿರುವಂತಹ, ನಗ್ನ ಸ್ತ್ರೀ ಚಿತ್ರಗಳೇ ಹೆಚ್ಚಾಗಿ ಕಂಡುಬರುತ್ತವೆ. ಬಹುಶಃ ಈ ಹಿನ್ನೆಲೆಯಿಂದಲೇ ಪರಿಸರದಲ್ಲಿ ಬಾಣಂತಿ ಗುಂಡು, ಬಾಣಂತಿ ಬಾವಿ, ಕನ್ನೆಲ ಬೆಟ್ಟ ಹಾಗೂ ನವಶಿಲಾಯುಗದ ಆಯುಧ ಗಳನ್ನು ಪೊಲೇರಮ್ಮ, ಮಾರಮ್ಮ, ದುರ್ಗಮ್ಮ, ಸಪ್ಲಮ್ಮ ಮೊದಲಾದ ಹೆಣ್ಣು ದೇವತೆಗಳನ್ನಾಗಿ ಆರಾಧಿಸುವ ಗೌರವಯುತವಾಗಿ ಕಾಣುವಂತಹ ಪರಿಪಾಟ ಇಂದಿಗೂ ಇದೆ ಎಂಬ ಸಂದೇಹ ಏರ್ಪಡುತ್ತದೆ. ಹಾಗಾಗಿಯೇ ಬಹು ಅಪರೂಪದ ಪ್ರಾಗಿತಿಹಾಸ ಕಾಲಕ್ಕೆ ಸೇರಿದ ಸ್ತ್ರೀಯ ಪ್ರಸೂತಿಯ ಚಿತ್ರ ಈ ಬೆಟ್ಟದಲ್ಲಿ ಕಂಡುಬರುವುದು.

ಬೆಟ್ಟದ ಮಧ್ಯ ಭಾಗದಲ್ಲಿರುವ ಮೂರು ಗುಂಡು ಎಂಬ ಕಲ್ಲಾಸರೆಯಲ್ಲಿ ಒಟ್ಟು ೨೫ ಸ್ತ್ರೀ, ಪುರುಷ, ಗೂಳಿ, ನಾಗರ ಹೆಡೆ, ತ್ರಿಶೂಲ ಚಿತ್ರಗಳು ಬಿಳಿ ಬಣ್ಣದಲ್ಲಿವೆ. ಈ ಚಿತ್ರಗಳಲ್ಲಿ ವ್ಯಕ್ತಿಯೊಬ್ಬ ತನ್ನ ಎರಡು ಕಾಲಿನ ಪಾದಗಳನ್ನು ನೆಲದ ಮೇಲೆ ಊರಿದ್ದು ಎರಡು ಕೈಗಳನ್ನು ಮೇಲಕ್ಕೆ ಎತ್ತಿದ್ದಾನೆ. ಅಲ್ಲದೆ ಆತನ ಕೈ ಬೆರಳುಗಳನ್ನು ಸ್ಪಷ್ಟವಾಗಿ ಬಿಡಿಸಿದೆ. ಸ್ತ್ರೀಯೊಬ್ಬಳು ಬಲಗೈಯನ್ನು ತನ್ನ ಸೊಂಟದ ಮೇಲಿಟ್ಟುಕೊಂಡು ಮತ್ತೊಂದನ್ನು ಮೇಲಕ್ಕೆ ಎತ್ತಿದ್ದಾಳೆ. ಆಕೆಗೆ ಕುಚ(ಮೊಲೆ)ಗಳನ್ನು ಬಿಡಿಸಿದ್ದು, ಮುಖವನ್ನು ವರಹದಂತೆ ಚಿತ್ರಿಸಿದ್ದು, ಕಿವಿಗಳನ್ನು ಸ್ಪಷ್ಟವಾಗಿ ಕಾಣುವಂತೆ ತೋರಿಸಲಾಗಿದೆ. ಮತ್ತಿಬ್ಬರು ತನ್ನ ಎರಡು ಕೈಗಳನ್ನು ಭುಜದ ಭಾಗಕ್ಕೆ ಸಮವಾಗಿ ಎತ್ತಿದ್ದು. ಅವರಿಗೆ ಶಿಷ್ನವನ್ನು ತೋರಿಸಲಾಗಿದೆ. ಮತ್ತೊಬ್ಬ ತನ್ನ ಬಲಗೈಯನ್ನು ಅರ್ಧ ಮೇಲಕ್ಕೆತ್ತಿದ್ದು ತನ್ನ ಎರಡು ಕಾಲುಗಳನ್ನು ಅಗಲಿಸಿ ನಿಂತುಕೊಂಡಿದ್ದಾನೆ. ಅವನ ತಲೆಯ ಭಾಗಕ್ಕೆ ಹೊಂದಿಕೊಂಡು ಕಾಲ್ಪನಿಕ ಚಿತ್ರವೊಂದಿದೆ. ಈ ಚಿತ್ರದ ಕೆಳಗೆ ಇಬ್ಬರು ವ್ಯಕ್ತಿಗಳು ಭುಜ ಭಾಗಕ್ಕೆ ಹೊಂದಿಕೊಂಡಂತೆ ನಿಂತುಕೊಂಡಿದ್ದಾರೆ. ಇವರ ಪಕ್ಕದಲ್ಲೂ ಕಾಲ್ಪನಿಕ ಚಿತ್ರ ವಿದೆ. ಇದರ ಕೆಳಗೆ ಸ್ತ್ರೀಗೆ ಯೋನಿ, ದೇಹದಿಂದ ಪಕ್ಕಕ್ಕೆ ಸರಿದಿರುವ ಕುಚ(ಸ್ತನ) ಹಾಗೂ ತುರುಬನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಕಾಲ್ಪನಿಕ ಚಿತ್ರದ ಮೇಲ್ಭಾಗದಲ್ಲಿ ಸ್ತ್ರೀಯ ಯೋನಿಯಿಂದ ಹೊರಬರುತ್ತಿರುವ ಮಗುವನ್ನು ಹಾಗೂ ಆಕೆಯ ಎರಡು ಕುಚ (ಮೊಲೆ, ಸನ್ತ)ಗಳಿಂದ ಹಾಲನ್ನು ಕುಡಿಸುತ್ತಿರುವಂತೆ ತೋರಿಸಲಾಗಿದೆ. ಆಕೆಯ ತಲೆಯನ್ನು ನವಿಲಿನಂತೆ ಚಿತ್ರಿಸಿದ್ದು, ಕೈಬೆರಳುಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಆಕೆಯ ಬಲ ಭುಜದ ಮೇಲೆ ವ್ಯಕ್ತಿಯೊಬ್ಬ ನಿಂತಿರುವ ಮತ್ತು ನಾಗ ಹೆಡೆಯೆತ್ತಿರುವ ಚಿತ್ರವು ಹೆರಿಗೆಯ ಸಂದರ್ಭದಲ್ಲಿ ಆಕೆಗೆ ಯಾವುದೇ ಕೇಡಾಗಬಾರ ದೆಂದು ನಾಗಾರಾಧನೆ ಗೈದಿರುವುದನ್ನು ಸಂಕೇತಿಸುವಂತಿದೆ. ಈ ಚಿತ್ರದ ಕೆಳ ಭಾಗದಲ್ಲಿ ಎರಡು ಗೂಳಿಗಳ ಮಧ್ಯೆ ವ್ಯಕ್ತಿಯೊಬ್ಬ ನಿಂತಿದ್ದು ಆಯಾ ತಪ್ಪಿ ಬಲಕ್ಕೆ ಬೀಳುವಂತಿದೆ. ಇದರ ಪಕ್ಕದಲ್ಲಿಯೆ ವ್ಯಕ್ತಿ ತನ್ನ ಎರಡು ಕೈಗಳನ್ನು ಭುಜ ಭಾಗಕ್ಕೆ ಎತ್ತಿ ಎರಡು ಕಾಲುಗಳನ್ನು ಅಗಲಿಸಿ ನಿಂತಿದ್ದಾನೆ.

* S/o ನಾರಾಯಣಪ್ಪ, ಗುಂಡ್ಲಾರಹಳ್ಳಿ, ಬ್ಯಾಡನೂರು ಪೋಸ್ಟ್, ಪಾವಗಡ ತಾಲೂಕು, ತುಮಕೂರು ಜಿಲ್ಲೆ–೫೬೧೨೦೨



ಬೂದುಗುಂಡು ಕಲ್ಲಾಸರೆ



ಪ್ರಾಗಿತಿಹಾಸ ರೇಖಾ ಚಿತ್ರಗಳು

ಇದರ ಕೆಳಗೆ ಇಬ್ಬರು ವ್ಯಕ್ತಿಗಳು ತಮ್ಮ ಕೈಗಳನ್ನು ಎತ್ತಿ ನಿಂತಿರುವಂತೆ, ಮತ್ತೊಬ್ಬ ಬಲಗೈಯಲ್ಲಿ ನಾಗರಹಾವನ್ನು ಹಿಡಿದುಕೊಂಡಿರುವುದನ್ನು ಹೀಗೆ ಚಿತ್ರಿಸಲ್ಪಟ್ಟ ಈ ರೇಖಾ ಚಿತ್ರಗಳು ಸ್ಥಳೀಯವಾಗಿ ಇಂದು ಬೂದು ಗುಂಡು ಎಂದು ಕರೆಯಲ್ಪಡುವಂತಹ ಕಲ್ಲಾಸರೆಯಲ್ಲಿ ಕಂಡುಬರುವುದರಿಂದ ಬೂದಿಯ ಕಲ್ಪನೆ ಸಹಜವಾಗಿ ನವಶಿಲಾಯುಗವನ್ನು ಸೂಚಿಸುತ್ತದೆ. ಹಾಗಾಗಿ ಪಶುಪಾಲನೆಗೆ ಸಂಬಂಧಿಸಿದ ಈ ಚಿತ್ರಗಳು ನವಶಿಲಾಯುಗಕ್ಕೆ ಸೇರುತ್ತವೆ. ಸ್ತ್ರೀ ಮತ್ತು ಪುರುಷನ ಪಾದ ಮತ್ತು ಅಂಗೈಯನ್ನು ಸ್ಪಷ್ಟವಾಗಿ ಚಿತ್ರಿಸಲ್ಪಟ್ಟಿರುವುದು ಇತಿಹಾಸ ಆರಂಭ ಕಾಲವನ್ನು ಸೂಚಿಸುತ್ತದೆ.





ಪ್ರಾಗಿತಿಹಾಸ ರೇಖಾ ಚಿತ್ರಗಳು





# ಬೆಂಗಳೂರು ಪೂರ್ವ ತಾಲ್ಲೂಕು ಕೈಕೊಂಡ್ರಹಳ್ಳಿಯಲ್ಲಿ ನಾಗತ್ತರನ ಅಪ್ರಕಟಿತ ಶಾಸನ

**ಆದಪ್ಪ ಪಾಸೋಡಿ***

**ಬೆಂ**ಗಳೂರು–ಸರ್ಜಾಪುರ ಮುಖ್ಯರಸ್ತೆಯ ಕೈಕೊಂಡ್ರಹಳ್ಳಿ ನಿಲ್ದಾಣದಲ್ಲಿ ಇಳಿದು ಪೂರ್ವಕ್ಕೆ ಸುಮಾರು ೧೦೦ ಮೀಟರುಗಳಷ್ಟು ದೂರ ಹೋಗಿ, ಜೈನ್ ಹೈಟ್ಸ್ ಕಟ್ಟಡದ ಎದುರಿಗೆ ಬಲತಿರುವು ಪಡೆದು ಕೆ.ಪಿ.ಟಿ.ಸಿ.ಎಲ್. ಬಡಾವಣೆ ರಸ್ತೆಯಲ್ಲಿ ಮತ್ತೆ ಎರಡನೆಯ ಬಲತಿರುವು ತಗೆದುಕೊಳ್ಳಬೇಕು. ಟಿ.ಎನ್.ಟಿ. ಎಮೆರಾಲ್ಡ್ ಅಪಾರ್ಟ್‌ಮೆಂಟಿನ ಎದುರಿಗೆ (ಜಿ.ಎ. ಶ್ರೀಕಂಠಯ್ಯನವರದೆಂದು ಹೇಳಲಾಗುವ) ವಾಣಿಜ್ಯ ಮಳಿಗೆಯ ಹಿಂಭಾಗದಲ್ಲಿ ಬೇವಿನ ಗಿಡದ ಕೆಳಗೆ (ನೀಲಗಿರಿ ಮರವೂ ಪಕ್ಕದಲ್ಲಿದೆ) ಪೂರ್ವಾಭಿಮುಖವಾಗಿ ನಿಲ್ಲಿಸಿದ ನಾಗತ್ತರನನ್ನು ಉಲ್ಲೇಖಿಸುವ ಗಂಗರ ಕಾಲದ ಅಪ್ರಕಟಿತ ವೀರಗಲ್ಲು ಶಾಸನವಿದೆ. ದೊಮ್ಮಸಂದ್ರ–ಬೆಂಗಳೂರು ರಸ್ತೆಯಿಂದ ಬರುವವರು ವಿಪ್ರೋ ತಂತ್ರಜ್ಞಾನ ಸಂಸ್ಥೆಯ (ಮೋರಿ ಗೇಟ್) ನಿಲ್ದಾಣದಲ್ಲಿ ಇಳಿದು, ಪಶ್ಚಿಮಕ್ಕೆ ಸುಮಾರು ೧೦೦ ಮೀಟರು ದೂರ ಕ್ರಮಿಸಿ, ಭೂಮಿ ಪ್ಲಾಜಾ ಕಟ್ಟಡದ ಪಕ್ಕದಿಂದಲೂ ಈ ಸ್ಥಳವನ್ನು ತಲುಪಬಹುದಾಗಿದೆ.

**ಕೈಕೊಂಡ್ರಹಳ್ಳಿ ಸ್ಥಳನಾಮ:** ಕೈಕೊಂಡ್ರಹಳ್ಳಿ ಸ್ಥಳನಾಮವು ಇಲ್ಲಿಯವರೆಗೆ ಶಾಸನೋಕ್ತವಾಗಿರುವುದಿಲ್ಲ. ಸಾಮಾನ್ಯವಾಗಿ ಸ್ಥಳನಾಮಗಳಲ್ಲಿ ಎರಡು ಆಕೃತಿಮಾಗಳಿರುತ್ತವೆ. ಆದರೆ ಪ್ರಸ್ತುತ 'ಕೈಕೊಂಡ್ರಹಳ್ಳಿ' ಯಲ್ಲಿ ಕೈ+ಕೊಂಡ+ನ+ಹಳ್ಳಿ ಅಥವಾ ಕೈ+ಕೊಂಡ+ರ+ಹಳ್ಳಿ–ಇಲ್ಲಿ ಎರಡಕ್ಕಿಂತ ಹೆಚ್ಚು ಆಕೃತಿಮಾಗಳಿರುವುದು ಕಂಡುಬರುತ್ತದೆ. ಹೀಗೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ಆಕೃತಿಮಾಗಳುಳ್ಳ ಸ್ಥಳನಾಮಗಳು ಆಯಾ ಸ್ಥಳ ವೈಶಿಷ್ಟ್ಯದ ವಿವರಣಾತ್ಮಕ ಗುಣವನ್ನು ಹೇಳುತ್ತವೆ. ಕಯ+ಗಾವುಂಡ+ನ+ಹಳ್ಳಿ>ಕೈ+ಗೊಂಡ+ನ+ಹಳ್ಳಿ> ಕೈಗೊಂಡ್ನಹಳ್ಳಿ ಅಥವಾ ಕೈಗೊಂಡ್ರಹಳ್ಳಿ ಆಗಿರುತ್ತದೆ. ಇಲ್ಲಿ ಕಯ ಅಥವಾ ಕಯಂ ಎಂಬ ಪದವು ಕೊಳ ಜಲಾಶಯ ಇಲ್ಲವೆ ಜಲಸಂಬಂಧವುಳ್ಳ ಭೂಭಾಗವೆಂಬ ಅರ್ಥ ತುಳು ಮತ್ತು ತಮಿಳು ಭಾಷೆಗಳಲ್ಲಿ ಕಂಡು ಬರುತ್ತದೆ.[೧]

ಗ್ರಾಮದ ಮುಖಂಡ–ಗಾಮುಂಡ–ಗೌಂಡ–ಗೊಂಡ–ಗವುಡ–ಗೌಡ ಆಗಿರುವುದರಿಂದ ಜಲಮೂಲವಾಗಿರುವ ಕೆರೆಗಳ ನೀರಿನಾಶ್ರಯದಲ್ಲಿ ಗಾಮುಂಡನೊಬ್ಬನು ಕಟ್ಟಿರುವ ಹಳ್ಳಿ (ಸಣ್ಣಊರು) ಎಂಬರ್ಥ ಬರುತ್ತದೆ. ಇನ್ನು ಕೈ+ಕೊಂಡ+ನ/ರ+ಹಳ್ಳಿ–ಈ ಸಮಸ್ತ ಪದದಲ್ಲಿ ಸಂಬಂಧವಾಚಕ ಮಧ್ಯಪ್ರತ್ಯಯವಾದ 'ನ' ಅಥವಾ 'ರ' ಗಳು ಷಷ್ಠಿ ವಿಭಕ್ತಿಯ ಪ್ರತ್ಯಯಗಳಾಗಿರುತ್ತವೆ. ಇಂತಹ ಸ್ಥಳನಾಮಗಳು ತುಮಕೂರು ಜಿಲ್ಲೆಯಲ್ಲಿಯೂ ಕಂಡು ಬರುತ್ತವೆ. ಉದಾ: ಗೌರಗೌಡನಿಂದಾಗಿ ಗೌರಗೊಂಡನಹಳ್ಳಿ, ಮಾದಗೌಡನ ದೆಸೆಯಿಂದಾಗಿ ಮಾದಗೊಂಡನಹಳ್ಳಿ, ದ್ಯಾವಗೊಂಡನಹಳ್ಳಿ, ಗಿರಿಗೊಂಡನಹಳ್ಳಿ ಇತ್ಯಾದಿ[೨]. ಪ್ರಸ್ತುತ ಈ ಊರಿನ ಪಶ್ಚಿಮಕ್ಕಿರುವ ಕೈಕೊಂಡ್ರಹಳ್ಳಿ ಕೆರೆಯು, ಕೈಕೊಂಡ್ರಹಳ್ಳಿ ಗ್ರಾಮದ ಸರ್ವೆ ನಂಬರ್ ೮೪ ೧೮ ಎಕರೆ ೧೮ ಗುಂಟೆ ಹಾಗೂ ಕಸವನಹಳ್ಳಿ ಸರ್ವೆ ನಂ. ೭೦ರ ೩೦ ಎಕರೆ ೫ ಗುಂಟೆ, ಹೀಗೆ ಒಟ್ಟು ೪೮ ಎಕರೆ ೨೩ ಗುಂಟೆ ವ್ಯಾಪ್ತಿಯನ್ನು ಹೊಂದಿದೆ[೩]. ಅದರಂತೆ ಊರಿನ ಉತ್ತರ ದಿಕ್ಕಿಗೆ ೬೧ ಎಕರೆ ೩೭ ಗುಂಟೆ ವಿಸ್ತಾರವಾಗಿರುವ ಸಾವಳಕೆರೆಯೂ ಇಲ್ಲಿದೆ[೪]. ಈ ಎರಡೂ ಕೆರೆಗಳು ಸೇರಿ ಒಟ್ಟು ೧೧೦ ಎಕರೆ ೨೦ ಗುಂಟೆ ವಿಸ್ತೀರ್ಣದ ನೀರಿನ ಮೂಲ ಈ ಊರಿಗಿದೆ. ಕೈಕೊಂಡ್ರಹಳ್ಳಿ ಕೆರೆ ಕೋಡಿಯಿಂದ ಹರಿಯುವ ನೀರಿನ ರಾಜಕಾಲುವೆಯು ಗ್ರಾಮದ ಉತ್ತರಕ್ಕೆ ಸಾಗಿದೆ. ಕೈಕೊಂಡ್ರಹಳ್ಳಿ ಕೆರೆಯಲ್ಲಿ ಅಪಾರ ಪ್ರಮಾಣದ ಜಲಸಂಗ್ರಹದಿಂದಾಗಿ ಊರಿನ ಉತ್ತರಕ್ಕಿರುವ ತಗ್ಗು ಪ್ರದೇಶದಲ್ಲಿ ಚೌಳು ಉಂಟಾಗಿ ಅಲ್ಲಿಯೂ ಒಂದು ಕೆರೆ ನಿರ್ಮಿಸುವ ಪ್ರಮೇಯ ಬಂದಿರಬಹುದು. ಈ ಕಾರಣಕ್ಕಾಗಿಯೇ ತಗ್ಗು ಪ್ರದೇಶದ ಚೌಳುಕೆರೆಯು ಅಪಭ್ರಂಶವಾಗಿ ಸಾವಳಕೆರೆಯಾಗಿ ಕರೆಯಲ್ಪಡುತ್ತಿದೆ. ಒಟ್ಟಾರೆಯಾಗಿ ಕೈಕೊಂಡ್ರಹಳ್ಳಿ ಕೆರೆಯ ಜಲಮೂಲವೇ ಸ್ಥಳನಾಮ ಬರಲು ಕಾರಣವಾಗಿದ್ದು, ಅನಂತರದಲ್ಲಿ ಸಾವಳಕೆರೆಯ ನಿರ್ಮಾಣವಾಗಿದೆ.

* ಆಂಗ್ಲಭಾಷಾ ಶಿಕ್ಷಕ, ಸರ್ಕಾರಿ ಪ್ರೌಢಶಾಲೆ, ಅಗರ, ಸರ್ಜಾಪುರ ರಸ್ತೆ, ಬೆಂಗಳೂರು–೫೬೦೧೦೨.

**ವೀರಗಲ್ಲು ಶಿಲ್ಪ :** ನಾಗತ್ತರನನ್ನು ಉಲ್ಲೇಖಿಸುವ ಕೈಕೊಂಡ್ರಹಳ್ಳಿಯ ವೀರಗಲ್ಲು ಶಾಸನವು ನೆಲಮಟ್ಟದಿಂದ ೧.೩೦ ಮೀ. ಎತ್ತರ, ೧.೦೦ ಮೀ. ಅಗಲ, ೧೬ ಸೆಂ.ಮೀ. ದಪ್ಪನೆಯ ಗಟ್ಟಿಯಾದ ಬಿಳಿ ಗ್ರಾನೈಟ್‌ನಲ್ಲಿ ಮಾಡಲ್ಪಟ್ಟಿದೆ. ಶಿಲ್ಪಿಯು ವೀರಗಲ್ಲಿನ ಶಿಲ್ಪ ವಿನ್ಯಾಸದ ಕ್ರಮವನ್ನು ಎರಡು ಹಂತಗಳಲ್ಲಿ ವಿಂಗಡಿಸಿಕೊಂಡಿದ್ದಾನೆ. ವೀರಗಲ್ಲಿನ ತಳಭಾಗ ದಿಂದ ಮುಖ್ಯ ವಿಷಯವಾದ ವೀರನ ಹೋರಾಟ, ವೀರನ ಎಡಭಾಗದ ೨೦x೪೦ ಸೆಂ.ಮೀ. ವಿಸ್ತೀರ್ಣದಲ್ಲಿ ೧೨ ಸಾಲುಗಳ ಶಾಸನವಿದೆ. ಈ ಹಂತ ಮುಗಿದುದಕ್ಕೆ ಶಿಲ್ಪಿಯು ಕಲ್ಲಿನ ಮೇಲೆ ರೇಖೆಯನ್ನೆಳೆದು, ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯು ತ್ತಿರುವುದನ್ನು ತೋರಿಸಲಾಗಿದೆ. ಮುಖ್ಯ ಭಾಗದಲ್ಲಿ ವೀರಗಲ್ಲಿನ ಬಲಗಡೆಯಿಂದ ವೀರನು ತನ್ನ ಎಡಗಾಲನ್ನು ಮುಂದೆ ಇಟ್ಟು ಮುನುಗ್ಗುತ್ತಿದ್ದಾನೆ. ವೀರನ ಮುಂದೆ ಶತ್ರು ಕುಬ್ಜನಾಗಿ ಹತನಾಗಿ ಬೋರಲು ಬಿದ್ದಿರುತ್ತಾನೆ. ಅವನು ತನ್ನ ಬಲಗೈ ಯಲ್ಲಿದ್ದ ಉದ್ದನೆಯ ಬಾಣದ (ಬಾಕು?) ತುದಿಯಿಂದ ಶತ್ರುವಿನತ್ತ ತಿವಿಯಲು ಚಾಚಿರುತ್ತಾನೆ. ಎಡಗೈಯಲ್ಲಿರುವ ಬಿಲ್ಲು ಹೆಚ್ಚೂ ಕಡಿಮೆ ವೀರನ ಎತ್ತರದಷ್ಟೇ ಇದೆ. ವೀರನ ಟೊಂಕಕ್ಕೆ ಬಲಭಾಗದಲ್ಲಿ ಶಸ್ತ್ರಕವಚವಿದೆ. ಅವನ ಮೊಣಕಾಲು, ಟೊಂಕ ಹಾಗೂ ಎಡಭುಜಗಳಿಗೆ ಎದುರಿನಿಂದ ಮೂರು ಬಾಣಗಳು ತಾಕಿರುತ್ತವೆ. ಬಲತೊಡೆ, ಪೃಷ್ಠಭಾಗ, ಟೊಂಕದ ಮೇಲ್ಭಾಗಗಳಿಗೆ ಶತ್ರು ಪಕ್ಷದವರ ಬಾಣಗಳು ನಾಟಿದ್ದರೂ ಅವುಗಳನ್ನು ಲೆಕ್ಕಿಸದೆ ವೀರನು ತನ್ನ ಹೋರಾಟ ವನ್ನು ಮುಂದುವರಿಸಿದ್ದಾನೆ. ವೀರನಿಗೆ ಕರ್ಣಕುಂಡಲ, ತಲೆಯ ಮೇಲೆ ಮುಡಿ ಇದ್ದು, ಕಣ್ಣು-ಮೂಗುಗಳನ್ನು ಅಸ್ಪಷ್ಟವಾಗಿ ಕಂಡರಿಸಲಾಗಿದೆ.

ವೀರನ ಹಿಂಭಾಗದಲ್ಲಿ ರಣವೀಳ್ಯದ ಸಂಕೇತವಾದ ಹಡಪ (ಎಲೆ ಅಡಿಕೆ ಚೀಲ) ವನ್ನು ಗೋಡೆಯಲ್ಲಿರುವ ಗೂಟಕ್ಕೆ ಹಾಕಿರುವಂತೆ ಉಬ್ಬುಶಿಲ್ಪದಲ್ಲಿ ತೋರಿಸಲಾಗಿದೆ. ಯುದ್ಧಕ್ಕೆ ಹೊರಡುವ ಮುನ್ನ ವೀರನಾದವನಿಗೆ ತಾಂಬೂಲವನ್ನು ಕೊಟ್ಟು ಅರಸರು ಕಳುಹಿಸುತ್ತಿದ್ದರೆಂಬ ಅಂಶ ಇದರಿಂದ ತಿಳಿದು ಬರುತ್ತದೆ[೫]. ಭಾರತೀಯ ಸಂಸ್ಕೃತಿ ಯಲ್ಲಿ 'ತಾಂಬೂಲ'ಕ್ಕೆ ವಿಶೇಷ ಗೌರವವಿದ್ದು, ಶುಭಸಂದರ್ಭ ಗಳಲ್ಲಿ ಇದನ್ನು ಜನರಿಗೆ ಕೊಡುವುದು ಒಂದು ಗೌರವದ ಸಂಕೇತವಾಗಿರುತ್ತದೆ. ಕರ್ನಾಟಕದ ಉತ್ತರ ಭಾಗದ ಜಿಲ್ಲೆಗಳಲ್ಲಿ ಇಂದಿಗೂ ಮದುವೆ, ಸೀಮಂತ ಕಾರ್ಯಕ್ರಮಗಳ ಮುನ್ನಾ ದಿನದಂದು ಊರಿನ ಹಿರಿಯರೆಲ್ಲರೂ ಕಾರ್ಯಕ್ರಮ ಆಯೋಜಿಸುವವರ ಮನೆಯ ಮುಂದೆ ಸೇರಿ, ಒಂದೊಂದು ಕೆಲಸದ ಜವಾಬ್ದಾರಿಯನ್ನು ಒಂದೊಂದು ತಂಡಕ್ಕೆ ವಹಿಸಿ, ತಂಡದ ನಾಯಕನಿಗೆ ವೀಳ್ಯದೆಲೆ-ದುಂಡು ಅಡಿಕೆ ಕೊಟ್ಟು, ನಿರ್ವಹಿಸಬೇಕಾದ ಕೆಲಸಗಳನ್ನು ತಿಳಿಸುತ್ತಾರೆ. ವೀಳ್ಯ ಪಡೆದ ನಾಯಕನು ತನ್ನ ತಂಡದ ಸದಸ್ಯರ ಸಹಕಾರದೊಂದಿಗೆ ವಹಿಸಿದ ಕೆಲಸವನ್ನು ಯಶಸ್ವಿಗೊಳಿಸುವ ಜವಾಬ್ದಾರಿಯನ್ನು ಮನಗಾಣುತ್ತಾನೆ. ಈ ವೀಳ್ಯ ಕೊಡುವ ಪದ್ಧತಿಯು 'ಜವಾಬ್ದಾರಿ ನಿರ್ವಹಣೆ'ಯ ಸಂಕೇತವೂ ಆಗಿರುತ್ತದೆ. ಅಂದು ಅರಸನು ವೀರನೊಬ್ಬನನ್ನು ಕರೆದು ಕಾಳಗಕ್ಕೆ ಕಳುಹಿಸುತ್ತಿರುವ ಸಂದರ್ಭದಲ್ಲಿ ವೀಳ್ಯ ಕೊಡುತ್ತಿದ್ದ ಪದ್ಧತಿಯು ಇಂದಿಗೂ ಹೀಗೆ ಉಳಿದುಕೊಂಡು ಬಂದಿರಬಹುದು.

ವೀರಗಲ್ಲಿನ ಎರಡನೆಯ ಹಂತದಲ್ಲಿ ವೀರನು ಬಲಗಾಲು ಮಡಿಚಿ ಪೀಠದ ಮೇಲೆ ಕುಳಿತಿರುತ್ತಾನೆ. ಬಲಗೈ ಯಲ್ಲಿ ಹೂ ಹಿಡಿದು ಬಲಭುಜಕ್ಕೆ ಇಟ್ಟುಕೊಂಡಿದ್ದು, ಎಡಪಾದ ವನ್ನು ನೆಲದ ಮೇಲೆ ಇಟ್ಟು, ಮೊಣಕಾಲಿನ ಮೇಲೆ ಎಡಗೈ ಚಾಚಿರುತ್ತಾನೆ. ಇಕ್ಕೆಲಗಳಲ್ಲಿ ಅಪ್ಸರೆಯರು ಚಾಮರಧಾರಿಣಿ ಯರಾಗಿದ್ದಾರೆ. ವೀರನು ತನ್ನ ಬಲಗೈಯಲ್ಲಿ ಕಮಲವೊಂದನ್ನು ಹಿಡಿದಿರುವಂತೆ ಚಿತ್ರಿಸಿರುವ ಈ ಬಗೆಯ ವೀರಗಲ್ಲುಗಳು ಬೆಟಗೇರಿಯಲ್ಲಿ ಕಂಡು ಬಂದಿರುತ್ತವೆ. ಎರಡು ಅಥವಾ ಮೂರು ಹಂತಗಳ ಕ್ರಮವನ್ನು ಅನುಸರಿಸಿರುವ ಇಂತಹ ವೀರಗಲ್ಲುಗಳು ಸುಮಾರು ಒಂಭತ್ತನೆಯ ಶತಮಾನದಿಂದ ಹಿಡಿದು ಹದಿನಾಲ್ಕನೆಯ ಶತಮಾನದ ಅವಧಿಯಲ್ಲಿ ಕಂಡು ಬರುತ್ತವೆ.

**ಶಾಸನ ಪಾಠ**

೧ ಸ್ವಸ್ತಿ ಶ್ರೀ
೨ ಕಲಿಯುಗದ
೩ ಣುವಂ ನಾಗತ
೪ ರಂ ರಾಜ್ಯಂಗೆ
೫ ಯ್ಯುತ್ತಿರೆ ಕಣ್ನಿ
೬ ಲಿಯ ಎಜೆಯ
೭ ಮ್ಮ ಗಾವುಣ್ಡನಾಳು
೮ ಎಜೆಯಂಗ ವಾ
೯ ದರಗಂ ಯೂರಳಿವಿ
೧೦ ನಲ್ಸತ್ತಂ ಅವನ ಮ
೧೧ ಗಂ ಮಾರಸಿಂಘ ವಾ
೧೨ ದರಗಂ ಮಾಡಿಸಿದಂ

**ಶಾಸನ ಸಾರಾಂಶ:** ಆರಂಭದಲ್ಲಿ ಶುಭಸೂಚಕ ಪದ 'ಸ್ವಸ್ತಿಶ್ರೀ' ಇದ್ದು, ಕಲಿಯುಗದಣುವ (ಹನುಮಂತ) ನಾದ ನಾಗತ್ತರನು ರಾಜ್ಯಭಾರ ಮಾಡುತ್ತಿದ್ದಾಗ, ಕಣ್ನಿಲಿಯ

ಎಱೆಯಮ್ಮ ಗಾವುಂಡನಾಳು ಎಱೆಯಂಗ ವಾದರಗ (ಬಾದುರಗ = ಸಾಹಸಿ, ವೀರ, ಶೂರ) ನು ಊರಳಿವಿನಲ್ಲಿ ಸತ್ತನು. ಅವನ ಮಗನಾದ ಮಾರಸಿಂಘ ವಾದರಗನು ಈ ವೀರಗಲ್ಲನ್ನು ಮಾಡಿಸಿದನು. ಪ್ರಸ್ತುತ ವೀರಗಲ್ಲು ಶಾಸನದಲ್ಲಿ ನಾಲ್ವರು ವ್ಯಕ್ತಿಗಳು ಉಕ್ತರಾಗಿದ್ದಾರೆ. ಅವರೆಂದರೆ – ನಾಗತ್ತರ, ಎಱೆಯಮ್ಮ ಗಾವುಂಡ, ಎಱೆಯಂಗ ಮತ್ತು ಮಾರಸಿಂಘರು. ಗಾವುಂಡನ ಆಳು ಎಱೆಯಂಗ ಹಾಗೂ ಅವನ ಮಗ ಮಾರಸಿಂಘರಿಗೆ ಮಾತ್ರ 'ವಾದರಗಂ' ಎಂಬ ವಿಶೇಷಣ ಸೇರಿದ್ದು, ಅದು ಸಮಾಸವೆಂಬಂತೆಯೂ ಭಾಸವಾಗುತ್ತದೆ. ಇಲ್ಲಿ ತಂದೆ–ಮಗ ಇಬ್ಬರೂ ವೀರರೇ, ಇವರು ತಮ್ಮ ಆಪ್ತತೆ ಮತ್ತು ಪ್ರಾಮಾಣಿಕತೆಯಿಂದ ಕಣ್ಣಿಲಿಯ ಗಾವುಂಡನಗೆ ನೆಚ್ಚಿನ ಬಂಟರಾಗಿದ್ದರು. ಇಂತಹ ವೀರಕುಟುಂಬಗಳು ತಮ್ಮ ವೀರಪರಂಪರೆಯನ್ನು ಮುಂದುವರೆಸಿರುವುದಕ್ಕೆ ಶಾಸನಾಧಾರ ಗಳಿವೆ. 'ಕಣ್ಣಿಲಿ'ಯ ಗ್ರಾಮಾಧಿಪತ್ಯವನ್ನು ಎಱೆಯಮ್ಮ ಗಾವುಂಡನು ವಹಿಸಿಕೊಂಡಿದ್ದನು. ಗಾವುಂಡ ಮತ್ತು ಅವನ ಆಳು – ಇಬ್ಬರ ಹೆಸರುಗಳೂ 'ಎಱೆಯ' ಎಂಬ ಅಂಕಿತ ನಾಮದಿಂದ ಪ್ರಾರಂಭವಾಗುತ್ತವೆ. ತಲಕಾಡಿನ ಗಂಗರಲ್ಲಿ ಒಂದನೆಯ ಎರೆಯಂಗ, ಎರಡನೆಯ ಎರೆಯಪ್ಪ, ಎರೆಯಪ್ಪ ಅಥವಾ ಎರೆಯಂಗ, ರಾಣಿ ಜಾಕಬ್ಬೆಯ ಪತಿ ನಾಲ್ಕನೆಯ ಎರೆಯಪ್ಪ – ಹೀಗೆ ನಾಲ್ಕು ಜನ ಅರಸರು ಆಗಿ ಹೋಗಿದ್ದಾರೆ. ವೃತ್ತಿಯಲ್ಲಿ ಗಾವುಂಡ–ಆಳು ಎಂಬ ಭೇದ–ಭಾವವಿಲ್ಲದೆ ಗಂಗರಸರ ಅಂಕಿತಗಳನ್ನು ಜನಸಾಮಾನ್ಯರು ಪ್ರೀತಿಪೂರ್ವಕ ವಾಗಿ ಇಟ್ಟುಕೊಳ್ಳುತ್ತಿದ್ದರೆಂದು ಇದರಿಂದ ತಿಳಿದು ಬರುತ್ತದೆ. ಪ್ರಥಮ ಬಾರಿಗೆ 'ಕಣ್ಣಿಲಿ' ಸ್ಥಳನಾಮವು ಇಲ್ಲಿ ಶಾಸನೋಕ್ತ ವಾಗಿದ್ದು, ಈ ವೀರಗಲ್ಲು ಊರಳಿವಿನಲ್ಲಿ ಸತ್ತ ಆಳಿನ ಸ್ಮಾರಕ ವಾಗಿರುತ್ತದೆ. ಗಂಗ–ನೊಳಂಬರ ನಡುವೆ ಯುದ್ಧಗಳು ನಡೆದಾಗ, ಯುದ್ಧಾ ನಂತರ ಗೆದ್ದ ಪಕ್ಷದವರು ಸೋತ ಪಕ್ಷದವರ ಗ್ರಾಮಗಳ ಮೇಲೆ ದುರಾಕ್ರಮಣ ಮಾಡುವ ಒಂದು ವಿಷಮ ಪರಿಸ್ಥಿತಿಯು 'ಕಣ್ಣಿಲಿ'ಯಲ್ಲಿ ನಿರ್ಮಾಣ ವಾಗಿತ್ತೆಂದೂ, 'ಕಣ್ಣಿಲಿ' ಊರನ್ನು ಲೂಟಿ ಮಾಡಿ, ಅಲ್ಲಿಯ ಬೆಳೆಗಳನ್ನು ನಾಶಪಡಿಸಿದಾಗ, ಗಾವುಂಡನ ಆಳು ಎಱೆಯಂಗ ವಾದರಗನು ಶತ್ರುಗಳೊಡನೆ ಕಾದಿ ಸತ್ತು ಹೋಗುತ್ತಾನೆಂದು ತಿಳಿದು ಬರುತ್ತದೆ. 'ಕಣ್ಣಿಲಿ'ಯ ಹಿತರಕ್ಷಣೆ, ಗ್ರಾಮದ ಗೌರವ, ಸಂಪತ್ತು, ಜನರ ಪ್ರಾಣ–ಮಾನವನ್ನು ಉಳಿಸಲು ತನ್ನ ಪ್ರಾಣ ವನ್ನು ಲೆಕ್ಕಿಸದೆ ಹೋರಾಡಿ ಮಡಿದ ವೀರ ಎಱೆಯಂಗನನ್ನು ಊರಿನ ಮುಖ್ಯಸ್ಥನಾದ ಎಱೆಯಮ್ಮ ಗಾವುಂಡನು ಗುರುತಿಸಿದ್ದಾನೆ. ಆದರೂ ಮಡಿದ ವೀರನ ಮನೆಯವರಿಗೆ ನಷ್ಟವನ್ನು ತುಂಬಿಕೊಡುವ ದತ್ತಿ ಬಿಟ್ಟಿರುವ ಅಂಶ ಇಲ್ಲಿ ಪ್ರಸ್ತಾಪವಾಗಿರುವುದಿಲ್ಲ.

ಈ ಅಪ್ರಕಟಿತ ಶಾಸನದಲ್ಲಿರುವ 'ನಾಗತರಂ ರಾಜ್ಯಂಗೈಯುತ್ತಿರೆ' ಎಂಬ ವಾಕ್ಯಾಂಗವು ಸೇನಾನಿಯಾಗಿದ್ದ ನಾಗತ್ತರನನ್ನು ಅರಸನ ಸ್ಥಾನಕ್ಕೇರಿಸುತ್ತದೆ. ವೀರಗಲ್ಲು ಶಾಸನದ ಕಾಲಮಾನಕ್ಕೆ ನಾಗತ್ತರನು ಗಂಗರ ಅಧೀನನಾಗಿರದೆ, ಸ್ವತಂತ್ರವಾಗಿ ರಾಜ್ಯಭಾರ ಮಾಡುತ್ತಿದ್ದನೇ? ಎಂಬ ಸಂಶಯ ಮೂಡುತ್ತದೆ. ನಾಗತ್ತರನನ್ನು ಉಲ್ಲೇಖಿಸುವ ಇಲ್ಲಿಯವರೆಗಿನ ಒಂಭತ್ತು ಶಾಸನಗಳಲ್ಲಿ ಎಲ್ಲಿಯೂ 'ನಾಗತ್ತರಂ ರಾಜ್ಯಂಗೆಯ್ಯುತ್ತಿರೆ' ಎಂಬಂತೆ ಹೇಳಿರುವುದಿಲ್ಲ. ಗಂಗರಸರ ಬಲ ಕುಗ್ಗುತ್ತಿರುವಾಗ ಸೇನಾ ಮುಖಂಡನೊಬ್ಬನು ಆಡಳಿತ ಚುಕ್ಕಾಣಿ ಹಿಡಿಯುವುದಕ್ಕಾಗಿ ಹಪಹಪಿಸುವ ವಾತಾವರಣ ನಿರ್ಮಾಣವಾಗಿತ್ತೇ? ಅಥವಾ ಗಂಗರೇ ತಮ್ಮ ನೆಚ್ಚಿನ ಸೇನಾನಿಗೆ ಇಂತಹ ಅಧಿಕಾರವನ್ನು ಹಸ್ತಾಂತರಿಸಿದ್ದರೇ? ಈ ಬಗ್ಗೆ ಇನ್ನೂ ಹೆಚ್ಚಿನ ಶಾಸನಾಧಾರಗಳು ಲಭ್ಯವಾದರೆ ಅನುಕೂಲವಾಗುತ್ತದೆ.

**ಪೂರ್ವೋಕ್ತ ನಾಗತ್ತರ:** ಕ್ರಿ.ಶ. ೮೭೦ರ ಅಗರ ಶಾಸನದಲ್ಲಿ–ನಾಗತ್ತರನು ಸತ್ಯವಾಕ್ಯ ಪೆರ್ಮಡಿ (ಎರಡನೆಯ ರಾಚಮಲ್ಲ) ಗೆ ಕಲಿಯುಗದಣುವನೆಂದು ಹೇಳಲಾಗಿದೆ[೬]. ಗಂಗದೊರೆ ಇಮ್ಮಡಿ ರಾಚಮಲ್ಲನು ಸತ್ಯವನ್ನು ಪರಿಪಾಲಿಸು ವವನಾದ್ದರಿಂದ 'ಸತ್ಯವಾಕ್ಯ' ನೆಂದೂ, ಹಿರಿಯ ಮತ್ತು ಗೌರವಾರ್ಹನಾದ್ದರಿಂದ 'ಪೆರ್ಮಡಿ' ಅಥವಾ 'ಪೆರ್ಮಾನಡಿ' ಎಂದು ಸಂಬೋಧಿಸಲ್ಪಟ್ಟಿರುತ್ತಾನೆ. ಈ ಬಿರುದುಗಳನ್ನು ಪಡೆದ ಎರಡನೆಯ ರಾಚಮಲ್ಲ (ಕ್ರಿ.ಶ. ೮೭೦–೯೦೭) ನು ಎರೆಯಪ್ಪ (ಎರೆಯಂಗ) ನ ಮಗನಾಗಿರುತ್ತಾನೆ. ಇದೇ ಶಾಸನವು ಇರ್ವುಲಿಯೂರ ಒಡೆಯ ಇರುಗಮಯ್ಯನೂ ನಾಗತ್ತರನಲ್ಲಿದ್ದನೆಂದು ಉಲ್ಲೇಖಿಸುತ್ತದೆ.

ಕ್ರಿ.ಶ.ಸು. ೮೯೦ರ ದೊಡ್ಡಬೇಗೂರಿನ ನಾಗತ್ತರನ ಶಾಸನವು 'ಶ್ರೋಣೀತಪುರವರೇಶ್ವರ' ಎಂದು ಉಲ್ಲೇಖಿಸು ತ್ತದೆ[೭]. ಮುಂದುವರೆದು 'ಶ್ರೀಮತ್ ನಾಗತ್ತರಂ ಬೀರವರ್ಮನ ಸಾಧಿಸಿ ಬಲ್ಲವರಸ ರಟ್ಟಿ . . . . ಬೆಂಪೂರೊಳ್ ಸೋಮ ನಾತನ ದೇಗುಲಮ ಮ್ಮಾಡಿಸಿದ' – ಎಂದು ತಿಳಿಸುತ್ತದೆ. ಶಾಸನೋಕ್ತ ಶ್ರೋಣೀತಪುರ ಅಥವಾ ಶೋಣಿತಪುರ ಎಂಬುದು ನರ್ಮದಾ ನದಿಯ ದಂಡೆಯ ಮೇಲಿದ್ದು, ಅದು ಬಾಣನ ಪಟ್ಟಣವಾಗಿತ್ತೆಂದು ಮಹಾಬಲಿ ಬಾಣವಂಶೀ ಯರ ಬಗೆಗಿನ ಪೌರಾಣಿಕ ಮತ್ತು ಜಾನಪದ ಕಥೆಗಳಲ್ಲಿ ಬರುತ್ತದೆ[೮].

ಕ್ರಿ.ಶ. ೯೦೦ರ ಬೇಗೂರಿನ ನಾಗೇಶ್ವರ ದೇವಾಲಯದ ಹಿಂದೆ ಪ್ರಾಕಾರದ ಗೋಡೆಗೆ ಹಾಕಿರುವ ವೀರಗಲ್ಲು ಶಾಸನವು – 'ನಾಗತ್ತರನ ಮನೆಮಗ ದಿಂ. ಪೇಗೂರ ಸ್ವರ್ಗ್ಗ ಪರಲೋಕಕೆ ಸಂದ' ಎಂದಿದೆ[೯]. ಇಲ್ಲಿ ಪೇಗೂರನ ಸಾವಿಗೆ ಕಾರಣವಾದ

ವೀರಕೃತ್ಯ ಯಾವುದೆಂದು ತಿಳಿಯದು. ಇದೇ ನಾಗೇಶ್ವರ ದೇವಾಲಯದ ಸಂಕೀರ್ಣದಲ್ಲಿ ಕಮಠೇಶ್ವರ ಗುಡಿಯ ಮುಂಭಾಗ ನೆಲಕ್ಕೆ ಹಾಸಿರುವ ಕಲ್ಲಿನಲ್ಲಿ 'ನಾಗತರನ ಮನೆವಗ ತಿಪೆರ್ಪ್ಪೊಣಸೆಟ್ಟಿ ಬೆಂಗಳೂರ ಕಾಳೆಗದೊಳ್' ಎಂದು ಉಕ್ತವಾಗಿದೆ[೧೦]. ನಾಗತ್ತರನಿಗೆ ಪೇಗೂರ ಮತ್ತು ತಿಪೆರ್ಪ್ಪೊಣಸೆಟ್ಟಿ ಎಂಬ ಇಬ್ಬರು ಮನೆ ಮಕ್ಕಳಿದ್ದರೆಂದು ತಿಳಿದು ಬರುತ್ತದೆ. ಮನೆಮಗನೆಂದರೆ ಆ ಕಾಲದಲ್ಲಿ ಪ್ರಚಲಿತವಿದ್ದ ವೇಳೆವಾಳಿಯ ರೀತಿಯಾಗಿರಬಹುದೆಂದು ಡಾ. ದೇವರಕೊಂಡಾರೆಡ್ಡಿ ಅವರು ತರ್ಕಿಸಿದ್ದಾರೆ.

ಇದೇ ಕಮಠೇಶ್ವರ ಗುಡಿಯ ಮುಂಭಾಗದ ನೆಲಕ್ಕೆ ಹಾಸಿರುವ ಶಾಸನದ ಮುಂದುವರೆದ ಭಾಗದಲ್ಲಿ 'ನಾಗತರನ ಮಗಂ ಬುಟ್ಟಣಪತಿ ಸತ್ತಂ' ಎನ್ನಲಾಗಿದೆ. ಅಂದರೆ ಬೆಂಗಳೂರು ಕೋಟೆ ಕಾಳಗದಲ್ಲಿ ಮನೆಮಗ ತಿಪ್ಪೆರ್ಪ್ಪೊಣ ಸೆಟ್ಟಿಯೊಂದಿಗೆ ಮಗನಾದ ಬುಟ್ಟಣಪತಿಯೂ ಸಾಯುತ್ತಾನೆ. ಇಲ್ಲಿ ಎದುರಾಳಿಗಳ ಉಲ್ಲೇಖವಾಗಿಲ್ಲವಾದರೂ ತಲಕಾಡು ಗಂಗರ ಪಕ್ಕದಲ್ಲಿದ್ದ ನೊಳಂಬರೇ ಬೆಂಗಳೂರು ಕೋಟೆಗೆ ಮುತ್ತಿಗೆ ಹಾಕಲು ಪ್ರಯತ್ನಿಸಿರುವ ಸಾಧ್ಯತೆಯಿದೆ. ನಾಗತ್ತರನ ಮಗಳಾದ ಕೊಣ್ಡಬ್ಬೆಯ ಕರ್ತವ್ಯವೆಳೆಗೊಂಡು ಸಾಯುತ್ತಾಳೆ[೧೧]. ಬಹುಶಃ ನಾಗತ್ತರನು ದೂರದ ತುಂಬೇಪಾಡಿ ಯುದ್ಧ ರಂಗದಲ್ಲಿದ್ದಾಗ ಮತ್ತು ನಾಗತ್ತರನ ಮಗ ಬುಟ್ಟಣ ಪತಿಯು ಬೆಂಗಳೂರು ಕೋಟೆ ಕಾಳಗದಲ್ಲಿ ನಿರತನಾಗಿದ್ದಾಗ, ಬೆಂಪೂರು ರಕ್ಷಣೆಯ ಜವಾಬ್ದಾರಿಯು ಕೊಣ್ಡಬ್ಬೆಯ ಮೇಲಿದ್ದಿರಬೇಕು. ಅಂತಹ ರಕ್ಷಣಾ ಕರ್ತವ್ಯದಲ್ಲಿದ್ದಾಗ ತನ್ನ ಜೀವವನ್ನು ತೃಣವಾಗಿಸಿ ಆಕೆ ಹೋರಾಡಿರಬೇಕು. ನಾಗತ್ತರನ ಇನ್ನೋರ್ವ ಮಗಳಾದ 'ರೊಣ್ಡಬ್ಬೆ ಸನ್ಯಸನಂಗೈದು ಮುಡಿಪಿದಳ್' ಎಂಬ ಶಾಸನವು ಬೇಗೂರು ಕೋಟೆಯ ಕಂಬದ ಮೇಲೆ ಸ್ಪಷ್ಟವಾಗಿದೆ[೧೨]. ಅದರಂತೆ ಬೆಂಗಳೂರು-೮೨ ನೆಯ ಶಾಸನವು-ಬೇಗೂರಿನಲ್ಲಿ ಚೊಕ್ಕಿಮಯ್ಯ ಜಿನಾಲಯವಿತ್ತೆಂದೂ ತಿಳಿಸುತ್ತದೆ. ಆದರೂ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾದ 'ರಾಣಿಯರು ಮತ್ತು ವೀರಮಹಿಳೆಯರು' ಪುಸ್ತಕದ 'ಬಾಣವಂಶದ ಯುವರಾಣಿ ರೊಂಡಬ್ಬೆ' ಪ್ರಬಂಧದಲ್ಲಿ 'ಶಸ್ತ್ರಸಜ್ಜಿತಳಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿದವಳು ರೊಂಡಬ್ಬೆ' ಎಂಬ ಮಾಹಿತಿಯು ತಪ್ಪಾಗಿ ನಮೂದಾಗಿದೆ.

ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿಯ ಬೊಮ್ಮೊಂಡಹಳ್ಳಿಗೆ ದಕ್ಷಿಣ ಕರದಗುಡಿ ಹಿಂದೆ ತಿಪ್ಪೇಹಳ್ಳದಲ್ಲಿರುವ ಕ್ರಿ.ಶ.ಸು. ೯೦೦ರ ಶಾಸನವು 'ಕದಂಬೂರಿನ ತುರುಗಳನ್ನು ನಾಗದೇವನೆಂಬೋನು ಕದ್ದಾಗ, ನಾಗತ್ತರನಾಳು ಮಂಗಲಬೀವಣ್ಣನು ಕಾದಿಸತ್ತ'ನೆಂದು ತಿಳಿಸುತ್ತದೆ[೧೩]. ತುರುಗಾಳಗ ನಡೆದದ್ದು ಕದಂಬೂರಿನಲ್ಲೋ ಅಥವಾ ಬೊಮ್ಮೊಂಡಹಳ್ಳಿಯಲ್ಲೋ ಸ್ಪಷ್ಟವಾಗುವುದಿಲ್ಲ. ಶಾಸನಗಳು ವೀರರ ಸ್ವಗ್ರಾಮದಲ್ಲಿ ಅಭಿಮಾನಪೂರ್ವಕವಾಗಿ ಹಾಕಿಸಲ್ಪಟ್ಟಿರುವುದರಿಂದ ಬಹುಶಃ ಬೊಮ್ಮೊಂಡಹಳ್ಳಿ (ಬೊಮ್ಮಡಹಳ್ಳಿ>ಬೊಮ್ಮನಹಳ್ಳಿ) ಯೇ ಮಂಗಲಬೀವಣ್ಣನ ಸ್ವಂತ ಊರಾಗಿರಬೇಕು. ಬೀವಣ್ಣ ಎಂಬ ಅಂಕಿತನಾಮದ ಹಿಂದೆ 'ಮಂಗಲ' ಎಂಬುದು ಬಿರುದಾಗಿರಬಹುದೇ? ಇನ್ನು 'ಮಂಗಲ' ಉತ್ತರಪದದಿಂದ ಕೊನೆಗೊಳ್ಳುವ ಸ್ಥಳನಾಮಗಳು ಆನೇಕಲ್, ಬೆಂಗಳೂರು ಪೂರ್ವ ತಾಲ್ಲೂಕು, ಬೆಂಗಳೂರು ದಕ್ಷಿಣ ಹಾಗೂ ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿ ಸರ್ವೇಸಾಮಾನ್ಯವಾಗಿ ಕಂಡು ಬರುತ್ತವೆ.

ಆನೇಕಲ್ ತಾಲ್ಲೂಕು, ಹೆಬ್ಬಗೋಡಿಯ ಶಾಸನದಲ್ಲಿ ಎಜೆಯಪ್ಪನ ಆಳ್ವಿಕೆಯಲ್ಲಿ ನಾಗತ್ತರನು ನಾಡನ್ನು ಆಳುತ್ತಿದ್ದಾಗ ನೆರಾರ(?)ನು ತುಱುಗೋಳ ಕಾಳಗದಲ್ಲಿ ಮರಣ ಹೊಂದುತ್ತಾನೆ. ಅದಕ್ಕಾಗಿ ಪೆಪ್ಪರವಾಯ್ (ಹೆಬ್ಬಗೋಡಿ) ಸ್ಥಳದಲ್ಲಿ ಕೊಳಗ ಗದ್ದೆ ದಾನದ ವಿಷಯ ಬರುತ್ತದೆ. ಇದರಿಂದ ಹೆಬ್ಬಗೋಡಿ ಪ್ರದೇಶವು ಬೆಂಪೂರು ಪನ್ನೆರಡಕ್ಕೆ ಸೇರಿತ್ತೆಂದು ಸ್ಪಷ್ಟವಾಗುತ್ತದೆ[೧೪]. ನಾಗತ್ತರನ ಶಾಸನಗಳು ಕ್ರಿ.ಶ.ಸು. ೮೭೦ ರಿಂದ ಕ್ರಿ.ಶ. ೯೧೦ ರವರೆಗಿನ ೪೦ ವರ್ಷಗಳ ಅವಧಿಗೆ ಲಭ್ಯವಾಗಿವೆಯಾದರೂ, ಮೊದಲಿನ ೨೦ ವರ್ಷಗಳಿಗೆ ಕೇವಲ ಎರಡು ಶಾಸನಗಳು ಮಾತ್ರ ಇವೆ. ಇಲ್ಲಿಯವರೆಗೆ ದೊರೆತಿರುವ ಹತ್ತೂ ಶಾಸನಗಳು ತೇದಿರಹಿತವಾಗಿದ್ದು, 'ಕ್ರಿಸ್ತಶಕ ಸುಮಾರು' ಎಂದೇ ಹೇಳಬೇಕಾಗಿದೆ.

ನಾಗತ್ತರನ ಬಗ್ಗೆ ಇರುವ ಈ ಎಲ್ಲ ಶಾಸನಗಳಿಗಿಂತಲೂ ಹೆಚ್ಚಿನ ಮಾಹಿತಿಗಳು ಬೇಗೂರು ಗ್ರಾಮದ ನಾಗೇಶ್ವರ ದೇವಸ್ಥಾನದಿಂದ ತಂದು ಬೆಂಗಳೂರಿನ ವಸ್ತು ಸಂಗ್ರಹಾಲಯದಲ್ಲಿ ಇಟ್ಟಿರುವ ವೀರಗಲ್ಲು ಶಾಸನದಲ್ಲಿರುತ್ತವೆ. ಇದರ ಕಾಲಮಾನವನ್ನು ಬಿ.ಎಲ್. ರೈಸ್ ಅವರು ಎ.ಕ. ೯ರಲ್ಲಿ ಸು. ಕ್ರಿ.ಶ. ೮೯೦ ಎಂದೂ, ಮೈಸೂರು-ಎ ಗೆಜೆಟಿಯರ್ ಕಂಪಾಯಿಲ್ಡ್ ಫಾರ್ ಗೌರ್ನಮೆಂಟ್ ಪುಸ್ತಕದಲ್ಲಿ ಕ್ರಿ.ಶ. ಸು. ೯೨೦ ಎಂದು ನಮೂದಿಸಿರುತ್ತಾರೆ. ಡಾ. ದೇವರಕೊಂಡಾರೆಡ್ಡಿ ಅವರು ಈ ಶಾಸನದ ಕಾಲಮಾನವನ್ನು ಕ್ರಿ.ಶ. ೯೦೮ ಎಂದುಕೊಂಡರೆ ಸೂಕ್ತ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಶಾಸನದಿಂದ ಗಂಗವಾಡಿ ಪ್ರಾಂತ್ಯದ ಮೊರಸುನಾಡಿನಲ್ಲಿ ಅಂತರ್ಗತವಾಗಿದ್ದ ೧೨ ಗ್ರಾಮಗಳ ಆಡಳಿತ ಘಟಕವಾದ ಬೆಂಪೊರ್ಪನ್ನೆರಡನ್ನು ನಾಗತ್ತರನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೧೫]. ಈ ಶಾಸನೋಕ್ತ ಬೆಂಪೊರ್ಪನೆರಡರ ಊರುಗಳಲ್ಲಿ ಬೆಂಪೂರನ್ನು ಈಗಿನ ದೊಡ್ಡಬೇಗೂರೆಂದು ಈಗಾಗಲೇ ಹೇಳಿದೆ. ತಮಿಳು ಶಾಸನಗಳು ಇದನ್ನು ವೆಪ್ಪೂರು

ಎಂದೂ ಕರೆದಿವೆ. ಬೆಂಪೂರು ಬೇಹೂರು ಆಗಿ ತಮಿಳರ ಉಚ್ಚಾರಣೆಯ ಮೂಲಕ ಬೇಗೂರು ಆಗಿದೆ. ಪ್ರಸ್ತುತ ಬೆಂಗಳೂರು ದಕ್ಷಿಣ ತಾಲ್ಲೂಕು, ಆನೇಕಲ್ ತಾಲ್ಲೂಕು ಹಾಗೂ ಬೆಂಗಳೂರು ಪೂರ್ವ ತಾಲ್ಲೂಕಿನ ಉಲ್ಲೇಖಿತ ಗ್ರಾಮಗಳನ್ನು ಒಳಗೊಂಡಂತೆ ರೂಪುಗೊಂಡಿದ್ದ 'ಬೆಂಪೂರು-೧೨', ಸಾಮಂತನಾದ ನಾಗತ್ತರನ ನೆಲೆವೀಡಾಗಿತ್ತು, ನಂತರದ ಶತಮಾನಗಳಲ್ಲಿ ಇದು 'ವೆಪ್ಪೂರುನಾಡು' ಎಂದೂ ಕರೆಯಲ್ಪಟ್ಟಿದೆ.

**ನಾಗತ್ತರನ ಕೋಟೆ:** ಬೆಂಪೂರು ೧೨ರ ಕೇಂದ್ರಸ್ಥಾನವಾದ ಬೇಗೂರಿನಲ್ಲಿ ನಾಗತ್ತರನು ಕಟ್ಟಿಸಿದ ಕೋಟೆ ಇದೆ. ಈ ಕೋಟೆಯು ನೆಲಮಟ್ಟದಿಂದ ಸುಮಾರು ಆರು ಮೀಟರುಗಳಷ್ಟು ಎತ್ತರ, ಮೂರು ಮೀಟರ್ ಅಗಲವಾಗಿದೆ. ವೃತ್ತಾಕಾರದ ಈ ಕೋಟೆಗೆ ೭.೫ ಮೀ ಅಗಲ, ೪.೫ ಮೀ ಆಳವಾದ ಕಂದಕವಿದೆ. ಕೋಟೆಯ ಪ್ರವೇಶದ್ವಾರವು ಪೂರ್ವ ದಿಕ್ಕಿನಲ್ಲಿದ್ದು ಇಕ್ಕೆಲಗಳಲ್ಲಿ ಮಣ್ಣಿನ ಕೊತ್ತಲುಗಳಿವೆ. ಈ ಕೊತ್ತಲುಗಳ ಹೊರಭಾಗಕ್ಕೆ ಕಲ್ಲುಗಳನ್ನು ಜೋಡಿಸಿ ಕಟ್ಟಲಾಗಿದೆ. ಕೋಟೆಗೆ ಅಲ್ಲಲ್ಲಿ ಇಂತಹ ಕೊತ್ತಲುಗಳಿದ್ದಿರುವ ಸ್ಥಳದಲ್ಲೀಗ ದಿಬ್ಬಗಳು ಮಾತ್ರ ಇದ್ದು ಒಂದು ಕೊತ್ತಲು ಸ್ಪಷ್ಟವಾಗಿ ಕಾಣಿಸುತ್ತದೆ. ಕೋಟೆಯ ಪ್ರವೇಶದ್ವಾರದ ಎಡ-ಬಲಕ್ಕಿರುವ ಶಿಲಾಮಂಟಪಗಳಲ್ಲಿ ತಲಾ ಎಂಟು ಕಲ್ಲು ಕಂಬಗಳಿರುತ್ತವೆ. ಎಡಮಂಟಪದ ಕಂಬದ ಮೇಲೆ ನಾಗತ್ತರನ ಮಗಳು ರೊಂಡಬ್ಬೆಯು ಸನ್ಯಸನಂಗೈದು ಮುಡಿಪಿರುವುದನ್ನು ಎರಡು ಕಾಲು ಮಡಿಚಿ ಕುಳಿತಿರುವಂತೆ, ಅವಳ ಎಡ-ಬಲಕ್ಕೆ ಅಪ್ಸರೆಯರನ್ನು ಉಬ್ಬುಶಿಲ್ಪದಲ್ಲಿ ಒರಟಾಗಿ ತೋರಿಸಲಾಗಿದೆ. ಮಂಟಪಕ್ಕೆ ನಂತರದಲ್ಲಿ ಸೇರಿಸಿದ ಕಂಬವೊಂದರ ಮೇಲೆ ರೆಕ್ಕೆ ಚಾಚಿ ಕೈಮುಗಿದು ನಿಂತಿರುವ ಗರುಡನ ಉಬ್ಬುಶಿಲ್ಪವಿದೆ. ಕಲಿನಿಂದ ಕಟ್ಟಿದ ಕಟ್ಟೆ ಅಥವಾ ಕಟಾಂಜನದ ಮೇಲೆ ಕಂಬಗಳನ್ನು ನಿಲ್ಲಿಸಲಾಗಿದೆ. ಕಂಬಗಳ ಅಡಿಭಾಗವು ಚೌಕು, ಆಮೇಲೆ ಅಷ್ಟಮುಖ, ಚೌಕು, ಅಷ್ಟಮುಖ, ಚೌಕು ಆಕಾರವನ್ನು ಹೊಂದಿವೆ. ಸಾದಾ ಬೋದಿಗೆಗಳ ಮೇಲೆ ಶಿಲಾತೊಲೆಗಳನ್ನು ಇಟ್ಟು ಮೇಲ್ಛಾವಣಿಗೆ ಕಲ್ಲುಚಪ್ಪಡಿಗಳನ್ನು ಜೋಡಿಸಲಾಗಿದೆ. ತೊಲೆಗಳ ಮೇಲೆ ಇಟ್ಟಿಗೆಗಳನ್ನು ಮೂರುಸ್ತರಗಳಲ್ಲಿ ಕುಂಬಿಯಂತೆ ಇತ್ತೀಚೆಗೆ ಕಟ್ಟಲಾಗಿದೆ. ಪ್ರವೇಶದ್ವಾರದಿಂದ ಕೋಟೆಯ ಒಳಗೆ ಹೋದರೆ ಕಾಶಿ ವಿಶ್ವೇಶ್ವರ (ಈಶ್ವರ) ಗುಡಿ ಇದೆ. ಗುಡಿಯ ಮುಂದೆ ಎರಡು ತ್ರುಟಿತ ಶಿಲಾಸ್ತಂಭಗಳನ್ನು ನೆಡಲಾಗಿದೆ. ಇವು ಪ್ರಾಚೀನ ದೇವಾಲಯವೊಂದರ ದ್ವಾರಪಾಲಕರ ಶಿಲ್ಪಗಳಾಗಿವೆ. ಈ ಗುಡಿಯ ಬಲಕ್ಕೆ ಪೂರ್ವಾಭಿಮುಖವಾಗಿ ಶ್ರೀಕೃಷ್ಣ (ವೇಣುಗೋಪಾಲ?) ನ ಗುಡಿಯೊಂದಿದೆ. ಇದರ ಮುಂದೆ ಪ್ರಾಚೀನ ಕಾಲದ ಕಲ್ಲುಕಂಬದ ಮೇಲೆ ಆಂಜನೇಯನ ಉಬ್ಬುಶಿಲ್ಪವಿದೆ. ಕೋಟೆಯ ಬಾಗಿಲಿಗೆ ನೈರುತ್ಯದಲ್ಲಿ ಕಲ್ಲಿನಿಂದ ಕಟ್ಟಿ ತೆಗೆದ ಕುಡಿಯುವ ನೀರಿನ ಬಾವಿಯಿದೆ. ಮೇಲ್ನೋಟಕ್ಕೆ ಈ ಬಾವಿ ಆಯತಾಕಾರವಾಗಿದ್ದು, ನೀರೆತ್ತುವ ರಾಟೆಯನ್ನು ಸ್ಥಿರಪಡಿಸುವುದಕ್ಕಾಗಿ ಎರಡು ಕಲ್ಲು ಕಂಬಗಳನ್ನು ಬಾವಿಯ ಮೇಲೆ ೪೫° ಓರೆಯಾಗಿ ನೆಲದಲ್ಲಿ ನೆಡಲಾಗಿದೆ. ಕೋಟೆಯ ಹೊರಭಾಗದ ಮೇಲ್ಮೈಗೆ ಕತ್ತಾಳೆ ಬೆಳೆದಿರುವುದನ್ನು ಈಗಲೂ ಕಾಣಬಹುದಾಗಿದೆ. ಹೀಗಿರುವ ಬೇಗೂರು ಕೋಟೆಯ ಒಳ ವಿಸ್ತೀರ್ಣವು ೩ ಎಕರೆ ೩೨ ಗುಂಟೆ ಆಗಿರುತ್ತದೆ[೧೬].

ಬೇಗೂರಿನ ಸೋಮನಾಥ ದೇವಾಲಯವನ್ನು ನಾಗತ್ತರನೇ ಮಾಡಿಸಿರುವುದರಿಂದ ನಾಗೇಶ್ವರ ದೇವಾಲಯವಾಯಿತೆಂದು ಊಹಿಸುವುದರಲ್ಲಿ ತಪ್ಪಿಲ್ಲ. ಕ್ರಿ.ಶ. ೧೨೬೨ ಹಾಗೂ ೧೩೦೦ರ ಹೊತ್ತಿಗೆ ಇಲ್ಲಿಯ ದೇವರನ್ನು ತಿರುನಾಗೇಶ್ವರಂ ಉದ್ಯೆಯ ಮಹದೇವರೆಂದು ಶಾಸನಗಳಲ್ಲಿ ಸಂಬೋಧಿಸಲಾಗಿದೆ.

**ನಾಗತ್ತರನ ವೀರಮರಣ:** ಗಂಗರ ದೊರೆ ಒಂದನೆಯ ಭೂತುಗನ ಮಗ ಇಮ್ಮಡಿ ಎಱೆಯಪ್ಪರಸನು ತನ್ನ ಶತ್ರುಗಳೆಲ್ಲರನ್ನೂ ಸೋಲಿಸಿ, ಗಂಗವಾಡಿ ೯೬೦೦೦ ವನ್ನು, ಏಕಚ್ಛತ್ರಛಾಯೆಯಲ್ಲಿ ಆಳುತ್ತಿದ್ದಾಗ, ವೀರಮಹೇಂದ್ರನಗೆ ಎದುರಾಗಿ ಯುದ್ಧ ಮಾಡಲೆಂದು, ಅಯ್ಯಪದೇವನ ಸಹಾಯಕ್ಕಾಗಿ ಸಾಮಂತಸಹಿತವಾಗಿ ಶವುಚರನ್‌ನಾದ ನಾಗತ್ತರನಿಗೆ ಸೈನ್ಯ ತೆಗೆದುಕೊಂಡು ಹೋಗಲು ಹೇಳಿದನು. ನಾಗತ್ತರನು ತುಂಬೆಪಾದಿ (ಕೊರಟಗೆರೆ ತಾಲ್ಲೂಕು ತುಂಬಾಡಿ, ತುಮಕೂರು-ಮಧುಗಿರಿ ಹೆದ್ದಾರಿ) ಎಂಬಲ್ಲಿ ಯುದ್ಧ ನಡೆದು, ತನಗೆ ಯುದ್ಧದಲ್ಲಿ ಹಿಂಜರಿಕೆ ಅಥವಾ ಹಿಮ್ಮೆಟ್ಟುವಂತಾದಾಗ ಆನೆಯ ಮೇಲೆ ಮುನ್ನುಗ್ಗಿ ಯುದ್ಧ ಮಾಡುತ್ತಾನೆ ಮತ್ತು ವೀರಮರಣವನ್ನಪ್ಪುತ್ತಾನೆ. ಅದನ್ನು ಕೇಳಿ ಮೆಚ್ಚಿದ ಇಮ್ಮಡಿ ಎಱೆಯಪ್ಪನು ಇರುಗನಗೆ 'ನಾಗತ್ತರವಟ್ಟಂಗಟ್ಟಿ' ಬೆಂಪೂರು-೧೨ನ್ನು ಶಾಸನಬದ್ಧವಾಗಿ ಕಲ್ಲನ್ನು ಹಾಕಿಸಿ ಕೊಡುತ್ತಾನೆ. ದೊಡ್ಡಬೇಗೂರಿನ ಕ್ರಿ.ಶ. ೮೯೦ರ ಶಾಸನವು ನಾಗತ್ತರನು ಬೀರವರ್ಮನನ್ನು ಸಾಧಿಸುತ್ತಾನೆಂದು ಹೇಳಿದರೆ, ಅದೇ ಬೇಗೂರಿನ ಕ್ರಿ.ಶ. ೯೦೮ರ ಶಾಸನವು ನಾಗತ್ತರನು ಬೀರಮಹೇನ್ದ್ರನೊಂದಿಗೆ ಕಾದನೆಂದು ವಿವರಿಸುತ್ತದೆ. ಇಲ್ಲಿ ಉಕ್ತನಾದ ಬೀರವರ್ಮನನ್ನು ಬೀರಮಹೇಂದ್ರನೆಂದು ಭಾವಿಸುವುದು ಸೂಕ್ತವೆಂದು (ಬೇರೆ ಆಧಾರ ದೊರೆಯುವವರೆಗೆ) ಡಾ.ದೇವರಕೊಂಡಾರೆಡ್ಡಿ ಅವರು ಅಭಿಪ್ರಾಯಪಟ್ಟಿದ್ದಾರೆ. ನೊಳಂಬ ದೊರೆ ಒಂದನೆಯ ಮಹೇಂದ್ರನ ಆಳ್ವಿಕೆಯ ಅವಧಿಯು ಕ್ರಿ.ಶ. ೮೭೫-೮೯೭ ಆಗಿದ್ದು, ಕ್ರಿ.ಶ. ೮೯೦ರ ಬೇಗೂರು ಶಾಸನದಲ್ಲಿ ಉಕ್ತನಾದ ಬೀರವರ್ಮನು,

ನೊಳಂಬ ದೊರೆ ಒಂದನೆಯ ಮಹೇಂದ್ರನಾಗಿರುವುದಿಲ್ಲ. ಏಕೆಂದರೆ ಇಲ್ಲಿ ಕಾಲಮಾನ ಸರಿಹೊಂದುತ್ತದೆಯಾದರೂ, ರಾಜರ ಹೆಸರು ಬೇರೆ ಬೇರೆಯಾಗಿರುತ್ತವೆ. ಅದರಂತೆ ಕ್ರಿ.ಶ. ೯೦೮ರ ಬೇಗೂರು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬೀರಮಹೇಂದ್ರ ಎಂಬ ಹೆಸರು ನೊಳಂಬ ದೊರೆ ಒಂದನೆಯ ಮಹೇಂದ್ರನಿಗೆ ಸರಿಹೊಂದುತ್ತದಾದರೂ, ಈ ಶಾಸನದ ಹೊತ್ತಿಗಾಗಲೇ ನೊಳಂಬ ದೊರೆಯಾದ ಒಂದನೆಯ ಮಹೇಂದ್ರನ ಅವಧಿ ಮುಗಿದು ಹೋಗಿರುತ್ತದೆ. ಹೀಗಾಗಿ ಮೇಲ್ಕಂಡ ಬೀರವರ್ಮನಾಗಲಿ ಅಥವಾ ಬೀರ ಮಹೇಂದ್ರನಾಗಲಿ, ತುಂಬೇಪಾಡಿಯಲ್ಲಿ ನಾಗತ್ತರನೊಂದಿಗೆ ಯುದ್ಧ ಮಾಡಿದ ನೊಳಂಬ ದೊರೆ ಒಂದನೆಯ ಮಹೇಂದ್ರ ನಲ್ಲವೆಂಬ ಅಭಿಪ್ರಾಯವೂ ಮೂಡುತ್ತದೆ.

ತುಮಕೂರು ಶಾಸನ-೯೫ರಲ್ಲಿ ಮಾರಿದಾಸ ಕರಿಯತಮ್ಮನೆಂಬುವವನು ಮೂಟ್ರಿ ಅರಸನ ಆಳಾಗಿದ್ದ ನಲ್ಲದೆ, ನಾಗತರಸನ ಮನೆಮಗನೂ ಆಗಿದ್ದನೆಂದು ಹೇಳ ಲಾಗಿದೆ[೧೭]. ಈ ಶಾಸನದಲ್ಲಿ 'ಶ್ರೀ ಕಡ್ದಾಣೆ ಪೃಥು ವೀರಾಜ್ಯಂಕೆಯೆ', 'ಮೂಜ್ರಿ ಅರಸ' ಪದಗಳು ಗಂಗದೊರೆ ಶ್ರೀಪುರುಷನಿಗೆ ಅನ್ವಯವಾಗುವುದರಿಂದ ಕ್ರಿ.ಶ. ೭೫೦ರ ಅವಧಿಯದಾಗಿದೆ. ಅದರಂತೆ ಕ್ರಿ.ಶ.ಸು. ೮೯೦ರ ಕೋಲಾರ ಶಾಸನ ೨೦೦ರಲ್ಲಿ ಉಕ್ತನಾದ ನಾಗಗುಟ್ಟರಸನು (ನಾಗುಟ್ಟರಸ > ನಾಗತ್ತರಸ) ತನ್ನ ಕುದುರೆಯನ್ನು ಪುನಃ ಹಿಂತಿರುಗಿಸಿ ಅಟ್ಟುತ್ತ, ಹಲವರನ್ನು ಕೊಂದು ಸಾಯುತ್ತಾನೆ[೧೮]. ಕ್ರಿ.ಶ. ೭೫೦ರ ಸುಮಾರಿನ ನಾಗತರಸ, ಬೇಗೂರು ನಾಗತ್ತರನಿಗಿಂತಲೂ ನೂರು ವರ್ಷ ಮೊದಲಿನವನಾದರೆ, ಕ್ರಿ.ಶ. ೮೯೦ರ ನಾಗುಟ್ಟರಸನು ಆಗಲೇ ಹೋರಾಡಿ ಮಡಿದಿದ್ದಾನೆ. ಆದರೆ ನಮ್ಮ ಬೇಗೂರು ನಾಗತ್ತರನು ಕ್ರಿ.ಶ. ೯೦೮ರವರೆಗೂ ತುಂಬೇಪಾದಿ ರಣರಂಗದಲ್ಲಿದ್ದನಲ್ಲವೇ? ಹಾಗಾದರೆ ಈ ಮೇಲ್ಕಂಡ ಕ್ರಿ.ಶ. ೭೫೦ರ ಹಿರೇಗುಂಡಕಲ್ಲು ಶಾಸನ, ಕ್ರಿ.ಶ. ೮೯೦ರ ನುಕ್ಕನಹಳ್ಳಿ ಶಾಸನಗಳಲ್ಲಿ ಉಕ್ತರಾದ ನಾಗತ್ತರರೇ ಬೇರೆ, ಬೇಗೂರು ನಾಗತ್ತರನೇ ಬೇರೆ ಎಂಬ ನಿರ್ಧಾರ ಸೂಕ್ತವಾಗಿದೆ. ಅಂತೂ ಗಂಗರಸರ ಅಧೀನದಲ್ಲಿ ಬೇಗೂರಿನ ನಾಗತ್ತರನಿಗೂ ಮೊದಲು ನಾಗತರಸ, ನಾಗಗುಟ್ಟರಸರೆಂಬ ಸೇನಾನಿಗಳಿದ್ದರೆಂದು ಸ್ಪಷ್ಟವಾಗುತ್ತದೆ.

**ಕಣ್ನಿಲಿ ಸ್ಥಳನಾಮ ಹಾಗೂ ಪುರಾವ ಶೇಷಗಳು:** ಪ್ರಸ್ತುತ ಕೈಕೊಂಡ್ರಹಳ್ಳಿಯಲ್ಲಿ ದೊರೆತ ನಾಗತ್ತರನ ಅಪ್ರಕಟಿತ ಶಾಸನದಲ್ಲಿ ಉಕ್ತವಾಗಿರುವ 'ಕಣ್ನಿಲಿ' ಎಂಬ ಸ್ಥಳನಾಮವು, ಇಂದಿನ ಕೈಕೊಂಡ್ರಹಳ್ಳಿಯಿಂದ ಎರಡು ಕಿ.ಮೀ. ದೂರದ ದೊಡ್ಡಕನ್ನೆಲ್ಲಿಯನ್ನು ತೋರುತ್ತದೆ. 'ಕಣ್ನಿಲಿ' ಯಿಂದು ದೊಡ್ಡಕನ್ನೆಲ್ಲಿ, ಚಿಕ್ಕಕನ್ನೆಲ್ಲಿ ಎಂಬ ಎರಡು ಗ್ರಾಮಗಳ ಅಸ್ತಿತ್ವಕ್ಕೆ ಆಧಾರವಾಗಿದೆ. ಬೆಂಗಳೂರಿನಿಂದ ಸರ್ಜಾಪುರ ರಸ್ತೆಯಲ್ಲಿ ೧೬ ಕಿ.ಮೀ. ದೂರದಲ್ಲಿರುವ ದೊಡ್ಡಕನ್ನೆಲ್ಲಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ೧೫೦ನೆಯ ಬೆಳ್ಳಂದೂರು ವಾರ್ಡಿನಲ್ಲಿದೆ. ೧೯೦೫ರ ಹೊತ್ತಿಗೆ ಈ ಗ್ರಾಮದಲ್ಲಿ ಹಾಳುಕೋಟೆ, ಊರಮುಂದೆ ತೋಪುಗಳಿದ್ದವು[೧೯]. ಆಗ ವರ್ತೂರು ಹೋಬಳಿಯಲ್ಲಿದ್ದ ದೊಡ್ಡಕನ್ನಲ್ಲೆ/ ದೊಡ್ಡಕನ್ನಲೆ ಎಂದು ಉಕ್ತಗೊಂಡ ಈ ಊರು ಈಗಲೂ ವರ್ತೂರು ಹೋಬಳಿ (ಮಹದೇವಪುರ ವಿಧಾನಸಭಾ ಕ್ಷೇತ್ರ, ಬೆಂಗಳೂರು ಪೂರ್ವ ತಾಲ್ಲೂಕು) ಯಲ್ಲೇ ಇರುತ್ತದೆ. ಈ ಊರಿನಲ್ಲಿರುವ ಕೋಟೆ ನಿವೇಶನ, ಕೋಟೆಯಲ್ಲಿರುವ ಕಾಟೇರಮ್ಮ ಎಂದು ಹೇಳಲಾಗುವ ವೀರಗಲ್ಲು ಹಾಗೂ ಊರಿನಿಂದ ದಕ್ಷಿಣಕ್ಕೆ ಸೋಮೇಶ್ವರ ದೇವಾಲಯದ ಭೈರವ ಶಿಲ್ಪಗಳು ಪುರಾವಸ್ತುಗಳಾಗಿದ್ದು, ದೊಡ್ಡಕನ್ನೆಲ್ಲಿಯೇ ಶಾಸನೋಕ್ತ 'ಕಣ್ನಿಲಿ' ಯಾಗಿತ್ತೆಂಬುದಕ್ಕೆ ಆಧಾರಗಳಾಗಿವೆ. ಕಣ್ನಿಲಿ>ಕನ್ನೆಲ್ಲಿ>ದೊಡ್ಡಕನ್ನೆಲ್ಲಿ ಎಂದು ಕರೆಯಲ್ಪಡುತ್ತಿದ್ದು, ಚಿಕ್ಕಕನ್ನೆಲ್ಲಿಯು ನಂತರದ ಬೆಳವಣಿಗೆಯಾಗಿದೆ.

ದೊಡ್ಡಕನ್ನೆಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸಮೀಪದಲ್ಲಿ ವಾಯುವ್ಯ ದಿಕ್ಕಿಗೆ ಕೋಟೆಯ ನವೇಶನವಿದೆ. ಬೇಗೂರು ಕೋಟೆಯಂತೆ ಇದೂ ಕೂಡ ವೃತ್ತಾಕಾರದಲ್ಲಿ ತ್ತೆಂದು ಇಲ್ಲಿಯ ಕಂದಕದ ಅವಶೇಷಗಳಿಂದ ತಿಳಿದುಬರುತ್ತದೆ. ಸುಮಾರು ಆರರಿಂದ ಏಳು ಮೀಟರು ಆಳ, ಹತ್ತು ಮೀಟರ್ ನಷ್ಟು ಅಗಲವಿದ್ದಿರಬಹುದಾದ ಕಂದಕದಲ್ಲಿ ಇಂದು ಗಿಡ-ಮರ-ಮುಳ್ಳಿನ ಪೊದೆಗಳು ಬೆಳೆದಿರುತ್ತವೆ. ಕೋಟೆಯ ಕಂದಕಕ್ಕೆ ಹೊಂದಿಕೊಂಡಂತೆ ತೋಮಾಶ್ ಕುಂಟೆಯಿತ್ತೆಂದು ಸ್ಥಳೀಯರ ಹೇಳಿಕೆಯಾಗಿದೆ. ಪಾಪಣ್ಣಾಚಾರಿಯ ತಂದೆ ಸೋಮಾಚಾರಿ ಅವರ ಮನೆ ಪಕ್ಕದಲ್ಲಿದ್ದ ಈ ಕುಂಟೆಯನ್ನು ಸೋಮಾಚಾರರ ಕುಂಟೆ ಎನ್ನಲಾಗಿದೆ[೨೦]. ತಮಿಳು ಮನೆಮಾತಿನ ಪ್ರಭಾವದಿಂದಾಗಿ ಸೋಮಾಚಾರ್ ಕುಂಟೆಯು ತೋಮಾಶ್ ಕುಂಟೆಯಾಗಿರುವುದನ್ನು ಇಲ್ಲಿ ಗುರುತಿಸಬಹು ದಾಗಿದೆ. ಎ.ಕ-೯ರ ಬೆಂಗಳೂರು-೪೬ನೆಯ ಶಾಸನದ ಕಂಬವು ಈಗ ಕೆ.ಎಸ್. ಪ್ರಸನ್ನಕುಮಾರ್ ಶಾಮಣ್ಣರೆಡ್ಡಿ ಅವರ ಮನೆಯ ಹಿಂಭಾಗದಲ್ಲಿದ್ದು, ಸಂರಕ್ಷಿಸಿಡಲು ಒಪ್ಪಿರು ತ್ತಾರೆ. ಈ ಶಾಸನಕಂಬದ ಎತ್ತರ ೧.೮೮ ಮೀ. ಆಗಿದ್ದು, ಕೆಳಗಿನ ೮೦ ಸೆಂ.ಮೀ.ನಷ್ಟು ಭಾಗವನ್ನು ನೆಲದಲ್ಲಿ ನೆಡುವುದಕ್ಕಾಗಿ ಮಾಡಲಾಗಿದೆ. ನಾಲ್ಕು ಸಾಲುಗಳ ಶಾಸನದ ೨೫x೩೦ ಸೆಂ.ಮೀ. ಭಾಗವನ್ನು ಗೆರೆ ಹಾಕಿ, ಕಂಬದ ನಂತರದ ಭಾಗವನ್ನು ಎಂಟು ಮುಖಗಳನ್ನಾಗಿ ಸಿದ್ಧಪಡಿಸಿ ಕೊಳ್ಳಲಾಗಿದೆ. ಶಾಸನಕಂಬದ ಶಿರೋಭಾಗದಲ್ಲಿ ಕ್ರಿಕೆಟ್ ಚೆಂಡಿನಳತೆಯ ಮೂರು ಗುಂಡುಗಳನ್ನು ಮಾಡಿರುತ್ತಾರೆ.

'ಮಾರಪನ ಮಗ ಸುರಲೋಕಕೆ'[೨೦] ಎಂಬ ಸಾರಾಂಶ ಹೊಂದಿರುವ ಶಾಸನಕಂಬ ಇದೇ ಆಗಿರುತ್ತದೆ.

ಹಾಳುಕೋಟೆ ಎಂದು ಹೇಳಲಾಗುವ ಸ್ಥಳದಲ್ಲಿಯೇ ಪಶ್ಚಿಮಾಭಿಮುಖವಾಗಿರುವ ಆಂಜನೇಯ ಗುಡಿ ಇದೆ. ಈ ಗುಡಿಯ ಮುಂದೆ ಸ್ಥಳೀಯವಾಗಿ ಕಾಟೇರಮ್ಮ ಎಂದು ಕರೆಯಲಾಗುತ್ತಿರುವ ವೀರಗಲ್ಲು ಇದೆ. ವೀರನು ಎಡಗಾಲು ಮುಂದೆ ಇಟ್ಟು, ಎಡಗೈಯಲ್ಲಿ ಬಿಲ್ಲು, ಬಲಗೈಯಿಂದ ಬಾಕು ಹಿಡಿದು ಬಲಕ್ಕೆ ಚಾಚಿರುತ್ತಾನೆ. ವೀರನಿಗೆ ಕಾಲ್ಕಡಗ, ಕೈಕಡಗ, ತೋಳ್ಬಂದಿ, ಕಂಠಹಾರಗಳನ್ನು ತೋರಿಸಲಾಗಿದೆ. ತಲೆ ಮೇಲೆ ಮುಡಿಯಿದ್ದು, ಮುಡಿಗೆ ಕಟ್ಟಿದ ವಸ್ತ್ರದ ಅಂಚು ತುತ್ತೂರಿಯಂತೆ ಚಾಚಿದೆ. ಕಿವಿಯೋಲೆಗಳು ದುಂಡಾಗಿವೆ. ವೀರನೆದುರಿಗೆ ಬಲಗೈಯಿಂದ ಖಡ್ಗ ಎತ್ತಿ ಹಿಡಿದ ಶತ್ರುವನ್ನು, ಅವನ ಪಾದದಡಿಯಲ್ಲಿ ವ್ಯಕ್ತಿಯೊಬ್ಬನನ್ನು ರೇಖಾಚಿತ್ರದಲ್ಲಿ ತೋರಿಸಲಾಗಿದೆ. ವೀರಗಲ್ಲಿನ ಮೇಲ್ಭಾಗದ ಎಡಮೂಲೆಯಲ್ಲಿ ಅಪ್ಸರೆಯರು ವೀರನ ಕೈ ಹಿಡಿದಿದ್ದಾರೆ. ವೀರನು ಎಡಗಾಲು ಇಳಿಬಿಟ್ಟು ಬಲಗಾಲು ಮಡಿಚಿ ಕುಳಿತಿರುವನು; ನಡುವೆ ಶಿವಲಿಂಗದ ಉಬ್ಬುಶಿಲ್ಪವಿದೆ. ವೀರಗಲ್ಲಿನ ಇಕ್ಕೆಲಗಳಲ್ಲಿ ಕಲ್ಲು ಚಪ್ಪಡಿಗಳನ್ನು ನಿಲ್ಲಿಸಿ ಚಿಕ್ಕ ಗುಡಿ ನಿರ್ಮಿಸಲಾಗಿದೆ. ವೀರನಿಗೆ ಮೂಗುತಿ, ಕಣ್ಣುಬಟ್ಟಲು ತೊಡಿಸಿ, 'ಕಾಟೇರಮ್ಮ' ಎಂದು ಜನರು ಪೂಜೆ ಮಾಡುತ್ತಾರೆ. ವೀರನ ಬಲಕ್ಕೆ ನಿಲ್ಲಿಸಿದ ಕಲ್ಲು ಚಪ್ಪಡಿಯಲ್ಲಿ ಸವೆದು ಹೋಗಿರುವ ಶಾಸನವಿದ್ದು, ಇದುವೇ 'ಯುಕ್ಕದೇವರಸ'ನನ್ನು ಉಲ್ಲೇಖಿಸುವ ಬೆಂಗಳೂರು-೪೫ನೆಯ ಶಾಸನವಾಗಿರುವ ಸಾಧ್ಯತೆ ಹೆಚ್ಚು.

ದೊಡ್ಡಕನ್ನಲ್ಲೆ ಊರಮುಂದೆ ತೋಪಿನಲ್ಲಿರುವ ಶಾಸನವು, ಬಲ್ಲಪ್ಪದಂಡನಾಯಕನು ಇರುಂಬಿಲಿಯೂರಿನ ಮಹಾಜನರು ಹಾಗೂ ವೇಯೂರುನಾಡಿನ ನಿವಾಸಿಗಳೊಡಗೂಡಿ ಶೆವಿಡಪೆರ್ಗಡೆಗೆ ಸರ್ವಮಾನ್ಯವಾಗಿ ಉದ್ಯೆಯನಹಳ್ಳಿಯನ್ನು ದಾನ ನೀಡಿದನೆಂಬ ವಿಷಯ ತಿಳಿಸುತ್ತದೆ. ಇಲ್ಲಿ ಉಕ್ತನಾದ ಬಲ್ಲಪ್ಪ ದಂಡನಾಯಕನು ಹೊಯ್ಸಳ ಮೂರನೆಯ ಬಲ್ಲಾಳನ (ಕ್ರಿ.ಶ. ೧೨೯೨-೧೩೪೨) ರಾಜ್ಯಾಡಳಿತ ಕಾಲ) ಪ್ರಸಿದ್ಧ ದಂಡನಾಯಕನಾಗಿದ್ದ ಸೋಮಯದಂಡನಾಯಕನ ಕಿರಿಯ ಮಗನಾಗಿದ್ದು, ವಲ್ಲಪ್ಪ ದಂಡನಾಯಕ, ವಲ್ಲಪ ದಂಣಾಯಕ, ಬಲ್ಲಪ್ಪದಂನಾಯಕ ಎಂದು ಶಾಸನಗಳು ಕರೆದಿವೆ[೨೨]. ಈತ ವಿಜಯನಗರದ ಅರಸು ಹರಿಹರನ ಅಳಿಯನಾಗಿದ್ದನಲ್ಲದೆ, ಮಹಾಪ್ರಧಾನಿ, ಮುಖ್ಯಮಂತ್ರಿ, ದಂಡನಾಯಕನಾಗಿಯೂ ಸೇವೆಯಲ್ಲಿದ್ದನು.

ದೊಡ್ಡಕನ್ನೆಲ್ಲಿಯಿಂದ ಸುಮಾರು ಅರ್ಧ ಕಿ.ಮೀ.ದಕ್ಷಿಣಕ್ಕೆ ಚಿಕ್ಕನಾಯಕನಹಳ್ಳಿ ರಸ್ತೆಯಲ್ಲಿ ಪೂರ್ವಾಭಿಮುಖವಾಗಿ ಸೋಮೇಶ್ವರ ದೇವಾಲಯವಿದೆ. ಇದನ್ನು ೧೯೮೨ರಲ್ಲಿ ನಿರ್ಮಿಸಲಾಗಿದ್ದರೂ, ಅಲ್ಲಿಯ ಗರ್ಭಗೃಹದಲ್ಲಿರುವ ಶಿವಲಿಂಗ, ಶಿವಲಿಂಗಕ್ಕೆ ಎದುರಿಗಿರುವ ಸಭಾಮಂಟಪದಲ್ಲಿರುವ ನಂದಿ, ಗರ್ಭಗೃಹದ ಎಡಗೋಡೆಗೆ ಪೂರ್ವಾಭಿಮುಖವಾಗಿ ನಿಲ್ಲಿಸಿದ ಭೈರವ ಹಾಗೂ ದೇವಾಲಯದ ಬಲಕ್ಕೆ ಬಿಲ್ವಪತ್ರೆ (ಬೇಲ) ಗಿಡದ ಕೆಳಗಿನ ನಾಗರಕಟ್ಟೆಯೊಳಗಿನ ಭೈರವ ಶಿಲ್ಪಗಳು ಪ್ರಾಚೀನವೆನಿಸಿವೆ. ಸೋಮೇಶ್ವರ ದೇವಾಲಯದ ಸಭಾಮಂಟಪದಲ್ಲಿರುವ ಭೈರವ ಶಿಲ್ಪವು ೫೬ ಸೆಂ.ಮೀ. ಎತ್ತರ, ೩೩ ಸೆಂ.ಮೀ. ಅಗಲ, ೧೯ ಸೆಂ.ಮೀ. ದಪ್ಪನೆಯ ಕಪ್ಪು ಕಲ್ಲಿನಲ್ಲಿ ಮಾಡಲ್ಪಟ್ಟಿರುತ್ತದೆ. ಭೈರವನು ಸಮಭಂಗಿಯಲ್ಲಿ ನಿಂತಿದ್ದು ಕಾಲುಗಳ ಹಿಂಭಾಗದಲ್ಲಿ ಶ್ವಾನವನ್ನು ತೋರಿಸಲಾಗಿದೆ. ಅದರ ಬಾಲದ ಡೊಂಕು ಸ್ಪಷ್ಟವಾಗಿ ಮೂಡಿಬಂದಿದೆ. ಭೈರವನಿಗೆ ಪಾದವಲಯ, ಕಾಲ್ಕಡಗ, ಟೊಂಕಕ್ಕೆ ಕಿರುಗೆಜ್ಜೆ, ಎಡಭುಜದಿಂದ ಮೊಣಕಾಲಿನ ಮೇಲ್ಭಾಗದವರೆಗೂ ಇಳಿಬಿದ್ದಿರುವ ರುಂಡಮಾಲೆ, ಮೂರು ಕಂಠಹಾರಗಳು, ಎಡಕ್ಕೆ ವೃತ್ತಾಕಾರದ ಕರ್ಣಕುಂಡಲವಿದೆ. ತಲೆಯ ಮೇಲೆ ಕಿರೀಟ, ಅದರ ಮೇಲ್ಭಾಗ ಜ್ವಾಲೆಯನ್ನು ತೋರಿಸಲಾಗಿದೆ. ಭೈರವನ ನಾಲ್ಕೂ ಕೈಗಳಿಗೆ ತೋಳ್ಬಂದಿ ಕಡಗಗಳಿವೆ. ಒಂದನೆಯ ಬಲಗೈಯಲ್ಲಿ ತ್ರಿಶೂಲ, ಎರಡನೆಯ ಬಲಗೈಯಲ್ಲಿ ಡಮರುಗ; ಒಂದನೆಯ ಎಡಗೈಯಲ್ಲಿ ಬಟ್ಟಲು, ಎರಡನೆಯ ಎಡಗೈಯಲ್ಲಿ ಹೆಡೆ ಎತ್ತಿದ ಹಾವು ಇರುತ್ತದೆ. ಸೋಮೇಶ್ವರ ದೇವಾಲಯದ ಆವರಣದಲ್ಲಿ ಬಲಕ್ಕೆ ಬಿಲ್ವಪತ್ರೆ ಗಿಡದ ಕೆಳಗೆ ನಾಗರಕಟ್ಟೆಯಲ್ಲಿ ಪೂರ್ವಾಭಿಮುಖವಾಗಿ ಇನ್ನೊಂದು ಭೈರವ ಶಿಲ್ಪವಿದೆ. ಇದು ೬೦ ಸೆಂ.ಮೀ. ಎತ್ತರ , ೪೦ ಸೆಂ.ಮೀ. ಅಗಲ, ೧೩ ಸೆಂ.ಮೀ. ದಪ್ಪವಿರುವ ಕಲ್ಲಿನಲ್ಲಿ ಮಾಡಲ್ಪಟ್ಟಿದ್ದು, ಎಡಮೊಣಕಾಲು ಸ್ವಲ್ಪ ಮುಂದೆ ಬಂದಂತೆ ಕಂಡರಿಸಲಾಗಿದೆ. ಪಾದವಲಯ, ಸೊಂಟಕ್ಕೆ ಗೆಜ್ಜೆಪಟ್ಟಿ, ಎಡಭುಜದಿಂದ ಯಜ್ಞೋಪವೀತಗಳಿರುತ್ತವೆ. ನಾಲ್ಕು ಕಂಠಹಾರಗಳು, ಎರಡೂ ಕಿವಿಗಳಿಗೆ ಬಟ್ಟಲಾಕಾರದ ಅಲಂಕಾರ, ಹಣೆಯ ಮೇಲೆ ಕೇಶವಿನ್ಯಾಸ, ಅದರ ಮೇಲೆ ಅಗ್ನಿಜ್ವಾಲೆ ಇದೆ. ಭೈರವನು ಇಲ್ಲಿಯೂ ತನ್ನ ಮೊದಲನೆಯ ಬಲಗೈಯಲ್ಲಿ ಉದ್ದನೆಯ ತ್ರಿಶೂಲ, ಎರಡನೆಯ ಬಲಗೈಯಲ್ಲಿ ಡಮರುಗ, ಮೊದಲ ಎಡಗೈಯಲ್ಲಿ ಬಟ್ಟಲು, ಎರಡನೆಯ ಎಡಗೈಯಲ್ಲಿ ಹಾವಿನ ಬಾಲ ಹಿಡಿದಿದ್ದಾನೆ, ಅದರ ಹೆಡೆ ಕೆಳಗೆ ಇಳಿಬಿದ್ದಿದೆ. ಭೈರವನ ಎಡಗಾಲಿನ ಹತ್ತಿರ ಸುರುಳಿ ಸುತ್ತಿಕೊಂಡು ಹೆಡೆ ಎತ್ತಿರುವ ಹಾವನ್ನೊಂದು ಬಿಡಿಸಿರುವುದು ವಿಶೇಷ.

ಬೆಂಗಳೂರಿನಲ್ಲಿ 'ಕನ್ನೆಲ್ಲಿ' ಎಂಬ ಎರಡು ಸ್ಥಳನಾಮಗಳಿದ್ದು, ಗೊಂದಲಗಳುಂಟಾಗುವುದು ಸಹಜ. ಕ್ರಿ.ಶ. ೧೫೩೭ರಲ್ಲಿ ಒಂದನೆಯ ಕೆಂಪೇಗೌಡನು ಬೆಂಗಳೂರು ನಗರ ಹಾಗೂ ಕೋಟೆಯನ್ನು ನಿರ್ಮಿಸಿದುದರಿಂದ ಸಂತೋಷ



ನಾಗತ್ತರನ ಅಪ್ರಕಟಿತ ವೀರಗಲ್ಲು – ಕೈಕೊಂಡ್ರಹಳ್ಳಿ



ನಾಗತ್ತರನ ಕೋಟೆ – ಬೇಗೂರು

ಗೊಂಡ ವಿಜಯನಗರದ ದೊರೆ ಅಚ್ಯುತರಾಯನು ೩೦ ಸಾವಿರ ಪಗೋಡಗಳ ಆದಾಯವುಳ್ಳ ೧೨ ಹೋಬಳಿಗಳನ್ನು ಒಂದನೆಯ ಕೆಂಪೇಗೌಡನಿಗೆ ಕೊಡುಗೆಯಾಗಿ ನೀಡುತ್ತಾನೆ. ಕೆಂಪೇಗೌಡನ ಬೆಂಗಳೂರಿಗೆ ಸೇರಿಕೊಂಡ ಆ ಹೋಬಳಿಗಳೆಂದರೆ–ಕಸಬಾ ಹಳೇ ಬೆಂಗಳೂರು, ವರ್ತೂರು ಹೋಬಳಿ, ಯಲಹಂಕ ನಾಡು, ಬೇವೂರು ಹೋಬಳಿ, ಹಲಸೂರು ಹೋಬಳಿ, ತೆಂಗರ (ಕೆಂಗೇರಿ) ಹೋಬಳಿ, ತಲಘಟ್ಟಪುರ ಹೋಬಳಿ, ಜಿಗಣಿ ಹೋಬಳಿ, ಕುಂಬಳಗೋಡು ಹೋಬಳಿ, ಕನ್ನೆಲ್ಲಿ ಹೋಬಳಿ, ಬಾಣಾವರ



ಭೈರವ, ಸೋಮೇಶ್ವರ ಗುಡಿ – ದೊಡ್ಡಕನ್ನೆಲ್ಲಿ



ದಕ್ಷಿಣಾಮೂರ್ತಿ – ಕೈಕೊಂಡ್ರಹಳ್ಳಿ

ಹೋಬಳಿ ಮತ್ತು ಹೆಸರುಘಟ್ಟ ಹೋಬಳಿಗಳಾಗಿವೆ[೨೩]. ಈ ಕೊಡುಗೆ ೧೨ ಗ್ರಾಮಗಳ ಜಹಗೀರು ಆಗಿತ್ತೆಂಬ ಅಭಿಪ್ರಾಯಗಳೂ ಇವೆ. ಡಾ. ಹೆಚ್.ಎಸ್. ಗೋಪಾಲರಾವ್ ಅವರು ಈ ೧೨ ಹೋಬಳಿಗಳ ಪೈಕಿ ಒಂದಾಗಿರುವ ಕನ್ನೆಲ್ಲಿ ಹೋಬಳಿಯನ್ನು 'ಕಾವಳ್ಳಿ' ಎಂದೂ ಬರೆದಿದ್ದಾರೆ[೨೪]. ಹೀಗೆ ಉಕ್ತವಾದ ಕನ್ನೆಲ್ಲಿ ಹೋಬಳಿ ಅಥವಾ ಕಾವಳ್ಳಿಯು ಇಂದಿನ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರಿನಿಂದ ನೈಋತ್ಯಕ್ಕೆ ಐದು ಕಿ.ಮೀ. ದೂರದಲ್ಲಿರುವ ಕನ್ನೆಲ್ಲಿಯೋ? ಅಥವಾ ಬೆಂಗಳೂರು ಉತ್ತರ ತಾಲ್ಲೂಕಿನ ಕನ್ನೆಲ್ಲಿಯೋ? ಚರ್ಚಿಸಬೇಕಾದುದು ಅನಿವಾರ್ಯವಾಗುತ್ತದೆ. ಕೆಂಪೇಗೌಡರ ಆಡಳಿತಾವಧಿಯಲ್ಲಿ ಹೋಬಳಿಗಳ ವ್ಯಾಪ್ತಿ ಸುಮಾರು ೧೫ರಿಂದ ೨೦ ಕಿ.ಮೀ ಗಳಷ್ಟಿತ್ತು. ಹೋಬಳಿಯ ಕೇಂದ್ರ ಸ್ಥಾನವಾದ ವರ್ತೂರಿನಿಂದ ಕೇವಲ ಐದು ಕಿ.ಮೀ. ದೂರದಲ್ಲಿರುವ ಕನ್ನೆಲ್ಲಿಯೂ ಒಂದು ಹೋಬಳಿ ಕೇಂದ್ರವಾಗಿತ್ತೆಂದು ಊಹಿಸುವುದು ಕ್ಷೇಮಕರವಲ್ಲ. ಡಾ. ಪಿ.ವಿ. ಕೃಷ್ಣಮೂರ್ತಿಯವರು ತಮ್ಮ 'ಕುಕ್ಕಲನಾಡು– ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ' ಪ್ರಬಂಧದಲ್ಲಿ ಕನ್ನೆಲ್ಲಿಯನ್ನು ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿರುವುದನ್ನು ನಕ್ಷೆಯ ಮೂಲಕ ಗುರುತಿಸಿದ್ದಾರೆ. ಆದ್ದರಿಂದ ಅಚ್ಚುತರಾಯನು ಒಂದನೆಯ ಕೆಂಪೇಗೌಡನಿಗೆ ಕೊಡಮಾಡಿದ ೧೨ ಹೋಬಳಿಗಳಲ್ಲಿ ಒಂದಾದ 'ಕನ್ನೆಲ್ಲಿ' ಅಥವಾ 'ಕಾವಳ್ಳಿ' ಹೋಬಳಿಯು, ವರ್ತೂರು ಹೋಬಳಿಯಲ್ಲಿರುವ ಈಗಿನ ದೊಡ್ಡಕನ್ನೆಲ್ಲಿ ಆಗಿರದೆ, ಅದು ಬೆಂಗಳೂರು ಉತ್ತರ ತಾಲ್ಲೂಕಿನ ಕನ್ನೆಲ್ಲಿಯನ್ನು ಕೇಂದ್ರವಾಗಿಸಿಕೊಂಡ ಪ್ರದೇಶವಾಗಿತ್ತೆಂಬ ನಿರ್ಣಯಕ್ಕೆ ಬರಬಹುದಾಗಿದೆ.

ಪ್ರೌಢದೇವರಾಯನ ಆಶ್ರಯದಲ್ಲಿದ್ದ ದಂಡನಾಯಕ ಹಾಗೂ ಪ್ರಾಂತ್ಯಾಧಿಕಾರಿಯಾಗಿದ್ದ ಲಕ್ಕಣ್ಣ ದಂಡೇಶನು ತನ್ನ 'ಶಿವತತ್ವ ಚಿಂತಾಮಣಿ' ಕಾವ್ಯದಲ್ಲಿ ಬೆಂಗಳೂರು ಹಾಗೂ ಸುತ್ತಮುತ್ತಲಿನ ನೂತನ ಗಣಂಗಳ ಹೆಸರು ಹಾಗೂ ಅವರ ಸ್ಥಳಗಳನ್ನು ಹೀಗೆ ಉಲ್ಲೇಖಿಸಿರುತ್ತಾನೆ.

**ಕಿತ್ತನೆಲ್ಲಿಯ ಶೀಲವಂತ ತಿಮ್ಮಣ್ಣನ**
**ಪ್ರತಿ ಸಾಜುಕೆಯ ಸಿದ್ಧರಾಮಯ್ಯ ಬೆಂಗಳೂ**
**ರತಿ ಶರಣ ಮಲ್ಲಣ್ಣ ನೆಲ್ಲಮಂಗಲದ ಪೆಮ್ಮಣ್ಣ**
**ಕನ್ನೆಲ್ಲಿಯೊಳಗೆ**
**ವ್ರತಿಕ ಮೆಣಸಿನ ಕಾಯಕದ ಪುಟ್ಟಣಯ್ಯನು**
**ನ್ನತನು ಗೆಜ್ಜೆಯ ತಿಪ್ಪಣಯ್ಯ ಶಿವನಸಮುದ್ರ**
**ಹಿತನುಂ ನಮಶ್ಶಿವಾಯಯ್ಯನೊಳಗಾದವರ**
**ಚರಣಾಂಬುಜಕೆ ಶರಣು।**

ಇಲ್ಲಿ ಧರ್ಮಾನುಷ್ಠಾನಗಳನ್ನು ನಿಯಮಪೂರ್ವಕವಾಗಿ ಆಚರಿಸುವುದರೊಂದಿಗೆ, ಮೆಣಸಿನ ಕಾಯಕದಲ್ಲಿ ತೊಡಗಿಸಿಕೊಂಡ ಪುಟ್ಟಣಯ್ಯ, ಉನ್ನತನೆನಿಸಿದ ಗೆಜ್ಜೆಯ ಕಾಯಕದ ತಿಪ್ಪಣಯ್ಯನವರು ಪ್ರಮುಖರಾಗಿದ್ದು, ಅವರು ಬೆಂಗಳೂರಿಗೆ ಹತ್ತಿರದಲ್ಲಿರುವ 'ಕನ್ನೆಲ್ಲಿ'ಯಲ್ಲಿ ನೆಲೆಸಿದ್ದರೆನ್ನಲಾಗಿದೆ[೨೫]. ಇಲ್ಲಿಯೂ ಸಹ ಪೂರ್ವ ಬೆಂಗಳೂರಿನ ಕನ್ನೆಲ್ಲಿಯೋ? ಬೆಂಗಳೂರು ಉತ್ತರ ತಾಲ್ಲೂಕಿನ ಕನ್ನೆಲ್ಲಿಯೋ ಅಸ್ಪಷ್ಟವಾಗಿ ಉಳಿದು ಬಿಡುತ್ತದೆ.

ನಾಗತ್ತರನ ಹೊಸ ಶಾಸನ ದೊರೆತ ಕೈಕೊಂಡ್ರಹಳ್ಳಿಯಲ್ಲಿ ಚೆನ್ನಕೇಶವ ಸ್ವಾಮಿ ದೇವಾಲಯದಿಂದ ಉತ್ತರಕ್ಕೆ ಮುಖ್ಯ ರಸ್ತೆ ದಾಟಿ ಮಾರುತಿನಗರದತ್ತ ೩೦೦ ಅಡಿ ದೂರದಲ್ಲಿ ಪೂರ್ವಕ್ಕೆ ಮುಖ ಮಾಡಿ ಸಣ್ಣ ಗುಡಿಯೊಂದಿದೆ. ಈ ಗುಡಿಯಲ್ಲಿ ೬೦ ಸೆಂ.ಮೀ. ಎತ್ತರ, ೪೫ ಸೆಂ.ಮೀ. ಅಗಲ, ೧೫ ಸೆಂ.ಮೀ. ದಪ್ಪ ಕಲ್ಲಿನಲ್ಲಿ ಮಾಡಲಾದ ದಕ್ಷಿಣಾಮೂರ್ತಿಯ ಶಿಲ್ಪವಿದೆ. ದೇವತೆಯನ್ನು ಪೀಠದ ಮೇಲೆ ಬಲಗಾಲು ಮಡಿಚಿ ಎಡಗಾಲು ಕೆಳಗೆ ಇಳಿಬಿಟ್ಟಿರುವಂತೆ ಚಿತ್ರಿಸಲಾಗಿದೆ. ಸ್ಥಳೀಯರು ಈ ಗುಡಿ ಯನ್ನು ಈಶ್ವರ ದೇವಸ್ಥಾನವೆಂದೂ ಹೇಳುತ್ತಾರೆ.

[ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿ ಅವರು ಕೈಕೊಂಡ್ರಹಳ್ಳಿಗೆ ಬಂದು, ಮಾರ್ಗದರ್ಶನ ಮಾಡಿರುತ್ತಾರೆ. ಕಸವನಹಳ್ಳಿಯ ಹೆಚ್.ಹರೀಶ್‌ಕುಮಾರ್, ರವೀಂದ್ರ ಹಿರಿಯರಾದ ಜೌಗುಪಾಳ್ಯದ ತಾಯಪ್ಪನವರು ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನನ್ನ ಪ್ರಣಾಮಗಳು]

## ಬೇಗೂರು ನಾಗತ್ತರನ ಶಾಸನಗಳ ಪಟ್ಟಿ

| ಕ್ರಸಂ. | ಶಾಸನದ ಕಾಲ | ಶಾಸನ ದೊರೆತ ಸ್ಥಳ/ತಾಲ್ಲೂಕು | ಬೆಳಕು ಚೆಲ್ಲಿದ ಮಹನೀಯರು/ಸಂಸ್ಥೆ | ಆಧಾರ |
|---|---|---|---|---|
| ೧ | ಕ್ರಿ.ಶ.ಸು. ೮೬೦ | ಅಗರ, ಬೆಂಗಳೂರು ದಕ್ಷಿಣ | ಬಿ.ಎಲ್.ರೈಸ್ | ಎ.ಕ. ೯ ಬೆಂಗಳೂರು–೭೯ |
| ೨ | ಕ್ರಿ.ಶ.ಸು. ೮೯೦ | ದೊಡ್ಡಬೇಗೂರು, ಬೆಂ. ದಕ್ಷಿಣ | ಡಾ. ದೇವರ ಕೊಂಡಾರೆಡ್ಡಿ | ಇತಿಹಾಸ ದರ್ಶನ ಸಂ. ೩ |
| ೩ | ಕ್ರಿ.ಶ.ಸು. ೯೦೦ | ಬೇಗೂರು, ಬೆಂಗಳೂರು ದಕ್ಷಿಣ | ಬಿ.ಎಲ್.ರೈಸ್ | ಎ.ಕ. ೯ ಬೆಂಗಳೂರು–೮೭ |
| ೪ | ಕ್ರಿ.ಶ.ಸು. ೯೦೦ | ಬೇಗೂರು, ಬೆಂಗಳೂರು ದಕ್ಷಿಣ | ಬಿ.ಎಲ್.ರೈಸ್ | ಎ.ಕ.೯ ಬೆಂಗಳೂರು–೮೮ |
| ೫ | ಕ್ರಿ.ಶ.ಸು. ೯೦೦ | ಬೇಗೂರು ಕೋಟೆ, ಬೆಂ. ದಕ್ಷಿಣ | ಬಿ.ಎಲ್.ರೈಸ್ | ಎ.ಕ.೯ ಬೆಂಗಳೂರು–೯೪ |

| | | | | |
|---|---|---|---|---|
| ೬ | ಕ್ರಿ.ಶ.ಸು. ೯೦೦ | ಬೊಮ್ಮಂಡಹಳ್ಳಿ, ಆನೇಕಲ್ | ಬಿ.ಎಲ್.ರೈಸ್ | ಎ.ಕ. ೯ ಆನೇಕಲ್–೭೩ |
| ೭ | ಕ್ರಿ.ಶ.೯೦೮ಕ್ಕೂ ಮೊದಲು | ಹೆಬ್ಬಗೋಡಿ, ಆನೇಕಲ್ | ಡಿ.ಸ್ಮಿತಾರೆಡ್ಡಿ | ಇತಿಹಾಸ ದರ್ಶನ ಸಂ–೧೯ |
| ೮ | ಕ್ರಿ.ಶ. ೯೦೮ಕ್ಕೂ ಮೊದಲು | ಬೇಗೂರು, ಬೆಂಗಳೂರು ದಕ್ಷಿಣ | | ಎ.ಕ.೯ ಬೆಂಗಳೂರು ಸಪ್ಲಿ– ೧೭೪ |
| ೯ | ಕ್ರಿ.ಶ. ೯೦೮ಕ್ಕೂ ಮೊದಲು | ಕೈಕೊಂಡ್ರಹಳ್ಳಿ, ಬೆಂ. ಪೂರ್ವ | ಆದಪ್ಪ ಪಾಸೋಡಿ | ಇತಿಹಾಸ ದರ್ಶನ ಸಂ. ೩೧ |
| ೧೦ | ಕ್ರಿ.ಶ. ೯೦೮ | ಬೇಗೂರು, ಬೆಂಗಳೂರು ದಕ್ಷಿಣ | ಬಿ.ಎಲ್.ರೈಸ್ | ಎ.ಕ.೯ ಬೆಂಗಳೂರು–೮೩ |



## ಅಡಿ ಟಿಪ್ಪಣಿಗಳು

೧. ಡಾ. ಪಿ.ವಿ.ಕೃಷ್ಣಮೂರ್ತಿ, **'ಶಾಸನ ಮಂಥನ'** – ಪುರಾಣ ಪ್ರಸಿದ್ಧ ಏಕಚಕ್ರಪುರವಾದ ಕೈವಾರಕ್ಷೇತ್ರದ ಶಾಸನಗಳು–ಒಂದು ಅವಲೋಕನ, ತುಮಕೂರು ವಿ.ವಿ. ೨೦೧೧, ಪುಟ ೧೨೩.
೨. ಡಾ. ಶ್ರೀಪಾದ ಭಟ್, ಎಲ್.ಪುಟ್ಟರಾಜು, **ತುಮಕೂರು ಜಿಲ್ಲೆಯ ಸ್ಥಳನಾಮಗಳು**–ತುಮಕೂರು ವಿ.ವಿ. ೨೦೧೧.
೩. ಕರ್ನಾಟಕ ಅರಣ್ಯ ಇಲಾಖೆ, ಕೃಷ್ಣರಾಜಪುರ ವಲಯ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಅವರಿಂದ ಕೈಕೊಂಡ್ರಹಳ್ಳಿ ಕೆರೆಯ ವಾಯವ್ಯ ದಂಡೆಯ ಮೇಲೆ ಪ್ರದರ್ಶಿಸಿದ ನಾಮಫಲಕದಲ್ಲಿರುವ ಮಾಹಿತಿ.
೪. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಅವರಿಂದ ಸಾವಳಕೆರೆಯ ನೈರುತ್ಯ ದಿಕ್ಕಿನಲ್ಲಿರುವ ಪ್ರವೇಶದ್ವಾರದಲ್ಲಿ ಪ್ರದರ್ಶಿಸಿದ ನಾಮಫಲಕದ ಮಾಹಿತಿ.
೫. ಡಾ. ಆರ್. ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೪, ಪುಟ ೨೧೬.
**೬. ಎಪಿಗ್ರಾಫಿಯಾ ಕರ್ನಾಟಿಕಾ–೯**, (ರೈಸ್ ಬಿ.ಎಲ್) ಬೆಂಗಳೂರು–೭೯, ಕ್ರಿ.ಶ.ಸು. ೮೭೦.
೭. ಡಾ.ದೇವರಕೊಂಡಾರೆಡ್ಡಿ, ದೊಡ್ಡಬೇಗೂರಿನ ನಾಗತ್ತರನ ಶಾಸನ–**ಇತಿಹಾಸ ದರ್ಶನ** ಸಂ–೦೩, ಕರ್ನಾಟಕ ಇತಿಹಾಸ ಅಕಾಡೆಮಿ(ರಿ) ಬೆಂಗಳೂರು, ೧೯೮೮, ಪುಟ ೧೫೯.
೮. ಡಾ.ಪಿ.ವಿ.ಕೃಷ್ಣಮೂರ್ತಿ, **ಬಾಣರಸರ ಶಾಸನಗಳು–ಒಂದು ಅಧ್ಯಯನ**, ಸಿವಿಜಿ ಪಬ್ಲಿಕೇಷನ್ಸ್, ವೈಯಾಲಿಕಾವಲ್, ಬೆಂಗಳೂರು–೨೦೦೯, ಪುಟ ೨೭ ರಿಂದ ೪೧.
೯. ಎಪಿಗ್ರಾಫಿಯಾ ಕರ್ನಾಟಿಕಾ–೯, (ರೈಸ್ ಬಿ.ಎಲ್) ಬೆಂಗಳೂರು–೮೭, ಕ್ರಿ.ಶ.ಸು. ೯೦೦.
೧೦. ಅದೇ– (ಸಪ್ಲಿಮೆಂಟರಿ) ಬೆಂಗಳೂರು–೧೭೪, ಕ್ರಿ.ಶ.ಸು. ೯೦೮.
೧೧. ಅದೇ– (ರೈಸ್ ಬಿ.ಎಲ್) ಬೆಂಗಳೂರು–೮೮, ಕ್ರಿ.ಶ.ಸು. ೯೦೦.
೧೨. ಅದೇ– (ರೈಸ್ ಬಿ.ಎಲ್) ಬೆಂಗಳೂರು–೯೪, ಕ್ರಿ.ಶ.ಸು. ೯೦೦.
೧೩. ಅದೇ– (ರೈಸ್ ಬಿ.ಎಲ್) ಆನೇಕಲ್–೭೩, ಕ್ರಿ.ಶ.ಸು. ೯೦೦.
೧೪. ಡಿ.ಸ್ಮಿತಾರೆಡ್ಡಿ, ಆನೇಕಲ್ ತಾಲ್ಲೂಕಿನ ಹೆಬ್ಬಗೋಡಿಯಲ್ಲಿ ದೊರೆತ ಗಂಗರ ಅಪ್ರಕಟಿತ ಶಾಸನ – **ಇತಿಹಾಸ ದರ್ಶನ ಸಂ–೧೯, ಕರ್ನಾಟಕ** ಇತಿಹಾಸ ಅಕಾಡೆಮಿ(ರಿ) ಬೆಂಗಳೂರು, ೨೦೦೪, ಪುಟ–೩೬೪.
**೧೫. ಎಪಿಗ್ರಾಫಿಯಾ ಕರ್ನಾಟಿಕಾ–೯**, (ರೈಸ್ ಬಿ.ಎಲ್) ಬೆಂಗಳೂರು–೮೩, ಕ್ರಿ.ಶ.ಸು. ೯೦೮
೧೬. ಸುಂಕಂ ಗೋವರ್ಧನ, **ಕನ್ನಡ ನಾಡಿನ ಪ್ರಮುಖ ಕೋಟೆಗಳು**, ಓದು ಬರಹ ಬಳಗ, ಬನಶಂಕರಿ ೩ನೆಯ ಹಂತ, ಬೆಂಗಳೂರು–೨೦೧೨, ಪುಟ ೨೭.
**೧೭ ಎಪಿಗ್ರಾಫಿಯಾ ಕರ್ನಾಟಿಕಾ–೧೬**(ಸಪ್ಲಿಮೆಂಟರಿ) (ಪ್ರೊ. ನೀಲಕಂಠಶಾಸ್ತ್ರಿಕೆ.ಎ.) ತುಮಕೂರು–೯೫, ಕ್ರಿ.ಶ.೭೫೦.
**೧೮. ಎಪಿಗ್ರಾಫಿಯಾ ಕರ್ನಾಟಿಕಾ–೧೦**, (ರೈಸ್ ಬಿ.ಎಲ್.) ಕೋಲಾರ–೨೦೦, ಕ್ರಿ.ಶ. ಸು. ೮೯೦
**೧೯. ಎಪಿಗ್ರಾಫಿಯಾ ಕರ್ನಾಟಿಕಾ–೦೯**, (ರೈಸ್ ಬಿ.ಎಲ್.) ಬೆಂಗಳೂರು–೪೫, ೪೭ ಕ್ರಿ.ಶ. ಸು. ೧೩೪೬
೨೦. ದೊಡ್ಡಕನ್ನೆಲ್ಲಿಯ ಕೆ.ಎಸ್.ಪ್ರಸನ್ನಕುಮಾರ್ ಅವರಿಂದ ಮಾಹಿತಿ.
**೨೧. ಎಪಿಗ್ರಾಫಿಯಾ ಕರ್ನಾಟಿಕಾ–೦೯**, (ರೈಸ್ ಬಿ.ಎಲ್.) ಬೆಂಗಳೂರು–೪೬.
೨೨. ಎಸ್.ಗಂಗಾಂಜಿಕೆ, ಪ್ರಾಚೀನ ಆಡಳಿತಾಧಿಕಾರಿಗಳು, **ಮಹದೇವಪುರ ವಿಧಾನಸಭಾ ಕ್ಷೇತ್ರದ ಚಾರಿತ್ರಿಕ ನೋಟ–೧**, ಕ.ಸಾ.ಪ. ಮಹದೇವಪುರ, ೨೦೧೪, ಪುಟ–೪೦.
**೨೩. ಬೆಂಗಳೂರಿನ ಬಖೈರುಗಳು**, ಪ್ರಸಾರಾಂಗ, ಬೆಂಗಳೂರು ವಿ.ವಿ. ೨೦೦೬, ಪುಟ–೪೨.
೨೪. ಡಾ.ಎಚ್.ಎಸ್.ಗೋಪಾಲರಾವ್, ನೆಲೆ ಕೊಟ್ಟವರ ನೆನಪಲಿ, **ವಿಜಯಕರ್ನಾಟಕ–೨೨.೦೪.೨೦೧೬**, ವಿ.ಕ.ವಿಶೇಷ ೦೯.
**೨೫. ಶಿವತತ್ವ ಚಿಂತಾಮಣಿ** (ಸಂ) ವಿದ್ವಾನ್ ಪಂಡಿತ ಬಸಪ್ಪ, ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು ವಿ.ವಿ., ಮೈಸೂರು–೧೯೬೦, ಪದ್ಯ–೫೮, ಪುಟ–೩೯೭.



# ಹಿರೇನಲ್ಲೂರಿನ ಅಪ್ರಕಟಿತ ಶಾಸನ ಹಾಗೂ ನವಶೋಧಿತ ಜೈನ ತೀರ್ಥಂಕರ ವರ್ಧಮಾನ ವಿಗ್ರಹ

ಹೆಚ್.ಆರ್. ಪಾಂಡುರಂಗ*

**ಚಿ**ಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಹಿರೇನಲ್ಲೂರು ಗ್ರಾಮ ಹೋಬಳಿ ಕೇಂದ್ರವಾಗಿದ್ದು ಐತಿಹಾಸಿಕ ಪ್ರಸಿದ್ಧಿ ಪಡೆದಿದೆ. "ಶ್ರೀ ಮದನಾದಿ ಅಗ್ರಹಾರ ಕೇಶವೇಶ್ವರ ಪುರವಾದ ಹಿರಿಯ ನಲ್ಲೂರು" ಎಂದು ಹೊಯ್ಸಳ ಶಾಸನೋಕ್ತ ಹೆಸರಾಂತ ಅಗ್ರಹಾರವಾಗಿದ್ದು ಕಲ್ಯಾಣ ಚಾಲುಕ್ಯ, ಹೊಯ್ಸಳರ ಕಾಲದ ಶಿಕ್ಷಕಲಾ ದೇವಾಲಯಗಳು. ವೀರಗಲ್ಲುಗಳು, ಸಹಾಸತಿ ಕಲ್ಲುಗಳು ಹಾಗೂ ಬಸದಿ ರಹಿತ ಜೈನ ತೀರ್ಥಂಕರ ವಿಗ್ರಹ ಹಾಗೂ ಶಾಸನೋಕ್ತ "ಹಿರಿಯ ಕೆರೆ" ಮತ್ತು ಗಂಗಾ-ಹೊಯ್ಸಳರ ಕಾಲದ ಶಾಸನಗಳು ಮುಂತಾದ ಚಾರಿತ್ರಿಕ ಸ್ಮಾರಕಗಳೊಂದಿಗೆ ಸಮೃದ್ಧವಾಗಿದ್ದು ಗತಕಾಲದ ವೈಭವವನ್ನು ಇಂದಿಗೂ ಸಾರುತ್ತಿದೆ.

### ೧. ಅಪ್ರಕಟಿತ ವೀರಗಲ್ಲು ಶಾಸನ

ಇಮ್ಮಡಿ ವೀರಬಲ್ಲಾಳನ ಕಾಲದ ನಿರ್ಮಾಣದ ಶ್ರೀ ಕೇಶವೇಶ್ವರ ದೇವಾಲಯ, ಇಂದಿನ ಶ್ರೀ ಮಲ್ಲಿಕಾರ್ಜುನ ದೇವಾಲಯದ ಎಡಭಾಗದಲ್ಲಿ "ಮಠದ ಹಾಲಯ್ಯ" ಎಂಬ ಜಂಗಮರ ಮನೆಯ ಮುಂಭಾಗದಲ್ಲಿ ದೊರೆತಿರುವ ಬಿಳಿ ಗ್ರಾನೈಟ್ ಶಿಲೆಯ ಈ ವೀರಗಲ್ಲು ಶಾಸನ ಊರಿನವರಿಂದ "ಮುದ್ರೆಕಲ್ಲು" ಎಂದು ಪೂಜಿಸಲ್ಪಡುತ್ತಿತ್ತು. ಇದನ್ನು ಹೊರತೆಗೆದು ಪರಿಶೀಲಿಸಿದಾಗ ಈ ಶಾಸನದ ಕಲ್ಲು ತುಂಡಾಗಿದ್ದು ಎರಡು ಅಡಿ ಅಗಲ, ಎರಡೂವರೆ ಅಡಿ ಎತ್ತರವಾಗಿದ್ದು ಶಿರೋಭಾಗದ ಫಲಕದಲ್ಲಿ ೬ ಸಾಲಿನ ಹಳೆಗನ್ನಡ ಶಾಸನವಿದ್ದು, ಕೆಳಗಿನ ಫಲಕದಲ್ಲಿ ಸ್ವರ್ಗದಲ್ಲಿ ಅಪ್ಸರೆಯೊಂದಿಗಿರುವ ವೀರನ ಶಿಲ್ಪವಿದ್ದು ಇದೊಂದು ವೀರಗಲ್ಲು ಶಾಸನವಾಗಿದೆ.

**ಶಾಸನದ ಪಾಠ**

೧. ಅರಸತ್ತೆಜ್ಜಾರ [ಜಾ] ನ [ತೋ]. ಗ . .

೨. [ಣ] ಳಿ. ಫ. . . . ಸಮ. ನ್

೩. ಕೆಡ್ತು . . . . . [ದೆ]

೪. [ವಿ] ರಮೆ [ಕ]ಲ್ಲು . . [ತು] . . ಮ. . ಡೆ. . .

೫. . . ತ್ತೊನ್ ಪುರುಷ [ನ್ಯು] . ಪ್ರ. . . .

೬. . . [ಪ] ಲ ಮ್

ಶಾಸನದ ಪಠ್ಯ ಪರಿಶೀಲಿಸಿದಾಗ ಶಾಸನ ಹಳೆಗನ್ನಡದ ಲಿಪಿಯ ೬ ಸಾಲು ಹೊಂದಿದ್ದು ಹಳೆಗನ್ನಡದ ಅಕ್ಷರಗಳ ಕೆತ್ತನೆ ಸೊಗಸಾಗಿದೆ- ಶಾಸನದ ಕಲ್ಲು ಚಕ್ಕೆ ಎದ್ದು ಅಕ್ಷರದ ಪಾಠ ನಷ್ಟವಾಗಿದೆ. ಆದರೂ ಶಾಸನದ ಮೊದಲ ಸಾಲು ಸ್ಪಷ್ಟವಾಗಿದೆ. ಲಿಪಿ ಹಾಗೂ ಶಾಸನದ ಭಾಷೆಯಿಂದ ಈ ಶಾನಸದ ಕಾಲ ಸುಮಾರು ೭-೮ನೇ ಶತಮಾನಕ್ಕೆ ಸಂಬಂಧಿಸಿದ್ದು ಗಂಗ-ರಾಷ್ಟ್ರಕೂಟರ ಪೂರ್ವದ ಕಾಲದ ಶಾಸನವೆಂದು ಹೇಳಬಹುದಾಗಿದ್ದು. ಈ ಶಾಸನದಲ್ಲಿ ಯಾವುದೇ ಕಾಲಮಾನದ ಉಲ್ಲೇಖವಿಲ್ಲ.

ಈ ಶಾಸನ ಅರಸತ್ತಿ ಎಂಬ ಪುರುಷನ ಹೆಸರಿನಿಂದ ಆರಂಭವಾಗಿರುವುದರಿಂದ ರಾಷ್ಟ್ರಕೂಟ-ಬಾದಾಮಿ ಚಾಲುಕ್ಯರ ಸಾಮಂತರಾಗಿ ನಾಗರಖಂಡ- ೧೨೦೦೦ವನ್ನು ಆಳಿದ ಸೇಂದ್ರಕ ವಂಶದ ದೊರೆಗಳಾದ ಭಾನುಶಕ್ತಿ - ಕಣ್ಣಶಕ್ತಿ- ರವಿಶಕ್ತಿ- ಭೀಮಶಕ್ತಿ-ವಾಣಸತ್ತಿ - ಕುನ್ದಶಕ್ತಿ-ದುರ್ಗಾ ಶಕ್ತಿ - ನಾಗಶಕ್ತಿ- ಮಾದವ ಶಕ್ತಿ ದೊರೆಗಳ ಹೆಸರು ಹಾಗೂ ಬಹು ಮುಖ್ಯವಾಗಿ ಹುಬ್ಬಳ್ಳಿ ತಾಲ್ಲೂಕಿನ ೬-೭ನೇ ಶತಮಾನದ ಸಿರಿಗುಪ್ಪೆ ಶಾಸನೋಕ್ತ ಮುಳಗುಂದದ ಅರಸ ವಾಣಸತ್ತಿ ಅವರ ಮಗ ಸಿರಿಗುಪ್ಪೆಯ ದೊರೆ ಕುನ್ದಸತ್ತಿ ಅರಸರ ಹೆಸರುಗಳನ್ನು ಸದರಿ ಶಾಸನದ ಅರಸತ್ತಿ ಅಥವಾ ಅರಶಕ್ತಿ ಉಲ್ಲೇಖ ಹೋಲುವುದರ ಜೊತೆಗೆ ತಲಕಾಡು ಗಂಗರ ದೊರೆ ಶ್ರೀ ಪುರುಷನ ಕ್ರಿ.ಶ. ೭೬೮ರ ತಲಕಾಡು ಶಾಸನೋಕ್ತ ಗಂಗರ ಸಾಮಂತ ಅರಸನಾಗಿದ್ದಿರಬಹುದಾದ "ದೇವಸತ್ತಿ ಅರಸರುಂ" ಎಂಬ ಸೇಂದ್ರಕ ಅರಸರ ಹೆಸರು ಹಾಗೂ ಅದೇ ಶಾಸನದ ಲಿಪಿಯನ್ನು ಹಿರೇನಲ್ಲೂರಿನ ಶಾಸನದ ಲಿಪಿ ಹೋಲುವುದರಿಂದ ಹಾಗೂ "ದೇವಸತ್ತಿ"

* ಕೃಷಿ ಅಧಿಕಾರಿ, ಕಳಸ-೫೭೭೧೨೪.



ಹಿರೇನಲ್ಲೂರಿನ ನವಶೋಧಿತ ಪ್ರಾಚೀನ ಕನ್ನಡ ಶಾಸನ

ಅರಸತ್ತಿ" ಎಂಬ ಹೆಸರುಗಳಲ್ಲಿಯೂ ಸಾಮ್ಯತೆ ಇರುವುದರಿಂದ ಹಿರೇನಲ್ಲೂರಿನ ಶಾಸನೋಕ್ತ ಈ ಅರಸತ್ತಿ ದೊರೆ ಬಹುಷಃ ತಲಕಾಡು ಗಂಗ ಅರಸರ ಸಾಮಂತನಾಗಿ ಕ್ರಿ.ಶ. ೭-೮ನೇ ಶತಮಾನದಲ್ಲಿ ಶಾಸನೋಕ್ತ ಹಿರಿಯ ನಲ್ಲೂರು ಹಾಗೂ ಅಸಂದಿ ನಾಡು ಮತ್ತು ಸುತ್ತ ಮುತ್ತಲ ಭೂ ಭಾಗವನ್ನು ಆಳಿದ ಸೇಂದ್ರಕ ವಂಶದ ಅರಸು ಎಂದು ಊಹಿಸಬಹುದಾಗಿದ್ದು ಮತ್ತು ಕ್ರಿ.ಶ. ೪೫೦ರ ಹಲ್ಮಿಡಿ ಶಾಸನ – ಚಂದ್ರವಳ್ಳಿಯ ಮಯೂರ ವರ್ಮನ ಪುನರ್ಪರಿಶೀಲನೆಗೆ ಒಳಪಡುವ ಮೊದಲಿನ ಶಾಸನದ ಅಭಿಪ್ರಾಯದ ಪ್ರಕಾರ ಹಾಗೂ ಕ್ರಿ.ಶ. ೬೮೫ರ ಬಳ್ಳಿ ಗಾವೆಯ ಶ್ರೀಮೊಗಿಲ್ಲಿ ಸೇಂದ್ರಕ ಮಹಾರಾಜನ ಶಾಸನಗಳಲ್ಲಿ ಸೇಂದ್ರಕ ವಂಶದ ಪ್ರಸ್ತಾಪವಿದ್ದು ಹಾಗೂ ಈ ಮೂರೂ ಶಾಸನೋಕ್ತ ಸ್ಥಳಗಳಾದ ನರಿದಾವಿಳೆ ನಾಡು – ನಾಗರ ಖಂಡ – ೧೨.೦೦೦ ಹಾಗೂ ಚಂದ್ರವಳ್ಳಿ ಪ್ರದೇಶಗಳಿಂದ ಸುತ್ತುವರಿದ ಮಧ್ಯದ ಭೂ ಭಾಗ ಪ್ರದೇಶ ಹಿರೇನಲ್ಲೂರು ಆಗಿದ್ದು ಈ ವೀರಗಲ್ಲು ಶಾಸನ ಸೇಂದ್ರಕ ದೊರೆಗಳ ಆಳ್ವಿಕೆ ಕಾಲಕ್ಕೆ ಸಂಬಂಧಿಸಿದೆ ಎಂದು ಊಹಿಸಬಹುದಾಗಿದೆ. ಈ ಶಾಸನ ಹಿರೇನಲ್ಲೂರಿನಲ್ಲಿ ದೊರೆತಿರುವ ೬ ಶಾಸನಗಳಲ್ಲಿ ಲಿಪಿ– ಭಾಷೆ ಕಾಲಮಾನದ ದೃಷ್ಟಿಯಿಂದ ಪ್ರಾಚೀನ ಶಾಸನವಾಗಿದೆ.

### ೨. ನವ ಶೋಧಿತ ರುಂಡ ರಹಿತ ಜೈನ ತೀರ್ಥಂಕರ ವರ್ಧಮಾನ ವಿಗ್ರಹ

ಹಿರೇನಲ್ಲೂರಿನ ಸರ್ಕಾರಿ ಶಾಲೆ ಹಿಂಭಾಗದಲ್ಲಿ ದೊರೆತಿರುವ ನವಶೋಧಿತ ಹೊಯ್ಸಳ ಶೈಲಿಯ, ಬಳಪದ ಕಲ್ಲಿನಿಂದ ಕೆತ್ತಲ್ಪಟ್ಟ, ರುಂಡ ರಹಿತ ಜೈನ ತೀರ್ಥಂಕ ವಿಗ್ರಹ ಸ್ಥಳೀಯರಿಂದ "ಕೂಗುವ ಮಲ್ಲಪ್ಪ"ನೆಂದು ಕರೆಯಲ್ಪಡುತ್ತಿದೆ ಹಾಗೂ ಹಿಂದಿನ ಕಾಲದಲ್ಲಿ ಊರಿಗೆ ಕಳ್ಳರು ರಾತ್ರಿ ನುಗ್ಗಿದಾಗ ಈ ಕೂಗುವ ಮಲ್ಲಪ್ಪ ಕೂಗಿ, ಕೂಗಿ ಜನರನ್ನು ಎಚ್ಚರಿಸಿ ಕಳ್ಳರಿಂದ ಊರಿನ ಜನರನ್ನು, ಜಾನುವಾರುಗಳನ್ನು ಕಾಪಾಡು



ಹಿರೇನಲ್ಲೂರಿನ ನವಶೋಧಿತ ರುಂಡ ರಹಿತ
ವರ್ಧಮಾನ ತೀರ್ಥಂಕರ ಶಿಲ್ಪ

ತ್ತಿದ್ದ. ಇದರಿಂದ ಸಿಟ್ಟಿಗೆದ್ದ ಕಳ್ಳರಿಂದ ಈ ವಿಗ್ರಹದ ಶಿರೋಭಾಗ ಕತ್ತರಿಸಲ್ಪಟ್ಟಿದ್ದು ಸಮೀಪದ ದಾಸರ ಹಳ್ಳಿಯ "ಕೂಗಿನ ಕಲ್ಲು ಗುಡ್ಡ"ದಲ್ಲಿ ಇದರ ರುಂಡವನ್ನು ಎಸೆದಿದ್ದಾರೆ ಎಂಬ ನಂಬಿಕೆ ಸ್ಥಳೀಯರಲ್ಲಿದೆ. ಆದರೆ ಪೂರ್ವಾಭಿ ಮುಖವಾಗಿ ಸುಖಾಸೀನದಲ್ಲಿ ಪದ್ಮ ಪೀಠದ ಮೇಲೆ ಕುಳಿತ ಈ ಸುಂದರ ವಿಗ್ರಹ ಕೂಗುವ ಮಲ್ಲಪ್ಪನದಾಗಿರದೆ ಧ್ಯಾನ ಮುದ್ರೆಯಲ್ಲಿ ಕುಳಿತ ಜೈನ ಧರ್ಮದ ೨೪ನೇ ತೀರ್ಥಂಕರ "ವರ್ಧಮಾನ ಮಹಾವೀರ" ನದ್ದಾಗಿದೆ. ಈ ವಿಗ್ರಹದ ಪೀಠದಲ್ಲಿ ಸಿಂಹ ಲಾಂಛನ ಇರುವುದರಿಂದ ನಿಸ್ಸಂದೇಹವಾಗಿ ಈ ವಿಗ್ರಹ ಜೈನ ಬಸದಿಯೊಳಗೆ ಪೂಜಿಸಲ್ಪಡುತ್ತಿದ್ದ ಮಹಾವೀರ ತೀರ್ಥಂಕರನದ್ದಾಗಿದೆ. ಕಾಲಾಂತರದಲ್ಲಿ ಬಸದಿ ಶಿಥಿಲವಾಗಿ ಬಿದ್ದು ಕಣ್ಮರೆಯಾಗಿದೆ. ಯಾವುದೋ ಕಾರಣದಿಂದ ಮಹಾವೀರನ ರುಂಡ ಭಗ್ನವಾಗಿದೆ. ಈ ಹಿನ್ನೆಲೆಯಲ್ಲಿ ಹಿರೇನಲ್ಲೂರಿನಲ್ಲಿ ಜೈನ ಧರ್ಮ ಅಸ್ತಿತ್ವದಲ್ಲಿತ್ತು ಹಾಗೂ ಶೈವ, ವೈಷ್ಣವ, ಜೈನ ಧರ್ಮಗಳ ಸಾಮರಸ್ಯದ ಕೇಂದ್ರವಾಗಿತ್ತು.



# ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ದೊರೆತ ರಾಷ್ಟ್ರಕೂಟರ ಕಾಲದ ಅಪ್ರಕಟಿತ ಶಾಸನಗಳು

ಡಾ. ಹನುಮಾಕ್ಷಿ ಗೋಗಿ*

**ಅ**ವಿಭಜಿತ ಧಾರವಾಡ ಜಿಲ್ಲೆಯು ಶಾಸನ ಸಮೃದ್ಧ ಪ್ರದೇಶವಾಗಿದೆ. ಈ ಭಾಗದಲ್ಲಿ ನೂರಾರು ಶಾಸನಗಳು ಊರೂರುಗಳಲ್ಲಿ ಕೇರಿ ಕೇರಿಗಳಲ್ಲಿ ದೊರೆಯುತ್ತವೆ. ಇವುಗಳ ವ್ಯವಸ್ಥಿತ ಪರಿವೀಕ್ಷಣೆ ಮತ್ತು ಪರಿರಕ್ಷಣೆಗಳು ಜರುಗಬೇಕಿದೆ. ತೀವ್ರ ಗತಿಯಲ್ಲಿ ಇವುಗಳ ನಾಶ ಕಾರ್ಯ ಜರುಗುತ್ತಲಿದೆ. ಇವುಗಳು ಕಾಲಗರ್ಭದಲ್ಲಿ ಹೂತುಹೋಗುವ ಮುನ್ನ ಹಾಳಾಗುವ ಮುನ್ನ ಇವುಗಳನ್ನು ರಕ್ಷಿಸಬೇಕಾದ ಮಹತ್ವ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ. ಇದು ಒಬ್ಬರಿಂದ ಆಗುವ ಕೆಲಸವಲ್ಲ. ದೊಡ್ಡ ದೊಡ್ಡ ಸಂಸ್ಥೆಗಳು ಸಾಮೂಹಿಕವಾಗಿ ಮಾಡಬೇಕಾದ ಪ್ರಯತ್ನವಾಗಿದೆ. ರಾಷ್ಟ್ರಕೂಟರ ರಾಜಧಾನಿಯಿರುವ ಜಿಲ್ಲೆಯಿಂದ ಬಂದಿರುವ ನನಗೆ ಅವುಗಳ ಬಗ್ಗೆ ಆಸಕ್ತಿ ಹೆಚ್ಚು. ಜೊತೆಗೆ ಅವರ ರಾಜಧಾನಿಯಿದ್ದ ಜಿಲ್ಲೆಯಲ್ಲಿ ಕೈ ಬೆರಳೆಣಿಕೆಯಷ್ಟು ಇರುವ ಶಾಸನಗಳು ಈ ಭಾಗದಲ್ಲಿ ಸಮೃದ್ಧವಾಗಿ ದೊರೆಯುವುದು ನನಗೆ ತೀವ್ರ ಕುತೂಹಲ ಕೆರಳಿಸಿರುವ ವಿಚಾರ. ಕಾರಣ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿಯ ಶಿರಹಟ್ಟಿ, ಶಿಗ್ಗಾಂವ ಮತ್ತು ಸವಣೂರು ತಾಲೂಕುಗಳಲ್ಲಿ ದೊರೆತಿದ್ದ ಆದರೆ ಇದುವರೆಗೆ ಅಪ್ರಕಟಿತವಾಗಿ ಉಳಿದಿದ್ದ ೧೧ ಶಾಸನಗಳ ಪಠ್ಯವನ್ನು ಮೊದಲ ಬಾರಿಗೆ ಕೊಡುವ ಪ್ರಯತ್ನ.

೧

ಮುನವಳ್ಳಿ (ಶಿಗ್ಗಾಂವ)

ಓಣಿಯಲ್ಲಿ

ಸು. ೮ ಶ.

ARSIE 1943-44 NO 25

ಅತಿ ತ್ರುಟಿತ ಎಂದು ಶಾಸನ ವರದಿಗಳಲ್ಲಿ ನಮೂದಾಗಿದೆ.

೧ ಸ್ವಸ್ತಿ ಶ್ರೀ ಸತ್ಯಾಶ್ರಯ ಶ್ರೀ ಪೃ-
೨ ಥಿವೀ ವಲ್ಲಭ ಮಹಾರಾಜ ಅ-
೩ ಧಿರಾಜ ಪರಮೇಶ್ವರ ಭಟ್ಟಾರಕ
೪ ಪೃಥಿವೀ ರಾಜ್ಯಂ ಕೆಯೆ*

---------------

* ೧೪ ಸಾಲುಗಳಲ್ಲಿ ಶಾಸನ ಮುಂದುವರೆಯುತ್ತದೆ.

೨

ಲಕ್ಷ್ಮೇಶ್ವರ (ಶಿರಹಟ್ಟಿ)

ತಾಲೂಕ ಕಛೇರಿ-ಪಾವಟಿಗೆ

ಸು. ೯ ಶ.

* ಎಚ್.ಐ.ಜಿ. ೨೭, ನವನಗರ, ಹುಬ್ಬಳ್ಳಿ.

ARSIE 1958-59.NO. 622

ಅಸ್ಪಷ್ಟ. ೧೬" ಅಗಲ ೪೨" ಎತ್ತರದ ಶಾಸನವಿದು. ಮೇಲಿನ ೬"ನಲ್ಲಿ ಮೇಲೆ ಸೂರ್ಯ-ಚಂದ್ರರ ಉಬ್ಬುಶಿಲ್ಪಗಳಿವೆ. ಶಂಖ, ಚಕ್ರ, ಖಡ್ಗ ಮತ್ತು ಶಂಖ, ಚಕ್ರ, ಗದಾ, ಪದ್ಮಗಳೊಂದಿಗೆ ನಿಂತ ನಾರಾಯಣನ ಉಬ್ಬುಶಿಲ್ಪವಿದೆ. ಕೆಳಗಿನ ೯" ಪಟ್ಟಿಕೆಯಲ್ಲಿ ಆಕಳು ಮತ್ತು ಅದರ ಮುಂದೆ ನಿಂತ ಕರುವಿನ ಉಬ್ಬುಶಿಲ್ಪಗಳಿವೆ. ಇವುಗಳ ಕೆಳಗಿನ ೨೭" ಭಾಗದಲ್ಲಿ ಆಳವಾಗಿ ಕೆತ್ತಿದ ಅಕ್ಷರಗಳಿರುವ ಶಾಸನವಿದೆ.

ನಾರಾಯಣದೇವರಿಗೆ ಮೂನೂರು ಒಕ್ಕಲು, ದಗಸೆಟ್ಟಿ ಮತ್ತು ನಾಟಿಗ್ಗಾವುಂಡರು ಸೇರಿ ನೀಡಿದ ಭೂದಾನದ ಉಲ್ಲೇಖವಿದೆ.

೧ @ ಸ್ವಸ್ತಿ ನತ್ಯವರಿಷದೇವ ಪೃಥುವೀ

೨ ವಲ್ಲಭ ಮಾಹಾರಾಜಾಧಿರಾಜ ಪರಮೇಸ್ವ-

೩ ರ ಪರಮ ಭಟ್ಟಾರನುತ್ತರೋತ್ತರಾಭಿವೃದ್ಧಿ ಪ್ರವ-

೪ ರ್ದ್ಧಮಾನ ವಿಜಯರಾಜ್ಯ ಸಲೆ ಪುರಿಗೆಱೆ

೫ ಮೂನೂಱುವರ ಗಾಮುಕ ಕಣ್ದನಾಳುತ್ತಮಿ-

೬ ರೆ ಸರ್ವ್ವರ ನಾರಾಯಣದೇವರ ಬಡಗಣ

೭ ಪೊಲದೊಳು ದಗಸೆಟ್ಟಿಯು ಕೊಟ್ಟ ಕೆಯ್ವ-

೮ ನ್ನಮ್ರ್ಮತ್ತರನ್ ಅದ್ರದ್ಮಾ ಸಿದಾಯ ವಿಸಿ-

೯ ಯಣ್ಬದು ನೇಜೆಲಿಗೆಯರ ಅದೋಜಂ-

೧೦ ಗಾ ಕಿಸುವನ ಕೊಟ್ಟನ್ನಳ-

೧೧ ತ್ವರಿಬಳಂ . . ರ . . ತ್ವರ ಕೊಟ್ಟ ಪಿರಿಮ-

೧೨ ಳರ ಜಱಗೊದಿಪ್ಪರನ್ದಾದಕೆ ಪಸು-

೧೩ ಂಬೆಯೊಳು ಕಾರದದಿಂ ಕೇಸವನುಂಬು-

೧೪ ದಂ ವಿನೊವ್ವಟ್ಟದ ಮಣ್ಣಿಯ ಕೊದವೊ ಬಟ್ಬು ಪು-

೧೫ ರಿಕರ ಮಹಾಜನಮೆಂಬ ಈದಿಂ-

೧೬ ತದಱದಿಣ್ದಬಿಮರ ತಳವಱ

೧೭ ಎರದು . ವಿನುಪವ ವೀರನೂ

೧೮ . ಸಕೊಂಗ ಕೊದೋನ್ ಇದ . ಕೊಟ್ಗೆ ಅಸ್ವ-

೧೯ ಮೇಧದ ಫಲ । ಮ . . . ಳಬಂ ವಾ

೨೦ . . . . . . . . . . . . .*

----

* ಕೊನೆಯ ಎರಡು ಸಾಲು ಅಸ್ಪಷ್ಟವಾಗಿದೆ.

೩

ಹೊಟ್ಟೂರು (ಶಿಗ್ಗಾಂವ)

ಸಂಗಪ್ಪ ಮಲ್ಲಾಡದ ಅವರ ಹೊಲ

ಸು.೯ನೆಯ ಶತಮಾನ

ARSIE 1943-44 NO 10

ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನು ಆಳುತ್ತಿರುವಾಗ, ಇನ್ದಪಯ್ಯನು ಬನವಾಸಿ ೧೨೦೦೦ವನ್ನು ಆಳುತ್ತಿದ್ದನು ಎಂದು ತಿಳಿಸುತ್ತದೆ. ನಂತರದ ಅಕ್ಷರಗಳು ಅಸ್ಪಷ್ಟವಾಗಿದ್ದು, ಈ ಶಾಸನವು ತುಪ್ಪದ ಸುಂಕದ ಕುರಿತು ಹೇಳುತ್ತದೆ ಎಂದು ಶಾಸನ ವರದಿಗಳಲ್ಲಿ ನಮೂದಾಗಿದೆ.

೧. ಸ್ವಸ್ತಿ ಸಮಧಿಗತ ಪಞ್ಚ ಮಹಾ–
೨. ಶಬ್ದ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾ–
೩. ರಕ ನೃಪತುಙ್ಗದೇವ ರಾಜ್ಯಾಭಿವೃದ್ಧಿ ಸಲೆ ಸ್ವಸ್ತಿ ಸಮ–
೪. ಧಿಗತ ಪಞ್ಚ ಮಹಾಶಬ್ದ ಸಾಮನ್ತಾಧಿಪತಿ ಪುಣಿಸೆ–
೫. ಯಮ್ಮಂ ಛಲದ . . . ಸುರಟ್ಟಮಂ ಶ್ರೀಮದಿನ್ದಪಯ್ಯಂ
೬. ಬನವಾಸಿ ಪನ್ನಿರ್ಚ್ಛಾಸಿರಮುಮನಾಳುತ್ತುಂ ಪೊ–
೭. . . . . . . . . . . . . ಯನಟಿದೋನಿದನಟಿಪಿ–
೮. ದಾತಂ ಸಾಸಿರ ಕವಿಲೆಯನಟಿದೋಂ ಕಾ–
೯. ದಾತಂಗೆ ಅಸ್ವಮೇಧದ ಫಲ @ ಸ್ವದತ್ತಂ ಪ–
೧೦. ರದತ್ತಂ ವಾಯೋ ಹರನ್ತ ವಸುನ್ಧರಾ ಷಷ್ಟಿರ್ವ–
೧೧. ರಿಷ ಸಹಶ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ[‖*]
೧೨. ಮರುಗನು ಗುಳಿಯುವಿಙ್ ಪುಲಿಯಂ ಪಡೆದೋರ್ [‖*]

೪

## ಲಕ್ಷ್ಮೇಶ್ವರ (ಶಿರಹಟ್ಟಿ)

### ಲಕ್ಷ್ಮಿಲಿಂಗ ದೇವಾಲಯ ನವರಂಗದ ಮೇಲ್ಛಾವಣಿ–ವೀರಗಲ್ಲು

ಕ್ರಿ.ಶ.೯೧೭

ARSIE 1958-59.NO. 619

ರಾಷ್ಟ್ರಕೂಟ ನತ್ಯವರ್ಷನ (೩ನೆಯ ಇಂದ್ರ) ಕಾಲದಲ್ಲಿದ್ದ ನಾಟ್ಗಾವುಂಡ ಚಾವುಂಡನಾಯಕ, ಕೆಲ್ಲರ ಬಿಲ್ಲಪೊರವ ಮತ್ತು ಪುಲಿಗೆರೆ ಮೂನೂರರ ಅಧಿಕಾರಿಯ ಉಲ್ಲೇಖವಿದೆ. ಮೇಲಧಿಕಾರಿಯ ಆದೇಶದಂತೆ ಕಲಿವುರವನ್ನು ಮುತ್ತಿದಾಗ, ಕೆಲ್ಲರ ಬಿಲ್ಲಪೊರವ ಎನ್ನುವವನು ಕಾದಿ ಹಲವರನ್ನು ಕೊಂದು ತಾನೂ ಸತ್ತುದನ್ನು ತಿಳಿಸುತ್ತದೆ.

ಮೊದಲನೆಯ ಸ್ತರ

೧ ನಿತ್ಯವರ್ಷ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟರರ ರಾಜ್ಯಾಭ್ಯುದಯ ಸಲೆ ಸಕನೃಪ ಸತಙ್ಗಳ್
೨ ಙ್ಣುನೂಱ ಮೂವತ್ತೊಂಬತ್ತನೆಯ ಧಾತು ನಾಮ ಸಂವಚ್ಚರ ಪ್ರವರ್ತ್ತಿಸೆ ಪುರಿಗೆಱ್ ಮೂನೂಱುಮಲೆಣ್ದೆಯನ . .
೩ ಪದ ಶುಕ್ಲಪಕ್ಷದ ಪಶ್ಚ(ಞ್ಚ)ಮೆ ಆದಿತ್ಯವಾರದನ್ದು ಮೂನೂಱುವ ನಾಟ್ಗಾವುಣ್ಡ ಚಾವುಣ್ಡನ ನಾಯಕ ಕೆಲ್ಲರ ಬಿಲ್ಲಪೊರವನ . . .

ಎರಡನೆಯ ಸ್ತರ

೪ . ಪೆರೋಟ್ಟೂದ ಕೊಂದೊಮೊಮ್ಪುಲರ್ ಕೊಲ್ಗಿದೊಮ್ದು ವ . . ಗೊಮ್ಮೊಗನು ಪೇಟ್ದ ಬೆಸನೆಗೇಳ್ದ . . . .
೫ ಪಿರಿದಾ ನೆರದು ಪರಿತನ್ದು ಮುದಿ ಕಲಿವುರವಂ ಮುತ್ತಿಟ್ದು ಬೆಳರಕಣ್ದು . ಸದೊಕ್ಕೆ ಪೆತ್ತುದನ್ಕ ಬಿಲ್ಲಾಳ್ಗೆರಗಿಲ್ಲದೆ ಕಾದೆ . .
೬ . ಜವತಿಯನು ಪರೇಶ್ವರನ . ದನ್ತ ಕಟ್ಟವರರಂ ಕುಗನ್ತರದೆ ಮುರಿದೆತ್ತಿದೋ ಈವಂ ಸುರಿಗೆಯಾಳಾಟನ್ದು ಕೆ . .

ಮೂರನೆಯ ಸ್ತರ

೭ . . . . ಗೆ ಬಿಲ್ಲಪೊರವಂ ಪಲರಂ ತವೆ ಕೊನ್ದುದುಂ ಜಸ ನಿಲೆ ತ . . . ತ್ತಾನಾ ತಲೆಯೆರಾಳಿ ತಲೆಯನೆರದೆ . . . . .

೮ . . ದೊಳೆನ್ನನಿನ್ದು ತಜೆರನಜಾನ್ತಿ . ನಿಕ್ಕಿ ಸಸ್ತು ಮೆಯ್ಗಲಿತನವಣ್ಣಂ . . ಲ್ಕಜಿಳವಲ್ಲದ ಮಾಕಸರಾದತ . .

೫

**ಮೋಟಹಳ್ಳಿ (ಶಿಗ್ಗಾಂವ)**

ಈಶ್ವರ ದೇವಾಲಯದ ಹತ್ತಿರ–ವೀರಗಲ್ಲು

ಸು.೧೦ನೆಯ ಶ.

ARSIE 1945-46.NO.317

ರಾಚಯನು ಮೊಲ್ಲಯೂರನ್ನು ಆಳುವಾಗ, ಮಣಲರ ಮೇರ ಲೆಙ್ಕ ನಾಳ್ಗಾಮುಂಡನಾಗಿದ್ದಾಗ, ಮತ್ತಿರ ಬಿನ್ನಣ್ಣ ಎನ್ನುವವನು ಗಾಮುಂಡನಾಗಿದ್ದಾಗ, ಕರಿಯರ ಪೊಲಯಮ್ಮ ಮತ್ತು ಬಮ್ಮೊಯರು ಬಿಟ್ಟ ದತ್ತಿಯನ್ನು ತಿಳಿಸುತ್ತದೆ.

ಮೊದಲನೆಯ ಸ್ತರ

೧ ಸ್ವಸ್ತಿ ಶ್ರೀ ಕನ್ನರದೇವ ಪ್ರಿತಿವೀ ರಾಜ್ಯಙ್ಗೆಯ್ಯೆ

೨ ರಾಚಯ ಮಾ(ಮ)ಲ್ಲಯೂರನ(ನಾ)ಳೆ ಮಣಲರ ಮೇರ

೩ ಲೆಙ್ಕ ನಟ್ಟಿಗಮುಣ್ಡುಗೆಯೆ ಮತ್ತಿರ ಬಿಂನಣ್ಣರ ಗಮು–

ಎರಡನೆಯ ಸ್ತರ

೪ ಣ್ಡುಗೆಯೆ ಕರಿಯರ ಪೊಲಯಮ್ಮ

೫ ತಂನ್ದೆ ಮೂವೊರು ಕ(ಕಾ)ದಿ ಬಮ್ಮೊಯ ಸಾ–

೬ ಬಮ್ಕೊಟ್ಟದೆಟ್ಟಿದನಟಿಕಣಟೊ ಕೊಂದವನೋರ್ . .

೭ . . . . . . . .

೬

ಸಬನೂರು (ಶಿಗ್ಗಾಂವ)

ಸೋಮೇಶ್ವರ ದೇವಾಲಯದ ಹಿಂದೆ ಇರುವ ವೀರಗಲ್ಲು

ಸು. ೧೦ನೆಯ ಶತಮಾನ

B.K.NO.31 1943-44 No.31

ರಾಷ್ಟ್ರಕೂಟ ಚಕ್ರವರ್ತಿ ಕನ್ನರನ ಕಾಲದ ಶಾಸನವಿದಾಗಿದ್ದು, ಗೋಗ್ರಹಣವೊಂದರಲ್ಲಿ ಸೆಂಬೂರ ಕುಂದಾತಿ ಎನ್ನುವವನು ಕಾದಿ ಮಡಿದುದನ್ನು ದಾಖಲಿಸುತ್ತದೆ.

೧ ಶ್ರೀಮ ಕನ್ನರದೇವ ರಾಜ್ಯಂ[ಗೆಯ್ಯೆ*]

೨ ಲೋಕಟೆ ಬನವಾಸಿ [ಪನ್ನಿರ್*]–

೩ ಸಾಸಿರಮುಮನಾಳೆ ಅಣ್ಣಿಗಂ [ಮುಗು*]–

೪ ನ್ದಗೆ ಪನ್ನೆರಡುಮಂ ನಾ[ಲ್ಗಾವುಣ್ಡುಗೆಯ್ಯೆ*] . .

೫ ಗೆಲ್ದು ಸೆಮ್ಬೂರ ಗಾಮಿಗ . . . .

೬ ರರ ಕುನ್ದಾತಿ ಗೆರ ತಿವಿ . . [ತುಱು*]–

೭ ಗೋಳೊಳಂ ಸತ್ತೊ[ಂ*] ಇದ

೮ ಮಾಡಿಸಿ ನಿಜೆಸಿದೋಂ . . . [॥*]

೭

**ಸಬನೂರು (ಶಿಗ್ಗಾಂವ)**

ಸೋಮೇಶ್ವರ ದೇವಾಲಯದ ಹಿಂದೆ ಇರುವ ವೀರಗಲ್ಲು

ಸು. ೧೦ನೆಯ ಶತಮಾನ

B.K.NO.32 1943-44 No.32

ರಾಷ್ಟ್ರಕೂಟ ಚಕ್ರವರ್ತಿ ಕನ್ನರನ ಕಾಲದ ಶಾಸನವಿದಾಗಿದ್ದು, ಪಲ್ಲೆವೂರ ದಾಳಿಯಲ್ಲಿ ಸೆಂಬೂರ ಕುನ್ತಾತಿ ಎನ್ನುವವನು ಕಾದಿ ಮಡಿದುದನ್ನು ತಿಳಿಸುತ್ತದೆ.

೧ @ ಸ್ವಸ್ತಿ ಶ್ರೀಮಕನ್ನರದೇವ ರಾಜ್ಯಂಗೆಯ್ಯೆ ಆರಯ್ಯ
೨ ಬನವಾಸಿ ಪನ್ನಿಚ್ಛ ಸಾಸಿರಮುಮಾಳೆ ಅಣ್ಣಿಗ[ಂ*]
೩ ಮುಗುನ್ದಗೆ ಪನ್ನೆರಡಱ ಗಾ[ಮು*]ಣ್ಡುಗೆಯ್ಯೆ ಸೆಮ್ಬೂರ ಕುನ್ತಾ-
೪ ತಿ ಗಾಮಿಗಂ ಅಳಿಮದಱ ಮೇಗೆ ಸೊನ್ನಮಾಮನ ಪಲ್ಲೆ
೫ ಊರಟಿ ಮೇಗೋನ ಸತ್ತನದಾ ನಿಜೆಸಿದ ತನ್ದು ಕಲ್ಲ
೬ ಕೇದಂ ॥ ನಿದ
೭ ಮಾಡಿಸಿದಂ
೮ . ಕಯ್ಯ . [॥*]

೮

ಸಬನೂರು (ಶಿಗ್ಗಾಂವ)

ಸೋಮೇಶ್ವರ ದೇವಾಲಯದ ಹಿಂದೆ ಇರುವ ವೀರಗಲ್ಲು

ಸು. ೧೦ನೆಯ ಶತಮಾನ

B.K.NO.33 1943-44 No.33

ರಾಷ್ಟ್ರಕೂಟ ಚಕ್ರವರ್ತಿ ಕನ್ನರನ ಕಾಲದ ಶಾಸನವಿದಾಗಿದ್ದು, ಇಟ್ಟಗೆಯ ದಾಳಿಯಲ್ಲಿ ಸೆಂಬೂರ ಕುಂದಾತಿಯು ಮರಣ ಹೊಂದಿದುದನ್ನು ತಿಳಿಸುತ್ತದೆ.

೧ @ ಸ್ವಸ್ತಿ ಶ್ರೀ ಕನ್ನರದೇವ ರಾಜ್ಯಂಗೆಯ್ಯೆ ಲೋಕಟೆ ಬನವಸಿ ಪನ್ನಿಚ್ಛಾ-
೨ ಸಿರಮನಾಳೆ ಅಣ್ಣಿಗನ್ ಮುಗುನ್ದ ಪನ್ನೆರಡುಮ ನಾಟ್ಗಾಮುಣ್ಡುಗೆ-
೩ ಯ್ಯೆ ಸೆಮ್ಬೂರ ಕುನ್ದಾತಿ ಗಾಮಿಗ ಇಟ್ಟಗೆವೂರ ತಿವಿಸೆನಂ ತುಱು-
೪ ಗೋಳೊಳಂ ಕಾದಿ ಸತ್ತೊಂ ಪಸುಗಡಿಗಳ ವಿಜಾಣ್ಣಂ
೫ ಇ ಕಲ್ಲಂ ನಜೆಸಿದೋಂ ಅವರಣ್ಣಂ ಬಾಳ್ದಮ್ಮದೆ ಆಬಿಣ್ನೊದ್ದಿಸಿಲ್ಗೆ
೬ ಇ ಕಲ್ಲಂ ಮಾಡಿದ ಬಿಣ್ನನ ಪಱಿಯಮ್ಮಂನೆಮ್ಬೊಂ ॥*]

೯

ಹನುಮರಹಳ್ಳಿ (ಶಿಗ್ಗಾಂವ)

ಗ್ರಾಮದ ಮಧ್ಯದಲ್ಲಿರುವ ಗೋಸಾಸ ಕಲ್ಲು

ಸು. ೧೦ನೆಯ ಶ.

ARSIE 1945-46 NO 290

ರಾಷ್ಟ್ರಕೂಟ ಕನ್ನರದೇವ ಚಕ್ರವರ್ತಿಯು ಆಳುತ್ತಿರುವಾಗ, ಗಾವರಿ ಗ್ರಾಮದ ಕಾಣಿಯಮ್ಮ ಮತ್ತು ಆತನ ಹೆಂಡತಿ ಗಾಮುಣ್ಡಬ್ಬೆಯರು ಗೋಸಾಸ ದಾನವನ್ನು ನೀಡಿ, ಕೆಱಿಯನ್ನು ತೋಡಿಸಿದ ವಿಷಯವನ್ನು ಪ್ರಸ್ತಾಪಿಸುತ್ತದೆ.

೧ ಶ್ರೀ ಕನ್ನರದೇವ ಪ್ರಿಥುವೀ ರಾಜ್ಯಂಗೆಯ್ಯೆ ಗಾವರಿಯ ಕಾ-
೨ ಣಿಯಮ್ಮನಾತನ ಪೆಣ್ಡತಿ ಗಾಮುಣ್ಡಬ್ಬೆಯು ಗೋ-
೩ ಸಾಸಮಿಟ್ಟು ಕೆಱಿಯನಗಟಿಸಿ ದೊಮ್ಮಳು ವರಿಸ ಪಣ್ಡಿ-
೪ . ದಣಲ್ಮಾದಿಂದಡೆ ಮುಮ್ಮೇಟು ವರಿಸ ಕಿಟ್ಟಪ್ಪದಾರ ಕೊಟ್ಟ [॥]

೧೦

ಲಕ್ಷ್ಮೇಶ್ವರ (ಶಿರಹಟ್ಟಿ)

ನಾರಾಯಣಸ್ವಾಮಿ ದೇವಾಲಯದ ಎದುರು

ಸು. ೧೦ ಶ.

ARSIE 1958-59.NO. 621

೪೫" ಎತ್ತರ ೧೫" ಅಗಲ ಗಾತ್ರದ ಶಾಸನವಿದು. ಸೆಟ್ಟಿಯೊಬ್ಬನಂದ ಬೀರನಾರಾಯಣ ದೇವರಿಗೆ ನೀಡಿದ ಭೂದಾನ ಮತ್ತು ಸುಂಕಗಳ ದಾನವನ್ನು ದಾಖಲಿಸುತ್ತದೆ ಎಂದು ಶಾಸನ ವರದಿಗಳಲ್ಲಿ ಹೇಳಲಾಗಿದೆ. ಸದ್ಯ ಈ ಶಾಸನವು ಸ್ಥಳದಲ್ಲಿ ಲಭ್ಯವಿಲ್ಲ. ಆದರೆ ಸುಮಾರು ೧೦ ಅಡಿ ಎತ್ತರದ ರಾಷ್ಟ್ರಕೂಟರ ಕಾಲದ ನಾರಾಯಣ ಮೂರ್ತಿಯು ಬೆರಗನ್ನು ಹುಟ್ಟಿಸುತ್ತದೆ.

೧ . . ದಟಕಸೆ . . . . . . .
೨ ಅರಸಾ . . . . . . .
೩ ಸ್ವಸ್ತಿ ಶ್ರೀ ಕುಪ್ಪಮಾದರ
೪ ಗೆ ಕೊಟ್ಟ ಕೆಯ್ಯುಂ ಗಾಡಿ
೫ ಗ ಕೊದಮ ನೂರ್ವ್ವರನುಣ್ಣರ
೬ ಬು ನಾಟ್ಗಾಮುಣ್ಣನು ಇಬ್ದು
೭ ಕೊಟ್ಟೋರ ಇದಂ ಕೊಟ್ಟೋಮ-
೮ ರಂ ವೋಸಿವಮನ್ ಅಟಿ-
೯ ದೋನ ಲೋಕಕೆ ಸನ್ದೋನಕ್ಕು
೧೦ ಸಾಸಿರ್ವ್ವ ಪಾರ್ವ್ವರ ಸಾ-
೧೧ . . . . ಬಿಯುಮಕ
೧೨ . . . . . . . .

------------

* ಮುಂದೆ ಬರಹವಿಲ್ಲ.

೧೧

ಬರದೂರ (ಸವಣೂರು ತಾಲೂಕು)

ಬಸವಣ್ಣ ದೇವಾಲಯದ ಹೊರಗೆ

ಸು.೧೦ನೆಯ ಶ.

ARSIE 1945-46.NO.274

ರಾಷ್ಟ್ರಕೂಟ ಅಮೋಘವರ್ಷನ ಕಾಲದಲ್ಲಿ, ಇಂದ್ರನು ಬನವಾಸಿ ೧೨೦೦೦ ಆಳುತ್ತಿರುವಾಗ ಕಿಮುಳೆಯ ಐವತ್ತು ಮಹಾಜನರು ಬಿಟ್ಟ ದತ್ತಿಯ ಉಲ್ಲೇಖವಿದೆ.

೧ ಸ್ವಸ್ತ್ಯಮೋಘ ವರಿಶ ಶ್ರೀ ಪ್ರಿತಿವೀ ವಲ್ಲಹ ಮಹಾರಾಜಾ
೨ ಪರಮೇಶ್ವರ ಭಟಾರ ರಾಜ್ಯಂಜ್ಗೆಯ್ಯೆ ಇನ್ದರ ಬನವ[ಸೆ*]
೩ ಪನ್ನಿರ್ಚ್ಛಾಸಿರನುಮನಾಳೆ ಕಿಮುಳೆಯ ಅಯ್ವದಿಂಬರು . .
೪ ವಲ್ಲರದ್ಬನೊಳೆದ್ಗೊಗಸತಿ ಜಾತಾದ್ದರಲಿಯಳ ಬಿದಿಗಾದೊ
೫ ಇದಕೆ ಪರ್ಬ್ಬಳ್ಳಿಯ ಪುರುಳಿಲಿ
೬ . . ಯಕರಯ್ಯಾರಮನಾದೋನ್ ಸಟೆ ಇದ-
೭ ನಟಿದೋರ್ಪ್ಪಞ್ಚ ಮಹಾಪಾತಕಂ ಇದಟಿ-
೮ ಯೆ ಬಿಟ್ದಿನ್ದರ . ಪಞ್ಚ ಮಹಾಪಾತಕಂ
೯ ಪಾರ್ವ್ವರುವಮು ಕವಿಲೆಯುಮನಟಿ[ದ*] ಪಾತಕನಕ್ಕುಂ @
ಶಾಸನದ ಮೇಲ್ಭಾಗದಲ್ಲಿಯ ಅಕ್ಷರಗಳು
೧೦ ವೂಲಗೆದ್ದ ಒರಮಂ ಕಸವರ ಗದ್ದರಿಯಸಾಳ್ದು





# ಎಸ್. ನೇರಲಕೆರೆ ಗ್ರಾಮದಲ್ಲಿನ ಕಟ್ಟೆರಂಗನಾಥಸ್ವಾಮಿ ದೇವಾಲಯದ ಸುಕನಾಸಿಯ ಚಾವಣಿಯಲ್ಲಿರುವ ಕಲ್ಲಿನಲ್ಲಿರುವ ಶಾಸನ

ಸಿ.ಎಂ. ತಿಪ್ಪೇಸ್ವಾಮಿ*

## ನೇರಿಲಕೆರೆಯ ಬಮ್ಮಗಾವುಂಡನ ಶಾಸನ

ಎಸ್.ನೇರಲಕೆರೆಯು (ಶ್ರೀರಾಂಪುರ ಬಳಿಯ ನೇರಲಕೆರೆ) ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನಲ್ಲಿ ಹೊಸದುರ್ಗದಿಂದ ಹುಳಿಯಾರಿಗೆ ಹೋಗುವ ರಸ್ತೆಯಲ್ಲಿ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಶಿಲಾಶಾಸನಗಳು, ವೀರಗಲ್ಲುಗಳು, ಪುರಾತನ ಕೆರೆ ಮುಂತಾಗಿ ಪ್ರಾಚ್ಯಾವಶೇಷಗಳಿವೆ. ಎಪಿಗ್ರಾಫಿಯಾ ಕರ್ನಾಟಿಕಾದ ೧೨ನೇ ಸಂಪುಟದಲ್ಲಿ (ಬಿ.ಎಲ್.ರೈಸ್ ಸಂಪುಟಗಳು) ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಶಾಸನಗಳಲ್ಲಿ ಕ್ರಿ.ಶ. ೧೧೭೨ರ ಒಂದು ಶಾಸನವನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ. ಇದು ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿ ನೀಡಲಾದ ದಾನದ ಬಗೆಗೆ ಇದೆ.ಹೊಯ್ಸಳರು ಇವರ ಸಾಮಂತರಾಗಿ ಆಳ್ವಿಕೆ ನೆಡೆಸುತ್ತಿದ್ದ ಕಾಲವದು. ಈಗ ಪ್ರಕಟಿಸಲಾಗುತ್ತಿರುವ ಶಾಸನವು ಇದೇ ಗ್ರಾಮದ ಕಟ್ಟೆ ರಂಗನಾಥಸ್ವಾಮಿ ದೇವಾಲಯದ ಸುಕನಾಸಿಯ ಛಾವಣಿಯಲ್ಲಿರುವ ಕಲ್ಲಿನ ಮೇಲೆ ಕೆತ್ತಲಾಗಿರುವ ಶಾಸನವಾಗಿದೆ. ಇದನ್ನು ಈ ಹಿಂದೆ ಕೆಲವರು ಗಮನಿಸಿದ್ದರೂ ಇದನ್ನು ಓದಿ ಪ್ರಕಟಿಸಿಲ್ಲ. ಹೀಗಾಗಿ ಇದು ಹೊಸತಾಗಿ ಬೆಳಕಿಗೆ ತರುತ್ತಿರುವ ಶಾಸನವಾಗಿದೆ.

ಈ ಶಾಸನವು ದೇವಾಲಯದ ಸುಕನಾಸಿಯ ಎಡಭಾಗದ ಛಾವಣಿಯಲ್ಲಿದೆ. ಇದು ಪೂರ್ಣ ಕತ್ತಲೆಯ ಪ್ರದೇಶವಾಗಿದ್ದು ಶಾಸನದ ಇರುವಿಕೆಯನ್ನು ಊಹಿಸಲಾಗದು. ಇದು ಸುಮಾರು ೩ ಅಡಿ ಅಗಲ ೫ ಅಡಿ ಉದ್ದದಲ್ಲಿ ಕಂಡರಣೆಯಾಗಿದೆ. ಈ ಹಿಂದೆ ಬೇರೆ ಸ್ಥಳದಲ್ಲಿದ್ದು, ದೇವಾಲಯದ ಜೀರ್ಣೋದ್ಧಾರ ಅಥವ ಅಭಿವೃದ್ಧಿಯ ಸಂದರ್ಭದಲ್ಲಿ ಆಕಸ್ಮಿಕವಾಗಿಯೋ ಅಥವಾ ಬುದ್ಧಿಪೂರ್ವಕ ವಾಗಿಯೋ ಈಗಿರುವ ಸ್ಥಳದಲ್ಲಿಟ್ಟಿದ್ದಾರೆ. ಇದನ್ನು ಅಳವಡಿಸಿದಾಗ ಬಳಸಿರುವ ಗಾರೆಯಿಂದಾಗಿ ಶಾಸನದ ಕೆಲವು ತುದಿಯ ಅಕ್ಷರಗಳು ಅಸ್ಪಷ್ಟವಾಗಿದ್ದರೂ ಒಟ್ಟಾರೆಯಾಗಿ ಶಾಸನವು ಸುಸ್ಥಿತಿಯಲ್ಲಿದೆ.

ಶಾಸನವು ಒಟ್ಟು ಕ್ರಮವಾಗಿ ೧೪ ಸಾಲುಗಳು ಹಾಗು ಚಿಕ್ಕ ಅಕ್ಷರಗಳಲ್ಲಿ ಮೊದಲ ಸಾಲಿನ ಮೇಲ್ಭಾಗದಲ್ಲಿ ೧ ಹೆಚ್ಚುವರಿ ಸಾಲನ್ನು, ಒಟ್ಟು ೧೫ ಸಾಲುಗಳನ್ನು ಒಳಗೊಂಡಿದೆ. ಅಕ್ಷರಗಳ ಗಾತ್ರ ಪ್ರಾರಂಭದಲ್ಲಿ ತುಂಬಾ ದೊಡ್ಡದಾಗಿದ್ದು ಸ್ಪಷ್ಟವಾಗಿದ್ದು ನಂತರದ ಸಾಲುಗಳಲ್ಲಿ ಚಿಕ್ಕದಾಗಿದೆಯಲ್ಲದೆ ಸಾಲುಗಳು ವಕ್ರವಾಗಿವೆ.ಶಾಸನದ ಭಾಷೆ ಕನ್ನಡ ಹಾಗೂ ಹೊಯ್ಸಳ ಲಿಪಿ. ಆದರೆ ಕಾಲವನ್ನು ನಿರೂಪಿಸುವಿಕೆ ಸ್ಪಷ್ಟವಾಗಿಲ್ಲ, ವಿಷಯ ನಿರೂಪಣೆಯೂ ಕ್ರಮಬದ್ಧವಾಗಿಲ್ಲ. ಕಾಗುಣಿತ ಕೆಲವೆಡೆ ತಪ್ಪಾಗಿವೆಯಾದರೂ ಅರ್ಥಮಾಡಿಕೊಳ್ಳುವುದು ಕಷ್ಟವೇನಲ್ಲ. ಭಾಷೆ ಬಳಕೆ ಪೂರ್ಣ ಶುದ್ಧವಾಗಿಲ್ಲ. ಶಾಸನದ ಬರಹ ಪೂರ್ಣವಾದಾಗ ಕೆಲವು ಶಾಸನಗಳಲ್ಲಿ ಸ್ಥಳಾವಕಾಶವಿಲ್ಲದಾಗ ಬೇರೆಡೆ ಬರೆದಿರುವ ಉದಾಹರಣೆಗಳಿವೆ. ಆದರೆ ಇದರಲ್ಲಿ ೧೫ನೇ ಸಾಲನ್ನು ಶಾಸನದ ಅಂತ್ಯಕ್ಕೆ ಬರೆಯಲ್ಲು ಸಾಕಷ್ಟು ಸ್ಥಳಾವಕಾಶವಿದ್ದರೂ ಮೊದಲ ಸಾಲಿನ ಮೇಲ್ಭಾಗಕ್ಕೆ ಸೇರಿಸುವ ಉದ್ದೇಶ ವೇನಿತ್ತೆಂಬುದು ಸ್ಪಷ್ಟವಾಗುವುದಿಲ್ಲ.

೧ ಸ್ವಸ್ತಿ ಶ್ರೀಮತು ಚಾ
೨ ಳುಕ್ಯ ವಿಕ್ರಮ ಕಾಲದಲು
೩ ಹೊಯ್ಸಳದೇವರಾಳ್ಕೆಯಲು
೪ ಸಾಮನ್ತ ಚಟ್ಟಯ್ಯನ ವಿ
೫ ತ್ತಿಯಲು ನೇಜಿಲಕೆಜಿಯ
೬ ಬಮ್ಮಗಾ[ಮು]ಣ್ಡತೊಡರ್ಜ್ವಿರಗ
೭ ಣ್ಡತಪ್ಪೆತಪ್ಪುವ ಶ್ರೀ[ಮು]ಖ ಸಂವತ್ಸರದ ಸೋಮ
೮ ವಾರದನ್ದು ಬ್ರಹ್ಮೇಸ್ವರದೇವರ್ಗ್ಗೆದೇವರ್ಗ್ಗೆಭಾಗದಗಟ್ಟಿ.

* ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ.

೯ ಮತ್ತರು ಬೆದ್ದರೆ ಮತ್ತರು೩೧ ಬ್ರಹ್ಮಪುರಿಯ

೧೦ ಗದ್ದೆಕಂಬ ೨೦೦ ಬೆದ್ದರೆ ಮತ್ತ[ರು] ೧೧ ಬ್ರಿಹಸ್ಪ

೧೧ ತಿ ವಾರ[ದನ್ದು]. . . . ಸೂರ್ಯಗ್ರಹಣದನ್ದು ಧಾರಾಪೂರ್ವ್ವಕ

೧೨ ಮಾಡಿ ಬಮ್ಮಗಾಮಣ್ಡ . . . ಗೋಬ್ರಾಹ್ಮಣರ ಕೊಟ್ಟ ನೆಲ .

೧೩ ಳಾಕರ್ತರ ಬರಸಲ್ಗೆ ಮಂಗಳಮಹಾ ಶ್ರೀ ಶ್ರೀ ಶ್ರೀ ಯಿನ್ತಿ .

೧೪ ಮನಳಿದ ಕವಿಲೆಯನಳಿದ .

೧೫ . . ಮತ್ತರು ಹಾ ೧೨ (ಶಾಸನದ ಕಲ್ಲಿನ ಮೇಲ್ತುದಿಯಲ್ಲಿ ಬರೆಯಲಾಗಿದೆ)

ಶಾಸನದ ಸಾರಾಂಶ ಇಂತಿದೆ. ಚಾಳುಕ್ಯ ವಿಕ್ರಮ ಕಾಲದಲ್ಲಿ, ಹೊಯ್ಸಳದೇವನ ಆಳ್ವಿಕೆಯಲ್ಲಿ ಸಾಮನ್ತ ಚಟ್ಟಯ್ಯನ ಆಳ್ವಿಕೆಯ ವ್ರಿತ್ತಿಯಲ್ಲಿದ್ದ ನೇರಿಲಕೆರೆಯ ಬಮ್ಮಗಾವುಂಡನು ಶ್ರೀಮುಖ ಸಂವತ್ಸರದ ಸೋಮವಾರದಂದು ಬ್ರಹ್ಮೇಸ್ವರ ದೇವರಿಗೆ ಗದ್ದೆಯಲ್ಲಿ ೩ ೧/೪ ಮತ್ತರು[೧] ಬೆದ್ದಲು, ಬ್ರಹ್ಮಪುರಿಯ ಗದ್ದೆಕಂಬ ೨೦೦, ಬೆದ್ದಲು ಮತ್ತರು ೧ ೧/೪ನ್ನು ಬ್ರಿಹಸ್ಪತಿ ವಾರದಂದು ಸೂರ್ಯಗ್ರಹಣದಂದು ಗೋಬ್ರಾಹ್ಮಣರಿಗೆ ದಾನ ಮಾಡಿದ್ದಾನೆ. ಈ ದಾನವನ್ನು ಕೆಡಿಸಿದವರು ಗೋಹತ್ಯೆ ಮಾಡಿದ ಪಾಪಕ್ಕೆ ಹೋಗುವರು.

ಈ ಶಾಸನವು ತೇದಿಯನ್ನು ನೇರವಾಗಿ ಹೇಳಿರುವುದಿಲ್ಲ. ಆದರೆ ಚಾಳುಕ್ಯ ವಿಕ್ರಮಕಾಲ ಎಂದು ಹೇಳಿರುವುದರಿಂದಲೂ, 'ಹೊಯ್ಸಳದೇವರಾಳ್ಕೆಯಲು' ಎಂದಿರುವುದರಿಂದಲೂ ಹಾಗೂ ಶ್ರೀಮುಖ ಸಂವತ್ಸರದ ಸೋಮವಾರದಂದು ಹಾಗೂ ಬ್ರಿಹಸ್ಪತಿ ವಾರದ ಸೂರ್ಯಗ್ರಹಣದಂದು ದಾನ ನೀಡಲಾಗಿದೆ ಎಂದು ಹೇಳಿರುವುದರಿಂದ, ಸದರಿ ದಿನಾಂಕವು ಕ್ರಿ.ಶ. ೧೯೯೩ರ ಮಾರ್ಚಿ ೨೩ಕ್ಕೆ ಸರಿಹೊಂದುತ್ತದೆ.

ಈ ಕಾಲಕ್ಕೆ ನೇರಿಲಕೆರೆಯು ಚಟ್ಟಯ್ಯನ ಅಧಿಕಾರದ ವ್ರಿತ್ತಿಯಲ್ಲಿತ್ತು. ಆ ವ್ರಿತ್ತಿಯು ಯಾವುದೆಂದು ಹೇಳಿಲ್ಲವಾದರೂ ಇತರೆ ಶಾಸನಗಳಿಂದ ತಿಳಿದುಬರುವಂತೆ ಚಟ್ಟಯ್ಯನು ಹುಳಿಯರೆ ವ್ರಿತ್ತಿಯನ್ನು ಪಾಲಿಸುತ್ತಿದ್ದುದರಿಂದಲೂ ಸದರಿ ಗ್ರಾಮವು ಈ ವ್ರಿತ್ತಿಗೆ ಸಮೀಪದಲ್ಲಿರುವುದರಿಂದಲೂ, ಹುಳಿಯರೆ ವ್ರಿತ್ತಿಯನ್ನೇ ಇಲ್ಲಿ ಹೇಳಲಾಗಿದೆ ಎಂದು ತಿಳಿಯುತ್ತದೆ.ಈ ಚಟ್ಟಯ್ಯ ಎಂಬ ಹೆಸರಿನಂತೆ ಹೋಲಿಕೆ ಇರುವ ಸಾಮಂತ ಚಟ್ಟ, ಸಾಮಂತ ಘಸಣಿ ಚಟ್ಟಯ್ಯ, ಚಟ್ಟಯ್ಯನಾಯಕ ಮುಂತಾದ ರೂಪಗಳಲ್ಲಿ ವಿವಿಧ ಕಾಲಾವಧಿಯ ಹಾಗೂ ಇದೇ ಪ್ರದೇಶದಲ್ಲಿರುವ ಶಾಸನಗಳಲ್ಲಿ[೨] ಕಂಡು ಬರುತ್ತದೆ. ಇವನು ಹುಳಿಯರೆ ವ್ರಿತ್ತಿಯಲ್ಲಿ ಅಧಿಕಾರ ನೆಡೆಸಿದ್ದು ಇದರ ವ್ಯಾಪ್ತಿಗೆ ನೇರಿಲಕೆರೆಯು ಬರುತ್ತಿತ್ತು. ಸಾಮಂತ ಚಟ್ಟನ ವಂಶಾವಳಿಯು ಹೊಸದುರ್ಗ ತಾಲ್ಲೂಕಿನ ಹೆಗ್ಗೆರೆಯ [ನೇರಿಲಕೆರೆಯಿಂದ ೮ ಕಿ.ಮೀ. ದೂರ] ಜೈನಬಸದಿಯ ಕ್ರಿ.ಶ.೧೧೬೦ರ ಶಾಸನದಲ್ಲಿ ಲಭ್ಯವಾದಂತೆ ಸ್ಥಿರಗಂಭೀರ ಎಂಬುವವನಿಂದ ಪ್ರಾರಂಭವಾಗಿ ಐದನೇ ತಲೆಮಾರಿನವರೆಗೆ ಇದೆ. ಮೂರನೇ ತಲಮಾರಿನಿಂದ ಇನ್ನೊಂದು ಟಿಸಿಲು ಕಂಡುಬರುತ್ತದೆ. ಇದನ್ನು ಅದೇ ಗ್ರಾಮದ ಕ್ರಿ.ಶ. ೧೨೩೨ರ ಶಾಸನದಲ್ಲಿ ಕಾಣಬಹುದು. ಇವರು ವಂಶಪಾರಂಪರ್ಯವಾಗಿ ಹುಳಿಯರೆ ವ್ರಿತ್ತಿಯನ್ನು ಪಾಲಿಸಿಕೊಂಡು ಬಂದಿರುವುದು ವ್ಯಕ್ತವಾಗುತ್ತದೆ. ಇವುಗಳಲ್ಲಿ ನೇರಲೆಕೆರೆಯ ಶಾಸನದಲ್ಲಿ ಚಟ್ಟಯ್ಯನನ್ನು ಪ್ರಥಮಬಾರಿಗೆ ಉಲ್ಲೇಖಿಸಲಾಗಿದೆ. ಇವನ ಕಾಲಾವಧಿಯ ನಂತರದ ಶಾಸನಗಳಲ್ಲಿ ಇವನನ್ನು 'ಸಮರಜಯ ವಧೂಕಾಂತ ಸಾಮಂತ ಚಟ್ಟಂ' ಎಂದು ಹೊಗಳಲಾಗಿದೆ.ಇವನ ಹೆಂಡತಿ ಶಾಂತಲದೇವಿ[೩] ಎಂದೂ ಹೆಗ್ಗರೆಯ ಬಸದಿಯ ಶಾಸನ ಹೇಳುತ್ತದೆ. ಇವರ ಮಗ ಸಾಮಂತ ಬಿಟ್ಟಿದೇವ.



ಇವನ ವಂಶಾವಳಿಯಲ್ಲಿ ಬರುವ ಸ್ಥಿರಗಂಭೀರನು 'ವೀರತಳಪ್ರಹಾರಿ'ಯೆಂದೂ, 'ದೊಡ್ಡಜ್ಜಬಡಿವ' ಎಂದೂ ಖ್ಯಾತನಾಗಿದ್ದರೆ, ಸಾಮಂತ ಭೀಮನು 'ಸಿತಗರಗಂಡ'ನೆಂದು ಬಿರುದಾಂಕಿತನಾಗಿದ್ದ. ಬಿಟ್ಟಿದೇವನು ಮಹಾಶೂರನಾಗಿದ್ದು ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ಖ್ಯಾತನಾಗಿದ್ದ. ಈ ವಂಶದ ಗೋವಿದೇವ ಮತ್ತು ಅವನ ಮಡದಿ ಶ್ರೀಯಾದೇವಿ ಹಾಗು ಮಗ ಬಲ್ಲಯೆನಾಯಕ ಹಾಗೂ ಅವನ ಮಡದಿ ಮಹಂತೆ ಸಾವಲದೇವಿಯರನ್ನು ಶಾಸನಗಳು ಅವರ ಉನ್ನತ ಗುಣಗಳನ್ನು ಕೊಂಡಾಡಿವೆ.[೪]

ಇನ್ನು ಈ ಶಾಸನದಲ್ಲಿ ಹೆಸರಿಸಲಾದ ಬಮ್ಮ ಗಾವುಂಡನನ್ನು ಕ್ರಿ.ಶ.೧೧೮೮ರ ಯಾದಗಟ್ಟದ ಶಾಸನದಲ್ಲಿ ಕಾಣಬಹುದು. ಇದೂ ಕೂಡಾ ಇದೇ ಪ್ರದೇಶದ ಗ್ರಾಮವಾಗಿದೆ. ಈ ಶಾಸನದಲ್ಲಿ ಅವನ ವಂಶಾವಳಿಯನ್ನು ಹೇಳುವಾಗ್ಗ 'ಸರ್ವೇಶಸ್ವಾಮಿ ಪಾದಾರಾಧಕ ಬಮ್ಮ ಗಾವುಂಡ' ಎಂದು ಹೆಸರಿಸಲಾಗಿದೆ.ಇದಲ್ಲದೆ ಇನ್ನೂ ಕೆಲವು ಶಾಸನಗಳಲ್ಲಿ ಈ ಹೆಸರಿನ ಬೇರೆಬೇರೆ ವ್ಯಕ್ತಿಗಳಿರುವುದು ಇದೆ. ಇದರಿಂದ ಈ ಬಮ್ಮಗಾವುಂಡನು ನಾಡಗಾವುಂಡನಾಗಿರುವುದು ಕಂಡುಬರುತ್ತದೆ. ಇವನ ವಂಶಾವಳಿಯು ಹೀಗಿದೆ–

ಇಂಥ ಬಮ್ಮಗಾವುಂಡನು ಶ್ರೀಮುಖ ಸಂವತ್ಸರದ ಸೋಮವಾರದಂದು ಬ್ರಹ್ಮೇಶ್ವರ ದೇವರಿಗೆ ಗದ್ದೆ, ಭೂಮಿಯನ್ನು, ಗುರುವಾರದ ಸೂರ್ಯಗ್ರಹಣದಂದು ಬ್ರಹ್ಮಪುರಿಗೆ ಭೂಮಿಯನ್ನು ದಾನ ಮಾಡಿದ್ದಾನೆ. ಇದರಿಂದ ಇಲ್ಲಿ ಬ್ರಾಹ್ಮಣರ ವಾಸಪ್ರದೇಶವಾದ ಬ್ರಹ್ಮಪುರಿ ಇತ್ತು ಎಂದು ವ್ಯಕ್ತವಾಗುತ್ತದೆ. ಶಾಸನದ ಮೇಲ್ಭಾಗದಲ್ಲಿ ಚಿಕ್ಕ ಅಕ್ಷರಗಳಲ್ಲಿ ಮತ್ತರು ೧೨ ಎಂದಿದ್ದು ಇದನ್ನು ಯಾರಿಗೆ ದಾನ ಮಾಡಲಾಗಿದೆ ಎಂಬುದು [ಅಪೂರ್ಣ ಮಾಹಿತಿಯಿಂದಾಗಿ] ಸ್ಪಷ್ಟವಾಗುವುದಿಲ್ಲ.

ಈ ಶಾಸನದಲ್ಲಿರುವಂತೆ ದಾನವನ್ನು 'ಬ್ರಹ್ಮೇಸ್ವರ ದೇವರ್ಗ್ಗೆ ದೇವರ್ಗ್ಗೆ' ನೀಡಲಾದಂತೆ ಹೇಳಲಾಗಿದೆ. ಆದರೆ ಇದು ದೇವರ ಹೆಸರೋ ಅಥವ ಗುರುಗಳ ಹೆಸರೋ ಅನುಮಾನಾಸ್ಪದವಾಗಿದೆ. ಏಕೆಂದರೆ ಕ್ರಿ.ಶ. ೧೧೮೮ರ ಯಾದಗಟ್ಟೆಯ ಶಾಸನದಲ್ಲಿ ಬ್ರಹ್ಮಶಕ್ತಿ ಎಂಬ ಗುರುವೊಬ್ಬರ ಹೆಸರಿದ್ದು ಇವರು ಸಮೀಪದ ಕಬ್ಬಳದ ಸಕಳೇಶ್ವರ ಗುರುಗಳ ಮೊಮ್ಮಗ. ಆದರೆ ಕಾಲಾನುಕ್ರಮ ತಿರುವು ಮುರುವಾಗಿರು ವದರಿಂದ ಇವರನ್ನು ಬ್ರಹ್ಮೇಶ್ವರ ದೇವರೆಂದು ಹೇಳಲಾಗದು. ಈಗ ಈ ಗ್ರಾಮದಲ್ಲಿ ಬ್ರಹ್ಮೇಶ್ವರ ಎಂಬ ಹೆಸರಿನ ಯಾವುದೇ

ಬಮ್ಮಗಾವುಂಡ * ಸುಗ್ಗವ್ವೆ

↓

ಮಾದಿಗಾವುಂಡ * ಮುದ್ದಗಾವುಂಡಿ

↓

| ↓ | ↓ | ↓ | ↓ | ↓ |
|---|---|---|---|---|
| ಸುಗ್ಗವ್ವೆ | ಕೇತಗಾವುಂಡ | ಮಾಚಿಯಬ್ಬೆ | ಚಿಕ್ಕಬೂಚಗಾವುಂಡ | ಹಿರಿಯಬೂಚಗವುಂಡ |

ಇವರು ಎಡಯಕಟ್ಟೆ(ಯಾದಗಟ್ಟ)ವನ್ನು ಆಳುತ್ತಿದ್ದರು. ಇಂಥ ಬಮ್ಮಗಾವುಂಡನನ್ನು 'ತೊಡರ್ವ್ವರ ಗಂಡ' ಎಂದೂ 'ತಪ್ಪೆತಪ್ಪುವ' ಎಂದೂ ಹೊಗಳಲಾಗಿದೆ. ತೊಡರ್ವ್ವರ ಗಂಡ ಎಂಬುದನ್ನು ಎದುರಿಸುವವರ/ ಸ್ಪರ್ಧಿಸುವವರ/ ಕಾದುವವರ ಗಂಡ ಎಂಬ ಅರ್ಥ ಕಂಡುಬರುತ್ತದೆ. ತಪ್ಪೆತಪ್ಪುವ ಎಂದರೆ ಮಾತಿಗೆ ತಪ್ಪೆಸಗುವವರನ್ನು ಶಿಕ್ಷಿಸುವಲ್ಲಿ ತಾನೂ ತಪ್ಪೆಸಗಲು ಹಿಂಜರಿಯದವನು ಎಂಬ ಅರ್ಥದಲ್ಲಿ ತೆಗೆದುಕೊಳ್ಳಬಹುದು.

ದೇವಾಲಯವಿಲ್ಲ. ಪ್ರಯುಕ್ತ ಇವರು ಒಬ್ಬ ಗುರುಗಳಾಗಿರುವ ಸಾಧ್ಯತೆ ಇದ್ದು, ಇವರ ನೇತೃತ್ವದಲ್ಲಿ ಇಲ್ಲಿನ ಬ್ರಹ್ಮಪುರಿಯಲ್ಲಿ ಅಧ್ಯಯನಗಳು ಸಾಗುತ್ತಿದ್ದಿರಬಹುದೆಂದು ಊಹಿಸಬಹು ದಾಗಿದೆ.

[ಈ ಶಾಸನವನ್ನು ಓದಿ ಅರ್ಥೈಸುವಲ್ಲಿ ಸಹಾಯ ಹಾಗೂ ಮಾರ್ಗದರ್ಶನ ನೀಡಿದವರು ಖ್ಯಾತ ಶಾಸನ ತಜ್ಞರಾದ ಡಾ. ಬಿ. ರಾಜಶೇಖರಪ್ಪನವರು. ಇವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.]



## ಆಧಾರಸೂಚಿ

೧. ವಿದ್ವಾಂಸರ ಅಂದಾಜಿನ ಪ್ರಕಾರ ಮತ್ತರು ಹಾಗೂ ಕಂಬಗಳು ಇಂದಿನ ಎಕರೆ ಹಾಗೂ ಗುಂಟೆಗಳಿದ್ದಂತೆ ಭೂಮಿಯ ಅಳತೆಯ ಮಾನಕಗಳಾಗಿವೆ. ಒಂದು ಮತ್ತರು ಇಂದಿನ ಐದು ಎಕರೆಗಳಿಗೆ ಸಮ ಎನ್ನಲಾಗುತ್ತದೆ.

೨. EC-12, ck-9, ck-12.

೩. ದೊಡ್ಡತೇಕಲವಟ್ಟಿಯ ಶಾಸನದಲ್ಲಿ ಇವಳನ್ನು 'ಸಾತವ್ವೆ' ಎಂದು ಹೆಸರಿಸಲಾಗಿದೆ.

೪. ECXII, Ck9, Ck17, Ck 21, Ck27.




# ಹೊಯ್ಸಳ ವೀರಸೋಮೇಶ್ವರ ಅಪ್ರಕಟಿತ ತಾಮ್ರ ಪಟ

ಬಿ.ಎಸ್. ಗುರುಪ್ರಸಾದ್*

**ಹೊ**ಯ್ಸಳ ವೀರ ಸೋಮೇಶ್ವರನ ಅಪ್ರಕಟಿತ ತಾಮ್ರ ಶಾಸನವೊಂದು ಮೊದಲ ಬಾರಿಗೆ ಇಲ್ಲಿ ಪ್ರಕಟಿಸಲಾಗುತ್ತಿದೆ. ಐದು ಹಲಗೆಗಳುಳ್ಳ ಈ ತಾಮ್ರ ಶಾಸನವು ಶ್ರೀ ಚಿದಂಬರಯ್ಯ ನವರಿಗೆ ಅವರ ಸ್ಥಳವಾದ ಬಾಳೆಗಚ್ಚು ಗ್ರಾಮ, ಚನ್ನರಾಯಪಟ್ಟ ಹೋಬಳಿ ತಾಲ್ಲೂಕು, ಹಾಸನ ಜಿಲ್ಲೆಯಲ್ಲಿ ದೊರಕಿದ್ದು, ಅದನ್ನು ಪಾಠಾಂತರ ಮಾಡಿಸಿಕೊಳ್ಳುವ ಉದ್ದೇಶದಿಂದ ಇತಿಹಾಸ ಅಕಾದೆಮಿ ಕಚೇರಿಗೆ ಫೆಬ್ರವರಿ ೨೦೧೫ ರಲ್ಲಿ ಬೇಟಿನೀಡಿದ್ದರು. ಡಾ. ದೇವರ ಕೊಂಡಾರೆಡ್ಡಿಯವರ ನಿರ್ದೇಶನದಂತೆ, ಶಾಸನವನ್ನು ಪಾಠಾಂತರ ಮಾಡಿ ಪ್ರಕಟಿಸಲು ಸೂಚಿಸಿದ ಕಾರಣ, ಈ ಕಾರ್ಯವನ್ನು ನಾನು ವಹಿಸಿಕೊಂಡು ಶಾಸನದ ಮಾಹಿತಿ ಮತ್ತು ಶಾಸನದ ಪಾಠವನ್ನು ಇಲ್ಲಿ ಪ್ರಕಟಣೆ ಮಾಡುತ್ತಿದ್ದೇನೆ. ದೇವರ ಕೊಂಡಾರೆಡ್ಡಿಯವರಿಗೆ ನಾನು ವಂದನೆ ಸಲ್ಲಿಸುತ್ತೇನೆ.

ಈ ತಾಮ್ರ ಶಾಸನವು ಐದು ಹಲಗೆಗಳನ್ನು ಹೊಂದಿದ್ದು, ಐದೂ ಹಲಗೆಗಳು ಒಂದು ತಾಮ್ರದ ಬಳೆಯೊಳಗೆ ಸೇರಿದೆ. ಪ್ರತೀ ತಾಮ್ರ ಪಟದ ಮೇಲ್ಭಾಗವನ್ನು ಶಾಲಾ ರೀತಿಯಲ್ಲಿ ಕತ್ತರಿಸಿದೆ. ಬಳೆಯ ಮೇಲ್ಭಾಗದಲ್ಲಿ ವೃತ್ತಾಕಾರದ, ಕಂಚಿನ ಮುದ್ರೆಯಿದೆ. ಹೊಯ್ಸಳ ಲಾಂಛನದ ಹುಲಿಯ ಚಿತ್ರಣವಿದೆ. ಹುಲಿಯು ನಿಂತಿದ್ದು, ಬಾಲಗಾಲನ್ನೆತ್ತಿ ಆಕ್ರಮಣ ಮಾಡುತ್ತಿರುವ ಭಂಗಿಯಲ್ಲಿದೆ. ಸುಂದರವಾಗಿ ಹುಲಿಯನ್ನು ಎರಕೆ ಹೊಯ್ದಿದೆ. ಎಡ ಮತ್ತು ಬಲಭಾಗಗಳಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ. ಪ್ರತಿಯೊಂದು ಹಲಿಗೆಗಳು ಸರಾಸರಿ ೨.೬೫ ಕೆ.ಜಿ. ತೂಕವಿದೆ. ಬಳೆ ಮತ್ತು ಹಲಗೆಗಳ ಒಟ್ಟು ತೂಕವು ೧೪.೫ ಕೆಜಿಯಷ್ಟಿದೆ. ಮೊದಲನೆ ಪತ್ರ ಮತ್ತು ಐದನೆ ಪತ್ರಗಳ ಹಿಂಭಾಗದಲ್ಲಿ ಬರವಣಿಗೆ ಇಲ್ಲ. ಉಳಿದ ಮೂರೂ ಪತ್ರಗಳಲ್ಲಿ ಎರಡೂ ಕಡೆಗಳಲ್ಲಿ ಬರವಣಿಗೆ ಇದೆ. ಪ್ರತೀಸಾಲಿನಲ್ಲು ೨೦ ರಿಂದ ೨೫ ಸಾಲುಗಳಿದ್ದು. ಪ್ರತೀ ಸಾಲಿನಲ್ಲು ೨೦ ಅಕ್ಷರಗಳಿವೆ. ಶಾಸನದಲ್ಲಿ ಒಟ್ಟು ೧೬೧ ಸಾಲುಗಳಿವೆ. ಕೆಲವು ಸಾಲುಗಳಲ್ಲಿ ಕಿಲುಬಿನಿಂದಾಗಿ ಅಕ್ಷರಗಳು ಕಾಣದೆ, ಲಿಪ್ಯಾಂತರ ಮಾಡಲು ತೊಡಕಾಗಿದೆ. ಶಾಸನದ ಭಾಷೆ ಸಂಸ್ಕೃತ ಮತ್ತು ಕನ್ನಡ. ಕನ್ನಡದ ಭಾಗ ಬಹಳ ಕಡಿಮೆ ಲಿಪಿಯು ನಂದಿ ನಾಗರಿಯಲ್ಲಿದೆ. ಅಕ್ಷರಗಳು ಸುಂದರವಾಗಿಯೂ ಮತ್ತು ಸ್ಪುಟವಾಗಿಯೂ ಇವೆ.

ಶಾಸನವು ಹೊಯ್ಸಳ ವಂಶದ ಚಕ್ರವರ್ತಿ ಶ್ರೀ ವೀರ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದೆ. ಇದು ಶಕವರ್ಷ ೧೧೭೭ನೆಯ ಆನಂದ ಸಂವತ್ಸರದ ಆಷಾಡ ಶುಧ್ಧ ಆದಿತ್ಯವಾರ ೧೧ರಲ್ಲಿ, ಅಂದರೆ ಕ್ರಿಸ್ತಶಕ ೧೨೫೪ನೇ ವರ್ಷ, ೨೮ನೇ ಜುಲೈ ತಿಂಗಳಿನ ಭಾನುವಾರಕ್ಕೆ ಸರಿಹೊಂದುತ್ತದೆ.

ಶಾಸನವು ಓಂ ನಮಃ ಶಿವಾಯ ॥ ಶ್ರೀ ॥ ಸಾಯಾದಾದ್ಯ ಸವ ಪೋತ್ರಿ... ಎಂದು ವಿಷ್ಣು ಸ್ತುತಿಯೊಂದಿಗೆ ಪ್ರಾರಂಭವಾಗಿದೆ. ನಂತರ ಹೊಯ್ಸಳರ ಕಾಲದ ಅನೇಕ ಶಾಸನಗಳಲ್ಲಿ ಕಂಡು ಬರುವ ಸಳನ ವಿವರಗಳೊಂದಿಗೆ ವಿನಾಯಾದಿತ್ಯನಿಂದ ಮೊದಲಗೊಂಡು ಈಗಿನ ಚಕ್ರವರ್ತಿ ವೀರ ಸೋಮೇಶ್ವರನವರೆಗೂ ಹೊಯ್ಸಳ ವಂಶದ ಪೂರ್ವಜರ ಮಾಹಿತಿ, ಅವರು ದರಿಸಿದ ಬಿರುದುಗಳು. ಅವರುಗಳ ದಾನಗುಣ ಮತ್ತು ಶೌರ್ಯಗಳನ್ನೂ ಹೇಳುತ್ತದೆ. ಕಳಚೂರಿ, ಸೇವುಣರು, ಚೋಳರು ಮುಂತಾದವರನ್ನು ಯುದ್ಧದಲ್ಲಿ ಪರಾಭವಗೊಳಿಸಿದ ವಿವರಗಳನ್ನು ಪ್ರಶಸ್ತಿಯಲ್ಲಿ ಹೇಳಿದೆ.

### ಶಾಸನದ ಸಾಂಸ್ಕೃತಿಕ ಮಹತ್ವ

ಮುಖ್ಯವಾಗಿ ಇದೊಂದು ದಾನ ಶಾಸನವಾಗಿದೆ. ದಾನದ ವಿವರಗಳನ್ನು ದೇಶ ಭಾಷೆಯಾದ ಕನ್ನದಡಲ್ಲೂ ತಿಳಿಸಿದೆ. ಹಾಗೂ ಸರ್ವ ಮಾನ್ಯ ಮಾಡಿದ ಸುಂಕ ತೆರಿಗೆಗಳ ಮಾಹಿತಿಯೂ ಕನ್ನಡ ಭಾಷೆಯಲ್ಲಿದೆ. ಶಾಸನೋಕ್ತವಾದ ಗ್ರಾಮ ಕಲ್ಕುಣನಾಡೊಳಗಣ ಬಾಳಗಚ್ಚು ಗ್ರಾಮ.

ವೀರ ಸೋಮೇಶ್ವರನು ಈ ಬಾಳಗಚ್ಚನ್ನು "ಉದ್ಭವ ವಿಶ್ವನಾಥಪುರ" ವೆಂದು ಪ್ರತೀ ನಾಮಕರಣ ಮಾಡಿ, ಇಲ್ಲಿ ಮೊದಲಲ್ಲೇ ಇದ್ದ ಇಪ್ಪತ್ತು ವೃತ್ತಿಗಳನ್ನು ಹೆಚ್ಚಿಸಿ, ಇಪತ್ತಾರು ವೃತ್ತಿಗಳಾಗಿ ಮಾಡಿ, ಅಗ್ರಹಾರವನ್ನು ಸ್ಥಾಪಿಸಿ ಸರ್ವ ಮಾನ್ಯವಾಗಿ ನಾನಾ ಗೋತ್ರದ ಬ್ರಾಂಹ್ಮಣರಿಗೆ ದಾನವಾಗಿ ನೀಡಿದ ವಿವರಗಳಿವೆ.

* # ೩೧, ೩೩ನೇ 'ಎ' ಕ್ರಾಸ್, ೮ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦೦೮೧.

ಕ್ರಿ.ಶ. ೧೨೫೪ ರಲ್ಲೇ ಉದ್ಭವ ವಿಶ್ವನಾಥಪುರವೆಂದು ಹೆಸರಿಸಿದ್ದರೂ, ಈ ಗ್ರಾಮವು ಯಾವುದೇ ರೂಪಾಂತರ ಹೊಂದದೆ, ಇಂದಿಗೂ ಬಾಳಗಚ್ಚು (ಕೆಲವು ಶಾಸನಗಳಲ್ಲಿ ಬಾಳಗಚ್ಚ / ಬಾಳಗಂಚಿ) ಎಂದು ಕರೆಸಿ ಕೊಳ್ಳುತ್ತಿದೆ. ಆದ್ದರಿಂದ ಸ್ಥಳನಾಮ ಇತಿಹಾಸದ ದೃಷ್ಟಿಯಿಂದ, ಈ ಶಾಸನವು ಮುಖ್ಯವಾಗಿದೆ. ಅಲ್ಲದೇ ಬಾಳ್ಗಚ್ಚು ಎಂದು ಹೆಸರು ಬರಲು, ಬೇರೇನಾದರು ಐತಿಹಾಸಿಕ ಘಟನೆ ಈ ಗ್ರಾಮದಲ್ಲಿ ನಡೆದು. ಆ ಘಟನೆಯಿಂದಾಗಿ ಬಾಳ್ಗಚ್ಚು ಎಂಬ ಹೆಸರು ಬಂದಿರಬಹುದೇ, ಎಂಬ ಅಂಶವನ್ನು ತಿಳಿಯಬೇಕಾಗಿದೆ.

**ಕಲುಕಣಿ/ಕಲ್ಕುಣಿ ನಾಡಿನವ್ಯಾಪ್ತಿ :** ಬಾಲಗಚ್ಚು ಆಡಳಿತ ವ್ಯವಸ್ಥೆಯದೃಷ್ಠಿಯಿಂದ ಕಲ್ಕುಣಿ ನಾಡಿನ ವ್ಯಾಪ್ತಿಯೊಳಗೆ ಬರುತ್ತದೆ. ಎ.ಕ.ಸಂ ೧೦ನ್ನು ಅವಲೋಕಿಸಿದಲ್ಲಿ ವ್ಯಾಪ್ತಿ ಯೊಳಗೆ ಬರುವುದು.

೧. ಶಾಸನ ಸಂಖ್ಯೆ ೧೬೯- ಮಂಡ್ಯದಲ್ಲೆ ನಾಗಮಂಗಲ ತಾಲೂಕು ಕಸಲಗೆರೆ ಗ್ರಾಮದಲ್ಲಿ ಕ್ರಿ.ಶ ೧೧೪೨ ರಲ್ಲಿ ಸುಗ್ಗಗವುಂಡನ ಮಗ ಸಾಮಂತ ಸೋಮೇಮ ನಾಯಕ ಬಸದಿಕಟ್ಟಿಸಿದ ವಿವರವಿದೆ.

೨. ಕ್ರಿ.ಶ ೧೨ನೇ ಶತಮಾನದಲ್ಲಿ ಕಸಲಗೆರೆಯಲ್ಲಿ ರೂವಾರಿ ಮಾಚೋಜನನ್ನು ಅವನು ನಿರ್ಮಿಸಿದ ಬಸದಿಯನ್ನು ಎಕ್ಕೋಟಿ ಜಿನಾಲಯವೆಂದು ಹೆಸರಿಸಿ, ಅವನನ್ನು ಕಲುಕಣಿ ನಾಡಿನ ಆಚಾರ್ಯನೆಂದು ಹೊಗಳಿದೆ.

೩. ಶಾಸನ ಸಂಖ್ಯೆ ೧೨೯ ಮತ್ತು ೧೩೩, ೧೩೪ [ಎ.ಕ. ಸಂಪುಟ ೧೦] : ಅಕ್ಕೇನ ಹಳ್ಳಿ, ಅತ್ತಿಹಳ್ಳಿ, ಬಾಳಗಂಚಿ [ಉದ್ಭವ ವಿಶ್ವನಾಥಪುರ], ಮತ್ತು ಶಾಸನ ಸಂಖ್ಯೆ ೧೦೨ರಲ್ಲಿಯ ಮಸಗನ ಹಳ್ಳಿಯ ವೀರಗಲ್ಲು, ಇವೆಲ್ಲವೂ ಕಲುಕಣಿ ನಾಡಿನ ಎಲ್ಲೆಯೊಳಗೆ ಬರುತ್ತದೆ.

ಸಂಕ್ಷಿಪ್ತವಾಗಿ ಕಲುಕಣಿನಾಡಿನ ವ್ಯಾಪ್ತಿಯ : ಚಕ್ಕುಬಂದಿ ಈ ರೀತಿ ಎನ್ನಬಹುದು

ಪೂರ್ವಕ್ಕೆ ಕುಣಿಗಲ್ ನಾಡು, ಪಶ್ಚಿಮಕ್ಕೆ ಕಳ್ಳಪ್ಪು ನಾಡು, ಉತ್ತರಕ್ಕೆ ಮಗರೆ ಮುನ್ನೂರು, ದಕ್ಷಿಣಕ್ಕೆ ಮಂಡ್ಯ ಜಿಲ್ಲೆಯ ವ್ಯಾಪ್ತಿ.

ಶಾಸನದಲ್ಲಿ ಹೇಳಿದ ಇಪ್ಪತ್ತಾರು ವೃತ್ತಿಗಳು ಸರ್ವನಮಸ್ಯವಾಗಿ ನೀಡಿದ್ದು, ಅಕರವಾಗಿ ಸಂಪೂರ್ಣ ಸ್ವಾಮ್ಯವನ್ನು ಹೊಂದಿದ್ದವು ಎಂಬ ಅಭಿಪ್ರಾಯಕ್ಕೆ ಬರಬಹುದು. ಕೆಲವು ತೆರಿಗೆ/ಸುಂಕಗಳ ಉಲ್ಲೇಖ ಈ ರೀತಿಯಿದೆ :-

ನಲ್ಲಾವ ನಲ್ಲೆತ್ತು – ಜಾತಿಯ ಎತ್ತು ದುತ್ತು ಹಸುಗಳಿಗೆ ವಿಧಿಸುತ್ತಿದ್ದ ತೆರಿಗೆ ಕುದುರೆಯ ಸೇಸೆ, ಆನೆಯ ಸೇಸೆ, ವೀರಸೇಸೆ, ಕಂಡಿಕೆ ವಣ, ವಿಜಯ ವೀರವಣ ಸೈನ್ನದ ಖರ್ಚನ್ನು ಬರಿಸಲು ವಿಧಿಸುತ್ತಿದ್ದ ತೆರಿಗೆ?

ಕಟ್ಟುಗುತ್ತುಗೆ – ರೈತನು ಯಾಜಮಾನನಿಗೆ ಕೊಡಬೇಕಾದ ನಿರ್ಧಿಷ್ಟಧಾನ್ಯದ ಮೊತ್ತ ಅಥವಾ ಹಣ ಶಾಸನದಲ್ಲಿ ಉಲ್ಲೇಖಿಸಿರುವ ನಾಣ್ಯಗಳು ಈ ರೀತಿಯಿವೆ : ಗ=ಗದ್ಯಾಣ, ಪ=ಪಣ.

ಶಾಸನದ ಅಂತ್ಯದಲ್ಲಿ ಪುಣ್ಯಾಶಯ ಮತ್ತು ಶಾಪಾಶಯಗಳುಳ್ಳ ಕೆಲವು ಶ್ಲೋಕಗಳಿವೆ.

ಸಾಮಾನ್ಯವಾಗಿ ವೀರಸೋಮೇಶ್ವರನ ಕನ್ನಡದ ಶಾಸನಗಳಲ್ಲಿ "ಮಲಪರೊಳ್ಗಂಡ ವೀರ ಸೋಮೇಶ್ವರ ದೇವಸ್ಯ" ಎಂಬ ಒಪ್ಪಕಂಡುಬರುತ್ತದೆ. ನಾಗರಿ ಲಿಪಿ ಶಾಸನಗಳಲ್ಲಿ ಶ್ರೀ ವೀರಸೋಮೇಶ್ವರ ದೇವಸ್ಯ ಎಂಬ ಒಪ್ಪವಿದೆ. ಈ ಶಾಸನದಲ್ಲೂ ಅದೇ ರೀತಿಯ ಒಪ್ಪವಿದೆ.

## ಶಾಸನ ಪಾಠ

### ಮೊದಲಹಲಗೆ ಹಿಂಭಾಗ

೧. ಓಂ ನಮ ಶಿವಾಯ ॥ ಶ್ರೀ ॥ ಪಾಯಾದಾದ್ಯಃ ಸವಃ ಪೋತ್ರೀ ಯದ್ದಂಷ್ಟ್ರಾ
೨. ಪ್ರತಿಬಿಂಬಿತಾ । ಅಗಾದಿವ ಧೃತಾ ಧಾತ್ರೀ ಹರ್ಷಾದ್ದ್ವಿಗುಣಪುಷ್ಟತಾಂ ॥
೩. ಪ್ರಾಗಲ್ಭ್ಯಂ ಪ್ರಕಟೀಕುರುಷ್ವರಸನೇ ಯಾಚೇ ಕೃತಸ್ತೇಂಜಲಿಃ ಕ
೪. ರ್ತವ್ಯಾ ತವ ಸೋಂಸಂಭವ ಕುಲಕ್ಷ್ಮಾಪಾಲಪಾಳಿಸ್ತುತಿಃ । ಯದ್ವಾತ
೫. ತ್ತದನೇಕರಾಜವಿಜಯ ಕ್ರಿಡಾನಿಬದ್ಧಾಕ್ಷರ
೬. ಧಾ ನಿರಂತರಘನಾಸ್ವಾದಾಯಕಾಭ್ಯಥನಾ ॥ ವಿಶ್ವೋತ್ಪತ್ತಿವಿಧಾ
೭. ಯಿನೋ ಭಗವತಸ್ತ್ರೈಲೋಕರಕ್ಷಾಮಣೇರ್ವಿಷ್ಣೋರ್ವಿಶ್ವಸನಾಭಿನಾ
೮. ಭಿಸರಸಃ ಪ್ರಾದುರ್ಬಭೂವಾಂಬುಜಂ । ಯತ್ರಶೀರರವಿಂದ ಮಂದಿರಭವಾನಂದಂಚ

೯. ನಿತ್ಯಪ್ರಿಯ ಪ್ರತ್ಯಾಸತ್ತಿಮನೋರಥಂ ಚಯುಗಪಲ್ಲಬ್ದ್ವಾಮುದಾಕ್ರೀಡತಿ ॥
೧೦. ಸಂಭೂತೋಭಗವಾನ್ವಿಧಃ ಶೃತಿವಚೋವೀಚಿವಿಲಾಸಾಂಬುಧಿರ್ನಿತ್ಯೋ
೧೧. ದ್ಭಾಸಿತಭಾರತೀಕೃತ ಗೃಹಾಚಾರ್ಯೈರ್ಗೃಹಸ್ಥಾಶ್ರಮಿಾ । ಸ್ವಷ್ಟಾಸ್ವಷ್ಟತಿ
೧೨. ವಿಧೀಯ ಮಾನವಿಹಿತ ಪ್ರೋದೇಷ್ಯರ್ಧೋದಿತ ಪ್ರೋಚ್ಛೂನ ಪ್ರಸರಜ್ಜಗಜ್ಜನಿ
೧೩. ಮಹಾರಂಭೀ ತತೋಂಭೋರುಹಾತ್ ॥ ತಸ್ಯಚಮಾನಸಜನ್ಮಾಹಂಸೋತ್ರಿಃಕೃ
೧೪. ತಮನೋಹರಾಚಾರಃ । ವಿಹಿತವನಾಂತನಿವಾಸೋಬಭೂವ ನಿತ್ಯಾವದಾ
೧೫. ತಾತ್ಮ ॥ ಅಥೈತಸ್ಯಾಪಾಂಗಪ್ರಸೃತ ಕರುಣಾದಿವ್ಯತಟಿನೀತಟೀಫೇ
೧೬. ನಾಕಾರಃ । ಸಮಜನಿಜನಾನಂದ ಜನನಃ । ದೃಢಶ್ಚಂದ್ರೋಯೇನಪ್ರಿಯನ
೧೭. ಖಶಿಕಾತಾಡನರುಃ ಸಹಂತೇ ವಾ ಮಾಂಗ್ಯಃಸ್ಫುರದಮೃತಬಿಂದೂತ್ಕ
೧೮. ರಮುಚಾ ॥ ತದಾದಿ ಪರಮೋವಂಶಃ ಪ್ರಾವರ್ತತಮಹೀಭುಜಾಂ । ಪ್ರತಾಪದಹ
೧೯. ನಮ್ಲಾನವೈರಿವೀರಯಶಸ್ತ್ವಿಷಾಂ ॥ ತತ್ರಾನೇಕ ಪರಾಕ್ರಮ ಕ್ರಮಯಶ
೨೦. ಸ್ವಾಧೀನ ಭೂಮಂಡಲಾಃ । ಸೇಲವಾಸಂಗತ ರಾಜರಂಜನ ಕಳಾ ವಿದ್ಯಾಸು
೨೧. ಬದ್ಧಾಕ್ಷರಾಃ । ನಿತ್ಯಾರಬ್ಧ ಮಹಾದ್ವರೋತ್ಸವ ಹೃತ ಸ್ವಾರಾಜ್ಯ ಸಿಂಹಾಸನಾಃ

**ಎರಡನೇ ಪಟದ ಮುಂಭಾಗ**

೧. ಮಾಲಾಶಿರಃ । ಶ್ರೇಣಿಷು ಕ್ರಮಶಃ ಕೃತಾತ್ಮ ಚರಣಾಂಭೋಜದ್ವಯಿಾಶೇ
೨. ಖರಃ । ಧಾಟೀಘೋಟವಿಪನ್ನವೈರಿನಗರೀಪ್ರೋದ್ಭೂತಧೂಮೋದಯಃಕ್ರೀಡಾ
೩. ಕ್ರೋಡಿತನಾಕಲೋಕಜನತಾನೇತ್ರಾಂಬುಧಾರಾಗುರುಃ ॥ ವಿಷ್ಣುಸ್ತ
೪. ಸ್ಯಾತ್ಮಜೋಭೂತ್ಸಕಲರಿಪುಮಹೀಪಾಲ ಚೂಡಾಕಿರೀಡಕ್ರೋಡ ಪ್ರ
೫. ತ್ಯುಪ್ತ ರತ್ನಸ್ಫುರದರುಣಕರಾಲೀಢಪೀಠಪ್ರತಿಷ್ಠಃ । ಯುದ್ಧತ್ತಗ್ರಾ
೬. ಮಸೀಮಾಪರಿಸರವಿಸರದ್ಧೋಮಧೂಮೋದ್ಗಮೇನ ಶರ್ಏಆಂಎನ
೭. ವ್ಯಧಾಯಿ ಸ್ಫುತಿಧವಳಯಶೋರಾಶಿರಾಶಾತಟೇಷ್ಟ ॥ ಯತ್ಸೇನಾ
೮. ಚರಣಾಭಿಘಾತದಳಿತೋರ್ವಿಧೂತಧೂಳೀಭರಾಬೋಗ್ಯೈರ್ಭೂರಿಕ
೯. ದರ್ಥಿತಾನಿನಯನಾನ್ಯಾಸನ್ವಧೂನಾಂದಿವಿ । ಪಶ್ಚಾದ್ಯತ್ಕೃತದೇವ
೧೦. ಮಂದಿರಮುಖಪ್ರೋದ್ಯತ್ವತಾಕಾಪಟ್ಯೈಃಪ್ರಾಮ್ಯುಷ್ಟಾನಿಪುನಸ್ತದ್ದೈವಸ
೧೧. ಕಲಸೌಖ್ಯಂಸಮಾಪೇದಿರೇ ॥ ತತ್ಸೂನುರ್ನರಸಿಂಹ ಭೂಪತಿರಭೂ
೧೨. ದ್ವೀಯಾರ್ವಧೂತಕ್ಷಮಾ ಪಾಲೇಭ್ಯಃ । ಪ್ರತಿಪಾದಯನ್ಗಿರಿಗುಹಾಗೂ
೧೩. ಢಸ್ಥಲೀಸುಸ್ಥ್ವಿತಿ । ಶಶ್ವದ್ವಿಶ್ವದಿಗಂತಸಂತತಜಯಪ್ರಸ್ತಾವ
೧೪. ಸಂಸ್ಥಾಪಕಸ್ತಂಭೋತ್ತಂಭನಕೇಲಿಕರ್ಮಠಭುಜಾಭೋಗೈಕಭೂ
೧೫. ಪೋಜ್ವಲಃ ॥ ತಸ್ಯಾಪ್ಯಾಸೀದಶೇಷಕ್ಷಿತಿಪತಿಲಲನಾಸಂಘ
೧೬. ಸಂವಾಹಿತಾಂಘ್ರಿಃ ಸೂನುರ್ಬಲ್ಲಾಳಭೂಘೋನಿಜಗುಣವಿಜಿತಾ
೧೭. ಯಾತವೀರಾಹಿತಶ್ರೀಃ । ಯತ್ಸೇವಾನಂದ ಮಂದೀಕೃತನಿಜನಗರಾ
೧೮. ವಾಸವಾಂಛೈರನೇಕೈರೇಕೀಭೂತ್ಯೈಃಕೃತಾನಿಪ್ರತಿದಿನಮ
೧೯. ರಿಭೀರ್ನೂತನಾರಾಧನಾನಿ ॥ ಯದ್ಧಾಟೀಘೋಟನಾಸಾಮರುತಿವಿಚ

೨೦. ಲಿತೇಶತ್ರುಗಾತ್ರೇಷುಕಂಪೋಯತ್ಕೋಪೋತ್ಥಪ್ರತಾಪೇಜ್ವಲತಿರಿಪುರ್ಪ
೨೧. ಪಜ್ಜೆಪರ್ಯಂತದಾಹಃ । ಯದ್ಬಾಹೂದ್ಯತ್ಕೃಪಾಣೇ ವಿಲಸತಿವದನೇ ವಿದ್ವಿ

**ಎರಡನೇ ಪಟದ ಹಿಂಭಾಗ**

೧. ನಾಃ । ಸಂಜಾತಾ ಯದುರಾಜಮುಖ್ಯಧರಣೀಪಾಲಾಃಪುರಾಣೋದಿತಾಃ ॥ ಏ
೨. ವಂವಿಧೇಷುಬಹುಷುಕ್ರಮೇಣಭಾರಂವಹತ್ಸುರಾಜ್ಯಸ್ಯ । ಸಲಿತಿಚನಾ
೩. ಮರಾಜಾಬಲವಾನ್ಸ್ಕಂಧಂದದೌತಸ್ಯ ॥ ಕದಾಚಿದ್ರಾಜಾಸೌಶಶಪು
೪. ರಸಮಾಸಂನವಿಪಿನಾಲಯಾಂವಾಸಂತ್ಯಾಖ್ಯಾಂಸ್ವಕುಲನರಪಾರಾ
೫. ಧಿತಪದಾಂ । ಯಯೌದ್ರಷ್ಟುಂದೇವೀಮಥವಿಮಲಭಾವಂಮುನಿವರಂಸದೃಷ್ಟ್ವಾವ
೬. ನತ್ವಾಚಕ್ಷಣಮಿವಸುಖೇನನ್ಯವಿಶತ ॥ ವಿತಾಯಧೇವ್ರತಸ್ಥೇ
೭. ದೇವ್ಯಾಃಪೂಜಾಂಉನೇಶ್ವಸತ್ಕಾರಂ । ವಿದಧತಿ ತಸ್ಮಿಂನುದಿತೋವನಮೃ
೮. ಗಕೋಲಾಹಲಸಹಸಾ ॥ ವ್ಯಾಪ್ತಃ ಪಶ್ಚಾತ್ತುಕತಶ್ಚಿತ್ವರ ಶಿ
೯. ಖಾಭಿಂನಭೂ ಭ ನಿತಂವಸ್ತ್ರೈಲೋಕ್ಯಗ್ರಾಸಕಾಂಕ್ಷಾವಿಧ್ಯುತಮುಖಧರೀ
೧೦. ನಿಃ ಸರದ್ಧಿರ್ಘಜಿಹ್ವಃ । ನಿರ್ಯಂನೇತ್ರಸ್ಫುಲಿಂಗೋಗಗನತಲಮಿಲ
೧೧. ತ್ಪಚ್ಛಪಕ್ಷ್ಮಾಗ್ರಕೋಟೀಕ್ರೋಧೋದ್ಯತ್ಕಂದ ಕಾಂಡಾರವಪರಿತದಿಶಾ
೧೨. ಚಕ್ರಸೀಮಾ ಸಮಾಗಾತ್ ॥ ಸ್ವದೇಶ ಭಾಷಯಾ ತೇನ ಮುನಿನಾ ಹೊ
೧೩. ಯ್ಸಲೇ ತಸೌ । ಚೋದಿತಸ್ತಂ ಝುಘಾನಾಶುತದ್ವಿತೀರ್ಣ ಶಲಾಕಯಾ ॥
೧೪. ಯಾತಾಹೊಯ್ಸಲತಾಂತದನ್ವಯನೇಪಾವ್ಯಾಪ್ತಃ ಸಗಚ್ಛಂವಿವಂ ಯೇ
೧೫. ಷಾಂ ನಿತ್ಯರಣೇಕ್ಷಣೋತ್ಸುಕ ಇವಪ್ರಾಪ್ತಃ ಪತಾಕಾಪದಂ ಲೀಲಾ
೧೬. ಕೃಷ್ಟಕರಾಲಕಾರ್ಮುಕಮುಖಪ್ರೋದ್ಭೂತವರ್ಣಾವಲೀಪತ್ರಪ್ರಾಂತನಿರಂತ
೧೭. ರೋತ್ಥಿತಮರುತ್ಸಂಪಂನಕಂಪದ್ವಿಷಾಂ ॥ ಭೂಪಾಲೋಮಹತೋದಪಾ
೧೮. ದಿವಿನಯಾದಿತ್ಯಸ್ತತಸ್ತೇಜ ಸಾಕೀರ್ತ್ತಿಕ್ಷಾಲಿತಮೇರು ಮಂದರ
೧೯. ಲತಾಕುಂರ್ಘೋದರೋದ್ಯತ್ತಮಾಃ । ದುರ್ವೃತ್ತಕ್ಷಿತಿ ಪಾಲದರ್ಪದಲನ ಕ್ರೀಡಾ
೨೦. ಡಾಕಲಾ । ಕೌತುಕೀ ನಾನಾ ನೂತನ ಧರ್ಮಮಾರ್ಗರಚನಾ ನಿರ್ಮಾ
೨೧. ಣ ಕರ್ಮಕ್ಷಮಃ ॥ ಏತಸ್ಮಾದೆರೆಯಂಗಭೂಪತಿರ ಭೂತ್‌ಕ್ಷ್ಮಾಪಾಲ

**ಮೂರನೇ ಪಟದ ಮುಂಭಾಗ**

೧. ಯೋತ್ಸಾರಿತ ಶೃಂಖಳಾಭಿರಭಿತಃ ಪೃಥ್ವೀನಿಬದ್ಧೋಪರಿ ॥ ಜಾತಾ ವಿಕ್ರ
೨. ಮಪಾಲಪಾಂಸಮಕರ ಪ್ರೋದ್ದಂಡ ಹೊಯಿಸಾರ್ಯಮಾಯದ್ಯಜ್ಞೇಪಶವಃಶ
೩. ರಿಧಯಃ ಸಂಗ್ರಾಮಭೂರ್ಮಂಟಪಃ । ಸ್ವಕ್ರೋಧೋರಣಿರಿಧ್ಮದರಿಪುಗ್ರಾ
೪. ಮಾಃ ಪ್ರತಾಪೋನಲೋಮಂತ್ರಃ ಕೋಪಕರಾಳ ಕರ್ಕಶವಷಶ್ಯೋಲ ಪ್ರತಿ
೫. ಷ್ಠಾಫಲಂ ॥ ಸೂನುಸ್ತಸ್ಯಚಸೋಯಿದೇವ ನೃಪತಿರ್ಜಾತ ಸ್ವಜನ್ಮಕಣಾಚ್ಚ
೬. ತಕ್ಷಾತ್ರ ಮಹೋಬಲಾದಿವಕೃತಕ್ಷ್ಮಾಪಾಂತರೂಷ್ಮೋದಯಃ । ಜಾತೇಯತ್ರಖ
೭. ಳೈರಖೇದಿ ಸುಜನೈರಾನಂದಿ ದಿಙ್ಮಂಡಲೈಃ ಪ್ರಸಾದಿ ವ್ಯಸನೈರ್ವ್ಯಲಾ
೮. ಯಿ ದುರಿತೈರ್ದೂರಾದ ಪಾ ಯಿಶ್ವರೇ ॥ ಕ್ರೀಡಾಜಾಯತ ಯಸ್ಯಬಾಲ್ಯಸಮ

೯. ಯೇಕ್ಷಾ ಘೃಚ್ಛಿರಃ ಕಂದುಕೈರ್ಲೀಲಾಭೂತ್ಸ್ವವಿರೋಧಿಸೌಧಶಿಖರಧ್ವಂಸೋ
೧೦. ದಿತ್ಯೈಃಪಾಂಸುಭಿಃ । ನಿರ್ಭಿನ್ನಾರಿಶರೀರಶೋಣಿತ ಜಲಸ್ಫೀತೈರ್ಮಹೀಕ
೧೧. ರ್ದಮೈರಾಭಾದ್ದುರ್ಗಮದುರ್ಗಸೈಕರಟರೀಸೀಮಾಸಮುಲ್ಲಂಘನೈಃ ॥ ಸೋಯಂ
೧೨. ಸಮಸ್ತನರನಾಥಶಿರಃ ಪರೀತಪಾದಾಂಬುಜೋ ಜಯತಿ ಸಂಪ್ರತಿ ಸೋಯಿದೇ.
೧೩. ವಾ ರಾಜ್ಯಾಭಿಷೇಕ ಸಮಯೋತ್ಥಿತ ತೂರ್ಯನಾದವ್ಯಾಜ ಪ್ರತಿಶ್ರುತಕು
೧೪. ಲಾದ್ರಿಭರಾವತಾರಃ ॥ ಯದ್ಧಾಟೀಭಟಪಾದಘಟ್ಟನಪಟು
೧೫. ಳಿಚ್ಛಟಾಚನ್ನೇಬಾಸ್ಕರಮಂಡಲೇಂಧತಮಸೈರಾರೂಢಮುಚ್ಛೈರಿತಿ । ಯುದ್ಧೇ
೧೬. ಧಾವನ ತತ್ವರೇಷ್ವರಿಭಟೇಷ್ವಸ್ಯೈವಕೋಪಾನಳಜ್ವಾಲಾಭೀರುಧಿರಚ್ಛ
೧೭. ಲಾದರಿವಸಾಗ್ರಾಸಾಭಿರಾದೀಪ್ಯತೇ ॥ ತದ್ಯಾತ್ರಪ್ರಥಮಾಚತಾರವಿಭ
೧೮. ವ ಪ್ರೋದ್ಧೃತ್‌ಪತಾಕಾನಿಳಸ್ಫೀತೆ ನಂತರಮಂಬುಧಿರ್ಯದಿಬಲೇನ್ಯೈತತ್ವರಂ
೧೯. ಕಾರಣಂ । ತತ್ಪಡ್ಗಾಹತಿಭೀತ ಭೂಪತಿ ಚಮೂಭಾವಿಸ್ಫುಟಾಗಾಹನಕ್ಷೋಭೈಃ
೨೦. ಸಂಪ್ರತಿ ಕಂಪತೇನನುಮಹಾನಾದಃ ಪತಿಃಪಾಥಾಸಾಂ ॥ * ॥ ತಸ್ಯಾ
೨೧. ಸೀನ್ಮಮಹಿಷೀಮಹಾಗುಣವತೀಶ್ರೀವಿಜಿತಾಖ್ಯಾಸತೀಸೋಭಾ

**ಮೂರನೇ ಪಟದ ಹಿಂಭಾಗ**

೧. ದ್ವಿಷಾಂ ಕಾಲಕಾಂತಿರ್ಯತ್ಕೋದಂಡೇಪ್ರಚಂಡೇ ವಿನಮತಿವಿನತಾಮೈ
೨. ರಿವೀರಾಃ ಸಮಂತಾತ್ ॥ ತಸ್ಯಾಸೀನ್ಮಹಿಷೀಮನೋಹರತರಾ ಶ್ರೀಪದ್ಮ
೩. ಲಾಖ್ಯಾವಧೂಃ ಸರ್ವೋರ್ವೀಶವರಾವರೋಧವಿನಯಪ್ರೋತಪ್ರಣಾಮಾಂ
೪. ಜಲಿಃ । ಯತ್ಕೀರ್ತಿರ್ನವ ಕುಂದಚಂದನಸುಧಾಶೈಲೇಂದ್ರಚಂದ್ರಾಂಕುರ
೫. ಜೋತ್ನಾಜಾಲಾಮರಾಳಮೌಕ್ತಿಕಸುರಸ್ರೋತಸ್ವಿನೀ ಸೋದರೀ ॥ ತ
೬. ಸ್ಯಾಮಸ್ಯಾತ್ಮಜೋಭೂಜ್ಜಗತಿ ವಿರಚಿತಾನಂದ ಮುದ್ರಾವತಾರೋವೇ
೭. ಲಾಯಾಂ ಕ್ಷೀರವಾರ್ದೇರಿವನಯವಮಹಶ್ಚಂದ್ರಮಾ ನಾರಾಸಿಂಹಃ । ಲಕ್ಷ್ಮೀ
೮. ರತ್ನಾವಿರಾಸೀನ್ನಿಖೀಳಜನನತಾ ಸಂತಾ ಭೂಸುರಾಣಾಂಪ್ರಖ್ಯಾತಾಸೋ
೯. ಮಲಾಖ್ಯಾಗುಣಮಯಸುಮಣೀಶ್ರೇಣಿನಾಸಾರ್ದ್ಧಮೃದ್ಧಾ ॥ ತಸ್ಮಿನ್ನಿನರ
೧೦. ಸಿಂಹ ಭೂಭುಜಿಭುಜಾ ವಿನ್ಯಸ್ತಭೂಮಿಭರೇಶೇಷಃ ಶೇಷಮವಾಪಧೂರ್ಜತಿ
೧೧. ಜಟಾಬಂಧಾದಿಕರ್ಮಸ್ವಕಂ ಶೈಲೈಶ್ಬಾಷ್ಪಭಿರೇತದೀಯಸುಯಶೋಗಂಧರ್ವಣ
೧೨. ರ್ಧರ್ವತಃ ಶ್ರಾವಂಶ್ರಾವಮಗಾಯಿ ತತ್ತ್ರತಿರವಾಭೋಗೋದ್ಬವಚ್ಛದ್ಮನಾ॥ ತ
೧೩. ಸ್ಮೈಶ್ರೀನರಸಿಂಹಭೂಮಿಪತಯೇ ಯುದ್ಧೇನಿಬದ್ಧಾಹತಿ ಕ್ರೀಡಾಕೌತುಕ
೧೪. ಸನ್ನಿಮಗ್ನಮನಸೇತಿಷ್ಠೇತಕಃ ಶಾತ್ರವಃ । ಯದ್ಯಾತ್ರಾಮುಖಚಂಚಲಧ್ವಜ
೧೫. ಪಟೀಪರ್ಯಂತವಾತಾನಿಳೈರೇವೋದೇತಿವಿರೋಧಿವೀರವನಿತಾವೈಧ
೧೬. ವ್ಯನವ್ಯಾನಳಃ ॥ ಕಾಲಂ ಶಾರದಮೇತ್ಯಸಂಗರಸಹಂಯಸ್ಮಿನ್ವಿಪಕ್ಷಾಂತ
೧೭. ಕೇ ನಿಷ್ಪ್ರತ್ಯೂಹಜಯೇ ನಿರರ್ಗಳಭಜೇಜೇತುಂ ಸಮಭ್ಯುದ್ಯತೇ । ತತ್ಕಾಲೋ
೧೮. ದಿತಭೀತಿಭಾರವಿವಶವ್ಯಾನಮದ್ರನಾನಾರಿಪುಕ್ಷೋಣೀಪಾಲಕುಂಟುಂಬ
೧೯. ನಾಯನಜಲೈಃ ಪ್ರಾವೃಟ್ಪುರೋವರ್ತತಃ ॥ ತಸ್ಯಶ್ರೀನರಸಿಂಹನಾಮನೃಪ

೨೦. ತೇಃ ಸೇನಾಭರೇಣಾನತಾಂ ಭೂಮಿಂಭೋಗಿ ಪತಿರ್ಬಭಾರಮೃದುನಾಮೂರ್ದ್ನೆ
೨೧. ತಿ ತನ್ನಾದ್ಭುತಂ । ಯಸ್ಮಾತ್ತದ್ಭಟದಗ್ಧಶಾತ್ರವಪುರಪ್ರೋಧ್ಧೂತಧೂಮೋದಯಚ್ಛ

**ನಾಲ್ಕನೇ ಪುಟದ ಮುಂಭಾಗ**

೧. ಗ್ದೆಗಿಃ ಚಾಜವಕಲ್ಯಲತಿಕೋಯಾ . . . ಭೂಪೇರತಿ . . . ದ್ವಾ
೨. ಗಣವ ಭೂಪತಿವಧೂವೈದಗ್ಯಮುದ್ರಾಭಯನ್ಯಗ್ರನ್ಯಾನ . . . .
೩. ಮೌಕ್ತಿ ಕತತತಿದ್ಯಾಕೀರ್ಲ್ಲಪಾದಾಂಭುಜಾ ॥ ತಸ್ಯಾಮ . . . .
೪. ಬುದ್ಧಿಃ ಸಮುದ್ರಭೂ ಶ್ರೀ ವಿಶ್ವನಾಥಃ ಸುತಃ ಸ್ವಶ್ರೀಭಿಃ ಸ . . . .
೫. ಸಮನಸಾಂಸಂಸೋಭಿಥಾಪ್ರೋಥೈಚ . . . . . . . . .
೬. ಭವಯಸ್ಯಾಗ್ರಹಾರ ಕ್ರಿಯಾ ಯೋಗ್ಯಸಂನ್ನತಮಾಗ್ರಹೇ . . . .
೭. ಶಾಸ್ತೇಷು ಶಾಸ್ತ್ರೇಷು ॥ ೦ ॥ ಪಾಯಸಮಯಶಾ . . . . . .
೮. ವಿಷಯೀಭೂತ ವಿಮಲತರ ಚಿತ್ರಚರಿತಶ್ರೀಸೋಮೇಶ್ವರೋಭೂಮಿಪಾ
೯. ಲಹಸ್ಯಭುಜಜಲವಿನಿರ್ಜಿತಚೋಳಮಂಡಳೇಶ್ವಮನೋವಿನೋದಾಯ
೧೦. ವಿನಿರ್ಮಿತಾಂ ವಿಕ್ರಮಪುರ ನಾಮಧೇಯಾಂ ಮಧಾರಾಜಧಾನೀಮಧಿವ
೧೧. ಸನೂ ಆನಂದ ಸಂವತ್ಸರಸ್ಯ ಆಷಾಡ ಶುದ್ಧ ಏಕಾದಸ್ಯಾಭಾನುವಾಶೀ ವಿ
೧೨. ಧೀಯಮಾನನಾನಾದಾನ ಪ್ರವೃತ್ತಿಪ್ರಸಂಗಾತ್ । ವಿಮಲತರಶೀಲ ಶಾ
೧೩. ಲಿಭ್ಯಃ ಕಲುಕಣಿವಿಷಯಾಂತರ್ಗತಪ್ರಸಿದ್ಧಸೀಮಾಸಮನ್ವಿತಂಪ
೧೪. ಲ್ಲೀಸಹಿತಂಬಾಲುಗಚ್ಚುನಾಮಾನಂ ಮಹಾಗ್ರಾಮಂಷೆವಿಂಶತಿವೃತ್ತಿಕಂಕೃ
೧೫. ತ್ವಾಕಾವೇರಿ ಪರಿಸರಾಲಂಕಾರ ಭೂತಸ್ಯ ಭಗವತ ಶ್ರೀರಂಗನಾಥಸ್ಯ
೧೬. ಸಂನಿಧೌ ಸರ್ವನಮಸ್ಯ ವಿಧಾಯದ್ಧಾರಾಪೂರ್ವಕಂಪ್ರಾದಾತ್ ॥ ಅಯ
೧೭. ಮೇವಾರ್ಥಃ ಕರ್ಣ್ಣಾಟಭಾಷಯಾ ಸಪ್ರಪಂಚಃ ಪ್ರಕಟೀಕೃಯತೇ ॥ ಸ್ವಸ್ತಿ
೧೮. ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜಪರಮೇ
೧೯. ಶ್ವರ ದ್ವಾರಾವತೀಪುರವರಾಧೀಶ್ವರಂ ಯಾದವ ಕುಲಾಂಬರದ್ಯುಮಣಿಸ
೨೦. ಬರ್ಜ್ಞಚೂಡಾಮಣಿ ಮಲೆರಾಜರಾಜ ಮಲಪರೋಳುಗಂಡ ಗಂಡಬೇರುಂಡ

**ನಾಲ್ಕನೇ ಪಟದ ಹಿಂಭಾಗ**

೧. ಕದನಪ್ರಚಂಡನ ಸಹಾಯಶೂರನೇಕಾಂಗವೀರ ಶನಿವಾರಸಿದ್ಧಿ
೨. ಗಿರಿದುರ್ಗಮಲ್ಲಚಲಂದಕರಾಮವೈರಿಭಕಂಠೀರವಮಕರರಾ
೩. ಜ್ಯನಿರ್ಮೂಲನ ಪಾಂಡ್ಯರಾಜ್ಯದಿಶಾಪಟ್ಟಚೋಳರಾಜ್ಯಪ್ರತಿಷ್ಠಾಚಾರ್ಯ
೪. ನಿಃಶಂಕಪ್ರತಾಪ ಚಕ್ರವರ್ತಿ ಹೊಯ್ಸಳ ಭುಜಬಳಶ್ರೀವೀರ
೫. ಸೋಮೇಶ್ವರ ದೇವರಸರುಶಕವರ್ಷ ೧೧೭೭ ನೆಯ ಆನಂದ ಸಂವತ್ಸರ
೫. ಆಷಾಡ ಶು ೧೧ ಆ ೧ ದಲ್ಲು – ಶ್ರೀರಂಗದೇವರ ಸಂನ್ನಿಧಿಯಲುಕಲುಕ
೭. ಣಿನಾಡಬಾಲುಂಗಚ್ಚು ಮೊದಲುಗ ೧೪ಪ ೫ ಬೇಹ ವೆಗ್ಗಡೆಯ ವಳಾಯಗ್ಗಸಃ
೮. ನವಲಾಯ ಗ ೧ ಪ ೭ ॥ ವಹಪಳ ॥ ಸಾದುರ್ಪ । ಪಣವೆ
೯. ರಡರಸೇಸೇಮಾನ್ಯ ವೆಲ್ಲಹ ಪ ೨ ಕುಮಾರಗ ೧ ನಿಬಂಧ ರ್ಪ । ಶ್ರೀಕ

೧೦. ರಣಪ ೨ ಸುಂಕ ಗ ೩ ಪ ೬ ॥ ಪನ್ನಾಯ ಪ ೬ ಅಡಿಕೆ ಪಕ್ಕ ೧ ಕ್ಕಂಗ
೧೧. –ಪಣವೊಂದು ಸೇಸೆಗ ೩ ಪ ೩ ॥ ಕಂಡಿಕೆವಣ ಪ ೨ ವೀರ ಸೇಸೆ
೧೨. ಗ ೩ ಪ ೨ ॥ ಆನೆಯಸೇಸೆಗ ೮ ಪ ೩ ತೊಡರು ಗ ೨ ನಲ್ಲೆತ್ತುನ
೧೩. ಲೆತತುಗ ೪ ಪ ೧ ಖಾಣನಿಬಂಧ ಪ ೨ ಲುಕುಪ ॥ ಕುದುರೆಯಸೇಸೆ
೧೪. ಗ ೧೧ ಪ ೧ ॥ ಕುಮಾರಗಣಿಕ ಪ ೪ ॥ ವಿಜಯವೀರವಣ ಪ ೨
೧೫. – ಡತಿವಣ ಪ ೧ ಖಾಣಸ ೧೫ಕೋರ್ಂಕ್ಕಂಗಳ ಭತ್ತಸ ೪ ಕೋ ೧ ಪ ೨
೧೬. – ೯ ೭ ॥ ಎಳ್ಳುಸ ೩ ಕೋ ೬ । ಕ್ಕಂ ಪ ೭ ॥ ಜೋಲಸ ೧ ಕೋ ೩ ಮಾನ ೩ಕಾ
೧೭. ಯಬಿಟ್ಟಿಯ ಭಂಡಿ ಗ ೧ ಪ ೧ ॥ ಶ್ವಾನಿದುಪೊತ್ತರರ್ಪಎತ್ತಿನುಪೊತ್ತರ ಪ
೧೮. . ಆ . ಸಮಸ್ತಬಲಿ ಸಹಿತ ಕಟ್ಟುಗುತ್ತಗೆ ಪಿಂಡಾದಾನವಾಗಿ ಅರಾ
೧೯. . . . ಗೋತೇರ್ಯವ ಗದ್ಯಾಣ ಎಪ್ಪತ್ತೈದು ೭೫ ವನೂಎಂದೆಂಗಿಗಗೂಬೀ
೨೦. ಸರ್ವನಮಸ್ಯಮಾಡಿನಾನಾಗೋತ್ರರಪ್ಪಬ್ರಾಂಹಣೋತ್ತಮರಿಗೆ
೨೧. ಪ್ರಸಿದ್ಧ ಸೀಮಾಸಮನ್ವಿತವಪ್ಪತನ್ನ ಕಾಲುವಲ್ಲು ವಾಲುಸ

**ಐದನೇ ಪಟದ ಮುಂಭಾಗ**

೧. ಹಿತವಹಬಾಳುಗಚ್ಚನು ಉದ್ಭವ ವಿಶ್ವನಾಥಪುರವೆಂದು ಹೆಸರಿ
೨. ಟ್ಟು ಇಪ್ಪತ್ತಾರು ವೃತ್ತಿಯಾಗಿ ಮಾಡಿ ಅಷ್ಟಭೋಗ ತೇಜಸ್ವಾಮ್ಯನಿ
೩. ಧಿ ನಿಕ್ಷೇಪ ಸವಸ್ತವಲಿಸಹಿತ ಧಾರಾಪೂರ್ವಕಂ ಮಾಡಿಕೊಟ್ಟರು ॥
೪. ॥ ॥ ಅನಾನಾಯುಗಕಲ್ಪಮಾರ ವಿರಥ ಪ್ರಸ್ಥಾನ ಮಾವಾ
೫. ರಿಧಿಪ್ರಸ್ಫುಂರ್ಜ್ಜಜ್ಜಲಭಾರಮಾನದನದೀಸ್ತೋಃ ಸಹಸ್ರದ್ಯು
೬. ತಿ । ಆ ಪೃಥ್ವೀತಳಮಾನ ಭೋಗಣ ಮಯಂ ಸೋಮೇಶ್ವರಕ್ಷ್ಮಾಪತೇರ್ಧ
೭. ರ್ಮಃ ಸುಸ್ಥಿರತಾಮುಷೈತು ನಿತರಾಮಾಸೇತುಚಾ ಮೇರು ಚ ॥
೮. ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ । ಪರದತ್ತಾಪಹಾರೇಣ
೯. ಸ್ವದತ್ತಂ ನಿಷ್ಪಲಂ ಭವೇತ್ । ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಸುಂಧರಾಂ ಷಷ್ಠಿವರ್ಷಸಹ
೧೦. ಪ್ರಾಣಿವಿಷ್ಠಾಯಾಂ ಜಾಯತೇ ಕ್ರಿಮಿಃ ॥ ಬಹುಭಿರ್ವಸುಧಾದತ್ತಾಂರಾಜ
೧೧. ಭಿಃಸಗರಾಧಿಬಿಃ । ಯಸ್ಯ ಯಸ್ಯ ಯದಾಭೂಮಿಸ್ತಸ್ಯತಸ್ಯತದಾ
೧೨. ಫಲಂ ॥ ಸಾಮಾನ್ಯೋಯಂ ಧರ್ಮಸೇತು ನೃರ್ಪಾಣಾಂಕಾಲೇಕಾಲೇ ಪಾಲನಿ
೧೩. ಯೋಭದ್ಭಿಃ । ಸರ್ವಾನೇತಾನ್ಭಾವಿನಃ ಪಾರ್ಥಿವೇಂದ್ರಾನ್ಭೂ
೧೪. ಯೋಭೂಯೋಯಾಚತೇರಾಮಚಂದ್ರ
ಶ್ರೀ ವೀರಸೋಮೇಶ್ವರ ದೇವಸ್ಯ





# ಹೊಯ್ಸಳ ಮುಮ್ಮಡಿ ನರಸಿಂಹನ ಅಪ್ರಕಟಿತ ತಾಮ್ರಪಟ

**ಪ್ರೊ. ಜಿ.ಕೆ. ದೇವರಾಜಸ್ವಾಮಿ***

**ಹಾ**ಸನ ಜಿಲ್ಲೆ ಚನ್ನರಾಯ ಪಟ್ಟಣ ತಾಲ್ಲೂಕು ಹಿರಿಸಾವೆ ಹೋಬಳಿ ಬಾಳಗಚ್ಚು ಗ್ರಾಮದ ಶ್ರೀ ಚಿದಂಬರ ಅವರ ಬಳಿಯಲ್ಲಿದೆ. ಶ್ರೀಚಿದಂಬರ ಅವರು ತಾಮ್ರ ಪಟಗಗಳನ್ನು ಓದಿ ಇತಿಹಾಸದ ಮಾಹಿತಿ ನೀಡಲು, ಡಾ. ದೇವಕೊಂಡಾರೆಡ್ಡಿ ಅಧ್ಯಕ್ಷರು ಇತಿಹಾಸ ಅಕಾದೆಮಿ ಇವರಿಗೆ ನೀಡಿದರು. ಡಾ. ದೇವರಕೊಂಡಾರೆಡ್ಡಿ ಅವರು. ಈ ತಾಮ್ರಪಟಗಳ ಪಠ್ಯ ಹಾಗೂ ಮಾಹಿತಿ ನೀಡಿ ಪ್ರಕಟಿಸಲು ನನಗೆ ಹಸ್ತಾಂತರಿಸಿದರು. ಅವರಿಗೆ ನನ್ನ ಪ್ರಣಾಮಗಳು.

ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಶ್ರವಣಬೆಳಗೊಳದ ಶಾಸನಗಳನ್ನು ಹೊರತು ಪಡಿಸಿ ೧೪೩ ಶಾಸನಗಳು ದೊರೆತಿವೆ. ಅದರಲ್ಲಿ ಆರು ಶಾಸನಗಳು ನರಸಿಂಹ (III) ನಿಗೆ ಸಂಬಂಧಿಸಿದ್ದಾಗಿವೆ. ಈ ಅಪ್ರಕಟಿತ ಶಾಸನವು ನರಸಿಂಹನ (III) ನಿಗೆ ಸಂಬಂಧಿಸಿದ ಏಳನೇ ಶಾಸನವಾಗಿದೆ.

ಬಾಳಗಚ್ಚು ತಾಮ್ರಪಟವು ದಾನ ಶಾಸನವಾಗಿದ್ದು. ಐದು ಹಲಗೆಯೊಂದಿಗೆ ಶಾಲಾ ರೀತಿಯಲ್ಲಿ ಕತ್ತರಿಸಲಾಗಿದ್ದು, ಮುದ್ರೆ ಉಂಗುರವನ್ನು ಹೊಂದಿದೆ. ಪ್ರತೀ ಹಲಗೆಯ ಉದ್ದ ೨೯.೫. ಸೆ.ಮಿ. ಮತ್ತು ಅಗಲ ೧೯.೬ ಸೆ.ಮಿ. ಇದೆ. ಪ್ರತೀ ಹಲಗೆಯಲ್ಲಿ ಸರಾಸರಿ ೧೯ ಸಾಲಿನಲ್ಲಿ ಬರೆಯಲಾಗಿದ್ದು. ಸರಾಸರಿ ೨೦ ಅಕ್ಷರಗಳಿವೆ ನಂದಿನಾಗರಿ ಲಿಪಿಯಲ್ಲಿ ಬಹಳ ಸುಂದರವಾಗಿ ಬರೆಯಲಾಗಿದೆ. ಹೊಯ್ಸಳರ ಕಾಲದ ನಂದಿನಾಗರಿಲಿಪಿ ಅಧ್ಯಯನಕ್ಕೆ ಯೋಗ್ಯವಾಗಿದೆ. ಐದೂ ಪಟಗಳು ತಾಮ್ರದಬಳೆಯಿಂದ ಬಂದಿಸಿದ್ದು, ಬಳೆಯನ್ನು ಕತ್ತರಿಸಿದೆ. ಪುನಃ ಬೆಸುಗೆ ಹಾಕಿರುವುದಿಲ್ಲ. ಬಳೆಯ ಮೇಲ್ಭಾಗದಲ್ಲಿ ವೃತ್ತಾಕಾರದ ೮ ಸೆ.ಮೀ. ವ್ಯಾಸದ ಸುಂದರವಾದ ಮುದ್ರೆಇದ್ದು ೨೬.೮ ಸೆ.ಮೀ. ಸುತ್ತಳತೆಯನ್ನು ಹೊಂದಿದ್ದೆ. ಈ ಮುದ್ರೆಯಲ್ಲಿ ಬಲಗಾಲನ್ನು ಎತ್ತಿಕೊಂಡಿರುವಂತಿರುವ ಹುಲಿಯನ್ನು ಉಬ್ಬು ಕೆತ್ತನೆಯಲ್ಲಿ ಕೆತ್ತಲಾಗಿದೆ. ಅದರೊಳಗೆ ಸೂರ್ಯ ಚಂದ್ರರನ್ನೂ ಉಬ್ಬು ಶಿಲ್ಪದಲ್ಲಿ ಕೆತ್ತಿದೆ. ತಾಮ್ರಪಟಗಳು ಹಾಗೂ ಮುದ್ರೆ ಉಂಗುರವೂ ಸೇರಿದಂತೆ ಒಟ್ಟು ತೂಕ ಒಂಬತ್ತು ಕೆ.ಜಿ. ಇನ್ನೂರ ಮೂವತ್ತು ಗ್ರಾಂ ಇದೆ. ಪ್ರತಿ ಪಟವು ಸರಾಸರಿ ಒಂದೂವರೆ ಕೆ.ಜಿ. ತೂಕವಿದೆ.

ಮೊದಲ ತಾಮ್ರಪಟದ ಮುಂಭಾಗ ಹಾಗೂ ಐದನೇ ತಾಮ್ರಪಟದ ಹಿಂಭಾಗದಲ್ಲಿ ಬರವಣಿಗೆ ಇಲ್ಲ. ನಂದಿನಾಗರಿ ಲಿಪಿಯಲ್ಲಿ, ಸಂಸ್ಕೃತ ಭಾಷೆ ಹಾಗೂ ಕನ್ನಡ ಭಾಷೆಯಲ್ಲಿ ಬರೆಯಲಾಗಿದೆ. ಒಟ್ಟು ನೂರಾನಲವತ್ತೆಂಟು ಸಾಲುಗಳಿವೆ.

ಶಾಸನೋಕ್ತಕಾಲವು ಸಕವರ್ಷದ ೧೧೮೧ನೆಯ ಕಾಳಯುಕ್ತಿ ಸಂವತ್ಸರದ ಶ್ರಾವಣ ಬಹುಳ ಕೃಷ್ಣಾಂಗಾರಕ ಚತುರ್ಥಣ ಎಂದಿದ್ದು ಇದು ಕ್ರಿ.ಶ. ೨೧-೦೭-೧೨೫೮ನೇ ಭಾನುವಾಕ್ಕೆ ಸರಿಹೊಂದುತ್ತದೆ. ಶಾಸನಗಳಲ್ಲಿ ಪ್ರಸ್ತುತ ಸ್ಥಳಗಳನ್ನು ಬಾಳಂಗಚ್ಚು, 'ಬಾಳಂಗಂಚು' ಇತ್ಯಾದಿ ಕರೆಯಲಾಗಿದೆ. ಬಾಳಗಚ್ಚು ಎಂಬುದು ಇಂದಿಗೂ ರೂಢಿಯಲ್ಲಿದೆ. ಈ ಸ್ಥಳವನ್ನು ವೀರಸೋಮೇಶ್ವರ ಉದ್ಭವ ವಿಶ್ವನಾಥಪುರ ಎಂದು ಮರುನಾಮಕರಣ ಮಾಡಿರುವುದು ಕ್ರಿ.ಶ. ೨೮.೭.೧೨೫೫ ಭಾನುವಾರದ ಸೋಮೇಶ್ವರನ ಶಾಸನ (ಇ.ದ.೩೧) ದಿಂದ ತಿಳಿಯುತ್ತದೆ.

ಚನ್ನರಾಯಪಟ್ಟಣದ ಮೂಲ ಹೆಸರು ಕೊಳತೂರು ಎಂದು ಶಾಸನಗಳಿಂದ (ಚ.೧೯.೧೮) ತಿಳಿಯುತ್ತದೆ. ಇದು ಅಗ್ರಹಾರವೂ ಪ್ರಮುಖ ಸಾಂಸ್ಕೃತಿಕ ಕೇಂದ್ರವೂ ಆಗಿ ಹೊಯ್ಸಳರ ಕಾಲದಲ್ಲಿ ಪ್ರಮುಖವಾಗಿತ್ತು. ಚನ್ನರಾಯಪಟ್ಟಣವು ಕಲ್ಗುಣಿ ನಾಡೊಳಗೆ ಅಂತರ್ಗತವಾಗಿತ್ತು. ಈ ನಾಡು ಪೂರ್ವದಲ್ಲಿ ಕುಣಿಗಲ್ ನಾಡು ಪಶ್ಚಿಮದಲ್ಲಿ ಕಳಪ್ಪುನಾಡು. ಉತ್ತರದಲ್ಲಿ ಮಗರ ಮುನ್ನೂರು. ದಕ್ಷಿಣದಲ್ಲಿ ಮಂಡ್ಯ ಪ್ರದೇಶಗಳನಡುವಿನ ಪ್ರದೇಶವಾಗಿತ್ತು. ಕ್ರಿ.ಶ. ಹನ್ನೊಂದನೇ ಶತಮಾನದಿಂದಲೇ ಕಲ್ಗುಣಿನಾಡಿನ ಉಲ್ಲೇಖ ಶಾಸನಗಳಿಂದ ತಿಳಿಯುತ್ತದೆ. ಕಸಲಗೆರೆಯ ಕ್ರಿ.ಶ. ೧೧೪೨ರ ಶಾಸನದಲ್ಲೇ ಕಲ್ಗುಣಿ ನಾಡಿನ ಉಲ್ಲೇಖ ನೋಡಬಹುದು.

ಹೊಯ್ಸಳ ಮುಮ್ಮಡಿನರಸಿಂಹನು ಕ್ರಿ.ಶ.೧೨೫೪ ರಿಂದ ೧೨೯೨ರ ವರೆಗೆ ಆಳ್ವಿಕೆ ನೆಡಸಿದ್ದನ್ನೇ ಈಗಾಗಲೇ ದಾಖಲಿಸಿದೆ. ಚನ್ನರಾಯಪಟ್ಟಣದ ಕ್ರಿ.ಶ. ೧೨೮೯ರ ಶಾಸನವು

* # ೫೬. 'ತ್ರಯೀ', ಮೈಸೂರು ಲ್ಯಾಂಪ್ಸ್ ಬಡಾವಣೆ, ಚನ್ನನಾಯಕನಪಾಳ್ಯ, ೨ನೇ ಹಂತ, ನಾಗಸಂದ್ರ ಅಂಚೆ, ಬೆಂಗಳೂರು-೭೩.

ನರಸಿಂಹನು ದ್ವಾರಸಮುದ್ರದಿಂದಲೂ ತಮ್ಮ ರಾಮನಾಥನು ಕಣ್ಣಾನೂರಿ ನಿಂದಲೂ ರಾಜ್ಯವಾಳಿದ್ದನ್ನು ತಿಳಿಸುತ್ತದೆ. ಈ ತಾಲ್ಲೂಕಿನಲ್ಲಿ ನರಸಿಂಹನಿಗೆ ಸಂಬಂಧಿಸಿದ ಆರು ಶಾಸನಗಳಿದ್ದು ಕ್ರಿ.ಶ. ೧೨೭೬ರ ಬಾಳಗಂಚಿಯ ಶಾಸನವು ಪ್ರಸಿದ್ಧನಾದ ಪೆರುಮಾಳ ದಂಡನಾಯಕನ ಕಾರ್ಯ ಸಾಧನೆಯನ್ನು ಹೇಳಿದೆ. ನರಸಿಂಹನನ್ನು ಸಾಹಿತ್ಯ ಸರ್ವಜ್ಞನೆಂದೂ ಪೆರುಮಾಳೆದಂಡನಾಯಕನನ್ನು ಜವನಿಕೆ ನಾರಾಯಣ ಮತ್ತು ರಾವುತ್ತರಾಯನೆಂದು ಕರೆದಿದೆ ಪೆರುಮಾಳೆ ದಂಡನಾಯಕನು ಹೊಯ್ಸಳ ಸೋಮೇಶ್ವರ, ಮುಮ್ಮಡಿ ನರಸಿಂಹ ಹಾಗೂ ಮುಮ್ಮಡಿ ಬಲ್ಲಾಳ ದೊರೆಗಳ ಕೈಕೆಳಗೆ ಸೇವೆಸಲ್ಲಿಸಿ ಕೀರ್ತಿಗೆ ಪಾತ್ರನಾಗಿದ್ದನು. ಲೋಕೋಪಕಾರದಲ್ಲಿ ಅವನಿಗೆ ಸರಿ ಸಮಾನರಿಲ್ಲವೆಂದು ಶಾಸನಗಳು ಹೊಗಳಿವೆ. ಹಾಗೆಯೇ ನರಸಿಂಹನ ದಾನಧರ್ಮಾದಿಕಾರ್ಯಗಳನ್ನು ಅವನ ಕಾಲದ ಶಾಸನಗಳಿಂದ ತಿಳಿದುಬರುತ್ತದೆ.

ಬಾಳಗಚ್ಚಿನ ಈ ಶಾಸನವು ಮೊದಲಿಗೆ ಹರಿಯನ್ನು ಹಾಗೂ ಸರಸ್ವತಿ ಮತ್ತು ಹರನನ್ನು ಸ್ತುತಿಸಿದೆ. ನಂತರದಲ್ಲಿ ನರಸಿಂಹನ ಪ್ರತಸ್ತಿಗಳನ್ನು ದೀರ್ಘವಾಗಿ ಉಲ್ಲೇಖಿಸುತ್ತದೆ. ನರಸಿಂಹಹನ ದ್ವಾರಸಮುದ್ರದಿಂದ ಆಳುತ್ತಿರುವುದನ್ನು ಮತ್ತು ಅವನ ಪರಾಕ್ರಮವನ್ನು ಶಾಸನವು ಹೇಳಿದೆ. ಸಂಸ್ಕೃತ ಹಾಗೂ ಕನ್ನಡದಲ್ಲಿ ಕಾಲದ ಉಲ್ಲೇಖ ಹಾಗೂ ದಾನ ವಿವರವನ್ನು ಎರಡೂ ಭಾಷೆಗಳಲ್ಲಿ ಬರೆಲಾಗಿದೆ "ಕರ್ನಾಟಕ ಭಾಷೆಯಾ ಸಪ್ರಪಂಚಃ ಪ್ರಕಟೀಕೃಯತೇ" ಎಂದು ಕನ್ನಡ ಭಾಷೆಯಲ್ಲಿ ಮುಂದವರಿಸಲಾಗಿದೆ. ಶಾಸನದಲ್ಲಿ "ಉದ್ಭವ ವಿಶ್ವನಾಥ ಪುರವಾದ ಬಾಳುಗಚ್ಚಿನ ಪ್ರಥಮ ಧಾರೆಯ ಇಪ್ಪತ್ತಾರುವೃತ್ತಿಯ ಮಹಾಜನಗಳ ಒಂಡಂಬಿಕೆಯಲು ನಾಲ್ಕು ವೃತ್ತಿಯ ಹೆಚ್ಚಿಸಿ" ದಾನ ನೀಡಿರುವುದು ಶಾಸನದ ಪ್ರಮುಖ ಅಂಶವಾಗಿದೆ.

ಕ್ರಿ.ಶ. ೨೮.೦೭.೧೨೫೪ ಭಾನುವಾರದ ವೀರಸೋಮೇಶ್ವರನ ಶಾಸನ (ಇ.ದ.೩೧)ದಲ್ಲಿ ಬಾಳಗಚ್ಚಿಗೆ ಉದ್ಭವ ವಿಶ್ವನಾಥಪುರ ಎಂದು ನಾಮಕರಣ ಮಾಡಿರುವುದನ್ನು ದಾಖಲಿಸಿದೆ. ಹಾಗೆಯೇ ಇದೇ ಶಾಸನದಲ್ಲಿ ಇಪ್ಪತ್ತಾರು ವೃತ್ತಿಯನ್ನಾಗಿ ಮಾಡಿ ದಾನ ನೀಡಿರುವುದು ತಿಳಿಯುತ್ತದೆ. ಪ್ರಸ್ತುತ ಈ ನರಸಿಂಹನ ಶಾಸನವು, ಸೋಮೇಶ್ವರ ದಾನ ನೀಡಿದ ಇಪ್ಪತ್ತಾರು ವೃತ್ತಿಗಳಿಗೆ ನಾಲ್ಕು ವೃತ್ತಿ ಹೆಚ್ಚಿಸಿ ಕಲ್ಲುಣಿ ಅಂತರ್ಗತ ಬಾಳುಗಚ್ಚು ಮಹಾಜನರ ಬಡಂಬಡಿಕೆಯಂತೆ ಮೂವತ್ತು ವೃತ್ತಿಗಳನ್ನಾಗಿ ಮಾಡಿ ದಾನ ನೀಡಿದ್ದನ್ನು ಶಾಸನವುಪ್ರಸ್ತುತ ಪಡಿಸುವುದೇ ಮುಖ್ಯವಿಷಯವಾಗಿದೆ. ಶಾಸನವು ನೂರಾನಲವತ್ತೆಂಟು ಸಾಲುಗಳಲ್ಲಿ ಪ್ರಸ್ತುತಗೊಂಡಿದ್ದು, ಕೊನೆಯ ಭಾಗದಲ್ಲಿ ಶಾಪಾಷಯದೊಂದಿಗೆ ಮುಕ್ತಾಯವಾಗಿದೆ. ಪಾಠಾ ನಂತರ ಕೊನೆಯಲ್ಲಿ "ಶ್ರೀವೀರನಾರಸಿಂಹದೇವಸ್ಯ" ಎಂದು ನಂದಿನಾಗಲಿಪಿಯಲ್ಲಿ ಒಪ್ಪಹಾಕಲಾಗಿದೆ.

ಪ್ರಸ್ತುತ ಶಾಸನದಲ್ಲಿ ವೃತ್ತಿವಿವರಣೆನೀಡುವಲ್ಲಿ ಬಳಸಿದ ಪರಿಭಾಷಿಕ ಪದಗಳು, ಪಣ, ವಟ್ಟ ಸಾದ, ಬಲ್ಲ, ಕುಮಾರಪಣ, ನಿಬಂದಪಣ; ಪಂನಾಯ, ಶ್ರಿಕರಣಪಣ, ಕಂಡಿಕೆ, ವೀರಸೇಸೆ, ಆನೆಯಸೇಸೆ ನಲ್ಲವಾವುನಲ್ಲೆತ್ತು ಖಾಣನಿಬಂಧ ಕುದುರೆಸೇಣೆ, ಕುಮಾರಗಾಣಿಕೆ, ಕೊಡತಿವಣ, ಸಲಗೆ, ಪತ್ತಿನು ಪೋತ್ತರ ಮುಂತಾದವುಗಳು ಗಮನಸೆಳೆಯುತ್ತವೆ. ಈ ಪದಗಳಲ್ಲಿ ಕೆಲವುಗಳಿಗೆ ವಿದ್ವಾಂಸರು ಅರ್ಥೈಸಿದ್ದಾರೆ. ಉಳಿದಪದಗಳ ಸಾಂಸ್ಕೃತಿಕ ನೆಲೆಯನ್ನು ಗುರುತಿಸಬೇಕಾಗಿದೆ.

* ಒಟ್ಟಾರೆಯಾಗಿ ಈ ಶಾಸನವು ಇಪ್ಪತ್ತಾರು ವೃತ್ತಿ ಮೊದಲು ಇದ್ದಿದ್ದಕ್ಕೆ ನಾಲ್ಕು ವೃತ್ತಿ ಹೆಚ್ಚಿಸಿ, ಬಾಳಗಚ್ಚು ಮಹಾಜನಗಳಿಗೆ ವೀರನರಸಿಂಹನು ನೀಡಿದ್ದನ್ನು ದಾಖಲಿಸಿದೆ.

* ಹೊಯ್ಸಳರಕಾಲದ ತಾಮ್ರಪಟದ ನಾಗರಿಲಿಪಿ ಅಧ್ಯಯನಕ್ಕೆ ಈ ತಾಮ್ರಪಟ ಮುಖ್ಯವಾಗುತ್ತದೆ.

[ಕೃತಜ್ಞತೆಗಳು : ಬಾಳಗಚ್ಚುಚಿದಂಬರ ಅವರಿಗೆ, ತಾಮ್ರಪಟ ಓದಿ ಪ್ರಕಟಿಸಲು ನನಗೆ ಕೊಟ್ಟ ಡಾ.ದೇವರಕೊಂಡಾರೆಡ್ಡಿ ಅವರಿಗೆ ಹಾಗೂ ಸ್ನೇಹಿತರಾದ ಬಿ.ಎಸ್. ಗುರುಪ್ರಸಾದ್ ಅವರಿಗೆ ಕೃತಜ್ಞತೆಗಳು]

## ಶಾಸನಪಾಠ

**ಮೊದಲನೇ ಪಟದ ಹಿಂಭಾಗ**

೧. ಶ್ರೀ "ನಿತ್ಯೋದ್ಭಾಸಿ ಮೃಣಾಳ ಕೋಮಳ ನಿಜ ಪ್ರೋತ್ತುಂಗ ದಂಷ್ಟ್ರೋಚ್ಚೈ

೨. ತಂಕ್ಷೋಣೀ ಚಕ್ರಮಭಿ ಪ್ರಸಾಂತ ಪಯಃ ಪೂರಾಭಿರಾಮಂ ಮಹತ್ ।

೩. ಪಾನಂದಂ ವಿಕಸ್ಸತ್ ರೋರುಹ ಧಿಯಾ ಸಧ್ಯಃ ಸರೋಜಾಲಯಾ

೪. ಮಾರೂಢಾಮವ ಲೋಕ್ಯ ಜಾತ ಹಸಿತಃ ಪೌತ್ರೀಹರಿಃ ಪಾತು

೫. ವಃ ॥ ಆಸಿಚ್ಛೇಷ ಫಣಾ ಸಹಸ್ರ ವಿಳಸನ್ಮಾಣಿಕ್ಯ ಜಾ

೬. ಲ ಪ್ರಭಾ । ಬಾಸ್ವಾತ್ಕುಂತಳ ಸಂತತೇ ರ್ಮುಭಿದದೋನಾಭಿ ಸರೋಜಾತ್ಪು

೭ ರಾ। ದೇವಸ್ಥಾವರ ಜಂಗಮಸ್ಯ ಜಗತಃ ಸ್ರಷ್ಟೋಜ್ವಳಂನ್ಯನ್ಮುಖಾಂ
೮. ಭೋಜಾರಾಮನಿವಾಸಿ ಹಂಸವನಿತೇವಾ ಭಾತಿ ವಾಗ್ದೇವತಾ ॥
೯. ಪುಷ್ಪಚಾಪವಿಶಿ ಖೈರನಾಕುಳೋ ಕಿಂಕರೋಪಿ ಸುರವೃಂದ ।
೧೦. ವಂದಿತಃ ॥ ತದಕ್ಷಣ : ಸಿಂಧೂನಾಮ ಯಮಜನಿಮಿತ್ರಂಪ್ರಿಯಸಕಶ್ಚ
೧೧. ಕೋರಾಣಾಂ ಚೂಡಾಮಣಿರಪಿ ಹರಸ್ಯಾಖಿಳಗುರೋಃ । ಸುಧಾರಸಿ
೧೨. ರ್ಯಸ್ಮಿಂನುದಯತಿ ಶರೈಃ ಪಂಚಭಿರಳಂ ಪಿಧತ್ತೇ ಪುಷ್ಪೇಪ್ರಃ ಸಕಳ
೧೩. ಮಪಿಲೋಕಂ ಪ್ರತಿಮುಹುಃ ॥ ಯದುಃ ಸುಧಾಕರಸ್ಯಾ ಸೀತ್ಕುಲೇ
೧೪. ಬಲವದಗ್ರಣೀ । ಪ್ರಸಾಂತ ಯಶಸ್ತೋಮ ವಿಷದೀಕೃತ ದಿಙ್ಮುಖಃ ॥
೧೫. ಸಳಾಖ್ಯಾಸ್ತದ್ವಂಶೇ ವಿಷದ ಯಶಸಾ ಕ್ಷಾಲಿತ ಹರಿತ್ಸರೀಪಾ
೧೬. ಕೋನ್ಯಣಾಮಿವ ಸುಕೃತೇರಾಶೇಃ ಸಮಜನಿ ॥ ವಿಸಸ್ಮಾರಕ್ಷೋ
೧೭. ಣೀ ಸಗರಮುಖರೋರ್ವ್ವೀ ಸವಿರ ಹವ್ಯಥಾಂ ಯಸ್ಮಿನ್ಜಾತೇ ಬಲವ
೧೮. ತಿಭರಂ ಬಿಭ್ರತಿ ಭುವಃ ॥ ಶಶಪುರ್ಯ್ಯಾಸರಾಜೇಂದ್ರಃ ಕೆದಾಚಿತ್

**ಎರಡನೇ ಪಟದ ಮುಂಭಾಗ**

೧. ತಸ್ಮಾದಕ್ಷುಣ್ಣ ಲಕ್ಷ್ಮೀಪದ ದ್ವಿಮುದೀತ ಗುಣಗ್ರಾಮ
೨. ಧಾಮಪ್ರ ಕಾಮ ಶ್ರೀಮೊನುದ್ಧಾಮ ವೈರಿದ್ವಿಪದೇಳ ನೃಪಟುಃ
೩. ಪ್ರಾದುರಾಸೀಈನೃಸಿಂಹಃ । ಯಸ್ಮಿನ್ರಾಜನ್ಯ ಶೇಷಂ ವಸುಕಿಲ
೪. ದುದುಹಹೇಸರ್ವ ಸಸ್ಯಂ ಸಮಂತಾತ್ತ್ರೀತಾ ಕ್ಷೋಣೀ ಗುಣೇನ ಸ್ವಯಮ
೫. ಪಿ ಪೃಥುನಾ ಪೀಡಿತಾನೋಬಲೇನ ॥ ಖಡ್ಗಂ ವಿಕ್ರಮ ಪಾಲಪಾವು
೬ ಸಶಿರೋಮಸ್ತಿಷ್ಕ ಪಂಕಾವಿಳಂ । ಪ್ರಕ್ಷುಭ್ಯಂನ್ಮಕರೋಷ್ಣರಕ್ತ
೭ ಸರಿತಾಂ ಪ್ರಕ್ಷಾಲ್ಯಂ ವೀರೋದ್ಧತ ॥ ಪ್ರೋದ್ಯದ್ವೈರಿ ಕದಂಬ ಪ್ರಾಂಸುಪಿಹಿ
೮. ತಂ ಚೋಳಂ ಪ್ರತಿಷ್ಟಾಪ್ಯ ಯಶ್ಶೋಳ ಸ್ಥಾಪನ ಪಾಂಡ್ಯೆ ಖಂಡನ ಇತಿ ಪ್ರ
೯. ಖ್ಯಾತ ಕೀರ್ತಿಭುವಿ ॥ ವಾಜಿರಾಜೀರಿತೋದ್ದಾಮರಥ ಚಕ್ರ
೧೦. ಭರಾಹತೈಃ । ಗಜಾಶ್ವ ಪತ್ತಿಭಿಃಕೀರ್ಣ್ಣಮಭೂತ್ತಸ್ಯ ರಣಾಜಿರಾಂ ॥
೧೧. ನಿಜಭುಜ ಮಂದರಗಿರಿಣಾ ಪರಿಮಥಿತ ದುರಂತ ವೈರಿವಾರಾ
೧೨. ಶಿಃ ॥ ಸೋಮಃ ಪ್ರಹಸಿತ ಸುರದಿತಿ ಸುತ ವೀರ್ಯೋಭೂತ್ತತಃ ಶ್ರೀಮಾನ್
೧೩. ॥ ಘೋಟಾನಾಂ ಯಸ್ಯಧಾಟ್ಯಾಶ್ಚಟುಲಖುರ ಪುಟ ಪ್ರಸ್ಫುಟಾಟೋಪ
೧೪. ನಾದೈಷ್ಟಂ ಕಾರ್ಯೈರಟ್ಟ ಹಾಸ್ಯೆರಿವ ಕಠಿನಾಭಟಾಕೃಷ್ಟ ಚಾಪಾ ವ
೧೫. ಳೀನಾಂ ॥ ಭೇರಿಭೂರಿ ಪ್ರಣಾರ್ಯೈಃ ಪಟುಪಟ ಹರವೈಃ ಪಾಟತೋರಃ
೧೬. ಕವಾಟೈಃ ನಾಟವ್ಯಾಂ ಶತ್ರುಸಂಘಾಕುಟವಿಟ ಪಕುಟೀ ಕೋಟರ
೧೭. ಧ್ವಾನಭೀತಾಂ ॥ ಯೋಷಿದ್ರತ್ನಮದಭ್ರವಿಭ್ರಮ ಪದಂವಿಭ್ರತ್ಯ ಸಾರಾ
೧೮. ನ್ಗುಣಾನ್ ತಸ್ಯಾಸೀತ್ಕಿಳ ಭಿಜ್ಜಳೇತಿ ಮಹಿಷೀ ವಿಶ್ವಂಭರಾ
೧೯. ಭೂಷಣಂ । ಯಸ್ಯಾಶ್ಚಾರುಪದಾರವಿಂದನ ಖರ ಪ್ರೋದ್ಯದ್ಯುಂತೇರಂ ಬಳೇ

## ಎರಡನೇ ಪಟದ ಹಿಂಭಾಗ

೧. ಖುಲಾದ ವತಾಂ । ವತ್ಸಾವಾಪ್ತತಿ ಕೀಚಾಹ್ಯ ನಿಥಂ ಮುಮಿಮುಪಾವಿಶಾ
೨. ತ್ ॥ ಶಾಟೋಪಸರ್ವಮುರ್ವಾತಲಮಪಿತರಪ್ವಾಕಂ ಪದ್ಯನಾತ್ರಕೋಪೋ
೩. ದ್ವೀಪೀನಿರ್ಯ್ಯಾಂತ್‌ಸ್ಫುಲಿಂಗೋ... ಸ್ವಯನ... ತಲಾಲಂಬಿ
೪. ವಾಲಃ । ಪ್ರಥ್ವಸ್ತಾತ್ಶೋಷತಿರ್ಯ್ಯಕ್ಕುತ್ತರನಶ್ವರಮುಖ್ಯೊದ್ದಾಮಕುದ್ದ
೫. ಳಜಾಣೋರಾಯಾತಸಜಾತೆವೀರ್ಯಸ್ತವಭಿಮುಖಮಥೋಧ್ಯಾ
೬. ಸ್ಯಸ್ತದಾಂನಿ ॥ ಕರ್ಣಾಟ ಭಾಷಾಯಾತೇನ ಹೊಯ್ಸಳೇತಿ ಪ್ರಚೋದಿತಃ
೭. ಜಘಾನ ದ್ವೀಪಿನಂ ವೇಗಾತ್ತದ್ವಿತೀರ್ಣ್ಣ ಶಲಾಕಯಾ ॥ ದಿವಂ ಯಾತ
೮. ಸ್ತಥೋ ದ್ವೀಪಿ ಕೋಪಾದುನ್ಮೀಳಿತೇಕ್ಷಣಃ । ತದನ್ವವಾಯ ಜಾತಾನಾಂ
೯. ರಾಜ್ಞಾಂಯತಃ ಪತಕತಾಂ ॥ ಹೊಯ್ಸಳತ್ವಂ ತತೋಯಾತಾಜ್ಞಾತಾಸ್ತದ್ವಂಶ
೧೦. ಪದ್ದತೌ ॥ ಯತುನೇವಗುಣಾದ್ಯೇನ ಯಾದವತ್ವಂ ಯಥಾ ಪ್ರರಾ ॥ ತಸ್ಮಾದ್
೧೧. ಪೀಡಯನ್ನುರ್ವಿರ್ಮಾದಿತ್ಯೋ ವಿನಯಾನ್ವಿತಃ । ಕರೈರಜನಿರಾಜೇಂ
೧೨. ದ್ರೋ ಜಗತ್ಪಂಕಜ ಭೋದಕಃ ॥ ತತಃ ಪ್ರೋತ್ತುಂಗ ಮಾತಂಗಮದಪಿ
೧೩. ಕ್ತ ಮಹೀತಳಃ । ರಣರಂಗ ಜಯೀಶ್ರೀಮಾನೆರೆಯಂಗೋಭವನ್ನೃಪಃ ॥ ತ
೧೪. ತತಃ ಪುಷ್ಣಃ ನಿಮಾಮುರ್ವ್ವಿಂ ವಿಷ್ಣುಃ ಸ್ವಯಮಭೂತ್ಕಿಳ । ಜಿಷ್ಣೋರಖಂಡವೀ
೧೫. ರ್ಯ್ಯಸ್ಯಮುಷ್ಣಂಶ್ಚರಿತಮೋಜಸಾ । ಕರಾಳಕರವಾಳಾಗ್ರಕಿಂಕ
೧೬. ರೀಕೃತ ಶಾತ್ರವಃ । ನಾರಸಿಂಹೋಭವತ್ತಸ್ಮಾತ್ಪೂರಿತಾರ್ಥಿ ಮನೋರ
೧೭. ಥಃ ॥ ಸವದ್ಯಾಯಿತ್ವಿಷತಾಂಯದೀಯಕಷಸ್ಯಾಕಲ್ವೇಜ್ವರೋಳಾಯತೇಯ
೧೮. ಸ್ಯಾ . . . ನಾಸ್ಮರಂತಿನಿತರಾನಾದ್ಯಾಪಿಚಿಂತಾಮಣೇ ॥
೧೯. . . .ದ್ಯಾಪಿಯ ಸರಿತಾಸಾರ್ದ್ವಾಗುಣೋಃ ಕುದ್ವೀ
೨೦. ತೋ ಬಲ್ಲಾಳೋ ಗಿರಿದುರ್ಗಮಲ್ಲ ಇತಿ ವಿಖ್ಯಾತೋಭವತ

## ಮೂರನೇ ಪಟದ ಮುಂಭಾಗ

೧. ಪ್ರಭಾ ಭಾಸಿತ ನಿಖಿಳ ಜಳಧಿವಳಯ ಗೋತ್ರಃ ॥ ನಾನಾಸಾಮಂತ
೨. ಸಾಮಂತ ಚಕ್ರಚೂಡಾಮಣಿ ಗಣ ಕಿರಣ ಚಯ ನೀರಾಜಿತಾಂ
೩. ಘ್ರಿಯುಗಳಃ ॥ ಶ್ರೀಮಂನಾರಸಿಂಹೋಮಹೀಪಾಲಃ ಸ್ವಕೀಯ ಹೊಯ್ಸ
೪. ಳಮಂಡಳೇ ನಿಖಿಳ ಲಕ್ಷ್ಮೀನಿವಾಸಾಶ್ರಯಾಂ ಸ್ವಜನಕ ಪ್ರೇಮ
೫. ಪ್ರತಿಷ್ಠಾಪಿತ ಪ್ರಾಜ್ಯರಾಜ್ಯ ಸಂಪದಂ ದೋರಸಮುದ್ರಾಖ್ಯಾಂ ನಿಜ
೬. ರಾಜಧಾನೀಮಧಿವಸೆನ್ ॥ * ॥ ಶಕವರ್ಷಸ್ಯೇಕಾಧಿಕ
೭. ಸಾಶೀತಿಶತೋತ್ತರ ಸಹಸ್ರ ಸಮಸ್ಯಕಾಳಯುಕ್ತಸಂವ
೮. ತ್ಸರಸ್ಯ ಶ್ರಾವಣ ಮಾಸಸ್ಯ ಭೌಮವಾಸರ ತೃತೀಯತೇ ಯುಕ್ತಾಯಾಂ
೯. ಕೃಷ್ಣ ಪಕ್ಷ ಚತುರ್ದಶ್ಯಾ ವಿಧೀಯ ಮಾನಗಾಂ ಭೂಮಿ ಹಿರಣ್ಯಾದಿ
೧೦. ನಾನಾದಾನ ಪ್ರವೃತ್ತಿ ಪ್ರಸಂಗಾತು ಕಲುಕುಣಿ ವಿಷಯಾಂತರ್ಗ
೧೧. ತಸ್ಯೇ ಉದ್ಭವ ವಿಶ್ವನಾಥ ಪುರಾಭಿದಾನಸ್ಯ ಷಡ್ವಿಂಶತಿವೃತ್ತಿ

೧೨. ಪರಿಕಲ್ಪನಯಾಂಸ್ವತಸ್ಯ ಬಾಳುಗಚ್ಚುನಾಮ್ನೋ ಗ್ರಾಮಸ್ಯ ಪೂ
೧೩. ರ್ಬ ವೃತ್ತಿಮತಾಮಭ್ಯುಪಗತ್ಯ । ತತ್ತೇವ ವೃತ್ತಿ ಚತುಷ್ಟಯಮಾ
೧೪. ಪ್ಯ ಬಾಳಗಚ್ಚು ನಾಮಾನಂತಗ್ರಾಮ ತ್ರಿಂಶದ್ರಾಗಮರಿಕಸ್ಯ
೧೫. ನಯಾವಿಭ್ಯಾದ್ಯ ಬೋಕ್ತ ಕಲುಕುಣಿ ವಿಷಯಾಂತರ್ಗತಾಸ್ವ ಪಕೀಬೇ
೧೬. ಸಹಿತಾನಾನಲ ಕೇರೀಯಾಖ್ಯಾ ಪ್ರಸಿದ್ಧ ಸೀಮಾ ಸಮನ್ವಿತಂ
೧೭. ತಾ ಬಾಳುಗಚ್ಚು ನಾಮ್ನೋ ಗ್ರಾಮಸ್ಯಶೋಷತ್ವೇನ ಪರಿಕಲ್ಪಾಯತ್ವೇ
೧೮. ಗ್ಯಜುಃ ಸಾಮಾಥರ್ವ್ವವೇದ ವೇದಾಂಗ ವೇಧಿಭ್ಯತರ್ಕ ತಂತ್ರೇತಿಹಾ
೧೯. ಸ ಪುರಾಣ ಕಾವ್ಯ ನಾಟಕಾದಿ ಸಕಳ ವಿದ್ಯಾವಿಶಾರದೇ
೨೦. ಬ್ಯೋ ನಾನಾಗೋತ್ರೇಭ್ಯಃ ಶಾಕಾಪರಿಣಿತೇ ಭ್ಯೋ

**ಮೂರನೇ ಪಟದ ಹಿಂಭಾಗ**

೧. ಚಳೋ ವೇಣೋ ಸಂಚರಿತಿ ಕ್ಷಿತೀಶ ವನಿತಾನತಾದನ್ಯತ್ವ ಮೀ
೨. ಯುಸ್ತರಾಂ । ಸಾಪಾರವಾರ ನಾರೀ ಸತ್ತಾರ ಕಾನಿಕರಾವೃತಾ ।
೩. ಕೀರ್ತಿ ಚಂದ್ರಿಕಯೋಪೇತಾ ಚಂದ್ರ ಲೇಖೇರವಪಾವಬೌ ॥ ಯದ್ಧಾನಂ
೪. ಸುರಭೂರುಹಂ ತಿರಯತೇಯಚ್ಛ್ರೀಃ ಸುರಾಧೀಶ್ವರಂ ಯತ್ಕೀರ್ತಿಃ
೫. ನಿಮ್ನಗಾಂ ಸುರಗುರುಂ ಯದ್ವುದ್ಧಿರಿದ್ಧಾಕಿಲ । ಯಚ್ಚೌಯಂ ವೃಷವಾ
೬. ಹ ಭಾನನಯನ ಪ್ರೋದ್ದಸ್ತಕರಾಳಾನಲಂ । ಸೋಯಂ ಸರ್ವಗುಣಾಶ್ರ
೭ ಯಃ ಸಮಭವತ್ತಸ್ಯಾಂ ನೃಸಿಂಹೋನ್ನೃಪಃ । ಆಜಿಕ್ರೀಡಾನಿ ಹಿ
೮. ತ ಹೃದಯೇ ಯತ್ರ ಶತ್ರು ಪ್ರವೀರೈಸ್ಸಾಕಂ ಲೋಕತ್ರಯಜಯಪಟೌ
೯. ನಾರಸಿಂಹಕ್ಷಿತೀಶೋ ಸ್ವರ್ಗಾಣಿಕ್ಯಂ ತದಭಿಮುಖ ಸಂಪ್ರಸ್ಥಿತ
೧೦. ಕ್ಷಾ ಪತೀನಾಂ ಸಂಗಾಯಾ ಭೂದತ್ತು ವಿಳಸಂನ್ಮಂಡನ ಮನ್ಮಥಾರ್ತಂ ॥
೧೧. ಭೇದಂ ಭೇದಂ ಕರಿವರ ಘಟಾಂ [ಶ]ತ್ರು ಸೈನ್ಯಸ್ಯವೀರಃ ಖಂಡಖಂಡಂಯುಧಿ
೧೨. ಹಯಗಣಾನ್ಯಾದಿನೋ ಯಶ್ಚಬಾಲ್ಯೇ । ಭಂಗಂ ಭಂಗಂ ಪೃಥುರಥಚಯಾ
೧೩. ನ್ವಿರ ಯೋಧಾಧಿರೂಡಾನ್ ಚ್ಛೇದಂ ಚ್ಛೇದಂ ನರವರ ಶಿರಾಂ ಸ್ಯೇಷ
೧೪. ಕೇಳಿಂ ಕರೋತಿ ॥ ಯಸ್ಸಿತಾನಿಲ ಘಾತಾನಿಹ ತಾರಾತಿಸಂ
೧೫. ತತಿಃ । ನಾರಸಿಂಹಕ್ಷತೀಶೋದಾದರ್ಥಿನಾಮರ್ಥಿತಂ ಮದಾ ॥ ನಾ
೧೬. ರಸಿಂಹ ಮಹೀಪಾಲಃ ಪಾಲಯಂನಖಿಳಾಂ ಮಹೀಂ । ಜಯತ್ಯಸೌರಿಪ್ರ
೧೭. ಸ್ತೋಮಕರಿಕಂಠೀರವಾಕೃತಿ ॥ * ॥ ಸೋಯಂ ಸಮಸ್ತ ಪ್ರಶ
೧೮. ಸ್ತಿ ವಿಸ್ತಾರ ವಿಷಯೀ ಭೂತ ವಿಮಳ ತರ ಚಿವಿತ್ರ ಚರಿತ್ರಃ ॥
೧೯. ರಿಪುನರಪತಿ ತಿಮಿರ ಹರಣ ದಕ್ಷ ಪ್ರಚಂಡ ತರಪ್ರತಾಪ

**ನಾಲ್ಕನೇ ಪಟದ ಮುಂಭಾಗ**

೧. ಶಿತ್ಯತೀಪಾತ । ಮಂಗಳವಾರದಲ್ಲು ಕಲುಕಣಿ ನಾಡೊಳಗಣ
೨. ಉದ್ಭವ ವಿಶ್ವನಾಥಪುರವಾದ ಬಾಳುಗಚ್ಚಿನ ಪ್ರಥಮಧಾರೆಯ
೩. ಇಪ್ಪತ್ತಾರು ವೃತ್ತಿಯ ಮಹಾಜನಗಳ ಒಡಂಬಡಿಕೆಯಲು ।

೪. ನಾಲ್ಕು ವೃತ್ತಿಯ ಹೆಚ್ಚಿಸಿ ಮುವತ್ತು ವೃತ್ತಿಯಾಗಿಮಾಡಿ ಆ
೫. ಬಾಳುಗಚ್ಚಿಗೊಳ ಕಲುಕುಣಿನಾಡೊಳಗಣ ತಂನ ಕಾಲು
೬. ವಲ್ಲಿಗಳು ಸಹಿತ ವಹ ಪ್ರಸಿದ್ಧ ಸೀಮಾ ಸಮನ್ವಿತ ವಹ ನಾನಾ
೭. ಲ ಕೇರಿಯನ್ನು ಕಾಲುವೆಲ್ಲಿಯಾಗಿ ಮಾಡಿದ ತಂನ ಹಳ್ಳಿಗಳು
೮. ಸಹಿತನಾನಲ ಕೇರಿಯ ಮೊದಲ ಗದ್ಯಾಣ ೧೬ ಪಣ ೪ ವಟ್ಟ
೯. ಪ ೪ ಸಾದ ಪ ೮ । ಪಣಂ ವೇರಡರಿತೇ ॥ ಸಾಮಾನ್ಯಬಲ್ಲ ಹಗ
೧೦. ೧ ಪ ೭ ॥ ಕುಮಾರ ಪಣ ೮ ॥ ನಿಬಂಧ ಪಣ ೮ । ಶ್ರೀಕರಣ ಪ
೧೧. ೬ ಸುಂಕ ಗ ೩ ಪಣ ೨ ॥ ಪಂನಾಯ ಪ ೫ ॥ ಅಡಕೆ ಸಾವಿರ
೧೨. ೫೦ಕ್ಕಂ ಗ ೨ ಪ ೫_ರ್ಪಸೇಸೆ ಗ ೩ ಪ ೮ ಕಂಡಿಕೆವ
೧೩. ಣ ಪ ೩ ನು ವತ್ತ ಗ ೫ ಪ ೨ ವೀರಸೇಸೆ ಗ ೩ ರ್ಪ । ಆನೆಯ
೧೪. ಸೇಸೆ ಗ ೮ ಪ ೬ । ನಲ್ಲಾವು ನಲ್ಲೇತ್ತು ಗ ೪ ಪ ೧ ಖಾಣ ನಿಬ
೧೫. ಂಧ ಪ ೩ ॥ ಕಳುಕಾಯ ಹಾ ॥ ೬ ತೊಡರು ಗ ೩ ಕುದುರೆಯ ಸೇ
೧೬. ಸೆ ಗ ೧೧ ಪ ೬ । ಕುಮಾರ ಗಾಣಿಕೆ ಪ ೪ ವಿಜೇಯ ವೀ
೧೭. ರವಣ ಪ ೩ ಕೊಡತಿವಣ ಪ ೧ ಖಾಣ ಸಲಗೆ ೮ ಕೊ ೩ ಕ್ಕಂ
೧೮. ಗ ೬ ಭತ್ತ ಸಲಗೆ ೪ ಕೊ ೧ ಕ್ಕಂ ಪ ೬ ॥ ಎಳ್ಳು ಸಲಗೆ ೨
೧೯. ಕೋ ೧ ಕ್ಕಂ ಪ ೬ ॥ ಜೋಳಕಾರುಣಾ ಕಾಣದು ಪೋತ್ತರಯ
೨೦. ೮ । ಪತ್ತಿನು ಪೋತ್ತರ ಪ ೨ ॥ ವ್ರಿಹಿಯ ಭಂಡಿಗೆ ೧ ಆ – ಗಮಾ

**ನಾಲ್ಕನೇ ಪಟದ ಹಿಂಭಾಗ**

೧. ಬ್ರಾಹ್ಮಣೇಭ್ಯಃ । ಸ್ವನಗರಾಳ ಕಾರಭೂತಾದಿ ಶ್ರೀ ಕೂರ್ಮ
೨. ನಾಥಭ್ಯಂ ನಿರ್ಮ್ಮೆಮೇಭ್ಯಾಪ್ಪ ಭೋಗ ತೇಜ ಸ್ವಾಮ್ಯ ಯಾನತಂ
೩. ಗ್ರಾಮಂ ಧಾರಾ ಪೂರ್ವಕಂ ಪ್ರಧಾನ
೪. ಕರ್ಣಾಟ ಭಾಷೆಯಾ ಸ ಪ್ರಪಂಚ : ಪ್ರಕಟೀಕೃಯತೇ ॥
೫. ಸ್ವಸ್ತೀ ಸಮಸ್ತ ಭುವನಾಶ್ರಯಂ ಸಕಲ ವಿಭುದ ಜನ ಸಂಸ್ತೂ
೬. ಯಮಾನಗುಣಗಣಾಶ್ರಯಂ ಶ್ರೀ ಪ್ರುಥ್ವೀವಲ್ಲಭಂ ಭಯ ಲೋಭ
೭. ದುರ್ಲಭಂ ಮಹಾರಾಜಾಧಿರಾಜ ಪರಮೇಶ್ವರಂ ದ್ವಾರಾವತೀ ।
೮. ಪುರವರಾಧೀಶ್ವರಂ ಯಾದವ ಕುಲಾಂಭರದ್ಯುಮಣಿ ಸರ್ವಜ್ಞ
೯. ಚೂಡಾಮಣಿ ಮಲೆ ರಾಜ ರಾಜ ನಿಜಪ್ರತಾಪ ವಿರಾಜಮಾನತೇ
೧೦. ಜ ಮಲಪರೊಳುಗಂಡ ಗಂಡ ಬೇರುಂಡ ಕದನ ಪ್ರಚಂಡ ರಿಪುತಿ
೧೧. ಮಿರ ಮಾರ್ತಾಂಡನೇಕಾಂಗ ವೀರ ರಣರಂಗಧೀರ ಶನಿವಾರ ಸಿದ್ಧಿ
೧೨. ಸುರಮಂತ್ರಿಬುದ್ಧಿ ಗಿರಿದುರ್ಗಮಲ್ಲಿಪು ಹೃದಯಸೆಲ್ಲ
೧೩. ಚಲದಂಕರಾಮ ಸಂಗ್ರಾಮಭೀಮ ವೈರೀಭಕಂಠೀರವಂ ಕೃಪಾ
೧೪. ಕೌಮುದಿ ವಿಕಾಸಿತ ಯುದುಕುಳ ಕೈರವ ಮಗರ ರಾಜ್ಯ
೧೫. ನಿರ್ಮೂಲನ ಚೋಳರಾಜ ಪ್ರತಿಷ್ಠಾಚಾರ್ಯ ಪಾಂಡ್ಯರಾಜ ಸ

೧೬. ಮುದ್ಧರಣ ನಿಸ್ಸಂಕ ಪ್ರತಾಪ ಚಕ್ರವರ್ತಿ । ಹೊಯ್ಸಳ ವೀರ
೧೭. ನಾರಸಿಂಹ ದೇವರಸರು ಸಕವರ್ಷದ ೧೧೮೧ನೆಯ ಕಾ
೧೮. ಳಯುಕ್ತಿ ಸಂವತ್ಸರದ ಶ್ರಾವಣ ಬಹುಳ ಕೃಷ್ಣಾಂಗಾರಕ ಚತುರ್ಥ

**ಐದನೇ ಪಟದ ಮುಂಭಾಗ**

೧. ಣ ಎಂಬತ್ತನು ಎಂದೆಂದಿಗೂ ಸರ್ವ ನಮಸ್ಯವಾಗಿ ಧಾರಾ
೨. ಪೂರ್ಭಕ ಮಾಡಿ ಕೊಟ್ಟರು ॥ * ॥ ಧರ್ಮಸುಸ್ಥಿರತಾಂ ಯಾ
೩. ತು ನಾರಸಿಂಹ ಮಹೀಪತೇಃ ॥ ಯಾವದ್ಧರಾ ಧರಾಧಾರಾ ಯಾ
೪. ವಚ್ಛಂದ್ರ ದಿವಾಕರೌ ॥ ಸಾಮಾನ್ಯೋಯಂ ಧರ್ಮಸೇತುಂ
೫. ನೃಪಾಣಾಂ ಕಾಲೇ ಕಾಲೇ ಪಾಲನೀಯೋಭವದ್ಭಿಃ ॥ ಸರ್ವಾನೇ
೬. ತಾನ್ಭಾವಿನಃ ಪಾರ್ಥಿವೇಂದ್ರಾನ್ ಭೂಯೋ ಭೂಯೋ ಯಾಚತೇರಾಮ
೭. ಚಂದ್ರ ॥ ದಾನಂ ಪಾಲನಂ ವಾಪಿ ದಾನಾಚ್ಛ್ರೇಯೋನು ಪಾಲನಂ । ದಾ
೮. ನಾತ್ಸ್ವರ್ಗ ಮವಾಪ್ನೋತಿ ಪಾಲನಾದಚ್ಚುತಂ ಪದಮ್ । ಅಕರ
೯. ಸ್ಯ ಕರಾಧಾನಂ ಗೋಕೋಟೀವಧ ಉಚ್ಯತೇ । ಸಕರಸ್ಯ ಕರ
೧೦. ಚ್ಛೇದೀ ಪ್ರಾಪ್ನೋತಿ ಪರಮಂ ಪದಂ ॥ ಸ್ವದತ್ತಂ ಪರದತ್ತಾಂ ವಾಯೋಹ
೧೧. ರೇತಿ ವಸುಂಧರಾ । ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ
೧೨. ಕ್ರಿಮಿಃ * ಮಂಗಲ ಮಹಾ ಶ್ರೀ ಶ್ರೀ ಶ್ರೀ *
ಶ್ರೀ ವೀರನಾರಸಿಂಹದೇವಸ್ಯ



**ಹೊಯ್ಸಳ ಲಾಂಛನ**




# ಡಿ. ಹಿರೇಹಾಳ ಗ್ರಾಮದಲ್ಲಿ ದೊರೆತ ವಿಜಯನಗರ ಕಾಲದ ಅಪ್ರಕಟಿತ ತಾಮ್ರಶಾಸನ

**ವಿರೂಪಾಕ್ಷಿ.ಎನ್.ಬಿ.***

**ಡಿ.** ಹಿರೇಹಾಳ ಗ್ರಾಮವು ಬೀದರ್–ಶ್ರೀರಣಗಪಟ್ಟಣ ೧೫೦ಎ ರಾಷ್ಟ್ರೀಯ ಹೆದ್ದಾರಿಯಲ್ಲಿದ್ದು, ಬಳ್ಳಾರಿ ಮತ್ತು ರಾಂಪುರಗಳ ಮಧ್ಯೆ ಬರುತ್ತದೆ. ಆಂಧ್ರಪ್ರದೇಶದ ಅನಂತಪುರಂ ಜಿಲ್ಲೆಯ ೬೩ ಮಂಡಲಗಳಲ್ಲಿ ಒಂದಾದ ಈ ಗ್ರಾಮವು ಭಾಷಾವಾರು ಪ್ರಾಂತ್ಯಗಳಾಗಿ ಭಾರತ ವಿಂಗಡನೆಯಾಗುವ ಪೂರ್ವದಲ್ಲಿ ಕರ್ನಾಟಕದ ಅಂದರೆ ಅಂದಿನ ಮೈಸೂರು ರಾಜ್ಯಕ್ಕೆ ಸೇರಿದ್ದ ಪ್ರದೇಶಗಳಲ್ಲಿ ಪ್ರಮುಖ ಪಟ್ಟಣವಾಗಿತ್ತು. ಹಾಗಾಗಿ ಇಂದಿಗೂ ಅಲ್ಲಿ ಕನ್ನಡ ಭಾಷೆ, ಸಂಸ್ಕೃತಿಯು ಜೀವಂತವಾಗಿದೆ. ಪ್ರಾಚೀನ ಹರಿಹರಪುರ ಎಂದು ಕರೆಯಿಸಿಕೊಳ್ಳುತ್ತಿದ್ದ ಹಿರೇಹಾಳು ಗ್ರಾಮದ ಹೆಸರಿನ ಮುಂದೆ 'ಡಿ' ಹೇಗೆ ಸೇರಿಕೊಂಡಿತು ಎಂಬುದರ ಬಗ್ಗೆ ಸ್ಥಳೀಯರು ಹೇಳುವಂತೆ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟ ಬಳ್ಳಾರಿಗೆ ಬರುತ್ತಿದ್ದ ಇಂಗ್ಲೀಷರ ಸೈನ್ಯ ರಾತ್ರಿ ಈ ಗ್ರಾಮದಲ್ಲಿಯೇ ಬಿಡಾರ ಬಿಡುತ್ತಿತ್ತು. ಅದರಿಂದಾಗಿಯೇ ಇದಕ್ಕೆ ದಂಡಿನ ಹಿರೇಹಾಳ ಎಂದು ಹೆಸರಾಗಿದೆ. ಅದೇ ಇಂದು ಡಿ ಹಿರೇಹಾಳ ಎಂದು ಪ್ರಚಲಿತದಲ್ಲಿದೆ.

ಈ ಗ್ರಾಮದಲ್ಲಿನ ಕುರುಬರ ಈರಾಳಪ್ಪ ದೇವರ ಗುಡಿಯಲ್ಲಿದ್ದ ಈ ತಾಮ್ರಶಾಸನವನ್ನು ಕ್ಷೇತ್ರಕಾರ್ಯಕ್ಕೆ ಹೋಗಿದ್ದ ಸಂದರ್ಭದಲ್ಲಿ ಶಿಕ್ಷಕರಾದ ಈರಾಳಪ್ಪ ಅವರಿಂದ ಪಡೆದು ಪ್ರತಿ ಮಾಡಿಕೊಂಡಿದ್ದೇನೆ. ಇದು ವಿಜಯನಗರವನ್ನು ಆಳ್ವಿಕೆ ಮಾಡುತ್ತಿದ್ದ ಸಮಯದಲ್ಲಿ ಬುಕ್ಕರಾಯನು ಕುರುಬ ಸಮುದಾಯದ ಯಲ್ಲನಗೌಡನಗೆ ಗೌಡಿಕೆಯನ್ನು ನೀಡಿದ ವಿವರವನ್ನು ಒಳಗೊಂಡಿದೆ.

ಈ ಶಾಸನವನ್ನು ತಾಮ್ರದ ತಗಡಿನ ಎರಡೂ ಕಡೆಯಲ್ಲು ಬರೆಯಲಾಗಿದ್ದು, ೧೪ ಅಂಗುಲ ಉದ್ದ, ೮ ಅಂಗುಲ ಅಗಲವಾಗಿದೆ. ಮೇಲ್ಭಾಗದ ಎಡಭಾಗದಲ್ಲಿ ಚಂದ್ರ ಮತ್ತು ಶಿವಲಿಂಗವನ್ನು, ಬಲಭಾಗದಲ್ಲಿ ನಂದಿ, ಸೂರ್ಯನನ್ನು ಚಿತ್ರಿಸಿದ್ದು, ಮಧ್ಯದಲ್ಲಿ ಶ್ರೀ ವಿರೂಪಾಕ್ಷ ಎಂದು ಬರೆಯಲಾಗಿದೆ. ಮುಮ್ಮಖದಲ್ಲಿ ೩೫ ಸಾಲುಗಳು, ಹಿಮ್ಮುಖವಾಗಿ ೩೦ ಸಾಲುಗಳನ್ನು ಹೊಂದಿದೆ. ಕನ್ನಡ ಮತು ತೆಲುಗು ಲಿಪಿಯನ್ನು ಒಳಗೊಂಡ ಈ ಶಾಸನವು ತೆಲುಗು ಭಾಷೆಯಲ್ಲಿದೆ. ಬರೆವಣಿಗೆಯನ್ನು ಗಮನಿಸಿದರೆ ವಿಜಯನಗರೋತ್ತರ ಕಾಲದ್ದೆಂದು ಖಚಿತವಾಗಿ ಹೇಳಬಹುದು. ಅಕ್ಷರಗಳು ಒತ್ತೊತ್ತಾಗಿರುವುದರಿಂದ ಓದುವುದಕ್ಕೆ ಕಠಿಣವೆನಿಸುತ್ತವೆ. ಮೊದಲೆ ಹೇಳಿರುವಂತೆ ಇದು ವಿಜಯನಗರ ಕಾಲದಲ್ಲಿ ಬುಕ್ಕರಾಯನು ಯಲ್ಲನಗೌಡನಿಗೆ ಗೌಡಿಕೆಯನ್ನು ನೀಡಿದ ಮಾಹಿತಿಯನ್ನು ಒಳಗೊಂಡ ಸಂಗತಿಯನ್ನು ಈ ಶಾಸನ ತಿಳಿಸುತ್ತದೆ.

**ಮುಮ್ಮುಖದ ಶಾಸನ ಪಠ್ಯ**

**ಶ್ರೀ ವಿರೂಪಾಕ್ಷ**

೧. ಸ್ವಸ್ತಿಶ್ರೀ ವಿಜಯಾಭ್ಯೂ(ದ)ಯ ಶಾಲಿವಾಹನ ಶಕ ವರ್ಷಂಬುಲು ೧೧೧೯ ಆಗು

೨. ನ ಪೆಜಯ ನಾಯಸಂ। ಆಶ್ವೀಜ ಶು(ದ್ಧ) ೧೦ ಲು ಶ್ರೀ ಮದ್ರಾಜಾಧಿರಾಜ ರಾಜೇ

೩. ಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವಿಜಯ ಬುಕ್ಕರಾಯ ಮಹಾರಾಯಲ ವಾ

೪. ರು ಪೃಥ್ವಿ ಸಾಮ್ರಾಜ್ಯಮಲು ಚುಂಡಗಾನು ಸಗರ ಸೀಮನುಂಚಿ ಬಂಡ್ಲತೆ

೫. ವಚ್ಚಿನ ಕುರುಬ ಮಲ್ಲೆ. ವುಜಿ ಕೋಮಲ್ಲು ದಮಗೊಂಡ ಕರೆಗೊಂಡ ಬುಳ್ಳಗೊಂಡ ಕತ

೬ ಗೊಂಡ ತಂಮಗೊಂಡಡು ಯಿ ಅಯಿದುಗುರು ವ(ವಾ)ರು ತಲ್ಲಿ ಆಮಾಲ್ಲು ಶಿಂಡಲಗೋ

೭ ತ್ರಂ ಮೂಡುಮಂದಲ ಬೀರಯ್ಯ ಕೊಮಲ್ಲು ಲಕ್ಕನಗೌಡು ಲಿಂಗನಗೌಡು ಕರ್ರನಗೌ

೮. ಡು ಯಿ(ಲ) ವಚ್ಚಿನ ಬಂಡ್ಲಕು ಪೆದ್ದಗುಬ್ಬಿಲಗೋತ್ರಂ ಯಲ್ಲನಗೌ(ಡಾ)ಣಿಕಿ ರ್‍ರಾಯಿಂಚಿ ಯಿ

* S/o ಬೋಸಯ್ಯ, ಸಂಶೋಧನ ವಿದ್ಯಾರ್ಥಿ, ಹಸ್ತಪ್ರತಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬.

೯. ಚ್ಚಿನ ದಾನಪತ್ರಂ ವುತ್ತ್ಥರಾದಿ ರಾಷ್ಟ್ರಂನುಂಚಿ ವಚ್ಚಿ ಬೋಳ ಬಂಡನ ಕೊಪ್ಪಾಲು ವೆಸು

೧೦. ಕೊನಿ ವುಂಡಗಾ ನಲಬೋತುಲ ಭೂಪತಿರಾಜು ಕೊಮಾಳ್ಳು ದಾಸಳನಾ

೧೧. ಯಡು ಜೋಗಿನಾಯಡು ಅಂನ(ನ್ನ) ಚಂನ(ನ್ನ)ಮ ನಾಯಡು ವೊಬುಳನಾಯ

೧೨. ಡು ಯಿ ನಲ್ಗುರುಯೆ ಸೋದರಲ್ಲು ಭೂಪತಿರಾಜು ತನ ಪೇರು ಚೆಪ್ಪಿ ಕಟ್ಟಿ

೧೩. ಚಿನದಿ ಸಿದ್ಧಾಪುರಂ ವಾರಿ ಶ(ಶ್ರ) ಲವು(ಪು)ನ ಬೀರನಗೌ(ಡ)ಣಿ ಕೊಡುಕು ಲಕ್ಕನಗೌಡು ಕ

೧೪. ಟ್ಟಂಚಿನ ವಿಹಾ(ಹೋ) ಸಾಗರಂ ಹರಿಹರಪುರಂ ಯಲ್ಲನಗೌಡು ಕಟ್ಟಂಚಿನದಿ ತಪಾ

೧೫. ಕಂ ಹರಿಹರಪುರಾನಕು ಪ್ರತಿನಾಮಂ ಹಿರಿಯಾಳು ಅನಿವ(ವಾ)ರು ಚೆಪ್ಪಿನಾ

೧೬. ಲುಗು ಗ್ರಾಮುಲ ಪ(ವ)ಣಿತಂ ಚೇಸಿ ಕಟ್ಟಂಚಿನವಾಡು ವೊಬಳನಾಯಡು ಯಿ

೧೭. ಗ್ರಾವಾಲಕು ಅಯ್ಯಾಂಡ್ಲಲಿ ಚರಂರೆಡ್ಡಿತನಂ ಮೂಡುಮಂದಲ ಬೀರಯ್ಯ ಕೊಡು

೧೮. ಕು ಲಕ್ಕನಗೌಡು ಕರಣೀಕಂ ಸಗರಂ ಸೀಮ ಕಂನಡಿ ದೆರಗುಳ್ಲ ದುಗ್ಗರಸಯ ಕೊಮಾರುಡು

೧೯. ಹರಿದಾಸು ಪ್ರಾ(ಪ್ರು)ರೋಹಿತಂ ನರಸಂಭಟ್ಲು। ತಂಮ ರತನಂ ಸಗರಸೀಮ ದುಗ್ಗೋಜಿ ಕೊಮಾರುಡು ದು

೨೦. ರುಗೋಜು। ವುಡ್ಲತನಂ ಮುಕುಂದ ದೊಡೋಜು ಕೊಡುಕು ಧರಣಪ್ಪ। ಸರಾ(ಸೊಂ)ಬು ನಾಗೋಜು ಕೊಮಾ

೨೧. ರುಡು ಲಿಂಗೋಜು। ತಲಾರಿಕಂ ಬಂಡ್ಲವೆಂಬಡವುಚಿನ ಚಿನ(ನ್ನ) ಮಾ(ಮಂ)ದಲ ಗೋತ್ರಂ ಕಾಮಿನಾಯನ ಕೊಡು

೨೨. ಕ್ಲು ಯರಕಾಮಿನಾಯಡು ವೊಬುಳನಾಯಡು। ಕುಂಮರತನಂ ಶಾಲಿವಾಹನ ಭದ್ರಶಪಿ

೨೩. ಬಾಕಲತನಂ ಸಗರಸೀಮ ಲಿಂಗವಂತಂ ಮುದಡು ಮಂಗಲತನಂ ಸಗರಸೀಮ ರೇವಂಣ(ಣ್ಣ) ಬಾರಿಕ

೨೪. ತನಂ ಲಕುಮೇಶ್ವರ ಪೆತ್ತಿಗಾಡು। ಚಕಾರಿತನಂ ಬಂಡ್ಲವೆಂಬಡಿವುಚಿನ ಯರ್ರಜಗಿಲಿಗಾನಿ ಕೊಡು

೨೫. ಕು ವೀರಚಂನಡು। ಯಿಂದು ಮಾಂನ್ಯಮೆರಮರ‍್ಯಾದಲ ದಿ(೯)ವರಂ। ರೆಡಿಮಾಂನ್ಯಂ ಗ್ರಾಮನ್ಕಿಧಷ್ಯ ಇಂದ್ರ

೨೬. ದ್ದಿ ಮಾನಿ ಚೇನು ।೧। ತೂರ್ಪುಂ ನಚವುಟಿ ಚೇನು।೧। ತವಂ(ಫ)ಕಂ ಕಿಂದ ಮಡಿ।೪। ಶಪುನ್ಯಲಯಾತಂ ।೧। ಕರ

೨೭. ಣಿಕ ಮಾಂನ್ಯಂ ದಕ್ಷಣಂ ರೆಗುಮಾನಿ ಚೇನು।೧। ವುತ್ತರಂ ನೆಲಬಂಡಚೇನು।೧। ತಪಾಕಂ ಕಿಂದ ಮಡಿ ಬ

೨೮. ಆರ್ಲಸಾನಿಯಾತಂ ।೧। ಪೌರೋಹಿತಾನಕು ಪಡಮಟಿನ ವೂಡಗಮಾನಿ ಚೇನು।೧। ವೆ(ವ)ರಾದಾಯಂ ಪೆ

೨೯. ರು ಮಾಳ್ಲಕು ತೂರ್ಪು ವರವಂಕ ಚೇನು।೧। ಯಿ(ಈ)ಶ್ವರನಿಕಿ ಆ ಚೇನಿಕಿ ಪರಮಟಿ ಪಲುವರಿ ಮಾನಿಚೇನು।೧।

೩೦. ಗವೀಶಿದ್ದಲಿಂಗಸ್ವಾಮಿಕಿ ತೂರ್ಪುನ ಜಂಬಿಮಾನಿಚೇನು।೧। ವಿದಿ(ರಿ)ಕಿ ಸಹಾ(ಮಾ) ದಾಯಂ ತಪಾಕಂ ಕಿಂದ ವುನ್ನ

೩೧. ಲಯಾತಂ।೧। ಮಟಿಕಾವು ಮಂದಾಲ ಮುದೆಗೊಂಡ ಶೆಪಿಕಿಮಾನ್ಯಂ ವುತ್ತರಂ ರೆಗಡಿಚೇನು ।೧। ತಪಾ

೩೨. ಕಂ ಕಿಂದ ಯಾತಂಮಡಿ।೨। ಕಂಮರ ಮಾಂನ್ಯಂ ಪರಮಟಿ ನೆಲಗುಂಟಿಚೇನು।೧। ವಡ್ಲಮಾನ್ಯಂ ಪರಮಟಿ

೩೩. ಬಿಲ್ಲಮಾನಿಚೇನು।೧। ಸರಾ(ಸೂಂ)ಬು ಮಾಂನ್ಯಂ ದಕ್ಷಿಣಂ ಪಲುವರಿ ಮಾನಿಚೇನು।೧। ತಲಾರಿ ಮಾನ್ಯಂ ದ

೩೪. ಕ್ಷಣಂ ಚಿದಿಟರಾಳ್ಲ ಗುಂಪಿಚೇನು।೧। ತಪಾಕಂಕಿಂದ ಮಡಿ।೧। ಕುಂಮರ ಮಾಂನ್ಯಂ ತಾಟಿ ಗುಂ

೩೫. ತಲ ಚೇನು।೧। ಚಾ(ಬಾ)ಕಲ ಮಾಂನ್ಯಂ ದಕ್ಷಣಂ ವಂಕಚೇನು।೧। ಮಂಗಲಮಾಂನ್ಯಂ ವುತ್ತರಂ ಪೋಡ

**ಹಿಮ್ಮುಖದ ಶಾಸನ ಪಾಠ**

೩೬. ಗುಂಟಚೇನು।೧। ಚಾ(ಬಾ)ರಿಕ ಮಾಂನ್ಯಂ ದಕ್ಷಣಂ ನಲಬಂಡ ಚೇನು।೧। ಚಕಾರಿ ಮಾಂನ್ಯಂ ಚಾರಿಕ

೩೭. ಮಾಂನ್ಯಾನಕು ತೂರ್ಪುಚೇನು।೧। ತಪಾಕಂ ಕಿಂದ ದಯಾತಂ।೧। ದೇವಾದಾಯ ಬ್ರಂಮ್ಹಾದಾಯ

೩೮. ೦ ಪಾಗಾನಲಿಚಿನ ಸಂಬ್ಯಪಾಲಂ ಮಕಿಚುರಾಂ ವರಹಾಲು. ೫೯೬ ಕಾಲುವ ಕುಂಟಲು ಕುಡುಳ್ಳು

೩೯. ನಿರುವರಿ ಪಾಲಂ ಸಹೋ(ಹಾ)ಗಾಸಖ ಬಾರಕಿ ಚೆರುವು ಕುಂಟ ರಾಳ್ಲುಕು ತೀಸಿವಸಿನದಿಖಾ ೫// ೪೫/

೪೦. ಪಾ(ಪೊ)ಗಾ ನಿಲುವಖ ೪೮।೦। ಕಿ ಸಿಲಾನಿರ್ನ್ಣಯಂ ಗ್ರಾಮಾನಕು ಪರಮಟ ಗುಪ್ಪಿಲಿ ಮದಿತಿ.

೪೧. ರೆ(ರ) ದೇವರದೇವ ಸ್ಥಳ ಮಂದು ಕ್ರಿಷ್ಣ ಶಿಲಕು ಶಾಸನಂ। ಅಕಡನುಂಚಿ ಹಾವಿನಮಡುಗು ಮುಗುಡ ಕ್ರಿ

೪೨. ಷ್ಣ ಸಿಲಕು ಶಾಸನಂ। ರಾನಿಕ ಮಟ ಗಂಗಾಲಪುರಾನಕು ಯಿ ಗ್ರಾಮಾನಕು ನಲದೊಕ ಬಂಡ

೪೩. ಕು ಮುದ್ರಿಕ। ದಾನಿಕಿ ದಕ್ಷಣಂ ಕಲಿಡಿ ಸುದ್ದಿಲಿ ಮರಿಡಿನ ಚಿದ್ಮಿರಾಳ್ಲು। ದಾನಿಕಿ ದಕ್ಷಣಂ ಕೊಣ

೪೪. ನ ಗುಂಡಿಕಿ ಮುದ್ರಿಕ ದಾನಿಕಿ ತೂರ್ಪುನ ಅಡ್ಡ ಮರಿಡಿನ ಯರ್ರಮ ಸಕರಾತಿಕಿ ಮುದ್ರಿಕ। ದಾನಿ

೪೫. ಕಿ ತೂರ್ಪುನ ಗುಂಗರಗಟ್ಲು ಮುರಿಡಿನ ಮುಖ್ಯ ಪ್ರಾಣನಾಧುನಿ ದೊನಕು ಮುದ್ರಿಕ। ದಾನಿಕಿ ತೂ

೪೬. ರ್ಪುನ ಬಾಳಬಂತನ ಮುದ್ರಿಕ। ದಾನಿ ವುತ್ತರಾನ ಕಾ(ರಾ)ವಲಿವಾಗುನ ಪಾತುರಾಯಿ। ದಾನಿಕಿ ವುತ್ತರಾನ

೪೭. ಬೆಲ್ಲವಂತನಿ ವಾಗುನ ಯೆಚು(ಮ)ನು ತೀ(ಲೇ)ಸಿನ ಲೊರನ ಗುಂಟಕಿ ಮುದ್ರಿಕಿ। ದಾನಿಕಿ ವುತ್ತರಾನ ಚಿದಿಟಿ(ಟ) ರಾ

೪೮. ಳ ಗುಂಟಕಿ ಮುದ್ರಿಕ। ದಾನಿಕಿ ಪರಮಟ ಸುಗ್ಗಿಲದೇವಿ ಕೊಂಡನ ಪಾರ್ಲು ಬಂಡಕು ಶಾಸನಂ। ದಾನಿಕಿ ಪ

೪೯. ರಮಟ ಗವೀಸಿದ್ದಲಿಂಗಸ್ವಾಮಿ ದೇವಸ್ಥಲ ಮಂದು ಶಿಲಕು ಮುದ್ರಿಕ। ದಾನಿಕಿ ದಕ್ಷಣಂ ಮಂನಲದೇವಿ

೫೦. ಕೊಂಡನ ಗುಂಟಿಕಿ ಮುದ್ರಿಕ। ದಾನಿ ದಕ್ಷಣಂ ಬೊ(ಚೊ)ಲು(ದು)ರಾಯಿ। ದಾನಕಿ ದಕ್ಷಣಂ ಗುದ್ದಿಲಿ ಮರಿಡಿ ಕ್ರಿಷ್ಣ

೫೧. ಸಿಲಕು ಚಾಲು ಚಾಲು ನಡುಚುನು। ಯೀ ದಿಜತುರ್ದಿಕ್ಕುಲ ನಿರ್ಣಯಂ। ಅವುಡು ನಲಬೋತುಲ

೫೨. ದಾಸಲ್ಲನಾಯುಡು ಜೋಗಿನಾಯುಡು ಅಂನ ಚಂನಮನಾಯಡು ವೊಬುಳನಾಯಡು ಯೀ ನಲು

೫೩. ಗುರು ಲಕ್ಕನಗೌಡು ಯಲ್ಲನಗೌಡು ವಿರಿ ಚಾತವುಲು ಫಾವುಡು ಗರಲು ಪಟ್ಟಂಚುಕ ಪಿಂಮ್ವಾ (ಮ್ಹಾ)

೫೪. ದ್ರಿ ನಾಯನಿ ದಗ್ಗರಿಕಿ ಪೋಯಿ ಅಕ್ಕಡನುಂಚಿ ವೀರಬುಕ್ಕರಾಯ ದೇವರು ಮರಾಯಲವಾರಿ ದ

೫೫. ಗ್ಗರಿಕಿ ಪೋಯಿ ಕಾನುಕವು ಪ(ಪೆ)ಂಚಿ ಸಮುಖಮಂದು ಮನವಿಚೇಯಗ ಚಿತ್ತಾನಕು ದೆಚ್ಚಿ ಅಪು

೫೬. ಡು ನಾಡಗವುಡಿ ಕಂನರ ನಾಗಗೌಡಿಕಂ ವೂರಗೌಡಿಕಂ ಯೀ ಮೂಡು ಸ್ಯಾ(ಸ್ವಾ)ನ್ತುಲು ದಯ

೫೭. ಚೇಸಿ ಗನ್ನು ಯಿಂದ್ಕು ಗ್ರಾಮಾಲ ನಿರ್ಣಯಂ। ಸಿದ್ದಾಪುರಂ ಹಿರಿಯಾಳು ಹಾಲಸಾಗ

೫೮. ರಂ ಲಿಂಗಂಪಲ್ಲೆ ಜಾಜಿಪುರಂ ಕನುಕುಪ್ಪಿ ವಿರದಾಳು ಅಲ್ಲುಕುಂದಿ ಪು(ವು)ಲುಕೂರ್ತಿ ಯೀ ತೊ

೫೯. ಂಮಿದಿ ಗ್ರಾಮಾಲು ಲಕ್ಕನಗೌಡು ಯಲ್ಲನಗೌಣಿಕಿ ವೀರು ಯಿದ(ದ್ದ)ರಿಕಿ ಯೀ ಸ್ವಾನ್ತುಲು ದಯಚೇ

೬೦. ಸಿ ದಾನಪತ್ರಂ ದ್ರಾಯಿಂಚಿ ಪತ್ರಪಾತ್ರ ಪಾರಂಪರ್ಯಂತರಂ ಆಚೆಂದ್ರಾರ್ಕ ಸ್ಥಾಯಿಗಾನು ಸು

೬೧. ಖಾ(ಬಾ)ನ ವುಂಡೇದಿ ಅನಿ ವ್ರಾಯಿಂಚಿ ಯಿಚ್ಚಿನ ದಾನಪತ್ರಂ ಯಿಂತ್ತೆ ಶ್ರೀ ವಿರೂಪಾಕ್ಷೇಶ್ವರುನಿ ಸಂನಿ

೬೨. ದಾನಮಂದು ಹೇಮಕೂಟ ಬ(ಂ)ಡಕು ಶಾಸನಂ। ತಪಾಕಂ ತೇರುವುನ ಸೋಮೇಶ್ವರುನ ದೇವಾಲಯ ಮ

೬೩. ಂದು ನಿಲುವುರಾತಿಕಿ ಶಾಸ(ನ)ಂ ವೇಯಿಂಚಿ ನಾಯನವಾರಿ ವಪಿತಂ ಆಯಗಾಂಡ್ಲ ವಪಿತಂ ವೇ(ಂ)ಯಿಂಚಿ

೬೪. ವ್ರಾಯಿಂಚಿ ಯಿಚ್ಚಿನ ದಾನಪತ್ರಂ ಸಹೀ॥ ಸ್ವದತ್ತಾ ದ್ವಿಗುಣಂ ಪುಣ್ಯಂ। ಪರದತ್ತಾನುಪಾಲನಂ। ಪಹ

೬೫. ರ ತ್ತಾಪಹರಣ। ಸ್ವರತ್ತಂ ನಿಷ್ಫಲಂ ಭವತು॥ ಇತೀ ಶಾಸನಮುಂ॥

**ಶಾಸನದ ವಿವರ**

ಶಾಸನವು ಸ್ವಸ್ತಿಶ್ರೀ ಶಲಿವಾಹನ ಶಕ ವರ್ಷಂಬುಲು ಎಂದು ಪ್ರಾರಂಭವಾಗಿ ಶ್ರೀ ಮದ್ರಾಜಾಧಿರಾಜರಾಜೇ ಪರಮೇಶ್ವರ, ಶ್ರೀ ವೀರಪ್ರತಾಪ, ಶ್ರೀ ವಿಜಯ, ಪೃಥ್ವಿಸಾಮ್ರಾಜ್ಯಾಧಿಪತಿ ಎಂಬ ಬಿರುದುಗಳಿಂದ ಬುಕ್ಕರಾಯ ನನ್ನು ಹೊಗಳಲಾಗಿದೆ. ನಂತರ ಸಗರ ಸೀಮೆಯಿಂದ ತಮ್ಮ ತಾಯಿಯೊಂದಿಗೆ ಐದು ಜನ ಕುರುಬ ಅಣ್ಣತಮ್ಮಂದಿರು ಈ ಪ್ರದೇಶಗಳತ್ತ ಬಂದವರೆಂದು ತಿಳಿಸುವುದರ ಜೊತೆಗೆ ಶಿಂಡಿಲ(ಸಿಂಧೂಲ)ದವರು, ಮೂರು ಮಂದೆಯವರು, ಪೆದ್ದ(ದೊಡ್ಡ) ಗುಬ್ಬಿಲದವರು ಎಂಬ ಅವರ ಕೆಲ ಗೋತ್ರ(ಬೆಡಗು)ಗಳ ವಿವರಣೆಯಿದೆ. ಹೀಗೆ ಬಂದು ಇಲ್ಲಿ ನೆಲೆಸಿದ ಇವರಿಗೆ ಬುಕ್ಕರಾಯನು ಹಿರಿಯಾಳು, ಸಿದ್ದಾಪುರಂ, ಹಾಲಸಾಗರಂ, ಲಿಂಗಂಪಲ್ಲಿ, ಜಾಜಿಪುರಂ, ಕನುಕುಪ್ಪಿ, ವಿರದಾಳು, ಅಲ್ಲುಕುಂದಿ, ಪೂಲುಕುರ್ತಿ ಹೀಗೆ ಒಟ್ಟು ಒಂಭತ್ತು ಗ್ರಾಮಗಳ ನಾಡಗೌಡಿಕೆ, ಊರಗೌಡಿಕೆ, ಭೂಗೌಡಿಕೆಯನ್ನು ಕೊಟ್ಟಿದನ್ನು ತಿಳಿಸುತ್ತದೆ. ಈ ಎಲ್ಲಾ ಪ್ರದೇಶಗಳಲ್ಲಿನ ಗ್ರಾಮಗಳ ಮತ್ತು ಭೂ ತೆರಿಗೆಯನ್ನು





ಜನರಿಂದ ಪಡೆದು ಬುಕ್ಕರಾಯನಿಗೆ ನೀಡುವ ವಿವರವಿದೆ. ಜೊತೆಗೆ ಸುಗ್ಗಲದೇವಿ, ಗವಿಸಿದ್ದಲಿಂಗಸ್ವಾಮಿ ಉಲ್ಲೇಖಗಳನ್ನು ಹೊಂದಿದೆ. ಈ ಶಾಸನ ಕಾಲದ ಉಲ್ಲೇಖ ಶಾಲಿವಾಹನ ಶಕವರ್ಷ ೧೧೧೯ ಎಂದಿದೆ. ಅದಕ್ಕೆ ೭೮ ವರ್ಷಗಳನ್ನು ಸೇರಿಸಿದರೆ ೧೧೮೭ ಆಗುತ್ತದೆ. ಇದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತಲೂ ಪೂರ್ವದಲ್ಲಿಯೇ ಬರುತ್ತದೆ. ಹಾಗಾಗಿ ಇದು ಮೂಲ ಶಾಸನವನ್ನು ಪ್ರತಿಮಾಡುವ ಸಂದರ್ಭದಲ್ಲಿ ಲಿಪಿಕಾರ ತಪ್ಪಾಗಿ ಬರೆದಿರುವ ಸಾಧ್ಯತೆಯಿದೆ.

ಒಟ್ಟಿನಲ್ಲಿ ಈ ತಾಮ್ರ ಶಾಸನವು ಕುರುಬ ಸಮುದಾಯದ ಸಗರ ಸೀಮೆಯಿಂದ ವಲಸೆ ಬಂದ ಸಂಗತಿಯನ್ನು ತಿಳಿಸುತ್ತದೆ. ಜೊತೆಗೆ ಅವರ ಬೆಡಗುಗಳ ಕುರಿತಾಗಿಯೂ ಆ ಕಾಲಘಟ್ಟದಲ್ಲಿರುವ ಗೌಡಿಕೆ ಪದ್ಧತಿಯನ್ನು ತಿಳಿಯಲು ಸಹಾಯಕವಾಗಿದೆ.

[ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಸೂಕ್ತ ಸಲಹೆಗಳನ್ನು ನೀಡಿದ ಗುರುಗಳಾದ ಡಾ. ಎಫ್.ಟಿ. ಹಳ್ಳಿಕೇರಿ ಅವರಿಗೆ ವಂದನೆಗಳು. ಡಿ. ಹಿರೇಹಾಳ ಗ್ರಾಮದ ಶಿಕ್ಷಕರಾದ ಈರಾಳಪ್ಪ, ಜಗದೀಶ್ ಮತ್ತು ಬಿ. ತಿಪ್ಪೇಸ್ವಾಮಿ ಮೊದಲಾದ ಗ್ರಾಮಸ್ಥರ ಸ್ನೇಹಪರತೆಯನ್ನು ಪ್ರೀತಿಯಿಂದ ನೆನೆಯುತ್ತೇನೆ.]



# ಕೃಷ್ಣರಾಜಪೇಟೆ ತಾಲ್ಲೂಕಿನ ವಳಗೆರೆ ಮೆಣಸ ಗ್ರಾಮದಲ್ಲಿ ದೊರಕಿದ ಅಪ್ರಕಟಿತ ಶಾಸನಗಳು

ಡಾ. ಆರ್. ರಂಗಸ್ವಾಮಿ*

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ವಳಗೆರೆಮೆಣಸ ಗ್ರಾಮ ಕೃಷ್ಣರಾಜಪೇಟೆಯಿಂದ ಉತ್ತರಕ್ಕೆ ೬ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ೩ ಅಪ್ರಕಟಿತ ಶಾಸನಗಳನ್ನು ಗುರುತಿಸಲಾಗಿದೆ.

### ೧. ಈಶ್ವರ ದೇವಾಲಯದ ಲಲಾಟ ಪಟ್ಟಿಯ ಅಪ್ರಕಟಿತ ಶಾಸನ

ಎರಡು ಸಾಲುಗಳಲ್ಲಿ ಬರೆಯಲಾಗಿರುವ ಇದರಲ್ಲಿ ಅಕ್ಷರಗಳು ಸುಮಾರು ೧೩-೧೪ನೇ ಶತಮಾನದ ಕನ್ನಡ ಲಿಪಿಯಲ್ಲಿವೆ. ಅಕ್ಷರಗಳು ದುಂಡಾಗಿದ್ದರೂ ತಪ್ಪುಗಳಿವೆ. ಸೌದೆಯ ಕೇತಣ್ಣನು ಎರಡು ಉತ್ತರಾಂಗಗಳನ್ನು ಮಾಡಿಸಿದ ಧರ್ಮವನ್ನು ಶಾಸನ ಉಲ್ಲೇಖಿಸುತ್ತದೆ. ಉತ್ತರಾಂಗವೆಂದರೆ ವಾಸ್ತು ಪರಿಭಾಷೆಯಲ್ಲಿ ದ್ವಾರಬಂಧದ ಮೇಲಿನ ಭಾಗ. ಪ್ರಾಯಶಃ ಇಂತಹ ಎರಡು ಉತ್ತರಾಂಗಗಳನ್ನು ಸೌವೆಯ ಕೇತಣ್ಣನು ಮಾಡಿಸಿದನೆಂದು ಭಾವಿಸಬಹುದು. ಉತ್ತರಾಂಗವನ್ನು ಮಾಡಿದವರ ಹೆಸರು ಉಲ್ಲೇಖವಿರುವುದು ಗಮನೀಯ.

#### ಶಾಸನದ ಪಾಠ

೧. ಸ್ವಸ್ತಿ ಶ್ರೀ ಮಹದೇ[ವ]ರ ದೇವಾಲ್ಯದ ಉತ್ತರಂಗದೆರಡು ದಮ್ಮ

೨. ಕೆ॥ ಸೌವೇ ಕೇತಣ್ಣ ಮಡಿಸಿದ ॥ ಮಡಿದ ಗುಳೋಜ ಸಾಂತೋಜ[॥ *]

### ೨. ಗ್ರಾಮದಲ್ಲಿರುವ ಶಿಲಾ ಶಾಸನ ಸಾರಾಂಶ

ಸುಮಾರು ೫ ಅಡಿ ಎತ್ತರದ ಶಿಲೆಯಲ್ಲಿ ಬರೆಯಲಾಗಿರುವ ಈ ಶಾಸನ ಕನ್ನಡ ಲಿಪಿ ಮತ್ತು ಭಾಷೆಯಲ್ಲಿದೆ. ಶಾಸನದ ಕಾಲ ಕ್ರಿ.ಶ ಸುಮಾರು ೧೩ನೇಯ ಶತಮಾನ.

ಈ ಶಾಸನ ೩೨ ಸಾಲುಗಳನ್ನು ಹೊಂದಿದೆ. ಶಿಲೆಯಲ್ಲಿರುವ ಮುಕ್ಕಾಲು ಭಾಗ ಶಾಸನ ಪ್ರಕೃತಿ ಪ್ರಭಾವ ಮತ್ತು ಜನರ ನಿರ್ಲಕ್ಷದಿಂದಾಗಿ ಪಾಠ ಅಳಿಸಿ ಹೋಗಿದೆ. ಆದರೆ ಶಿಲೆಯ ತಳಭಾಗದ ೧೮ ಸಾಲುಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿರುವುದರಿಂದ ಅಧ್ಯಯನಕ್ಕೆ ಪುಷ್ಠಿ ನೀಡಿದೆ.

ಆನಂದ ಮತ್ತು ಶ್ರೀ ಧಾತು ಎಂಬ ಎರಡು ಸಂವತ್ಸರದ ಉಲ್ಲೇಖವಿರುವುದು ಗಮನೀಯ. ಆದರೆ ಶಕ ವರ್ಷದ ಉಲ್ಲೇಖ ಇಲ್ಲದೇ ಇರುವುದರಿಂದ ನಿರ್ದಿಷ್ಠ ಕಾಲ ಗುರುತಿಸುವುದು ಕಷ್ಟವಾಗಿದೆ.

ಶಿಲೆಯ ಮೇಲ್ಭಾಗದ ಮಧ್ಯದಲ್ಲಿ ಶಿವಲಿಂಗದ ರಚನೆ ಇದೆ. ಶಿವಲಿಂಗದ ಬಲ ಬದಿಯಲ್ಲಿ ಯತಿ ಕುಳಿತು ಶಿವಲಿಂಗವನ್ನು ಪೂಜಿಸುತ್ತಿರುವ ಚಿತ್ರವಿದೆ. ಎಡಬದಿಯಲ್ಲಿ ನಂದಿ ಶಿಲ್ಪವಿದೆ. ಶಿವಲಿಂಗದ ಮೇಲ್ಭಾಗದಲ್ಲಿ ಸಾಮಾನ್ಯವಾದ ಸೂರ್ಯ ಮತ್ತು ಚಂದ್ರರ ರಚನೆಗಳಿವೆ.

ಶ್ರೀ ಧಾತು ಸಂವತ್ಸರದಂದು ಚೆಟ್ಟಿಸೆಟ್ಟಿ ಸತಿ ಮಾಚವೆಸೆಟ್ಟಿಯ ಪುತ್ರ ಸೋಮಿ ಸೆಟ್ಟಿ ಚಟ್ಟೇಶ್ವರ ದೇವಾಲಯವನ್ನು ಪ್ರತಿಷ್ಠೆಮಾಡಿ, ದೇವಾಲಯದ ನೈವೇದ್ಯಕೆ ನಾಲ್ಕು ಗದ್ದೆ, ಒಂದು ಸಲಗ ಬೆದ್ದಲೆ ಮತ್ತು ನಾನೂರು ತೋಟ ಇವುಗಳನ್ನು ಚಂದ್ರಸಕುತಿ (ಶಕ್ತಿ) ಪಂಡಿತರ ಸನ್ನಿದಿಯಲ್ಲಿ ದತ್ತಿಬಿಟ್ಟ ವಿವರಗಳನ್ನು ಒಳಗೊಂಡಿದೆ. ಶಾಸನದ ಕೊನೆಯ ಎರಡು ಸಾಲುಗಳಲ್ಲಿ ಸಾಮಾನ್ಯವಾದ ಶಾಪಾಶಯ ವಿವರವಿದೆ.

#### ಶಾಸನದ ಪಾಠ

(೧ ನೇ ಸಾಲಿನಿಂದ ೧೪ ನೇ ಸಾಲಿನವರೆಗೆ ಪಾಠ ಅಸ್ಪಷ್ಟವಾಗಿದೆ.)

೧೫ . . . . . . . . . . . . . ಸ್ವಸ್ತಿ

೧೬ ಶ್ರೀ ಮಹೇಂದ್ರಚೋಳಕುಳ. ಮಿ. ತಿಸೆಟ್ಟಿಯರು[೦]

೧೭ ಚಟ್ಟಿಯರುಂ ಯುಚ್ಚೆಯಾಂನುಮತದಿಂ [ಆನಂದ]ಸಂವಚ್ಚರ

೧೮. ಕಾರ್ತಿಕಮಾಸದ [ಶು] ದಸಮಿಯಾದಿವಾರದಂ. [ಕ್ರಾಂ]ತಿ

* ಮುಖ್ಯಸ್ಥರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಶ್ರೀರಂಗಪಟ್ಟ.



ವಳಗೆರೆ ಮೆಣಪ ಗ್ರಾಮದ ಈಶ್ವರ ದೇವಾಲಯದ ಲಲಾಟ ಪಟ್ಟಿಯಲ್ಲಿರುವ ಎರಡು ಸಾಲಿನ ಶಾಸನ

೧೯ . ದ್ರ ಮೆಚ್ಚಕೆರೆಯ ಕಟ್ಟಿಸಿ [ವಲ್ಲಿ] ಗರ್ದ್ದೆಯಂ ಮಾಡಿ ಸ್ವಸ್ತಿ(ಸ್ತಿ)
೨೦ ಶ್ರೀ ಧಾತು ಸಂವಚ್ಚರದ ಚೆಟ್ಟಿಸೆಟ್ಟಿ[ಯ*]ರುಂ ಯಿವರ ಸತಿ
೨೧ . ಮಾಚ್ಚವೆಸೆಟಿತಿಯ ಪುತ್ರ ಸೋಂಮಿಸೆಟ್ಟಿಯಿಂ ಯುಚ್ಚ
೨೨ ಯಾ[ನು*]ಮಾ (ಮ)ತದಿಂ ಚಟ್ಟೇಸ್ವರದೇವರಂ ಪ್ರತಿಷ್ಠೆಯಂ ಮಾಡಿ ನಿವೇದ್ಯಕ್ಕೆ
೨೩ ಗರ್ದ್ದೆ ಸಲಾಕ್ಕೆ[ಗೆ] ನಾಕು ಬೆದ್ದಲೆ ಸಲಗೆ ಒಂದು ತೋಟ ನಾನೂರ ಕುಳಿ
೨೪ ತುಂಬಿ ಗ ಮೊದಲಲು ಚಂದ್ರಸಕುತಿಪಂಡಿತರ್ಗ್ಗೆ ಧಾರಾಪೂರ್ಬ್ಬಕವಾಗಿ
೨೫ ಮಾಡಿ ಬಿಟ್ಟ ದತ್ತಿ ॥ ಚೆಟ್ಟಿಸೆಟ್ಟಿಯರ ಕೊಡಂಗೈ । ೧೦೦೫೦ ಕೊಂಲುಂದು
೨೬ ಗರ್ದ್ದೆ ಸಲಗೆ ೬ (೯?) ಬೆರ್ದ್ದಾಲೆ ಸಲಗೆ ೨ ಯಿಂತ್ತೀ ಸೆಟ್ಟಿಯ
ಕೊಡಂಗೈ ೧೦೦೫೦
೨೭ ಕೊಂಲು ಗದ್ದೆ ಸಲಗೆ ೯ ಬೆರ್ದ್ದಲೆ ಸಲಗೆ ೨ ನೆಗರೂರ ಕೆರೆಯಲು
೨೮ . [ಚೆ]ಟ್ಟಿಸೆಟ್ಟಯರುಂ ಚಟೇಸ್ವರಕೆ ದೇವರ ಪ್ರತಿಷ್ಠೆಯಂ ಮಾಡಿ ಬೆಂಡಾಡಂ ಗ ಬಾ
೨೯ . ಬತಿ ದೇವಂಗ ಗರ್ದ್ದೆ ಸಲಗೆ ೫ ಬೆದ್ದಲೆ ಸಲಗೆ ೧ ಗೆ ವ ಲಕ್ಕಣೆ ಯಿಕಲಿ



ವಳಗೆರೆ ಮೆಣಪ ಗ್ರಾಮದ ಶಿಲಾ ಶಾಸನ

೩೦ [ಒ]ಕ್ಕಲಲು ಒಂದು [ಗೆ]ರೆ ಮುಗುಳ [ಯತ್ತಣ]ನಿತುಮ ಧಾರಾಪೂ
೩೧ ರ್ಬ್ಬಕಂ ಮಾಡಿ ಬಿಟ್ಟ ದತ್ತಿ ॥ ಸ್ವದತ್ತಂ ಪರದತ್ತಂ ವಾ [ಯೋಹರೇತಿ] ವಸುಂಧರಾಂ
೩೨ [ಷ]ಷ್ಟಿರ್ವ್ವರ್ಷಂ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥

## ೩. ವೀರಗಲ್ಲು ಶಾಸನ ಶಿಲ್ಪ

ವೀರಗಲ್ಲು ಶಾಸನ ಶಿಲ್ಪ ಗ್ರಾಮದ ಈಶ್ವರ ದೇವಾಲಯದ ಬಲಬದಿಯಲ್ಲಿದೆ. ಮೂರು ಅಡ್ಡ ಪಟ್ಟಿಕೆಗಳಲ್ಲಿ ಕೆತ್ತಲ್ಪಟ್ಟಿರುವ ಶಾಸನ ಕನ್ನಡ ಲಿಪಿ ಮತ್ತು ಭಾಷೆಯಲ್ಲಿದೆ. ಶಾಸನ ಕಾಲ ಕ್ರಿ.ಶ. ಸುಮಾರು ೧೩ನೇ ಶತಮಾನ. ವೀರನು ವೈರಿಯ ವಿರುದ್ಧ ಹೋರಾಡಿ ಮಡಿದ ವಿವರಗಳಿವೆ. ಅಕ್ಷರಗಳು ಮಾಸಿಹೋಗಿರುವುದರಿಂದ ಮಾಹಿತಿ ಅಸ್ಪಷ್ಟವಾಗಿವೆ.

[ಲೇಖನ ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಡಾ. ಎಸ್.ವಿ. ಪಾಡಿಗಾರ್ (ನಿವೃತ್ತ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ) ಇವರಿಗೆ ಕೃತಜ್ಞತೆಗಳು. ಕ್ಷೇತ್ರ ಕಾರ್ಯ ಸಂಧರ್ಭದಲ್ಲಿ ಸಹಕರಿಸಿದ ಸ್ಥಳೀಯರನ್ನು ನೆನೆಯುತ್ತೇನೆ.]

## ಗ್ರಂಥಋಣ

೧. ಡಾ. ಆರ್. ರಂಗಸ್ವಾಮಿ, **ಕೃಷ್ಣರಾಜಪೇಟೆ ತಾಲ್ಲೂಕಿನ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ** – ಸಂಜನಾ ಪ್ರಕಾಶನ, ಮೈಸೂರು.
೨. ಎಫಿಗ್ರಫಿ ಕರ್ನಾಟಕ ಸಂ. ೬.
೩. ಪ್ರಜಾವಾಣಿ ದಿನಪತ್ರಿಕೆ ೦೭.೦೨.೨೦೧೫.



# ತಡಗಣಿ ಗ್ರಾಮದಲ್ಲಿ ಅನ್ವೇಷಿಸಿದ ಎರಡು ಹೊಸ ಶಾಸನಗಳು

**ಮಧುಗಣಪತಿರಾವ್ ಮಡೆನೂರು***

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಡಗಣಿ ಗ್ರಾಮದಲ್ಲಿ ಎರಡು ಹೊಸ ಶಾಸನಗಳನ್ನು ಪತ್ತೆಹಚ್ಚಲಾಗಿದೆ. ಇವುಗಳು ವಿಜಯನಗರ ಸಾಮ್ರಾಜ್ಯ ಕಾಲದ ೧೫ ಮತ್ತು ೧೬ನೇ ಶತಮಾನಕ್ಕೆ ಸಂಬಂಧಿಸಿದವುಗಳಾಗಿರುತ್ತವೆ. ಈ ತಡಗಣಿ ಗ್ರಾಮವು ಬಳ್ಳಿಗಾವೆಯಿಂದ ಕೇವಲ ನಾಲ್ಕು ಕಿ.ಮೀ. ದೂರದಲ್ಲಿದೆ.

### ತಡಗಣಿಯಲ್ಲಿನ ಶಾಸನಗಳು

ತಡಗಣಿಯ ಹಳೆ ಗ್ರಾಮಠಾಣದ ಪೂರ್ವದಿಕ್ಕಿನಲ್ಲಿ ಗ್ರಾಮದ ಅಗಸೆ ಬಾಗಿಲಿನ ಸಮೀಪ ಪ್ರಸ್ತುತ ಪಂಚಾಯಿತಿ ಕಟ್ಟಡದ ಎಡಭಾಗಲ್ಲಿ ಇರುವ ವೀರಗಲ್ಲು. ವಿಜಯನಗರದ ದೊರೆ ಮಲ್ಲಿಕಾರ್ಜುನನ ಸುಮಾರು ೧೪೪೬-೧೪೬೫ರ ಕಾಲಘಟ್ಟಕ್ಕೆ ಸಂಬಂಧಿಸಿರಬಹುದಾಗಿರುತ್ತೆ.

ಇದರ ಎತ್ತರ ೫೪" ಹಾಗೂ ಅಗಲ ೨೬" ಇಂಚು ಇದ್ದು ನಾಲ್ಕು ಅಂತಸ್ತನ್ನು ಹೊಂದಿದ ಕಪ್ಪು ಕಲ್ಲಿನ ವೀರಗಲ್ಲಾಗಿರುತ್ತೆ. ಇದು ಯಾವುದೋ ಯುದ್ಧದ ಸನ್ನಿವೇಶವನ್ನು ಚಿತ್ರಿಸಿದ್ದು ಯುದ್ಧದ ವಿವರ ದೊರಕುತ್ತಿಲ್ಲ. ಮೊದಲನೆಯ ಪಟ್ಟಿಕೆಯಲ್ಲಿ ಸಂದರ್ಭಾನುಸಾರವಾಗಿ ನಡೆದ ಉದ್ಧರಿಯಲ್ಲಿ ಮಾಳೇನಹಳ್ಳಿಯ ವಿರುಪಣ್ಣನಾಯಕರ ತಾಯಿ ಕಾಳಗದಲ್ಲಿ ಸತ್ತಿರುವುದನ್ನು ತಿಳಿಸುತ್ತದೆ.

ಪಟ್ಟಿಕೆ ಎರಡರಲ್ಲಿ ಕಾಳನಾಯಕನ ಮಗ ಗಾಂದಪ್ಪನು ಕಾಳಗದಲ್ಲಿ ಸತ್ತ, ಮುಂದುವರಿದು ಮಾಳೇನಹಳ್ಳಿಯ ಬೈರೆಯನಾಯಕರು ತನ್ನ (ಹಿರಿಯ) ವಿರೂಪಂಣ ನಾಯಕರನ್ನೂ ಪ್ರಸ್ತಾಪಿಸುತ್ತದೆ.

**ಶಾಸನ ಪಾಠ.** **ಕಾಲ ಸುಮಾರು ೧೪೫೮.**

೦ (ಸ್ವಸ್ತಿ ಶ್ರೀ) (ಚಿತ್ರ)ಭಾನು ಸಂವತ್ಸರದಲಿ। ಶ್ರೀಕಂಠ

೦ (ರಾಯನಾಯಕರು) ಮಳೆಹಳಿಯ ವಿರುಪಂಣ ನಾ

೦ ಯಕರ ತಾಯಿ ಕಾಳಗದಲಿ ಸತ್ತರೂ । ಕಾಳ

**ಎರಡನೆಯ ಪಟ್ಟಿಕೆ**

೦ ನಯಕನ ಮಗ (ಗಾಂ)ದಪ್ಪನು ಕಾಳಗದಲ್ಲಿ

೦ ಸತ್ತರೂ । ಮಳೆನಹಳಿಯ ಭರೆಯನಾ

೦ ತಂನ । (ಹಿರಿಯ) ವಿರೂಪಂಣ ನಯಕರು.

### ದಾನಶಾಸನ

ಇದೂ ಕೂಡ ಬನವಾಸಿ ೧೨೦೦೦ಕ್ಕೆ ಸೇರಿದ ನಾಗರ ಖಂಡ ಎಪ್ಪತ್ತರ ಜಿಡ್ಡುಳಿಗೆ ನಾಡಿಗೆ ಸೇರಿದ್ದು ತಡಗಣಿ ಗ್ರಾಮದ ನೈರುತ್ಯದ ದಿಕ್ಕಿನಲ್ಲಿ ಕೆಂಪಣ್ಣ ಇವರ ಜಮೀನಿನ ನಡುವೆ ಇರುವ 32" ಎತ್ತರ ಹಾಗೂ 20" ಅಗಲದ ಹಾಗೂ 5" ಇಂಚು ಅಡ್ಡಪಟ್ಟಿಕೆಯ ಮೇಲೆ ಇರುವ ಶಾಸನ ಕಲ್ಲು, ಒಂದು ಪಾರ್ಶ್ವದಲ್ಲಿ ವಾಮನ ಮುದ್ರೆಯಿದ್ದು ನೆತ್ತಿಯಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ.

### ವಿಷಯ

ಕ್ರಿ.ಶ. ೧೪೭೮ರ ವಿಕಾರಿ ಸಂವತ್ಸರದ ಆಶ್ವೀಜ ಶುದ್ಧ ೧ ರಂದು ಸೋಮೋಪರಾಗದ ಅಂದರೆ ಚಂದ್ರ ಗ್ರಹಣದ ದೋಶಪರಿಹಾರಕ್ಕಾಗಿ ಉದ್ದರೆಯ ಅಧಿಕಾರಿ ಚಿನ್ನಭಂಡಾರದ ನಾರಾಣಪ್ಪನ ಮಗನಾದ ಪುಟ್ಟರಸಯ್ಯಗಳು ಉದುರೆಯ ಲಖ್ಖರಸನ ಮಗ ತಿಂಮನಗೆ ತಡಗಣಿಯ ಭೂಮಿಯನ್ನು ವ್ರಿತ್ತಿದಾನವಾಗಿ ನೀಡುವನು. ಚತುರ್ಗಡಿಗಳಲ್ಲಿ ವಾಮನ ಮುದ್ರೆ ಕಲ್ಲುಗಳನ್ನು ನಿಲ್ಲಿಸುವನು.

### ಶಾಸನ ಪಾಠ

೧ ಶ್ರೀ

೨ . . ಗತಿ

೩ ಶಕವರು

೪ ಶ ಸಾ ೧೪೦೦

೫ ನೆಯ ವಿಕಾ

೬ ರಿ ಸಂ ಅಶ್ವೀ

೭ ಜ ಸು ೧

* ಶ್ರೀ ಮಡೆನೂರು ನಿಲಯ, ೩ನೇ ಮುಖ್ಯರಸ್ತೆ, ೩ನೇ ತಿರುವು, 'ಬಿ' ಬ್ಲಾಕ್, ಶರಾವತಿನಗರ, ಶಿವಮೊಗ್ಗ-೫೭೭೨೦೧.





೮ ಸೋಮ ಪರಾ
೯ ಗದಲೂ ಚಿಂನ
೧೦ ಭಂಡಾರದ
೧೧ ನಾರಣಪ್ಪ
೧೨ ಮ್ಮಗನಾದ
೧೩ ಪುಟ್ಟರಸ
೧೪ ಯ್ಯಗ .
೧೫ ಯಿದರೆಲಿ .

೧೬ ಲಖರಸರ
೧೭ ಮಗ ತಿಂಮ
೧೮ ಂಗೆ ಧಾರೆ
೧೯ ನೆರೆದು
೨೦ ಕೊಟ್ಟ ವ್ರಿತ್ತಿ
೨೧ ಗೆ
೨೨ ಕುಳ ಬಿ
೨೩ ಮಂಗಳ





# ಸಿದ್ದಾಪುರದ ಅಪ್ರಕಟಿತ ತಾಮ್ರ ಶಾಸನಗಳು

ಡಾ. ಎಸ್.ಕೆ. ಮೇಲಕಾರ* ಡಾ. ರಮಾ ಜಿ. ಗುಂಡುರಾವ್*

**ಉ**ತ್ತರ ಕನ್ನಡ ಜಿಲ್ಲೆಯ ಕಾರವಾರದಿಂದ ೧೦೨ ಕಿ.ಮೀ. ದೂರದಲ್ಲಿರುವ ಸಿದ್ಧಾಪುರ ತಾಲೂಕಿನಲ್ಲಿ ಬಿಳಗಿಯ ಅರಸರು ತಮ್ಮ ಆಳ್ವಿಕೆಯ ಕಾಲದಲ್ಲಿ ಸಕಲ ರೀತಿಯಿಂದ ಸಮೃದ್ಧಿಯನ್ನು ಸಾಧಿಸಿದ್ದರು. ಇಲ್ಲಿ ಸಿದ್ಧಿವಿನಾಯಕನ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಸಿದ್ಧಾಪುರವೆಂದು ಹೆಸರಿಟ್ಟರು. ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ ಸಿದ್ಧಾಪುರವು ಪ್ರಸ್ತುತದಲ್ಲಿ ತಾಲೂಕು ಕೇಂದ್ರವಾಗಿ, ವಾಣಿಜ್ಯ, ವ್ಯಾಪಾರ ಧಾರ್ಮಿಕ ಕೇಂದ್ರವಾಗಿ ಹಾಗೂ ಗುಡ್ಡ-ಬೆಟ್ಟಗಳಿಂದ ಸುತ್ತುವರಿದು ವಿವಿಧ ವನಸಿರಿಗಳಿಂದ ಹಸಿರಾಗಿ ಕಂಗೊಳಿಸುತ್ತಿದೆ. ಬೀಳಗಿ ಮತ್ತು ಸಿದ್ಧಾಪುರಗಳ ನಡುವೆ ಭುವನಗಿರಿ ಎಂಬ ಗುಡ್ಡವಿದ್ದು, ಅಲ್ಲಿ ಒಂದು ವಿಷ್ಣು ದೇವಾಲಯವಿದೆ. ಪ್ರಸಿದ್ಧ ಜೋಗಜಲಪಾತವು ಇಲ್ಲಿಂದ ೧೯ ಕಿ.ಮೀ. ಅಂತರದಲ್ಲಿದೆ. ಸಿದ್ಧಾಪುರವು ಮೊದಲು ಕೊಂಡಿಹಳ್ಳಿಯ ಭಾಗವಾಗಿತ್ತು. ಬಿಳಗಿಯ ರಾಣಿ ಜಯಾಂಬೆ ರಾಜಕುಮಾರ ಸಿದ್ಧಪ್ಪನ ಆರೋಗ್ಯಕ್ಕಾಗಿ ಪ್ರಾರ್ಥಿಸಿ ಗುಡಿಯೊಂದನ್ನು ಕಟ್ಟಿ ಉಂಬಳಿಕೊಟ್ಟ ಬಗ್ಗೆ ಕ್ರಿ.ಶ. ೧೬೫೧ರ ಒಂದು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಹಾಗೆಯೇ ಇನ್ನೂ ಅನೇಕ ಶಾಸನಗಳು ಶೈವ, ವೈಷ್ಣವ, ಜೈನ, ವೀರಶೈವ ದೇವಾಲಯಗಳ ನಿರ್ಮಾಣ ಮಾಡಿದ ಕುರಿತು ದಾಖಲಿಸಿವೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನಾ ಸಂಸ್ಥೆಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಲಭ್ಯವಿರುವ ಎರಡು ತಾಮ್ರ ಪಟ ಶಾಸನನಗಳನ್ನು ಅಧ್ಯಯನ ಕ್ಕೊಳಮಾಡಲಾಗಿದೆ. ಇವು ಸಿದ್ಧಾಪುರದ ಹಾಳಿತಕಟ್ಟೆಯ ಶ್ರೀ ಗಂಗಾಧರೇಶ್ವರ ದೇವಸ್ಥಾನಕ್ಕೆ ಬೀಳಗಿಯ ಮಾಪ್ರಭು ಸೋಮಶೇಖರ ನಾಯಕರು ದತ್ತಿಬಿಟ್ಟ ಬಗ್ಗೆ ವಿವರಿಸುತ್ತವೆ. ಈ ಎರಡು ತಾಮ್ರಪಟ ಶಾಸನಗಳು ಬೀಳಗಿ ಅರಸ ೩ನೇ ಸೋಮಶೇಖರನ ಕಾಲದ್ದಾಗಿವೆ. ಕ್ರಿ.ಶ. ೧೭೭೦ರ ಶಾಸನ ಗ್ರಾಮ ಹಾಗೂ ಭೂಮಿಗಳನ್ನು ದತ್ತಿಯಾಗಿ ನೀಡಿದ ವಿಷಯವನ್ನು ತಿಳಿಸಿದರೆ, ಮತ್ತೊಂದು ಶಾಸನ ವಿವಿಧ ವ್ಯಾಪಾರಿಗಳು ಸರಕುಗಳ ಮೇಲೆ ಸುಂಕವನ್ನು ವಸೂಲಿಮಾಡಿ ಈ ದೇವಸ್ಥಾನಕ್ಕೆ ಬಿಟ್ಟ ಬಗ್ಗೆ ವಿವರಿಸುತ್ತದೆ.

ಮೊದಲನೆಯ ತಾಮ್ರ ಪಟ ಶಾನವು "ಶುಭಮಸ್ತು। ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ । ಎಂಬ ಬಾಣಭಟ್ಟನ ಹರ್ಷಚರಿತ ಕಾವ್ಯದಲ್ಲಿಯ ಶಿವನ ಸ್ತುತಿಪರವಾದ ಶ್ಲೋಕದಿಂದ ಆರಂಭಗೊಳ್ಳುತ್ತದೆ. ಅನಂತರ ಶಾಸನ ಕಾಲ ಮತ್ತು ವಿಷಯಗಳನ್ನು ದಾಖಲಿಸುತ್ತದೆ. ಸ್ವಸ್ತಿ ಶ್ರೀ ಜಯಾಭ್ಯೂದಯ ಶಾಲಿವಾಹನ ಶಕ ವರುಷ. ೧೬೯೨ ವಿರೋಧಿ ಸಂವತ್ಸರದ ಶ್ರಾವಣ ಶುದ್ಧ ೬೦ಯು ಸೋಮುವಾರದ ಪುಣ್ಯಕಾಲದಲ್ಲೂ" ಸಿದ್ಧಾಪುರದ ಹಾಳಿತಕಟ್ಟೆಯ ಸಮೀಪದ ಶ್ರೀಗಂಗಾಧರೇಶ್ವರ ದೇವರ ಶ್ರೀಪಾದ ಪದ್ಮಂಗಳಿಗೆ ಶ್ರೀ ಮನ್ಮಹಾ ಪ್ರಭೂ ಬೀಳಗಿ ಸೋಮಶೇಖರನಾಯಕರು ಬರಸಿಕೊಟ್ಟ ಧರ್ಮಶಾಸನ ವೆಂದು ವರ್ಣಿಸಿದೆ. ಶಾಸನೋಕ್ತ ಕಾಲಮಾನ ಕ್ರಿ.ಶ. ೧೭೬೯ ಅಗಸ್ಟ ೭ ಸೋಮವಾರಕ್ಕೆ ಸಮನಾಗುತ್ತದೆ. ಈ ಶಾಸನದ ನಂತರ ೪ ವರ್ಷಗಳ ಬಳಿಕ ಎರಡನೆಯ ಶಾಸನವನ್ನು ಹೊರಡಿಸಲಾಗಿದ್ದು ಆ ಶಾನದಲ್ಲಿ ಶಕವರುಷ ೧೬೯೨ ನೇ ವಿರೋಧಿ ಸಂವತ್ಸರ ಶ್ರಾವಣ ಶುದ್ಧ ೧೦ ರಲ್ಲಿ ಎಂದಿದ್ದು ಅದರ ಕಾಲಮಾನ ಕ್ರಿ.ಶ. ೧೭೭೦ ಅಗಸ್ಟ ೧೨ ಶನವಾರಕ್ಕೆ ಸರಿಹೋಗುತ್ತದೆ.

ಈ ಎರಡು ಶಾಸನಗಳು ಸಿದ್ಧಾಪುರದ ಶ್ರೀ ಗಂಗಾಧರೇಶ್ವರ ದೇವಾಲಯದ ರಥೋತ್ಸವ ನಡೆಯಲು ಈ ಭಾಗದ ಕೆಲವು ಪ್ರದೇಶಗಳನ್ನು ದಾನ ಮಾಡಿದ ವಿಷಯವಲ್ಲದೇ ಅಲ್ಲಿಗೆ ಬರುತ್ತಿದ್ದ ಸರಕುಗಳ ಮೇಲೆ ಆಕರಿಸುತ್ತಿದ್ದ ಸುಂಕವನ್ನು ವಿನಾಯತಿ ಮಾಡಿರುವ ಕುರಿತು ವಿವರಿಸಿದೆ. ಹದಿನಾರು ಹದಿನೆಳನೇ ಶತಮಾನದಲ್ಲಿ ಮಲೆನಾಡಿನ ಈ ಭಾಗ ವಾಣಿಜ್ಯ ವ್ಯಾಪಾರ ಕ್ಷೇತ್ರದಲ್ಲಿ ಹೆಸರು ಮಾಡಿತ್ತೆಂದು ಈ ಶಾಸನಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಈ ಭಾಗದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೆಳೆಯುತ್ತಿದ್ದ ಎಲೆ- ಅಡಕೆ-ಟೆಂಗು-ಬಾಳೆ-ಮೆಣಸು ಇತ್ಯಾದಿ ಬೆಳೆಗಳೇ ಮುಖ್ಯ ವಾಣಿಜ್ಯ ಬೆಳೆಗಳಾಗಿದ್ದವೆಂದು ತಿಳಿದು ಬರುತ್ತದೆ.

* ಮ್ಯೂಜಿಯಂ ಕ್ಯೂರೇಟರ್, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.





ಶಕವರುಷ ೧೬೨ರ ಸೋಮಶೇಖರನಾಯಕನ ಕಾಲದ ಹಾಳಿತಕಟ್ಟೆ ತಾಮ್ರಪಟ ಶಾಸನದಲ್ಲಿ ಗಂಗಾಧರೇಶ್ವರ ದೇವರ ರಥೋತ್ಸವದ ವೆಚ್ಚವನ್ನು ಭರಿಸಲಿಕ್ಕಾಗಿ ಸಿದ್ಧಾಪೂರ– ಸಾಗರ, ಸಿದ್ಧಾಪುರ–ಬಡಾಳ–ಕುಮಾಟಾ –ಹೊನ್ನಾವರ ಮಾರ್ಗದ ಆ ದಾರಿಗಳಲ್ಲಿ ಹಾಯ್ದು ಹೋಗುತ್ತಿದ್ದ ಅಡಿಕೆ–ಮೆಣಸುಗಳ ಮೇಲಿನ (ಸರಕುಗಳ ಮೇಲಿನ) ಸುಂಕವನ್ನು ದಾನವಾಗಿ ಬಿಟ್ಟದ್ದನ್ನು ಉಲ್ಲೇಖಿಸಲಾಗಿದೆ. ಅದರಲ್ಲಿ ಒಂದು ಗದ್ಯಾಣ ಬೆಲೆಯ ಸರಕಿಗೆ ಮೂರು ವೀಸದಂತೆ ಸೆಟ್ಟಿ ಸಮಸ್ತರು ದೇವಾಲಯಕ್ಕೆ ನೀಡಬೇಕು ಹಾಗೂ ಆ ಸ್ಥಳದ ಸೇನ ಭೋವರು ಅದನ್ನು ಸಂಗ್ರಹಿಸಬೇಕೆಂದು ವಿವರಿಸುತ್ತದೆ. ಅದನ್ನೇ ಶಾನದಲ್ಲಿ "ಸೀಮೇವಳಗೆ ಸ್ಥಳ ಪರಸ್ಥಳದ ಮಹಾನಾಡವರು, ಸೆಟ್ಟಿ ಸಮಸ್ತರು ತಾವು ಉಭಯ ಮಾರ್ಗದಲು ಹೇರುವ ಅಡಿಕೆ–ಮೆಣಸಿಗೆ ಸಿದ್ದಾಪುರದ ಹಾಳಿತಕಟ್ಟೆಯಲು ಅನಾದಳೆ ಖಕೇರಥ–ಉತ್ಸವದ ಬಗ್ಗೆ ಶಿವಾರ್ಪಿತವಾಗಿ ಗ–೧ಕ್ಕೆ ಹ ಹ ವಂದು ವರಹಾಕಿ ಮೂರು ವೀಸದಲು ಹಾಕಿಕೊಟ್ಟು ಧರ್ಮ ಶಾಸನವ ಬರೆಸಿಕೊಟ್ಟ ಪ್ರಮಾಣ ಸಿದ್ಧಾಪುರದ ಹಾಳತಕಟ್ಟೆ ಗ–೧ಕ್ಕೆ ಹ ಹ ವಂದು ವರಹಾಕೆ ಮೂರು ಮೀಸದಲು ಆ ಸ್ಥಳದ ಸೇನಬೋವರು ಬದಕುಮಾಡುವವರ ಮುಖಾಂತ್ರ ಕಾಲ ಕಾಲಂ ಪ್ರತಿಯಲು ಯತಿಶಿ ತರಿಸಿಕೊಂಡು ರಥ – ಉತ್ಸವದ ಸೇವೆಯಂದು ನಡೆಸಿಕೊಂಡು ಬಾಹಾಗೆ ಶಿವಾರ್ಪಿತವಾಗಿ ಬಿಟ್ಟರೆಂದು ವಿವರಿಸಲಾಗಿದೆ.

ಈ ಶಾಸನೋಕ್ತ ನಾಣ್ಯಗಳ ಉಲ್ಲೇಖದಿಂದ ನಮಗೆ ತಿಳಿದುಬರುವದೇನೆಂದರೆ ಭೂಮಿಯ ಕಂದಾಯವನ್ನು ಸುವರ್ಣಾದಾಯದಲ್ಲೇ ಸಂಗ್ರಹಿಸಿ ದೇವಾಲಯಗಳಿಗೆ ನೀಡುವುದಲ್ಲದೆ, ದೇವಾಲಯದ ಅಗತ್ಯ ವಸ್ತುಗಳ ವೆಚ್ಚವನ್ನು ಹಣದ ರೂಪದಲ್ಲಿ ಲೆಕ್ಕಹಾಕಲಾಗಿದೆ. ಅಡಕೆ, ಎಲೆ, ತೆಂಗು, ಗೋಧಿ, ಬೆಲ್ಲ, ಎಣ್ಣೆ, ಗಂಧ, ಧೂಪ ಇತ್ಯಾದಿಗಳನ್ನು ಹಣದಿಂದಲೇ ಖರೀದಿಸಲಾಗುತ್ತಿರುವುದಾಗಿ ಗೊತ್ತಾಗುತ್ತದೆ.

ಮತ್ತೊಂದು (೨ನೇ ತಾಮ್ರಪಟ ಶಾಸನ) ತಾಮ್ರ ಪಟ, ಶಾಸನದ ಕಾಲಮಾನ ಕ್ರಿ.ಶ. ೧೭೭೦ ಅಗಸ್ಟ ೧೨ ಶನವಾರಕ್ಕೆ ಸರಿಹೊಂದುತ್ತಿದ್ದು, ಇದನ್ನು ಶಾಸನದಲ್ಲಿ ಶಕವರುಷ ೧೬೨ನೇ ವಿರೋಧಿ ಸಂವತ್ಸರ ಶ್ರಾವಣ ಶುದ್ಧ ೧೦ ರಲ್ಲಿ ಎನ್ನಲಾಗಿದೆ. ಈ ಶಾಸನದಲ್ಲಿ ಸಿದ್ಧಾಪುರದ ಹಾಳಿತಕಟ್ಟೆಯ ಸಮೀಪದ ಶ್ರೀಗಂಗಾಧರೇಶ್ವರ ದೇವಾಲಯಕ್ಕೆ ಮುಮ್ಮಡಿ ಸೋಮಶೇಖರ ನಾಯಕರು ಆ ದೇವರ ಪೂಜೆ–ಪುನಸ್ಕಾರ

ನೈವೇದ್ಯ-ರಥೋತ್ಸವ ಮುಂತಾದವುಗಳ ವೆಚ್ಚಕ್ಕಾಗಿ ಕೊಂಡಳಿ ಹೊಬಳಿ- ಶಿರುವಳಿಗೆ ಗ್ರಾಮದ (ಈಗಿನ ಶಿರಳಗಿ) ಕೆಲಗಣ ಕೊಳನಿ ತಿಮ್ಮಣನ ಹೆಸರಲು ಬರೆದು ಅಲ್ಲಿಯ ಬ್ರಾಹ್ಮಣ ವಟು ವರ್ಗಕ್ಕೆ ಮತ್ತು ಅವರಗುಪ್ಪಿ ಗ್ರಾಮದಿಂದಲೂ ಸಹ ವಿವಿಧ ರೀತಿಯ ಭೂಮಿದಾನ ಮಾಡಿದ ಬಗ್ಗೆ ಶಾಸನ ತಿಳಿಸುತ್ತದೆ.

ಈ ಎರಡೂ ಶಾಸನಗಳ ಕೊನೆಗೆ ಸಾಕ್ಷಿಗಳು ಮತ್ತು ಶಾಪಾಶಯ ಶ್ಲೋಕಗಳಿವೆ. "ಈ ಧರ್ಮ ಶಾಸನಕ್ಕೆ ಸಾಕ್ಷಿಗಳೆಂದರೆ ಲೋಕ ಸಾಕ್ಷಿಗಳು, ಆದಿತ್ಯ ಚಂದ್ರಾವನ ಲೋನತ್ಯಾಚದೌರ್ಭೂಮಿರಾಪೋಹೃದಯಂ ಯಮಶ್ಯ ಅಹ ಶ ರಾತ್ರಿ ಶ ಉಭೇಚ ಸಂಧ್ಯಾ ಧರ್ಮಸ್ಯ ಜಾನಾತಿ ನೆರುಸ್ಯ ಉತ್ತಂ। ಎಂದು ಧರ್ಮ ಶಾಸನ ಸಾಕ್ಷಿಗಳಾಗಿ ಲೋಕ, ಸೂರ್ಯಚಂದ್ರ ಮೊದಲಾದವರನ್ನು ಹೇಳಲಾಗಿದೆ. ಕೊನೆಯಲ್ಲಿ ದಾನ ರಕ್ಷಣೆ ಮತ್ತು ಅಪಹರಣದ ಫಲಾಫಲಗಳನ್ನು ಕುರಿತಾದ ಶ್ಲೋಕಗಳನ್ನು ಹೇಳಿದೆ. ಸ್ವದತ್ತಾ ದಿಗುಣ ಪುಣ್ಯಂ ಪರದತ್ತಾನು ಪಾಲ ನಂ...॥" ದಾನವು ತಾನೇ ಕೊಟ್ಟದ್ದಾಗಿರಲಿ ಇಲ್ಲವೇ ಇತರರು ಕೊಟ್ಟದ್ದಾಗಿರಲಿ ಅದನ್ನು ರಕ್ಷಿಸಿದರೆ (ಅದು ಮುಮದುವರಿಯುವಂತೆ ನೋಡಿಕೊಂಡರೆ) ದ್ವಿಗುಣ ಫಲ ಪ್ರಾಪ್ತವಾಗುತ್ತದೆ. ದಾನ ಮಾಡುವುದು ಮತ್ತು ಮಾಡಿದ ದಾನವನ್ನು ಪಾಲಿಸಿಕೊಂಡು ಹೋಗುವುದುಶ್ರೇಯಸ್ಸು ಮತ್ತು ಸ್ವರ್ಗವನ್ನು ಪ್ರಾಪ್ತಿಸುತ್ತದೆ ಎಂದು ಹೇಳಲಾಗಿದೆ.

**ಎರಡು ತಾಮ್ರಪಟ ಶಾಸನಗಳ ಪಠ್ಯ**

**೧. ಸಿದ್ಧಾಪುರದ ಹಾಳಿತಕಟೆ ತಾಮ್ರಪಟ ಶಾಸನ**

೧) ॥ ಶುಭ ಮಸ್ತು। ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ।

೨) ॥ ಚಾರವೇ ತ್ರೈಲೋಕ್ಯ ನಗರಾ ರಂಭ ಮೂಲಸ್ತಂಭಾಯ ಶಂಭವೆ ।

೩) ॥ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೬೯೨ನೆ ।

೪) ॥ ಯ ವಿರೋಧಿ ಸಂವತ್ಸರದ ಶ್ರಾವಣ ಶು. ೬ ಯು ಸೋಮವಾರ ಪುಂ ।

೫) ॥ ಣ್ಯ ಕಾಲದಲು ಸಿಧಾಪುರದ ಹಾಳಿತಕಟೆ ಸಮೀಪದ ಶ್ರೀ । ಗಂಗಾ ।

೬) ॥ ಧರೇಶ್ವರ ದೇವರ ದಿವ್ಯಶ್ರೀ ಪಾದಪದ್ಮಂಗಳಿಗೆ । ಶ್ರೀಮನ್ಮಹಾಪ್ರಭು ।

೭) ॥ ಬೀಳಿಗಿ ಸೋಮಶೇಖರ ನಾಯಕರು ಬರಸಿಕೊಟ ಧರ್ಮಶಾಸನದ ।

೮) ॥ ಕ್ರಮವೆಂತ್ತೆಂದರೆ ದೇವರ ಕಟಲೆ ಕಂದಾಚಾರ ರಥ ಉತ್ಸಹದ ಬ ।

೯) ॥ ಗ್ಯೆ ಸಹಾಶಿವಾರ್ಪಿತವಾಗಿ ಭೂಸ್ವಾಸ್ಥೆ ಬಿಇ ಲಾಳಸವಾಗಿ ಬಿಟು ಧ ।

೧೦)॥ ರ್ಮ ಶಾಸನವ ಬರಶಿ ಕೊಟೆವಾಗಿ ಯಿ ಬಗ್ಯೆ ಬಿಟ ಸಾಸಿಕೊಂಡಲಿ ।

೧೧)॥ ಹೋಬಳಿ ಶಿರುವಳಿಗೆ ಗ್ರಾಮದ ಕೆಳಗಣ ಕೊಳನ ತಿಂಮ್ಮಣನ ।

೧೨)॥ ಹೆಸರಲು ಬರಡು ಬಾಹಾವಟುವರ್ಗದ ಸಿಸ್ತು ಗ ೩೦ಪ=ಕೆಲಿರಮ

೧೩)॥ ನಿಗೆ ತೆತ್ತು ಬಾಹಾಸಿನ್ತುಗ ೬ಪ- ನುಳಿದು ಶುಧ ಸಿಸ್ತುಗ ೨೪ ಯಿ ।

೧೪)॥ ಪತ್ತನಾಲ್ಕು ವರ ಹಾ ಸಿಸ್ತಿಗೆ ಬಾಹಾ ಕಂದಾಯ ವಟ್ಟವರಾಡಲಿಕಾ ।

೧೫)॥ ಲಚಕ್ರ ವರಿವರಾಡಸರು ತೆ ಸಾಂಮ್ಯ ಬಿಟೆ ಶಿರುವಳಿಗೆ ವೀ ।

೧೬)॥ ರಭದ್ರಯನವರಿಗೆ ಅಮರ ಉರಾಕೆ ಬಿಟ ಅವರ ಗುಪಿ ಗ್ರಾ ।

೧೭)॥ ಮದಿಂದ ಅವರಿಗೆ ಸಲುವ ಬಿಟೆ ಆಳನು ಸಲವಿಡಿಶಿ ಆ ।

೧೮)॥ ಆಳು ಜ ೧೨೪ ನೂರಯಿಪತನಾಲ್ಕು ಸಹಾ ಶಿವಾರ್ಪಿತವಾಗಿ

೧೯)॥ ಬಿಟವಾಗಿ ಯಿ ಬಗ್ಯೆ ನಡಸುವ ವಿವರಾ । ಕಟಲೆ ಕಂದಾಚಾರ,

೨೦)॥ ದ ಬಗ್ಯೆ ಸಹ ಸಿಸ್ತು ಗ ೧೨ ರಥ ಉತ್ಸವದ ಬಗ್ಯೆ । ಸಿಸ್ತುಗ ೧೨ ಉ

೨೧)॥ ಭಯಂ ಸಿಸ್ತು ಗ ೨೪ ಯಿಪತು ನಾಲ್ಕುವರಹ ಯಿದಕೆ ಸಲು

೨೨)॥ ವಕಂದಾಯ ವಟವರಾಡಲ ಕಾಲಚಕ್ರವರಿ ವರಾಡಸರು

೨೩)॥ ತೆಸಾಂಮ್ಯ ಬಿಟೆ । ಅವರ ಗುಪಿ ಗ್ರಾಮದಿಂದ ವಿಂಗಡಿಸಿದ

೨೪)॥ ಆಳಜನ ೧೨೪ ಸಹಾ ಆವಕಲುಗಳಿಂದ ಶೇವಿಶಿಕೊಂ ।

೨೫)॥ ಡು ಬಾ ಹಾಗೆ ಶಿವಾರ್ಪಿತವಾಗಿ ಬಿಟುಬರಸಿ ಕೊಟ ಭೂ

೨೬) ॥ ಸ್ವಾಸ್ಥಿ ಧರ್ಮ ಸಾಧನ । ಯಿದಕೆ ದೇವಸಾಕ್ಷಿಗಳು । ಆದಿ ।

೨೭) ॥ ತ್ಯಾ ಚಂದ್ರು ವನಲೋನ ಔಚ ದ್ಯೌರ್ಭೂಮಿ ರಾಹಿ ಹೃದಯಂ ।

೨೮) ॥ ಯಮಶೂಲಿ ಪಾಶುರಾರ್ತಿ ಶು ಉಭೆಚ ಸಂಧ್ಯಾ ಧರ್ಮಸ್ಯ ।

೨೯) । ಜಾನಾತಿನರಸ್ಯ ಉಕ್ತಂ । ಸ್ವದತ್ತಾ ದ್ವಿಗುಣಂ ಪುಣ್ಯಂ ಪ ।

೩೦) । ರದತ್ತಾನುಪಾಲನಂ ಪರದತ್ತಾ ಪ್ರಹರೇಣಾ ಸ್ವದತ್ತಂ ನಿಷ್ಫ ।

೩೧) । ಲಂಭವೇತ್ । ದಾನ ಪಾಲನಯೋರ್ಮಧ್ಯೆ ದಾನಧ್ರೆಯಾನು ।

೩೨) । ಪಾಲನಂ ದಾನಾತ್ಸ್ವರ್ಗ ಮವಾಪ್ನೋತಿ । ಪಾಲನಾದ (ಚು) ।

೩೩) । ತಂ ಪದಂ। ಶ್ರೀ ಸದಾಶಿವಾ ॥

***

## ೨. ಸಿದ್ಧಾಪುರದ ಹಾಳಿತಕಟ್ಟೆ ತಾಮ್ರಪಟ ಶಾಸನ

೧) ೦॥ ಶುಭ ಮಸ್ತು । ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾ

೨) ರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇಸ್ವಸ್ತಿ।

೩) ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೬೯೨ ನೆ ।

೪) ಯ ವಿರೋಧಿ ಸಂವತ್ಸರದ ಶ್ರಾವಣ ಶು. ೧೦ ಲು ಸಿಧಾಪುರದ ಹಾ।

೫) ಳಿತಕಟೆ ಸಮೀಪದ ಶ್ರೀ ಗಂಗಾಧರೇಶ್ವರ ದೇವರ ದಿವ್ಯ ಶ್ರೀಪಾ

೬) ದ ಪದ್ಮಗಳಿಗೆ ಶ್ರೀ ಮನ್ಮಹಾಪ್ರಭು ಬೀಳಿಗಿ ಸೋಮಶೇಖರ

೭) ನಾಯುಕರು ಬರೆಸಿಕೊಟ್ಟ ಕೊಡ ವೀಸದ ಧರ್ಮಶಾಸನದ ಕ್ರಮ

೮) ವೆಂತೆಂದರೆ ನಂಮ ಸೀಮೆವಳಗೆ ಸ್ಥಳ ಪರಸ್ಥಳದ ಮಹಾನಾ

೯) ಡವರು ಶೆಟೆ ಸಮಸ್ತರು ತಾಉ ಉಭಯು ಮಾರ್ಗದಲು ಹೇ

೧೦) ರುವ ಅಡಿಕೆ ಮೆಣಸಿಗೆ ಸಹಾ ಸಿದಾಪುರದ ಹಾಳಿತದ ಕ ।

೧೧) ಟೆಯಲು ಆದ ಲೆಖಕೆ ರಥ ಉತ್ಸಹದ ಬಗ್ಯೆ ಶಿವಾರ್ಪಿ।

೧೨) ತವಾಗಿ ಗ ೧ಕ್ಕೆ ಹ ಹ ವಂದುವರಹಾಕೆ ಮೂರು ವೀಸದಲು ।

೧೩) ಹಾಕಿಕೊಟು ಧರ್ಮಸಾಧನವ ಬರಸಿಕೊಟ ಪ್ರಮಾಣು ಸಿಧಾ ।

೧೪) ಪುರದ ಹಾಳಿತ ಲೇಖಕೆ ಗ ೧ ಕೆ ಹ ಹ ವಂದು ವರಹಾಕೆ ಮೂ

೧೫) ಡ ವೀಸದಲು ಆ ಸ್ಥಳದ ಸೇನಬವರು ಬದುಕು ಮಾಡುವ

೧೬) ವರ ಮುಖಾಂತ್ರ ಕಾಲ ಕಾಲಂಪ್ರತಿಯಲು ಯತಿಶಿ ತರಿಶಿಕೊಂಡು

೧೭) ರಥ ಉತ್ಸವದ ಸೇವೆಯಂನು ನಡಶಿಕೊಂಡು ಬಾಹಾ॥

೧೮) ಗೆ ಶಿವಾರ್ಪಿತವಾಗಿ ಬಿಟೆವಾಗಿಯಂದು ಬರಶಿಕೊಟ।

೧೯) ಡ ವೀಸದ ಧರ್ಮ ಸಾಧನ । ಯಿದಕೆ ಸಾಕ್ಷಿಗಳು ಲೋಕ ಸಾಕ್ಷಿಗ

೨೦) ಳು । ಆದಿತ್ಯ ಚಂದ್ರಾವನ ಲೋನ ತಾ ಚ ದ್ಯೌರ್ಭೂಮಿರಾ ಹೋ ॥

೨೧) ಹೃದಯಂ ಯಮ ಶೂಲಿ ಪಾಶ ರಾತ್ರಿ ಶಉಬೇಚ ಸಂಧ್ಯಾ

೨೨) ಧರ್ಮಸ್ಯ ಜಾನಾತಿನರಸ್ಯ ಉಕ್ತಂ । ಸ್ವದತ್ತಾ ದ್ವಿಗುಣಂ ಪುಂ ।

೨೩) ಣ್ಯಂ ಪರದತಾನು ಪಾಲನಂ। ಪರದತ್ತಾಪಹಾರೇಣ ಸ್ವದತ್ತಾಂ

೨೪) ನಿರ್ಪ(ಷ್ಪ)ಲಂ ಭ' ವೇತ್ । ದಾನ ಪಾಲನಯೋರ್ಮಧ್ಯೆ ದಾನಾದ್ರೇ(ಶ್ರೇ)ಯೋ

೨೫) ನುಪಾಲನಂ ದಾನಾತ್ಸ್ವರ್ಗಮ ವಾಪ್ನೋತಿ ಪಾಲನಾ।

೨೬) ದಚುತಂ ಪದಂ। ಶ್ರೀಸದಾಶಿವಾ ॥





# ಕೂಡ್ಲಿಗಿ ತಾಲ್ಲೂಕು ಮಾಕನಡುಕು ಕಂಚಿ ಓಬಳದೇವರಗುಡಿಯ ಕಂಚು ಮತ್ತು ತಾಮ್ರಪತ್ರಗಳು

**ಪ್ರೊ. ಲಕ್ಷ್ಮಣ್ ತೆಲಗಾವಿ***

## ೧. ಹಿನ್ನೆಲೆ

ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು ಮಾಕನಡುಕು (ಮಾಕುಂದ) ಗ್ರಾಮದ ಕಂಚಿ ಓಬಳದೇವರಗುಡಿಯಲ್ಲಿ ಕಂಚಿನಪತ್ರ ಮತ್ತು ತಾಮ್ರಪತ್ರಗಳನ್ನು ಸಂರಕ್ಷಿಸಿಡಲಾಗಿದೆ. ಈ ದೇವಸ್ಥಾನದ ಪಟ್ಟಾಧ್ಯಕ್ಷ ಶ್ರೀ ಪಿ. ರಾಮಸ್ವಾಮಿ (ನಿವೃತ್ತ ಶಿಕ್ಷಕರು) ಅವರ ವಶದಲ್ಲಿ ಈ ಪತ್ರಗಳಿವೆ. ಕಂಚಿನಪತ್ರವು ಈ ದೇವಸ್ಥಾನದ ಅರ್ಚಕರಿಗೆ ನೀಡಲಾದ ಹಕ್ಕನ್ನು ಕುರಿತು ಹೇಳಿದರೆ, ತಾಮ್ರಪತ್ರವು ಜರಿಮಲೆ ಸಂಸ್ಥಾನದ ದೊರೆಗಳು ಶ್ರೀ ತೆಂ. ದೇವರಿಗೆ ವಸ್ತುಗಳನ್ನು ಮಾಡಿಸಿದ ಹಾಗೂ ಭಕ್ತಿಯನ್ನು ಸಲ್ಲಿಸಿದ ವಿವರವನ್ನು ಒದಗಿಸುತ್ತದೆ. ಕಂಚಿನಪತ್ರದಲ್ಲಿ ಓಬಳದೇವರನ್ನು 'ಪೆದ್ದ ಅಹೋಬಲಸ್ವಾಮಿ' ಯೆಂದು ಕರೆದಿರುವುದರಿಂದ, ಇದನ್ನು 'ಪೆದ್ದೋಬಳಸ್ವಾಮಿಯ ಕಂಚಿನಪತ್ರ' ವೆಂದೂ 'ಮಾಕನಡುಕು ಕಟ್ಟೇಮನೆಯ ಕಂಚಿನಪತ್ರ'ವೆಂದೂ ಗುರುತಿಸಲಾಗುತ್ತದೆ.

ಹಾಗೆಯೇ, ಓಬಳದೇವರ ಗುಡಿಯನ್ನು 'ಶ್ರೀ ಕಂಚೋಬಳ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ಮಠ'ವೆಂತಲೂ ಪ್ರಸ್ತಾಪಿಸಿರುವುದುಂಟು. ಈ ಮಠದ ಜೀರ್ಣೋದ್ಧಾರ ಕಾರ್ಯವನ್ನು 'ಜರಿಮಲೆ ಗುಡೆಕೋಟೆ ಶ್ರೀ ಸಂಸ್ಥಾನಿಕರು, ಮಾಕನಡುಕು ಶ್ರೀ ಶ್ರೀ ಶ್ರೀ ಕಂಚೋಬಳ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ಮಠದ ಪಟ್ಟಾಧ್ಯಕ್ಷರು, ಮಠದ ಅಣ್ಣತಮ್ಮಂದಿರು ಹಾಗೂ ಮಳೇಲ ಹಂದಲಕ್ಕೆ ಸೇರಿದ ಶಿಷ್ಯವೃಂದದ ಎಲ್ಲಾ ಅಣ್ಣತಮ್ಮಂದಿರು' ೧೯೮೨-೧೯೮೫ರಲ್ಲಿ ಕೈಗೊಂಡಿರುತ್ತಾರೆ. ಈ ದೇವಸ್ಥಾನದ ಶಂಕುಸ್ಥಾಪನೆಯು ೧೯೮೨ರಲ್ಲಿ ನೆರವೇರಿದ್ದರೆ, ಪ್ರಾರಂಭೋತ್ಸವವು ೧೯೮೫ರಲ್ಲಿ ನೆರವೇರಿರುತ್ತದೆ.

## ೨. ಕಂಚಿನಪತ್ರ ಮತ್ತು ತಾಮ್ರಪತ್ರಗಳ ವಿವರ

ಕಂಚಿನಪತ್ರದ ಉದ್ದ ೪೦ ಸೆಂ.ಮೀ., ಅಗಲ ೨೬.೫ ಸೆಂ.ಮೀ. ಇದಕ್ಕೆ ಬೆಳ್ಳಿ ಚೌಕಟ್ಟನ್ನು ತೊಡಿಸಲಾಗಿದ್ದು, ಎರಡೂ ಕೊನೆಗಳಲ್ಲಿ ಅಳವಡಿಸಲಾದ ಬೆಳ್ಳಿಗೆಜ್ಜೆಗಳಲ್ಲಿ ಬಲಬದಿಯ ಉದುರಿಹೋಗಿದೆ. ಈ ಪತ್ರದ ಎರಡು ಮಗ್ಗುಲಲ್ಲೂ ಬರಹವಿದ್ದು, ಒಟ್ಟು ೬೨ ಸಾಲುಗಳಿವೆ. ಎಲ್ಲಿಯೂ ಮುಕ್ಕಾಗಿರದ ಬರಹ. ಭಾಷೆ ತೆಲುಗು; ಲಿಪಿ ಕನ್ನಡದ್ದು. ಕಾಲಮಾನವು 'ಶಾಲಿವಾಹನಶಕ ೧೨೩ನೇ ಆನಂದ ಸಂ॥ದ ಆಶ್ವೀಜ ಶುದ್ಧ ೧೦ ಗುರುವಾರ' ಎಂದಿದ್ದು, ಇದು ಕ್ರಿ.ಶ. ೨೦೧ಕ್ಕೆ ಸರಿಹೊಂದುತ್ತದೆ. ಆದರೆ ಈ ಕಂಚಿನಪತ್ರದಲ್ಲಿ 'ನರಪತಿ ದೇವ ಮಹಾರಾಜು ಶ್ರೀ ವೀರವೆಂಕಟರಾಜು ತಿರುಮಲ ಮಹರಾಜುಲುವಾರು' ಎಂಬ ಉಲ್ಲೇಖ ವಿರುವುದರಿಂದ, ಈ ಅರಸನು ಅರವೀಡು ಮನೆತನದ ಸದಾಶಿವರಾಯನ ತರುವಾಯ ವಿಜಯನಗರದ ಅರಸನಾಗಿ ಪೆನುಗೊಂಡೆಯಿಂದ ಆಳ್ವಿಕೆ ನಡೆಸಿದ ತಿರುಮಲ ದೇವರಾಯ (ಕ್ರಿ.ಶ. ೧೫೬೯-೧೫೭೨) ನಿರಬಹುದು. ಈತನನ್ನು ಮಹಾರಾಜಾಧಿರಾಜ, ವೀರಪ್ರತಾಪ ತಿರುಮಲದೇವರಾಯ ಇತ್ಯಾದಿಯಾಗಿಯೂ ಗುರುತಿಸಲಾಗಿದೆ. ಆದರೆ ಈ ಕಂಚಿನ ಪತ್ರದ ಬರವಣಿಗೆ ೧೬ನೇ ಶತಮಾನದ್ದೇನಲ್ಲ; ೧೮ನೇ ಶತಮಾನದ್ದೆನ್ನಲಡ್ಡಿಯಿಲ್ಲ.

ತಾಮ್ರಪತ್ರವು ಇದೇ ತಾಲ್ಲೂಕಿನ ಜರಿಮಲೆ ಸಂಸ್ಥಾನಕ್ಕೆ ಸಂಬಂಧಿಸಿದುದು. ಈ ಸಂಸ್ಥಾನದ ದೊರೆಗಳಾದ ರಾಜಾ ಸಿದ್ದಲಿಂಗಪ್ಪನಾಯಕ, ರಾಜಾ ರಾಮಪ್ಪನಾಯಕ ಹಾಗೂ ಲಕ್ಕಪ್ಪನಾಯಕರು ಸ್ವಂತವಾಗಿ ಮಾಡಿಸಿದ ಕೆಲವು ವಸ್ತುಗಳನ್ನು ಶ್ರೀ ತೆಂ. ದೇವರಿಗೆ ಅರ್ಪಿಸಿದ ವಿವರಗಳಿವೆ ಈ ಪತ್ರದಲ್ಲಿ. ೩೯ ಸಾಲುಗಳಲ್ಲಿರುವ ಈ ತಾಮ್ರಪತ್ರದ ಉದ್ದ ೩೮ ಸೆಂ.ಮೀ.; ಅಗಲ ೮ ಸೆಂ.ಮೀ. ಕನ್ನಡ ಲಿಪಿ ಮತ್ತು ಭಾಷೆಗಳಲ್ಲಿದೆ. ಇದರ ಕಾಲಮಾನ ೧೯ನೇ ಶತಮಾನ.

## ೩. ಮಾಕನಡುಕು ಓಬಳದೇವರು

ವ್ಯಾಸನಾಯಕರು ಅಥವಾ ವ್ಯಾಸಬೇಡರು ಆರಾಧಿಸುವ ದೇವರುಗಳಲ್ಲಿ ಮಾಕನಡುಕು ಓಬಳದೇವರು ಸಹಾ ಒಂದು. ಇದು ೧೨ ಪೆಟ್ಟಿಗೆ ದೇವರುಗಳಲ್ಲಿ ಒಂದೆಂದು

* C/o ಪರಶುರಾಮ ಸಾಂಬ್ರಾಣಿ ೧೫, ಸೋಮಶೇಖರ ನಿಲಯ, ಯಲ್ಲಮ್ಮದೇವಿ ಹೌಸಿಂಗ್ ಸೊಸೈಟಿ, ರಜತಗಿರಿ, ಧಾರವಾಡ-೫೮೦೦೦೪

ಪರಿಗಣಿತವಾಗಿದೆ. ಮಾಕನಡುಕು ಗ್ರಾಮದಲ್ಲಿ ಮಳೇಲರು (ಮಳೆಲಾರು/ಮಳೆಲೋರು/ಮರುಳೆನವರು) ಪಂಗಡದವರಿದ್ದು, ಓಬಳದೇವರನ್ನು ಪೂಜಿಸುವವರು ಅವರೇ. ಓಬಳದೇವರೆಂಬುದು ವಿಷ್ಣುಸಾಲಿಗ್ರಾಮವನ್ನು ಇರಿಸಿಕೊಂಡಿರುವ ಪೆಟ್ಟಿಗೆ. ಇಂಥಾ ಪೆಟ್ಟಿಗೆ ದೇವರುಗಳನ್ನು ಪೂಜಿಸುವುದೇ ವ್ಯಾಸಬೇಡರ ಸಂಪ್ರದಾಯ. ೧೨ ಪೆಟ್ಟಿಗೆಗಳನ್ನು ೧೨ ದೇವತೆಗಳೆಂದೂ ತಮ್ಮ ಕುಲವನ್ನು ಆಶೀರ್ವದಿಸಿದ ೧೨ ಮಹರ್ಷಿಗಳೆಂದೂ ಅವರು ನಂಬುತ್ತಾರೆ.

ಪರಂಪರೆಯಿಂದ ಬಂದ ಕತೆಯ ಪ್ರಕಾರ, ಮಳೇಲು ಮಹಾದೇವನೆಂಬಾತನು ಅಚಲವಾದ ಹರಿಭಕ್ತಿಯಿಂದ ಕಂಚಿ ವಿಷ್ಣುಮೂರ್ತಿಯನ್ನು ಮೆಚ್ಚಿಸಿ ಅನೇಕ ಪವಾಡಮೂರ್ತಿಯಾಗಿ ಸಂಚರಿಸುತ್ತಾ ತಾನು ಪೂಜಿಸುತ್ತಿದ್ದ. ಕಂಚೋಬಳ ಸಾಲಿಗ್ರಾಮವನ್ನು ಮುದ್ದಾಪುರ, ಮಾಕನಡುಕುಗಳಲ್ಲಿ ಸ್ಥಾಪಿಸಿ, ಮಳೇಲರ ಕಂಚೋಬಳದೇವರೆಂದು ಪ್ರಸಿದ್ಧಿ ಮಾಡಿದ. ಈ ಗೋತ್ರಕ್ಕೆ ಕಾಮಗೇತಿ ಪಾಳೆಯಗಾರರು ಕೋಲುಕಾರರೆಂದು ಹಾಗೂ ತಳವಾರರೆಂದು ಕರೆದು ತಮ್ಮ ಸಂಸ್ಥಾನದ ಪ್ರತಿ ಊರಿನ ಸ್ಥಳವಿಚಾರವನ್ನು ಇವರ ಕಡೆಯಿಂದ ತಿಳಿದುಕೊಳ್ಳುತ್ತಿದ್ದರು. ವೀಳ್ಯೆಗಳು ಸಲ್ಲತಕ್ಕ ವಿಚಾರದಲ್ಲಿ, ಕಂಚೋಬಳ ದೇವರ ವೀಳ್ಯವನ್ನು ಮಳೇಲರಿಗೂ ಚಿತ್ರದೇವರು ಮತ್ತು ನರಸಿಂಹದೇವರ ವೀಳ್ಯವನ್ನು ಕಾಮುಗೇಲರಿಗೂ ಸಲ್ಲಬೇಕೆಂದು ಕಟ್ಟಳೆಯಿದೆ. ಪ್ರಸ್ತುತ ಕಂಚಿನಪತ್ರವು ಈ ಮೇಲಿನ ಕತೆಗಿಂತ ಭಿನ್ನವಾದ ಹಿನ್ನೆಲೆಯನ್ನು ಒದಗಿಸುತ್ತದೆ. ಕಂಚಯಿಂದ ಕರ್ನಾಟಕಕ್ಕೆ ಬಂದು ಮಾಕನಡುಕು ಗ್ರಾಮದಲ್ಲಿ ಸ್ಥಿರವಾಗಿ ನೆಲೆಸಿ, ಪೆದ್ದೋಬಲದೇವರನ್ನು ಸ್ಥಾಪಿಸಿ ಪೂಜಿಸುವ ಅಧಿಕೃತ ವೃತ್ತಾಂತವನ್ನು ಅರುಹುತ್ತದೆ.

ಇಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಪ್ರಮುಖಾಂಶವೆಂದರೆ, ಚಿತ್ರದುರ್ಗ ತಾಲ್ಲೂಕು ಮುದ್ದಾಪುರ–ಹೊಸಹಟ್ಟಿಯಲ್ಲಿಯೂ ಶ್ರೀಕಂಚೋಬಳ ದೇವಸ್ಥಾನವಿದೆ. ಇದಕ್ಕೂ ಪೂಜೆ ಸಲ್ಲಿಸುವವರು ಮಳೇಲರು. ಮುದ್ದಾಪುರ, ಜೋಗೇನಹಟ್ಟಿ, ಹೊಸಹಟ್ಟಿಗಳ ಪರಿಸರದಲ್ಲಿ ಮಳೇಲರಿಗೆ ಸಂಬಂಧಿಸಿದ ೧೦೦ಕ್ಕೂ ಹೆಚ್ಚು ಮನೆಗಳಿವೆ. ಶಿವರಾತ್ರಿ ಸಂದರ್ಭದಲ್ಲಿ ಕಾರುಹುಣ್ಣಿಮೆಯಲ್ಲಿ ಈ ಕಂಚೋಬಳ ದೇವರ ಜಾತ್ರೆ ನಡೆಸುತ್ತಾರೆ. ಮೇಲೆಯೇ ನೋಡಿದಂತೆ, ಮಳೇಲರ ಏಳು ಗುಡಿಕಟ್ಟುಗಳಲ್ಲಿ ಮುದ್ದಾಪುರವೂ ಒಂದಾಗಿದ್ದು, ಇನ್ನುಳಿದವೆಂದರೆ ಮಾಕನಡುಕು, ದೊಡ್ಡಘಟ್ಟ, ಸುಲ್ತಾನಿಪುರ (ಲಿಂಗದಹಳ್ಳಿ), ಸೊಂಡೇಕೊಳ, ಕೋಡಿಹಳ್ಳಿ ಮತ್ತು ಕಲ್ಕುಂಟೆ. ಇವು ಏಳು ಜನ ಅಣ್ಣ–ತಮ್ಮಗಳು (ಅಜ್ಜಗಳು) ಹೋಗಿ ನೆಲೆಸಿರುವ ಸ್ಥಳಗಳು. ಮುದ್ದಾಪುರ ಶ್ರೀಕಂಚೋಬಳ ದೇವಸ್ಥಾನಕ್ಕೆ ಸಂಬಂಧಿಸಿದಂತೆ ನಾಲ್ಕು ಕಂಚಿನ ತಗಡುಗಳು (೫ ಪುಟಗಳು) ಲಭ್ಯವಿದ್ದು, ಇವುಗಳ ಕಾಲಮಾನ ಶಕ ೧೪೭೦ ಕೀಲಕ ಸಂವತ್ಸರ, ಅಂದರೆ ಕ್ರಿ.ಶ. ೧೫೪೮. ಇವುಗಳನ್ನು ಪ್ರತ್ಯೇಕವಾಗಿ ಅಧ್ಯಯನಿಸಲಾಗಿದೆ. ಮಾಕನಡುಕು ಕಂಚಿನಪತ್ರದ ವಿಷಯವಾದರೂ ಕನ್ನಡಲಿಪಿ, ತೆಲುಗು ಭಾಷೆಗಳಲ್ಲಿರುವ ಈ ಕಂಚಿನಪತ್ರಗಳ ಸಾರಾಂಶವೇ ಆಗಿರುವುದು ದೃಢಪಡುತ್ತದೆ.

## ೪. ಕಂಚುಪತ್ರದ ಸಾರಾಂಶ

ಶ್ರೀಕಂಚಿಪೆದ್ದೋಬಳಾಖ್ಯಾಂ (ಅಂಕಿತ).

ಕ್ರಿಸ್ತಶಕ ೨೦೧೧ರಲ್ಲಿ, ಗುರುವಾರದಂದು, ಶ್ರೀ ವೀರವೆಂಕಟರಾಜು ತಿರುಮಲಮಹಾರಾಜರವರು ಮತ್ತು ಪತ್ನಿ ಮಾಗರುಮ್ಮ–ಇವರ ಮಗಳು (ಮರುಳೆ) ಕಾಶಮ್ಮ ಋತುಸ್ನಾನ ಮಾಡಿ ಸಜ್ಜೆ ಮೇಲೆ ನಿಂತು ತನ್ನ ತಲೆಗೂದಲು ಒರೆಸಿಕೊಳ್ಳುತ್ತಿರುವಾಗ, ಸೂರ್ಯನಾರಾಯಣದೇವರು ಈಕೆಯನ್ನು ಕಂಡು ಮೋಹಿಸುತ್ತಾನೆ. ಕಾಶಮ್ಮ ಗರ್ಭ ಧರಿಸುತ್ತಾಳೆ. ಸ್ವಲ್ಪ ಕಾಲಾನಂತರ ಆಕೆಯಲ್ಲಿ ಆದ ಬದಲಾವಣೆಯನ್ನು ಕಂಡು ಮಾತಾ–ಪಿತರಿಗೆ ಸಂದೇಹ ವುಂಟಾಗುತ್ತದೆ. ಸೂರ್ಯ ಭಗವಾನನು ಅವರ ಕನಸ್ಸಿನಲ್ಲಿ ಕಾಣಿಸಿಕೊಂಡು "ಕಾಶಮ್ಮನ ವಿಷಯದಲ್ಲಿ ಸಂದೇಹ ಬೇಡ; ನಾಯೋಕ್ತ ಕರುಣಕಟಾಕ್ಷ ಬಲವನ್ನುಂಟುಲೋಸುಗವೇ ಈ ಗರ್ಭಧಾರಣೆ; ನೀವು ನಿಶ್ಚಿಂತವಾಗಿರಿ" ಎಂದ. ಆ ಪ್ರಕಾರವೇ ಅವರು ಸ್ವಸ್ಥಚಿತ್ತದಿಂದಿದ್ದರು. ಮರುಳೆ ಕಾಶಮ್ಮನ ಹೊಟ್ಟೆಯಲ್ಲಿ ಮರುಳೆಮುತ್ತಲ ಬಸವಂತರಾಯ ಹುಟ್ಟಿದ. ತಿರುಮಲ ರಾಜರು ಉತ್ತರದಿಕ್ಕಿನ ಕೃಷ್ಣನಗರವನ್ನು ಆತನಿಗೆ ಕೊಟ್ಟರು. ಅವನು ಇದನ್ನು ಒಪ್ಪಿ ಅಲ್ಲಿ ದೊರೆತನ ಮಾಡುತ್ತಿದ್ದ. ಅಲ್ಲಿಂದ ಬಸವಂತರಾಯನು ಕಂಚಿಗೆ ಬಂದನಂತರ ಅಲ್ಲಿ ಅವನಿಗೆ ಇಮ್ಮಡಿರಾಜು ಜನಿಸಿದ. ಈತನ ಮಗ ಮುಮ್ಮಡಿರಾಜು. ಈತನಿಗೆ ಜಡಕರಾಜು, ಬಡಕರಾಜು, ಮರುಳೆರಾಜು, ತರುಳೆರಾಜು, ಗಂಡರಾಜು, ಭೋಜರಾಜು ಮತ್ತು ದೊಡ್ಡರಾಜು ಎಂಬ ಏಳು ಜನ ಮಕ್ಕಳಾದರು. ಈ ಏಳು ಜನ ಅಣ್ಣತಮ್ಮಂದಿರು ದಕ್ಷಿಣ ದಿಕ್ಕಿನ ಜಡಕಂದುರ್ಗ (ಜಡಕಲ್ಲುದುರ್ಗ?) ಸ್ಥಳದ ದೊರೆತನ ಮಾಡುತ್ತಿದ್ದರು.

ಇವರಿಗೆ ಗುರುವಾಗಿದ್ದವರು ಕಂಚಿ ಪೆದ್ದೋ ಬಳಾಚಾರ್ಯ ಎಂಬವರು. ಅವರು ಈ ಕಲಿಯುಗ ಪ್ರಪಂಚವು ಬಹಳ ಹದ್ದುಮೀರಿದೆಯೆಂದು ಅರಿತು, ಪೆದ್ದ ಅಹೋಬಲಸ್ವಾಮಿಯನ್ನು ತೆಗೆದುಕೊಂಡು ಹೊರಡಲು ಸಮುದ್ರವು ದಾರಿಬಿಟ್ಟಿತು. ಈ ಏಳುಜನ ಅಣ್ಣತಮ್ಮಂದಿರು ಈ ಗುರುಸ್ವಾಮಿಯನ್ನು ಹಿಂಬಾಲಿಸಲು ಆ ಗುರುಗಳು,

"ನೀವೇಕೆ ನನ್ನೊಡನೆ ಬರುತ್ತೀರಿ? ನಿಮ್ಮ ದೊರೆತನವನ್ನು ಮಾಡಿಕೊಂಡು ನೀವು ಸುಖದಿಂದ ಇರಬೇಕು" ಎಂದು ಅವರಿಗೆ ಅಪ್ಪಣೆಯಿತ್ತರು. ಇದಕ್ಕೆ ಈ ಅಣ್ಣತಮ್ಮಂದಿರು, "ನೀವು ಏನು ಮಾಡಿದರೂ ಸರಿ, ನಮಗೆ ಈ ದೊರೆತನ ಏತಕ್ಕೆ? ತಮ್ಮ ಹಿಂದೆಯೇ ಬರುತ್ತೇವೆ, ಇನ್ನು ನಮಗೆ ಏನೂ ಬೇಡ" ಎಂದರು. ಅದಕ್ಕೆ ಸ್ವಾಮಿಗಳವರು, "ಪೆದ್ದ ಅಹೋಬಲಸ್ವಾಮಿಯನ್ನು ನಿಮಗೆ ನೇಮಿಸಿಕೊಡುತ್ತಿದ್ದೇನೆ" ಎಂದು ಹೇಳಿ, ಮುದ್ರಾಧರ್ಮಗಳು ಶಂಖ, ಚಕ್ರ, ಗುರುಕಲಶ, ಗದ್ದುಗೆ, ರತ್ನಗಂಬಳಿ ಮೊದಲಾದ ಕುರುಹುಗಳನ್ನು 'ಅವರಿಗೆ ಒಪ್ಪಿಸಿ, "ಇನ್ನು ಗುರುತನ-ದೊರೆತನಗಳೆಲ್ಲ ನಿಮ್ಮವೇ" ಎಂದು ಆಶೀರ್ವದಿಸುತ್ತಾರೆ. ಅವರಿಗೆ ನಾನಾ ವಿಧದಲ್ಲಿ ತಿಳಿಸಿ ಹೇಳಿ, ಅವರಿಂದ ಸಮ್ಮತಿ ಪಡೆದುಕೊಳ್ಳುತ್ತಾರೆ. "ನೀವಿನ್ನು ಗುರು ಅನುಮತಿಯಿಲ್ಲದೆ ಮತ್ತೆ ಹಿಂದಿರುಗಿ ಬಂದರೆ ಸಮುದ್ರವು ಯಥಾಪ್ರಕಾರ ಆವರಿಸಿಕೊಳ್ಳುತ್ತದೆ. ನಿಮ್ಮ ದೊರೆತನವನ್ನು ಮಾಡಿಕೊಂಡು ಕೆಲವು ತಲೆಮಾರುಗಳ ಕಾಲ ಸುಖವಾಗಿರಿ" ಎನ್ನುತ್ತಾರೆ.

ಶ್ರೀ ಗುರುಸ್ವಾಮಿಗಳು ಕೊಟ್ಟ ಮುದ್ರೆಗಳು, ರತ್ನಗಂಬಳಿ ಕುರುಹುಗಳು; ದೇವರಕತ್ತಿ, ಚಕ್ರ, ಗುರುಕಲಶ, ಗದ್ದುಗೆಗಳೆಲ್ಲವನ್ನೂ ದೇವರ ಅರ್ಚಕತ್ವವನ್ನೂ ದೊಡ್ಡರಾಜನ ಮಗ ಪೆದೋಬಳರಾಜುವಿಗೆ ವಹಿಸಲಾಗುತ್ತದೆ. ನರಪತಿ ದೇವಮಹಾರಾಜ ಶ್ರೀ ವೀರವೆಂಕಟರಾಜು ತಿರುಮಲ ಮಹಾರಾಜರವರು ಸದಂ ಏಳುಜನ ಅಣ್ಣತಮ್ಮಂದಿರು ಸ್ವತಃ ತಾವೇ ಪೆದೋಬಳ ರಾಜುವಿಗೆ ನೇಮಕ ಮಾಡಿ ಪಟ್ಟವನ್ನು ಕಟ್ಟಿದ ಪ್ರಕಾರ ಈತನೇ ಗುರುವು. ನರಪತಿಯವರು ಕಂಚಿದೇಶಕ್ಕೆ ಹಿಂದಿರುಗಿ ಆ ನಂತರ ಅವರ ಪೋಷಣೆಗಾಗಿ ಕಾಣಿಕೆಯನ್ನು ಕಳುಹಿಸಿಕೊಡುತ್ತಾರೆ.

ಕೆಲವು ಕಾಲ ಕಳೆದ ನಂತರ ಈ ಅಣ್ಣತಮ್ಮಗಳು ಅಲ್ಲಿಂದ ಕರ್ನಾಟಕಕ್ಕೆ ಹೊರಡಬೇಕೆಂದು ನಿರ್ಧರಿಸಿ ಈ ದೇಶಕ್ಕೆ ಬಂದರು. ಅಲ್ಲಿಂದ ಕಡೂರು, ಬಾಣಾವಾರಗಳಿಗೆ; ಅಲ್ಲಿಂದ ಕಲ್ಲುಕುಂಟೆಗೆ; ಅಲ್ಲಿಂದ ಮಳೇಲಪುರಕ್ಕೆ; ಅಲ್ಲಿಂದ ದೊಡ್ಡಗಟ್ಟಕ್ಕೆ ಬಂದರು. ಸ್ವಲ್ಪಕಾಲ ವುಯ್ಯಲೂರಿನಲ್ಲಿ ವಾಸಿಸಿದರು. ಅಲ್ಲಿಂದ ವೇಪುರದಲ್ಲಿ ನೇಮ ತೀರಿಸಿಕೊಂಡು ಈ ಏಳುಜನ ಗುರುರಾಜರು ತಮ್ಮ ಗುರುದೇವ ಪೆದೋಬಳರಾಜುವಿನ ಸಹಿತ ಮಾಕನಡುಕಿನಲ್ಲಿ ಸ್ಥಿರವಾಗಿ ನಿಂತರು. ಆ ನಂತರ ನೇಮವನ್ನು ಮಾಡಿಸುವುದಾದರೆ, ಈ ಏಳುಜನ ದೊರೆಗಳು ಎಪ್ಪತ್ತೇಳು ಗುರುಕುಲಗಳ ಸಹಿತವಾಗಿ ಓಬಳಾಪುರಂನ ನೇಮ ತೀರಿಸಿಕೊಂಡು, ಉಯ್ಯಲೂರಿನಲ್ಲಿ ವಾಸವಾಗಿದ್ದುಕೊಂಡು, ತಮ್ಮ ತಮ್ಮ ಗ್ರಾಮ ಗ್ರಾಮಗಳಿಗೆ ಬರಬೇಕೆಂದು ನಿರ್ಣಯ ಮಾಡಿದರು. ಇದನ್ನು ತಪ್ಪಿಸಬಾರದು. ಈ ವಂಶದಲ್ಲಿ ಇದಕ್ಕೆ ವಿರುದ್ಧವಾಗಿ ನಡೆದವರಿಗೆ ಗುರುದ್ರೋಹ ತಪ್ಪುವುದಿಲ್ಲವೆಂದು ನಿರ್ಣಯ ಮಾಡಿರುತ್ತಾರೆ.

**೫. ತಾಮ್ರಪತ್ರದ ಸಾರಾಂಶ**

ಜರಿಮಲೆ ಸಂಸ್ಥಾನದ ದೊರೆಗಳು ರಾಜಾ ಸಿದ್ದಲಿಂಗಪ್ಪನಾಯಕರು, ರಾಜಾ ರಾಮಪ್ಪ ನಾಯಕರು ಮತ್ತು ಲಕ್ಷ್ಮಪ್ಪ ನಾಯಕರು ತೆಂ. ದೇವರಿಗೆ ಸ್ವಂತವಾಗಿ ಮಾಡಿಸಿದ ವಸ್ತುಗಳು:

| | | |
|---|---|---|
| ಮಂದಾಸನ ಮಾಡಿಸಿದ್ದು | – | ರು. ೪೧೪ |
| ನಡುವಿನ ಡಾಬುಗಳು – ೨ | – | ೮೦ |
| ಬಾಸಿಂಗ ಕಲಹಂಡೆ ನಾ । | – | ೭೦ |
| ಪತ್ರದ ಬಾಬತ್ತು ತ್ರಿಶೂಲ | – | ೨೦ |
| ಧರ್ಮದ ಖರ್ಚು | – | ೧೫೦ |
| ಪೆಟ್ಲುಮಸಿ | – | ೨೫ |
| ಮುತ್ತು – ಹವಳ | – | ೧೫ |
| ಹಣ ಎತ್ತುವಳಿ ಮಾಡಿದ ಜನರಿಗೆ | – | ೬೦ |
| ಯಿಕುಟ್ಟು ಅನುತುಲಿಸಿ ಓಬಳಾಪುರದಲ್ಲಿ | | |
| ನೋಮು ಮಾಡಿದ ಖರ್ಚು | – | ಖಂ.೩° |
| ನಡಿಕಲ್ಲು | – | ಖಂ.೦/೩ |
| ಯಂಣ್ಣೆ | – | ಮಂ. ೧೨ |
| ತುಪ್ಪ | – | ಮಂ. ೦೮ |
| ಬಾಳೆಹಣ್ಣು | – | ೩೦೦೦ |
| ಉಳಿ – ಉಪ್ಪು – ಖಾರ | – | ರು. ೨೦° |

ಸಂಗ್ರಹ ನಮಗೆ ಮುಟ್ಟಿರುತ್ತದೆ.

ನಾಯಕನಹಟ್ಟಿ ಕೆರೆಯಲ್ಲಿ ಬೆರ(ನ)ವನ ವಶೀಕರಿಸಿ ಸದರಿ ಸಂವತ್ಸರ (?) ಮಾಘ ಬಹುಳ ೧ರಂದು ಊರಿಗೆ ಬಂದದ್ದು. ಈ ಕಾರ್ಯ ಯಾವತ್ತು ತಮ್ಮದೇ. ಗೋಟುಗೌಡ ಓಬಣ್ಣ ಮಾಡಿಸಿರುತ್ತಾನೆ.





**ಶ್ರೀ ಪಿ. ರಾಮಸ್ವಾಮಿ ಅವರು ಮಾಕನಡುಕು**
**ಶ್ರೀ ಕಂಚೋಬಳದೇವರಗುಡಿಯ ಪಟ್ಟಾಧ್ಯಕ್ಷರು**



**ಮಾಕನಡುಕು ಶ್ರೀ ಕಂಚೋಬಳದೇವರಗುಡಿಯಲ್ಲಿರುವ ಜರಿಮಲೆ ದೊರೆಗಳಿಗೆ ಸಂಬಂಧಿಸಿದ ತಾಮ್ರಪತ್ರ**



**ಮಾಕನಡುಕು ಶ್ರೀ ಕಂಚೋಬಳದೇವರಗುಡಿಗೆ ಸಂಬಂಧಿಸಿದ ಕಂಚುಪತ್ರ**
**(ಮುಮ್ಮುಖ ಹಾಗೂ ಹಿಮ್ಮುಖ)**

## ಆಕರ ಸಾಹಿತ್ಯ


೧. ಪಂಡಿತ ರೇವಣ್ಣಶಾಸ್ತ್ರಿ, ೧೯೫೯, **ವಾಲ್ಮೀಕರ ಪುರಾಣವು,** ಬ್ರಹ್ಮ ತೀರ್ಥಾಶ್ರಮ, ದ್ಯಾಮವ್ವನಹಳ್ಳಿ-ಹೆಮ್ಮನಬೇತೂರು, ದಾವಣಗೆರೆ ತಾಲ್ಲೂಕು.

೨. ಕೃಷ್ಣಮೂರ್ತಿ ಹನೂರು, ೧೯೯೩, **ಮ್ಯಾಸಬೇಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ತಲೇಖಾನ್ ಗ್ರಾಮದ ಅಪ್ರಕಟಿತ ಶಾಸನಗಳು

ಡಾ. ಚನ್ನಬಸಪ್ಪ ಮಲ್ಕಂದಿನ್ನಿ*

**ತ**ಲೇಖಾನ್ ಗ್ರಾಮವು ರಾಯಚೂರು ಜಿಲ್ಲೆ ಲಿಂಗಸೂಗೂರು ತಾಲೂಕಿನ ಮಸ್ಕಿ ಹೋಬಳಿ ವ್ಯಾಪ್ತಿಯಲ್ಲಿದೆ. ಇಲ್ಲಿ ಒಟ್ಟು ಹನ್ನೆರಡು ಅಪ್ರಕಟಿತ ಶಾಸನಗಳು ಬೆಳಕಿಗೆ ಬಂದಿವೆ. ಈ ಶಾಸನಗಳು ಕ್ರಿ.ಶ. ೭-೮ನೇ ಶತಮಾನದಿಂದ ಕ್ರಿ.ಶ. ೧೭-೧೮ನೇ ಶತಮಾನದವುಗಳಾಗಿವೆ. ಇವುಗಳಲ್ಲಿ ೭ ಮತ್ತು ೮ನೇ ಸಂಖ್ಯೆಯ ಶಾಸನಗಳನ್ನು ಓದುವುದಕ್ಕೆ ಸಾಧ್ಯವಾಗಿಲ್ಲ. ಕಾರಣ ಈ ಎರಡು ಶಾಸನಗಳನ್ನು ಗ್ರಾಮಸ್ಥರು ದೇವಾಲಯದ ಒಳಭಿತ್ತಿಯಲ್ಲಿ ಜೋಡಿಸಿದ್ದು, ಅವುಗಳಿಗೆ ಸುಣ್ಣ, ಎಣ್ಣೆಯು ಮೆತ್ತಿಕೊಂಡಿದ್ದರಿಂದ ಅಕ್ಷರಗಳು ಸರಿಯಾಗಿ ಕಾಣಿಸುತ್ತಿಲ್ಲ. ಇವುಗಳ ಪಡಿಯಚ್ಚು ತೆಗೆಯಲು ಇಲ್ಲಿನ ನಾಗರೀಕರು ಅಡ್ಡಿಪಡಿಸುತ್ತಿದ್ದಾರೆ. ಆದುದರಿಂದ ಈ ಹಿಂದೆ ಹೈದ್ರಾಬಾದ್ ಪ್ರಾಚ್ಯವಸ್ತು ಇಲಾಖೆಯವರು ಸರ್ವೆ ಮಾಡಿದ ವರದಿ ARIE. 1957-58 B.No. – 374 and 375 ಸಾರಾಂಶವನ್ನು ಇಲ್ಲಿ ಯಥಾವತ್ತಾಗಿ ಸೇರಿಸಲಾಗಿದೆ. ಹಾಗೆಯೇ ಕಣಿವೆ ಹನುಮಪ್ಪ ದೇವಾಲಯದ ೯ನೇ ಸಂಖ್ಯೆಯ ಶಾಸನವು ಸಂಪೂರ್ಣವಾಗಿ ಅಳಸಿ ಹೋಗಿದೆ. ಈ ಶಾಸನಗಳು ದತ್ತಿ ನೀಡಿದ ಶಾಸನಗಳಾಗಿದ್ದು, ೩ನೇ ಸಂಖ್ಯೆ ಶಾಸನವು ತಲೆಖಾನ್ ಗ್ರಾಮದಿಂದ ಪೂರ್ವದಿಕ್ಕಿಗೆ ೪ ಕಿ.ಮೀ. ದೂರದ ಜಮೀನಿನಲ್ಲಿದೆ (ಸರ್ವೆ ನಂಬರ-೧೨೪). ಇದು ೧೮ ಸಾಲುಗಳಿಂದ ಕೂಡಿದ್ದು, ಜೈನರ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನ ಶಿಲ್ಪವನ್ನು ಮೇಲ್ಬದಿಯಲ್ಲಿ ಕಂಡರಿಸಲಾಗಿದೆ. ಇಲ್ಲಿ ಒಟ್ಟು ಹನ್ನೆರಡು ಶಾಸನಗಳಲ್ಲಿ ಮೂರು ಜೈನ, ಒಂದು ವೈಷ್ಣವ, ಉಳಿದವುಗಳು ಶೈವ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಹಾಗೆಯೇ ಈ ಶಾಸನಗಳು ಕನ್ನಡ ಭಾಷೆ, ಕನ್ನಡ ಲಿಪಿಯಲ್ಲಿದ್ದು, ಒಂದು ಶಾಸನದಲ್ಲಿ ಕನ್ನಡ, ತೆಲುಗು ಭಾಷೆಯನ್ನು ಬಳಸಲಾಗಿದೆ. ಈ ಶಾಸನಗಳಿಂದ ತಿಳಿದು ಬರುವುದೇನೆಂದರೆ ಪ್ರಾಚೀನ, ಮಧ್ಯಯುಗೀನ ಕಾಲದಲ್ಲಿ ತಲೇಖಾನ್ ಗ್ರಾಮವು **ತಂಕವಾವಿ** ಎಂಬ ಹೆಸರನಿಂದ ಕರೆಯಲಾಗುತ್ತಿತ್ತು. ಇದು ಎಡೆದೊರೆ-೨೦೦೦ ನಾಡಿನ ಕೆಳವಾಡಿ ೩೦೦ರ ವಿಭಾಗದಲ್ಲಿ ಪ್ರಸಿದ್ಧಿ ಪಡೆದಿರುವುದರೊಂದಿಗೆ, ಅಗ್ರಹಾರ ಕೇಂದ್ರವಾಗಿತ್ತು.

**೧.ನಾಗರಬಾವಿ ದಂಡೆಯ ಮೇಲಿರುವ ದೊಡ್ಡ ಶಾಸನ**

೧. ಸ್ವಸ್ತಿ ಸಮಸ್ತ ವಸ್ಯ . ದೇವರ
೨. ಗ ಣು ರೆ ಪ್ರ ತಿ ತಬಲ ಭು
೩. . ಪ್ರ ಚ ಪ್ರ ತಿ ದಿತ್ಯ ಗಂಗನೇಶ್ವರ ವ
೪. ಯ್ಯಧೀರ ಮಯೂರ ಪಿಂಛದ್ವಜ ವಿ
೫. ರಾಜಿತ ಮದಗಜ ಲಾಂಛನಾ ಕೋ
೬. ಲಾಹಲ ಪುರವೇಶ್ವರಂ ಕಣ್ವಯಾನಾ .
೭ . . ಅ ಯ್ಯಣಯ್ಯವಿ . . . .
೮. . . . . ಣಿ ಮನ್ತ . . . . . .
೯. . . ಣ ಜಗದೇ ವಾವಿಶ್ರೀ ಚ
೧೦. . . ಯಣ . .

**ಸಾರಾಂಶ:** ಇದು ಕ್ರಿ.ಶ. ೭-೮ನೇ ಶತಮಾನಕ್ಕೆ ಸೇರಿದ ಶಾಸನವಾಗಿದೆ. ಇದರಲ್ಲಿ ಗಂಗನವಯ್ಯಧೀರ ಮಯೂರು ಪಿಂಛದ್ವಜ ವಿರಾಜಿತ ಮದಗಜ ಲಾಂಛನ ಮತ್ತು ಕೋಲಾಲ ಪುರವೇಶ್ವರ ಇವು ಅಯ್ಯನಯ್ಯನ ಬಿರುದುಗಳಾಗಿದ್ದವು.

**೨.ನಾಗರಬಾವಿ ದಂಡೆಯ ಮೇಲಿರುವ ಎರಡನೇ ಶಾಸನ**

೧. ಸ್ವಸ್ತಿ ಸಕ ವರಿಷ ೯೪೪ ನೇ
೨. ದುಂದುಬಿ ಸಂವತ್ಸರದ ಆ
೩. ಷಾಡ ಶುದ್ಧ ೫ ಬಹುಳ
೪. ಸವಂತ್ಸರದಂದು ತಂ
೫. ಕ ವಾವಿಯ ಊರೊಡೆಯ
೬. ರೆಬ್ಬಣಯ್ಯನ ಮಗ
೭ ಮಾನಯ್ಯ

**ಸಾರಾಂಶ:** ಈ ಶಾಸನದಲ್ಲಿ ಶಕ ವರ್ಷ ೯೪೪ನೇ ದುಂದುಬಿ ಆಷಾಡ ಸು. ೫ ಎಂದಿದ್ದು, ಇದು ಕ್ರಿ.ಶ. ೦೭-೦೬-೧೦೨೨ನೇ ಗುರುವಾರಕ್ಕೆ ಸರಿಹೊಂದುತ್ತದೆ. ಶಾಸನದಲ್ಲಿ ರೆಬ್ಬನಯ್ಯನ ಮಗನಾದ ಮಾನಯ್ಯನು

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ದೇವನಾಂಪ್ರಿಯ ಅಶೋಕ ಪ್ರಥಮ ದರ್ಜೆ ಕಾಲೇಜು ಹಾಗೂ ಸ್ನಾತಕೋತ್ತರ ಕೇಂದ್ರ, ಮಸ್ಕಿ, ರಾಯಚೂರು.

ತಂಕವಾವಿಯ ಊರೊಡೆಯನಾಗಿದ್ದನೆಂಬ ವಿಷಯವಿದೆ.

**೩. ಬಗವಂತಗೌಡ ಕಂಬಳಿಹಾಳ ಸಾ॥ ತಲೇಖಾನರವರ ಹೊಲದಲ್ಲಿನ ಶಾಸನ**

೧. ಸ್ವಸ್ತಿ ಶ್ರೀಮತು ಜಗದೇಕಮಲ್ಲ
೨. ದೇವರ ವಿಜಯರಾಜ್ಯಮತ್ತ
೩. ರೋತ್ತರಾಭಿವೃದ್ದಿ ಪ್ರವರ್ಧಮಾನ ಚಂದ್ರಾ
೪. ರ್ಕ್ಕ ತಾರಂ ಬರಂ
೫. ಸಲ್ಲುತ್ತಮಿರೆ ಸಕವರ್ಷ ೯೪
೬. ೪ನೆಯ ದುಂದುಬಿ ಸಂವತ್ಸರದ
೭. ಆಷಾಡ ಸು . ೫ ಪಬ್ಬದ
೮. . . . . ಅಪ್ಪನ . . . . .

*(ಮುಂದೆ ಕಲ್ಲು ಸವೆದಿದೆ).*

**ಸಾರಾಂಶ :** ಈ ಶಾಸನದಲ್ಲಿ ಕಾಲವು ೯೪೪ನೇ ದುಂದುಬಿ ಆಷಾಡ ಸು. ೫ ಎಂದಿದ್ದು ಕ್ರಿ.ಶ. ೦೭-೦೬-೧೦೨೨ ಕ್ಕೆ ಸರಿಹೊಂದುತ್ತದೆ. ಕಲ್ಯಾಣ ಚಾಳುಕ್ಯ ಅರಸ ಜಗದೇಕಮಲ್ಲದೇವನು ರಾಜ್ಯಭಾರ ಮಾಡುವ ಕಾಲದಲ್ಲಿ ತನಕವಾವಿಯ ಊರೊಡೆಯನಾದ ಅಪ್ಪನಯ್ಯನು ಬಸದಿ ಕಟ್ಟಿಸಲು ಭೂಮಿ ದತ್ತಿ ಕೊಟ್ಟ ಉಲ್ಲೇಖವಿದೆ. ಹಾಗೆಯೇ ಶಾಸನ ಮುಂದುವರೆದು ದಂಡನಾಯಕ ಪೋಲಮಯ್ಯನ ಬಗ್ಗೆ ತಿಳಿಸುತ್ತದೆ.

**೪. ಚೆನ್ನಮ್ಮನ ದಂಡಿ ಮಳಿಗ್ಯಾಳರವರ ಹೊಲದ ಹಳ್ಳದ ದಂಡೆಯಲ್ಲಿರುವ ಶಾಸನ**

೧. ಸ್ವಸ್ತಿಶ್ರೀಮತು ಜಗದೇಕ ಮಲ್ಲದೇ
೨. ವರ ವಿಜಯ ರಾಜ್ಯಮುತ್ತರೋ
೩. ತ್ತಾರಾಭಿವೃದ್ಧಿ ಪ್ರವರ್ದ್ಧಮಾನ
೪. ಚಂದ್ರಾರ್ಕ್ಕ ತಾರಂಬ
೫. ರಂ ಸಲ್ಲುತ್ತಮಿರೆ ೯೪೪ ನೇ
೬. . . ಸಿದ್ಧಾರ್ಥಿ ಸಂವತ್ಸರದ ಆಷಾಡ ಬಹು
೭. ೪ . ಅಪ್ಪನಯ್ಯನು
೮. . . . ವ
೯. . . ಸ . . ಣ ವಿ .
೧೦. . . .ಬಿಟ್ಟ . . ರು
೧೧. . . . ನಿ ಶೇ ಷಿ
೧೨. . ತಣಕವಾವಿ ಯ ಬಸ
೧೩. ದಿಗೆ ಬಿಟ್ಟ ಕ ರಿಕೆಯಿ ಮತ್ತ
೧೪. ರಾರು ಸ್ವದತ್ತಂ ಪರದತ್ತಂ
೧೫. ವಾಯೋ ಹರೇತಿ ವಸುಂದರಾಂ ಷ
೧೬. ಷ್ಠಿ ವರ್ಷ ಸಹಸ್ರಾಣಿ ವಿಷ್ಟಾಯಾಂ
೧೭. ಜಾಯತೇ ಕ್ರಿಮಿಃ

**ಸಾರಾಂಶ:** ಈ ಶಾಸನದಲ್ಲಿ ಶಕವರ್ಷ ೯೪೪ನೇ ಸಿದ್ಧಾರ್ಥಿ ಸಂವತ್ಸರ ಎಂದಿದ್ದು, ಇದು ಕ್ರಿ.ಶ. ೧೦೨೨ಕ್ಕೆ ಸರಿಹೊಂದುತ್ತದೆ. ಕಲ್ಯಾಣ ಚಾಳುಕ್ಯ ಅರಸ ಜಗದೇಕಮಲ್ಲ ದೇವನು ರಾಜ್ಯಭಾರ ಮಾಡುವ ಕಾಲದಲ್ಲಿ ತನಕವಾವಿ ಬಸದಿಗೆ ದತ್ತಿ ನೀಡಿದ ವಿಷಯವಿದೆ.

**೫. ಮಸೀದಿಯ ಹಿಂದೆ ತಲೆಕೆಳಗಾಗಿ ನಿಲ್ಲಿಸಿದ ಶಾಸನ**

೧. . ಯ್ಯ . . ಕೊಟ್ಟ . . . ನ್ಯ . ರ . ಯ . ತ . ರ . ಕ
೨. . . ಮಹಾಜನ ವಿನ್ದು ಸ್ವಸ್ತಿ ಶಕ ವರ್ಷಂ ೯೫೫ ನೆಯ ಶ್ರೀಮುಖ
೩. ಸಂವತ್ಸರದ ಕಾರ್ತ್ತಿಕ ಸುದ್ದ ೮ ಬೃಹಸ್ಪತಿವಾರದನ್ದು ವಿಷು ಸಂಕ್ರಾಂತಿಪ
೪. ಬ್ಬ ನಿಮಿತ್ತದಿಂ ಸಿದ್ದಾಯಂ ಮನ್ನೇಯಂ ಮಹಾ ಸಾನ್ತ್ಯಂ ಸುಂಕ ಕಿರುಕಳಕಲ್ಪದ್ದ
೫. . ದಲಾಗಿ ಸ. ಯಶ್ಯ . ದ್ರಮ್ಮವತ್ಥದೆಯಿಂತಿರುವ ಗದ್ಯೆ ೪೦೦ ಗೆ
೬. ಮಹಾಜನ ಕೊಟ್ಟದ ಕೊಪ್ಪುವ ಗದ್ಯನ್ನಡಿಯ . ರುವಗದ್ಯ . ೯೪ ಸ್ವಸ್ತಿ
೭. ಸಮಧಿಗತ ಪಂಚಮ ಪ್ರಶಸ್ತಿ ಮಹಾಸಾನ್ತಂ ಬನವಾಸಿಪುರಪರಮೇ
೮. ಶ್ವರಂ ಕಡಂಬ ಕಂಠೀರವ ಶ್ರೀಮನ್ನನ್ನೇಯು ಬಾಚರಸನದಮ್ಯವತ್ನಳೇ
೯. ಯಿಂ ಅರುವಾನಗದ್ಯೆ . ೦ಗೆ ಮಹಾಜನ . . . . ಕೊಪ್ಪುವಗದ್ಯೆ.ನ್ಯ . . ತಿ
೧೦. ರುವ ಗದ್ಯೆ ೪೪ ಬಾಚರಸಾಳಿಂಗೆ ಪಂಪರಸವ . ತದನ್ನಯಂತಾ
೧೧. ವು . ದವಿ @ ವುದ್ವಂಶ ಜಾ ಪಾ. ಮಬೂಪತಿವಶಜಾವೋಪಾಪ
೧೨. ದ ಬತಮನ ಸೌವುದಿ ಣಾವನನಯ . . ಯನ್ತಿ . ಮದವ . . ದಂ

೧೩. ಸಮಸ್ತ ತಿದ್ರೊಮ್ಯ ಹವಿರ ಚಿ ತೇಜಳಿ ರೇಷಮ್ಯದ್ಯ ॥ ಸಾಮಾ

೧೪. ನ್ಯೊಯಂಧರ್ಮ್ಮ ಸೇತು ರ್ನ್ರಿಪಾಣಂ ಕಾಲೇ ಕಾಲೇಪಾಳನಿಯೋಭವ

೧೫. ದ್ಬಿ ಃ ಸರ್ವಾನ್ಯೇತಾನ್ ಬಾಗಿನ ಃ ಪಾರ್ತಿವೇಂದ್ರಾ ಬುಯೋಬುಯೋ ಯಾ

೧೬. ಚತೇ ರಾಮಭದ್ರ ಃ ಸ್ವದತ್ತಂ ಪರದತ್ತಂ ವಾಯೋಹರೇತಿ ವಸುಂದರಾಂ

೧೭. ಷ ಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕೃಮಿಃ . ಮ

೧೮. ದ ದರ್ಮ್ಮ ಪಾರಾಯಣದವರ ಮತ್ತರಾರು ಭಟ್ಟರಕೆಯ್ಮತ್ತಕೊರು . ನ್ತ

೧೯. ಮದ್ವ ಷಳಂಗಿಯರ ಮತ್ತಪ್ಪನ್ನೆರಡು ಬಟ್ಟೆಗೆಯ್ಮತ್ತರ್ . ರಕೃ

೨೦. . . . ದೇವರ ಮತ್ತರಾರು ಚ . ರಿಯ ಮತ್ತ ಮ್ಮ ಹ ರು

**ಸಾರಾಂಶ:** ಈ ಶಾಸನದಲ್ಲಿ ಕಾಲವು ಶಕವರ್ಷ ೯೫೫ ಶ್ರೀಮುಖ ಕಾರ್ತಿಕ ಶು. ೮ ವಿಷು ಸಂಕ್ರಾಂತಿ ಎಂದಿದ್ದು. ಇದು ಕ್ರಿ.ಶ. ೦೪-೧೦-೧೦೩೩ ಗುರುವಾರಕ್ಕೆ ಸರಿ ಹೊಂದುತ್ತದೆ.

ಕಲ್ಯಾಣಚಾಳುಕ್ಯ ಅರಸ ಜಗದೇಕಮಲ್ಲದೇವ (ಇಮ್ಮಡಿಜಯಸಿಂಹ)ನು ಪೊಟ್ಟಳಕೆರೆ ನೆಲೆವೀಡಿನಿಂದ ರಾಜ್ಯಭಾರ ಮಾಡುವ ಕಾಲದಲ್ಲಿ ಮನೆವೆರ್ಗ್ಗಡೆ ಚಾವುಂಡಮಯ್ಯ ದಂಡನಾಯಕ ಕಾಳಿಮಯ್ಯ ಮತ್ತು ಜೋಯಿಸ ಕಂದಪ್ಪಯ್ಯ ಕರಡಿಕಲ್ ಕದಂಬ ವಂಶದ ಮನ್ನೇಯ ಬಾಚರಸ ತಂಕವಾವಿ ಅಗ್ರಹಾರದ ಮಹಾಜನ ಅಪ್ಪನಯ್ಯನಯ್ಯನ ವಿವರವಿದೆ.

### ೬.ಸೊಕಟೆ ಹನುಮಂತ ದೇವಾಲಯದ ಹತ್ತಿರದಲ್ಲಿರುವ ಶಾಸನ

೧. ನಿ ಶಿದೆ

೨. ೦ ರಾಯ

೩. ಸಿ ಯುಟ್ಟಿ ॥

೪. ಲು ಐ ನ

೫. ಥ ಂಕಾ

೬. ವಾವಿ ೬ ೫

೭. ಏ ನಿಲಿ

೮. ।। ।।

**ಸಾರಾಂಶ:** ಈ ಶಾಸನವು ಕ್ರಿ.ಶ. ೧೧ನೇ ಶತಮಾನಕ್ಕೆ ಸೇರುತ್ತದೆ. ಇದು ಕನ್ನಡ ಲಿಪಿಯಲ್ಲಿದ್ದು, ಭಾಷೆಯು ಕನ್ನಡ, ತೆಲುಗಿನಲ್ಲಿರುತ್ತದೆ. ಶಾಸನದ ಮೇಲ್ಗಡೆ ಸೂರ್ಯ, ಚಂದ್ರ, ನಾಮಗಳ ಶಿಲ್ಪಗಳನ್ನು ಬಿಡಿಸಿದೆ. ಇದು ಒಟ್ಟು ಎಂಟು ಸಾಲಿನಲ್ಲಿದ್ದು, ಕೊನೆಯ ಎಂಟನೆಯ ಸಾಲಿನಲ್ಲಿ ಕೇವಲ ಚಿನ್ಹೆಗಳಿವೆ. ಈ ಶಾಸನವು ನಿಸಿದೆಗೆ ಹಾಕಿಸಿದ ಬಗ್ಗೆ ತಿಳಿಸುವುದರೊಂದಿಗೆ ತಲೇಖಾನ ಗ್ರಾಮದ ಪೂರ್ವಹೆಸರು ತಂಕವಾವಿ ಎಂದು ತಿಳಿಸುತ್ತದೆ.

### ೭. ವೀರಭದ್ರೇಶ್ವರ ದೇವಾಲಯದ ಅಂತರಾಳದ ಎಡಬಿತ್ತಿಯಲ್ಲಿರುವ ಶಾಸನ

**ಸಾರಾಂಶ:** ಶಾಸನದಲ್ಲಿ ಕಾಲವು ಚಾಳುಕ್ಯ ವಿಕ್ರಮ ವರ್ಷ ೮೪, ಪ್ರಮಾದಿ ಸರ್ವಣ ಬ-೫ ಬುದುವಾರವೆಂದಿದ್ದು ಕ್ರಿ.ಶ. ೦೫-೦೮-೧೧೫೯ ಕ್ಕೆ ಸರಿಹೊಂದುತ್ತದೆ.

ಕಲ್ಯಾಣ ಚಾಳುಕ್ಯ ಅರಸ ತ್ರಿಭುವನಮಲ್ಲ (ನಾಲ್ಕನೇ ಸೋಮೇಶ್ವರ)ನ ಆಳ್ವಿಕೆಯಲ್ಲಿ ತಲೇಖಾನ ಗ್ರಾಮದ ಇಸ [ಬಹುಶಃ ಈಶ್ವರ ದೇವಾಲಯವಾಗಿರಬೇಕು ?] ಮತ್ತು ಕಮಲನಾಭ ದೇವಾಲಯಗಳ ನಿರ್ಮಾಣ ಕಾರ್ಯವನ್ನು ಚೆಟ್ಟನ ಮಕ್ಕಳಾದ ಚಂದ್ರರಾಜ ಮತ್ತು ಅಚಿರಾಜನಿಂದ ಪೂರ್ಣಗೊಂಡಿದ್ದು, ಎಡೆದೊರೆ-೨೦೦೦ ನಾಡಿನ ಕೆಳವಾಡಿ-೩೦೦ರ ಉಪವಿಭಾಗದ ಮಹಾಮಂಡಳೇಶ್ವರನಾದ ಪೆರ್ಮ್ಮನೃಪ ಪಾಲನನ್ನು ಹೆಸರಿಸುತ್ತದೆ. ಅದೇ ವಿಭಾಗವನ್ನು ಸಾಮಂತ ಅರಸ ಅಚಿರಾಜ ನೋಡಿಕೊಳ್ಳುತ್ತಿದ್ದನೆಂಬ ಉಲ್ಲೇಖದೊಂದಿಗೆ ಅಂದಿನ ಕಾಲದಲ್ಲಿ ತಂಕವಾವಿ ಗ್ರಾಮವು ಉನ್ನತ ಶ್ರೇಣಿಯಲ್ಲಿತ್ತೆಂದು ತಿಳಿಸುತ್ತದೆ.

### ೮.ಈಶ್ವರ ದೇವಾಲಯದ ಅಂತರಾಳದ ಬಿತ್ತಿಯಲ್ಲಿರುವ ಶಾಸನ

**ಸಾರಾಂಶ:** ಈ ಶಾಸನದಲ್ಲಿ ವರ್ಷ ೮, ಜಯ ಬಾದ್ರಪದ ಬಾ-೧೫ ಸೂರ್ಯಗ್ರಹಣವೆಂದಿದ್ದು, ಕ್ರಿ.ಶ. ೨೯-೦೮-೧೧೭೪ ಗುರುವಾರಕ್ಕೆ ಸರಿಹೊಂದುತ್ತದೆ.

ಕಳಚೂರಿ ಚಕ್ರವರ್ತಿ ರಾಯ ಮುರಾರಿ ಸೋವಿದೇವನ ಆಳ್ವಿಕೆಯಲ್ಲಿ ಎಡದೊರೆ-೨೦೦೦ ನಾಡಿನ ಕೆಳವಾಡಿ ೩೦೦ ಉಪ ವಿಭಾಗದಲ್ಲಿಯ ತಂಕವಾವಿಯ ಮಹಾಪ್ರಭು ಚಂದ್ರನು ಚಂದ್ರೇಶ್ವರ ದೇವಾಲಯ ಕಟ್ಟಿಸಿ ಆದೇವರಿಗೆ ದತ್ತಿ ನೀಡಿದ ವಿಷಯವಿದೆ. ಹಾಗೆಯೇ ಶಾಸನ ಮುಂದುವರೆದು ದುಸಿರಕೇಶವ ದಂಡನಾಯಕನು ಕೆಳವಾಡಿ-೩೦೦ರ ಆಡಳಿತ ವಿಭಾಗವನ್ನು ನೋಡಿಕೊಳ್ಳುತ್ತಿದ್ದನೆಂಬ ಉಲ್ಲೇಖವಿದೆ.


ನಾಗರಬಾವಿ ದಂಡೆಯ ಮೇಲೆ ಇರುವ ದೊಡ್ಡ ಶಾಸನ


ನಾಗರಬಾವಿ ದಂಡೆಯ ಮೇಲೆ ಇರುವ ಕಿರು ಶಾಸನ


ಬಗವಂತಗೌಡರ ಹೊಲದಲ್ಲಿನ ಶಾಸನ


ಸೊಕಟೆ ಹನುಮಂತ ದೇವಾಲಯದ ಹತ್ತಿರದಲ್ಲಿರುವ ಶಾಸನ


ಮಸೀದಿಯ ಹಿಂದೆ ತಲೆಕೆಳಗಾಗಿ ನಿಲ್ಲಿಸಿದ ಶಾಸನ


ವೆಂಕಟೇಶ್ವರ ದೇವಾಲಯದ ಮುಂಬದಿಯ ಬಂಡೆಗಲ್ಲಿಗೆ ಇರುವ ಶಾಸನ


ವೆಂಕಟೇಶ್ವರ ದೇವಾಲಯದ ಮುಂಬದಿಯ ಬಂಡೆಗಲ್ಲಿಗೆ ಇರುವ ಇನ್ನೊಂದು ಶಾಸನ

## ೯. ಕಣಿವೆ ಹನುಮಪ್ಪ ದೇವಾಲಯದ ಬಂಡೆಗಲ್ಲಿನ ಮೇಲ್ಬದಿಯಲ್ಲಿರುವ ಶಾಸನ

**ಸಾರಾಂಶ:** ಈ ಶಾಸನವು ಸಂಪೂರ್ಣ ಸವೆದಿದ್ದು ಕ್ರಿ.ಶ. ೧೫-೧೬ನೇ ಶತಮಾನದ ಲಕ್ಷಣದಲ್ಲಿದೆ.

## ೧೦. ಕಣಿವೆ ಹನುಮಪ್ಪ ದೇವಾಲಯದ ಬಂಡೆಗಲ್ಲಿನಲ್ಲಿರುವ ಇನ್ನೊಂದು ಶಾಸನ

೧. ಶ್ರೀ ಸ್ವಸ್ತಿ . . . . . ನ . . . ನಾಜಯ

೨. ಶ್ರೀ ಮಂನ್ಮಾಹಾ ಸಾಳುವ ಬೊಂಮಾನಾಯಕ

೩. . . . ದನಾದ . . . . . . .

**ಸಾರಾಂಶ :** ಈ ಶಾಸನವು ಕ್ರಿ.ಶ. ೧೫-೧೬ನೇ ಶತಮಾನಕ್ಕೆ ಸೇರುತ್ತದೆ. ಇದು ಸಾಳುವ ಬೊಮ್ಮನಾಯಕನ ಬಗ್ಗೆ ತಿಳಿಸುತ್ತದೆ.

## ೧೧. ವೆಂಕಟೇಶ್ವರ ದೇವಾಲಯದ ಮುಂಬದಿಯ ಬಂಡೆಗಲ್ಲಿಗೆ ಇರುವ ಶಾಸನ

೧. ಶಿವಗಂಟೇಯ ದೇವರ

೨. . . ಟೇಯ ವಂಶದವರು

೩. . . ಲಾರ

೪. . . . ಃ ಯರಿಂಗೆ

**ಸಾರಾಂಶ:** ಈ ಶಾಸನವು ಕ್ರಿ.ಶ. ೧೭-೧೮ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಶಿವಗಂಟೇಯ ದೇವನ ವಂಶದ ಕುರುಹುವಿನ ಉಲ್ಲೇಖವಿದೆ.

## ೧೨.ವೆಂಕಟೇಶ್ವರ ದೇವಾಲಯದ ಬಂಡೆಗಲ್ಲಿಗೆ ಇರುವ ಇನ್ನೊಂದು ಶಾಸನ

೧. ಸ್ವಸ್ತಿ ಸಮಸ್ತ ಶ್ರೀ ಭೂವ

೨. ನಾ ರಾಜಾಧಿರಾಜ ಪರಮೇಶ್ವರ

೩. ವಂಶಜನ ಬಾಂದವ ಯೋಮೋಜನ ಮಕ್ಕಳು
೪. ನಾಗೋಜ ಸಂಗ್ಯೆಯನ ಯಟ್ಟ ದ್ರ ದ ಮಳ
೫. ತಂಕವಾವಿ ಹಳ ಬಡಿಗರು ಕೆತ್ತಿದರು

**ಸಾರಾಂಶ:** ಈ ಶಾಸನವು ಕ್ರಿ.ಶ. ೧೭-೧೮ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಏಮೋಜನ ಮಕ್ಕಳಾದ ಸಂಗಯ್ಯ ಮತ್ತು ನಾಗೋಜರುಗಳಿಂದ ವಂಶ ಬೆಳೆದ ಉಲ್ಲೇಖವಿದ್ದು, ಈ ಶಾಸನವನ್ನು ತಂಕವಾವಿಯ ಬಡಿಗರು ಕೆತ್ತಿದರೆಂಬ ವಿಷಯವಿದೆ.

ಈ ಮೇಲಿನ ಹನ್ನೆರಡು ಅಪ್ರಕಟಿತ ಶಾಸನಗಳೊಂದಿಗೆ ತಲೇಖಾನ್ ಗ್ರಾಮದ ಬಸವರಾಜ ಸಮ್ನೆ ಎಂಬುವವರ ಎರಡು ಎಕರೆ ಜಮೀನಿನಲ್ಲಿ ಇತಿಹಾಸ ಆರಂಭಕಾಲದ ಜನರು ಬಳಸುತ್ತಿದ್ದ ಮಡಕೆಯ ಚೂರುಗಳು ಪತ್ತೆಯಾಗಿವೆ. ಹಾಗೆಯೇ ಈ ಗ್ರಾಮದಲ್ಲಿ ಈಶ್ವರ (ಚಂದ್ರೇಶ್ವರ), ಕಮಲನಾಭ, ವೀರಭದ್ರೇಶ್ವರ, ವೆಂಕಟೇಶ್ವರ, ಬಸವಣ್ಣ, ಕುಮಾರರಾಮ, ಬೀರೇಶ್ವರ, ಸೊಕಟೆ ಹನುಮಂತ, ಕಣಿವೆ ಹನುಮಪ್ಪ ದೇವಾಲಯಗಳು, ಕಾವಲು ಕಮಾನುಕಟ್ಟಡ (ಹುಡೇವು), ಕೋಟೆ, ಬಾವಿಗಳು (ನಾಗರಬಾವಿ, ಚೆನ್ನಬಾವಿ, ಮಾನಪ್ಪಯ್ಯನ ಬಾವಿ), ಆರು ವೀರಗಲ್ಲುಗಳು, ಮೂರು ಲಿಂಗಮುದ್ರೆ ಕಲ್ಲುಗಳು, ಹಲವು ಮೂರ್ತಿ ಶಿಲ್ಪಗಳಾದ ಪಾರ್ಶ್ವನಾಥ, ವೆಂಕಟೇಶ್ವರ, ಗಜಲಕ್ಷ್ಮೀ, ವೀರಭದ್ರ, ನಂದಿ, ಗಣೇಶ, ನಾಗ ಮೊದಲಾದವುಗಳು ದೊರೆತಿವೆ.

[ತಲೇಖಾನ್ ಗ್ರಾಮದ ಕ್ಷೇತ್ರ ಕಾರ್ಯದಲ್ಲಿ ನೆರವಾದ ಶ್ರೀನಿವಾಸರಾವ್ ಕುಲಕರ್ಣಿ, ಮೂರ್ತೆಯ್ಯ ಸ್ವಾಮಿ, ಅಯ್ಯಪ್ಪ ಪಾಮನಕಲ್ಲೂರು, ಭೀಮಣ್ಣ ಬಂಡಾರಿ ದೇವರಗುಡ್ಡ, ಬಸವರಾಜಪ್ಪ ಗೌಡ ಕಾರಲಕುಂಟಿ, ನಾಗರಾಜ ಕಡಕಲ್, ಇಸ್ಮಾಯಿಲ್, ಸತೀಶ ಪತ್ತಾರ, ಮೌನೇಶ ಉಪ್ಪಾರ, ಶಂಕರಗೌಡ ಕಂಬಳಿಹಾಳ ಮೊದಲಾದವರುಗಳಿಗೆ ಕೃತಜ್ಞತೆಗಳು]



## ಆಧಾರಸೂಚಿ


೧. **ARIE. 1957-58**, B.No. – 374 and 375.

೨. ಡಾ. ಜಿ. ಚನ್ನಬಸಪ್ಪ, **ರಾಯಚೂರು ಜಿಲ್ಲೆಯ ಚರಿತ್ರೆ ಶಾಸನಗಳ ಹಿನ್ನೆಲೆಯಲ್ಲಿ**, ಅಕ್ಷರ ಮಂಟಪ ಪ್ರಕಾಶನ, ಹಂಪಿನಗರ, ಬೆಂಗಳೂರು-೨೦೧೦.

೩. ಡಾ. ಚನ್ನಬಸಪ್ಪ ಮಲ್ಕಂದಿನ್ನಿ, "ತಲೇಖಾನ ಹನ್ನೊಂದು ಶಿಲಾಶಾಸನ ಪತ್ತೆ" **ಪ್ರಜಾವಾಣಿ ದಿನಪತ್ರಿಕೆ,** ದಿನಾಂಕ: ೦೪-೦೪-೨೦೧೫, ಪು. – ೦೩.

೪. ಡಾ. ಚನ್ನಬಸಪ್ಪ ಮಲ್ಕಂದಿನ್ನಿ, "ಇತಿಹಾಸ ಅಕಾಡೆಮಿ ಸಮ್ಮೇಳನದಲ್ಲಿ ಪುರಾತತ್ವ ಅವಶೇಷಗಳ ಮಾಹಿತಿ", **ಸಂಯುಕ್ತ ಕರ್ನಾಟಕ ದಿನಪತ್ರಿಕೆ,** ದಿನಾಂಕ: ೦೪-೦೪-೨೦೧೫, ಪು. ೧೦.

೫. ಡಾ. ಚನ್ನಬಸಪ್ಪ ಮಲ್ಕಂದಿನ್ನಿ, "ಇತಿಹಾಸ ಅಕಾಡೆಮಿ ಸಮ್ಮೇಳನದಲ್ಲಿ ಪುರಾತತ್ವ ಅವಶೇಷಗಳ ಮಾಹಿತಿ", **ರಾಯಚೂರು ಸುದ್ದಿಬಿಂಬ ದಿನಪತ್ರಿಕೆ,** ದಿನಾಂಕ: ೦೪-೦೪-೨೦೧೫, ಪು. ೦೨.

೬ ಡಾ. ಚನ್ನಬಸಪ್ಪ ಮಲ್ಕಂದಿನ್ನಿ, "ಪುರಾತನ ಕಾಲದ ಅವಶೇಷಗಳು ಪತ್ತೆ", **ವಿಜಯ ಕರ್ನಾಟಕ ದಿನಪತ್ರಿಕೆ,** ದಿನಾಂಕ: ೦೪-೦೪-೨೦೧೫, ಪು. IV.



# ತ್ರಿಭುವನಮಲ್ಲ ವಿಜಯಪಾಂಡ್ಯದೇವರ ಅಪ್ರಕಟಿತ ಶಾಸನ

ಡಾ. ಎಂ. ಕೊಟ್ರೇಶ*

**ಶಾ**ಸನವು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಕಂಚಿಕೆರೆ ಗ್ರಾಮದ ವಾಯುವ್ಯದಿಕ್ಕಿಗೆ ಇರುವ ಈಶ್ವರ ದೇವಾಲಯದ ಪೂರ್ವದ ಮಣ್ಣಿನ ದಿಣ್ಣೆಯಲ್ಲಿತ್ತು. ಕಂಚಿಕೆರೆ ಗ್ರಾಮವು ಹರಪನಹಳ್ಳಿ ತಾಲೂಕು ಕೇಂದ್ರದಿಂದ ೧೮ ಕಿ.ಮಿ. ದಕ್ಷಿಣ ದಿಕ್ಕಿಗೆ ಇದೆ. ಪ್ರಸ್ತುತ ಶಾಸನವು ಈಗ ತುಮಕೂರು ವಿಶ್ವವಿದ್ಯಾನಿಲಯದ ಇತಿಹಾಸ ಮತ್ತು ಪುರಾತತ್ವವಿಭಾಗದ ವಸ್ತುಸಂಗ್ರಹಾಲಯದಲ್ಲಿದೆ.

ಈ ಶಾಸನವು ೧ ½ ಅಡಿ ಅಗಲ ೪ ಅಡಿ ಎತ್ತರವಾಗಿದೆ. ಇದನ್ನು ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯಲ್ಲಿ ಕಡೆಯಲಾಗಿದೆ. ೪೮ ಸಾಲುಗಳನ್ನು ಒಳಗೊಂಡ ಶಾಸನದ ಎಡಭಾಗದ ಮೇಲ್ತುದಿ ತೃಟಿತಗೊಂಡಿದೆ. ಮೇಲಿನ ಪಟ್ಟಿಕೆಯಲ್ಲಿ ಶಿವಲಿಂಗ, ನಂದಿ ಮಾತ್ರ ಕಾಣುತ್ತಿವೆ. ಭಕ್ತ ಅಥವಾ ಯತಿಯೋರ್ವನ ಉಬ್ಬುಶಿಲ್ಪವಿರುವಂತೆ ಭಾಸವಾದರೂ ಪ್ರಸ್ತುತ ಗೋಚರಿಸದು. ಆರಂಭದಲ್ಲಿ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಸಂಭವೇ ॥ ಗುರುಭ್ಯೋ ನಮಃ ಎಂಬ ಶಿವಸ್ತುತಿ ಇದೆ.

ಸಕವರ್ಷ ೧೦೯೭ನೆಯ ಜಯ ಸಂವತ್ಸರದ ಪುಷ್ಯ ಸು. ೧೪ ಸೋಮವಾರ ಉತ್ತರಾಯಣ ಸಂಕ್ರಮಣ ವ್ಯತಿಪಾತಂಕೂಡಿದ ಮಹಾತಿಥಿಯಂದು ಅಂದರೆ ಕ್ರಿ.ಶ. ೧೧೭೪ ಡಿಸೆಂಬರ್ ೯. (ಹುಣ್ಣಿಮೆ ದಿವಸ) ಸೋಮವಾರದಂದು ಚಾಳುಕ್ಯರಾಜ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ಇವನ ಮಹಾ ಮಂಡಳೇಶ್ವರ, ಕಾಂಚಿಪುರಾವಧೀಶ್ವರ ಯದುವಂಶದವರಾದ ಚೋಳರನ್ನು ಸೋಲಿಸಿದವನು ಮತ್ತು ತ್ರಿಭುವನ ಮಲ್ಲದೇವನ ಸಾಮಂತನಾದ ತ್ರಿಭುವನಮಲ್ಲ ವಿಜಯ ಪಾಂಡ್ಯದೇವನು ಆಳ್ವಿಕೆ ಮಾಡುತ್ತಿದ್ದಂತೆ ಹೇಳಿದೆ. ನೊಳಂಬವಾಡಿ ೩೨೦೦೦ದ ಉಚ್ಚಂಗಿ ನೆಲೆವೀಡಿನಲ್ಲಿ ಕೋಗಳಿ ೫೦೦ರ ಒಳಗಿನ ಕಂಪಣ ಬಿಕ್ಕಿಗ ೭೦ ರಲ್ಲಿ ಕಂಚಿಕೆರೆ ಒಂದು ಅಗ್ರಹಾರವಾಗಿತ್ತು. ಈ ಅಗ್ರಹಾರದಲ್ಲಿ ಗೋಮತದ ಕೊಂಡವಿಲ್ಲಿಭಟ್ಟರ ಮಗಳು ಪೊಂನವೆಗಳು ಆ ಊರಿನ ಈಶಾನ್ಯದಿಕ್ಕಿಗೆ ಕೆರೆಯ ಕೆಳಗೆ ಇರುವ ಪೊನ್ನೇಶ್ವರ ದೇವರ ಅಂಗಭೋಗ ಮತ್ತು ನೈವೇದ್ಯಕ್ಕೆ ಆ ಗ್ರಾಮದ ಮಹಾಜನರ ಸಮ್ಮುಖದಲ್ಲಿ ಗ ೧೪ ಕೊಟ್ಟು ತೋಟದ ನಾರಾಯಣದೇವರ ಉತ್ತರದಿಕ್ಕಿಗೆ ಸರ್ವಮಾನ್ಯವಾಗಿ ಕುಳವ ಕಡಿಸಿ ಬಿಟ್ಟ ಕಂಭ ೧೧೦ ಮತ್ತಂ ಗ. ೫ ಕೊಟ್ಟು ತೋಟಸ್ಥ ಗದ್ದೆ ಕಂಭ ೨೦೦ ಹೊಸಗಟ್ಟದ ಒಳಗೆ ಗದ್ದೆ ಕಂಭ ೧೨೦೦, ಇದೇ ದೇವಾಲಯದ ವಾಯುವ್ಯಕ್ಕೆ ಹೂದೋಟಕ್ಕಾಗಿ ಮಹಾಜನಂಗಳು ಅವರು ಕಂಭ ೧೩೦ ಅನ್ನು ಬಿಟ್ಟರು. ದೇವರ ಪರಿಸೂತ್ರಕ್ಕೆ ಗ ೩ ಕೊಟ್ಟು ಕಂಭ ೧೫೦ ಬಿಟ್ಟರು. ಈ ದಾನವು ಚಂದ್ರ-ಸೂರ್ಯ ಇರುವವರೆಗೂ ಮಹಾಜನಗಳು ಪಾಲಿಸಬೇಕು ಎಂದಿದೆ.

ವೀರ ಪಾಂಡ್ಯಪುರ ಗುಡಿಗವರ್ತಿಯ ಉಲ್ಲೇಖವಿದೆ. 'ಗುಡಿಗವರ್ತಿಯ' ಎಂಬುದು ಒಂದು ವಿಧದ ತೆರಿಗೆಯನ್ನು ತಿಳಿಸುತ್ತದೆ. ಹಿರಿಕೆರೆ, ತರ(ರಿ) ಕೆರೆ ಮತ್ತು ಈಶಾನ್ಯದ ಕೆರೆಗಳ ಉಲ್ಲೇಖಕಾಣಬಹುದು. ಶಾಸನದ ೪೭ನೇ ಸಾಲಿನಲ್ಲಿ ಕೋಠಿ ಮ್ರಿಡಿನಿಪತಿ ಮಂದಿರ ಮತ್ತು **ಶ್ರೀಪಮರೆತ ನಾಥರಹೆಸರು** ಪ್ರಸ್ತಾಪವಾಗಿರುವುದು ವಿಶೇಷವಾಗಿದೆ.

## ಶಾಸನದ ಪ್ರಮುಖ ಅಂಶಗಳು

೧. ಕಂಚಿಕೆರೆಯಲ್ಲಿ ಕ್ರಿಶ. ೧೦೩೯ರ ನೊಳಂಬ ಪೇರ್ಮಾಡಿದೇವನ ಶಾಸನವು ದೊರೆತಿದ್ದು ಇದು ಮೊದಲನೆಯದು.

೨. ಕ್ರಿಶ. ೧೦೩೯ರ ಶಾಸನದಲ್ಲಿ ಈ ಗ್ರಾಮವನ್ನು ಗಂಚಿಕೆರೆ ಎಂದು ಕರೆಯುತ್ತಿದ್ದ ಬಗ್ಗೆ ಮಾಹಿತಿ ನೀಡಿದೆ.

೩. ಈ ಶಾಸನದಲ್ಲಿ (ತ್ರಿಭುವನಮಲ್ಲದೇವನ) ಅಂದರೆ ಕ್ರಿ.ಶ. ೧೧೭೪ ಕಾಲಾವಧಿಯನ್ನು ಸೂಚಿಸುತ್ತಿದ್ದು ಇದರಲ್ಲಿ 'ಕಂಚಿಗೆರೆ' ಎಂದು ಸ್ಪಷ್ಟವಾಗಿ ನಮೂದಿಸಿದೆ.

೪. ಕಂಚಿಕೆರೆ ಒಂದು ಅಗ್ರಹಾರವಾಗಿರುವುದನ್ನು ತಿಳಿಸುತ್ತದೆ.

* ಸಹ ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು.

೫. ಕೊಂಡವಿಲ್ಲಿ ಭಟ್ಟರ ಮಗಳು 'ಪೊನ್ನವ್ವೆ' ಎಂಬುವವಳು ದಾನ ನೀಡಿದಂತೆ ಹೇಳಿದೆ.

೬. ಕಂಚಿಕೆರೆ ನಾಥ ಪಂಥದ ಒಂದು ಕೇಂದ್ರವಾಗಿದ್ದಿರ ಬೇಕು ಏಕೆಂದರೆ **ಶ್ರೀ ಷಮರಿತೆನಾಥರು** ಎಂಬ ಉಲ್ಲೇಖ ಈ ಶಾಸನದಲ್ಲಿದೆ. ಈ ಪರಿಸರದ ಬೇರೆ ಬೇರೆ ಶಾಸನಗಳಲ್ಲಿ ಆದಿಗದ ಎದುದನಾಥ, ಚುತುರಂಗಿನಾಥ, ಸಪ್ಪಾರ್ಣನಾಥ, ಲೋಕನಾಥ ಇತ್ಯಾದಿ ನಾಥಪಂಥದ ಹೆಸರು ಉಲ್ಲೇಖಿಸಿರುವುದನ್ನು ಅನೇಕ ವಿದ್ವಾಂಸರು ಉಲ್ಲೇಖಿಸಿದ್ದಾರೆ.

**ಶಾಸನದ ಪಾಠ**

೧. (ನ) ಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾ

೨. (ರವೇ) ತ್ರೈಲೊಕ್ಯ ನಗರಾರಂಭ ಮೂಲಸ್ತಂಭಾಯ

೩. (ಸಂ)ಭವೇ॥ ಹರ ಓಂ ನಮಶಿವಾಂಯ । ಗುರುಭ್ಯೋನ(ಮಃ)

೪. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವಿವಲ್ಲಭಮ

೫. ಹಾರಾಜಾದಿರಾಜ ಪರಮೇಶ್ವರ ಪರಮ ಭಟ್ಟಾರಕಸತ್ಯಾ

೬. ಶ್ರಯ ಕುಳತಿಳಕ ಚಾಳುಕ್ಯಾ ಭರಣಂ ಶ್ರೀ ಮತ್ರಿ

೭. ಭುವನ ಮಲ್ಲದೇವ ವಿಜಯರಾಜ್ಯ ಮುತ್ತಿರೋತ್ತ ರಾ

೮. ಭಿ ವೃದ್ಧಿ ಪ್ರವರ್ದ್ಧಮಾನ ಮಾಚಂದ್ರಾರ್ಕ್ಕ ತಾರಂಬರಂಸಲುತ್ತೆ ಮಿರೆ ॥

೯. ತತ್ಪಾದ ಪದ್ಮೋಪ ಜೀವಿ ॥ ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾ

೧೦. ಮಂಡಳೇಶ್ವರಂ ಕಾಂಚಿ ಪುರಾವರಾಧೀಶ್ವರಂ ಯದು ವಂಶಾಂಬರ

೧೧. ದ್ಯುಮಣಿ ಸುಭಟ ಚೂಡಾಮಣಿ ನಿಜಕುಳ ಕಮಳ ಮಾ

೧೨. ರ್ತ್ತಣ್ಡಂ ಪರಿಚ್ಛೇದಿಗಂಡ ರಾಜಿಗ ಚೋಳ ಮನೋಭಂಗ ಶ್ರೀಮತ್ರಿ

೧೩. ಭುವನ ಮಲ್ಲದೇವ ಪಾದಾಬ್ಜ ಭೃಂಗ ಶ್ರೀಮತ್ರಿಭುವನಮ

೧೪. ಲ್ಲ ವಿಜಯ ಪಾಂಡ್ಯದೇವರು ನೊಣಂಬವಾಡಿ ಮೂವತ್ತಿ

೧೫. ರ್ಚ್ಛಾಯಿರವಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿ ಪಾಳನದಿಂ

೧೬. ಉಚ್ಚಂಗಿಯ ನೆಲೆವೀಡನೊಳು ಸುಕಸಂಕಥಾ ವಿ

೧೭. ನೋದದಿಂ ರಾಜ್ಯಂಗೈಯ್ಯುತ್ತ ಮಿರೆ ॥ ಕೋಗಳಿ ಐನೂಱ

೧೮. ಜೊಳಗಣ ಕಂಪಣ ಬಿಕಗನೆಪ್ಪ(ತ್ತ)ರೊಳಗಣನಾದಿಯ

೧೯. ಗ್ರಹಾರ ಯಾದವನಾರಾಯಣ ಚತುರ್ವೇದಿವಲಂ (ಕಂಚಿ)

೨೦. ಕೆರೆಯ ಗೋಮಠದಾ ಕೊಂಡವಿಲ್ಲಿ ಭಟ್ಟರ ಮಗಳು ಪೊಂನವೆಗ

೨೧. ಳು ಆ ಉ (ರಾ) ಈ ಶಾನ್ಯದಲು ಕೆಱೆಯ ಕೆಳಗೆ ಪ್ರತಿ

೨೨. ಷ್ಟೆಯಂ ಮಾಡಿ ಸಕವರ್ಷ ೧೯೭ ನೆಯ ಜಯ ಸಂವತ್ಸ

೨೩. ರದ ಪುಷ್ಯ ಸು ೧೪ ಸೋಮವಾರ ಉತ್ತರಾಯಣ ಸಂಕ್ರ

೨೪. ಮಣ ವ್ಯತಿಪಾತಂ ಕೂಡಿದ ಮಹಾತಿಥಿಯಂದು ತಮ್ಮ

೨೫. ಪೊನ್ನೇಶ್ವರ ದೇವರಂಗ ಭೋಗ ನಿವೇದ್ಯಕೆ ಆ ಉ ರ ಶೇಷ ಮಹಾ

೨೬. ಜನಕ್ಕೆ ಗ ೧೪ ಕೊಟ್ಟು ತಮ್ಮ ತೋಟಂ ನಾರಣದೇವರ ಮ

೨೭. ತ್ತರಿಂ ಬಡಗ ಸರ್ವಮಾನ್ಯವಾಗಿ ಕುಳವಕಡಿಸಿ ಬಿಟ್ಟ ಕಂ

೨೮. ಭ ೧೧೦ ಮತ್ತಂ ಗ ೫ ಕೊಟ್ಟು ಮಾನ್ಯವಾಗಿ ಬಿಟ್ಟ ತೊಟ ಸ್ಥ

೨೯. ಳ ಗಾಂಬೆಯಲು ಕಂಭ ೨೦೦ ಹೊಸಗಟ್ಟ ದೊ

೩೦. ಳಗೆ ಗದ್ದೆ ಕಂಭ ೧೨೦೦ ಆ ದೇಗುಲದ ವಾಯುವ್ಯದ

೩೧. ಲು ಹೂ ದೋಟಕೆ ಮಹಾಜನಂಗಳು ಬಿಟ್ಟ ಕಂಭ ೧೩೦

೩೨. ಮತ್ತಂ ದೇವರ ಪರಿಸೂತ್ರಕೆ ಗ ೩ ಕೊಟ್ಟು ಬಿಡಿಸಿದ ಕಂಭ

೩೩. ೧೫೦ ಇ ಧರ್ಮ್ಮಮ ಆ ಚಂದ್ರಾರ್ಕ್ಕ ತಾರಂಬರಂ ಮಹಾಜನ

೩೪. ಗಳುಂ ಅರಸುಂ ಪ್ರತಿ ಪಾಳಿಸುವರು ೧೧ ವೀರ ಪಾಡ್ಯ

೩೫. ಪುರ ಗುಡಿಗವರ್ತಿಯ ಮಹಾಜನಕ್ಕೆ ಪಾದಪೂಜೆ

೩೬. ಗದ್ಯಾಣಂ ೩೩ ಕೊಟ್ಟು ಸರ್ವಮಾನ್ಯವಾಗಿ ಬಿಟ್ಟ ಗದ್ದೆ

೩೭. ಹಿರಿಯ ಕೆಜ್ರೆಯ ತೆಂಕಣ ತುಬಿನ ಬಡಗ ಕೋರೋವಿ

೩೮. ಭಟರ ಗದ್ದೆ ಕಂ. ೪೫೦ ಬಿಜ್ಜಬೆಗೆಜ಼ಿಯೊಳಗೆ ನೀರೊತ್ತು

೩೯. ಸಹಿತ ಗದ್ದೆ ಕಂ. ೩೫೦ ನೊ ತರ(ರಿ) ಕೆಜ಼ಿ ಕೆಳಗೆ ಎರಡಾಂತರದೊ

೪೦. ಳುಗು ಆ ಯೇತಭಟ್ಟರ ತೋಟ ಸ್ಥಳಕ ೧೫೦ ಇ ಧರ್ಮ ವಂ

೪೧. ಮಹಾಜನಂಗಳು ಪ್ರತಿಪಾಳಿಸುವರು ೧೧ ದಾನಾವಾ

೪೨. ಪಾಲನಂ ವಾಪಿದಾನಾತ್ತು ಶ್ರೇಯೇನು ಪಾಲನಂ ದಾನಾ

೪೩. ತ್ತು ಸ್ವರ್ಗ ಮವಾಪ್ನೋತಿ ಪಾಲನದಚ್ಯುತಂ ಪದಂ ೧೧

೪೪. ಶ್ರೀ ಮತು ಕೌಂಚಿ ತೋಟಕಕ್ಕೆಗ್ರಮೆ ವಿಪ್ರೋತ್ತ ಮೋಜನಿ ಆಳ್ಕೊಂ

೪೫. ಡ ವಿಲ್ಲ ಭರೊಸೌಗೋಮತಕೆ ಮಹಾಕುಲೇ ತಥನು ದಾ

೪೬. ತು ಪೊನ್ನ ಭ – ಪರಮಾರ್ತ್ಥವಿದು ಮನೋನಮ್ನೋವತೆ

೪೭. ಯ ಕೋಠಿ ಮ್ರಿಢನಿ ಪತಿ ಮಂದಿರಂ ಶ್ರಿಷಮಜಿತನಾ

೪೮. ಥರು ೧೧

ಶಾಸನದ ಕಾಲ ಕ್ರಿ.ಶ. ೧೧೭೪ ಡಿಸೆಂಬರ್ – ೯, ಸೋಮವಾರ (ಹುಣ್ಣಿಮೆದಿವಸ)



## ೨೦

# ಮೂರು ಅಪ್ರಕಟಿತ ಹೊಸ ಶಾಸನಗಳು

**ಮೇಕನಗದ್ದೆ ಲಕ್ಷ್ಮಣಗೌಡ***

**ಚಿಕ್ಕ**ಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು ತುಂಬರಗಂಡಿಯಲ್ಲಿ ಒಂದು ಲಿಂಗದ ಮೇಲೆ ಬರೆಯಲಾದ ಶಾಸನ ಚಿಕ್ಕಮಗಳೂರು ತಾಲ್ಲೂಕು ಮಾಕೋಡಿನಲ್ಲಿರುವ ಒಂದು ಶಿಲಾ ಶಾಸನ ಹಾಗೂ ಸಕಲೇಶಪುರ ತಾಲ್ಲೂಕಿನ ಹಂಜುಗೂಡನಹಳ್ಳಿಯಲ್ಲಿ ಒಂದು ಅಳುಪರ ಕಾಲದ ದಾನ ಶಾಸನ, ಮೂಡಿಗೆರೆ ತಾಲ್ಲೂಕು ಕೆಸವಳಲು ಗ್ರಾಮದಲ್ಲಿ ನಾಲ್ಕು ತೃಟಿತ ವೀರಗಲ್ಲುಗಳು ದೊರೆತಿವೆ.

### ೧. ತುಂಬರಗಂಡಿಯ ಲಿಂಗ ಶಾಸನ

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ಕೇಂದ್ರದಿಂದ ೧೦ ಕಿಲೋ ಮೀಟರ್ ದೂರದಲ್ಲಿ ಫಲ್ಗುಣಿ ಗ್ರಾಮವಿದೆ. ಈ ಗ್ರಾಮದ ಸಬ್ಬೇನಹಳ್ಳಿಯಿಂದ ಭಾರತೀಬೈಲ್ ಕಡೆಗೆ ಹೋಗುವ ರಸ್ತೆಯಲ್ಲಿ ೩ ಕಿಲೋಮೀಟರ್ ಸಾಗಿದರೆ ಹೊಕ್ಕಳ್ಳಿ ಸಮೀಪ ಬಲಕ್ಕೆ ಸಾಗಿರುವ ಮಣ್ಣಿನ ರಸ್ತೆಯಲ್ಲಿ ಸಾಗಿದರೆ ತುಂಬರಗಂಡಿ ಎಂಬ ಊರಿಗೆ ತಲುಪುತ್ತದೆ. ಕಾಫಿ ತೋಟಗಳಿಂದ ಕೂಡಿರುವ ಈ ಊರಿನಲ್ಲಿ ಒಕ್ಕಲಿಗರು, ಪೂಜಾರರು, ಪರಿಶಿಷ್ಟ ಜಾತಿಯವರಿದ್ದಾರೆ.

ಫಲ್ಗುಣಿ ಗ್ರಾಮಪಂಚಾಯಿತಿ ಅಧ್ಯಕ್ಷರಾಗಿದ್ದ ಶ್ರೀಮತಿ ಮೀನಾಕ್ಷಮ್ಮ ಎಂಬುವವರನ್ನು ವಿಚಾರಿಸಲಾಗಿ ಅವರ ಮಾರ್ಗದರ್ಶನದಲ್ಲಿ ಕಾಫಿ ತೋಟವೊಂದರ ನಡುವೆ ಪಾಳುಬಿದ್ದ ದೇವಾಲಯದ ಅವಶೇಷಗಳು ಕಂಡುಬಂದವು. ದೇವಾಲಯವಿದ್ದ ಕಲ್ಲಿನ ನೆಲಕಟ್ಟು ಹೊಂದಿರುವ ಎರಡು ಪೌಳಿ ಅದರ ನಡುವೆ ಎರಡು ಅಡಿ ಎತ್ತರದ ಗರ್ಭಗುಡಿಯ ಮೇಲೆ ೩ ಅಡಿ ಎತ್ತರದ ಬೃಹತ್ ಶಿವಲಿಂಗವಿದೆ. ಶಿವಲಿಂಗದ ಪಕ್ಕದಲ್ಲಿ ಗಣಪತಿ ಹಾಗೂ ಇತರೆ ವಿಗ್ರಹಗಳಿವೆ. ಲಿಂಗದ ಮೇಲೆ ಮುಂಭಾಗದಲ್ಲಿ ಸ್ವಸ್ತಿ ಶ್ರೀಮತುಬೋಕಣಹೆಗ್ಗಡೆ ಎಂಬ ಅಕ್ಷರಗಳನ್ನು ಕೆತ್ತಿದ್ದಾರೆ.

ಈ ಲಿಂಗದ ಮೇಲೆ ನಾಮಾಂಕಿತವಾದ ಬೋಕಣ ಹೆಗ್ಗಡೆ ಯಾರು ಎಂಬ ಬಗ್ಗೆ ಕುತೂಹಲ ಕೆರಳಿದ್ದು ಈ ಪ್ರಾಂತ್ಯದ ಬೇರೆ ಯಾವ ಶಾಸನಗಳಲ್ಲೂ ಈ ಹೆಸರು ಲಭ್ಯವಿಲ್ಲ. (ಫಲ್ಗುಣಿ ಶಾಸನದಲ್ಲಿ ಬಲ್ಲವೆಗ್ಗಡೆ ಉಲ್ಲೇಖವಿದೆ). ಅಲ್ಲದೆ ಮಲೆನಾಡ ಈ ಪ್ರಾಂತದಲ್ಲಿ ಹೆಗ್ಗಡೆಗಳ ಸಂತತಿ ಅಸ್ಥಿತ್ವದಲ್ಲಿಲ್ಲ. ಒಂದು ಕಾಲದಲ್ಲಿ ಇಲ್ಲಿ ಅಡಳಿತ ನಡೆಸುತ್ತಿದ್ದ ರಾಜಪ್ರತಿನಿಧಿಗಳನ್ನು ಹೆಗ್ಗಡೆ ಎಂದು ಕರೆಯಲಾಗುತ್ತಿತ್ತು.

ಲಿಪಿ ಲಕ್ಷಣಗಳ ಆಧಾರದ ಮೇಲೆ ಇದರ ಮೇಲೆ ಕೆತ್ತಲ್ಪಟ್ಟಿರುವ ಅಕ್ಷರಗಳು ಕ್ರಿ.ಶ. ೧೧–೧೨ನೇ ಶತಮಾನದ ಕಾಲಮಾನಕ್ಕೆ ಸೇರಿದ್ದು. ಆ ಕಾಲದಲ್ಲಿ ಇಲ್ಲಿ ಬೃಹತ್ ದೇವಾಲಯವಿದ್ದು ಆ ದೇವಾಲಯದ ನಿರ್ಮಾಣದಲ್ಲಿ ಪ್ರಮುಖವಾದ ಪಾತ್ರವಹಿಸಿದ್ದ ವ್ಯಕ್ತಿ ಶ್ರೀ ಬೋಕಣ ಹೆಗ್ಗಡೆ ಎಂಬುದು ಸ್ಪಷ್ಟವಾಗುತ್ತದೆ.

ಇಲ್ಲಿನ ಸುತ್ತಲಿನ ಇಂತಹ ಕೆಲವು ಅನಾಥ ವಿಗ್ರಹಗಳನ್ನು ಗಮನಿಸಿದಾಗ ಆ ವಿಗ್ರಹಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣ ಮಾಡಿದ ವಿಗ್ರಹಗಳಾಗಿರುವುದು ಕಂಡುಬರುತ್ತದೆ. ಚಾಲುಕ್ಯರ ಕಾಲದಲ್ಲಿ ಈ ಪ್ರಾಂತ್ಯದಲ್ಲಿ ಸೈನ್ಯ ಹಾಗೂ ಸಂಪತ್ತಿನ ದಾಸ್ತಾನಿಗಾಗಿ ಸಾಮಂತರನ್ನು ನೇಮಿಸಿ ಅಲ್ಲಲ್ಲಿ ಕೋಟೆಗಳನ್ನು ಕಟ್ಟುತ್ತಿದ್ದುದು ತಿಳಿದುಬರುತ್ತದೆ. ಅದಕ್ಕೆ ಪೂರಕವಾಗಿ ಮಠದಹಳ್ಳಿಯ ಶಾಸನದಲ್ಲಿ ಉಲ್ಲೇಖಿಸಿರುವಂತೆ ಅಗುಸನದ ಕೋಟೆ ಇದ್ದುದಾಗಿ ತಿಳಿಯುತ್ತದೆ. ಅಂತೆಯೇ ಅದರ ಪಕ್ಕದಲ್ಲೆ ಹೊಸಕೋಟೆ ಹಾಗೂ ಭೈರವಕೋಟೆ ಎಂಬಲ್ಲಿ ಕೋಟೆ ಇದ್ದ ಅವಶೇಷಗಳ ಕುರುಹುಗಳು ದೊರಕುತ್ತವೆ.

### ೨. ಹಂಜುಗೂಡನಹಳ್ಳಿಯ ಅಳುಪರ ಕಾಲದ ದಾನ ಶಾಸನ

ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕಿನ ಹಾನುಬಾಳು ಹೋಬಳಿಯ ಹಂಜುಗೂಡನಹಳ್ಳಿ ಗ್ರಾಮದ ಊರೊಳಗೆ ರಸ್ತೆ ಬದಿಯಲ್ಲಿ ನಿಲ್ಲಿಸಿರುವ ಕಲ್ಲಿನಲ್ಲಿ ಕೆಲವು ಅಕ್ಷರ ಹಾಗೂ ಆಕೃತಿಗಳಿವೆ. ಹಾನುಬಾಳಿನಿಂದ ಸಕಲೇಶಪುರಕ್ಕೆ ಹೋಗುವ ಮಾರ್ಗದಲ್ಲಿ ಹುರುಡಿಯಿಂದ ಎಡಕ್ಕೆ ಕವಲೊಡೆದಿರುವ ರಸ್ತೆಯಲ್ಲಿ ಒಂದು ಕಿಲೋಮೀಟರ್‌ಗಳಷ್ಟು ದೂರ ಸಾಗಿದರೆ

* s/o ಸೋಮೇಗೌಡ, ಓಣಿಮನೆ, ಮೇಕನಗದ್ದೆ ಅಂಚೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ.



ಹಂಜುಗೂಡನಹಳ್ಳಿ ಊರಿಗೆ ತಲುಪುತ್ತದೆ. ಅಲ್ಲಿನ ರಸ್ತೆ ಬದಿಯಲ್ಲಿದ್ದ ಕಲ್ಲನ್ನು ಅಗಲೀಕರಣ ಸಂದರ್ಭ ಕಿತ್ತು ಇನ್ನೊಂದು ಬದಿಗೆ ನಿಲ್ಲಿಸಲಾಗಿದೆ.

೩ ಅಡಿ ಎತ್ತರ ಹಾಗೂ ಎರಡೂವರೆ ಅಡಿ ಅಗಲದ ಕಪ್ಪು ಗ್ರಾನೈಟ್ ಕಲ್ಲಿನ ಮೇಲೆ ಕೆತ್ತಲಾಗಿರುವ ಮೂರ್‍ನಾಲ್ಕು ಸಾಲು ಅಕ್ಷರಗಳು ಸುತ್ತಲೂ ಇವೆ. ನಡುವೆ ಸೂರ್ಯ ಚಂದ್ರ, ಈಶ್ವರ ಲಿಂಗ, ಹಸುಕರುವಿನ ಚಿತ್ರಗಳ ಕೆತ್ತನೆ ಇದೆ. ಇದರಲ್ಲಿ ಸ್ಪಷ್ಟವಾಗಿ ಗೋಚರಿಸುವ ಮೀನಿನ ಚಿತ್ರವಿದೆ. ಲಿಪಿಲಕ್ಷಣದ ಆಧಾರದ ಮೇಲೆ ಇದು ೭–೮ ನೇ ಶತಮಾನಕ್ಕೆ ಸೇರಿದ್ದೆಂದು ತೀರ್ಮಾನಿಸಬಹುದು. ಇದೇ ಗ್ರಾಮದ ನರೇಶ್ ಇವರ ತೋಟದಲ್ಲಿ ದೊರೆತ ತುಂಡುಗಲ್ಲು ಶಾಸನದಲ್ಲಿ ಕದಂಬರ ಕವಲೊಂದು ಸ್ಥಳೀಯ ಆಡಳಿತ ನಡೆಸಿದ ಉಲ್ಲೇಖವನ್ನು ಸ್ಮರಿಸಬಹುದು.





ಓಳರಂಭಲಾವಸ ....... . . ಶ್ರೀಯನರಸಿಯ ನಾರಿಯರ
ಸಹಿತ ಶ್ರೀಷಲುಳ್ಳಿಯನರಸಜಬ್ಬೆಯ ಪೆವಿಷ
ಹರಿಯವುಸಂಬಹಯ್ಯನ
ವೀರ ಪನ್ನಿಕೋ(ಜಾ)ತ
ಹಸಯಮಬಿತ್ತಗನುಡಿದ
ಹೊನ್ನಿನೂರುಗದ್ಯಾಣಸಲುವುದು
ಸಬ್ಬ . ವಬ

## ೩. ಮಾಕೋಡಿನ ವೀರಗಲ್ಲು ಶಾಸನ

ಚಿಕ್ಕಮಗಳೂರು ತಾಲ್ಲೂಕಿನಲ್ಲಿ ಚಿಕ್ಕಮಗಳೂರು ನಗರದಿಂದ ಆವತಿಗೆ ಸಾಗುವಾಗ ಸಿಗುವ ಮಾಕೋಡಿನಲ್ಲಿ ಇರುವ ಮಂಜುನಾಥ ಸ್ವಾಮಿ ದೇವಾಲಯದ ಸಮೀಪದಲ್ಲಿ ನೆಲದಲ್ಲಿ ಹುದುಗಿದ್ದನ್ನು ಕಿತ್ತು ನಿಲ್ಲಿಸಿರುವ ಆಕರ್ಷಕ ಕೆತ್ತನೆ ಹಾಗೂ ಆಕೃತಿಗಳಿರುವ ಶಾಸನದ ಕಲ್ಲು ಇದೆ. ನಾಲ್ಕು ಅಡಿ ಎತ್ತರ ಹಾಗೂ ಎರಡು ಅಡಿ ಅಗಲದ ಬಳಪದ ಕಲ್ಲಿನಲ್ಲಿ ಇದನ್ನು ಕೆತ್ತಲಾಗಿದೆ.

ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಸಹಿತ ಒಂದು ಉದ್ದನೆಯ ತ್ರಿಶೂಲವಿದೆ. ಅತ್ಯಂತ ಆಕರ್ಷಕವಾಗಿ ಕಣ್ಸೆಳೆವ ಹುಲಿ ಚಿತ್ರವಿದೆ. ಹುಲಿಯ ಭಂಗಿಯಲ್ಲಿ ಕಾಲಿನ ನಖಗಳು



ಸ್ಪಷ್ಟವಾಗಿ ಗೋಚರಿಸುವಷ್ಟು ನವಿರಾದ ಕೆತ್ತನೆಯಿದೆ. ಇದರ ಕೆಳಭಾಗದಲ್ಲಿ ೫ ಸಾಲುಗಳಲ್ಲಿ ಸ್ಪಷ್ಟವಾದ ಬರವಣಿಗೆಗಳಿದ್ದು ಇದು ಗ್ರಂಥ ಲಿಪಿಯ ಶಾಸನವಾಗಿದೆ.

ಹುಲಿಯ ಎದೆಯ ಭಾಗದಲ್ಲಿ ಮೇಲಿನಿಂದ ಕೆಳಕ್ಕೆ ಹೊಕ್ಕಿರುವ ಭರ್ಜಿಯ ಚಿತ್ರ ಗೋಚರಿಸುತ್ತದೆ. ಇದರಿಂದ ಇದು ಹುಲಿಯ ಮೇಲೆ ಬಿದ್ದು ಅದನ್ನು ಇರಿದು ಕೊಂದು ಹಾಕಿದ ವ್ಯಕ್ತಿಯ ಸ್ಮಾರಕವಾಗಿ ನಿಲ್ಲಿಸಿದ ಶಾಸನವಾಗಿದೆ.

### ೪. ಕೆಸವಳಲು ಗ್ರಾಮದ ದೇವಾಲಯದ ಬಳಿ ಇರುವ ಶಿಥಿಲವಾದ ವೀರಗಲ್ಲು

ಮೂಡಿಗೆರೆ ತಾಲ್ಲೂಕಿನ ಕೆಸವಳಲು ಗ್ರಾಮವು ಈಗಾಗಲೇ ಇತಿಹಾಸದಲ್ಲಿ ತನ್ನ ಹೆಸರನ್ನು ಸ್ಥಿರಗೊಳಿಸಿದೆ. ಇದು ಅಂದಿನ ಹೊಯ್ಸಳರ ಮೂಲಸ್ಥಾನ ಅಂಗಡಿಯಿಂದ ಮೂರು ಕಿಲೋಮೀಟರ್‌ಗಳಷ್ಟು ದೂರ ಹಾಗೂ ಹೇಮಾವತಿ ನದಿಯ ದಂಡೆಯ ಮೇಲಿರುವ ಊರು. ಅಲ್ಲಿ ಈಗಾಗಲೇ ಡಾ. ಡಿ. ಎಸ್. ಜಂಕಪ್ಪಗೌಡರು ಪತ್ತೆಹಚ್ಚಿ ಪ್ರಕಟಿಸಿರುವ ಶಾಸನ (EC Vol 11) ದಲ್ಲಿ ಹೊಯ್ಸಳರ ಆ ಕಾಲದ ದಿನಗಳು ಹಾಗೂ ಅವರು ಚಾಲುಕ್ಯರೊಂದಿಗೆ ಹೊಂದಿದ್ದ ಸಂಬಂಧವನ್ನು ಕೂಲಂಕುಶವಾಗಿ ವಿವರಿಸಿದೆ.

**ಒಂದನೇ ಪಟ್ಟಿ**

* ನಾರಸಿಂಗ

ಶ್ರೀ ವೀರಬಲ್ಲಾಳ ದೇವರು ದೋರಸ. . .

ರಾಯರ ಕಾಣಿಕೆ ವೇಳೆ

**ಎರಡನೇ ಪಟ್ಟಿ**

ಚಂದ್ರಾರ್ಕ ತಾರಾಂಬರಂ ಸಕಾರಣ್ಯಗೆಯೆ ಬಟ್ಟರ...

ಗೆಯ್ಯಲು ವಾರಣಾಸಿಯಲು. . . .

ಅದೇ ಗ್ರಾಮದಲ್ಲಿ ರಾಮೇಶ್ವರ ಗುಡಿಯ ಎದುರಿನ ತಗ್ಗಿನಲ್ಲಿ ಬೆಳೆದ ಪೊದೆಗಳೊಳಗೆ ೫ ವೀರಗಲ್ಲು ಶಾಸನಗಳು ಕಂಡುಬಂದಿವೆ. ಬಳಪದ ಕಲ್ಲಿನಲ್ಲಿ ಕೆತ್ತಲ್ಪಟ್ಟ ಈ ವೀರಗಲ್ಲುಗಳು ಬಹುತೇಕ ಕ್ಷೀಣಾವಸ್ಥೆಯಲ್ಲಿದ್ದು ಉಪೇಕ್ಷೆಗೆ ಒಳಗಾಗಿವೆ.

ಎಲ್ಲಾ ವೀರಗಲ್ಲುಗಳಲ್ಲಿ ೩ ಪಟ್ಟಿಗಳಿದ್ದು ಎಲ್ಲವೂ ನಾಲ್ಕು ಅಡಿ ಎತ್ತರ, ಎರಡು ಅಡಿ ಅಗಲ ಇವೆ. ಇವುಗಳ ನಡುವಿನ ಎರಡು ಪಟ್ಟಿಗಳಲ್ಲಿ ಸವೆದುಹೋದ ಅಕ್ಷರಗಳ ಗುರುತುಗಳಿವೆ. ಕೆಳಗಿನ ಪಟ್ಟಿಯಲ್ಲಿ ವೀರಾವೇಶದಿಂದ ಹೋರಾಡುತ್ತಿರುವ ದೃಶ್ಯ, ಮಧ್ಯದ ಪಟ್ಟಿಯಲ್ಲಿ ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯ, ಮೂರನೆಯ ಪಟ್ಟಿಯಲ್ಲಿ ದೈವತ್ವಕ್ಕೇರುತ್ತಿರುವ ದೃಶ್ಯಗಳು ಗೋಚರಿಸುತ್ತಿವೆಯಾದರೂ ನಾಲ್ಕು ಕಲ್ಲುಗಳಲ್ಲಿ ಮೇಲಿನ ಪಟ್ಟಿ ಹಾಗೂ ಕೆತ್ತನೆಗಳು ಹಾಳಾಗಿವೆ. ಎರಡನೆಯ ಪಟ್ಟಿಯಲ್ಲಿ ಇನ್ನೂ ಅಲ್ಲಲ್ಲಿ ಹಾಳಾಗದಿರುವ ಅಕ್ಷರಗಳನ್ನು ಶ್ರೀ ಇಸ್ಮಾಯಿಲ್ ಇವರ ನೆರವಿನಿಂದ ಓದಲು ಪ್ರಯತ್ನಿಸಿ ಲಭ್ಯ ಮಾಹಿತಿಗಳನ್ನು ಒದಗಿಸಲಾಗಿದೆ.

ಅದರ ಪ್ರಕಾರ ಇವು ಹೊಯ್ಸಳರ ವೀರಬಲ್ಲಾಳನ ಮಗ ನರಸಿಂಗನು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ನಡೆದಿರಬಹುದಾದ ಯುದ್ಧದಲ್ಲಿ ಮಡಿದವರ ಸ್ಮಾರಕ ವೀರಗಲ್ಲುಗಳಾಗಿವೆ. ೧೧ನೇ ಶತಮಾನದ ಆರಂಭದಲ್ಲಿ ಈ ಊರಿನಲ್ಲಿ ಜೈನ ಚೈತ್ಯಾಲಯವನ್ನು ಇಲ್ಲಿ ನಿರ್ಮಾಣ ಮಾಡಿದ ತರುವಾಯದ ದಿನಗಳಲ್ಲಿ ಈ ಊರಿನೊಂದಿಗೆ ಹೊಯ್ಸಳ ದೊರೆಗಳ ಸಂಬಂಧವಿತ್ತು ಎಂದಷ್ಟೇ ವಿವರಗಳಿಂದ ಹೇಳಬಹುದು. ಎಲ್ಲಾ ವೀರಗಲ್ಲುಗಳಲ್ಲೂ ತೇದಿ ಹಾಗೂ ಮಡಿದ ವೀರರ ವಿವರಗಳು ನಾಶವಾಗಿದ್ದು ಕೊನೆಯಲ್ಲಿ ಶಾಪ ವಾಕ್ಯವಿದೆ.

### ೫. ಹನುಮನಹಳ್ಳಿಯ ಶಿಲಾಶಾಸನ

ಮೂಡಿಗೆರೆ ತಾಲ್ಲೂಕು ಹನುಮನಹಳ್ಳಿ ಗ್ರಾಮದಲ್ಲಿ ದೊರೆತ ಮತ್ತೊಂದು ಶಿಲಾಶಾಸನವು ನಾಲ್ಕು ಅಡಿ ಉದ್ದವಿದ್ದು ಅದರ ಪಟ್ಟಿಗಳಲ್ಲಿ ಬರವಣಿಗೆಯಿದೆ.

**ಶಾಸನ ಪಾಠ**

ಸ್ವಸ್ತಿಶಕವರುಷ ವ್ಯಯದಾತು ೧೧೪೯ನೇ ಪ್ರಭೂತ

ತಮ್ಮ ಬಸುವಯ್ಯ ಮೂವತ್ತು ಗದ್ಯಾಣ ಹೊನ್ನು





# ರಾಣೆಬೆನ್ನೂರು ತಾ॥ ಐರಣಿ ಗ್ರಾಮದಲ್ಲಿ ದೊರೆತ ಹೆಮ್ಮಾಡಿ ಗೌಡನ ಶಾಸನ

**ಕೆ.ಎಂ. ರಾಘವೇಂದ್ರಾಚಾರ್***

**ಹಾ**ವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಐರಣಿ ಗ್ರಾಮದಿಂದ ರಾಹುತನ ಕಟ್ಟೆಗೆ ಹೋಗುವ ದಾರಿಯಲ್ಲಿ ಎಡಕ್ಕೆ ಪ್ರಭುದೇವ ಸಿದ್ದಲಿಂಗಪ್ಪ ಶೆಟ್ಟರ್ ಸರ್ವೆ ನಂ. ೨೫೧ ಈ ಸ್ಥಳದಲ್ಲಿರುವ ಶಾಸನವು ೩ ೧/೨ ಅಡಿ ಎತ್ತರ ಅಗಲ ೨ ಅಡಿ ಇದ್ದು, ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿದ್ದು, ಶಾಸನದ ಮೇಲ್ಭಾಗದಲ್ಲಿ ಸೂರ್ಯಚಂದ್ರ ನಂದಿ ಮತ್ತು ಖಡ್ಗವನ್ನು ಕೆತ್ತಲಾಗಿದೆ.

### ಶಾಸನ ಪಾಠ

ಹೆಂಮ್ಮಾಡಿ ಗೌಡ
..ಚಂದನಗೌಡನ ಕೈ (ಯಲು)
ಕುಪ್ಪಿಸೆಟ್ಟಿ ಮಾರ ಕೊಂಡು ಬಿಟ್ಟ ಭೂ
ಮಿ ಮತ್ತರೊಂದು ಇದನಳಿದವರ್ಗ್ಗೆ ಗಂಗೆ
ಯಲಿ ಕವಿಲೆಯ ಕೊಂದ ದೋಶ ವಕ್ಕು

### ಪಾಠ ಸಾರಾಂಶ

ಹೆಮ್ಮಾಡಿಗೌಡನು ಚಂದನಗೌಡನ ಕೈಯಿಂದ ಕುಪ್ಪಿಸೆಟ್ಟಿಗೆ ಭೂಮಿ ಮತ್ತರು ೧ನ್ನು ದಾನವಾಗಿ ಕೊಂಡು ಬಿಟ್ಟನು ಇದನ್ನು ಪಾಲಿಸದವರಿಗೆ ಗಂಗಾನದಿ ದಂಡೆಯಲ್ಲಿ ಗೋವುಗಳನ್ನು ಕೊಂದ ಪಾಪ (ದೋಷ) ಬರುವುದು.

ಹೆಂಮ್ಮಾಡಿಗೌಡನ ಉಲ್ಲೇಖ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನ ಮಲ್ಲದೇವನ ಕಾಲದ ಶಾಸನಗಳಲ್ಲಿ ಬಂದಿರುವುದರಿಂದ ಈತನ ಕಾಲವು ಹನ್ನೆರಡನೇ ಶತಮಾನದ ಈಚಿನವನೆಂದು ತಿಳಿಯುತ್ತದೆ. ಹದಿಮೂರನೇ ಶತಮಾನದ ಅಂತ್ಯ ಭಾಗದಲ್ಲಿ ಚಂದನಗೌಡನ ಹೆಸರಿರುವ ಶಾಸನಗಳು ಸಿಕ್ಕಿರುವುದರಿಂದ ಒಟ್ಟಾರೆ ಈ ದಾನ ಶಾಸನದ ಕಾಲವನ್ನು ಹದಿಮೂರನೇ ಶತಮಾನದ ಆಸುಪಾಸಿನದಿರಬಹುದಾಗಿದೆ. ಇಲ್ಲಿ ದಾನ ಏತಕ್ಕಾಗಿ ಕೊಟ್ಟರೋ ತಿಳಿಯದು ಆದರೆ ಲಿಪಿ ಲಕ್ಷಣಗಳಿಂದ ಈ ಶಾಸನವು ಹದಿಮೂರನೇ ಶತಮಾನದ್ದೆಂದು ಸದ್ಯಕ್ಕೆ ಅಂದಾಜಿಸಬಹುದು.

ಈ ಶಾಸನ ತೋರಿಸುವಲ್ಲಿ ಸಹಕರಿಸಿದ ಗ್ರಾಮಸ್ಥರಿಗೂ ಹಾಗೂ ಹೊಲದ ಮಾಲೀಕರಾದ ಪ್ರಭುದೇವ ಸಿದ್ಧಲಿಂಗಪ್ಪ ಶೆಟ್ಟರ್‌ರವರಿಗೂ ಹಾಗೂ ಐರಣಿ ಹೊಳೆಮಠದ ಮಹಾಸ್ವಾಮಿಗಳಿಗೂ, ಬುರಡೆಕಟ್ಟೆ ಮಂಜಪ್ಪನವರಿಗೂ ಕೃತಜ್ಞತೆಗಳು.



* ದಾವಣಗೆರೆ-೫೭೭೦೦೩.



# ಸಿರಾ ತಾಲ್ಲೂಕಿನ ಗೊಲ್ಲಹಳ್ಳಿಯ ಅಪ್ರಕಟಿತ ಶಾಸನ

ಡಾ. ಎನ್. ನಂದೀಶ್ವರ*

ಮೇಲುಕುಂಟೆ ಗೊಲ್ಲಹಳ್ಳಿ ಗ್ರಾಮವು ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನಲ್ಲದೆ. ಈ ಗ್ರಾಮದಲ್ಲಿ ಲಕ್ಷ್ಮೀ, ಕಂಬದ ರಂಗನಾಥಸ್ವಾಮಿ, ಕಣಿವೆಮಾರಕ್ಕನ ದೇವಸ್ಥಾನಗಳು ಇರುತ್ತವೆ. ಲಕ್ಷ್ಮೀದೇವರು ಕುಂಚಿಟಿಗರ ಹುಳಿಯಾರನವರ ಕುಲದ ಅಮಾವಾಸ್ಯೆ ದೇವರಾಗಿದೆ. ಕುಂಚಿಟಿಗರ ಹುಳಿಯಾರು ಗೋತ್ರದವರ ಅಮವಾಸ್ಯೆ ದೇವರು ಲಕ್ಷ್ಮಿದೇವರಾಗಿತ್ತು. ಹಳೆಯ ಶಿಥಿಲವಾದ ದೇವಸ್ಥಾನವನ್ನು ಹೊಸದಾಗಿ ದೇವಸ್ಥಾನ ನಿರ್ಮಿಸುತ್ತಿದ್ದಾರೆ. ಮೊದಲು ಲಕ್ಷ್ಮಿದೇವಸ್ಥಾನ ಮಾತ್ರವಿತ್ತು. ಇವರು ರೊಳ್ಳೆ ನರಸಿಂಹಸ್ವಾಮಿಯ ಒಕ್ಕಲಾದ್ದರಿಂದ ನರಸಿಂಹಸ್ವಾಮಿಯನ್ನು ಪ್ರತಿಷ್ಠಾಪಿಸಬೇಕೆಂದು ದೇವಸ್ಥಾನ ನಿರ್ಮಿಸಿರುವರು. ಗರ್ಭಗುಡಿಯಲ್ಲಿ ಬೆಳ್ಳಿಯ ಲಕ್ಷ್ಮಿ ವಿಗ್ರಹ ಇದ್ದು, ಅದಕ್ಕೆ ಪ್ರಭಾವಳಿ ಇದೆ. ಇವುಗಳನ್ನು ೫೦ ವರ್ಷಗಳ ಹಿಂದೆ ನಿರ್ಮಿಸಿರುತ್ತಾರೆ. ಐದು ಕತ್ತಿಗಳು, ದೇವರ ಪೆಟ್ಟಿಗೆ ಇರುತ್ತದೆ. ಪೆಟ್ಟಿಗೆಯಲ್ಲಿ ಮಣ್ಣಿನಿಂದ ತಯಾರಿಸಿದ ಐದು ಕರಗಗಳು ಇರುತ್ತವೆ. ಇವುಗಳನ್ನು ಗಂಗಾಸ್ನಾನಕ್ಕೆ ಚಿಕ್ಕನಕೋಟೆ ಹತ್ತಿರ ಕೂಡಲಸಂಗಮಕ್ಕೆ ಹೋದಾಗ ಕರಗಗಳನ್ನು ತೆಗೆದು ಸ್ನಾನ ಮಾಡಿಸಿ ಪೂಜಿಸುತ್ತಾರೆ. ಇದೇ ದೇವರ ಗರ್ಭಗುಡಿಯಲ್ಲಿ ಎರಡು ಬಂಡಿಚಕ್ರಗಳು ಇರುತ್ತವೆ. ಇವು ಪಟ್ಟನಾಯಕನಹಳ್ಳಿ ಹತ್ತಿರದ ಕಾಮಗೊಂಡನಹಳ್ಳಿಯ ಮುದ್ದಮ್ಮನ ಬಂಡಿಗಳಲ್ಲಿ ಈ ಗ್ರಾಮದ ಬಸಲೇನವರ ಬಂಡಿಯು ಒಂದಾಗಿತ್ತು. ಆದರೆ ಈ ಊರಿನ ಬಸಲೇನವರಿಗೆ ಗಂಡುಸಂತತಿ ಇಲ್ಲದ ಕಾರಣ ಬಸಲೇನವರಿಗೆ ಅಣ್ಣತಮ್ಮಂದಿರಿಂದ ಹುಳಿಯಾರು ಕುಲದವರಿಗೆ ಬಂಡಿಚಕ್ರಗಳನ್ನು ಕೊಟ್ಟು ಮುಂದೆ ನಮ್ಮ ಊರಿನಲ್ಲಿ ಬಸಲೇನವರ ಕುಲದವರು ಏಳಿಗೆಗೆ ಬರುವವರೆಗೂ ಇಟ್ಟುಕೊಂಡು ಪೂಜೆ ಮಾಡಿಕೊಂಡಿರಿ ಎಂದು ಒಪ್ಪಿಸಿರುತ್ತಾರೆ. ಆದರೆ ಮುದ್ದಮ್ಮ ಜಾತ್ರೆಯ ಸಂದರ್ಭದಲ್ಲಿ ಯಾರು ಅಣ್ಣತಮ್ಮಂದಿರು ಇರದ ಕಾರಣ ಈ ಬಂಡಿ ಇಂದು ಕಾಮಗೊಂಡನಹಳ್ಳಿಗೆ ಹೋಗುವುದಿಲ್ಲ. ಕಲ್ಲಿನಿಂದ ಸುಂದರವಾಗಿ ದೇವಸ್ಥಾನ ನಿರ್ಮಿಸಿರುತ್ತಾರೆ.

ಕುಂಚಿಟಿಗರ ಜನಾಂಗದಲ್ಲಿ ಹಳೆಯ ಮೈಸೂರು ಪ್ರಾಂತ್ಯದಲ್ಲಿ ೪೮ ಕುಲಗಳು ಇರುತ್ತವೆ. ಈ ೪೮ ಕುಲಗಳಲ್ಲಿ ಹುಳಿಯಾರ ಕುಲವೂ ಒಂದು. ಚಿಕ್ಕನಾಯಕನಹಳ್ಳಿ ಹುಳಿಯಾರು ಕೆಂಚಮ್ಮದೇವತೆ ಹುಳಿಯಾರು ಕುಲದವರಿಗೆ ಮೂಲ ದೇವತೆಯಾಗಿದೆ. ಸಿರಾ ತಾಲ್ಲೂಕು ಗೋಣಿಹಳ್ಳಿಯ ರಂಗನಾಥಸ್ವಾಮಿ, ಕೊರಟಗೆರೆ ತಾಲ್ಲೂಕು ವಜ್ಜನಕುರಿಕೆಯ ರಂಗನಾಥಸ್ವಾಮಿ, ಸಿರಾ ತಾಲ್ಲೂಕು ಮೇಲುಕುಂಟೆ ಗೊಲ್ಲಹಳ್ಳಿಯ ಲಕ್ಷ್ಮಿನರಸಿಂಹಸ್ವಾಮಿ, ಹೊಳಲ್ಕೆರೆ ತಾಲ್ಲೂಕು ನಂದನಹೊಸೂರಿನ ಹನುಮಂತರಾಯಸ್ವಾಮಿ, ಹೊನ್ನಾಳಿ ತಾಲ್ಲೂಕು ನರಸಗೊಂಡನಹಳ್ಳಿ ಆಂಜನೇಯಸ್ವಾಮಿ, ಹೊಸದುರ್ಗ ತಾಲ್ಲೂಕು ಕಾರೇಹಳ್ಳಿ ಹತ್ತಿರದ ವೇದಾವತಿ ನದಿದಡದಲ್ಲಿ ಹರಿಹರೇಶ್ವರಸ್ವಾಮಿ ಅನಂತಪುರ ಜಿಲ್ಲೆಯ ಕದರಿನರಸಿಂಹಸ್ವಾಮಿ, ಮಧುರೈ ಜಿಲ್ಲೆ ಪಲ್ಲಪಟ್ಟಿಯ ಮಲ್ಲಯ್ಯ ಸ್ವಾಮಿ ಹುಳಿಯಾರು ಕುಲದವರಿಗೆ ಮನೆದೇವರುಗಳಾಗಿರುತ್ತವೆ.

ಮೇಲುಕುಂಟೆ ಗೊಲ್ಲಹಳ್ಳಿಯ ನರಸಿಂಹಸ್ವಾಮಿ ದೇವರಿಗೆ ಉತ್ಸವಗಳ ಸಂದರ್ಭದಲ್ಲಿ ಬಡಿಯುವ ಹರೆಯ ಮೇಲೆ ಅಪ್ರಕಟಿತವಾದ ಶಾಸನ ಬರೆಯಲಾಗಿದೆ. ಶಾಸನವು ಹರೆಯ ೨ ಭಾಗಗಳಲ್ಲಿ ಕನ್ನಡ ಭಾಷೆಯಲ್ಲಿ ಮೊದಲ ಭಾಗದಲ್ಲಿ ೫ ಸಾಲು, ೨ನೇ ಭಾಗದಲ್ಲಿ ೩ ಸಾಲುಗಳಿವೆ. ಒಟ್ಟು ೮ ಸಾಲುಗಳಲ್ಲಿ ಬರೆಯಲಾಗಿದೆ. ಈ ಶಾಸನವು ೧೯ನೇ ಶತಮಾನದ್ದಾಗಿದೆ. ಕದಿರೆ ದೇವರಿಗೆ ಹುಳಿಯಾರು ಕುಲದ ಬಳಮರದ ವಿರಣನ ಮಗ ವಿರಣ ಮಾಡಿಸಿದ ಅರೆ ಎಂದು, ಇದನ್ನು ಗಿಡಗನಹಳ್ಳಿಯವರಿಗೆ ಹರೆಯನ್ನು ಬಡಿಯಲು ಕೊಟ್ಟ ವಿವರವನ್ನು ಹಾಗೂ ಕುಂಚಿಟಿಗರ ಬೆಡಗಾದ ಹುಳಿಯಾರ ಕುಲದವರ ಬಗ್ಗೆ ಮಾಹಿತಿ ತಿಳಿಸುತ್ತದೆ.

**ಮೊದಲ ಭಾಗ**

೧. ಕದಿರೆ ದೇವರಿಗೆ ಮಡಿಶಿದ

೨. ವುಳಿಯರು ಗೌಡ ಬಳ

---

* ಪ್ರಾಂಶುಪಾಲರು, ಎಸ್.ಎಂ.ಆರ್.ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ.

೩. ಪುರದ ವಿರಣನಮ
೪. ಗ ವಿರಣ ಮಡಿಶಿದ
೫. ಅರೆ

**ಎರಡನೇ ಭಾಗ**

೬. ಗಿಡಗನ ಹಳಿವುಭ್ರ
೭. ರಗನಿಗೆ ವರಿಶಿದ
೮. ಅರೆ

**ತಮಿಳುನಾಡಿನ ಕನ್ನಡ ಭಾಷೆಯ ತೆಲಗು ಶಾಸನ**

**ಪ್ಲೇಟ್ ೧**

೧. ಸಾದಾರಣ ಸಂವತ್ಸರದ ಶ್ರಾವಣ ಶುದ್ದ ಪಂಚಮಿಲು ಪ್ರೌಢದೇವರಾಯಲವಾರು . . . . . .
೨. ರವುತು ರಾಣುವ ಹೊದಲೈನ ಚತುರಂಗ್ಗ ಬಲಮುಲ ತೊ(. .) ಪೆನುಕೊಂಡ್ಡಕು ವಚ್ಚಿ ಪಾಳ್ಯಂದಿಗಿ
೩. ಕುತುರ್ಪು ದಿಕ್ಕುನ ವುಂಚಿ ಮಾಳಂಪ್ಪಗಾಣಿನ್ನಿ . . . . . . . . . . . . . . . ೦ ನ್ನಿವಡ . . ಮಠ . . ಕುನ
೪. ವಿಕ್ಕುನ ಪುಂ(.) ನಪ ಗಾಣಿನ್ನಿ ಉತ್ತರಪು ದಿಕ್ಕಿನ ವುಂಡಿ ಸಂಗಪ್ಪ ಗಾಣಿಂನ್ನಿ . ನಲುಗುರು . . . ನು
೫. ನ್ನು ಪಿರುಪಿಂಚಿ ರಾಯುಲ ದೇವುಲ(೦)ಷ್ಟು ಪರಿಕರಿಂಚನ ವಿವರಂ ತಮು . ೦ಬ್ಬ ಡಿನ ವಚ್ಚಿನಚತುರಂಗ್ಗ ಬಲಮುಲುಕು
೬. . ಬತ್ಯ ಬರಣಂಮುನ್ನು ಆಯರ್ ಭ ದಂಟಿ . ಚಲುವು ಲಕು ಕೊತ್ತ ರೋ(ಶೋ)ಕ ಮುನ್ನು ಇಯ್ಯವೆಲೆನವಿ ಆಡಿ . ರಾನ

**ಪ್ಲೇಟ್ ೨**

೧. ರೆಅರಿ . ಗಾನಗಲು ಗುರುಗೌಂಡ್ಲುನ್ನು ಆಟ ತುರಂಗ ಬಲಮುಲುನ್ನ ಚತುಭರಾರಂಕ ಕಸುಬು ಗಡಿ ಹೋ . ದೈನ . . ಪಲ್ಲುನ್ನು . . . ದಂಡು ಸಲುವುಲಕು ನಾ
೨. ಲುಗುಲಕ್ಕಲ ತೊಂಬ ಮುನ್ನೂರೊಬ್ಬೈ ವಚ್ಚಿ ರಾಯಲವಾರಿ ಸಮುಕಾನ ವುಂಚಿರಿಗನಕರಾಯಲ ದೇವುಡು ಬಾಲಸಂತ್ಕೋಬಡಿಮಿಕು ಕಾವಲಶಿನ ಮನವಿ
೩. ಸನವುಲು ಎಮನಿ ಆಡಿಗಿ ನಂದಲು ಕುಮಾರು ಯಾತರವುನುಗುಲು ಎಮಿನ್ನಿ ಪನಿಲೇದು ಮಾಜಾತಿಲುಲೋನು ಲೆಬ್ಬಿಗೌನಿಕು ತುರುಶಿ . . ಗಿ ಆನೆಪ
೪. ಡು ಬು ಬಾಕಲ ಚಿನ್ನುನು ಕೊಂಡ್ಡಿಗನ ಕಾ ಆಯದ್ದರಿ ಮಿಮ್ಮಿ ಕೊಪ್ಪಿ . ಶಿಲೆ ಬೈಗಾಣ್ಣಿನ್ನಿ ಜಾತಿಕಿ . . . ಶಿವುಂನ್ನುಡಿಗನ ಕ ಅಥಗಾಣ್ಣಿ ಜಾ
೫. ತಿಲೋ ಕಲಶೇ ಪಟ್ಟುಗ ಮನವಿ ಕೆಟ್ಟಿಡ ಶೇಯುವಲೆನ ನಿಅಡಿಗಿರಿಗನಕ ಅಂದುಲುಕು ರಾಯಲದೇವುಂಡು ಪಲಕರಿಂಚಿನವಿವ
೬. ರಂಜಾತಿ ಗೊಂಡ್ಲು ವುಗುರುನ್ನ ಕುಡಿನಾರುವ ತೀರ್ಪುದಿದ್ದುಗದ ಶೇಶಿನ ಡಿಪಿಂಚು ಕೊಂಮ್ಮನಿ ಕುಟುಡ ಶೇಷಗನಕ ಆ ತಿರುಗ
೭. ನೆ ಅನಲು ಗುರುಗೌಂಡ್ಲುನ್ನು ಕೂಡಿ ಆಲೋ ಬೆನಬೆಸಕೋನಿ ಪಿಂಜಲಮಾಹಿ ನಾಯಿನಿ ವದ್ದಿಕಿ ಪಾಯ ಗಾನಿ ಕಾರ್ಯ

**ಪ್ಲೇಟ್ ೩**

೧. ಅರುಗಪ್ಪ ಅಯ್ಯಡಮ್ಮ . . . . . ಮನಿ ಆಟಗರಿಗ ನೆಕ ಪೆನಗೊಂಡ ಪೆದ್ದ ಬೇಡವುಲೋನುಮು . . ಕಲ್ಲಫೋರಿ ಬಪ್ಪ . . . . . . . . .
೨. ಮಾಕಿ ನಾಯಂಡು . ಪಿನಬ್ಯ ವಿಕ್ರಮಾನಕು ನಲುಗುರು ಗುರುಗೌಡ್ಲುನ್ನು ಗುಡಿಲೇ ಬೈಗಾಣಿಂನ್ನಿ . ಸಿಗೊಂಡ ಶದ ಚಿರುವೋ ಮುನಿಗಿರಂ . ನಿ ತೊಲ್ಲಗೋಲನು
೩. ಬಪ್ಪಿ ಆ ಚೆರುವುಲೋ ಪಟ್ಟು ನಸೇನಲುಗುರು ಗೌಂಡ್ಲುನ್ನಲೇ ಬೈಗೌಣ್ಣಿ ಪೊತ್ತನ ಬೆಟ್ಟು ಪೊನಿ ಬೊಶಶಿ ನಾರುಲೇ ಬೆಸಿಗ ಕನಿಪಂ ಪಂಡಾಲಾಮ್ ಅಜ್ಜಲಂ(ಗಿ) ಕಂಬಮೇ ತ್ರಿ . . ಜೇ
೪. ರ್ಲ ಮಕೆನಾಯನಿ ಕಿನಲು ಗುರುಗೌಂಡ್ಲುಲುನ್ನು ಪಗ್ಗ ಗೋಕ್ರಿ ಉಗ್ಗ ಪುನೇಯಯಂ ಶಿವಾಗಾನ . . ಮುನ್ನು ಯಬ್ಬಿಸಂದಿ ಯುಂಡಿಲೇ ತರುವಾತ ರಾಯಲು ದೇವುಂಡು ನಲಗುರು
೫. ಗೌಂಡ್ಲ ಕುನ್ನು ಲಬ್ಬೆಗಾನಿಕಿಂನ್ನಿವ ಕಂಲಾಕಲುವು ಉಡುಗರಲು ಬಹುಮಾನವು ಶೇಶಿ ಹಂಪಿಂಗಿನಪ್ಪುಡು ಕುಲ ಬಿರುದು ಮಲಿಮುಸರಗಂಡ ಹೊನ್ನಮೇ . ಗಿ ಕಾಯವಾ ಕಾಲರಾ
೬. ಯ ಹೊಕ್ಕಲರಾಯ ವಿಜೇಭವ ಅನಿಗೌಂಡ್ಲು ಪೋಗಡಿಂಚು ಕೋನಿರಿ॥೧॥ ಅವುದೇವರ ಗೌಡಗುರಂ ಗುರುಂಚಿ ಶಿಲಪೊಲ ಸಿದ್ದಂಮು ತಿರುಮಣಿ ತಿರುಮಾನ್ಯ ಭುಲು ಸೂರ್ಯ ಸಿಹ್ವಾಸನಂಭ್ಬು ಕೊ
೭. ಟ್ಟ ಗೌಡುಗು ಗಾಬಡಿನ ಗೋಪಾಲಕಿಷ್ಣ ಪಾಲವೇ ಕಲಿಪದ್ದ ಭದ್ರಭಲ್ಲರ ಗಾಯಾನಿಗಳಂ ಕದ್ದಂಡ ಗೋರ್ದ್ದಂಡ್ಡ ಬನ್ನಿಮುರುಕು ಖಂಡ್ಡಿತ ಧರಣಿ ಮಂಡಲೇಶ್ವರ ಮಾದವ . .
೮. ಹರ ಅನಿಪಿಂಜರ ಮಾಕಿನಾಯ . ಪೋಗಡಿಂಚು ನೋನನು ಆ ಪಿಂಚರ್ಲ್ಗ ಮಾಕಿ ನಾಯಿನಿ





ಕುವಮಾರುಡು ಬಲ್ಲಕ ಎಲ್ಲಪ್ಪ ನಾಯಿಡು ಈ ಪೂರ್ವೋತ್ತರ ಸವ

೯. ಚಾರುಮು . ತುನಾದ ಕೊಂಡ ಮಲ್ಲಯ್ಯಪ್ಪ . ತಾಲಮಂ ಲ ಯಾ ಅಂಪು ವಿರೂಪಾಕ್ಷಿ ನಾಗುಡುವಾರಂಜ್ಯೋತಿ ಮೊದಲೈನ ದೇ

**ಪ್ಲೇಟ್ ೪**

೧. ತಲು ಸಾಕ್ಷಿ ಈ ಕ್ರಮಾನುಕು ನಲುಗುರುಗೌಂಡ್ಲುನ್ನು ಪಗ್ಗಪು ಗೋತ್ರ ಉಗ್ಗ ಪುನಯ್ಯ ಪ

೨. ಗಾಪಂಚಡಂ ಮುನ್ನೂರೊಂಬ ಹೊಂಬಿ ಪೇರ್ಜಲ ಮಾಕಿ ನಾಯಿಂಣ್ನಿ ಸಂದಿ ಬ್ಬಿಕ ಪೋತೋಕಾ

೩. ಕಾಶಿವೋ ಖಪಿಲಾವುನೊ ಚಂಪಿನ ವಾಮನ ಪೋಗಲು ಈ ಪಟ್ಟಿಯಂ ವ್ರಾಶಿವಾ

೪. ಡ್ಡು ಪಿನುಗೊಂಡ್ಡನಿ ಯೋಗಿ ಲಕ್ಷ್ಮಯ್ಯ

## ಮೇಲುಕುಂಟೆ ಗೊಲ್ಲಹಳ್ಳಿಯ ಲಕ್ಷ್ಮಿ ನರಸಿಂಹಸ್ವಾಮಿ ದೇವಸ್ಥಾನ

ಸಿರಾ – ಅಮರಾಪುರ ರಸ್ತೆಯಲ್ಲಿ ಮುದ್ದರಂಗನಹಳ್ಳಿ ಗೇಟ್‌ನಂದ ಬಲಭಾಗಕ್ಕೆ ೩ ಕಿ.ಮೀ. ದೂರದಲ್ಲೂ, ಸಿರಾದಿಂದ ೧೩ ಕಿ.ಮೀ. ದೂರದಲ್ಲಿರುವ ಈ ಗ್ರಾಮವು ಕಂದಾಯ ಗ್ರಾಮವಾಗಿದೆ. ಗ್ರಾಮದಲ್ಲಿ ಲಕ್ಷ್ಮಿ, ಕಂಬದ ರಂಗನಾಥಸ್ವಾಮಿ, ಕಣಿವೆಮಾರಕ್ಕನ ದೇವಸ್ಥಾನಗಳು ಇರುತ್ತವೆ. ಲಕ್ಷ್ಮಿ ದೇವರು ಕುಂಚಿಟಿಗರ ಉಳ್ಳೇನವರ ಕುಲದ ಅಮಾವಾಸ್ಯೆ ದೇವರಾಗಿದೆ. ಕುಂಚಿಟಿಗರ ಹುಳಿಯಾರು ಗೋತ್ರದವರ ಅಮವಾಸ್ಯೆ ದೇವರು ಲಕ್ಷ್ಮಿದೇವರಾಗಿತ್ತು. ಹಳೆಯ ಶಿಥಿಲವಾದ ದೇವಸ್ಥಾನವನ್ನು ಹೊಸದಾಗಿ ನಿರ್ಮಿಸುತ್ತಿದ್ದಾರೆ. ಮೊದಲು ಕೇವಲ ಲಕ್ಷ್ಮಿ ದೇವಸ್ಥಾನ ಮಾತ್ರವಿತ್ತು. ಇವರು ರೊಳ್ಳೆ ನರಸಿಂಹಸ್ವಾಮಿಯ ಒಕ್ಕಲಾದ್ದರಿಂದ ಲಕ್ಷ್ಮಿನರಸಿಂಹ ದೇವಸ್ಥಾನ ನಿರ್ಮಿಸಿರುವರು. ಗರ್ಭಗುಡಿಯಲ್ಲಿ ಬೆಳ್ಳಿಯ ಲಕ್ಷ್ಮಿ ವಿಗ್ರಹ ಇದ್ದು, ಅದಕ್ಕೆ ಪ್ರಭಾವಳಿ ಇದೆ. ಇವುಗಳನ್ನು ೫೦ ವರ್ಷಗಳ ಹಿಂದೆ ನಿರ್ಮಿಸಿರುತ್ತಾರೆ. ಐದು ಕತ್ತಿಗಳು, ದೇವರ ಪೆಟ್ಟಿಗೆ ಇರುತ್ತದೆ. ಪೆಟ್ಟಿಗೆಯಲ್ಲಿ ಮಣ್ಣಿನಿಂದ ತಯಾರಿಸಿದ ಐದು ಕರಗಗಳು ಇರುತ್ತವೆ. ಇವುಗಳನ್ನು ಗಂಗಾಸ್ನಾನಕ್ಕೆ ಚಿಕ್ಕನಕೋಟೆ ಹತ್ತಿರ ಕೂಡಲಸಂಗಮಕ್ಕೆ ಹೋದಾಗ ಕರಗಗಳನ್ನು ತೆಗೆದು ಸ್ನಾನ ಮಾಡಿಸಿ ಪೂಜಿಸುತ್ತಾರೆ. ಇದೇ ದೇವರ ಗರ್ಭಗುಡಿಯಲ್ಲಿ ಎರಡು ಬಂಡಿಚಕ್ರಗಳು ಇರುತ್ತವೆ. ಇವು ಪಟ್ಟನಾಯಕನಹಳ್ಳಿ ಹತ್ತಿರದ ಕಾಮಗೊಂಡನಹಳ್ಳಿಯ ಮುದ್ದಮ್ಮನ ಬಂಡಿಗಳಲ್ಲಿ ಈ ಗ್ರಾಮದ ಬಸಲೇನವರ ಬಂಡಿಯು ಒಂದಾಗಿತ್ತು. ಆದರೆ ಈ ಊರಿನ ಬಸಲೇನವರಿಗೆ ಗಂಡುಸಂತತಿ ಇಲ್ಲದ ಕಾರಣ ಬಸಲೇನವರಿಗೆ ಅಣ್ಣತಮ್ಮಂದಿರಿಂದ ಹುಳಿಯಾರು ಕುಲದವರಿಗೆ ಬಂಡಿಚಕ್ರಗಳನ್ನು ಕೊಟ್ಟು ಮುಂದೆ ನಮ್ಮ ಊರಿನಲ್ಲಿ ಬಸಲೇನವರ ಕುಲದವರು ಏಳಿಗೆಗೆ ಬರುವ ವರೆಗೂ ಇಟ್ಟುಕೊಂಡು ಪೂಜೆ ಮಾಡಿಕೊಂಡಿರಿ ಎಂದು ಒಪ್ಪಿಸಿರುತ್ತಾರೆ. ಈ ಬಂಡಿ ಇಂದು ಕಾಮಗೊಂಡನ ಹಳ್ಳಿಗೆ ಹೋಗುವುದಿಲ್ಲ. ಗರ್ಭಗುಡಿಯ ಮೇಲೆ ವಿಮಾನವಿದ್ದು, ಇದರ ಮೇಲೆ ಶಿಖರ ನಿರ್ಮಿಸಿರುತ್ತಾರೆ. ಮುಂದೆ ಅರ್ಧ ಮಂಟಪವಿದ್ದು ಮದ್ದಕ್ಕನಹಳ್ಳಿ ಕಲ್ಲಿನಿಂದ ಸುಂದರವಾಗಿ ದೇವಸ್ಥಾನ ನಿರ್ಮಿಸಿರುತ್ತಾರೆ. ದೇವರಿಗೆ ನಿತ್ಯಪೂಜೆ ನಡೆಯುತ್ತದೆ.



### ಆಧಾರಸೂಚಿ


೧. ಡಾ. ಎನ್. ನಂದೀಶ್ವರ, ೨೦೦೮ **ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು**, ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.

೨. ಡಾ. ಎನ್. ನಂದೀಶ್ವರ, ೨೦೦೮ **ಸಿರಾ ತಾಲ್ಲೂಕು ದರ್ಶನ**, ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.




# ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ಲಕ್ಷ್ಮೇಶ್ವರದ ಎರಡು ಜಯಪತ್ರಗಳು

ಸ್ಮಿತಾರೆಡ್ಡಿ*

ಗದಗ ತಾಲೂಕಿನ ಲಕ್ಷ್ಮೇಶ್ವರದಲ್ಲಿ ಕಂಡುಬರುವ ಈ ಜಯಪತ್ರಗಳು ಹಲವಾರು ಕಡೆ ಪ್ರಕಟಣೆಯನ್ನು ಕಂಡಿವೆ. ಮೊದಲನೆಯ ಶಾಸನ ಕ್ರಿ.ಶ. ೧೪೧೨ಕ್ಕೆ ಸೇರಿದೆ. ಎರಡನೆಯ ಶಾಸನದಲ್ಲಿ ವರ್ಷದ ಉಲ್ಲೇಖ ಇರುವ ಭಾಗ ತ್ರುಟಿತವಾಗಿದೆ. ಆದರೆ ನಂತರದ ವಿವರಗಳಿಂದ ಇದು ಶಕ ೧೪.. ವಿಳಂಬಿ, ಪ್ರಥಮ ಜೇಷ್ಠ, ಶು. ಸೋಮವಾರವೆಂದಿದೆ. ವಿಳಂಬಿ ಸಂವತ್ಸರ ಶಕ ೧೪೦೦ ಮತ್ತು ಶಕ ೧೪೬೦ರಂದು ಬರುತ್ತದೆ.ಇದರ ಪ್ರಕಾರ ಈ ಶಾಸನ ಕ್ರಿ.ಶ. ೧೫೩೮ ಏಪ್ರಿಲ್ ೨೯ಕ್ಕೆ ಸೇರುತ್ತದೆಂದು ಅಭಿಪ್ರಾಯಪಡಲಾಗಿದೆ. ಆದರೆ, ಮೊದಲನೇ ಶಾಸನದಲ್ಲಿ ಉಲ್ಲೇಖಗೊಂಡಿರುವ ಹೇಮದೇವಾಚಾರ್ಯ ಮತ್ತು ಶಿವರಾಮಯ್ಯರ ಉಲ್ಲೇಖ ಎರಡನೆಯ ಶಾಸನದಲ್ಲೂ ಪ್ರಸ್ತಾಪವಾಗಿದೆ. ಕಾಲಗಣನೆಯ ಉಳಿದ ವಿವರಗಳು ಎಂದರೆ, ವಿಳಂಬಿ, ಪ್ರಥಮ ಜೇಷ್ಠ, ಶು. ಸೋಮವಾರ ಶಕ ೧೪೬೦ಕ್ಕೆ ಕ್ರಿ.ಶ. ೧೫೩೮ಕ್ಕೆ ಸರಿಹೊಂದುತ್ತವೆ ಎರಡನೆಯ ಶಾಸನದ ಕಾಲಾವಧಿಯನ್ನು ಶಕ ೧೪೬೦ (ಕ್ರಿ.ಶ. ೧೫೩೮) ಎಂದು ಅಂಗೀಕರಿಸಿದರೆ, ಎರಡೂ ಶಾಸನಗಳ ಅಂತರ ೧೨೬ ವರ್ಷಗಳಷ್ಟಾಗುತ್ತದೆ. ಆದರೆ, ಇಲ್ಲಿನ ಎರಡೂ ಶಾಸನಗಳು ಶಂಖಬಸದಿಯ ಹೇಮದೇವಾಚಾರ್ಯ ಮತ್ತು ಸೋಮೇಶ್ವರ ದೇವಾಲಯದ ಶಿವರಾಮಯ್ಯನನ್ನು ಉಲ್ಲೇಖಿಸುತ್ತವೆ.. ಬಹುಶಃ ಎರಡನೆಯ ಶಾಸನ ಹಿಂದೆ ನಡೆದಿದ್ದ ಘಟನೆಯನ್ನು ನಂತರ ಬರೆಸಿದಂತೆ ತೋರುತ್ತದೆ. ಕ್ರಿ.ಶ. ೧೪೭೮ರ ವೇಳೆಗೆ ಶಿವರಾಮಯ್ಯ ಮತ್ತು ಹೇಮದೇವಾಚಾರ್ಯರು ನಿವೃತ್ತಿಗೆ ಸರಿದು ಅವರ ಸ್ಥಾನಗಳಿಗೆ ಕಾಳಹಸ್ತಿದೇವ ಮತ್ತು ಸಂಖಣಾಚಾರ್ಯ ಬಂದಿರಬಹುದೆಂದು ಊಹಿಸಬಹುದು.

ಈ ಎರಡು ಶಾಸನಗಳು ಸ್ವರೂಪದಲ್ಲಿ ಜಯಪತ್ರಗಳಾಗಿವೆ. ಶಾಸನಗಳಲ್ಲಿ ಜಯಪತ್ರಗಳನ್ನು ಜಯಪತ್ರ, ಜಯಪತ್ರಿಕೆ, ಜಯರೇಖೆ, ಕಂಚಿಪತ್ರ, ಜಯಪಟ್ಟಿಕೆ, ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಮೇಲ್ನೋಟಕ್ಕೆ ಇವು ವಾದದಲ್ಲಿ ವಿಜಯಶಾಲಿಗಳಾದಂಥವರಿಗೆ ನೀಡುವಂತಹ ಪತ್ರ ಎಂದು ಸುಲಭವಾಗಿ ವ್ಯಾಖ್ಯಾನಿಸಬಹುದಾದರೂ, ವಾಸ್ತವವಾಗಿ ಮಧ್ಯಕಾಲೀನ ಸಮಾಜದ ಧರ್ಮ/ಸಮುದಾಯಗಳ ಒಳಪಾತಳಿಗಳಲ್ಲಿ ಪ್ರವಹಿಸುವ ತಳಮಳ, ತಾಕಲಾಟ, ಅಸ್ಥಿರತೆ, ಅಭದ್ರತಾ ಭಾವನೆ ಮುಂತಾದವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ.

ಮೊದಲನೆಯ ಶಾಸನದ ವಸ್ತು ಭೂವಿವಾದ. ಶಂಖಬಸ್ತಿಯ ಹೇಮದೇವಣಾಚಾರ್ಯ ಮತ್ತು ಸೋಮನಾಥ ದೇವರ ಸ್ಥಾನಚಾರ್ಯ ಶಿವರಾಮಯ್ಯ ತಮ್ಮ ತಮ್ಮ ದೇವಾಲಯಗಳ ಭೂಮಿಗಳ ವಿಷಯದಲ್ಲಿ ವ್ಯಾಜ್ಯ ತೆಗೆಯುತ್ತಾರೆ. ಇಬ್ಬರೂ ಮಹಾಪ್ರಧಾನ ನಾಗಣ್ಣ ದಂಡನಾಯಕರಿಗೆ ವಿವಾದ ಬಗೆಹರಿಸುವಂತೆ ಮನವಿ ಮಾಡಿಕೊಳ್ಳುತ್ತಾರೆ. ಅರಮನೆಯ ಪುರೋಹಿತ ಸಂಗಮದೇವ ವಿದ್ವಾಂಸರುಗಳನ್ನು ಕೂಡಿಕೊಂಡು ಎರಡೂ ತಂಡಗಳ ಶಾಸನಗಳನ್ನು ಓದಿಸಿ ನೋಡುತ್ತಾರೆ. ಹೇಮದೇವಣಾಚಾರ್ಯರನ್ನು ಕರೆಸಿ ಕೇಳಿದಾಗ ವಿವಾದಾತ್ಮಕ ಭೂಮಿಯಲ್ಲಿ ಶಿವರಾಮಯ್ಯ ಬಲಪ್ರಯೋಗದಿಂದ ವ್ಯವಸಾಯ ಮಾಡುತ್ತಿದ್ದಾರೆ.

ತಾನು ಕಾಡಿಬೇಡಿ ಸಿಕ್ಕಷ್ಟು ಬೆಳೆ ಪಡೆದುಕೊಳ್ಳುತ್ತಿದ್ದೇನೆ. ತಾನು ವಿರೋಧಿಸುತ್ತಿರುವುದನ್ನು ಎಲ್ಲರೂ ಬಲ್ಲರು ಎಂದು ಹೇಳುತ್ತಾನೆ. ಅದಕ್ಕೆ ವಿದ್ವಾಂಸರು ಪುಲಿಗೆರೆಯ ನಾಗಗೌಡ ಮೊದಲಾದ ಗೌಡ ಪ್ರಜೆಗಳು ಹೇಳಿದರೆ ಅದಕ್ಕೆ ತಕ್ಕ ಹಾಗೆ ತಾವು ವಿವಾದ ಬಗೆಹರಿಸುತ್ತೇವೆಂದು ಹೇಳಿ, ಶಿವರಾಮಯ್ಯನ ಅಣ್ಣ ಗಂಗಣ್ಣಯ್ಯ ಮತ್ತು ಹೇಮದೇವಣಾಚಾರ್ಯರಲ್ಲಿ 'ಆಣೆಬಾರದ' ಓಲೆ ಬರೆದುಕೊಡುವಂತೆ ಹೇಳಿದಾಗ ಗಂಗಣ್ಣಯ್ಯ ಹಿಂದೆ ಸರಿಯುತ್ತಾನೆ. ಆಗ ಹೇಮದೇವಣಾಚಾರ್ಯನಿಗೆ ಜಯಪತ್ರ ನೀಡಿ, ಶಿವರಾಮಯ್ಯನಗೆ ವಿವಾದ ಮಾಡಬಾರದೆಂದು ಎಚ್ಚರಿಕೆ ನೀಡುತ್ತಾರೆ.

ಎರಡನೆಯ ಶಾಸನದ ವಿಷಯ ಧಾರ್ಮಿಕ ವಿವಾದ. ಶಂಖಬಸ್ತಿಯ ಸಂಕಣಾಚಾರ್ಯ, ಹೇಮಣಾಚಾರ್ಯ– ಇವರು ಸೋಮೇಶ್ವರ ದೇವರ ಪಾದಪದ್ಮಾರಾಧಕರಾದ ಕಾಳಹಸ್ತಿದೇವರು ಮತ್ತು ಶಿವರಾಮದೇವರಿಗೆ ಜಯಪತ್ರಿಕೆ

* ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ, ವಿಧಾನಸೌಧ, ಬೆಂಗಳೂರು.

ಬರೆದುಕೊಡುತ್ತಾರೆ. (ಮೊದಲನೆಯ ಶಾಸನದಲ್ಲಿ ಜೈನ ಆಚಾರ್ಯನಿಗೆ 'ದೇವ' ಎಂಬ ಗೌರವಾಭಿದಾನ ಬಳಸಲಾಗಿದ್ದರೆ, ಎರಡನೆಯ ಶಾಸನದಲ್ಲಿ ಸೋಮೇಶ್ವರ ದೇವಾಲಯದ ಸ್ಥಾನಪತಿಗಳಿಗೆ 'ದೇವ' ಎಂಬ ಅಭಿದಾನವನ್ನು ಬಳಸಿರುವುದನ್ನು ಗಮನಸಬಹುದು). ಜೈನರು, ಶಾಂತಿತೀರ್ಥಂಕರೋತ್ಸವದಲ್ಲಿ ಸೋಮೇಶ್ವರ ದೇವಾಲಯಕ್ಕೆ ಸಲ್ಲುವ ಅಷ್ಟದಿಕ್ಪಾಲಕಾದಿಗಳು, ಧ್ವಜಪತಾಕಾದಿಗಳನ್ನು ಬಳಸಿದ್ದ ಬಗ್ಗೆ ತಪ್ಪು ಒಪ್ಪಿಕೊಂಡು ಜಿನಸಮಯಕ್ಕೆ ಅಷ್ಟದಿಕ್ಪಾಲಾಧಿಗಳು, ಧ್ವಜಪತಾಕಾದಿಗಳು ಸಲ್ಲವೆಂದು, ತಾವು ಪ್ರಜ್ಞಾಹೀನತೆಯಿಂದ ಬಳಸಿದೆಯೆಂದು ಹೇಳಿ ಜಯಪತ್ರ ಬರೆದುಕೊಡುತ್ತಾರೆ. ಹುಲಿಗೆರೆಯ 'ಪುರನಿವಾಸಿಗಳಪ್ಪ ಮರ್ತ್ಯ ಮಹಾಗಣಂಗಳು' ಇದನ್ನು ಪಡೆದುಕೊಳ್ಳುತ್ತಾರೆ.

ಇವು ಜೈನ ಶೈವ ಸಂಘರ್ಷವಾದರೆ, ಇದೇ ಕಾಲಘಟ್ಟದಲ್ಲಿ (ಕ್ರಿ.ಶ. ೧೩೬೮) ಸುಮಾರು ೩೫ ವರ್ಷಗಳ ಮೊದಲು ನಡೆದ ಬುಕ್ಕರಾಯನ ಶಾಸನವೂ (ಜೈನ X ವೈಷ್ಣವ) ಇದೇ ಸ್ವರೂಪದ್ದೇ. ಎರಡರಲ್ಲೂ ಜೈನರ ಸೋಲು ಸಹಜ ಕ್ರಿಯೆಯೆಂಬಂತೆ ತೋರುತ್ತದೆ. ಇಲ್ಲಿ ಶಾಸನದ ಸಾರಾಂಶಕ್ಕಿಂತ ಮುಖ್ಯವಾಗಿ ಈ ಜಯಪತ್ರಗಳು ಹುಟ್ಟಿಕೊಳ್ಳುವುದಕ್ಕೆ ಕಾರಣವಾದ ಚಾರಿತ್ರಿಕ ಸಂದರ್ಭಗಳು ಏನಾಗಿದ್ದವು? ಎಂಬ ಪ್ರಶ್ನೆ ಮುಖ್ಯ.

ಇದಕ್ಕೆ ಉತ್ತರ ಕಂಡುಕೊಳ್ಳಲು ನಾವು ಕ್ರಿ.ಶ. ೧೨ನೇ ಶತಮಾನದಿಂದಲೂ ಕರ್ನಾಟಕದಲ್ಲಾದ ಧಾರ್ಮಿಕ ಪಲ್ಲಟಗಳನ್ನು, ಸಾಮಾಜಿಕ ಚಲನಶೀಲತೆಯನ್ನು ಅವಲೋಕಿಸಬೇಕಾಗುತ್ತದೆ. ಅದಕ್ಕೂ ಮಿಗಿಲಾಗಿ ತನ್ನ ಇತಿಹಾಸ ಆರಂಭವಾದಾಗಿನಿಂದ ಲಕ್ಷ್ಮೇಶ್ವರ ಅಥವಾ ಪುಲಿಗೆರೆ ಈ ಘಟನೆಗಳಿಗೆ ಹೇಗೆ ಸಾಕ್ಷಿಯಾಗಿ ನಿಂತಿತ್ತು ಎಂಬುದನ್ನು ಪರಿಶೀಲಿಸುವುದು ಅಗತ್ಯ.

ಲಕ್ಷ್ಮೇಶ್ವರದಲ್ಲಿ ಮೊದಲ ಶಾಸನ ಇಮ್ಮಡಿ ಪುಲಿಕೇಶೀಯ ಕಾಲದ್ದು, ಇವರ ಕಾಲದಲ್ಲಿ ಸೇಂದ್ರಕ ದುಗ್ಗಶಕ್ತಿ ಎಂಬುವವನು ಶಂಖಬಸ್ತಿಗೆ ದಾನ ನೀಡಿದ ಉಲ್ಲೇಖವಿದೆ. ಎಂದರೆ, ಈಗಾಗಲೇ ಇದು ನಿರ್ಮಾಣವಾಗಿತ್ತೆಂದರ್ಥ. ಪ್ರಮುಖ ಜೈನ ನೆಲೆಗಳಾದ ಲಕ್ಕುಂಡಿ, ಮುಳಗುಂದ, ಕೊಪ್ಪಳ, ಕೋಗಳಿ, ಶ್ರವಣಬೆಳಗೊಳ ಪಡೆದಿದ್ದಂತಹ ಸ್ಥಾನವನ್ನು ಲಕ್ಷ್ಮೇಶ್ವರವೂ ಪಡೆದಿತ್ತು. ಐತಿಹ್ಯಗಳ ಪ್ರಕಾರ ಲಕ್ಷ್ಮೇಶ್ವರದಲ್ಲಿ ೭೦೦ಕ್ಕೂ ಅಧಿಕ ಬಸದಿಗಳಿದ್ದವು. ಇದು ಆಶಯವಿರಬಹುದು ಅಥವಾ ಇಡೀ ಪುಲಿಗೆರೆ-೩೦೦ರ ಪ್ರಾಂತ್ಯದಲ್ಲಿ ಅಷ್ಟು ಸಂಖ್ಯೆಯ ಬಸದಿಗಳಿದ್ದಿರಬಹುದು. ಆದರೆ ಉತ್ಪ್ರೇಕ್ಷೆಯಂತೂ ಆಗಿರಲಾರದು.. ಪುಲಿಗೆರೆಯ ಶಾಸನಗಳಲ್ಲೇ ಶಂಖಬಸದಿ, ತೀರ್ಥಬಸದಿ, ಮುಕ್ಕರ ಬಸದಿ, ರಾಚಮಲ್ಲ ಬಸದಿ, ಗಂಗ ಕಂದರ್ಪ ಬಸದಿ, ಗಂಗ ಪೆರ್ಮಾನಡಿ ಚೈತ್ಯಾಲಯ, ಗೊಗ್ಗಿಯ ಬಸದಿ, ಆನೆಸಜ್ಜೆ ಬಸದಿ, ಇತ್ಯಾದಿ ಹಲವಾರು ಬಸದಿಗಳಿದ್ದ ಉಲ್ಲೇಖವಿದೆ.

ಹರಿಹರನ ಆದಯ್ಯನ ರಗಳೆ ಪ್ರಕಾರ ಆದಯ್ಯ ಸುರಹೊನ್ನೆ ಬಸದಿಯನ್ನು ಸೋಮನಾಥ ದೇವಾಲಯವನ್ನಾಗಿ ಪರಿವರ್ತಿಸಿದ ಕತೆಯಿದೆ. ಹಾಗೆಯೇ ಅಬ್ಬಲೂರಿನ ಶೈವಭಕ್ತ ಏಕಾಂತದ ರಾಮಯ್ಯ ಅಬ್ಬಲೂರಿಗೆ ಹೋಗುವುದಕ್ಕೆ ಮೊದಲು ಪುಲಿಗೆರೆಯ ಸೋಮನಾಥನ ದೇವಾಲಯಕ್ಕೆ ಬಂದು, ದೇವರು ಕನಸಿನಲ್ಲಿ ಮಾರ್ಗದರ್ಶನ ನೀಡಿದಂತೆ ಅಬ್ಬಲೂರಿಗೆ ಹೋದ ಕತೆಯಿದೆ. ಈ ರಗಳೆಗಳು ಶೈವರ 'ಉಗ್ರ ಶೈವಪಾರಮ್ಯ' ಭಕ್ತಿಯನ್ನು ಮೆರೆಸುತ್ತಲೇ ಜೈನರ ದೈನ್ಯಸ್ಥಿತಿಯನ್ನೂ ಸಹ ಅನಾವರಣಗೊಳಿಸುತ್ತವೆ.

ಈ ಶಿವಪಾರಮ್ಯತೆ ೧೧ನೇ ಶತಮಾನದಿಂದ ೧೩ನೇ ಶತಮಾನದವರೆಗೆ ಸಹಜ ಪ್ರಕ್ರಿಯೆಯೆಂಬಂತೆ ಶಾಸನಗಳಲ್ಲಿ ಕಂಡುಬರುತ್ತದೆ. 'ಜಿನಾಚಾರ ನಿರತರು ಶ್ರೇಷ್ಠ' ಎಂದು ಪಂಪ ೧೦ನೇ ಶತಮಾನದಲ್ಲಿ ನಿರ್ಭಯವಾಗಿ ಹೇಳುತ್ತಿದ್ದ. ಆದರೆ ೧೨ನೇ ಶತಮಾನದ ವೇಳೆಗೆ ಬ್ರಹ್ಮಶಿವ 'ಜೈನ ಧರ್ಮೀಯರನ್ನು ಕಂಡರೆ ಕರ್ಚಿಕೊಲ್ಲುತ್ತಾರೆ, ಜೈನಧರ್ಮವನ್ನು ಒಳ್ಳಿತು ಎಂದರೆ ಸಿಟ್ಟಿಗೇಳುತ್ತಾರೆ' ಎನ್ನುತ್ತಾನೆ. ಮುಂದುವರೆಸುತ್ತಾ, ಪುಲಿಗೆರೆಯಲ್ಲಿ ಹಿಂದೆ ನೆಲದಲ್ಲಿ ಹೂಳಿದ ನಂದಿ ವಾಹನನೇ ಸ್ವಯಂಭೂ ಲಿಂಗವಾಗಿ ಉದ್ಭವಿಸಿದನೆಂದು ಹೇಳುವರು ಗಾವಿಲರು. ಅದು ಜೈನ ವೃಷಭ ವಾಹನದ ಚಿಹ್ನೆ' ಎನ್ನುತ್ತಾನೆ. ಎಂದರೆ ಬಸದಿ ದೇವಾಲಯವಾಗಿ ಪರಿವರ್ತನೆಯಾಗಿದ್ದರ ಆಕ್ರೋಶ ಅವನ ಮಾತುಗಳಲ್ಲಿ ಎದ್ದುಕಾಣುತ್ತದೆ. ರಾಜಾಶ್ರಯದ ಭದ್ರ ಆಶ್ರಯದಲ್ಲಿ ಬದುಕುತ್ತಿದ್ದ ಪಂಪನಿಗೆ ಸುಸ್ಥಿರ ಭಾವವಿತ್ತು. ಅಭದ್ರತೆಯಿರಲಿಲ್ಲ, ಆದರೆ, ೧೨ನೇ ಶತಮಾನದ ವೇಳೆಗೆ ಜೈನಧರ್ಮಕ್ಕೆ ರಾಜಾಶ್ರಯ ತಪ್ಪಿತ್ತು. ಅಷ್ಟೇ ಅಲ್ಲ. ಬದಲಾದ ರಾಜಕೀಯ/ಧಾರ್ಮಿಕ ವಿದ್ಯಮಾನಗಳಲ್ಲಿ ಕಾಳಾಮುಖ ಗುರುಗಳು ಪ್ರಮುಖ ಪಾತ್ರ ವಹಿಸುತ್ತಿದ್ದರು. ರಾಜರು ಅವರ "ಕಾಲಂಕರ್ಚಿ' ಯಥೇಚ್ಛವಾಗಿ ದಾನಗಳನ್ನು ನೀಡಿದ್ದನ್ನು ಈ ಅವಧಿಯ ಶಾಸನಗಳಲ್ಲಿ ಕಾಣುತ್ತೇವೆ.

ಶೈವರ ಆಶ್ರಯದಲ್ಲಿ ಈ ಅವಧಿಯಲ್ಲಿ ಹಲವಾರು ಜಿನಾಲಯಗಳ ನಿರ್ಮಾಣವಾಗುತ್ತವೆ. ಅವುಗಳಲ್ಲಿ ಶೈವ ಯತಿಗಳ ಯೋಗಪಟ್ಟಿಕೆ, ನಂದಿಕೋಲುಗಳನ್ನು ಪೂಜಿಸುವುದು ಕಡ್ಡಾಯವಾಗಿತ್ತು. ಅದೂ 'ವಜ್ರ ಪಂಜರವನಿಕ್ಕುವವೊಲು' ನೇಡುತ್ತಾರೆ. ಆ ಮೂಲಕ ಅವರ ಮೇಲೆ ನಿಯಂತ್ರಣ ಹೇರುತ್ತಾರೆ. ಇದೇ ೧೨ನೇ ಶತಮಾನದ ತಾಳಿಕೋಟೆ ಶಾಸನ (ಎಸ್ಐಐ-xv ಬಿಜಾಪುರ ೫೬, ಕ್ರಿ.ಶ. ೧೧೮೪)

‘ಪರಸಮಯ ಗಿರಿವಜ್ರದಂಡರುಂ, ಜಿನಸಮಯ ದಹನ ದಾವಾನಲರುಂ.......... ಅನ್ಯಸಮಯಿಗಳ ಬೆನ್ನ ಬಾರನೆತ್ತುವರುಂ, ಪರಸಮಯ ಘರಟ್ಟರುಂ’ ಆಗಿದ್ದ ಶಿವಭಕ್ತರು ಪರಿಯಳಿಗೆ, ಅಣಲೆವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು, ಮಾರುಡಿಗೆ, ಅಣಂಪೂರು, ಕರಹಾಡ, ಕೆಂಬಾವಿ, ಬಮ್ಮುಕೂರು ಮುಂತಾದ ಸ್ಥಳಗಳಲ್ಲಿ ಜಿನಾಲಯಗಳನ್ನು ನಾಶಮಾಡಿದ್ದನ್ನು ಉಲ್ಲೇಖಿಸುತ್ತದೆ. ತಮ್ಮ ಅಸ್ತಿತ್ವದ ಉಳಿವಿಗಾಗಿ ಜೈನರು ಕಾಳಾಮುಖ ಗುರುಗಳನ್ನೇ ಆಶ್ರಯಿಸುವ ಅನಿವಾರ್ಯತೆ ಉಂಟಾಗುತ್ತದೆ. ಇವುಗಳ ಫಲಿತಗಳೇ ಬ್ರಹ್ಮ ಜಿನಾಲಯಗಳು, ಎಕ್ಕೋಟಿ ಜಿನಾಲಯಗಳ ನಿರ್ಮಾಣ. ಕಾಲಾಮುಖರು ಅನುಸರಿಸುತ್ತಿದ್ದ ಧರ್ಮವೇ ಎಕ್ಕೋಟಿ ಸಮಯ. ೧೨ನೆಯ ಶತಮಾನದ ಜಿನಾಲಯಗಳ ನಿರ್ಮಾಣ ‘ಕಾಳಾಮುಖ ಪ್ರತಿಬದ್ಧ’ವಾಗಿರುತ್ತಿತ್ತು (ಜೆಕೆಯು–x, ೧, ಕ್ರಿ.ಶ. ೧೧೬೮, ಪು. ೧೬೬–೧೭೧). ಎಂದರೆ ಜಿನಾಲಯಗಳ ನಿರ್ಮಾಣಕ್ಕೆ ಕಾಳಾಮುಖ ಆಚಾರ್ಯರ ಅನುಮತಿ ಕಡ್ಡಾಯವಾಗಿತ್ತು. ಚಿಕ್ಕಮಾಗಡಿಯ ಕ್ರಿ.ಶ. ೧೧೮೨ರ ಶಾಸನ ಸಾಮಂತ ಶಂಕರ ಕಟ್ಟಿಸಿದ ಬಸದಿಗೆ ಬಳ್ಳಿಗಾವೆಯ ತ್ರಿಪುರಾಂತದ ದೇವಾಲಯದ ಸೂರ್ಯಾ ಭರಣ ಪಂಡಿತ ದಾನ ನೀಡುತ್ತಾನೆ. ವಿಷಯ ಅದಲ್ಲ! ಈ ಶಾಸನದಲ್ಲಿ ‘ಪಾರ್ಶ್ವನಾಥನು ಶಿವನ ಶ್ರೇಷ್ಠ ಭಕ್ತರಲ್ಲಿ ಒಬ್ಬ’ನೆಂದು ಸ್ವತಃ ಶಾಸನ ಉಲ್ಲೇಖಿಸುತ್ತದೆ (EC–೮, ಸೊರಬ ೧೯೭). ದಾನ ಕೊಟ್ಟವನ ‘ಹಂಗಿ’ಗೆ ಅನುಗ್ರಹಕ್ಕೆ ಪಾತ್ರವಾಗಬೇಕಾಗುತ್ತದೆ.

ಈ ಅಂಶಗಳ ಹಿನ್ನೆಲೆಯಲ್ಲಿ ಲಕ್ಷ್ಮೇಶ್ವರದ ಈ ಎರಡು ಶಾಸನಗಳು ಹಲವಾರು ಅಂಶಗಳನ್ನು ಅನಾವರಣಗೊಳಿಸುತ್ತವೆ. ಜೈನರು ತಮ್ಮ ಉಳಿವಿಗಾಗಿ/ಅಸ್ತಿತ್ವಕ್ಕಾಗಿ ಹೊಸ ಮಾರ್ಗಗಳನ್ನು ಅಳವಡಿಸಿಕೊಳ್ಳುವ/ಅನುಸರಿಸುವ ಅನವಾರ್ಯತೆಗೆ ಒಳಗಾಗಿದ್ದರು. ಮೊದಲು ಕಂಡುಬರುತ್ತಿದ್ದ ತಾತ್ವಿಕ ಮುಖಾಮುಖಿಗಳು ಈ ವೇಳೆಗೆ ಕಣ್ಮರೆಯಾಗುತ್ತದೆ. ಲಕ್ಷ್ಮೇಶ್ವರದ ಕ್ರಿ.ಶ. ೧೪೧೨ರ ಶಾಸನ ಭೂಮಿಗಾಗಿ ಎಂದರೆ, ಭೌತಿಕ ಸಂಪತ್ತಿಗಾಗಿ ನಡೆದ ಕಲಹದಂತೆ ಕಂಡರೂ, ಅಲ್ಲಿ ಅಬಲ ಜೈನರ ಮೇಲೆ ಪ್ರಬಲ ಶೈವರ ದಬ್ಬಾಳಿಕೆ ಅಥವಾ ಅತಿಕ್ರಮಣತೆ ನಡೆದಿರುವುದನ್ನು ಕಾಣಬಹುದು. ಊರ ಸಮಸ್ತ ನಾಡಗವುಡುಗಳಿಗೆ ಈ ವಿಷಯ ಗೊತ್ತಿದ್ದರೂ, ದನಿ ಉಡುಗಿಸಿಕೊಂಡು ಮೌನವಾಗಿರುವಂಥ ಸ್ಥಿತಿ ಉದ್ಭವವಾಗಿದೆ. ಅಲ್ಲದೆ, ಕ್ರಿ.ಶ. ೭ನೇ ಶತಮಾನದಿಂದಲೂ ಶಂಖ ಬಸ್ತಿಗೆ ಹರಿದು ಬರುತ್ತಿದ್ದ ವಿಫುಲ ದಾನದತ್ತಿಗಳು ನಂತರದ ಕಾಲಘಟ್ಟದಲ್ಲಿ ಬಲಾಢ್ಯರಾದ ಶೈವರ ಕಣ್ಣು ಕುಕ್ಕಿರಲಿಕ್ಕೂ ಸಾಕು.

ಕ್ರಿ.ಶ. ೧೪೧೨ ಅಥವಾ ೧೫೩೮ರ ಶಾಸನ ಒಂದು ಮತದ ಧಾರ್ಮಿಕ ಚಿಹ್ನೆಗಳನ್ನು ಮತ್ತೊಂದು ಮತ ಅನುಸರಿಸಿದ್ದಕ್ಕಾಗಿ ನಡೆದಂಥ ಘರ್ಷಣೆ. ಭೂ ವಿವಾದದಲ್ಲಾದ ತಮ್ಮ ಸೋಲಿಗೆ ಮುಯ್ಯಿ ತೀರಿಸಿಕೊಳ್ಳಲು ಬಲವಂತವಾಗಿ ಜೈನರಿಂದ ಜಯಪತ್ರವನ್ನು ಪಡೆದಂತೆ ಕಾಣುತ್ತದೆ. ಜೈನರು, ಶೈವ ಅಥವಾ ವೈದಿಕ ಮತದ ಆರಾಧನಾ, ಸಾಂಸ್ಕೃತಿಕ ಚಹರೆಗಳನ್ನು, ಸಂಕೇತಗಳನ್ನು ಅಳವಡಿಸಿಕೊಳ್ಳಲು ಹೊರಟಿರುವುದನ್ನು ಈ ಶಾಸನದಲ್ಲಿ ಕಾಣಬಹುದು. ಮಧ್ಯಕಾಲೀನ ಸಮಾಜದಲ್ಲಾಗುತ್ತಿದ್ದ ಪರಿವರ್ತನೆ, ಪಲ್ಲಟಗಳು ಜೈನ ಧರ್ಮೀಯರ ಮೇಲೂ ಆಗಿತ್ತು.

ಒಟ್ಟಾರೆಯಾಗಿ ೧೫ನೇ ಶತಮಾನದ ಅವಧಿಯವರೆಗೂ ನಿರಂತರವಾಗಿ ಪರಸ್ಪರ ಘರ್ಷಣೆಗಳು ನಡೆಯುತ್ತಿದ್ದಂತೆ ಕಾಣುತ್ತದೆ. ಸಹಸ್ರಕೂಟ ಜಿನಬಿಂಬ ಹೊಲದಲ್ಲಿ ದೊರೆಯುತ್ತದೆಂಬ ಸಂಗತಿ ಜೈನರು ತಮ್ಮ ನೆಲೆ ಕಳೆದುಕೊಂಡಿದ್ದರೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಬದಲಾದ ಸಂದರ್ಭಗಳೊಂದಿಗೆ ಅನುಸಂಧಾನ ಮಾಡಿಕೊಂಡು ಹೋಗಬೇಕಾದ ಅನಿವಾರ್ಯತೆಯನ್ನು, ಈ ಶಾಸನಗಳು ಅನಾವರಣಗೊಳಿಸುತ್ತವೆ.



## ಆಕರ ಗ್ರಂಥಗಳು


೧. ಎಫಿಗ್ರಾಫಿಯಾ ಇಂಡಿಕಾ: ಸಂ.VI (ಪು. ೧೬೩–೧೬೭); (ಸಂ–XIV) (ಪು. ೧೮೮–೧೯೧).
೨. ಎಸ್ಐಐ–XX, ೨೩೨, ೩೯೧.
೩. Indian Antiquary ,Vol-VII (104, 106-107); B.K. NO. 18 of 1933-36 and B.K. No. 33 of 1935-36.
೪. ಲಕ್ಷ್ಮೇಶ್ವರ ಶಾಸನಗಳು: ಸಂ. ದೇವರಕೊಂಡಾರೆಡ್ಡಿ ಮತ್ತು ಕೆ.ಆರ್. ಗಣೇಶ್, ಸಂಖ್ಯೆ: ೪೮, ೫೮, ವರ್ಷ–೨೦೧೪.
೫. ತಿರುಳ್ಗನ್ನಡ ನಾಡು ಪುಲಿಗೆರೆ: ಸಂ. ಸದಾನಂದ ಕನವಳ್ಳಿ, ಚನ್ನಪ್ಪ ಕೆರಿಮನ, ಪಂಪ ಪ್ರಕಾಶನ, ಲಕ್ಷ್ಮೇಶ್ವರ.
೬. ಲೌಕಿಕ–ಅಲೌಕಿಕ: ರಾಜಾರಾಂ ಹೆಗ್ಗಡೆ; ಆನಂದ ಕಂದ ಗ್ರಂಥಮಾಲೆ, ೨೦೦೧.
೭. Medieval Jainism with reference to the Vijayanagar empire: B.A. Salltore, Bombay-1938.
೮. ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ: ಸಿ.ಯು. ಮಂಜುನಾಥ್, ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೧೨.
೯. ವಿಜಯ ನಗರ ಅಧ್ಯಯನ, ಸಂ–೧೦: ಡಾ॥ ಶ್ರೀನಿವಾಸ ಪಾಡಿಗಾರ್: ಲಕ್ಷ್ಮೇಶ್ವರದ ಎರಡು ಜಯಪತ್ರ ಶಾಸನಗಳು, ಪು. ೮೭–೯೬.
೧೦. ಹರಿಹರನ ರಗಳೆಗಳು, ಸಂ. ಎಂ. ಎಂ. ಕಲಬುರ್ಗಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೧೧.



# ಕೆಳದಿ ಅರಸರ ಕಾಲದ ಅಪ್ರಕಟಿತ ಮೂರು ಶಾಸನ ದಾಖಲೆಗಳು

**ಡಾ. ಕೆಳದಿ ವೆಂಕಟೇಶ್ ಜೋಯಿಸ್***

ಕ್ರಿ.ಶ. ೧೪೯೯ರಲ್ಲಿ ಜನ್ಮ ತಾಳಿದ ಕೆಳದಿ ಸಂಸ್ಥಾನ ಮಧ್ಯಕಾಲೀನ ಇತಿಹಾಸದ, ಕೊನೆಯ ಹಾಗೂ ಆಧುನಿಕ ಯುಗದ ಮೊದಲ ಕಾಲದ ಅರಸು ಮನೆತನಗಳಲ್ಲಿ ಪ್ರಮುಖ ಪಡೆದಿತ್ತು. ಕ್ರಿ.ಶ. ೧೫೬೫ರಲ್ಲಿ ವಿಜಯನಗರದ ಪತನದ ನಂತರ ಇವರು ಸ್ವತಂತ್ರರಾದರೂ ವಿಜಯನಗರದವರು ಹಾಕಿಕೊಟ್ಟ ಮಾರ್ಗದಲ್ಲಿಯೇ ಮುನ್ನಡೆದಿದ್ದರು. ಈ ಅರಸರಿಗೆ ಸಂಬಂಧಿಸಿದ ಎರಡು ಶಾಸನಗಳು ದೊರೆತಿವೆ. ಇದರಲ್ಲಿ ಒಂದು ಕಾಗದದಲ್ಲಿ ಬರೆದದ್ದಾದರೆ ಇನ್ನೊಂದು ಶಿಲಾ ಶಾಸನ. ಈ ಶಾಸನ ನಂದಿಯ ಕೆಳ ಭಾಗದಲ್ಲಿ ದಾಖಲಾಗಿದೆ.

೧. ಶ್ರೀಮುಖ ಸಂವತ್ಸರದ ವೈಶಾಖ ಬ ೫ಲೂ ಶ್ರೀಮತ್ಕೆಳದಿ
೨. ವೆಂಕಟಪ್ಪನಾಯ್ಕರು ಯಿಕ್ಕೆರಿ ಹಿರೆಮದುಲಿಂಗಾಭಟ್ಟರಿಗೆ
೩. ಬರಶಿ ಕಳುಹಿಶಿದ ಕಾರ್ಯ ಅದಾಗಿ ನಿನು ಬರಕೊಂಡ ಬಿ।
೪. ನ್ನ ವತ್ತಳೆಯಿಂದೆಲ್ಲಾ ವಿವರಉ ತ್ತಿಳಿಯಬಂತು ಆ ವಿಶೆಯ
೫. ವಾಗಿ ಯಿಕ್ಕೆರಿ ಸಾಗರ ಕೆಳದಿ ಬನವಾಸೆ ಗುತ್ತಿ ಆನಂತಪು
೬. ರ ಬಿದನೂರ್‍ರು ಮುಂತ್ತಾದ ಶಿಮೆಗಳಲ್ಲಿರುವಾ ದೆವಾಲಯಾ
೭. ಮೊದಲಾದ್ದರಲ್ಲಿ ದೆವಸ್ತಾಪನೆ ಸಂಪ್ರೊಕ್ಷಣಾ ಅಷ್ಟಬಂಧ
೮. ಮಹೊತ್ಸವ ಗಣಪತಿ ಹವನ ಮುಂತಾಗಿ ಸಂತಾನ ಪಾರಂ
೯. ಪರ್ಯವಾಗಿ ಸಾದಿಶಿಕೊಂಡು ಬರ್‍ರುವದೆಂದು ಪ್ರಾಕು
೧೦. ಪಟ್ಟೆ ನಿರೂಪ ಬರಕೊಟ್ಟಿರುವಲ್ಲಿ ಯೀಗ ಆನಂತ
೧೧. ಪುರದ ಚೆಂನ್ನಕೆಶವೈಯ್ಯ ಮುಂತ್ತಾದ ಚಿಲ್ಲರ ಜನರ್‍ರು
೧೨. ನ ಮುಂದು ಯಿಲ್ಲದೆ ತಂಟೆ ಮಾಡಲಿಕ್ಕೆ ಕಾರಣವೆನೂ
೧೩. ಯಿಂನ್ನು ಮುಂದೆ ಯಾರ್‍ರು ಆದರ್‍ರು ಯಿಲ್ಲದ ತಂಟೆ
೧೪. ಗಳ ಮಾಡಿದ್ದಾದರ್‍ರೆ ಸರಕಾರದ ಯೆಕರಾಜಿವಳಗೆ ಬಿ
೧೫. ಡಾನೆಂದ– ಚಂದಾಗಿ ಹೆಳಿ ಸಾರಾಗದಿಂದ। ನಡ್ಸಬೆ
೧೬. ಕಾದು ಅವಾವ ಶಿಮೆ ಪಾರ್‍ರು ಪತ್ಯಗಾರ್‍ರು ಶ್ಯಾನಬಾ
೧೬. ಗರೆಯ ವರ್ರಿಗೆ ಕಟ್ಟು ಮಾಡಿ ಬರ್ರದೆ। ತ್ತಿಳಿದಿ
೧೭. ರುವದು ಮುದ್ರೆ ಇದೆ.

ಇದು ಇಕ್ಕೇರಿ ಶ್ರೀ ಅಘೋರೇಶ್ವರ ದೇವಾಲಯದ ಅರ್ಚಕ ದಿವಂಗತ ಶ್ರೀ ರಾಮಭಟ್ಟರ ಮನೆಯಲ್ಲಿ ಕಾಗದದಲ್ಲಿ ಮೋಡಿ ಲಿಪಿಯಲ್ಲಿ ಬರೆದಿದ್ದ ನಿರೂಪ. ಹದಿನೇಳು ಸಾಲುಗಳನ್ನೊಳಗೊಂಡಿದೆ. ಪ್ರತಿ ಸಾಲಿನಲ್ಲಿ ಸುಮಾರು ಇಪ್ಪತ್ತು ಅಕ್ಷರಗಳಿವೆ. ಕೊನೆಯಲ್ಲಿ ಮುದ್ರೆ ಇದೆ. ಇದು ಇಕ್ಕೇರಿ ಹಿರೆ ಮದುಲಿಂಗಭಟ್ಟರಿಗೆ ಕೆಳದಿ ವೆಂಕಟಪ್ಪನಾಯಕನು ಬರೆಸಿಕೊಟ್ಟುದಾಗಿದೆ. ಸಾಗರ ಕೆಳದಿ ಬನವಾಸಿ, ಗುತ್ತಿ, ಆನಂದಪುರ, ಬಿದನೂರು ಈ ಮೊದಲಾದ ಸ್ಥಳಗಳಲ್ಲಿ, ಸೀಮೆಗಳಲ್ಲಿ ಇರುವ ದೇವಾಲಯಗಳಲ್ಲಿ ದೇವಸ್ತಾಪನೆ, ಸಂಪ್ರೋಕ್ಷಣೆ, ಅಷ್ಟಬಂದ ಮಹೋತ್ಸವವ ಗಣಪತಿ ಹವನ ಮುಂತಾಗಿ ನಡೆಸಿಕೊಂಡು ಬರುವಂತೆ ಈ ಹಿಂದೆ ಶಾಸನ ವಾಗಿತ್ತು. ಆದರೆ ಈಗ ಅನಂತಪುರದ ಚೆಂನ್ನಕೇಶವೈಯ್ಯ ಮುಂತಾಗಿ ಚಿಲ್ಲರೆ ಜನರು ಇದಕ್ಕೆ ತೊಂದರೆ ಕೊಡುತ್ತಿರುವ ವಿಚಾರ ಪತ್ರದಿಂದ ತಿಳಿದಿದೆ. ಅವರು ತಂಟೆ ಮಾಡುವುದಕ್ಕೆ ಕಾರಣವಿಲ್ಲ. ಅವರಿಗೆ ಸರಕಾರದ ತೀರ್ಮಾನವನ್ನು ಹೇಳಿ ಇದನ್ನು ಪಾರುಪತ್ಯಗಾರರು ಮತ್ತು ಸ್ಥಳದ ಶಾನುಬೋಗರು ಬಗೆಹರಿಸಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕೊಟ್ಟಿರುವ ನಿರೂಪ ಇದಾಗಿದೆ.

### ಎರಡನೆಯದು ಶಿಲಾಶಾಸನ

ಸಾಗರ ತಾಲ್ಲೂಕಿನ ಮಂಕೋಡು ಎಂಬ ಗ್ರಾಮದಲ್ಲಿ ಸಾಗರದಿಂದ ಕೇವಲ ಎರಡು ಕಿ.ಮೀ. ದೂರದಲ್ಲಿ ಈ ಶಾಸನ ಇದೆ. ಶಾಸನವು ಚಚ್ಚೌಕದ ಬಸವನ ಕಲ್ಲಿನ ಕೆಳಭಾಗದಲ್ಲಿ ಕೆತ್ತಲ್ಪಟ್ಟಿದೆ. ಮೇಲ್ಭಾಗದಲ್ಲಿರುವ ಬಸವ ಸುಮಾರು ಒಂದು ಅಡಿ ಇರಬಹುದು. ಈ ಕಲ್ಲು ನೆಲದಲ್ಲಿ ಹುಗಿದಿರುವುದೂ ಸೇರಿ ಸುಮಾರು ಮೂರು ಅಡಿ

* ಕ್ಯುರೇಟರ್, ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ.

ಎತ್ತರದ್ದಿರಬಹುದು. ಈ ಶಾಸನ ಕಲ್ಲಿನ ಮುಂಭಾಗದಲ್ಲಿದೆ. ಇದು ಒಂಭತ್ತು ಸಾಲು ಒಳಗೊಂಡಿದೆ. ಪ್ರತಿ ಸಾಲಿನಲ್ಲಿ ಸುಮಾರು ೧೮-೧೯ ಅಕ್ಷರಗಳಿವೆ. ಶಿಲಾ ಶಾಸನ ಹೀಗಿದೆ.

೧. ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರ
೨. ವೆ ತ್ರೈಲೊಕ್ಯ ನಗರಾರಂಭ ಮೂಲಸ್ತಂಬಾಯ ಶಂ
೩. ಭವೆ ಸ್ವಸ್ತಿ ಶ್ರೀ ಜಯಾಬ್ಯುದಯ ಶಾಲಿವಾಹನ ಸಖ
೪. ವರುಶಾ ೧೪೫೫ನೆಯ ವಿಜಯ ಸಂವತ್ಸರದ
೫. ಆಶಾಢ ಶು ೫ಲು ಕೊಟೆ ಕೊಳಾಹಳ ಎಡವ ಮು
೬. ರಾರಿ ಕೆಳದಿಯ ತಂಮ್ಮ ಗೌಡರ ಮಗ ಚೌಡ
೭. ಗೌಡರು ತಮಗೆ ದರ್ಮವಾಗಾಬೆಕೆಂದು ಕಲಿ
೮. ಸೆಯ ವಿರಭದ್ರ ದೆವರಿಗೆ ವಯಿಬೊಗ ಅಮ್ರು
೯. ತಪಡಿಗೆ ಯಿಾ ಮಂಕೊಡ ಕೊಟೆಉ. ಯಿಾ ಧರ್ಮಕ್ಕೆ
೧೦. ಅಳುಪಿದವರು ಕೊಮಾರ ದೆವರಿಗೆ ತಪ್ಪಿದವರು
೧೨. ದೆವಲೊಕ ಮರ್ತ್ಯಲೊಕ್ಕೆ ಹೊಹರು. ಕವಿಲೆಯ
೧೩. ಕೊಂದ ಪಾಪಕ್ಕೆ ಹೊಹರು.

ಶಾಸನವು ನಮಸ್ತುಂಗ ಶಿರಶ್ಚುಂಬಿ ಶ್ಲೋಕದಿಂದ ಪ್ರಾರಂಭವಾಗುತ್ತದೆ. ಶಾ.ಶ ೧೪೫೫ನೆ ವಿಜಯ ಸಂವತ್ಸರದ (ಅಂದರೆ ಕ್ರಿ.ಶ. ೧೫೩೩ಕ್ಕೆ ಸರಿ ಹೊಂದುತ್ತದೆ.) ಆಶಾಢ ಶು ೫ರಲ್ಲಿ ಕೊಟೆ ಕೊಳಾಹಳ ಕೆಳದಿಯ ವೆಂಕಗೌಡರ ಮಗ ಚೌಡಗೌಡರು ತಮಗೆ ದಯೆ ಆಗಬೇಕೆಂದು ಕಲಸೆಯ ವೀರಭದ್ರ ದೇವರಿಗೆ ಅಮೃತಪಡಿಗೆ ಬಿಟ್ಟ ದಾನದ ವಿವರವನ್ನು ಈ ಶಾಸನ ಹೇಳುತ್ತದೆ. ಇದು ಕೆಳದಿಯ ಎರಡನೇ ರಾಜ ಸದಾಶಿವನಾಯಕ (ಕ್ರಿ.ಶ. ೧೫೪೯-೧೫೬೫) ಆಡಳಿತ ನಡೆಸಿದ ಕಾಲ. ಚೌಡ ಗೌಡ ಅಥವಾ ಚೌಡಪ್ಪ ನಾಯಕ ಆಡಳಿತ ನಡೆಸಿದ್ದು ೧೫೦೬ರವರೆಗೆ. ಅಲ್ಲದೆ ಇದುವರೆಗೆ ಕೆಳದಿ ಬಸವಪ್ಪ ನಾಯಕನಿಗೆ ಚೌಡಪ್ಪ ಮತ್ತು ಭದ್ರಪ್ಪ ಎಂಬಿಬ್ಬರು ಮಕ್ಕಳು ಎಂದು ಸಾಹಿತ್ಯಕ ಆಧಾರಗಳಿಂದ ತಿಳಿಯಲ್ಪಟ್ಟಿತ್ತು. ಆದರೆ ಇಲ್ಲಿ ವೆಂಕಗೌಡನ ಮಗ ಚೌಡಗೌಡ ಎಂದು ದಾಖಲಾಗಿದೆ. ಆದ್ದರಿಂದ ಈ ಕುರಿತು ಹೆಚ್ಚಿನ ಸಂಶೋಧನೆ ಆಗಬೇಕಿದೆ.

ಈ ಶಾಸನ ಇರುವ ಸ್ಥಳದಲ್ಲಿ ಸುಮಾರು ೨೦*೧೫ ಅಳತೆಯ ಗುಡಿ ಇದೆ. ಅದರಲ್ಲಿ ಗರ್ಭಗೃಹ ಸುಮಾರು ೮*೮ ಅಡಿ ಇದೆ. ಇದರಲ್ಲಿ ನಂದಿ ಕಂಬ ಇದ್ದು ಅದರಲ್ಲಿ ಈ ಶಾಸನ ಇದೆ. ಮುಂಭಾಗದಲ್ಲಿ ಜಂಬಿಟ್ಟಿಗೆಯಿಂದ ನಿರ್ಮಿಸಿರುವ ತಳಪಾಯದ ಅವಶೇಷಗಳೂ ಇವೆ. ದೇವಾಲಯದ ಮುಂಭಾಗದಲ್ಲಿ ಪೌಳಿ ಇದ್ದ ಕುರುಹುಗಳಿವೆ. ಸುತ್ತಲೂ ಮಠ ಇದ್ದ ಅವಶೇಷಗಳಿವೆ. ಬಾವಿಯೂ ಇಲ್ಲಿದೆ. ಹಕ್ಕಲಲ್ಲಿ ಶಾಸನದ ಕಲ್ಲೊಂದು ಅನಾಥವಾಗಿ ಬಿದ್ದಿದ್ದು ಅದನ್ನು ರಕ್ಷಿಸಲು ಅಲ್ಲಿಯ ಸ್ಥಳಿಕರು ಆಸಕ್ತರಿಲ್ಲ.

## ಮೂರನೆಯ ದಾಖಲೆ

ಇದು ತಾಡಯೋಲೆ ಹಸ್ತಪ್ರತಿಯಲ್ಲಿ ದಾಖಲಾಗಿರುವ ನಿರೂಪ ಪ್ರತಿ:

೧. ಕ್ರೋಧಿ ಸಂವತ್ಸರದ ಮಾರ್ಗಶಿರ ಶು ೧೫ಲ್ಲೂ ಶ್ರೀಮತ್ಕೆಳದಿ ಸೊಮಶೇಖ
೨. ರನಾಯಕರು ತಿರುಮಲಯ್ಯಗೆ ಬರಸಿ ಕಳುಹಿದ ಕಾರ್ಯ। ನಮ್ಮ ಹಿರೆರಿಗೆ ಶಿ
೩. ವಸಾಯುಜ್ಯವಾಗ ಬೆಕೆಂದು ಕೆಳದಿ ವಿರಭದ್ರ ದೆವರ ಸಂನ್ನಿಧಿಯಲ್ಲಿ ವರ್ಷ
೪. ಂಪ್ರತಿ ನಡೆಸುವ ಗುಗ್ಗುಳೊತ್ಸವದಲಿ ಬಾಣಸಿಗತನ ಮಾಡಿದ ಫಳಿದ್ಯದ ನಾರ
೫. ಣ ಭಟ್ಟರ ಪ್ರಪೌತ್ರ ಶಂಕರಭಟ್ಟರ ಪೌತ್ರ ನಾರಣ ಭಟ್ಟಗೆ ಯಿಾ ಸೀಮೆಯ ಸದಾ
೬. ಶಿವ ಸಾಗರ ಅಗ್ರಹಾರದೊಳಗಣ ಪ್ರಾಕು ಗ ೬೨ ಅರವತ್ತೆರಡು ವರಹನ ಸ್ವಾಸ್ತೆಯ
೭. ನ್ನು ಶಿವಾರ್ಪಿತವಾಗಿ ಬಿಟ್ಟು ಅಧೆವೆ। ಸೆನಬೊವನ ಕರೆಸಿಕೊಂಡು ಆ ಅಗ್ರಹಾರಕ್ಕೆ ಬಿ
೮. ಟ್ಟ ಭೂಮಿಯೊಳಗ್ಗೆ ಯಿಾ ಉತ್ತಿಗೆ ತಕ್ಕ ರೆಖೆ ಪ್ರಮಾಣ ಭೂಮಿಯ ವಿಂಗಡ್ಡಿಸಿ
೯. ಕೊಟ್ಟು ಮನೆ ಕಟ್ಟಿ ಬಾಳ್ವ ರಿತ್ತಿ ಬರಸಿ ಕಟ್ಟು ಮಾಡ್ಡಿಸುವುದು। ಯಿಾ ಕಾಗದವ ಸೆನ
೧೦. ಬೊವರ ಕಡಿತಕ್ಕೆ ಬರೆಸಿ ತಿರಿಗಿ ನಾರಣ ಭಟ್ಟರ ಬಗೆಯವರ ವಶಕ್ಕೆ ಕೊಡಸುವದಾಗಿ ।
೧೧. ಕಾಗದ ಪ್ರತಿ।

ಕೆಳದಿ ಸೋಮಶೇಖರ ನಾಯಕರ ಕಾಲದ ಈ ನಿರೂಪ ಅಂದು ತಮ್ಮ ಹಿರಿಯರಿಗೆ ಶಿವಸಾಯುಜ್ಯ ದೊರೆಯ ಲೋಸುಗ ವರ್ಷಂಪ್ರತಿ ನಡೆಸುವಂತೆ ನಡೆಸಿದ ಗುಗ್ಗುಳೋತ್ಸವದಲಿ ಬಾಣಿಸಿಗತನ ಮಾಡಿದ ಫಳಿದ್ಯದ ನಾರಣ ಭಟ್ಟ ಎಂಬುವವರಿಗೆ ಸದಾಶಿವ ಸಾಗರ ಅಗ್ರಹಾರದಲ್ಲಿ ೬೨ ಗದ್ಯಾಣದ ಭೂಮಿಯನ್ನು ಕೊಟ್ಟಿದ್ದನ್ನು ದಾಖಲಿಸುತ್ತದೆ. ಈ ಕುರಿತಂತೆ ಐತಿಹ್ಯವೊಂದೂ ಪ್ರಚಲಿತವಿದ್ದು ಈ ನಾರಣಪ್ಪ ಕೊಳಂಬು ಮಾಡುವುದರಲ್ಲಿ ಪ್ರಾವಿಣ್ಯತೆ ಪಡೆದಿದ್ದನೆಂದೂ, ಒಮ್ಮೆ ರಾಜ ಇವನು ಮಾಡಿದ ಕೊಳಂಬಿನ ಸುವಾಸನೆಗೆ ಮಾರುಹೋಗಿ ಇವನನ್ನು ತನ್ನ ಅರಮನೆಗೆ ಕರೆಸಿಕೊಂಡು ಕೊಳಂಬು ಮಾಡಿಸಿದ್ದನೆಂದೂ ಐತಿಹ್ಯ ಹೇಳುತ್ತದೆ. ಇದಕ್ಕೆ ಪೂರಕವಾಗಿ ದೊರೆತಿರುವ ಈ ನಿರೂಪ ಗಮನ ಸೆಳೆಯು ವಂತಹುದಾಗಿದೆ.





# ಮಂಡ್ಯ ಜಿಲ್ಲೆ ಗವಿಮಠದ ಸ್ವತಂತ್ರ ಸಿದ್ಧಲಿಂಗೇಶ್ವರ ಗದ್ದುಗೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಕೊಟ್ಟ ಮೂರು ನಿರೂಪಗಳು

**ಡಾ. ಬಿ. ನಂಜುಂಡಸ್ವಾಮಿ***

ಕನ್ನಡ ಸಾಹಿತ್ಯದ ಹೆಮ್ಮೆಯ ವಚನ ಸಾಹಿತ್ಯದ ದ್ವಿತೀಯ ಘಟ್ಟದ ಚಳುವಳಿ ಪ್ರಾರಂಭವಾಗುತ್ತದೆ ತೋಂಟದ ಸಿದ್ಧಲಿಂಗೇಶ್ವರ ಮತ್ತು ಅವರ ಶಿಷ್ಯರಿಂದ ಇತ್ತೀಚಿನ ಸಂಶೋಧನೆಯಿಂದ ತೋಂಟದ ಸಿದ್ಧಲಿಂಗೇಶ್ವರ ಕಾಲ ಸುಮಾರು ೧೪೪೦-೧೫೬೧ ಎಂದು ನಿರ್ಧರಿಸಲ್ಪಟ್ಟಿದೆ. ತೋಂಟದ ಸಿದ್ಧಲಿಂಗೇಶ್ವರರನ್ನು ಅವರ ಜೀವಿಸಿದ ಕಡೆಯ ಕಾಲದಲ್ಲಿ "ಮುದಿಯುಷ್ಯ" ಎಂದು ಕರೆದಿದೆ. ಇವರ ಕಿರಿಯ ಸಮಕಾಲೀನದ ಸ್ವತಂತ್ರ ಸಿದ್ಧಲಿಂಗೇಶ್ವರನ ಕಾಲವನ್ನು ಸುಮಾರು ಕ್ರಿ.ಶ. ೧೫೮೦ ಎಂದು ಇಟ್ಟುಕೊಳ್ಳಬಹುದು. ಇವರು ರಚಿಸಿದ ವಚನಗಳನ್ನು ಮೂವರು ಸಂಪಾದನೆ ಗಾರರು ತಮ್ಮ ಸಂಕಲನಗಳಲ್ಲಿ ಸೇರಿಸಿಕೊಂಡಿದ್ದಾರೆ.

೧. ಸಂಪಾದನೆಯ ಚನ್ನಂಜೆದೇವ (೧೫೮೦)
೨. ಎಳಮಲೆ ಗುರುಶಾಂತದೇವ (೧೬೦೦)
೩. ಸಂಪಾದನೆ ಸಿದ್ಧವೀರಣ್ಣೊಡೆಯ (೧೬೦೦)

ಈ ಎಲ್ಲಾ ಕಾರಣದಿಂದ ಸ್ವತಂತ್ರ ಸಿದ್ಧಲಿಂಗೇಶ್ವರ ಕಾಲ ೧೬ನೆಯ ಶತಮಾನದ ಉತ್ತರಾರ್ಧವೆಂದು ನಿರ್ಧರಿಸಬಹುದಾಗಿದೆ ಎಂದಿದ್ದಾರೆ ಲಿಂ. ಎಸ್. ಶಿವಣ್ಣನವರು ಸಮಗ್ರ ವಚನ ಸಂಪುಟ ೧೧ರ ಸಂಪಾದಕರಾದ ಶ್ರೀ ಎಸ್. ಶಿವಣ್ಣನವರು ಸ್ವತಂತ್ರ ಸಿದ್ಧಲಿಂಗೇಶ್ವರನ ಬಗೆಗೆ ಈ ಮಾತುಗಳನ್ನು ಹೇಳಿದ್ದಾರೆ. "ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ" ಅಂಕಿತದ ವಚನಕಾರ "ಸ್ವತಂತ್ರ ಸಿದ್ಧಲಿಂಗ ಈತನ ೪೨೦ ವಚನಗಳು ಉಲಬ್ಧವಿದ್ದು ಪ್ರಕಟವಾಗಿದೆ. ಇತ್ತೀಚೆಗೆ ಲಭ್ಯವಾದ ಶಕವರ್ಷ ೧೭೬೫ರಲ್ಲಿ ಅರ್ಥಾತ್ ಕ್ರಿ.ಶ. ೧೮೪೩ರಲ್ಲಿ ಪ್ರತಿ ಮಾಡಿದ ಕಾಗದ ಹಸ್ತಪ್ರತಿಯೊಂದರಲ್ಲಿ ಇವರು ೭೦೦ ವಚನಗಳನ್ನು ರಚಿಸಿದ ಸಂಗತಿ ಬೆಳಕಿಗೆ ಬಂದಿದೆ.

**ಮುಕ್ತ್ಯಂಗನೆಯ ಕಂಠಮಾಲೆ**

ಸ್ವತಂತ್ರ ಸಿದ್ಧಲಿಂಗೇಶ್ವರ ವಿರಚಿತ ೨೧ ವಚನಗಳ ಸಂಕಲನ. ಇದಕ್ಕೆ ಒಂದು ಕನ್ನಡ ವ್ಯಾಖ್ಯಾನವಿದೆ.

**ಜಂಗಮ ರಗಳೆ**

ಇದರಲ್ಲಿ ೧೦೮ ನುಡಿಗಳಿವೆ.

ವಿರೂಪಾಕ್ಷ ಪಂಡಿತಾರಾಧ್ಯ ವಿರಚಿತ ಚೆನ್ನಬಸವ ಪುರಾಣದಲ್ಲಿ ತೋಂಟದ ಸಿದ್ಧಲಿಂಗೇಶ್ವರರ ಜೊತೆ ಸಂಚಾರ ಮಾಡಿದ ಚರಜುಗಮೂರ್ತಿಗಳ ಒಂದು ಪಟ್ಟಿಯನ್ನು ನೀಡಿದ್ದಾನೆ.

**ಸಿದ್ಧಲಿಂಗೇಶ್ವರಂ ಕಂಬಳಾದೇವರಾ**
**ಸಿದ್ಧನಂಜೇಶ್ವರಂ ಚೆನ್ನದೇವರ್**
**ಸಿದ್ಧಲಿಂಗೇಶ್ವರಂ ಕಂಕಣದ ದೇವಾರಾಲಿಂಬ ಕರ್ಣದ ದೇವರು ॥**

**ಸಿದ್ಧಮಲ್ಲೇಶ್ವರರು ಗುಮ್ಮಣಪುರಗ ವರ**
**ಸಿದ್ಧಲಿಂಗೇಶ್ವರಂ ಯಡತೊರೆಯ ಪುರದ ಗುರು**
**ಸಿದ್ಧವೀರಣ್ಣೊಡೆಯೆರೆಸವ ಘನಲಿಂಗದೇವರ**
**ಚಿಕ್ಕಮಲ್ಲೇಶನು (೬೩ನೇ ಸಂಧಿ ೪೭೩ ಪದ್ಯ)**

ಸಿದ್ಧಲಿಂಗೇಶ್ವರ, ಕಂಬಾಳದೇವ, ಕಂಬಳದೇವ, ಸಿದ್ಧನಂಜೇಶ್ವರ, ಚೆನ್ನದೇವ, ದೊಡ್ಡಸಿದ್ಧಲಿಂಗೇಶ್ವರ, ಕಂಕಣದೇವ, ಲಂಬಕರ್ಣನದ ದೇವರು, ಸಿದ್ಧಮಲ್ಲೇಶ್ವರ ಗುಮ್ಮಳಾಪುರದ ಶ್ರೇಷ್ಠಿ ಸಿದ್ಧಲಿಂಗೇಶ್ವರ, ಯಡತೊರೆಯ ಪುರದ ಗುರುಸಿದ್ಧವೀರಣ್ಣೊಡೆಯ ಘನಲಿಂಗದೇವರು ಚಿಕ್ಕಮಲ್ಲೇಶನು ತೋಂಟದ ಸಿದ್ಧಲಿಂಗೇಶ್ವರನ ಜೊತೆ ಸಂಚಾರ ಮಾಡುತ್ತಾ ಇದ್ದರು.

ಈ ಮೇಲಿನ ಉಲ್ಲೇಖಗಳಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರು ಯಾರು ಎಂಬುದನ್ನು ಇಬ್ಬರು ವಿದ್ವಾಂಸರು ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಪ್ರೊ. ಸಿ. ಮಹಾದೇವಪ್ಪನವರು ಸಿದ್ಧಲಿಂಗೇಶ್ವರ ಎಂದು ಸದ್ಯದ ಆದಿಯಲ್ಲಿ ಉಲ್ಲೇಖಗೊಂಡಿರುವನೆ ಸ್ವತಂತ್ರ ಸಿದ್ಧಲಿಂಗೇಶ್ವರ ಅಂದರೆ ಪ್ರೊ. ಹೆಚ್.ಪಿ. ಮಲ್ಲೇದೇವರು ದೊಡ್ಡ ಸಿದ್ಧಲಿಂಗೇಶ್ವರನೆ ಸ್ವತಂತ್ರ ಸಿದ್ಧಲಿಂಗೇಶ್ವರ ಎಂದು ತಮ್ಮ ಅಭಿಪ್ರಾಯವನ್ನು ನೀಡಿದ್ದಾರೆ.

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು-೫೭೨೧೦೨.

"ಸ್ವತಂತ್ರ ಸಿದ್ಧಲಿಂಗೇಶ್ವರರು" ಜನ್ಮನಾಮ ಸಿದ್ಧಲಿಂಗೇಶ್ವರ ಎಂದು ಅವರ ವಚನಗಳ ಅಂಕಿತ "ಸ್ವತಂತ್ರ ಸಿದ್ಧಲಿಂಗೇಶ್ವರ" ಎಂದು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಬದುಕಿದ ಕಾಲದಲ್ಲಿ ಭಕ್ತಜನರ ಮೇಲೆ ಅವರ ಪ್ರಭಾವ ಬಹಳ ಜಾಸ್ತಿ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಭಕ್ತಿಯಿಂದ ಅವರ ತಂದೆ ತಾಯಿ ತಮ್ಮ ಮಗನಿಗೆ 'ಸಿದ್ಧಲಿಂಗ' ಎಂದು ನಾಮಕರಣ ಮಾಡಿ ಆ ಬಾಲಕನನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಗುರುಕುಲಕ್ಕೆ ಸೇರಿಸಿ ವಿದ್ಯಾಭ್ಯಾಸವನ್ನು ಮುಗಿಸಿ ಅವರ ಜೊತೆ ಕಿರಿಯ ಸಮಕಾಲೀನರಾಗಿ ಸಂಚಾರದಲ್ಲಿ ಜೊತೆಯಲ್ಲಿದ್ದು ವಚನಗಾರನಾಗಿ ಪ್ರಸಿದ್ಧಿ ಪಡೆದವನು. ಭಕ್ತಜನ ಏಕನಾಮ ಸಾಮ್ಯ ಗೊಂದಲ ಉಂಟಾಗುವುದು ಬೇಡ ಎಂದು "ಸ್ವತಂತ್ರ ಸಿದ್ಧಲಿಂಗೇಶ್ವರ" ಎಂದೆ ಕರೆದುಕೊಂಡು ಬಂದಿದ್ದಾರೆ.

ಪ್ರೊ. ಸಿ. ಮಹಾದೇವಪ್ಪನವರು ಚೆನ್ನಬಸವಪುರಾಣದ ಮೇಲೆ ಉಲ್ಲೇಖಿಸಿದ ಪದ್ಯಗಳಲ್ಲಿ ಉಲ್ಲೇಖಗೊಂಡಿರುವ ಸಿದ್ಧಲಿಂಗೇಶ್ವರನೆ "ಸ್ವತಂತ್ರ ಸಿದ್ಧಲಿಂಗೇಶ್ವರ" ಎಂದು ನಿರ್ಧರಿಸಿದ್ದಾರೆ. ಅವರು ಆ ರೀತಿ ನಿರ್ಧರಿಸಲು ಕಾರಣ ಮುಕ್ತ್ಯಾಂಗನ ಕಂಠಮಾಲೆ ಮತ್ತು ಜಂಗಮ ರಗಳೆಯ ಉಲ್ಲೇಖಗಳು.

ಮುಕ್ತ್ಯಂಗಣ ಕಂಠಮಾಲೆ ಕೃತಿಯ ಪ್ರಾರಂಭದಲ್ಲಿ

**ಶ್ರೀ ಗುರು ಬಸವಲಿಂಗಾಯನಮಃ ।**
**ಶ್ರೀ ಗುರು ವಿರೂಪಾಕ್ಷ ಲಿಂಗಾಯ ನಮಃ**
**ಸ್ವತಂತ್ರ ಸಿದ್ಧಲಿಂಗೇಶ್ವರಸ್ವಾಮಿಯವರು ನಿರೂಪಿಸಿದ**
**ಮುಕ್ತ್ಯಂಗಣ ಕಂಠಮಾಲೆ**
**ಶ್ರೀ ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾಯ ನಮಃ**

ಎಂದು ಬರೆದಿದ್ದು ತದನಂತರ ೨೧ ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳಿಗೆ ವಿಸ್ತೃತವಾದ ಟೀಕೆ ಇದ್ದು ಕೃತಿಯ ಅಂತ್ಯದಲ್ಲಿ ಈ ವೃತ್ತವನ್ನು ನೀಡಲಾಗಿದೆ.

**ಮತ್ತೇಭವಿಕ್ರೀಡಿತ ವೃತ್ತ**

**ದಯೆಯಿಂ ಶ್ರೀಗುರು ಸಿದ್ಧಲಿಂಗಯತಿವರ್ಯಂ**
**ಸಾಧಕರ್ಗೈದೆ ಸಂ**
**ದೆಯಮೆಲ್ಲಂ ಪರಿಮತಿರೊಲ್ದೊರೆದ ವಾಕ್ಯನೀಕದೊಳ್**
**ನಿರ್ಮಲಾ**
**ಶಯರಾನಂದಿಸಲಾಯ್ದು ಟೀಕಿಸುತದಂ**
**ಮುಕ್ತ್ಯಂಗಣಕಂಠಮಾ**
**ಲೆಯುದೆಂಬಾ ಪೆಸರಿಟ್ಟು ತೋರ್ಪಡಿಸಿದಂ ಶ್ರೀ**
**ಚೆನ್ನದೇವಾಹ್ವೆಯಂ ಮುಕ್ತ್ಯಂಗಣಕಂಠಮಾಲೆ**
**ಸಂಪೂರ್ಣಂ**

ಜಂಗಮ ರಗಳೆ ಕೃತಿಯ ಅಂತ್ಯದಲ್ಲಿ ಒಂದು ಕಂದವಿದ್ದು ಅದನ್ನು ಯಥಾವತ್ತಾಗಿ ಕೊಡಲಾಗಿದೆ.

**ಇಂತೀ ಜಂಗಮದಿರವಂ**
**ಸಂತಸದಿಂ ಪೇಳ್ದ ಸಿದ್ಧಲಿಂಗೇಶ್ವರನ ।**
**ಚಿಂತಿಸುದುದ ನೀವನೆನಗೆ ಗುರುಬಸವೇಶ್ವರ**
**ಜಂಗಮ ರಗಳೆ ಸಮಾಸ್ತಂ**

ಪ್ರೊ. ಸಿ. ಮಹಾದೇವಪ್ಪನವರು ಊಹಿಸಿದಂತೆ ಚೆನ್ನಬಸವಪುರಾಣದ ೬೩ನೇ ಸಂಧಿ ೪೭ನೇ ಪದ್ಯದಲ್ಲಿ ಉಲ್ಲೇಖಗೊಂಡ ಸಿದ್ಧಲಿಂಗೇಶ್ವರನೆ ಸ್ವತಂತ್ರ ಸಿದ್ಧಲಿಂಗೇಶ್ವರ ಎಂಬುದನ್ನು ಮೇಲಿನ ಮುಕ್ತ್ಯಾಗಂಣ ಕಂಠಮೂರ್ತಿ ಟೀಕಾಕಾರ ಶ್ರೀ ಚನ್ನದೇವಾ ವಿರಚಿತ ವೃತ್ತದಿಂದ ಸ್ವತಂತ್ರ ಸಿದ್ಧಲಿಂಗೇಶ್ವರರ ಜಂಗಮರಗಳೆಯ ಅಂತ್ಯದ ಕಂದದಿಂದ ಸ್ಪಷ್ಟವಾಗಿ ತಿಳಿದು ಬರುವಂತಹದು.

ಸ್ವತಂತ್ರ ಸಿದ್ಧಲಿಂಗ ಸ್ಥಳದ ಬಗೆಗೆ ಲಿಂ. ಡಾ. ಎಚ್.ಪಿ. ಮಲ್ಲೇದೇವರು ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಶಾಸನಹಳ್ಳಿಯಲ್ಲಿದ್ದು ಅಲ್ಲಿಗೆ ಸಮೀಪದಲ್ಲಿರುವ ಗುಜರಾಜಗಿರಿಯಲ್ಲಿ ಈತನ ಸಮಾಧಿಯಿದೆಯೆಂದೂ ಅಲ್ಲಿ ಪ್ರತಿ ವರ್ಷ ಮಾಘ ಶುದ್ಧ ಪೂರ್ಣಿಮಾ ದಿನ ಜಾತ್ರೆ ನಡೆಯುತ್ತಿರುವುದಾಗಿಯೂ ತಿಳಿಸಿದ್ದಾರೆ. ಇವರ ಅಭಿಪ್ರಾಯಕ್ಕೆ ಪೋಷಕ–ಪೂರಕವಾಗಿ ಸ್ವತಂತ್ರ ಸಿದ್ಧಲಿಂಗರ ಸಮಾಧಿ ಇಲ್ಲಿತ್ತೆಂಬ ಅಂಶ ಇತ್ತೀಚೆಗೆ ದೊರೆತಿರುವ ಮಂಗಳಾರತಿ ಸ್ವರೂಪದ ಸ್ವರವಚನವೊಂದರಿಂದ ಸಮರ್ಥಿತವಾಗುತ್ತಿರುವುದು ಸಂತಸದ ಸಂಗತಿ ಹಾಗೂ ಅಷ್ಟೇ ಗಮನಾರ್ಹ. ಈ ಆಕರವನ್ನು ಲಿಂ. ಎನ್. ಶಿವಣ್ಣನವರು ಸಂಶೋಧನೆ ಮಾಡಿದ್ದು

**ಬೆಳಗೀರೆ ಮಂಗಳಾರತಿಯ ಮುಂದೆ**
**ಹೊಳೆವ ಸ್ವತಂತ್ರ ಸಿದ್ಧಲಿಂಗನಿಗೆ**
**ಬೆಳಗೀರೆ ಮಂಗಳಾರತಿಯ ॥ ಪಲ್ಲ ॥**
**....ಷಟ್ಸ್ಥಲ ಸಾರ್ವಭೌಮ**
**ಶಾಪನಹಳ್ಳಿಯ ಗವಿಯ ಸರ್ವ**
**ಪಾಪಣಶನ ನದೀ ತೀರ ವಾಸನಿಗೆ**
**ಬೆಳಗಿರೆ ಮಂಗಳಾರತಿಯ**
**ಕೆ. ೧೬೭೦ (೨೪–೫)**

ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ವಿಶ್ವವಿದ್ಯಾನಿಲಯದ ಶ್ರೀ ಗಿರಿಪುರ ಮಠಾಧ್ಯಕ್ಷ = ಬೆಟ್ಟದಪುರ ಶ್ರೀ ಚಿಕ್ಕವೀರ ದೇಶೀಕೇಂದ್ರ ಸಚಿತ್ರ ಚರಿತ್ರೆ ಪುಸ್ತಕದ ಲೇಖಕ ಯು.ಪಿ. ಶಿವರುದ್ರಶಾಸ್ತ್ರಿ. ಈ ಪುಸ್ತಕ ಮೈಸೂರಿನ ಶ್ರೀ ಮುತ್ಕವ್ವತಾ ಪರಮೇಶ್ವರಿ ಪ್ರೆಸ್‌ನಲ್ಲಿ ೧೯೩೫ರಲ್ಲಿ ಮುದ್ರಣವಾಗಿದೆ. ಪೀಠಿಕೆ ಮೂರು ಪುಟ + ಒಂದು ಪುಟ ವಿಷಯಾನುಕ್ರಮಣಿಕೆ + ೧೪೪ ಪುಟ.

ಕೃತಿಯ ಪ್ರಾರಂಭದಲ್ಲಿ ಶ್ರೀಮದಸ್ಮದ್ಗುರು ಮುರುಘಾ ರಾಜೇಂದ್ರ ಪರಬ್ರಹ್ಮಣೇ ನಮಃ ಎಂದು ಶೀರ್ಷಿಕೆಯಲ್ಲಿ ಮುದ್ರಣವಾಗಿದೆ. ಅದರ ಕೆಳಗೆ ಶ್ರೀ ಲೀಲಾಖ್ಯದ ಚಿಕ್ಕವೀರ ದೇಶಿಕೇಂದ್ರ ಚರಿತ್ರೆ ಎಂದು ಮುದ್ರಿಸಲಾಗಿದೆ ಈ ಚರಿತ್ರೆಯಲ್ಲಿ ಪುಟ ೧೩ ಮತ್ತು ೧೪ರಲ್ಲಿ ಬೆಟ್ಟದಪುರದ ಮಠಕ್ಕೊ ಮುಮ್ಮಡಿ ಕೃಷ್ಣರಾಜ ಒಡೆಯರಿಗೊ ಇದ್ದ ಸಂಬಂಧದ ಬಗ್ಗೆ ಮಾಹಿತಿ ಇದೆ. ಅದನ್ನು ಯಥಾವತ್ತಾಗಿ ಕೊಡಲಾಗಿದೆ..

.... ಚಿಕ್ಕ ಚನ್ನಬಸವಸ್ವಾಮಿಗಳು ತಮ್ಮ ಪೂರ್ವಾಚಾಕ್ಷರಂತೆ ಅನ್ನದಾನ, ವಿದ್ಯಾದಾನಗಳನ್ನು ಮಾಡುತ್ತ, ಅನಾಥ ಬಾಲಕರನ್ನು ರಕ್ಷಿಸುತ್ತಾ ಶರಣಾಗತರಾದ ಭಕ್ತರಿಗೆ ಲಿಂಗಾಂಗ ಸಾಮರಸ್ಯ ರೂಪವಾದ ಮಹಾವಿದ್ಯೆಯನ್ನು ಬೋಧಿಸುತ್ತಾ ವಿದ್ವಾಂಸರಿಗೂ ಕವಿಜನರಿಗೂ ಉತ್ತೇಜನವನ್ನುಂಟು ಮಾಡುತ್ತಾ ಪಂಡಿತರೊಡನೆ ಅನುವಾದವನ್ನು ಮಾಡುತ್ತಾ ನಡಿಸುತ್ತಾ, ಲೋಕವಿಖ್ಯಾತರಾದ ಈ ಮಹಾತ್ಮರ ಸಚ್ಚರಿತ್ರೆಯನ್ನು ಮೈಸೂರು ದೇಶಾಧಿಪತಿಗಳಿಂದ ಮುಮ್ಮಡಿ ಶ್ರೀಮುತ್ ಮುಹಾರಾಜ ಕೃಷ್ಣರಾಜ ಒಡೆಯುರ್ ಬಹದ್ದೂರರವರು ತಮ್ಮ ಅರಮನೆಗೆ ಶ್ರೀಗಳನ್ನು ಕರೆಸಿಕೊಂಡು ಇವರ ತಪಃ ಪ್ರಭಾವವನ್ನು ವಿದ್ವತ್ತನ್ನು ಪರಾಂಪರಿಸಿ, ಪರಮ ಸಂತೋಷಿಚಿತ್ತರಾಗಿ ಪಾದಪೂಜೆ ಮಾಡಿ ಸುವರ್ಣಮಯ ವಾದ ಪಂಚಕೇಶವ ರಥವನ್ನೂ ಅದಕ್ಕೆ ತಕ್ಕ ಕುದುರೆಗಳನ್ನೂ, ಬಂಗಾರದ ಕಲಶವ ಶಿವಕಾಪಿನ ಛತ್ರಿಯನ್ನು ಸಹ ದಯಪಾಲಿಸಿ, ಶ್ರೀಗಳು ಆ ಕಾಲದಲ್ಲಿ ಕಾಪನಹಳ್ಳಿ ಗವೀಮಠದಲ್ಲಿ ನೆಲೆಸಿರುವ ಶ್ರೀ ಸ್ವತಂತ್ರ ಸಿದ್ಧಲಿಂಗೇಶ್ವರನ ಸನ್ನಿಧಿಯಲ್ಲಿ ಪ್ರತಿವರ್ಷ ಮಾಡತಕ್ಕ ಗಣಾರಾಧನೆ ಸಹಾಯವಾಗಲು ಈ ಕೆಳಗಿನ ರಹದಾರಿಯನ್ನು ಖಾಸಾ ಸೈನ್ ಮೊಹರೆನಿಸಿ ಕೊಡೋಣವಾಯಿತು.

**ಖಾಸಾ ಮೊಹರು ಶ್ರೀಕೃಷ್ಣರಾಜ ವೊಡೆಯರವರು**

ಧಾತುನಾಮ ಸಂವತ್ಸರದ ಚೈತ್ರ ಬಹುಳ ತ್ರಯೋದಶಿ ಗುರುವಾರದಲ್ಲು ಶ್ರೀಮತು ಅರಮನೆ ಶೀಮೆಗಡಿಗಳ ಆಮಿಾನ ಕಿಲೇದಾರ್ ಸಾಯರ್ ಮೆಣಿಗಾರ್‍ರಿಗೆ ಬರಸಿ ಕಳುಹಿಸಿದ ನಿರೂಪು. ಅದಾಗಿ ಶ್ರೀ ಲೀಲಾಖ್ಯದ ಮುರುಘಾಮಠದ ಸ್ವಾಮಿಗಳ ಶಿಷ್ಯರಾದ ಚರಮೂರ್ತಿಗಳು ಚನ್ನಬಸವ ಮುರುಘಾ ಸ್ವಾಮಿಗಳು ಅತಿಗುಪ್ಪೆ ತಾಲ್ಲೂಕು ಇಪನಹಳ್ಳಿ ಗವೀಮಠದಲ್ಲಿ ಗಣಾರಾಧನೆ ಮಾಡತ್ಕಕ ಬಗ್ಗಯೆ ಸರ್ಜಾಪುರದ ತಾಲೂಕಿನಲ್ಲಿ ಜಮಾಯಿಸಿರುವ ಜವಳಿ ತರಲು ಸರಕಾರದ ಬಾಡಿಗೆ ಎತ್ತುಗಳ ಮೇಲೆ ಸದರಿ ಗವೀಮಠಕ್ಕೆ ಬರುವುದು. ನಿಮ್ಮ ನಿಮ್ಮ ತಾಲ್ಲೂಕು ಮಾರ್ಗವಾಗಿ ಬಂದಾಗ್ಯೆ ಸುಂಕಕ್ಕೆ ಅಟಕಾಯಿಸದೆ ಬಿಟ್ಟುಬಿಡುವುದು.

ತಾ॥ ೨೫ನೇ ಮಾಹೆ ಏಪ್ರೇಲ್ ಸನ್ ೧೮೧೬ನೇ ಇಸವಿ ಖತ್ ಪ್ರಸನಯ್ಯ ಮುನಷಿಹುಜುದ–

ಶ್ರೀಕೃಷ್ಣ ಎಂದು ಶ್ರೀಮನ್ಮಹಾರಾಜರ ಸೈನಿದೆ.

**ಖಾಸಾಮೊಹರು ಶ್ರೀಕೃಷ್ಣರಾಜ ಒಡೆಯರವರು**

ಧಾತು ನಾಮಸಂವತ್ಸರದ ಚೈತ್ರ ಬಹುಳ ತ್ರಯೋದಶಿ ಗುರುವಾರದಲ್ಲು ಅರಮನೆ ಶೀಮೆಗಡಿಗಳ ಅಮಿಾಲ್ ಕಿಲ್ಲೆದಾರ್‍ರಿಗೆ ಬರಸಿ ಕಳುಹಿಸಿದ ನಿರೂಪು. ಅದಾಗಿ ಶ್ರೀಲೀಲಾಖ್ಯ ಮುರುಘಮಠದ ಶಿಷ್ಯರಾದ ಚರಮೂರ್ತಿ ಮುರುಘ ಚನ್ನಬಸವ ಸ್ವಾಮಿಗಳು, ಅತುಗುಪ್ಪೆ ತಾಲ್ಲೂಕು ಕಾಪನಹಳ್ಳಿ ಗವಿಯಲ್ಲಿ ಗಣಾರಾಧನೆ ಮಾಡತಕ್ಕ ಬಗ್ಗೆ ಬೇಲೂರು, ಮಹಾರಾಜನ ದುರ್ಗ ನರಸಿಂಹಪುರ, ಬೆಟ್ಟದಪುರ ಸಾಲಿಗ್ರಾಮದಲ್ಲಿ ಸಹ ಜಮಾ ಮಾಡಿರುವ ಅಕ್ಕಿ ತುಪ್ಪ, ಮುಂತಾದ ಸಾಮಾನೂ ಯಾವತ್ತು ಸರಕಾರದಿಂದ ಬಾಡಿಗೆ ಎತ್ತುಗಳ ಮೇಲೆ ಸದರಿ ಗವೀ ಬಳಿಗೆ ರವಾನೆ ಆಗಿಬರುವುದು. ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬರುವಲ್ಲಿ ಸುಂಕದ ಇಲಾಖೆಯವರು ಸಹ ಸುಂಕಕ್ಕೆ ಅಟಕಾಯಿಸದೆ ಬಿಡುವುದು.

ತಾ॥ ೨೫ನೇ ಮಾಹೆ ಎಪ್ರೇಲ್ ಸನ್ ೧೮೧೬ನೆ ಇಸ್ವಿ ಖತ್
ಪ್ರಸನ್ನಯ್ಯ
ಮುನುಷಿಹುಜೂರ್
ಶ್ರೀಕೃಷ್ಣ ಎಂದ ಖಾಸಾ ಸೈನಿಧೆ

ಚಿತ್ರದುರ್ಗ ಮಠದ ಶ್ರೀ ಶ್ರೀ ಶ್ರೀ ಜಗದ್ಗುರು ಜಯದೇವ ಮಹಾಸ್ವಾಮಿಗಳು ಪ್ರಕಟ ಪಡಿಸಿದ ರಹದಾರಿ ಪತ್ರಗಳ ಪುಸ್ತಕದಲ್ಲಿ ಪ್ರಕಟವಾದ ನಿರೂಪ

ಶ್ರೀಮರ್ಜ ಮಹಾರಾಜರವರ

ಹುಜೂರು ಷಹ ಅಮಲುಯಾನೆ ಡ್ಯೆರಿಯಿಂದಾ

ಧಾತುಸಂವತ್ಸರ ಮಾಘಮಾಸಕ್ಕೆ

ಸಮ್ಮುಖದ ಈಟೀ ವೂಳಿಗದ ಗುರಿಕಾರ ಅವ್ವೇರಹಳ್ಳಿ ಮಾದ್ಯೆಯ್ಯಗೆ ಶು॥ ೧೪ ೧೪ ದಿವಸ ಅತ್ತಿಗುಪ್ಪೆ ಮಜಲಿಗೆ ಶ್ರೀಮರ್ಜ ನಿರಂಜನ ಗುರು ಮುರಗಾರಾಜೇಂದ್ರ ಸ್ವಾಮಿಗಳವರು ಬಂದು ಈ ತಾಲ್ಲೂಕು ಸ್ವತಂತ್ರ ಶಿದ್ಧಗವಿಯಲ್ಲಿ ಇದ್ದು ಬಹುಳ ೧ ದಿವಸ ಕನ್ನಂಬಾಡಿ ಮಾರ್ಗವಾಗಿ ಬರುವ ವಿವರ ಬರದ್ದು ಸರಿಯಷ್ಟೆ. ಕಡಿಮೆ ವಿವರ ಸಹಾ ಬರದ್ದು ತಿಳಿಯಿತು. ಇನ್ನು ೧–೨ ದಿವಸ ಅಲ್ಲೆ ಇದ್ದು ಬರುವ ಬಗ್ಯೆ ಅಪ್ಪಣೆ ಕೊಟ್ಟ ಬಳಿಕ ಬರುವಂತೆ ಮಾಡಬೇಕೆಂಬುದಾಗಿ ತಿಳಿಯಪಡಿಸಿ ಅಲ್ಲಿ ಇದ್ದು ಗಣಾರಾಧನೆ ಮುಂತಾಗಿ ಮಾಡಿದ್ದಕ್ಕು ನಡದ ಬಗ್ಯೆ ಸಹಾ ಅರಸಿ ಕಳುಹಿಸುವರು.

ಈ ಶು॥ ೧೫ ಇಷವಿ.

ಇಲ್ಲಿ ಮೊಹರಿಗೆ ಯಕ್‌ಸ್ಟ್ರಾಕ್ಟ್
೧೭-೫-೦೫ (Sd) M.N. KRISHNA RAO
For Secretary

ಈ ಮೇಲಿನ ಮೂರು ನಿರೂಪದಿಂದ ಕಾಪನಹಳ್ಳಿ ಗವಿಮಠದಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರ ಆರಾಧನೆ ನಡೆಯುತ್ತಾ ಬಂದಿದ್ದು ಅದು ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ವ್ಯವಸ್ಥಿತವಾಗಿ ನಡೆಯುತ್ತಾ ಇತ್ತು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ದ್ವಿತೀಯ ಅಲ್ಲಮಪ್ರಭು ಎಂದು ಪ್ರಸಿದ್ಧರಾದ ತೋಂಟದ ಸಿದ್ಧಲಿಂಗೇಶ್ವರ ಶಿಷ್ಯರತ್ನ ಸ್ವತಂತ್ರ ಸಿದ್ಧಲಿಂಗೇಶ್ವರರು ರಚಿಸಿದ ವಚನಗಳನ್ನು ಮುಕ್ತ್ಯಾಂಗನ ಕಂಠಮಾಲೆ, ಜಂಗಮ ರಗಳೆಯನ್ನು ಗುರು-ವಿರಕ್ತರು ಪ್ರಪಂಚದ ಎಲ್ಲಾ ಸಂನ್ಯಾಸಿಗಳ ಗೃಹಸ್ಥರು ಸದಾ ಅಧ್ಯಯನ ಮಾಡುವಂತಹವದು ನಿತ್ಯ ನೂತನವಾದದ್ದು.


ಸ್ವತಂತ್ರ ಸಿದ್ಧಲಿಂಗೇಶ್ವರ ಉತ್ಸವ ಮೂರ್ತಿ



## ಆಧಾರ ಗ್ರಂಥಗಳು


೧. ಆರ್. ನರಸಿಂಹಾಚಾರ್ಯ ವಿರಚಿತ 'ಕರ್ಣಾಟಕ ಕವಿಚರಿತೆ' ದ್ವಿತೀಯ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮, ೧೯೭೩.

೨. ಪ್ರೊ. ಶಿ.ಶಿ. ಬಸವನಾಳ ಮತ್ತು ಇತರರು 'ಚೆನ್ನಬಸವ ಪುರಾಣ' ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.

೩. 'ಸಿದ್ಧಲಿಂಗ ಶಿವಯೋಗಿ' ಪ್ರಧಾನ ಸಂಪಾದಕರು ಹಾ.ಮ. ನಾಯಕ. ಪ್ರೊ. ಸಿ. ಮಹಾದೇವಪ್ಪನವರ ಲೇಖನ (ಪುಟ ೮೭-೧೨೫), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೪.

೪. ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಗಳು, ಸಂಪಾದಕರು ಡಾ. ಎಚ್.ಪಿ. ಮಲ್ಲೆದೇವರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ ೧೯೭೫.

೫. ಸಮಗ್ರ ವಚನ ಸಂಪುಟ, ಸಂಪುಟ ೧೧, ಸಂಪಾದಕರು ಎಸ್. ಶಿವಣ್ಣ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೧.

೬. ಶ್ರೀಗಿರಿ ಪುರ ಮಠಾಧ್ಯಕ್ಷ ಶ್ರೀ ಚಿಕ್ಕವೀರದೇಶಿಕೇಂದ್ರ ಸಚಿತ್ರ ಚರಿತ್ರೆ, ಲೇಖಕ ಮಂ.ಪಿ. ಶಿವರುದ್ರಶಾಸ್ತ್ರಿ ಕೃತ, ಶ್ರೀ ಮತ್ಕವ್ಯಾಕಾಪರಮೇಶ್ವರಿ ಪ್ರೆಸ್, ೧೯೩೩.




# ತೋಕಲಘಟ್ಟ ಗ್ರಾಮದ ಅಪ್ರಕಟಿತ ವೀರಗಲ್ಲು ಶಾಸನ

ವೇಮಗಲ್ ಸು. ಮೂರ್ತಿ*

**ತೋ**ಕಲಘಟ್ಟ ಗ್ರಾಮವು ಕೋಲಾರ ತಾಲ್ಲೂಕು ವೇಮಗಲ್ ಹೋಬಳಿಯಲ್ಲಿ ಬರುವ ಒಂದು ಸಣ್ಣ ಗ್ರಾಮ. ಇಲ್ಲಿನ ನನ್ನ ಕ್ಷೇತ್ರ ಕಾರ್ಯದಲ್ಲಿ ನಾರಾಯಣಸ್ವಾಮಿ ಎಂಬುವರ ಹೊಲದಲ್ಲಿ ಸಾಲಾಗಿ ೩ ವೀರಗಲ್ಲುಗಳನ್ನು ನೆಟ್ಟಿರುವುದನ್ನು ಗಮನಿಸಿದೆ. ಇವುಗಳಲ್ಲಿ ೧. ಮೊದಲನೆಯ ವೀರಗಲ್ಲು ಎತ್ತರ ಸು. ೪/೨", ಅಗಲ ೨/೧೦", ದಪ್ಪ ೩" ಇದೆ ಈ ವೀರಗಲ್ಲಿನಲ್ಲಿ ಇಬ್ಬರು ವೀರರಿದ್ದು ಒಬ್ಬಾತ ಕುಳಿತು ಕೈ ಜೋಡಿಸಿರುವ ಭಂಗಿಯಲ್ಲೂ ಮತ್ತೊಬ್ಬ ವೀರ ಎಡಗೈಯನ್ನು ತನ್ನ ಸೊಂಟದ ಮೇಲೆ ಇಟ್ಟುಕೊಂಡಿದ್ದು ಹಾಗೂ ಬಲಗೈಯಲ್ಲಿ ಆಯುಧ ಹಿಡಿದಿರುವಂತೆ ಕಂಡುಬರುತ್ತದೆ.

೨. ಎರಡನೆಯ ವೀರಗಲ್ಲು ಮೊದಲನೆಯ ವೀರಗಲ್ಲಿನಿಂದ ಸು. ೧೦" ದೂರದಲ್ಲಿದೆ. ಇದರ ಎತ್ತ ಸು. ೪-೬", ಅಗಲ ಸು. ೩", ದಪ್ಪ ಸು. ೩" ಇದೆ. ಈ ವೀರಗಲ್ಲಿನಲ್ಲಿ ಲಿಪಿ ಇದೆ (ಶಾಸನ) ಈ ವೀರಗಲ್ಲಿನ ಪ್ರಾರಂಭದಲ್ಲಿ ಎರಡು ಸಾಲಿನ ಲಿಪಿ ಇದ್ದು "ಸ್ವಸ್ತಿಶ್ರೀ" ಎಂದು ಆರಂಭವಾಗಿ ನಂತರ ೩ ವ್ಯಕ್ತಿಗಳನ್ನು ಬಿಡಿಸಲಾಗಿದೆ. ಇವರಲ್ಲಿ "ಕೈಜೋಡಿಸಿ ಮಧ್ಯೆ ಕುಳಿತಿರುವ ವ್ಯಕ್ತಿಯ ಚಿತ್ರ ಬಿಡಿಸಿದ್ದು ಇವರ ಎಡ, ಬಲ ಇಬ್ಬರು ಚಾಮರ ಬೀಸುತ್ತಿರುವಂತೆ ಇರುವ ಹೆಣ್ಣಿನ ಚಿತ್ರವನ್ನು ಬಿಡಿಸಲಾಗಿದೆ. ಈ ಶಿಲ್ಪಗಳ ನಂತರ ಶಾಸನದ ಪಾಠ, ಶಾಸನದ ಬಲಭಾಗಕ್ಕೆ ಮುಂದುವರೆಯುತ್ತದೆ. ಹಾಗೂ ಎಡಗಡೆಗೆ ಬಲಕೈಯಲ್ಲಿ ಆಯುಧವನ್ನು ಹಿಡಿದು, ಎಡಗೈಯನ್ನು ಮೇಲಕ್ಕೆ ಎತ್ತಿ ನಿಂತಿರುವ ಭಂಗಿಯಲ್ಲಿ ವೀರನನ್ನು ಬಿಡಿಸಲಾಗಿದೆ. ಹಾಗೆಯೇ ಈ ವೀರನ ಎಡಕ್ಕೆ ಕೈಜೋಡಿಸಿ ಕುಳಿತಿರುವ ಭಂಗಿಯಲ್ಲಿರುವ ವೀರನ ಚಿತ್ರವನ್ನು ಬಿಡಿಸಿದ್ದಾರೆ. ಇಬ್ಬರು ವೀರರು ಮುಡಿಯನ್ನು ಕಟ್ಟಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ವೀರಗಲ್ಲಿನಲ್ಲಿ ೧೩ ಸಾಲಿನ ಶಾಸನವಿದ್ದು ಮೇಲಿನ ಎರಡು ಪಂಕ್ತಿಯನ್ನು ಬಿಟ್ಟು ಮಿಕ್ಕ ಸಾಲುಗಳಲ್ಲಿ ಕೆಲವೊಮ್ಮೆ ಒಂದೊಂದು ಪದಕ್ಕೆ ಒಂದೊಂದು ಪಂಕ್ತಿಯಾಗಿದೆ.

೩. ಮೂರನೆಯ ವೀರಗಲ್ಲು ಶಾಸನವಿರುವ ವೀರಗಲ್ಲಿನ ಪಕ್ಕದಲ್ಲೇ ಇದೆ. ಇದರ ಎತ್ತರ ಸು. ೪', ಅಗಲ ಸು. ೩' ದಪ್ಪ ೪' ಈ ವೀರಗಲ್ಲಿನಲ್ಲಿ ಇಬ್ಬರು ವೀರರನ್ನು ಬಿಡಿಸಿದ್ದು ವೀರಗಲ್ಲಿನ ಎಡಭಾಗಕ್ಕೆ ಚಿಕ್ಕದಾಗಿರುವ ವೀರನನ್ನು ಈತನ ಎಡಭಾಗಕ್ಕೆ ಎತ್ತರವಾಗಿರುವ ವೀರನನ್ನು ಬಿಡಿಸಲಾಗಿದೆ. ಇಬ್ಬರು ವೀರರು ಮುಡಿ ಕಟ್ಟಿದ್ದಾರೆ ಹಾಗೆಯೇ ಆಯುಧವನ್ನು ಹಿಡಿದು ಹೋರಾಟ ನಡೆಸುತ್ತಿರುವಂತೆ ತಿಳಿದುಬರುತ್ತದೆ.

ಈ ಮೂರು ವೀರಗಲ್ಲುಗಳು ಬಹುಶಃ ಒಂದೇ ಕಾಲಕ್ಕೆ ಸೇರಿದ್ದು, ಒಂದೇ ರೀತಿಯ ಶಿಲ್ಪಕಲೆಯನ್ನು ಹೊಂದಿದೆ. ಕೇವಲ ಒಂದು ವೀರಗಲ್ಲಿನಲ್ಲಿ ಮಾತ್ರ ಶಾಸನವಿದ್ದು ಇನ್ನೆರಡು ವೀರಗಲ್ಲುಗಳಲ್ಲಿ ಶಾಸನವು ಇಲ್ಲದಾಗ್ಯೂ ಶಿಲ್ಪಕಲೆಯ ಲಕ್ಷಣದಿಂದ ಒಂದೇ ಕಾಲಘಟ್ಟದೆಂದು ನಿರ್ಧರಿಸ ಬಹುದಾಗಿದೆ.

ಕೋಲಾರ ಜಿಲ್ಲೆಯಲ್ಲಿ ಇದುವರೆವಿಗೂ ಅನೇಕ ನೊಳಂಬರ ಶಾಸನಗಳು ಸಿಕ್ಕಿದ್ದು, ಈವರೆವಿಗೂ ಅಪ್ರಕಟಿತವಾಗಿದ್ದ ಶಾಸನವೊಂದು ಕೋಲಾರ ತಾಲ್ಲೂಕು ವೇಮಗಲ್ ಹೋಬಳಿಗೆ ಸೇರಿರುವ ತೋಕಲಘಟ್ಟ ಎಂಬ ಗ್ರಾಮದಲ್ಲಿ ನಾನು ಕೈಗೊಂಡ [ಕ್ಷೇತ್ರ] ಸರ್ವೇಕ್ಷಣೆಯಲ್ಲಿ ದೊರೆತಿದೆ.

ಈ ಶಾಸನವು ವೀರಗಲ್ಲು ಶಾಸನವಾಗಿದ್ದು ೧೩ ಸಾಲುಗಳನ್ನು ಒಳಗೊಂಡಿದೆ.

ಈ ಶಾಸನವು ನೊಳಂಬದೊರೆ ಇರಿವ ನೊಳಂಬ ಮೊದಲನೆಯ ದಿಲೀಪನ ಕಾಲಕ್ಕೆ ಸೇರಿದ್ದಾಗಿದೆ. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲವಾದರೂ "ಸ್ವಸ್ತಿಶ್ರೀ ದಿಲೀಪಯ್ಯ ಪೃಥ್ವಿರಾಜ್ಯಂಗೆಯುತ್ತಿರೆ" ಎಂಬ ಉಲ್ಲೇಖ ಇರುವುದರಿಂದ ಈತನ ಕಾಲವನ್ನು ವಿದ್ವಾಂಸರು ತಿಳಿಸಿರುವಂತೆ ಕ್ರಿ.ಶ. ೯೪೧-೯೬೮. ಈ ಕಾಲಕ್ಕೆ ಸೇರಿದ ಶಾಸನವಾಗಿದೆ.

*

**ಶಾಸನದ ಪಾಠ**

೧. ಸ್ವಸ್ತಿಶ್ರೀ . . . ದಿಲೀಪಯ್ಯ ಪೃ(ಥ್ವಿರಾ)
೨. ಜ್ಯಂಗಯ್ಯುತಿರೆ ಲು
೩. ಊರವರಳದ
೪. ಗರವರದ ರವಿ
೫. . ಹಳಿ ಅ
೬. ಟ್ಟಿ ಸತ್ತಲ್ಲಿ
೭ ಅದರಪ್ಪ
೮. ಬಸವ
೯. ಸಾಲಗಿ
೧೦. ಡಿಸಿದ
೧೧. ಅವನ್ಗೆ ಅಯ್ಗನ್ಡು(ಗ)
೧೨. ಕಳಿನಿ ಪೊನ್ದಿ ಕೊ
೧೩. ಟ್ಟರ್ ಮಣ್ಗಳ

ಈ ಶಾಸನದ ಪಾಠವನ್ನು ಅರ್ಥೈಸುವುದಾದರೆ: ಈ ಶಾಸನವು ಊರಳಿವಿನ ಹೋರಾಟದಲ್ಲಿ ಮಡಿದ ಬಹುಶಃ ಗರವರದರವಿ ಎಂಬ ವ್ಯಕ್ತಿಗೆ ಸಂಬಂಧಿಸಿದ್ದಾಗಿದೆ. ವೀರನು ಸತ್ತನಂತರ ಅವರಪ್ಪ ಬಸವನಿಗೆ ೫ ಖಂಡಗ ಗದ್ದೆಯನ್ನು ದಾನ ಮಾಡಿದ ಸಂಗತಿಯನ್ನು ಈ ಶಾಸನವು ತಿಳಿಸುತ್ತದೆ.

ಇದೇ ಗ್ರಾಮದ ನಾರಾಯಣಸ್ವಾಮಿ ಎಂಬುವರ ಹೊಲದಲ್ಲಿ ತ್ರಿಶೂಲ ಆಕಾರವನ್ನು ಹೋಲುವ ಒಂದು ರೇಖಾಚಿತ್ರವನ್ನು ಒಂದು ಸಣ್ಣ ಕಲ್ಲಿನ ಮೇಲೆ ಬಿಡಿಸಿದ್ದು ಇದು ಒಂದು ಆ ಜಮೀನಿನ 'ಎಲ್ಲೆ' ಕಲ್ಲೆಂದು ತಿಳಿಯಬಹುದಾಗಿದೆ.

ಕೋಲಾರ ಜಿಲ್ಲೆಯ ಎಲ್ಲಾ ಗ್ರಾಮಗಳಲ್ಲಿ ಇರುವಂತೆ ಈ ಗ್ರಾಮದಲ್ಲಿಯೂ ಸಹ ಗೋವುಗಳಿಗೆ ಒಳ್ಳೆಯದಾಗಲೆಂದು ಕಾಟಪ್ಪರಾಯನ ಗುಡಿ ಇದೆ. ಇಲ್ಲಿ ಯಾವುದೇ ತೆರನಾದ ಮೂರ್ತಿ ಇಲ್ಲ. ೩ ಕಲ್ಲುಗಳು ಇಟ್ಟು ಸಂಕ್ರಾಂತಿ ಹಬ್ಬದಲ್ಲಿ ಇವಕ್ಕೆ ಹಾಗು ಇತರೆ ಹಬ್ಬಗಳಲ್ಲಿ ಪೂಜೆ ಸಲ್ಲಿಸುತ್ತಾರೆ.

ಈ ಗ್ರಾಮದ ಮನೆಯೊಬ್ಬರ ಅಂಗಳದಲ್ಲಿ ವಿಜಯನಗರದ ಕಾಲದ ಕುದುರೆ ಸವಾರನ ವೀರಗಲ್ಲಿದ್ದು ಇದಕ್ಕೆ ಒಂದು ಅಂಕಣ ಮನೆಯನ್ನು ಕಟ್ಟಿದಾರೆ. ಈ ವೀರಗಲ್ಲಿನಲ್ಲಿ ಯಾವುದೇ ತೆರನಾದ ಶಾಸನವಿಲ್ಲ.



೨೭

# ತಾಗರ್ತಿಯ ಶಾಸನ ಹಲ್ಮಿಡಿ ಶಾಸನಕ್ಕಿಂತ ಹಳೆಯದೆ?

**ಡಾ. ಬಿ. ರಾಜಶೇಖರಪ್ಪ***

೧೯೩೬ರಲ್ಲಿ ಡಾ. ಎಂ.ಎಚ್. ಕೃಷ್ಣ ಅವರು ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ಹಲ್ಮಿಡಿ ಎನ್ನುವ ಗ್ರಾಮದಲ್ಲಿ ದೊರೆತ ಶಾಸನವನ್ನು ಅದೇ ವರ್ಷದ 'ಮೈಸೂರು ಪುರಾತತ್ವ ವಾರ್ಷಿಕ ವರದಿ'ಯಲ್ಲಿ ಪ್ರಕಟಿಸಿರುತ್ತಾರೆ. ಅದರ ಕಾಲ ಕ್ರಿ.ಶ. ಸು. ೪೫೦ ಎಂದೂ ಅದು ಈವರೆಗೆ ದೊರೆತಿರುವ ಕನ್ನಡ ಶಾಸನಗಳಲ್ಲೆ ಅತ್ಯಂತ ಪ್ರಾಚೀನವಾದುದೆಂದೂ ಈಗ್ಗೆ ಅನೇಕ ವರ್ಷಗಳಿಂದ ಒಪ್ಪಿಕೊಂಡು ಬಂದಿರುವ ಸಂಗತಿ ಯಾಗಿದೆ. ಒಬ್ಬಿಬ್ಬರು ವಿದ್ವಾಂಸರು ಅದರ ಕಾಲ ಕ್ರಿ.ಶ. ೪೫೦ ಇರದೆ, ಅದಕ್ಕಿಂತ ಈಚಿನ ಕಾಲವೆಂದು ಸಂದೇಹಾ ಭಿಪ್ರಾಯ ವ್ಯಕ್ತಪಡಿಸಿರುವರಾದರೂ ಬಹುತೇಕ ವಿದ್ವಾಂಸರು ಅದರ ಕಾಲ ಕ್ರಿ.ಶ. ೪೫೦ ಎಂದೇ ಒಪ್ಪಿಕೊಂಡು ಬಂದಿರು ತ್ತಾರೆ. ಈ ಶಾಸನ ಕರ್ನಾಟಕ ಸರ್ಕಾರದ ಬೆಂಗಳೂರಿನ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವುದು ಎಲ್ಲರಿಗೂ ತಿಳಿದ ಸಂಗತಿ.

## ಡಾ. ಶೆಟ್ಟರ್ ಅವರ ಹೇಳಿಕೆ

ಇತ್ತೀಚೆಗೆ ೨೦೧೩ರ ಫೆಬ್ರವರಿ ತಿಂಗಳಲ್ಲಿ, ಇತಿಹಾಸ ವಿದ್ವಾಂಸರಾದ ಡಾ. ಎಸ್.ಶೆಟ್ಟರ್ ಅವರು, **"ಹಲ್ಮಿಡಿ ಶಾಸನ ಕನ್ನಡದ ಮೊದಲ ಶಾಸನವಲ್ಲ; ಗಂಗರ ಕಾಲದ ತಗರ್ತಿ ಅಗ್ರಹಾರದ (ಚಿತ್ರದುರ್ಗ ಜಿಲ್ಲೆ) ಶಾಸನ ಕನ್ನಡದ ಮೊದಲ ಶಾಸನವಾಗಿದೆ"..."ಈಬಗ್ಗೆ ಹೆಚ್ಚಿನ ಸಂಶೋಧನೆ, ಪುನರ್‌ಪರಿಶೀಲನೆ ಆಗಬೇಕಿದೆ"** ಎಂದು ಕಾರ್ಯಕ್ರಮ ವೊಂದರಲ್ಲಿ ಹೇಳಿರುವುದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಚಿತ್ರದುರ್ಗದ ಪ್ರೌಢಶಾಲೆಯೊಂದರಲ್ಲಿ ಓದುತ್ತಿದ್ದ, ನಮ್ಮ ಮನೆಯ ಹತ್ತಿರವೇ ಇರುವ, ನನ್ನ ಪರಿಚಯದ ಒಬ್ಬ ವಿದ್ಯಾರ್ಥಿನಿ "ಹಲ್ಮಿಡಿ ಶಾಸನ ಕನ್ನಡದ ಮೊದಲ ಶಾಸನ ಅಲ್ಲವಂತೆ. ಯಾವುದೋ ತಗರ್ತಿ ಎನ್ನುವ ಊರಿನ ಶಾಸನ ಕನ್ನಡದ ಮೊದಲ ಶಾಸನವಂತೆ. ಆಊರು ಚಿತ್ರದುರ್ಗ ಜಿಲ್ಲೆಯದಂತೆ. ಕ್ಲಾಸಲ್ಲಿ ನಮ್ಮ ಟೀಚರ್ ಹೇಳಿದರು. ಹೌದಾ ಅಂಕಲ್?" ಎಂದು ಕೇಳಿದಾಗ, ಆ ವರದಿಯ ಪ್ರಭಾವದಿಂದ ಆ ಟೀಚರ್ ಹಾಗೆ ಹೇಳಿದ್ದರೆಂದು ನನಗೆ ತಿಳಿಯಿತು. ಅದು ಸರಿಯಲ್ಲ ಎಂದು ಅದರ ಬಗ್ಗೆ ಹೇಳಬೇಕಾದ ವಿವರವನ್ನು ಅವಳಿಗೆ ಹೇಳಿದೆ. ಹೀಗೇ ಇನ್ನೂ ಅನೇಕರು ತಿಳಿದುಕೊಂಡಿರ ಬಹುದೆಂದು ಈ ಹೇಳಿಕೆ ಕುರಿತಂತೆ ಪತ್ರಿಕೆಗಳಿಗೆ ಒಂದು ಪ್ರತಿಕ್ರಿಯೆ ಅಥವಾ ವಿವರಣೆ ಬರೆಯುವುದು ಅವಶ್ಯಕವೆಂದು ಅನ್ನಿಸಿತು. ಆಗ ನಾನು ಬರೆದ ಪ್ರತಿಕ್ರಿಯೆ ದಿ. ೦೫-೦೩-೨೦೧೩ರ 'ವಿಜಯವಾಣಿ' ಪತ್ರಿಕೆಯಲ್ಲಿ **'ತಾಗರ್ತಿ ಶಾಸನ ಹಲ್ಮಿಡಿಯದಕ್ಕಿಂತ ಪ್ರಾಚೀನವಲ್ಲ'** ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಯಿತು. ಅದೇ ಪ್ರತಿಕ್ರಿಯೆ ದಿ. ೧೪-೦೩-೨೦೧೬ರ 'ವಿಜಯಕರ್ನಾಟಕ' ಪತ್ರಿಕೆಯಲ್ಲಿ **'ತಾಗರ್ತಿ ಶಾಸನ ನೈಜ ಶಾಸನವಲ್ಲ'** ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಯಿತು. ಆ ಶಾಸನ ಕುರಿತಂತೆ ಬಂದ ನನ್ನ ಪ್ರತಿಕ್ರಿಯೆಗೆ ಡಾ. ಶೆಟ್ಟರ್ ಅವರಾಗಲಿ ಬೇರೆಯವರಾಗಲಿ ಏನೂ ಪ್ರತಿಕ್ರಿಯೆ ವ್ಯಕ್ತಪಡಿಸ ಲಿಲ್ಲ. ನನ್ನ ಪ್ರತಿಕ್ರಿಯೆಗಳ ಜೆರಾಕ್ಸ್ ಪ್ರತಿಗಳನ್ನು ಡಾ. ಶೆಟ್ಟರ್ ಅವರಿಗೆ ಕಳಿಸಿಕೊಟ್ಟೆ. ಅದಕ್ಕೂ ಅವರಿಂದ ಏನೂ ಉತ್ತರ ಬರಲಿಲ್ಲ.

ಅದೇ ೨೦೧೨ರ ಮೇ-ಜೂನ್ ತಿಂಗಳ 'ಸಂಕ್ರಮಣ' ಪತ್ರಿಕೆಯಲ್ಲಿ, ಅದೇ ಡಾ. ಶೆಟ್ಟರ್ ಅವರ 'ಕದಂಬರ ಕಾಲದ ಕನ್ನಡ ಲಿಪಿ, ಲಿಪಿಕಾರರು ಮತ್ತು ಲಿಪಿವ್ಯವಹಾರ' ಎಂಬ ಹೆಸರಿನ ೧೪ ಪುಟಗಳ ಸುದೀರ್ಘ ಲೇಖನವೊಂದು ಪ್ರಕಟವಾಗಿದೆ. (ಅದು ಪ್ರಕಟವಾಗಲಿರುವ 'ಕನ್ನಡ ಲಿಪಿ, ಲಿಪಿಕಾರ ಮತ್ತು ಲಿಪಿವ್ಯವಸಾಯ' ಎಂಬ ಗ್ರಂಥದ ಒಂದು ಅಧ್ಯಾಯ-ಎಂದು ಆ ಲೇಖನದ ಮೊದಲಪುಟದ ಅಡಿಯಲ್ಲಿ ಸೂಚಿಸಲಾಗಿತ್ತು). ಆ ಲೇಖನದಲ್ಲಿ ಕೂಡಾ ಅನೇಕ ಪ್ರಶ್ನಾರ್ಹ ಅಂಶಗಳಿದ್ದರೂ ತಾಗರ್ತಿ ಶಾಸನಕ್ಕೆ ಸಂಬಂಧಪಟ್ಟ ಅಂಶವನ್ನು ಮಾತ್ರ ಇಲ್ಲಿ ಪರಿಗಣನೆಗೆ ತೆಗೆದುಕೊಂಡು, ವಿವೇಚಿಸಲಾಗಿದೆ. ಆ ಶಾಸನದ ಬಗ್ಗೆ ಅವರು ಹೇಳಿರುವ ಮಾತು ಹೀಗಿದೆ: **"ಹಲ್ಮಿಡಿ ಶಾಸನ ಕನ್ನಡದ ಮೊದಲ ಶಾಸನವಲ್ಲ ... ಗಂಗರ ಕಾಲದ ತಗರ್ತಿ ಅಗ್ರಹಾರ (ಚಿತ್ರದುರ್ಗ ಜಿಲ್ಲೆ) ಶಾಸನ ಕನ್ನಡದ ಮೊದಲ ಶಾಸನವಾಗಿದೆ ... ಹಲ್ಮಿಡಿಯಲ್ಲಿ ಕನ್ನಡ ಪ್ರವೇಶಿಸುವುದಕ್ಕಿಂತ ಮುಂಚೆಯೇ ತಗರ್ತಿ (ಕ್ರಿ.ಶ. ೩೪೬) ಯಲ್ಲಿ ಕನ್ನಡದ ಶಾಸನವನ್ನು ಬರೆಸಲಾಗಿತ್ತು ... ಎಪಿಗ್ರಾಫಿಯ**

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ), ೨ನೇ ಕ್ರಾಸ್ (ಪಶ್ಚಿಮ), ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ-೫೭೭೫೦೧.

**ಕರ್ನಾಟಿಕದ ಸಂಪಾದಕರಾದ ಬಿ.ಎಲ್. ರೈಸ್ ಅವರ ಅಭಿಮತ ಇನ್ನೂ ಇತ್ಯರ್ಥವಾಗದೆ ಶತಮಾನಕ್ಕೂ ಹಿಂದೆ ಎಲ್ಲಿತ್ತೋ ಅಲ್ಲಿಯೇ ನಿಂತಿದೆ".**

ಮೇಲಿನ ಮತ್ತು ಇಲ್ಲಿಯ ಎರಡೂ ಹೇಳಿಕೆಗಳ ಸತ್ಯಾಸತ್ಯತೆ ಏನು ಎಂಬುದರ ವಿಚಾರವಾಗಿ ವಿಶದವಾದ ಪರಿಶೀಲನೆ ಅಗತ್ಯವೆನಿಸಿತು. ಇಲ್ಲಿ ಆಶ್ಚರ್ಯದ ಸಂಗತಿ ಏನೆಂದರೆ, ಅವರು ಒಂದು ಸಾರಿ ಹೇಳಿದ್ದನ್ನೇ ಪುನರುಚ್ಚರಿಸುತ್ತಾ ಹೋಗಿರುವುದು ಮತ್ತು ಆ ಶಾಸನ ನೈಜ ಶಾಸನವಲ್ಲ ಎಂದು ನಾನು ಪುರಾವೆ ಸಮೇತ ೨೦೧೩ರಲ್ಲಿ ಪ್ರತಿಕ್ರಿಯಿಸಿದ್ದನ್ನು ಗಮನಕ್ಕೇ ತೆಗೆದುಕೊಳ್ಳದೆ, ತಾವು ಹೇಳಿದ್ದು ಸರಿಯೇ ಇದೆ ಎಂಬಂತೆ ತಿಳಿದಿರುವುದು. ಅವರ ಹೇಳಿಕೆಯ ಬಗ್ಗೆ ನಂಬಿಕೆ ಇರುವ ಅನೇಕರು ಕನ್ನಡ ಶಾಸನಗಳ ಬಗ್ಗೆ, ಭಾಷೆಯ ಬಗ್ಗೆ, ತಪ್ಪು ಗ್ರಹಿಕೆಯನ್ನು ತಾಳುವರಲ್ಲದೆ, ಗೊತ್ತಿಲ್ಲದವರಲ್ಲಿ ಅದನ್ನು ಪ್ರಚಾರಿಸುವ ಸಂಭವ ಇದೆ ಎನ್ನಿಸಿತು. ಅದಕ್ಕಾಗಿ ನನ್ನ ಪ್ರತಿಕ್ರಿಯೆಯನ್ನು ಇನ್ನಷ್ಟು ವಿಶದವಾಗಿ ಹೇಳಬೇಕೆನಿಸಿತು. ಅದರ ಫಲವೇ ಈ ಸಂಪ್ರಬಂಧ.

**ಶಾಸನದ ಸ್ಥಳ ತಗರ್ತಿಯೆ?**

ಇಲ್ಲಿ ಮೊದಲು ಹೇಳಬೇಕಾದ ಅಂಶ ಎಂದರೆ, ಡಾ. ಶೆಟ್ಟರ್ ಅವರು "ತಗರ್ತಿ ಅಗ್ರಹಾರ (ಚಿತ್ರದುರ್ಗ ಜಿಲ್ಲೆ)" ಎಂದಿರುವ ಯಾವ ಊರೂ ಚಿತ್ರದುರ್ಗ ಜಿಲ್ಲೆಯಲ್ಲಿ ಇಲ್ಲ. ಶಾಸನತಜ್ಞ ಬಿ.ಎಲ್. ರೈಸ್ ಅವರು ೧೮೭೮ರಲ್ಲಿ, 'ಇಂಡಿಯನ್ ಆಂಟಿಕ್ವೆರಿ' (ಇಂ.ಆಂ.)ಯ ೭ನೇ ಸಂಪುಟದಲ್ಲಿ, ಹರಿಹರದ ಇನಾಂ ತೀರುವಳಿಯ ಅಧೀಕ್ಷಕರಾಗಿದ್ದ ಮೇಜರ್ ಕೋಲ್ ಕಡೆಯಿಂದ ಬಂದ ಈ ತಾಮ್ರಶಾಸನವನ್ನು 'ಹರಿಹರ ಗಂಗ ಕಾಪರ್‌ಪ್ಲೇಟ್ ಗ್ರಾಂಟ್' ಎಂದು ಕರೆದು ಪ್ರಕಟಿಸಿದ್ದರು. ಹೀಗೆ ಹರಿಹರದ್ದೆಂದು ಮೊದಲಿಗೆ ಭಾವಿಸಿದ್ದ ಈ ಶಾಸನ ಅಲ್ಲಿಯದಲ್ಲವೆಂದು ತಿಳಿದ ಮೇಲೆ, ೧೯೦೨ರಲ್ಲಿ, ಅದನ್ನು ಶಿವಮೊಗ್ಗ ಜಿಲ್ಲೆಯ 'ಎಪಿಗ್ರಾಫಿಯ ಕರ್ನಾಟಿಕ' (ಎ.ಕ.)ದ ೭ನೆಯ ಸಂಪುಟದಲ್ಲಿ ಶಿಕಾರಿಪುರ ತಾಲೂಕಿನ ೫೨ನೆಯ ಶಾಸನವಾಗಿ 'ತಾಗರ್ತಿ ಅಗ್ರಹಾರದಲ್ಲಿರುವ ತಾಮ್ರಶಾಸನ' ಎಂಬ ಹೆಸರಲ್ಲಿ ಪ್ರಕಟಿಸಿದ್ದಾರೆ. ಆ ಸಂಪುಟದ ಪುಟ ೧೨ರ ಅಡಿಟಿಪ್ಪಣಿಯಲ್ಲಿ, ಅದರ ಹಿನ್ನೆಲೆಯನ್ನು ವಿವರಿಸಿದ್ದಾರೆ. ಆ ವಿವರವನ್ನೆಲ್ಲ ಸರಿಯಾಗಿ ಗಮನಿಸದೆ, ಆ ಶಾಸನ ತಗರ್ತಿಯದು ಎನ್ನುವುದೂ ಅದು ಚಿತ್ರದುರ್ಗ ಜಿಲ್ಲೆಯದು ಎಂದು ಹೇಳುವುದೂ ಎಷ್ಟು ಅಸಂಗತ ಎಂದು ವಿವರಿಸಬೇಕಾಗಿಲ್ಲ.

ಇನ್ನೂ ಒಂದು ಮಾತನ್ನು ಇಲ್ಲಿ ಸೇರಿಸಬೇಕು : ರೈಸ್ ಅವರು ಇದು ತಾಗರ್ತಿಯ ಶಾಸನವೆಂಬಂತೆ ಪ್ರಕಟಿಸಿರುವರಾದರೂ ಇದರ ಪಾಠದೊಳಗೆ ಇದು ಆ ಊರಿಗೆ ಅಥವಾ ಆ ಪ್ರದೇಶಕ್ಕೆ ಸೇರಿದ್ದೆಂಬ ಬಗ್ಗೆ ಯಾವ ಸೂಚನೆಯೂ ಇಲ್ಲ. ಆದರೆ, ರೈಸ್ ಅವರು ಹಾಗೆ ಭಾವಿಸಲು ಇದು ಮೂಲತಃ ಆ ಊರಿನ ಕಡೆಯಿಂದ ಬಂದದ್ದು ಅಥವಾ ಅಲ್ಲಿ ಸಿಕ್ಕದ್ದು ಎಂದಿರಬಹುದೇನೋ? ಹಾಗೆ ನೋಡಿದರೆ ಇದನ್ನು ನೀಡಲಾದದ್ದು ಕಾರೆನಾಡಿನ ದೇವನೂರು ಎಂಬಲ್ಲಿಯ ಒಬ್ಬ ವ್ಯಕ್ತಿಗೆ. ಆ ಕಾರೆನಾಡು ತಲವನಪುರದ ಅಥವಾ ತಲಕಾಡಿನ ಪ್ರದೇಶಕ್ಕೆ ಸೇರಿತ್ತಾದ್ದರಿಂದ ಇದು ಮೂಲತಃ ಆ ಪ್ರದೇಶದ್ದು ಎಂದು ಹೇಳಬೇಕಾಗುತ್ತದೆ.

ರೈಸ್ ಅವರು ಕೊಟ್ಟಿರುವ ವಿವರದ ಪ್ರಕಾರ, ತುಂಬ ಸುಸ್ಥಿತಿಯಲ್ಲಿದ್ದ ಈ ಶಾಸನ ಆರೂವರೆ ಅಂಗುಲ ಉದ್ದ ಮತ್ತು ಎರಡೂಮುಕ್ಕಾಲು ಅಂಗುಲ ಅಗಲ ಇರುವ ಮೂರು ತಾಮ್ರ ಫಲಕಗಳ ಮೇಲೆ ಕೊರೆಯಲ್ಪಟ್ಟಿದೆ. ಆನೆಯ ಲಾಂಛನ ಮುದ್ರೆ ಇರುವ ಬಳೆಯೊಂದರಿಂದ ಇವು ಬಂಧಿಸಲ್ಪಟ್ಟಿವೆ. ಅವರು ಓದಿ ಕನ್ನಡಲಿಪಿಯಲ್ಲಿ ಕೊಟ್ಟಿರುವ ಆ ಶಾಸನದ ಪಾಠ ಈಮುಂದಿನಂತಿದೆ (ಅವರ ರೋಮನ್ ಲಿಪಿಯ ಪಾಠಕ್ಕೂ ಇದಕ್ಕೂ ಅಲ್ಲಲ್ಲಿ ವ್ಯತ್ಯಾಸವಿದೆ) :

**ಶಾಸನದ ಪಾಠ**

**೧ನೇ ಪತ್ರದ ಹಿಂಭಾಗ**

೧. ಶ್ವಸ್ತಿ ಊರ್ಜ್ಜಿತಮ್ಭಗವತಾಗತಗಗನಾಭೇನ ಪದ್ಮನಾಭೇನ ಶ್ರೀ
೨. ಮಜ್ಜಾಹ್ನವೀಯ ಕುಳಾಮಳಭ್ಯೋಮಾವಿಭೂಶನ ಭಾಶ್ಕರ ಶ್ವಖ
೩. ಡಗ್ಯೆಕ ಪ್ರಹಾರ ಖಂಡಿತ ಮಹಾಶಿಳಾಶ್ತಮ್ಭ ಲಬ್ಧ ಬ
೪. ಳ ಪರಾಕ್ರಮ ಕನ್ನಿಕ್ಷುರ . . ಶ್ಯ ಲಲಾಟಪಟ್ಟೋದ್ಭಾಶಿತ ಶ್ರೀ
೫. ಮತ್ಕೊಂಗುಟಿವರಮ ಧರಮ ಮಹಾರಾಜಾಧಿರಾಜ ತಶ್ಯ ಪುತ್ರ ವಿ
೬. ಶ್ನುಗೋಪ ಮಹಾರಾಜಾಧಿರಾಜ ತಶ್ಯ ಪುತ್ರ ಕೋಟಾಳಪುರವರಾದೀಶ್ವ
೭ ರ ಗಙ್ಗಕುಳ ಮಾರತ್ತಣ್ಡ ಮಧಗಜೇನ್ದ್ರಳಾಞ್ಚನ ಪದ್ಮಾವತೀ

**೨ನೇ ಪತ್ರದ ಮುಂಭಾಗ**

೮. ದೇವಿಯ ಳಬ್ಧ ವರಪ್ರಶಾಧ ತದಜ್ಞಾಳ್ತಾಧ ಪರಮ ಥಟಿವನಪುರ
೯. ಮದ್ಯೇ ಶಗವಷ ನಯನ ಗಿರ್ರೇ ನಯಾ ಶಾಧಾರಣ ಶಮ್ಮಚ್ಛರೇ ಪಾಲ್ಗು
೧೦. ಣ ಮಾ ಅಮವಾಶೇ ಆದಿವಾರದನ್ದು ಕಾರೆನಾಡ ದೇವನೂರನು

೧೧. ಳಗ್ಗೆ ಯರಕುಳದ ಮಧಿಗವುಡನ ಶುಪುತ್ರ ರಾಮಧೇವನು

೧೨. ಹೆಞ್ಜಜನಿಜಿದು ರಾಜಮಲ್ಲನ ಹೆಣ್ಡತಿ ಭಣ್ಟರವನು ಬ

೧೩. ಲ್ವಳಾತಿನ್ದೊಪ್ಪಿಶಿದಲ್ಲಿಗೆ ಮೆಚ್ಚುಗೊಟ್ಟ ಭೂಮಿ ಪೂ

**೨ನೇ ಪತ್ರದ ಹಿಂಭಾಗ**

೧೪. ರುರ್ಬ್ಬಶ್ಯಾನ್ದಿಶಿ ಕ್ರಿಷ್ಣಮ್ರಿತ್ತಿಕಾ ಹೇರೊಬ್ಬೆ ಚಿಞ್ಚಾವೃ

೧೫. ಕ್ಷ ತಟಾಕದ ಹೇರೊಬ್ಬೆ ಕಾವಳಸ್ತಾಣ ದೇವನೂರ ದಿವಶ

೧೬. ನ್ದಿಯ ವಟವೃಕ್ಷ ದಕ್ಷಿಣಶ್ಯಾನ್ದಶಿ ಹೇರೊಬ್ಬೆ ಕೂಪ ತಟಾಕ

೧೭. ಚಿಞ್ಚಾವೃಕ್ಷ ಪ್ರಾಲ್ಗೊಟಿ ಕಳ್ಗೊಡಿನ ದೇವನೂರ ದ್ವಿಶನ್ದಿ

೧೮. ಯ ಕಪಿತ್ವೃಕ್ಷ ಪಚ್ಚಿಮಶ್ಯಾನ್ಧಿಶಿ ಹೇರೊಬ್ಬೆ ಚಿಞ್ಚಾವ್ರಿಕ್ಷ ಬದ

೧೯. ಣವಾಟಿ ದೇವನೂರ ದ್ವಿಶನ್ಧಿಯ ಚಿಞ್ಚಾವ್ರಿಕ್ಷ ಉತ್ತರಶ್ಯಾ

**೩ನೇ ಪತ್ರದ ಮುಂಭಾಗ**

೨೦. ನ್ದಿಶಿ ಹೇರೊಬ್ಬೆ ಚಿಞ್ಚಾವ್ರಿಕ್ಷ ಕ್ರಿಷ್ಣಮೃತ್ತಿಕೆ ಅಟಿಗಿ

೨೧. ವಞ್ಚಿಯ ದೇವನೂರ ದ್ವಿಶನ್ದಿಯ ಈಶಾನಿ ಯೊಳ್ಗೂಡುತ್ತಾ

೨೨. ಶಾಕ್ಷಿಣಾಂ ಎಡೆನಾಡೆ ಎಪ್ಪತ್ತ್ಗ ಶಾಕ್ಷಿ ।

**ಶಾಸನದ ಸಾರಾಂಶ**

ಈ ಶಾಸನದ ಸಾರವನ್ನು ಹೀಗೆ ಕೊಡಬಹುದು : ಒಳ್ಳೆಯದಾಗಲಿ. ಪದ್ಮನಾಭನಿಂದ ಶುಭ್ರಾಕಾಶವನ್ನು ಹೋಲುವ ಜಯವಿರಲಿ. ಜಾಹ್ನವೀಯ (ಗಂಗ) ಕುಲವನ್ನು ಬೆಳಗುವ ಸೂರ್ಯ, ಒಂದೇ ಖಡ್ಗಪ್ರಹಾರದಿಂದ ಶಿಲಾಸ್ತಂಭವನ್ನು ಸೀಳಿ ಕನ್ನಿಕಾರ ಪುಷ್ಪದ ಕಿರೀಟದಿಂದ ಅಲಂಕೃತನಾದವನು, ಕೊಂಗುಣಿವರ್ಮ ಧರ್ಮಮಹಾರಾಜಾಧಿರಾಜ. ಅವನ ಮಗ ಮಹಾರಾಜಾಧಿರಾಜನಾದ ವಿಷ್ಣುಗೋಪ. ಅವನ ಮಗನೇ ಕೋಳಾಲಪುರದ ದೊರೆ, ಗಂಗಕುಲದ ಸೂರ್ಯ, ಪದ್ಮಾವತೀದೇವಿಯ ಅನುಗ್ರಹಕ್ಕೆ ಪಾತ್ರ ಎನಿಸಿದ ತಡಂಗಾಲ ಮಾಧವ ಮಹಾರಾಜ. ಅವನು ತಲವನಪುರದಲ್ಲಿ ಇರುವಾಗ್ಗೆ, ಶಕ ವರ್ಷ . . . ಸಾಧಾರಣ ಸಂವತ್ಸರದ ಫಾಲ್ಗುಣ ಮಾಸದ ಅಮಾವಾಸ್ಯೆಯ ದಿನ ಆದಿತ್ಯವಾರ, ಕಾರೆನಾಡಿನ ದೇವನೂರಿನ ಯರಕುಲದ ಮಧಿಗವುಡನ ಮಗ ರಾಮದೇವನು, ಹೆಂಜರ ಪಟ್ಟಣವನ್ನು ಸೀಳಿ ಒಳಹೊಕ್ಕು, ರಾಜಮಲ್ಲನ ಹೆಂಡತಿ ಮತ್ತು ಬಂಟರನ್ನು ಬಿಡಿಸಿ ಕರೆತಂದು ಒಪ್ಪಿಸಿದ್ದಕ್ಕೆ ದೊರೆ ಸಂತುಷ್ಟನಾಗಿ ಅವನಿಗೆ ಕೆಲವೊಂದು ಭೂಮಿಯನ್ನು ಕೊಟ್ಟನು. ಎಡೆನಾಡು ಎಪ್ಪತ್ತರವರು ಇದಕ್ಕೆ ಸಾಕ್ಷಿ.

ಈಗಾಗಲೇ ತಿಳಿದಿರುವಂತೆ ಮತ್ತು ಪ್ರಸ್ತುತ ಶಾಸನ ಹೇಳುವಂತೆ ತಡಂಗಾಲ ಮಾಧವನು ಗಂಗ ವಂಶದ ವಿಷ್ಣುಗೋಪನ ಮಗನೆಂಬುದು ನಿಜ. ಆದರೆ, ಅವನು ಕೊಂಗುಣಿವರ್ಮನ ಮೊಮ್ಮಗನಲ್ಲ, ಮೊಮ್ಮಗನ ಮೊಮ್ಮಗ. ಅವನ ಕಾಲಾವಧಿ ಕ್ರಿ.ಶ. ೪೪೦–೪೭೦. ಶಾಸನದಲ್ಲಿ ಹೇಳಿರುವ 'ಸಾಧಾರಣ ಸಂವತ್ಸರ'ದ ಕಾಲ ಈ ಕಾಲ ದೊಂದಿಗೆ–ಒಂದು ಶತಮಾನದಷ್ಟು ಅಂತರ ಬರುವುದರಿಂದ– ತಾಳೆಯಾಗುವುದಿಲ್ಲ. ಅದರ ವಿವರ ಮುಂದೆ ಬರುತ್ತದೆ. ಇಲ್ಲಿ ಬರುವ ಘಟನೆ ಮಾತ್ರ ತುಂಬ ಕುತೂಹಲಕಾರಿಯಾಗಿದೆ. ಇಲ್ಲಿ ಬರುವ ರಾಜಮಲ್ಲ ಯಾರು ಎಂಬುದು ಶಾಸನದಲ್ಲಿ ಸ್ಪಷ್ಟವಿಲ್ಲ. ಆದರೆ, ರೈಸ್ ಅವರು ('ಇಂ.ಆಂ.'ಯಲ್ಲಿ) ಈ ರಾಜಮಲ್ಲನು ವಿಷ್ಣುಗೋಪನ ಮಗ ಎಂದು ಒಂದೆಡೆ ಹೇಳು ತ್ತಾರಾದರೂ ಅವನು ಮಾಧವ ಎಂಬುದು ಅನುಮಾನಾಸ್ಪದ ಎಂದು ಇನ್ನೊಂದೆಡೆ ಹೇಳುತ್ತಾರೆ. ರಾಜಮಲ್ಲನ ಹೆಂಡತಿ ಮತ್ತು ಕೆಲವರು ಬಂಟರು ಹೆಂಜರದಲ್ಲಿ ಸೆರೆಯಾಗಿದ್ದರೆ? ಸೆರೆಯಾಗಿದ್ದರೆ ಏಕೆ? ಸೆರೆಯಲ್ಲಿಟ್ಟಿದ್ದವರು ಯಾರು? ಹೆಂಜರದ ದೊರೆಯೆ? ಅಥವಾ ಬೇರೆಯವರೆ? ಅವರು ಯಾರು? ಅವರಿಗೂ ಮಾಧವ–ರಾಜಮಲ್ಲರಿಗೂ ಶತ್ರುತ್ವವಿತ್ತೆ? ಅಥವಾ ಬಂಧುತ್ವದ ನಡುವಿನ ಕಲಹವೆ? ರಾಮಗವುಡನು ಅವರನ್ನು ಹೇಗೆ ಬಿಡಿಸಿಕೊಂಡು ಬಂದ? ಅವನು ಏನಾಗಿದ್ದ?–ಇಂಥ ಪ್ರಶ್ನೆಗಳಿಗೆ ಸದ್ಯಕ್ಕೆ ಉತ್ತರವಿಲ್ಲ. ಇದರಲ್ಲಿ ಬರುವ ಥಟವನಪುರ, ಕೋಟಿಾಳಪುರ, ಕಾರೆ ನಾಡು, ದೇವನೂರು, ಹೆಞ್ಜಜ ಮುಂತಾದ ಸ್ಥಳನಾಮ– ಪ್ರಾಂತನಾಮಗಳು ಗಮನೀಯವಾಗಿವೆ.

ಈ ಶಾಸನದ ಪಾಠವನ್ನು ಅದರ ಚಿತ್ರದ ಅಕ್ಷರ ಗಳೊಂದಿಗೆ ತಾಳೆನೋಡುತ್ತಾ ಹೋದಾಗ, ಅಲ್ಲಲ್ಲಿ ಇದನ್ನು ಇನ್ನಷ್ಟು ಪರಿಷ್ಕರಿಸಬಹುದು ಎನಿಸುತ್ತದೆ. ಆದರೆ, ಅದು ಇನ್ನೊಂದು ಸಂಪ್ರಬಂಧದ ವಿಷಯವಾಗುತ್ತದೆ. ಆ ಅಂಶ ಗಳಿಗಿಂತ ಇದು ಹಲ್ಮಿಡಿ ಶಾಸನಕ್ಕಿಂತ ಹಳೆಯದೇ ಅಲ್ಲವೇ ಎಂಬ ಬಗ್ಗೆ ಮಾತ್ರ ಇಲ್ಲಿ ಗಮನವನ್ನು ಕೇಂದ್ರೀಕರಿಸಿ ವಿವೇಚಿಸ ಲಾಗಿದೆ.

**ಶಾಸನದ ಲಿಪಿ**

ಮೇಲೆ ಹೇಳಿದ 'ಇಂಡಿಯನ್ ಆಂಟಿಕ್ವೆರಿ'ಯಲ್ಲಿ ರೈಸ್ ಅವರು ಶಾಸನದ ಮೂರೂ ಫಲಕಗಳ ಶಾಸನ ಬರಹದ

ಚಿತ್ರವನ್ನು ಕೊಟ್ಟಿದ್ದಾರೆ (ಪು. ೧೬೭-೧೬೮). ಜೊತೆಗೆ ಒಂದೇ ಅಕ್ಷರದ ಹಲವು ರೂಪಗಳ ಒಂದು ನಕ್ಷೆಯನ್ನು ಸಹ ಕೊಟ್ಟಿದ್ದಾರೆ (ಪು. ೧೬೯). ಈ ತಾಮ್ರಶಾಸನ ಪೂರ್ತಿಯಾಗಿ ಕನ್ನಡದ ಲಿಪಿಯಲ್ಲಿಲ್ಲ ಎಂಬ ಅಂಶವನ್ನು ರೈಸ್ ಅವರೇ ಗುರ್ತಿಸಿದ್ದಾರೆ. ಶಾಸನ ಬರಹದ ಲಿಪಿಯ ಬಗ್ಗೆ ಅಲ್ಲಿ ಅವರು ಹೀಗೆ ಹೇಳಿದ್ದಾರೆ: "ಈ ಶಾಸನದ ಒಂದು ಅಪರೂಪದ ಸಂಗತಿ ಎಂದರೆ, ಇದು ವಿಲಕ್ಷಣ ಬಗೆಯ ಲಿಪಿಯಲ್ಲಿರುವುದು. ಇದರಲ್ಲಿ ಮೂರು ವಿಧದ ಲಿಪಿ ಇಲ್ಲ ಎನ್ನುವುದಾದರೆ, ನಿಶ್ಚಿತವಾಗಿ ಎರಡು ಲಿಪಿಗಳಂತೂ ಇದರಲ್ಲಿವೆ. ನನಗೆ ತೋರುವಂತೆ, ಪ್ರಧಾನವಾಗಿರುವುದು ಹಳಗನ್ನಡ ಲಿಪಿಯ ತುಂಬ ಪೂರ್ವದ ರೂಪ; ಇನ್ನೊಂದು, ಸ್ವಲ್ಪ ತರುವಾಯದ ರೂಪ; ಮೂರನೆಯದು ದೇವನಾಗರಿಯ ಒಂದು ವಿಧ." ಹೀಗೆ ಬರೆದ ರೈಸ್ ಅವರೇ ಮುಂದೆ 'ಎಪಿಗ್ರಾಫಿಯ ಕರ್ನಾಟಿಕ'ದಲ್ಲಿ ಲಿಪಿಯ ಬಗ್ಗೆ ಹೇಳಿರುವುದು ಹೀಗೆ: "ಈ ಶಾಸನದ ಒಂದು ಅಸಾಮಾನ್ಯ ಲಕ್ಷಣ ಎಂದರೆ, ಇದು ಸರ್ವೇಸಾಧಾರಣ ರೀತಿಯವಲ್ಲದ ಅಕ್ಷರಗಳ– ಕಡೇ ಪಕ್ಷ ಮೂರು ರೀತಿಯ ಲಿಪಿಗಳ– ಮಿಶ್ರಣದಂತೆ ಕಾಣುತ್ತದೆ. ಆ ಲಿಪಿಗಳಲ್ಲಿ ಅತ್ಯಂತ ಹಳೆಯ ರೀತಿಯದೆಂದು ಹೇಳಬಹುದಾದದ್ದು ಇದುವರೆಗೆ ಎಲ್ಲೂ ಕಾಣಸಿಕ್ಕಿಲ್ಲ. ಅದರ ಅಕ್ಷರಗಳು ಕೆಲವು ಕಡೆ, ಅಶೋಕನ ಲಿಪಿಯ ಅಕ್ಷರಗಳನ್ನು ಹೋಲುತ್ತವೆ. ಇನ್ನೊಂದು ಲಿಪಿ ಹಳಗನ್ನಡದ್ದು ಮತ್ತು ಮೂರನೆಯದು ನಾಗರೀ ಲಿಪಿಯ ಒಂದು ಪ್ರಭೇದ". ಹೀಗೆ ಹೇಳಿದ ಅವರು ಈಹಿಂದೆ ಫ್ಲೀಟ್ ಮತ್ತು ಕೀಲ್‌ಹಾರ್ನ್ ಅವರು ಮಿಶ್ರಲಿಪಿಯ ತಾಮ್ರಪಟಗಳನ್ನು ಪ್ರಕಟಿಸಿರುವುದರ ವಿವರವನ್ನು ಸಹ ನೀಡಿದ್ದಾರೆ. ಪ್ರಸ್ತುತ ಶಾಸನವೂ ಸಹ ಅದೇ ಗುಂಪಿಗೆ ಸೇರುವ ಶಾಸನವಾಗಿದೆ ಎಂಬುದನ್ನು ಸೂಚಿಸಿದ್ದಾರೆ. ಇಲ್ಲಿ ಒಂದು ಅಂಶವನ್ನು ಗಮನಿಸಬಹುದು. ಅದೆಂದರೆ, 'ಇಂ.ಆಂ.' ಯಿಂದ 'ಎ.ಕ.'ಕ್ಕೆ ಬರುವ ಹೊತ್ತಿಗೆ ಲಿಪಿಯ ಬಗ್ಗೆ ರೈಸ್ ಅವರ ನಿಲವು ಹೇಗೆ ಹೇಗೆ ಬದಲಾಗಿತ್ತು ಎನ್ನುವುದನ್ನು ಇಲ್ಲಿ ಗಮನಿಸಬಹುದು.

ರೈಸ್ ಅವರು ಶಾಸನ ಫಲಕಗಳ ಅಕ್ಷರಗಳ ಚಿತ್ರವನ್ನು 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟದಲ್ಲೂ ಕೊಟ್ಟಿದ್ದಾರೆ. ತುಂಬ ಕ್ಲಿಷ್ಟವಿರುವ ಈ ಶಾಸನಾಕ್ಷರಗಳನ್ನು ಓದಿ ಪಾಠ ಕೊಟ್ಟಿರುವ ರೈಸರ ತೀವ್ರ ಆಸಕ್ತಿ ಮತ್ತು ಪರಿಶ್ರಮಗಳನ್ನು ಮೆಚ್ಚಲೇಬೇಕು. ಇಲ್ಲಿಯ ಕೆಲವು ಅಕ್ಷರಗಳು ಅಶೋಕನ ಲಿಪಿಯ ಅಕ್ಷರಗಳನ್ನು ಹೋಲುವುದಾಗಿ ರೈಸ್ ಬರೆದಿದ್ದಾರಷ್ಟೆ. ಅಕ್ಷರಗಳ ಚಿತ್ರದ ಜೊತೆಗೆ ಅವರು ಕೊಟ್ಟಿರುವ ಪಾಠದಲ್ಲಿಯ ಅಕ್ಷರಗಳನ್ನು ತಾಳೆನೋಡುತ್ತ ಹೋದಾಗ, ಕೆಲವೇ ಕೆಲವೆಡೆ ದೀರ್ಘ ಆ–ಚಿಹ್ನೆ, ಇತ್ವ–ಈತ್ವ–ಚಿಹ್ನೆ ಮತ್ತು ಉತ್ವ–ಚಿಹ್ನೆ ಇಂಥವು ಮಾತ್ರ ಅಶೋಕನ ಲಿಪಿಯಲ್ಲಿಯ ಚಿಹ್ನೆಗಳನ್ನು ಹೋಲುತ್ತವೆಯೇ ಹೊರತು, ಆ ಅಕ್ಷರಗಳು ಪೂರ್ಣವಾಗಿ ಅಶೋಕನ ಲಿಪಿಯ ಅಕ್ಷರಗಳಿಗೆ ಸಾವಯವ ಸಾದೃಶ್ಯ ಅಥವಾ ಹೋಲಿಕೆಯನ್ನು ಹೊಂದಿಲ್ಲ. ರೈಸ್ ಅವರು ಕನ್ನಡ ಲಿಪಿಯಲ್ಲಿ ಪಾಠ ಕೊಟ್ಟಿರುವಲ್ಲಿ, ಮೇಲುಭಾಗದಲ್ಲಿ 'ಪೂರ್ವದ ಹಳಗನ್ನಡ ಮತ್ತು ನಾಗರಾಕ್ಷರಗಳು' ಎಂದು ಎರಡೇ ಲಿಪಿಗಳ ಹೆಸರನ್ನು ಕೊಟ್ಟಿರುವುದು ಹೆಚ್ಚು ಸರಿಯಾಗಿದೆ. ಇಲ್ಲಿಯ ಪೂರ್ವದ ಹಳಗನ್ನಡ ಲಿಪಿಯಲ್ಲೂ ತೀರಾ ಅಪರೂಪದ ವಿನ್ಯಾಸವಿರುವ ಅಕ್ಷರಗಳಿವೆ. ಉದಾಹರಣೆಗೆ, ಭ ಹ ಬ ಇತ್ಯಾದಿ. ಇಷ್ಟಾಗಿಯೂ ಕೆಲವು ಅಕ್ಷರಗಳ ಸ್ವರೂಪ ಸಂಶಯಾಸ್ಪದವೆಂದು ರೈಸ್ 'ಇಂಡಿಯನ್ ಆಂಟಿಕ್ವೆರಿ'ಯಲ್ಲಿ ಕೊಟ್ಟಿರುವ ಲಿಪಿನಕ್ಷೆಯ(ಕೆಳಭಾಗದ)ಲ್ಲಿ ಸೂಚಿಸಿರುತ್ತಾರೆ.

ನಾಗರೀ ಮತ್ತು ಹಳಗನ್ನಡ ಲಿಪಿಗಳ ವಿಲಕ್ಷಣ ಮಿಶ್ರಣದ ಉದ್ದೇಶ ಏನೆಂದು ಸ್ಪಷ್ಟವಿಲ್ಲದಿದ್ದರೂ, ಕೀಲ್‌ಹಾರ್ನ್ ಅವರು ಇಂಥವೇ ಬೇರೆ ಶಾಸನಗಳ ಸಂದರ್ಭದಲ್ಲಿ ಈಗಾಗಲೇ ಹೇಳಿರುವಂತೆ, ಲಿಪಿಕಾರನಿಗೆ ಇದ್ದ ಬಹುಲಿಪಿ ಪರಿಚಯ ಹಾಗೂ ಭಿನ್ನಲಿಪಿ ಅಕ್ಷರಗಳ ಸಂಯೋಜನಕೌಶಲ ಇವನ್ನು ಪ್ರದರ್ಶಿಸುವ ಉದ್ದೇಶವಿರಬಹುದೆ? ಎಂದು ಸಂದೇಹವಾಗುತ್ತದೆ. ಈ ಮಿಶ್ರಣ ಅಸಹಜ ಎನಿಸುವುದಾದರೂ–ಋಜುತ್ವ ಪರಿಶೀಲನೆಗಾಗಿ ಈ ಶಾಸನವನ್ನು ಸಾರ್ವಜನಿಕವಾಗಿ ಸಾದರಪಡಿಸುವ ಸಂದರ್ಭ ಬಂದರೆ– ಸಾಮಾನ್ಯವಾಗಿ ಹೆಚ್ಚು ಸಂಖ್ಯೆಯಲ್ಲಿ ಇದ್ದಿರದ ಬಹುವಿಧಲಿಪಿ ಪರಿಣತರು ಮಾತ್ರ ಇದನ್ನು ಪರಿಶೀಲಿಸಲು ಮುಂದೆ ಬರಬೇಕು–ಸಾಮಾನ್ಯ ಲಿಪಿಪರಿಣತರು ನೋಡಲು ಹಿಂಜರಿಯುವಂತಿರಬೇಕು, ಅಂಥ ಉದ್ದೇಶದಿಂದ ಈ ಮಿಶ್ರಲಿಪಿಯನ್ನು ರಚಿಸಿರಬಹುದೆ ಎಂದೂ ಸಂದೇಹ ವಾಗುತ್ತದೆ.

### ಶಾಸನದ ಭಾಷೆ

ಈ ಶಾಸನದ ವಿಷಯದಲ್ಲಿ ರೈಸ್ ಅವರು ಗಮನಿಸದೆ ಹೋದ ಬಹುಮುಖ್ಯ ಅಂಶವೊಂದಿದೆ. ಅವರು ಈ ಶಾಸನದ ಅಕ್ಷರಗಳ ಬಗ್ಗೆ ಅಷ್ಟೆಲ್ಲ ಬರೆದಿರುವರಾದರೂ ಅದರ ಭಾಷೆಯ ಬಗ್ಗೆ ಮತ್ತು ಶಬ್ದರೂಪಗಳ ಬಗ್ಗೆ ಏನನ್ನೂ ಹೇಳಹೋಗಿಲ್ಲ; ಇದು ಆಶ್ಚರ್ಯ ತರುತ್ತದೆ. ಈ ಶಾಸನದಲ್ಲಿ ಲಿಪಿಗಳದ್ದು ಅಷ್ಟೆ ಅಲ್ಲ, ಭಾಷೆಗಳ ಮಿಶ್ರಣವೂ ಇದೆ. ಅದು ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಒಂದು ವಿಲಕ್ಷಣ ಮಿಶ್ರಣ. ಎಷ್ಟೋ ಶಾಸನಗಳಲ್ಲಿ ಮೊದಲಿಗೆ ಎಲ್ಲ ಸಂಸ್ಕೃತವಿದ್ದು ಅಂತ್ಯದಲ್ಲಿ ದಾನದ ಭೂಮಿಗಳ ವಿವರ ಕೊಡುವಾಗ ಕನ್ನಡ ಬಳಸಿರುವುದು ಕಾಣುತ್ತದೆ. ಆದರೆ, ಇಲ್ಲಿಯ ಮಿಶ್ರಣ ಅಂಥದಲ್ಲ.

ಅಂದರೆ ಅಲ್ಲಿ ಸಂಸ್ಕೃತ-ಕನ್ನಡಗಳೆರಡೂ ಬೇರೆ ಬೇರೆ ಭಾಗಗಳಿಗೆ ಮೀಸಲೆನ್ನುವ ಹಾಗೆ ಬಂದಿರುತ್ತವೆ. ಅಲ್ಲಿ ಸಂಸ್ಕೃತದ್ದೇ ಬೇರೆ ವಾಕ್ಯ, ಕನ್ನಡದ್ದೇ ಬೇರೆ ವಾಕ್ಯ ಎಂಬಂತೆ ಬಂದಿರುತ್ತವೆ. ಆದರೆ ಇಲ್ಲಿ ಹಾಗಿಲ್ಲ. ಇಲ್ಲಿ ಸಂಸ್ಕೃತದ ಪದಗಳು ಸಂಸ್ಕೃತದಲ್ಲಿರುವ ವಿಭಕ್ತಿಗಳ ಸಮೇತ, ಕನ್ನಡದ ಪದಗಳು ಕನ್ನಡದಲ್ಲಿರುವ ವಿಭಕ್ತಿಗಳ ಸಮೇತ, ಒಂದೇ ವಾಕ್ಯದಲ್ಲಿ ಹಾಸುಹೊಕ್ಕಾಗಿ ಬಂದಿರುತ್ತವೆ. ಇದು ಅಸಹಜ ವೆನಿಸಿದರೂ ಆಶ್ಚರ್ಯಕರವಾಗಿದೆ. ಇದರಲ್ಲಿ ಕಾಗುಣಿತ ದೋಷಗಳ ಜೊತೆಗೆ, ವಾಕ್ಯರಚನೆಯಲ್ಲಿ ವಿಭಕ್ತಿಪ್ರಯೋಗಗಳ ದೋಷಗಳೂ ಎದ್ದುಕಾಣುತ್ತವೆ. ಶಾಸನಗಳಲ್ಲಿ ಕಾಗುಣಿತ ದೋಷಗಳು ವಾಕ್ಯರಚನಾದೋಷಗಳು ಸಾಮಾನ್ಯ. ಆದರೂ, ಎರಡೂ ಭಾಷೆಗಳನ್ನು ಬಲ್ಲವನೊಬ್ಬನಿಂದ ರಚಿತವಾಗಿರುವ ಶಾಸನದಲ್ಲಿ ಅವು ಹೆಚ್ಚು ಪ್ರಮಾಣದಲ್ಲಿರುವುದು ಸಹಜ ಎನ್ನಿಸುವುದಿಲ್ಲ. ಆ ದೋಷಗಳನ್ನು ನೋಡಿದರೆ, ಶಾಸನದ ರಚನಕಾರನಿಗೆ ಸಂಸ್ಕೃತ ಕನ್ನಡಭಾಷೆಗಳ ಪರಿಚಯ ಇರುವುದಾದರೂ, ಆ ಪರಿಚಯಕ್ಕೆ ಶಾಸ್ತ್ರೀಯ(ನಿಖರ)ತೆಯ ಕೊರತೆ ಇರುವುದು ಸ್ಪಷ್ಟವಾಗಿ ಕಾಣುತ್ತದೆ.

**೧. ಕಾಗುಣಿತದ ಹೇರಳ ದೋಷಕ್ಕೆ**

ಶ್ವಶ್ತಿ (ಸ್ವಸ್ತಿ), ವಿಭೂಶನ (ವಿಭೂಷಣ), ಭಾಶ್ಕರ (ಭಾಸ್ಕರ), ಶ್ತಮ್ಭ (ಸ್ತಮ್ಭ), ಮಾರತ್ತಂಡ (ಮಾರ್ತಾಂಡ), ವಿಶ್ಣುಗೋಪ (ವಿಷ್ಣುಗೋಪ), ಪ್ರಶಾಧ (ಪ್ರಸಾದ), ಶುಪುತ್ರ (ಸುಪುತ್ರ), ಶಾಧಾರಣ ಶಮ್ಮಚ್ಚರೇ (ಸಾಧಾರಣ ಸಂವತ್ಸರೇ), ತಶ್ಯ (ತಸ್ಯ), ಶಾಕ್ಷಿಣಾಂ (ಸಾಕ್ಷಿಣಾಂ), ಪಾಲ್ಗುಣ (ಫಾಲ್ಗುಣ), ಆದಿವಾರದನ್ಧು (ಆದಿವಾರದಂದು)- ಇತ್ಯಾದಿ. ಇಲ್ಲೆಲ್ಲ ಸಕಾರಕ್ಕೆ ಶಕಾರ, ಅಲ್ಪಪ್ರಾಣಕ್ಕೆ ಮಹಾಪ್ರಾಣ, ಮಹಾಪ್ರಾಣಕ್ಕೆ ಅಲ್ಪಪ್ರಾಣ- ಇತ್ಯಾದಿಗಳನ್ನು ಗಮನಿಸಬಹುದು.

**೨. ವಿಭಕ್ತಿ ಪ್ರಯೋಗದೋಷಕ್ಕೆ ಮತ್ತು ಸಂಸ್ಕೃತ-ಕನ್ನಡಗಳ ಅಸಹಜ ಭಾಷಾಮಿಶ್ರಣಕ್ಕೆ**

ಅ) ಶಾಧಾರಣ ಶಮ್ಮಚ್ಚರೇ ಪಾಲ್ಗುಣ ಮಾ[ಸೇ*] ಅಮಾವಾಶೇ ಆದಿವಾರದನ್ಧು

ಆ) ಪೂರ್ಬ್ಬಶ್ಯಾನ್ದಿಶಿ ಕ್ರಿಷ್ಣಮ್ರಿತ್ತಿಕಾ ಹೇರೊಬ್ಬೆ

ಇ) ಶಾಕ್ಷಿಣಾಂ ಎಡೆನಾಡೆ ಎಪ್ಪತ್ತ್ಗ ಶಾಕ್ಷಿ ।

ಈ) ಮಹಾರಾಜಾಧಿರಾಜ ತಶ್ಯ ಪುತ್ರ ವಿಶ್ಣುಗೋಪ ಮಹಾರಾಜಾಧಿರಾಜ ತಶ್ಯ ಪುತ್ರ ಕೋಟಿಾಳಪುರ ವರಾಧೀಶ್ವರ ...

**೩. ಪೂರ್ವದ ಹಳಗನ್ನಡದ ಪದರೂಪಗಳು ಕಾಣದಿರುವುದಕ್ಕೆ**

(ಅ) ಈಮೇಲಿನ ಅಂಶಗಳ ಜೊತೆಗೆ, ಈ ಶಾಸನದಲ್ಲಿ ಆ ಕಾಲಕ್ಕೆ ಸಹಜವಾಗಿ ಇರಬೇಕಾಗಿದ್ದ ಪೂರ್ವದ ಹಳಗನ್ನಡದ ಪದರೂಪಗಳು ಕಾಣದಿರುವುದು ಆಶ್ಚರ್ಯವನ್ನು ತರುತ್ತದೆ. ಉದಾಹರಣೆಗೆ, 'ರಾಮದೇವನ್' 'ಭಣ್ಡಾರಾನ್' ಎಂದಿರಬೇಕಾದಲ್ಲಿ 'ರಾಮದೇವನು' 'ಭಣ್ಡರವನು' ಎಂಬ ಸುಮಾರು ೬-೭ ಶತಮಾನಗಳ ಅನಂತರದಲ್ಲಿ ಕಾಣುವ ನಡುಗನ್ನಡ ರೂಪಗಳಿವೆ.

(ಆ) ಆ ಕಾಲದ ಕನ್ನಡದಲ್ಲಿ ಪಕಾರ ಇನ್ನೂ ಹಕಾರವಾಗಿಲಿಲ್ಲ. ಆದರೆ, ಇದರಲ್ಲಿ ಪದಾದಿಯಲ್ಲಿ ಪಕಾರದ ಬದಲಿಗೆ ಹಕಾರ ಇರುವ 'ಹೇರೊಬ್ಬೆ' ಎಂಬುದು 'ದೊಡ್ಡ ಬೇಲಿ' ಎಂಬ ಅರ್ಥವಿರುವ ಪದವಿದ್ದು, ಅದು ನಾಲ್ಕು ಕಡೆಯಲ್ಲಿ ಬಂದಿದೆ. ಆದರೆ, ನಾಲ್ಕು ಕಡೆಯಲ್ಲೂ ಹಕಾರವಿರುವ ನಡುಗನ್ನಡದ ರೂಪದಲ್ಲೇ ಬಂದಿದೆ. ಒಂದು ಕಡೆಯಲ್ಲೂ ಅದು 'ಪೇರೊಬ್ಬೆ' (<ಪೇರೊರ್ಬ್ಬೆ/ಪೇರೊಟ್ಟೆ) ಎಂಬ ರೀತಿಯಲ್ಲಿ ಬಂದಿಲ್ಲ. ಹಾಗೇ 'ಪೆಣ್ಡತಿ' ಎಂಬ ಪದ ಬರುವುದರ ಬದಲಿಗೆ, ಪಕಾರ ಹಕಾರವಾದ ನಡುಗನ್ನಡ ಕಾಲದ 'ಹೆಣ್ಡತಿ' ಎಂಬ ರೂಪವೇ ಇದೆ.

ಈಗಿನ ಆಂಧ್ರಪ್ರದೇಶ ರಾಜ್ಯದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನಲ್ಲಿರುವ ಪ್ರಾಚೀನ ಇತಿಹಾಸಪ್ರಸಿದ್ಧ ಸ್ಥಳ ಹೆಂಜೇರು. ಈ ಶಾಸನದಲ್ಲಿ 'ಹೆಞ್ಜಱ' ಎಂದು ಬಂದಿರುವುದು ಇದೇ ಸ್ಥಳ. ಇದರ ಪ್ರಾಚೀನ ಸ್ಥಳನಾಮರೂಪಗಳು- 'ಪೆಞ್ಜಱ', 'ಪೆಞ್ಜಱು', 'ಪೆಂಜಱುವು', 'ಪೆಂಜೆಱು' [ನೋಡಿ: ಎಕ ೯(ಸ), ಹೊಸಕೋಟೆ ೧೬೯, ಕ್ರಿ.ಶ.ಸು. ೮೦೦ ; ಎಕ ೧೨, ಶಿರಾ ೩೯, ಕ್ರಿ.ಶ. ೯೨೦; ೨೮, ಕ್ರಿ.ಶ. ೯೪೩ ಇತ್ಯಾದಿ]. ಪ್ರಸ್ತುತ ಶಾಸನದಲ್ಲಿ ಪಕಾರವಿರುವ ಅದರ ಪ್ರಾಚೀನ ಸ್ಥಳನಾಮ ರೂಪಕ್ಕೆ ಬದಲಾಗಿ ಆರಂಭದಲ್ಲಿ ಹಕಾರವಿರುವ, ಎಷ್ಟೋ ಶತಮಾನಗಳ ತರುವಾಯದ, ರೂಪವೇ ಇದೆ.

(ಇ) ಅದೇ ರೀತಿ, 'ಗವುಡ' ಎಂಬ ಶಬ್ದ ಕೂಡಾ ಕಾಲವಿಸಂಗತಿ(anachronism)ಗೆ ಇನ್ನೊಂದು ಸಾಕ್ಷಿಯಾಗಿದೆ. ಏಕೆಂದರೆ, ಆ ಕಾಲಕ್ಕೆ ಆ ಶಬ್ದರೂಪ ಬಂದಿರಲೇ ಇಲ್ಲ. ಆಗ ಇದ್ದದ್ದು ಗಾಮುಣ್ಡ/ಗಾವುಣ್ಡ ಎಂಬ ರೀತಿಯ ರೂಪಗಳು ಮಾತ್ರ. ಗವುಡ ಎಂಬುದು ಎಷ್ಟೋ ಶತಮಾನಗಳ ಅನಂತರದಲ್ಲಿ ಕಂಡುಬರುವ ರೂಪ, ಅಷ್ಟೆ.

**೪. ನಾಮಪದಗಳಿಗೆ ಕೆಲವೆಡೆ ವಿಭಕ್ತಿಗಳು ಇಲ್ಲದಿರುವುದಕ್ಕೆ**

'ಮಹಾರಾಜಾಧಿರಾಜ' 'ತಶ್ಯ(ಸ್ಯ) ಪುತ್ರ' 'ವಿಷ್ಣುಗೋಪ' ಮುಂತಾದ ಪದಗಳಲ್ಲಿ ಸಂಸ್ಕೃತ ಏಕವಚನ ಪ್ರಥಮಾ ವಿಭಕ್ತಿಯ ವಿಸರ್ಗಾಂತವಾಗಲಿ ಹಳಗನ್ನಡದ ಏಕವಚನ ಪ್ರಥಮಾ ವಿಭಕ್ತಿಯ ನಕಾರದ ವ್ಯಂಜನಾಂತವಾಗಲಿ ಅಥವಾ ಅನುಸ್ವಾರಾಂತವಾಗಲಿ ಶಾಸನಕಾರ ಬಳಸಿಲ್ಲ.

**ಕಾಲಸೂಚನೆಯಲ್ಲಿ ತೊಡಕು**

ಈ ಶಾಸನದಲ್ಲಿ ಗಂಗ ದೊರೆ ತಡಂಗಾಲ ಮಾಧವನ ಹೆಸರು ಬಂದಿದ್ದು, ಅದರಲ್ಲಿ ಶಕವರ್ಷ ಸಂಖ್ಯೆಯನ್ನು ಸಂಕೇತಗಳಲ್ಲಿ ಕೊಟ್ಟಿರುವ ಭಾಗ ಅಸ್ಪಷ್ಟವಾಗಿದೆ. ಈ ಸಂಕೇತಗಳನ್ನು ಅರ್ಥೈಸಿಕೊಳ್ಳಲು ಎಷ್ಟು ಗೊಂದಲವಿದೆಯೆಂದು ರೈಸ್ ಅವರು 'ಇಂಡಿಯನ್ ಆಂಟಿಕ್ವೆರಿ'ಯಲ್ಲಿ ನೀಡಿರುವ ವಿವರದಿಂದ ವ್ಯಕ್ತವಾಗುತ್ತದೆ. ಈ ಶಾಸನವನ್ನು ಅವರು ಅದರಲ್ಲಿ ಪ್ರಕಟಿಸಿದಾಗ, ಇದರ ಕಾಲ ಕ್ರಿ.ಶ. ೩೫೦ ಎಂದು ಕೊಟ್ಟಿದ್ದರು. ಆದರೆ, ಇದನ್ನು 'ಎಪಿಗ್ರಾಫಿಯ ಕರ್ನಾಟಿಕ'ದಲ್ಲಿ ಮರುಪ್ರಕಟಿಸಿದಾಗ, ಇದರ ಕಾಲವನ್ನು ಕ್ರಿ.ಶ. ೩೫೭ ಎಂದು ಕೊಟ್ಟಿದ್ದರು. ಇದರಲ್ಲಿ ಸಂವತ್ಸರದ ಹೆಸರನ್ನು 'ಶಾಧಾರಣ' (ಸಾಧಾರಣ) ಎಂದು ಹೇಳಿರುವುದು ಕ್ರಿ.ಶ. ೩೫೭ ರಲ್ಲಿ ಬರುವುದಿಲ್ಲ. ಅದು ಕ್ರಿ.ಶ. ೩೫೦ ರಲ್ಲಿ



೧ನೇ ಫಲಕದ ಹಿಂಬದಿ



೨ನೇ ಫಲಕದ ಮುಂಬದಿ

೨ನೇ ಫಲಕದ ಹಿಂಬದಿ

೩ನೇ ಫಲಕದ ಮುಂಬದಿ

ಬರುತ್ತದೆ. ಆದ್ದರಿಂದ ಅವರು ಮೊದಲಿಗೆ ಕ್ರಿ.ಶ. ೩೫೦ ಎಂದು ಕೊಟ್ಟಿದ್ದ ವರ್ಷ ಅದಕ್ಕೆ ಹೊಂದುತ್ತದೆ. ರೈಸರು ಆ ವರ್ಷಸಂಖ್ಯೆಗಳನ್ನು ಕೊಟ್ಟಿದ್ದರೆ, ಡಾ. ಶೆಟ್ಟರ್ ಅವರು ವರ್ಷದ ಸಂಖ್ಯೆಯನ್ನು ೩೪೬ ಎಂದು ಹೇಳುತ್ತಿದ್ದಾರೆ. ಅದನ್ನು ಅವರು ಯಾವ ಆಧಾರದಿಂದ ಹೇಳುತ್ತಿರುವರೋ? ಅಥವಾ ಅವರು ರೈಸರ ಬರಹವನ್ನು ಓದಿದ್ದ ಹಳೆಯ ನೆನಪಿನ ಅಂದಾಜಿನಿಂದ ಹೇಳುತ್ತಿರಬಹುದೇ ಎಂದೂ ಅನುಮಾನವಾಗುತ್ತದೆ, ಇರಲಿ. ಇಷ್ಟಾಗಿಯೂ ಇದು ಆ ದೊರೆಯ ಕಾಲದ್ದೆಂದು ತಿಳಿಯಲು ಅದರ ಲಿಪಿ ಮತ್ತು ಭಾಷೆ ಎರಡೂ ವ್ಯತಿರಿಕ್ತವಾಗಿವೆ; ಜೊತೆಗೆ ಮೇಲೆ ತಿಳಿಸಿದ ವರ್ಷಸಂಖ್ಯೆಗಳೂ ಅಸಂಗತವಾಗಿವೆ. ಏಕೆಂದರೆ, ಮೇಲೆ ಹೇಳಿರುವಂತೆ ಆ ದೊರೆಯ ಕಾಲಾವಧಿ ಕ್ರಿ.ಶ. ೪೪೦–೪೬೯. ಆ ಅವಧಿಯಲ್ಲಿ ಮೇಲೆ ಹೇಳಿದ ವರ್ಷಗಳು, ಸಂವತ್ಸರ ಯಾವುದೂ ಬರುವುದಿಲ್ಲ!

ಹಿರಿಯ ಸಂಶೋಧಕರಾಗಿದ್ದ ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣರಾವ್ ಮತ್ತು ಶ್ರೀ ರಾ. ಸ್ವಾ. ಪಂಚಮುಖಿ ಅವರು ೧೯೪೬ರಲ್ಲಿ ಈ ಶಾಸನಲಿಪಿ ಕೃತಕ ಎಂದೂ ಇದರಲ್ಲಿಯ ಕಾಲನಿರ್ದೇಶ ಕ್ರಮವು ೫–೬ನೆಯ ಶತಮಾನದಲ್ಲಿ ಪ್ರಚಾರದಲ್ಲಿರಲಿಲ್ಲವೆಂದೂ ಶಾಸನದಲ್ಲಿ ಹೇಳಿರುವ ಶಕವರ್ಷದಲ್ಲಿ ತಡಂಗಾಲ ಮಾಧವನು ಇದ್ದಿರಲೇ ಇಲ್ಲವೆಂದೂ ಹೇಳಿದ್ದಾರೆ. ಅದು ಸರಿಯಾಗಿದೆ. ೧೯೮೭ರಲ್ಲಿ ಶಾಸನಸಂಶೋಧಕರಾದ ಡಾ. ಎಚ್. ಎಸ್. ಗೋಪಾಲರಾವ್ ಅವರು, 'ಹರತಿಸಿರಿ' ಸಂಪುಟದಲ್ಲಿ, 'ತಲಕಾಡು ಗಂಗರ ಕೃತಕ ತಾಮ್ರಶಾಸನಗಳು' ಎಂಬ ತಮ್ಮ ಲೇಖನದಲ್ಲಿ

ಚುಟುಕಾಗಿ ಆದರೆ ಸ್ಪಷ್ಟವಾಗಿ, ಅದು "ಲಿಪಿಸ್ವರೂಪ ಮತ್ತು ಅಶುದ್ಧ ಭಾಷೆಯಿಂದಾಗಿ ಕೃತಕ ಎಂದು ನಿರ್ಧಾರಿತ" ವಾಗಿರುವುದಾಗಿ ಒಂದು ವಾಕ್ಯದಲ್ಲಿ ಹೇಳಿದ್ದಾರೆ. ಅವರ ಅಭಿಪ್ರಾಯವೂ ಕೂಡಾ ಸರಿಯಾಗಿದೆ. ಹೀಗೆ ಇವರೆಲ್ಲ ಹೇಳಿರುವುದು ತರ್ಕಶುದ್ಧವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು'ವಿನಲ್ಲಿ ಕೂಡಾ ಈ ಶಾಸನವನ್ನು 'ಕೃಶಾ'–ಅಂದರೆ 'ಕೃತಕ ಶಾಸನ'–ಎಂದೇ ನಮೂದಿಸಲಾಗಿದೆ (ನೋಡಿ: ಕನ್ನಡ ನಿಘಂಟು, ಸಂ. ೬, ಕಸಾಪ, ಬೆಂಗಳೂರು, ೧೯೯೦, ಪು. ೫೭೮೬).

ಗಂಗರ ಕಾಲದವೆನ್ನುವ ಅನೇಕ ತಾಮ್ರಶಾಸನಗಳು, ತರುವಾಯದ ಕಾಲದಲ್ಲಿ ಕೃತಕವಾಗಿ ಸೃಷ್ಟಿಯಾದವು ಎಂಬುದು ಈಗಾಗಲೇ ತಿಳಿದ ಸಂಗತಿ. ಅಂಥ ಕೃತಕ ಶಾಸನ ಗಳಲ್ಲಿ ಇದೂ ಒಂದು, ಅಷ್ಟೆ. ಗಂಗರ ಕಾಲದ ತಾಮ್ರ ಶಾಸನ ಗಳ ಪರಿಚಯವಿದ್ದ, ಸಂಸ್ಕೃತ ಪದಪುಂಜಗಳ ಬಗ್ಗೆ ಅಷ್ಟಿಷ್ಟು ಬಲ್ಲ, ಆದರೆ, ಪೂರ್ವದ ಹಳಗನ್ನಡದ ಬಗ್ಗೆ ಸರಿಯಾಗಿ ತಿಳಿಯದ ಮಧ್ಯಮ ದರ್ಜೆಯ ಬುದ್ಧಿವಂತನೊಬ್ಬ ಈ ತಾಮ್ರಶಾಸನವನ್ನು ಸೃಷ್ಟಿಸಿಕೊಟ್ಟಿದ್ದಾನೆ–ಎಂದು ಹೇಳಲೇ ಬೇಕಾಗಿದೆ.

ಈ ಶಾಸನದ ಭಾಷೆ, ಲಿಪಿ, ಕಾಲವಿವರ ಇತ್ಯಾದಿಗಳ ಬಗ್ಗೆ ಸರಿಯಾಗಿ ತಿಳಿಯದೆ ಇದು ಹಲ್ಮಿಡಿ ಶಾಸನಕ್ಕಿಂತ ಹಿಂದಿನದು, ಕನ್ನಡದ ಮೊದಲ ಶಾಸನ–ಎಂದೆಲ್ಲಾ ಡಾ. ಶೆಟ್ಟರ್ ಅವರು ಹಠದಿಂದ ಹೇಳುತ್ತ ಹೋಗಿರುವುದಂತೂ ವಿಷಾದಕರ ಎಂದು ಹೇಳಲೇಬೇಕು. ಬಿ.ಎಲ್.ರೈಸ್ ಅವರ ಹೆಸರೆತ್ತಿ ಡಾ. ಶೆಟ್ಟರ್ ಹೇಳಿರುವ ಇನ್ನೊಂದು ಮಾತು ಕೂಡಾ ತುಂಬ ವಿಚಿತ್ರವಾಗಿದೆ. ರೈಸ್ ಅವರು ಹಲ್ಮಿಡಿ ಶಾಸನದ ಬಗ್ಗೆ ಏನನ್ನೂ ಹೇಳಿಲ್ಲ. ಏಕೆಂದರೆ, ಅವರ ಕಾಲದಲ್ಲಿ ಆ ಶಾಸನ ಇನ್ನೂ ಪತ್ತೆಯಾಗಿರಲಿಲ್ಲ. ಅದು ಪತ್ತೆಯಾದದ್ದು ೧೯೩೬ರಲ್ಲಿ, ಡಾ. ಎಂ.ಎಚ್. ಕೃಷ್ಣ ಅವರ ಕಾಲದಲ್ಲಿ. ಹಾಗಿರುವಾಗ ಡಾ. ಶೆಟ್ಟರ್ ಅವರು **"ಹಲ್ಮಿಡಿಯಲ್ಲಿ ಕನ್ನಡ ಪ್ರವೇಶಿಸುವುದಕ್ಕಿಂತ ಮುಂಚೆಯೇ ತಗರ್ತಿ (ಕ್ರಿ.ಶ. ೩೪೬) ಯಲ್ಲಿ ಕನ್ನಡದ ಶಾಸನವನ್ನು ಬರೆಸಲಾಗಿತ್ತೆಂಬ ಎಪಿಗ್ರಾಫಿಯ ಕರ್ನಾಟಿಕದ ಸಂಪಾದಕರಾದ ಬಿ.ಎಲ್. ರೈಸ್ ಅವರ ಅಭಿಮತ ಇನ್ನೂ ಇತ್ಯರ್ಥವಾಗದೆ ಶತಮಾನಕ್ಕೂ ಹಿಂದೆ ಎಲ್ಲಿತ್ತೋ ಅಲ್ಲಿಯೇ ನಿಂತಿದೆ"** ಎಂಬ ಮಾತು ತುಂಬ ವಿಚಿತ್ರವಾಗಿ ಕಾಣುತ್ತದೆ. ಬಿ.ಎಲ್. ರೈಸ್ ಅವರು 'ಹಲ್ಮಿಡಿಯಲ್ಲಿ ಕನ್ನಡ ಪ್ರವೇಶಿಸುವುದಕ್ಕಿಂತ ಮುಂಚೆಯೇ ತಗರ್ತಿ (ಕ್ರಿ.ಶ. ೩೪೬) ಯಲ್ಲಿ ಕನ್ನಡದ ಶಾಸನವನ್ನು ಬರೆಸಲಾಗಿತ್ತು' ಎಂದು ನಿಜವಾಗಿ ಹೇಳಿದ್ದರೆ? ಅವರ ಆ ಅಭಿಮತ ಪ್ರಕಟವಾಗಿರು ವುದು ಎಲ್ಲಿ ಮತ್ತು ಯಾವಾಗ? ಇತ್ಯರ್ಥವಾಗದೆ ಉಳಿಯು ವಂತಾಗಲು ಅವರ ಆ ಅಭಿಮತಕ್ಕೆ ಬಂದ ಭಿನ್ನಾಭಿಪ್ರಾಯ ಗಳು ಯಾವುವು ಮತ್ತು ಯಾರವು?–ಇದಕ್ಕೆಲ್ಲಾ ಡಾ. ಶೆಟ್ಟರ್ ಅವರು ವಿವರಣೆ ಕೊಡುತ್ತಾರೆಯೆ?



**ಅಡಿಟಿಪ್ಪಣಿ**

೧. **ಮೈಲಾರಿ ೧೯೩೬**, ಸಂಖ್ಯೆ ೧೬.
೨. **ಇಂಡಿಯನ್ ಆಂಟಿಕ್ವೆರಿ, ಸಂ. ೭**, ಜುಲೈ ೧೮೭೮, ಬೊಂಬಾಯಿ. (ಇದರ ಪ್ರತಿ ತೆಗೆದು ಕೊಟ್ಟವರು ಶ್ರೀ ಸಿ.ಎಂ.ತಿಪ್ಪೇಸ್ವಾಮಿ ಅವರು).
೩. **ಎಪಿಗ್ರಾಫಿಯ ಕರ್ನಾಟಿಕ, ಸಂ. ೭**, ೯(ಸ) ಮತ್ತು ೧೨, ಸಂ: ಬಿ.ಎಲ್. ರೈಸ್. (ಈ ಸಂಪುಟ ನೀಡಿ ನೆರವಾದವರು ಶ್ರೀ ಝಡ್. ಮಹಮದ್ ಜಫ್ರುಲ್ಲಾ ಅವರು).
೪. **ಕರ್ನಾಟಕದ ಅರಸುಮನೆತನಗಳು– ಸಂ.** ೧, ನೆಲಮಂಗಲ ಲಕ್ಷ್ಮೀನಾರಾಯಣರಾವ್, ರಾ.ಸ್ವಾ. ಪಂಚಮುಖಿ, ಧಾರವಾಡ, ೨೦೦೮ (ಮೊದಲ ಮುದ್ರಣ ೧೯೪೬). (ಈ ಪುಸ್ತಕದಲ್ಲಿ ಬಂದಿರುವ ಹೇಳಿಕೆಯನ್ನು ಸೂಚಿಸಿ, ನಾನು ಕೋರಿದಂತೆ ಆ ಪುಸ್ತಕವನ್ನು ಜೆರಾಕ್ಸ್ ಮಾಡಿಸಿ ಕಳಿಸಿಕೊಟ್ಟವರು ಶ್ರೀ ಎಸ್.ಕಾರ್ತಿಕ್ ಅವರು).
೫. **ಹರತಿಸಿರಿ,** ಸಂ: ಲತೆ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.
೬. **ಸಂಕ್ರಮಣ– ಸಂಚಿಕೆ ಕ್ರಮಸಂಖ್ಯೆ ೪೯೧**; ಸಂಪುಟ ೪೮– ಸಂಚಿಕೆ ೦೩, ಮೇ–ಜೂನ್ ೨೦೧೩.
೭. **ಕರ್ನಾಟಕ ಗ್ರಾಮಸೂಚಿ,** ಸಂ: ಶ್ರೀನಿವಾಸ ರಿತ್ತಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.
೮. **ಕರ್ನಾಟಕದ ಪರಂಪರೆ– ಸಂ.** ೧, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು, ೧೯೭೦.
೯. **ಕಸಾಪ ಕನ್ನಡ ನಿಘಂಟು– ಸಂ. ೩ (೧೯೭೭) ಮತ್ತು ೬ (೧೯೯೦)**; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.




# ಜಾರ್ಜ್ ಎಂ. ಮೊರೇಸ್ ಸಂಪಾದಿತ ಕೆಳದಿ ಇತಿಹಾಸದ ಪೋರ್ಚುಗೀಸ್ ಪತ್ರಗಳು

**ಡಾ. ಕೆಳದಿ ಗುಂಡಾಜೋಯಿಸ್***

ಸೇಂಟ್ ಗ್ಸೇವಿಯರ್ಸ್ ಕಾಲೇಜಿನ ಇಂಡಿಯನ್ ಹಿಸ್ಟಾರಿಕಲ್ ಇನ್‌ಸ್ಟಿಟ್ಯೂಟ್ ಮುಖಾಂತರ ಪೋರ್ಚುಗೀಸ್ ಇತಿಹಾಸ ತಜ್ಞ ಜಾರ್ಜ್ ಎಂ. ಮೊರೇಸ್‌ರವರು ಕೆಳದಿ ಇತಿಹಾಸವನ್ನೊಳಗೊಂಡು "ಮಂಗಳೂರು" ಕೃತಿಯಲ್ಲಿ ಈ ದಾಖಲೆ ಕುರಿತು ನೂತನ ಬೆಳಕು ಚೆಲ್ಲಿದ್ದಾರೆ. ಏಷಿಯನ್ ಎಜುಕೇಷನ್ ಸರ್ವೀಸಸ್‌ನವರು ಪ್ರಕಟಿಸಿದ ಈ ಕೃತಿಯು ಕೆಳದಿ ಇತಿಹಾಸಕ್ಕೆ ಉತ್ತಮ ಆಕರ ಗ್ರಂಥವಾಗಿದೆ. ಹೆನ್ರಿ ಹೆರಾಸ್‌ರವರು

> This is the work of one of our Research students.
> It naturally supposes the guidance of the tuter as
> the apples of a garden suppose the gardeners care.
> But they are finally the fruits of the tree. So also is
> this work the fruit produced by Mr. George M. Moraes.
> He has learnt from his tuter how to collect materials,
> How to connect fact with each other, the discriminative
> use of athorities, the modern methods of composition.
> But the result is his own.

ಮೊರೇಸ್‌ರವರನ್ನು ಕುರಿತು ಮುನ್ನುಡಿಯಲ್ಲಿ ಹೀಗೆ ಉದ್ಗರಿಸಿದ್ದಾರೆ

## ಮೊರೇಸ್‌ರವರ ಲೇಖನಗಳು

೧. Wars of Venkatappa Nayaka

೨. Travels of Pietro Della valle ಕಡಲ ತೀರಾಧಿಪತಿಯಾದ ಕೆಳದಿ ಅರಸರನ್ನು 'ಕರ್ನಾಟಕದ ದೊರೆ' ಎಂಬುದಾಗಿ ದಾಖಲಿಸಿದ್ದಾರೆ.

೩. Decline of the portuguese Power – ಕೆಳದಿ ಅರಸರ ಆಡಳಿತದಲ್ಲಿ ಪೋರ್ಚುಗೀಸರ ಪ್ರಭಾವ ಇಳಿಮುಖವಾಗಿರುವುದನ್ನು ಸಂಶೋಧನಾತ್ಮಕವಾಗಿ ನಿರೂಪಿಸಿದ್ದಾರೆ. ಪೂರ್ವಾಗ್ರಹವಿಲ್ಲದ ಸಂಶೋಧನಾ ವಿಮರ್ಶಾತ್ಮಕ ವಿವರಣೆ ಗಮನಿಸುವಂತಹುದು. ಹೆನ್ರಿ ಹೆರಾಸ್‌ರವರೇ ನುಡಿದಂತೆ ಪೋರ್ಚುಗೀಸ್ ಹಾಗೂ ಕನ್ನಡ ಭಾಷಾ ಪರಿಚಯದ ಮೊರೇಸ್‌ರವರು ಸಂಶೋಧಿಸಿದ ಪೋರ್ಚುಗೀಸ್ ಪತ್ರಗಳಲ್ಲಿ ಕೆಳದಿ ಇತಿಹಾಸದ ಅಮೂಲ್ಯ ಸಂಗತಿಗಳು ಅಧ್ಯಯನಯೋಗ್ಯವಾಗಿವೆ. ಪೋರ್ಚುಗೀಸರು ಕನ್ನಡದ ಪತ್ರಗಳನ್ನು ತಮ್ಮ ಭಾಷೆಗೆ ಪರಿವರ್ತಿಸಿಕೊಂಡು ವ್ಯವಹರಿಸುತ್ತಿದ್ದುದು ಗಮನಾರ್ಹವಾಗಿದೆ. ಅಂತಹ ಹಲವಾರು ಪತ್ರಗಳನ್ನು ಯಥಾರೀತಿಯಲ್ಲಿ ನೀಡಲಾಗಿದೆ.

### Letter of the Portuguese Viceroy to the King Goa, 29th December 1616 An extract

O Rey do Banguel se conserua ainda contra o Vencatapanaique mas vajthe custando m grandes contias de dinhr q the manda, e antes to quer dar a elle que gastallo em se unir com nosco e pretende q o estado semetta em guerra com o vencatapa p se elle retirar, e ficar entao descanssadao deixandonos a guerra as costas : e este he o costume daquelles Negoros de que en tenho muita experiencia porque fui quatro ueses capitao mor de Malabar --

O Venkatapa corre bem con nosco e tambem se vay comtemporisando com elle por respeito da pimenta.

## ವಿಶೇಷ ವಿಷಯ

Banguel > ಬಂಗ > ಬಂಗರಾಜ್ಯ

Vencatapanaique > ಹಿರಿಯ ವೆಂಕಟಪ್ಪನಾಯಕ ಈತನ ಕಾಲ ಕ್ರಿ.ಶ. ೧೫೮೨–೧೬೨೯

* ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ-೫೭೭೪೦೧.

Vencatapa > ಅದೇ

Malabar > ಮಲೆಯಾಳ

Letter of the Portuguese Viceroy to the King

Goa, 29th November 1630 **( An extract)**

Nas uias das naos do anno passado dei comtta a V. mg do estado em que achara as fortallezas de Onor, Barcellor, Mangualor, & Cananor, que sao que V mg tem no canara, e mallauar, e como procurarase loguo reparassem; & em `Onor onde estanao dous lancos de muro e hun beluartte no ehao estao redificados, e em Barcellor nao so repairada a fortz mas fortifcada apouoacam, & em Mangualor se fez a obra que foi necessaria, & em cananor da mesma mancira conformie o engenheiro P massay Deixou ordenado a que mandei as fosse e Ver, E mandey cal, e dr para a obradesta de cananor nao parar, & no Cambolim se faz a forttalleza Nova Sao miguel para o que daqui Vay pedra & cal com muito trabalho, e com gram cuidado eston sobre estas fortallezas, & porque o que tem sucedido, hum Virabadarnaiqe & terce lenanttado, hum primo Sen, que sen avo tinha prezo ha mais de trinla annos pede largua Rellacao a faco emcarta particullar, & dou muy mindamente comta a V. Mg de tudo, Deus Guarde a cathollica E Real pessoa de V mg como a cristamdade ha mister, de Goa a 27 de nour de 1630.

Ibid., Moncoes do Reino No. 14, Ano de 1630; folio 3.

**ವಿಶೇಷ ವಿಷಯ**

27 de nour de 1630 > 27-11-1630

Comtta > ಕುಮಟ

Onor > ಹೊನ್ನಾವರ

Barcellor > ಬಸರೂರು

Cambolin > ಗಂಗೊಳ್ಳಿ

Mangalor > ಮಂಗಳೂರು

Cananor > ಕಣ್ಣಾನೂರು

Mallanar > ಮಲ್ಯರು (GSB)

Virabadarnaique > ವೀರಭದ್ರನಾಯಕ, ಈತನ ಕಾಲ : ೧೬೨೯ – ೧೬೪೬ AD

**An Instruction of the viceroy P.da Silva to the capitao mor of Kanara, Luis de cam de Souza**

Instruccao p o cap mor do canara luis de cam de Souza.

Depois de se ter feito o regimento que haueis de guardar na jornada q ora co o fauor de Deos fareis para aquella costa com a cafilla q para ella uaj; se offerecio esereuerme a Rainha de Banguel hua carta em que me pede fauor e ajuda contra EL Rey **Virabadranaiq** para poder recuperar o que elle the tinha tomado, e como nao conuem q a nenhum visinho se deixe de mostrar inda q com palaura (s) q mos tem de sua parte, para assy obrigar a todos a q. tenhao com o estado muy boa correspondencia the respondo q lenais ordem minha para a fauorecerdes no q ouuer lugar, mas porque conuem q disto nao seja por o (          ) se nao ressinta el Rey **Virabadranaiq**, vos ordeno q se esta Rainha vos mandar tartar nesta materia, the deis a entender q t (e) ndes ordem minha para a fauorecer no q the compri, dizyendo the m palauras de porem se vos pedir fauor contra **virabadranaiq** on qualquer outro Rey, vos escuzareis com boas resoes alugando mpossibilidades, e q como sois enuiado a carregar e dar guarda as cafilas vos nao podeis diuethir a voutra Cousa, mas de modo q a nao desconfieis nem the tireis de todo as esperancas de a apedardes e sempre co palauras geerais que vos nao obriguem, aduertindo q esta pratica e recados nao sejao por eserito, mas som de palaura per pessoas q nisso andarem, en estamateria e nas mais de semelhante callidade q se offerecerem entre os Reis do (Canara) q coma sabeis andao dinisos e em querras.

(I bid., Instruccoes, No I, 1630-1640; folio 98,)

**ವಿಶೇಷ ವಿಷಯ**

Virabadranaique > Virabadranaiq ವೀರಭದ್ರನಾಯಕ, ಕಾಲ : ೧೬೨೯ – ೧೬೪೬ AD (ಪೂರ್ವೋಕ್ತ), Banguel > ಬಂಗ (ಪಾಳೆಯಪಟ್ಟು)

* * *

**An article of the Treaty of peace between the Nayak of Ikery (and the Portuguese Viceroy)**

Copia dos apontamentos q fizerao os Gou res Autonio de Mello de castro e mel o corte Real de sampayo, sobre o ajustamento das ditas pazes.

Aos Christaos que vivem nas terras del Rey do Canara, he necesar que EL Rey do canara os oblique que obedecao nas conzas que tocao a

nossa ley aos pes que andarem no dito Reino, e que os Padres os posoao castigar naquillo que errarem contra a ley. Tambem somos informa Dos que alguns Bramanes obrigao aos christaos de hirem festijar a festa de seus pagodes com saluas de mosqueteria e outras couzas que nossa ley prohibe, Eassy El Rey do canara deue mandar que daquy por diante se nao faca, e os q fizerem mandalos castigar.

(Ibid., Pazes E Tratados No 1, Anno de 1571; folios - 58 -59)

ಇದು ರಾಮರಾಜ ನಾಯಕ ೧೫೭೧ – ೧೫೮೬ ಚಿಕ್ಕಸಂಕಣ್ಣನಾಯಕ ೧೫೭೨-೧೫೮೬ ಇವರ ಕಾಲವಾಗುತ್ತದೆ.

* * * *

(Letter of the 'Pradan' of Hyder Ali to the Portuguese Vieeroy 1769)

Tradnccao da carta de **Vencapaya Pradan** prim Ministro de Aydor Alykan, e prisidente do Ra do canara em que diz o sequinte.

Nobelissimo, e Exmo escolhido entre os Ilhustres da sua Nascao possudor d' alto lugar, e conservador da primorosa amizade, grandiso snor **D. Joao Jose de Mello** Gov or, e capm gnol d' India, etc.,

Eu **Venkapaya** Pradan com a devida veneracao, e cortezias de repetidos sallmos chego a sandor a vex. no logro da que possuo, e the peco que se sirva de ordenar para que se me comunique as boas novas de V.ec.

Vay expedido o honrado **Sada Siva camotin** dando concluido o negocio a satisfacao sobre o que vinha inviado, e com carta, e sagoate d' meu Am espero que V. Ex sesirva de as aceitar, Desejo quo a nomeacao do Feitor para **Managlor** seja na pessoa qualificada, pois da nossa parte nao ha de haver fatta a antigo estillo, em cuja attencao queira V. Ex. Permitir que a amizade cressa cada dia a mayor amento, Todaz as mais materias serao a V. ex prezento pelo que the expuzer o dito **camoty** com individuacao, a vista do que so me resta dizer que enviocopia para capitulacao conforme aqual sirvase de mandar feita a capitulacao e me conservar semprena sua graca sello piqueno.

Traduzida por mim **Anantha camotin** vaga Lingoa do estado da India. Secretaria 12 de Agosto de 1769 **Anantha comity vaga.**

**(Ibid., Pazes e Tratados No. 3, Ano de 1775 folios 242-243)**

**ವಿಶೇಷ ವಿಷಯ**

ಪ್ರಧಾನಿ ವೆಂಕಪ್ಪಯ್ಯ ಕೆಳದಿ ರಾಜ್ಯದ ತೃತೀಯ ರಾಜಧಾನಿ ಬಿದನೂರು, ನವಾಬ್ ಹೈದರನು ಕ್ರಿ.ಶ. ೧೭೬೩ರಲ್ಲಿ ಇದನ್ನು ಆಕ್ರಮಿಸಿಕೊಂಡು ಹೈದರ್‌ನಗರ ಎಂಬುದಾಗಿ ನಾಮಾಂಕಿತಗೊಳಿಸಿದನು. ೧೭೬೩ರ ನಂತರ ಶೇಕ್ ಅಯಾಜ್ ಅಧಿಪತಿಯಾದನು. ಹೈದರನ ಕಾಲದಲ್ಲಿ ಪ್ರಧಾನಿ ವೆಂಕಪ್ಪಯ್ಯನು ನಗರದ ದಿವಾನನಾಗಿದ್ದನು. ಈತನು ನಿರ್ಮಿಸಿದ ಶ್ರೀಪಂಚಮುಖಿ ಆಂಜನೇಯ ದೇವಾಲಯ ಈಗಲೂ ಹಳೇ ನಗರದಲ್ಲಿ ನೋಡಬಹುದು. ಪ್ರಧಾನಿ ವೆಂಕಪ್ಪಯ್ಯ ಕುರಿತ ಅಪ್ರಕಟಿತ ಓಲೆಗರಿ ಹಸ್ತ ಪ್ರತಿಯೊಂದೂ ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರದಲ್ಲಿದೆ. ವಿಶೇಷವಾಗಿ **'ವೆಂಕಾಮಾತ್ಯ'** ಎಂಬ ಹೆಸರುಳ್ಳ ಈತನು ಈ ಲೇಖಕರ ಹಿಂದಿನ ಪೀಳಿಗೆಗೆ ಸೇರಿದವನು.

De Aydar Aly Kan > The Hyder Ali Khan > ಹೈದರ್ ಆಲಿಖಾನ್

D. Joao Jose de Mello Gov or e capm-Gn al de India > Luis de Mello Governor (e capm) General the India. (Faria y. Souza -1, p.292 and 326) - P. No. 7 & 17

Mangalore, A Historical sketch.

Sada Siva camotin > ಸದಾಶಿವ ಕಮತಿ > ಸದಾಶಿವ ಕಾಮತ್

Mangalore > ಮಂಗಳೂರು

Camoty > ಕಮತಿ > ಕಾಮತ್

Anantha camotin > ಅನಂತ ಕಾಮತ್

Secretaria 12 de Agosto de 1769 > ಸೆಕ್ರೆಟರಿ the 12 August the 1769

**ಉಪಸಂಹಾರ**

ಪೋರ್ಚುಗೀಸ್ ಭಾಷಾತಜ್ಞ ಜಾರ್ಜ್ ಎಂ ಮೊರೇಸ್ ಹಾಗೂ ರೆವರೆಂಡ್ ಎಸ್.ಜೆ. ಹೆರಾಸ್‌ರವರು ಕೆಳದಿ ಇತಿಹಾಸ ಪ್ರೇಮಿಗಳಾಗಿದ್ದು ಈ ದಿಸೆಯಲ್ಲಿ ವಿನೂತನ ಸಂಶೋಧನೆ ಕೈಗೊಂಡು ಅಪ್ರಕಟಿತ ದಾಖಲೆಗಳನ್ನು ಬೆಳಕಿಗೆ ತಂದಿದ್ದಾರೆ. ಹಲವಾರು ಸಂಪುಟಗಳಷ್ಟು ಆಕರಗಳು ಅಡಗಿದ್ದು ಸಂಶೋಧನೆಗೆ ಕಾದು ಕುಳಿತಿವೆ. ಇಂತಹ ಅಧ್ಯಯನಾದಿಗಳಿಗೆ ನಾಂದಿ ಹಾಕಿದವರು ಗೋವಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ದಿ॥ ಡಾ॥ ಬಿ.ಎಸ್. ಶಾಸ್ತ್ರಿಯವರು, ಕರ್ನಾಟಕ ಹಾಗೂ ಕೆಳದಿ ಇತಿಹಾಸದಲ್ಲಿ ಅಮೂಲ್ಯ ಆಕರಗಳಿಂದ ಕೂಡಿದ ಇಂತಹ ಮೂಲ ಸಾಮಗ್ರಿಗಳನ್ನು ಪೂರ್ವಾಗ್ರಹ ಪೀಡಿತರಲ್ಲದ ತರುಣ ಸಂಶೋಧಕರು ಅಧ್ಯಯನ ಕೈಗೊಂಡಲ್ಲಿ ಮುಂದಿನ ಪೀಳಿಗೆಗೆ ದಾರಿ ದೀಪವಾಗುತ್ತದೆ.





# ಪಾವಗಡ ಪಾಳೆಪಟ್ಟಿನ ಗ್ರಾಮಗಳು: ಮೆಕೆಂಜಿ ದಾಖಲೆಯನ್ನಾಧರಿಸಿ

ಪ್ರೊ. ಪ್ರಸನ್ನ*

ಬ್ರಿಬ್ರಿಟಷರು ದೇಶೀಯ ಸಾಹಿತ್ಯ ಹಾಗೂ ಸಂಸ್ಕೃತಿಗಳ ಅರಿವನ್ನು ಪಡೆದುಕೊಳ್ಳಲು ವಾಸ್ತುಶಿಲ್ಪ, ಶಾಸನಗಳ ಅಧ್ಯಯನ, ಪ್ರಾಚೀನ ಗ್ರಂಥಗಳ ಶೋಧನೆ, ಶಬ್ದಕೋಶಗಳ ರಚನೆ ಮೊದಲಾದ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಹಲವು ರೀತಿಯಲ್ಲಿಯಶಸ್ಸನ್ನು ಸಾಧಿಸಿದ್ದರು. ಅವರಲ್ಲಿ ಕ್ರಿಸ್ತಶಕ ೧೭೫೪–೧೮೨೧ ರವರೆಗೆ ಜೀವಿಸಿದ್ದ ಕರ್ನಲ್ ಮೆಕೆಂಜಿ ಯವರು ಒಬ್ಬರು. ಅವರು ಹುಟ್ಟಿದ್ದು ಸ್ಕಾಟೆಂಡ್‌ನ ಲೂಯಿ ದ್ವೀಪದಲ್ಲಿ, ತಂದೆ ಮಾರ್ಡೋಕ ಮೆಕೆಂಜಿ, ತಾಯಿ ಬರ್ಬರ್ ಮೆಕೆಂಜಿ, ಫ್ರಾನ್ಸಿಸ್ ಎಂಬುವವನ ಸಲಹೆಯಂತೆ ಗಣಿತಕ್ಕೆ ಸಂಬಂಧಪಟ್ಟ ವಿಷಯವನ್ನು ಸಂಗ್ರಹಿಸಲು ಕ್ರಿ.ಶ. ೧೭೮೩ ರಲ್ಲಿ ಭಾರತಕ್ಕೆ ಬಂದನು. ಇವನನ್ನು ಕಳುಹಿಸಿಕೊಟ್ಟ ಫ್ರಾನ್ಸಿಸ್ ಕೆಲವೆ ದಿನಗಳಲ್ಲಿ ಮರಣ ಹೊಂದಿದ ಮೇಲೆ ಮೆಕೆಂಜಿಯು ಮದ್ರಾಸಿನಲ್ಲಿ ಈಸ್ಟ್‌ಇಂಡಿಯಾ ಕಂಪನಿಯಲ್ಲಿ ಕೆಲಸಕ್ಕೆ ಸೇರಿ ಕರ್ನಲ್ ಹುದ್ದೆಯವರೆಗೂ ಬಡ್ತಿ ಪಡೆದನು. ಕ್ರಿ. ಶ. ೧೮೨೧ ಮೇ ೮ರಂದು ಕಲ್ಕತ್ತಾದ ತನ್ನ ಮನೆಯಲ್ಲಿ ಮರಣ ಹೊಂದಿದನು. ಈ ಅವಧಿಯಲ್ಲಿ ಈತನು ಸೈನ್ಯದ ಕೆಲಸದ ಜೊತೆಗೆ ಇತಿಹಾಸಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯವನ್ನು ಮಾಡಿ ಮಾಹಿತಿಯನ್ನು ಸಂಗ್ರಹಿಸಿದ. ಆ ಕೆಲಸದಲ್ಲಿ ಆತನಿಗೆ ನೆರವಾದವರೆಂದರೆ ಕಾವಲಿ ಬೋರಯ್ಯ, ಆತನ ತಮ್ಮ ಲಕ್ಷ್ಮಯ್ಯ ಮತ್ತು ಹುಲಿಗುಡ್ಡ ಮಲ್ಲಯ್ಯ, ಅಲ್ಲದೆ ಸ್ಥಳೀಯ ವ್ಯಕ್ತಿಗಳು. ಇದರ ಫಲವಾಗಿ ಆತನು ೧೫೬೮ ಹಸ್ತಪ್ರತಿಗಳನ್ನು, ೮೦೭೦ ಶಾಸನ ನಕಲು, ೭೯ ನಕ್ಷೆ, ೨೬೩೦ ಚಿತ್ರ, ೬೨೧೮ ನಾಣ್ಯ, ೧೦೬ ಪ್ರಾಚೀನ ವಿಗ್ರಹಗಳನ್ನು ಸಂಗ್ರಹಿಸಿದ್ದನು. ಈ ಸಂಗ್ರಹಕ್ಕಾಗಿ ಆತ ಖರ್ಚು ಮಾಡಿದ ಹಣ ೧೫೦೦೦ ಪೌಂಡ್. ಮೆಕೆಂಜಿ ಮರಣ ನಂತರ ಬ್ರಿಟಿಷ್ ಸರ್ಕಾರ ಆತನ ಹೆಂಡತಿಯಿಂದ ೧೦೦೦೦ ಪೌಂಡ್‌ಗೆ ಅವೆಲ್ಲವು ಗಳನ್ನು ಖರೀದಿಸಿ ೧೮೨೫ರಲ್ಲಿ ಇಂಗ್ಲೆಂಡಿಗೆ ಕಳುಹಿಸಿತು. ಈಗ ವಿಕ್ಟೋರಿಯಾ ವಸ್ತು ಸಂಗ್ರಹಾಲಯ ಮತ್ತು ಇಂಡಿಯಾ ಆಫೀಸ್ ಲೈಬ್ರರಿಗಳಲ್ಲಿವೆ.

ಆ ಸಂಗ್ರಾಹಾಲಯದಲ್ಲಿ ಪಾವಗಡ ಪಾಳೇಗಾರರಿಗೆ ಸಂಬಂಧಿಸಿದ ದಾಖಲೆಯೂ ಇದೆ. ಅದು Paughar ಎಂಬ ಹೆಸರಿನಲ್ಲಿದ್ದು ಅದರಲ್ಲಿ ಆರು ಉಪ ವಿಭಾಗಗಳಿವೆ. ಅದರಲ್ಲಿ "Historical Account of Paughar District and of the Poligar`s thereof at Paughar from respectable native Authority on November 1801" ಮುಖ್ಯವಾಗಿದೆ. ಇದರಲ್ಲಿ ಅವನು ಈ ವಿವರಗಳನ್ನು ಸರ್ಕಾರಿ ಅಧಿಕಾರಿಗಳಾದ ಅಮಲ್ದಾರ್ ತಿಮ್ಮರಸಯ್ಯ, ಶಿರಸ್ತೆದಾರರಾದ ಲಕ್ಷ್ಮಿನರಸಯ್ಯ ಮತ್ತು ತಿರುಮಲರಾವ್‌ರವರಿಂದ ಪಡೆದುಕೊಂಡಿದ್ದೇನೆಂದು ಹೇಳಿದ್ದಾನೆ. ಇವುಗಳನ್ನೆಲ್ಲಾ ಇಂಗ್ಲಿಷ್ ಭಾಷೆಯಲ್ಲಿ ಬರೆಯಲಾಗಿದ್ದು, ಈ ದಾಖಲೆಯು ಅವರ ಮನೆತನದ ರಾಜಕೀಯ ಚರಿತ್ರೆ ಹಾಗೂ ಇತರೆ ವಿವರವನ್ನು ಒಳಗೊಂಡಿದೆ. ಆದರೆ ಈ ದಾಖಲೆಯನ್ನು ಆಧರಿಸಿ ಡಾ. ಡಿ. ಎನ್. ಯೋಗೀಶ್ವರಪ್ಪನವರು ಪಾವಗಡ ಪಾಳೆಪಟ್ಟಿನ ರಾಜಕೀಯ ಚರಿತ್ರೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿದ್ದಾರೆ.[೧] ಆದರೆ ಅವರು ದಾಖಲೆಯಲ್ಲಿರುವ ಪಾಳೆಪಟ್ಟಿಗೆ ಸೇರಿದ ಗ್ರಾಮಗಳ ವಿವರವನ್ನು ಕೈಬಿಟ್ಟಿರುವುದು ಕಂಡು ಬಂದಿರುತ್ತದೆ. ಆದ್ದರಿಂದ ನಾನು ಅದೇ ದಾಖಲೆ ಯನ್ನಾಧರಿಸಿ ಪಾವಗಡ ಪಾಳೇಪಟ್ಟಿಗೆ ಸೇರಿಕೊಂಡಿದ್ದ ಗ್ರಾಮಗಳ ಮತ್ತು ಆ ಗ್ರಾಮಗಳ ಕೇಂದ್ರಗಳ ವಿವರಗಳನ್ನು ನೀಡಲು ಪ್ರಯತ್ನಿಸಿದ್ದೇನೆ.

ಪಾವಗಡ ಪಾಳೇಪಟ್ಟು ೧೬ನೇ ಶತವಮಾನದ ಕೊನೆಯಲ್ಲಿ ಆರಂಭವಾಗಿ ೧೮ ನೇ ಶತಮಾನದ ಕೊನೆಯಲ್ಲಿ ಹೈದರ್‌ಅಲಿಯಿಂದ ಅಂತ್ಯಗೊಂಡಿತು.[೨] ಅಂದು ಈ ಪಾಳೇಪಟ್ಟಿನ ಸುತ್ತ ಪಶ್ಚಿಮದಲ್ಲಿ ನಿಡಗಲ್ ನಾಯಕರರಾಜ್ಯ, ದಕ್ಷಿಣದಲ್ಲಿ ಮಡಕಸಿರ ನಾಯಕರರಾಜ್ಯ, ಮಿಡಿಗೇಶಿ ಅರಸರು, ಪೂರ್ವದಲ್ಲಿ ದೊಡ್ಡಬಳ್ಳಾಪುರ ನಾಯಕರರಾಜ್ಯ, ಉತ್ತರದಲ್ಲಿ ಚಿತ್ರದುರ್ಗ ಹಾಗೂ ನಾಯಕನಹಟ್ಟಿ ಮತ್ತು ರಾಯದುರ್ಗ ಪಾಳೇಪಟ್ಟುಗಳಿಂದ ಸುತ್ತುವರೆದಿತ್ತು. ಇಂತಹ ಸನ್ನಿವೇಶದಲ್ಲಿ ಅವರಿಗೆ ರಾಜ್ಯ ವಿಸ್ತಾರ ಮಾಡುವುದಕ್ಕೆ ಹಾಗೂ ಇದ್ದ

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ತುಮಕೂರು.

ರಾಜ್ಯವನ್ನು ಉಳಿಸಿಕೊಳ್ಳುವುದಕ್ಕೆ ತಮ್ಮ ಸೀಮಿತ ಆದಾಯದಲ್ಲಿ ಹೋರಾಟ ನಡೆಸಬೇಕಿತ್ತು. ಆದರೂ ಈ ಮನೆತನ ಸುಮಾರು ೧೭೫ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದು ಅಲ್ಲಿನ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿರುವುದು ಕಂಡುಬರುತ್ತದೆ. ಹೈದರ್ ಅಲಿಯು ಈ ಪ್ರದೇಶವನ್ನು ಅಲ್ಲಿನ ನಾಯಕರಿಂದ ಗೆದ್ದುಕೊಂಡ ಮೇಲೆ ನಿಡಗಲ್ ಪ್ರದೇಶದಿಂದ ಕೆಲವಾರು ಹಳ್ಳಿಗಳನ್ನು ಬೇರ್ಪಡಿಸಿ ಅವುಗಳನ್ನು ಪಾವಗಡಕ್ಕೆ ಸೇರಿಸಿ ವಿಸ್ತಾರ ಮಾಡಿದ್ದನು. ಈ ಪ್ರದೇಶ ಟಿಪ್ಪುವಿಗೆ ಹಸ್ತಾಂತರವಾದ ಮೇಲೆ ಅವನು ಪಾವಗಡಕ್ಕೆ ಆಗಮಿಸಿ ಅದರ ಆದಾಯವನ್ನು ಪರಿಶೀಲಿಸಿ ಪಾವಗಡದ ನೆರೆಯ ದೊಡ್ಡ ಪ್ರದೇಶಗಳಾಗಿದ್ದ ರಾಯದುರ್ಗ ಮತ್ತು ಪೆನುಗೊಂಡ ದಿಂದ ಕೆಲವು ಊರುಗಳನ್ನು ಪಾವಗಡಕ್ಕೆ ಸೇರಿಸುವ ಆದೇಶ ಹೊರಡಿಸಿದ್ದನು. ಆ ಆದೇಶದ ಪ್ರಕಾರ ಪೆನುಗೊಂಡದಿಂದ ರೊದ್ದಂ, ತರಫಿನ ಮತ್ತು ರಾಯದುರ್ಗ ಪ್ರದೇಶದ ತಿರುಮಲೈ, ತರಫ್‌ನ ಕೆಲವಾರು ಹಳ್ಳಿಗಳನ್ನು ಪಾವಗಡಕ್ಕೆ ಸೇರಿಸ ಲಾಯಿತು.[೩] ಇದರಿಂದ ಪಾವಗಡ ಪ್ರಾಂತ್ಯದ ಆದಾಯ ಹೆಚ್ಚಾಯಿತು. ಒಟ್ಟಾರೆ ಪಾವಗಡವು ಟಿಪ್ಪುವಿನ ಕಾಲದಲ್ಲಿ ಜಿಲ್ಲೆಯಾಗಿ ಮಾರ್ಪಟ್ಟಿತ್ತು. ಈ ಜಿಲ್ಲೆಯನ್ನು ೫ ತರಫ್‌ಗಳನ್ನಾಗಿ (ಹೋಬಳಿ) ವಿಂಗಡಿಸಲಾಯಿತು. ಅವುಗಳೆಂದರೆ

೧. ಕನ್ನಮೇಡಿ  ೨. ಪಾವಗಡ

೩. ರಾಯಚೆರ್ಲು ೪. ಗುಮ್ಮಘಟ್ಟ ೫. ಕಾಮನ ದುರ್ಗ

ಕ್ರಿ. ಶ. ೧೮೦೧ರ ಮೆಕೆಂಜಿದಾಖಲೆಯ ಪ್ರಕಾರ ಈ ಜಿಲ್ಲೆಯಲ್ಲಿ ಅಂದು ಒಟ್ಟು ೧೧೩ ಗ್ರಾಮಗಳಿದ್ದು, ಈ ರೀತಿ ಕೆಳಗಿನ ಟೇಬಲ್‌ನಲ್ಲಿ ತೋರಿಸಲಾಗಿದೆ.

ಹೀಗೆ ಪಾವಗಡ ನಾಯಕರ ರಾಜ್ಯವನ್ನು ಹೈದಾರಲಿ, ಟಿಪ್ಪು ಸುಲ್ತಾನರು ಗೆದ್ದುಕೊಂಡಾಗ ಅದು ಚಿಕ್ಕ ಪ್ರಾಂತ್ಯವಾದ್ದು ದ್ದರಿಂದ ಅದನ್ನು ವಿಶಾಲ ಮಾಡುವ ಉದ್ದೇಶದಿಂದ ಕೆಲಭಾಗಗಳನ್ನು ನೆರೆಯ ತರಫ್‌ನಿಂದ ಇದಕ್ಕೆ ಸೇರಿಸ ಲಾಯಿತು. ಆದ್ದರಿಂದ ಈ ದಾಖಲೆಯ ಆಧಾರದ ಮೇಲೆ ಪರೋಕ್ಷವಾಗಿ ಹೇಳುವುದಾದರೆ ಪಾವಗಡ ನಾಯಕರ ಕಾಲದಲ್ಲಿ ಅವರ ರಾಜ್ಯವು ಪ್ರಾಯಶಃ ೧೮೦೧ರಲ್ಲಿದ್ದಷ್ಟು ವಿಶಾಲವಾಗಿರಲಿಲ್ಲ. ಆದಾಗ್ಯೂ ರಾಜ್ಯದ ಏರಿಳಿತದ ಸಂದರ್ಭದಲ್ಲಿ ಇದರಷ್ಟೆ ಇದ್ದಿರಬಹುದು ಎಂದು ಊಹಿಸ ಬಹುದು. ಇಂತಹ ರಾಜ್ಯದಲ್ಲಿದ್ದ ಗ್ರಾಮಗಳ ಹೆಸರನ್ನು ಮೆಕೆಂಜಿಯು ದಾಖಲಿಸಿದ್ದಾನೆ. ಆ ಹಳ್ಳಿಗಳಲ್ಲಿ ಇಂದು ಅನೇಕವು ನಶಿಸಿಹೋಗಿವೆ. ತರಫ್‌ಗಳ ಆಡಳಿತದ ಕೇಂದ್ರವಾಗಿದ್ದ ಕನ್ನಮೇಡಿ, ಗುಮ್ಮಘಟ್ಟ ಇಂದು ಕಸಬ ಪಾವಗಡ ಹೋಬಳಿಗೆ ಸೇರಿಸಿದ್ದಾರೆ. ರಾಯಚೆರ್ಲು ಮತ್ತು ಕಾಮನದುರ್ಗ ನಾಗಲಮಡಿಕೆ ಹೋಬಳಿಗೆ ಸೇರಿವೆ. ಆದ್ದರಿಂದಅಂದು ಪಾವಗಡ ನಾಯಕರ ರಾಜ್ಯವು ಇಂದಿನ ಕಸಬ ಪಾವಗಡ ಮತ್ತು ನಾಗಲಮಡಿಕೆ ಹೋಬಳಿಗಳನ್ನು ಸೇರಿಸಿದ್ದಾರೆ. ಎಷ್ಟು ವಿಶಾಲವಾಗಿತ್ತೋ ಅಷ್ಟು ಮಾತ್ರ ವಿಸ್ತಾರವಾಗಿತ್ತೆಂದು ಹೇಳಬಹುದು. ಆದರೆ ಇಂದಿನ ಪಾವಗಡ ತಾಲ್ಲೂಕಿನ ಅರ್ಧಭಾಗ ನಾಯಕರ ಅಧೀನದಲ್ಲಿತ್ತು ಎನ್ನಬಹುದು. ಅವರ ರಾಜ್ಯದಲ್ಲಿ ಅಂದು ಸೇರಿಕೊಂಡಿದ್ದ ಗ್ರಾಮಗಳ ಹೆಸರನ್ನು ಮೆಕೆಂಜಿಯು ೧೮೦೧ರ ಅಕ್ಟೋಬರ್ ನಲ್ಲಿ ಅಮಲ್ದಾರ್ ತಿಮ್ಮರಸಯ್ಯ ಮತ್ತು ಶಿರಸ್ತೇದಾರರಾದ ಲಕ್ಷ್ಮಿನರಸಯ್ಯ ಹಾಗೂ ತಿರುಮಲರಾವ್‌ರವರಿಂದ ದಾಖಲಿಸಿಕೊಂಡಿದ್ದಾನೆ. ಅದರ ಸಂಗ್ರಹವನ್ನು ನೀಡಲಾಗಿದೆ.

### ತರಫ್‌ಕನ್ನಮೇಡಿ ಸೇರಿದ ಗ್ರಾಮಗಳು

| | |
|---|---|
| ೧. ಕಸಬ ಕನ್ನಮೇಡಿ | ೨. ವೀರಲಗೊಂದಿ |
| ೩. ಹುಲ್ಲಕನ್ನಮೇಡಿ | ೪. ವೋಬನಹಳ್ಳಿ |
| ೫. ಅವ್ವಲಕಡೇರಹಳ್ಳಿ | ೬. ಸುಂಕಾಪುರ |
| ೭. ಕುರುಬರಪಲ್ಲಿ | ೮. ಬ್ಯಾಡನೂರು |
| ೯. ಮಾದೇಬಂಡ | ೧೦. ಹೊಸಕೋಟೆ |
| ೧೧. ಬಂಗಾರನಾಯ್ಕನ ಬೆಟ್ಟ | ೧೨. ಕೋಲಬಂಡೆ |
| ೧೩. ಬೊಮತ್ತಪಲ್ಲಿ | ೧೪. ಕಿಲ್ಲಾರಹಳ್ಳಿ |
| ೧೫. ಚೇಲಗಾನಹಳ್ಳಿ | ೧೬. ಕೃಷ್ಣಗಿರಿ |
| ೧೭. ಕಡೇರಹಳ್ಳಿ | ೧೮. ಗುಂಡ್ಲಪಲ್ಲಿ |

| ಗ್ರಾಮ | ಕನ್ನಮೇಡಿ | ಪಾವಗಡ | ರಾಯಚೆರ್ಲು | ಗುಮ್ಮಘಟ್ಟ | ಕಾಮನದುರ್ಗ | ಒಟ್ಟು |
|---|---|---|---|---|---|---|
| ಅಸಲಿ | ೦೯ | ೨೧ | ೦೪ | ೦೮ | ೦೩ | ೪೫ |
| ದಖಲಿ | ೧೭ | ೧೮ | ೧೨ | ೧೧ | ೧೦ | ೬೮ |
| ವಾಸದಊರು | ೨೦ | ೩೨ | ೧೩ | ೧೫ | ೧೩ | ೯೩ |
| ನಾಶ | ೦೬ | ೦೭ | ೦೩ | ೦೪ | – | ೨೦ |
| ಒಟ್ಟು | ೨೬ | ೩೯ | ೧೬ | ೧೯ | ೧೩ | ೧೧೩ |

ಮೆಕೆಂಜಿ ಅಪ್ರಕಟಿತ ಇಂಗ್ಲಿಷ್ ದಾಖಲೆ ೧೮೦೧

೧೯. ನಲಿಗಾನಹಳ್ಳಿ
೨೦. ಬಾಲಂಪಲ್ಲಿ
೨೧. ಗುಂಡಾರ್ಲಹಳ್ಳಿ
೨೨. ರಾಜವಂತ್ರಿ
೨೩. ಚಿಕ್ಕನಾಯಕನಹಳ್ಳಿ
೨೪. ಪಾಲಕುಂಟೆ
೨೫. ಗೊರುಸು ಮಮೇಡಿ
೨೬. ಸುಲ್ತಾನಪುರ

**ತರಫ್ ಪಾವಗಡ**

೧. ಕಸಬ ಪಾವಗಡ
೨. ರಂಗಧಾಮನಹಳ್ಳಿ
೩. ಅದ್ದೂಲಪಲ್ಲಿ
೪. ಸಿಂಗಾರೆಡ್ಡಿಹಳ್ಳಿ
೫. ಶ್ರೀರಂಗಾಪುರಂ
೬. ನರಸಿಂನಹಳ್ಳಿ
೭. ಕಂಬಾಲಹಳ್ಳಿ
೮. ಬುಗುಡೂರು
೯. ಗ್ಯಾದಿಗುಂಟೆ
೧೦. ಬೈರಾಪುರ
೧೧. ವಡ್ರಾವು
೧೨. ಕಡಂಗ್ಲಗುಂಟೆ
೧೩. ಜಾಜುರಾಯನ ಹಳ್ಳಿ
೧೪. ಕೊಮಾರ್ಲಪಳ್ಳಿ
೧೫. ಐಯಾರಪಲ್ಲಿ
೧೬. ದಸರಮ್ಮನ ಹಳ್ಳಿ
೧೭. ಹೊಸಹಳ್ಳಿ
೧೮. ಕಣಕಾಲಬಂಡ
೧೯. ಗಣೇಶಪುರ
೨೦. ವುಪ್ಪಾರಹಳ್ಳಿ
೨೧. ತಿಮ್ಮನಾಯಕನಪೇಟೆ
೨೨. ಪನ್ನಸಮುದ್ರ
೨೩. ತೇಟಿಮಕುಲಪಲ್ಲಿ
೨೪. ನಾಗಲಮಡಿಕೆ
೨೫. ಸುಬ್ಬರಾಯನಹಳ್ಳಿ
೨೬. ತಿಮ್ಮಮ್ಮನಹಳ್ಳಿ
೨೭. ತೆಪ್ಪಗಾನದೊಡ್ಡಿ
೨೮. ಪೆಂಡ್ಲಜೀವಿ
೨೯. ರಾಗೀಗುಂಟ
೩೦. ಕೊಡಮಡುಗು
೩೧. ಕಡಪಾಲಕೆರೆ
೩೨. ಸುಂಕಾರ್ಲಕುಂಟೆ
೩೩. ಅಚ್ಚಮಚಮ್ಮನಹಳ್ಳಿ
೩೪. ಕಣಮೇಹಳ್ಳಿ
೩೫. ಪಳವಳ್ಳಿ
೩೬. ಈರಮ್ಮನಹಳ್ಳಿ
೩೭. ಗಂಗಸಾಗರ
೩೮. ತಿಮ್ಮಾಪುರ
೩೯. ಗರುಡಾಪುರ

**ತರಫ್‌ರಾಯಚೆರ್ಲು**

೧. ಕಸಬಾ ರಾಯಚೆರ್ಲು
೨. ಬಳ್ಳಸಮುದ್ರಂ
೩. ಅಚ್ಚಂಪಲ್ಲಿ
೪. ಪೆದ್ದನಾಯ್ಕನಪಲ್ಲಿ
೫. ಸಂತೇಪುರಂ
೬. ಅಪ್ಪಾಜಿಪಲ್ಲಿ
೭. ರೆಡ್ಡಿವಾರಪಲ್ಲಿ
೮. ಗೊಲ್ಲಪಲ್ಲಿ
೯. ವಳ್ಳೂರು
೧೦. ಕೇತಗಾನಚೆರ್ಲ
೧೧. ಪಸೂಲಗುಂಡಂಪಲ್ಲಿ
೧೨. ತಿರುಮಣಿ
೧೩. ರ್‍ಯಾಪ್ಪೆ
೧೪. ನಾಗಪಲ್ಲಿ
೧೫. ಹುಸೇನ್‌ಪುರ

**ತರಫ್‌ಗುಮ್ಮಘಟ್ಟ**

೧. ಕಸಬಾ ಗುಮ್ಮಘಟ್ಟ
೨. ಬ್ಯಾಡರಹಳ್ಳಿ
೩. ತಿಮ್ಮನಹಳ್ಳಿ
೪. ಗಂಗಾರಸಂ
೫. ವಿರುಪಸಂದ್ರ
೬. ಗೌಡೇಟಿ
೭. ಬಳಪದಹಳ್ಳಿ
೮. ಬೆನಕನಹಳ್ಳಿ
೯. ಚೌಲಾಪುರ
೧೦.ಮುರಾರಿರಾಯನಹಳ್ಳಿ
೧೧. ಅಕ್ಕಮ್ಮನಹಳ್ಳಿ
೧೨. ಚಿನ್ನಮರೆಡ್ಡಿಹಳ್ಳಿ
೧೩. ನಾರಕುಂಟೆ
೧೪. ಕನಕಾಪುರ
೧೫. ಗೊಲ್ಲಹಳ್ಳಿ
೧೬. ಮಾಚರಾಜಹಳ್ಳಿ
೧೭. ನೇರದಗುಂಟೆ
೧೮. ವೆಂಕಟಾಪುರ
೧೯. ದೊಮ್ಮತಮರಿ

**ತರಫ್‌ಕಾಮನದುರ್ಗ**

೧. ಕಸಬಾ ರಾಮಪೇಟೆ
೨. ಬೂಪೂರು
೩. ಮೀನಗುಂಟೆಪಲ್ಲಿ
೪. ಕೆಂಚಗಾನಹಳ್ಳಿ
೫. ಸೂಲನಾಯ್ಕನಪಲ್ಲಿ
೬.ಹನುಮನಾಯ್ಕನಕೊಂಡ
೭. ಮದನಪಲ್ಲಿ
೮. ಕೊಂಡಕಿಂಡಪಲ್ಲಿ
೯. ಬೊಮ್ಮಗಾನಪಲ್ಲಿ
೧೦. ದಳವಾಯಿಹಳ್ಳಿ
೧೧. ಬುಡ್ಡಾರೆಡ್ಡಿಪಲ್ಲಿ
೧೨. ಯರ್‍ರಂಪಲ್ಲಿ
೧೩. ಕೇತಗಾನಪೆಚರ್ಲ

ಈ ಮೇಲಿನ ಗ್ರಾಮ ನಾಮಗಳನ್ನು ಇಂದು ಪರಿಶೀಲಿಸಿದಾಗ ಒಟ್ಟು ೧೧೩ ಗ್ರಾಮಗಳಲ್ಲಿ ೪೬ ಗ್ರಾಮಗಳು[4] ನಶಿಸಿಹೋಗಿರುವುದು ಕಂಡುಬರುತ್ತದೆ. ಒಟ್ಟಾರೆ ಈ ದಾಖಲೆಯಿಂದ ಪಾವಗಡ ಪಾಳೇಪಟ್ಟು ಕಡಿಮೆ ಆದಾಯವನ್ನು ಹೊಂದಿದ್ದರಿಂದ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಅದರ ಆದಾಯವನ್ನು ಹೆಚ್ಚಿಸಲು ನೆರೆಯ ಪಾಳೆಪಟ್ಟುಗಳಿಂದ ಆನೇಕ ಗ್ರಾಮಗಳನ್ನು ಸೇರಿಸಿ ಅದನ್ನು ವಿಶಾಲವಾಗಿ ಮಾಡಿದರು. ಪಾವಗಡ ತರಫ್‌ಯೆಂದು ಕರೆದಿದ್ದು ಸ್ಪಷ್ಟವಾಗುತ್ತದೆ.

## ಗ್ರಂಥಋಣ


೧. ಡಾ. ಡಿ.ಎನ್. ಯೋಗೀಶ್ವರಪ್ಪ ಕಲ್ಪಶೋಧ, ಪುಟ ೨೨೪–೨೪೨, ಪ್ರಗತಿ ಪ್ರಕಾಶನ, ಬೆಂಗಳೂರು, ೨೦೧೨.
೨. ಡಾ. ಡಿ.ಎನ್. ಯೋಗೀಶ್ವರಪ್ಪ ಕಲ್ಪಶೋಧ, ಪುಟ ೨೨೪–೨೪೨, ಪ್ರಗತಿ ಪ್ರಕಾಶನ, ಬೆಂಗಳೂರು, ೨೦೧೨.
೩. ಮೆಕೆಂಜಿಯವರ ಪ್ರಕಟಿತ ಆಂಗ್ಲ ಕೈಫಿಯತ್ತು, (೧೮೦೧).
೪. ಕರ್ನಾಟಕದ ಗ್ರಾಮಸೂಚಿ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.
List of villages in the Mysore State : Government of Mysore 1969.






# ‘ಹಂಡೆ’ ಪದದ ನಿಷ್ಪತ್ತಿ: ಶಾಸನ ಮತ್ತು ಕೈಫಿಯತ್ತು ಅನುಲಕ್ಷಿಸಿ

**ಸಂತೋಷ್‌ಕುಮಾರ್.ಜಿ.***

**‘ಹಂಡೆ’** ಎಂಬ ಪದವು ನೆಲಮೂಲ ಸಂಸ್ಕೃತಿ ಸೊಗಡಿನ ಅಚ್ಚಗನ್ನಡದ ಪದವಾಗಿ ‘ಹಂಡೆ’ ಪದದ ಅರ್ಥವನ್ನು ಗಮನಿಸಲಾಗಿ ಜನಪದರ ದಿನ ಬಳಕೆಯಲ್ಲಿ ‘ತಾಮ್ರದ ದೊಡ್ಡ ಪಾತ್ರೆ’, ತಾಮ್ರದ ದೊಡ್ಡ ಕೊಳಗ, ಅಥವಾ ಅಗಲವಾದ ಬಾಯುಳ್ಳ ಮಣ್ಣಿನ ಪಾತ್ರೆ, ಲೋಹದ ಪಾತ್ರೆ, ಬಿಂದಿಗೆ, ಎಂಬಿತ್ಯಾದಿ ಅರ್ಥಗಳನ್ನು ಒಳಗೊಂಡ ಪದವಾಗಿದೆ. (ಕನ್ನಡ ನಿಘಂಟು ೧ನೇ ಸಂಪುಟ, ಪುಟ ಸಂಖ್ಯೆ: ೨೮-೨೯)

ನಾಮ ಪದದೊಂದಿಗೆ ‘ಹಂಡೆ’ ಎಂದರೆ ಉಣ್ಣೆಯಿಂದ ಕಂಬಳಿ ನೇಯುವ ಕುರುಬ ಮತ್ತು ಗೋರಸ ಹೈನದ ವ್ಯವಹಾರಿಕ ಮನೆತನದಲ್ಲಿ ಬಳಸುವ ಪಾತ್ರೆಯಾಗಿದೆ. ಇಂಥ ಪದಗಳು ಪಶುಪಾಲನೆಯಿಂದ ಬಂದ ಪದವಾಗಿದೆ. ಇನ್ನೂ ‘ಹಂಡ’ ಎಂಬ ಪದವು ‘ಬಿಳಿ’ ಎಂಬ ಶಬ್ದವನ್ನು ಸೂಚಿಸುತ್ತದೆ. (ಕನ್ನಡ ನಿಘಂಟು ೧ನೇ ಸಂಪುಟ ಪುಟ ಸಂಖ್ಯೆ ೨೯) ‘ಹಂಡ’ ಅಂದರೆ ಹಾಲು ಬಿಳಿಯಾದ ದ್ರವ್ಯವಾಗಿದ್ದು, ಇದನ್ನು ಸಂಗ್ರಹಿಸುವ ಪಾತ್ರೆಗೆ ಹಂಡೆ ಎಂಬ ಹೆಸರು ಬಂದಿರುವ ಸಾಧ್ಯತೆಗಳಿರಬಹುದು.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಣೆ ಮಾಡಿರುವ ನಿಘಂಟು ೮ನೇ ಸಂಪುಟದಲ್ಲಿ ‘ಹಂಡೆ’ ಪದದ ನಿಷ್ಪತ್ತಿಯನ್ನು ಕುರಿತು.

> **“ನೀರು ತುಂಬುವುದೊಂದು ಹಂಡೆ,**
> **ಪ್ರತಿ ಮನೆಯ ಮುಂದೆ ಒಂದೊಂದು ಹಂಡೆಯು**
> **ತುಂಬಾ ಓಕಳಿ ಮಾಡಿಡುವ ಪದ್ಧತಿ**
> **ಹತ್ತು ಕೊಡದ ಹಂಡೇ ಒಬ್ಬನ ಎತ್ತಿ**

ಇಳಿಸುತ್ತಿದ್ದಿನಿ” ಎಂಬ ಅರ್ಥವನ್ನು ಕಾಣಬಹುದಾಗಿದೆ. **‘ಹಂಡೆ’** ತಾಮ್ರ ಲೋಹದಿಂದ ಮಾಡಿದ ನೀರು ತುಂಬುವ ದೊಡ್ಡ ಪಾತ್ರೆ, ಕಡಾಯಿ, ಅಥವಾ ದೊಡ್ಡ ತಪ್ಪಲೆಯಾಗಿದೆ.

ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಹೆಮ್ಮಡಗಿಯ ಕ್ರಿ.ಶ. ೧೧೮೨ರ ಶಾಸನ ಹಾಗೂ ಮುದನೂರಿನ ಕ್ರಿ.ಶ. ೧೧೨೯ರ ಶಾಸನಗಳಲ್ಲಿ ಹಂಡೆ ಅರಸರ ಬಗ್ಗೆ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧೮೨ರ ಹೆಮ್ಮಡಗಿ ಶಾಸನಗಳಲ್ಲಿ ಅರಸರ ವಂಶಾವಳಿಯ ಕಂಡುಬಂದಂತೆ ‘ಹೆಮ್ಮವಡಗಿ’ ಪ್ರಭು ಪಂದಿರಾಜನು ಹೆಮ್ಮವಡಗಿಯಲ್ಲಿ ‘ಪಂದೇಶ್ವರ’ವೆಂಬ ಶಿವ ದೇವಾಲಯ ಕಟ್ಟಿಸಿದನೆಂಬ ಪ್ರತೀತಿ ಇದೆ. ಈ ಪಂದಿರಾಜನು ಮುಂದೆ ಪಂದಿಗ-ಹಂಡಿಗ, ಪಂಡೆ-ಹಂಡೆ, ಎಂಬಿತ್ಯಾದಿ ರೂಪಗಳು ಪಡೆದಿರುವ ಸಾಧ್ಯತೆಗಳಿವೆ. ಇದು ‘ಪ’ಕಾರ ದಿಂದ ‘ಹ’ಕಾರ ಹಾದಿಯಾಗಿ ಬಳಕೆಯಾಗಿರ ಬಹುದೆಂದು ಕಾಣುತ್ತದೆ. ಕ್ರಿ.ಶ. ೯೬೮ನೇ ಚಿತ್ರದುರ್ಗ ಜಿಲ್ಲೆಯ ಬೇವಿನಹಳ್ಳಿ ಶಾಸನದಲ್ಲಿ ‘ಮಹಾಸಾಮಂತ : ಪಂದಿಗ’ ಎಂಬ ಅರಸ ಮುದಲೂರು, ಮುಳಗವಾಡಿ, ಗ್ರಾಮಗಳನ್ನು ದಾನ ನೀಡಿದ ವಿವರವಿದೆ. ಈ ಸಮಯದಲ್ಲಿ ರಾಷ್ಟ್ರಕೂಟರ ಅರಸನಾದ ಕೊಟ್ಟಿಗದೇವನ ಆಳ್ವಿಕೆ ಇರುವುದು ಕಂಡು ಬರುತ್ತದೆ.

ಖ್ಯಾತ ಸಂಶೋಧಕರಾದ ಶಂ.ಬಾ. ಜೋಶಿ ಅವರು ಅಂಡೆ ಎನ್ನುವ ಪದವನ್ನು ಈ ರೀತಿಯಾಗಿ ಬಿಡಿಸಿ ಅರ್ಥ ಸೂಚಿಸಿದ್ದಾರೆ. ಅಂಡೆ > ಅಂಡಾರ್ ಪದವು ಗೋವಳ (ಧನಗಾರ) ಕುರುಬ > ಯಾದವ ಜನದೊಳಗಿನ ‘ಅಂಧಕವೃಷ್ಣ’ ಎಂಬ ಪಂಗಡದ ಪೂರ್ವೇತ್ತರವನ್ನು ಅರಿತುಕೊಳ್ಳಲು ಉಪಯುಕ್ತವಾಗಿದೆ. ಸಂಸ್ಕೃತದ ಅಂಧ> ಅಂಧಕ ಪದವು ಕಂದಮಿಳಿನ (ಕನ್ನಡ-ತಮಿಳು) ಅಂಡೆ, ಅಂಡಾರ್ ಪದಗಳನ್ನು ಹೋಲುತ್ತಿರುವುದು ಕಂಡುಬರುತ್ತದೆ. ಸಂಸ್ಕೃತ ಹಾಗೂ ತಮಿಳಿನಲ್ಲಿ ‘ಅಂಡೆ’-‘ಆಮ್ದೆ’ ಇದರೊಳಗಿನ ‘ಅಂ’ ಪದವು ‘ಹಾಲು’ > ‘ರಸಾರ್ಥ’ ಸೂಚಕವಾಗಿರುವು ದಾಗಿದೆ ಎಂಬುದು ತಮಿಳು ಕೋಶದಿಂದ ಗೊತ್ತಾಗಿದೆ. ‘ಆಮ್ದು ಎಂದರೆ ? ‘ನೀರು’, ‘ಆಮ್ಬುಲಿ’ ಎಂದರೆ ‘ಗಂಜಿ’ ಇಂಥ ಪದಗಳ ಶಬ್ಧಮೂಲದಲ್ಲಿ ಅದು ಹುದುಗಿರುವುದನ್ನು ಕಾಣಬಹುದಾಗಿದೆ.

ಅಂಡೆಯವರು > ಇಡೈಯರು – ಕಳವರು, ಈ ಜನವು ಒಂದು ಕಾಲಕ್ಕೆ ರಸ ಹಾಲು ವ್ಯವಹಾರಿಗಳು ಈ

*** ಸಂಶೋಧನಾ ವಿದ್ಯಾರ್ಥಿ, ಹಸ್ತಪ್ರತಿ ವಿಭಾಗ, ಕನ್ನಡ ವಿವಿ, ಹಂಪಿ, ವಿದ್ಯಾರಣ್ಯ-೫೮೩೨೭೬.**

(ರಸ) ವ್ಯವಹಾರವೇ ಧನಗಾರಿಕೆಯ ಹಂತದಲ್ಲಿ ಗೋರಸ ವ್ಯವಹಾರದಲ್ಲಿ ಮಾರ್ಪಟ್ಟಿದೆ ಎನ್ನಲಾಗಿದೆ. 'ಬೃಹತ್ ಸಂಹಿತೆ' ಕೃತಿಯಲ್ಲಿ ವರಾಹಮಿಹಿರನು ತನ್ನ ಕಾಲದ ಮಹಾರಾಷ್ಟ್ರಕರ ಬಗೆಗೆ ಹೇಳುವಾಗ 'ಭಾಗ್ಯೇರಸ ವಿಕ್ರಯಿಣ' ಎಂದಿದ್ದಾನೆ (ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಪುಟ ಸಂಖ್ಯೆ ೪೨)

ಎಂ.ಎಂ. ಕಲಬುರ್ಗಿ ಅವರ ಕರ್ನಾಟಕ ಕೈಫಿಯತ್ತುಗಳಲ್ಲಿ ಬಳ್ಳಾರಿ ಕುರುಗೋಡು ಕೈಫಿಯತ್ತುಗಳಲ್ಲಿ ಕಂಡುಬಂದಂತೆ ಈ ಮನೆತನದವರನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಈ ಕೆಳಗಿನಂತೆ ಗುರುತಿಸಲಾಗಿದೆ.

ತಮಿಳುನಾಡಿನಲ್ಲಿ > ಅಂಡಾರ್ ಎನ್ನುವ ಜನಾಂಗ

ಆಂಧ್ರಪ್ರದೇಶದಲ್ಲಿ > ಅಂಥರ್, ಕೋಣರ್ ಎನ್ನುವ ಜನಾಂಗ

ಮಹಾರಾಷ್ಟ್ರದಲ್ಲಿ > ಹಂಡೆದನಗಾರರು > ಹಂಡೆರಾಹುತರು ಎನ್ನುವ ಜನಾಂಗ

ಕರ್ನಾಟಕದಲ್ಲಿ > 'ಹಂಡೆ' ಎನ್ನುವ ಜನಾಂಗ, ಹೀಗೆ ಭೌಗೋಳಿಕ ವ್ಯಾಪಿಸಿರುವ ಈ ಮನೆತನವನ್ನು ನಾನಾರ್ಥಗಳಿಂದ ಗುರುತಿಸಲಾಗಿದೆ.

ಹಂಡೆ ಪದದ ಅರ್ಥವನ್ನು ಮರಾಠಿ ಅನುವಾದದಲ್ಲಿ 'ಕಸಾರ' ಅಥವಾ 'ಕಳಸಿ' 'ಬಿಂದಿಗೆ', ಎಂದು ಗುರುತಿಸಲಾಗಿದೆ. ಸಂಸ್ಕೃತ ಪದದಲ್ಲಿ ಹಂಡೆ ಎಂದರೆ – ವೀರ ಜನಾಂಗ, ಹಂಡೆ ವಜೀರ ಎಂದರೆ ಕುದುರೆದಳದ ಮುಖ್ಯಸ್ಥನನ್ನು ಹಂಡೆ ವಜೀರ ಎನ್ನುವ ನಿಲುವು ಇತ್ತೀಚಿನ ಬಳಕೆಯಲ್ಲಿರುವ ಪದವಾಗಿದೆ.

ಒಟ್ಟಾರೆಯಾಗಿ ಹಂಡೆ ಜನಾಂಗದ ದೈನಂದಿನದ ಉದ್ಯೋಗ, ಪಶುಪಾಲನೆ ಮತ್ತು ಕೃಷಿಯನ್ನೇ ಅವಲಂಬಿಸಿದವರು, ನಂತರ ಭೌಗೋಳಿಕವಾಗಿ ಬೇರೆ ಬೇರೆ ಪ್ರದೇಶಗಳಿಗೆ ವ್ಯಾಪಿಸಿರುವುದು ಕಾಣಬಹುದು. ಈ ಮನೆತನದ ಆಚಾರ–ವಿಚಾರ, ಜೀವನ–ವಿಧಾನ ಹಾಗೂ ಹಲವಾರು ಜನಸಮುದಾಯದಲ್ಲಿ ನೆಲೆಗೊಂಡು ಇವರ ಭಾಷೆ ಹಬ್ಬ ಹರಿದಿನಗಳು, ಕುಲದೇವರ ಆಚರಣೆಗಳು, ವಿಶಿಷ್ಠ ಸಂಸ್ಕೃತಿಯೊಂದಿಗೆ ಗುರುತಿಸಿ ವೈವಿಧ್ಯತೆಯಲ್ಲಿ ಏಕತೆಯನ್ನು ಕಂಡುಕೊಂಡವರು. ಒಂದು ಜನಾಂಗದ ಅಧ್ಯಯನವೆಂದರೆ ಅವರು ವಾಸಿಸುವ ಪ್ರದೇಶ, ನಾಗರೀಕತೆ, ಪರಂಪರೆ ಮತ್ತು ಸಂಪ್ರದಾಯ ಅವರ ಆಂತರಿಕ ಸಮಾಜದ ರಚನೆ ಹಾಗೂ ಕುಲಕಸುಬು, ಸಾಮಾಜಿಕ ಸ್ಥಾನಮಾನವನ್ನು ಗಮನಿಸಲಾಗಿ ಪದ ನಿಷ್ಪತ್ತಿಯನ್ನು ಕಂಡುಕೊಳ್ಳಲಾಗಿದೆ.

[ಹಂದೆ ಶಬ್ದದಲ್ಲಿನ 'ದೆ' ಕಾರವು 'ಡೆ' ಕಾರವಾಗಿ ಮಾರ್ಪಡುವುದು ಕಷ್ಟ ಸಾಧ್ಯ. ಅಧ್ಯಯನ ಯೋಗ್ಯ –ಸಂ.]



## ಆಧಾರಸೂಚಿ ಮತ್ತು ಅಡಿಟಿಪ್ಪಣಿ


೧. ಡಾ. ಎಂ.ಎಂ. ಕಲಬುರ್ಗಿ : ಕರ್ನಾಟಕ ಕೈಫಿಯತ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೨. ಶಂಬಾ ಜೋಶಿ ಸಂಪುಟ–೩, ಸಂಪಾದಕರು : ಮಲ್ಲೇಪುರಂ ಜಿ. ವೆಂಕಟೇಶ್, ಕನ್ನಡ ಪುಸ್ತಕ ಪ್ರಾಧಿಕಾರ.

೩. ಶಾಸನೋಕ್ತ ಹಂಡೆ ಅರಸು ಮನೆತನ, ಸಂಪಾದಕರು: ಡಾ. ಎಸ್. ಪಾಟೀಲ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಕಲಬುರ್ಗಿ.

೪. ಕನ್ನಡ ಸಾಹಿತ್ಯ ಪರಿಷತ್ತು, ನಿಘಂಟು, ಸಂಪುಟ ೮, ೧೯೯೫.

೫. ಕನ್ನಡ ನಿಘಂಟು, ಸಂಪುಟ ೧.

೬. ಶಂಬಾ ಕೃತಿ ಸಮೀಕ್ಷೆ, ಸಂಪಾದಕರು : ಮಲ್ಲೇಪುರಂ ಜಿ. ವೆಂಕಟೇಶ್, ಸಂಪುಟ ೬.



# ಧಾರ್ಮಿಕ ವಿಧಿಗಳಲ್ಲಿ ಪಾತ್ರ-ಶಾಸನಗಳನ್ನು ಅನುಲಕ್ಷಿಸಿ

ಸಂಧ್ಯಾ ವಿ.*

**ಧಾ**ರ್ಮಿಕ ಕಾರ್ಯಗಳಲ್ಲಿ ತೊಡಗಿದ ಹಲವಾರು ಮಹಿಳೆಯರು ವಿವಿಧ ಸಂದರ್ಭಗಳಲ್ಲಿ ದಾನ-ದತ್ತಿ ನೀಡಿರುವುದು, ದೇವಾಲಯ, ಅಗ್ರಹಾರ, ಕೆರೆಗಳನ್ನು ನಿರ್ಮಿಸಿರುವುದು ಬಹಳ ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ಪ್ರಸ್ತುತ ಲೇಖನದಲ್ಲಿ ಧಾರ್ಮಿಕ ವಿಧಿಗಳಲ್ಲೊಂದಾದ ಪಿತೃಕಾರ್ಯವನ್ನು ನಡೆಸುವುದರಲ್ಲಿ ಮಹಿಳೆಯರು ತೋರುತ್ತಿದ್ದ ಆಸಕ್ತಿ, ಮರಣಿಸಿದ ತಮ್ಮ ಬಂಧುಗಳ ಸದ್ಗತಿಗಾಗಿ ಮಹಿಳೆಯರು ಕೈಗೊಳ್ಳುತ್ತಿದ್ದ ಕಾರ್ಯಗಳ ಕುರಿತಾದ ವಿಶ್ಲೇಷಣೆ ನಡೆಸಲಾಗಿದೆ.

ಅಂತ್ಯಕ್ರಿಯೆಯ ವಿಧಿಗಳನ್ನು ಪ್ರತಿಯೊಂದು ಪಂಗಡ ಜಾತಿ ಧರ್ಮೀಯರೂ ತಮಗುಚಿತವಾದ ರೀತಿಯಲ್ಲಿ ನಡೆಸುತ್ತಾರೆ. ವೈದಿಕಧರ್ಮದ ಈ ಕ್ರಿಯೆಯ ಕುರಿತಾಗಿ ಸಂಹಿತೆಗಳಲ್ಲಿ, ಗರುಡ ಪುರಾಣ ಮೊದಲಾದೆಡೆಗಳಲ್ಲಷ್ಟೇ ಅಲ್ಲದೆ ಜಾನಪದ ಕೃತಿಗಳಲ್ಲೂ ಮಾಹಿತಿ ದೊರಕುತ್ತದೆ. ತುಳುನಾಡಿನ ಪಾಡ್ದನವೊಂದರಲ್ಲಿ ಕೋಟಿ-ಚನ್ನಯ್ಯರಿಗೆ ಸರಿಯಾದ ಅಂತ್ಯಕ್ರಿಯೆ ನಡೆದಿಲ್ಲವೆಂಬ ಕಾರಣಕ್ಕೆ ಅವರನ್ನು ಬ್ರಹ್ಮಲೋಕಕ್ಕೆ ಸೇರಿಸುವುದಿಲ್ಲ. ಆನಂತರ ಸರಿಯಾದ ಉತ್ತರಕ್ರಿಯೆಗಳನ್ನು ನಡೆಸಿದ ಮೇಲೆಯೂ ಗಂಗಾನದಿಯಲ್ಲಿ ಮೀಯುವಂತೆ ಆದೇಶಿಸಲಾಗುತ್ತದೆ.

ಮರಣಾನಂತರ 'ಪುತ್' ಎನ್ನುವ ನರಕದಿಂದ ಪಾರು ಮಾಡುವವನು ಎಂಬ ಕಾರಣಕ್ಕೆ ಗಂಡುಮಗನಿಗೆ 'ಪುತ್ರ'ನೆಂದು ಹೆಸರು ಬಂದಿದೆ. ಇಲ್ಲಿ ಪಿತೃಕಾರ್ಯ ನಡೆಸಲು ಗಂಡುಮಕ್ಕಳಿಗೆ ಅಧಿಕಾರ ಎಂಬುದು ಸ್ಪಷ್ಟವಾಗಿದೆ. ಗಂಡುಸಂತಾನವಿಲ್ಲದೆ ಮೋಕ್ಷವಿಲ್ಲ ಎಂದು ಪರಿತಪಿಸುವುದು ಇದೇ ಕಾರಣಕ್ಕಾಗಿಯೇ. ಆದರೆ ಇಂತಹ ಕಾರ್ಯಗಳನ್ನು ಮಾಡುವಲ್ಲಿ ಮಹಿಳೆಯರಿಗಿರುತ್ತಿದ್ದ ಅಧಿಕಾರ ವಿಭಿನ್ನ ಪ್ರದೇಶಗಳಲ್ಲಿ ವಿಭಿನ್ನವಾಗಿ ತೋರುತ್ತದೆ. ತುಳುನಾಡಿನ ಕೆಲವು ಆಚರಣೆಗಳಲ್ಲಿ ಮಹಿಳೆಯರಿಗೇ ಪಿತೃಕಾರ್ಯ ಮಾಡುವ ಮೊದಲ ಹಕ್ಕು ನೀಡಲಾಗುತ್ತದೆ. ಇದು ಇಂದಿಗೂ ಕೂಡ ನಡೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಧರ್ಮಶಾಸ್ತ್ರಗಳೂ ಕೂಡ ಕೆಲವು ಸಂದರ್ಭಗಳಲ್ಲಿ ಮಹಿಳೆಯರಿಗೆ ತರ್ಪಣ ಮೊದಲಾದ ಕರ್ಮಗಳನ್ನು ಮಾಡಲು ಅಧಿಕಾರ ನೀಡಿರುವುದನ್ನು ತಿಳಿಸುತ್ತವೆ.

ನಿರ್ಣಯಸಿಂಧು ಕೃತಿಯು ತಿಳಿಸುವಂತೆ ಔರಸಪುತ್ರರ ಅಭಾವದಲ್ಲಿ ದತ್ತಕ ಅಧಿಕಾರಿಯು, ಆತನೂ ಇಲ್ಲದ ಪಕ್ಷದಲ್ಲಿ ಪುತ್ರಿಯ ಪುತ್ರ ಅಥವಾ ಪೌತ್ರ, ಪ್ರಪೌತ್ರರಿಗೆ ಈ ಅಧಿಕಾರವು ದೊರಕುತ್ತದೆ. ದತ್ತಕ, ಪ್ರಪೌತ್ರರ ಅಭಾವದಲ್ಲಿ ಪತಿಗೆ ಪತ್ನಿಯೂ, ಪತ್ನಿಗೆ ಪತಿಯೂ ಅಧಿಕಾರಿಗಳಾಗುವರು. "ವಿದಧ್ಯಾದೌರಸಃ ಪುತ್ರೋಜನನ್ಯಾ ಔರ್ಧ್ವದೇಹಿಕಂ ತದಭಾವೇ ಸಪತ್ನೀಜಃ" – ಹೀಗೆ ವಚನವಿದೆ. ಪತ್ನಿಯಾದರೂ ಔರ್ಧ್ವದೇಹಿಕಾದಿ ಕಾರ್ಯಗಳನ್ನು ಸಮಂತ್ರಕವಾಗಿಯೇ ಮಾಡತಕ್ಕದ್ದು. ಅಶಕ್ತಿಯಲ್ಲಾದರೆ ಅಗ್ನಿದಾನವನ್ನು ಮಾತ್ರ ಸಮಂತ್ರಕವಾಗಿ ಮಾಡಿ ಉಳಿದದ್ದನ್ನು ಬೇರೆಯವರಿಂದ ಮಾಡಿಸುವುದು" ಎಂದು ತಿಳಿಸಿದೆ. ಅಪುತ್ರಕಳಾದ ವಿಧವೆಗೆ ತೀರ್ಥ ಶ್ರಾದ್ಧ ಮಾಡಲು ಅಧಿಕಾರವಿದೆ. ಈಕೆಯು "ಪತಿ ಮೊದಲಾದ ಮೂರು ಪಿತೃಗಳಿಗೆ ಪ್ರತಿದಿನ ತಿಲ ದರ್ಭೋದಕಗಳಿಂದ ತರ್ಪಣ ಮಾಡತಕ್ಕದ್ದು". "ಪುತ್ರಸಹಿತಳಾದವಳು ಪತಿಯ ಶ್ರಾದ್ಧವನ್ನು ಮಾಡಬಾರದು" ಅವಳಿಗೆ ಸ್ವತಃ ಶ್ರಾದ್ಧಾಧಿಕಾರವಿಲ್ಲ. ಮಗನಿಗೆ ಉಪನಯನವಾಗದಿದ್ದಲ್ಲಿ ಅಥವ ಆತ ಯತಿ, ಸನ್ಯಾಸಿ ಆಗಿದ್ದರೆ ಮಾತ್ರ ಈ ನಿಯಮ ಬದಲಾಗುತ್ತದೆ. ಹೀಗೆ, ಮಹಿಳೆಯ ಅಧಿಕಾರವನ್ನು ಕುರಿತು 'ಪಾರಿಜಾತ' ಮೊದಲಾದ ಸಂಹಿತೆಗಳು ತಿಳಿಸುತ್ತವೆ.

ಶಾಸನಗಳಲ್ಲಿ ಮರಣಿಸಿದವರ ಅಂತ್ಯಕ್ರಿಯೆ ಕುರಿತಾದ ಹಲವಾರು ವಿಧಿಗಳು ಕಂಡುಬರುತ್ತವೆ. ಸಾಧಾರಣವಾಗಿ ಇಂತಹ ವಿಚಾರಗಳು ವೀರಗಲ್ಲುಗಳಲ್ಲಿ ಉಕ್ತವಾಗಿರುತ್ತವೆ. ಇಲ್ಲಿ ಜಲೋದಕ, ಅಸ್ತಿವಿಸರ್ಜನೆ, ಅನ್ನದಾನ, ಕೂಳನ್ನಿಡುವುದು ಮೊದಲಾದ ಕ್ರಿಯೆಗಳು ಅಪರೂಪಕ್ಕೊಮ್ಮೆ ದಾಖಲಾಗಿರುತ್ತವೆ. ಇದಲ್ಲದೆ ಮರಣಿಸಿದವರ ಪರೋಕ್ಷ ವಿನಯವಾಗಿ, ಪುಣ್ಯಪ್ರಾಪ್ತಿಗಾಗಿ ನಡೆಸಲಾದ ದಾನ, ದೇವಾಲಯ ನಿರ್ಮಾಣ, ಕೆರೆ-ಕಾಲುವೆಗಳ ನಿರ್ಮಾಣ ಮೊದಲಾದ ಕಾರ್ಯಗಳನ್ನು ಹೇರಳವಾಗಿ ಕಾಣುತ್ತೇವೆ. ಇಂತಹ

* # ೧೩೫, ೫ನೇ ಅಡ್ಡರಸ್ತೆ, ೧ನೇ ಹಂತ, ಆರ್.ಕೆ. ಬಡಾವಣೆ, ಪದ್ಮನಾಭನಗರ, ಬೆಂಗಳೂರು-೫೬೦೦೭೦.

ಎರಡೂ ಕ್ರಿಯೆಗಳಲ್ಲಿಯೂ ಮಹಿಳೆಯರು ಪಾತ್ರ ವಹಿಸಿರುವುದನ್ನು ಶಾಸನಗಳು ತಿಳಿಸುತ್ತವೆ.

### ಸಂಸ್ಕಾರವಿಧಿ

ಈ ಹಿಂದೆ ಹೇಳಿದಂತೆ ನೇರವಾದ ಧಾರ್ಮಿಕ ವಿಧಿಗಳಿಗೆ ಸಂಬಂಧಿಸಿದ ಕೆಲವು ವಿಚಾರಗಳು ಶಾಸನಗಳಲ್ಲಿ ಉಕ್ತವಾಗಿರುತ್ತವೆ. ಕೆಲವು ಶಾಸನಗಳು ಜಲದಾನಕ್ರಿಯೆ[೧] ಕುಲದೀಪಕ ಎಂಬ ಧ್ಯಾನಾದಿ ಕ್ರಿಯೆ[೨]ಗಳನ್ನು ಹೆಸರಿಸಿವೆ. ಮತ್ತೆ ಕೆಲವು ಶಾಸನಗಳು 'ಊರ್ದ್ಧ್ವಕ್ರಿಯೆ' ಎಂದಷ್ಟೇ ಉಲ್ಲೇಖಿಸಿವೆ.

ಇಂತಹ ಹಲವಾರು ಕ್ರಿಯೆಗಳಲ್ಲಿ ಹೆಣ್ಣುಮಕ್ಕಳು ಭಾಗವಹಿಸಿರುವುದು ಅಪರೂಪಕ್ಕೊಂದೆಂಬಂತೆ ಕಾಣಸಿಗುತ್ತವೆ. ಬಾದಾಮಿ ಚಳುಕ್ಯ ಮಂಗಳೇಶನನ್ನು ವರಿಸಿದ್ದ ಅಳುಪ ರಾಜಕುಮಾರಿಯ ತಂದೆ ಯುದ್ಧದಲ್ಲಿ ಭಾಗವಹಿಸಿ, ಸೈನಿಕ ನೆಲೆಯಲ್ಲಿದ್ದಾಗ ಅಸುನೀಗುತ್ತಾನೆ. ಆ ಸಂದರ್ಭದಲ್ಲಿ ಆತನ ಮಗಳು ಕಾದಂಬ ಮಹಾದೇವಿಯು ತನ್ನ ತಂದೆಯ ಉತ್ತರಕ್ರಿಯಾದಿಗಳನ್ನು ಅಲ್ಲಿಯೇ ನೆರವೇರಿಸಿ, ಪತಿಯ ಸಹಕಾರದೊಂದಿಗೆ ತಂದೆಯ ಪರೋಕ್ಷವಿನಯಕ್ಕಾಗಿ ಹಲವು ಜನ ಬ್ರಾಹ್ಮಣರಿಗೆ ಮತ್ತು ಒಬ್ಬ ಯತಿಗೆ ಭೂದಾನಗಳನ್ನು ಮಾಡಿದ್ದಾಳೆ[೩].

### ಗಂಗೆಯಲ್ಲಿ ಅಸ್ಥಿ ವಿಸರ್ಜನೆ

ಕ್ರಿ.ಶ. ೧೦೩೬ರ ಕಾಲದ ಶಾಸನವು ಚಾಲುಕ್ಯ ಜಗದೇಕಮಲ್ಲದೇವನ (ಇಮ್ಮಡಿ ಜಯಸಿಂಹ)ನ ಪತ್ನಿ ದೇವಳದೇವಿಯು ತನ್ನ ತಾಯಿಯ ಅಸ್ಥಿ, ಚಿತಾಭಸ್ಮವನ್ನು ಮಾಧವ ಷಡಂಗಿ, ಕೃಷ್ಣಯ್ಯ ಮತ್ತು ದೇವಯ್ಯ ಎಂಬುವವರ ಮೂಲಕ ಗಂಗೆಯಲ್ಲಿ ವಿಸರ್ಜಿಸಿ, ಈ ಕಾರ್ಯ ನಡೆಸಿದ ಅವರಿಗೆ ಓರುವಾಯಿಯನ್ನು ದಾನವಾಗಿ ನೀಡಿದ್ದಾಳೆ. ಈ ವಿಚಾರವನ್ನು ಬಳ್ಳಾರಿಯ ಶಾಸನವು[೪] ತಿಳಿಸುತ್ತದೆ. ಈ ಸಂದರ್ಭದಲ್ಲಿ ದೇವಳದೇವಿಯ ತಂದೆ ನೊಳಂಬ ಉದಯಾದಿತ್ಯನು ಜೊತೆಯಲ್ಲಿರುತ್ತಾನೆ. ಅಸ್ಥಿ ಅಥವಾ ಚಿತಾಭಸ್ಮವನ್ನು ಇತರರ ಮೂಲಕ ಗಂಗೆಯಲ್ಲಿ, ವಾರಣಾಸಿಯಲ್ಲಿ ವಿಸರ್ಜಿಸುವ ಕಾರ್ಯ ಅಂದಿನ ಕಾಲದಲ್ಲಿ ಸಾಧಾರಣವಾಗಿ ನಡೆಯುತ್ತಿತ್ತೆನ್ನುವುದಕ್ಕೆ ಇನ್ನೂ ಕೆಲವು ಉದಾಹರಣೆಗಳು ದೊರಕುತ್ತವೆ. ಬಾಚಪ್ಪ ಎಂಬುವವನು ಸತ್ತಾಗ ಆತನ ಹಿರಿಯ ಮಗ "ಬುಕ್ಕಂಣನು ವಿರೂಪಾಕ್ಷದಲ್ಲಿ ಪ್ರಾಯಶ್ಚಿತ್ತವ ವಿಧಿಸಿ ಅಸ್ಥಿಯನ್ನು ವಾರಣಾಶಿಗೆ ಕಳುಹಿ" ವೀರಗಲ್ಲನ್ನು ನೆಡುತ್ತಾನೆ[೫] ಎಂಬ ವಿವರಣೆಗಳು ದೊರಕುತ್ತವೆ.

ಮೃತರ ಹೆಸರಿನಲ್ಲಿ ಊಟ ಹಾಕಿಸುವುದು ಈ ಕ್ರಿಯೆಯ ಒಂದು ವಿಧಿಯಾಗಿದೆ. ಹದಿನೇಳನೆಯ ಶತಮಾನದ ಶಾಸನವೊಂದರಲ್ಲಿ ಹಂಡೆ ನೀಲಮ್ಮ ಎಂಬುವವಳು ತನ್ನ ಮನೆತನದ ಹಿರಿಯರ ಧರ್ಮದಾಸೋಹಕ್ಕೆಂದು ಉಳೇನೂರು ವಿರಕ್ತಮಠಕ್ಕೆ ದಾನ ನೀಡಿದ್ದಾಳೆ. ಇದನ್ನು ಶಿಷ್ಯ, ಪ್ರಶಿಷ್ಯ ಪಾರಂಪರಿಕವಾಗಿ ಮುಂದುವರೆಸಿಕೊಂಡು ಹೋಗಬೇಕೆಂದು ಕೇಳಿದ್ದಾಳೆ[೬].

ಯುದ್ಧದಲ್ಲಿ ಮಡಿದ ವೀರರಿಗೆ ಹಾಕಿಸುತ್ತಿದ್ದ ಸ್ಮಾರಕದ ಸಂದರ್ಭದಲ್ಲಿಯೂ ಕೂಡ ಕೆಲವೊಂದು ವಿಧಿಗಳನ್ನು ನಡೆಸುತ್ತಿದ್ದ ವಿಚಾರ ತಿಳಿದು ಬರುತ್ತದೆ. ಈ ಮೇಲೆ ತಿಳಿಸಿರುವಂತೆ ಜಲದಾನಕ್ರಿಯೆ, ಕೂಳನಿರಿಸುವುದು ಮೊದಲಾದ ಕಾರ್ಯಗಳನ್ನು ಈ ಸಂದರ್ಭದಲ್ಲಿ ನಡೆಸುತ್ತಿದ್ದರು. ಸೊರಬದ ೪೬೮ನೆಯ ಸಂಖ್ಯೆಯ ಶಾಸನ ತಿಳಿಸುವಂತೆ ವೇಮಣ್ಣನು ಶತ್ರುಗಳೊಂದಿಗೆ ಹೋರಾಡುತ್ತಾ ಮಡಿದಾಗ, ಅವನ ತಂಗಿ ಪಡವಳ ಕೀರ್ತಿಯಣ್ಣನ ಪಡವಳಿತಿ ಚಟ್ಟಿಕಬ್ಬೆಯು ಆತನ ಮಗಳು ಹಾಗೂ ಮಾರಸಿಂಗನ ಮಡದಿಯೂ ಆದ ಹೆಲ್ಲಬ್ಬೆಯೊಡನೆ **"ಬೀರಗೂಳೆತ್ತಿ ಕಲ್ಲನಿಱಿಸಿದ"** ವಿಚಾರ ತಿಳಿದು ಬರುತ್ತದೆ. ಇದು ಆ ಸಂದರ್ಭದಲ್ಲಿ ಮಾಡಿದ ಕ್ರಿಯೆಯಾದರೆ ಮುಂದೆ ಆತನ ಪರೋಕ್ಷವಿನಯಕ್ಕಾಗಿ ಒಡೆದ ಕೆರೆಯನ್ನು ಕಟ್ಟಿಸಿ ಶಾಸನ ಹಾಕಿಸಿದ್ದಾರೆ. ಇಲ್ಲಿ ತಿಳಿಸಿರುವ 'ಬೀರಗೂಳ್' (ವೀರಕೂಳ್) ಎನ್ನುವುದು ಉತ್ತರಕ್ರಿಯೆಯ ಒಂದು ವಿಧಿಯಾಗಿದೆ.

ಮಾಚಿಗಾವುಂಡನೆಂಬುವವನು ತುರುಗಾಳಗದಲ್ಲಿ ಹೋರಾಡಿ ಸತ್ತಾಗ ಅವನ ಹೆಂಡತಿ ಚಾಗಿಯಬ್ಬೆಯು ಅವನಿಗೆ ಪುಣ್ಯವಾಗಲೆಂದು ದಾನಗಳನ್ನು ನೀಡಿ, ಸ್ಮಾರಕ ನಿಲ್ಲಿಸಿದ್ದಾಳೆ[೭]

ಈ ಶಾಸನಗಳಲ್ಲಿ ಮೃತನಿಗಾಗಿ ದಾನ ನೀಡಿರುವ, ಬೀರಗೂಳನ್ನು ಹಾಕಿಸಿರುವ ವಿಚಾರಗಳಿವೆ. ಆದರೆ ಕೆಲವು ವೀರಗಲ್ಲುಗಳು ಇಂತಹ ಕಾರ್ಯಗಳ ಉಲ್ಲೇಖಗಳನ್ನು ನೀಡದೆ ಕೇವಲ 'ಕಲ್ಲನಿರಿಸಿ' ಎಂದು ಮಾತ್ರ ತಿಳಿಸುತ್ತದೆ. ಮಕ್ಕಳಿಗಾಗಿ ತಾಯಿಯರು ನಡೆಸಿದ ಇಂತಹ ಕಾರ್ಯಗಳಿಗೆ ಉದಾಹರಣೆಯಾಗಿ ಈ ಎರಡು ಶಾಸನಗಳನ್ನು ನೋಡಬಹುದು. ಹೊಯ್ಸಳರ ಸೇನೆಯನ್ನೆದುರಿಸಿ ಕೊಂಗಾಳ್ವರ ಪರವಾಗಿ ಕಾದಾಡುತ್ತಾ ಜಾಕವ ಎಂಬುವವನು ಮಡಿದಾಗ ಆತನ ತಾಯಿ ವೆಂದಕಬ್ಬೆ ವೀರಗಲ್ಲನ್ನು ನಿಲ್ಲಿಸಿದ್ದಾಳೆ[೮]. ಮತ್ತೊಂದು ಕಾಳಗದಲ್ಲಿ ಮಡಿದ ತುರುಗ ಎಂಬುವವನಿಗಾಗಿ ಅವನ ತಾಯಿ ಲಚ್ಚಕ್ಕನ್ ವೀರಗಲ್ಲನ್ನು ನಿಲ್ಲಿಸಿದ್ದಾಳೆ[೯]. ಮೃತನ ತಾಯಿ, ಸಹೋದರಿ, ಮಡದಿ, ಅತ್ತಿಗೆ ಹೀಗೆ ಸಂಬಂಧಿತ ಮಹಿಳೆಯರು ವೀರಗಲ್ಲನ್ನು ನಿಲ್ಲಿಸಿದರೆಂಬ ಉಲ್ಲೇಖಗಳು ಸಿಗುತ್ತವೆ. ಈ ಸಂದರ್ಭಗಳಲ್ಲಿ ಕೆಲವು ವಿಧಿಗಳನ್ನು ನಡೆಸಲಾಗುತ್ತಿದ್ದು, ಆ ವಿಚಾರಗಳು ಎಲ್ಲ ಶಾಸನಗಳಲ್ಲಿಯೂ

ದಾಖಲಾಗಿಲ್ಲ. ಸಕ ೧೦೩೪ರಲ್ಲಿ ವೇಮಣ್ಣ ಯುದ್ಧದಲ್ಲಿ ಮಡಿದಾಗ ಆತನ ತಂಗಿ ಚಟ್ಟಿಕಬ್ಬೆಯು ಸ್ಮಾರಕವನ್ನು ನಿಲ್ಲಿಸಿದ ವಿಚಾರವನ್ನು ಸೊರಬದ ಶಾಸನವು[೧೦] ತಿಳಿಸುತ್ತದೆ. ಕ್ರಿ.ಶ. ೧೧೭೭ರಲ್ಲಿ ಹೊಯ್ಸಳ ವೀರಬಲ್ಲಾಳನ ಕಾಲಕ್ಕೆ ಸೇರಿದ ತುಮಕೂರಿನ ತಂಡಗ ಎಂಬಲ್ಲಿನ ತ್ರುಟಿತ ಶಾಸನ ತಿಳಿಸುವಂತೆ ಇಲ್ಲಿನ ಅಗ್ರಹಾರದ ಸಂಕರನಾಯಾಣ ಪುರವಾದ ತಂಡಗದ ವಿಷಯ ಹಾಗೂ ಇಲ್ಲಿನಡೆದ ತುರುಗೋಳು ಕಾಳಗದಲ್ಲಿ ಶತ್ರುಗಳನ್ನು ಕೊಂದು ತುರುಗಳನ್ನು ಮರಳಿಸಿಕೊಂಡು ಬರುವಾಗ ಮರಣಕ್ಕೀಡಾದ ವ್ಯಕ್ತಿಯ ಮಡದಿ ಆತನ ಪರೋಕ್ಷವಿನಯವಾಗಿ ವೀರಗ್ಲಲ್ಲನ್ನು ಮಾಡಿಸಿದ್ದಾಳೆ[೧೧].

**ಪರೋಕ್ಷವಿನಯ**

ಮರಣಿಸಿದವರಿಗೆ ಪುಣ್ಯ ಪ್ರಾಪ್ತಿಯಾಗಲಿ ಎಂಬ ಅಭಿಲಾಷೆಯಿಂದ ಅವರ ಹೆಸರಿನಲ್ಲಿ ದಾನ, ಧಾರ್ಮಿಕ ಕಾರ್ಯಗಳನ್ನು ಅವರ ಬಂಧುಮಿತ್ರರು ನಡೆಸುತ್ತಾರೆ. “‘ಪರೋಕ್ಷ ವಿನಯ’ವೆಂದು ಮಾಡಲಾದ ದಾನ ಅಥವಾ ದೇವಾಲಯಗಳ ನಿರ್ಮಾಣ ಕೂಡ ಮರಣೋತ್ತರ ಶ್ರೇಯಸ್ಸಿಗಾಗಿ ಮಾಡುವ ವಿಧಿಯೇ ಆಗಿದೆ”[೧೨]. ಈ ಪದಗಳು ಕವಿಗಳಾದ ಪಂಪ-ರನ್ನರ ಕಾವ್ಯಗಳಲ್ಲಿನ ಪರಲೋಕಕ್ರಿಯೆ, ಪರೋಕ್ಷಕ್ರಿಯೆ ಎಂಬುದರ ಸಮಾನಾರ್ಥಕಗಳೆಂದು ಶೇಷಶಾಸ್ತ್ರಿಯವರು ತಿಳಿಸಿದ್ದಾರೆ. ಇಂತಹ ಪರೋಕ್ಷವಿನಯವಾಗಿ ಕೈಗೊಂಡ ದಾನ-ಧರ್ಮ ಕಾರ್ಯಗಳ ಉಲ್ಲೇಖ ಶಾಸನಗಳಲ್ಲಿ ಬಹಳವಾಗಿ ದೊರಕುತ್ತದೆ. ಅರಸು ಮನೆತನದವರಿಂದ ಸಾಮಾನ್ಯ ಮನೆತನದವರ ವರೆಗೂ ಹಲವಾರು ರೀತಿಯ ದಾನ ಹಾಗೂ ಧಾರ್ಮಿಕ ಸಾಮಾಜಿಕ ಕಾರ್ಯಗಳನ್ನು ನಡೆಸಿರುವುದನ್ನು ಶಾಸನಗಳಲ್ಲಿ ಕಾಣುತ್ತೇವೆ.

ಈ ಪ್ರಕಾರವಾದ ದಾನಗಳಲ್ಲಿ ಮಹಿಳೆಯರು ಕೈಗೊಂಡ ವಿಚಾರ ಮೊತ್ತಮೊದಲನೆಯದಾಗಿ ಐದನೆಯ ಶತಮಾನದ ಕದಂಬ ರಾಣಿ ಪ್ರಭಾವತಿಯನ್ನು ಉಲ್ಲೇಖಿಸುವ ಶಾಸನದಲ್ಲಿ ಕಂಡುಬರುತ್ತದೆ. ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿರುವ ಈ ಅಪೂರ್ಣ ಶಾಸನವು ಪ್ರಭಾವತೀ ದೇವಿಯು ಪತಿಭಕ್ತಿಯಿಂದ ಬ್ರಹ್ಮದಾಯವನ್ನು ನೀಡಿರುವುದನ್ನು ತಿಳಿಸುತ್ತದೆ.

ನೊಳಂಬ ಪೊಳಲ್ಚೋರನ ಕಿರಿಯರಸಿ ದೀವಬ್ಬರಸಿಯು ಪತಿ ಪೊಳಲ್ಚೋರ ಹಾಗೂ ಆತನ ಹಿರಿಯ ಮಗ ಮಹೇಂದ್ರರ ಪರೋಕ್ಷಾರ್ಥವಾಗಿ ಆವನಿಯಲ್ಲಿ ಮಹೇಂದ್ರ ಕೊಳವನ್ನೂ, ಪತಿಯ ಹೆಸರಿನಲ್ಲಿ ಪೊಜಿಲ್ಚೋರ ಮಂಗಲವೆಂಬ ಅಗ್ರಹಾರವನ್ನೂ ನಿರ್ಮಿಸುತ್ತಾಳೆ[೧೩]. ಈ ಸಂದರ್ಭದಲ್ಲಿ ಈಕೆಯ ಮಗ ನೊಳಿಪಯ್ಯ ಇಜಿರವ ನೊಳಂಬ ಆಳ್ವಿಕೆ ನಡೆಸುತ್ತಿರುತ್ತಾನೆ. ಆದರೂ ಈ ದಾನ ಕಾರ್ಯಗಳನ್ನು ಸ್ವತಃ ದೀವಬ್ಬರಸಿಯೇ ನಡೆಸಿದ್ದಾಳೆ.

ಮತ್ತೊಂದು ಪ್ರಕರಣದಲ್ಲಿ ಜಕ್ಕಿಯಬ್ಬೆ ಎಂಬುವವಳು ತನ್ನ ಮಗಳು ಹಾಗೂ ಮೊಮ್ಮಗಳ ಸದ್ಗತಿಗಾಗಿ ದಾನ ನೀಡಿರುವುದನ್ನು ಕಾಣಬಹುದು. ಜಕ್ಕಿಯಬ್ಬೆಯು ಕೇತನಾಯಕನ ಮಡದಿ. ಇವರ ಮಗಳು ಚಿಕ್ಕ ಶಾಂತಲೆಯು ಹೊಯ್ಸಳ ದೊರೆ ವಿಷ್ಣುವರ್ಧನ ಕಿರಿಯರಸಿ. ಅತಿ ಕಿರಿಯ ವಯಸ್ಸಿನಲ್ಲಿಯೇ ಚಿಕ್ಕಶಾಂತಲೆ ಹಾಗೂ ಅವಳ ಮಗಳು ಬಪ್ಪಲೆ ಮರಣಿಸಿದಾಗ ಚಿಕ್ಕಶಾಂತಲೆಯ ತಾಯಿ ಜಕ್ಕಿಯಬ್ಬೆಯು ಮಗಳಿಗೂ ಮೊಮ್ಮಗಳಿಗೂ ಪರೋಕ್ಷವಿನಯವಾಗಿ ನಿರ್ಗುಂದನಾಡೊಳಗಿನ ಎಲೆಗುಂದದಲ್ಲಿ ಶಿವಪ್ರತಿಷ್ಠೆಯನ್ನು ಮಾಡಿ ಶಾಂತಲೇಶ್ವರ, ಬೊಪ್ಪಲೇಶ್ವರ ದೇವಾಲಯಗಳನ್ನು ಪರೋಕ್ಷವಿನಯವಾಗಿ ನಿರ್ಮಿಸಿದಳು ಎಂದು ಶಾಸನಗಳು ತಿಳಿಸುತ್ತವೆ. ಈ ದೇವಾಲಯಕ್ಕೆ ವಿಷ್ಣುವರ್ಧನನೂ ಪರೋಕ್ಷ ವಿನಯವಾಗಿ ಕೆಲವು ದತ್ತಿಗಳನ್ನು ನೀಡಿದ್ದಾನೆ.

ರಾಜಮನೆತನದವರಂತೆ ಸಾಮಾನ್ಯರೂ ಕೂಡ ಪರೋಕ್ಷವಿನಯವಾಗಿ ನೀಡಿರುವ ದಾನಗಳನ್ನು ಕಾಣಬಹುದು. ಸಾಮಂತ ಚಟ್ಟನ ಮಡದಿ ಚಂಡೌವೆನಾಯಕಿತಿ ಅಳಿಯ-ಮಗಳ ಸಮ್ಮುಖದಲ್ಲಿ ತನ್ನ ಪುರುಷ ಚಟ್ಟೆಯ ನಾಯಕನ ಪರೋಕ್ಷವಿನಯವಾಗಿ ದಾನ ನೀಡಿದ್ದಾಳೆ[೧೪]. ಅದೇ ರೀತಿಯ ಮಾಚಗಾವುಂಡ ತುರುಗಾಳದಲ್ಲಿ ಸತ್ತಾಗ ಮಾಚಗಾವುಂಡನ ಹೆಂಡತಿ ಜಾಗಿಯಬ್ಬೆಯು ಮಿಳ್ದು (ಮಿಂದು, ಶುಚಿಯಾಗಿ) ಮಗ ನಾಲಯ್ಯ ಮಾಚಗಾವುಂಡನ ಅಣ್ಣ ಜಿಟ್ಟಗಾವುಂಡರೊಂದಿಗೆ ಮತ್ತಿಗಟ್ಟದ ಬಯಲೊಳ್ ಬ್ರಾಹ್ಮಣಂ ಮದುವಯ್ಯಂಗ ಕಾಲಂ ಕರ್ಚ್ಚಿ ಗದ್ದೆಯನ್ನು ಧಾರೆಯರೆದಿದ್ದಾರೆ[೧೫].

ಅತ್ತಿಮಬ್ಬೆಯೂ ಕೂಡ ತನ್ನ ಪತಿ ನಾಗದೇವ ಮಡಿದಾಗ ಗುಡ್ಡಾನೂರಿನಲ್ಲಿ ನಾಗೇಶ್ವರ ದೇವಾಲಯವನ್ನು ನಿರ್ಮಿಸಿ, ಮಗ ಪಡೆವಳ ತೈಲನನ್ನು ಮುಂದಿಸಿರಿಕೊಂಡು ಪತಿಯ ಪರೋಕ್ಷವಿನಯಕ್ಕಾಗಿ ಸಮರ್ಪಿಸಿ ಶಾಸನ ಹಾಕಿಸಿದ್ದಾಳೆ. ಜೈನಶ್ರಾವಕಿಯಾಗಿ ಜೈನಧರ್ಮಕ್ಕೆ ತನ್ನನ್ನು ಸಮರ್ಪಿಸಿಕೊಂಡಿದ್ದರೂ ಅತ್ತಿಮಬ್ಬೆ ವೈದಿಕನಾಗಿದ್ದ ನಾಗದೇವನಿಗಾಗಿ ಮಾಡಿದ ಕಾರ್ಯ ಇದಾಗಿದೆ[೧೬]

ಕ್ರಿ.ಶ. ೧೫೭೦ರ ಶಾಸನವೊಂದು ತಿಳಿಸುವಂತೆ ಬಿಳಿಗೆಯ ಅರಸು ಮನೆತನದ ರಾಣಿ ವೀರಾಂಬಿಕೆಯು ತನ್ನ ಪತಿಯ ಪುಣ್ಯಾರ್ಥವಾಗಿ ಬೀಳಗಿಯಲ್ಲಿ ವಿರೂಪಾಕ್ಷ ಮಂದಿರವನ್ನು ಸ್ಥಾಪಿಸಿದ್ದಾಳೆ[೧೭].

ಕುಣಿಗಲು ತಾಲೂಕಿನ ಕೃಷ್ಣಸಾಗರ ಗ್ರಾಮದ ಶಾಸನ ೧೫೯೯ರಲ್ಲಿ ವಿಜಯನಗರದ ಅರಸು ಶ್ರೀರಂಗದೇವರಾಯನ

ಆಳ್ವಿಕೆಯಲ್ಲಿ ಯಲಹಂಕ ನಾಡಪ್ರಭು ಇಮ್ಮಡಿ ಹಿರೇಕೆಂಪೇಗೌಡರ ಪುಣ್ಯಸ್ತ್ರೀ ವೆಂಕಟಕೃಷ್ಣಾಜಮ್ಮನವರು ಕುಣಿಗಲಿಗೆ ಪಡುವ ದಿಕ್ಕಿನಲ್ಲಿ ಕಟ್ಟಿದ ವೆಂಕಟಕೃಷ್ಣಸಾಗರದ ಗ್ರಾಮ ಒಂದಕ್ಕೆ ೩೦ ಖಂಡುಗದ ಹೊಲವನ್ನು ದೊಡ್ಡಕೆರೆಯ ಕೆಳಗೆ ೨೦ ಖಂಡುಗದ ಗದ್ದೆಯನ್ನು ಗಂಗಾಧರಭಟ್ಟ ಯಲ್ಲಂಭಟ್ಟ ನರಸವದಾನಿ ಮಾದಲಾದ ೧೯ ಜನರಿಗೆ ಕ್ರಮವಾಗಿ ಒಂದರಂತೆ ವ್ರಿತ್ತಿಯನ್ನು ನೀಡಿ ತಮ್ಮ ಮಾವ ಇಮ್ಮಡಿ ಕೆಂಪೇಗೌಡರಿಗೆ ಅತ್ತೆ ಲಿಂಗಾಜಮ್ಮನವರಿಗೆ ಪುಣ್ಯವಾಗಲಿ ಎಂದು ಅಗ್ರಹಾರಕ್ಕೆ ದಾನ ಮಾಡಿದ ವಿಷಯ ಉಲ್ಲೇಖಿಸಿದೆ[೧೮].

ಇಲ್ಲಿ ಪತಿ, ಮಕ್ಕಳು, ಮಡದಿ, ಅತ್ತೆ–ಮಾವರನ್ನು ಉಲ್ಲೇಖಿಸಿ ಅಂತವರ ಪರೋಕ್ಷವಿನಯವಾಗಿ ನೀಡಿದ ದಾನಗಳನ್ನು ಕಾಣುತ್ತೇವೆ. ಕೆಲವು ಬಾರಿ ಮನೆತನದ ಎಲ್ಲರಿಗೂ ಸೇರಿದಂತೆ ದಾನ ನೀಡಿದ ಉದಾಹರಣೆಗಳೂ ಇವೆ. ಅಚ್ಯುತರಾಯನ ಸಾಮಂತ ರಯ್ಯನೆಂಬ ಪ್ರಾಂತೀಯ ಅಧಿಕಾರಿಯ ರಾಣಿ ಚೆನ್ನಾಂಬಿಕೆ ತನ್ನ ಪೂರ್ವಿಕರೆಲ್ಲರ ಆತ್ಮಗಳಿಗೆ ಶಾಂತಿ ನೀಡಲೆಂದು ಕ್ರಿ.ಶ. ೧೫೪೦ರ ಕೊಂಡವೀಡು ಹತ್ತಿರದ ವಂಕಾಯಲಪಾಡು ಬಳಿಯ ಗೋಪಿಸಮುದ್ರ ಕೆರೆಯ ಎಂಬ ಕೆರೆಯನ್ನು ನಿರ್ಮಿಸಿದ್ದಾಳೆ[೧೯]. ಇದೇ ಪ್ರಕಾರ ನಾಗಸಾನಿ ಎಂಬ ಸ್ತ್ರೀ ತನ್ನ ಪತಿ ಹಾಗು ಅವನ ೨೧ ಹಿರಿಯರ ಆತ್ಮಕ್ಕೆ ಶಾಂತಿ ಕೋರಿ ಕೆರೆಯನ್ನು ನಿರ್ಮಿಸಿದ್ದಾಳೆ[೨೦]

## ಇತರರಿಂದ ಮಾಡಿಸಲಾಗುತ್ತಿದ್ದ ದಾನ

ಕದಂಬ ರವಿವರ್ಮನ ಏಳನೆಯ ವರ್ಷದ ತಾಮ್ರಪಟ ಶಾಸನವು ತಿಳಿಸುವಂತೆ ಗೌತಮಗೋತ್ರದ ರವಿಶರ್ಮನಿಗೆ ಮಳಪಲ್ಲೀ ವಿಷಯದಲ್ಲಿದ್ದ ಅನ್ತರಪಲ್ಲೀ ಗ್ರಾಮವನ್ನು ತನ್ನ ಚಿಕ್ಕಮ್ಮನ ಕೋರಿಕೆಯ ಮೇರೆಗೆ ತನ್ನ ಚಿಕ್ಕಪ್ಪ ಭಾನುವರ್ಮನು ಶೀರಿಕೊಂಡಾಗ ಅವನಿಗೆ ಪುಣ್ಯಾಭಿವೃದ್ಧಿಯಾಗಲೆಂದು (ಮೋಕ್ಷ ದೊರೆಯಲೆಂದು) ದಾನ ನೀಡಿದ್ದಾನೆ. ಆದರೆ ಇಲ್ಲಿ ಭಾನುವರ್ಮನ ರಾಣಿ ಸ್ವತಃ ತಾನೇ ದಾನವನ್ನು ನಡೆಸದೆ ರವಿವರ್ಮನ ಮೂಲಕ ನಡೆಸಿರುವುದನ್ನು ಗಮನಿಸಬಹುದು[೨೧].

ಪರೋಕ್ಷವಿನಯವಾಗಿ ಮಾಡಲಾದ ದಾನ, ಧಾರ್ಮಿಕ ಕಾರ್ಯಗಳೆಲ್ಲ ಊರ್ಧ್ವಕ್ರಿಯೆ ಅಥವಾ ಅಪರಕ್ರಿಯೆಗೆ ಸಂಬಂಧಿಸಿದ್ದಾಗಿರುವುದಿಲ್ಲ. ಇದು ಮೃತರಿಗೆ ಪುಣ್ಯಪ್ರಾಪ್ತಿಯಾಗಲಿ, ಸ್ವರ್ಗ ಸಿಗಲಿ, ಮುಕ್ತಿ ದೊರಕಲಿ ಎಂಬ ಆಶಯದ ಮೇರೆಗೆ ನಡೆಸಲಾದ ಕಾರ್ಯಗಳಾಗಿರುತ್ತವೆ. ಕೆಲವೊಂದು ಪ್ರಕರಣದಲ್ಲಿ ತನಗೆ ಪುಣ್ಯ ಪ್ರಾಪ್ತಿಯಾಗಲಿ ಎಂದೇ ದಾನ ನೀಡಿರುವ ಉದಾಹರಣೆಗಳೂ ದೊರಕುತ್ತವೆ. ಮಧುಗಿರಿ ತಾಲ್ಲೂಕು ಗುಂಡ್ಲಹಳ್ಳಿಯ ಶಾಸನವೊಂದು ಮಲ್ಲಮ್ಮ ಎಂಬುವವಳ ಇಂತಹ ಕೋರಿಕೆಯನ್ನು ತಿಳಿಸುತ್ತದೆ. ಕಡೂತಿ ಎಂಬಲ್ಲಿ ಕೋಟೆಯನ್ನು ನಿರ್ಮಿಸುವಲ್ಲಿ ಧನ ಸಹಾಯ ಮಾಡಿರುವ ಈಕೆ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ ಬಾವಿಗಳನ್ನು ತೆಗೆಸಿದ್ದಾಳೆ. ತಾನು ನಿರ್ಮಿಸಿರುವ ಬಾವಿಯ ಸೋಪಾನದ ಮೇಲೆ ತನ್ನ ವಿಗ್ರಹವನ್ನು ಕೆಡೆಸಬೇಕು. 'ದಾರಿಯಲ್ಲಿ ಬರುವ ಪುಣ್ಯಾತ್ಮರು, ಬಾಯಾರಿ ಈ ಬಾವಿಯಲ್ಲಿ ನೀರು ಕುಡಿದು ತಮ್ಮ ದಣಿವು ಆರಿಸಿಕೊಳ್ಳಲಿ, ಆನಂತರ ಅದೇ ಬಾವಿಯ ನೀರನ್ನು ಎರಡು ಬೊಗಸೆ ತೆಗೆದು ಪಕ್ಕದಲ್ಲೇ ಇರುವ ನನ್ನ ವಿಗ್ರಹದ ಮೇಲೆ ಸುರಿಯಲಿ. ನಮ್ಮ ಸಂಬಂಧಿಗಳ ಮನೆಯಲ್ಲಿ ಹಸು ಎಮ್ಮೆ ಈದರೆ ಅವರು ಬೆಣ್ಣೆ ತುಪ್ಪಗಳನ್ನು ನನ್ನ ವಿಗ್ರಹಕ್ಕೆ ಬಳಿಯಬೇಕೆಂದು ಕೇಳಿಕೊಳ್ಳುತ್ತೇನೆಂದು' ಈಕೆ ಶಾಸನ ಬರೆಸಿದ್ದಾಳೆ. ತನ್ನ ಜೀವಿತಾವಧಿಯ ನಂತರವೂ ತಾನು ಮಾಡಿದ ಪುಣ್ಯಕಾರ್ಯ ಫಲವನ್ನು ನೀಡಬೇಕು ಅಲ್ಲದೆ ಅದನ್ನು ಜನರು ಸ್ಮರಿಸಿಕೊಳ್ಳಬೇಕೆಂಬ ವಿಶೇಷ ಬಯಕೆ ಇಲ್ಲಿ ಕಾಣುತ್ತೇವೆ. ತಿಪಟೂರಿನ ಶಾಸನವು ತಿಳಿಸುವಂತೆ ಹರಿಯಲೆ ಎಂಬಾಕೆ ತನ್ನ ಅವಸಾನ ಕಾಲದಲ್ಲಿ ಮಗನನ್ನು ಕರೆದು ತನ್ನ ಅವಸಾನಕ್ಕಾಗಿ ದುಃಖಿಸ ಬಾರದೆಂದು ತಿಳಿಸುತ್ತಾ, ಸಮಾಜಕ್ಕೆ ಹಿತವಾದ ಕಾರ್ಯವನ್ನು ಮಾಡುವಂತೆ ಕೋರಿದ್ದಾಳೆ. ಇದೇ ರೀತಿ ತಮ್ಮ ಪುಣ್ಯಪ್ರಾಪ್ತಿಗಾಗಿ ಕೆರೆ ನಿರ್ಮಾಣ ಮಾಡಿಸೆಂದು ಕೇಳಿಕೊಂಡ ತಾಯಿಯರನ್ನು ಶಾಸನಗಳು ಉಲ್ಲೇಖಿಸುತ್ತವೆ[೨೨]. ಈ ಮೇಲೆ ತಿಳಿಸಿರುವಂತೆ ಇವೆಲ್ಲಾ ನೇರವಾಗಿ ಉತ್ತರ ಕ್ರಿಯೆಯ ಭಾಗವಾಗಿಲ್ಲದಿದ್ದರೂ, ಅವಸಾನಾನಂತರ ಪುಣ್ಯಪ್ರಾಪ್ತಿಯಾಗಲೆಂದು ನಡೆಸಿದ ಕಾರ್ಯಗಳಾಗಿವೆ.

ಸಮಾಜದ ಜನಜೀವನದ ಚಿತ್ರಣವನ್ನು ಬಿಂಬಿಸುವ ಶಾಸನಗಳು, ಧಾರ್ಮಿಕ ವಿಧಿಗಳನ್ನು ನಡೆಸುವಲ್ಲಿ ಮಹಿಳೆಯರು ತೋರುತ್ತಿದ್ದ ಆಸಕ್ತಿ, ತಳೆಯುತ್ತಿದ್ದ ಪಾತ್ರಗಳನ್ನು ಕುರಿತಂತೆ ಹಲವಾರು ಪ್ರಕರಣಗಳನ್ನು ದಾಖಲಿಸಿವೆ. ಕೊಪ್ಪಳದ ಶಾಸನವೊಂದು[೨೩] ಶಾಂತಿಕಬ್ಬೆ ಎಂಬ ಸಾಮಾನ್ಯ ಮಹಿಳೆಯ ಚಿತ್ರಣವನ್ನು ನೀಡುತ್ತದೆ. ಮನೆತನದ ಯಶೋವೃದ್ಧಿಯಂತೆ ಬೆಳೆದ, ರತಿರೂಪದ ಈಕೆಗೆ ಜಕ್ಕ ಎಂಬಾತನೊಡನೆ ಮದುವೆಯಾಗುತ್ತದೆ. ಲೋಕದ ಜನರು ಕೊಂಡಾಡುವಂತೆ ಇವರಿದ್ದ ಸಂದರ್ಭದಲ್ಲಿ, ಯುದ್ಧವೊಂದರಲ್ಲಿ ಭಾಗವಹಿಸಿ ಜಕ್ಕನು ಮರಣ ಹೊಂದುತ್ತಾನೆ. ಪತಿಯ ಮರಣಾನಂತರ ಶಾಂತಿಕಬ್ಬೆಯು ಆತನ ಪರೋಕ್ಷವಿನಯಕ್ಕಾಗಿ ಕೇಶವನ ಪ್ರತಿಮೆಯನ್ನು ಮಾಡಿಸಿ, ಹಲವಾರು ದಾನಗಳನ್ನು ಮಾಡುತ್ತಾ, ವಿಷ್ಣುಧ್ಯಾನವನ್ನು ಕೈಗೊಂಡು ಕೆಲವು ವ್ರತಗಳನ್ನು ಸ್ವೀಕರಿಸಿ ಮುಂದಿನ ಜೀವನ ಕಳೆಯುತ್ತಿದ್ದಳೆಂಬ ವಿಚಾರವನ್ನು

ಬಹು ದೀರ್ಘವಾಗಿ ಶಾಸನವು ಬಣ್ಣಿಸಿದೆ. ಇದು ಪತಿಯ ಊರ್ಧ್ವಕ್ರಿಯೆಯ ನೇರ ವಿಧಿಯಾಗಿಲ್ಲವಾದರೂ ಪತಿಯ ಸದ್ಗತಿಗಾಗಿ ಸತಿಯು ಕೈಗೊಂಡ ಕಾರ್ಯಗಳಾಗಿವೆ. ಪತಿಯ ಮರಣಾನಂತರ ಸತಿಯರ ಜೀವನ ವಿಧಾನವೇ ಬದಲಾಗುತ್ತಿತ್ತು. ಅಲ್ಲದೆ ಪರಲೋಕ ಸೇರಿದ ಪತಿಯ ಸದ್ಗತಿಯ ದೃಷ್ಟಿಯಿಂದಲೇ ಕಟ್ಟುಪಾಡುಗಳನ್ನು ವಿಧಿಸುವ ಶಾಸ್ತ್ರಗಳ ಪ್ರಕಾರದಂತೆಯೇ ಆಕೆಯ ದಿನನಿತ್ಯದ ಚಟುವಟಿಕೆಗಳು ರೂಪುಗೊಳ್ಳುತ್ತಿದ್ದವು. ಇದು ಕೇವಲ ಪತಿಯಷ್ಟೇ ಅಲ್ಲದೆ, ಉಭಯಕುಲದ ಪಿತೃಗಳಿಗೆಲ್ಲಾ ಪುಣ್ಯ ತರಿಸುವ ಕಾರ್ಯವೆಂಬ ಉಲ್ಲೇಖಗಳೂ ಕಂಡುಬರುತ್ತವೆ. ಹೀಗೆ ಮಹಿಳೆಯರು ಕೆಲವೊಮ್ಮೆ ನೇರವಾಗಿ ಮತ್ತೆ ಕೆಲವು ಸಂದರ್ಭಗಳಲ್ಲಿ ಪರೋಕ್ಷವಾಗಿ ಧಾರ್ಮಿಕ ವಿಧಿಗಳಿಗೆ ಒಳಗಾಗುತ್ತಿದ್ದ ಇಂತಹ ಹಲವಾರು ಪ್ರಕರಣಗಳ ಮೇಲೆ ಶಾಸನಗಳು ಬೆಳಕುಚೆಲ್ಲುತ್ತದೆ.



## ಅಡಿಟಿಪ್ಪಣಿ

೧. ಸೊರಬದ ಕುರುಗೋಡಿನ ವೀರಗಲ್ಲು "ಮಡಿದ ಅಣ್ಣಂದಿರಂ ಸಂಸ್ಕರಿಸಿ ಜಲದಾನಕ್ರಿಯೆಯಂ..."

೨. ಕೆ.ಐ. ೫, ಶಾ.ಸಂ. ೫೪ರಲ್ಲಿ ಮಾಚಿಗಾವುಂಡ ಮಡಿದಾಗ ಮಗ ಬೊಪ್ಪಗಾವುಂಡನು "ಸುಪುತ್ರ ಕುಲದೀಪಕ ಎಂಬ ಧ್ಯಾನಾದಿ ಪರೋಕ್ಷಕ್ರಿಯೆಗಳನ್ನು ಮಾಡಿ.." ಎಂಬ ವಿವರವಿದೆ.


೩. ಡಾ. ಪಿ.ಎನ್. ನರಸಿಂಹಮೂರ್ತಿ, ಅಳುಪ ಅರಸು ಮನೆತನದ ರಾಣಿಯರು ಮತ್ತು ರಾಜಕುವರಿಯರು, ಇತಿಹಾಸ ದರ್ಶನ ಸಂ.೨೭/೨೦೧೨; ಕಾಪರ್ ಪ್ಲೇಟ್ ಇನ್ಸ್ಕ್ರಿಪ್ಷನ್ಸ್ ಆಫ್ ಆಂಧ್ರಪ್ರದೇಶ, ಸರ್ಕಾರಿ ವಸ್ತುಸಂಗ್ರಹಾಲಯ, ಹೈದರಾಬಾದ್ (ಸಂ–೧) ಸಂ.ಎನ್. ರಮೇಶನ್ ಎ.ಪಿ.ಜಿ ಎ.ಎಸ್–೬, ಹೈದರಾಬಾದ್ ೧೯೬೨, ಪು. ೧೧–೫೯.

೪. ಎಸ್.ಐ.ಐ. ೯–೧ ೯೧ & ೯೨(ತಾ) ಬಳ್ಳಾರಿ ಕ್ರಿ.ಶ. ೧೦೩೬.

೫. ಎಕ ೩, ಮೈಸೂರು, ೨೧, ೧೩೮೨.

೬ ಕ.ವಿ.ಶಾ.ಸಂ. ೧ ಬಳ್ಳಾರಿ ಜಿಲ್ಲೆ, ಶಾಸಂ.೮ ಹೊಸಪೇಟೆ.

೭. ಎಪಿಗ್ರಾಫಿಯ ಕರ್ನಾಟಕ vii ಶಿಕಾರಿಪುರ, ೮೩, ಕ್ರಿ.ಶ. ೧೦೫೮.

೮. ಎಪಿಗ್ರಾಫಿಯ ಕರ್ನಾಟಕ v ಅರಕಲಗೂಡು ೭೬, ಕ್ರಿ.ಶ. ೧೦೨೫.

೯. ಇಂಡಿಯನ್ ಆಂಟಕ್ವೆರಿ xv, ಪು. ೭೪ ಹತ್ತನೆಯ ಶತಮಾನ.

೧೦. ಎಪಿಗ್ರಾಫಿಯ ಕರ್ನಾಟಕ viii, ಸೊರಬ ೪೬೮, ಕ್ರಿ.ಶ. ೧೧೧೨.

೧೧. ತಿಪಟೂರು ೩೧.

೧೨. ಆರ್. ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಕ.ಸಾ.ಪ, ಚಾಮರಾಜಪೇಟೆ, ಬೆಂ. ಪು. ೯೮.

೧೩. ಎಪಿಗ್ರಾಫಿಯ ಕರ್ನಾಟಕ, x ಮುಳಬಾಗಿಲು ೩೮, ಕ್ರಿ.ಶ. ೯೮೨ ಹಾಗೂ ಶಾಸನ ಸಂಖ್ಯೆ ೫೦.

೧೪. ಎ.ಕ. ೬, ಕಡೂರು ೩೭ ವಕ್ಕಲಗೆರೆ (ಕ್ರಿ.ಶ. ೧೨೦೩).

೧೫. ಎ.ಕ. ೭, ಶಿ, ೮೮, ೧೦೫೮.

೧೬. ದೇವರಕೊಂಡಾರೆಡ್ಡಿ, ಕರ್ನಾಟಕ ಇತಿಹಾಸ ಇತ್ತೀಚಿನ ಶೋಧಗಳು, ಕೈದಾಳ – ಕೆ.ಆರ್.ಗಣೇಶ ಅಭಿನಂದನಾ ಗ್ರಂಥ, ಪು. ೧೪೮.

೧೭. K.R.I Annual Report: 87 of 1939-40.

೧೮. ಕುಣಿಗಲು–೧೨.

೧೯. S.I.I Vol.XVI, No.121 p.134 & Ramanayya N.V ; Op. Cit 24.p.187.. E.C Vol.IX.Bn.56, p. 23.

೨೦. E.C Vol. IX.Bn. 56, p. 23.

೨೧. ಸ್ವರ್ಣವಲ್ಲಿ.

೨೨. ಎ.ಕ. ಸಂ. ೧೨ ತಿಪಟೂರು ೯೩ ಮತ್ತು ೯೪.

೨೩. ಕ.ವಿ.ಶಾ.ಸಂ. ೨, ಕೊಪ್ಪಳ ೧, ಕ್ರಿ.ಶ. ೧೧೯೭.



# ಹರಿಹರದ ಶಾಸನಗಳಲ್ಲಿಯ ಸಂಗೀತದ ವಿಶ್ಲೇಷಣೆ

ಡಾ. ಹರಿಹರ ಶ್ರೀನಿವಾಸರಾವ್*

**"ಕರ್ನಾಟಕವು ಸಂಗೀತದ ತವರು"**. ಈ ನೆಲದಲ್ಲಿ ಉದಿಸಿದ ಮತಂಗರು, ಶರಣರು, ಶ್ರೀ ಪುರಂದರ, ಕನಕ ದಾಸರಾದಿಯಾಗಿ ಅನೇಕ ರಾಜರು, ಕವಿಗಳು, ಶಿಲ್ಪಿಗಳು, ಇಲ್ಲಿಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ್ದಾರೆ. ಇಷ್ಟೇ ಅಲ್ಲದೆ ಆಚಂದ್ರಾರ್ಕ ತಾರಾಂಬರವಾಗಿ ತಮ್ಮಕೀರ್ತಿಯನ್ನು ಶಾಸನ ಸಂಪತ್ತಿನಲ್ಲಿ, ಕಲೆ ಅರಳಿಸಿರುವುದನ್ನು ಸಂಗೀತ ಸುರಭಿಯ ಗುಂಜಾರವವನ್ನು ನವರಂಗಗಳಲ್ಲಿ, ಇಂದಿಗೂ ಕಂಡು ಕೇಳಬಹುದಾಗಿದೆ. ಸಂಗೀತವಾದ್ಯಗಳೊಂದಿಗೆ ನೃತ್ಯೈಸುತ್ತಿರುವ ಅನೇಕ ಭಂಗಿಗಳು ಹರಿಹರೇಶ್ವರ ದೇವಾಲಯದ ಹೊರಭಿತ್ತಿಗಳಲ್ಲಿವೆ. ಸಾಮಾನ್ಯವಾಗಿ ಹೇಳುವು ದಾದರೆ ಸಂಗೀತವನ್ನೇ ಕುರಿತು ಈ ಶಾಸಗಳಲ್ಲಿ ಪ್ರತ್ಯೇಕವಾಗಿ ಉಲ್ಲೇಖಿಸುವ ಉದ್ದೇಶವಿಲ್ಲವಾದರೂ ಪರೋಕ್ಷವಾಗಿ ಸಂಗೀತದ ಪರಿಭಾಷೆಯ ಶಬ್ದಗಳು ಇರುವುದರಿಂದ ಕಾಲ ನಿರ್ಣಯ, ಭಾಷೆ, ಇತ್ಯಾದಿಗಳಿಗೆ ಐತಿಹಾಸಿಕ ಮಹತ್ವನ್ನು ತಂದುಕೊಡುವಲ್ಲಿ ಮಹತ್ವದ ಪಾತ್ರವನ್ನು ಹೊಂದಿವೆ ಎನ್ನುವುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥದೊಂದು ಸಣ್ಣ ಪ್ರಯತ್ನ ಈ ಸಂಪ್ರಬಂಧದ ಸಾರಾಂಶವಾಗಿದೆ.

ಹರಿಹರೇಶ್ವರ ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ನೆಟ್ಟ (ದಾವಣಗೆರೆ ೪೫) ಶಾಸನದ ೧೫ ಸಾಲಿನಲ್ಲಿ .. (ಪ್ರ)ತಾಪ ಚಕ್ರವರ್ತಿ ಎಂಬ ಉಲ್ಲೇಖವಿದೆ. ಈತನು ಇಮ್ಮಡಿ ಜಗದೇಕಮಲ್ಲ ಪ್ರತಾಪ ಚಕ್ರವರ್ತಿಯಾಗಿದ್ದು "ಸಂಗೀತ ಚೂಡಾಮಣಿ" ಎಂಬ ಗ್ರಂಥದ ಕರ್ತೃ ಮತ್ತು ವಿದ್ವತ್ ಪಕ್ಷಪಾತಿಯಾಗಿದ್ದ ಚಾಲುಕ್ಯರ ರಾಜನಾಗಿದ್ದ. ಶಾಸನದ ಕಾಲ ಕ್ರಿ.ಶ. ಸು. ೧೧೪೦.

ಶಾರ್ದೂಲ ವೃತ್ತದಲ್ಲಿ ರಚಿತವಾಗಿರುವ (ದಾ. ೪೧ ಕ್ರಿ.ಶ. ೧೧೪೮) ಶಾಸನದಲ್ಲಿ "ಶ್ರೀ ಹರ್ಷೋತ್ಪಳ ಭೋಜವತ್ಸ ನೃಪತಿ ಶ್ರೀ ವಿಕ್ರಮಾದಿತ್ಯರಿಂ" ಎಂಬ ವಾಕ್ಯ ಒಂದಿದೆ. ಇಲ್ಲಿ ಬರೆದಿರುವ ಶ್ರೀಹರ್ಷ "ಪ್ರಿಯದರ್ಶಿಕಾ", ರತ್ನಾವಳಿ, ನಾಗಾ ನಂದ, ನಾಟಕಗಳ ಕರ್ತೃ, ಹರ್ಷ ಉತ್ತರಾಪಥದ ಚಕ್ರವರ್ತಿ ಯಾದರೆ ಭೋಜರಾಜ ಮಾಳವದೇಶದ ರಾಜ. ಒಂದನೆಯ ನಾಗವರ್ಮನ "ಕರ್ನಾಟಕ ಕಾದಂಬರಿ"ಗೆ ಜಾತ್ಯಶ್ವಗಳನ್ನು ಕೊಟ್ಟು ಕವಿಯನ್ನು ಗೌರವಿಸಿದವನು. ಇನ್ನು "ವತ್ಸ ನೃಪತಿ" ವೀಣೆಯನ್ನು ನುಡಿಸಿ ಆನೆಗಳನ್ನು ಹಿಡಿಯುವುದರಲ್ಲಿ ಪ್ರವೀಣ ನಾಗಿದ್ದ ಉದಯನ! ಈ ಶಾಸನದ ಕವಿಯಾದ ಮಧುಸೂಧನ ನೆಂಬುವನು ರಾಜಗುರುವೂ ಆಗಿದ್ದವ. ಚಾಲುಕ್ಯ ಚಕ್ರವರ್ತಿ ಮೂರನೇ ಸೋಮೇಶ್ವರನ ಮಗ ಇಮ್ಮಡಿ ಜಗದೇಕಮಲ್ಲನ ಸಾಮಂತ ವೀರಪಾಂಡ್ಯನ ಕಾಲದಲ್ಲಿ ಇದ್ದವನು. ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಶಾಸನ ಬರೆದಿದ್ದು ಸುಶ್ರಾವ್ಯ ವಾದ ಸಂಗೀತದ ಲಕ್ಷಣಗಳನ್ನು ಸೂತ್ರರೂಪದಲ್ಲಿ ಹೀಗೆ ವರ್ಣಿಸಿದ್ದಾನೆ:

> **"ಸರಸ ಶೃತೀಸ್ವರ ಶ್ರವಣ ಪುಟಪೇಯಗೇಯಾಮೃತ ರಸಾಸ್ವಾದ ಸಂಜನಿತ ಸಂತತೋದ್ದರ್ಷ"**.

ಸುಶ್ರಾವ್ಯವಾದ ಶಾರೀರ ಹೊಂದಿದ್ದಾಗ ಶೃತಿ ತಾನೇ ತಾನಾಗಿ ಎಷ್ಟು ಎತ್ತರಕ್ಕೆ ಅಥವಾ ತಗ್ಗಿರುವ ಧ್ವನಿಯಲ್ಲಿ ಹಾಡಿದರೂ ಸರಸ ಎಂದರೆ ಸುಲಭವಾಗಿ ಧ್ವನಿ ಸಂಚಾರ ವಾಗುವುದಷ್ಟೇ ಅಲ್ಲ ಪ್ರತಿಯೊಂದು ಸ್ವರವು ಅದು ವಾದಿ ಯಾಗಿರಲೀ ಅಥವಾ ಸಂ-ವಾದಿಯಾಗಿರಲಿ ಕೇಳುವವರಿಗೆ ಹಿತವನ್ನು ಉಂಟು ಮಾಡುತ್ತಲೇ ನರಂತರವಾಗಿ ಸಂತೋಷ ವನ್ನು ಉಂಟು ಮಾಡುತ್ತದೆ. ಹೇಗೆಂದರೆ ಪ್ರತಿಯೊಂದು ಸ್ವರವೂ ನಿರ್ದಿಷ್ಟವಾಗದ ಮನೋಭೂಮಿಕೆಯಲ್ಲಿ ಬೆಂದು ಪುಟಕ್ಕಿಟ್ಟ ಚಿನ್ನದಂತೆ ಹೊಳಪನ್ನು ಪಡೆಯುತ್ತದೆಯೋ ಹಾಗೆ ಸಂಗೀತ- ಸಾಹಿತ್ಯಗಳ ರಸಾಸ್ವಾದನೆಯಿಂದ ಹುಟ್ಟಿದ ರಸ ಮತ್ತು ಸಂತೋಷಗಳು ನಿರಂತರವಾಗಿ ಕೇಳುಗರ ಮನಸ್ಸಿನಲ್ಲಿ ಉತ್ಸಾಹ, ಉಲ್ಲಾಸಗಳನ್ನು ಅಮೃತದಂತೆ ನೀಡುತ್ತವೆ.

ಕದಂಬ ಕುಲದ ಸೋಯಿ ದೇವನ ಸಂಗೀತ ಪ್ರೇಮ ವನ್ನು ಶಾಸನ ಸಂಖ್ಯೆ ೩೫ (ಕಾಲ ಕ್ರಿ.ಶ.ಸು.೧೧೬೦) ರಲ್ಲಿ ವರ್ಣಿಸುವಾಗ, ಸಂಗೀತದ ಪಾರಿಭಾಷಿಕ ಶಬ್ದಗಳಾದ ಶೃತಿ, ಸ್ವರ, ಗ್ರಾಮ, ಮೂರ್ಛನ, ತಾನ, ಗಾನ, ಭೇದಗಳನ್ನು ಹೇಳುತ್ತಾ, ಆತನನ್ನು ನಾಟ್ಯಕರ್ತೃ "ಭರತ"ನಿಗೆ ಹೋಲಿಸಿ ದ್ದಾನೆ.

ಕಂದಪದ್ಯ: ತತವಿತತೋದ್ಯದ್ವಾದ್ಯ ಶೃತಿ ಸ್ವರ ಗ್ರಾಮ ಮೂರ್ಛನಾತಾನಸಮ....ಗಾನ ಭೇದದೊಳ್ ತಾ ನತಿಚತುರಂ ಭ(ರ)ತನಂತೆ ಸೋಮನೃಪಾಳಂ (೩೭ ಸಾಲು).

ಶೃತಿ: ಹ್ರಸ್ವಕ್ಷರ ಉಚ್ಚಾರಣೆಗೆ ಸಮಕಾಲವಾಗಿ ಸ್ವರವು ಆರಂಭವಾಗುವ ಧ್ವನಿ ವಿಶೇಷಕ್ಕೆ ಶೃತಿ ಎಂದು ಹೆಸರು.

* ಸಮರ್ಥ, ೭೫/೧೭, ವಿಕಾಸ್ ಹೈಸ್ಕೂಲ್ ಎದುರು ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫.

ಶ್ರುತಿಯಲ್ಲಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ದೈವತ, ನಿಷಾಧಗಳೆಂಬ ಸ್ವರಗಳು ಹುಟ್ಟಿ, ಇವಕ್ಕೆ "ಸರಿಗಮಪದನಿ" ಎನ್ನುವ ವರ್ಣ ಸಂಕೇತಗಳಿವೆ.

ಇವು ೨೨ ಭೇದಗಳಾಗಿ ಸಪ್ತಸ್ವರಗಳಲ್ಲಿ ವ್ಯವಸ್ಥಿತ ವಾಗಿವೆ. ಅಮರಕೋಶದಲ್ಲಿ ಇವುಗಳ ವಿವಿರಗಳಿವೆ. ಪ್ರಾಣಿ ಪ್ರಪಂಚದಿದಂದ ಅವುಗಳನ್ನು ಹೇಗೆ ನೇರವಾಗಿ ಪಡೆಯಲು ಬರುತ್ತದೆ ಎಂಬ ಅನುಭವ ವೇದ್ಯ ಸತ್ಯ ಸಂಗತಿಗಳಿವೆ ಎನ್ನುವುದನ್ನು ಈಗ ತಿಳಿಯೋಣ. ನವಿಲು-ಷಡ್ಜ(ಸ), ರಿಷಭ (ರಿ=ಎತ್ತು), ಆಡು-(ಗ) ಗಾಂಧಾರ, ಕ್ರೌಂಚಪಕ್ಷಿ-(ಮ) ಮಧ್ಯಮ, ವಸಂತ ಋತುವಿನ ಕೋಗಿಲೆಯ ಸ್ವರ-(ಪ) ಪಂಚಮ, ಕುದುರೆ-(ದ) ದೈವತ, ಆನೆ-(ನಿ) ನಿಷಾಧ ಸ್ವರವನ್ನು ಕೂಗುತ್ತದೆ. ಈ ಪ್ರಾಣಿಗಳ ಧ್ವನಿಯನ್ನು ಗುರುತಿಸಿ ಚಿತ್ರಗಳನ್ನು ತೋರಿಸಿ ಸಭಿಕರೆದುರು ಪ್ರದರ್ಶಿಸಿದಾಗ ಇದೊಂದು ವಿಭಿನ್ನ ರೀತಿಯ ವಿಶಿಷ್ಟ ಪ್ರದರ್ಶನ ಪ್ರಯತ್ನವೆಂಬ ಪ್ರಶಂಸೆಗೆ ಒಳಗಾಯಿತು.

ಗ್ರಾಮ: ಹಲವು ಕುಟುಂಬಗಳು ಸೇರಿದರೆ ಗ್ರಾಮ ವಾಗುವಂತೆ ಸ್ವರಸಮೂಹವು ಸೇರಿದರೆ ಗ್ರಾಮವಾಗುವುದು. ಇದರಲ್ಲಿ ಷಡ್ಜಗ್ರಾಮ, ಮಧ್ಯಮಗ್ರಾಮ, ಗಾಂಧಾರ ಗ್ರಾಮ ಎಂದು ೩ ವಿಭಾಗಗಳಿವೆ. ಈ ಮೂರಕ್ಕೆ ೧. ಸಂಧ್ಯಾವರ್ತ, ೨. ಜೀಮೂತ ೩. ಸುಭದ್ರ ಎಂದು ಹೆಸರು. ಇದರಲ್ಲಿ ಜೀಮೂತ ಗಮಕದ ಉದಾಹರಣೆ ಹೀಗಿದೆ.

೧. ಮಪದನಿಸರಿಗ ......... ಸಾರಿಣಿ
೨. ಪದನಿಸರಿಗಮ ........ ಹರಿಣಾಶ್ವ
೩. ದನಿಸರಿಗಮಪ ....... ಕಲೋಪಗತ್
೪. ನಿಸರಿಗಮಪದ ....... ಶುದ್ಧ ಮಧ್ಯಮ
೫. ಸರಿಗಮಪದನಿ ....... ಮಾರ್ಗ
೬. ರಿಗಮಪದನಿಸ ....... ಕೌರವಿ
೭ ಗಮಪದನಿಸರಿ ....... ಹೃಷಕ

ಮೂರ್ಛನ: ಷಡ್ಜ ಸ್ವರದಿಂದ ಮೊದಲಾಗಿ ನಿಷಾಧದಲ್ಲಿ ಕೊನೆಗೊಳ್ಳುತ್ತದೆ. ೨ನೆಯ ಸ್ವರವಾದ ರಿಷಭದಿಂದ ಮೊದಲಾಗಿ ಷಡ್ಜದಲ್ಲಿ ಕೊನೆಗೊಳ್ಳುತ್ತದೆ. ಗಾಂಧಾರದಲ್ಲಿ ಮೊದಲಾಗಿ ರಿಷಭದಲ್ಲಿ ಕೊನೆಗೊಳ್ಳುತ್ತದೆ. ಈ ಸಪ್ತಕ (೭ ಸ್ವರಗಳ ಮಾಲೆ)ಗಳ ಮಾಲಿಕೆಗೆ "ಮೂರ್ಛನೆ" ಎಂದು ಹೆಸರು. "ಏಕವಿಂಶತಿ(೨೧ ರೀತಿಯ) ಮೂರ್ಚನೆ"ಗಳ ಪ್ರಸ್ತಾಪ "ಶಾಂತೀಶ್ವರ ಪುರಾಣ"ದಲ್ಲಿಯೂ ದೊರಕುತ್ತದೆ (೧೬-೬೭ವ). ಇಲ್ಲಿ ಉಲ್ಲೇಖಗೊಂಡಿರುವ ಶಬ್ದಗಳು ಇಂದಿಗೂ ಕರ್ನಾಟಕ ಸಂಗೀತದಲ್ಲಿ ಅದೇ ಕ್ರಮದಲ್ಲಿ ಉಪಯೋಗಿಸಲಾಗುತ್ತದೆ ಎನ್ನುವುದು ಗಮನಿಸಬೇಕಾದ ಸಂಗತಿಯಾಗಿದೆ.

ಸಮಧಿಗತ ಮಹಾಶಬ್ದ (ದಾ.ಶಾ. ೪೧ ಕ್ರಿಶ. ೧೧೪೮ ಸಾಲು ೮೯). ಶಾಸನ ಕೋಶದಲ್ಲಿ ಪಂಚ ಮಹಾಶಬ್ದಗಳಿಗೆ ನೀಡಲಾಗಿರುವ ವಿವರಣೆ ಹೀಗಿದೆ. ಐದು ಸಂಗೀತ ಮಹಾಶಬ್ದಗಳನ್ನು ಅನುಭವಿಸುವ ಇಲ್ಲವೇ ಮಹತ್ ಶಬ್ದದಿಂದ ಮೊದಲಾಗುವ ಐದು ಬಿರುದುಗಳನ್ನು ಅನುಭವಿಸುವುದಕ್ಕೆ ಸಂಬಂಧಿಸಿದ ಪಾರಿಭಾಷಿಕ ಶಬ್ದ ಇದು. ಅಲ್ಲದೇ ಸಾಮಂತರಿಗೆ ಸಂಬಂಧಿಸಿದಂತೆ ಐದು ಅಧಿಕಾರಿಗಳ ಹೆಸರುಗಳು, ಇಲ್ಲವೇ ಐದು ಸಂಗೀತವಾದ್ಯಗಳು, ಉತ್ತರ ಭಾರತಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಈ "ಮಹತ್" ಶಬ್ದವು ಐದು ಅಧಿಕಾರಿಗಳ ಸ್ಥಾನವನ್ನು ತಿಳಿಸುತ್ತದೆ. ಅದೇ ಶಬ್ದವು ದಕ್ಷಿಣ ಭಾರತದಲ್ಲಿ "ಕೊಂಬು, ತಮಟೆ, ಶಂಖ, ಭೇರಿ, ಹಾಗೂ ಜಾಗಟೆಗಳನ್ನು ಸಂಕೇತಿಸುತ್ತದೆ.

ಚಕ್ರವರ್ತಿಗಳು ತಮ್ಮ ಸಾಮಂತರಿಗೆ "ಸಮಧಿಗತ ಮಹಾಶಬ್ದ"ದ ಪ್ರಶಸ್ತಿಯನ್ನು ದಯಪಾಲಿಸುತ್ತಿದ್ದರು. ಇದು ಕೆಲವು ವೇಳೆ ಚಕ್ರವರ್ತಿಗಳ ಬಿರುದಾವಳಿಯೂ ಆಗಿರುತ್ತಿತ್ತು.

೧. ಹರಿಹರದ ಶಾಸಗಳಲ್ಲಿ ಸಂಗೀತ ಶಾಸ್ತ್ರಗ್ರಂಥ ಕರ್ತನಾದ ಇಮ್ಮಡಿ ಜಗದೇಕಮಲ್ಲ ಪ್ರತಾಪ ಚಕ್ರವರ್ತಿಯ ಹೆಸರಿದ್ದು ಆತನ ಕಾಲ ಕ್ರಿ.ಶ. ಸು. ೧೧೪೦ ಎಂದು ಈತ "ಸಂಗೀತ ಚೂಡಮಣಿ" ಎನ್ನುವ ಗ್ರಂಥವನ್ನು ರಚಿಸಿರುತ್ತಾನೆ

೨. ಸಂಗೀತದ ಗೇಯಗುಣ ಎಂದರೆ ಕಿವಿಗೆ ಇಂಪಾಗಿ, ಪ್ರಕ್ಷುಬ್ಧ ಮನಸ್ಸಿಗೆ ತಂಪನ್ನು ಉಂಟುಮಾಡುವ ಗಮಕಗುಣ, ಸ್ವರ ಶುದ್ಧತೆಗಳನ್ನು ಸೇರಿಸಿ ಪುಟಕ್ಕಿಟ್ಟ ಚಿನ್ನದಂತೆ ಸಾಧನೆ ಮಾಡಿದಾಗ, ಸರಸ ಎಂದರೆ ಸುಲಭವಾಗಿ/ರಸ ಸ್ಫುರಣೆ ತಾನೇ, ತಾನಾಗಿ ಮೆದುಳಿನಲ್ಲಿ ಉಂಟಾಗುವುದರಿಂದ ಮನಸ್ಸಿನ ದುಗುಡಗಳೆಲ್ಲಾ ಮಾಯವಾಗಿ ಉತ್ಸಾಹದ ಚಿಲುಮೆಯಾಗುತ್ತದೆ ಎನ್ನುವ ಅತ್ಯಂತ ಸೂಕ್ಷ್ಮ ವೈಜ್ಞಾನಿಕ ದೃಷ್ಟಿಕೋನದ ಸತ್ಯ ಸಂಗತಿಯನ್ನು ೮೭೫ ವರ್ಷಗಳ ಹಿಂದೆಯೇ ನಮ್ಮೂರಿನ ಶಾಸನಗಳು ಜಗಜ್ಜಾಹೀತು ಪಡಿಸುತ್ತಿವೆ. ಇಲ್ಲಿ ಗಮನಿಸಬೇಕಾದ ಬಹು ಮುಖ್ಯ ಸಂಗತಿ ಎಂದರೆ ಆ ಸಮಯದಲ್ಲಿ ಈಗಿನಂತೆ ಸೂಕ್ಷ್ಮಗ್ರಾಹಿ ಧ್ವನಿ ತರಂಗಗಳನ್ನು ಗುರುತಿಸುವ ಯಾವ ಆಧುನಿಕ ಯಂತ್ರ ಸಾಧನಗಳು ಆವಿಷ್ಕಾರಗೊಳ್ಳದೇ ಇರುವಾಗ ಇಂತಹ ಸಂಕೀರ್ಣ ಸಂಗತಿಗಳನ್ನು ಹೇಗೆ ಗ್ರಹಿಸುತ್ತಿದ್ದರು ಎನ್ನುವ ಅಂಶ ಎಂಥವರನ್ನೂ ಕಾಡದೇ ಬಿಡುವುದಿಲ್ಲ.

ಈ ಮೇಲಿನ ಸಂಗೀತ ಸೂಕ್ಷ್ಮಗಳನ್ನು ಒಳಗೊಂಡಿ ರುವ ಹರಿಹರದ ದೇವಸ್ಥಾನ ಹಾಗೂ ಅದರ ಸುತ್ತಲೂ ಇರುವ ಶಾಸನಗಳು, ಭಿತ್ತಿ ಇತ್ಯಾದಿಗಳಲ್ಲಿ ಕಂಡು ಬರುವ ಭರತ ನಾಟ್ಯ ಶಾಸ್ತ್ರದ ಅಪರೂಪದ ಶಿಲ್ಪಗಳು, ಸಂಗೀತದ ಸೂಕ್ಮಗಳು ಶಾಸನಗಳ ಮೂಲಕವೇ ಪ್ರಸ್ತುತ ಪಡಿಸಿರುವುದು ನಮ್ಮೂರಿನ ಒಂದು ವಿಶೇಷವೇ ಸರಿ.



# ಮಂಡ್ಯ ಜಿಲ್ಲೆಯ ಚತುರ್ವೇದಿ ಮಂಗಲಗಳು

ಡಾ. ಕೆ. ವಸಂತಲಕ್ಷ್ಮಿ*

ಕರ್ನಾಟಕದಲ್ಲಿ ವೈಷ್ಣವ ಮತವು ಪ್ರಾಚೀನ ಕಾಲದಿಂದಲೂ ನೆಲೆಸಿತ್ತು. ಶ್ರೀ ರಾಮಾನುಜಾಚಾರ್ಯರು ೧೧ನೇ ಶತಮಾನದಲ್ಲಿ ತಮ್ಮ ವಿಶಿಷ್ಟಾದ್ವೈತ ಸಂಪ್ರದಾಯವನ್ನು ಪರಿಚಯಿಸಿ ಪ್ರಚಲಿತಗೊಳಿಸಿದರು. ಲಕ್ಷ್ಮೀ ವಿಶಿಷ್ಟವಾದ ಶ್ರೀಮನ್ನಾರಾಯಣನೇ ಪರದೈವವೆಂದು ಪ್ರತಿಪಾದಿಸುವ ಈ ವಿಶಿಷ್ಟಾದ್ವೈತ ಸಿದ್ಧಾಂತದ ಅನುಯಾಯಿಗಳನ್ನು ಶ್ರೀ ವೈಷ್ಣವ ರೆನ್ನುವರು. ಶ್ರೀರಾಮಾನುಜಾಚಾರ್ಯರು ಬೇಧಭಾವವೆಣಿಸದೆ, ಕೆಳ ವರ್ಗದ ಜನರಿಗೂ, ಸ್ತ್ರೀಯರಿಗೂ ಶ್ರೀವೈಷ್ಣವ ದೀಕ್ಷೆ ನೀಡಿ 'ಶ್ರೀ ವೈಷ್ಣವ'ರೆನ್ನಿಸಲು ಅವಕಾಶ ಮಾಡಿಕೊಟ್ಟರು. ಶ್ರೀ ವೈಷ್ಣವ ತತ್ವದ ಪ್ರಕಾರ ದೇವರನ್ನು ಒಲಿಸಿಕೊಳ್ಳಲು 'ಪ್ರಪತ್ತಿ ಮಾರ್ಗ'ವನ್ನು ರೂಪಿಸಿಕೊಟ್ಟು ಎಲ್ಲರನ್ನು ಮುಕ್ತಿಮಾರ್ಗಕ್ಕೆ ಕೊಂಡೊಯ್ದರು. ಪ್ರಪತ್ತಿ ಎಂದರೆ ಭಗವಂತನಲ್ಲಿ ಅನನ್ಯ ಭಕ್ತಿಯಿಂದ ಮಾಡುವ ಶರಣಾಗತಿ, ಆತ್ಮಸಮರ್ಪಣೆ, ಸುಲಭವಾದ, ಶೀಘ್ರ ಫಲಪ್ರದವಾದ ಈ ಪ್ರಪತ್ತಿ ಮಾರ್ಗದಲ್ಲಿ ನಡೆದ ಶ್ರೀವೈಷ್ಣವರು ದೇವರ ದಾಸರೆನಿಸಿದರು. ಆಚಾರ್ಯರು ವಿಷ್ಣು ದೇವಾಲಯದ ಪೂಜಾ ಕಾರ್ಯಗಳನ್ನು ಪಾಂಚರಾತ್ರಾಗಮದಂತೆ ನಡೆಸುವಂತೆ 'ನಿಯಮಪ್ಪಡಿ-'ಯನ್ನು ರೂಪಿಸಿದರು ಶ್ರೀ ವೈಷ್ಣವ ಪಂಥಕ್ಕೆ ಸೇರಿದ್ದ ಎಲ್ಲ ಜನರಿಗೂ ದೇವಾಲಯಗಳಿಗೆ ಪ್ರವೇಶ ಕಲ್ಪಿಸಿದರಲ್ಲದೇ ವಿವಿಧ ರೀತಿಯ ಪೂಜಾ ಕಾರ್ಯಗಳಲ್ಲಿ ಪಾಲ್ಗೊಳ್ಳಲು ಅನುವು ಮಾಡಿಕೊಟ್ಟರು ಹೀಗೆ ಮಾಡಿದ್ದರಿಂದ ರಾಮಾನುಜರು ನೆಲೆಸಿದ್ದರೆಂದು ಹೇಳುವ ಪ್ರದೇಶಗಳು ಇಂದಿಗೂ ಶ್ರೀವೈಷ್ಣವ ಕೇಂದ್ರಗಳಾಗಿ ಪ್ರಸಿದ್ಧವಾಗಿವೆ.

ಶ್ರೀರಾಮಾನುಜಾಚಾರ್ಯರು ಕ್ರಿ.ಶ. ೧೧೯೮ರಲ್ಲಿ ಕರ್ನಾಟಕ್ಕೆ ಬಂದರು. ಅವರು ಕೆಲವು ಕಾಲ ನೆಲೆಸಿದ್ದ ಅನೇಕ ಪ್ರದೇಶಗಳು ಆ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿವೆ. ಮಂಡ್ಯ ಜಿಲ್ಲೆಯ ತೊಣ್ಣೂರು (ಮೇಲುಕೋಟೆ ಸೇರಿದಂತೆ) ಶ್ರೀರಂಗಪಟ್ಟಣ, ಬೆಳಗೊಳ, ಮದ್ದೂರು, ಮಂಡ್ಯ ಮುಂತಾದವು ಶ್ರೀವೈಷ್ಣವ ಕೇಂದ್ರಗಳಾಗಿದ್ದು ಇಂದಿಗೂ ಪ್ರಸಿದ್ಧವಾಗಿವೆ. ಮಂಡ್ಯ ಜಿಲ್ಲೆಯು ಪ್ರಾಚೀನ ಕರ್ನಾಟಕದ ಗಂಗವಾಡಿಯ ಭಾಗವಾಗಿದ್ದು, ಕ್ರಿ.ಶ. ೧೧ನೇ ಶತಮಾನದಲ್ಲಿ ಚೋಳರ ಆಡಳಿತಕ್ಕೆ ಒಳಪಟ್ಟಿತ್ತು. ಆ ಕಾಲದಲ್ಲಿ ಚೋಳನಾಡಿನಿಂದ ಬಂದ ಶ್ರೀ ವೈಷ್ಣವರನೇಕರು ಇಲ್ಲಿ ಬಂದು ನೆಲೆಸಿದ್ದರು. ಚೋಳರ ಆಳ್ವಿಕೆಯ ನಂತರವೂ ಇಲ್ಲೇ ನೆಲೆ ನಿಂತ ಚೋಳನಾಡಿನ ನಿವಾಸಿಗಳು ನೆಲೆಸಿದ್ದ ಪ್ರದೇಶದಲ್ಲಿ ಅವರ ನಾಡಿನ ಸಂಸ್ಕೃತಿಯು ಹೊರಹೊಮ್ಮಿದೆ. ಹೀಗೆ ಮಂಡ್ಯ ಜಿಲ್ಲೆಯಲ್ಲಿ ಚೋಳರ ಸಂಸ್ಕೃತಿಯ ಪ್ರತೀಕವಾಗಿ ರೂಪುಗೊಂಡಿರುವ ಸರ್ವಮಾನ್ಯದ ಗ್ರಾಮಗಳೇ 'ಚತುರ್ವೇದಿ ಮಂಗಲ'ಗಳು. ಚೋಳನಾಡಿನಲ್ಲಿ ದೇವದೇಯವಾಗಿ ಬಿಡುತ್ತಿದ್ದ ಗ್ರಾಮಗಳನ್ನು ಚತುರ್ವೇದಿ ಮಂಗಲಳೆಂದು ಕರೆಯುವರು. ಶಾಸ್ತ್ರಗ್ರಂಥಗಳಾದ 'ಮಾನಸಾರ', 'ಮಯಮತ ಗ್ರಂಥಗಳು ಗ್ರಾಮವೈವಿಧ್ಯದ ಬಗೆಗೆ ತಿಳಿಸುತ್ತಾ- "ಮಂಗಲವೆಂದರೆ ಗ್ರಾಮದಲ್ಲಿ ಬ್ರಾಹ್ಮಣರು ಮಾತ್ರವೇ ಇದ್ದರೇ ಅದನ್ನು ಮಂಗಲ'ವೆಂದಿದೆ (ದ್ವಿಜಕುಲ ಪರಿಪೂರ್ಣ ಗ್ರಾಮ) ಕಾಮಿಕಾಗಮವು "ಉದ್ದೇಶಪೂರಿತವಾಗಿ ಕರೆತಂದ ವೇದವಿದರಾದ ಬ್ರಾಹ್ಮಣರು ಅನುಭವಿಸುವ ಗ್ರಾಮವೇ ಮಂಗಲ" ಎಂದಿದೆ. ಮಾನಸಾರವು 'ಕೆಲ ಬ್ರಾಹ್ಮಣರ ಮನೆಗಳಿದ್ದರೆ ಅದು ಮಂಗಲ' ಎಂದಿದೆ-ಎಂದು ಅಪರ್ಣ ರವರು ತಿಳಿಸಿದ್ದಾರೆ (ಇತಿಹಾಸ ದರ್ಶನ, ಸಂ. ೨೭, ಪು. ೧೮೫-೧೮೮).

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕಿನ ತೊಣ್ಣೂರು, ಮೇಲುಕೋಟೆ, ಶಣಬ ಗ್ರಾಮಗಳೂ, ಶ್ರೀರಂಪಟ್ಟಣ ತಾಲೂಕಿನ ಶ್ರೀರಂಗಪಟ್ಟಣ, ಬೆಳಗೊಳ, ಹಿರಿ ಅರಸನಕೆರೆ ಗ್ರಾಮಗಳೂ, ಮದ್ದೂರು, ಮಳವಳ್ಳಿ ತಾಲೂಕಿನ ಕೋನಾಪುರ ಗ್ರಾಮ ಮುಂತಾದವನ್ನು ಶಾಸನಗಳಲ್ಲಿ ಚತುರ್ವೇದಿ ಮಂಗಲಗಳೆಂದು ಕರೆಯಲಾಗಿದೆ. ಸುಮಾರು ಎಪ್ಪತ್ತು ಶಾಸನಗಳಲ್ಲಿ ಚತುರ್ವೇದಿ ಮಂಗಲಕ್ಕೆ ಸಂಬಂಧಿಸಿದ ವಿವರಗಳು ದೊರೆತಿದೆ.

ಮಂಡ್ಯ ಜಿಲ್ಲೆಯ ಚತುರ್ವೇದಿ ಮಂಗಲದಲ್ಲಿ ನೆಲೆಸಿದ್ದ ದ್ವಿಜರನ್ನು ಶ್ರೀವೈಷ್ಣವ ಮಹಾಜನರೆಂದೇ ಕರೆಯಲಾಗಿದೆ.

* # ೧೩೮೮, ೧೭ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ಬೆಂಗಳೂರು-೫೬೦೦೫೦.

ಇಲ್ಲಿ ನೆಲೆಸಿದ್ದ ಮಹಾಜನರು ಚೋಳನಾಡಿನವರಾಗಿದ್ದುದ್ದನ್ನು ಅವರ ಹೆಸರುಗಳೂ, ಶಾಸನದ ಭಾಷೆಯು ಸೂಚಿಸುತ್ತಿವೆ. ಈ ಶಾಸನಗಳಿಂದ ಮಂಡ್ಯ ಜಿಲ್ಲೆಯಲ್ಲಿ ನೆಲೆಸಿದ್ದ ಶ್ರೀ ವೈಷ್ಣವ ಮಹಾಜನರು ನಡೆಸುತ್ತಿದ್ದ ಸಭೆಗಳು, ರಾಮಾನುಜ ಮಠ, ದೇವಾಲಯಗಳಲ್ಲಿ ನಡೆಸುತ್ತಿದ್ದ ಪೂಜೆ, ವಿಶೇಷ ಉತ್ಸವಾದಿಗಳ ಬಗೆಗೆ ಇಲ್ಲಿ ಚರ್ಚಿಸಲಾಗಿದೆ.

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕಿನ ತೊಣ್ಣೂರು, ಶ್ರೀರಾಮಾನುಜಾಚಾರ್ಯರು ಕೆಲ ಕಾಲ ನೆಲೆಸಿದ್ದ ಕ್ಷೇತ್ರ. ತೊಂಡನೂರನ್ನು ೧೨-೧೩ನೇ ಶತಮಾನದ ಶಾಸನಗಳು 'ಯಾದವ ನಾರಾಯಣ ಚತುರ್ವೇದಿಮಂಗಲ' ವೆಂದು ಕರೆದಿವೆ. ಈ ಊರಿನ ಹೆಸರೇ ವಿಶೇಷವಾಗಿದ್ದು, ಚೋಳನಾಡಿನ ಶ್ರೀವೈಷ್ಣವರ ಬಗೆಗೆ ಸೂಚಿಸುತ್ತಿದೆ. ತಮಿಳಿನಲ್ಲಿ ತೊಂಡ ಎಂದರೆ ದಾಸ, ಭಕ್ತ ಎಂಬ ಅರ್ಥವಿದ್ದು, ವಿಷ್ಣುವಿನ ಭಕ್ತರು, (ದಾಸರು) ನೆಲೆಸಿದ್ದ ಊರು-ತೊಂಡನೂರು> ತೊಣ್ಣೂರು ಎಂದು ಬಾ.ರಾ. ಗೋಪಾಲ್‌ರವರು ತಿಳಿಸಿದ್ದಾರೆ. [ಕರ್ನಾಟಕದಲ್ಲಿ ಶ್ರೀ ರಾಮಾನುಜರು ಪು. ೨೦] ಶ್ರೀ ರಾಮಾನುಜರು ತಮ್ಮ ಶಿಷ್ಯರೊಂದಿಗೆ ಇಲ್ಲಿ ನೆಲೆಸಿದ್ದರಿಂದ ಈ ಊರು ತೊಂಡನೂರು, (ತೊಣ್ಣೂರು) ಎನ್ನಿಸಿತು. ಆಚಾರ್ಯರು ಶ್ರೀ ವೈಷ್ಣವ ಸಿದ್ಧಾಂತವನ್ನು ಪ್ರಚಾರ ಮಾಡಿದ್ದರಿಂದ ಇಲ್ಲಿ ಭಕ್ತರು ಅನೇಕ ದೇವಾಲಯಗಳನ್ನು ನಿರ್ಮಿಸಿದರು. ದೇವಾಲಯಗಳಲ್ಲಿ ಅವರು ರೂಪಿಸಿದ್ದ 'ನಿಯಮಪ್ಪಡಿ'ಯಂತೆ ಪೂಜಾಕೈಂಕರ್ಯಗಳು ಸಾಗಿದವು. ವಿಶೇಷವಾಗಿ ದೇವಾಲಯದ ಪೂಜೆಯ ಒಂದು ಭಾಗವಾಗಿ ತಿರುವಾಯ್ಮೊಳಿ ಮತ್ತು ಆಳ್ವಾರರ ಪಾಶುರಗಳ ಪಠನಕ್ಕೆ ಮಹತ್ವ ಬಂತು.

ತೊಣ್ಣೂರಿನಲ್ಲಿ ದಿಬ್ಬದ ಮೇಲಿರುವ ಯೋಗ ನರಸಿಂಹ ದೇವಾಲಯದ ಶಾಸನವು (ಪಾಂ.ಪು. ೧೧೯, ಎಪಿ.ಕನಾ.೬) ಯಾದವ ನಾರಾಯಣ ಚತುರ್ವೇದಿ ಮಂಗಲದ 'ಮಲೈ ಮೇಲ್ ಇಳಕ್ಕು' ಬೆಟ್ಟದ ಮೇಲಿನ ಗುಡಿ ಎಂದು ಕರೆದಿದ್ದು, ಶಿಂಗಪೆರಮಾಳ್ ದೇವಾಲಯದ ಮಟ್ಟಿಯಾಂಬಾಕ್ಕಂ ಗ್ರಾಮದ ಆಂಡಾಳ್ ಎಂಬುವಳು ಕೃಷ್ಣನನ್ನು ಪ್ರತಿಷ್ಠಾಪಿಸಿದಳು ಮತ್ತು ಶ್ರೀಜಯಂತಿ ಉತ್ಸವವನ್ನೂ, ವಿಶೇಷ ದಿನಗಳ ಪೂಜೆಯನ್ನು ನಡೆಸಲೆಂದು ೬ ಹೊನ್ನುಗಳ ದತ್ತಿಯನ್ನಿಟ್ಟಳೆಂದು ತಿಳಿಸಿದೆ. ಇದೇ ದೇವಾಲಯದ ಮತ್ತೊಂದು ಶಾಸನವು (ಪಾಂ.ಪು. ೧೨೦ ಅದೇ) ಶಿಂಗ ಪೆರಮಾಳ್ ದೇವಾಲಯದ ವೆಣ್ಣೇಕೂತ್ತಪಿಳ್ಳೈ ದೇವರಿಗೆ ನೈವೇದ್ಯಕ್ಕೆಂದು ಮಟ್ಟಿಯಾಂ ಬಾಕ್ಕಂನ ಇಳೈಯ್‌ಜಿರಾನ್‌ಭಟ್ಟನ್ ಮತ್ತು ಅವನ ಹೆಂಡತಿ ಆಂಡಾಳ್ ನೀಡಿದ ಹತ್ತು ಪೊನ್ನುಗಳಿಂದ ಬರುವ ಬಡ್ಡಿಯಿಂದ ಎರಡು ನಾಲಿ ಅಕ್ಕಿಯನ್ನು ನೀಡಬೇಕೆಂದು ತಿಳಿಸಿದೆ. ತೊಂಡನೂರಿನ ಕೃಷ್ಣದೇವಾಲಯದ ತಳಹದಿಯ ಶಾಸನವು (ಪಾಂ.ಪು ೮೮) ಕ್ರಿ.ಶ. ೧೧೫೭ರಲ್ಲಿ ಪೊಯ್ಸಳ ನಾರಸಿಂಗದೇವರ ಸರ್ವಾಧಿಕಾರಿ, ಸೇನಾಪತಿ ಕಾರಿಕುಡಿಯ ಕೂತಾಣ್ಡಿದಂಡನಾಯಕರು, ಯಾದವ ನಾರಾಯಣ ಚತುರ್ವೇದಿ ಮಂಗಲವಾದ ತೊಂಡನೂರಿನ ಮಧ್ಯದಲ್ಲಿ ದೇವಾಲಯವನ್ನು ಕಟ್ಟಿಸಿ, ಶ್ರೀಲಕ್ಷ್ಮಿ, ಭೂದೇವಿ ಸಹಿತವಾಗಿ ವೀರ್‍ರುನ್ದ ಪೆರಮಾಳ್ ಎಂಬ ದೇವರನ್ನು (ವಿಷ್ಣುವನ್ನು) ಪ್ರತಿಷ್ಠೆ ಮಾಡಿದನು. ಶಾಸನವು ಈ ದೇವಾಲಯವನ್ನು 'ನಡುವಿಲ್ ತಿರುಮುರ್‍ರಂ' ಎಂದಿದ್ದು, ಇದು ಕೈಲಾಸೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳ ನಡುವೆ ನಿರ್ಮಿಸಿದ್ದಾಗಿದೆ. ಈ ಮೂರು ದೇವಾಲಯಗಳ ಶಾಸನಗಳಲ್ಲಿ ಕೆಲವೆಡೆ - 'ಇಳೈಯಾಳ್ವಾನ್' ಶ್ರೀರಾಮಾನುಜರ ಸೇವಕ - ಎಂದು ಕರೆಯಲಾದ ತಿರುವರಂಗದಾಸನ ಉಲ್ಲೇಖವಿದೆ. ಇವನನ್ನು ಬೇಳ್‍ರ್ಡಿಯಾನ್ (ದಾಸ) ಎಂದೂ ಕರೆಯಲಾಗಿದೆ. ಲಕ್ಷ್ಮಿನಾರಾಯಣ ದೇವರಿಗಾಗಿ ಮೂವತ್ತು ಊರುಗಳನ್ನು ಬೆಟ್ಟಹಳ್ಳಿ, ಎರೆಯಕೆರೆ, ದರಸಿಕುಪ್ಪೆ, ನೀತಿಮಂಗಲ, ಮಾಣಿಕನಹಳ್ಳಿ, ಬೆಲಕೆರೆ....ಮುಂತಾದವನ್ನು ಪ್ರಭುಗವುಡುಗಳು, ವೊಕ್ಕಲುಗಳು ಸೇರಿದ್ದಾಗ ಕೂತಾಣ್ಡಿ ದಂಡನಾಯಕನು ೨೦೦ ಹೊನ್ನಿಗೆ ಗದ್ದೆಯನ್ನು ಕೊಂಡು ದೇವರಿಗಾಗಿ ಬಿಟ್ಟನು ಎಂದು ತಿಳಿಸಿದೆ. ಇದರಂತೆ ಕೇಶವ ದೀಕ್ಷಿತರ ಕೈಯಲ್ಲಿ ೮೦ ಗದ್ಯಾಣ ಹೊಂನಿನ ಭೂಮಿಯನ್ನು ಕೊಂಡುದಾನ ಬಿಟ್ಟದ್ದನ್ನು ಶಾಸನ ದಾಖಲಿಸಿದೆ.

ತೊಣ್ಣೂರಿನ ಲಕ್ಷ್ಮೀನಾರಾಯಣ ದೇವಾಲಯದ ಶಾಸನವು (ಪಾಂ.ಪು ೬೯) ಯಾದವ ನಾರಾಯಣ ಚತುರ್ವೇದ ಮಂಗಲ ತೊಂಡನೂರಿನ ಅಶೇಷ ಮಹಾಜನರು ಲಕ್ಷ್ಮೀನಾರಾಯಣ ದೇವರ ನಿವೇದನಕ್ಕೆಂದು ನಾಗಯ್ಯ ದಂಡನಾಯಕನ ಭಾವನಾದ ಅರಿಯಪ್ಪನ್‌ನ ಸ್ವಾಮ್ಯದಲ್ಲಿದ್ದ ಪಾಪ್ಪಲ್ ಕಾಲಿವಯಲಿನ ೧೦೦ ಕುಳಿ ಭೂಮಿಯನ್ನು ಕೊಂಡು ಸರ್ವಮಾನ್ಯವಾಗಿ ಬಿಟ್ಟಿದ್ದನ್ನು ತಿಳಿಸಿದೆ. ಈ ದಾನಕ್ಕೆ ಮಹಾಜನಗಳ ಸಾಕ್ಷಿಯೂ ಇದೆ. ಇದೇ ದೇವಾಲಯದ ಕ್ರಿ.ಶ. ೧೨೦೬ರ ಮತ್ತೊಂದು ಶಾಸನವು (ಪಾಂ.ಪುರ ೬೮) ಲಕ್ಷ್ಮೀನಾರಾಯಣ ದೇವರಿಗೆ ಉತ್ಸವದ ದಿನಗಳಲ್ಲಿ ನಡೆಯುವ ತಿರುವಾಯ್ ಮೋಳಿ (ಚರ್‍ರಿಪನ್ನು) ಉತ್ಸವದ ಸಮಾರಾಧನೆಗಾಗಿ, ಪ್ರಾಯಶ್ಚಿತ್ತ ಕರ್ಮಕ್ಕಾಗಿ ಮತ್ತು ದೇವರ ಅಧಿವಾಸದ ಸಮಯದಲ್ಲಿನ ಪೂರ್ವಾರ್ಚನೆಗಳಿಗೆಂದು ವಿಠ್ಠಣನವರು ದೇವಾಲಯದ ಶ್ರೀ ವೈಷ್ಣವ ಜನರಿಂದ ಅಂದಿನ ಸೂಕ್ತ ಬೆಲೆಯನ್ನು ಕೊಟ್ಟು ೧೦ ಸಲಗೆ ಭೂಮಿಯನ್ನು ಕೊಂಡುಕೊಂಡು 'ಅಪ್ಪಣ್ಣನ್'ರ ಹೆಸರಿನಲ್ಲಿ ದಾನ ನೀಡಿದರು. ಈ ದಾನವನ್ನು ಶ್ರೀ ವೈಷ್ಣವ ಮಹಾಜನರು ನಡೆಸುವರು. ಈ ಶಾಸನವು ತಿಳಿಸುತ್ತಿರುವ

ತಿರುವಾಯ್‌ಮೋಳಿ ಎಂಬುದು ಶ್ರೀ ವೈಷ್ಣವ ಸಂತರಾದ ನಮ್ಮಾಳ್ವಾರರು ವಿರಚಿಸಿದ ತಮಿಳು ಪ್ರಬಂಧ. ಇದನ್ನು ವಿಷ್ಣುದೇವಾಲಯಗಳಲ್ಲಿ ಪೂಜಾ ಸಂದರ್ಭದಲ್ಲಿ ಪಠಿಸುವ ಪರಿಪಾಠವನ್ನು ರಾಮಾನುಜಾಚಾರ್ಯರಿಂದ ಪ್ರೇರಿತವಾದದ್ದು; ಶಾಸನವು ತಿಳಿಸಿರುವ ಪ್ರಾಯಶ್ಚಿತ್ತ ವಿಧಿ ಮತ್ತು ಅಧಿವಾಸದ ಸಮಯದಲ್ಲಿನ ಪೂರ್ವಾರ್ಚ್ಚನೆಯ ಬಗೆಗೆ ಬಾ.ರಾ. ಗೋಪಾಲ್‌ರವರು ಪವಿತ್ರಾರೋಹಣ ಮತ್ತು ಪ್ರತಿಷ್ಠೆಗಳಿಗೆ ಸಂಬಂಧಿಸಿದ ಕರ್ಮಗಳು ಎಂದಿದ್ದಾರೆ ಈ ಶಾಸನವು ದಾಖಲಿಸಿರುವ 'ಶ್ರೀ ಸೇನಾಪತಿ ಪೆರುವಿಲ್ಲೈ' ಎಂಬ ಪ್ರಯೋಗವಿದ್ದು, ಭೂಮಿಯ ಕ್ರಮವನ್ನು ಸೂಚಿಸಿದೆ. ವಿಷ್ಣುದೇವಾಲಯಕ್ಕೆ ಸೇರಿದ ಭೂಮಿಯನ್ನು ಸೇನೈ ಮೊದಲಿಯಾರರ ವಿಷ್ವಕ್ಸೇನರ ಹೆಸರಿನಲ್ಲಿ ಮಾರುವುದಕ್ಕೆ ತಮಿಳಿನಲ್ಲಿ 'ಸೇನಾಪತಿ ಪೆರುವಿಲ್ಲೈ' ಎಂದು ಹೆಸರು. (ಪೀಠಿಕೆ ಪು. IX) ಎ.ಪಿ. ಕರ್ನಾ. ಸಂ. ೬). ಇದೇ ಕಾಲದ ಮತ್ತೊಂದು ಶಾಸನದಿಂದ ಈ ದೇವಾಲಯದ ವೀರಬಲ್ಲಾಳ ಮಂಟಪಕ್ಕೆ ಸುಣ್ಣ ಬಳಿಯಲೆಂದು ಗೋಮಠದ ರಾಮಪಿರಾನ್ ಮತ್ತು ತಿರುನರೈಯಾರ್ ದಾಸನ್ ಎಂಬುವರು ೫೦ ಗದ್ಯಾಣ ನೀಡಿದ್ದನ್ನು ಶಾಸನ ತಿಳಿಸಿದೆ. ತಿರುನರೈಯೂರ್‌ದಾಸನ್‌ನು ದೇವಾಲಯದಲ್ಲಿ ತಿರುವಾಯ್ಮೊಳಿ ಹಾಡುತ್ತಿದ್ದವನೆಂದಿದೆ.

ತೊಣ್ಣೂರಿನ ಕೃಷ್ಣದೇವಾಲಯದ ಶಾಸನವೊಂದು (ಪಾಂ.ಪು ೯೦ ಅದೇ) ವಿರ್‍ರುಂದ ಪೆರಮಾಳ್ ದೇವರಿಗೆ ತುಲಾಮಾಸದಲ್ಲಿ ನಡೆಯುವ ಮೊದಲ ಜಾವದ ಪೂಜೆ, ನೈವೇದ್ಯಕ್ಕೆಂದು ೨೦ ಗದ್ಯಾಣ ಬಿಟ್ಟದ್ದನ್ನು ತಿಳಿಸಿದೆ. ಅದೇ ದೇವಾಲಯದ ಮತ್ತೊಂದು ಶಾಸನವು (ಪಾಂ. ಪುರ ೯೧) ಕ್ರಿ.ಶ. ೧೧೯೧ರಲ್ಲಿ ಗೋಪಿನಾಥ ದೇವರ ತುಲಾಸಂಕ್ರಮಣ ದಂದು ಬೆಳಗಿನ ಉಪಹಾರಕ್ಕಾಗಿ ದಾನ ಬಿಟ್ಟದ್ದನ್ನು ದಾಖಲಿಸಿದೆ. ಮತ್ತೊಂದು ಶಾಸನವು (ಪಾಂ.ಪು. ೬೩) ಮಹಾಪ್ರಧಾನ ಹೆಗ್ಗಡೆ ಮಾಚಯ್ಯ, ಕೇಸಿಯಣ್ಣ ಹೆಗ್ಗಡೆ, ಬೊಮ್ಮಣ್ಣನೂ ಸೇರಿ ಈ ದೇವರಿಗೆ ಒಂದೆತ್ತಿನ ಗಾಣದ ಸುಂಕದ ತೆರಿಗೆಯನ್ನು ಎಣ್ಣೆಯನ್ನು ದಾನ ಮಾಡಿದ್ದಾರೆ.

ಮದ್ದೂರನ್ನು ಶಾಸನಗಳು 'ನಾರಸಿಂಹ ಚತುರ್ವೇದಿ ಮಂಗಲ'ವೆಂದು ಕರೆದಿವೆ. ಮದ್ದೂರಿನ ಅಲ್ಲಾಳನಾಥ ದೇವಾಲಯದ ಶಾಸನವು (ಮದ್ದೂರು ೧೯, ಎ.ಕೆ. ೧) ತ್ರಿಭುವನ ಚಕ್ರವರ್ತಿ ಕೋನೇರಿ ವೈಕೊಣ್ಡ್‌ನ್‌ನು ತನ್ನ ಕಾರ್ಯದರ್ಶಿಯಾದ ಇರವಾನರೈಯೂರಿನ ಅಳಗಿಯ ಮಣವಾಳ್ ಪೆರಮಾಳನು, ಮರಡೂರಿನ ಮಹಾಜನರಿಗೆ ಎರಡು ಖಂಡುಗ ಗದ್ದೆಯನ್ನೂ, ತಿರುಮಾಲೈಗಾಗಿ ೨೦೦ ಕುಳಿ ತೋಟದ ಮಣ್ಣನ್ನು ಸರ್ವಮಾನ್ಯವಾಗಿ ಬಿಟ್ಟಿದ್ದನ್ನು ದಾಖಲಿಸಿದೆ. ಈ ದಾನದಿಂದ ಆ ಊರಿನ ಅಲ್ಲಾಳನಾಥ ದೇವರಿಗೆ ಭುವನೈಕವೀರ ಸಂಧಿಯ ದಿನದಂದು (ಚಿತ್ತರೈ ನಕ್ಷತ್ರದಂದು) ನೈವೇದ್ಯವನ್ನು ಮತ್ತು ಹೂಮಾಲೆಯ (ವನಮಾಲೆ) ಸೇವೆಯನ್ನು ನಡೆಸಬೇಕೆಂದು ತಿಳಿಸಿದೆ. ಈ ಶಾಸನದಲ್ಲಿ ಕೋನೇರಿನ್ಮೈಕೊಣ್‌ಡಾನ್ ಎಂಬುವನು ಪಾಂಡ್ಯ ದೊರೆಯಾಗಿದ್ದು, ಅವನ ಬಿರುದನ್ನು ಸೇರಿಸಿ ಭುವನೈಕವೀರ ಸಂಧಿ ಎಂದು ಸೇವೆಗೆ ಕರೆಯಲಾಗಿದೆ ಈ ದಾನದಲ್ಲಿನ ಕೊಳಗ ಗದ್ದೆಯನ್ನು ಪಲ್ಲಪೆರಿಯೂರಿನಲ್ಲಿ ಬಿಟ್ಟಿದ್ದು. ಇದರಿಂದ ಪ್ರತಿ ತಿಂಗಳ ಚಿತ್ತರೈ ನಕ್ಷತ್ರದಂದು ದೇವರ ಉತ್ಸವ ಮಾಡಬೇಕೆಂದಿದೆ. ಈ ಧರ್ಮವನ್ನು ಅಳಗಿಯ ಮೂವಾಳ ಪೆರಮಾಳ್ ಎಂಬ ಕಾರ್ಯದರ್ಶಿಯ ಮೂಲಕ ಶಿಲೆ ಮತ್ತು ತಾಮ್ರಪಟಗಳಲ್ಲಿ ಬರೆಸಲಾಗಿದೆ. ಇದರಲ್ಲಿ ಅನುಭೋಗಿಗಳ ಸಾಕ್ಷಿಯೂ ಇದೆ.

ಮದ್ದೂರಿನ ನರಸಿಂಹ ಸ್ವಾಮಿ ದೇವಾಲಯದ ಶಾಸನವು (ಮದ್ದೂರು ೨, ಎಪಿಕ ೭) ತಿರುವಳುಂದಿ ಒಳನಾಡಿನಲ್ಲಿನ ಎರುನಾಡಿನ ಕರಣಿಕನಾದ ಕುಡಿಯರ ನಣಕ್ಕನು ಶ್ರೀಭಂಡಾರಕ್ಕೆ ದಾನ ನೀಡಿ ಅದರ ಬಡ್ಡಿಯಿಂದ ನರಸಿಂಹ ದೇವರಿಗೆ ಒಂದು ದೀಪ ಬೆಳಗಬೇಕೆಂದು ತಿಳಿಸಿದೆ. ಇದೇ ದೇವಾಲಯದ ಮತ್ತೊಂದು ಶಾಸನದಿಂದ (ಮದ್ದೂರು ೮ ಅದೇ) ಪಾಶಿಮಲೆಯಾಳನ್ ಕೂಳಿ ಕಾಟ್ಟು ನಾರಾಯಣ್ ಎಂಬುವನು ನರಸಿಂಹ ದೇವಾಲಯದಲ್ಲಿ ದೇವಿಯನ್ನು ಸ್ಥಾಪಿಸಿದ್ದನು. ಶ್ರೀ ಭಂಡಾರದಲ್ಲಿ ೮ ಗದ್ಯಾಣಗಳ ದತ್ತಿಯನ್ನಿಟ್ಟು ಅದರ ಬಡ್ಡಿಯಿಂದ ದೇವಿಗೆ ಪ್ರತಿ ದಿನ ೨ ನಾಲಿ ಅಕ್ಕಿಯನ್ನು ನೈವೇದ್ಯಕ್ಕೆಂದು ಮತ್ತು ನಂದಾದೀಪವನ್ನು ಬೆಳಗಬೇಕೆಂದು ತಿಳಿಸಿದ್ದನ್ನು ಶಾಸನ ದಾಖಲಿಸಿದೆ.

ತೊಣ್ಣೂರಿನ ಲಕ್ಷ್ಮಿನಾರಾಯಣ ದೇವಾಲಯದ ಶಾಸನವೊಂದು (ಪಾಂ.ಪುರ. ೭೨) ಮಿಥುನ ಮಾಸದ ಶುಕ್ಲ ತ್ರಯೋದಶಿಯಂದು ರೋಹಿಣಿ ನಕ್ಷತ್ರದಲ್ಲಿ ನಡೆಸುವ 'ತಿರುವಡಿಯಾಟ್ಟಂ' ಪೂಜೆಗೆಂದು ತೊಂಡನೂರಿನ ಮಹಾಜನರು, ದೇವಾಲಯದ ಕುಲಶೇಖರದಾಸರಾದ ಲಕ್ಷ್ಮೀನಾಥರಿಗೆ ಚೆಂಗಟ್ಟಿಯ ಕೆಳಗಿನ ಭೂಮಿಯನ್ನು, ಪಶ್ಚಿಮದಲ್ಲಿನ ತೋಟದಲ್ಲಿನ ಭೂಮಿಯನ್ನು ಕೊಟ್ಟರಲ್ಲದೆ, ಕೊಳದ ಪೂರ್ವಭಾಗದ ಭೂಮಿಯನ್ನು ನರಸಿಂಹ ದೇವರ 'ತಿರುವಡಿಯಾಟ್ಟಂ'ಕ್ಕೆಂದು ಬಿಟ್ಟರೆಂದು ತಿಳಿಸಿದೆ.

ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದ ಶಾಸನವು (ಶ್ರೀ ಪ ೧–ಎಪಿಕ. ೬) ಕ್ರಿ.ಶ. ೧೨೧೦ರಲ್ಲಿ ಶ್ರೀಪುರಮಂಗಲದ ಕಾಶ್ಯಪ ಗೋತ್ರದ ತಿರುವರಂಗ ಮುಡೈಯಾನ್ ಮತ್ತು ಅವನ ಪತ್ನಿ ಕಲ್ಪಗಂ ಕೊಂಡಾಳ್‌ರ ಮಗನಾದ ವರನ್ತರುಂ ಪೆರುಮಾನ್ನು ಶ್ರೀರಂಗನಾಥ ಚತುರ್ವೇದಿ ಮಂಗಲದ ಆಸ್ತಿಗಳಿಗೆ ತತ್ಕಾಲೋಚಿತ

ಬೆಲೆಯನ್ನು ನೀಡಿ ದೊರೆತ ವೃತ್ತಿಗಳಲ್ಲಿ ಚತುರ್ಮುಖ ನಾರಾಯಣ ಚತುರ್ವೇದಿ ಮಂಗಲವೆನ್ನಿಸಿದ ಬ್ರಹ್ಮಪುರಿಯನ್ನು ನಿರ್ಮಿಸಿದನೆಂದಿದೆ. ಮಾರ್ಗಳಿ ಮಾಸದ ಪೂರ್ವಪಕ್ಷ (ಶುಕ್ಲಪಕ್ಷ)ದ ತೃತೀಯದಂದು, ತಿರುವೋಣಂ ನಕ್ಷತ್ರದಲ್ಲಿ ೬೫ ವೃತ್ತಿಗಳಲ್ಲಿ ೨೨ ವೃತ್ತಿಗಳನ್ನು ೮೮ ಜನ ಬ್ರಾಹ್ಮಣರಿಗೆ ನೀಡಿದ್ದು ಇದನ್ನು 'ಅಳಿಗೆಯ ಪೆರಮಾಳುಪುರ'ವೆಂದು ಹೆಸರಿಸಿದ್ದನ್ನು ಶಾಸನ ದಾಖಲಿಸಿದೆ. ಇದರಿಂದ ಶ್ರೀರಂಗಪಟ್ಟಣವು 'ಶ್ರೀರಂಗನಾಥ ಚತುರ್ವೇದಿಮಂಗಲ' ವೆನ್ನಿಸಿತ್ತೆಂದೂ, ಕ್ರಿ.ಶ. ೧೨೧೦ಕ್ಕೆ ಮೊದಲೇ ರಂಗನಾಥ ಸ್ವಾಮಿ ದೇವಾಲಯ ರಚನೆಯಾಗಿದ್ದು ಸಾಕಷ್ಟು ಪ್ರಸಿದ್ಧವಾಗಿತ್ತೆಂಬುದೂ, 'ತಿರುವರಂಗ ಮುಡೈಯಾನ್' ಎಂಬ ಹೆಸರು ಪ್ರಚಲಿತವಾಗಿದ್ದನ್ನೂ ಸೂಚಿಸುತ್ತದೆ.

ಶ್ರೀರಂಗಪಟ್ಟಣ ತಾಲೂಕಿನ ಬೆಳಗೊಳವನ್ನು ಶಾಸನವೊಂದು ಕೊಂಗುಕೊಂಡ ವಿಷ್ಣುವರ್ಧನ ಪೋಸಳದೇವ ಚತುರ್ವೇದಿ ಮಂಗಲ ಎಂದೂ ಕರೆದಿದೆ. ಇಲ್ಲಿಯ ದಕ್ಷಿಣ ವಾರಣಾಸಿ, ಉದ್ಭವ ಸರ್ವಜ್ಞದೇವ ಪೆರುಮಾಳ್ ಎಂದು ಕರೆಯುವ ರಾಮಲಕ್ಷ್ಮಣರನ್ನು ಇರೈ ಅಪ್ಪನ್ ಎಂಬುವನು ಸ್ಥಾಪಿಸಿದ್ದು ಆ ದೇವರಿಗೆಂದು ಅರಿಯಮರೆಡ್ಡಿ ಕಳನಿಯನ್ನು ಬಿಟ್ಟು ನಾಲ್ಕೂ ದಿಕ್ಕಿನಲ್ಲಿ ಸೀಮೆಕಲ್ಲನ್ನು ನಡೆಸಿದರೆಂದು ತಿಳಿಸಿದೆ. ಈ ದಾನವನ್ನು ದೇವರ ತಿರುವಡಿಯಾಟ್ಟಂಗಾಗಿ ದಾನ ಬಿಟ್ಟಿದ್ದಾರೆ. ವಳ್ಳೈಕುಳಂ ಎಂಬುದು ಬೆಳಗೊಳದ ತಮಿಳಿನ ರೂಪವಾಗಿದೆ. ಶಾಸನದಲ್ಲಿ ಕೊಂಗುಕೊಂಡ ವಿಷ್ಣುವರ್ಧನ ಪೋಸಳದೇವ ಚತುರ್ವೇದಿ ಮಂಗಲವೆನ್ನಿಸಿದ ವಳೈಕುಳಂ ಗ್ರಾಮದ ವಳೈಅಣ್ಣನ್, ತಿರುನಾರಾಯಣ ಪೆರುಮಾಳ್, ಶಿರುವಳೈ ಅಣ್ಣನ್ ಮತ್ತು ಪೊಮ್ಮಿಯಣ್ಣನ್ ಇವರೊಂದಿಗೆ ಅಶೇಷ ಮಹಾಜನರೂ ಸೇರಿ ಅರಿಯಮರೆಡ್ಡಿ ಕಳನಿ ಎಂದು ಕರೆಯಲಾದ ಭೂಮಿಯನ್ನು ಸರ್ವಮಾನ್ಯವಾಗಿ ದಾನ ನೀಡಿದರೆಂದು ತಿಳಿಯುತ್ತದೆ.

ಮದ್ದೂರು ತಾಲೂಕಿನ ದೊಡ್ಡ ಅರಸನಕೆರೆಯ ಮಾಧವರಾಯ ದೇವಾಲಯದ ಶಾಸನವು (ಮದ್ದೂರು ೧೨೧-ಎಪಿ.ಕರ್ನಾ.೭) ಶ್ರೀಮದನಾದಿ ಅಗ್ರಹಾರವಾಗಿದ್ದ ಮುಮ್ಮಡಿ ಚೋಳ ಚತುರ್ವೇದಿ ಮಂಗಲವಾದ ಹಿರಿಯರ್ಸಕರೆಯ ಅಶೇಷ ಮಹಾಜನರು ತಮ್ಮೊಳಗೆ ಐಕ್ಯಮತದಿಂದ ಒಪ್ಪಿಕೊಂಡು ಶ್ರೀಮಾಧವ ದೇವರ ಸನ್ನಿಧಿಯಲ್ಲಿ ಮಹಾಪಸಾಯಿತ ವಿರೂಪಣ್ಣನವರ ಅಣ್ಣ ನಾಗಣ್ಣನವರೆದುರು ಬರೆದ ಧ್ರುವ ಉಂಡಿಗೆಯ ಶಾಸನವು ಆ ಊರಿನ ಮಹಾಜನರ ಛೂಳಿಗದವರ ವೃತ್ತಿಭಾಗಗಳನ್ನು ತಿಳಿಸಿದೆ. ಮತ್ತು ವೃತ್ತಿಮಂಡಲ ಈ ಕ್ಷೇತ್ರವನ್ನು ಬಿಟ್ಟು ಹೋಗಬಾರದೆಂದೂ ಅವರು ಹೊರಗೆ ಹೋದರೆ ವೃತ್ತಿಯು ಅವರು ತೆತ್ತು ಹೋಗುವರು ಎಂದು ತೀರ್ಮಾನಿಸಿದೆ. ಈ ಶಾಸನವೊಂದು ಚತುರ್ವೇದಿ ಮಂಗಲದ ಮಹಾಜನರ ಸಭೆ ಕೈಕೊಂಡ ನಿರ್ಣಯದ ಬಗೆಗೆ ತಿಳಿಸುವ ಅಪರೂಪದ ಶಾಸನವಾಗಿದೆ.

ಇದೇ ಊರಿನ ಮಾಧವರಾಯ ದೇವಾಲಯದ ಮತ್ತೊಂದು ಶಾಸನವು ಪುಂಗನೂರಿನ ಕೌಶಿಕಗೋತ್ರದ ಚನ್ನಮ್ಮ ಎಂಬಾಕೆಯು ಮೂರುಪೊನ್‌ನ್ನು ದತ್ತಿ ಇಟ್ಟಿದ್ದು ಅದರಿಂದ ದೇವರಿಗೆ ನಂದಾದೀಪವನ್ನು ಬೆಳಗಿಸಬೇಕೆಂದು ತಿಳಿಸಿದೆ. (ಮದ್ದೂರು ೧೨೬, ಅದೇ)

ನಾಗಮಂಗಲದ ಸೌಮ್ಯಕೇಶವ ದೇವಾಲಯದ ಶಾಸನವು (ನಾಗ.ಮಂ. ೧, ಎ.ಪಿ. ಕರ್ನಾ, ೭). ಹೊಯ್ಸಳರ ದೊರೆ ವೀರಬಲ್ಲಾಳ ದೇವನು ಆಳುತ್ತಿದ್ದಾಗ ಕೇಶವ ದೇವರಿಗೆ ಬಿಟ್ಟ ದೇವದಾನದ ಸೀಮಾವಿವರಗಳನ್ನು ತಿಳಿಸುತ್ತಿದೆ. ಈ ಶಾಸನದಲ್ಲಿ ಶ್ರೀಮದನಾದಿ ಅಗ್ರಹಾರವಾದ ಶ್ರೀ ವೀರಬಲ್ಲಾಳ ಚತುರ್ವೇದಿ ಭಟರತ್ನಾಕರವಾದ ನಾಗಮಂಗಲದ ಶ್ರೀ ಚೆನ್ನಕೇಶವ ದೇವರ ದೇವದಾನ...ಎಂದಿದೆ. ಇದರಿಂದ ನಾಗಮಂಗಲ ಗ್ರಾಮವನ್ನು 'ಚತುರ್ವೇದಿಗಳಾದ ಬ್ರಾಹ್ಮಣರ ಸಮೂಹವು ನೆಲೆಸಿದ್ದ ನಾಗಮಂಗಲವು ಅಗ್ರಹಾರವೂ ಆಗಿತ್ತು ಎಂದಿದೆ ಈ ಊರಿನ ಹೆಸರಿನಲ್ಲೇ 'ಮಂಗಲ' ಪದವಿದ್ದು, ಚತುರ್ವೇದಿ ಭಟರತ್ನಾಕರವೆಂದಿರುವುದು ಗಮನಾರ್ಹವಾಗಿದೆ.

ಮದ್ದೂರು ನಾರಸಿಂಹ ಚತುರ್ವೇದಿ ಮಂಗಲವೆನ್ನಿಸಿದರೆ ಶ್ರೀರಂಗಪಟ್ಟಣವು ತಿರುರಂಗನಾಥ ಚತುರ್ವೇದಿ ಮಂಗಲವೆನ್ನಿಸಿದೆ. ಕೆಲವೆಡೆ ಚತುರ್ವೇದಿ ಮಂಗಲಗಳನ್ನಾಗಿ ಮಾಡಲು ಅನುಮತಿ ನೀಡಿದ ರಾಜರ ಹೆಸರಿನಲ್ಲೂ ಚತುರ್ವೇದಿ ಮಂಗಲಗಳಾಗಿರುವುದು ಗಮನಾರ್ಹವಾಗಿದೆ. ಬೆಳಗೊಳವು ಕೊಂಗು ಕೊಂಡ ಪೊಸಳ ವಿಷ್ಣುವರ್ಧನ ಚತುರ್ವೇದಿ ಮಂಗಲವಾದರೆ ನಾಗಮಂಗಲ ವೀರಬಲ್ಲಾಳ ಚತುರ್ವೇದಿ ಭಟರತ್ನಾಕರವೆನ್ನಿಸಿದೆ. ಹಿರಿಯರಸೆ ಕೆರೆಯು ಮುಮ್ಮಡಿ ಚೋಳ ಚತುರ್ವೇದಿ ಮಂಗಲವಾಗಿದೆ.

ಮಳವಳ್ಳಿ ತಾಲೂಕಿನ ಸೋಮನಹಳ್ಳಿ ಶಾಸನವು (ಮಳವಳ್ಳಿ ೧೦೯, ಅದೇ) ಹೊಯ್ಸಳ ವೀರಬಲ್ಲಾಳ ದೇವನ ಆಡಳಿತದ ಕಾಲದ್ದಾಗಿದೆ. ಈ ಶಾಸನದಲ್ಲಿ ರಾಜರಾಜಪುರವಾದ ತಲಕಾಡಿನ ಕಾರಿಕುಡಕ್ಕೂತ್ತಾನ್‌ನು ಭೂಮಿಗೆ ಯಥೋಚಿತವಾದ ಬೆಲೆಯನ್ನು ಕೊಟ್ಟು ವಾಗೀಶ್ವರ ಮಂಗಲದಲ್ಲಿ ಭೂಮಿಯನ್ನು ಕೊಂಡುದೇವರಿಗೆ ದಾನ ನೀಡಿದ್ದನ್ನು ತಿಳಿಸಿದೆ. ಈ ಶಾಸನದಲ್ಲಿ ಬಂದಿರುವ 'ವಾಗೀಶ್ವರ' ಎಂಬುದು ಆ

ಪ್ರದೇಶದಲ್ಲಿದ್ದ ಪ್ರಧಾನ ಅರ್ಚಕರಲ್ಲಿ ಒಬ್ಬನಾದ ತಳುವಕ್ಕಳುಙ್ಗರರ ಮಗ ವಾಗೀಶ್ವರದೇವ. ಇವನ ಹೆಸರಿನಲ್ಲಿ ಮಾಡಿದ್ದ ಸರ್ವಮಾನ್ಯಪುರವೇ ವಾಗೀಶ್ವರ ಮಂಗಲವಾಗಿದೆ. ಇವೆಲ್ಲವನ್ನು ಗಮನಿಸಿದರೆ ಸರ್ವಮಾನ್ಯವಾದ ಗ್ರಾಮವನ್ನು ದೇವರ ಹೆಸರಿನಲ್ಲಿ ಗಣ್ಯ ವ್ಯಕ್ತಿಗಳ ಇಲ್ಲವೇ, ರಾಜರ ಹೆಸರನಲ್ಲಿ ನಿರ್ಮಿಸುತ್ತಿದ್ದರೆಂದು ತಿಳಿಯುತ್ತದೆ.

ಚತುರ್ವೇದಿ ಮಂಗಲದ ಮಹಾಜನರೇ ಆ ಗ್ರಾಮಕ್ಕೆ ಅಧಿಪತಿಗಳಾಗಿರುತ್ತಿದ್ದರು. ಆ ಗ್ರಾಮಕ್ಕೆ ಸಂಬಂಧಿಸಿದ ಎಲ್ಲ ವ್ಯವಹಾರಗಳೂ ವ್ಯವಸ್ಥೆಗಳನ್ನು ಮಹಾಜನರೇ ಸಭೆ ಸೇರಿ ನಡೆಸುತ್ತಿದ್ದರು. ಆ ಊರಿನಲ್ಲಿರುತ್ತಿದ್ದ ಎಲ್ಲಾ ದೇವಾಲಯಗಳ ಆಗುಹೋಗುಗಳಿಗೆ ಇವರೇ ಹೊಣೆಯಾಗಿರುತ್ತಿದ್ದರು ಎಂದು ತಿಳಿಯುತ್ತದೆ. ತೊಣ್ಣೂರಿನ ನಾರಾಯಣಸ್ವಾಮಿ ದೇವಾಲಯದ ಶಾಸನವೊಂದು ವೀರಬಲ್ಲಾಳ ದೇವರು ಆಳುತ್ತಿದ್ದಾಗ ಕ್ರಿ.ಶ. ೧೧೮೯ರಲ್ಲಿ ಮಹಾಪ್ರಧಾನಿಯಾದ ಅಚ್ಯುತಮಯ್ಯ ದಂಡನಾಯಕನು, ವೀರೈಯ್ಯನೂ ಯಾದವಗಿರಿಯ (ಮೇಲುಕೋಟೆಯ) ರಕ್ಷಾಪಾಲಕರಾಗಿದ್ದು ಅವರ ಮಕ್ಕಳಾದ ನೀಲಯ್ಯ, ಚಾಮಯ್ಯಂಗಳು ಕೋಟೆಯ ಹೊಲಗಾಹುವ್ರಿತ್ತಿಯನ್ನು ರಕ್ಷಿಸುತ್ತಿದ್ದರು. ಶ್ರಾವಣ ಮಾಸದ ಪೂರ್ಣಿಮೆಯಂದು ಸೋಮವಾರ, ತೊಂಡನೂರಿನ ಗಡಿಯಲ್ಲಿದ್ದ ನಖರೇಶ್ವರರ ನಂದಾದೀವಿಗೆಗೆಂದು ಅಮೃತರಾಸಿ ಸ್ಥಾನಪತಿಗಳಿಗೆ ದಾನ ಬಿಟ್ಟಿದ್ದನ್ನು ದಾಖಲಿಸಿದೆ. ಇದು ಮಹಾಜನರು ವೈಷ್ಣವ ಕೇಂದ್ರಗಳ ರಕ್ಷಣಾ ವ್ಯವಸ್ಥೆ ಬಗೆಗೆ ತಿಳಿಸುತ್ತಿದೆ (ಪಾಂ.ಪುರ ೭೪)

ತೊಣ್ಣೂರಿನ ಮತ್ತೊಂದು ಶಾಸನವು–ಯಾದವ ನಾರಾಯಣ ಚತುರ್ವೇದಿ ಮಂಗಲದ ಕೈಲಾಸಮುಡೈಯಾರ್ ದೇವಾಲಯದ ಸ್ಥಾನಪತಿಗಳಾದ ಮಹಾದೇವಭಟ್ಟನ ತಳುವಕ್ಕಳೈನ್ದಾನ್ ಭಟ್ಟನ್, ಆಳುಡೈಯಾರ್ ಭಟ್ಟರ್ ಮತ್ತು ಆಳ್ವಾನ್ ಭಟ್ಟರ್ ಈ ನಾಲ್ಕು ಜನರಿಗೆ ತೊಂಡಾಚಾರಿ ಎಂಬುವನು ಕೈಲಾಸಮುಡೈಯಾರ್ ದೇವರಿಗೆ ಒಂದು ದೀವಿಗೆಯನ್ನು ಬೆಳಗಲೆಂದು ೪ ಪೊನ್‌ನ್ನು ದತ್ತಿ ಇಟದ್ದದ್ದನ್ನು ಶಾಸನ ತಿಳಿಸುತ್ತಿದೆ (ಪಾಂ.ಪು. ೧೧೦, ಅದೇ).

ವೈದ್ಯನಾಥಪುರದ ಶಾಸನವೊಂದು ವಿಷ್ಣುವರ್ಧನ ಹೊಯ್ಸಳದೇವರು ದೋರಸಮುದ್ರದಲ್ಲಿ ಆಳುತ್ತಿದ್ದಾಗ ಕೆಳಲೆನಾಡ ಮದ್ದೂರಾದ ಶ್ರೀ ನಾರಸಿಂಹ ಚತುರ್ವೇದ ಮಂಗಲದ ಶಿವಪುರದ ಶ್ರೀಸ್ವಯಂಭೂ ವೈಜನಾಥ ದೇವರಿಗೆ ಕೆಳಲೆನಾಡ ಹಲಗೂರನ್ನು ಸರ್ವಬಾಧಾ ಪರಿಹಾರವಾಗಿ ದೇವದಾನವನ್ನು ಬಿಡಲಾಯಿತು. ಈ ದಾನವನ್ನು ಹಲಗೂರ ಪೂರ್ವ ಮರ್ಯಾದೆಯ ತಾಮ್ರಶಾಸನವನ್ನು ನೋಡಿಸಿ ಕೇಳಿ ಅದರಲ್ಲಿನ ಸೀಮಾಸಹಿತವಾಗಿಯೇ ಪಿಳ್ಳೆಯಾಂಡರ್‌ಗೆ ಧಾರಪೂರ್ವಕವಾಗಿ ಬಿಟ್ಟರು. ಪಿಳ್ಳೆಯಾಂಡರನು ಪರದೇಶಿಯರ ಸುಪುತ್ರನಾದ ಶಿವಬ್ರಾಹ್ಮಣನೆಂದು ಶಾಸನ ತಿಳಿಸಿದೆ. ಈ ದಾನವನ್ನು ವೈಜನಾಥ ದೇವರ ನೈವೇದ್ಯಕ್ಕೆ ನಂದಾದೀವಿಗೆಗೆ ಮತ್ತು ದೇಗುಲದ ಹಲೆಚಾರಕರಿಗೆಂದು ಬಿಡಲಾಗಿದೆ. ಇಲ್ಲಿ ಹಲೆಚಾರಕರೆಂದರೆ ಪಂಚಾರಕರೆಂದು ತಿಳಿಯಬಹುದು (ಮದ್ದೂರು ೬೮, ಎಪಿ, ಕರ್ನಾ ೭).

ಮಳವಳ್ಳಿ ತಾಲೂಕಿನ ಕೊನ್ನಾಪುರದ ಶಾಸನವು (ಮದ್ದೂರು ೪೧, ಅದೇ) ರಾಜ ವಿಷ್ಣುವರ್ಧನನ ಆದೇಶದಂತೆ ಶ್ರೀ ನಾರಸಿಂಹ ಚತುರ್ವೇದ ಮಂಗಲದ ಸ್ವಯಂಭೂ ವೈಜನಾಥ ದೇವರ ನೈವೇದ್ಯ, ನಂದಾದೀವಿಗೆಗೆಂದು ಬಿಟ್ಟ ದಾನ ಶಾಸನದ ಪ್ರತಿಯನ್ನು ಹಲಗೂರ ಮುಂದೆ ಶಾಸನ ಹಾಕಿಸಿದೆ. ಈ ದೇವಾಲಯದ ಹಿರಿಯ ಗುರುಗಳು ಸಂಭು ದೇವರು ಎಂದೂ ಉಲ್ಲೇಖಿಸಿದೆ. ಚತುರ್ವೇದಿ ಮಂಗಲದ ಮಹಾ ಜನರೇ ಶಿವಾಲಯಗಳ ಆಡಳಿತವನ್ನು ನಿರ್ವಹಿಸುತ್ತಿದುದ್ದು ಕಂಡುಬರುತ್ತದೆ.

ಚತುರ್ವೇದಿ ಮಂಗಲದ ಮಹಾಜನರು ತಮ್ಮ ಆಳ್ವಿಕೆಯ ಗ್ರಾಮಗಳಲ್ಲಿ ಆಗಾಗ ಸಭೆ ಸೇರಿ ನಿರ್ಣಯಗಳನ್ನು ಕೈಗೊಳ್ಳುತ್ತಿದ್ದರು. ತೊಣ್ಣೂರಿನಲ್ಲಿ ಕೂತಾಣ್ಡಿದಂಡ ನಾಯಕರು ವೀರ್ರನ್ದ ಪೆರಮಾಳಂ ಗುಡಿಯನ್ನು ನಿರ್ಮಿಸಿದಾಗ ಅವರು ಕೇಶವ ದೀಕ್ಷಿತರ ಕೈಯಲ್ಲಿ ೮೦ ಗದ್ಯಾಣ ಹೊನ್ನಿಗೆ ಭೂಮಿಯನ್ನು ಕೊಂಡು ದಾನ ಬಿಟ್ಟರು. ಮತ್ತು ಬ್ರಾಹ್ಮಣರ ಕೈಯಲ್ಲಿ ಹಿರಿಯ ಬನವನ್ನು ಕೊಂಡು ೪ ವೃತ್ತಿಯಾಗಿ ಮಾಡಿ ದಾನ ಬಿಟ್ಟರು. ಈ ಸಂದರ್ಭದಲ್ಲಿ ಅಶೇಷ ಮಹಾಜನರು ಸಭೆ ಕೂಡಿದ್ದು ಅವರು ದೇವರಿಗೆ ಎರಡೂವರೆ ವೃತ್ತಿಯನ್ನು ದಾನ ನೀಡಿದ್ದನ್ನು ಶಾಸನ ದಾಖಲಿಸಿದೆ. ಒಟ್ಟು ವೃತ್ತಿಯ್ರುಂದ ಪೆರಮಾಳು ದೇವರಿಗೆ ತೆಂಗ, ಮಾವಿನಬನ ೯೨೮ ಎಂದು ತಿಳಿಸಿದ್ದು ಇದಕ್ಕೆ ಮದ್ದೂರು ಸಭೆ, ತೈಲೂರು ಸಭೆಗಳೂ ಸಾಕ್ಷಿಯಾಗಿದೆ ಎಂದಿದೆ (ಪಾಂ.ಪುರ ೮೮, ಎಪಿ.ಕ. ೬) ಈ ಶಾಸನದಿಂದ ಚತುರ್ವೇದಿ ಮಂಗಲದಲ್ಲಿ ಶ್ರೀ ವೈಷ್ಣವರಲ್ಲದೇ ಬ್ರಾಹ್ಮಣರು ಇರುತ್ತಿದ್ದರೆಂದೂ ಮಹಾದಾನಗಳು ನಡೆದಾಗ ನೆರೆ ಗ್ರಾಮದ ಸಭೆಯವರೂ ಸಾಕ್ಷಿಯಾಗಿರುತ್ತಿದ್ದರೆಂದೂ ತಿಳಿಯುತ್ತದೆ.

ತೊಣ್ಣೂರಿನ ಮತ್ತೊಂದು ಶಾಸನವು (ಪಾಂ.ಪು. ೬೭, ಅದೇ) ಕ್ರಿ.ಶ. ೧೩ನೇ ಶತಮಾನದ್ದಾಗಿದ್ದು, ಲಕ್ಷ್ಮೀನಾರಾಯಣ ದೇವಾಲಯದ ಶ್ರೀ ವೈಷ್ಣವ ಮಹಾಜನರು ಅಣ್ಣನ್ ಎಂಬುವನಿಗೆ ಎರಡು ಗದ್ಯಾಣಗಳಿಗೆ ಭೂಮಿಯನ್ನು ಮಾರಿದ್ದು, ಸೀಮೆಗಲ್ಲನ್ನು ಬಿಟ್ಟು ಕೊಟ್ಟರೆಂದಿದೆ. ಇದರಿಂದ ಶ್ರೀ ವೈಷ್ಣವ ಮಹಾಜನರು ತಮ್ಮ ವೃತ್ತಿಗಳ ಮೇಲೆ ಪೂರ್ಣ ಅಧಿಕಾರವನ್ನು ಹೊಂದಿದ್ದು ಅಗತ್ಯ ಬಿದ್ದಾಗ ಮಾರುತ್ತಿದ್ದರೆಂದು ತಿಳಿಯುತ್ತದೆ.

ದೇವಾಲಯಗಳಿಗೆ ಬಿಡುತ್ತಿದ್ದ ದೇವದಾನದ ನಿರ್ವಹಣೆಯು ಇವರದಾಗಿರುತ್ತಿತ್ತು ಮತ್ತು ಆ ದಾನ ಶಾಸನಗಳ ಅಂತ್ಯದಲ್ಲಿ ಇವರ ಒಪ್ಪವೂ ಇರುತ್ತಿತ್ತು. ಲಕ್ಷ್ಮೀ ನಾರಾಯಣ ದೇವರಿಗೆ ಬಿಟ್ಟ ದೇವದಾನವೊಂದು ತಿಳಿಸಿರುವಂತೆ ಇಬ್ಬರೂ ದೇಶಾಂತರಿಗಳಿಗೆ ಭೋಜನ ವ್ಯವಸ್ಥೆಯನ್ನು ಮಾಡಿದ್ದರೆಂದು ತಿಳಿಯುತ್ತದೆ. (ಪಾಂ.ಪುರ ೬೮) ಮತ್ತೊಂದು ಶಾಸನವು (ಪಾಂ.ಪುರ ೫೫) ಮಹಾಜನರಿಗೆ ರಾಮಾನುಜ ಮಠವನ್ನು ನಡೆಸಲೆಂದು ದಾನ ಬಿಟ್ಟಿದ್ದನ್ನು ದಾಖಲಿಸಿದೆ.

ಹೊಯ್ಸಳ ದೊರೆ ವೀರನಾರಸಿಂಹದೇವನ ಕಾಲದಲ್ಲಿ ತೊಂಡನೂರಿನ ಹರಹಿನ ಕಾಲುವೆಯನ್ನು ತಿದ್ದಲೆಂದು (ದುರಸ್ತಿಪಡಿಸಲೆಂದು) ಕುರವಂಕ ನಾಡ ಹೊಳೆಯ ಸುಂಕದ ಗದ್ಯಾಣ ಅರವತ್ತನಾಲ್ಕನ್ನು (೬೪) ಬಿಟ್ಟರು. ಇದನ್ನು ತಾಮ್ರಶಾಸನದಲ್ಲಿ ಬರೆಸಿಕೊಟ್ಟಿದ್ದರು. ಈ ದಾನವನ್ನು ತೊಂಡನೂರ ಅಶೇಷ ಮಹಾಜನಂಗಳು ಪ್ರತಿ ವರುಷ ಸರಿಪಡಿಸಬೇಕೆಂದು ಆದೇಶಿಸಿ ನೀಡಲಾಗಿದೆ. (ಪಾಂ.ಪು ೫೬)

ಶ್ರೀರಂಗಪಟ್ಟಣ ತಾಲೂಕಿನ ಬೊಮ್ಮೂರು ಅಗ್ರಹಾರವನ್ನು 'ವಾನವನ್ ಮಾದೇವೀ ಚತುರ್ವೇದಿ ಮಂಗಲಂ ಎಂದು ಶಾಸನದಲ್ಲಿ ಕರೆದಿದೆ. ೧ನೇ ಕುಲೋತ್ತುಂಗನ ಕಾಲದ ಈ ಶಾಸನದಲ್ಲಿ (ಶ್ರೀ. ಪ. ೬೭, ಎಪಿಕ) ಕುಲೋತ್ತುಂಗನ ಮಾಂಡಳೀಕನಾಗಿದ್ದ ಪೋಮನ್ ಇರಾಮನ್ ಎಂಬಾತನು ವಾನವನ್ ಮಾದೇವೀ ಚತುರ್ವೇದಿ ಮಂಗಲವೆನ್ನಿಸಿದ ಇಡ್ಕೈತೊರ್‍ರೈನಾಡಿನ ಸಿರಿಯ ಕಲಸತ್ತಪಾಡಿ ಗ್ರಾಮದಲ್ಲಿ ೨೦೦ ವರ್ಷಗಳಿಂದ ಕೆರೆ ಬಿರುಕು ಬಿಟ್ಟಿದ್ದು ರಿಪೇರಿಯಾಗಿರದ ಕೆರೆಯನ್ನು ಬಿರುಕು ಮುಚ್ಚಿ ಸರಿಪಡಿಸಿದನ್ನು ಶಾಸನ ದಾಖಲಿಸಿದೆ. ಕ್ರಿ.ಶ. ೧೧೦೨-೦೩ರ ಈ ಶಾಸನದಲ್ಲಿ ಮಾಂಡಲೀಕನನ್ನು 'ವಿರುದ ರಾಜ ಭಯಂಕರನ್ ಮಾರಾಯನ್' ಎಂದು ಕರೆದಿದ್ದು 'ವಿರುದರಾಜ ಭಯಂಕರನ್' ಎಂಬುದು ೧ನೇ ಕುಲೋತ್ತುಂಗನ ಬಿರುದುಗಳಲ್ಲಿ ಒಂದಾಗಿದ್ದು ಮಾಂಡಲೀಕನು ತನ್ನ ರಾಜನ ಬಿರುದನ್ನು ಧರಿಸಿರುವುದನ್ನು ಗಮನಿಸಬಹುದು.

ಮದ್ದೂರಿನ ನರಸಿಂಹ ದೇವಾಲಯದ ಶಾಸನವೊಂದು ಕ್ರಿ.ಶ. ೧೩ನೇ ಶತಮಾನದ್ದಾಗಿದ್ದು, ತ್ರಿಭುವನ ಚಕ್ರವರ್ತಿ ಕೊನೆರ್‍ರಿಮ್ಮೈ ಕೊಣ್ಡಾನನು ಮರಡೂರಿನ ಮಹಾಜನಕ್ಕೆ ನೀಡಿದ ಬಾಯ ಆದೇಶವನ್ನು ದಾಖಲಿಸಿದೆ. ಅದೇಂದರೆ ಆ ಗ್ರಾಮದಲ್ಲಿನ ೧೫ ಕಳನಿಯ ಬಿತ್ತುವಟ್ಟದ ಭೂಮಿಯಲ್ಲಿ ಕೆರೆಯೊಂದನ್ನು ಅಗೆಸಿ ಅದರಿಂದ ಕಾಲುವೆಯನ್ನು ನಿರ್ಮಿಸಲು ಆದೇಶಿದ್ದನೆಂದಿದೆ (ಮದ್ದೂರು, ೯, ಎಪಿ. ಕರ್ನಾ ೭).

ಮದ್ದೂರಿನ ವರದರಾಜಸ್ವಾಮಿ ದೇವಾಲಯದ ಶಾಸನವೊಂದು (ಮದ್ದೂರು ೨೦ ಅದೇ) ನಾರಸಿಂಹ ಚತುರ್ವೇದಿ ಮಂಗಲದ ಕೈಲಾಸಮುಡೈಯರ್‌ಗೆ ಬಿಟ್ಟ ದಾನದ ಬಗೆಗೆ ತಿಳಿಸುತ್ತಾ ದೇವರ ನಂದಾದೀವಿಗೆ ಮಧ್ಯಾಹ್ನದ ಪೂಜೆಯ ಅಮೃತಪಡಿಗಾಗಿ ಮತ್ತು ಜೀರ್ಣೋದ್ಧಾರಕ್ಕೆಂದು ಬಿಟ್ಟರೆಂದು ತಿಳಿಸಿದೆ. ದೇವಾಲಯದಲ್ಲಿ ನಾಚಿಯಾರರ ಪ್ರತಿಷ್ಠೆ ಯಾದುದ್ದನ್ನು ಮತ್ತು ದೇವಾಲಯವು (ಉಪಾನದಿಂದ) ಸ್ತೂಪಿವರೆಗೆ ಎಂದಿದ್ದು ಜೀರ್ಣೋದ್ಧಾರಗೊಂಡದ್ದನ್ನು ದಾಖಲಿಸಿರುವಂತಿದೆ.

ತೊಣ್ಣೂರಿನ ಕೃಷ್ಣ ದೇವಾಲಯದ ಶಾಸನವು (ಪಾಂ.ಪುರ ೭೫, ಎಪಿಕನಾ೬) ಮುಂಡಗೊಂಡ ಶೋಳಪುರದಲ್ಲಿನ ಕಿಳವೈಯೂರಿನ ದೇವಾಲಯದ ನಾರಾಯಣಭಟ್ಟನ ಮಗನೂ, ಕುನಿಕ್ಕುಮ್ಬಿರಾನ್‌ನ ತಮ್ಮ ಉಡೈಯಪಿಳ್ಳೈ ಎಂಬುವನು ವಿರ್‍ರುಂದ ಪೆರುಮಾಳ್ ದೇವರ ಶ್ರೀ ಕಾರ್ಯಕ್ಕೆಂದು ಅರ್ಚಕರಿಗೆ, ಮೂವತ್ತು ಪೊನ್ನ್ ದತ್ತಿ ಇಟ್ಟು ಅದರ ಬಡ್ಡಿಯಿಂದ ದೇವರ ಪೂಜೆಗೆಂದು, ೧ ತಟ್ಟೆ, ದೇವರ ಪೀಠ, ತಾಮ್ರದ ಚೆಂಬು, ಕೆಣ್ಡೆ ೧, ಶೆಪ್ಪುಮಣಿ ೧, ಬೆಳ್ಳಿ ಬಟ್ಟಲು ೧, ತಿರುಪಿನ ಚೆಂಬೂ ಮುಂತಾದವನ್ನು ಕೊಟ್ಟರು. ಶಾಸನದ ಕೊನೆಯಲ್ಲಿ ಚಂದ್ರಶೇಖರ ಪೆರ್ಗಡಿಯರ ಮಗ ಉಡೈಯ ಪಿಳ್ಳೆ ಎಂಬ ಸಹಿ ಇದೆ ಎಂದು ತಿಳಿಯುತ್ತದೆ. ಈ ಶಾಸನವು ಅಂದು ನಡೆಯುತ್ತಿದ್ದ ಪೂಜಾ ವಿಧಾನಗಳ ಬಗೆಗೆ ಕೆಲವೆಡೆ ಇಂದಿಗೂ ಉಳಿದುಬಂದಿರುವುದು, ಗಮನಾರ್ಹವಾಗಿದೆ.

ಮಂಡ್ಯ ಜಿಲ್ಲೆಯು ಶ್ರೀ ವೈಷ್ಣವರ ಕೇಂದ್ರವಾಗಿದ್ದು, ತೊಣ್ಣೂರು, ಮೇಲುಕೋಟೆ, ನಾಗಮಂಗಲ, ಬಿಂಡಿಗನವಲೆ, ಮದ್ದೂರು, ಶ್ರೀರಂಗಪಟ್ಟಣ ಮುಂತಾದ ಊರುಗಳು ಈಗಲೂ ಪ್ರಸಿದ್ಧವಾಗಿವೆ. ಚತುರ್ವೇದಿಮಂಗಲಗಳಾಗಿದ್ದ ಊರುಗಳು ಇಂದು ಅಗ್ರಹಾರಗಳ ಸ್ವರೂಪದಲ್ಲಿ ಸ್ವಲ್ಪ ಬದಲಾಗಿದ್ದರೂ ಈ ಸ್ಥಳಗಳಲ್ಲಿ ನೆಲೆಸಿರುವ ಶ್ರೀ ವೈಷ್ಣವರು, ವೇದ ಪಾರಂಗತರೂ, ತಿರುವಾಯ್ ಮೊಳಿಯನ್ನು ಪಠಿಸುವ ವೇದ ಪಾಠಕರೂ ಆಗಿರುವುದು ಗಮನಾರ್ಹವಾಗಿದೆ. ಕರ್ನಾಟಕದ ಧಾರ್ಮಿಕ ಇತಿಹಾಸವನ್ನರಿಯುವಲ್ಲಿ ಮಂಡ್ಯ ಜಿಲ್ಲೆಯ ಶ್ರೀ ವೈಷ್ಣವ ಪರಂಪರೆಯು ಒಂದು ಮೈಲಿಗಲ್ಲಾಗಿದೆ.



## ಗ್ರಂಥಋಣ


೧. ಕರ್ನಾಟಕದಲ್ಲಿ ಶ್ರೀರಾಮಾನುಜರು, ಡಾ. ಬಾ.ರಾ. ಗೋಪಾಲ, ೧೯೮೪, ಮೈಸೂರು ವಿಶ್ವವಿದ್ಯಾಲಯ.

೨. Agamas and South Indian Vaishnavism, Dr. V. Varadachari, Madras, 1982.

೩. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು, ೬-೭, ಮೈಸೂರು ವಿಶ್ವವಿದ್ಯಾಲಯ, ೧೯೭೭-೧೯೮೪.

೪. ಇತಿಹಾಸ ದರ್ಶನ, ಸಂಪುಟ ೨೭, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು-೨೦೧೨.



# ಶಿವಮೊಗ್ಗ ಜಿಲ್ಲೆಯಲ್ಲಿನ ಶಾಸನೋಕ್ತ ರಾಮಾನುಜ ಕೂಟಗಳು

**ಜಯಶ್ರೀ ಎನ್.* ಡಾ. ಶಲ್ವಪಿಳ್ಳೈ ಐಯ್ಯಂಗಾರ್****

ಕರ್ನಾಟಕದ ಮಲೆನಾಡಿನ ಕೇಂದ್ರವಾಗಿರುವ ಶಿವಮೊಗ್ಗ ಜಿಲ್ಲೆಯು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅತ್ಯಂತ ಸಮೃದ್ಧವಾದ ಜಿಲ್ಲೆಯಾಗಿದೆ. ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಹೆಸರಾಂತ ರಾಜ ಮನೆತನಗಳ ಆಳ್ವಿಕೆಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಜಿಲ್ಲೆಯು ಒಳಪಟ್ಟಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳು ಎಲ್ಲಾ ಧರ್ಮಗಳನ್ನು ಸ್ವಾಗತಿಸಿ ಪ್ರೋತ್ಸಾಹಿಸಿದ್ದಾರೆ. ಜಿಲ್ಲೆಯಲ್ಲಿ ಜೈನ, ಬೌದ್ಧ, ವೈದಿಕ ಧರ್ಮಗಳು ಅಸ್ತಿತ್ವದಲ್ಲಿದುದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ. ಅಲ್ಲದೇ ಜಿಲ್ಲೆಯುದ್ದಗಲಕ್ಕೂ ಧರ್ಮದ ಕುರುಹುಗಳಾಗಿ ಅನೇಕ ದೇವಾಲಯಗಳು ಮತ್ತು ಮಠಮಾನ್ಯಗಳು ಅಸ್ತಿತ್ವದಲ್ಲಿದ್ದು ಇಂದಿಗೂ ಕಂಡುಬರುತ್ತವೆ. ಅತ್ಯಂತ ಪ್ರಾಚೀನ ಪ್ರಬಲ ಧರ್ಮಗಳಲ್ಲಿ ಶ್ರೀವೈಷ್ಣವ ಧರ್ಮವೂ ಸಹ ಒಂದಾಗಿದ್ದು ಜಿಲ್ಲೆಯಲ್ಲಿ, ಹೊಯ್ಸಳರ ಕಾಲದಲ್ಲಿ ಹೊಯ್ಸಳ ರಾಜಮನೆತನದ ಪ್ರೋತ್ಸಾಹದಿಂದಾಗಿ, ಅತ್ಯಂತ ವ್ಯಾಪಕವಾಗಿ ಬೆಳೆದು ಶ್ರೀವೈಷ್ಣವ ದೇವಾಲಯಗಳು ರಚನೆಗೊಂಡವು. ಅನಂತರ ವಿಜಯನಗರದ ಅರಸರ ಕಾಲದಲ್ಲಿ ಮತ್ತು ಕೆಳದಿ ನಾಯಕರ ಕಾಲದಲ್ಲಿಯೂ ಸಹ ಶ್ರೀವೈಷ್ಣವ ದೇವಾಲಯುಗಳು ಹಾಗೂ ಮಠಗಳು ನಿರ್ಮಾಣಗೊಂಡಿರುವುದನ್ನು ಕಾಣಬಹುದಾಗಿದೆ. ಹೀಗೆ ಶ್ರೀವೈಷ್ಣವ ಸಂಪ್ರದಾಯದ ಭಾಗವಾಗಿರುವ ರಾಮಾನುಜ ಕೂಟಗಳು, ಭಾರತದಾದ್ಯಂತ ನಿರ್ಮಾಣವಾಗಿರುವುದನ್ನು ಮತ್ತು ಇಂದಿಗೂ ಕಾರ್ಯನಿರ್ವಹಿಸುತ್ತಿರುವುದನ್ನು ನಾವು ಕಾಣಬಹುದಾಗಿದೆ. ದಕ್ಷಿಣ ಭಾರತದ ಅನೇಕ ಶಾಸನಗಳಲ್ಲಿ ರಾಮಾನುಜ ಕೂಟಗಳು ಮತ್ತು ಅಲ್ಲಿ ನಡೆಯುತ್ತಿದ್ದ ಚಟುವಟಿಕೆಗಳು ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ. ಅಂತೆಯೇ ಶಿವಮೊಗ್ಗ ಜಿಲ್ಲೆಯ ಶಾಸನಗಳಲ್ಲಿಯೂ ಕೂಡ ರಾಮಾನುಜ ಕೂಟದ ಉಲ್ಲೇಖವು ಕಂಡುಬಂದಿದ್ದು, ಈ ಸಂಶೋಧನಾ ಲೇಖನವು ಅಂತಹ ಎರಡು ರಾಮಾನುಜ ಕೂಟಗಳ ಬಗೆಗೆ ವಿವರಿಸಲು ಪ್ರಯತ್ನಿಸಿದೆ.

**ಶ್ರೀ ರಾಮಾನುಜಾಚಾರ್ಯರು (೧೦೧೭–೧೧೩೭)**

ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಮುಖ ಪ್ರತಿಪಾದಕರಾದ ರಾಮಾನುಜರು ಸಂತರು, ವಿದ್ವಾಂಸರು ಹಾಗೂ ದಾರ್ಶನಿಕರಾಗಿದ್ದು ಭಾರತೀಯ ತತ್ವಜ್ಞಾನದ ದಿಗಂತರಲ್ಲಿ ಕೋರೈಸಿದ ಆಚಾರ್ಯತ್ರಯರಲ್ಲಿ ಶ್ರೀ ರಾಮಾನುಜರು ಎರಡನೆಯವರು. ಆಚಾರ್ಯ ಪರಂಪರೆಯ ಪ್ರಮುಖರಲ್ಲೊಬ್ಬರಾದ ಯಾಮುನಾಚಾರ್ಯರ ಶಿಷ್ಯ ಪರಂಪರೆಗೆ ಸೇರಿದವರು ತಮಿಳುನಾಡಿನಲ್ಲಿ ಹುಟ್ಟಿ, ಸಾಧನೆಗಳ ಮೂಲಕ ತಮ್ಮ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಭಾರತದಾದ್ಯಂತ ಹರಡಿದ ಮಹತ್ಕಾರ್ಯ ಇವರದು. ಇದರ ಮುಖ್ಯ ಉದ್ದೇಶ ಅಂದಿನ ಸಮಾಜದಲ್ಲಿದ್ದ ಏರುಪೇರುಗಳನ್ನು ಸಾಕಷ್ಟು ಆಧ್ಯಾತ್ಮಿಕ ವಿಚಾರಗಳಿಂದ ಪರಿಹರಿಸುವುದಾಗಿತ್ತು. ರಾಮಾನುಜರು ಅನೇಕ ವಿಷ್ಣು ದೇವಾಲಯಗಳಲ್ಲಿ ಪಾಂಚರಾತ್ರ ಆಗಮಗಳ ಪ್ರಕಾರ ಪೂಜಾ ವಿಧಾನಗಳನ್ನು ಏರ್ಪಡಿಸಿದರು. ಭಗವತ್ ಭಕ್ತಿಯ ನೆಲೆಯಲ್ಲಿ ವರ್ಣ, ಜಾತಿ, ವರ್ಗಗಳ ಅನ್ಯೋನ್ಯತೆಯನ್ನು ಸಮಾಜದಲ್ಲಿ ಬೆಳೆಸಿದರು. ಭಗವಂತನಲ್ಲಿ ಭಕ್ತಿಯನ್ನು ಉಳ್ಳ ಕೆಳವರ್ಗದವರಿಗೆ ದೇವಾಲಯದಲ್ಲಿ ಸೇವೆ ಮಾಡಲು ಶಾಸ್ತ್ರ ವಿರೋಧವಿಲ್ಲದಂತೆ ಮೊಟ್ಟಮೊದಲು ಮೇಲುಕೋಟೆಯಲ್ಲಿ ದಲಿತರನ್ನು ದೇವಾಲಯದ ಒಳಗೆ ಹೋಗುವ ಮತ್ತು ಪೂಜೆ ಸಲ್ಲಿಸುವ ವ್ಯವಸ್ಥೆ ಮಾಡಿದರು. ಮಂತ್ರೋಪದೇಶವನ್ನು ಬ್ರಾಹ್ಮಣರಲ್ಲದೇ ಇತರರಿಗೆ ಹೇಳುವಂತಿಲ್ಲ ಎಂಬ ನಿಯಮವಿದ್ದರೂ ಕೂಡ ರಾಮಾನುಜರು ಸಾಮಾನ್ಯ ಜನರಿಗೂ ಮಂತ್ರೋಪದೇಶವನ್ನು ಮಾಡಿದುದು ಆ ಕಾಲಕ್ಕೆ ಇದು ಅತಿ ಮುಖ್ಯ ಮತ್ತು ಬಹು ದೊಡ್ಡ ಸಂಗತಿಯಾಗಿತ್ತು ಎಂಬುದು ಗಮನಿಸಬೇಕಾದ ಅಂಶವಾಗಿದೆ.

ಶ್ರೀರಾಮಾನುಜರು "ಶ್ರೀವೈಷ್ಣವ ಮತವನ್ನು ಪ್ರಚಾರದಲ್ಲಿ ತಂದರು. ಈ ಮತವು ಬಿರುಗಾಳಿಯಂತೆ ದಕ್ಷಿಣ ಹಿಂದುಸ್ಥಾನದಲ್ಲೆಲ್ಲ ಬೀಸತೊಡಗಿತು. ಕುರುಬರೆಂದು ಕರೆಯಿಸಿಕೊಳ್ಳುವ ಜನಾಂಗವೂ ಕೂಡ ಶ್ರೀವೈಷ್ಣವರಾದರು

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸ ಗಂಗೋತ್ರಿ, ಮೈಸೂರು.
** ಸಹಾಯಕ ಪ್ರಾಧ್ಯಾಪಕರು, ಪ್ರವಾಸೋದ್ಯಮ ನಿರ್ವಹಣಾ ಶಾಸ್ತ್ರ, ಇತಿಹಾಸ ಮತ್ತು ಪುರಾತತ್ವ, ಕರ್ನಾಟಕ ರಾಜ್ಯ ಮುಕ್ತ ವಿವಿ, ಮೈಸೂರು.

ಎಂದು ಶ್ರೀಕಲಮುದಾನಿ ಗುರುರಾಯರು ತಮ್ಮ ಕೃತಿಯಲ್ಲಿ ಹೇಳಿಕೊಂಡಿದ್ದಾರೆ".

ಸಮಾಜದಲ್ಲಿ ಎಲ್ಲರೂ ಸಮಾನರು ಭಕ್ತಿ ಮತ್ತು ಶರಣಾಗತಿಯಿಂದ ಎಲ್ಲರೂ ಮೋಕ್ಷವನ್ನು ಪಡೆಯಬಹುದು ಎಂಬ ಸರಳ ತತ್ವವನ್ನು ಪ್ರತಿಪಾದಿಸಿ ಅವರು ಕೈಗೊಂಡ ಸಮಾಜೋ ಧಾರ್ಮಿಕ ಚಳುವಳಿ ಅವರ ವ್ಯಕ್ತಿತ್ವವನ್ನು ಮತ್ತಷ್ಟು ಹೆಚ್ಚಿಸಿತು. ಜಾತಿ, ಭೇದದ ಆಧಾರವಿಲ್ಲದ ಆಳ್ವಾರರುಗಳ ವಿಗ್ರಹ ಮತ್ತು ಸ್ತ್ರೀ ಪ್ರತೀಕವಾದ ಆಂಡಾಳ್ ಸಂತಳ ವಿಗ್ರಹವನ್ನು ಶ್ರೀವೈಷ್ಣವ ದೇವಾಲಯಗಳಲ್ಲಿ ಪ್ರತಿಷ್ಠಾಪಿಸುವ ಪರಿಪಾಠವು ಇವರ ಕಾಲದಲ್ಲಿ ಪ್ರಾರಂಭವಾಯಿತು. ಮೇಲುಕೋಟೆಯಲ್ಲಿ ಸುಮಾರು ೧೨ ವರ್ಷಗಳ ಕಾಲ ನೆಲೆಸಿದ್ದ ರಾಮಾನುಜರು ಅನಂತರ ಶ್ರೀರಂಗಂಗೆ ಹಿಂತಿರುಗಿದರು. ಇವರು ಆಚಾರ್ಯರ ಮತ್ತು ಆಳ್ವಾರರ ಉಪದೇಶಗಳನ್ನು ಸಮನ್ವಯಗೊಳಿಸಿ ಉಭಯ ವೇದಾಂತ ಪ್ರವರ್ತಕ ಎಂಬ ಬಿರುದನ್ನು ಅಲ್ಲದೆ, ಉಡ್ಯೆಯವರ್, ಯತಿರಾಜ, ಶ್ರೀ ವೈಷ್ಣವ ಸಿದ್ಧಾಂತದ ತತ್ವಾಚಾರ್ಯ ಎಂಬ ಬಿರುದುಗಳನ್ನು ಹೊಂದಿದ್ದರು. ತಮ್ಮ ಜೀವನವನ್ನೇ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮುಡಿಪಾಗಿಟ್ಟಿದ್ದ ರಾಮಾನುಜರು ಕ್ರಿ.ಶ. ೧೧೩೭ರಲ್ಲಿ ತಮಿಳುನಾಡಿನ ಶ್ರೀರಂಗಂನಲ್ಲಿ ದೇಹತ್ಯಾಗ ಮಾಡಿದರು.

ನಂತರದಲ್ಲಿ ರಾಮಾನುಜರ ಶಿಷ್ಯರುಗಳು ಇದನ್ನು ಮುಂದುವರೆಸಿದರು. ಇವರಲ್ಲಿ ಪಿಳ್ಳೈ ಲೋಕಾಚಾರ್ಯರು ಪ್ರಮುಖರಾಗಿದ್ದು ಇವರು ೧೩ನೇ ಶತಮಾನದಲ್ಲಿ ಜೀವಿಸಿದ್ದರು.

**ಶ್ರೀ ರಾಮಾನುಜ ಕೂಟ**

ಕ್ರಿ.ಶ. ೧೨ನೇ ಶತಮಾನದಲ್ಲಿ ಶ್ರೀ ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದ ನಂತರ ಮತ್ತು ತಮಿಳುನಾಡಿನಲ್ಲಿ ಇದ್ದಾಗಲೂ ಸಹ ಮುಖ್ಯವಾಗಿ ಅವರು ಗಮನ ಹರಿಸಿದ್ದು ಬ್ರಾಹ್ಮಣೇತರರ ಬಗ್ಗೆ. ಬ್ರಾಹ್ಮಣೇತರರು ಸಹ ಬ್ರಾಹ್ಮಣರ ರೀತಿಯಲ್ಲಿಯೇ ಉಪಾಸನೆ ಆರಾಧನೆಗಳನ್ನು ಮಾಡಿಕೊಂಡು ಮೋಕ್ಷ ಹೊಂದಲಿ ಎಂಬ ಕಾರಣದಿಂದಾಗಿ ಮಂತ್ರೋಪದೇಶವನ್ನು ಸರ್ವರಿಗೂ ತಿಳಿಯುವಂತೆ ಮಾಡಿದರು. ಶ್ರೀ ವೈಷ್ಣವ ಧರ್ಮವನ್ನು ಪ್ರತಿಪಾದಿಸಿದರು. ಶ್ರೀ ವೈಷ್ಣವ ಧರ್ಮದ ಪ್ರಕಾರ ಯಾರು ಪಂಚ ಸಂಸ್ಕಾರ ದೀಕ್ಷೆಗಳನ್ನು ತೆಗೆದುಕೊಂಡು ನಾಮವನ್ನು ಧರಿಸಿ ಶಂಖಚಕ್ರಾದಿಗಳನ್ನು ಹಾಕಿಕೊಳ್ಳುತ್ತಾರೋ ಅವರು ಎಲ್ಲ ರೀತಿಯಲ್ಲಿಯೂ ಭಗವಂತನನ್ನು ಹೊಂದಲು ಅರ್ಹರು. ದೇವರ ಮುಂದೆ ಎಲ್ಲರೂ ಸಮಾನರು ಎಂಬ ಅಂಶಗಳನ್ನು ಪ್ರತಿಪಾದಿಸಿದರು. ಇದರಿಂದಾಗಿ ರಾಮಾನುಜ ತತ್ವವು ಅತ್ಯಂತ ಜನಪ್ರಿಯವಾದ ತತ್ವವಾಗಿ ತಮಿಳುನಾಡು, ಕರ್ನಾಟಕ, ಆಂಧ್ರಪ್ರದೇಶ, ಉತ್ತರ ಪ್ರದೇಶ, ಗುಜರಾತ್, ನೇಪಾಳಗಳಲ್ಲಿ ಪ್ರಚಾರಗೊಂಡಿತು. ಇಂದು ಇಡೀ ಪ್ರಪಂಚದಾದ್ಯಂತ ಶ್ರೀ ವೈಷ್ಣವ ಸಂಪ್ರದಾಯದವರು ವಾಸಿಸುತ್ತಿದ್ದಾರೆ. ಕರ್ನಾಟಕದ ಶಾಸನಗಳ ಪ್ರಕಾರ ಗಮನಿಸಿದಾಗ ಕರ್ನಾಟಕದಲ್ಲಿ ೫೪ ವಿವಿಧ ಜಾತಿಯ ಜನರಿಗೂ ಕೂಡ ದೀಕ್ಷೆಯನ್ನು ನೀಡಿ ಎಲ್ಲರೂ ಸಮಾನರು ಎಂಬ ಪರಿಕಲ್ಪನೆಯನ್ನು ತಂದರು. ರಾಮಾನುಜ ಧರ್ಮದ ದೀಕ್ಷೆಯನ್ನು ಪಡೆದವರಿಗೆ ಭಾಗವತರು ಎಂದು ಕರೆಯಲಾಗುತ್ತಿತ್ತು. ರಾಮಾನುಜರು ದಾಸಯ್ಯ ಪಂಥವನ್ನು ಹುಟ್ಟು ಹಾಕಿದರು. ದಾಸಯ್ಯ ಎಂದರೆ ಪ್ರತಿಯೊಂದು ಜಾತಿ ವರ್ಗಕ್ಕೂ ಬ್ರಾಹ್ಮಣರೇ ಹೋಗಿ ಪೂಜೆ ಮಾಡಿಸುವ ಬದಲು ಆಯಾ ವರ್ಗದ ಜನರೇ ದಾಸಯ್ಯ ದೀಕ್ಷೆಯನ್ನು ತೆಗೆದುಕೊಂಡು ಅವರೇ ಅವರಿಗೆ ಮುಕ್ತಿಯನ್ನು ಹೊಂದಲು ಸಹಾಯ ಮಾಡುವಂತೆ ಆಯೋಜಿಸುತ್ತಿದ್ದರು ಎಂಬುದು. ಇದರಿಂದಾಗಿ ಸಾಮಾನ್ಯವಾದ ಎಲ್ಲಾ ವರ್ಗದ ಜನರಿಗಿಂತ ಶ್ರೀ ರಾಮಾನುಜ ದೀಕ್ಷೆಯನ್ನು ತೆಗೆದುಕೊಂಡ ಜನರು ಒಟ್ಟಾಗಿ ಒಂದು ಗುಂಪನ್ನು ಮಾಡಿಕೊಂಡು ರಾಮಾನುಜರ ಸಿದ್ಧಾಂತ, ತಮಿಳುನಾಡಿನ ದಿವ್ಯ ಪ್ರಬಂಧಗಳು, ಇವುಗಳ ಮೇಲೆ ಬರೆದ ಆಚಾರ್ಯರ ವ್ಯಾಖ್ಯಾನಗಳು ಇವುಗಳನ್ನು ಚರ್ಚಿಸಲು ಮತ್ತು ಅವುಗಳ ಜೊತೆಯಲ್ಲಿ ವ್ಯಾಕ್ಯಾರ್ಥವನ್ನು ನಡೆಸಲು ಮತ್ತು ದೇವತಾ ಕೀರ್ತನೆಗಳನ್ನು ತಮ್ಮ ತಮ್ಮ ಭಾಷೆಗಳಲ್ಲಿ ಹಾಡಲು ಈ ಜನರು ಸೇರಿ ಒಂದುಗುಂಪನ್ನು ಮಾಡಿಕೊಳ್ಳುತ್ತಿದ್ದರು. ಒಂದೇ ಜಾಗದಲ್ಲಿ ವಾಸಿಸುತ್ತಾ ಅವರು ಈ ರೀತಿಯ ಭಗವತ್ ವೈಭೋಗಗಳನ್ನು ಹಾಡುತ್ತಾ ಕುಣಿಯುತ್ತಾ, ನರ್ತಿಸುತ್ತಾ ಇರುತ್ತಿದ್ದರು. ಈ ಹಾಡುತ್ತಾ, ಕುಣಿಯುತ್ತಾ, ನರ್ತಿಸುತ್ತಾ ಇರುವ ಗುಂಪುಗಳನ್ನು ಭಾಗವತ ಗೋಷ್ಠಿ ಎಂದು ಕರೆಯಲಾಗಿದೆ. ಈ ರೀತಿಯ ಅನೇಕ ಭಾಗವತ ಗೋಷ್ಠಿಗಳು ಸೇರಿ ತಮಗೆ ರಾತ್ರಿ ತಂಗಲು ಮತ್ತು ಒಟ್ಟಾಗಿ ಚರ್ಚಿಸಲು ಮಾಡಿಕೊಂಡ ವ್ಯವಸ್ಥೆಯೇ ರಾಮಾನುಜ ಕೂಟ.

ರಾಮಾನುಜ ಮಠ ಮತ್ತು ರಾಮನುಜ ಕೂಟಗಳೆರಡು ಬೇರೆ ಬೇರೆ ಪರಿಕಲ್ಪನೆಗಳು. ರಾಮಾನುಜ ಮಠಗಳು ರಾಮಾನುಜ ಸಂಪ್ರದಾಯದ ಸಂಸ್ಕೃತ ಭಾಷೆಯನ್ನು ಉಳಿಸುವ ಒಂದು ಪ್ರಯತ್ನವನ್ನು ಮಾಡಿ ಅಲ್ಲಿ ಸನ್ಯಾಸಿಗಳು ದೇವ ಪೂಜೆ, ಆರಾಧನೆ, ವೇದಾಧ್ಯಯನ, ಸಂಸ್ಕೃತ ಇತ್ಯಾದಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರೆ, ರಾಮಾನುಜ ಕೂಟಗಳಲ್ಲಿ ಇತರೆ ಎಲ್ಲಾ ಜಾತಿಯ ಜನರು ಸೇರಿ ಜಾತಿ ಭೇದವಿಲ್ಲದೆ ಕೆಲವೊಮ್ಮೆ ಬ್ರಾಹ್ಮಣರು ಸೇರಿ ದೇವರ ಹೆಸರಿನ ನರ್ತನೆ, ಕೀರ್ತನೆ, ಅರ್ಚನೆ, ಪೂಜೆಗಳನ್ನು ಮಾಡುತ್ತಿದ್ದರು

ಮತ್ತು ರಾಮಾನುಜ ಸಂಪ್ರದಾಯದ ಒಳ್ಳೆಯ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದರು. ಹೀಗಾಗಿ ಸಾಮಾನ್ಯವಾಗಿ ದೇವಸ್ಥಾನದ ಪಕ್ಕಗಳಲ್ಲಿ, ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿ ರಾಮಾನುಜ ಭಕ್ತರು ಸೇರಲು ಒಂದಾಗುವಂತೆ ರಾಮಾನುಜ ಕೂಟಗಳನ್ನು ಕಟ್ಟಲಾಗುತ್ತಿತ್ತು. ಈ ರಾಮಾನುಜ ಕೂಟಗಳು ಶಾಸನೋಕ್ತವಾಗಿ ನಮಗೆ ಕಂಡುಬರುವುದು ಎಲ್ಲಾ ಪ್ರಸಿದ್ಧ ದಿವ್ಯ ಕ್ಷೇತ್ರಗಳಲ್ಲಿ. ಉದಾಹರಣೆಗೆ ಮೇಲುಕೋಟೆ, ಶ್ರೀರಂಗಪಟ್ಟಣ, ತೊಂಡನೂರು, ತಿರುಪತಿ, ಶ್ರೀರಂಗಂ, ಬೇಲೂರು, ಕಾಂಚೀಪುರಂ, ಮಾಗಡಿ ಹೀಗೆ ದೇಶದ ಉದ್ದಗಲಕ್ಕೂ ರಾಮಾನುಜ ಕೂಟಗಳು ಇದ್ದವು. ಅವರೆಲ್ಲರೂ ಹಾಡುತ್ತಾ ಕುಣಿಯುತ್ತಿದ್ದ ಅತಿ ಮುಖ್ಯವಾದ ಒಂದೇ ಗೀತೆಯೆಂದರೆ 'ರಾಮಾನುಜ ಯತಿ ರಾಮಾನುಜ ಯತಿ ರಾಮಾನುಜ' ಎಂದು ಕೇವಲ ಒಂದು ಸಾಲಿನ ಗೀತೆ ಮಾತ್ರ. ಇಂದಿಗೂ ಈ ಪದ್ಧತಿ ಎಲ್ಲಾ ದಿವ್ಯ ಕ್ಷೇತ್ರಗಳಲ್ಲಿಯೂ ಜೀವಂತವಾಗಿದೆ. ಉದಾ ಮೇಲುಕೋಟೆಯ ಬ್ರಹ್ಮೋತ್ಸವದಲ್ಲಿ ಇಂದಿಗೂ ಇಂತಹ ಅನೇಕ ಗೋಷ್ಠಿಗಳು **'ರಾಮಾನುಜ ಯತಿ ರಾಮಾನುಜ'** ಎಂಬ ಹಾಡನ್ನು ಹೇಳುತ್ತಾ ಕುಣಿಯುತ್ತಿರುವುದನ್ನು ನೋಡಬಹುದಾಗಿದೆ. ವಿಶೇಷವೆಂದರೆ ಕನಕದಾಸರು ಕೂಡ ತಮ್ಮ ಕೀರ್ತನೆಗಳಲ್ಲಿ **'ಮತವೇ ಒಳ್ಳೆಯದು ಯತಿರಾಮಾನುಜ ಎಂಬ ಮತವೇ ಒಳ್ಳೆಯದು** ಎಂದು ಬರೆದಿದ್ದಾರೆ. ಏನೆಂದರೆ ಇಲ್ಲಿ ಯಾವುದೇ ದೇವರ ಹೆಸರಿಲ್ಲ. ಆದರೆ ರಾಮಾನುಜ ಎಂಬ ಹೆಸರನ್ನು ಹೇಳಿದರೆ ಸಾಕು ಒಳ್ಳೆಯದಾಗುತ್ತದೆ ಎಂಬ ಬಲವಾದ ನಂಬಿಕೆ ಈ ಜನರಲ್ಲಿತ್ತು. ಅಂದರೆ ರಾಮಾನುಜರು ಜನರ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದ್ದರು ಎಂಬುದು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಹೀಗಾಗಿ ಇದು ಸಮಾನತೆ ಮತ್ತು ಸರಳ ತತ್ವಗಳಿಂದಾಗಿ ಜನರನ್ನು ಅತಿ ಹೆಚ್ಚು ಆಕರ್ಷಿಸಿತು ಮತ್ತು ಹೆಚ್ಚು ಜನಪ್ರಿಯ ವಾಯಿತು.

**ಶಿವಮೊಗ್ಗ ಜಿಲ್ಲೆಯ ಶಾಸನೋಕ್ತ ರಾಮಾನುಜ ಕೂಟಗಳು**

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ನಗರದ ಚಾತಾಳಿ ರಾಮಾನುಜಯ್ಯನಲ್ಲಿದ್ದ ತಾಮ್ರಶಾಸನ[೭]ದಲ್ಲಿ ಶಿವನ ಪ್ರಾರ್ಥನೆಯನ್ನು ಮಾಡಲಾಗಿದೆ. ಶಾಸನವನ್ನು ಶಕ ವರುಷ ೧೫೩೮ನೆಯ ನಳ ಸಂವತ್ಸರದ ಶ್ರಾವಣ ಶುಕ್ಲ ಪಕ್ಷದ ದಶಮಿಯಂದು ಅಂದರೆ ಕ್ರಿ.ಶ ೧೬೧೬ ಜುಲೈ ೧೪ ಭಾನುವಾರದ ದಿನದಂದು ಶಾಸನವನ್ನು ಹೊರಡಿಸಲಾಗಿದೆ. ಈ ಶಾಸನವು ಕೆಳದಿ ಮನೆತನದ ವೆಂಕಟಪ್ಪ ನಾಯಕನ ಆಡಳಿತ ಕಾಲಕ್ಕೆ ಸೇರಿದ್ದು, ಈ ಶಾಸನವು ವೈದಿಕ ಸಿದ್ಧಾಂತದ ಅನುಯಾಯಿಯಾದ ವೆಂಕಟಪ್ಪ ನಾಯಕನು ಇಕ್ಕೇರಿಯ ರಾಮಾನುಜ ಧರ್ಮ ಕೂಟದ ಮಠಕ್ಕೆ ಮತ್ತು ವೆಂಕಟೇಶ ದೇವಾಲಯಕ್ಕೆ ಎರಡೂ ಸೇರಿ ಹರತಾಳು ಸೀಮೆಯ ತಿಪ್ಪಳ್ಳಿಯನ್ನು ದಾನ ನೀಡಿರುವುದನ್ನು ತಿಳಿಸುತ್ತದೆ.

ಮುಖ್ಯವಾಗಿ ಶಾಸನವು ನಗರದ ಚಾತಾಳಿ ರಾಮನುಜಯ್ಯನವರ ಬಳಿ ದೊರೆತಿದೆ ಎಂದು ಉಲ್ಲೇಖ ವಾಗಿದೆ[೮]. ಇಲ್ಲಿ ಶಾತ್ತಾದ ಎಂಬ ಪದವು ಮುಂದೆ ಚಾತಾಳಿ ಯಾಗಿದೆ. ಶಾತ್ತಾದ, ಕ್ಷಾತ್ತಾದ, ಚಾತ್ತಾದ, ಚಾತಾಳಿ ಎಂದಾಗಿದೆ. ಶಾತ್ತಾದ ಎಂದರೆ ಧರಿಸದ ಎಂದರ್ಥ. ಏನನ್ನು ಧರಿಸುವುದಿಲ್ಲ ಎಂದರೆ ಜನಿವಾರವನ್ನು ಧರಿಸುವುದಿಲ್ಲ. ಎಂದರೆ ರಾಮಾನುಜ ಸಂಪ್ರದಾಯದ ಪ್ರಕಾರ ಜನಿವಾರವನ್ನು ಧರಿಸದ ಅಂದರೆ ಬ್ರಾಹ್ಮಣೇತರರೂ ಕೂಡ ಶ್ರೀ ವೈಷ್ಣವ ಧರ್ಮಕ್ಕೆ ಒಳಗಾಗಬಹು ದಾಗಿತ್ತು. ಆದ್ದರಿಂದಾಗಿ ರಾಮಾನುಜ ಕೂಟಗಳು ಬ್ರಾಹ್ಮಣೇತ್ತರರ ಸಂಸ್ಕೃತಿಗಳಾಗಿದ್ದವು ಎಂಬುದು ಇದರಿಂದಲೂ ಸ್ಪಷ್ಟಪಡುತ್ತದೆ. ಏಕೆಂದರೆ ಶಾಸನವು ದೊರಕಿರುವುದೆ ಚಾತಾಳಿ ರಾಮಾನುಜಯ್ಯ ಎಂಬುವರ ಬಳಿ. ಚಾತಾಳಿ ಎಂಬುದು ನಿಕೃಷ್ಟ ಶಬ್ದವಲ್ಲ ಬದಲಿಗೆ ಶಾತ್ತಾದ ಶಬ್ದದ ಅಪಭ್ರಂಶ ರೂಪ.

ಮುಖ್ಯವಾಗಿ ಶಾಸನದ ಪ್ರಮುಖ ಅಂಶವೆಂದರೆ ಶ್ರೀ ವೈಷ್ಣವ ಧರ್ಮದ ಮಠಕ್ಕೆ ಮತ್ತು ವೆಂಕಟೇಶ್ವರ ದೇವರಿಗೆ ಶಾಸನದಲ್ಲಿಯೇ ಹೇಳಿಕೊಂಡಿರುವಂತೆ ವಿಶುದ್ಧ ವೈದಿಕಾದ್ವೈತ ಸಿದ್ಧಾಂತದ ಪ್ರತಿಪಾದಕರಾದ ಮತ್ತು ಶಿವಗುರು ಭಕ್ತಿಪರಾಯಣರಾದ ಎಂದರೆ ಶಿವಧರ್ಮವನ್ನು ಶೈವಧರ್ಮ ವನ್ನು ಪ್ರಧಾನವಾಗಿ ಅನುಸರಿಸುತ್ತಿದ್ದ ಕೆಳದಿ ವೆಂಕಟಪ್ಪ ನಾಯಕರು ದಾನವನ್ನು ನೀಡಿದ್ದಾರೆ. ಇಲ್ಲಿ ಒಂದು ಸೌಹಾರ್ದತೆಯನ್ನು ಗಮನಿಸಬಹುದು, ರಾಜರು ಯಾವ ಧರ್ಮವನ್ನು ಅನುಸರಿಸುತ್ತಿದ್ದರೂ ಸಹ ಅವರು ಎಂದಿಗೂ ಕೂಡ ಇತರ ಧರ್ಮಗಳ ಬಗ್ಗೆ ತಾರತಮ್ಯಗಳನ್ನು ಮಾಡುತ್ತಿರಲಿಲ್ಲ ಎಂಬುದಕ್ಕೆ ಇದೊಂದು ಸ್ಪಷ್ಟ ಉದಾಹರಣೆ. ಇಕ್ಕೇರಿಯ ರಾಮಾನುಜ ಧರ್ಮ ಕೂಟದ ಮಠಕ್ಕೆ ಮತ್ತು ವೆಂಕಟೇಶ ದೇವಾಲಯಕ್ಕೆ ಎರಡೂ ಸೇರಿ ಹರತಾಳು ಸೀಮೆಯ ತಿಪ್ಪಳ್ಳಿಯನ್ನು ದಾನ ನೀಡಿ, ಆ ಗ್ರಾಮಕ್ಕೆ ಸಲ್ಲುವ ಪೂರ್ವ ಭಾಗದ ಕುಳ ಗದ್ಯಾಣ ೪೨ನ್ನು, ಅಲ್ಲಿನ ಪ್ರಜೆಗಳ ಒಡಂಬಡಿಕೆಯಾದ ೪ರ ಕುಳ ಗದ್ಯಾಣ ೪೦ರ ಅರೆವಾಸಿ ಹಾಗೂ ೬೦ ಬಿರಾಡದಿಂದಲೂ ಸುಂಕ ದುರ್ಗದ ಭತ್ತ ಬಿರಾಡ ಗದ್ಯಾಣ ೧ರಲ್ಲೂ ೧ ಮತ್ತು ಗದ್ಯಾಣ ೧೦ ಸ್ಥಳದ ಸೇನಭೋವನ ವರ್ತನೆಗೆ ಹೀಗೆ ಒಟ್ಟು ಗದ್ಯಾಣ ೭೧ ವರಹವನ್ನು ಮತ್ತು ಆ ಗ್ರಾಮಕ್ಕೆ ಸಲ್ಲುವ ಸರ್ವ ಸ್ವಾಮ್ಯವನ್ನು ಹಿಂದಿನ ಮರ್ಯಾದೆಯಲ್ಲಿ ಮಾಡಿಕೊಟ್ಟು ಕಟ್ಟಳೆಯಾಗಿ ನಡೆಸುವ ವಿವರವನ್ನು ನೀಡಲಾಗಿದ್ದು ಅದು ಇಂತಿದೆ – ವೆಂಕಟೇಶ್ವರ ದೇವರಿಗೆ ನಿತ್ಯವು ನಡೆಯುವ

ಅಮೃತಪಡಿಗಾಗಿ ದಿನವೊಂದಕ್ಕೆ ಅಂದರೆ ದಿನ ಒಂದು ವೇಳೆಗೆ ೨ ಅಕ್ಕಿಪಡಿಯಂತೆ ೨ ತಿಂಗಳಲ್ಲೂ ೧ ರ ಗದ್ಯಾಣದ ಲೆಕ್ಕದಲ್ಲಿ ವರುಷ ಒಂದಕ್ಕೆ ೬ ಗದ್ಯಾಣಗಳನ್ನು ನೀಡಿದ್ದಾರೆ. ನೈವೇದ್ಯದ ತುಪ್ಪದಲ್ಲಿ ವರುಷ ಒಂದರ ಗದ್ಯಾಣ ೨ರಲ್ಲಿ ೪ ತೊವ್ವೆ ಸಾರು ಎಂದರೆ ಸಾಂಬಾರು ಹಾಗೆ ೨ ನಂದಾದೀಪ್ತಿ ಮತ್ತು ೨ ಎಳ್ಳೆಣ್ಣೆಯ ದೀಪ್ತಿಗೆ ಗದ್ಯಾಣ ೫ ರಂತೆ ಮತ್ತು ಶ್ರೀಗಂಧದ ಧೂಪಕ್ಕೆ ೧ ಗದ್ಯಾಣ, ನಿತ್ಯ ತಾಂಬೂಲಕ್ಕಾಗಿ ೧ ಗದ್ಯಾಣ, ಕಾರ್ತಿಕ ಮಾಸದ ಪೂಜೆಗಾಗಿ ೧ ಗದ್ಯಾಣ, ಗೋಕುಲಾಷ್ಟಮಿಗಾಗಿ ಗದ್ಯಾಣ ೧ ಏಕೆಂದರೆ ಗೋಕುಲಾಷ್ಟಮಿ ಶ್ರೀವೈಷ್ಣವರಿಗೆ ಒಂದು ಪ್ರಧಾನ ಹಬ್ಬದ ಆಚರಣೆಯಾಗಿದೆ. ಪಂಚಪರ್ವಗಳು ಎಂದು ಕರೆಯಲಾಗುವ ದೇವಾಲಯದ ೫ ವಿಶೇಷ ದಿನಗಳನ್ನು ಅಂದರೆ ಅಮವಾಸೆ, ಪೌರ್ಣಮಿ, ಏಕಾದಶಿ, ದ್ವಾದಶಿ ಮತ್ತು ದೇವರು ಹುಟ್ಟಿದ ನಕ್ಷತ್ರ ಈ ೫ಕ್ಕೂ ಮತ್ತು ದೇವತಾ ಕಟ್ಟಳೆಗೆ ಗದ್ಯಾಣ ೧೮ನ್ನು, ೪ ಜನ ಅರ್ಚಕರಿಗೆ ೨ ರಂತೆ ೨೪ನ್ನು, ನಿತ್ಯಸತ್ರ ಅಂದರೆ ಈ ರಾಮಾನುಜ ಕೂಟಗಳಲ್ಲಿ ಬೇರೆ ಊರಿನಿಂದ ಬರುವ ಎಲ್ಲರಿಗೂ ಉಚಿತವಾಗಿ ಊಟವನ್ನು ನೀಡಲಾಗುತ್ತಿತ್ತು ಮತ್ತು ಮಲಗಲು ಜಾಗವನ್ನು ಕೊಡಲಾಗುತ್ತಿತ್ತು. ಇದು ಧರ್ಮ ಛತ್ರದಂತೆ ಕೆಲಸ ಮಾಡುತ್ತಿದ್ದವು. ನಿತ್ಯ ಸತ್ರ ದಿನವೊಂದಕ್ಕೆ ೧೨ ಜನಕ್ಕೆ ಊಟವನ್ನು ಹಾಕುತ್ತಿದ್ದರು. ಅಕ್ಕಿ ಖಂಡುಗ ೧ಕ್ಕೆ ಜನ ೮೦ಲ್ಲೂ ಕೆಲವೊಮ್ಮೆ ೮೦ ದಿನದ ತನಕ ಹೋಗುತ್ತಿತ್ತು. ವರುಷ ಒಂದಕ್ಕೆ ಭತ್ತ ಖಂಡುಗ ೧೪೫ ಅಂದರೆ ವಾರ್ಷಿಕವಾಗಿ ಈ ಮಠದಲ್ಲಿ ೧೩೫ ಖಂಡುಗ ಪ್ರಸಾದವನ್ನು ನೀಡಲಾಗುತ್ತಿತ್ತು ಮತ್ತು ಅದಕ್ಕಾಗಿ ಗದ್ಯಾಣ ೧೩ ನ್ನು ನಿಯೋಜಿಸಲಾಗಿತ್ತು. ಮೇಲುವೆಚ್ಚ ಅಂದರೆ ವಿಶೇಷ ದಿನಗಳಲ್ಲಿ ಮೇಲುವೆಚ್ಚವಾಗಿ ೮೦ ಜನಗಳ ಮೇಲೆ ಪ್ರವಾಸಿಗರು ಬಂದಾಗ ೧೦೦ ಜನಕ್ಕೆ ಗದ್ಯಾಣ ೬ ರಂತೆ ಉಭಯ ಗದ್ಯಾಣ ೨೦ ರಲ್ಲೂ ೧ ಛತ್ರಕ್ಕೆ ಅಡುಗೆ ಮಾಡಿ, ಮತ್ತು ದೇವರಿಗೆ ಹೂವು, ತುಳಸಿ, ಆಹುತಿಗಳನ್ನು ತರುವವರಿಗಾಗಿ ಗದ್ಯಾಣ ೮, ಉಭಯವಾಗಿ ೨೮ನ್ನು ಅಂತೂ ಗದ್ಯಾಣ ೭೧ನ್ನು ನೀಡಲಾಗಿತ್ತು. ಹೀಗೆ ನಡೆಸಿ ಕೊಂಡು ನೈವೇದ್ಯವಾದ ನಂತರ ಅನ್ನ, ತೊವ್ವೆಸಾರು ಅಂದರೆ ಸಾಂಬಾರು, ತುಪ್ಪವನ್ನು ಇಬ್ಬರು ಅರ್ಚಕರು ಊಟ ಮಾಡಬೇಕು. ಈ ತಿಪ್ಪಳ್ಳಿ ಗ್ರಾಮದ ಒಳಗಣ ಕಲಿನಾಥ ದೇವರಿಗೆ ರೇಖೆಗೆ ಹೊರಗಾದ ಸ್ವಾಸ್ತ ಮತ್ತು ಗದ್ದೆ ಬೀಜವರಿ ಖಂಡುಗ ೫ಕ್ಕೂ ಮತ್ತು ಗಡಿ ಖಂಡುಗ ೨೦ ಕ್ಕೆ ದೇವರ ಅಮ್ರುತಪಡಿಗೆ ದೇವರ ನಂದಾದೀಪ್ತಿಗೆ ದಾನನೀಡಲಾಗಿದೆ. ಸೂರ್ಯ, ಚಂದ್ರ, ಆಕಾಶ, ಅಗ್ನಿ ಇವೆಲ್ಲವೂ ಮನುಷ್ಯನ ಒಳ್ಳೆಯದು ಮತ್ತು ಕೆಟ್ಟದ್ದನ್ನು ನೋಡುತ್ತಿರುತ್ತವೆ, ಆದ್ದರಿಂದ ಕೆಟ್ಟದ್ದನ್ನು ಮಾಡಬಾರದು ಎಂಬ ಶಾಪಾಶಯದೊಂದಿಗೆ ಶಾಸನ ಮುಕ್ತಾಯವಾಗಿದೆ.

ಹೀಗೆ ಕೆಳದಿಯ ನಗರದಂತಹ ಸಾಮಾನ್ಯ ಹಳ್ಳಿಯಲ್ಲಿಯೂ ಕೂಡ ಶ್ರೀರಾಮಾನುಜ ಧರ್ಮ ಹೇಗೆ ಜನಪ್ರಿಯವಾಗಿತ್ತು ಎಂಬ ಅಂಶ ಈ ಶಾಸನದಿಂದ ತಿಳಿಯುತ್ತದೆ. ಮತ್ತು ಮಧ್ಯಕಾಲೀನ ಸಮಾಜದ ಧಾರ್ಮಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ.

### ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಗರುಡಾಚಾರ್ಯರ ವಶದಲ್ಲಿರುವ ಲೋಕಾಚಾರ್ಯಮಠದ ತಾಮ್ರಶಾಸನ

ಮೊದಲಿಗೆ ಶಿವನ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತದೆ. ಶಾಸನವನ್ನು ಶಕ ವರುಷ ೧೫೯೬ನೆಯ ಪ್ರಮಾದಿ ಸಂವತ್ಸರ ನಿಜ ಭಾದ್ರಪದ ಶುಕ್ಲ ೧೫ ರಂದು ಅಂದರೆ ಕ್ರಿ.ಶ. ೧೬೩೭ ಸೆಪ್ಟೆಂಬರ್ ೧೬ರಂದು ಹೊರಡಿಸ ಲಾಗಿದೆ. ಈ ಶಾಸನವು ಕೆಳದಿಯ ಪ್ರಧಾನ ಸೋಮಶೇಖರ ನಾಯಕನ ಹೆಂಡತಿ ಕೆಳದಿಯ ರಾಣಿ ಚೆನ್ನಮ್ಮಾಜಿ ಅಮಟೆಕೊಪ್ಪದ ಸೀಮೆಗೆ ಸೇರಿದ ಕೋಟಿಪುರ ಗ್ರಾಮದ ರಾಮಾನುಜ ಕೂಟದ ಮಠ ಧರ್ಮಕ್ಕೆ ಬರೆಸಿಕೊಟ್ಟ ಶಾಸನವಾಗಿದೆ.

ಇದು ಸಾಗರದ ಗರುಡಾಚಾರ್ಯರ ವಶದಲ್ಲಿರುವ ಲೋಕಾಚಾರ್ಯರ ಮಠದ ತಾಮ್ರ ಶಾಸನ ಎಂದು ಉಲ್ಲೇಖಿತವಾಗಿದೆ. ಈ ಲೋಕಾಚಾರ್ಯರು ಯಾರು ಎಂದು ಕೇಳಿದರೆ ಶ್ರೀ ರಾಮಾನುಜ ಸಂಪ್ರದಾಯವು ರಾಮಾನುಜಾಚಾರ್ಯರಿಂದ ಆರಂಭವಾಗಿ ಅವರು ೧೧೩೭ರಲ್ಲಿ ವೈಕುಂಠವಾಸಿಗಳಾದ ನಂತರದ ಕಾಲದಲ್ಲಿ ಅಂದರೆ ೧೩ನೇ ಶತಮಾನದ ಕೊನೆಯ ಭಾಗದಲ್ಲಿ ಇಬ್ಬರು ಪ್ರಮುಖ ಆಚಾರ್ಯರು ಇದ್ದರು. ಆ ಆಚಾರ್ಯರಲ್ಲಿ ಒಬ್ಬರು ಪಿಳ್ಳೈ ಲೋಕಾಚಾರ್ಯರು, ಮತ್ತೊಬ್ಬರು ವೇದಾಂತ ದೇಶಿಕರು. ಈ ಪಿಳ್ಳೈ ಲೋಕಾಚಾರ್ಯರಿಂದಾಗಿ ನಂತರದ ಪರಂಪರೆಯಿಂದ ಬಂದಿರುವುದೇ ವರವರಮುನಿ ಎಂಬ ಸಂಪ್ರದಾಯ. ಶ್ರೀ ರಾಮಾನುಜಾಚಾರ್ಯ ಸಂಪ್ರದಾಯದ ಪ್ರಮುಖ ಗುರುಗಳಾಗಿ ಶ್ರೀರಂಗದಲ್ಲಿ ಇವರು ವಾಸಿಸುತ್ತಿದ್ದರು. ಶ್ರೀರಂಗದಲ್ಲಿ ಮುಸಲ್ಮಾನರ ಧಾಳಿಯು ಆರಂಭವಾಗಲಾಗಿ ರಂಗನಾಥನ ದೇವಾಲಯವನ್ನು ರಕ್ಷಿಸಲು ಮತ್ತು ರಂಗನಾಥನ ವಿಗ್ರಹವನ್ನು ರಕ್ಷಿಸಲು ಅತ್ಯಂತ ಹೆಚ್ಚು ಪರಿಶ್ರಮವನ್ನು ತೆಗೆದುಕೊಂಡು ತಮ್ಮ ಜೀವವನ್ನು ಕೂಡ ತ್ಯಾಗ ಮಾಡಿದರು. ಅಂತಹ ಪಿಳ್ಳೈ ಲೋಕಾಚಾರ್ಯರು ಶ್ರೀವಚನ ಭೂಷಣ, ಮುಮುಕ್ಷುಪಡಿ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ. ಈ ಶ್ರೀ ಪಿಳ್ಳೈ ಲೋಕಾಚಾರ್ಯರ ಮಠ ಅವರ ಹೆಸರಿನಲ್ಲಿ

ಸಾಗರದಲ್ಲಿ ಇತ್ತು ಎಂಬುದು ನಿಜವಾಗಿಯೂ ಒಂದು ಕುತೂಹಲದ ಸಂಗತಿ. ಏಕೆಂದರೆ, ಎಲ್ಲಾ ಜಾಗದಲ್ಲಿಯೂ ರಾಮಾನುಜ ಮಠ, ವಾನಮಾಮಲೈ ಮಠ, ಪರಕಾಲ ಮಠ, ಯದುಗಿರಿ ಯತಿರಾಜ ಮಠ ಮುಂತಾದ ಮಠಗಳು ಕಂಡುಬರುತ್ತವೆಯೇ ಹೊರತು ಈ ಲೋಕಾಚಾರ್ಯರ ಮಠ ಕರ್ನಾಟಕದಲ್ಲಿ ಕಂಡುಬರುವುದು ಅಪರೂಪ ಎಂದು ಹೇಳಬಹುದು. ಆದರೆ ಇಲ್ಲಿ ಲೋಕಾಚಾರ್ಯರ ಮಠದ ಉಲ್ಲೇಖವಾಗಿರುವುದು ನಿಜವಾಗಿಯೂ ಒಂದು ವಿಶಿಷ್ಟವಾದ ಸಂಗತಿಯಾಗಿದೆ.

ಶಾಸನದಲ್ಲಿ ಈಗಾಗಲೇ ಹೇಳಿರುವಂತೆ ವೆಂಕಟಪ್ಪ ನಾಯಕನ ನಂತರ ಬಂದ ಸದಾಶಿವರಾಯರ ವಂಶೋದ್ಭವ ನಾದಂತಹ ಸಂಕಣ್ಣನಾಯಕರ ಪ್ರಪೌತ್ರನಾದ ಸಿದ್ದಪ್ಪನಾಯಕರ ಮೊಮ್ಮಗನಾದ ಶಿವಪ್ಪನಾಯಕರ ಪುತ್ರನಾದ ಸೋಮಶೇಖರ ನಾಯಕರ ಧರ್ಮಪತ್ನಿಯಾದಂತಹ ಚೆನ್ನಮ್ಮಾಜಿಯವರು ದಾನವನ್ನು ನೀಡಿದ್ದನ್ನು ಉಲ್ಲೇಖಿಸಲಾಗಿದೆ. ಅವರು ಅಮಟೆಕೊಪ್ಪದ ಸೀಮೆಗೆ ಸೇರಿದ ಕೋಟಿಪುರ ಗ್ರಾಮದ ರಾಮಾನುಜ ಕೂಟದ ಮಠಕ್ಕೆ ದಾನವನ್ನು ಕೊಟ್ಟಿದ್ದಾರೆ. ಇಂದಿಗೂ ಕೋಟಿಪುರ ಗ್ರಾಮದಲ್ಲಿ ಈ ರಾಮಾನುಜ ಕೂಟವಿದೆಯೇ ಇಂಬುದನ್ನು ನಾವು ಪರಿಶೀಲಿಸಬೇಕಿದೆ. ಈ ಶಾಸನ ಕ್ರಮದ ಪ್ರಕಾರ ಶಿವಪ್ಪನಾಯಕನ ಶಿಸ್ತಿಗೆ ಒಳಪಡುವ ಜಾಗದಲ್ಲಿ ಒಂದು ಮಠವನ್ನು ಕಟ್ಟಿಸಿ ಧರ್ಮವನ್ನು ನಡೆಸಿಕೊಡಬೇಕೆಂದು ರಾಣಿಯವರನ್ನು ಯೆಲ್ಲಿಸೆಟ್ಟಿಯು ಕೇಳಿಕೊಂಡನು. ಯೆಲ್ಲಿಸೆಟ್ಟಿಯ ಪ್ರಾರ್ಥನೆಯನ್ನು ಒಪ್ಪಿದ ಚೆನ್ನಮ್ಮಾಜಿಯು ಯೆಲ್ಲಿಸೆಟ್ಟಿಗೆ ಒಂದು ಗ್ರಾಮದಲ್ಲಿ ದಾನವನ್ನು ಮಾಡಿದಳು. ಆ ಗ್ರಾಮವು ಅಮಟೆಕೊಪ್ಪದ ಸೀಮೆಯಲ್ಲಿದ್ದು ಅದು ಕೋಟಿಪುರ ಗ್ರಾಮವಾಗಿದೆ. ಆ ಗ್ರಾಮದ ಎರಡೂ ರೇಖೆಗಳಲ್ಲಿಯೂ ೧೫ ಗದ್ಯಾಣ ಮತ್ತು ೧೫ ವರಹವನ್ನು, ಮೂರು ಹಣವಿನ ಭೂಮಿಯನ್ನು ಕೊಟ್ಟಿದ್ದಾರೆ. ಈ ಭೂಮಿಯಲ್ಲಿರುವಂತಹ ೪ ಗಡಿಗಳಲ್ಲಿ ನಿಧಿಯಾಗಿರಲೀ ನಿಕ್ಷೇಪವಾಗಿರಲಿ, ನೀರಾಗಿರಲೀ ಕಲ್ಲಾಗಿರಲಿ, ಕಣ್ಣಿಗೆ ಕಾಣದ್ದಾಗಲೀ ಮುಂದೆ ಬರುವುದಾಗಲಿ, ಸಿದ್ಧವಾಗಲೀ ಸಾಧ್ಯವಾಗಲಿ ಈ ರೀತಿಯ ಅಷ್ಟಭೋಗ ತೇಜಸ್ವಾಮ್ಯವನ್ನು ಹಿಂದಿನ ಮರ್ಯಾದೆಯಲ್ಲಿ ಮಾಡಿಕೊಟ್ಟದ್ದಾರೆ. ಸೂರ್ಯ, ಚಂದ್ರ, ಅಗ್ನಿ, ವಾಯು, ಆಕಾಶ, ಭೂಮಿ, ನೀರು, ಹೃದಯ, ಯಮ, ಹಗಲು, ರಾತ್ರಿ, ಬೆಳಗ್ಗೆ, ಸಂಜೆ, ಧರ್ಮ ಇವು ನರನು ಮಾಡುವ ಎಲ್ಲಾ ಕೆಲಸಗಳ ಮೇಲೆ ಕಣ್ಣಿಟ್ಟಿರುತ್ತವೆ. ಆದ್ದರಿಂದ ಯಾರು ತಪ್ಪನ್ನು ಮಾಡಬಾರದು ಎಂಬ ಶಾಪಾಶಯ ದೊಂದಿಗೆ ಶಾಸನವು ಮುಕ್ತವಾಗಿದೆ. ಕಡೆಯಲ್ಲಿ ಶ್ರೀ ಸದಾಶಿವ ಎಂದಿದೆ.

ಭಾರತದ ಇತಿಹಾಸದಲ್ಲಿ ಶ್ರೀರಾಮಾನುಜಾಚಾರ್ಯರ ಸಾಧನೆಯು ಅವಿಸ್ಮರಣೀಯವಾದುದಾಗಿದೆ. ಜಟಿಲತೆಯಿಂದ ಕೂಡಿದ್ದ ಅಂದಿನ ಸಮಾಜದಲ್ಲಿ ಬ್ರಾಹ್ಮಣೇತರರ ಬಗ್ಗೆ ಒಲವನ್ನು ತೋರಿದವರಲ್ಲಿ ಶ್ರೀರಾಮಾನುಜರು ಪ್ರಮುಖ ರಾಗಿದ್ದಾರೆ. ಶ್ರೀವೈಷ್ಣವ ಧರ್ಮದ ಸಿದ್ಧಾಂತದ ಮೂಲಕ ಸಮಾಜದಲ್ಲಿದ್ದ ಏರುಪೇರುಗಳನ್ನು ಹೋಗಲಾಡಿಸಿ ಎಲ್ಲರೂ ಸಮಾನರು ಎಂಬ ಅಂಶವನ್ನು ಪ್ರತಿಪಾದಿಸಿರು. ಈ ನಿಟ್ಟಿನಲ್ಲಿ ರಾಮಾನುಜ ಕೂಟಗಳು ಸಹ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ನಾವು ಕಾಣಬಹುದಾಗಿದೆ.



## ಆಧಾರ ಗ್ರಂಥಗಳು


೧. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೧೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

೨. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

೩. ಶ್ರೀ ಕನಕದಾಸರ ಕೀರ್ತನೆಗಳು, ಸಂಪಾದಕರು ಡಾ. ಟಿ.ಎನ್. ನಾಗರತ್ನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೪.

೪. ಕನಕದಾಸರ ಜೀವನ ಚರಿತ್ರೆ, ಶ್ರೀ ಕಲಮದಾನಿ ಗುರುರಾಯರು, ೧೯೬೫.

೫. ಕರ್ನಾಟಕದಲ್ಲಿ ರಾಮಾನುಜಾಚಾರ್ಯರು, ಬಾ.ರಾ. ಗೋಪಾಲ, ದೆಹಲಿ.




# ಪುರವರ್ಗ ದಾನ

ಡಾ. ಎಚ್.ಎಸ್. ಉಷಾರಾಣಿ*

**ಪ್ರಾ**ಚೀನ ಕಾಲದಿಂದಲೂ ದೇವಾಲಯಗಳು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕೇಂದ್ರಗಳಾಗಿದ್ದು ಹಲವರಿಗೆ ಜೀವನೋಪಾಯ ಕಲ್ಪಿಸಿದೆ. ಹಾಗಾಗಿ ಶಾಸನಗಳಲ್ಲಿ ಜೀವಿತವರ್ಗ, ನಿಯೋಗಿ, ಪುರವರ್ಗ, ಶೂದ್ರ ಪರಿವಾರ, ಪರಿವಾರ ಇತ್ಯಾದಿ ಪದಗಳ ಉಲ್ಲೇಖವಿದೆ. ಆಯಾ ದೇವಾಲಯಗಳ ಕೈಂಕರ್ಯ ನಿರ್ವಹಣೆಗೆ ಅಗತ್ಯವೆನಿಸಿದ ಉದ್ಯೋಗಿಗಳ ನೇಮಕಾತಿ ಅವರಿಗೆ ನೀಡಿದ ಭೂ/ನಗದು, ದಾನದ ಉಲ್ಲೇಖಗಳಿವೆ. ಪ್ರಸ್ತುತ ಪ್ರಬಂಧ ದೇವಾಲಯಗಳ ನಿರ್ವಹಣೆಗೆಂದು ನೇಮಿಸಿದ ಪುರವರ್ಗದ ಕರ್ತವ್ಯ, ಅಧಿಕಾರ ಇತ್ಯಾದಿ ಅಂಶಗಳನ್ನು ಚರ್ಚಿಸುವ ಉದ್ದೇಶಹೊಂದಿದೆ. ಲಭ್ಯವಿರುವ ಶಾಸನಗಳನ್ನಾಧರಿಸಿ ಪ್ರಸ್ತುತ ಪ್ರಬಂಧ ಸಿದ್ಧಪಡಿಸಲಾಗಿದೆ.

ಅಗ್ರಹಾರಗಳಲ್ಲಿ ಬ್ರಾಹ್ಮಣರು, ದೇವಾಲಯಗಳಲ್ಲಿ ಆಯಾ ಸಮುದಾಯದ ಮುಖ್ಯಸ್ಥರು ಅಲ್ಲಿಯ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು. ಪುರವರ್ಗದಲ್ಲಿ ಬ್ರಾಹ್ಮಣೇತರರು ಅಧಿಕ ಸಂಖ್ಯೆಯಲ್ಲಿರುತ್ತಿದ್ದುದು ಗಮನಾರ್ಹ.

ದೇವರಪುರವರ್ಗ ಪ್ರಸ್ತಾಪಿಸುವ ಶಾಸನಗಳನ್ನು ಈ ರೀತಿ ಉದಾಹರಿಸಬಹುದು. ಕ್ರಿ.ಶ. ೧೧೭೮ರ ಹೊಯ್ಸಳ ವೀರಬಲ್ಲಾಳನ ಶಾಸನ[೧] ಪ್ರಕಾರ, ಶ್ರೀ ಶಂಕರದೇವರ ಪುರವರ್ಗದಲ್ ಮನೆಮಾಡಿದೊಕ್ಕಲಿಪ್ಪತ್ತೆಯ್ದಕ್ಕಂ, ದೇವರ ಶ್ರೀ ಭಂಡಾರದಲು ಮೊದಲ ಗಡನ ಕೊಟ್ಟ ಗದ್ಯಾಣವಯ್ವತ್ತು ಎಂದು ಮೊದಲ ಗದ್ಯಾಣವನ್ನು ದೇವರ ಒಕ್ಕಲುಗಳಿಗೆ ನೀಡಬೇಕೆಂದಿದೆ. ಅಲ್ಲದೆ "ಈಗ ೫೦ನ್ನು ಶ್ರೀ ಶಂಕರದೇವರ ಭಂಡಾರವಲ್ಲದೆ ಮನುಷ್ಯರ ಕಾರಣವಿಲ್ಲ ಈ ಮೊದಲು ಗಡನನಾರಾನುಂ ಕಳದುಕೊಂಡಡಂ ಈ ಪುರವರ್ಗದ ಒಕ್ಕಲುಗಳ್ಗೆ ಯಾರಾನುಂ ಭಾದೆ ಮಾಡಿದವರ ವಂಶ ನಿರ್ವಂಶವಕ್ಕುಂ ತೆರೆ ಸುಂಕ ತಪ್ಪು ತವುಡಿ ದಂಡಾಯವಾವುದಿಲ್ಲ ಶ್ರೀ ಶಂಕರ ನಾರಾಯಣ ದೇವರಂಗಜಾವಂತೆರೆ" ಎಂದು ದೇವರ ಒಕ್ಕಲುಗಳ ಕರ್ತವ್ಯ, ಅವರಿಗೆ ನೀಡಿದ ರಿಯಾಯಿತಿ ಮತ್ತು ಅವರನ್ನು ರಕ್ಷಿಸಲು ಕೈಗೊಂಡ ಕ್ರಮವನ್ನು ಶಾಪಾಶಯದಲ್ಲಿ ಸೂಚಿಸಲಾಗಿದೆ.

ಕ್ರಿ.ಶ. ೧೧೮೧ರ ಹೊಯ್ಸಳ ವೀರಬಲ್ಲಾಳನ ಕೆರೆಸಂತೆ[೨] ಶಾಸನ ಸೀಮಾ ವಿವರ ಸಂದರ್ಭದಲ್ಲಿ 'ಪುರವರ್ಗದ ಮನೆ ಹತ್ತು' ಎಂದು ಹೇಳಿದೆ.

ಕ್ರಿ.ಶ. ೧೨೦೯ರ ಚನ್ನರಾಯಪಟ್ಟಣ ಶಾಸನ[೩] ಪುರವರ್ಗಕ್ಕೆ ಸಂಬಂಧಿಸಿದಂತೆ ಕೇಶವದೇವರ್ಗ್ಗೆ 'ಬೆಸಕೆಯ್ವ ಪರಿವಾರ' ಎಂದು ಉಲ್ಲೇಖಿಸಿದೆ. ಈ ಪರಿವಾರದವರಿಗೆ ಭೂದಾನ ನೀಡಲಾಗಿದೆ. ಅವರಲ್ಲಿ ಪಾರಿಸಪಂಡಿತ, ಸೇನಬೋವ, ಜಾಣ, ಅಕ್ಕಸಾಲೆ ಬಡಗಿ, ಕಮ್ಮಾರ, ಅಸಗ, ಕುಂಬಾರ, ಬಾರಿಕರು ಹಾಗೂ ಇತರರು ದಾನದ ಪ್ರತಿಗ್ರಾಹಿಗಳಾಗಿದ್ದಾರೆ.

ಕ್ರಿ.ಶ. ೧೨೨೧-೨೨ರ ಹಳೇಬೀಡು ಶಾಸನ[೪] ಬಲ್ಲಾಳದೇವ ಮತ್ತು ಅಭಿನವಕೇತಲದೇವಿ ಮಾಡಿಸಿದ ಧರ್ಮಕ್ಕೆ ಸಂಬಂಧಿಸಿದಂತೆ ಶ್ರೀ ಕೇದಾರೇಶ್ವರ ದೇವರ ಅಮ್ರಿತಪಡಿ ಅಂಗಭೋಗರಂಗಭೋಗ ನಿತ್ಯ ನೈಮಿತ್ತಿಕ ಪರ್ಬ್ಬಂಗಳಿಗಂ ಶೂದ್ರ ಪರಿವಾರ ಬ್ರಾಹ್ಮಣರ ಜೀವಿತ ವರ್ಗವೊಳಗಾದ ಶ್ರೀ ಕೇದಾರೇಶ್ವರ ದೇವರ ಸಮಸ್ತ ಶ್ರೀ ಕಾರ್ಯಕೆ ಧಾರಾಪೂರ್ವಕಂ ಮಾಡಿ ಸರ್ಬ್ಬಭಾದಾ ಪರಿಹಾರವಾಗಿ ಕೊಟ್ಟಸ್ಥಳಂಗಳು ಹಾಗೂ ನಗದು ದಾನವನ್ನು ದಾಖಲಿಸುತ್ತದೆ. ಇದರಿಂದ ದೇವಾಲಯದ ನಿರ್ವಹಣೆಗೆಂದು ನೇಮಕಗೊಳ್ಳುತ್ತಿದ್ದ ಉದ್ಯೋಗಿಗಳನ್ನು ಪ್ರಸ್ತುತ ಶಾಸನದಲ್ಲಿ ಶೂದ್ರಪರಿವಾರ ಹಾಗೂ ಬ್ರಾಹ್ಮಣ ಜೀವಿತ ವರ್ಗದವರೆಂದು ಸ್ಪಷ್ಟಪಡಿಸಿದೆ.

ಕ್ರಿ.ಶ. ೧೨೩೭ರ ಬಸರಾಳು ಶಾಸನವು[೫] ತೆನದಂಕಕುಲದ ಹರಿಹರ ದಂಡನಾಥ ತನ್ನ ತಂದೆ ಹೆಸರಲ್ಲಿ ಕಟ್ಟಿಸಿದ ಮಲ್ಲಿಕಾರ್ಜುನ ದೇವರಂಗಭೋಗ ರಂಗಪೂಜ್ಯ ಪಾತ್ರಪಾವುಳ ಚೈತ್ರ ಪವಿತ್ರಾದಿ ಪರ್ವಂಗಳಂ ಖಂಡ ಸ್ಫುಟಿತ ಜೀರ್ಣೋದ್ಧಾರ ಸತ್ರಕ್ಕೆ ವೀರಸೋಮೇಶ್ವರದೇವರಸರ ಕಯ್ಯೆಲು ಪಡೆದ ಬಸರಿವಾಳ ಹಳ್ಳಿ, ಬೇಬಿ ಮತ್ತು ತರಣಿಯ ಸಿದ್ಧಾಯದಿಂದ ನಡೆವ ನಿಯೋಗಿಗಳ ಜೀವಿತ ವರ್ಷಂಪ್ರತಿ ಎಂದು ತಿಳಿಸುತ್ತದೆ. ಅಲ್ಲದೆ ನಿಯೋಗಿಗಳ ಜೀವಿತದಲ್ಲಿ ಪೂಜಾರಿ, ಪರಿಚಾರಕ, ಬಾಣಸಿಗ, ಹೂತೋಟದ

* # ೭೩೩, 'ಇ' ಬ್ಲಾಕ್, ಜೆ.ಪಿ. ನಗರ, ಮೈಸೂರು-೫೭೦೦೦೮.

ತೋಟಿಗರು, ಮಾಲೆಗಾರ, ದವಸಿಗರು, ಅಂಗರಿಕ, ಕುಂಬಾರ, ದೇವರಾರತಿಯ ಸೂಳೆಯರು, ದೇವರ ಭೋಗದ ನಾಗವಾಸದ ಜೀವತ ಹಾಗೂ ದೇವಾಲಯ ಮತ್ತು ಸತ್ರಕ್ಕೆ ನಡವಧ್ಯಕ್ಷನಿಗೆ ಸಲ್ಲುವುದು ಎಂದು ಉಲ್ಲೇಖಿತ ದೇವಾಲಯದ ವಿವಿಧ ನಿಯೋಗಿಗಳು ಹಾಗೂ ಅವರ ಕರ್ತವ್ಯದ ಬಗ್ಗೆ ಸುಳಿವು ನೀಡುತ್ತದೆ.

ಪುರವರ್ಗ ಅಥವಾ ಜೀವಿತವರ್ಗದ ನಿತ್ಯಸೇವೆಯಲ್ಲಿ ಸಂದರ್ಭಾನುಸಾರ ವಿನಾಯಿತಿ ನೀಡಿದ ಸನ್ನಿವೇಶವನ್ನು ಬೇಲೂರು ಶಾಸನ[೬] ದಾಖಲಿಸಿದೆ. ಈ ಶಾಸನ ಪ್ರಕಾರ ಕೇಶವಪುರದೊಳಗಿರುವ ಜೀವಿತವರ್ಗ ಒಂದು ಹಣವಾದಡಂ ಪ್ರಸಾದದೊಳಗೊಪ್ಪಿಂಡವಾದಡಂ ಬೆಣ್ಣೆಯೂರು ಮುಗುಳಿಯೊಳಗೆ ನೂರುಕಂಬವಾದಡವನು ಭವಿಸುವ ಪುರುಷನಾದೊಡಂ ಸ್ತ್ರೀಯಾದೊಡಮವಶ್ಯ ಕಾರ್ಯ್ಯಮುಂಟಾಗಿ ಯೂರಿಂಗೆ ಹೋದ ದಿವಸಮುಂ ವ್ಯಾಧಿಯಾಗಿರ್ದ ದಿವಸಮುಂ ಹೊರಗಾಗಿ ಶ್ರೀ ಕೇಶವ ದೇವರಿಗೆ ನಿತ್ಯಸೇವೆಯಂ ಮಾಡದಿರ್ದಡೆ ತಂಮ ಕುಲದಿಪ್ಪತ್ತೊಂದು ತಲೆಯ ಪಿತೃಗಳಂ ಸ್ವಹಸ್ತದಲು ವಧಿಸಿದ ದೋಶ ಸತ್ಯಂ' ಎಂದು ಜೀವಿತವರ್ಗ ಒಂದು ಹಣವಾಗಲೀ ಒಂದು ನೂರು ಕಂಬವಾಗಲಿ ಅನುಭವಿಸುವ ಪುರುಷ ಸ್ತ್ರೀಯರು ಪರಊರಿಗೆ ಹೋಗುವ ವ್ಯಾಧಿಯುಂಟಾದ ಸಂದರ್ಭ ಹೊರತುಪಡಿಸಿ ಉಳಿದ ದಿನಗಳಲ್ಲಿ ಕೇಶವ ದೇವರ ನಿತ್ಯ ಸೇವೆಗೈಯಬೇಕೆಂದು ಇಲ್ಲದಿದ್ದಲ್ಲಿ ಇಪ್ಪತ್ತೊಂದು ತಲೆಯ ಪಿತೃಗಳನ್ನು ವಧಿಸಿದ ದೋಷಕ್ಕೊಳಗಾಗುವವರು ಎಂದು ಜೀವಿತವರ್ಗಕ್ಕೆ ಎಚ್ಚರಿಸಿ, ನೈತಿಕ ಮೌಲ್ಯವನ್ನು ಎತ್ತಿಹಿಡಿಯಲು ಆದೇಶಿಸಿದಂತಿದೆ.

ಕ್ರಿ.ಶ. ೧೨೭೬ರ ಸೋಮನಾಥಪುರ ಶಾಸನ[೭] ಸೋಮಯದಣ್ಣಾಯಕರು ತಮ್ಮ ಹೆಸರಲ್ಲಿ ಮಾಡಿದ ಮಹಾಅಗ್ರಹಾರದಲ್ಲಿ ಪ್ರತಿಷ್ಠೆ ಮಾಡಿಸಿದ ಶೈವಸ್ಥಳದ ಸೋಮನಾಥದೇವರು ಮುಖ್ಯವಾದ ಎಲ್ಲಾ ದೇವರುಗಳ ಅಂಗಭೋಗರಂಗಭೋಗ ನಿತ್ಯೋತ್ಸವ ನೈಮಿತ್ತಿಕೋತ್ಸವ ಖಂಡಸ್ಫೂರ್ತಿಜೀರ್ಣೋದ್ಧಾರಕ್ಕೆ ಮತ್ತು ಆ ಬಾಹತ್ತರ ನಿಯೋಗಿಗಳ ಜೀವಿತವರ್ಗಕ್ಕೆ ಧಾರಪೂರ್ವಕಮಾಡಿಕೊಟ್ಟ ಸ್ಥಳಗಳ ಆಯಂಗಳನೂಂದಯಕರ ಅಳಿಯಂದಿರಾದ ಮಲ್ಲಿದೇವದಣ್ಣಾಯಕರು ಚಿಕ್ಕಕೇತಯದಣ್ಣಾಯಕರು ವಿಭಾಗಿಸಿ ಆ ದೇವರುಗಳ ಅಮೃತಪಡಿ ಉಪಬ್ರಯಕ್ಕೆಯೂಂ ಆ ನಿಯೋಗಿಗಳ ಜೀವಿತವರ್ಗ್ಗಕ್ಕೆವುಂ ವಿವರಿಸಿ ವಿನಿಯೋಗಿಸಿದ ಕ್ರಮ ಎಂದು ತಿಳಿಸಲಾಗಿದೆ. ಅದರಂತೆ ಈ ಶೈವ ಸ್ಥಳದ ನಿಯೋಗಿಗಳಲ್ಲಿ ಸ್ಥಾನಿಕರು, ಆಚಾರಿ, ನಂಬಿಯರು, ಸಿಂಗಾರರು, ಪರಿಚಾರಕರು ದೇವರ ಅಫಣೆಯವರು, ಬಾಣಸಿಗರು, ಬಾಣಸದ ಅಫಣೆಯವರು, ಇಣ್ಡೆಯವರು, ಸೇನಬೋವ ಭಟ್ಟಗುತ್ತರು, ಭಂಡಾರಿ, ಗಂಧದಕುಡಿ ನೀರವರು, ಸೀಗುರಿ ಚಾಮರದವರು, ರಂಗವಾಲೆ ಕರ್ಪೂರದಾರತಿಯವರು, ಪುರಾಣದವರು, ಮಾಲೆಗಾರರು, ಬಾಹಿಯವರು, ಅಂಘರಿಕರ ಆಳು, ನಾಯಿಕ, ಹೊಳೆಯತಡಿಯ ನಾರಸಿಂಗೇಶ್ವರ ದೇವರ ಅಂಘರಿಕರು, ಆ ನಾಯಕ, ರಂಗಭೋಗದ ನಾಗವಾಸದ ಮೊಖರಿ, ಶ್ರೀ ಬಲಿಯ ದವಸಿಗರು, ಕೊಠಾರಿ, ಅಕ್ಕಸಾಲಿಕೆಯ ಆಚಾರಿತನಕೆ ಮರಿಯಾನೆಯೋಜಂಗೆ, ಬಡಗಿ, ಅಕ್ಕಸಾಲಿಗ, ಕುಂಬಾರರ ಆಳು, ನಾಯಿಂದ ಅಸಗರನ್ನು ಉಲ್ಲೇಖಿಸುತ್ತದೆ.

ಅದೇ ರೀತಿ ಸೋಮನಾಥಪುರದ ಮತ್ತೊಂದು ಶಾಸನ[೮] ವೈಷ್ಣವ ಸ್ಥಳದ ಕೇಶವ ದೇವರ ಕೈಂಕರ್ಯದ ನಿರ್ವಹಣೆಗೆಂದು ನೇಮಕಗೊಂಡಿದ್ದ ಜೀವಿತ ವರ್ಗವನ್ನು ಈ ಕೆಳಗಿನಂತೆ ದಾಖಲಿಸಿದೆ:– ಅದರಂತೆ ವೈಷ್ಣವರು, ಆಚಾರ್ಯರು, ಪುರಾಣವಾಚಕರು, ನಂಬಿಯರು, ದೇವರ ಶೃಂಗಾರದವರು, ಅಪ್ಪಣೆಯವರು, ಹಡಪದವೋಲಗ, ಭಂಡಾರದೋಲಗ, ಶ್ರೀಗಂಧದೋಲಗ, ಸೀಗುರಿಚಾಮರ ದೋಲಗ, ಕುಡಿನೀರವೋಲಗ, ಭಟ್ಟಗುತ್ತರು, ಮುದ್ರೆಯ ವೋಲಗ, ಸೇನಬೋವಕೆ, ಕರ್ಪೂರದಾರತಿಯವರು, ರಂಗವಾಲೆ ಹಿಟ್ಟಿನಾರತಿಯವರು, ಬಾಣಸದ ಅಪ್ಪಣೆ, ಬಾಹಿಯವರು, ಮಾಲೆಗಾರರು, ಆಳು ಮಾಲೆಯವರು ದವಸಿಗರು, ಕೊತ್ತಿಯಂಮೇಗೆ, ನಾಗವಾಸ, ಅಂಗರಕ್ಕನಾಯಕ, ಆಳುಗಳು, ಲಕ್ಷ್ಮಿನರಸಿಂಹದೇವರ ಅಂಗರಕ್ಕನಾಯಕ, ಮಳವಳ್ಳಿಯ ಶಾರಂಗಪಾಣಿ ದೇವರ ಅಂಗರಕ್ಕರು ಆಳು, ಅಕ್ಕಸಾಲೆ, ಕುಂಬಾರರು, ಅಸಗ, ನಾವಿದ ಮೊದಲಾದ ಜೀವಿತವರ್ಗಕ್ಕೆ ದೇವದಾನದ ಆಯ ವಿನಿಯೋಗಿಸುತ್ತಿದ್ದುದು ವೇದ್ಯವಾಗುತ್ತದೆ. ಮೇಲಿನ ಎರಡು ಶಾಸನಗಳು ಸೋಮನಾಥಪುರ ಶೈವಸ್ಥಾನ ವೈಷ್ಣವ ಸ್ಥಾನಕ್ಕೆಂದು ನೇಮಕಗೊಂಡಿದ್ದವರಲ್ಲಿ ಬ್ರಾಹ್ಮಣರು, ಕುಶಲಕರ್ಮಿಗಳು, ಕಲಾವಿದರು, ಅಂಗರಕ್ಷಕರು, ಅಡಿಗೆಯವರು, ನೀರುತರುವರು, ಹೂಕಟ್ಟುವವರು, ಸ್ಥಳೀಯ ಮುಖ್ಯಸ್ಥರು, ಜೀವಿತವರ್ಗ ದೊಳಗಿದ್ದುದ್ದನ್ನು ಗಮನಿಸುತ್ತೇವೆ.

ಮೊದಲಿಗೆ ಭೂ ಹಾಗೂ ನಗದು ದಾನಪಡೆಯುತ್ತಿದ್ದ ಪುರವರ್ಗದವರು ಕ್ರಮೇಣ ತಮ್ಮ ಮುಖ್ಯಸ್ಥರನ್ನು ಹೊಂದಿರುತ್ತಿದ್ದರು. ಈ ದಿಸೆಯಲ್ಲಿ ವಿಜಯನಗರ ಕಾಲ ಗಮನಾರ್ಹ. ಕ್ರಿ.ಶ. ೧೪೨೦ರ ಚಿದರಹಳ್ಳಿ ಶಾಸನ[೯] ಎರಡನೇ ದೇವರಾಯನ ಕಾಲದಲ್ಲಿ ತಳಕಾಡು ನಾಡಿನಲ್ಲಿ ೪೨ ಪುರಗಳಿದ್ದುದನ್ನು ದಾಖಲಿಸಿದೆ. ಪುರಮುಖ್ಯರನ್ನು ಪುರಬೋವರೆಂದು ಉಲ್ಲೇಖಿಸುತ್ತದೆ. ಅಲ್ಲದೆ ತಳಕಾಡನಾಡ ನಾಲ್ವತ್ತೆರಡು

ಪುರಕೆ[ಮು]ಕ್ಷವಾದ ಮಲ್ಲಿನಾಥಪುರದ ಗುಡ್ಡಯಣ್ಣ ವಿಇಚಂಣ ಸಿಂದೆಯಪುರ ಮಾದಯ್ಯ, ಸೋಮಯ್ಯ ರಾಮಗೊಂಡನಪುರದ ದೇವ ಚಿದರವಳ್ಳಿಪುರದ ಸಂಭುದೇವ ಯೀವೋಳಗಾದ ಸಮಸ್ತ ಪುರಬೋವಗಳು ಚಿದುರವಳ್ಳಿಯ ಸೋಮಯ್ಯದೇವರ ಸ್ಥಾನಿಕ ರಾಯಡೆ ಸೋಮಯಡೆ ಕೇತಾಡೆ ಯಿವರ ಮಣ್ಣುಗೊಳ ಯೀ ದೇವರ ಸ್ಥಾನಭೂಮಿ ಒಳಗಾದ ಮನೆ, ತೋಟ, ಕೆರೆ ಮಾನ್ಯವೆಂದು ಕೊಟ್ಟು ಕೊಡ(ಗೆ) ಕಲ್ಲನು ಹು(ಇ)ದು ಕೊಟ್ಟೆವಾಗಿ' ಎಂದು ಪುರದ ಮುಖ್ಯಸ್ಥರಾದ ಪುರಬೋವರು ದೇವರಸ್ಥಾನಿಕರ ತೆರಿಗೆ ಮನ್ನಾ ಮಾಡಿದ್ದನ್ನು ದಾಖಲಿಸುತ್ತದೆ.

ಕ್ರಿ.ಶ. ೧೪೯೨ರ ಗುಂಡ್ಲುಪೇಡೆ ಶಾಸನ[೧೦] ಉಮ್ಮತ್ತೂರಿನ ಶ್ರೀ ವೀರನಂಜರಾಯ ಒಡೆಯನ ಮನೆಯ ಮಹಾಪ್ರಧಾನ ದೇವರಾಯನ ಮಗ ಪರ್ವತಯ್ಯ ತನ್ನ ತಂದೆ ದೇವರಾಯ ಪುರವರ್ಗಕ್ಕೆಂದು ಬಿಟ್ಟಿದ್ದ ಬೊಂಮನ ಹಳ್ಳಿಯ ಸೀಮೆಯಲ್ಲಿ ಹೊಸತಾಗಿ ಕೆರೆ ಕಟ್ಟಿಸಿ ಕೆರೆಯ ಕೆಳಗೆ ಅಡಕೆಮರ ಹಾಕಿಸಿ ೧೨ ಗದ್ಯಾಣಕ್ಕೆ ಪುರಗುತ್ತಗೆಯಾಗಿ ಮಾಡಿಕೊಂಡು ಅನುಭವಿಸುತ್ತಿದ್ದ ಪುರವನ್ನು ಆ ಗುತ್ತಗೆ ೧೨ ಹೊನ್ನನು ತ್ರಿಯಿಂಬಕದೇವರ ಭಂಡಾರಕ್ಕೆ ವರುಷಂಪ್ರತಿ ಸಲ್ಲಿಸಿ, ಹೆಚ್ಚಾಗಿ ಬಂದ ಹೊನ್ನನ್ನು ರಾಜಪುರ ಒಡೆಯರುಗಳ ಆರೋಗಣೆಗೆ ಸಮರ್ಪಿಸಿಕೊಟ್ಟದ್ದನ್ನು ದಾಖಲಿಸುತ್ತದೆ.

ಕ್ರಿ.ಶ ೧೫೧೨ರ ಕಂಬದೂರು ಶಾಸನ[೧೧] ಶ್ರೀ ಕೃಷ್ಣರಾಯ ಮಹಾರಾಯರುಗಳ ಕಾರ್ಯಕ್ಕೆ ಕರ್ತರಾದ ರಾಯಸ್ತ ಕೊಂಡಮರಸಯ್ಯನವರು ಕಂಭದೂರ ಶ್ರೀ ಮಲ್ಲಿಕಾರ್ಜುನ ದೇವರಿಗೆ ಸರ್ವಮಾನ್ಯವಾಗಿ ಬಿಟ್ಟ ಭೂದಾನದಲ್ಲಿ ಪಂಡೇನಹಳ್ಳಿ ಪುರವರ್ಗಕ್ಕೆ ಸಲುವ ಕುಂಟೆ ಕಾಲುವೆ ಸ್ಥಳದ ಗದ್ದೆ ಚತು ಸೀಮೆವೊಳಗಾದ ಹೊಲವು ಸೇರಿದ್ದು ಇದನ್ನು ಕೃಷ್ಣರಾಯ ಮಹಾರಾಯರಿಗೆ ಧರ್ಮವಾಗಬೇಕೆಂದು ದೇವರಿಗೆ ಬಿಟ್ಟದ್ದೆಂದು ಹೇಳಲಾಗಿದೆ.

ಆಂಧ್ರಪ್ರದೇಶದ ಬೆಳಗುಪ್ಪೆ ಶಾಸನ[೧೨] ಶ್ರೀ ವೀರನರಸಿಂಗದೇವ ಮಹಾರಾಯರ ಹಡಪದ ನಾಯಕರು ತಿಂಮಪ್ಪನಾಯಕರು ಬಾಳಮಲ್ಲಿಕಾರ್ಜುನ ದೇವರಿಗೆ ಬೆಳಗುಪ್ಪೆ ಗ್ರಾಮವನ್ನು ಪುರವರ್ಗವಾಗಿ. ಕೊಟ್ಟದ್ದನ್ನು ತಿಳಿಸುತ್ತದೆ. ನರಸಿಂಗರಾಯರಿಗೆ ಶು/ಸುಕೃತವಾಗಬೇಕೆಂದು ದೇವರಿಗೆ ಮಠಪುರವಾಗಿ ಕೊಟ್ಟದೆಂದು ಹೇಳಿದೆ.

ಕ್ರಿ.ಶ. ೧೫೨೧ರ ಗುಂಡ್ಲುಪೇಟೆ ಶಾಸನ[೧೩] ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ತ್ರಿಯಂಬಕಪುರದ ತ್ರಿಯಂಬಕೇಶ್ವರ ದೇವರ ಪುರವರ್ಗಕ್ಕೆ ೧೬ ಗ್ರಾಮಗಳನ್ನು ದತ್ತಿ ಬಿಡಲಾಗಿತ್ತೆಂದು, ಪುರವರ್ಗದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಕ್ರಿ.ಶ. ೧೫೩೦ರ ಗೊಲ್ಲರ ಹೊಸಹಳ್ಳಿ ಶಾಸನ[೧೪] ಅಚ್ಯುತದೇವರಾಯನ ಕಾಲದಲ್ಲಿ ಹರಿಹರದ ಲಿಂಗಣ್ಣ ಒಡೆಯರು ಸಾತಿಗ್ರಾಮವನ್ನಾಳುತ್ತಿದ್ದು ಸಾತಿಗ್ರಾಮ ಸೀಮೆಯೊಳಗಿನ ಕುರುವಂಕಸ್ಥಳದ ದೇವರ ಹಳ್ಳಿ ಗ್ರಾಮವನ್ನು ಶ್ರೀ ಅರ್ಕನಾಥದೇವರ ನಿತ್ಯೋಚ್ಛವ ಅಮೃತಪಡಿ ನಂದಾದೀವಿಗೆ ಅಂಗರಂಗಭೋಗಕ್ಕೆಂದು ಪುರವರ್ಗವಾಗಿ ಕಲ್ಲಹಾಕಿಸಿಕೊಟ್ಟರೆಂದು ದಾಖಲಿಸಿದೆ.

ಕ್ರಿ.ಶ. ೧೫೪೪ರ ಸದಾಶಿವರಾಯನ ನಾಗಮಂಗಲ ಶಾಸನ[೧೫] ಶ್ರೀ ವೀರಪ್ರತಾಪ ಸದಾಶಿವರಾಯನ ಸಾಮಂತ ಚಂನರಾಜತಿಂಮಪನಾಯಕರು ಕದಪನಾಯಕರು ನಮಗೆ ತಂಮ ಸ್ವಾಮಿಯ ನಿರುಪದಲಿ ಅಗ್ರಹಾರ ದೇವದೇವಸ್ಥಾನ ಪುರವರ್ಗದಾನ........ದು ಹೇಳಿ ಪರಿಪಾಳಿಸು....ಯಿಷ್ಟನು ಆತನಿಗೆ ಅನಂತ ಆಯಿಶ್ವರಿಯವಹುದು......... ಎಂದು ಮೂರು ವಿಧದ ದಾನದ ಪ್ರಸ್ತಾಪ ಹಾಗೂ ಅವು ಆತನ ಸೀಮೆಯಲ್ಲಿದ್ದುದು ಅದನ್ನು ಪ್ರತಿಪಾಳಿಸಿದಲ್ಲಿ ಅನಂತ ಐಶ್ವರ್ಯ ವೃದ್ಧಿಸುವುದೆಂದು ಅರ್ಥೈಸಬಹುದು.

ದೇವರಿಗೆಂದು ಬಿಟ್ಟ ಪುರವರ್ಗವು ಹಾಳುಬಿದ್ದದ್ದನ್ನು ಕಂಡು ಜೀರ್ಣೋದ್ಧಾರಗೊಳಿಸಿದ ಸಂಗತಿ ಕ್ರಿ.ಶ. ೧೬೬೦ರ ಕಸವನಹಳ್ಳಿ ಶಾಸನ[೧೬] ಉಲ್ಲೇಖಿಸುತ್ತದೆ. ಈ ಶಾಸನ ಪ್ರಕಾರ ಪುರವರ್ಗಕ್ಕೆ ನೀಡಿದ ಮಾನ್ಯತೆ ಗೊತ್ತಾಗುತ್ತದೆ. ಅದರಂತೆ ಶ್ರೀ ವೀರವೆಂಕಟಪತಿಮಹಾದೇವರಾಯರ ಕುಮಾರ ಬಾಗುಳಿ ಬಸವಪ್ಪನಾಯಕರು 'ಕಸವನಹಳಿಯ ಪುರವರ್ಗನು ಶ್ರೀರೇ......ದೇವರಿಗೆ ಕೊಟ್ಟು ಯಿತ್ತು ಅ.....ದಿಂದಲು ಆ ಪುರವರ್ಗ ಅರಮನೆಗೆ ಬಿದು (ಹೋ)ಗಿ ಯಿರಲಾಗಿ' ಎಂದು ಜೀರ್ಣೋದ್ಧಾರ ಮಾಡಿದ ಗಿರಿ ಮಲ್ಲಪ್ಪನ ಮೊಮ್ಮಗ ಹಾಗೂ ಬಸವಯ್ಯನ ಮಗನಾದ ತಿರುಕಪ್ಪನಿಗೆ ಭೂದಾನ ನೀಡಿದ್ದನ್ನು ಹೇಳುತ್ತದೆ. ಇದರಿಂದ ಕ್ರಮೇಣ ಪುರವರ್ಗದ ಅಗತ್ಯ ಹಾಗೂ ಅವರಿಗೆ ನೀಡುತ್ತಿದ್ದ ಪ್ರತ್ಯೇಕ ದಾನಕ್ಕೆ ಪುಷ್ಟಿ ದೊರೆತಂತಾಗಿದೆ.

ವೆಂಕಟಪತಿದೇವರಾಯನ ಸಿರಗುಪ್ಪ ಶಾಸನ[೧೭] ಆತನ ಸಾಮಂತ ಹಂಡೆ ಹನುಮಿನಾಯಕ ಅಂಕುಸರಾಯ ರಾಜನಿಂದ ಅಮರಮಾಗಣೆಯಾಗಿ ಪಡೆದ ಬಳ್ಳಾರಿ ಸೀಮೆಯ ಮಣವೂರ ಗ್ರಾಮವನ್ನು ತನ್ನ ಮಗ ರಾಮಪ್ಪನಿಗೆ ಕೈಲಾಸ ಪುಣ್ಯ ಲೋಕವಾಗಬೇಕೆಂದು ಆ ಗ್ರಾಮಕ್ಕೆ ಸಲುವ ಚತುಸೀಮೆವಳುಗಾಗಿ ಕಾಡಾರಂಭ ನೀರಾರಂಬ ಸಕಲ ಸುವರ್ನಾದಾಯ ಸಕಲ ಭತ್ತಾದಾಯ ಸುಂಕ ಅನು ಪನ ಕಾಸು ಹಲುವೊಲ ಹರಿಪುರವಳ್ಳಿಗೆ ಸಕಲ ಜೊಪ್ಪ...... ಸಹವಾಗಿ ಧಾರಾಪೂರ್ವಕವಾಗಿ, ಪುರವರ್ಗವಮ್ಮಾಡಿ ಕರಿಯವೀರಣ್ಣೊಡೆಯನ ಶಿಷ್ಯ ಚನ್ನಮಲ್ಲಿಕಾರ್ಜುನ ದೇವನ

ಶಿಷ್ಯ ಕೇದಾರ ದೇವನಿಗೆ ಪುತ್ರ ಪವುತ್ರ ಪಾರಂಪರೆಯಾಗಿ ಅನುಭವಿಸಿಕೊಂಡಹುದುಯೆಂದು ಬರೆಸಿಕೊಟ್ಟ ದಾನ 'ಪಟ್ಟೆ' ಎಂದು ಸಮುದಾಯದ ಮುಖ್ಯಸ್ಥನಿಗೆ ದಾನ ನೀಡಿದ ವಿವರವನ್ನೊಳಗೊಂಡಿದೆ. ಇದರಲ್ಲೂ ಪುರವರ್ಗಕ್ಕೆ ಆದ್ಯತೆ ನೀಡಲಾಗಿದೆ.

೧೭ನೇ ಶತಮಾನದ ಶಾಸನ[೧೮]ದಲ್ಲಿ "ಯಿ ಪುರವರ್ಗವ ಅಳಿಪಿ ತೆಗೆದವ ದೇವಲೋಕ ಮರ್ತ್ಯಲೋಕಕ್ಕೆ ಹೊರಗು ಬ್ರಾಹ್ಮಣರ ಕೊಂದ ಪಾಪಕ್ಕೆ ಹೋಗಲಿ" ಎಂದು ಶಾಪಾಶಯ ಮಾತ್ರ ದಾಖಲಿಸಲ್ಪಟ್ಟಿದೆ ಅಂದರೆ ಈ ವೇಳೆಗಾಗಲೇ ಬ್ರಾಹ್ಮಣೇತರ ವರ್ಗದ ಸ್ಥಾನಮಾನ ಗುರುತಿಸಲ್ಪಟ್ಟಿದ್ದು ಸಮಾಜದಲ್ಲಿ ಮನ್ನಣೆಗೆ ಪಾತ್ರರಾಗಿದ್ದರೆಂಬುದು ಗೋಚರಿಸುತ್ತದೆ.

೧೯ನೇ ಶತಮಾನದ ಹೊಸಪೇಟೆ ಶಾಸನಗಳು[೧೯] ತ್ರಿಶಂಕುರಾಯನು ಜಂಬುಲಿಂಗದೇವರ ಪ್ರತಿಷ್ಟೆ ಮಾಡಿ ಮಠದ ಗುಡಿಯ ಕಟ್ಟಿದನೆಂದೂ, ದೇವರ ಹೆಸರಲ್ಲಿ (ಮಾಡಿ) ನಿಲಿಸಿ ಕೈದಾರಿಯ ಬಂಡೆ ಭದ್ರಶೆಟ್ಟಿಗೆ ಪೂಜಾರಿತನ ನೀಡಿ, ಜಂಬುನಾಥನ ಹಳ್ಳಿಯ ಪುರವರ್ಗವ ಹಾಕಿ ಕೊಟ್ಟುದ್ದನ್ನು ಹೇಳುತ್ತದೆ. ಅಲ್ಲದೆ ಚೋಳರಾಯರು ಪೂಜಾರಿ ಬದರಿಸೆಟ್ಟಿಗೆ ಬರೆಸಿಕೊಟ್ಟ ಪತ್ರದಲ್ಲಿ ಹೊಸಪೇಟೆಯಲ್ಲಿ ಕೋಟೆ ಕಟ್ಟಿಸಿ, ಜೋಳದ ರಾಸಿಯ ಗುಡ್ಡದ ಬಳಿಯ ಕೆರೆಗಳನ್ನು ಕಟ್ಟಿಸಿ ಪೂಜಾರಿಗಳಿಗೆ ದತ್ತಿ ಬಿಟ್ಟಿದ್ದನ್ನು ದಾಖಲಿಸಿದೆ. ಅದರಲ್ಲಿ ಹಿರಯರಾಯರು ಮಾಡಿಕೊಟ್ಟ ಪುರವರ್ಗ ಜಂಬುನಾಥ ಹಳ್ಳಿಯನ್ನು ತರುವಾಯ ನಾವು ಕೊಟ್ಟ ಸ್ವಾಸ್ತಿಯನ್ನು ವುಂಡುಕೊಂಡು ಸುಖದಲ್ಲಿ ಯೀಶ್ವರನ ಪೂಜೆ ಮಾಡಿ ಕೊಂಡು ಇರಿ ಎಂದು ಸೂಚಿಸಲಾಗಿದೆ. ಇದರಿಂದ ಕ್ರಮೇಣ ಆಯಾ ಸಮುದಾಯದ ಮುಖ್ಯಸ್ಥರಿಗೆ ಪೂಜಾ ಕೈಂಕರ್ಯಗಳಿಗೆ ನೆರವಾಗುವಂತೆ ಪುರವರ್ಗ ರಚಿಸಿಕೊಡುವ ಪರಿಪಾಠ ಮುಂದುವರಿಸಿದ್ದನ್ನು ಅಂದಾಜು ಮಾಡಬಹುದು.

ಇದುವರೆಗಿನ ಶಾಸನಗಳ ಸಮೀಕ್ಷೆ ಮೊದಲಿಗೆ ಅಗ್ರಹಾರ ಬ್ರಹ್ಮದೇಯ ದೇವದಾಯ ಭೂವ್ಯಾಪ್ತಿಯಲ್ಲಿ ಸೇರ್ಪಡೆಗೊಂಡಿದ್ದ ಪುರವರ್ಗ ಕಾಲಾಂತರದಲ್ಲಿ ಪ್ರತ್ಯೇಕ ಅಸ್ತಿತ್ವ ಪಡೆದು ಸಮಾಜದ ಅವಿಭಾಜ್ಯ ಅಂಗವಾಗಿ ಗುರುತಿಸಲ್ಪಟ್ಟಿತ್ತು. ಹಾಗಾಗಿ ಪುರವರ್ಗಕ್ಕೆಂದು ವಿಶೇಷ ದಾನದತ್ತಿಗಳ ಪ್ರಸ್ತಾಪ ಶಾಪಾಶಯಗಳ ಉಲ್ಲೇಖ ಮೂಡಿಬಂದಿದೆ.



## ಆಧಾರಸೂಚಿ


೧. ಎ.ಕ. ೯, ಬೇ. ೧೫೪.
೨. ಎ.ಕ. ೧೨, ಕಡೂರು, ೬೬.
೩. ಎ.ಕ. ೧೦, ಚನ್ನರಾಯಪಟ್ಟಣ, ೯೪.
೪. ಎ.ಕ. ೯, ಬೇ, ೩೦೯.
೫. ಎ.ಕ. ೭, ಮಂಡ್ಯ, ೩೦.
೬. ಎ.ಕ. ೯, ಬೇ, ೧೧೭.
೭. ಎ.ಕ. ೫, ಟಿ. ನರಸೀರಪುರ ೯೬.
೮. ಎ.ಕ. ೫, ಟಿ. ನರಸೀರಪುರ ೮೮.
೯. ಎ.ಕ. ೫, ಟಿ. ನರಸೀರಪುರ, ೯೯.
೧೦. ಎ.ಕ. ೩, ಗುಂಡ್ಲುಪೇಟೆ, ೧೩೫.
೧೧. ಆಂಧ್ರ ಪ್ರದೇಶದ ಕನ್ನಡ ಶಾಸನಗಳು, ಭಾಗ ೧, ಶಾಸನ ಸಂಖ್ಯೆ, ೧೭೩.
೧೨. ಅದೇ., ಬೆಳಗುಪ್ಪ ಶಾಸನ ಸಂಖ್ಯೆ, ೧೮೦.
೧೩. ಎ.ಕ. ೩, ಗುಂಡ್ಲುಪೇಟೆ, ೧೫೦.
೧೪. ಎ.ಕ. ೧೦, ಚನ್ನರಾಯಪಟ್ಟಣ, ೪೫.
೧೫. ಎ.ಕ. ೭, ನಾಗಮಂಗಲ, ೬.
೧೬. ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ, ೨೧೨.
೧೭. ಅದೇ ಸಂಪುಟ ೧, ಸಿರಗುಪ್ಪ, ೬೩.
೧೮. ಅದೇ ಸಂಪುಟ ೧, ಸಿರಗುಪ್ಪ, ೬೪.
೧೯. ಅದೇ ಸಂಪುಟ ೧, ಹೊಸಪೇಟೆ, ೧೦ ಮತ್ತು ೧೧.



# ಕಾವೇರಿ ನದಿಗೆ ಕಟ್ಟಿದ ಶಾಸನೋಕ್ತ ಅಣೆಕಟ್ಟುಗಳು

**ಡಾ. ಕೋ.ವೆಂ. ರಾಮಕೃಷ್ಣೇಗೌಡ***

**ಬೇಟೆ** ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ವರ್ಗವಾದ ಆದಿ ಮಾನವನ ವರ್ತನೆಯು ನಾಗರಿಕತೆಗೆ ನಾಂದಿ ಹಾಡಿತು. ನದಿ ಪರಿಸರವು ಮಾನವನ ವಸತಿಗೆ ಯೋಗ್ಯವೆಂದು ಅರಿತ ಪ್ರಾಚೀನ ಮಾನವನು ತನ್ನ ನಾಗರಿಕತೆಯ ಆವಿಷ್ಕಾರಕ್ಕೆ ನದಿಗಳನ್ನು ಆಶ್ರಯಿಸಿದನು. ಜಗತ್ತಿನ ಅತ್ಯಂತ ಪ್ರಾಚೀನ ನದಿಗಳಲ್ಲಿ ಕಾವೇರಿ ನದಿಗೂ ಮಹತ್ವದ ಸ್ಥಾನವಿದೆ. ಭಾರತದ ನದಿಗಳಲ್ಲಿ ಕಾವೇರಿ ನದಿಯೂ ಪೂಜನೀಯ ಸ್ಥಾನ ಪಡೆದಿರುವುದನ್ನು ಪುರಾಣಗಳು ಉಲ್ಲೇಖಿಸಿವೆ.

ದಕ್ಷಿಣ ಗಂಗೆಯೆನಿಸಿರುವ ಕಾವೇರಿ ನದಿಯು ಪ್ರಾಚೀನ ಕಾಲದಿಂದಲೂ ಕೃಷಿಗೆ ಅಗತ್ಯವಾದ ನೀರುಣಿಸುವ ಮೂಲಕ ನಾಗರಿಕತೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಕರ್ನಾಟಕದ ಕಾವೇರಿ ಪರಿಸರದಲ್ಲಿ ಪುರಾತತ್ವ ತಜ್ಞರಾದ ರಾಬರ್ಟ್ ಬ್ರೂಸ್‌ಫೂಟ್ ಮತ್ತು ಡಾ. ಎಂ. ಶೇಷಾದ್ರಿ ವಿಶದವಾಗಿ ಅಧ್ಯಯನ ನಡೆಸಿ ಪ್ರಾಚೀನ ಶಿಲಾಯುಗದ ಅವಶೇಷಗಳನ್ನು ಪತ್ತೆ ಹಚ್ಚಿದ್ದಾರೆ. ಕಾವೇರಿ ನದಿದಂಡೆಯಲ್ಲಿರುವ ಮಂಡ್ಯ ಜಿಲ್ಲೆಯ ಹಂಗರಹಳ್ಳಿಯಲ್ಲಿ ಪ್ರಾಚೀನ ಶಿಲಾಯುಗದ ಉಪಕರಣಗಳನ್ನು ವಿದ್ವಾಂಸರಾದ ಶ್ರೀಪಾದರಾವ್ ಶೋಧಿಸಿದ್ದಾರೆ. ಸಮುದ್ರಮಟ್ಟದಿಂದ ೪೪೪೭ ಅಡಿ ಎತ್ತರದಲ್ಲಿರುವ (೧೩೪೧ ಮೀಟರ್) ಕೊಡಗಿನ ಬ್ರಹ್ಮಗಿರಿಯ ತಲಕಾವೇರಿಯಲ್ಲಿ ಹುಟ್ಟಿ ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳಲ್ಲಿ ೮೦೨ ಕಿಲೋಮೀಟರ್ ದೂರ ಕ್ರಮಿಸುವ ಕಾವೇರಿ ನದಿಯು ವರ್ಷದ ಎಲ್ಲಾ ಋತುಗಳಲ್ಲೂ ನೀರು ತುಂಬಿಕೊಂಡು ಹರಿದು ಜೀವನದಿ ಎನಿಸಿಕೊಂಡಿದೆ. ಕರ್ನಾಟಕದಲ್ಲಿ ೩೮೧ ಕಿ.ಮೀ. ಹಾಗೂ ತಮಿಳುನಾಡಿನಲ್ಲಿ ೪೨೧ ಕಿ.ಮೀ. ದೂರ ಹರಿದು ಬಂಗಾಳಕೊಲ್ಲಿಯಲ್ಲಿ ಲೀನವಾಗುತ್ತದೆ.

ಕನ್ನಡ ಮತ್ತು ತಮಿಳು ದೊರೆಗಳು ಕಾವೇರಿ ನದಿಪಾತ್ರದಲ್ಲಿ ರಾಜಧಾನಿಗಳನ್ನು ನಿರ್ಮಿಸಿಕೊಂಡು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಹೆಣಗಾಡಿರುವುದು ಇತಿಹಾಸ ಪುಟಗಳಲ್ಲಿ ಕಾಣಸಿಗುತ್ತದೆ. ಮಳೆಗಾಲದಲ್ಲಿ ಉತ್ಪಾದನೆಯಾಗುವ ನೀರನ್ನು ಸಂಗ್ರಹಿಸುವ ಉದ್ದೇಶದಿಂದ ಕೆರೆ, ಒಡ್ಡು, ಕುಂಟೆಗಳನ್ನು ನಿರ್ಮಿಸಿ, ಆ ನೀರನ್ನು ಕೃಷಿಗೆ, ದನಕರುಗಳಿಗೆ ಕುಡಿಸಲು, ಜನರಿಗೆ ಅನುಕೂಲವಾಗುವಂತೆ ಮಾಡುವ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಹೀಗೆ ಕೆರೆಗಳ ನಿರ್ಮಾಣ ಮಾಡುವುದು ಧರ್ಮಕ್ಕಾಗಿ ಎಂದು ತಿಳಿಯಲಾಗುತ್ತಿತ್ತು. ಸಮಾಜಸೇವಾ ಕಾರ್ಯದ ರೂಪದಲ್ಲಿ ಕೆರೆಗಳನ್ನು ಕಟ್ಟಿಸುತ್ತಿದ್ದುದಕ್ಕೆ ದಾಖಲೆಗಳು ಕರ್ನಾಟಕದಲ್ಲಿ ದೊರೆತಿರುವ ಶಾಸನಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಹರಿಯುವ ನದಿಗೆ ಅಣೆಕಟ್ಟುಗಳನ್ನು ನಿರ್ಮಾಣ ಮಾಡುವುದರಿಂದ ಕೃಷಿಗೆ ನೀರೊದಗುತ್ತದೆ. ಆ ನೀರನ್ನು ಬಳಸಿಕೊಂಡು ರೈತರು ವರ್ಷದ ಎಲ್ಲಾ ಋತುಗಳಲ್ಲೂ ಕೃಷಿ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಅವರ ಜೀವನಮಟ್ಟ ಸುಧಾರಿಸುತ್ತದೆ. ರಾಜ ನೀರಾವರಿಯಲ್ಲಿ ಬೆಳೆತೆಗೆದ ರೈತರಿಗೆ ತೆರಿಗೆ ವಿಧಿಸುವುದರಿಂದ ರಾಜನ ಬೊಕ್ಕಸಕ್ಕೆ ತೆರಿಗೆ ಹಣ ಅಧಿಕ ಪ್ರಮಾಣದಲ್ಲಿ ದೊರೆಯುವಂತಾಗುತ್ತದೆ. ಇದು ರಾಜಾದಾಯದ ಮೂಲವಾಗುವುದೆಂದು ತಿಳಿದ ಮೇಲೆ ನದಿಗಳಿಗೆ ಅಣೆಕಟ್ಟುಗಳನ್ನು ನಿರ್ಮಿಸುವ ಕಾರ್ಯವು ಅಧಿಕವಾಗಿ ನಡೆದಿರುವುದನ್ನು ಶಾಸನಗಳ ಆಧಾರದಿಂದ ಗುರುತಿಸಬಹುದಾಗಿದೆ.

ಕರ್ನಾಟಕದಲ್ಲಿ ಹರಿಯುವ ಕಾವೇರಿ ನದಿ ನೀರನ್ನು ಕೃಷಿಗೆ ಬಳಕೆ ಮಾಡಿಕೊಳ್ಳುವ ಪ್ರವೃತ್ತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಈ ಕುರಿತು ಶಾಸನಗಳಲ್ಲಿ ಉಲ್ಲೇಖಗಳಿವೆ. ಹೊಯ್ಸಳ ದೊರೆಗಳಾದ ವೀರಬಲ್ಲಾಳ, ವೀರನರಸಿಂಹ, ವಿಜಯನಗರ ಅರಸರಾದ ವಿರೂಪಾಕ್ಷ, ಅಚ್ಚುತರಾಯ, ಮೈಸೂರು ಸಂಸ್ಥಾನವನ್ನಾಳಿದ ಟಿಪ್ಪುಸುಲ್ತಾನ್, ಮುಮ್ಮಡಿ ಕೃಷ್ಣರಾಜವೊಡೆಯರ ಕಾಲಕ್ಕೆ ಸೇರಿದ ಶಾಸನಗಳಲ್ಲಿ ಕಾವೇರಿ ನದಿಗೆ ಅಣೆಕಟ್ಟೆ, ಕಾಲುವೆ ನಿರ್ಮಾಣ ಮಾಡಿರುವ ಉಲ್ಲೇಖಗಳಿವೆ. ಈ ಶಾಸನಗಳು ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ತೊಣ್ಣೂರು, ಕನ್ನಂಬಾಡಿ, ಶ್ರೀರಂಗಪಟ್ಟಣ ತಾಲೂಕಿನ ಕಾರೇಪುರ, ಮಿರ್ಲೆ, ಮೈಸೂರು ಜಿಲ್ಲೆ ತಿರುಮಕೂಡಲು ನರಸೀಪುರ ತಾಲ್ಲೂಕಿನ ತಲಕಾಡು, ಬನ್ನೂರು, ಕೃಷ್ಣರಾಜನಗರ ತಾಲೂಕಿನ ಹಂಪಾಪುರ,

* ಕನ್ನಡ ಪ್ರಾಧ್ಯಾಪಕ, # ೧ ಮತ್ತು ೨, ೨ನೇ ಮಹಡಿ, ೧ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಶ್ರೀನಿಧಿ ಬಡಾವಣೆ, ಕೋಣನಕುಂಟೆ, ಬೆಂ-೬೨.

ಮೈಸೂರು ತಾಲೂಕಿನ ಆನಂದೂರು, ಮೈಸೂರು ಸ್ಥಳದಲ್ಲಿ ದೊರೆತಿವೆ.

ಮೇಲೆ ಉಲ್ಲೇಖಿಸಿರುವ ಶಾಸನಗಳನ್ನು ಅವಲೋಕಿಸಿದರೆ, ಪ್ರಾಚೀನ ಕರ್ನಾಟಕದಲ್ಲಿ ಚರಿತ್ರೆಯ ಉದ್ದಕ್ಕೂ ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಿ, ಕಾಲುವೆಗಳ ಮೂಲಕ ಆ ನೀರನ್ನು ವ್ಯವಸಾಯಕ್ಕೆ ಬಳಕೆ ಮಾಡಿಕೊಳ್ಳುತ್ತಿದ್ದ ಅಂಶವು ತಿಳಿದುಬರುತ್ತದೆ. ತಿರುಮಕೂಡಲು ನರಸೀಪುರ ತಾಲೂಕು ತಲಕಾಡಿನ ಮಾಧವಮಂತ್ರಿ ಅಣೆಕಟ್ಟಿನ ತೂಬಿನ ಹತ್ತಿರ ಕಾಲುವೆಯ ಹೊರಮೈಗೆ ಜೋಡಿಸಿರುವ ಕಲ್ಲಿನಲ್ಲಿರುವ ಹೊಯ್ಸಳ ವೀರಬಲ್ಲಾಳನ ಉಲ್ಲೇಖವಿರುವ ತ್ರುಟಿತ ಶಾಸನವು[೧] ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸಿರುವ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೩-೧೪ನೇ ಶತಮಾನದ ಕಾಲಕ್ಕೆ ಈ ಶಾಸನ ಸೇರಿದ್ದಾಗಿದ್ದು ತಲಕಾಡಿನಲ್ಲಿ ಹೊಯ್ಸಳ ವೀರಬಲ್ಲಾಳ ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸಿರುವ ಸಾಧ್ಯತೆಯನ್ನು ತಿಳಿಸುವಂತಿದೆ. ಇದೇ ಕಾಲಕ್ಕೆ ಸೇರಿದ ಶಾಸನವೊಂದು ಶ್ರೀರಂಗಪಟ್ಟಣ ತಾಲೂಕಿನ ಕಾರೇಪುರ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಹುಟ್ಟು ಬಂಡೆಯ ಮೇಲಿದ್ದು ಮಹಾಪ್ರಧಾನ ಕುಮಾರ ಹೆಗ್ಗಡೆದೇವ ದಂಡನಾಯಕನ ಬಲುಮನುಷ್ಯನಾದ ಬಿಲ್ಲಂಗೆರೆಯ ರಾಮಯ್ಯ ಕಾವೇರಿ ನದಿಗೆ ಕಟ್ಟೆಯನ್ನು ಕಟ್ಟಿ, ಬಳ್ಳಿಗೊಳಕ್ಕೆ (ಬೆಳಗೊಳ) ನೀರು ಹರಿಯುವಂತೆ ಮಾಡಿದ ವಿಷಯವನ್ನು ತಿಳಿಸುತ್ತದೆ.[೨]

ಮೈಸೂರು ಜಿಲ್ಲೆ ಕೃಷ್ಣರಾಜನಗರ ತಾಲ್ಲೂಕು ಹಂಪಾಪರ ಗ್ರಾಮದ ಮನೆಯೊಂದರ ಬಾವಿಯ ಬಳಿ ದೊರೆತ ಕಲ್ಲಿನಲ್ಲಿದ್ದ ತ್ರುಟಿತ ಶಾಸನದಲ್ಲಿ[೩] ಕಾವೇರಿದೇವಿ ಹಾಗೂ ಹೊಳೆಯ ಕಾಲುವೆಯ ಉಲ್ಲೇಖಗಳು ದೊರೆಯುತ್ತವೆ. ಪಂಡರಿದೇವನ ಮಕ್ಕಳಾದ ತಿಬ್ಬನಾಥನಗೆ ಲಖಮ, ಲಖಂಣ, ಗಂಗಂಣ, ಮಧುವಂಣ ಸೇನಬೋವ, ನಾರಾಯಂಣ ಅವರನ್ನೊಳಗೊಂಡ ಮಹಾಜನಗಳು ಭೂಮಿಯನ್ನು ಕ್ರಯ ಮಾಡಿಕೊಟ್ಟಿರುವ ಸಂಗತಿಯನ್ನು ಶಾಸನ ಉಲ್ಲೇಖಿಸಿದೆ. ಆ ಜಮೀನಿನ ಚಕ್ಕುಬಂದಿಯನ್ನು ತಿಳಿಸುವಾಗ, 'ಹೊಳೆಯ ಕಾಲುವೆಯಿಂದ ಪಡುವಲು ಲಕ್ಷ್ಮಿಸಗರ, ಹೊಳೆಯ ಕಾಲ್ವೆಯಿಂ ಬಡಗಲು ಕಾವೇರಿ ದೇವಿಯಂ ಮೂಡಲು ಬಡಗಣಹ ಕ್ರಯ ಕಾಲುವೆಯ ತೆಂಕಣಂ ಕಿಲಿಯಿಂಮೆಯ ಊಳಗುಳ..' ಎಂಬ ಉಲ್ಲೇಖವನ್ನು ನೋಡಬಹುದಾಗಿದೆ. ಈ ಶಾಸನದಲ್ಲಿ ಉಕ್ತವಾಗಿರುವ ದಾಖಲೆಯನ್ನು ಗಮನಿಸಿದರೆ ಕೃಷ್ಣರಾಜನಗರ ತಾಲ್ಲೂಕಿನ ಹಂಪಾಪುರದ ಬಳಿ ವಿಜಯನಗರ ಅರಸರ ಕಾಲದಲ್ಲಿ ಕಾವೇರಿ ನದಿಗೆ ಅಣೆಕಟ್ಟೆಯನ್ನು ನಿರ್ಮಿಸಿ, ಕಾಲುವೆಯ ಮೂಲಕ ನೀರು ಹರಿಸುವ ವ್ಯವಸ್ಥೆಯು ಜಾರಿಗೆ ಬಂದಿತೆನ್ನಬಹುದು. ಕಾವೇರಿ ನದಿಯನ್ನು ದೇವಿಯೆಂದು ಕರೆದಿರುವುದನ್ನು ಗಮನಿಸಿದರೆ ಕಾವೇರಿ ಕೇವಲ ನೀರಾಗಿ ಜನರಿಗೆ ಉಪಕಾರವನ್ನು ಮಾಡುತ್ತಿರಲಿಲ್ಲ, ಬದಲಾಗಿ ದೇವಿಯಾಗಿ ಜನರನ್ನು ಕಾಪಾಡುತ್ತಿದ್ದಳೆನ್ನಬಹುದು. ಸಾಮಾನ್ಯರ ದೃಷ್ಟಿಯಲ್ಲಿ ಕಾವೇರಿ ನದಿಯು ಪಡೆದಿದ್ದ ಗೌರವಕ್ಕೆ ಶಾಸನದ ಉಲ್ಲೇಖವು ಪುಷ್ಟಿ ನೀಡುತ್ತದೆ.

ವಿಜಯನಗರ ಅರಸು ವಿರೂಪಾಕ್ಷನ ಕಾಲಕ್ಕೆ ಸೇರಿದ ಶಾಸನವೊಂದು[೪] ಮಂಡ್ಯ ಜಿಲ್ಲೆ ಪಾಂಡುಪುರ ತಾಲ್ಲೂಕಿನ ಸೀತಾಪುರ ಗ್ರಾಮದ ಆಗ್ನೇಯದ ಹೊಲವೊಂದರಲ್ಲಿ ದೊರೆತ ಕಲ್ಲಿನಲ್ಲಿದೆ. ಈ ಶಾಸನವು ಕುತೂಹಲಕರ ಸಂಗತಿಯನ್ನು ತಿಳಿಸುತ್ತದೆ. ಶಾಸನದಲ್ಲಿ ಎರಡು ಇಸವಿಗಳಿದ್ದು ಮೊದಲನೆಯದು ಆಗಸ್ಟ್ ೨೭, ೧೪೬೭ಕ್ಕೆ ಸೇರುತ್ತಿದೆ. ಎರಡನೆಯ ದಿನಾಂಕವು ಕ್ರಿ.ಶ. ೧೪೫೫ ಆಗಸ್ಟ್ ೧೪ಕ್ಕೆ ಸೇರುತ್ತದೆ. "ನಾಉ ಕಾವೇರಿಯಲು ಹೊಸ್ತಾಗಿ ವೊಂದು ಕಟ್ಟೆಯನೂ ಕಟ್ಟಿ ಕಾಲುವೆನೂ ತಂದೆವಾಗಿ ಹರಹಿನ ಮಹಾಜನಂಗಳು ತಂಮ ಹರಹಿನ ಗ್ರಮ ಸೀಮೆಯಲೂ ಕಾಲುವೆಯನೂ ತಹದಕ್ಕೆ ನಂಮನು ಮೊಡಂಬಡಿಸ್ತ ತಂಮ ಗ್ರಾಮಸೀಮೆಗೆ ವೊಂದು ಭಾಗ ನಾವು ಮಾಡುವ ದೇವದಾಯ ಬ್ರಹ್ಮದಾಯಕೂ ನಮಗೆ ಯಜಮಾನ ಭಾಗ ಸಹ ಮೂರು ಭಾಗವಾಗಿ ಸಾಧನವರು ಕೊಟು ಕೊಂಡು ಹರಹಿನ ಹೆಬಾರುವ ಶ್ರೀರಂಗನಾಥಗಳ ಮಕ್ಕಳು ಹೆದುವಂಣಗಳು.."

ನಾಗಮಂಗಲದ ಪಾಳೇಗಾರ ಸಿಂಗಣ್ಣವೊಡೆಯನ ಮಗ ದೇವರಾಜನು ಕಾವೇರಿ ನದಿಗೆ ಅಣೆಕಟ್ಟೆಯನ್ನು ಕಟ್ಟಿ ಕಾಲುವೆಯನ್ನು ತೋಡಿಸಿ, ಹರಹು, ಸೀತಾಪುರ, ಚಿಕ್ಕಮಳಲಿ, ಹೊಸಹಳ್ಳಿ, ಕೆಂದನಹಾಳು ಮೊದಲಾದ ಗ್ರಾಮಗಳಿಗೆ ಕಾಲುವೆಯ ಮೂಲಕ ನೀರು ಹರಿಸಿದನು. ಈ ಕಾರ್ಯಕ್ಕಾಗಿ ಹರಹಿನ ಹೆಬಾರುವ ಶ್ರೀರಂಗನಾಥನ ಮಗ ಯೆದುವಂಣನು ದೇವರಾಜನಿಗೆ ಹೊಸಹಳ್ಳಿ ಗ್ರಾಮವನ್ನು ಯಜಮಾನ ಭಾಗವಾಗಿ ದತ್ತಿ ಕೊಟ್ಟನು. ಜೊತೆಗೆ ಅದೇ ಯೆದುವಂಣನು ಚಿಕ್ಕಮಳಲಿ, ಹೊಸಹೋಳಿ, ಕೆಂದನಹಾಳು ಗ್ರಾಮಗಳಿಗೆ ಸೇರಿದ ಅರ್ಧ ಭಾಗ ಭೂಮಿಯನ್ನು ದೇವರಾಜನಿಗೆ ೪೦೦ ಹೊನ್ನುಗಳಿಗೆ ಮಾರಿದ ವಿಷಯವನ್ನೂ ಶಾಸನ ದಾಖಲಿಸಿದೆ. ದೇವರಾಜನು ಭೂಮಿಯನ್ನು ತಾನು ಖರೀದಿಸಿದ ಬಳಿಕ ಹೊಸಹಳ್ಳಿ ಗ್ರಾಮದ ಭೂಮಿಯನ್ನು ೨೦೮ ವೃತ್ತಿಗಳಾಗಿ ವಿಂಗಡಣೆ ಮಾಡಿ ೭೨ ಬ್ರಾಹ್ಮಣರಿಗೆ ಹಾಗೂ ರಾಮಚಂದ್ರ ದೇವರಿಗೆ ತನ್ನ ತಾಯಿ ಸೀತಾಯಮ್ಮ ಅವರ ಧರ್ಮಾರ್ಥವಾಗಿ ಬಿಟ್ಟ ವಿಷಯ ವಿವರವಾಗಿ ಬಂದಿದೆ. ದಾನ ಕೊಟ್ಟ ಭೂಮಿಯ ಎಲ್ಲೆಗಳನ್ನು ಹೇಳುವಾಗ ಹೊಸ ಕಾಲುವೆ ಮತ್ತು ಹಳೆಯ ಕಾಲುವೆಯ ಪ್ರಸ್ತಾಪಗಳಿವೆ. ಈ ಅಂಶವನ್ನು

ಗಮನಿಸಿದರೆ, ದೇವರಾಜನು ಕಾವೇರಿ ನದಿಗೆ ಕಟ್ಟಿಸಿದ ಕಟ್ಟೆಗೂ ಮೊದಲು ಆ ಸ್ಥಳದಲ್ಲಿ ಅಣೆಕಟ್ಟೆಯೊಂದು ನಿರ್ಮಾಣ ವಾಗಿತ್ತು ಎಂಬುದು ಅರಿವಿಗೆ ಬರುತ್ತದೆ. ಕಾರಣಾಂತರ ಗಳಿಂದ ಹಳೆಯ ಅಣೆಕಟ್ಟೆ ಶಿಥಿಲಗೊಂಡಿದ್ದಿರಬಹುದು. ಅದೇ ಸ್ಥಳದಲ್ಲಿ ದೇವರಾಜನು ಕಾವೇರಿ ನದಿಗೆ ಕಟ್ಟೆಯನ್ನು ಹೊಸದಾಗಿ ಕಟ್ಟಿಸಿದನೆಂದು ತಿಳಿಯಬಹುದಾಗಿದೆ. ಕಾಲುವೆಯ ನೀರು ಬಳಸಿ ವ್ಯವಸಾಯ ಮಾಡುವ ಸಲುವಾಗಿ ೭೨ ಮಂದಿ ಬ್ರಾಹ್ಮಣರಿಗೆ ಭೂಮಿ ದಾನ ಮಾಡಿರುವುದನ್ನು ಗಮನಿಸಿದರೆ ಬ್ರಾಹ್ಮಣರ ಬದುಕು ಸುಖಮಯವಾಗಿರ ಬೇಕೆಂಬ ಉದ್ದೇಶ ಇರುವಂತಿದೆ. ಬ್ರಾಹ್ಮಣರಿಗೆ ಭೂಮಿ ದಾನ ಮಾಡುವುದರಿಂದ ತಮಗೆ ಸದ್ಗತಿ ದೊರೆಯುವುದೆಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಸಾಮಾಜಿಕ ಮೌಲ್ಯವಾಗಿ ದ್ದುದನ್ನು ಗಮನಿಸಬಹುದು.

ಕೃಷ್ಣರಾಜನಗರ ತಾಲ್ಲೂಕು ಮಿರ್ಲೆ ಗ್ರಾಮದ ರಾಮದೇವರ ದೇವಾಲಯದ ನವರಂಗ ಮಂಟಪದ ಮೇಲ್ಛಾವಣಿಗೆ ಹಾಕಿರುವ ಕಲ್ಲೊಂದರಲ್ಲಿರುವ ಶಾಸನದಿಂದ೫ ಕಾವೇರಿ ನದಿಗೆ ಅಣೆಕಟ್ಟೆ ನಿರ್ಮಿಸಿದ ಹಾಗೂ ಕಾಲುವೆ ನಿರ್ಮಾಣದ ವಿಷಯ ತಿಳಿದುಬರುತ್ತದೆ. ಕ್ರಿ.ಶ. ಹದಿನೈದನೆಯ ಶತಮಾನಕ್ಕೆ ಸೇರಿದ ಈ ಶಾಸನದಲ್ಲಿ ಆದಿ ಅಗ್ರಹಾರ, ಉದ್ಭವ ಸರ್ವಜ್ಞಪುರ, ವಿದ್ಯಾನಿಧಿ ದಕ್ಷಿಣ ವಾರಣಾಸಿ ಎಂದು ಖ್ಯಾತಿ ಪಡೆದಿದ್ದ ಹಂಪಾಪುರದ ಶೇಷಮಹಾಜನಗಳು, ಗ್ರಾಮದ ಹಿರಿಯರು, ಗಉಡಪ್ರಜೆಗಳು ಸೇರಿ ಸಿಂಗೇರಿಯ ಶ್ರೀನಾರಸಿಂಹ ಭಾರತಿ ವೊಡೆಯರ ಶಿಷ್ಯರಾದ ಭಾರಿಪುರದ ಚಿಕ್ಕದೀಕ್ಷಿತನಿಗೆ ಕಾವೇರಿ ನದಿಗೆ ಕಟ್ಟೆ ಕಾಲುವೆ ನಿರ್ಮಾಣಕ್ಕಾಗಿ ಹಾಗೂ ಛತ್ರದಲ್ಲಿ ಬ್ರಾಹ್ಮಣರಿಗೆ ಭೋಜನ ನೀಡುವುದಕ್ಕಾಗಿ ಭೂಮಿಯನ್ನು ಕ್ರಯದಾನವಾಗಿ ನೀಡಿರುವ ಉಲ್ಲೇಖವಿದೆ. ಈ ಸಂಬಂಧ ಲಕ್ಷ್ಮೀನಾಥ ದೇವರ ಮುಂದೆ ಗ್ರಾಮದ ಮಧ್ಯದಲ್ಲಿ ಪತ್ರ, ಶಾಸನದ ಪ್ರತಿಯನ್ನು ಮಾಡಿಸಿ ಶಿಲಾಶಾಸನ ವನ್ನೂ ಬರೆಸಿ ಕೊಟ್ಟಿದ್ದಾರೆ. ಈ ಮರ್ಯಾದೆಗೆ ತಪ್ಪದೆ ನಡೆಸಬೇಕೆಂದು ಸಾಲುಗ್ರಾಮೆಯ ಮಹಾಜನಗಳು, ಮಿರ್ಲೆಯ ಮಹಾಜನಗಳು, ಮರ್ಬಳೇಶ್ವರ ದೇವರ ಬಟ್ಟದ ಗಣಾಚಾರಿ ಚಾಮಯದೇವ, ಸಮೆಯಕುಮಾರ, ಕೊರೆಗಳ ಮಾಯನಾಯ್ಕ ಎರಡೂ ಅಗ್ರಹಾರದ ಎರಡೂ ಸಮಯ ದವರೂ ಸಾಕ್ಷಿಯಾಗಿ ಈ ಕ್ರಯದಾನ ನೀಡಿರುವರೆಂದು ಶಾಸನದಲ್ಲಿ ದಾಖಲಾಗಿದೆ.

ತಿರುಮಕೂಡಲು ನರಸೀಪುರ ತಾಲ್ಲೂಕು ಬನ್ನೂರಿನ ಬಳಿ ವಿಜಯನಗರದ ಅರಸು ಅಚ್ಚುತರಾಯನ ಕಾಲದಲ್ಲಿ ಅಣೆಕಟ್ಟನ್ನು ಕಾವೇರಿ ನದಿಗೆ ಕಟ್ಟಿರುವ ಕುರುಹು ನೀಡುವ ಶಾಸನ[೬] ಬನ್ನೂರಿನ ಹನುಮಂತೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಗಿರಿಜಾಕಲ್ಯಾಣ ಮಂಟಪದಲ್ಲಿ ನೆಟ್ಟಿರುವ ಕಲ್ಲಿನಲ್ಲಿದೆ. ಕ್ರಿ.ಶ. ೧೫೪೧ ಜನವರಿ ೨೫ಕ್ಕೆ ಸಲ್ಲುವ ಈ ಶಾಸನವು 'ಅಚ್ಚುತರಾಯನು ಆಳುವಾಗ ಮಂತ್ರಿಯಾದ ವಾರಣಾಸಿ ವರದಪ್ಪಣ್ಣನ ಕಾರ್ಯಕ್ಕೆ ಕರ್ತನಾದ ಕನ್ನಪನಾಯಕನ ಮಗ ತಮ್ಮನಾಯಕನು ವಹ್ನಿಪುರಾಧೀಶ್ವರ ಶ್ರೀಹನುಮಂತೇಶ್ವರದೇವರಿಗೆ ಹೊಸದಾಗಿ ರಥವನ್ನು ಕಟ್ಟಿಸಿ, ಉಮಾಸ್ಕಂದೇಶ್ವರ, ವಿಘ್ನೇಶ್ವರ ಮುಂತಾದ ವಿಗ್ರಹಗಳನ್ನು ಹೊಸದಾಗಿ ಮಾಡಿಸಿ ರಥೋತ್ಸವ ನಡೆಸುವುದಕ್ಕಾಗಿ ಕಾವೇರಿ ಕಾಲುವೆ ಕೆಳಗೆ ೬ ಖಂಡುಗ ಗದ್ದೆ, ಕಲ್ಲಮಡವೆಯ ತೋಟ, ೯೦೦ ಅಡಕೆಮರಗಳನ್ನು ದಾನವಾಗಿ ಕೊಟ್ಟಿರುವನು. ತಮ್ಮನಾಯಕನ ಮಡದಿಯಾದ ತಿಪ್ಪಮ್ಮ ಸಹ ಹನುಮಂತೇಶ್ವರ ದೇವರಿಗೆ ಅದೇ ಕಾವೇರಿ ಕಾಲುವೆಯ ಕೆಳಗೆ ೧ ಖಂಡುಗ ಗದ್ದೆಯನ್ನು ದಾನ ನೀಡಿದಳು. ಈ ದಾನದ ಸಂದರ್ಭದಲ್ಲಿ ಬನ್ನೂರಿನ ಹೆಬ್ಬಾರರು, ಮಹಾಜನಗಳು, ಗವುಡಗಳು, ಗ್ರಾಮದ ಸೇನಬೋವ ಉಪಸ್ಥಿತರಿದ್ದರೆಂದು ಹೇಳಲಾಗಿದೆ'. ಈ ಶಾಸನದ ಉಲ್ಲೇಖವನ್ನು ಗ್ರಹಿಸಿದರೆ ಕಾವೇರಿ ನದಿಗೆ ಬನ್ನೂರಿನ ಬಳಿ ಕಣೆಕಟ್ಟನ್ನು ನಿರ್ಮಾಣ ಮಾಡಿ ಕಾಲುವೆಗಳ ಮೂಲಕ ನೀರನ್ನು ಹರಿಸಿ ಗದ್ದೆಗಳನ್ನು ರಚಿಸಿ ಬತ್ತ ಬೆಳೆಯುವುದನ್ನು ರೂಢಿಗೆ ತಂದಿರುವುದು ಸ್ಪಷ್ಟವಾಗುತ್ತದೆ.

ಮಂಡ್ಯ ಜಿಲ್ಲೆ ಪಾಂಡುಪುರ ತಾಲ್ಲೂಕಿನ ಕನ್ನಂಬಾಡಿ ಯಲ್ಲಿ ಈಗ ಕೃಷ್ಣರಾಜಸಾಗರ ಅಣೆಕಟ್ಟು ನಿರ್ಮಾಣ ಗೊಂಡಿರುವ ಸ್ಥಳ ಅಥವಾ ಆಸುಪಾಸಿನಲ್ಲಿ ಕಾವೇರಿ ನದಿಗೆ ಹದಿನೇಳನೆಯ ಶತಮಾನದಲ್ಲಿ ಅಣೆಕಟ್ಟೊಂದು ನಿರ್ಮಾಣ ವಾಗಿದ್ದಿತೆಂಬ ಅಂಶವನ್ನು ಶಾಸನವೊಂದು[೭] ತಿಳಿಸುತ್ತದೆ. ಕನ್ನಂಬಾಡಿಯ ಗೋಪಾಲಕೃಷ್ಣಸ್ವಾಮಿ ದೇವಾಲಯದ ಅರ್ಚಕರ ಬಳಿ ಇದ್ದ ತಾಮ್ರಶಾಸನವು ಈ ಕುರಿತು ಬೆಳಕು ಚೆಲ್ಲುತ್ತದೆ. ಕ್ರಿ.ಶ. ೧೭೨೨ ನೇ ಇಸವಿ ನವೆಂಬರ್ ೨೨ನೇ ತಾರೀಖನ್ನು ದಾಖಲಿಸಿರುವ ಈ ತಾಮ್ರಶಾಸನದಲ್ಲಿ ಕನ್ನಂಬಾಡಿ ಕಾಲುವೆಯ ಕೆಳಗೆ ಗೋಪಾಲಸ್ವಾಮಿಯ ತೆಪ್ಪ ತಿರುನಾಳ ಸೇವೆಗಾಗಿ ಬಿಳುಗುಲಿಯ ಗೋಪಯ್ಯನ ಮಗ ದೇವರಾಜಯ್ಯನು ಭೂಮಿಯನ್ನು ದತ್ತಿ ಬಿಟ್ಟಿರುವ ವಿಷಯ ವಿದೆ. ದೇವರಾಜಯ್ಯನು ಕನ್ನಂಬಾಡಿಯ ಹಾರುವಳಿಯ ಲಿಂಗಯ್ಯನಿಂದ ಭೂಮಿಯನ್ನು ಕ್ರಯಕ್ಕೆ ತೆಗೆದುಕೊಂಡನೆಂದು ಶಾಸನದಲ್ಲಿ ದಾಖಲಿಸಲಾಗಿದೆ. ಹೊರಮಾಳ ಹಂತದಲ್ಲಿ ೧ ಖಂಡುಗ ಗದ್ದೆ, ಹೊಂಗೆತಾಳ ಹಂತದಲ್ಲಿ ೧ ಖಂಡುಗ ಗದ್ದೆ, ಹೀಗೆ ೨ ಖಂಡುಗ ಗದ್ದೆಯನ್ನು ದೇವರ ಸೇವೆಗಾಗಿ ದಾನ ಮಾಡಿರುವನು. ತಾವು ದಾನ ಮಾಡಿರುವ ಕಾವೇರಿ ಕಾಲುವೆ ಕೆಳಗಿನ ಗದ್ದೆಯನ್ನು ವರ್ಷಕ್ಕೆ ಹತ್ತು ಖಂಡುಗ ಬತ್ತಕ್ಕೆ ಗುತ್ತಿಗೆಗೆ ನೀಡಿ ಪ್ರತಿ ವರ್ಷ ಫಾಲ್ಗುಣ ಬಹುಳ

೧೨ನೆಯ ತಾರೀಖಿನಂದು ಗೋಪಾಲಕೃಷ್ಣಸ್ವಾಮಿ ದೇವರ ತೆಪ್ಪ ತಿರುನಾಳ ಸೇವೆಯನ್ನು ಸಾಂಗವಾಗಿ ನಡೆಸಿಕೊಂಡು ಬರಬೇಕೆಂಬ ಷರತ್ತನ್ನು ಶಾಸನ ವಿಧಿಸಿದೆ.

ಮೈಸೂರು ಜಿಲ್ಲೆ ಆನಂದೂರು ಗ್ರಾಮದ ಪೂರ್ವದಲ್ಲಿ ಕಾವೇರಿ ನದಿ ತೀರದಲ್ಲಿ ಗೊಳ್ಳಿಕೊಲ್ಲಿಗೆ ಸಮೀಪದಲ್ಲಿನ ಕಲ್ಲಿನಲ್ಲಿರುವ ಶಾಸನವು[೮] ಟಿಪ್ಪು ಸುಲ್ತಾನನ ಆಳ್ವಿಕೆಯ ಕಾಲಕ್ಕೆ ಸೇರಿದ್ದು, ಕಾವೇರಿ ನದಿಗೆ ಅಣೆಕಟ್ಟೆ ನಿರ್ಮಾಣದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೭೯೭ನೇ ಇಸವಿಯಲ್ಲಿ ರಚಿಸಿರುವ ಈ ಪರ್ಷಿಯನ್ ಭಾಷಾ ಶಾಸನದಲ್ಲಿ ಟಿಪ್ಪು ಸುಲ್ತಾನನು ಆನಂದೂರಿನ ಬಳಿ ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸಿರುವ ಉಲ್ಲೇಖವನ್ನು ಮಾಡುತ್ತದೆ. ಅಣೆಕಟ್ಟು ರಾಜಧಾನಿಯ ಪಶ್ಚಿಮಕ್ಕಿದೆ ಎಂದು ದಾಖಲಿಸಿದೆ. ನಾನು ಅಣೆಕಟ್ಟು ನಿರ್ಮಾಣ ಮಾಡಿದೆ. ಅದನ್ನು ದೇವರು ಪೂರೈಸಿದ. ಎಪ್ಪತ್ತು ಅಡಿಗಿಂತ ಎತ್ತರವಾಗಿರುವ ಅಣೆಕಟ್ಟನ್ನು ಧರ್ಮಾರ್ಥವಾಗಿ ನಿರ್ಮಿಸಲಾಗಿದೆ. ಅಣೆಕಟ್ಟನ್ನು ಕಟ್ಟಲು ಲಕ್ಷಗಟ್ಟಲೆ ಹಣ ಖರ್ಚಾಗಿದೆ. ಅಣೆಕಟ್ಟಿನ ನೀರನ್ನು ಕಾಲುವೆಯ ಮೂಲಕ ಬಳಸಿಕೊಂಡು ಕೃಷಿ ಮಾಡುವವರು ತಾವು ಬೆಳೆದ ಬೆಳೆಯಲ್ಲಿ ಮೂರು ಭಾಗವನ್ನು ಉಪಯೋಗಿಸಿಕೊಂಡು, ಒಂದು ಭಾಗವನ್ನು ಸರ್ಕಾರಕ್ಕೆ ನೀಡಬೇಕೆಂದು ಶಾಸನ ತಿಳಿಸಿರುವುದು ಕಂಡುಬರುತ್ತದೆ. ಶಾಸನದಲ್ಲಿ ಉಕ್ತವಾಗಿರುವ ಅಂಶಗಳನ್ನು ಗಮನಿಸಿದರೆ, ಟಿಪ್ಪು ಸುಲ್ತಾನನು ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸುವ ಮೂಲಕ ರೈತರ ಕೃಷಿ ಚಟುವಟಿಕೆಗಳಿಗೆ ನೆರವಾಗುವುದಲ್ಲದೆ ಬೊಕ್ಕಸಕ್ಕೆ ಅಧಿಕ ತೆರಿಗೆ ಆದಾಯವನ್ನು ಸಂಗ್ರಹಿಸುವ ಮಹತ್ವಾಕಾಂಕ್ಷೆಯನ್ನು ಹೊಂದಿದ್ದನು. ಟಿಪ್ಪು ಸುಲ್ತಾನನ ಕಾರ್ಯಗಳ ಮೇಲೆ ಕಣ್ಣಿಟ್ಟಿದ್ದ ಆಂಗ್ಲರಿಗೆ ಟಿಪ್ಪು ಸುಲ್ತಾನ್ ಆರ್ಥಿಕವಾಗಿ ಬೆಳವಣಿಗೆಯನ್ನು ಸಾಧಿಸುವುದು ಇಷ್ಟವಿರಲಿಲ್ಲ. ಆದ್ದರಿಂದ ಅವರು ಅಣೆಕಟ್ಟನ್ನು ನಾಶಮಾಡಿರುವ ಸಾಧ್ಯತೆ ಇದೆ ಎನ್ನಬಹುದು.

ಮೈಸೂರು ಮಹಾರಾಜ ಮುಮ್ಮಡಿ ಕೃಷ್ಣರಾಜ ವೊಡೆಯನ ಆಳ್ವಿಕೆಗೆ ಸೇರಿದ ಶಾಸನವೊಂದು ಮೈಸೂರಿನ ಕೋಟೆಯಲ್ಲಿರುವ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯದ ಮುಂದಿದ್ದು, ಕ್ರಿ.ಶ. ೧೮೨೯ ಮಾರ್ಚ್ ೧೫ನೇ ದಿನಾಂಕದಂದು ರಚಿಸಿದ್ದಾಗಿದೆ. ಚಾಮುಂಡಾಂಬೆಯ ವರಪ್ರಸಾದದಿಂದ ಶ್ರೀಚಾಮರಾಜಮಹೀಪಾಲನ ಧರ್ಮಪತ್ನಿ ಕೆಂಪನಂಜಮ್ಮಾಂಬರ ಮಗ ಶ್ರೀಕೃಷ್ಣರಾಜವಡೆಯರು ಭೂಷಾರತ್ನ, ದೇಶರತ್ನ, ಸೇವಾರತ್ನ, ದಾನರತ್ನ, ಪ್ರತಿಷ್ಠಾರತ್ನ, ಉಪಕಾರರತ್ನ, ಧರ್ಮರತ್ನ, ಕೀರ್ತಿರತ್ನ, ಸಾರಸ್ವತರತ್ನಗಳೆಂಬ ಬಿರುದುಗಳನ್ನು ಪಡೆದು ತಮ್ಮ ಕುಲದೇವರಾದ ಚಾಮುಂಡೇಶ್ವರಿಗೆ ಒಂಬತ್ತು ಬಗೆಯ ಸೇವೆ ಮಾಡಿರುವುದಾಗಿ ಶಾಸನ ಉಲ್ಲೇಖಿಸಿದೆ. ಕಾವೇರಿ ನದಿಗೆ ಕೃಷ್ಣರಾಜ ಅಣೆಕಟ್ಟು, ಪಶ್ಚಿಮ ವಾಹಿನಿಯಲ್ಲಿ ಕೃಷ್ಣರಾಜ ಸೋಪಾನ ಮುಂತಾದುವುಗಳನ್ನು ನಿರ್ಮಿಸಿದ್ದರಿಂದ ಉಪಕಾರರತ್ನ ಬಿರುದು ರಾಜರಿಗೆ ಬಂದಿತೆಂದು ಶಾಸನವು ತಿಳಿಸುವುದನ್ನು ಗಮನಿಸಬಹುದು. ಆದರೆ ಶಾಸನದಲ್ಲಿ ಕಾವೇರಿ ನದಿಗೆ ಯಾವ ಸ್ಥಳದಲ್ಲಿ ಅಣೆಕಟ್ಟು ನಿರ್ಮಿಸಲಾಯಿತು ಎಂಬುದರ ಬಗೆಗೆ ವಿವರಗಳಿರುವುದಿಲ್ಲ. ಬಹುಶಃ ಕನ್ನಂಬಾಡಿಯಲ್ಲಿ ಈಗಿರುವ ಕೃಷ್ಣರಾಜಸಾಗರ ಅಣೆಕಟ್ಟು ಇರುವ ಸ್ಥಳದಲ್ಲೇ ಮುಮ್ಮಡಿ ಕೃಷ್ಣರಾಜ ವೊಡೆಯರು ಅಣೆಕಟ್ಟನ್ನು ನಿರ್ಮಿಸಿದ್ದಿರಬೇಕು. ಅದೇ ಸ್ಥಳದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯ ಅವರು ನಂತರ ಬೃಹತ್ತು, ಮಹತ್ತುಗಳಲ್ಲಿ ವಿಶಿಷ್ಟವಾದ ಅಣೆಕಟ್ಟನ್ನು ನಿರ್ಮಿಸಿದರೆಂದು ಎಂದು ಹೇಳಬಹುದಾಗಿದೆ.

ಮೇಲೆ ಉಲ್ಲೇಖಿಸಿರುವ ಶಾಸನಗಳ ಆಧಾರದಲ್ಲಿ ಕರ್ನಾಟಕದಲ್ಲಿ ಹರಿಯುವ ಕಾವೇರಿ ನದಿಯ ಉದ್ದಕ್ಕೂ ಅಣೆಕಟ್ಟು, ಕಾಲುವೆಗಳನ್ನು ನಿರ್ಮಿಸಿರುವುದನ್ನು ಖಚಿತಪಡಿಸಿಕೊಳ್ಳಬಹುದು. ಹೊಯ್ಸಳ, ವಿಜಯನಗರ, ಮೈಸೂರು ಅರಸರು, ಟಿಪ್ಪು ಸುಲ್ತಾನ್ ಹಾಗೂ ಅವರ ಅಧೀನದಲ್ಲಿದ್ದ ಅಧಿಕಾರಿಗಳು, ಸಾಮಾನ್ಯ ಜನರು ಪ್ರಾಚೀನ ಕಾಲದಿಂದಲೂ ಕಾವೇರಿ ನದಿಯ ನೀರನ್ನು ಕೃಷಿಗೆ ಬಳಕೆ ಮಾಡಿಕೊಂಡು ಆರ್ಥಿಕ ಪ್ರಗತಿಯನ್ನು ಸಾಧಿಸಿರುವುದಲ್ಲದೆ, ರಾಜರ ಬೊಕ್ಕಸಕ್ಕೆ ಆದಾಯದ ಒಂದು ಭಾಗವನ್ನು ನೀಡುವುದನ್ನು ರೂಢಿಗೆ ತಂದಿದ್ದರು. ದೇವಾಲಯಗಳ ಪೂಜೆ, ನೈವೇದ್ಯದಂಥ ಸೇವೆಗಳನ್ನು ಮಾಡುವ ಮೂಲಕ ತಮ್ಮ ಧಾರ್ಮಿಕ ನಂಬಿಕೆಗಳನ್ನು ಗಟ್ಟಿಗೊಳಿಸಿಕೊಂಡು ನೆಮ್ಮದಿಯ ಜೀವನವನ್ನು ನಡೆಸಲು ಪ್ರಯತ್ನಿಸುತ್ತಿದ್ದರು. ಬ್ರಾಹ್ಮಣರಿಗೆ ಕಾವೇರಿ ಅಣೆಕಟ್ಟು ಹಾಗೂ ಕಾಲುವೆಯ ಕೆಳಗಿನ ಭೂಮಿಯನ್ನು ದತ್ತಿ ಬಿಡುವ ಮೂಲಕ ಧನ್ಯತಾ ಭಾವವನ್ನು ಹೊಂದುವುದು ರೂಢಿಯಲ್ಲಿತ್ತು ಎಂಬ ಅಂಶವನ್ನು ಮೇಲೆ ಉಲ್ಲೇಖಿಸಿರುವ ಶಾಸನಗಳಿಂದ ತಿಳಿದು ಬರುತ್ತದೆ.



## ಆಧಾರಸೂಚಿ


೧. ಎ.ಕ. ೫, ೧೯೭೬, ತಿ.ನ. ೨೦೮.
೨. ಎ.ಕ. ೬, ೧೯೭೭, ಶ್ರೀ.ಪ. ೮೪.
೩. ಕೃನ. ೧೧೨, ಎ.ಕ. ೫, ೧೯೭೬.
೪. ಪಾ.ಪು. ೧೯, ಎ.ಕ., ೧೯೭೭.
೫. ಕೃನ. ೯೨, ಎ.ಕ. ೫, ೧೯೭೬.
೬. ತಿ.ನ. ೨೦೮, ಎ.ಕ. ೫, ೧೯೭೬.
೭. ಪಾಂಪು ೩೯, ಎ.ಕ. ೬, ೧೯೭೭.
೮. ಮೈ. ೧೧೨, ಎ.ಕ. ೫, ೧೯೭೬.

೩೭

# ಶಶಕಪುರ ವಾಸಂತಿಕಾದೇವಿ ಹಾಗೂ ಹೊಯ್ಸಳರ ಶಕ ಸ್ಥಾಪನಾ ಮೂಲ ಇತಿಹಾಸದ ಜಿಜ್ಞಾಸೆಗಳು

ಸಿದ್ದರಗಿರಿ ಒ.ಎಲ್. ಚಂದ್ರೇಗೌಡ*

ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ಸುಮಾರು ೧೦-೧೫ ಕಿ.ಮೀ. ದೂರದಲ್ಲಿ ಪಶ್ಚಿಮ ದಿಕ್ಕಿನಿಂದ ಪೂರ್ವಾಭಿಮುಖವಾಗಿ ಹರಿಯುತ್ತಿರುವ ಹೇಮಾವತಿ ನದಿ. ಈ ನದಿಗೆ ಶಿಶಿಲಾದ್ರಿ ಪರ್ವತ ಶ್ರೇಣಿಯ ತಪ್ಪಲಿನ ಬೈರಾಪುರ ಎಂಬ ಗ್ರಾಮದಲ್ಲಿ ನೆಲೆಸಿರುವ ನಾಣ್ಯದ ಬೈರವೇಶ್ವರನ ಪಾದತಲದ ಶೋಲಾರಣ್ಯದಲ್ಲಿ ಹುಟ್ಟಿ ಭೈರವನ ಚೈತನ್ಯ ಸ್ವರೂಪಳಾದ ಮಾಲಮ್ಮದೇವಿಯ ಹೆಸರನ್ನು ಹೊತ್ತ ಮಾಲಾವತಿ ನದಿಯೂ ಮಲವಿನ್ನಾಡ್ ಪ್ರಾಂತ್ಯದ ಊರುಬಗೆ ಸಾವಿರ ಸೀಮೆಯಲ್ಲಿ ಹರಿದಾಡಿ ಹೇಮಾವತಿ ನದಿಯನ್ನು ಕೆಸವಳಲು ಸಾವಿರ ಸೀಮೆಯ ಕೂಡಿಗೆ ಎಂಬಲ್ಲಿ ಸಂಗಮಿಸುತ್ತಾಳೆ. ಈ ಕೂಡಿಗೆ ಎಂಬ ಸ್ಥಳದಿಂದ ಕೆಲವೇ ಕೂಗಳತೆ ದೂರದಲ್ಲಿ ನದಿಯ ಬಲ ಬದಿಯ ವಿಶಾಲವಾದ ಬತ್ತದ ಗದ್ದೆಗಳ ಬಯಲು, ಇದರ ಬಲಮಗ್ಗುಲಲ್ಲಿ ಹೊಯ್ಸಳ ಸಾಮ್ರಾಜ್ಯದ ಸ್ಥಾಪನಾ ಕಾಲಕ್ಕಿಂತಲೂ ಪೂರ್ವದ್ದೆನ್ನಬಹುದಾದ ಮಣ್ಣಿನಕೋಟೆ-ಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವ ಒಂದು ಮಹಾನ್ ಸಾಮ್ರಾಜ್ಯದ ಶಕವನ್ನೇ ಸ್ಥಾಪಿಸಿದ ಚರಿತ್ರೆಯಲ್ಲಿ ಶಶಕಪುರವೆಂದು ಕರೆಯಲ್ಪಟ್ಟಂತಹ ಅಂಗಡಿ ಎಂಬ ಗ್ರಾಮವಿದೆ.

ಈ ಅಂಗಡಿ ಗ್ರಾಮದಲ್ಲಿ ಹೊಯ್ಸಳ ಸಾಮ್ರಾಜ್ಯವು ಉದಯವಾಗುವುದಕ್ಕಿಂತಲೂ ಬಹು ಪುರಾತನ ಕಾಲದಿಂದಲೂ ವಕ್ಕಲುತನದ ಬೇಸಾಯ ಕಸುಬುದಾರರಾದಂತ ಈ ಮಲೆಪತ್ತಿನ ಸುತ್ತಮುತ್ತಲಿನ ಹತ್ತಾರು ನಾಡುಗಳ ನನ್ನ ಕುಲದ ಪೂರ್ವಜರುಗಳು ಈ ರಾಜ್ಯ ಉದಯ ಕಾಲದಾರಭ್ಯ ತಮ್ಮ ತಮ್ಮ ಬತ್ತದ ಗದ್ದೆಗೈದು ಆಸ್ಥಾನದ ಬೊಕ್ಕಸದ ಕಣಜಕ್ಕೆ ಭತ್ತ ತುಂಬಿ ರಾಜಬೊಕ್ಕಸ ಶ್ರೀಮಂತಗೊಳಿಸಿರುವುದಲ್ಲದೇ ರಾಜ್ಯ ವಿಸ್ತರಣೆಯಲ್ಲಿಯ ಯುದ್ಧಗಳಲ್ಲಿ ಎದೆಕೊಟ್ಟು ನಿಂತು ರಕ್ತ ಬಸಿದು ಸಾಮ್ರಾಜ್ಯ ಕಟ್ಟಲು ಬಲಿದಾನಗೈದಿದ್ದಾರೆ.

ಈ ಹೊಯ್ಸಳರಸರ ಮೂಲದ ಬಗ್ಗೆ ಹೆಸರಾಂತ ಚಾರಿತ್ರಿಕ ಸಂಶೋಧಕರಾದ ಡಾ. ರೈಸ್ ಮತ್ತು ಪ್ರೊ. ವಿಲಿಯಂರವರ ಪ್ರಕಾರ ಸ್ಥಳೀಯ ಮೂಲದವರೆಂದು? ಪ್ರೊ. ಬಿ.ಎನ್. ಸುಬ್ರಮಣ್ಯಂರವರ ಪ್ರಕಾರ ತಮಿಳುನಾಡಿನ ವೇಲಿಯಾರ್ ಜನಾಂಗಕ್ಕೆ ಸೇರಿದವರೆಂದು? ಪ್ರೊ. ಬಿ.ಆರ್. ಜೋಯಿಸ್‌ರವರ ಅಭಿಪ್ರಾಯದಂತೆ ದಕ್ಷಿಣ ಕನ್ನಡ ಜಿಲ್ಲೆಯ (ತುಳುನಾಡಿನ) ಹಸಲರು ಎಂಬ ಜನಾಂಗಕ್ಕೆ ಸೇರಿದವರೆಂದೂ? ಹಾಗೆಯೇ ಕರ್ನಲ್ ವೆಂಕೋಜಿರಾಯರ ಅಭಿಪ್ರಾಯದಂತೆ ಕರ್ನಾಟಕದವರೇ ಅಲ್ಲವೆಂದು? ಪ್ರೊ. ಸಿ. ಹಯವದನರಾಯರ ಪ್ರಕಾರ ಐತಿಹಾಸಿಕ ವ್ಯಕ್ತಿಯಾಗಿ ಮೂಡಿರುವ 'ಸಳ' ಕಾಲ್ಪನಿಕ ವ್ಯಕ್ತಿ? ರೋಮನ್ನರ ರೋಮಾಲಸ್ ಮತ್ತು ರೀಮಸ್ ಇದ್ದಹಾಗೆ? ಎಂದು ಅಭಿಪ್ರಾಯಪಟ್ಟಿದ್ದಾರೆ. ಇತಿಹಾಸ ದರ್ಶನ ಸಂ. ೨೮/೨೧೩ರಲ್ಲಿ ಎನ್.ಎಂ. ಪ್ರಭಾಕರ್‌ರವರು ಕಾಲ್ಪನಿಕ ಎಂದು ಅಭಿಪ್ರಾಯಪಟ್ಟಿದ್ದಾರೆ.

ಹೊಯ್ಸಳ ಸಾಮ್ರಾಜ್ಯದ ಮದ್ಯಯುಗದಿಂದೀಚೆಗೆ ಅಂದರೆ ಸುಮಾರು ೧೨ನೇ ಶತಮಾನದಿಂದೀಚೆಗೆ ಕಂಡುಬರುವ ಕನ್ನಡ ಮತ್ತು ಸಂಸ್ಕೃತದಲ್ಲಿನ ಸುದೀರ್ಘ ಶಾಸನಗಳಲ್ಲಿ

"ಸಳನೆಂಬ ಯಾದವಂ ಹೊಯ್ಸಳನಾದಂ ಶಶಕಪುರದ ವಾಸಂತಿಕೆಯಜ್ಜಳ ಭುವನದೊಳಗೆ ಹುಲಿಯಂ ಸೆಳೆಯಂ ಹೊಯ್ದವನಿಂದಾಯ್ತು ಹೊಯ್ಸಳ ವಂಶಂ."

ಇ.ಸಿ. x ಅರಸೀಕೆರೆ ೧೬೧, ಹೀಗೆಯೇ ಇದೇ ಅರಸೀಕೆರೆ ೩೧೪, ೩೧೭, ೩೫೯ ಎಂದು ಗುರುತಿಸಿರುವ ಶಾಸನಗಳು ಮತ್ತು ಇ.ಸಿ. ಚನ್ನರಾಯಪಟ್ಟಣ ೨೧೦ ಎಂದು ಗುರುತಿಸಿರುವ ಶಾಸನಗಳ ಉಲ್ಲೇಖಗಳಲ್ಲಿ ಹೊಯ್ಸಳ ವಂಶವನ್ನು ಎಷ್ಟೇ ವೈಭವೀಕರಿಸಿದರೂ ಸಹ ಸಳನೆಂಬ ವ್ಯಕ್ತಿ ಇಂದಿಗೂ ಸಹ ಪೌರಾಣಿಕ ವ್ಯಕ್ತಿಯಾಗೇ ಉಳಿದಿದ್ದಾನೆ.

* ಸಿದ್ದರಗಿರಿ ಎಸ್ಟೇಟ್, ಜಾಗರ ಅಂಚೆ, ಜಾಗರ ಚಿಕ್ಕಮಗಳೂರು ತಾಲ್ಲೂಕು-೫೭೭೧೩೦.



ವಾಸಂತಿಕಾ ಪರಮೇಶ್ವರಿ ಅಂಗಡಿ

ಹೊಯ್ಸಳರಸರ ವಂಶಾವಳಿಯನ್ನು ಕರಾರುವಕ್ಕಾಗಿ ಗುರುತಿಸಲು ಶಾಸನಗಳಲ್ಲಿ ಸಮಾನಾಂತರ ಖಚಿತತೆ ದೊರಕದೆ ಇರುವುದರಿಂದ ಖಚಿತ ನಿರ್ಧಾರಕ್ಕೆ ಬರಲು ಇಲ್ಲಿಯುವರೆಗೂ ಪಂಡಿತರುಗಳಿಗೆ ಸಾಧ್ಯವಾಗಿಲ್ಲ. ಇವುಗಳಲ್ಲೊಂದು ಶಾಸನವು ಚಿಕ್ಕಮಗಳೂರು ಪೇಟೆಯ ಹಳೇ ಉಪ್ಪಳ್ಳಿ ಎಂಬಲ್ಲಿ ೨೦೦೮ರಲ್ಲಿ ದೊರೆತ ೫೮ ಸಾಲುಗಳಿರುವ ದೀರ್ಘವಾದ ಶಾಸನ. ಈ ಶಾಸನದಲ್ಲಿ ಎರಡು ಮಗ್ಗಲುಗಳಲ್ಲಿ ೨ ತೇದಿಗಳಿವೆ. ಒಂದು ಮಗ್ಗಲಲ್ಲಿ ಕ್ರಿ.ಶ. ೧೦೫೮, ಇನ್ನೊಂದು ಮಗ್ಗಲಲ್ಲಿ ೧೧೫೬ ಇದು ಸರಿಸುಮಾರು ಹೊಯ್ಸಳರ ಕುಲತಿಲಕ ವಿಷ್ಣುವರ್ಧನ ಮತ್ತು ಇವನ ಮಕ್ಕಳುಗಳಾದ ಬಲ್ಲಾಳ ಮತ್ತು ವೀರ ನರಸಿಂಹರುಗಳ ರಾಜ್ಯವಾಳುತ್ತಿದ್ದ ಕಾಲದ್ದು. ಈ ಶಾಸನವು ವಿಷ್ಣುವರ್ಧನನ ಪೂರ್ವಿಕರ ವಂಶಾವಳಿಯನ್ನು ಈ ಕೆಳಕಂಡಂತೆ ವಿವರಿಸಿದೆ. ಇದನ್ನು ಕಿ.ಶ. ೨೦೦೮ರಲ್ಲಿ ಹೆಚ್.ಎಂ. ನಾಗರಾಜ್‌ರವರು ಗುರುತಿಸಿ ಪ್ರಚಾರಪಡಿಸಿ ದಾಖಲಿಸಿದ್ದಾರೆ. ಶಾಸನದ ಪಾಠ ಈ ರೀತಿ ಇದೆ.

ಮಲಪರೋಳ್‌ಗಂಡಾದ್ಯಾನೇಕ ನಾಮಾವಳೀ ವಿರಾಜಮಾನರಪ್ಪ ತ್ರಿಭುವನಮಲ್ಲ ಪೊಯ್ಸಳ ಮಾರ ಪೊಯ್ಸಳದೇವ.

ನಾತನಿಂಬಳಕ ಎಪ್ಪಡಿಪೊಯ್ಸಳ, ಎರಿಯಂಗಪೊಯ್ಸಳ, ತಲಕಾಡಪೊಯ್ಸಳ, ನುದಯಾದಿತ್ಯ,

ಕೂಂಡವಿನಯಾದಿತ್ಯ, ನ್ರಿಪಕಾಮ, ಹಿರಿಯಹೊಯ್ಸಳ ದೇವನಿಂ ಬಳಿಕೆ ಸ್ವಸ್ತಿಸಮಸ್ತಭೂಮಿಪತಿ

ವಿಕ್ರಮಗಂಗನ್ರಿಪಾಳನೇಕ ಬೋಗ್ಯಸ್ಥಿರಶಾಸನಂ ಸಕಲದಾರಿಣಿಯಂ ಪರಿಪಾಲಿಸಲುಕೆ.... ದೇವಶ್ರೀ

ವಿನಯಾರ್ಕ ಹೊಯ್ಸಳ....

ಇಂತೊಳ್ಪಿಂ ನೆರೆದಿರ್ಪ ಹೊಯ್ಸಳನ್ರಿಪಾಂಗುತ್ಸಾಹದಿಂ ಪುಟದಿಂ.... ತಾನೆರೆಯಂಗ ಭೂಪನೇಪಲಂ

ವಿಶ್ವಾಂಭರಾ ಬೋಗದೋಳ್ ಅನ್ತು ವಿನಯಾದಿತ್ಯ ಹೊಯ್ಸಳದೇವ, ನ್ರೆರೆಯಂಗದೇವ ಬಲ್ಲಾಳದೇವ,

ವಿಷ್ಣುವರ್ದನದೇವಾನುದಿಯಾದಿತ್ಯದೇವನೊಳಗಾದ ಕುವರರಿಂಲ್ಸಕದಿಂ ರಾಜ್ಯಂಗೈಯ್ಯುತ್ತಿರೆ.

ಈ ಶಿಲಾಶಾಸನದಲ್ಲಿ ಉಲ್ಲೇಖಿಸಿದ ವಂಶಾವಳಿಯ ಕೊನೆಯ ಭಾಗವು ಸಮಾನಾಂತರ ಕಾಲಮಾನದ ಶಾಸನಾಧಾರಗಳಿಗೆ ಸಾಮ್ಯವಿದೆ. ಆದರೆ ವಿನಯಾದಿತ್ಯ ನಿಗಿಂತಲೂ ಪೂರ್ವದಲ್ಲಿದ್ದ ಹೊಯ್ಸಳರ ವಂಶಾವಳಿಯು ವಿಶ್ವಾಸಾರ್ಹವಲ್ಲವೆಂಬುದು ಪಂಡಿತರ ಅಭಿಮತ.

ಈ ಶಾಸನ ಆರಂಭದಲ್ಲಿ ಗುರುತಿಸಿರುವ ತ್ರಿಭುವನಮಲ್ಲ ಹೊಯ್ಸಳ ಯಾರು? ತ್ರಿಭುವನಮಲ್ಲ ಎಂಬ ಬಿರುದನ್ನು ನೃಪಕಾಮ ಮತ್ತು ವಿನಯಾದಿತ್ಯರುಗಳು ಕಲ್ಯಾಣ ಚಾಳುಕ್ಯರ ಆದಿರಾಜತ್ವವನ್ನು ಒಪ್ಪಿಕೊಂಡ ಬಳಿಕೆ ಹೊಯ್ಸಳ ಪರಾಕುಗಳಲ್ಲಿ ಸೇರ್ಪಡೆಯಾದಂತಹ ಬಹುಪರಾಕು. ಮಾರ ಹೊಯ್ಸಳ ಯಾರು? ಇ.ಸಿ. XI ಬೇಲೂರು ೫೪೦ ಎಂದು



ವಸಂತ ಸುಗ್ಗಿ ಉತ್ಸವ ಅಂಗಡಿ

ಗುರುತಿಸಿರುವ ತೊಳಲು ಗ್ರಾಮದ ಶಾಸನದಲ್ಲಿ ಗುರುತಿಸಿರುವ ಮಾರಯ್ಯನೆಂದಾದರೆ ಇವನ ಕಾಲಮಾನ ಕ್ರಿ.ಶ. ೯೭೨. ಶಾಸನಾದಾರೀತ್ಯ ಸರಿಹೊಂದಲಾರದು. ಹಾಗೆಯೇ ಮಾರಹೊಯ್ಸಳನ ನಂತರ ೧) ಎಪ್ಪಡಿ ಹೊಯ್ಸಳ, ೨) ಎರೆಯಾಂಗ ಪೊಯ್ಸಳ, ೩) ತಲಕಾಡು ಪೊಯ್ಸಳ, ೪) ಉದಯಾದಿತ್ಯ, ೫) ಕೂಂಟುವಿನಯಾದಿತ್ಯ, ೬) ನ್ರಿಪಕಾಮ, ೭) ಹಿರಿಯಪೊಯ್ಸಳನೆಂಬ ಏಳು ಜನರನ್ನು ಕ್ರಿ.ಶ. ೮೯೦ರಿಂದ ೧೦೪೮ರ ಸುಮಾರಿನಲ್ಲಿ ಗುರುತಿಸಬೇಕಾಗುತ್ತದೆ. ಇದು ಸಂಭವನೀಯವಲ್ಲ ಎಂಬುದು ಪಂಡಿತರುಗಳ ಅಭಿಮತ.

ಹಾಗೆಯೇ ಸ್ವಸ್ಥಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳ ನೇತೃತ್ವದಲ್ಲಿ ದಿನಾಂಕ ೧೪-೦೧-೨೦೦೯ರಲ್ಲಿ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಇತಿಹಾಸ ವಿಭಾಗದ ಪ್ರಾಧ್ಯಾಪಕರು, ಉಪನ್ಯಾಸಕರು ಹಾಗು ವಿದ್ಯಾರ್ಥಿಗಳು ಶಶಕಪುರದಲ್ಲಿ ನಡೆಸಿದ ಸಂಶೋಧನೆಯನ್ನು "ಹೊಯ್ಸಳ ರಾಜವಂಶದ ಉಗಮಸ್ಥಾನ ಶಶಕಪುರದ ಒಂದು ಅಧ್ಯಯನ" ಎಂಬ ಗ್ರಂಥವನ್ನು ರಚಿಸಿ ಇದರಲ್ಲಿ ವಾಸಂತಿಕಾದೇವಿಯನ್ನು ಜಿನದೇವತೆ ಎಂದು ಜಿನಯತಿ ಸುದತ್ತಾಚಾರ್ಯರ ಆದೇಶದ ಮೇರೆಗೆ ಸಳನು ಹುಲಿಕೊಂದನೆಂದು ಸ್ತುತೀಕರಿಸಿದ್ದಾರೆ. ಈ ವಿದ್ವಾಂಸರ ಅಭಿಪ್ರಾಯದಂತೆಯೇ ಜಿನದೇವತೆಯೋ? ಅಥವಾ ಡಾ. ಡಿ.ಎಸ್. ಜಯಪ್ಪಗೌಡ್ರು ಮತ್ತು ಡಾ. ಎಂ.ಎಸ್. ಕೃಷ್ಣಮೂರ್ತಿ ಮಾನಸಗಂಗೋತ್ರಿ ಮೈಸೂರುರವರ ಹಾಗೂ ಹಿಂದಿನ ಕೆಲವು ಪಂಡಿತರ ಅಭಿಪ್ರಾಯದಂತೆ ವಾಸಂತಿಕಾದೇವಿ ಆಗಮೋಕ್ತ ಮೂರ್ತಿ ದೇವತೆಯೋ?

ಪೂರ್ವಜರ ಚರಿತ್ರೆಯ ಅಧ್ಯಯನವು ಇತಿಹಾಸದ ಬೇಕುಗಳನ್ನು ಅರ್ಥೈಸಲು ಹಾಗೂ ಅದನ್ನು ಆಯಾಯ ಸ್ಥಳೀಯ ಪ್ರದೇಶದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ವಿಕಾಸದ ಹಿರಿಯ ಆಯಾಮಕ್ಕೆ ಜೋಡಿಸಲು ಅನುವು ಮಾಡಿಕೊಡುವುದು ಪ್ರಜ್ಞಾವಂತ ಸಂಶೋಧಕನ ಆದ್ಯ ಕರ್ತವ್ಯವೂ ಅಹುದಾಗಿರುತ್ತದೆ.

ಕ್ಷೇತ್ರ ಸಂಶೋಧನಾ ಕಾರ್ಯ ನಿಮಿತ್ತ ಶಶಕಪುರದ ದೇವಸಾನಿಧ್ಯಗಳ ದರ್ಶನಕ್ಕೆ ಹೋಗಿ ನೋಡಿದರೆ ಅಂಗಡಿ ಗ್ರಾಮದ ದಿಬ್ಬಾಕಾರದ ಎತ್ತರದ ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಕಾಫಿತೋಟದ ಮದ್ಯದಲ್ಲಿ ಹೊಯ್ಸಳ ಸಾಮ್ರಾಜ್ಯದ ಉದಯಕಾಲಕ್ಕಿಂತಲೂ ಪೂರ್ವದಲ್ಲಿಯೇ ಪ್ರತಿಷ್ಠಾಪಿಸಲ್ಪಟ್ಟ ವಾಸಂತಿಕಾ ದೇವಿಸಾನಿದ್ಯವಿದೆ.

ಈ ವಾಸಂತಿಕಾ ದೇವಿ ಹಾಗೂ ಇದರ ಪಾರಿವಾರ ದೇವತೆಯ ವಿಗ್ರಹಗಳು ಹೊಯ್ಸಳರಿಗಿಂತಲೂ ಪೂರ್ವಕಾಲದ್ದೆನ್ನಬಹುದಾದ ಮೃತ್ತಿಕ (ಹುತ್ತದ ಮಣ್ಣು) ಯಿಂದ ಮಾಡಿರುವ ಪ್ರತಿಮಾ ಸ್ವರೂಪಗಳು ಹಾಗೂ ಈ ವಾಸಂತಿಕಾ ದೇವಾಲಯವು ಸಹ ಹೊಯ್ಸಳ ಶೈಲಿಯ ಕಲ್ಲಿನಿಂದ ಕಟ್ಟಿದ ದೇವಾಲಯವಲ್ಲ. ಇತ್ತೀಚೆಗೆ ಮಲವಿನ್ನಾಡ್ ಗ್ರಾಮಸ್ಥರುಗಳು ಕಟ್ಟಿಸಿದ ಹೆಂಚಿನ ಮಾಡಿನ ದೇವಾಲಯ.

ಈ ಆಲಯದ ಹಿಂಬದಿಯ ಅಂದರೆ ಪಶ್ಚಿಮ ದಿಕ್ಕಿನಲ್ಲಿ ಸುಮಾರು ಒಂದು ಕೂಗಳತೆಯ ದೂರದಲ್ಲಿ ವಾಸಂತಿಕಾ ದೇವಾಲಯಕ್ಕಿಂತಲೂ ಸುಮಾರು ಐವತ್ತು ಅಡಿಗಳಷ್ಟು ತಗ್ಗಿನ ಪ್ರದೇಶದ ಕಾಫಿತೋಟದ ಮದ್ಯದ ಇನೊಂದು ದಿಬ್ಬಾಕಾರದ ಪ್ರದೇಶದಲ್ಲಿ ಹೊಯ್ಸಳರಿಗಿಂತಲೂ ಪೂರ್ವದ್ದೆನ್ನ ಬಹುದಾದ ಲಿಂಗರೂಪಿ ಪಾತಳ ಬೈರವೇಶ್ವರನನ್ನು ಪ್ರತಿಷ್ಠಾಪಿಸಲ್ಪಟ್ಟಿದೆ.

ನಂತರದ ಕಾಲದಲ್ಲಿ ಚನ್ನಕೇಶವ ಹಾಗೂ ಲಿಂಗರೂಪಿ ಮಲ್ಲಿಕಾರ್ಜುನನ ದೇವಾಲಯಗಳನ್ನು ಸ್ಥಳಾಭಾವದಿಂದ ಲಿಂಗರೂಪಿ ಪಾತಾಳಬೈರವೇಶ್ವರ ದೇವಾಲಯದ ಎಡಬಲ ಪಾರ್ಶ್ವದ ದಿಬ್ಬದ ಗೆರೆಯ ಅಂಚಿನ ಬದಿಯಲ್ಲಿ ಕಲ್ಲಿನಿಂದ ಕಟ್ಟಿಸಿರುವುದನ್ನು ಅವಲೋಕಿಸಿದರೆ ಇಲ್ಲಿರುವ ಲಿಂಗರೂಪಿ ಪಾತಾಳ ಬೈರವೇಶ್ವರನ ಪ್ರತಿಷ್ಠಾಪನೆ ಆದ ಎಷ್ಟೋ ಕಾಲದ ನಂತರದಲ್ಲಿ ಪ್ರತಿಷ್ಠಾಪಿಸಿ ದೇವಾಲಯಗಳನ್ನು ಕಟ್ಟಿಸಿದ್ದಾರೆ ಹೀಗೆ ಗ್ರಹಿಸಲು ಕಾರಣ ಗೆರೆಯಂಚಿನ ಬದಿಯಲ್ಲಿ ಯಾವುದೇ ಕಟ್ಟಡಗಳು ಶಾಶ್ವತವಾಗಿ ನಿಲ್ಲಲೊಲ್ಲವು ಎಂಬುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಂತಹ ವಾಸ್ತುಜ್ಞಾನವಿದು.

ವಾಸಂತಿಕಾ ಮತ್ತು ಪಾತಾಳಬೈರವೇಶ್ವರ ದೇವಾಲಯಗಳ ಮಧ್ಯದಲ್ಲಿ ಈ ಎರಡು ದೇವಾಲಯಗಳಿಗಿಂತಲೂ ಸ್ವಲ್ಪ ತಗ್ಗಾಗಿರುವ ಪ್ರದೇಶದಲ್ಲಿ ಹೊಯ್ಸಳರ ಕಾಲಕ್ಕಿಂತಲೂ ಪೂರ್ವಕಾಲದ್ದಿರಬಹುದೆಂಬ ಅನುಮಾನಕ್ಕೆ ಎಡೆಮಾಡಿ ಕೊಡಬಲ್ಲ ಉತ್ತರಾಭಿಮುಖವಾಗಿ ಪ್ರತಿಷ್ಠಾಪಿಸಲ್ಪಟ್ಟಿರುವ ಜೈನತೀರ್ಥಂಕರರ ಪ್ರತಿಮೆಗಳಿವೆ. ಆದರೆ ತೀರ್ಥಂಕರರ ಪ್ರತಿಮೆಯ ಬಳಿಯಲ್ಲಿರಬೇಕಾದ ಯಕ್ಷ, ಯಕ್ಷಿಯರ ಬಿಂಬಗಳು ಹಾಗೂ ಪ್ರತಿಮೆಯ ಕೆಳಗೆ ಇರಲೇಬೇಕಾದ ವಾಹನ ಲಾಂಚನವಿಲ್ಲದ ಕಾರಣದಿಂದ ಸಮರ್ಥನೀಯ ವಿವರಣೆಗಳಿಲ್ಲದ ಈ ಜೈನ ತೀರ್ಥಂಕರರ ವಿಗ್ರಹಗಳನ್ನು ಕರಾರುವಕ್ಕಾಗಿ ಶಾಸ್ತ್ರಬದ್ಧವಾಗಿ ಹೆಸರಿಸಲು ಯಾರಿಂದಲೂ ಸಾಧ್ಯವಾಗಲಾರದು.

ಇ.ಸಿ. ಸಕಲೇಶಪುರ ೩೧, (ವಿ.ಮ.ಬ. ೬೭) ಎಂದು ಗುರುತಿಸಿರುವ ಬಾಳುಪೇಟೆಯ ಕಾಫಿ ತೋಟದಲ್ಲಿ ದೊರೆತ ಪಂಚಲೋಹದ ಜಿನ ವಿಗ್ರಹದ ಪೀಠದಲ್ಲಿನ ಶಾಸನದಂತೆ ನೊಣಂಬಾಂತಕ ಎಂಬ ಬಿರುದನ್ನು ತಳೆದ ಗಂಗದೊರೆ ಇಮ್ಮಡಿ ನರಸಿಂಹನ (ಕ್ರಿ.ಶ. ೯೬೩-೯೭೮) ತಂಗಿ ಕುಂನ್ದಣಸೋಮಿ ದೇವಿಯು ಮಾಡಿಸಿದಂತಹ ಈ ಪಂಚಲೋಹದ ವಿಗ್ರಹದಲ್ಲಿಯೂ ಸಹ ಶಶಕಪುರದ ಬಸದಿಯಲ್ಲಿ ಇರುವ ಜಿನ ವಿಗ್ರಹಗಳೋಪಾದಿಯಲ್ಲಿಯೇ

ಬಹಳ ಮುಖ್ಯವಾಗಿ ಇರಲೇಬೇಕಾದ ಹಾಗೂ ಪೂಜಾ ವಿಗ್ರಹದ ಪರಿಪೂರ್ಣತೆಗೆ ಅತ್ಯಾವಶ್ಯಕವಾದ ವಾಹನ ಲಾಂಚನ ಹಾಗೂ ಯಕ್ಷಯಕ್ಷಿಯರನ್ನು ರೂಪಿಸದೇ ಇರುವುದನ್ನು ಒಂದೇ ಕಡೆ ಇಟ್ಟು ನೋಡಿದರೆ ಶಶಕಪುರದಲ್ಲಿನ ಜಿನ ವಿಗ್ರಹಗಳು ಸಹ ಮೇಲ್ಕಂಡ ಗಂಗದೊರೆ ಇಮ್ಮಡಿ ನಾರಸಿಂಹನ ಕಾಲದವುಗಳೆಂಬ ತೀರ್ಮಾನಕ್ಕೆ ಬರಬಹುದು. ಹಾಗೂ ಶಾಸ್ತ್ರಸಮ್ಮತವಾದ ಪರಿಪೂರ್ಣತೆ ಇಲ್ಲದ ಶಕ್ತಿಹೀನವಾದ ಈ ವಿಗ್ರಹಗಳು ಬಹಳ ಕಾಲದಿಂದಲೂ ಸರಿಯಾದ ಪೂಜಾ ಪುರಸ್ಕಾರ ಇಲ್ಲದಂತಾದ ಸ್ಥಿತಿ ರೂಪುಗೊಂಡಿರುವಂತಾಗಲು ಕಾರಣವಾಗಿದೆ.

ಗ್ರಾಮವಾಸ್ತು ಹಾಗೂ ದೇವಾಲಯದ ವಾಸ್ತು ಆಧಾರದ ಮೇರೆಗೆ ಶಶಕಪುರದಲ್ಲಿರುವ ಎಲ್ಲಾ ದೇವಾಲಯಗಳಿಗಿಂತಲೂ ವಾಸಂತಿಕಾ ದೇವಾಲಯವು ಎತ್ತರದಲ್ಲಿ ಪ್ರತಿಷ್ಠಾಪನೆಗೊಂಡಿರುವುದರಿಂದಲೂ ಈ ಸ್ಥಳದ ಪೂರ್ವ ಚರಿತ್ರೆಯಲ್ಲಿ ಜೈನ ದೇವಾಲಯದಿಂದಾದಿಯಾಗಿ ಇನ್ನು ಯಾವುದೇ ದೇವಾಲಯದ ಉಲ್ಲೇಖವು ಬಾರದೇ ಇರುವುದರಿಂದ ಈ ಗ್ರಾಮದ ಮೂಲ ದೇವತೆ ಅಂದರೆ ಅಗ್ರಮಾನ್ಯ ದೇವತೆ ವಾಸಂತಿಕಾದೇವಿ ಎಂದು ಯಾವ ಸಂಶಯವೂ ಇಲ್ಲದೆ ಹೇಳಬಹುದು.

ಈ ವಾಸಂತಿಕಾದ ದೇವಸಾನಿದ್ಯದಲ್ಲಿ ಜೈನ ಮುನಿ ಸುದತ್ತಾಚಾರ್ಯರವರ ಪ್ರವಚನ ಸಂದರ್ಭದಲ್ಲಿ ಅನಿರೀಕ್ಷಿತ ವಾಗಿ ನುಗ್ಗಿಬಂದ ಹುಲಿಯನ್ನು ಕಂಡ ಮುನಿಗಳಿಂದ ಹೊರಟ ಹೊಯ್ಸಳ ಎಂಬ ಪ್ರೇರಣಾ ಆದೇಶದಿಂದ ಪ್ರೇರಿತನಾದ ಸಳನೆಂಬ ಬಾಲಕ ಹುಲಿಯನ್ನು ಕೊಂದನೆಂಬಲ್ಲಿಂದ ಹೊಯ್ಸಳರಸರ ಚರಿತ್ರೆಯು ಪ್ರಾರಂಭವಾಗುತ್ತದೆ.

ಪ್ರಾಚೀನ ಕಾಲದಿಂದಲೂ ನಾಡನ್ನಾಳಿದ ರಾಜ ವಂಶಜರು ನಾವು ಸಪ್ತಮಾತೃಕೆಯರಿಂದಲೋ ಅಥವಾ ದೇವಮುನಿ ಮಹರ್ಷಿಗಳ ವರಬಲದಿಂದಲೋ ಉದ್ಭವಿಸಿ ಪೋಷಿಸಲ್ಪಟ್ಟವರೆಂದು ಪ್ರಚಾರಪಡಿಸಿಕೊಂಡಿರುವುದು ಸರ್ವೇಸಾಮಾನ್ಯ.

ಇದೇ ಹಾದಿಯಲ್ಲಿ ಜೈನ ಮತಾವಲಂಬಿಗಳಾದ ತಲಕಾಡ ಗಂಗ ವಂಶಜರು, ಸಿಂಹನಂದಿ ಎಂಬ ಜೈನ ಮುನಿಗಳ ಕೃಪಾಶೀರ್ವಾದದಿಂದ ಪದ್ಮಾವತಿ ದೇವಿಯು ಅನುಗ್ರಹಿಸಿಕೊಟ್ಟ ಖಡ್ಗದ ಪ್ರಭಾವದ ಬಲದಿಂದ ರಾಜ್ಯ ಸಂಪಾದಿಸಿ ಪೋಷಿಸಲ್ಪಟ್ಟರೆಂದು ಪ್ರಚಾರಪಡಿಸಿಕೊಂಡು ಪ್ರಜೆಗಳನ್ನು ನಂಬಿಸಿ ತಮ್ಮ ಪ್ರಭುತ್ವವನ್ನು ಮಾನ್ಯ ಮಾಡುವಂತೆ ರೂಪಿಸಿದ ತಂತ್ರದೋಪಾದಿಯಲ್ಲಿಯೇ ಜೈನಮುನಿಗಳಾದ ಸುದತ್ತಾಚಾರ್ಯರ ಆದೇಶದ ಮೇರೆಗೆ ಹುಲಿಕೊಂದ ಬಾಲಕ ಸಳ ಹೊಯ್ಸಳ ಸಾಮ್ರಾಜ್ಯ ಸ್ಥಾಪಿಸಿದನೆಂಬ ಸ್ವಹಿತ ಕಲ್ಪಿತ ಅತಿಮಾನುಷ ಪೌರುಷದ ಶಾಸನದ ಪ್ರಚಾರವನ್ನೇ ಸತ್ಯವೆಂದು ನಂಬಿದ ಚರಿತ್ರಾಕಾರರು ಇತಿಹಾಸದ ಪುಟಗಳಲ್ಲಿ ದಾಖಲಿಸಿದ್ದಾರೆ.

ವಾಸ್ತವವಾಗಿ ಒಂದು ಹುಲಿಯ ಸಾಮರ್ಥ್ಯವನ್ನು ವೈಜ್ಞಾನಿಕವಾಗಿ ವಿಮರ್ಶಿಸಿದರೆ ಅದರ ಒಂದು ಪಂಜಿನ ಹೊಡೆತ ಒಂದರಿಂದ ಒಂದುವರೆ ಸಾವಿರ ಕೆ.ಜಿ ತೂಕ ಅಂದರೆ ಒಂದರಿಂದ ಒಂದುವರೆ ಟನ್ ಆದರೆ ಒಬ್ಬ ಬಲಿಷ್ಠ ಮಾನವನ ಹೊಡೆದ ಸುಮಾರಾಗಿ ಮೂವತ್ತರಿಂದ ನಲವತ್ತು ಕೆ.ಜಿ. ತೂಕ ಇನ್ನು ಬಾಲಕನ ಹೊಡೆತದ ತೂಕವನ್ನು ನಿಮ್ಮ ವಿಮರ್ಶೆಗೆ ಬಿಟ್ಟಿದ್ದೇನೆ.

ಹಾಗೆಯೇ ಹುಲಿ ತನ್ನ ಬೇಟೆ ಅಥವಾ ವೈರಿಯ ಮೇಲೆ ಸುಮಾರು ೩೦ರಿಂದ ೪೦ ಅಡಿಗಳ ಅಂತರದಿಂದ ಶರವೇಗದಲ್ಲಿ ಮಿಂಚಿನಂತೆ ಹಾರಿ ಬಲಿ ತೆಗೆದುಕೊಳ್ಳುವ ಸಾಮರ್ಥವಿರುವ ಬಲಿಷ್ಠ ವ್ಯಾಘ್ರ ಅದು. ಈ ವ್ಯಾಘ್ರನನ್ನು ಆಧುನಿಕ ಕಾಲದ ಬಂದೂಕುಗಳಿಂದಲೂ ಸಹ ಅದರ ಕುತ್ತಿಗೆ ಅಥವಾ ತಲೆಯ ಭಾಗಕ್ಕೆ ಗುರಿ ಇಟ್ಟು ಗುಂಡಿಕ್ಕಿದರೆ ಮಾತ್ರ ನಿಂತಲ್ಲೇ ಉರುಳಿಸಲು ಸಾಧ್ಯ. (ಇದುಪುಲಿ ಬೇಟೆಕಾರರಿಗೆ ಮಾತ್ರ ಗೊತ್ತು) ಅಲ್ಲದೇ ಅಪ್ಪಿತಪ್ಪಿ ಅದರ ಶರೀರದ ಬೇರೆ ಯಾವುದೇ ಭಾಗಕ್ಕೆ ಗುಂಡು ತಗುಲಿದರೆ ಆಗ ಅದರ ದೃಷ್ಟಿಗೆ ಗೋಚರಿಸಿದ ವೈರಿಯನ್ನು ಕ್ಷಣಾರ್ಧದಲ್ಲಿ ಬಲಿ ತೆಗೆದುಕೊಳ್ಳದೇ ಬಿಡದ ವ್ಯಾಘ್ರನವನು.

ಇಂತಹ ಬಲಿಷ್ಠ ಪ್ರಕೃತಿ ಸೃಷ್ಟಿಯನ್ನು ಯಾವುದೇ ಮಾನವ ವ್ಯಕ್ತಿಯು ಖಡ್ಗದಿಂದಲೋ, ಸಲಾಕೆಯಿಂದಲೋ ನೇರವಾಗಿ ಮುಖಾಮುಖಿ ಹೋರಾಡಿ ಕೊಂದನೆನ್ನುವ ವಿಷಯ ಶುದ್ಧ ಬಾಲಿಶತನದ್ದು.

ಇಂತಹ ಕಾಲ್ಪನಿಕ ಸನ್ನಿವೇಶಗಳು ಹಾಗೂ ಅತಿಮಾನುಷ ಘಟನೆಗಳು ಎಂದೂ ಚರಿತ್ರೆಗಳಿಗೆ ಆಕಾರವಾಗ ಲಾರವು ಹಾಗೂ ಚರಿತ್ರೆ ಎಂದು ಪ್ರತಿಪಾದಿಸುವ ಯಾವುದೇ ವಿಷಯಗಳಿಗೆ ಅತಿಮಾನುಷ ಘಟನೆಗಳು ಎಂದೆಂದಿಗೂ ಆಕಾರವೆಂದು ಪರಿಗ್ರಹಿಸಲು ಸಾಧ್ಯವೇ ಇಲ್ಲ. ಇಲ್ಲಿ ಕಾರ್ಯ, ಕಾರಣಭಾವ, ಕಾಲೌಚಿತ್ಯ, ದೇಶೌಚಿತ್ಯ, ವಿಕಾಸವಾದ ಹಾಗೂ ಆಯಾಯ ಭೌಗೋಳಿಕ ಪರಿಸರ ಮೊದಲಾದ ನಿಯಮ ಗಳನ್ನು ಗಮನದಲ್ಲಿರಿಸಿಕೊಂಡು ನಿರ್ಧರಿಸಬೇಕು ಎಂಬುದನ್ನು ಹಿರಿಯ ಜ್ಞಾನಿಗಳು ಇತಿಹಾಸ ಸಂಶೋಧಕರಿಗೆ ಹಾಕಿಕೊಟ್ಟ ಸಂಶೋಧನಾ ಸೂತ್ರ. ಸಂಶೋಧಕ ಬರಹಗಾರರು ಸ್ವಯಂ ಅನುಸರಿಸಬೇಕಾದ ಆಕಾರ ಸೂತ್ರಗಳಿವು.

**ಶಶಕರಪುರದ ವಾಸಂತಿಕಾ ದೇವಿ? ಈ ಹಿಂದಿನ ಹಾಗೂ ಇಂದಿನ ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಜಿನದೇವತೆಯೇ?**

ವಾಸಂತಿಕಾ ದೇವಾಲಯದ ಪ್ರಧಾನ ದೇವಿ ವಾಸಂತಿಕಾ ಬಿಂಬವು ಚತುರ್ಭುಜದಿಂದ ಭೂಷಿತಳಾಗಿ ತನ್ನೆರಡು ಮುಂಗೈಗಳನ್ನು ತನ್ನ ತೊಡೆಯ ಮೇಲೆ ಭೂಷಿತವಾದ ನಾಗಗಳ ಹೆಡೆಯ ಮೇಲಿರಿಸಕೊಂಡು ಬಲಭುಜದ ಮುಂಗೈಯಲ್ಲಿ ಖಡ್ಗ, ಹಿಂಗೈಯಲ್ಲಿ ಚಕ್ರ, ಎಡಭುಜದ ಮುಂಗೈಯಲ್ಲಿ ಕಪಾಲ ಪಾತ್ರೆ (ಪಾನಬಟ್ಟಲು) ಯನ್ನು ಹಿಂಗೈಯಲ್ಲಿ ಶಂಖವನ್ನು ಹಿಡಿದುಕೊಂಡು ತನ್ನ ದೇವಿ ಬಳಗದ ಸಹಿತ ರುಂಡಾಸನದ ಮೇಲೆ ಆಸನಾ ರೂಢಳಾದ ಪ್ರತಿಮಾ ಲಕ್ಷಣಗಳುಳ್ಳ ಜಿನ ಯಕ್ಷಿಯರು, ಜಿನರಾದನಾ ಲೋಕದಲ್ಲಿಯೇ ಇಲ್ಲದಿದ್ದರೂ ಸಹ ಹಿಂದಿನ ಕೆಲವು ವಿದ್ವಾಂಸರುಗಳು ಇವಳನ್ನು ಜಿನ ಯಕ್ಷಿಯಾದ ಪದ್ಮಾವತಿ ಎಂದು ಬಿಂಬಿಸಿರುವುದು "ವಿದ್ವಾಂಸೋಪಿ ವಿಮುಹ್ಯಂತಿಃ" ಎಂಬ ಮಹಾ ಕವಿಕಾಳಿದಾಸನ ಕಾವ್ಯವನ್ನು ನೆನೆಯುವಂತಾಗಿದೆ.

ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಶ್ರೀ ಕ್ಷೇತ್ರ ಶ್ರವಣ ಬೆಳಗೊಳರವರ ನೇತೃತ್ವದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಇತಿಹಾಸ ವಿಭಾಗದ ಮುಖ್ಯಸ್ಥರಾದ ಡಾ. ವೈ. ಮಂಜುನಾಥ ಶಣೈ ಮತ್ತು ಅದೇ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾಗಿರುವ ಬಿ. ಪ್ರಮೋದ್‌ಕುಮಾರ್‌ರವರ ಮಾರ್ಗದರ್ಶನದಲ್ಲಿ ಶಶಕಪುರದಲ್ಲಿ ಕೆಲವೇ ಗಂಟೆಗಳು ನಡೆಸಿದ ಸಂಶೋಧನಾ ತಿರುಳನ್ನು ಹೊಯ್ಸಳ ರಾಜವಂಶದ ಉಗಮಸ್ಥಾನ ಶಶಕಪುರದ ಒಂದು ಅಧ್ಯಯನ. ಎಂಬ ಗ್ರಂಥ ರಚಿಸಿ ಬಿಡುಗಡೆ ಮಾಡಿದ್ದಾರೆ.

ಈ ಗ್ರಂಥದ ೯ನೇ ಪುಟದಲ್ಲಿ ಹೊಯ್ಸಳ ಲಾಂಚನದಲ್ಲಿ ಒಂದು ಸೂಚನಾರ್ಥ ಅಡಗಿದೆ ಇತ್ಯಾದಿ ಹೇಳುತ್ತಾ ಒಂದೊಂದು ರಾಜವಂಶಕ್ಕೂ ಒಂದೊಂದು ಲಾಂಚನ ಇರುವಂತೆ ಹುಲಿ ಚೋಳರನ್ನು ಪ್ರತಿನಿಧಿಸುತ್ತದೆ. ಅಗಷ್ಟೇ ಪತನಗೊಂಡ ಗಂಗವಾಡಿಯ ಜೈನ ಸಂಸ್ಕೃತಿಯ ಪುನಶ್ಚೇತನ ಪ್ರತೀಕವೇ ಸಳನೆಂಬ ಬಾಲಕ, ಪ್ರೇರಕರೇ ಜೈನ ಮುನಿಗಳಾದ ಸುತ್ತಾಚಾರ್ಯರು. ಪ್ರೇರಕಶಕ್ತಿಯಾದ ಜಿನ ದೇವತೆಯೇ ಶಶಕಪುರದ ವಾಸಂತಿಕಾ ಎಂಬ ಜೀನ ದೇವತೆ ಎಂದು ಪ್ರತಿಬಿಂಬಿಸಿದ್ದಾರೆ. ಹಾಗೆಯೇ ಇದು ರಾಜಲಾಂಚನದ ಪ್ರತೀಕವಷ್ಟೇ ಎಂಬ ಸತ್ಯವನ್ನು ಒಪ್ಪಿಕೊಳ್ಳುತ್ತಾ ಅದೇ ಗ್ರಂಥದಲ್ಲಿಯೇ ಜಿನದೇವತೆ ಎಂದು ದೃಢೀಕರಿಸುತ್ತ ಸಳನೆಂಬ ಜೈನ ಹುಡುಗನೊಬ್ಬ ತನ್ನ ಗುರು (ಜಿನಯತಿ) ಸುದತ್ತಾಚಾರ್ಯರ ಜೊತೆಯಲ್ಲಿ ತನ್ನ ಕುಲದೇವತೆಯಾದ ಶ್ರೀ ವಾಸಂತಿಕಾದೇವಿಯ ಮಂದಿರಕ್ಕೆ ಬರುತ್ತಿದ್ದಾಗ ಕ್ರೂರವಾದ ಹುಲಿ ಎದುರಿಗೆ ಬಂದು ಮೇಲೆರಗಲು ಪ್ರಯತ್ನಿಸಿತು. ಆಗ ಸುದತ್ತಾಚಾರ್ಯರರು ಅಲ್ಲಿಯೇ ಇದ್ದ ಸಲಾಕೆಯನ್ನು ಸಳನ ಕೈಗಿತ್ತು ಹೊಯ್ಸಳ ಎಂದು ಆದೇಶಿಸಿದರು. ಸಳ ಹುಲಿಯನ್ನು ಕೊಂದ ಇತ್ಯಾದಿ...ಇತ್ಯಾದಿ...ವಿಪರ್ಯಾಸವನ್ನು ದಾಖಲಿಸುತ್ತಾರೆ.

ಡಾ. ಡಿ.ಎಸ್. ಜಯಪ್ಪಗೌಡ್ರು ಕರ್ನಾಟಕ ವಿಶ್ವಕೋಶ ಯೋಜನೆ ಕು.ವೆಂ.ಪು. ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರುರವರ ಇತ್ತೀಚಿನ ಕೃತಿಯಾದ ಹೇಮಾವತಿಯ ಉಗಮದ ಪರಿಸರ ಮತ್ತು ಸಂಸ್ಕೃತಿ ಎಂಬ ಗ್ರಂಥದ ಪುಟ ೩೧೭ರಲ್ಲಿ ಚತುರ್ಭುಜಳಾದ ಈ ವಾಸಂತಿಕಾ ದೇವಿ ಕೈಗಳಲ್ಲಿ ತ್ರಿಶೂಲ, ಡಮರುಗ, ಕತ್ತಿ ಮತ್ತು ಕುಂಡಲಗಳನ್ನು ಧಾರಣೆ ಮಾಡಿದ ವಾಸಂತಿಕಾದ ಪರಮೇಶ್ವರಿಯಾಗಿದ್ದು ಸಪ್ತ ಮಾತೃಕೆಯರಲ್ಲಿ ಪ್ರಧಾನ ದೇವತೆ ವರ್ಣಿಸಿದ್ದಾರೆ. ಕಣ್ಣಳತೆಗೆ ಕಾಣಸಿಗುವ ರೂಪಾಕಾರವು ಧಾರಣೆ ಮಾಡಿಕೊಂಡಿರುವ ಆಯುಧಗಳನ್ನು ಸಹಿತ ತಪ್ಪು ತಪ್ಪಾಗಿ ದಾಖಲಿಸಿದ್ದಾರೆ.

ಹಾಗೆಯೇ ಇದೆ ಹೇಮಾವತಿ ಉಗಮದ ಪರಿಸರ ಮತ್ತು ಸಂಸ್ಕೃತಿ ಗ್ರಂಥದ ಮೇಲ್ಕಂಡ ಪುಟ ೩೧೭ರಲ್ಲಿಯೇ ಡಾ. ಎಂ.ಎಸ್. ಕೃಷ್ಣಮೂರ್ತಿ (ಮಾನಸ ಗಂಗೋತ್ರಿ, ಮೈಸೂರು) ಯವರು ವಾಸಂತಿಕಾಳನ್ನು ವೈಷ್ಣವಿ ಎಂದು ಇವಳ ಚತುರ್ಭಾಹುಗಳಲ್ಲಿ ಶಂಕ, ಚಕ್ರ, ಖಡ್ಗ ಮತ್ತು ಕಾಪಾಲ ಪಾತ್ರೆಯನ್ನು ಧಾರಣೆ ಮಾಡಿದ್ದಾಳೆ ಹಾಗೂ ಇವಳ ದೇಗುಲದ ಗರ್ಭಗೃಹದಲ್ಲಿ ಬ್ರಹದಾಕಾರದ ಗಾರೆಗಚ್ಚಿನ ಶಿಲ್ಪ ಸಂಗ್ರಹ ಇದೆ ಇವು ಸಪ್ತಮಾತೃಕೆಯರ ಶಿಲ್ಪಗಳು ಎಂದು ವರ್ಣಿಸಿ ಇವರೀರ್ವರು ವೈದಿಕ ಸಂಪ್ರದಾಯದ ದೇವತೆಗಳೆಂದು ಪ್ರತಿಬಿಂಬಿಸಿದ್ದಾರೆ. ಆದರೆ ಒಂದೇ ಕೃತಿಯ ಒಂದೇ ಪುಟದ ಅಕ್ಕಪಕ್ಕದ ಸಾಲುಗಳಲ್ಲಿ ಸಮಾನ ವಿದ್ವಾಂಸರುಗಳ ದ್ವಂದರೀತಿಯಲ್ಲಿ ದೇವಿಯನ್ನು ಪ್ರತಿಪಾದನೆ ಮಾಡಿರುವುದಲ್ಲದೆ ದೇವಿಯ ಕರಗಳಲ್ಲಿನ ಧಾರಣೆಗಳನ್ನು ಸಹ ದ್ವಂದರೀತಿಯಲ್ಲಿ ಪ್ರತಿಪಾದಿಸಿರುವುದು.

ವಿಮರ್ಷಕ ಶೋತೃಗಳಿಗೆ ಇವರುಗಳ ಸಂಶೋಧನಾ ಲೇಖನದ ಬಗ್ಗೆ ಪ್ರಬಲವಾದ ಸಂಶಯಕ್ಕೆ ಎಡೆಮಾಡಿ ಕೊಡುವುದಲ್ಲದೆ ವೈದಿಕ ಪರಂಪರೆಯ ದುರ್ಗಾ ಸಹಸ್ರನಾಮದಲ್ಲಾಗಲೀ, ಲಕ್ಷ್ಮಿ ಸಹಸ್ರನಾಮದಲ್ಲಾಗಲೀ, ಚಂಡಿಕಾಸ್ತೋತ್ರದಲ್ಲಾಗಲೀ, ಲಲಿತಾ ಸಹಸ್ರನಾಮದಲ್ಲಾಗಲೀ ಹಾಗೂ ಸಪ್ತಮಾತೃಕಾ ನಾಮಾವಳಿಗಳಾದ ಬ್ರಾಹ್ಮಿ, ಮಹೇಶ್ವರಿ,

ಕೌಮಾರಿ, ವೈಷ್ಣವಿ, ವಾರಾಹಿ, ಚಾಮುಡಾ ಎಂಬ ಸಪ್ತ ಮಾತೃಕೆಯರ ಪಟ್ಟಿಯಲ್ಲಿ ವಾಸಂತಿಕಾ ಹೆಸರು ಗೋಚರಿಸುವುದಿಲ್ಲ.

೧. ಬ್ರಾಹ್ಮಿ ದೇವಿಯು ಹಂಸಾರೂಢಳಾಗಿಯೂ
೨. ಮಹೇಶ್ವರಿ ದೇವಿಯು ವೃಶಭಾರೂಢಳಾಗಿಯೂ
೩. ಕೌಮಾರಿ ದೇವಿಯು ಮಯೂರಾರೂಢಳಾಗಿಯೂ
೪. ವೈಷ್ಣವಿ ದೇವಿಯ ಗರುಢಾರೂಢಳಾಗಿಯೂ
೫. ವಾರಾಹಿ ದೇವಿಯ ಮಹಿಶಾರಾರೂಢಳಾಗಿಯೂ
೬. ಐಂದ್ರಾಣಿ ದೇವಿಯು ಗಜಾರೂಢಳಾಗಿಯೂ
೭. ಚಾಮುಂಡಾದೇವಿಯು ವ್ಯಾಘ್ರರೂಢಳಾಗಿಯೂ ಇರುವುದನ್ನು ಸಪ್ತಮಾತೃಕಾ ಕವಚ ಸ್ತುತಿಯಲ್ಲಿ ತಿಳಿಸುತ್ತದೆ.

ಆದರೆ ವಾಸಂತಿಕಾ ದೇವಾಲಯದಲ್ಲಿ ರುಂಢಪೀಠಸನಾರಾಣಿಯರಾದ ಪಂಚ ದೇವತಾ ಮೂರ್ತಿಗಳು ಮಾತ್ರಾ ಕಾಣಸಿಗುತ್ತವೆ.

ಹಿಂದಿನ ಇತಿಹಾಸ ಸಂಶೋಧಕರ ಬರಹದಿಂದ ನೂರಿನ್ನೂರು ವರ್ಷಗಳು ಜನತೆಗೆ ತಪ್ಪು ಮಾಹಿತಿ ಒದಿಗಿಸಿದ್ದಾಗಿದೆ. ಇನ್ನು ಮುಂದೆಯೂ ಇದೇ ತಪ್ಪು ಮಾಹಿತಿಯನ್ನು ಮುಗ್ಧ ನಾಗರೀಕರಿಗೆ ಇತ್ತೀಚಿನ ಸಂಶೋಧಕರು ಸಹ ಉಣಬಡಿಸುವುದು ಎಷ್ಟು ಮಾತ್ರಕ್ಕೂ ಸಮಂಜಸವಾಗಿ ಕಾಣುವುದಿಲ್ಲ.

ಅತಿ ಸೂಕ್ಷ್ಮ ಅಧ್ಯಯನಕ್ಕೆಲ್ಲಾ ಒತ್ತು ಕೊಡುತ್ತಿರುವ ಇಂದಿನ ಶೈಕ್ಷಣಿಕ ಸಂದರ್ಭದಲ್ಲಿ ಆಯಾಯ ಪ್ರಾದೇಶಿಕ ಅಧ್ಯಯನವು ಸಾಕಷ್ಟು ಮಹತ್ವವನ್ನು ಪಡೆದಿದೆ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಸುತ್ತಲಿನ ಭೌಗೋಳಿಕ ಹಾಗೂ ಹಿಂದಿನ ರಾಜಕೀಯ ಪರಿಸರದ ಕನಿಷ್ಟ ಜ್ಞಾನವಾದರೂ ಇರುವುದು ಅತ್ಯಗತ್ಯ. ಇದಕ್ಕೂ ಮಿಗಿಲಾಗಿ ಪ್ರತಿಯೊಬ್ಬ ನಾಗರೀಕ ಪ್ರಜೆಯ ಐತಿಹಾಸಿಕ ಗ್ರಹಿಕೆಗಳು ಸುಳ್ಳುಗಳ ಸಮ್ಮಿಶ್ರಣವಾಗಿರದೇ ಸತ್ಯದ ನೆಲೆಯಲ್ಲಿ ಇರಬೇಕಾದುದು ಕೂಡಾ ಅತ್ಯಾವಶ್ಯಕ.

**ಹಾಗಾದರೆ ಶಶಕಪುರದ ವಾಸಂತಿಕಾದೇವಿ ಯಾವ ಸಂಪ್ರದಾಯದ ಆರಾಧ್ಯ ದೇವತೆ?**

ತ್ರಯಂಬಕಾದ್ರಿ, ಕೊಡಚಾದ್ರಿ, ಸಹ್ಯಾದ್ರಿ, ಶಿಶಿಲಾದ್ರಿ, ಕುಮಾರಾದ್ರಿ, ವಯ್ಯನಾದ್ರಿ, ನೀಲಾದ್ರಿ ಮತ್ತು ಸುವೇಲಾದ್ರಿ ಪರ್ವತಸಾಲಿನಿಂದ ಆವೃತ್ತವಾದ ಮಲೆಯಾದ್ರಿ ಘಟ್ಟಶ್ರೇಣಿಯನ್ನು ಬ್ರಿಟಿಷ್ ಕಾಲಾವಧಿಯಲ್ಲಿ ಅಂದರೆ ೧೮೮೬ನೇ ಇಸವಿಯಲ್ಲಿ ನಡೆದ ಭೂಮಾಪನಾ ಯೋಜಣೆಯ ಕಾಲಾವಧಿಯಲ್ಲಿ (Western ghat) ಪಶ್ಚಿಮಘಟ್ಟ ಶ್ರೇಣಿ ಎಂದು ಹೆಸರಿಸಿದು. (ಯಾರೂ ಇಲ್ಲಿಯವರೆಗೆ ದಾಖಲಿಸದ ಮಲೆಯಾದ್ರಿ ಘಟಶ್ರೇಣಿಯ ನಾಮಾವಳಿಗಳನ್ನು ಪ್ರಪ್ರಥಮವಾಗಿ ಸಂಗ್ರಹಿಸಿ ದಾಖಲಿಸಿದ್ದೇನೆ).

ಈ ಜಗತ್ಪ್ರಸಿದ್ಧನಾ ಮಲೆಯಾದ್ರಿ ಘಟ್ಟಶ್ರೇಣಿಯಲ್ಲಿರುವ ಶಿಶಿಲಾದ್ರಿ ಮತ್ತು ಕುಮಾರಾದ್ರಿ ಪರ್ವತ ಸಾಲಿನ ಮೂಡುದಿಕ್ಕಿನ ಮಲೆನಾಡ ಮಡಿಲು ತಪ್ಪಲಿನ ಘಟ್ಟಸೀಮೆಯಲ್ಲಿನ ಗಿರಿ, ತೊರೆ, ನದಿಗಳ ಹರಿವಿನಲ್ಲೆಲ್ಲಾ ಹುದುಗಿಕೊಂಡಿರುವ ನಾಥ ಸಂಪ್ರದಾಯದ ಶಾಕ್ತ ಪರಂಪರೆಯನುಯಾಯಿಗಳಾದ ಜೋಗಿ, ಕುಂಬಾರ, ದಲಿತ, ವಕ್ಕಲಿಗ, ಬಡಗಿ, ಕ್ಷೌರಿಕ, ಮಡಿವಾಳರಿಂದಾದಿಯಾಗಿ ಗ್ರಾಮೀಣ ಜಗತ್ತಿನ ಜೀವನಾಡಿಗಳೆಲ್ಲರೂ ಒಟ್ಟಿಗೆ ಸೇರಿ ಒಪ್ಪಂದ ಮಾಡಿಕೊಂಡಂತೆ ಪುರಾತನ ಕಾಲದಿಂದಲೂ ಕ್ರಮಬದ್ಧ ಶಾಕ್ತ ಸಿದ್ಧಾಂತದ ವಿಧಿವಿಧಾನಗಳಿಂದ ಪ್ರತಿ ವರ್ಷವೂ ವಸಂತಋತುವಿನ ಆಗಮನದ ಆನಂದದಿಂದ ಪುಳಕಿತವಾದ ಪ್ರಕೃತಿಯ ಸೊಬಗಿನ ಸುಗ್ಗಿಯನ್ನು ಸಾಮೂಹಿಕ ಸುಗ್ಗಿಹಬ್ಬವಾಗಿ ಆಚರಿಸಲು ಅನುಕೂಲವಾಗಲೆಂದು ಪುರಾತನ ಕಾಲದಲ್ಲಿಯೇ ಸುತ್ತಲಿನ ಹಲವಾರು ಗ್ರಾಮಗಳು ಸೇರಿದಂತಹ ಮಲಿವಿನ್‌ನಾಡ್, ಮುಖ್ಖಿನಾಡ್, ಕತ್ತಲ್‌ನಾಡ್, ಕಿತ್ತಲನ್‌ನಾಡ್, ಕಡಗಿನ್‌ನಾಡ್, ಬಿದರ್‌ನಾಡ್, ಮೇಲ್ಪಾಲ್‌ನಾಡ್ ಇನ್ನು ಮುಂತಾದ ಮುಂತಾದ.... ನಾಡುಗಳೆಂಬ ಪ್ರಾಂತಗಳನ್ನು ವ್ಯವಸ್ಥಿತವಾಗಿ ವಿಭಾಗಿಸಿಕೊಂಡಿದ್ದಾರೆ.

ಹೀಗೆಯೇ ಪ್ರತಿಯೊಂದು ನಾಡಿಗೂ ಅದರದೇ ಆದ ಸಂಖ್ಯಾ ವ್ಯಾಪ್ತಿಯ ಸಾವಿರಸೀಮೆ (ಹಬ್ಬಸಾರು ಸೀಮೆ) ಗಳಿವೆ. ಈ ಸಾವಿರ ಎಂಬ ಹಬ್ಬಸಾರ ಸೀಮೆಗೆ ಆದರದೇ ಆದ ಗ್ರಾಮಗಳ ಸಂಖ್ಯಾವ್ಯಾಪ್ತಿ ಇದೆ. ಈ ಹಬ್ಬಸಾರ ಸೀಮಾ ಪ್ರಾಂತ್ಯದ ಎಲ್ಲೆಗಳನ್ನೇ ಈ ಹಿಂದೆ ನಾಡನ್ನಾಳಿದ ಗಂಗಕದಂಬರಾದಿ ಹೊಯ್ಸಳ ಮಹಾರಾಜರುಗಳು ತಮ್ಮ ಆದಿಪತ್ಯದ ಪ್ರಾಂತ್ಯಗಳನ್ನು ಗುರುತಿಸಲು ಇಟ್ಟುಕೊಂಡ ಸೂಚ್ಯಾಂಕಗಳು ಈ ವಾಸಂತಿಕಾದೇವಿ ಸಾನಿಧ್ಯವಿರುವ ಮಲವಿನ್ನಾಡ್ ಐದು ಸಾವಿರ ಸೀಮೆಯ ಗಂಗವಾಡಿಯ ೯೬ ಸಾವಿರ ಸೀಮಾವ್ಯಾಪ್ತಿಯಲ್ಲಿಯೇ ಸೇರಿದೆ.

ಈ ಮಲವಿನ್ನಾಡ್ ಎಂಬ ಪ್ರಾಂತ್ಯಕ್ಕೆ ಸೇರಿದ ಐದು ಸಾವಿರ ಸೀಮೆಗಳಾವುವು ಎಂದರೆ ೧. ಉಗ್ಗೇಹಳ್ಳಿ ಸಾವಿರ, ೨. ಕೆಸವಳಲು ಸಾವಿರ, ೩. ಊರುಬಗೆ ಸಾವಿರ, ೪. ಗೆರೂರು ಸಾವಿರ, ೫. ಜಂಬರಡಿ ಸಾವಿರ ಹೀಗೆ ಐದು ಸಾವಿರ ಸೀಮಾವ್ಯಾಪ್ತಿಗೆ (ಐದು ಹಬ್ಬಸಾರ ಸೀಮೆಗೆ) ಸೇರಿದ ಸುಮಾರು ೬೩ ಗ್ರಾಮಗಳಿವೆ.

ಈ ಗ್ರಾಮದ ಗ್ರಾಮಸ್ಥರುಗಳು ಆಯಾಯ ಗ್ರಾಮದ ಗ್ರಾಮ ಪಟೇಲರ ಸಮ್ಮುಖದಲ್ಲಿ ಆಯಾಯ ಹಬ್ಬಸಾರ ಸೀಮೆಯ ಮಂದಿಪಟೇಲರನ್ನು ಮುಂದಿಟ್ಟುಕೊಂಡು ಛತ್ರಚಾಮರ, ಹಗಲುದೀವಿಗೆಯೊಂದಿಗೆ ರಾಜಯ ಮರ್ಯಾದೆಯಿಂದ ನಿಯಮಿತ ವೇಳೆಯಲ್ಲಿ ಅನುಶಾಸನ ಬದ್ಧರಾಗಿ ಆಯಾಯ ಸಾವಿರ ಸೀಮೆಯವರುಗಳು (ಹಬ್ಬಸಾರ ಸೀಮೆಯವರು) ಬೇರೆ ಬೇರೆಯಾಗಿ ದೇವವೃಂದ ಗ್ರಾಮಕ್ಕೆ ಮಲವಿನ್ನಾಡ್ ಪ್ರಾಂತ್ಯದ ಐದುಸಾವಿರ ಸೀಮೆಗೆ ಸೇರಿದ ೬೩ ಗ್ರಾಮದವರೆಲ್ಲಾ ಬಂದು ಸೇರಿ ದೇವವೃಂದದ ರಾಮನಾಥೇಶ್ವರ ದೇವರನ್ನು ಹೊತ್ತ ರಥದ ಗಾಲಿಯನ್ನೆಳೆದು ರಥೋತ್ಸವದಲ್ಲಿ ಬಾಗಿಯಾಗಿ ತಲೆತಲಾಂತರದಿಂದ ನಡೆಸಿಕೊಂಡು ಬಂದ ವಸಂತ ಸುಗ್ಗಿ ಉತ್ಸವವನ್ನು ಪ್ರತಿ ಗ್ರಾಮದಲ್ಲೂ ಆಚರಿಸುವ ಸಂಕಲ್ಪ ತೊಟ್ಟು ತೆರಳುತ್ತಾರೆ.

ಆಯಾಯ ನಾಡಿನ ನಾಡಪಟೇಲರು, ಕುಲಮತೇಶ್ವರ ಪಟೇಲರುಗಳು, ಮಂದಿ ಪಟೇಲರುಗಳು, ಗ್ರಾಮ ಪಟೇಲರು ಗಳು ಮತ್ತು ಕುಳವಾಡಿಗಳು, ದಾಸಪ್ಪ, ಜೋಗಪ್ಪ, (ಜಕ್ಕಿಮಗ) ಮುಂತಾದ ನಾಡ ಪ್ರಮುಖರೆಲ್ಲರ ಮುಂದಾಳತ್ವದಲ್ಲಿ ಇಂತಹ ಕೆಲಸ ಕಾರ್ಯಗಳನ್ನು ಇಂತಹ ಗ್ರಾಮದ ಇಂತಹ ಕುಟುಂಬದವರೇ ಅನುಚ್ಚಾನವಾಗಿ ಈ ಸುಗ್ಗಿಹಬ್ಬದ ನಿಯಮಿತ ಕಾರ್ಯವನ್ನು ನೆರವೇರಿಸಿ ಕೊಡಬೇಕೆಂಬ ಕಟ್ಟುನಿಟ್ಟಿನ ಪುರಾತನ ನಿಯಮಬದ್ಧ ಗ್ರಾಮದ ನಿಬಂದನೆಯ ಮೇರೆಗೆ ಹೋಮ, ಹವನ, ಮಂತ್ರಘೋಷದ ವುಚ್ಚಾರವಿಲ್ಲದ ವೇದಾಗಮ ಶಾಸ್ತ್ರದ ವೈದಿಕ ನಿಬಂದನೆಗೊಳಪಡದ ನಾಥ ಸಂಪ್ರದಾಯದ ಕಾಳಮುಖ ಪರಂಪರೆಯ ಶಾಕ್ತ ಸಿದ್ಧಾಂತದ ನಿಯಮಾನುಸಾರ ಅದಿಯಿಂದ ನಡೆಸಿಕೊಂಡು ಬಂದಿರುವ ನಿಯಮಬದ್ಧ ಆಚರಣಾ ಹಬ್ಬಕಟ್ಟಳೆಯನ್ನು ಸುಸೂತ್ರವಾಗಿ ನಡೆಸಲು ತೀರ್ಮಾನಿಸಿ ಹಬ್ಬದಲ್ಲಿ ಆಚರಿಸಬೇಕಾದ ನಡಾವಳಿಗಳನ್ನು ಮಲವಿನ್ನಾಡ್ ಪ್ರಾತಂತ್ಯದ ೫ ಸಾವಿರ ಸೀಮೆಗೆ ಸೇರಿದ ೬೩ ಗ್ರಾಮಗಳಲ್ಲೆಲ್ಲಾ ಸಾರು ಕುಳುವಾಡಿ ಗಳು, ದಾಸಪ್ಪ, ಜೋಗಪ, ಜಕ್ಕಿಮಗರವರಿಗೆ ಜವಾಬ್ದಾರಿ ವಹಿಸುತ್ತಾರೆ.

ಆಯಾಯ ನಾಡಪಟೇಲರ ಆಡಳಿತಕ್ಕೆ ಸಂಬಂಧಪಟ್ಟ ಸಾವಿರ ಸೀಮಾವ್ಯಾಪ್ತಿಯ ಗ್ರಾಮಗಳಲ್ಲಿ ವಸಂತ ಋತುವಿನಾದ್ಯಂತ ಸುಗ್ಗಿಹಬ್ಬದ ನಡಾವಳಿಗಳನ್ನು ಸಾರಿ ಹೇಳುವುದನ್ನು ಆಡುಭಾಷೆಯಲ್ಲಿ ಹಬ್ಬಸಾರ್ ಎಂಬ ವಾಡಿಕೆಯ ಹೆಸರಿದೆ.

ಈ ಹಬ್ಬಸಾರ್ ನಡಾವಳಿಯ ಸೀಮಾ ಮಾನದಂಡ ವನ್ನೇ ಹಿಂದಿನ ರಾಜಮಹಾರಾಜುಗಳು ತಮ್ಮ ಅದಿಪತ್ಯದ ಪ್ರಾಂತ್ಯಗಳನ್ನು ಗುರುತಿಸಲು ಇಟ್ಟುಕೊಂಡ ಸೂಚ್ಯಾಂಕಗಳು.

ಈ ಹಬ್ಬಸಾರಿದ ನಂತರ ಮನೆಯಂಗಳದಿಂದಾದಿ ಯಾಗಿ ಹಾದಿ ಬೀದಿಯನ್ನೆಲ್ಲಾ ಗುಡಿಸಿ ಶುಭ್ರಗೊಳಿಸಿ ಸಂಭ್ರಮ ದಿಂದ ವಸಂತಸುಗ್ಗಿ ಉತ್ಸವ ಆಚರಿಸಲು ಗ್ರಾಮಸ್ಥರು ಅನುವಾಗುತ್ತಾರೆ. ಈ ಸುಗ್ಗಿ ಹಬ್ಬ ಶುರುವಾದ ನಂತರ ಮುಗಿಯುವವರೆಗೂ ಗ್ರಾಮಸ್ಥರುಗಳು ಪಟ್ಟಣಸೀಮೆಗೆ ಮತ್ತು ದೂರದೂರಿಗೆ ಹೋಗುವಂತಿಲ್ಲ. ಹೋದರೆ ಎಲ್ಲಿಯೂ ಸಹ ನೀರನ್ನು ಕುಡಿಯುವಂತಿಲ್ಲ. ಪಾದರಕ್ಷೆ ಉಪಯೋಗಿಸು ವಂತಿಲ್ಲ. ಪಟ್ಟಣ ಸೀಮೆಯಲ್ಲಿ ಒಕ್ಕಲಾದಂತ ಗ್ರಾಮಸ್ಥರುಗಳು ಸಹ ಗ್ರಾಮದಲ್ಲಿರುವ ತಮ್ಮ ಸ್ವಂತ ಕುಟುಂಬಸ್ಥರ ಮನೆಗಳಿಗೆ ಸಹ ಪ್ರವೇಶಿಸುವಂತಿಲ್ಲ. ಕುಟುಂಬದ ಸದಸ್ಯರುಗಳನ್ನು ಹಬ್ಬ ಮುಗಿಯುವವರೆಗೆ ಸ್ಪರ್ಶಿಸುವಂತೆಯೂ ಇಲ್ಲ.

ಈ ಹಬ್ಬವನ್ನು ಪುರಾತನ ಕಾದಲ್ಲಿ ವಸಂತಋತುವಿನ ಪೂರ್ಣ ಅಂದರೆ ಚೈತ್ರ-ವೈಶಾಖ ಎರಡೂ ಮಾಸಗಳ ಪರ್ಯಂತ ನಡೆಸುತ್ತಿದ್ದರಂತೆ. ಅದು ಕಾಲಾನುಕ್ರಮದಲ್ಲಿ ಒಂದು ತಿಂಗಳಿಗೆ ಸೀಮಿತವಾಗಿ ಈಗಂತೂ ಹದಿನೈದು ದಿನಗಳಿಗೆ ಸೀಮಿತವಾಗಿದೆ.

ಹಬ್ಬಸಾರ್ ಶುರುವಾದ ನಂತರ ವಾಸಂತಿಕಾ ಮತ್ತು ಪರಿವಾರ ದೇವತೆಗಳ ಪುರಾತನ ಲೋಹದ ಮುಖವಾಡಕ್ಕೆ ನಂದೀ ಎಂಬ ವಿಶಿಷ್ಟ ರೀತಿಯಲ್ಲಿ ಅಲಂಕರಿಸಿ ಈ ದೇವಿಯ ನಂದಿಯನ್ನು ಚಿತ್ರ-ಚಾಮರ, ತೋರಣ, ಹಗಲು ದೀವಿಗೆ ಸಹಿತ ರಾಜ ಮರ್ಯಾದೆಯಲ್ಲಿ ಉಗ್ಗೇಹಳ್ಳಿ ಸಾವಿರ ಸೀಮೆಗೆ ಸೇರಿದ ೧) ಅಂಗಡಿ ಗ್ರಾಮ, ೨) ಉಗ್ಗೇಹಳ್ಳಿ ಗ್ರಾಮ, ೩) ಕನ್ನೇಹಳ್ಳಿ ಗ್ರಾಮ, ೪) ಕಿರುಗುಂದ ಗ್ರಾಮ, ೫) ಹಾರಮಕ್ಕಿ ಗ್ರಾಮ, ೬) ಬೆಟ್ಟದಮನೆ ಗ್ರಾಮ, ೭) ಜಾಣಿಗೆ ಗ್ರಾಮ, ೮) ಕಜ್ಜಳ್ಳಿ ಗ್ರಾಮ, ೯) ಮನಾಲ ಗ್ರಾಮ, ೧೦) ಹಂಜಗೂಡನಹಳ್ಳಿ ಹಾಗೂ ೧೧) ಜೇನುಬೈಲು ಗ್ರಾಮ, ೧೨. ಅಣಜೂರು ಗ್ರಾಮಗಳ ನಿಯಮಿತವಾದ ಸ್ಥಳಗಳಲ್ಲಿ ವಸಂತ ಸುಗ್ಗಿ ಉತ್ಸವಕ್ಕೆ ಕಾದಿರಿಸಿರುವ ಸುಗ್ಗಿ ಮಂದ್ ಎಂಬ ಸ್ಥಳದಲ್ಲಿ ಹಣ್ಣು ವಿಳ್ಯ ಸ್ವೀಕರಿಸಿ ಸುಗ್ಗಿ ಕುಣಿತವೆಂಬ ವಿಶಿಷ್ಟ ಜನಪದ ಕುಣಿತದಿಂದ ಗ್ರಾಮದ ಜನರೊಡನೆ ಸಂಭ್ರಮಿಸಿ ಕೆಲವು ಗ್ರಾಮಗಳಲ್ಲಿ ದೀಪೋತ್ಸವ, ಕೆಂಡೋತ್ಸವ ಮುಗಿಸಿಕೊಂಡು ಮರಳಿ ದೇವಸ್ಥಾನಕ್ಕೆ ಸೇರುವುದು ದಿನದ ಆಚರಣೆ.

ನಿಯಮಿತವಾದ ದಿವಸ ಗ್ರಾಮಸ್ಥರೆಲ್ಲಾ ದೇವಿಯ ಹೆಸರಿನಲ್ಲಿ ಉಪವಾಸ ವ್ರತ ಆಚರಿಸಿ ಮನೆಯನ್ನು ಗುಡಿಸಿ, ಸಾರಿಸಿ, ಗೋಮಯ ಹಾಕಿ ಶುದ್ಧಿ ಮಾಡಿಕೊಂಡು ಮಿಂದು ಮಡಿಯುಟ್ಟು ಬಾಯಿಗೆ ತೆಳುಬಟ್ಟೆ ಕಟ್ಟಿಕೊಂಡು ಭಕ್ತಿಯಿಂದ ಅಕ್ಕಿಯನ್ನು ನೆನೆಸಿ ಕುಟ್ಟಿ ತರಿಯೋಪಾದಿಯಲ್ಲಿ ತಯಾರಿಸಿಕೊಂಡು ತುಳಸಿಹಿಟ್ಟೆಂಬ ವಿಶಿಷ್ಟ ರೀತಿಯ ಅಡಿಗೆ

ಮಾಡಿ ಪ್ರತಿಮನೆಯಲ್ಲಿ ಸುಗ್ಗಿ ದೇವತೆಗಳಿಗೆ ಅರ್ಪಿಸಿದ ನಂತರ ಉಪವಾಸದ ವ್ರತ ಮುಗಿಸುತ್ತಾರೆ. ಇದನ್ನು ಕೌತವೆಂಬ ವಿಶಿಷ್ಟ ಹೆಸರಿನಿಂದ ಈ ಸುಗ್ಗಿಹಬ್ಬದಲ್ಲಿ ಮಾತ್ರ ಹೆಸರಿಸುತ್ತಾರೆ. ಇದೇ ಮಲವಿನ್ನಾಡ್ ಸುಗ್ಗಿಹಬ್ಬ (ಈ ಪಡಾವಳಿಗಳು ನಾಡಿನಿಂದ ನಾಡಿಗೆ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ).

ಋತುಮಾನ ಪ್ರಜ್ಞಾನುಸಾರ ಪ್ರತಿ ವರ್ಷ ಆವಿರ್ಭವಿಸುವ ವಸಂತ ಋತುವಿನ ಪ್ರಕೃತಿ ಸೊಬಗನ್ನು ನಾಡಿನ ಮಣ್ಣಿನ ಮಕ್ಕಳು ನಾಡಹಬ್ಬವಾಗಿ ಆಚರಿಸುವ ನಾಥ ಸಂಪ್ರದಾಯದ ಕಾಳಮುಖ ಪರಂಪರೆಯ ಶಾಕ್ತ ಸಿದ್ಧಾಂತದ ವಾಸಂತಿಕಾ ಎಂಬ ಸುಗ್ಗಿ ಉತ್ಸವದ ಜನಪದ ನಾಡ ಋತುಮಾನ ದೇವತೆ ಇವಳು ಎಂಬುದಕ್ಕೆ ವಸಂತ ಮಾಸದ ಪರ್ಯಂತ ಆಚರಿಸುವ ವಸಂತ ಸುಗ್ಗಿ ಉತ್ಸವದ ಆಚರಣೆಯೇ ಜೀವಂತ ಸಾಕ್ಷಿ.

ಜೈನ ಮತವಳಂಬಿಗಳಾದ ಹೊಯ್ಸಳರಸರು ಈ ವಸಂತ ಸುಗ್ಗಿ ಉತ್ಸವದಲ್ಲಿ ಭಾಗಿಯಾಗಿ ಹಬ್ಬವನ್ನು ಆಚರಿಸದೇ ಇರುವುದು? ಹಾಗೂ ಅವರು ಶಶಕಪುರದಲ್ಲಿನ ವಾಸಂತಿಕಾ ದೇವಾಲಯದ ಜೀರ್ಣೋದ್ಧಾರವನ್ನು ಮಾಡದೇ ಇರುವುದು? ವಾಸಂತಿಕಾದೇವಿಯು ಹೊಯ್ಸಳರ ಕುಲದೇವರೋ? ಮನೆದೇವರೋ? ಅಥವಾ ಸಾಮ್ರಾಜ್ಯದ ಉದಯಕ್ಕೆ ಪ್ರೇರಣಾಶಕ್ತಿಯಾದ ಆರಾಧ್ಯ ದೇವತೆಯೋ? ಆಗಿದ್ದರೆ ಮೃತ್ತಿಕೆ ಅಂದರೆ ಹುತ್ತದ ಮಣ್ಣಿನಿಂದ ರೂಪಿತವಾಗಿರುವ ವಾಸಂತಿಕೆಯರ ವಿಗ್ರಹವನ್ನು ಕಲ್ಲಿನಿಂದ ಸುಂದರವಾಗಿ ರೂಪಿಸದೇ ಇರುವುದು? ಇವರುಗಳು ಅಂಗಡಿಯಿಂದ ಬೇಲೂರು, ನಂತರ ದ್ವಾರಸಮುದ್ರಕ್ಕೆ (ಹಳೇಬೀಡಿಗೆ) ರಾಜಧಾನಿಯನ್ನು ವರ್ಗಾಯಿಸಿದಾಗ ಎಲ್ಲೆಲ್ಲಾ ತಾವು ಕಟ್ಟಿಸಿದ ದೇವಾಲಯಗಳ ಸಾಲಿನಲ್ಲಿ ವಾಸಂತಿಕಾ ದೇವಿಯ ಚಿಕ್ಕ ಗುಡಿಯನ್ನಾದರೂ ಸಹ ಕಟ್ಟಿಸಿ ಆರಾಧಿಸದೆ ಇರುವುದರಿಂದ ವಾಸಂತಿಕಾ ದೇವಿಗೂ ಹಾಗೂ ಹೊಯ್ಸಳರಿಗೂ ಯಾವುದೇ ಅರ್ಥಾಥ್ ಸಂಬಂಧ ಇಲ್ಲದೇ ಇರುವುದು ಸ್ಪಷ್ಟವಗಿ ಗೋಚರಿಸುತ್ತದೆ.

ವಾಸಂತಿಕಾ ದೇವಿಯನ್ನು ಮುಂದಿಟ್ಟುಕೊಂಡು ಸಳನೆಂಬ ಬಾಲಕನನ್ನು ರೂಪಿಸಿದ ಕಥನವು ಜೈಮುನಿಗಳು ಹೇಳಿದಂತಹ ಮೊಲದ ಮರಿಯೊಂದು ಹೆಬ್ಬುಲಿಯನ್ನೇ ಬೆದರಿಸಿ ಅಟ್ಟಿಸಿಕೊಂಡು ಹೋದಂತಹ ಕಟ್ಟು ಕಥಾ ಪ್ರಸಂಗದಂತೆಯೇ ಕಾಲ್ಪನಿಕ. ರವಿ ಕಾಣದ್ದನ್ನು ಕವಿ ಕಂಡಂತ ಪ್ರಸಂಗಕ್ಕೆ ಸಮಾನ.

ಸಂಶೋಧನಾ ಹರಿವಿನಿಂದ ಹೊಳೆಯುವುದೇನೆಂದರೆ ಹೊಯ್ಸಳ ರಾಜ ವಂಶದವರು ಈ ಮಲೆಪತ್ತಿನ ನಾಡಿನ ಮಣ್ಣಿನ ಸೊಗಡಿನ ಮಕ್ಕಳೇ ಅಲ್ಲ, ಅಂದರೆ ಸ್ಥಳೀಯ ಹುಟ್ಟುಗಾರರಲ್ಲ. ಹೊಯ್ಸಳ ರಾಜ ವಂಶದವರು ಸಹ ಎಲ್ಲಿಯೂ ನಾವು ಶಶಕಪುರದ ಹುಟ್ಟುಗಾರರೆಂದೋ ಮಲೆನಾಡಿನವರೆಂದೋ ಹೇಳಿಕೊಂಡಿಲ್ಲ. ಅದಕ್ಕೆ ಬದಲಾಗಿ "ಯದುಕುಲತಿಲಕ ಅಂದರೆ ಯಾದವರು (ಯದುಕುಲದವರು) ಎಂದು ಬಹುತೇಕ ಶಾಸನಗಳಲ್ಲಿ ಉಲ್ಲೇಖಿಸಿದ್ದಾರೆ. ಹಾಗೆಯೇ ಮಲೆಪರನ್ನು ಸದೆಬಡಿದವರು ಎಂದರೆ ಆಕಾಲದಲ್ಲಿ ಮಲೆಪತ್ತಿನ ಸೀಮೆಯ ಕೊಡಗನ್ನು ಆಳುತ್ತಿದ್ದ ಕೊಂಗಾಳ್ವರನ್ನು, ಚೆಂಗಾಳ್ವರನ್ನು ಮತ್ತು ಮಂಜುರಾಬಾದ್ ಪ್ರಾಂತವೆಂಬ ಹೆಸರಿನಲ್ಲಿ ಕರೆಯಲ್ಪಡುತ್ತಿದ್ದ ಇಂದಿನ ಸಕಲೇಶಪುರವನ್ನು ಆಳುತ್ತಿದ್ದ ಮಂಜುರಾಬಾದ್ ಬೇಲೂರು ಕದಂಬರನ್ನು ಸೋಲಿಸಿ ಮಲೆಪ್ಪರನ್ನು ಸದೆಬಡಿದವರು ಗಂಡ ಮಲಪರೊಳ್ ಗಂಡ ಎಂಬ ಬಿರುದನ್ನು ಗಳಿಸಿದ್ದು ಹಲವಾರು ಶಾಸನಗಳಲ್ಲಿ ಉಲ್ಲೇಖವಿದೆ.

## ಹೊಯ್ಸಳ ಸಾಮ್ರಾಜ್ಯದ ಶಕ ಸ್ಥಾಪನಾ ರಾಜಕೀಯ ಇತಿಹಾಸ

ಒಂದು ಸಾಮ್ರಾಜ್ಯದ ಉದಯವನ್ನು ಒಂದು ನಿರ್ವಾತ ದೃಷ್ಟಿಯಿಂದಲೋ ಅಥವಾ ಪ್ರಾದೇಶಿಕ ದೃಷ್ಟಿಯಿಂದಲೋ, ಸ್ವಕಲ್ಪಿತ ಅತಿಮಾನುಷವಾದ ಕಟ್ಟುಕಥೆಗಳನ್ನು ಮುಂದಿಟ್ಟುಕೊಂಡು ಇತಿಹಾಸವನ್ನು ಎಷ್ಟು ಮಾತ್ರಕ್ಕೂ ಸಮಂಜಸವಾಗಿರಲಾರದು. ಒಂದು ನಾಡಿನ ಇತಿಹಾಸದ ಪ್ರಧಾನ ರಾಜವಂಶಗಳಿಗೆ ನೀಡಿದ ಮಹತ್ವವನ್ನೇ ಆಯಾಯ ಕಾಲದ ಸಾಮಂತ ರಾಜ ಮನೆತನಗಳಿಗೂ ಸಲ್ಲಿಸಬೇಕಾದುದ್ದು ಇತಿಹಾಸಕಾರರ ಆದ್ಯ ಕರ್ತವ್ಯವೂ ಸಮಂಜಸವೂ ಆಗಿದೆ. ಏಕೆಂದರೆ, ಎಷ್ಟೋ ಸಲ ಒಂದು ಸಾಮಂತ ಮನೆತನ ಪ್ರಧಾನ ರಾಜವಂಶವಾಗಿ ಬೆಳೆಯುವುದಕ್ಕೂ ಮತ್ತು ಒಂದು ರಾಜವಂಶ ಸಾಮಂತ ಮನೆತನವಾಗಿ ಪರಿವರ್ತನಗೊಳ್ಳುವುದಕ್ಕೆ ಕಾಲಧರ್ಮ ಆಸ್ಪದವಿತ್ತಿರುವುದನ್ನು ಇತಿಹಾಸದ ಪುಟಗಳಲ್ಲಿ ನಾವು ಕಂಡಿದ್ದೇವೆ.

ಕನ್ನಡ ನಾಡಿನ ಇತಿಹಾಸದಲ್ಲಿ ಕದಂಬರು, ರಾಷ್ಟ್ರಕೂಟರು, ಗಂಗರು, ನೊಣಂಬರು, ಚಾಳುಕ್ಯರು, ಸವಣರು, ಕೆಳದಿನಾಯಕರು, ಮೈಸೂರರಸರು ಮುಂತಾದ ಪ್ರಮುಖ ರಾಜವಂಶಗಳೆಲ್ಲಾ ಮೂಲತಃ ಸಾಮಂತ ಮನೆತನಗಳಾಗಿ ಜನ್ಮತಳೆದು ಕ್ರಮೇಣ ಬಲಯುತರಾಗಿ ಸ್ವತಂತ್ರ ಸಾರ್ವಭೌಮರಾಗಿ ಮೆರೆದವುಗಳು.

ಇ.ಸಿ. IX ಬೇಲೂರು ೫೪೦ ಎಂದು ಗುರುತಿಸಿರುವ ಬೇಲೂರು ತೊಳಲು ಗ್ರಾಮದ ಶಾಸನವು ಉಲ್ಲೇಖಿಸಿರುವ ಅಂಗೀರಸ ಸಂವತ್ಸರವು ಕ್ರಿ.ಶ. ೯೭೨ನೇ ಇಸವಿಗೆ ಸೇರಿದ್ದೆಂದು

ಪಂಡಿತರ ಅಭಿಮತ. ಈ ಶಾಸನಾಧಾರ ರೀತ್ಯಾ ಹೊಯ್ಸಳ ಮಾರಯ್ಯನು ಚಂಗಾಳ್ವರ ಅಧೀನದಲ್ಲಿ ಮಾಂಡಳಿಕನಾಗಿ ಸೊಸೆವೂರನ್ನು ಆಳುತ್ತಿದ್ದ ಈ ಆಧಾರರೀತ್ಯಾ ಹೊಯ್ಸಳರನ್ನು ಪ್ರಥಮದಲ್ಲಿ ಮಲೆಪತ್ತಿನ ಚೆಂಗಾಳ್ವರ ಸಾಮಂತರಾಗಿ ತಮ್ಮ ಅಸ್ತಿತ್ವ ರೂಪಿಸಿಕೊಂಡದ್ದಕ್ಕೆ ಶಾಸನಾಧಾರವಿದ್ದು.

ಗಂಗ ಸಾಮ್ರಾಜ್ಯದ ಪ್ರಧಾನ ಸೇನಾನಿ ಹಾಗೂ ಮಹಾ ಪ್ರಧಾನಿಯೂ ಆದಂತಹ ಚಾಮುಂಡರಾಯನ ಕಾವ್ಯದ ರಚನಾಕಾಲವು ಕ್ರಿ.ಶ. ೯೭೩ಕ್ಕಿಂತಲೂ ಹಿಂದಿನದು ಎಂಬುದು ಪಂಡಿತರ ಅಭಿಮತ. ಈ ಕಾವ್ಯದಲ್ಲಿ ಚಾಮುಂಡರಾಯ ದಂಡೆತ್ತಿಹೋಗಿ ನೃಪಕಾಮ ಹೊಯ್ಸಳನೊಡನೆ ಸೆಣಸಿದ ಪ್ರಸಂಗವಿದೆ. ಅದರಲ್ಲಿ ನೃಪಕಾಮ ಹೊಯ್ಸಳನು ಸೋತು ಶರಣಾಗಿ ಗಂಗರ ಆದಿಪತ್ಯದಡಿಯಲ್ಲಿ ಮಾಂಡಳೀಕ ನಾದುದನ್ನು ದೃಢಪಡಿಸುತ್ತದೆ.

ಎಂದು ಗುರುತಿಸಿರುವ ತೇದಿ ದಾಖಲಾಗದ ಅಂಗಡಿ ಗ್ರಾಮದಲ್ಲಿಯೇ ದೊಡ್ಡುಡುಬಿ ಎಂಬ ಸ್ಥಳದಲ್ಲಿರುವ ನಿಶದಿ ಶಿಲಾ ಶಾಸನವು ತಜ್ಞರ ಅಭಿಮತದಂತೆ ೧೧ನೇ ಶತಮಾನದಲ್ಲಿ ಗಂಗವಾಡಿಯನ್ನು ಆಳುತ್ತಿದ್ದ ನಾಲ್ಕನೇ ರಾಚಮಲ್ಲನ ಉಲ್ಲೇಖ ಇರುವಂತ ಈ ಶಾಸನದ ಇನ್ನೊಂದು ಮಗ್ಗಲು ಪೂರ್ಣ ನಶಿಸಿರುವಂತಹ ಶಾಸನವು ಈ ಮಲೆಪತ್ತಿನ ನಾಡು ಗಂಗಾವಾಡಿಯ ಅವಸಾನದ ಸನ್ನಿಹಿತದವರೆವಿಗೂ ಗಂಗರ ಅಧೀನದಲ್ಲಿನಬ ಸಾಮಂತರ ಕೋಟೆ ಆಗಿದ್ದಿತು ಎಂಬುದಕ್ಕೆ ಪುರಾವೆಯಾಗಿ ತೆಗೆದುಕೊಳ್ಳಬಹುದು.

ಈ ತಲಕಾಡ ಗಂಗ ಸಾವ್ರಾಜ್ಯವು ಇಮ್ಮಡಿ ಮಾರಸಿಂಹ ಮತ್ತು ನಾಲ್ಮಡಿ ರಾಚಮಲ್ಲರವರುಗಳ ಯಾದವೀ ಕಲಹದ ಸದುಪಯೋಗ ಪಡೆದುಕೊಂಡ ಕಲ್ಯಾಣ ಚಾಳುಕ್ಯರು ಗಂಗಾವಾಡಿಯನ್ನು ಅಧೀನಕ್ಕೆ ತೆಗೆದುಕೊಂಡರೆಂದು (ನಮ್ಮ ನಾಡು ಕರ್ನಾಟಕ ಡಾ॥ ಹೆಚ್.ಎಸ್. ಗೋಪಾಲರಾವ್) ಹೆಸರಿಗಷ್ಟೇ ರಕ್ಕಸಗಂಗ ಪೆರ್ಮನಡಿ ಕಲ್ಯಾಣ ಚಾಳುಕ್ಯರ ರಾಜನಾಗಿದ್ದು ಈಗಾಗಲೇ ಗಂಗರಾಜ್ಯವನ್ನು ಚಾಳುಕ್ಯರ ಅದಿ ರಾಜತ್ವದಡಿಯಲ್ಲಿ ವಿನಯಾದಿತ್ಯ ಹೊಯ್ಸಳ ಸರ್ವಾಧಿಕಾರಿಯಾಗಿ ಆಳುತ್ತಿದ್ದ. (ಎಂ.ಎನ್. ಪ್ರಭಾಕರ್ ಇತಿಹಾಸ ದರ್ಶನ, ೨೮/೨೦೧೩, ಪುಟ ೨೭೪).

ಆದರೆ ರಕ್ಕಸಗಂಗ ಪೆರ್ಮನಡಿ ಚಾಳುಕ್ಯರ ಅಧೀನ ಅರಸರಾಗಿ ಹೆಚ್ಚು ಕಾಲ ಬಾಳಲಿಲ್ಲ. ಕಲ್ಯಾಣ ಚಾಳುಕ್ಯರಸರು ಉತ್ತರ ಮತ್ತು ಕೊಂಕಣದ ಗಡಿ ರಕ್ಷಣೆಯಲ್ಲಿ ತೊಡಗಿದ್ದಂತಹ ಸಮಯ ನೋಡಿಕೊಂಡ ರಾಜ–ರಾಜೇಂದ್ರ ಗಂಗವಾಡಿಯನ್ನು ವಶಪಡಿಸಿಕೊಂಡನು. ಸಾಮಂತರಸರಾದ ಗಂಗರ ಪತನದಿಂದಾಗಿ ದಕ್ಷಿಣದಲ್ಲಿ ಕಲ್ಯಾಣ ಚಾಳುಕ್ಯರಿಗೆ ಬಲುದೊಡ್ಡ ರಾಜಕೀಯ ಘಾಥವಾಯಿತು.

ತೇದಿ ದಾಖಲಾಗದ ಅಂಗಡಿ ಗ್ರಾಮದ ಮಗ್ಗಲು ಗ್ರಾಮವಾದ ಕೆಸವಳಲು ಎಂಬಲ್ಲಿರುವ ಶಾಸನವು ಇದು ಹೊಯ್ಸಳ ಸಾಮ್ರಾಜ್ಯದ ಉದಯ ದಿಕ್ಕಿನತ್ತ ತೆರಳಲು ಚಾರಿತ್ರಿಕ ಸಂಶೋಧಕರಿಗೆ ಮಾರ್ಗಸೂಚಿ ಕೈಕಂಭವಾಗಿ ದಕ್ಕಿದೆ. ಈ ಶಾಸನವು ಚಾಳುಕ್ಯ ಅರಸುಕುಮಾರ ಸೋಭನೈಯ್ಯನು ಹೊಯ್ಸಳರಸರಿಗೆ ಸಂದಿವಿಗ್ರಹಿ ಆಗಿದ್ದನೆಂದು ತಿಳಿಸುತ್ತದೆ.

ಈ ಸೋಭನೈಯ್ಯನು ಚಾಳುಕ್ಯರಸ ೪ನೇ ವಿಕ್ರಮಾಂಕನ ಪುತ್ರ ಬನವಾಸಿ ಪ್ರಾಂತ್ಯದ ಆಡಳಿತಾಧಿಕಾರಿಯಾಗಿದ್ದು ಅಗಾಧ ಆಡಳಿತ ಅನುಭವ ಇದ್ದಂತಹ ಎಷ್ಟೋ ಯುದ್ಧದಲ್ಲಿ ಚಾಳುಕ್ಯ ಅದಿಪತ್ಯಕ್ಕೆ ಜಯವನ್ನು ತಂದುಕೊಟ್ಟ ಶೂರನು ರಾಜಕೀಯ ಮುತ್ಸದ್ದಿಯಾದಂತಹ ರಾಜಪ್ರಮುಖ ಈ ಕಲ್ಯಾಣ ಚಾಳುಕ್ಯರ ರಾಜಪ್ರತಿನಿಧಿಯಾಗಿ, ಸಂದಿವಿಗ್ರಹಿಯಾಗಿ VI ಮೂಡ ೨೧ ತೇದಿ ೧೧೪೯ ಎಂದು ಗುರುತಿಸಿರುವ ಹೊಯ್ಸಳ ವಿನಯಾದಿತ್ಯ ಕಾಲದ ಅಂಗಡಿಯ ಮಗ್ಗಲು ಗ್ರಾಮವಾದ ಕಣಚೂರು ಗದ್ದೆಯಲ್ಲಿ ನೆಟ್ಟಿರುವ ಶಾಸನವು ದೃಢೀಕರಿಸುವುದರಲ್ಲಿ ಕಲ್ಯಾಣ ಚಾಳುಕ್ಯರ ರಾಜಕೀಯ ಚಾಣಿಕ್ಯತನವೂ ಅಡಗಿದೆ.

ಕರ್ನಾಟಕ ದಕ್ಷಿಣ ಪಥವಾದ ಗಂಗವಾಡಿಯಲ್ಲಿ ಬೀಡುಬಿಟ್ಟಿರುವ ಯುದ್ಧಾಕಾಂಕ್ಷಿಯಾದ ರಾಜೇಂದ್ರಚೋಳನು ಪ್ರಬಲವಾದ ಸೈನ್ಯ ಶಾಖೆಯನ್ನು ಹೊಂದಿರುವುದರಿಂದ ಇವರನ್ನು ಎದುರಿಸಿ ನಿಲ್ಲಲು ದಕ್ಷಿಣದಲ್ಲಿ ಒಂದು ಸೈನ್ಯ ಶಾಖೆಯನ್ನು ಹುಟ್ಟು ಹಾಕುವುದು ಕಲ್ಯಾಣ ಚಾಳುಕ್ಯರಿಗೆ ಅನಿವಾರ್ಯವೂ, ಅವಶ್ಯಕವು ಆಗಿದ್ದುದರಿಂದ ಗಂಗವಾಡಿಯ ಪತನದಿಂದ ಸೋತು ವ್ಯಾಗ್ರನಾದ ಹೊಯ್ಸಳ ನೃಪಕಾಮನಿಗೆ ನಂತರ ಇವನ ಮಗ ವಿನಯಾದಿತ್ಯನಿಗೂ ಸಕಲ ಸಹಕಾರವನ್ನು ನೀಡಿ ಬಲಪಡಿಸಲು ಕಲ್ಯಾಣ ಚಾಳುಕ್ಯರ ರಾಜಪ್ರಮುಖರುಗಳಾದ ಸೋಬನೈಯ್ಯನನ್ನು ನಂತರ ಎಚಿಮಯ್ಯನನ್ನು ಆಡಳಿತದ ಮಾರ್ಗದರ್ಶಕ ಸಂದಿವಿಗ್ರಹಿ ಯಾಗಿ ಕಳುಹಿಸಿರುವುದು ಕಲ್ಯಾಣ ಚಾಳುಕ್ಯರ ಆದಿ ರಾಜತ್ವದಡಿಯಲ್ಲಿ ಭ್ರೂಣಾವಸ್ಥೆಯಲ್ಲಿ ಹೊಯ್ಸಳರು ರೂಪಗೊಳ್ಳುತ್ತಿರುವುದಕ್ಕೆ ಜೀವಂತ ಸಾಕ್ಷಿಯಾಗಿದೆ.

ಆಗತಾನೇ ಉದಯಾಮಾನದಲ್ಲಿದ್ದ ಸಾಮಂತ ಮಾಂಡಳೀಕನಾದ ನೃಪಕಾಮ ಹೊಯ್ಸಳನಿಗೆ ಮಾರ್ಗದರ್ಶಿ ಸಂದಿವಿಗ್ರಹಿಯಾಗಿ ರಾಜತಾಂತ್ರಿಕನನ್ನು ನೇಮಿಸಿ ಸಕಲ ಸಂಪತ್ತನ್ನು ಕೊಟ್ಟು ಸೈನ್ಯಕ್ಕೆ ಉನ್ನತ ಮಟ್ಟದ ಯುದ್ಧ ತಂತ್ರದ ತರಬೇತಿ ನೀಡಿರುವುದಲ್ಲದೇ ರಾಜಕೀಯ ಮಾರ್ಗದರ್ಶನ ಮಾಡುತ್ತಾ ದಕ್ಷಿಣದಲ್ಲಿನ ಚೋಳ ಸಾಮ್ರಾಟರನ್ನು ಕನ್ನಡ ನೆಲದಿಂದಟ್ಟಲು ಸಕಲ ಸಹಕಾರವನ್ನು ಕೊಟ್ಟು ಹೊಯ್ಸಳರನ್ನು ಸದೃಡ ಸಾಮಂತರಸರನ್ನಾಗಿ ಬೆಳೇಸಿ ಗಟ್ಟಿ ನೆಲೆಯಲ್ಲಿ

ಲ್ಲಿಸಿದ್ದಕ್ಕೆ ಇ.ಸಿ. ಕಡೂರು ೭೬ ಎಂದು ಗುರುತಿಸಿರುವ ೇದಿ ೧೦೮೯ರ ವಿನಯಾದಿತ್ಯ ಹೊಯ್ಸಳನ ಕಾಲದ ಾಸನವು ಕಲ್ಯಾಣದ ಚಾಳುಕ್ಯರಸರುಗಳನ್ನು ಆದಿರಾಜರು ಂದು ಗೌರವಿಸಿರುವುದನ್ನು ಕಾಣಬಹುದು.

ಇತ್ತೀಚೆಗೆ ಸಿಕ್ಕಿದ ಬನ್ನಿಗೋಳ ಶಾಸನಾದಾರರೀತ್ಯ ಲ್ಯಾಣ ಚಾಲುಕ್ಯ ಸಾಮ್ರಾಟ ೧ನೇ ಸೋಮೇಶ್ವರನು ನಯಾದಿತ್ಯ ಹೊಯ್ಸಳನಿಗೆ ಕುಮುಟದ ಕೋಟೆಯನ್ನಿತ್ತು ುಹಾ ಮಂಡಳೀಕನನ್ನಾಗಿ ನೇಮಿಸಿಕೊಂಡಿರುವುದು ಬೆಳಕಿಗೆ ಂದಿರುವುದರಲ್ಲಿಯೂ ಸಹ ಕಲ್ಯಾಣ ಚಾಳುಕ್ಯರ ರಾಜಕೀಯ ುತ್ಸದ್ದಿತನಕ್ಕೆ ಜೀವಂತ ಸಾಕ್ಷಿಯಾಗಿದೆ.

ಕಲ್ಯಾಣ ಚಾಲುಕ್ಯ ಅರಸು ೬ನೇ ವಿಕ್ರಮಾದಿತ್ಯ ಾರ್ವಭೌಮ ಆಳ್ವಿಕೆಯ ಕಾಲದಲ್ಲಿ ಇವನ ಮಾಂಡಳೀಕ ಾಗಿದ್ದ ಹೊಯ್ಸಳ ವಿಷ್ಣುವರ್ಧನನು ಕಲ್ಯಾಣ ಚಾಳುಕ್ಯ ೈನ್ಯದ ನೆರವಿನಾಶ್ರಯದಲ್ಲಿ ಕನ್ನಡ ನಾಡಿನಿಂದ ಚೋಳರನ್ನು ೊಡೆದಟ್ಟಿ ಗಂಗವಾಡಿಯನ್ನು ವಶಪಡಿಸಿಕೊಂಡ ನಂತರ ದೇವಾಲಯಕ್ಕೆ ದಾನದತ್ತಿ ಬಿಟ್ಟ ಸಂಗತಿಯನ್ನು ಇ.ಸಿ. ಬೇಲೂರು ೩೨೭ ಎಂದು ಗುರುತಿಸಿರುವ ಶಿಲಾಶಾಸನದಲ್ಲಿ ಚಾಳುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಪಾದಪದ್ಮೋಪ ಜೀವಿ ನಾನು ಎಂಬುದಾಗಿ ಹೊಯ್ಸಳರ ಕುಲತಿಲಕ ವಿಷ್ಣುವರ್ಧನನೇ ದೈನ್ಯತೆಯನ್ನು ಶಿಲಾಶಾಸನದಲ್ಲಿ ದಾಖಲಿಸಿರುವುದನ್ನು ಅವಲೋಕಿಸಿದರೆ ವಿಷ್ಣುವರ್ಧನ ಮತ್ತು ಮಗ ಹೊಯ್ಸಳ ನಾರಸಿಂಹನ ಕಾಲಾವಧಿಯವರೆವಿಗೂ ಕಲ್ಯಾಣ ಚಾಳುಕ್ಯರ ಆದಿ ರಾಜತ್ವವನ್ನು ಒಪ್ಪಿ ಗೌರವಿಸಿಕೊಂಡೇ ಆಳಿದ್ದಾರೆ ಎಂಬುದು ದೃಢಪಡಿಸುತ್ತದೆ.

ಆದರೆ ಹೊಯ್ಸಳ ನಾರಸಿಂಹನ ಮಗ ಎರಡನೇ ಬಲ್ಲಾಳನ ಕಾಲಾವಧಿಯಲ್ಲಿ ಕಲ್ಯಾಣ ಚಾಲುಕ್ಯ ಸಾರ್ವಭೌಮ ನಾಲ್ಕನೇ ಸೋಮೇಶ್ವರನನ್ನು ಕ್ರಿ.ಶ. ೧೧೮೭ರಲ್ಲಿ ಸಂಪೂರ್ಣ ವಾಗಿ ಸೋಲಿಸಿ ಕಲ್ಯಾಣ ಚಕ್ರಾದಿಪತ್ಯವು ನಶಿಸಿಯೇ ಹೋಗಲು ಕಾರಣೀಭೂತನಾದನು ಎಂಬುದು ಕಾಲದ ವಿಪರ್ಯಾಸವೇ ಸರಿ.





# ಮಂಡ್ಯ ಜಿಲ್ಲೆಯ ಹೊಯ್ಸಳರ ಕಾಲದ ಶಾಸನೋಕ್ತ ಕೆರೆ-ಕಟ್ಟೆಗಳು ಒಂದು ಅವಲೋಕನ

ಉಮಾ.ಡಿ.ಟಿ.*

'ಸಕ್ಕರೆಯ ಸೀಮೆ' ಎಂಬ ಹೆಗ್ಗಳಿಕೆಗೆ ಹೆಸರುವಾಸಿಯಾಗಿರುವ ಮಂಡ್ಯ ಜಿಲ್ಲೆಯು ಸಾಂಸ್ಕೃತಿಕವಾಗಿ ಸಾಹಿತ್ಯ ಲೋಕದ ನೆಲೆವೀಡಾಗಿದ್ದು ಸಾಮಾಜಿಕವಾಗಿ ಸಮುದಾಯದ ಪ್ರಕ್ರಿಯೆಯಲ್ಲಿ ಜನರ ಜೀವನೋಪಾಯದ ಹಿತದೃಷ್ಟಿಯಿಂದ ರಾಜಮಹಾರಾಜರ ಆಳ್ವಿಕೆಯ ಭಾಗವಾಗಿ ಜನರಿಗೆ ಮೂಲ ಭೂತ ಸೌಕರ್ಯಗಳನ್ನು ಒದಗಿಸುವುದರ ಜೊತೆಗೆ ಪಶು ಸಂಗೋಪನಾ ಕಾರ್ಯದಲ್ಲಿ ಕೆರೆ ಕಟ್ಟೆಗಳನ್ನು ನಿರ್ಮಿಸುವುದು ಒಂದು ಪುಣ್ಯದ ಕೆಲಸವಾಗಿದ್ದು ಧಾರ್ಮಿಕ ಪ್ರಭುತ್ವವನ್ನು ಸಾಧಿಸುವಲ್ಲಿ ಹೆಚ್ಚಿನ ಮಹತ್ವ ಪಡೆದುಕೊಂಡಿದೆ.

ಮಂಡ್ಯ ಜಿಲ್ಲೆಯು ಉತ್ತಮ ನೀರಾವರಿ ವ್ಯವಸ್ಥೆ ಹೊಂದಿರುವ ಹಾಗೂ ಆರ್ಥಿಕವಾಗಿ ಮುಂದುವರೆಯುತ್ತಿರುವ ಜಿಲ್ಲೆಯಾಗಿದೆ. ಇಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳಲ್ಲಿ ಗಂಗರು, ನೊಳಂಬರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ಪಾಂಡ್ಯರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಪಾಳೇಗಾರರು, ನಾಯಕರು ನೀರಾವರಿಗೆ ಅತ್ಯಧಿಕ ಪ್ರೋತ್ಸಾಹ ನೀಡುತ್ತಿದ್ದರೆಂಬ ಸಂಗತಿ ಶಾಸನಾಧಾರಗಳಿಂದ ನಮಗೆ ತಿಳಿದುಬರುತ್ತದೆ. ಕೆಲವು ಕೆರೆ-ಕಟ್ಟೆಗಳು ಪ್ರಕೃತಿದತ್ತವಾಗಿ ನಿರ್ಮಿತವಾದವುಗಳಾದರೆ, ಮತ್ತೇ ಕೆಲವು ರಾಜಮನೆತನಗಳ ಆಳ್ವಿಕೆಯ ಕಾಲದಲ್ಲಿ ನಿರ್ಮಿಸಲ್ಪಟ್ಟವುಗಳಾಗಿವೆ. ಇಂತಹ ಕೆರೆಗಳು ಮಳೆಯ ನೀರನ್ನು ಆಶ್ರಯಿಸಿ ತುಂಬಿ ಹರಿಯುವಾಗ ನೀರು ಪೋಲಾಗದಂತೆ ನಾಲೆ, ತೂಬು, ಕಾಲುವೆಗಳು ನಿರ್ಮಾಣಗೊಂಡು ಒಂದು ಕೆರೆಯಿಂದ ಮತ್ತೊಂದು ಕೆರೆ-ಕಟ್ಟೆಗೆ ನೀರನ್ನು ಸಂಗ್ರಹಿಸುವ ಹಾಗೂ ವ್ಯವಸಾಯಕ್ಕೆ ನೀರನ್ನು ಬಳಸಿಕೊಳ್ಳುವ ತಂತ್ರವನ್ನು ರಾಜಮನೆತನದವರು ರೂಪಿಸಿದರು ಎಂದು ಹೇಳಬಹುದು. ನೀರಾವರಿ ವ್ಯವಸ್ಥೆಯಿಂದ ರಾಜ್ಯದ, ಪ್ರಾಂತ್ಯದ, ಗ್ರಾಮದ ಜನತೆ ಕೃಷಿಯನ್ನು ಅವಲಂಬಿಸಿ ನೆಮ್ಮದಿಯ ಜೀವನ ನಡೆಸುವುದರ ಜೊತೆಗೆ ಆರ್ಥಿಕವಾಗಿ ಮುಂದುವರೆದು ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತಿತ್ತು. ಇಂದಿಗೂ ಸಹ ನಾಲೆಗಳ, ಅಣೆಕಟ್ಟುಗಳ ಮೂಲಕ ಒಂದು ಜಿಲ್ಲೆ, ತಾಲೂಕು, ಗ್ರಾಮಗಳು ಅಭಿವೃದ್ಧಿಯನ್ನು ಸಾಧಿಸುವಲ್ಲಿ ಮುನ್ನಡೆದಿವೆ ಎಂದೆನ್ನಬಹುದು. ಹಾಗಾಗಿ ಮಂಡ್ಯ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದಂತಹ ರಾಜಮನೆತನಗಳಲ್ಲಿ ಒಂದಾದ ಹೊಯ್ಸಳ ರಾಜವಂಶವು ನೀರಾವರಿಗೆ ಅತ್ಯಧಿಕ ಪ್ರೋತ್ಸಾಹ ನೀಡಿತ್ತೆಂದು ಶಾಸನಾಧಾರಗಳಿಂದ ನಮಗೆ ತಿಳಿದುಬರುತ್ತದೆ.

ಶಾಸನಗಳಲ್ಲಿ ಉಲ್ಲೇಖಗೊಂಡ ಮಾಹಿತಿಯನ್ನಾಧರಿಸಿ ಹೊಯ್ಸಳ ಅರಸರು ಕೆರೆ, ಬಾವಿ, ತಟಾಕ, ಕಟ್ಟೆ, ತೂಬು, ನಾಲೆ ಮತ್ತು ಸಮುದ್ರಗಳ ನಿರ್ಮಾಣಗಳನ್ನು ಸಾಮಾಜಿಕ ಕಾರ್ಯಗಳಿಗೆ ಅನುಗುಣವಾಗಿ ನಿರ್ಮಿಸುತ್ತಿದ್ದರೆಂದು ಈ ಕೆಳಕಂಡ ಮಾಹಿತಿಯಿಂದ ನಮಗೆ ತಿಳಿದು ಬರುತ್ತದೆ.

**ಕೆರೆ-ಕಟ್ಟೆಗಳು**

ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಹೊಯ್ಸಳರ ಕಾಲದ ಕೆರೆಕಟ್ಟೆಗಳನ್ನು ಕುರಿತಂತೆ ವಿವರಣೆಯನ್ನು ಒಳಗೊಂಡಿದೆ. ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಅಂಬುದಿ, ತಟಾಕ, ಸಮುದ್ರ, ಕುಂಟೆ, ಕಾಲುವೆಗಳ ನಿರ್ಮಾಣ ಒಡ್ಡುಗಳನ್ನು ಹಾಕುವುದು, ಬಾವಿಗಳನ್ನು ತೋಡಿಸುವುದು, ಕೊಳ, ತೂಬು, ಹೊಂಡ ಮುಂತಾದ ಹೆಸರುಗಳಿಂದ ಉಲ್ಲೇಖವಾಗಿರುವುದು ಇಲ್ಲಿ ದೊರೆತಿರುವ ಶಾಸನಗಳಿಂದ ಕಂಡು ಬಂದಿದೆ.

ರಾಜನು ತನ್ನ ರಾಜ್ಯವು ಕೇವಲ ದೇವಮಾತೃಕೆಯಾಗಿರದೇ ತಟಾಕಗಳನ್ನು ನಿರ್ಮಿಸಿ ನದೀ ಮಾತೃಕೆಗಳನ್ನಾಗಿ ಮಾರ್ಪಡಿಸಿದಂತಹ ನಿದರ್ಶನಗಳಿವೆ.[೨] ಆದ್ದರಿಂದ ಪ್ರಸ್ತುತ ಮಂಡ್ಯ ಜಿಲ್ಲೆಯಲ್ಲಿನ ಶಾಸನಗಳಲ್ಲಿ ಕೆರೆಗಳ ಬಗ್ಗೆ ಉಲ್ಲೇಖವಾಗಿರುವ ಮಾಹಿತಿಗಳನ್ನಾಧರಿಸಿ ನೋಡಿದಾಗ ಮೊದಲಿಗೆ ಕೃಷ್ಣರಾಜಪೇಟೆಯ ಕಿಕ್ಕೇರಿಯ ಕ್ರಿ.ಶ. ೧೧೯೫-೯೬ರ ದೊಡ್ಡಕೆರೆಯ ಕೆಳಗೆ ಪಾಳು ಬಿದ್ದಿರುವ ಮಲ್ಲೇಶ್ವರ ದೇವಾಲಯದ ಶಾಸನದಲ್ಲಿ ಪೆರ್ಗಡೆ ಮಲ್ಲಿಯಣ್ಣ ದೇವಾಲಯವೊಂದನ್ನು ನಿರ್ಮಿಸಿ, ಕೆರೆಯನ್ನು ತೋಡಿಸಿದನೆಂದು, ಅದಕ್ಕಾಗಿ ಭುವನಹಳ್ಳಿ ಗ್ರಾಮ ಮತ್ತು ಭೂಮಿಯನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸಲಾಗಿದೆ.[೩]

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿವಿ, ಮಾನಸಗಂಗೋತ್ರಿ, ಮೈಸೂರು-೫೭೦೦೦೬.

ಕ್ರಿ.ಶ. ೧೧೧೦೮ರ ಶ್ರೀರಂಗಪಟ್ಟಣ ತಾಲ್ಲೂಕಿನ ರಕೆರೆಯ ಶಾಸನದಲ್ಲಿ ದಣ್ಣಿಶೆಟ್ಟಿಯ ಮಗ ಒಡೆಯಂಬ ರೆಯನ್ನು ಕಟ್ಟಿಸಿದುದಕ್ಕಾಗಿ ಹರ್ಷಿತರಾದ ಅರಕೆರೆಯ ಂಡಾಳ್ವರಾದ ಬರಂದರ ಮಾಂಚಗಾವುಂಡ ಮತ್ತು ೀರಗಾವುಂಡರು ಆ ಕೆರೆಯ ನಿರ್ವಹಣೆಗಾಗಿ ದಾನಗಳನ್ನು ೀಡಿರುವುದು ಶಾಸನದಲ್ಲಿ ಉಲ್ಲೇಖಗೊಂಡಿದೆ.[೪]

ನಾಗಮಂಗಲ ತಾಲ್ಲೂಕಿನ ಸುಖದೆರೆಯ ಕ್ರಿ.ಶ. ೧೧೨೦ರ ಶಾಸನವು ಸುಖದೆರೆ ಊರಿನ ಲಕ್ಕಮ್ಮನ ಗುಡಿಯ ುಂದೆ ಬಿದ್ದಿರುವ ಶಾಸನವಾಗಿದೆ. ಈ ಶಾಸನದಲ್ಲಿ ಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಜಕಶೆಟ್ಟಿ ಎಂಬುವವನು ುಖದರೆಯಲ್ಲಿ ಬಸದಿ ಮತ್ತು ಕೆರೆಯನ್ನು ಕಟ್ಟಿಸಿ ಭೂದಾನ ಳನ್ನು ನೀಡಿ "ತೆಪ್ಪಸುಂಖ" ದೊಂದಿಗೆ ಸಣ್ಣಕೆರೆಯನ್ನು ಾನವಾಗಿ ನೀಡಿದ್ದನೆಂದು ಶಾಸನದಲ್ಲಿ ಪ್ರಸ್ತಾಪಿಸಲಾಗಿದೆ.[೫] ುಖದೆರೆ ಗ್ರಾಮದ ಪೂರ್ವದಲ್ಲಿ ಮತ್ತಿಕೆರೆ ಎಂಬ ಕೆರೆ ಇದ್ದು ಈಗ ಕೆರೆ ಸಂಪೂರ್ಣವಾಗಿ ಮುಚ್ಚಿಹೋಗಿ, ಆ ರೆಯ ಅಂಗಳದಲ್ಲಿ ತೆಂಗಿನ ತೋಟಗಳು ಎದ್ದಿವೆ. ಗ್ರಾಮದ ಿರಿಯರಾದ ಅಂಗಡಿ ಬೋರೆಗೌಡರ ಪ್ರಕಾರ ಈ ುರಗಳನ್ನು ಸುಮಾರು ೪೦ ವರ್ಷಗಳ ಹಿಂದೆ ನೆಡಲಾಗಿದೆ ಂದು ತಿಳಿದುಬರುತ್ತದೆ. ಕೆರೆ ಇದ್ದ ಗುರುತಿಗೆ ಕೆರೆಯ ರಿ ಮಾತ್ರ ಉಳಿದಿದೆ. ಈ ಗ್ರಾಮದ ಮತ್ತೊಂದು ಬದಿಯಲ್ಲಿ ಂದು ಕೆರೆ ಇದ್ದು ಅದನ್ನು ಸುಖದೆರೆ ಕೆರೆ ಎನ್ನುತ್ತಾರೆ. ಈ ರೆಯು ಮಳೆಯಾಶ್ರಯದ ಕೆರೆಯಾಗಿದೆ. ಈ ಕೆರೆಯು ಹಾ ಒತ್ತುವರಿಯಾಗಿರುತ್ತದೆ. ಪ್ರಸ್ತುತವಾಗಿ ಕೆರೆಯ ತುಂಬ ೀರು ಸಂಗ್ರಹವಾಗಿಲ್ಲ. ಹಾಗೂ ಈ ಗ್ರಾಮದಲ್ಲಿ ಜೈನ ಸದಿ ಇತ್ತೆಂದು ಇಲ್ಲಿಯ ಕೆಲವು ಕುರುಹುಗಳಿಂದ ಂಡುಬಂದಿದೆ. ಆದರೆ ಬಸದಿಯನ್ನು ನಾಶಪಡಿಸಿ ಈ ್ಥಳದಲ್ಲಿ ಅಂಗನವಾಡಿ ಕೇಂದ್ರವನ್ನು ಕಟ್ಟಲಾಗಿದೆ.

ನಾಗಮಂಗಲ ತಾಲ್ಲೂಕಿನ ಪುರದ ಕಟ್ಟೆಯ ತೆಂಗಿನ ೋಟವೊಂದರ ಕ್ರಿ.ಶ. ೧೧೩೯ರ ಶಾಸನದಲ್ಲಿ ಕಶ್ಯಪ ೋತ್ರಕ್ಕೆ ಸೇರಿದ ಮಾಗಿಸೋಡ ಮತ್ತು ಮಾಕಬ್ಬೆ ಎಂಬಿಬ್ಬರು ರಡು ಕೆರೆಗಳನ್ನು ನಿರ್ಮಿಸಿ ಅವರ ಹೆಸರುಗಳನ್ನು ಮಂಚನ ಮುದ್ರ, ಮಾಚ ಸಮುದ್ರ ಎಂಬುದಾಗಿ ಕರೆಸಿಕೊಂಡಿರು ುದು ಶಾಸನದಲ್ಲಿ ಕಂಡುಬಂದಿದೆ.[೬] ನಾಗಮಂಗಲ ತಾಲ್ಲೂಕು ೀಚಿರಾಕ್ ಗ್ರಾಮದ ಪುರದ ಕಟ್ಟೆಯ ಶಾಸನವು ೊಮ್ಮನಾಯಕನಹಳ್ಳಿಯ ಸಮೀಪದ ಶ್ರೀಕಂಠೇಗೌಡ ಮತ್ತು ನುಮಂತೇಗೌಡ ಎಂಬ ಸಹೋದರರಿಗ ಸೇರಿದ ನೆಲದಲ್ಲಿ ದ್ದಿದೆ. ಈ ಶಾಸನವು ಕ್ರಿ.ಶ. ೧೧೩೯ರ ಶಾಸನವಾಗಿದೆ. ದರ ಪ್ರಕಾರ ಇಬ್ಬರು ಸಹೋದರರು ತಮ್ಮ ತಂದೆಯಾದ ಾಚೋಡ ಮತ್ತು ತಾಯಿಯಾದ ಮಾಕವ್ವೆಯ ಹೆಸರಿನಲ್ಲಿ ಈ ಎರಡು ಕೆರೆಗಳನ್ನು ನಿರ್ಮಿಸಿರುತ್ತಾರೆ ಮತ್ತು ಅವುಗಳಿಗೆ ಮಾಚಸಮುದ್ರ ಮತ್ತು ಮಾಕಸಮುದ್ರ ಎಂದು ಹೆಸರಿಸುತ್ತಾರೆ. ಈಗಲೂ ಸಹಾ ಈ ಎರಡು ಕೆರೆಗಳಿದ್ದು ಹೂಳು ತುಂಬಿ ಬರಿದಾಗಿವೆ. ಈ ಕೆರೆಗಳಿಗೆ ನೀರು ಬಂದು ಅನೇಕ ದಶಕಗಳೇ ಆಗಿವೆ ಎಂದು ಸ್ಥಳಿಯರಾದ ವಿಷಕಂಠೇಗೌಡರು ತಿಳಿಸಿದರು.

ಕೃಷ್ಣರಾಜಪೇಟೆ ತಾಲ್ಲೂಕಿನ ಹುಬ್ಬನಹಳ್ಳಿಯ ನೇರಳ ಕಟ್ಟೆಯ ಪಶ್ಚಿಮ ಭಾಗದಲ್ಲಿರುವ ಮಲ್ಲೇದೇವರ ದೇವಾಲಯದ ಬಳಿಯಿರುವ ಕ್ರಿ.ಶ. ೧೧೪೦ರ ಶಾಸನದಲ್ಲಿ ಕೆರೆಯನ್ನು ತೋಡಿಸಿ ದೇವಾಲಯವನ್ನು ನಿರ್ಮಿಸಿರುವುದಕ್ಕೆ ಮಾಚಯ್ಯನಾಯಕ ಹಲವು ಭೂಮಿಗಳನ್ನು ದಾನವಾಗಿ ನೀಡಿರುವುದರ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೭]

ಶ್ರೀರಂಗಪಟ್ಟಣ ತಾಲ್ಲೂಕಿನ ಮೊಳನಹಳ್ಳಿಯ ಹೊಲವೊಂದರಲ್ಲಿ ದೊರೆತಿರುವ ಕ್ರಿ.ಶ. ೧೧೭೫ರ ಶಾಸನದಲ್ಲಿ ಹರದ ಗಾವುಂಡ ಮತ್ತು ಇವನ ಮಗನಾದ ಚಾಕಗಾವುಂಡ ಎಂಬುವವರು ಹರದ ಸಮುದ್ರ ಎಂಬ ಕೆರೆಯನ್ನು ತೋಡಿಸಿದ ಬಗ್ಗೆ ಮಾಹಿತಿಯಿದ್ದು, ಮೊಳನ ಹಳ್ಳಿಯ ಹರದೇಶ್ವರ ದೇವಾಲಯದ ನಿರ್ಮಾಣವನ್ನು ಮಾಡಿಸಿದರೆಂಬ ಮಾಹಿತಿಯು ಶಾಸನದಲ್ಲಿ ದಾಖಲಿಸಲಾಗಿದೆ.[೮]

ನಾಗಮಂಗಲ ತಾಲೂಕಿನ ಹಟ್ಟಣದ ವೀರಭದ್ರ ದೇವಾಲಯದ ಬಳಿ ನಿಲ್ಲಿಸಿರುವ ಕ್ರಿ.ಶ. ೧೧೭೮ರ ಶಾಸನದಲ್ಲಿ ಮಾರಸಿಂಗ ನಾಯಕನ ಸಾಮಂತಾಧಿಕಾರಿ ಪಟ್ಟಣಸ್ವಾಮಿ ಸೋವಿಶೆಟ್ಟಿ ಮೂರು ಕೆರೆಗಳನ್ನು ತೋಡಿಸಿ, ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿರುವುದು ಈ ಶಾಸನದಲ್ಲಿ ಉಲ್ಲೇಖಿತವಾಗಿದೆ.[೯]

ಮಂಡ್ಯ ತಾಲ್ಲೂಕಿನ ಕೊತ್ತತ್ತಿಯಲ್ಲಿನ ಕ್ರಿ.ಶ. ೧೧೭೮ರ ಶಾಸನವು ಕೊತ್ತತ್ತಿಯ ಊರ ಹಿಂದಿನ ಈಶ್ವರ ದೇವಾಲಯದ ಬಳಿಯಿರುವ ಕಲ್ಲಾಗಿದೆ. ಈ ಶಾಸನದಲ್ಲಿ ಮಲ್ಲೇಶ್ವರನ ದೇವಾಲಯಕ್ಕೆ ಕೊತ್ತತ್ತಿಯ ಪೊಲಾಂಡಲ ವಿಟ್ಟರಿಸಿ, ಹಲವು ಗಾವುಂಡರುಗಳ ಜೊತೆ ಸೇರಿ ಗೆರೆನಾಡು ಮುಖ್ಯಸ್ಥರನ್ನು ಒಳಗೊಂಡು ಕೆರೆ ಹಾಗೂ ದೇವಾಲಯದ ನಿರ್ಮಾಣಕ್ಕೆ ದಾನ ನೀಡಿರುವುದನ್ನು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೦] ಪ್ರಸ್ತುತ ಈ ಕೆರೆಯನ್ನು ಹಳೇ ಕೆರೆ ಎಂದು ಕರೆಯುವರು. ಈ ಕೆರೆಯು ಕೊತ್ತತ್ತಿ ಗ್ರಾಮದ ಬನ್ನೂರು ರಸ್ತೆಯ ಬಲಭಾಗದಲ್ಲಿದೆ. ಈ ಕೆರೆಯು ವಿಶಾಲವಾಗಿದ್ದು ಎಡಭಾಗದಲ್ಲಿ ಮಲ್ಲೇಶ್ವರನ ದೇವಾಲಯವಿದೆ. ಹಿಂದೆ ಈ ಕೆರೆಯ ನೀರು ನಾಲ್ಕು ನೂರು ಏಕರೆ ಕೃಷಿ ಭೂಮಿಗೆ ಉಪಯೋಗವಾಗು ತ್ತಿತ್ತೆಂದು ತಿಳಿದುಬಂದಿದೆ. ಈ ಕೆರೆಗೆ ಕಾವೇರಿ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಆದರೆ ಈ ಕೆರೆಯು ಉತ್ತರದಲ್ಲಿ ತೆಂಗಿನ ತೋಟಗಳಿಂದ, ಪೂರ್ವದಲ್ಲಿ ಕೆಲವು ಮನೆಗಳು

ಮತ್ತು ತೆಂಗಿನ ತೋಟಗಳಿಂದ ಒತ್ತುವರಿಯಾಗಿದೆ. ಪ್ರಸ್ತುತ ಈ ಕೆರೆಯಲ್ಲಿ ಗಿಡಗಳು ಬೆಳೆದು ಹೂಳು ತುಂಬಿಕೊಂಡು ಕುಡಿಯಲು ಯೋಗ್ಯವಾದ ನೀರಾಗಿಲ್ಲ ಹಾಗೂ ಕೃಷಿಗೂ ಉಪಯೋಗವಾಗುತ್ತಿಲ್ಲ.

ಮಂಡ್ಯ ತಾಲ್ಲೂಕು ಬಸರಾಳು ಗ್ರಾಮದ ಕ್ರಿ.ಶ. ೧೨೩೪ರ ಶಾಸನವು ಬಸರಾಳಿನ ಮಲ್ಲಿಕಾರ್ಜುನ ದೇವಾಲಯದ ಬಲಭಾಗದ ಬಾಗಿಲಿನ ಬಳಿಯಿರುವ ಕಲ್ಲಿನ ಮೇಲೆ ಕಂಡುಬರುತ್ತದೆ. ಹೊಯ್ಸಳರ ಕಾಲದ ಹರಿಹರ ದಣ್ಣಾಯಕ, ಸಿಂಗೇಯನಾಯಕ ಮತ್ತು ಮಾರೇಯನಾಯಕ ಎಂಬ ಮೂರುಜನ ಸಹೋದರರು ಕೆರೆಯೊಂದನ್ನು ಕಟ್ಟಿಸಿ, ಅದಕ್ಕಾಗಿ ದಾನಗಳನ್ನು ನೀಡಿರುವುದನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೧] ಬಸರಾಳು ಗ್ರಾಮದಿಂದ ಒಂದು ಕಿ.ಮೀ. ದೂರದಲ್ಲಿ ದೊಡ್ಡ ಕೆರೆಯಿದೆ. ಪ್ರಸ್ತುತ ಈ ಕೆರೆಯನ್ನು ಹೊಸಕೆರೆಯೆಂದು ಕರೆಯುವರು. ಈ ಕೆರೆಯು ಮಳೆಯಾಶ್ರಿತ ಕೆರೆಯಾಗಿದೆ. ಈಗ ಕೆರೆಯಲ್ಲಿ ನೀರು ಸಂಗ್ರಹಗೊಂಡಿಲ್ಲ. ಈ ಕೆರೆಯು ಸಹಾ ಉತ್ತರ, ದಕ್ಷಿಣ, ಪಶ್ಚಿಮದಲ್ಲಿ ತೆಂಗಿನ ತೋಟಗಳಿಂದ ಒತ್ತುವರಿಯಾಗಿದೆ. ಕೆರೆಯಲ್ಲಿ ಹೂಳು ತುಂಬಿದೆ. ಈ ಕೆರೆಯು ಸಹಾ ವಿಶಾಲವಾದ ಪ್ರದೇಶವನ್ನು ಹೊಂದಿದ್ದು ತೂಬನ್ನು ಒಳಗೊಂಡಿದೆ.

ಕ್ರಿ.ಶ. ೧೨೯೯ರ ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಗ್ರಾಮದ ಮೂಲೆ ಸಿಂಗೇಶ್ವರ ದೇವಸ್ಥಾನದ ಬಾಗಿಲಿನ ಬಲಭಾಗದಲ್ಲಿ ನಿಲ್ಲಿಸಿರುವ ಈ ಶಾಸನದಲ್ಲಿ ಬೆಳ್ಳೂರು ಮಹಾಜನರು ಅಗ್ರಹಾರವನ್ನು, ಮಹಾಪ್ರಧಾನಿ ಪೆರುಮಾಳ ದೇವ ದಣ್ಣಾಯಕ ಮತ್ತು ಶ್ರೀರಂಗಪುರದ ಮಹಾಜನರ ನಡುವೆ ಬಳಗು, ದಡಿಗ, ಅರಣೆ ಮತ್ತು ಚಾಕಿಯ ನಾಗಳ್ಳಿಯ ಗ್ರಾಮಸ್ಥರ ಸಮ್ಮುಖದಲ್ಲಿ ಏರ್ಪಟ್ಟ ಒಪ್ಪಂದದಂತೆ ಪೆರುಮಾಳದೇವ ಅಳ್ಳಾಳ ಸಮುದ್ರದಲ್ಲಿ ಕೆರೆಯನ್ನು ಪುನಃ ನಿರ್ಮಾಣಮಾಡಿದ್ದಕ್ಕಾಗಿ ಶ್ರೀರಂಗಪುರದ ಗ್ರಾಮಸ್ಥರು ಆ ಕೆರೆಯ ಕೆಳಗಿನ ತರಿಭೂಮಿ ೧೨ ಬೆದ್ದಲೆ ಪಡೆದು, ಆ ಭೂಮಿಗೆ ೧೨ ಗದ್ಯಾಣ ನೀಡಬೇಕೆಂದು, ತರಿಭೂಮಿಯ ಬದಲಾಗಿ ಸ್ವಲ್ಪ ಖುಷ್ಕಿ ಭೂಮಿಯನ್ನು ವಿನಿಮಯ ಮಾಡಿಕೊಳ್ಳಬೇಕು ಎಂದು ಶಾಸನದಲ್ಲಿ ದಾಖಲಿಸಲಾಗಿದೆ.[೧೨] ಪ್ರಸ್ತುತ ಈ ಕೆರೆಯನ್ನು ದಾಸನ ಕೆರೆ ಎಂದು ಕರೆಯುವರು. ಕೆರೆಯ ಎಲ್ಲಾ ದಿಕ್ಕುಗಳಲ್ಲೂ ಒತ್ತುವರಿಯಾಗಿದೆ. ದಕ್ಷಿಣದಲ್ಲಿ ಕೆರೆಯ ಏರಿ ಇದೆ. ಕೆರೆಯ ಉತ್ತರದಲ್ಲಿ ಮಂಥನ ಹಳ್ಳಿ ಮತ್ತು ನಾಯಕನ ಕೊಪ್ಪಲು ಇದೆ. ಪಶ್ಚಿಮದಲ್ಲಿ ಶ್ರೀರಾಂಪುರ ಮತ್ತು ಬೀಕೇನಹಳ್ಳಿ ಗ್ರಾಮವಿದೆ. ಉತ್ತರ ಮತ್ತು ಪೂರ್ವ ದಿಕ್ಕಿನಲ್ಲಿ ಅನೇಕ ತೆಂಗಿನ ತೋಟಗಳಿವೆ. ಈ ತೋಟಗಳೆಲ್ಲಾ ಕೆರೆಯ ಒತ್ತುವರಿ ಜಮೀನನಲ್ಲಿದೆ. ಈ ಕೆರೆಗೆ ೮೫೦ ವರ್ಷಗಳಾಗಿವೆ. ಕೆರೆಯ ಕೋಡಿಯ ಬಳಿ ವಿಜಯನಗರ ಕಾಲದ ಕಲ್ಲುಮಂಟಪವಿದೆ. ಈ ಮಂಟಪದಲ್ಲಿ ಆಂಜನೇಯ ಮೂರ್ತಿ ಶಿಲ್ಪವಿದೆ. ಇದರ ಪಕ್ಕದಲ್ಲೇ ಮತ್ತೊಂದು ಸಾಧಾರಣ ಕಲ್ಲು ಮಂಟಪವಿದೆ. ಕೆರೆಯ ಕೋಡಿಯ ಒಂದು ಕಲ್ಲಿನ ಮೇಲೆ ಜಲಸೂಚಕವಾದ ಮೀನಿನ ಒಂದು ಉಬ್ಬುಶಿಲ್ಪವಿದೆ. ಈ ರೀತಿಯ ಎರಡು ಶಿಲ್ಪಗಳಿವೆ. ಕೋಡಿಯ ಅಣೆಯನ್ನು ವಿಶಿಷ್ಟವಾಗಿ ನಿರ್ಮಿಸಲಾಗಿದೆ. ಇದು ನಾಲ್ಕು ಹಂತದ ಅಣೆ ಆಗಿದೆ. ಕೆರೆಯಿಂದ ಹೊರಹೋಗುವ ನೀರು ಬೇರೆ ಬೇರೆ ಮಟ್ಟದಲ್ಲಿ ಜನರ ಉಪಯೋಗಕ್ಕಾಗಿ ಉಳಿಯುವಂತೆ ಮಾಡಲು ಅಣೆಗಳನ್ನು ನಿರ್ಮಿಸಲಾಗಿದೆ. ಪ್ರಸ್ತುತ ಈ ಕೆರೆಗೆ ಹೇಮಾವತಿ ಅಣೆಯ ನೀರನ್ನು ಸಂಗ್ರಹಿಸಲಾಗುತ್ತಿದೆ. ಕೆರೆಯ ಪೂರ್ವದಿಕ್ಕಿನಲ್ಲಿ ಹಿಪ್ಪೆ ಮತ್ತು ಮಾವಿನ ತೋಪುಗಳಿವೆ. ಇದೊಂದು ವಿಶಾಲ ಪ್ರದೇಶದಿಂದ ಕೂಡಿರುವ ಕೆರೆಯಾಗಿದೆ.

ನಾಗಮಂಗಲ ತಾಲ್ಲೂಕಿನ ಕ್ರಿ.ಶ. ೧೨೯೯ರ ಮೂಲೆ ಸಿಂಗೇಶ್ವರ ದೇವಸ್ಥಾನದ ಬಾಗಿಲಿನ ಬಲಭಾಗದಲ್ಲಿ ನಿಲ್ಲಿಸಿರುವ ಕಲ್ಲಿನಲ್ಲೇ ಮತ್ತೊಂದು ಶಾಸನದಲ್ಲಿ ಮಹಾಪ್ರಧಾನಿ ಪೆರುಮಾಲೆದೇವ ದಣ್ಣಾಯಕ 'ಅಳ್ಳಾಳ ಸಮುದ್ರ', ಅಂವ್ವೆರೆಯದೆ ಕೆರೆಗಳನ್ನು ಪುನರ್ ನಿರ್ಮಾಣಗೊಳಿಸಿದ್ದಕ್ಕಾಗಿ ಆ ಕೆರೆಗಳ ಅಚ್ಚುಕಟ್ಟಿನ ಭೂಮಿಗಳನ್ನು ಪಡೆದು, ಇಬ್ಬರು ನಂಬಿಯಾರರು ತಮ್ಮ ಜಮೀನುಗಳನ್ನು ತರಿ ಭೂಮಿಗಳಿಗೆ ವಿನಿಮಯ ಮಾಡಿಕೊಂಡರು. ಅದಕ್ಕೆ ಪ್ರತಿಯಾಗಿ ಪ್ರತಿ ಖಂಡುಗಕ್ಕೆ ೪ ಹಣ, ಬಿಟ್ಟುವಟ್ಟಿ ನೀಡಲು ಸಮ್ಮತಿಸುತ್ತಾರೆ. ಹಾಗೂ ಅಲ್ಲಿನ ಅಧಿಕಾರಿಗಳಿಗೆ ಮತ್ತು ಗೌಡರಿಗೆ ಪಾಲು ನೀಡಲು ಒಪ್ಪಿಗೆ ನೀಡಿರುವುದನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೩]

ಮದ್ದೂರು ತಾಲ್ಲೂಕಿನಲ್ಲಿ ಕ್ರಿ.ಶ. ೧೩ನೇ ಶತಮಾನ ದಲ್ಲಿನ ಶಾಸನವು ಈ ಊರಿನ ನರಸಿಂಹ ಸ್ವಾಮಿ ದೇವಾಲಯದ ಮಹಾದ್ವಾರದ ಮೇಲ್ಭಾಗದ ಚಪ್ಪಡಿ ಕಲ್ಲಿನ ಮೇಲೆ ಕಂಡುಬರುತ್ತದೆ. ಈ ಶಾಸನದಲ್ಲಿ ಕೊನೇರಿನ ಮಾಯಕೊಂಡನ ಆದೇಶದಂತೆ, ಮದ್ದೂರಿನ ಮಹಾಜನರಿಗೆ ನೀಡಿದ ೧೫ ಮತ್ತರು ಭೂಮಿಯಲ್ಲಿ ಒಂದು ಕೆರೆ ನಿರ್ಮಿಸಿ, ಕಾಲುವೆ ತೋಡಲು ಆದೇಶಿಸಿ, ಆ ಭೂಮಿಯನ್ನು ಆ ಗ್ರಾಮದ 'ಬಿಟ್ಟುವಟ್ಟ' ಎಂಬುದಾಗಿ ಶಾಸನದಲ್ಲಿ ಉಲ್ಲೇಖಗೊಂಡಿದೆ.[೧೪] ಆದರೆ ಪ್ರಸ್ತುತ ಈ ಕೆರೆಯು ನಾಶವಾಗಿದೆ ಎಂಬುದು ಸ್ಥಳೀಯ ಗ್ರಾಮಸ್ಥರ ಹೇಳಿಕೆಯಾಗಿದೆ.

ಕ್ರಿ.ಶ. ೧೩೧೦ರಲ್ಲಿ ಕೃಷ್ಣರಾಜಪೇಟೆಯ ತಾಲ್ಲೂಕಿನ ಹರಿಹರಪುರದ ಚನ್ನಕೇಶವ ದೇವಾಲಯದ ಪ್ರಾಕಾರದ ಬಾಗಿಲ ಬಳಿಯಿರುವ ಶಾಸನದಲ್ಲಿ ಹೊಯ್ಸಳ ಅರಸ ಮುಮ್ಮಡಿ ಬಲ್ಲಾಳನು ಹರಿಹರಪುರದ ಕಟ್ಟೆಗೆ ಮತ್ತು ಕಾಲುವೆಗಳ ನಿರ್ವಹಣೆಗೆ ದಾನ ನೀಡಿದನೆಂಬ ಉಲ್ಲೇಖವಿದೆ.[೧೫]

ಹೀಗೆ ಮಂಡ್ಯ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಹೊಯ್ಸಳ ೋಜ ಮನೆತನದವರು ದೇವಾಲಯಗಳ ನಿರ್ಮಾಣಕ್ಕೆ ್ರಾಶಸ್ತ್ಯ ನೀಡುವುದರ ಜೊತೆಗೆ ಕೆರೆ, ಕಟ್ಟೆ, ತೂಬು ಸಮುದ್ರ ಾಲೆಗಳ ನಿರ್ಮಾಣಕ್ಕೂ ಹೆಚ್ಚಿನ ಆದ್ಯತೆ ನೀಡಿದರೆನ್ನಬಹು ಾಗಿದೆ. ಇವರು ನೀಡಿದ ಪ್ರೋತ್ಸಾಹದಿಂದ ಹಾಗೂ ಕಟ್ಟಿದ ರೆಕಟ್ಟೆಗಳಿಂದ ಇಂದಿಗೂ ಜನರು ಕೃಷಿಯನ್ನವಲಂಬಿಸಿ ರ್ಥಿಕವಾಗಿ ಮುಂದುವರೆಯಲು ಸಹಾಯಕವಾಗಿದೆ.

ಕೆರೆ-ಕಟ್ಟೆಗಳು ಮನುಕುಲದ ಜೀವನೋಪಾಯಕ್ಕೆ ವಲಂಬನೆಯಾದಂತಹ ಕೃಷಿಗೆ ಪ್ರೇರಕವಾಗಿ ಆ ಪ್ರಾಂತ್ಯದಲ್ಲಿ ಕೆರೆ-ಕಟ್ಟೆಗಳು ನಿರ್ಮಾಣವಾಗಿದ್ದವು ಹೀಗಾಗಿ ಇದೊಂದು ಧಾರ್ಮಿಕವಾಗಿ ಪುಣ್ಯದ ಕೆಲಸವಾಗಿರುತ್ತದೆ ಎಂಬ ಭಾವನೆ ಯಾಗಿತ್ತು.

[ಲೇಖನ ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಿದ ಡಾ. ಜಿ. ಕರಿಯಪ್ಪ, ಮಾರ್ಗದರ್ಶಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರಿಗೆ ನನ್ನ ಕೃತಜ್ಞತೆಗಳು.]



## ಆಧಾರಸೂಚಿ


ಪಾರ್ಥಸಾರಥಿ. ಟಿ.ಎ. (ಸಂ), ಮಂಡ್ಯ ಜಿಲ್ಲೆಯ ಗೆಜೆಟಿಯರ್, ಬೆಂಗಳೂರು, ೨೦೦೩.

ಕಾಣೆ, ಪಿ.ವಿ., History of Dharmasthala, volume III, Poora, 1993, P. 162.

ಎಪಿಗ್ರಾಫಿಯಾ ಕರ್ನಾಟಕ, ಸಂ. ೬, ಶಾ. ಸಂ. ೩೭, ಕೃಷ್ಣರಾಜಪೇಟೆ, ಪುಟಸಂಖ್ಯೆ ೨೧.

ಎ.ಕ, ಸಂ. ೬, ಶಾ.ಸಂ. ೧೧೩, ಶ್ರೀರಂಗಪಟ್ಟಣ, ಪುಟ ೨೯.

ಎ.ಕ, ಸಂ. ೭, ಶಾ.ಸಂ. ೧೪, ನಾಗಮಂಗಲ, ಪುಟ ೧೧, ೧೨.

ಎ.ಕ, ಸಂ. ೭, ಶಾ.ಸಂ. ೧೭, ನಾಗಮಂಗಲ, ಪುಟ ೧೩, ೧೪.

ಎ.ಕ, ಸಂ. ೬, ಶಾ.ಸಂ. ೬೨, ಕೃಷ್ಣರಾಜಪೇಟೆ, ಪುಟ ೪೪.

ಎ.ಕ, ಸಂ. ೬, ಶಾ.ಸಂ. ೨೦, ಶ್ರೀರಂಗಪಟ್ಟಣ, ಪುಟ ೧೨೦.

ಎ.ಕ, ಸಂ. ೭, ಶಾ.ಸಂ. ೧೧೮, ನಾಗಮಂಗಲ, ಪುಟ ೧೧೭.

೦. ಎ.ಕ, ಸಂ. ೭, ಶಾ.ಸಂ. ೮೩, ಮಂಡ್ಯ, ಪುಟ ೨೫೧.

೧. ಎ.ಕ, ಸಂ. ೭, ಶಾ.ಸಂ. ೨೯, ಮಂಡ್ಯ, ಪುಟ ೨೧೧.

೨. ಎ.ಕ, ಸಂ. ೭, ಶಾ. ಸಂ. ೮೨, ನಾಗಮಂಗಲ, ಪುಟ ೮೪.

೩. ಎ.ಕ, ಸಂ. ೭, ಶಾ.ಸಂ. ೮೩, ನಾಗಮಂಗಲ, ಪುಟ ೮೬.

೪. ಎ.ಕ, ಸಂ. ೭, ಶಾ.ಸಂ. ೦೯, ಮದ್ದೂರು, ಪುಟ ೨೫೮.

೫. ಎ.ಕ, ಸಂ. ೬, ಶಾ.ಸಂ. ೧೧, ಕೃಷ್ಣರಾಜಪೇಟೆ, ಪುಟ ೧೦.




# ಹೊಯ್ಸಳ ಮಹಾಸಾಮಂತ ಗೋವಿದೇವ ಮತ್ತು ಅವನ ವಂಶೀಯರು

ಎಸ್. ಗಂಗಾಬಿಕೆ*

**ಹೊ**ಯ್ಸಳ ರಾಜ್ಯಾಡಳಿತದ ಕ್ರಿ.ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದ ಆರಂಭದವರೆಗೆ ಸಾಮ್ರಾಜ್ಯದ ದಕ್ಷಿಣ ಮತ್ತು ಪೂರ್ವಭಾಗಗಳಲ್ಲಿ ಸುಸ್ಥಿರವೂ ಸಂಪದ್ಭರಿತವೂ ಆದಂತಹ ಸ್ಥಳೀಯ ಆಡಳಿತ ನಡೆಸಿದ ಸಾಮಂತ ಮನೆತನ ಗೋವಿದೇವನದು. ಮಲೆನಾಡಿನಿಂದ ಬಯಲುನಾಡಿಗೆ ಹೊಯ್ಸಳ ಸಾಮ್ರಾಜ್ಯದ ಮಹಾರಥವು ಸಂಚರಿಸುವ ಘಟ್ಟದಲ್ಲಿ ಅನೇಕ ವೈರಿಪಡೆಗಳನ್ನು ಹೊಯ್ಸಳರು ಎದುರಿಸಬೇಕಾಯಿತು. ಚೆಂಗಾಳ್ವರು, ಕೊಂಗಾಳ್ವರು, ಚೋಳರು, ಪಾಂಡ್ಯರು ಮುಂತಾದವರ ಉಪಟಗಳ ನಡುವೆ ತಮ್ಮ ಅಸ್ಮಿತೆಯನ್ನು ರಾಜಕೀಯ ಮಹತ್ವಾಕಾಂಕ್ಷೆಯನ್ನು ಪೋಷಿಸುಡುವ ಅಗತ್ಯತೆ ಇದ್ದುದರಿಂದ ಸಾಮಂತ ಮನೆತನಗಳನ್ನು ಕೆಲವೆಡೆ ಭದ್ರವಾಗಿ ನೆಲೆಯೂರುವಂತೆ ಮಾಡಿ ಆ ಮೂಲಕ ಸ್ಥಳೀಯವಾಗಿ ಅರಾಜಕತೆಯು ಉಂಟಾಗದಂತೆ ನೋಡಿಕೊಳ್ಳುವುದು ಹೊಯ್ಸಳರ ಮುಖ್ಯ ರಾಜನೀತಿಗಳಲ್ಲಿ ಒಂದಾಗಿದ್ದಿತು. ಅಂತೆಯೆ ಅವರು [ಇಂದಿನ ಚಿಕ್ಕನಾಯಕನಹಳ್ಳಿ ತಾಲೂಕಿನ ಹುಳಿಯಾರು] ಹುಳಿಯೇರು, [ಇಂದಿನ ಅರಸೀಕೆರೆ ತಾಲೂಕಿನ ಕಣಕಟ್ಟೆ] ಕಳಿಕಟ್ಟೆ, [ಕಡೂರು ತಾಲೂಕಿನ ನೀರಗುಂದ] ನೀಗುಣ ಮತ್ತು ಇವುಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಾಮಂತ ಗೋವಿದೇವ ಮತ್ತು ಅವನ ವಂಶೀಯರನ್ನು ನೆಲೆಗೊಳಿಸಿದ್ದರು. ಈ ವಂಶೀಯರು ತಮ್ಮ ಅಧಿರಾಜರ ರಾಜನೀತಿ ಸಂಪೂರ್ಣ ಬದ್ಧರಾಗಿದ್ದುಕೊಂಡು ಆಗಾಗ ಎದುರಾಗುವ ಎದುರಾಳಿಗಳನ್ನು ಸದೆಬಡಿದು ತಮ್ಮ ರಾಜನಿಷ್ಠೆಯನ್ನು ತೋರುತ್ತಲೇ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಗೆ ಮಿಗಿಲಾದ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

ಸಾಮಂತ ಕರಿಯಬೊಮ್ಮನ ಅಗ್ರತನುಜ ಆಹವಮಲ್ಲ ಮತ್ತು ಅವನ ಮಕ್ಕಳು, ಮೊಮ್ಮಕ್ಕಳೆಲ್ಲರು ವಂಶಪಾರಂಪರ್ಯವಾಗಿ ಹುಳಿಯಾರು ಪ್ರದೇಶದಲ್ಲಿ ಸಾಮಂತ ಪದವಿಯಿಂದ ಆಳಿದರೆ, ಕರಿಯಬೊಮ್ಮನ ದ್ವಿತೀಯ ಪುತ್ರ ಕೆಚ್ಚನೆ ಮಾಚಯನಾಯಕ ಮತ್ತು ಅವನ ಮಗ, ಮೊಮ್ಮಗ ಕಣಕಟ್ಟೆ ಪ್ರದೇಶದಲ್ಲಿ ಸಾಮಂತ ಪದವಿಯಿಂದ ಆಳಿದ್ದಾರೆ. ಆಹವಮಲ್ಲನ ಎರಡನೆಯ ಮೊಮ್ಮಗನಾದ ಸಾಮಂತ ಚಟ್ಟಯ್ಯನು ಹುಳಿಯಾರಿನಲ್ಲಿ ತನ್ನ ಮನೆತನದ ಭದ್ರಪ್ರಭಾವ ಅಸ್ಥಿಭಾರವನ್ನು ಹಾಕಿ ನೀರ್ಗುಂದಕ್ಕೆ ತೆರಳಿ ಅಲ್ಲಿಯೂ ಸಾಮಂತ ಪದವಿಯಿಂದ ಆಡಳಿತ ನಡೆಸುತ್ತಾನೆ. ಚಟ್ಟಯ್ಯನ ತರುವಾಯ ಹುಳಿಯಾರಿನಲ್ಲಿ ಅವನ ತಮ್ಮ ಸಾಮಂತ ಗೋವಿದೇವ ಮತ್ತು ಅವನ ಮಗ, ಮೊಮ್ಮಕ್ಕಳು ವಂಶಪಾರಂಪರ್ಯವಾಗಿ ಹುಳಿಯೆರಪುರವರಾಧೀಶ್ವರರಾಗಿ ಆಳ್ವಿಕೆ ನಡೆಸಿದ್ದಾರೆ. ನಡುವೆ ಕೆಲಕಾಲ ಚಟ್ಟನ ಮಗ ಬಿಟ್ಟಿದೇವ ಹುಳಿಯಾರನ್ನು ಆಳುತ್ತಾನೆ. ಅತ್ತ ನಿರ್ಗುಂದದಲ್ಲಿ ಚಟ್ಟಯ್ಯನ ಮರಣದ ತರುವಾಯ ಚಟ್ಟನ ಅಣ್ಣನಾದ ಮಾಚನ ಮಗ ಮಲ್ಲನು ಪ್ರವರ್ಧಮಾನದಲ್ಲಿರುತ್ತಾನೆ.

ಹುಳಿಯಾರು, ನೀರ್ಗುಂದ, ಕಣಿಕಟ್ಟೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳೇ ಏಕೆ ಈ ಸಾಮಂತರ ಮುಖ್ಯ ಆಡಳಿತಕ್ಕೆ ಒಳಪಟ್ಟಿತ್ತು? ಎಂಬ ಪ್ರಶ್ನೆಗೆ ಉತ್ತರ ಹುಡುಕ ಹೊರಟರೆ, ಈ ಪ್ರದೇಶಗಳ ಶಾಸನಗಳಲ್ಲಿನ ಭೂದಾನಗಳನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಈ ಭೂದಾನಗಳು ಪದೇ ಪದೇ ಅನೇಕ ಅನೇಕ ಊರುಗಳ ಕೆರೆ, ಹಿರಿಯಕೆರೆ, ದಕ್ಷಿಣದ ಕೆರೆ ಕೆರೆಯ ಮೊದಲೇರಿ, ಉತ್ತರದ ಕೆರೆ, ದೊಡ್ಡ ಆಲದ ಮರದ ದಕ್ಷಿಣದ ಕೆರೆ ಇತ್ಯಾದಿಯಾಗಿ ಫಲವತ್ತಾದ ಮಣ್ಣಿನ ಸೀಮೆಗಳೆಂಬುದನ್ನು ಸೂಕ್ಷ್ಮವಾಗಿ ಧ್ವನಿಸುತ್ತವೆ. ಸಹಜವಾಗಿಯೇ ಕೆರೆಯಿದ್ದ ಎಡೆಗಳಲ್ಲಿ ಕೃಷಿ, ಕೃಷಿಯಿಂದ ವ್ಯಾಪಾರ, ವ್ಯಾಪಾರದಿಂದ ಹಣದ ಸಂಚಯನ, ಆ ಮೂಲಕ ಪುಟ್ಟ ಪಟ್ಟಣಗಳ ನಿರ್ಮಿತಿ, ಪಟ್ಟಣಗಳ ನಡುವೆ ನಡೆಯುವ ಒಳನಾಡಿ ದೇಶಿಯ ವ್ಯವಹಾರಗಳು ಸುಭಗವಾಗಿರುತ್ತವೆ. ಹೀಗಾಗಿ ಈ ಪ್ರದೇಶಗಳು ಸಂಪದ್ಭರಿತವಾಗಿದ್ದವು ಮಾತ್ರವಲ್ಲದೆ ಹೊಯ್ಸಳ ಸಾಮ್ರಾಜ್ಯದ ಒಟ್ಟು ಆರ್ಥಿಕತೆಯಲ್ಲಿ ವಿಶಿಷ್ಟವಾದ ಸ್ಥಾನಗಳಿಸಿದ್ದ ವ್ಯಾಪಾರಿ ಮಾರ್ಗಗಳಾಗಿದ್ದವು. ಆದ್ದರಿಂದ

* ಸಂಶೋಧನಾ ವಿದ್ಯಾರ್ಥಿನಿ, ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು.

ಲ್ಲಿ ಇಂತಹ ಬಲಿಷ್ಠ ಸಾಮಂತರು ಹೊಯ್ಸಳರ ಅವಧಿ ಮುಗಿಯುವವರೆಗೂ ನೆಲೆಗೊಂಡಿದ್ದರು ಗೋವಿದೇವ ವಂಶೀಯರು ಎಂತಹ ಬಲಿಷ್ಠರೆಂದರೆ ಇವರ ಶಾಸನ ಪದ್ಯಗಳೇ ಇವರೆಂತಹ ಅಸಹಾಯ ಶೂರರೆಂಬುದನ್ನು ಸ್ಪಷ್ಟಪಡಿಸುತ್ತವೆ.

## ಮಗರೆ ನಾಡು

ಮಗರೆ ನಾಡು ಅಥವಾ ಮಕರನಾಡು ಒಂದು ಆಡಳಿತ ವಿಭಾಗವಾಗಿ ಗಂಗರ ಕಾಲದಿಂದಲೂ ಅಸ್ತಿತ್ವದಲ್ಲಿದ್ದಿತು. ಕೆ.ವಿ. ರಮೇಶ್: Inscriptions of Western Gangas, [Vol. 2] ಇದು ಹೊಯ್ಸಳ ಸಾಮ್ರಾಜ್ಯದಲ್ಲಿ ಒಂದು ಪ್ರಮುಖ ಆಡಳಿತ ವಿಭಾಗವಾಗಿದ್ದು ಮಗರೆ ೩೦೦ ಎಂದು ಹೆಸರಾಗಿದ್ದಿತು. ಮಗರೆ ನಾಡನ್ನು ಹೆಸರಿಸುವ ಎಲ್ಲ ಶಾಸನಗಳು ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಇದ್ದುದರಿಂದ ಮತ್ತು ಇವುಗಳಲ್ಲಿ ಉಕ್ತವಾದ ಅನೇಕ ಗ್ರಾಮಗಳನ್ನು ಈ ತಾಲೂಕಿನಲ್ಲಿ ಗುರುತಿಸುವುದು ಸಾಧ್ಯವಿದ್ದುದರಿಂದ ಈ ವಿಭಾಗವು ಈ ತಾಲೂಕಿನ ಬಹುಭಾಗವನ್ನು ಒಳಗೊಂಡಿದ್ದಿತೆಂದು ಹೇಳಬಹುದು. ಹುಳಿಯಾರು ಗ್ರಾಮವು ಈ ವಿಭಾಗದ ಮುಖ್ಯಸ್ಥಳವಾಗಿದ್ದಿತು. ಮಗರೆ ನಾಡು ಹುಳಿಯರ ನಾಡು ಎಂದು ಕರೆಯಲ್ಪಟ್ಟುದು ಕಂಡುಬರುತ್ತದೆ. ಈ ವಿಭಾಗದಲ್ಲಿ ಕಾಡನೂರು – ೭೦, ಕಿಜ್ಜಾಜಿ – ೧೨, ಮೊರಸೂರು – ೩೬ ಕಿರವನೂರು – ೧೨ ಮುಂತಾದ ಚಿಕ್ಕ ಚಿಕ್ಕ ವಿಭಾಗಗಳಿದ್ದವು. ಇಂಥ ವಿಭಾಗಗಳಲ್ಲಿ ಇದ್ದ ಹಲವಾರು ಗ್ರಾಮಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ. ಇಂಥವುಗಳಲ್ಲಿ ಎಷ್ಟೋ ಗ್ರಾಮಗಳನ್ನು ಇಂದಿನ ಗ್ರಾಮಗಳೊಂದಿಗೆ ಗುರುತಿಸುವುದು ಕಠಿಣವಾಗುತ್ತದೆ. ಆದರೂ ಕೆಲವನ್ನು ಗುರುತಿಸಬಹುದು. ಚಿಂಕನಹಳ್ಳಿ, ಬಿದರೆ (ಇಂದಿನ ದೊಡ್ಡಬಿದರೆ), ಹಿರಿಯಚೇಂಡಿ, ಚಿಕ್ಕ ಚೇಂಡಿ, ಹೆಗ್ಗರೆ (ಇಂದಿನ ಹೆಗ್ಗೆರೆ), ದೇವಿಹಾಳು, ನೀರಲಕೆರೆ [>ನೇರಲಕೆರೆ] ಅಣುವಗೆರೆ ಮಾರುಹೊಳೆ [> ಮೊರುಳೆ / ಮಾರುಹೊಳೆ], ಬರಿಗೆಯಹಳ್ಳಿ [> ಬರಗೀಹಳ್ಳಿ], ಬೆಣ್ಣಬ್ಬೆಗುಡ್ಡೆ ಕೋರಗೆರೆ [> ಕೋರಗೆರೆ], ತೇಕುರವಟಿ [> ದೊಡ್ಡ ತೇಕಲವಟ್ಟಿ], ಕೊಂದಲಗೆರೆ, ಎಡೆಯಕಟ್ಟ.

ಹೊಯ್ಸಳ ಸಾಮ್ರಾಜ್ಯದಲ್ಲಿ ಪ್ರಮುಖ ಮಾಂಡಲಿಕರಿಂದ ಆಳಲ್ಪಡುತ್ತಿದ್ದ ಮಗರೆನಾಡು ವಿಜಯನಗರ ಕಾಲದಲ್ಲಿ ಇದೇ ಸ್ಥಾನದಲ್ಲಿ ಮುಂದುವರೆಯಿತು. ಹಿಂದಿನ ಹೊಯ್ಸಳ ಸಾಮ್ರಾಜ್ಯವು ವಿಶಾಲವಾದ ವಿಜಯನಗರ ಕಾಲದಲ್ಲಿ ಹೊಯ್ಸಳ ರಾಜ್ಯ ಎಂಬ ಆಡಳಿತ ವಿಭಾಗವಾಯಿತು. ಇದರೊಂದಿಗೆ ಮಗರೆ ನಾಡು ಈ ಹೊಯ್ಸಳ ರಾಜ್ಯದ ಉಪವಿಭಾಗವಾಯಿತು. ವಿಜಯನಗರದ ಶಾಸನಗಳಲ್ಲಿ ಇದು ಮಗರೆ ನಾಡು ವೇಂಠೆ ಎಂದು ಕರೆಯಲ್ಪಟ್ಟಿದೆ. ಈ ಉಪವಿಭಾಗದಲ್ಲಿ ಇನ್ನೂ ಹಲವು ಚಿಕ್ಕ ಚಿಕ್ಕ ಭಾಗಗಳಿದ್ದವು. ವಿಭೂತಿಪುರಸೀಮೆ, ಹುಳೇರುಸೀಮೆ, ಬೂದಿಹಾಳು ಸೀಮೆ ಮುಂತಾದ ಚಿಕ್ಕ ವಿಭಾಗಗಳನ್ನು ಇಲ್ಲಿ ಹೆಸರಿಸಬಹುದು.

## ಮಹಾಸಾಮಂತ ಗೋವಿದೇವ

ಮಹಾಸಾಮಂತ ಗೋವಿದೇವನು ಹೊಯ್ಸಳ ವಿಷ್ಣುವರ್ಧನ ಮತ್ತು ಒಂದನೆಯ ನಾರಸಿಂಹನ ಆಳ್ವಿಕೆಯವಧಿಯಲ್ಲಿ ಮಗರೆ–೩೦೦ರ ಭೌಗೋಳಿಕ ವ್ಯಾಪ್ತಿಯಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದ ಮಹಾಸಾಮಂತನಾಗಿದ್ದನು. ಸಾಮಂತ ಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ ಳನೆಯ ಮಗನೀತ. ಕರಿಯಬೊಮ್ಮನ ವಂಶೀಯರಲ್ಲಿ ಚಟ್ಟಯ್ಯನ ತರುವಾಯ ಅತ್ಯಂತ ಪ್ರಸಿದ್ಧನಾದವನು ಈ ಗೋವಿದೇವ. ಶಾಸನಗಳಲ್ಲಿ ಈತನು ಗೋಯಿದೇವ, ಸಾಮಂತ ಗೋವಿ, ಸಾಮಂತ ಗೋಯಿ ಎಂದು ಮುಂತಾಗಿ ಉಲ್ಲೇಖಿತನಾಗಿದ್ದಾನೆ. ಕ್ರಿ.ಶ. ೨೩.೦೪.೧೧೪೩ರ ಕಣಿಕಟ್ಟೆಯ ಶಾಸನವು[೧] ಇವನ ಬಗೆಗಿನ ಪ್ರಥಮ ಉಲ್ಲೇಖವನ್ನೊಳಗೊಂಡಿದೆ. ಈ ಶಾಸನದ ಹೊತ್ತಿಗಾಗಲೇ ಹೊಯ್ಸಳ ಸಾಮ್ರಾಜ್ಯದಲ್ಲಿ ಗಣ್ಯಸ್ಥಾನವನ್ನು ಪಡೆಯುತ್ತಿದ್ದು ಕ್ರಿ.ಶ. ೧೧೪೩ರಲ್ಲಿ ಮಗರೆನಾಡು – ೩೦೦ರ ವೊದಲಬಾಡವಾದ ಕಣಿಕಟ್ಟೆಯನ್ನು ಸರ್ವಭಾದಾ ಪರಿಹಾರವಾಗಿ ಆಳುತ್ತಿದ್ದನು.

ಅಪಾರ ಬಿರುದುಗಳಿಗೆ ಆಳರಸನೋಪಾದಿಯಂತೆ ಪಾತ್ರನಾಗಿರುವುದು ಅತ್ಯಂತ ಗಮನಾರ್ಹ. ಕ್ರಿ.ಶ. ೧೧೪೩ರ ವೇಳೆಗಾಗಲೇ ಆತ ರಾಜಕೀಯವಾಗಿ ಆಡಳಿತಾತ್ಮಕ ಸಾಧನೆಗಳನ್ನು ಗೈದಂತೆ ತೋರುತ್ತದೆ. ಅವಿಧೇಯ, ಅಹಿತ, ಗರ್ವಿಷ್ಟ ಸಾಮಂತರನ್ನು ಈತ ಬಗ್ಗುಬಡಿದು ನರಸಿಂಹ ದೊರೆಯ ಬಲಗೈಭಂಟನಾಗಿ ರಾಜನಿಷ್ಠೆಯನ್ನು ತೋರಿಸಿದ್ದುದು, ನಿರ್ಮಲವಾದ ಕೀರ್ತಿಯನ್ನು ಹೊಂದಿದ್ದುದು, ನೋಡಲು ಕೂಡ ಸುಲಕ್ಷಣವಾಗಿದ್ದುದು ಈ ಬಿರುದುಗಳಿಂದ ತಿಳಿದುಬರುತ್ತದೆ. ಮತ್ತೂರಿನ ಶಾಸನವು[೨] ಸಹ ಈತನನ್ನು ಬಹಳಸೊಗಸಾಗಿ ಕೀರ್ತಿಸಿದೆ. ಈ ಶಾಸನೋಕ್ತ ಬಿರುದುಗಳು ಒಂದೆಡೆ ಆಳರಸನ ಜೊತೆಗೂಡಿ ಶತ್ರುಗಳೊಂದಿಗೆ ಹೋರಾಡಿ ವಿಕ್ರಮ ಸಾಧಿಸಿದ್ದರ ಕುರುಹುಗಳನ್ನು ತಿಳಿಸಿದರೆ, ಇನ್ನೊಂದೆಡೆ ಅವನ ರೂಪ–ಲಾವಣ್ಯ – ರಸಿಕತೆಗಳನ್ನು, ಮತ್ತೊಂದೆಡೆ ಅವನ ಧಾರ್ಮಿಕ ಪ್ರವೃತ್ತಿ ಆಸಕ್ತಿಗಳನ್ನು, ಮಗದೊಂದೆಡೆ ಅವನ ಒಟ್ಟು ವ್ಯಕ್ತಿತ್ವದ ಉನ್ನತಿಕೆಯನ್ನು ಸೂಕ್ಷ್ಮವಾಗಿ ಬಿಂಬಿಸುತ್ತವೆ. ಈ ಪ್ರಥಮ ಶಾಸನಗಳಲ್ಲಿಯೇ ಆತ 'ಹುಳಿಯೆಱಪುರವರಾಧೀಶ್ವರ' ಎಂದು ಕರೆದುಕೊಂಡಿರು

ವುದನ್ನು ಗಮನಿಸಿದಾಗ, ಅವನ ನಿಜವಾದ ಆಡಳಿತದ ಕೇಂದ್ರಸ್ಥಾನವು ಹುಳಿಯೇರು ಆಗಿದ್ದು, ರಾಜತಾಂತ್ರಿಕ ಕಾರ್ಯಗಳಿಗಾಗಿ ಆಗಾಗ ಕಣಿಕಟ್ಟೆ, ಕಡೂರು ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಕಾರ್ಯಭಾರ ನಿರ್ವಹಿಸುತ್ತಿದ್ದಿರಬೇಕು.

'ಅಂಣ್ನನ ಗಂಧವಾರಣ' [ಚಟ್ಟನ ಪ್ರಿಯನಾದ] ಗೋವಿದೇವನು ಅಣ್ಣನಂತೆ ವೀರಾಗ್ರಣಿಯಾಗಿದ್ದುದಕ್ಕೆ ಈ ಶಾಸನೋಕ್ತ ಪದ್ಯಗಳು ಸಾಕ್ಷಿಯಾಗಿವೆ:

**ಹರಿಯುಂ ವಾರಣವಟ್ಟೆವಾರಣಘಟಾನೀಕಂಗಳು ಕೋಪದಿಂ**
**ತುರಗಾನೀಕವದಟ್ಟಲುರ್ವ್ವಿಸೆ ಹಯಾನೀಕಂ ನರಾನೀಕಮ**
**ಮರಳುಟ್ಟುತ್ತಿರೆ ನಾರದಂ ನಲಿಯಲಾಜಿಕ್ಷೋಣಿಯೊಳು ಕೊಂದ್ದು**
**ದುರ್ದ್ಧರ ಕೋಪಂ ನಲಿಯುತ್ತಮಿರ್ಪ್ಪುದಂ ಭುಜಂ ಸಾಮನ್ತಗೋವಿಂದನಂ**[5]

**ಚಂಗಾಳುವನೇಜಿದ ಮಾ**
**ತಂಗದ ಮೊಗದೊಡ್ಡಿನಲ್ಲಿ ಸಬಳದ ಮಸೆಗಳು**
**ಪಿಂಗದೆ ಪೋಲ್ತೆಸದಿರ್ಜ್ಜವು**
**ಸಂಗತಗುಣ ಗೋವಿಯಿಜಿದ ಸಾಸನಲಿಪಿಯಂ**[6]

ಚೆಂಗಾಳ್ವ ದೊರೆಯನ್ನು ಸೋಲಿಸಿದುದು ಗೋವಿದೇವನ ಬಹುದೊಡ್ಡ ಸಾಧನೆ. ಈ ಶಾಸನೋಕ್ತ ಸಾಲಿನ ಅರ್ಥವೇನೆಂದರೆ, ಗೋವಿದೇವನು ಚೆಂಗಾಳ್ವ ಅರಸನೊಡನೆ ಯುದ್ಧ ಮಾಡುತ್ತಿದ್ದಾಗ, ಆ ಅರಸನು ಕುಳಿತಿದ್ದ ಆನೆಯ ಮುಖದ ಮೇಲೆ ಭರ್ಜಿಯಿಂದ ಇರಿದು ಮಾಡಿದ ಗಾಯಗಳು ಗೋವಿದೇವನ ಶೌರ್ಯವನ್ನು ವರ್ಣಿಸುವ ಶಾಸನದ ಅಕ್ಷರಗಳಂತೆಯಿದ್ದವು. ಈ ಶಾಸನದ ಕಾಲ ಕ್ರಿ.ಶ. ೧೧೮೯, ಈ ವೇಳೆಗೆ ಆಳುತ್ತಿದ್ದ ಚಂಗಾಳ್ವ ದೊರೆ ಮಹಾದೇವ, ಹೊಯ್ಸಳರಿಗೂ–ಚೆಂಗಾಳ್ವರಿಗೂ ನಡೆಯುತ್ತಿದ್ದ ಯುದ್ಧಗಳಲ್ಲಿ ಒಂದು ಉದಾಹರಣೆಯನ್ನು ಈ ಶಾಸನ ಯಥೋಚಿತವಾಗಿ ತಿಳಿಸಿದೆ.

### ಗೋವಿದೇವನ ಅಧೀನ ಅಧಿಕಾರಿಗಳು

ಗೋವಿಯ ಪ್ರಾದೇಶಿಕ ಆಡಳಿತದಲ್ಲಿ ಅವನ ಅಧೀನ ಅಧಿಕಾರಿಗಳು ನೆರವು ನೀಡು ತ್ತಿದ್ದರು. ಅವರಲ್ಲಿ ಒಬ್ಬೊಬ್ಬರ ಕೊಡುಗೆಗಳನ್ನು ಈ ಮುಂದಿನಂತೆ ಕಾಣಬಹುದು.

### ಪೆರ್ಗಡೆ ಕೇತಣ್ಣ

ಈತ 'ಚಟ್ಟನಗಂಧವಾರಣ', 'ಗೋವಿಯ ಕಟ್ಟಿದಲಗು' ಎಂದು ಪ್ರಸಿದ್ಧನಾಗಿದ್ದ ಪೆರ್ಗಡೆ ಬಿಕ್ಕಿಮಯ್ಯನ ಮಗ. ಕೇತಣ್ಣನು ತನ್ನ ತಂದೆಯಂತೆ ವೀರಶ್ರೇಷ್ಠನೂ, ಅಸಹಾಯ ಶೂರನೂ ಆಗಿದ್ದನು. ಆದ್ದರಿಂದ ಅವನಿಗೆ 'ಮಹಾಸುಭಟ ಗುಣಸಂಪೂರ್ಣ' ಎಂಬ ಬಿರುದಿತ್ತು. ಈತನು ತನ್ನ ತಮ್ಮಂದಿರಾದ ಮಾರೆಯ, ದೇವಣ್ಣರೊಡಗೂಡಿ ಒಂದು ದೇವಾಲಯವನ್ನು ನಿರ್ಮಿಸಿ, ಅದಕ್ಕೆ ಭೂದಾನಗಳನ್ನು ಕೊಡುತ್ತಾನೆ. ಇವನಿಂದ ಆಲಯ ನಿರ್ಮಿತವಾದ ಸ್ಥಳವಾದ ಮತ್ತೂರು ಇವನಿಗೆ ಹೇಗೆ ಕೊಡುಗೆಯಾಗಿ ಬಂತು ಎಂದು ಹೇಳುವಾಗ, ಸೊಗಸಾದ ಯುದ್ಧಚಿತ್ರದೊಂದಿಗೆ ಕೇತಣ್ಣನು ಆಳರಸನೊಂದಿಗೆ ವೈರಿಗಳೊಂದಿಗೆ ಹೋರಾಡಿದ ವಿಷಯವನ್ನು ಮತ್ತೂರಿನ ಶಾಸನ[7] ತಿಳಿಸುತ್ತದೆ:–

**"ಆಳ್ದನ ಅನುವರದೊಳಂ ಬಯಲುಗಾಳೆಗದೊಳಂ ಕೋಟೆಗಾಳಗದೊಳಂ**
**ಮಾಜಿಕೌಂತವೈರಿಗಳ ನಿಜಿದೋಡಿಸಿ ತನ್ನಿಜಿದ ತೊಡರಂ ಎತ್ತಿದಾನೆಯ**
**ಮೊಗವಡದಬಿರುದಂ ನೆಗರ್ತ್ತಯುಂ ಕೀರ್ತ್ತಿಯುಂ ಸಲಲು"**

ಅರಸನು ಮೆಚ್ಚಿ ಮತ್ತೂರನ್ನು ಇವನಿಗೆ ಕೊಡುಗೆಯಾಗಿ ಇತ್ತನು. ಈ ಊರಿನಲ್ಲಿ ಕೆರೆಯನ್ನು ಕಟ್ಟಿಸಿ, ತಮ್ಮ ತಂದೆ ಬಿಕ್ಕಿಮಯ್ಯನ ಹೆಸರಿನಲ್ಲಿ ಬಿಕ್ಕೇಶ್ವರ ದೇಗುಲವನ್ನು, ತನ್ನ ತಾಯಿಯ ಹೆಸರಿನಲ್ಲಿ ಆಂಡೇಶ್ವರ ದೇಗುಲವನ್ನು ನಿರ್ಮಿಸಿ, ಆ ದೇವರುಗಳ ಪೂಜಾದಿ ಸೇವೆಗಳಿಗೆಂದು ಗಂಗಣಿಕಬ್ಬೆಯ ಮಗ ಧರ್ಮರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು.

### ದೊಡ್ಡಬಿದಿರೆಯ ಮಸಣಗೌಡ

ಕ್ರಿ.ಶ. ೧೧೪೯ರ ಶಾಸನವು[8] ಈ ಮಸಣಗೌಡನ ವಂಶಾವಳಿಯನ್ನು ತಿಳಿಸುತ್ತದೆ. ಅದರ ಪ್ರಕಾರ :–

ಚಾಮಗೌಡ
↓
ಮಾರಗೌಡ + ಬಿದಿಯವ್ವೆಗೌಡಿ
↓
ಎರೆಯಗೌಡ
↓ ↓ ↓
ಮಸಣಗೌಡ ಮಾಚಯಗೌಡ ಮಾರೆಯ ಗೌಡ

ಮಸಣಗೌಡನು ಗೋವಿದೇವನ ನಿಷ್ಠಾವಂತ ಸೇವಕನಾಗಿದ್ದನು. ಈತನು ತನ್ನ ತಮ್ಮಂದಿರೊಡಗೂಡಿ ಬಿದಿರೆಯ ಮೂಲಸ್ಥಾನದ ಕಲಿದೇವರಿಗೆಂದು ಕಾರ್ತಿಕದೇವರ ಮೊದಲಬಾಡವಾದ ಕೊಟ್ಟಿತಣೆಯ ಕಲ್ಲುಮಠದ ಮಲ್ಲಿಕಾರ್ಜುನ ಪಂಡಿತರ ಪುತ್ರರಾದ ಸಂಕರಾಶಿಪಂಡಿತ ಮತ್ತು ಸಂತರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು.

### ತಂಡಗದ ಮಾಚರಸ

ತಂಡಗದ ಶಾಸನವು[೭] ಇವನ ಅದ್ವಿತೀಯ ವ್ಯಕ್ತಿತ್ವವನ್ನು, ವಂಶಿಯರ ಬಗ್ಗೆ ಮಾಹಿತಿ ನೀಡುತ್ತದೆ :

ಹೋಚಣ
↓
ಏಚರಸ + ಮಾರಬ್ಬರಸಿ
↓ ↓ ↓
ಮುದ್ದರಸ ಮಾಚರಸ ದೇಕರಸ

ಈ ವಂಶೀಯರಲ್ಲಿ ಮೊದಲನೆಯ ತಲೆಯಾದ [ಸದ್ಯಕ್ಕೆ ತಿಳಿದ ಮಟ್ಟಿಗೆ] ಹೋಚಣನು ಮೊರಸು-೩೬ನ್ನು ಆಳುತ್ತಿದ್ದು, ತನ್ನ ರಾಜಕಾರ್ಯದುರಂಧರತೆಗಾಗಿ ಅರಸನಿಂದ ಕಿಱುವನೂರು ೧೨ನ್ನು ಕೊಡುಗೆಯಾಗಿ ಪಡೆದಿದ್ದನು. ಇವನ ಮಗ ಏಚರಸ ಅಥವಾ ಏಚಭೂಪನು "ಪಾರದಲಕ್ಷ್ಮಿಯಂ ಪಡೆದು ಸಂಪದದಿಂದ ವಿಭ್ರಾಳಿಗಳ್ಗೆ ಕೈಯ್ವಾದನಿತ್ತು ಶೋಭಿಸುವ ಕೀರ್ತಿಗೆ ಪಾತ್ರನಾಗಿದ್ದನು. ಇವನ ಧಾರ್ಮಿಕ ನಿಷ್ಠೆಯಿಂದ "ಕಲಿಕಾಲದ ಕಳ್ಪಭೂಜ" ಎಂದು ಹೆಸರಾಂತವನಾಗಿದ್ದನು.

ಏಚರಸನ ಮೊದಲ ಮಗ ಮುದ್ದನು ತನ್ನ ದಾನಗುಣಸಂಪನ್ನತೆಯಿಂದ ನಿರ್ಮಲ ವ್ಯಕ್ತಿತ್ವದಿಂದ ಲೋಕಪ್ರಸಿದ್ಧನಾಗಿದ್ದನು. ಇದನ್ನು ಶಾಸನೋಕ್ತ ಸಾಲಿನಲ್ಲಿಯೇ ಹೇಳುವುದಾದರೆ-

**ಕಡು ಚಲ್ವನಪ್ಪ ದೇಗುಲ**
**ಬಡವರ ಬಂಧುಗಳ್ಗೆ ಕುಡುವ ದಾನೋನ್ನತಿಯಿಂ**
**ಮೃಡನ ಸುತ ಕರ್ಣ್ನ ಧರ್ಮಜ**
**ಪಡಿಯೆನಲುಂ ಮುದ್ದಂ ಲೋಕದೊಳಗೆ ಪ್ರಸಿದ್ಧ**

ಇನ್ನು ಏಚರಸನ ಮತ್ತೊಬ್ಬ ಮಗ ದೇಕರಸನ ವ್ಯಕ್ತಿತ್ವ ಹಾಗೂ ಅವನು ಮಾಡಿದ ಕಾಳಗಗಳ ಯುದ್ಧಚಿತ್ರಣ ಇಂತಿದೆ:

**ತುಱುಪರಿಗವೆಂಬ ಪುಯ್ಯಲ**
**ನೆಱೆಯೊಲಿಸಿ ಕೇಳ್ದುದೇಕಭೂಪತಿ ಬೇಗಂ**
**ಪೊಱಮಟ್ಟು ಬನ್ದು ತಾಗಿದ**
**ನೆಱವಿನ ದೊರ್ವ್ವಳದೀ ಕಳರನಾಕ್ಷಣದಿಂದ**
**ಕಲಿಯುಗಪಾರ್ತ್ಥಂ ದೇಕಂ**
**ಬಿಲ್ಗೊಯ್ದಿರೆ ಕೊಲದೊಗೆಯ ಮಂಬಿನ ಕಿಡಿಯುಂ**
**ಪಲಿಕಲಿಸಿದ್ಧರ್ವ್ವಯರಿ ಬಂ**
**ಬಳಪೊಲಗೆಟ್ಟುದು ಪೆಣದ ಬ್ರಣದ ರಣಗತ್ತಲೆಯೊಳು**

ದೇಕರಸನು ಅನ್ತು ಕಾದಿ ತನ್ನ ಸಾಮರ್ಥ್ಯ ಬಲದಿಂದ ಎದುರಾಳಿಯ ಬಲವನ್ನು ಸೋಲಿಸಿ ತುರುಗಳನ್ನು ಮರಳಿ ತರುತ್ತಿದ್ದನು. ಇಂತಹುದೇ ಒಂದು ತುರುಗಾಳಗದಲ್ಲಿ ದೇಕರಸನು ಮರಣಹೊಂದಿದನು.

**ಹೊತ್ತಗೆಯಟವಣೆಕೋಲ್ಗಳ**
**ಲೆತ್ತಿದ ತೆಱದನ್ತೆ ಸರದ ತನ್ದಲು ತನುವಂ**
**ತೆತ್ತಿ ಸಲ್ಕಮರಕಾಂತಾ**
**ಜತ್ತಕಿಯರುಯ್ಯೆ ದೇಕಂ ನಾಕಕ್ಕೋದ**

ಇನ್ನು ಗೋವಿಯ ರಾಜ್ಯಸಮುದ್ಧರಣಕ್ಕೆ ಮಾಚರಸನು ವೀರಲಕ್ಷ್ಮಿಯು ವಿಷ್ಣುವಿನ ಜೊತೆಗಿರುವಂತೆ ಸಹಾಯಕ ನಾಗಿದ್ದದನು. ಗೋವಿಯು ಅವನನ್ನು ಪ್ರೀತಿಯಿಂದ ಪೊರೆದು ಮನ್ನಣೆಯಿತ್ತು, ಮಂಡಳಿಕ ಪದವಿಗೇರಿಸಿದ್ದನು. ತನ್ನ ದಾನ, ಧರ್ಮ, ವಿಕ್ರಮಗಳ ಔನ್ನತ್ಯದಿಂದ ಮಾಚರಸನು ಗೋವಿಯ ಅಧೀನದಲ್ಲಿನ ಪ್ರದೇಶಗಳಲ್ಲಿ ಶಾಂತಿ-ಸುಭದ್ರತೆಗಳು ನೆಲೆಸುವಂತೆ ಮಾಡಿದನು. ವಸುಧೆಗೆ ಶಾಶ್ವತವಾಗಿ ಶಿವಗೃಹಗಳನ್ನು ಮಾಚನು ನಿರ್ಮಿಸಿದ್ದನು. ತಂಡಗದಲ್ಲಿ ಏಚೇಶ್ವರ ಮತ್ತು ಮುದ್ದೇಶ್ವರ [ತನ್ನ ತಂದೆ ಮತ್ತು ಅಣ್ಣನ ನೆನಪಿಗಾಗಿ] ದೇವರುಗಳನ್ನು ಪ್ರತಿಷ್ಠೆಮಾಡಿ, ಆಲಯ ನಿರ್ಮಿಸಿ, ದೇಗುಲದ ನಿರ್ವಹಣೆಗೆಂದು ಹಿರಿಯಕೆರೆಯ ಹೊಲಗಳನ್ನು ದತ್ತಿಯಾಗಿ ಮೂಲಸ್ಥಾನದ ಅಮೃತರಾಶಿ ದೇವರಿಗೆ ನೀಡಿದನು.

ಗೋವಿಗೆ ನಿಷ್ಠರಾಗಿ ಕಾರ್ಯನಿರ್ವಹಿಸಿದ ಈ ಬಾಣಕುಳೋದ್ಭವರು ಸ್ಥಳಿಯವಾಗಿ ವಿಶೇಷ ಮನ್ನಣೆಗೆ ಪಾತ್ರರಾಗಿದ್ದರು.

### ಮನ್ನೆಯ ಮನಹರಸ

ಈತ ಕಾಡನೂರು-೭೦ ರಲ್ಲಿನ ಹೆಜ್ಜಾಜಿ ೧೨ಕ್ಕೆ ಉತ್ತರಾಧಿಕಾರಿಯೇನೋ ಎಂಬಂತೆ ರಾಯಿಂದ್ರ ಚೋಳನ ಮೊಮ್ಮಗನಾಗಿ ಚಾಮದೇವನ ಮಗನಾಗಿ ಜನ್ಮವೆತ್ತಿದನು. ಇವನಿಗೆ ಮಾಚರಸ, ಬಮ್ಮರಸ, ಮಾರರಸರೆಂಬ ಮೂವರು ಸಹೋದರರಿದ್ದರು. ಮನಹರಸ ಶೌರ್ಯ-ಪರಾಕ್ರಮ, ಧರ್ಮಗುಣೋನ್ನತಿಗಳನ್ನು ಶಾಸನಗಳು[೮] ವಿಶೇಷವಾಗಿ ಬಣ್ಣಿಸಿವೆ:

ಮನಹರಸನು ತನ್ನ ಗುರುಗಳಿಗೆ ಕೆಲವು ದಾನಗಳನ್ನು ಕೊಟ್ಟು ಅವರಿಗೆ ಗೌರವ - ಮನ್ನಣೆಗಳನ್ನು ನೀಡಿದ್ದನು. ತನ್ನ ಸಹೋದರರೊಡಗೂಡಿ ಕೋರಗೆರೆಯಲ್ಲಿ ೪ ಖಂಡಂಗ ಗದ್ದೆ, ೧ ಮತ್ತರು ಹೊಲ, ೧ ಕೊಳಗ ಗದ್ದೆಗಳನ್ನು ಶ್ರೀಪರ್ವತದ ಸಿದ್ಧಪಟ್ಟದಚಾರ್ಯ್ಯ ಗಂಗರಾಶಿದೇವರ ಶಿಷ್ಯಪರಂಪರೆಯಲ್ಲಿ ಬರುವ ಕೇಶವಶಕ್ತಿ ದೇವರಿಗೆ ದಾನವಾಗಿ ನೀಡಿದನು. ಕೇಶವಶಕ್ತಿದೇವರ ಗುರುಗಳಾದ ಶಿವಶಕ್ತಿದೇವರಿಗೆ ಡಿಂಕನಹಾಳದಲ್ಲಿ ೨ ಖಂಡುಗ ಗದ್ದೆ, ಹಿರಿಯಕೆರೆಯ ಕೆಳಗೆ ಹುಣಿಸೆಯ ಗದ್ದೆ ೧೦ ಕೊಳಗ, ಹಾಳ ಕೆಯಿ ೩ ಮತ್ತರುಗಳನ್ನು ದಾನವಾಗಿ ಅರ್ಪಿಸಿದನು.

## ಗೋವಿದೇವನ ಧಾರ್ಮಿಕ ನೀತಿ

ಗೋವಿದೇವನ ಮತ್ತು ಅವನ ಅಧೀನ ಅಧಿಕಾರಿಗಳ ಶಾಸನಗಳಲ್ಲಿ ಶೈವಧರ್ಮಪರ ನಿಲುವುಗಳಿದ್ದರೂ ಧರ್ಮಾಂದತೆ ಇರಲಿಲ್ಲ ಎಂಬುದಕ್ಕೆ ಶಾಸನಗಳೇ ಸಾಕ್ಷಿಯಾಗಿವೆ. ಹುಳಿಯಾರು, ತಂಡಗದ ಶಾಸನಗಳು ಗೋವಿದೇವನು ಜೈನಧರ್ಮಕ್ಕು ನಿಷ್ಠನಾಗಿದ್ದು ಬೌದ್ಧ, ವೈಷ್ಣವ ಧರ್ಮಗಳ ಉನ್ನತಿಗೂ ಶ್ರಮಿಸಿದುದರ ಬಗ್ಗೆ ಸೂಚ್ಯವಾಗಿ ತಿಳಿಸುತ್ತವೆ. ಆದ್ದರಿಂದಲೇ ಇವನಿಗೆ "ಮಹೇಶ್ವರ ಬೌದ್ಧವೈಷ್ಣವಾರುಹತ ಚತುಸ್ಸಮಯ ಸಮುದ್ಧರಣ' ಎಂಬ ಬಿರುದು ಪ್ರಾಪ್ತವಾಗಿದೆ. ಗೋವಿಯ ಮಡದಿ ಶ್ರಿಯಾದೇವಿ, ಮಹಾದೇವಿಯರು ಜೈನರಾಗಿದ್ದರು. ಚಾಂದ್ರಾಯಣ ಮುನಿಯ ಪ್ರತಿಮೆಯನ್ನು ಹುಳಿಯಾರಿನಲ್ಲಿ ಶ್ರಿಯಾದೇವಿಯು ಮಾಡಿಸಿದುದನ್ನು ತಿಳಿಸುವ ಶಾಸನದಲ್ಲಿ ಗೋವಿದೇವನನ್ನು "ಶ್ರೀಚಾನ್ದ್ರಾಯಣ ದೇವರ ಗುಡ್ಡ' ಎಂದು ಕರೆಯಲಾಗಿದೆ. ತನ್ನ ಸತಿ ಮಹಾದೇವಿಯು ಮರಣವನ್ನಪ್ಪಿದಾಗ ಅವಳಿಗೆ ಪರೋಕ್ಷ ವಿನಯವಾಗಿ ಗುಣಚಂದ್ರಸಿದ್ಧಾಂತದೇವರ ಶಿಷ್ಯರಾದ ಶ್ರೀಮಾಣಿಕನಂದಿಸಿದ್ಧಾಂತದೇವರಿಗೆ ಹೆಗ್ಗರೆಯಲ್ಲಿ ಚನ್ನಪಾರ್ಶ್ವದೇವರ ಬಸದಿಯನ್ನು ನಿರ್ಮಿಸಿದನು.[೧೦] ಅಲ್ಲದೆ ಇವನ ಆಡಳಿತ ವ್ಯಾಪ್ತಿಯಾದಂತಹ ಮಗರೆನಾಡಿನಲ್ಲಿ ಮೊದಲಿನಿಂದಲೂ ಜೈನಧರ್ಮವು ಪ್ರವರ್ಧಮಾನದಲ್ಲಿದ್ದುದಕ್ಕೆ ಈ ನಾಡಿನ ಶಾಸನಗಳು, ಜೈನಬಸದಿಗಳು ಸಾಕ್ಷಿಯಾಗಿವೆ. ಹೀಗಿರುವಾಗ, ಇಲ್ಲೊಂದು ಪುಟ್ಟ ತೊಡಕು ಸೃಷ್ಟಿಯಾಗಿದೆ; ಅದೇನೆಂದರೆ, ಗೋವಿದೇವನಿಗಿರುವ 'ಶ್ರೀ ಜೈನಮಾರ್ಗ ಸ್ಥಗಿತ ಗುಣಕಳಾಳಪನುದ್ವತ್ತಾಪಂ" ಎಂಬ ಅಭಿದಾನವನ್ನು ಆತ ಜೈನಧರ್ಮದ ಬೆಳವಣಿಗೆಗೆ ತಡೆಹಾಕಿ ಶೈವಧರ್ಮ ಮೆರೆಯಲು ಅವಕಾಶ ಮಾಡಿಕೊಟ್ಟದ್ದರಿಂದ ಸಂದಿದೆ ಎಂದು ಕೆಲವು ವಿದ್ವಾಂಸರು ಅರ್ಥೈಸಿದ್ದಾರೆ.

ಆದರೆ ಈ ಮೊದಲೇ ನಾನು ಹೇಳಿದಂತೆ ಗೋವಿದೇವನ ಕೌಟುಂಬಿಕ ಪರಿಸರ ಮತ್ತು ರಾಜಕೀಯ ಕ್ಷೇತ್ರಗಳೆರಡರಲ್ಲಿಯೂ ಧಾರ್ಮಿಕ ಸಮನ್ವಯತೆಗಳು ಕಂಡುಬಂದಿದೆಯೆ ಹೊರತು ಧಾರ್ಮಿಕ ಅಸಹಿಷ್ಣುತೆಯಲ್ಲ. ಹೀಗಾಗಿ ಅವನು 'ಜೈನಮಾರ್ಗವನ್ನು ಬೆಳವಣಿಗೆ ಹೊಂದಲು ತಡೆಹಾಕಿದ' ಎಂದು ಅರ್ಥೈಸಿರುವುದು ಸರಿಯಲ್ಲ. ಬದಲಿಗೆ "ಶ್ರೀಜೈನಮಾರ್ಗ ಸ್ಥಗಿತ ಗುಣಕಳಾಳಪ" ಎಂಬುದನ್ನು ತನ್ನ ಆಡಳಿತಾತ್ಮಕ ಪ್ರದೇಶದಲ್ಲಿ, ತನ್ನ ಆಳ್ವಿಕೆಯ ಸಂದರ್ಭದಲ್ಲಿ ಗೋವಿದೇವನು ಜೈನಧರ್ಮವನ್ನು 'ನಿಲ್ಲಿಸಿದ' ಅಂದರೆ ಅಳಿದುಹೋಗುತ್ತಿದ್ದ ಧರ್ಮವನ್ನು ಉಳಿಸಿದ; ಸ್ಥಾಪಿಸಿದ ಎಂದು ಅರ್ಥಾನ್ವಯ ಮಾಡುವುದು ಯುಕ್ತವೆಂದು ತೋರುತ್ತದೆ.

ಗೋವಿದೇವನು ಕಣಿಕಟ್ಟೆಯಲ್ಲಿದ್ದಾಗ ಅಲ್ಲಿನ ಶಿಷ್ಟಬ್ರಾಹ್ಮಣರಾದ ಆಳ್ವಿಭಟ್ಟರು ಅಲ್ಲಿ ಕಲಿಗೇಶ್ವರ ದೇವರನ್ನು ಪ್ರತಿಷ್ಠೆಮಾಡಲು ಅನುವು ಮಾಡಿಕೊಟ್ಟಿದ್ದನು. ಅವರು ಕಟ್ಟಿಸಿದ ದೇವಾಲಯದ ನಿರ್ವಹಣೆಗೆಂದು ಹಿರಿಯಕೆರೆಯ ಚಿಕ್ಕತೂಬಿನ ಮೊದಲೇರಿಯ ಬಯಲಲ್ಲಿ ೧ ಖಂಡುಗ ಗದ್ದೆ, ಅಡುವಗೆರೆಯ ಕೆರೆಯ ಬಳಿ ೧ ಖಂಡುಗ ಗದ್ದೆಗಳನ್ನು ಗೋವಿದೇವನು ದತ್ತಿಯಾಗಿ ನೀಡಿದನು. ಕಣಿಕಟ್ಟೆಯ ಹೊಯ್ಸಳಗೌಡನ ಮೊಮ್ಮಗ ಸಾತೆಯನಾಯಕನು ೧ ಖಂಡುಗ ಗದ್ದೆಯನ್ನು, ದೇಗುಲದ ಪಶ್ಚಿಮಕ್ಕೆ ಇದ್ದ ಬೆದ್ದಲು ಭೂಮಿಯನ್ನು ದೇವರಿಗೆ ನೀಡಿದ್ದನು.[೧೨] ತನ್ನ ಕಾಲದಲ್ಲಿ ನಿರ್ಮಾಣಗೊಂಡ ದೇಗುಲಗಳು ದೀರ್ಘಕಾಲದವರೆಗೆ ಕ್ಷೇಮ ಸ್ಥಿತಿಯಲ್ಲಿರುವಂತೆ ತಾನು ಮತ್ತು ತನ್ನ ಅಧಿಕಾರಿವರ್ಗದವರು ನೋಡಿಕೊಂಡಿದ್ದನು.

ಕ್ರಿ.ಶ. ೧೨ನೆಯ ಶತಮಾನದ ನಿರುವಗಲ್ಲಿನ ಶಾಸನವು[೧೩] ಬಹಳಷ್ಟು ತ್ರುಟಿತಗೊಂಡಿರುವುದರಿಂದ ಮೇಲು ನೋಟಕ್ಕೆ ಅದು ಗೋವಿದೇವನದೆಂದು ಅನ್ನಿಸುವುದಿಲ್ಲ. ಆದರೆ ಅದರಲ್ಲಿ ಸಾಮಂತ ಭೀಮ, ಚಟ್ಟಿಯಕ್ಕರ ಉಲ್ಲೇಖಗಳು ಆ ಶಾಸನ ಮುಂದುವರಿದಂತೆ ಅದು ಗೋವಿದೇವನದೆ ಎಂದು ತಿಳಿಯಲು ಅವಕಾಶ ಮಾಡಿಕೊಡುತ್ತವೆ. ಗೋವಿದೇವ ನೀಡಿದ ಭೂದಾನವೊಂದನ್ನು ಇದು ಅಸ್ಪಷ್ಟವಾಗಿ ತಿಳಿಸುತ್ತದೆ. ಹುಳಿಯಾರಿನ ಕ್ರಿ.ಶ. ೧೧೭೭ರ ಶಾಸನ[ತ್ರುಟಿತ]ವು ವೀರನೊರ್ವನ ಮರಣವನ್ನು ಅಸ್ಪಷ್ಟವಾಗಿ ಹೇಳುತ್ತಲೇ, ಗೋವಿದೇವನನ್ನು "ಶ್ರೀಮನ್ಮಹಾಮಂಡಳೇಶ್ವರ" ಎಂದು ಕರೆದಿದೆ. ಈ ವೇಳೆಗಾಗಲೇ ಗೋವಿದೇವನು ಈ ಪ್ರದೇಶದ ಆಳ್ವಿಕೆಯನ್ನು ಬಿಟ್ಟಿದೇವನಿಗೆ ಬಿಟ್ಟುಕೊಟ್ಟು ಮಹಾಮಂಡಳೇಶ್ವರ ಪದವಿಯಲ್ಲಿದ್ದುಕೊಂಡು ಉಳಿದ ಪ್ರದೇಶಗಳನ್ನು ಪ್ರಧಾನವಾಗಿ ನೋಡಿಕೊಳ್ಳುತ್ತಿದ್ದನೆಂದು ತೋರುತ್ತದೆ. ತನ್ನ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ತನ್ನ ರಾಜಕೀಯ ಮತ್ತು ಸಾಂಸ್ಕೃತಿಕ ಕೊಡುಗೆಗಳ ಫಲವಾಗಿ ಮಹಾಮಂಡಳೇಶ್ವರನಾಗಿ ಅತ್ಯುಚ್ಚ ಗೌರವದ ಪದವನ್ನಲಂಕರಿಸಿದ್ದನು.

ಈ ಗೋವಿದೇವನು ಗುಬ್ಬಿ, ಹಾಸನ, ಸೊರಬ, ತೀರ್ಥಹಳ್ಳಿ, ಹೊಳಲ್ಕೆರೆ, ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಗೋವಿದೇವನಿಗಿಂತ ಭಿನ್ನನಾಗಿದ್ದಾನೆ.

## ಸಾಮಂತ ಬಲ್ಲದೇವರಸ ಅಥವಾ ಬಲ್ಲಾಳ

ಸಾಮಂತ ಗೋವಿದೇವ ಮತ್ತು ಶ್ರಿಯಾದೇವಿ ದಂಪತಿಗಳ ಪುತ್ರನೀತ. ತನ್ನ ತಂದೆ ಗೋವಿದೇವನ ತರುವಾಯ ಹುಳಿಯೆರನ್ನು ಆಳುತ್ತಿದ್ದನು. ಚಿಕ್ಕನಾಯಕನ ಹಳ್ಳಿಯ ನೇರ್ಲಕೆರೆ ಗ್ರಾಮದ ಕ್ರಿ.ಶ. ೧೧೭೪ರ ಶಾಸನದಲ್ಲಿ[೧೫]

ಬಲ್ಲಿದೇವರಸ ಪ್ರಥಮ ಉಲ್ಲೇಖ ಕಂಡುಬರುತ್ತದೆ. ಬಲ್ಲಿದೇವರಸನ ಅಧೀನವರ್ತಿಯಾದ ಮಾದಿಗೌಡನು ನೇರ್ಲಕೆರೆಯನ್ನು ಆಳುತ್ತಿದ್ದನು. ಶಾಸನವು ಈ ಮಾದಿಗೌಡನ ವಂಶಾವಳಿಯನ್ನು ತಿಳಿಸುತ್ತದೆ :

ಚಿಮ್ಮಗೌಡ ಸುಗ್ಗವ್ವೆ ಮಗನಾದ ಮಾದಿಗೌಡ ಹೆಂಡತಿ ಮುದ್ದಗೌಡಿ ಮಕ್ಕಳಾದ ಸುಗ್ಗವ್ವೆ, ಕೇತಗೌಡ, ಮಾಚಿಯಬ್ಬೆ, ಹಿರಿಯಬೂಚಗೌಡ, ಚಿಕ್ಕಬೂಚಗೌಡ ಐವರು ಮಕ್ಕಳೊಂದಿಗೆ ನೇರ್ಲಕೆರೆಯ ಸುಗ್ಗೇಶ್ವರದೇವರ ನಂದಾದೀವಿಗೆ ಮೊದಲಾದ ಸೇವೆಗಳಿಗೆಂದು ಮಗರೆನಾಡಿನ ರಾಜಗುರು ಅಣುವಗೆರೆಯ ಜ್ಞಾನಶಕ್ತಿಯವರ ಚಂದ್ರಭೂಷಣನ ಸುಪುತ್ರ ಗುರುಭಕ್ತನಿಗೆ ಅಪಾರ ಭೂಮಿ, ತೋಟ, ಗಾಣಗಳನ್ನು ದತ್ತಿಯಾಗಿ ನೀಡಿದನು.

ಬಲ್ಲಿದೇವರಸನು ತನ್ನ ಪೂರ್ವ ವಂಶೀಯರಂತೆ ಮಿಗಿಲಾದ ಶೌರ್ಯ ಪರಾಕ್ರಮಗಳನ್ನು ಹೊಂದಿದ್ದನೆಂಬುದನ್ನು ಶಾಸನಗಳು [ಶಾಸನ ಸಂಪುಟ – EC ೨೪ ಚಿ.ನಾ. ೧೬, ೩೮, ೯೫, ೮೭] ಪೃಥಕ್ಕರಿಸುತ್ತವೆ.

ಬಹುಶಃ ಹೊಯ್ಸಳರು ನಡೆಸಿದ ಪ್ರಮುಖ ಯುದ್ಧಗಳಲ್ಲಿ ವೀರಾಗ್ರಣಿಯಾಗಿ ಹೋರಾಡಿದುದನ್ನು, ಅವನ ಕಲಿತನದ ಪೆರ್ಮೆಯನ್ನು, ಶೌರ್ಯೋನ್ನತಿಯನ್ನು ಶಾಸನ ಪದ್ಯಗಳು ಸುವ್ಯಕ್ತಗೊಳಿಸುತ್ತವೆ. ಇಷ್ಟೆಲ್ಲ ಪರಾಕ್ರಮವನ್ನು ಪಡೆದಿದ್ದರಿಂದಲೇ ಕ್ರಿ.ಶ. ೧೧೮೮ರಲ್ಲಿ ಬಲ್ಲಿದೇವನು ಮಂಡಳಿಕ ಪದವಿಯ ಗ್ರಹಣಮಾಡುತ್ತಾನೆ.[೧೬] ಇದು ಅವನ ಬಹುದೊಡ್ಡ ರಾಜಕೀಯ ಸಾಧನೆಯಾಗಿದೆ. ಇದುವರೆಗೂ ಸಾಮಂತ, ಮಹಾಸಾಮಂತ ಪದವಿಯನ್ನ ಲಂಕರಿಸಿದ್ದ ಬಲ್ಲನು ಮುಂದಿನ ಹಲವು ಶಾಸನಗಳಲ್ಲಿ 'ಬಲ್ಲಾಳ' ಮಾಂಡಳಿಕ ಎಂದು ಹೆಸರಾಂತನಾಗುತ್ತಾನೆ.

ಆಡಳಿತಾತ್ಮಕವಾಗಿ ಬಲ್ಲಿದೇವರಸನಿಗೆ ಸಹಾಯಕವಾಗಿ ಬೋಚಿಗೌಡ, ಮಾಚಿಗೌಡ, ಕೇತಗೌಡ, ನಾಗಗೌಡನ ಕುಟುಂಬ, ಚೂಚಿಗಲ್ಲಿನ ಜಕ್ಕಗೌಡನ ಕುಟುಂಬಗಳು ದುಡಿಯುತ್ತಿದ್ದವು. ಈ ಗೌಡಪ್ರಜೆಗಳ ವಿಸ್ತಾರವಾದ ವಂಶಾವಳಿಯನ್ನು ಸಹ ಶಾಸನಗಳಿಂದ ತಿಳಿಯಬಹುದಲ್ಲದೆ ಈ ಮೂಲಕ ಸ್ಥಳೀಯವಾಗಿ ಬಲ್ಲಿದೇವರಸನು ಸಾಮಾಜಿಕ, ಧಾರ್ಮಿಕ ಆರ್ಥಿಕ ಚಟುವಟಿಕೆಗಳಿಗೆ ಮುಕ್ತವಾದ ಪ್ರೋತ್ಸಾಹಕರ ವಾತವರಣವನ್ನು ಕಲ್ಪಿಸಿದ್ದನೆಂಬುದನ್ನು ಅರಿಯಬಹುದು. ಇದಕ್ಕೆ ಒಂದೊಂದೇ ಉದಾಹರಣೆಯನ್ನು ಗಮನಿಸುವುದಾದರೆ:

ಕ್ರಿ.ಶ. ೧೧೮೧ರ ಕೈನಡುವಿನ ಶಾಸನದಲ್ಲಿ[೧೭] ಬೋಚಿಗೌಡನ ವಿಚಾರ ಬಂದಿದೆ.

ಮಯ್ದುಗೌಡ + ದೇಕಲೆಗೌಡಿ
↓
ಬೊಮ್ಮಗೌಡ + ಮಸಣಗೌಡಿ
↓

ಮಾಚಗೌಡ ಹರಿಯಮಗೌಡ ಮಾದಿಗೌಡ ಬೋಚಿಗೌಡ

ಈ ಬೋಚಿಗೌಡನು ಮಯ್ದುಗೌಡನೊಡಗೂಡಿ ಕೆಹೆಗನಡು(ಕೈನಡು) ಎಂಬಲ್ಲಿನ ಮಲ್ಲಿಕಾರ್ಜುನ ದೇವರ ಅಂಗಭೋಗ, ನೈವೇದ್ಯ, ತಪೋಧನರ ಆಹಾರದಾನಕ್ಕೆಂದು

→ಊರ ಬಡಗಣ ಹಿರಿಯಕೆರೆಯ ಕೆಳಗಿನ ೨ ತೂಬಿನ ನಡುವಿನ ೪ ಖಂಡುಗ ಗದ್ದೆ

→ ಊರ ಮುಂದಿನ ಕೆರೆವೊಳಗಿನ ೨ ಮತ್ತರು ಬೆದ್ದಲೆ

→ಕೆರೆಯ ಬಡಗಣ ಕೋಡಿಯಲ್ಲಿ ೫೦೦ ಕಂಬ ಬೆದ್ದಲೆ

→ ಹಿರದಹಾಳದಲ್ಲಿ ೧೦೦ ಕಂಬ ಬೆದ್ದಲೆ

→ಕೆರೆಯ ಮೂಡಣ ಕೋಡಿಯ ಎರೆಯಮಣ್ಣಿನ. ೫೦ ಕಂಬ ಗದ್ದೆ

→ ಊರ ಮೂಡಣ ಗೌಡಗೆರೆಯ ಕೆಳಗೆ ತೋಟಕ್ಕೆ ಬಿಟ್ಟ ೧೦೦ ಕೈಕಂಬ ಗದ್ದೆ

→ ೧ ಗಾಣ

–ಇಷ್ಟೆಲ್ಲವನ್ನು ದೇವೇಂದ್ರಪಂಡಿತರ ಶಿಷ್ಯ ರುದ್ರಶಕ್ತಿ ಪಂಡಿತರಿಗೆ ದತ್ತಿಯಾಗಿ ನೀಡಿದನು.

ಚಿಕ್ಕ ಬೂದಿಹಾಳದ ಮಾಚಿಗೌಡ[೧೮] ಕೇತಗೌಡರು ಮಹಾದೇವರಸನ ಮಗ ತಿಪ್ಪಜೀಯ ದಂಮೇಶ್ವರ ದೇವರ ನೈವೇದ್ಯ ಅಂಗಭೋಗ, ತಪೋಧನರ ಆಹಾರದಾನಕ್ಕೆಂದು ಅಂಕಲಗೆರೆಯಲ್ಲಿ ೨ ಸಲಗೆ ಗದ್ದೆ, ೧೦೦ ಕಂಬ ಬೆದ್ದಲೆ, ೨೦೦ ಕಂಬ ಹೊಲ, ೧ ಕೈಗಾಣಗಳನ್ನು ದತ್ತಿಯಾಗಿ ನೀಡಿದರು.

ಯಾದಗಟ್ಟದ ಶಾಸನವು[೧೯] ಬಮ್ಮಗೌಡ [ಈ ಹಿಂದೆ ತಿಳಿಸಿದ]ನ ಮುಂದುವರಿದ ವಂಶಾವಳಿಯನ್ನು ತಿಳಿಸುತ್ತದೆ. ಅದರ ಪ್ರಕಾರ,

ಬಮ್ಮಗೌಡ + ಸುಗ್ಗವ್ವೆ (ಹಿರಿಯ ಸತಿ) + ಬೀಳಗೌಡಿ (ಕಿರಿಯ ಮಡದಿ)

↓ ↓

ಮಾದಿಗೌಡ + ಮುದ್ದಗೌಡಿ

↓ ಸಂಗ್ಗವ್ವೆ ↓ ಕೇತಗೌಡ ↓ ಮಾಚಿಯಬ್ಬೆ ↓ ಹಿರಿಯ ಬೂಚಿಗೌಡ ↓ ಚಿಕ್ಕ ಬೂಚಿಗೌಡ

↓ ಕಾಳಗೌಡ ↓ ಮಾರಗೌಡ ↓ ನಾಗಗೌಡ + ಸುಗ್ಗವ್ವೆ

↓ ಚಿಕ್ಕಮಾದಿಗೌಡ ↓ ಚಿಕ್ಕನಾಗಗೌಡ ↓ ಚಿಕ್ಕಕೇತಗೌಡ

ನಾಗಗೌಡ ಮೂವರು ಮಕ್ಕಳು ಎಡೆಯಕಟ್ಟ [ಈಗಿನ ಯಾದಗಟ್ಟ]ದ ಕಲಿದೇವರ ಅಂಗಭೋಗ, ನೈವೇದ್ಯ, ಜೀರ್ಣೋದ್ಧಾರ, ತಪೋಧನರ ಆಹಾರದಾನಗಳಿಗೆಂದು–

→ ಹಿರಿಯಕೆರೆಯ ಕೆಳಗಿನ ಮೊದಲೇರಿಯಲ್ಲಿ ೩ ಸಲಗೆ ಗದ್ದೆ

→ ದೇಗುಲದ ದಕ್ಷಿಣಕ್ಕೆ ೩೪೦ ಕಂಬ ಗದ್ದೆ

→ ಊರಿನ ಉತ್ತರಕ್ಕೆ ೧೨೦ ಕೈ ಕಂಬ ಗದ್ದೆ

→ ದೇಗುಲದ ದಕ್ಷಿಣಕ್ಕಿರುವ ಅರಳಿಮರದ ಬಳಿ ಕಂಬಳ ಕೆಯಿ ಮತ್ತು ೪೮೦ ಕಂಬ ಗದ್ದೆ

ಇಷ್ಟನ್ನು ಕಬ್ಬಳದ ಸಕಳೇಶ್ವರ ಗುರುಗಳ ಮೊಮ್ಮಗನಾದ ಬ್ರಹ್ಮಶಕ್ತಿಗುರುಗಳಿಗೆ ದತ್ತಿಯಾಗಿ ನೀಡಿದರು.

ಸೂಚಿಗಲ್ಲಿನ ಶಾಸನವು[೨೦] ಜಕ್ಕಗೌಡ ವಂಶಾವಳಿ ರಚಿಸಲು ಸಹಾಯಕವಾಗಿದೆ. ಅದರ ಪ್ರಕಾರ,

(ಸೂಜಿಗಲ್) ಚೂಜಿಗಲ್ಲಿನ ಜಕ್ಕಗೌಡ

↓ ಬಿಯಮಗೌಡ ↓ ಮಲ್ಲಗೌಡ

ಬಿಯಮಗೌಡ → ↓ ಸಿಂಗಗೌಡ ↓ ಮಲ್ಲಗೌಡ

ಮಲ್ಲಗೌಡ → ↓ ಮಹಾದೇವ

ಸಿಂಗಗೌಡ → ↓ ಮಾರಗೌಡ ↓ ಮಾಚಗೌಡ

ಮಲ್ಲಗೌಡ → ↓ ಬಲಗೌಡ ↓ ಎರಯಮಗೌಡ

ಈ ಗೌಡುಗಳಲ್ಲಿ ಸಿಂಗಗೌಡ ಮತ್ತು ಮಲ್ಲಗೌಡನ ಮಕ್ಕಳೆಲ್ಲರು ಸೇರಿ ತಂತ್ರಪಾಳ ಮಾದಿಗೌಡ ಉಪಸ್ಥಿತಿಯಲ್ಲಿ ಕಬ್ಬಳದ ಗುರುಗಳ ಮಗ ಹಂಗಜೀಯನ ಮೊಮ್ಮಗ ಕಲಂಜೀಯರಿಗೆ ಕಲಿದೇವರ ಅಂಗಭೋಗ, ರಂಗಭೋಗ, ನೈವೇದ್ಯ, ನಂದಾದೀವಿಗೆಗಳಿಗೆಂದು

→ಸಾವಿದೇವಿಯ ಕೆರೆಯ ಉತ್ತರ ಕೋಡಿಯಲ್ಲಿ ೫ ಸಲಗೆ ಗದ್ದೆ

→ ಆ ಕೆರೆಯ ಪಡುವಣ ಹಿರಿಯ ಕೆಯಿ ೧

→ದೇವರ ಮುಂದಣದ ಕೆಯಿವೊಂದು, ೩ ಸಲಗೆ ಬೆದ್ದಲೆ

ಇವುಗಳನ್ನು ದತ್ತಿಬಿಟ್ಟರು.

ಬಲ್ಲನು ತನ್ನ ಅಧೀನವರ್ತಿಯಾದ ಈ ಗೌಡ ಮನೆತನದವರು ಮಾತ್ರವಲ್ಲದೆ ತಾನೇ ಸ್ವತಃ ದತ್ತಿ ನೀಡುವ ಮೂಲಕ ಹುಳಿಯೇರ ಪ್ರದೇಶದಲ್ಲಿ ಧಾರ್ಮಿಕವಾಗಿ ಸುಭಗ ವಾತಾವರಣವನ್ನು ಕಲ್ಪಿಸಿದ್ದನು. ಉದಾಹರಣೆಗೆ ಹುಳಿಯಾರಿನ ಶಾಸನವು[೨೧] ಬಲ್ಲನ ಗುರುಪರಂಪರೆಯನ್ನು ತಿಳಿಸುತ್ತ ದತ್ತಿವಿಚಾರವೊಂದನ್ನು ನಮ್ಮ ಅವಗಾಹನೆಗೆ ತರುತ್ತದೆ :–

ಶ್ರೀಪರ್ವತದ ಅಗಸ್ತ್ಯೇಶ್ವರ ಮಠದ
ಸದ್ಯೋಜಾತಾಚಾರ್ಯರು
↓
ಕ್ರಿಯಾಶಕ್ತಿ ದೇವರು
↓
ವಾಮಶಕ್ತಿದೇವರು
↓
ಕ್ರಿಯಾಶಕ್ತಿಮುನೀಂದ್ರರು

ಕಡೆಯಲ್ಲಿ ಉಕ್ತವಾಗಿರುವ ಕ್ರಿಯಾಶಕ್ತಿಮುನೀಂದ್ರರಿಗೆ ಬಲ್ಲರಸನು ಭೀಮಸಮುದ್ರವನ್ನು ಹುಳಿಯೇರಿನಲ್ಲಿರುವ ಭೀಮೇಶ್ವರ ದೇವರ ಅಂಗಭೋಗ, ಆಹಾರದಾನ, ಪಾತ್ರಪಾವುಳಕ್ಕೆಂದು ದತ್ತಿಯಾಗಿ ಸಮರ್ಪಿಸಿದನು.

ಮೇಲುನೋಟಕ್ಕೆ ಬಲ್ಲಿದೇವರಸನ ಶಾಸನಗಳಲ್ಲಿ ೈವಗುರುಗಳಿಗೆ, ಶಿವನ ಆಲಯುಗಳಿಗೆ ದಾನದತ್ತಿ ಂದಿರುವುದರಿಂದ ಅವನೊಬ್ಬ ಶೈವಪಕ್ಷಪಾತಿಯಾಗಿ ಡಳಿತಗಾರ ಎಂದೆನಿಸಿಬಿಡಬಹುದು. ಆದರೆ ಹೆಗ್ಗರೆಯ ಾಸನವು[೨೨] ಬಲ್ಲಿದೇವರಸನು ಹೆಗ್ಗರೆಯ ಬಸದಿಗೆ ಳವ್ರಿತ್ತಿಯಾಗಿ ಹಿರಿಯಕೆರೆಯ ಕೆಳಗೆ ೬ ಸಲಗೆ ಗದ್ದೆ, ೧ ುತ್ತರು ಬೆದ್ದಲೆಗಳನ್ನು ದತ್ತಿನೀಡಿದುದನ್ನು ತಿಳಿಸುತ್ತ ಅವನೊಬ್ಬ ರ್ಮಾಂಧತೆಯಿಂದ ವಿದೂರನಾದ ಧಾರ್ಮಿಕಸಹಿಷ್ಣುವಾದ, ಮೂಲಕ ಸಾಮಾಜಿಕ ಸಾಮರಸ್ಯಕ್ಕೆ ಆದರ್ಶ ಪ್ರಾಯನಾದ ಮರ್ಥ ಅಧಿಕಾರಿ ಎಂಬುದನ್ನು ಸುವೇದ್ಯಗೊಳಿಸುತ್ತದೆ.

ಬಲ್ಲಿದೇವರಸನಿಗೆ ಇಬ್ಬರು ಮಡದಿಯುರು; ೋವಲದೇವಿ ಮತ್ತು ಮಾರಲದೇವಿ (=ಮಾದರರದೇವಿ) ಇರ್ವರಲ್ಲಿ ಮಾರಲದೇವಿ ಹಿರಿಯರಸಿ.[೨೩] ಈಕೆಗೆ ಿಕ್ಕಬಲ್ಲಯ್ಯನಾಯಕ ಮತ್ತು ನಾರಸಿಂಹ ಎಂಬ ಇಬ್ಬರು ುತ್ರರಿದ್ದರು. ಸೋವಲ ದೇವಿಯನ್ನು ಬೂದಿಹಾಳಿನ ಾಸನವು[೨೪] ವರ್ಣಿಸಿದೆ:

ಸದಾ ಶಿವನ ಧ್ಯಾನದಲ್ಲಿ ತಲ್ಲೀನಳಾಗಿ, ಶಿವಭಕ್ತರಿಗೆ ುಗಿಲಾದ ಸೇವೆಗಳನ್ನು ಸಮರ್ಪಿಸುತ್ತ, ಅತ್ಯಂತ ನಂದಚಿತ್ತವುಳ್ಳವಳಾಗಿ ತನ್ನ ಸ್ವಧರ್ಮವನ್ನು ಪಾಲಿಸುತ್ತಿರುವ ೋವಲದೇವಿಯು ಮೃದುವಚನೆ, ಶ್ರೇಷ್ಠವಾದ ಗುಣವುಳ್ಳ ಿ ಎಂದು ಶಾಸನಕವಿ ಹೊಗಳಿದ್ದಾನೆ.

ಬಲ್ಲನ ಹಿರಿಯರಸಿ ಮತ್ತು ಅವಳ ಮಕ್ಕಳ ಬಗ್ಗೆ ಾಸನಗಳು ಮೌನತಾಳಿರುವುದರಿಂದ ಅವರ ಹೆಸರಿನ – ಂಬಂಧಗಳ ಅಂಶಿಕ ವಿಚಾರವನ್ನು ಹೊರುತುಪಡಿಸಿ ುಳಿದ ಮಾಹಿತಿಗಳು ಸದ್ಯಕ್ಕೆ ಲಭ್ಯವಿಲ್ಲ.

### ಪ್ಪಯ್ಯನಾಯಕ

ಕಪ್ಪಯ್ಯನಾಯಕನು 'ನಾಯಕಶಿಖಾಮಣಿ' ಎನಿಸಿದ್ದ ಕ್ಕಬಲ್ಲೆಯ ನಾಯಕನ ಸುಪುತ್ರ. ಇವನ ಕೌಟುಂಬಿಕ ವರಗಳು ಸದ್ಯಕ್ಕೆ ಲಭ್ಯವಿಲ್ಲ. ಹೆಗ್ಗರೆಯ ಶಾಸನವೊಂದರಲ್ಲಿ ಮಾತ್ರ ಇವನ ಉಲ್ಲೇಖ ಬಂದಿದೆ. ೨ನೆಯ ನರಸಿಂಹನ ಳ್ವಿಕೆಯ ಅವಧಿಯ ಕ್ರಿ.ಶ. ೨೨-೧೧-೧೨೩೨ರ ಈ ಾಸನದನ್ವಯ, ಕಪ್ಪಯ್ಯನಾಯಕನು 'ಆಶ್ರಿತಜನಕಲ್ಪವೃಕ್ಷ: ರಣಾಗತವಜ್ರಪಂಜರ' ಎಂದು ಬಿರುದಾಂಕಿತನಾಗಿದ್ದು ುಳಿಯೆಜಿವನ್ನು ಆಳುತ್ತಿದ್ದನು. ಇವನ ಅಧೀನವರ್ತಿಯಾದ ಡಪ್ರಭು ನಂಬಯ್ಯನು ಸಮಸ್ತಗೌಡ ಪ್ರಜೆಗಳೊಡಗೂಡಿ ೊಚಿನಹಳ್ಳಿಯನ್ನು ಹೆಗ್ಗರೆಯ ಕಲಿದೇವರ ಮತ್ತು ಳಗೇಶ್ವರದೇವರ ಆರಾಧನೆಗಳಿಗೆಂದು ಅಲ್ಲಿನ ಸ್ಥಾನಿಕ ಜೀಯರಿಗೆ ದತ್ತಿಯಾಗಿ ನೀಡಿದನು.

### ಲಕುಮಯ್ಯನಾಯಕ

ಈತ ಕಪ್ಪಯ್ಯನಾಯಕರ ತಮ್ಮ "ಮಹಾಸಾಮಂತ ಕಪ್ಪಯ್ಯನಾಯಕರ ತಂಮ ಲಕುಮಯ್ಯನಾಯಕರು ಹುಳಿಯಜಿ ನೆಲೆವೀಡಿನಲ್ಲಿ ರಾಜ್ಯಗೆಯ್ಯುತ್ತಮಿರೆ" ಎಂಬ ಕ್ರಿ.ಶ. ೧೨೩೫ರ ಮೊಚೇಹಳ್ಳಿಯ ಶಾಸನೋಕ್ತ[೨೫] ಕಪ್ಪಯ್ಯನ ತರುವಾಯ ಹುಳಿಯಜಿವು ಲಕುಮಯ್ಯನ ಸುಪರ್ದಿಗೆ ಬಂದಿತ್ತೆಂಬುದನ್ನು ತಿಳಿಸುತ್ತದೆ. ಈ ಶಾಸನವು ಮುಂದುವರಿದು ಮಗರೆಮುನ್ನೂರಿನ ಸಮಸ್ತನಾಡಪ್ರಭು ಮೋಟಗೌಡನು ತನ್ನ ತಂದೆ ಮಾಚಿಗೌಡನ ಹೆಸರಿನಲ್ಲಿ ಮಾಚೇಶ್ವರ ದೇಗುಲವನ್ನು ನಿರ್ಮಿಸಿ, ದೇವರ ಪೂಜಾದಿ ಸೇವೆಗಳಿಗೆಂದು ಕೆಲವು ಭೂದಾನಗಳನ್ನು ಬೇವಿಹಾಳಿನ ಸ್ಥಾನಿಕ ಕೇತಜೀಯರಿಗೆ ನೀಡಿದನು. ಬಹುಶಃ ಈ ಶಾಸನ ದೊರೆತಿರುವ ಮೋಟಹಳ್ಳಿಗೆ ಈ ಹೆಸರು ಮೋಟಗೌಡ ನಿಂದಲೇ ಬಂದಿರಬೇಕು; ಅಂದರೆ ಮೋಟಗೌಡನು ಸ್ಥಳೀಯವಾಗಿ ಬಹಳ ಪ್ರಭಾವಿಯಾದ ಅಧಿಕಾರಿಯಾಗಿ ದ್ದಿರಬೇಕು.

ಮುದ್ದೇನಹಳ್ಳಿಯ ಮತ್ತೊಂದು ಶಾಸನವು[೨೬] ಲಕುಮಯ್ಯ ನಾಯಕನ 'ಮಹಾಸಾಮಂತಾಧಿಪತಿ' 'ಸಿತಗರಗಂಡ' 'ಮಂಡಳಿಕರವಿರಾಹು' 'ಮರೆವೊಕ್ಕರ ಕಾವ' 'ಶರಣಾಗತವಜ್ರಪಂಜರ' ಏಕಾಂಗವೀರ', 'ಅಸಹಾಯಶೂರ' 'ಮನ್ನೆಯ ಬೇಂಟೆಕಾರ', 'ಅಣ್ಣನ ಗಂಧವಾರಣ', 'ಶ್ರೀವಾಸುದೇವರ ದಿವ್ಯಶ್ರೀಪಾದಾರಾಧಕ' 'ಪರಬಳಸಾಧಕ'– ಬಿರುದುಗಳನ್ನು ಹೇಳಿದೆ. ಈ ಬಿರುದುಗಳು ಅವನಿಗೆ ವಂಶಪಾರಂಪರ್ಯವಾಗಿ ಬಂದಿದೆ ಎನ್ನುವುದಕ್ಕಿಂತ ಅವನ ಪರಾಕ್ರಮದ ಅನನ್ಯತೆಯಿಂದ ಬಂದಿದೆ ಎನ್ನುವುದು ಉಚಿತ. ಏಕೆಂದರೆ ಈತನು ತನ್ನ ಪೂರ್ವಜರಂತೆ ಮಹಾಸಾಮಂತ ಪದವಿಯಲ್ಲಿದ್ದವನು.

ಇದೇ ಶಾಸನದಲ್ಲಿ ಲಕುಮಯ್ಯನ ಪಾದಪದ್ಮೋಪ ಜೀವಿಯಾದ ಹಿರಿಯಚಂಡಿಯಮುದ್ದೆಯ ನಾಯಕನ ವಂಶಾವಳಿ ಮತ್ತು ದಾನವೊಂದರ ವಿಚಾರವಿದೆ. ಅದು ಹೀಗಿದೆ :

ಜಕ್ಕೆಯನಾಯಕ + ಮಾರವೆನಾಯಿಕಿತಿ

↓

ಹಿರಿಯಚಂಡಿಯಮುದ್ದೆಯನಾಯಕ + ಮಾರಲೆನಾಯಿಕಿತಿ

↓

ಚಿಕ್ಕಚಂಡಿಯನಾಯಕ



ಹಿರಿಯಚಂಡಿಯಮುದ್ದೆಯನಾಯಕನು ತನ್ನ ತಂದೆ ಜಕ್ಕೆಯನಾಯಕನ ನೆನಪಿಗಾಗಿ ಜಕ್ಕೇಶ್ವರ ದೇವರನ್ನು ಮುದ್ದೇನಹಳ್ಳಿಯಲ್ಲಿ ಪ್ರತಿಷ್ಠಾಪಿಸಿ, ಆಲಯ ನಿರ್ಮಿಸಿ ಭೂದಾನಗಳನ್ನು ಮಲ್ಲದೆಜೀಯ ಎಂಬುವವನಿಗೆ ನೀಡಿದನು. ಈ ಮುದ್ದೆಯನಾಯಕನಿಂದ ಪ್ರಭಾವಳಿಯಿಂದ ಈ ಊರಿಗೆ ಮುದ್ದೇನಹಳ್ಳಿ ಎಂಬ ಹೆಸರು ಸಂದಿರಬಹುದು.

## ಸಾಮಂತ ಗೋವಿದೇವನ ಕೊನೆಯ ವಂಶೀಯರು (?)

ಕಾಲದ ಉಲ್ಲೇಖವಿರದ ಆದರೆ ಲಿಪಿಲಕ್ಷಣದ ಆಧಾರದಿಂದ ಕ್ರಿ.ಶ. ೧೨-೧೩ನೆಯ ಶತಮಾನವೆಂದು ಪರಿಗಣಿಸಿರುವ ಜಮ್ಮಾಪುರದ ಶಾಸನದಲ್ಲಿ[೨೮] ಸಾಮಂತ ಗೋವಿದೇವ, ಮಹಾಸಾಮಂತ ಚಟ್ಟಯ್ಯ ಸಾಮಂತ ಮಲ್ಲಯ್ಯರ ಉಲ್ಲೇಖಗಳ ತರುವಾಯ ಅವರ ಕೆಲವು ವಂಶಿಯರ ವಿಚಾರ ಬಂದಿದೆ. 'ಅವರ ಕುಳಾನ್ವಯದಲ್ಲಿ ಬರುವ' ಎಂದು ಹೇಳುತ್ತಾ ಮುಂದುವರಿಯುವ ಶಾಸನವು ಜಕಗೌಡನ ತಮ್ಮ ಆದಿಗೌಡ, ಆದಿಗೌಡನ ಮಕ್ಕಳಾದ ಬಮ್ಮಗೌಡ, ಸೆಟ್ಟಿಗೌಡ, ಹರಿಯಪ್ಪ, ಕಲ್ಲಗೌಡ, ಚಿಕ್ಕಹರಿಯಗೌಡ, ನೀಲಕಂಠರನ್ನು ಹೆಸರಿಸಿ, ಇವರೆಲ್ಲರು ಜವಮ್ಮಾಪುರದ ನೀಲಕಂಠ ದೇವರ ನಿತ್ಯಪೂಜೆ, ನಂದಾದೀವಿಗೆಗೆ, ತಪೋಧನರ ಆಹಾರ ದಾನಕ್ಕೆ ಚೈತ್ರ-ಪವಿತ್ರಗಳಿಗೆಂದು ಭೂದಾನಗಳನ್ನು, ಕೊಡವೀಸ ಸುಂಕಮಾನ್ಯವನ್ನು ಮಾನ್ಯ ಮಾಡಿದರು. ಮೇಲುನೋಟಕ್ಕೆ ಜಕ್ಕಗೌಡನೆ ವಂಶೀಯರು ಸಾಮಂತ ಗೋವಿದೇವನಿಗೆ ಯಾವ ರೀತಿಯಲ್ಲಿ ಸಂಬಂಧಿಕರು ಎಂದು ಸ್ಪಷ್ಟವಾಗುವುದಿಲ್ಲ.

ಒಟ್ಟಿನಲ್ಲಿ ಈ ವಂಶೀಯರ ಶಾಸನಗಳು ಅವರ ರಾಜಕೀಯ ನಡೆಗಳನ್ನು, ಧಾರ್ಮಿಕ ನೀತಿಯನ್ನು, ಸಾಹಿತ್ಯಕ ಶ್ರೀಮಂತಿಕೆಯನ್ನು, ಕನ್ನಡ ಭಾಷಿಕ ಪದಗಳ ಸಮೃದ್ಧಿಯನ್ನು, ಹಲವು ಛಂದೋರೂಪಗಳ ವೈವಿಧ್ಯವನ್ನು ತಿಳಿಸುವುದರ ಮೂಲಕ ಹೊಯ್ಸಳ ಸಾಮಂತರ ಚರಿತ್ರೆಯಲ್ಲಿ ಇವರಿಗಿದ್ದ ಮಹತ್ವದ ಸ್ಥಾನವನ್ನು ಅರಹುತ್ತವೆ. ಜೊತೆಗೆ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಇವರು ಅಜರಾಮರರಾಗಿದ್ದಾರೆ.



## ಆಧಾರಸೂಚಿ

೧. ಎ.ಕ. [ಮೈಸೂರು ವಿ.ವಿ.] ಸಂಪುಟ ೧೦, ಅರಸಿಕೆರೆ, ೯೫.
೨. ಅದೇ, ಸಂ. ೧೨, ಕಡೂರು, ೧೭೮.
೩. ಅದೇ, ಸಂ. ೨೪, ಚಿ.ನಾ., ೧೩.
೪. ಅದೇ.
೫. ಅದೇ, ಸಂ. ೧೨, ಕಡೂರು, ೧೭೮.
೬. ಅದೇ, ಸಂ. ೨೪, ಚಿ.ನಾ., ೩೭.
೭. ಅದೇ. ೩೨.
೮. ಅದೇ, ೧೭.
೯. ಅದೇ, ೩೨, ೧೦೧.
೧೦. ಅದೇ, ೧೦೪.
೧೧. ಅದೇ ಸಂ. ೧೦, ಅರಸಿಕೆರೆ, ೯೫.
೧೨. ಅದೇ.
೧೩. ಅದೇ, ಸಂ. ೨೪, ಚಿ.ನಾ., ೪೧.
೧೪. ಅದೇ, ೧೦೨.
೧೫. ಅದೇ, ೪೩.
೧೬. ಅದೇ. ೭೮.
೧೭. ಅದೇ. ೧೬.
೧೮. ಅದೇ. ೫೮.
೧೯. ಅದೇ. ೭೮.
೨೦. ಅದೇ. ೮೭.
೨೧. ಅದೇ. ೯೫.
೨೨. ಅದೇ. ೧೦೫.
೨೩. ಅದೇ. ೯೫.
೨೪. ಅದೇ. ೫೮.
೨೫. ಅದೇ. ೧೧೧.
೨೬. ಅದೇ. ೭೭.
೨೭. ಅದೇ. ೭೬.
೨೮. ಅದೇ. ಸಂ. ೧೨, ಕಡೂರು, ೧೦೧.



# ಎರಡನೇ ಬಲ್ಲಾಳನ ಆಡಳಿತದಲ್ಲಿ ಮಾವಂತ ಮನೆತನದ ಕೊಡುಗೆಗಳು

**ಬಿ.ವಿ. ಸತೀಶ್‌ಕುಮಾರ್***

ಕರ್ನಾಟಕದ ಮಧ್ಯಕಾಲೀನ ಇತಿಹಾಸದಲ್ಲಿ ಕಂಡು ಬರುವ ಪ್ರಸಿದ್ಧ ರಾಜ ಮನೆತನದಲ್ಲಿ ಹೊಯ್ಸಳ ವಂಶವೂ ಒಂದು. ಗಂಗರ ನಂತರ ದಕ್ಷಿಣ ಕರ್ನಾಟಕದಲ್ಲಿ ಸುಮಾರು ೩೦೦ ವರ್ಷಗಳ ಕಾಲ ಆಳ್ವಿಕೆಯನ್ನು ನಡೆಸಿದ ಇವರು ದೋರಸಮುದ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಈ ವಂಶದವರು ಆರಂಭದಲ್ಲಿ ಕಲ್ಯಾಣ ಚಾಲುಕ್ಯರ ಮಾಂಡಲಿಕರಾಗಿ ರಾಜಕೀಯ ಜೀವನವನ್ನು ಆರಂಭಿಸಿ, ಮುಂದೆ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಸ್ವತಂತ್ರ ರಾದರು. ಈ ವಂಶದ ಮೂಲ ಪುರುಷ ಸಳನಾಗಿದ್ದು ಅವನಿಂದಲೇ ಈ ಮನೆತನಕ್ಕೆ 'ಹೊಯ್ಸಳ' ಎಂಬ ಹೆಸರು ಬಂದಿದೆ. ನಂತರ ವಿನಯಾದಿತ್ಯ, ಎರೆಯಂಗ, ಮೊದಲನೆಯ ಬಲ್ಲಾಳ, ವಿಷ್ಣುವರ್ಧನ, ಮೊದಲನೆಯ ನರಸಿಂಹ, ಇಮ್ಮಡಿ ಬಲ್ಲಾಳ, ಇಮ್ಮಡಿ ನರಸಿಂಹ, ಮೂರನೆಯ ಬಲ್ಲಾಳರಂತಹ ಪ್ರಖ್ಯಾತ ದೊರೆಗಳು ಕಂಡುಬರುವರು. ಇವರು ಕರ್ನಾಟಕ ಮಾತ್ರವಲ್ಲದೆ ತಮಿಳುನಾಡಿನವರೆಗೆ ರಾಜ್ಯವನ್ನು ವಿಸ್ತರಿಸಿ ಆಳ್ವಿಕೆಯನ್ನು ನಡೆಸಿದರು. ಕರ್ನಾಟಕದ ಇತಿಹಾಸದಲ್ಲಿ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯಕವಾಗಿ ತಮ್ಮದೆ ಆದ ಕೊಡುಗೆಗಳನ್ನು ನೀಡಿದ್ದಾರೆ.

ಹೊಯ್ಸಳರು ನಡೆಸಿದಂತಹ ಉತ್ತಮ ಹಾಗು ಯಶಸ್ವಿ ರಾಜ್ಯಾಡಳಿತಕ್ಕೆ ರಾಜರನ್ನು ಬೆಂಬಲಿಸಿದ ಅನೇಕ ಸಾಮಂತರು, ಮಾಂಡಳಿಕರು ಮತ್ತು ಅಧಿಕಾರಿ ವರ್ಗಗಳ ನಿಷ್ಠೆಯ ಸೇವೆಯು ಕಾರಣವಾಗಿದೆ. ಹೊಯ್ಸಳರ ರಾಜ್ಯಾಡಳಿತದಲ್ಲಿ ಊಳಿಗಮಾನ್ಯ ಪದ್ಧತಿಯ ಅಂಶಗಳು ಕಂಡು ಬರುತ್ತವೆ. ಈ ಪದ್ಧತಿಯಲ್ಲಿ ದೇಶಕ್ಕೆ ರಾಜನೇ ಒಡೆಯನಾಗಿದ್ದು ಆತನ ಕೈಕೆಳಗೆ ಮಾಂಡಲಿಕರು, ಸಾಮಂತರು, ಪಂಚಪ್ರಧಾನರು, ಮಹಾಪ್ರಧಾನರು, ಸರ್ವಾಧಿಕಾರಿಗಳು, ಮಹಾಪಸಾಯಿತ, ದಂಡನಾಯಕ, ಮನ್ನೆಯ, ಸಂಧಿವಿಗ್ರಹಿಗಳು ಕಂಡುಬರುವರು. ಇವರ ಕೆಳಗೆ ಹಳ್ಳಿಗಳಲ್ಲಿನ ಪ್ರಭುಗಾವುಂಡರು, ಸೇನೆಬೋವರು ಕಂಡುಬರುವರು. ಈ ಆಡಳಿತ ವರ್ಗದವರ ಅಧಿಕಾರವು ಆನುವಂಶಿಕವಾಗಿರುತ್ತಿತ್ತು. ನಿಷ್ಠೆಯಿಂದ ದುಡಿದ ಮನೆತನಗಳಾದ ಸಾಮಂತ ಸೋಮನ ಕುಟುಂಬ ಕೌಶಿಕ ಕುಲ, ಮಹಾಸಾಮಂತ ಧುರ್ಮಣ್ಣ, ಮರಿಯಾನೆ ದಂಡನಾಯಕ, ಕುರುವಂದ ಕುಟುಂಬ, ಬೆಳ್ಳೂರಿನ ಮಂಡಲ ಸ್ವಾಮಿಯ ಕುಟುಂಬಗಳು ಹೊಯ್ಸಳ ವಂಶಕ್ಕೆ ಅನೇಕ ಕೊಡುಗೆಗಳನ್ನು ನೀಡಿರುವರು.[೧] ರಾಜರ ಮನೆತನಕ್ಕೆ ವಿಶ್ವಾಸ ಮತ್ತು ನಿಷ್ಠೆ ತೋರುತ್ತಿದ್ದವರಿಗೆ ಆಡಳಿತದಲ್ಲಿ ಅಧಿಕಾರ ಸಿಗುತ್ತಿತ್ತು. ಇಮ್ಮಡಿ ಬಲ್ಲಾಳನು ಜಾತಿಯನ್ನು ನೋಡದೆ ಅರ್ಹತೆ ಇದ್ದಂತಹ ತಳಸಮುದಾಯದ ವರ್ಗದವರಿಗೂ ಉನ್ನತ ಹುದ್ದೆಗಳಾದ ಮಹಾಪಸಾಯಿತ ಮತ್ತು ಮಹಾಪ್ರಧಾನದಂತಹ ಹುದ್ದೆಗಳನ್ನು ನೀಡಿರುವುದು ಕಂಡುಬರುವುದು. ಉದಾಹರಣೆಗೆ ಚಿಕ್ಕಮಗಳೂರಿನ ಮೂಡಗೆರೆಯ ನಂದಿಪುರ ಗ್ರಾಮದ ಮೂರು ವೀರಗಲ್ಲುಗಳಲ್ಲಿ ನಾವಿದರ ಕುಲದವರಾದ ಮೂಕಗಾಉಣ್ಡನ ಮಗನಾದ ಬಿಲ್ಲವಾದಯ್ಯನು ಮಹಾಪಸಾಯಿತನಾಗಿದ್ದನು[೨]. ಆತನ ತಮ್ಮನಾದ ಬಿಲ್ಲಗವಿಳರಾಯ[೩], ಅದೇ ಗ್ರಾಮದ ಮಾದಿಯಂಣನ ತಮ್ಮ ಚಿಕ್ಕಣ್ಣ[೪], ಬೂಕಗಾಉಡನ ಮಗ ಹಿರೆನಾವಿದರು[೫] ಸೈನಿಕ ವೃತ್ತಿಯಲ್ಲಿದ್ದು, ಯುದ್ಧದಲ್ಲಿ ವೀರಮರಣವನ್ನು ಹೊಂದಿರುವ ವಿವರವಿದೆ. ಅದೇ ರೀತಿ ಅರಸೀಕೆರೆಯ ಕೋಳಗುಂದ ಗ್ರಾಮದಲ್ಲಿ ದೊರೆಯುವ ಶಾಸನಗಳ ಆಧಾರದಿಂದ ಮಾವಂತ ಕುಲದವರು ಪಾದಪದ್ಮೋಪಜೀವಿಗಳಾಗಿ, ಮಹಾಪಸಾಯತರಾಗಿ, ಮಹಾಪ್ರಧಾನರಾಗಿ, ಇನ್ನಿತರ ಅಧಿಕಾರಿಗಳಾಗಿದ್ದು ಉತ್ತಮವಾದ ಆಡಳಿತ ನಡೆಸಿರುವುದು ಕಂಡು ಬರುವುದು.

ಕೋಳಗುಂದ ಗ್ರಾಮದ ಮಾವಂತ ಮನೆತನದವರು ಆನೆಯ ಮಾವಂತರ ಕುಲದವರಾಗಿದ್ದು **"ಆನೆಯ ಮಾವಂತರ ಕುಲದ ಚಲದ ಚಾಗಮೆಂತನೆ"**[೬] ಎಂದು ಹೇಳಿಕೊಂಡಿದ್ದಾರೆ. ಇವರು ಹೊಯ್ಸಳ ವಂಶದೊಂದಿಗೆ ಇಟ್ಟುಕೊಂಡಿದ್ದ ರಾಜಕೀಯ ಸಂಬಂಧ, ಆಡಳಿತದಲ್ಲಿ ಅವರು ವಹಿಸಿದ್ದ ಪಾತ್ರ, ಸಮಾಜದಲ್ಲಿ ಅವರಿಗಿದ್ದ ಸ್ಥಾನ, ಅವರು ನೀಡಿದ

* ಸಂಶೋಧನಾ ವಿದ್ಯಾರ್ಥಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೫೭೦೦೦೬.

ಕೊಡುಗೆಗಳು ಅಪಾರವಾಗಿವೆ. ಇವರು ನೆಲೆಸಿದ್ದ ಕೋಳಗುಂದ ಗ್ರಾಮವು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಜಾವಗಲ್ ಹೋಬಳಿಯಲ್ಲಿದೆ. ಶಾಸನಗಳಲ್ಲಿ ಈ ಗ್ರಾಮದ ಹೆಸರು 'ಕೋಳಿಗುಂದ' ಎಂದು ಉಲ್ಲೇಖಿಸಿದೆ. ಇದು ಪ್ರಾಚೀನ ಆಡಳಿತ ವಿಭಾಗದಲ್ಲಿ ನಿರ್ಗುಂದ ನಾಡಿಗೆ ಸೇರಿತ್ತು. ಈ ಗ್ರಾಮದ ಅಕ್ಕಪಕ್ಕದಲ್ಲಿ ಮಾವುತನಹಳ್ಳಿ, ಮುದುಡಿ, ಮಾದನಹಳ್ಳಿ ಗ್ರಾಮಗಳಿವೆ. ಇಲ್ಲಿ ದೊರೆತಿರುವ ೮ ಶಾಸನಗಳಲ್ಲಿ ಈ ಮನೆತನ ಮತ್ತು ಈ ಮನೆತನಕ್ಕೆ ಸೇರಿದ ನಾಯಕರ ಹೆಸರು, ಅವರ ಶೌರ್ಯ, ಪ್ರತಾಪ, ಆಡಳಿತದ ವೈಖರಿ, ಹೊಸ ಊರು, ಕೆರೆ ಮತ್ತು ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಹಾಗೂ ಅನೇಕ ದಾನದತ್ತಿಗಳನ್ನು ಮಾಡಿರುವುದು ಕಂಡುಬರುವುದು.

ಹೊಯ್ಸಳರ ಗಜಪಡೆಯನ್ನು ಕುರಿತು "The elephants played an important part in battle. Their great size and immunity from arrows enbled them to charge against the enemy. It is very probable that the line of elephants also served the purpose of modern trenches in giving a safe shelter for the arches who could plains, or when attacking a fort. The elephants were evidently captured in the forests of the Western Ghats and Malabar and were trained both for domastic purpose and for war"[೭] ಎಂದು ಪಾಶ್ಚಾತ್ಯ ವಿದ್ವಾಂಸರಾದ ವಿಲಿಯಂ ಕೊಯ್ಲಿಲೊರವರು ತಿಳಿಸಿದ್ದಾರೆ. ಆದರೆ ಕೋಳಗುಂದದ ಶಾಸನಗಳಲ್ಲಿ ಇವರ ಮೂಲ ವೃತ್ತಿಯಾದ ಆನೆಯನ್ನು ಪಳಗಿಸುವುದಾಗಲಿ, ಗಜಪಡೆಯನ್ನು ರಾಜನಿಗೆ ಒದಗಿಸುವ ವಿವರಗಳಾಗಲಿ ದೊರೆಯುವುದಿಲ್ಲ. "ಆನೆಯ ಮಾವಂತ ಕುಲದ"[೮], "ಪಟ್ಟದಯಿಭ ದಾರುಕರುಂ ಪುಟ್ಟಿದರುಂ"[೯] ಎಂದು ಆ ಮನೆತನದ ಬಗ್ಗೆ ಶಾಸನದಲ್ಲಿ ದೊರೆಯುವುದು. ಅವರ ಶಾಸನಗಳಲ್ಲಿ ಆಡಳಿತದಲ್ಲಿ ಮಾಡಿದಂತಹ ಸಾಧನೆಗಳು ದೊರೆಯುವುದು.

ಈ ಮಾವಂತ ಮನೆತನದವರು ಹೊಯ್ಸಳ ರಾಜರಲ್ಲಿ ಮೊದಲನೆಯ ನರಸಿಂಹ, ವೀರ ಬಲ್ಲಾಳ ಮತ್ತು ಎರಡನೆ ನರಸಿಂಹನ ಆಳ್ವಿಕೆಯಲ್ಲಿ ಕಂಡುಬರುವರು. ಅಂದರೆ ಈ ಮನೆತನವನ್ನು ಉಲ್ಲೇಖಿಸುವಂತಹ ಕ್ರಿ.ಶ. ೧೧೬೧ರಿಂದ ಕ್ರಿ.ಶ. ೧೨೩೪ರವರೆಗೆ ಶಾಸನಗಳು ಕೋಳಗುಂದ, ಮುದುಡಿ, ಮಾದನಹಳ್ಳಿಯಲ್ಲಿ ಕಂಡುಬಂದಿದೆ. ಆರಂಭದ ಶಾಸನದಲ್ಲಿ ಈ ಮನೆತನದವರು ಯಾವ ಉನ್ನತ ಹುದ್ದೆಯನ್ನು ಅಲಂಕರಿಸಿರುವುದು ಕಂಡು ಬರುವುದಿಲ್ಲ. ನಂತರ ವೀರ ಬಲ್ಲಾಳನ ಕಾಲದಲ್ಲಿ ಈ ಮನೆತನದ ನಾಯಕರು ನಿಷ್ಠ ಅಧಿಕಾರಿಗಳಾಗಿದ್ದು, ಮಹಾಪಸಾಯಿತ, ಮಹಾಪ್ರಧಾನದಂತಹ ಹುದ್ದೆಯನ್ನು ಅಲಂಕರಿಸಿರುವುದು ಕಂಡುಬರುವುದು. ಈ ಮನೆತನದ ಬಗ್ಗೆ "The Importance of the elephant can be gauged from the number of trainers or *mavutas* that appears in the inscription. During the time of Ballala II their centre was Koligunda in Arasikere Taluk. They were probably a class by themselves, the occupation being hereditary. Some of these mavutas seem to have been wealthy."[೧೦] ಎಂದು ವಿಲಿಯಂ ಕೊಯ್ಲಿಲೊರವರು ಹೇಳಿದ್ದಾರೆ. ಕೋಳಗುಂದದ ಮಾವಂತ ಮನೆತನದವರು ವೀರಬಲ್ಲಾಳನ ಆಳ್ವಿಕೆಯಲ್ಲಿ ಉನ್ನತ ಹುದ್ದೆಯನ್ನು ಅಲಂಕರಿಸಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ತಮ್ಮದೆ ಆದ ಕೊಡುಗೆಗಳನ್ನು ನೀಡಿದ್ದಾರೆ.

**ವೀರಬಲ್ಲಾಳನ ಆಡಳಿತದಲ್ಲಿ ಮಾವಂತ ಮನೆತನದ ನಾಯಕರು**

ಕ್ರಿ.ಶ. ೧೦೮೩ರ ಶಾಸನದಲ್ಲಿ ವಿನಯಾದಿತ್ಯನ ಕೈಕೆಳಗೆ ಕೋಳಗುಂದ ಗ್ರಾಮವನ್ನು ದಂಡನಾಯಕ ಪೋಚಿಮಯ್ಯನ ಮಗ ಏಚಿಮಯ್ಯ ದಂಡನಾಯಕನು ಆಳ್ವಿಕೆ ನಡೆಸುತ್ತಿದ್ದುದು ಕಂಡುಬರುವುದು.[೧೧] ನಂತರದಲ್ಲಿ ಕ್ರಿ.ಶ. ೧೧೬೧ರ ಶಾಸನದಲ್ಲಿ "ಮಯಮಾವಂತ"[೧೨]ನ ಹೆಸರು ಕಂಡು ಬರುವುದು. ಇದು ಮೊದಲನೆ ನರಸಿಂಹನ ಆಳ್ವಿಕೆಯ ಕಾಲದ ಶಾಸನವಾಗಿದ್ದು, ಈತನು ಆಡಳಿತದಲ್ಲಿ ಯಾವ ಹುದ್ದೆಯನ್ನು ಅಲಂಕರಿಸಿರುವುದು ಕಾಣುವುದಿಲ್ಲ. ವೀರಬಲ್ಲಾಳನ ಕಾಲದಲ್ಲಿ ಮಾವಂತ ಮನೆತನದವರು ಪಾದಪದ್ಮೋಪಜೀವಿಗಳಾಗಿ ಮಹಾಪಸಾಯಿತರಾಗಿ ಅಧಿಕಾರಕ್ಕೆ ಬಂದು ಇಮ್ಮಡಿ ನರಸಿಂಹನ ಕಾಲದಲ್ಲಿ ಮಹಾಪ್ರಧಾನರಾಗಿ ಮುಂದುವರೆದಿದ್ದಾರೆ. ಹೊಯ್ಸಳ ವಂಶಕ್ಕೆ ನಿಷ್ಠೆಯನ್ನು ತೋರಿ ಉತ್ತಮ ಸಂಬಂಧವನ್ನು ಹೊಂದಿದ್ದರು. ಕ್ರಿ.ಶ. ೧೧೯೫ರ ಶಾಸನದಲ್ಲಿ

> **"ಸ್ವಸ್ತಿ ಶ್ರೀಯಿರ್ಪ್ಪುತ್ತಮ**
> **ವಾಸ್ತು ಜಗಜ್ಜನಮನೋಹರಂ ಸುಜನಜನ**
> **ಪ್ರಸ್ತುತ್ಯಂವಿಶುದ್ದಯಶೋ**
> **ವಿಸ್ತಾರಿಮೆಸೆಉದಮಮ ಹೊಯ್ಸಳವಂಶಂ॥"**[೧೩]

ಎಂದು ಹೊಯ್ಸಳ ವಂಶದ ಬಗ್ಗೆ ಗೌರವ ತೋರಿದ್ದಾರೆ. ಕೋಟೆಯ ಮಾವಂತ ಮಹಾಪಸಾಯಿತನಾಗಿದ್ದನು[೧೪]. ಗಜಕೇಸರಿ ಎಂಬ ಬಿರುದನ್ನು ಹೊಂದಿದ್ದ ಮಾವಂತನು ಮಹಾಪ್ರಧಾನ ಹುದ್ದೆಯನ್ನು ಅಲಂಕರಿಸಿದ್ದನು[೧೫]. ಇವರಲ್ಲದೆ ಮಾವಂತರ ಹಿರಿಯ ಪ್ರಭಾವಿ ವ್ಯಕ್ತಿಗಳು ಸೇರಿ ಕೋಳಗುಂದದಲ್ಲಿ ಆಡಳಿತ ನಡೆಸುತ್ತಿದ್ದರು. **"ಮಾವಂತರ ಮೆಯಜೋಳಕ್ಕಾಳ್ವ ಕೋಳಿಗುಂದದೂರ"**[೧೬] ಎಂದು ಅವರು ಆಡಳಿತ ನಡೆಸುತ್ತಿದ್ದುದರ ಬಗ್ಗೆ ಹೇಳಿಕೊಂಡಿದ್ದಾರೆ. ಈ

ಮನೆತನ ಹಾಗೂ ನಾಯಕರ ವೀರತನ, ಶೌರ್ಯ ಮತ್ತು ಪ್ರತಿಷ್ಠೆಯ ಕುರಿತಾಗಿ ಶಾಸನದಲ್ಲಿ

**"ತದೀಯಪಾದಪದ್ಮೋಪಜೀವಿಗಳಪ್ಪಾನೆಯಮಾವಂತರ**
**ಕುಲದ ಚಲದ ಚಾಗಮೆಂತೆನೆ॥**
**ಶ್ರಿಷ್ಟಿಯೊಳೀ ದಸಪಳಗಂ**
**ನೆಟ್ಟನೆ ಮಾಯವ್ವೆಯೆಂಬ ಸತಿಯುದರದಲುಂ**
**ಪಟ್ಟದಯಿಭ ದಾರುಕರುಂ**
**ಪುಟ್ಟಿಧರುಂಕಾಟೆಯ(ಂ)ಮಾವತ(ಂ)ಮಲ್ಲೆಯನುಂ॥**
**ಧರೆಯೊಳಗಾರೋಹಕ್ಕು**
**ಪ್ಪರವಟ್ಟಂ ಬಿರುದೆನಂಬನೀ ಕಾಟೆಯ(ಂ)ಮಾವತಗಂ**
**ಸ್ಥಿರಮೆ ವೀರವಿಳಾಸಂ**
**ಧುರದೊಳ್ಕ್[ಳಾ]ಗ್ನಿರುದ್ರನಂ ತಾಂ ನೆಱಿಪೋಲ್ವಂ॥"[೧೭]**

ಎಂದು ಹೊಗಳಿರುವುದು ಕಂಡುಬರುವುದು.

ಕ್ರಿ.ಶ. ೧೧೯೫ರ ಶಾಸನದಲ್ಲಿ ಕೋಳಗುಂದವನ್ನು ಆಳುತ್ತಿದ್ದ ಇನ್ನಿತರ ಆರು ಜನ ಪ್ರಭಾವಿ ವ್ಯಕ್ತಿಗಳನ್ನು

**"ತತ್ಪಾದಪದ್ಮೋಪಜೀವಿಗಳಪ್ಪಾನೆಯಮಾವಂತಂ**
**ಪ್ರತಾಪವೆಂತನೆ ಆನೆನಿ**
**ಸಿ ನೆಗಳ್ದಾ ಹಿರಿಯ ಹೆಮ್ಮೆಯಮಾವಂತನುಂ ಚಿಕ್ಕ**
**ಹೆಮ್ಮೆಯಮಾವನ್ತ**
**ನುಂ ಜವನೆಯ ಮಾವನ್ತನುಂ ಕೇತೆಯ ಮಾವನ್ತನುಂ**
**ದುಗ್ಗೆಯಮಾವನ್ತನುಂ**
**ಬೂಚಯಮಾವನ್ತನುಂ ಕೋಳಿಗುಂದಮನಾಳುವ"[೧೮]**

ಎಂದು ಉಲ್ಲೇಖಿಸಿದೆ.

ಜವನೆಯ ಮಾವಂತ ಮತ್ತು ಕೇತೆಯ ಮಾವಂತರು ಈ ಗ್ರಾಮದ ಪ್ರಮುಖ ವ್ಯಕ್ತಿಗಳಾಗಿದ್ದು ಅವರನ್ನು ವಿಶೇಷವಾಗಿ ವರ್ಣಿಸಿರುವುದು ಕಂಡುಬರುವುದು. ಜವನೆಯ ಮಾವಂತನು ಚಟ್ಟಿಯ ಮತ್ತು ಮಲಯ್ವೆಯರ ಮಗ ಹಾಗು ಕೇತಯ ಮಾವಂತನ ಸಹೋದರ. ಈತನ ಗುಣಗಳನ್ನು ಕುರಿತು ಕ್ರಿ.ಶ. ೧೧೯೫ರ ಶಾಸನದಲ್ಲಿ

**"ಜವನೆಯಮಾವನ್ತನನ್ವಯಮೆಂತೆನೆ॥**
**ಅನುಪಮಗುಣನಿಳಯಂತಾ**
**ನನವರತಂ ದಾನಿ ಸತ್ಯನಿಧಿತೇಜೋನಿಧಿಯೆಂಬೀ**
**ವಿನಯದಯಂ ಚಟ್ಟಯನ**
**ವನಿತೆಯು ಮಲಯ್ವೆಯಮಹಿಮೆಗರ್ಸಮನೊಳರೆ॥"[೧೯]**

ಎಂದು ಹೊಗಳಿದೆ. ಅದೇ ರೀತಿ ಈತನ ಶೌರ್ಯವನ್ನು ಕುರಿತು

**"ಜವನೆಯಮಾವನ್ತನ[ಸೌ]ರ್ಯ್ಯಮೆಂತೆನೆ॥**
**ಜವನಂ ಜಕ್ಕುಲಿಪಂ ರಿಪು**
**ಜವನಂ ಮುಂಬಲ್ಲ ಕೀಳ್ವನನ್ತಾಧುರದೊಳು**
**ಜವನೆಱಿ ಬೆಚ್ಚಿಸಿದಂತಿಱಿದಂ**
**ಜವನೆಯಮಾವನ್ತ ವೀರನಾಹವಧೀರ॥"[೨೦]**

ಎಂದು ವರ್ಣಿಸಿದೆ.

ಮತ್ತೊಬ್ಬ ಮಾವಂತನಾದ ಮಲ್ಲನನ್ನು ಕ್ರಿ.ಶ. ೧೧೯೫ರ ಶಾಸನದಲ್ಲಿ

**"ಮಾವಗೆಮೆಲವರಗಂಡಂ**
**ಭಾವಕನುಂ ವೀರಧೀರನತಿಬಳಸೌರ್ಯ್ಯಂ**
**ಮಾವತಮಲ್ಲನಗುಂಮಂ**
**ಮಾವನಿಯಂಕಂಕಕಾಱನೆಂಬಂಜಗದೊಳು॥"[೨೧]**

ಎಂದು ಹೊಗಳಿರುವುದು.

ಜವನೆಯ ಮಾವಂತನ ಸಹೋದರನಾದ ಕೇತೆಯ ಮಾವಂತನನ್ನು ಕುರಿತು ಕ್ರಿ.ಶ. ೧೧೯೭ರ ಶಾಸನದಲ್ಲಿ

**"ಕಲಿತನದಪಾರ್ತ್ಥ ಕಂಣ್ನನ**
**ಕಲಿಯಂಬೀ ಭೀಮಸೇನನಂ ನೆಱಿಪೋಲ್ವಂ**
**ಕಲಿತನದಳವಿಯೊಳೀತಂ**
**ಕಲಿಧುರದೊಳಗದಟನಲ್ತೆ ಜವನನಕೇತ॥ ಯಿನ್ತುಗುಣ**
**ನಿಳಯನಪ್ಪ ಕೇತೆಯಮಾವಂತನುಂ"[೨೨]**

ಎಂದು ಮಹಾಭಾರತದ ಶ್ರೇಷ್ಠ ವ್ಯಕ್ತಿಗಳಾದ ಕರ್ಣ, ಅರ್ಜುನ, ಭೀಮರಿಗೆ ಹೋಲಿಸಿ ಹೊಗಳಿರುವುದನ್ನು ನೋಡಬಹುದು.

ಬಬ್ಬನ ಹೆಂಮನೆಂಬುವನನ್ನು ಕುರಿತು

**"ಅರಿಕರಿಘಟೆಯಂ . . .**
**. . . ಶಿರಗಳೊಳು ಬಾಲಸಿಕ್ಕೆ ಬಿರುದಾರುಕರಂ**
**ಮರಿಮೀಸೆ ಮುಂಬಲೆಲ್ಪಂ**
**ಧುರದೊಳು ಕೀ. . . . . . ಟನಲ್ತೆ ಬಬ್ಬನ ಹೆಂಮ॥"**

ಎಂದು ಹೊಗಳಿದೆ.

ಈತ ಯುದ್ಧದಲ್ಲಿ ಶತ್ರುಗಳ ಗಜಪಡೆಯನ್ನು ಎದುರಿಸಿದಂತಹ ಶೂರನಿರಬಹುದು. ಶಾಸನದಲ್ಲಿ ಕೆಲವು ಅಕ್ಷರಗಳು ತ್ರುಟಿತವಾಗಿರುವುದರಿಂದ ವಿವರಗಳು ಸ್ಪಷ್ಟವಾಗಿ ತಿಳಿಯುವುದಿಲ್ಲ. ಇವರಲ್ಲದೆ ಮಯ ಮಾವಂತ, ಚೌಡೆಯ ಮಾವನ್ತ, ಕಾಟೆಯ ಮಾವಂತ, ಮಲ್ಲೆಯ ಮಾವಂತ ಮತ್ತು ಆತನ ಅಳಿಯಂದಿರಾದ ಗುಂಮೆಯ ಮಾವಂತ, ಸೋವೆಯ ಮಾವಂತ, ಬೊಪ್ಪೆಯ ಮಾವಂತ ಆತನ ಮಗ ಮಯಿಲೆಯ ಮಾವಂತರ ಹೆಸರು ಶಾಸನಗಳಲ್ಲಿ ಉಲ್ಲೇಖವಿದ್ದು ಈ ಗ್ರಾಮದ ಆಡಳಿತದಲ್ಲಿ ಕೈ ಜೋಡಿಸಿದ್ದಾರೆ. ಹಾಗೆಯೇ ಕ್ರಿ.ಶ. ೧೨೨೭ರ ಕಾಲದ ಎರಡನೇ ನರಸಿಂಹನ ಆಳ್ವಿಕೆಯಲ್ಲಿ ಮಹಾಪ್ರಧಾನ ಹುದ್ದೆಯನ್ನು ಅಲಂಕರಿಸಿದ್ದ ಮಾವಂತನ ಹೆಸರು ಉಲ್ಲೇಖಿಸಿದೆ. ಅವನ ಹೆಸರು ಶಾಸನದಲ್ಲಿ ಸವೆದಿದ್ದು, ಆತನು **"ಗಜಕೇಸರಿ"**[೨೩] ಎಂಬ ಬಿರುದು ಧರಿಸಿರುವುದನ್ನು ಕಾಣಬಹುದು. ಆದರೆ ಈ ಬಿರುದು ಮಾವಂತಕುಲದವರಿಗೆ

ಬಂದಿರುವುದು ಆಶ್ಚರ್ಯವೇ ಸರಿ, ಏಕೆಂದರೆ ಗಜಕೇಸರಿ ಎಂದರೆ ಸಿಂಹ, ಅದು ಆನೆಯ ವೈರಿ. ಈತ ಆನೆಗಳನ್ನು ಎದುರಿಸಿ ಪಳಗಿಸುವಲ್ಲಿ ಸಿಂಹದಂತೆ ಬಲಿಷ್ಠನಾಗಿದ್ದನೋ ಎಂಬುದರ ಹಿನ್ನೆಲೆಯಲ್ಲಿ ಈ ಬಿರುದು ಬಂದಿರಬಹುದು. ಈ ಮನೆತನದ ನಾಯಕರನ್ನು ವೀರರು, ಧೀರರು, ಕಲಿಗಳು, ಸತ್ಯನಿಧಿ, ತೇಜೋನಿಧಿ ಎಂದು ಹೊಗಳಿರುವುದನ್ನು ಮತ್ತು ಧರಿಸಿರುವ ಬಿರುದನ್ನು ನೋಡಿದರೆ ಹೊಯ್ಸಳ ದೊರೆಗಳು ನಡೆಸಿದಂತಹ ಯುದ್ಧಗಳಲ್ಲಿ ಗಜಪಡೆಯನ್ನು ಒದಗಿಸಿ ವೀರ ಪ್ರರಾಕ್ರಮದಿಂದ ಹೋರಾಡಿರಬಹುದು ಹಾಗೆಯೇ ಕೋಳಗುಂದ ಪ್ರದೇಶದಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುವುದು.

**ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕೊಡುಗೆಗಳು**

ಕೋಳಗುಂದ ಗ್ರಾಮವು ಪ್ರಾಚೀನ ಆಡಳಿತ ವಿಭಾಗದಲ್ಲಿ ನಿರ್ಗುಂದ ನಾಡಿಗೆ ಸೇರಿತ್ತು. ಇಲ್ಲಿ ಈ ಮನೆತನದವರು ಮಹಾಪಸಾಯಿತ, ಮಹಾಪ್ರಧಾನರಂತಹ ಉನ್ನತ ಹುದ್ದೆಯನ್ನು ಅಲಂಕರಿಸಿದ್ದರು. ಇವರ ಕೈ ಕೆಳಗೆ ಹೆಗ್ಗಡೆಗಳು, ಪ್ರಭುಗಾವುಂಡ ಮತ್ತು ಸೇನಬೋವರಂತಹ ಅಧಿಕಾರಿ ವರ್ಗಗಳು ಸೇವೆಯನ್ನು ಸಲ್ಲಿಸುತ್ತಿದ್ದರು. ಗ್ರಾಮಸಭೆಯು ಆಡಳಿತ ವಿಭಾಗದ ಚಿಕ್ಕ ಘಟಕವಾಗಿತ್ತು, ಇವರೆಲ್ಲರೂ ಸಭೆ ಸೇರಿ ಗ್ರಾಮದ ಅಭ್ಯುದಯ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಹಾಗೆಯೆ ಇವರ ಸಮ್ಮುಖದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿದ್ದವು. ಕ್ರಿ.ಶ. ೧೧೯೪ರ ಶಾಸನವು ಕೋಳಗುಂದ ಗ್ರಾಮದಲ್ಲಿ ಜನರ ಉಪಯೋಗಕ್ಕೆ ಮತ್ತು ಮನೋರಂಜನೆಗೆಂದು ಇದ್ದ ಕೆರೆಗಳು ಸುಂದರ ಹೂಗಳು, ದುಂಬಿಯ ನಾದದಿಂದ ಕೂಡಿದ ನಂದನ ವನಗಳು ಮತ್ತು ಸುಂದರ ಕೊಳಗಳನ್ನು ಹೊಂದಿದ್ದವು ಎಂಬುದನ್ನು

**"ಕೋಳಿಗುಂದದೂರ ಚೆಲ್ವಿದಿಂತನೆ॥**
**ಕೆಱೆಯಿಂ ನಂದನ ವನದಿಂ**
**ಪಱಮೆಯ ದನಿಯಿಂ ಕೊಳಂಗಳಿಂ ಸುಜನಜನ**
**ಕೈಱೆವಟ್ಟೆನೆ ರಂಜಿಸುಗುಂ**
**ನೆಱೆದಿಟ್ಟ ಕೋಳಿಗುಂದವವನೀತಳದೊಳು॥"[೨೪]**

ಎಂದು ವರ್ಣಿಸಿದೆ.

ಈ ಮನೆತನದ ಸ್ತ್ರೀಯರ ಬಗ್ಗೆ ಕಾಟೆಯ ಮಾವಂತನ ತಾಯಿ ಮಾಯವ್ವೆ ಮತ್ತು ಜವನೆಯ ಮಾವಂತನ ತಾಯಿ ಮಲಯ್ವೆಯರ ಉಲ್ಲೇಖವಿದೆ. ಮಾವುತನ ಹಳ್ಳಿಯಲ್ಲಿ ವೀರ ಮಾಸ್ತಿಗಲ್ಲುಗಳು ದೊರೆಯುವುದರ ಹಿನ್ನೆಲೆಯಲ್ಲಿ ಸತಿ ಹೋಗುವುದು ರೂಢಿಯಲ್ಲಿತ್ತು. ಇಲ್ಲಿ ವೀರ ಮಾಸ್ತಿಗುಡಿಗಳಿದ್ದು, 'ಮಾವುತಮ್ಮ' ಎಂದು ಹೇಳುವ ವೀರ ಮಾವುತರ ದಂಪತಿಗಳ ಶಿಲ್ಪ ಇಂದಿಗೂ ಪೂಜೆಗೊಳ್ಳುತ್ತಿದೆ.[೨೫]

ತಂದೆ ತಾಯಿಗಳ ಮೇಲೆ ವಿಶೇಷ ಗೌರವ ಮತ್ತು ಪ್ರೀತಿಯನ್ನು ಹೊಂದಿದ್ದು ಅವರ ಶ್ರೇಯಸ್ಸಿಗೆ ದೇವಾಲಯಗಳನ್ನು ಕಟ್ಟಿಸುತ್ತಿದ್ದುದು ಕಂಡುಬರುವುದು. ಕ್ರಿ.ಶ. ೧೧೯೫ರಲ್ಲಿ ಜವನೆಯ ಮಾವಂತನು ವಿನಾಯಕ ದೇವಲಯ,[೨೬] ಕ್ರಿ.ಶ. ೧೧೯೬ರಲ್ಲಿ ಕೆಲವು ಮಾವಂತರ ಸಮ್ಮುಖದಲ್ಲಿ ಏಚೇಶ್ವರ ದೇವಾಲಯ,[೨೭] ಕ್ರಿ.ಶ. ೧೧೯೭ರಲ್ಲಿ ಕೇತೆಯನ ಮಾವಂತನು ಕೋಳಗುಂದದ ಊರ ಮುಂದೆ ಕೇತೇಶ್ವರ ದೇವಾಲಯ[೨೮]ವನ್ನು ನಿರ್ಮಿಸಿರುವರು.

ಹೊಯ್ಸಳರ ಆಳ್ವಿಕೆಯಲ್ಲಿ ಕೃಷಿಯು ದೇಶದ ಆರ್ಥಿಕ ಬೆನ್ನಲುಬಾಗಿತ್ತು. ಮಲೆನಾಡು ಪ್ರದೇಶದ ಈ ವಂಶದವರು ಕೃಷಿಗಾಗಿ ಹೆಚ್ಚು ಒತ್ತು ನೀಡಿದ್ದರು. ದೇಶದ ಮುಖ್ಯ ಆದಾಯ ಕೃಷಿಯಾಗಿತ್ತು. ಹೊಯ್ಸಳ ದೊರೆಗಳಿಗೆ ಯುದ್ಧದಲ್ಲಿ ಶ್ಲಾಘನೀಯ ಸೇವೆಯನ್ನು ಸಲ್ಲಿಸಿ ಕೆಲವು ಪ್ರದೇಶದ ಒಡೆತನವನ್ನು ಪಡೆಯುತ್ತಿದ್ದರು. ನಂತರ ಕೇಂದ್ರಾಡಳಿತಕ್ಕೆ ಸೇವೆಗಳನ್ನು ಮತ್ತು ಕಂದಾಯಗಳನ್ನು ನೀಡುತ್ತಿದ್ದರು. ಪಡೆದ ಭೂಮಿಯಲ್ಲಿ ಉತ್ಪಾದಕ ವರ್ಗವಾದ ರೈತರನ್ನು ಪ್ರೋತ್ಸಾಹಿಸಿ, ಕೃಷಿ ಚಟುವಟಿಕೆಗಳನ್ನು ಅಭಿವೃದ್ಧಿ ಪಡಿಸುತ್ತಿದ್ದರು. ಹೊಸ ಊರು, ಕೆರೆಗಳ ನಿರ್ಮಾಣ ಮತ್ತು ದುರಸ್ತಿ, ಬರಡು ಭೂಮಿಯನ್ನು ನೀರಾವರಿ ಗದ್ದೆಯನ್ನಾಗಿ ಮಾರ್ಪಡಿಸುವುದು, ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ಮಾಡುವುದು. ಈ ನಿರ್ಮಾಣದ ಕಾಮಗಾರಿಯ ಕೆಲಸವು ಒಂದು ಉಧ್ಯಮವಾಗಿರುವುದು ಕಂಡುಬರುತ್ತದೆ. ಕೇತೋಜ, ಗಣಪೋಜ ಎಂಬುವರು ದೇವಾಲಯ ಮತ್ತು ಕೆರೆಗಳನ್ನು ನಿರ್ಮಿಸುವ ಪರಿಣಿತರಾಗಿದ್ದು, ನಿರ್ಮಾಣದ ಕಾರ್ಯವನ್ನು ಮುಗಿಸಿ ಉಂಬಳಿಯನ್ನು ಪಡೆಯುತ್ತಿದ್ದರು.[೨೯] ಮಾದಿಗೌಡ ಎಂಬ ವ್ಯಕ್ತಿಯು ಸಹ ಕೆರೆಯನ್ನು ನಿರ್ಮಿಸುವವನಾಗಿದ್ದನು.[೩೦] ಕಾಟೆಯ ಮಾವಂತರ ಕುಟುಂಬದವರು ಮುದುವಡಿ ಎಂಬಲ್ಲಿ ಕೆರೆಯನ್ನು ನಿರ್ಮಾಣ ಮಾಡಿಸಿ, ಆ ಕೆರೆಯ ಕೆಳಗಡೆ ಹೊಸದಾಗಿ ಎರೆಯ ಗದ್ದೆಯನ್ನಾಗಿ ಮಾಡಿಸಿದರು.[೩೧]

ರಾಜ ಮತ್ತು ಗುರು-ಹಿರಿಯರಿಗೆ ಕ್ಷೇಮವಾಗಲಿ ಎಂದು ದೇವಾಲಯದ ನಿರ್ಮಾಣ ಮತ್ತು ಜೀರ್ಣೋದ್ಧಾರ ಮಾಡಿಸುವುದರ ಜೊತೆಗೆ ದೇವಾಲಯದ ನಿತ್ಯ ಸೇವೆಗಳಾದ ನಂದಾದೀಪ, ರಂಗಭೋಗ, ನೈವೇದ್ಯ ಮುಂತಾದ ಸೇವೆಗಳಿಗೆ ದಾನದತ್ತಿ ಮಾಡಿದ್ದರು. ಇದರಿಂದ ದೇವಾಲಯಕ್ಕೆ ಅವಶ್ಯಕತೆ ಇದ್ದ ಪೂಜಾ ಸಾಮಗ್ರಿಗಳು, ಎಣ್ಣೆ, ಬೆಲ್ಲ, ದವಸ ಧಾನ್ಯ ಮುಂತಾದ ವಸ್ತುಗಳ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಹೀಗೆ ಈ ಮನೆತನದವರು ಕೃಷಿ ಮತ್ತು ಇತರ ಮೂಲಗಳಿಂದ ರಾಜಾಯವನ್ನು ಹೆಚ್ಚಿಸಿಕೊಳುತ್ತಿದ್ದರು.

ಇನ್ನು ಧಾರ್ಮಿಕವಾಗಿ ನೋಡುವುದಾದರೆ ದೊರೆತಿರುವ ಶಾಸನಗಳಲ್ಲಿ ಶೈವಸ್ತುತಿಗಳಾದ **"ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭ ಮೂಲಸ್ತಂಬಾಯ ಶಂಭವೇ॥", "ನಮಶ್ಯಶಿಕಳಾಕೋಟಿಕಲ್ಪಮಾ. . . .ಯೇಪ್ರಸಂನ . . . . ಕಲ್ಪಕಲ್ಪವ್ರಿಕ್ಷಾಯ ಶಂಭವೇ॥"**[೩೨] ಎಂದು ಪ್ರಾರಂಭವಾಗುವುದು. ಈ ಆಧಾರದ ಮೇಲೆ ಮಾವಂತ ಮನೆತನದವರು ಶೈವಧರ್ಮವನ್ನು ಅನುಸರಿಸಿದ್ದರು ಎಂದು ತಿಳಿಯಬಹುದು. ಇವರ ಭಕ್ತಿಯನ್ನು ಕುರಿತಾಗಿ

> **"ಎರದಗ್ಗೀವನು ನೋಡಾ**
> **ಗುರುವಿಂಗಾ ರವಿಗೆ ಹರಿಗೆ ಶಿವಗತಿಭಕ್ತಂ**
> **ಧರೆಯೊಳ್ಮಾವತರಲ್ಲನ**
> **ದೊರೆಯೊಳರೆ ಕುಲಕ್ಕೆ ಚಲಕೆ ಸರಿಯಹರೊಳರೇ॥"**[೩೩]

ಎಂದು ಶಾಸನದಲ್ಲಿ ವರ್ಣಿಸಿದೆ.

ಮಾವಂತ ಮನೆತನದವರು ಮಾಡಿದ ದಾನಗಳನ್ನು ಸ್ವೀಕರಿಸುವಂತಹ ದಾನಪ್ರತಿಗ್ರಹಿಗಳು ವಿನಯಶಿವ ಪಂಡಿತನ ಮಗ ರುದ್ರಜೀಯ, ಈತನ ತಮ್ಮ ಮಾರಜೀಯ[೩೪], ತ್ರೈಳೋಕ್ಯ ಶಕ್ತಿಯ ಹಿರಿಯ ಮಗ ಅಮ್ರಿತರಾಸಿ, ಹಿರಿಯ ಹಾಲಜೀಯ, ಚಿಕ್ಕ ಹಾಲಜೀಯು[೩೫] ಬೆನಚಜೀಯುರ ಪುತ್ರರಾದ ಗೋಳಜೀಯ ಮತ್ತು ದುದ್ದಜೀಯ[೩೬], ಮಲ್ಲಿಕಜೀಯ[೩೭], ಸಂಕರಜೀಯರ ಮಗ ಸಕಳೇಶ್ವರಜೀಯ[೩೮] ಮುಂತಾದ ಶೈವ ಪಂಡಿತರು. ಈ ಆಧಾರದ ಮೇಲೆ ಈ ಮನೆತನದವರು ಕಾಳಮುಖ ಶೈವ ಪಂಥಕ್ಕೆ ಸೇರಿದವರು ಎಂದು ತಿಳಿಬರುವುದು. ಈ ಶೈವ ಆಚಾರ್ಯರು ದೇವಾಲಯಗಳ ನಿರ್ಮಾಪಕರಾಗಿದ್ದು ಹಳ್ಳಿ ಹಳ್ಳಿಗಳಲ್ಲಿ ದೇವಾಲಯಗಳನ್ನು ನಿರ್ಮಿಸಿ ಅಲ್ಲಿಯೇ ವಾಸವಿದ್ದು ಆಧ್ಯಾತ್ಮಿಕ ಸಾಧನೆಯ ಜೊತೆ ವಿದ್ಯೆಯನ್ನು ಪ್ರಸಾರ ಮಾಡುತ್ತಿದ್ದರು.[೩೯] ಈ ಶೈವ ಗುರುಗಳ ಮಾರ್ಗದರ್ಶನದಲ್ಲಿ ಮಾವಂತ ಮನೆತನದವರು ಮೂಲಸ್ಥಾನದ ಕಲಿದೇವರ ಪ್ರತಿಷ್ಠೆ, ವಿನಾಯಕ ದೇವಾಲಯ, ಏಚೇಶ್ವರ ಮತ್ತು ಕೇತೇಶ್ವರ ದೇವಾಲಯಗಳನ್ನು ನಿರ್ಮಾಣ ಮಾಡಿಸಿದರು. ಹೀಗೆ ಧಾರ್ಮಿಕ ಸೇವೆ ಜೊತೆಗೆ ವಿದ್ಯಾಭ್ಯಾಸಕ್ಕೂ ಪ್ರೋತ್ಸಾಹ ನೀಡಿದ್ದರು.

ಮಾವಂತರು ತಳಸಮುದಾಯದಿಂದ ಬಂದಿದ್ದರೂ ಹಿಂದೊಮ್ಮೆ ಉತ್ತಮ ಸ್ಥಿತಿವಂತರಾಗಿದ್ದರು. ಜಾತಿ ಪದ್ಧತಿ ಕಠಿಣವಾಗಿದ್ದರೂ ಕೂಡ ಕೋಳಗುಂದ ಗ್ರಾಮದಲ್ಲಿ ನೆಲೆಸಿ ಹೊಯ್ಸಳ ರಾಜರಲ್ಲಿ ಮಹಾಪಸಾಯಿತ, ಮಹಾಪ್ರಧಾನ ಎಂಬ ಉನ್ನತ ಹುದ್ದೆಯನ್ನು ಅಲಂಕರಿಸಿದ್ದರು. ರಾಜರಿಗೆ ಪ್ರಾಮಾಣಿಕ ಸೇವೆಯನ್ನು ಒದಗಿಸಿ ಆಡಳಿತ ನಡೆಸಿದ್ದಾರೆ. ಅವರು ನಡೆಸಿದ ಉತ್ತಮ ಆಡಳಿತ, ಅನೇಕ ಅಭಿವೃದ್ಧಿ ಮತ್ತು ಪ್ರಜೋಪಯೋಗಿ ಕಾರ್ಯಗಳು ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನ ಆಡಳಿತಕ್ಕೆ ಮಾವಂತ ಮನೆತನವು ನೀಡಿರುವ ಕೊಡುಗೆಗಳೆಂದು ಹೇಳಬಹುದು.

## ಆಧಾರಸೂಚಿ


೧. A Critque of Hoysala Polity, K.S. Shivanna, Apendix-C, A note on some Families of Ruling Elites in Hoysala Monarchy, p. 117

೨. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೧, ಮೂಡಗೆರೆ–೨.

೩. ಅದೇ.

೪. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೧, ಮೂಡಗೆರೆ–೧.

೫. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೧, ಮೂಡಗೆರೆ–೩.

೬ ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೨೧೪.

೭. THE HOYSALA VAMSHA, William Coehlo, Chapter XVI, Political and Social Life, p. 254.

೮. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೨೧೪.

೯. ಅದೇ.

೧೦. THE HOYSALA VAMSHA, William Coehlo, Chapter XVI, Political and Social Life, p. 255.

೧೧. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೩೧೧.

೧೨. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೩೦೭.

೧೩. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೩೦೧.

೧೪. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೨೯೯.

೧೫. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ–೨೧೬.

೧೬. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೯.

೧೭. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೧೪.

೧೮. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೩೦೧.

೧೯. ಅದೇ.

೨೦. ಅದೇ.

೨೧. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೧೪.

೨೨. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೮.

೨೩. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೧೬.

೨೪. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೯.

೨೫. ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಅಧ್ಯಾಯ ೪, ಸಾಮಾಜಿಕ ಸ್ಥಿತಿ– ಸಂಚಲನ, ಪು. ೧೪೫

೨೬. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೩೦೧.

೨೭. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೬೨.

೨೮. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೮.

೨೯. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೯.

೩೦. ಅರಸೀಕೆರೆ–೨೬೨, ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦.

೩೧. ಅರಸೀಕೆರೆ–೨೧೪, ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦.

೩೨. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೯.

೩೩. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೧೪.

೩೪. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೯.

೩೫. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೧೪.

೩೬. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೩೦೭.

೩೭. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೩೦೧.

೩೮. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ, ೨೯೮.

೩೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಶೈವಧರ್ಮ, ಪು. ೧೫೪.

## ಆಕರ ಗ್ರಂಥಗಳ ಪಟ್ಟಿ


### ಕನ್ನಡ ಕೃತಿಗಳು

೧. ಕೇಶವಭಟ್ಟ ಎಂ.ವಿ.& ಕೃಷ್ಣರಾವ್ಎಂ. (ಸಂ) : **ಕರ್ನಾಟಕದ ಇತಿಹಾಸ ದರ್ಶನ,** ಬೆಂಗಳೂರು. ೧೯೭೯.

೨. ದಿವಾಕರ್ ಆರ್.ಆರ್ (ಸಂ) : **ಕರ್ನಾಟಕದ ಪರಂಪರೆ ಸಂಪುಟ ೧,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪.

೩. ಲಲಿತಾಂಬ ಎನ್. ಆರ್. : **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ,** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೧೧.

೪. ಷೇಕ್ಅಲಿ ಬಿ. (ಸಂ) : **ಕರ್ನಾಟಕ ಚರಿತ್ರೆ ಸಂಪುಟ ೨,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

### ಆಂಗ್ಲ ಕೃತಿಗಳು

೧. Shivanna. K.S : **A Critque of Hoysala Polity,** Mysore 1998.

೨. William Coehlo : **THE HOYSALA VAMSHA,** Indian Historical Institute, St. Xavier's College, Bombay. 1950.

### ಶಾಸನ ಸಂಪುಟಗಳು

೧. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೧೦, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೭.

೨. ಕನ್ನಡ ವಿಷಯ ವಿಶ್ವಕೋಶ–ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.



# ಎರಡನೆಯ ಬಲ್ಲಾಳನ ಕಾಲದ ಕನ್ನಡ ಶಾಸನಕವಿಗಳು

**ಮಂಜುನಾಥ ಎಂ.ಕೆ.* ಸತೀಶ್‌ಕುಮಾರ್ ಬಿವಿ.****

ಕನ್ನಡ ನಾಡಿನ ಮಧ್ಯಕಾಲೀನ ಇತಿಹಾಸದಲ್ಲಿ ಹೊಯ್ಸಳರು ಸುಮಾರು ಮುನ್ನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಇವರ ಕೀರ್ತಿ ಕನ್ನಡನಾಡು ಮಾತ್ರವಲ್ಲದೆ ದಕ್ಷಿಣ ಭಾರತದಲ್ಲೆಲ್ಲಾ ಹಬ್ಬಿತ್ತು. ಇವರು ಉತ್ತರದಲ್ಲಿ ಕೃಷ್ಣ ನದಿಯಿಂದ ದಕ್ಷಿಣದ ಕಾಂಚಿಪುರದವರೆಗೆ ಗಡಿಯನ್ನು ವಿಸ್ತರಿಸಿ ಆಳ್ವಿಕೆಯನ್ನು ನಡೆಸಿದರು. ಈ ವಂಶವು ಸಳನಿಂದ ಆರಂಭವಾಗಿ ನಂತರ ವಿನಯಾದಿತ್ಯ, ನೃಪಕಾಮ, ಎರೆಯಂಗ, ಮೊದಲನೆ ಬಲ್ಲಾಳ, ವಿಷ್ಣುವರ್ಧನ, ಮೊದಲನೆ ನರಸಿಂಹ, ಇಮ್ಮಡಿ ಬಲ್ಲಾಳ, ಇಮ್ಮಡಿ ನರಸಿಂಹ, ವೀರ ಸೋಮೇಶ್ವರ, ಮುಮ್ಮಡಿ ನರಸಿಂಹ, ಮುಮ್ಮಡಿ ಬಲ್ಲಾಳನಂತಹ ರಾಜರುಗಳು ಆಳ್ವಿಕೆ ನಡೆಸಿದರು. ಆರಂಭದಲ್ಲಿ ಇವರು ಕಲ್ಯಾಣ ಚಾಲುಕ್ಯರ ಮಂಡಲೇಶ್ವರರಾಗಿ ಆಡಳಿತ ಪ್ರಾರಂಭಿಸಿದರು. ವಿಷ್ಣುವರ್ಧನನು ಚಾಲುಕ್ಯರಿಂದ ಸ್ವತಂತ್ರನಾಗಲು ಪ್ರಯತ್ನಿಸಿ ಆರನೇ ವಿಕ್ರಮಾದಿತ್ಯನ ಅಧಿಕಾರಿ ಆಚುಗಿಯಿಂದ ಸೋಲನ್ನು ಅನುಭವಿಸಿ ಮಾಂಡಲಿಕಾನಾಗಿಯೇ ಉಳಿಯ ಬೇಕಾಯಿತು. ಇವನ ಮೊಮ್ಮಗ ಅಂದರೆ ಮೊದಲನೆ ನರಸಿಂಹನ ಮಗ ಎರಡನೆ ಬಲ್ಲಾಳನು ತಾತನಂತೆ ಮಹತ್ವಾಕಾಂಕ್ಷಿಯಾಗಿದ್ದನು. ಪರತಂತ್ರವನ್ನು ತ್ಯಜಿಸಿ ಹೊಯ್ಸಳ ವಂಶವನ್ನು ಸ್ವತಂತ್ರಗೊಳಿಸಿ ಚಕ್ರವರ್ತಿಯಾಗಿ ಮೆರೆದು, ವಿಷ್ಣುವರ್ಧನನು ಕಂಡ ಕನಸನ್ನು ನೆನಸು ಮಾಡಿದನು.

ಎರಡನೆ ಬಲ್ಲಾಳನು ಕ್ರಿ.ಶ. ೧೧೭೩ರಲ್ಲಿ ಪಟ್ಟಭಿಷೇಕಗೊಂಡು ಕ್ರಿ.ಶ. ೧೨೨೦ರ ವರೆಗೆ ಆಳ್ವಿಕೆ ನಡೆಸಿದನು. ಈತನು ಹೊಯ್ಸಳ ವಂಶದ ಯಶಸ್ವಿ ರಾಜನಾಗಿದ್ದು ಯುದ್ಧೋತ್ಸಾಹಿಯೂ, ಉತ್ತಮ ಆಡಳಿತಗಾರನೂ, ಕಲಾಪೋಷಕನೂ, ಸಾಹಿತ್ಯ ಪೋಷಕನೂ ಆಗಿದ್ದನು. ತನ್ನ ಆಸ್ಥಾನ ಕವಿಯಾದ ಜನ್ನನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನು ನೀಡಿ ಗೌರವಿಸಿದನು. ಈತನ ಆಳ್ವಿಕೆ ಕಾಲದ ಅವಧಿಗೆ ಮಧ್ಯಕಾಲೀನ ಸಾಹಿತ್ಯ ಕಂಡು ಬರುವುದು. ಈತನ ಅವಧಿಯ ಸಾಹಿತ್ಯವನ್ನು ವಿಭಾಗ ಮಾಡಿದಾಗ ಮುಖ್ಯವಾಗಿ ಎರಡು ವಿಧಗಳು ಕಂಡುಬರುವುದು. ಅವುಗಳೆಂದರೆ ಗ್ರಾಂಥಿಕ ಸಾಹಿತ್ಯ ಮತ್ತು ಶಾಸನ ಸಾಹಿತ್ಯ. ಗ್ರಾಂಥಿಕ ಸಾಹಿತ್ಯದಲ್ಲಿ ಹರಿಹರ, ರುದ್ರಭಟ್ಟ, ನೇಮಿಚಂದ್ರ, ಜನ್ನರಂತಹ ಕವಿಗಳು ಕಂಡು ಬರವರು.

**ಶಾಸನ ಕವಿಗಳ ಪರಿಚಯ**

ಪ್ರಾಚೀನ ಕವಿಗಳು ತಮ್ಮ ವೈಯುಕ್ತಿಕ ವಿಚಾರಗಳನ್ನು ಹೇಳಿಕೊಂಡಿರುವುದು ವಿರಳವೆಂದೆ ಹೇಳಬಹುದು. ಇನ್ನು ಗ್ರಾಂಥಿಕ ಕವಿಗಳು ಅಲ್ಪ ಸ್ವಲ್ಪವಾಗಿ ತಮ್ಮ ವಿವರಗಳನ್ನು ಹೇಳಿಕೊಂಡರೆ, ಶಾಸನ ಕವಿಗಳು ತಮ್ಮ ಬಗ್ಗೆ ವಿವರಗಳನ್ನು ಹೇಳಿಕೊಂಡಿರುವುದು ಬಹು ಕಡಿಮೆ. ಕೆಲವು ಶಾಸನ ಕವಿಗಳು ಸುಂದರ ವರ್ಣನೆ, ಲಯಬದ್ಧ ಛಂದಸ್ಸಿನಿಂದ ಶಾಸನ ರಚಿಸಿದ್ದರು ತಮ್ಮ ಹೆಸರನ್ನು ಹೇಳದೆ ಅನಾಮಿಕರಾಗಿಯೇ ಉಳಿದುಕೊಂಡಿದ್ದಾರೆ. ದೊರೆತಿರುವ ಅಲ್ಪ ಸ್ವಲ್ಪ ವಿವರಗಳಿಂದ ಅವರ ಇತಿ ವೃತ್ತಾಂತಗಳನ್ನು ತಿಳಿಯಬಹುದು.

**ಶಾಂತಿನಾಥ** : ಈತನು ಕ್ರಿ.ಶ. ೧೧೬೫ರಲ್ಲಿ ನಾಗಮಂಗಲದ ಲಾಳನಕೆರೆಯ ಶಾಸನವನ್ನು ಹಾಗೆಯೇ ಕ್ರಿ.ಶ. ೧೧೮೯ರಲ್ಲಿ ಅರಸೀಕೆರೆಯ ಕಣಿಕಟ್ಟೆ ಶಾಸನಗಳನ್ನು ರಚಿಸಿದ್ದಾನೆ. ಈತನನ್ನು ಲಾಲನಕೆರೆಯ ಶಾಸನವು **"ದಕ್ಷಿಣ ಹೆಂಮನ ಮಂಮಂ ಲಾಕ್ಷಣಗವಿ ಶಾಂತಿನಾಥ"**[೧] ಎಂದು ಉಲ್ಲೇಖಿಸಿದೆ. ಆದರೆ ಕಣಿಕಟ್ಟೆ ಶಾಸನವು **"ದಕ್ಷಿಣ ಸೋಮನ ಮಮ್ಮಂ ಲೊಕ್ಕಣಕವಿ ಶಾಂತಿನಾಥ"**[೨] ಎಂದು ಉಲ್ಲೇಖಿಸಿದೆ. ಶಾಸಗಳಲ್ಲಿ ಹೆಚ್ಚಿನ ವಿವರಗಳು ದೊರೆಯದ ಕಾರಣ ಸತ್ಯಾಸತ್ಯತೆಯು ತಿಳಿಯುವುದು ಕಷ್ಟ. ಇವನಿಗೆ ಶಾಸಗಳಲ್ಲಿ ಲಾಕ್ಷಣ ಕವಿ, ಕವಿಕುಳ ತಿಳಕಂ, ದಾಕ್ಷಿಣ್ಯನಿಧಿ, ಗುಣೋತ್ಕರ ಸಿಕ್ಷಾಗುರು ಎಂಬ ಬಿರುದುಗಳನ್ನು ಹೊಂದಿದ್ದನ್ನು ಉಲ್ಲೇಖಿಸಿದೆ. ಧರಿಸಿರುವ ಬಿರುದುಗಳಿಂದ ಈತನು ವ್ಯಾಕರಣವನ್ನು ಬಲ್ಲವಾನಾಗಿದ್ದು, ಶಿಕ್ಷಕನಾಗಿದ್ದನು ಎಂಬುದು ತಿಳಿದು ಬರುವುದು. ಶಾಸನಗಳಲ್ಲಿ ಕಂದ ವೃತ್ತಗಳನ್ನು ಬಳಕೆ ಮಾಡಿದ್ದಾನೆ. ಆರಂಭದ ಲಾಲನಕೆರೆ ಶಾಸನದಲ್ಲಿ ವೃತ್ತಗಳು ಅಶುದ್ಧದಿಂದ ಕೂಡಿದ್ದು, ನಂತರದ ಕಣಿಕಟ್ಟೆಯ ಶಾಸನದಲ್ಲಿ ಕಂದ ವೃತ್ತಗಳು ಛಂದೋಬದ್ಧವಾಗಿ ಮೂಡಿ ಬಂದಿದೆ.

* # ೪೧, ಮಾಕಳಿ ಗ್ರಾಮ ಮತ್ತು ಅಂಚೆ, ಚನ್ನಪಟ್ಟಣ ತಾ., ರಾಮನಗರ ಜಿಲ್ಲೆ.
** ಸಂಶೋಧನಾ ವಿದ್ಯಾರ್ಥಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೫೭೦೦೦೬.

ಎರಡನೆ ಬಲ್ಲಾಳನ ಪರಾಕ್ರಮಿಯು, ಯುದ್ಧೋತ್ಸಾಹಿಯೂ ಆಗಿದ್ದು, ಪಾಂಡ್ಯರಿಗೆ ಸಿಂಹದಂತೆ ಇದ್ದನು ಎಂಬುದನ್ನು ಶಾಸನದಲ್ಲಿ

**"ರದಿ . . . ತೊ . . ಪಿರಿಯನಸಿ ಸುಖಂ ಬಾಳ್ಗೆ ಚಂದ್ರಾರ್ಕತಾರಂ**
**ಸ್ಥಿರಸತ್ವಂಕ್ಷತ್ರ ಪುತ್ರಾಗ್ರಣಿ ವಿಮುಳಯುಸಂ ಪಾಂಡ್ಯವೇದಂಡಸಿಂಹಂ**
**ನರರೂಪಂ ಹೊಯ್ಸಳೇಸಂ ಯದುಕುಳತಿಳಕಂ ವೀರಸಂಗ್ರಾಮರಾಮಂ**
**ನರವೀರಶ್ರೀ . . ಕ್ರಮುಗುಣನಿಳಯಂ ವೀರಬಲ್ಲಾಳುದೇವಂ॥"[೩]**

ಈ ರೀತಿಯಾಗಿ ವರ್ಣಿಸಿದ್ದಾನೆ.

ಅದೇ ರೀತಿ ಕಣಿಕಟ್ಟೆ ಊರನ್ನು ಇಂದ್ರನ ಅಮರಾವತಿಯನ್ನು ಹೋಲಿಸಿ ಕಂದದಲ್ಲಿ ವರ್ಣಿಸಿರುವುದು ನೋಡಬಹುದು.

**"ಅಮರಾವತಿಪುರಮೆನಿಸಿಯೆ**
**ರಮಣೀಯಂ ಬಡೆದು ತೋರ್ಪ ಕಳಿಕಟ್ಟಿಯೊಳಾ**
**ಸ್ಟಮನಾರೆನಿಸಿಯೆ ನೆಗಳ್ದ**
**ಕ್ರಮದಿಂ ಜಗತಿಗಳು ಮಾಳ್ಪದಾನೋಂನತಿಯಿಂ॥"[೪]**

ಶಾಂತಿನಾಥನು ಮುಂದುವರೆದು ಅದೇ ಕಣಿಕಟ್ಟೆ ಊರನ್ನು ಕುರಿತಾಗಿ ಬೆಳೆಯುತ್ತಿದ್ದ ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಸುಗಂಧವಾದ ಭತ್ತಗಳನ್ನು ಬೆಳೆಯುತ್ತಿದ್ದರು ಎಂದು ಶಾಸನದಲ್ಲಿ ಮಾಹಿತಿ ಕೊಡುವುದರ ಜೊತೆಗೆ ಇವು ಸೊಂಪಾಗಿ ಬೆಳೆದು ನಿಂತಾಗ ನೋಡಲು ರಮ್ಯವಾಗಿ ಕಾಣುವುದು ಎಂಬುದನ್ನು

**"ತೀವಿದ ಚಂನನಪ್ಪಕೆಱೆಯೊಪ್ಪುವ ಕಾತ ಕವುಂಗು ಸುತ್ತಲುಂ ಶ್ರೀವನಲಕ್ಷ್ಮಿ ಕಣ್ದೆಱೆದವೋಲು ಬೆಳದಿರ್ದ್ದ ಸುಗಂಧ ಸಾಳಿಯಿಂ**
**ದೀವಸುದಾತಳಾಗ್ರದೊಳು ರಮ್ಯಮೆನಲು ಕಳಿಕಟ್ಟೆನಾಡೆಯಂ**
**ದೇವಗ್ರಿಹಂಗಳಿಂದೆಸದು ಸೋಭಿಸುತಿರ್ಪ್ಪುದು ನೋರ್ಪ್ಪಡೂರ್ಗ್ಗಳೊಳು॥"[೫]**

ಎಂದು ವರ್ಣಿಸಿದ್ದಾನೆ. ಈ ಎಲ್ಲಾ ವರ್ಣನೆಗಳಿಂದ ಈತನ ಪಾಂಡಿತ್ಯ ಉತ್ತಮವಾಗಿತ್ತು ಎಂದು ತಿಳಿದುಬರುವುದು.

**ದೇವಪಾರ್ಯ :** ಅರಸೀಕೆರೆಯ ಶಾಸನವನ್ನು ರಚಿಸಿದ ದೇವಪಾರ್ಯನು ವಾಜಿ ವಂಶದವನಾಗಿದ್ದು, ಕಾಶ್ಯಪ ಗೋತ್ರದವನು. ಅವನ ತಂದೆ ಸೋಮನಾಥ ಇದನ್ನು ಶಾಸನದಲ್ಲಿ

**"ಭುವನನುತ ವಾಜಿವಂಶೋ**
**ದ್ಭವಕರವಿಭು ಸೋಮನಾಥಪುತ್ರಂ ಪೇಳ್ದಂ**
**ಕವಿರಾಜಂ ಕಾಶ್ಯಪಗೋತ್ರ**
**ವರ್ದ್ಧನಂ ದೇವಪಾರ್ಯ್ಯನೀ ಶಾಸನಮಂ॥"[೬]**

ಎಂದು ಉಲ್ಲೇಖಿಸಿದೆ. ಈತನು ಪಂಡಿತ ಕವಿ, ಕಂದ ವೃತ್ತಗಳಿಂದ ಕೂಡಿದ ಚಿಕ್ಕದಾದ ಚಂಪೂ ಕಾವ್ಯವನ್ನು ಶಾಸನದಲ್ಲಿ ರಚಿಸಿದ್ದಾನೆ. ಭಾಷೆ, ವ್ಯಾಕರಣ ಮತ್ತು ಛಂದಸ್ಸಿನಲ್ಲಿ ಪ್ರೌಢಿಮೆ ಇರುವುದು ಕಂಡುಬರುವುದು. ಅರಸೀಕೆರೆಯ ಶಾಸನದಲ್ಲಿ ಎರಡನೆ ಬಲ್ಲಾಳನ ತಂದೆಯಾದ ಮೊದಲನೆ ನರಸಿಂಹನನ್ನು ಕುರಿತು

**"ನರಸಿಂಹೋರ್ವ್ವೀಶಕಾಂತಾತ್ಮಜನುರುತರಧರ್ಮ್ಮೋರ್ಲ್ಲ ಸದ್ದುಗ್ಧ ನೀರಾ**
**ಕರರಾಕೇಂದೂಪಮಾನಂ ನಳನಹುಷದಿಳೀಪಾದಿ ಭೂಪಾಲಕೋದ್ಯ**
**ಚ್ಚರಿತಂದೋರ್ದ್ದವೈರಿಕ್ಷಿತಿ ಪನಕರ ಸಂಗ್ರಾಮ ಕೇಳಿ ವಿನೋದಂ**
**ಪರಿಭಾಸ್ವತ್ಕೀರ್ತ್ತಿವಲ್ಲಿವಳಯಿತ ಭುವನಂ ವೀರಬಲ್ಲಾಳ ಭೂಪಂ"[೭]**

ಎಂದು ವರ್ಣಿಸಿದ್ದಾನೆ. ಹಾಗೆಯೇ ಮುಂದುವರಿದು ಎರಡನೆ ಬಲ್ಲಾಳನ ವ್ಯಕ್ತಿತ್ವ ಶೌರ್ಯವನ್ನು ಕುರಿತು

**"ಉರಗೇಂದ್ರಂ ಧಾತ್ರಿಯಂ ಧಾರಿಣಿ ಹಿಮಗಿರಿಯಂ ಹಿಮ್ಯಶೈಳಂ ಕುಭೃಜ್ಞಾ**
**ವರನಂ ಗೌರೀವರಂ ಚಂದ್ರನನಮಳಿನಚಂದ್ರಂ ಕಳಾಸ್ತೋಮಮಂ ನಿ**
**ರ್ಬ್ಭರದಿಂದಂ ತಾಳ್ದುವಂತಪ್ಪ್ರತಿಮಯದುಕುಳೋ ದ್ಭೂತಸಾಂಮ್ರಾಜ್ಯಲಕ್ಷ್ಮೀ**
**ಭರಮಂ ಹೇಳಾಸುಸಾಧ್ಯಂ ತನಗೆನೆ ತಳೆದಂ ವೀರಬಲ್ಲಾಳಭೂಪಂ॥"[೮]**

ಎಂದು ವರ್ಣಿಸಿದ್ದಾನೆ. ಅರಸೀಕೆರೆಯು ಎರಡನೆ ಬಲ್ಲಾಳನ ಆಳ್ವಿಕೆಯಲ್ಲಿ ಎರಡನೆ ರಾಜಧಾನಿಯಾಗಿತ್ತು, ಈ ಉಪರಾಜಧಾನಿಯಲ್ಲಿ ಪ್ರತಿಷ್ಟಿತ ಸಾಮಂತರು, ಅಧಿಕಾರಿಗಳು ನೆಲೆಗೊಂಡಿದ್ದು, ಕೃಷಿ ಮತ್ತು ವ್ಯಾಪಾರದಲ್ಲಿ ಸಾಕಷ್ಟು ಅಭಿವೃದ್ಧಿಯನ್ನು ಹೊಂದಿ ಸಂಪದ್ಭರಿತವಾಗಿತ್ತು, ಇದನ್ನು 'ತೆಂಕಣ ಅಯ್ಯಾವೊಳೆ' ಎಂದು ಕರೆಯುತ್ತಿದ್ದರು. ಇಂತಹ ಸುಂದರ ಊರನ್ನು ಕುರಿತಾಗಿ ದೇವಪಾರ್ಯನು

**"ಕ್ಷೀರಾಂಭೋರಾಶಿಯುಂ ಶ್ರೀಕರವೆನಿಪ ತಟಾಕಂ ಮುನಿಶ್ರೇಷ್ಠರಂ ವಿ**
**ಪ್ರಾರಾಧ್ಯರ್ಕ್ಕಳ್ಪವಲ್ಲೀವೃತವಿಳಸನಮಂ ನಾಗವಲ್ಲೀವನಂ ಭೃಂಗೀ . ವಸ್ಪಂದಿಕಲ್ಪದ್ರುಮಮನೆಸೆವಚೂತಾದಿಗಳು ಲಕ್ಷ್ಮೀಯಂತ**
**ದ್ವಾರಸ್ತ್ರೀಸಂಕುಲಂ ಪೋಲ್ವರಸಿಕೆಱೆಯೊಳ್ ಶೋಭಿಕುಂ ಶ್ರೀಶಗೇಹಂ॥"[೯]**

ಎಂದು ಹೊಗಳಿದ್ದಾನೆ.

**ಶಾಂತಿನಾಥ ಪಂಡಿತ :** ಅರಸೀಕೆರೆಯ ಕೆಲ್ಲಂಗೆರೆಯ ಶಾಸನ ರಚಿಸಿದ್ದು ಈತನ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಈತ ಚಬ್ಬರಾಜನ ಪುತ್ರ ಎಂಬುದು ಮಾತ್ರ ತಿಳಿಯುವುದು. ಇದನ್ನು ಶಾಸನದಲ್ಲಿ **"ಚಬ್ಬರಾಜನ ಪುತ್ರ ಶಾಂತಿನಾಥಪಂಡಿತರು ಹೇಳ್ದ ಸಾಸನ"**[೧೦] ಎಂದು ಉಲ್ಲೇಖಿಸಿದೆ. ಶಾಸನದಲ್ಲಿ ಕಂದ ವೃತ್ತ ಮತ್ತು ವಸಂತ ತಿಲಕವನ್ನು ಬಳಸಿದ್ದಾನೆ. ಶಾಸನದ ಮುಖ್ಯ ಭಾಗವು ತ್ರುಟಿದವಾದ ಕಾರಣ ಇವನ ಪಾಂಡಿತ್ಯದ ಬಗ್ಗೆ ಹೆಚ್ಚಿನ ವಿಷಯಗಳು ತಿಳಿಯುವುದಿಲ್ಲ.

**ಶಾಂತ ಮಹಂತ :** ಶಾಂತ ಮಹಂತನು ಅರಸೀಕೆರೆಯ ಹಲಕೂರು ಮತ್ತು ಕೆಲ್ಲಂಗೆರೆಯ ಎರಡು ಶಾಸನಗಳನ್ನು ರಚಿಸಿದ್ದಾನೆ. ಈತನು ಸರ್ಬ್ಬದೇವ ಮತ್ತು ಸೋಮಿಯಕ್ಕನ ಮಗನಾಗಿದ್ದು ಶಾಸನದಲ್ಲಿ

> **"ಕ್ಷಿತಿವಿನುತೆ[ಸರ್ಬ್ಬ]ದೇವನ**
> **ಸತಿ ಸಂನುತೆ ಸೋಮಿಯಕನಣುಗಿನ ಪುತ್ರಂ**
> **ಸತುಕವಿ ಶಾಂತಮಹಂತಂ**
> **ಸ್ತಿತಿಸಾರಂ ಪೇಳ್ದಿನರ್ತ್ಥಿಯಿಂಶಾಸನಮಂ॥"**[೧೧]

ಎಂದು ಉಲ್ಲೇಖಿಸಿದೆ. ಈತನು ಪ್ರಬುದ್ಧ ಕವಿಯಾಗಿದ್ದು ಕ್ರಿ.ಶ. ೧೧೭೫ರ ಕೆಲ್ಲಂಗೆರೆಯ ಶಾಸನದಲ್ಲಿ ರಾಜನಾದ ಎರಡನೆ ಬಲ್ಲಾಳನನ್ನು ಕುರಿತು ಈ ಧರೆಯ ವೀರ ಪುರುಷ, ರಾಜರಾಜ, ಸಕಳಗುಣ ರಾಜಹಂಸ ಎಂದು ವರ್ಣಿಸಿದ್ದಾನೆ.

> **"ಧರೆಯಂ ವಿಕ್ರಾಂತದಿಂದೊಪ್ಪುವ ನಿಜಭುಜದೊಳು ತಾಳ್ದಿ ಮಾಱಾಂತು ನಿಂ**
> **ದಿರ್ದ್ದರಿಭೂಪಾಳರ್ಕ್ಕಳಂ ದಿಕುತಟದ ಕಡೆವರಂ ತೂಳ್ದಿ ತದ್ವೀರ**
> **ಲಕ್ಷ್ಮೀವರನಾದಂ ವೀರಬಲ್ಲುಕ್ಷಿತಿಪತಿ ಸರಣಾಯಾತರಕ್ಷಕ್ಷಮಂ**
> **ಭಾಸುರತೇಜಂ ರಾಜರಾಜಂ ಸಕಳಗುಣಗಣಾಂಭೋಜಿನೀ ರಾಜಹಂಶಂ॥"**[೧೨]

ಹಾಗೆಯೇ ಎರಡನೆ ಬಲ್ಲಾಳನ ಚಾಣಕ್ಷ, ಬುದ್ದಿವಂತಿಕೆಯನ್ನು ಕುರಿತು

> **"ಚದುರರೊಳತಿ ಚದುರಂ ಬುಧ**
> **ತತಿಯೊಳು ಬುಧತತಿ ಸಮಂತು ಗಾಯಣಂ ಗಾಯಣರೊಳು**
> **ಮತಿವಂತಂ ಮತಿವಂತರೊ**
> **ಳತಿಚದುರಂ ಚದುರನನುಪಮಂ ಬಲ್ಲಾಳಂ॥"**[೧೩]

ಎಂದು ಹೊಗಳಿದ್ದಾನೆ.

ಎರಡನೆ ಬಲ್ಲಾಳನಿಗೆ ಹಲವಾರು ರಾಣಿಯರಿದ್ದರು. ಅವರಲ್ಲಿ ಒಬ್ಬಳಾದ ರಾಣಿ ಬಮ್ಮಲದೇವಿಯ ಉಲ್ಲೇಖ ಅರಸೀಕೆರೆಯ ಹಲಕೂರು ಶಾಸನದಲ್ಲಿದೆ. ಈಕೆಯನ್ನು ಕುರಿತು ಶಾಸನ ಕವಿಯಾದ ಸಾಂತ ಮಹಂತನು 'ಅಭಿನವ ಪಾರ್ವ್ವತಿ' ಎಂದು ಹೊಗಳಿರುವುದರ ಜೊತೆಗೆ ಅದೇ ಶಾಸನದಲ್ಲಿ ಮುಂದುವರೆದು

> **"ಈಂಗಡಲ ಸುತೆಯ ಪೆಂಪಂ**
> **ಭಂಗಿಸುವ ವಿಳಾಸವದ್ದ್ವಿಜಾತೆಯ ಸುಭಗಂ**
> **ಭಂಗಿಸುವ ಸುಬಗು ಸುಬಗೆನ**
> **ಲೇಂಗಳ ಬಂಣಿಸುವರಳವೆ ಬಂಮಲೆವಧುವಂ॥"**[೧೪]

ಎಂದು ವರ್ಣಿಸಿದ್ದಾನೆ.

**ಮಲ್ಲಣಪಂಡಿತನು :** ಈತನು ಸತ್ಕವಿ ಎಂದು ಬಿರುದನ್ನು ಪಡೆದಿದ್ದನು ಎಂಬುದು ಶಾಸನದಿಂದ ತಿಳಿದು ಬರುವುದು. ಅರಸೀಕೆರೆಯ ಈಶ್ವರ ದೇವಾಲಯದ ಬಳಿ ಇರುವ ಶಾಸನವನ್ನು ರಚಿಸಿದ್ದಾನೆ. ಶಾಸನದಲ್ಲಿ ಈತನು ಸಾಂತಿನಾಥ ಮತ್ತು ಚಂದಿಯಕ್ಕನ ಅಣುಗಿನ ಪುತ್ರನಾಗಿದ್ದಾನೆ ಅದನ್ನು ಶಾಸನದಲ್ಲಿ

> **"ಕ್ಷಿತಿವಿನುತೆ ಸಾ[ಂ]ತಿನಾಥ[ನ]**
> **ಸತಿ ಸಂನುತೆ ಚಂದಿಯಕ್ಕನಣುಗಿನ ಪುತ್ರಂ**
> **ಸತುಕವಿ ಮಲ್ಲಣ(ತ)(ಣ)ಪಂ**
> **ಡಿತ . ತುವಿಸ್ತಾರಂ ಪೇಳ್ದ[ನ]ರ್ತ್ಥಿಯಿಂ ಸಸನಮಂ॥"**[೧೫]

ಎಂದು ಉಲ್ಲೇಖಿಸಿದೆ. ಈ ಶಾಂತಿನಾಥ ಬಹುಶಃ ನಾಗಮಂಗಲದ ಕ್ರಿ.ಶ. ೧೧೬೫ರ ಲಾಲನಕೆರೆಯ ಶಾಸನವನ್ನು ರಚಿಸಿದವನು ಇರಬಹುದು. ಹಾಗೆನಾದರು ನಿಜವಾದರೆ ತಂದೆ ಮತ್ತು ಮಗ ಇಬ್ಬರು ಶಾಸನ ಕವಿಗಳಾಗಿದ್ದು ಕಂಡು ಬರುವುದು. ಆದರೆ ಶಾಸನದಲ್ಲಿ ವಿವರಗಳ ಕೊರತೆಯಿಂದಾಗಿ ಇದನ್ನು ಹೇಳುವುದು ಕಷ್ಟವಾಗುವುದು.

ಈತನು ಕೇತಮಲ್ಲನೆಂಬ ಅಧಿಕಾರಿಯನ್ನು ಉತ್ತಮ ಗುಣಗಳನ್ನು ಸುಂದರವಾಗಿ ಕಂದಗಳಲ್ಲಿ ವರ್ಣಿಸಿದ್ದಾನೆ. ಅದು ಈ ರೀತಿ ಇದೆ

> **"ಒಲ್ಲಂ ಪರವನಿತೆಯರಂ**
> **ನಲ್ಲಂ ಸತುಕೀರ್ತ್ತಿಲತೆಗೆ ಮುದದಿಂದೀಯಲು**
> **ಬಲ್ಲಂವಿ . . . ಸಲ್ಲಲಿತ**
> **ಕೇತಮಲ್ಲಮಜ್ಜಮನೋ[ಜಂ]॥"**[೧೬]

ಇನ್ನು ಅರಸೀಕೆರೆಯಲ್ಲಿ ಬೆಳೆಯುತ್ತಿದ್ದ ಹಣ್ಣು, ಹೂವುಗಳ ವಿವರ ನೀಡುವುದನ್ನು ಕಂದದಲ್ಲಿ ಅದರ ಚೆಲುವನ್ನು ಮತ್ತು ಬೆಳದಿಂಗಳ ಬೆಳಕಿನಲ್ಲಿ ಅರಸೀಕೆರೆಯು ತುಂಬಾ ಸುಂದರವಾಗಿ ಕಾಣುವುದು ಎಂದು ಈ ರೀತಿಯಾಗಿ ವರ್ಣಿಸಿದ್ದಾನೆ.

> **"ತಂಬುಲವಳ್ಳಿಯ [ಕಿ]ತ್ತಲೆ**
> **ಮಾಂಬನ ದಳದಳಿತ ಸಂಚೆಮಲ್ಲೆಗಳ ಪೊ**

ವೆಂಬಿನ ಬೆಳುದಿಂಗಳಿಂದೆನೆ
ಕಣ್ಬಯಕೆಯ ಚೆಲುವನೀಉದರಸಿಕೆಱೆಯೊಳು॥"[೧೭]

**ತ್ರಿವಿಕ್ರಮಾಂಕ** : ಈ ಕವಿಯು ಅರಸೀಕೆರೆಯ ಬಾಣವರ ಶಾಸನವನ್ನು ರಚಿಸಿದ್ದಾನೆ. ಈತ ಬುಧನಿಧಿ, ವಿವೇಕನಿಧಿ ಎಂಬ ಬಿರುದನ್ನು ಹೊಂದಿದ್ದನು. ಶಾಸನದಲ್ಲಿ

"ಬುಧನಿಧಿ ವಿವೇಕನಿಧಿ ಗುಣ
ನಿಧಿಯಾದಿತ್ಯಾನುಜಂ ತದನ್ತೇವಾಸಂ
ಬುಧನಿಧಿ ವಿವೇಕನಿಧಿ ಗುಣ
ನಿಧಿ ತ್ರಿ[ವಿ]ಕ್ರಮಾಂನೀ . . . . ಶಾಸನವಂ॥"[೧೮]

ಉಲ್ಲೇಖಿಸಿದೆ.

ಈತನು ಆದಿತ್ಯನ ಅನುಜ ಎಂದು ಶಾಸನದಲ್ಲಿ ತಿಳಿಸಿದೆ. ಆದರೆ ಆದಿತ್ಯನು ಯಾರು ಎಂದು ವಿವರ ತಿಳಿಯುವುದಿಲ್ಲ. ಈತನು ಕಂದ ವೃತ್ತಗಳಿಂದ ಶಾಸನವನ್ನು ರಚಿಸಿದ್ದಾನೆ. ಈತನ ಶಾಸನದಲ್ಲಿ ಪ್ರೌಢಿಮೆಯು ಕಂಡುಬರುವುದು. ತನ್ನ ಆಶ್ರಿತ ರಾಜನಾದ ಎರಡನೆ ಬಲ್ಲಾಳನ ಬಲ, ಶೌರ್ಯ, ಪರಾಕ್ರಮವನ್ನು ಕುರಿತು

"ಅತಿದರ್ಪ್ಪಿಷ್ಟಬಲಪ್ರಭೇದಿ ಸುಮನಸ್ಸಂದೋಹಸಂಸೇವ್ಯನ
ನ್ವಿತಸತ್ವಂಗುರುವಾಕ್ಯನೀತಿನಿರತಂ ರಾಮಾಭಿರಾಮಾಸ್ಪದಂ
ಜಿತಭೂಭೃತ್ಕುಲನೆಂಬ ಪೆಂಪನೊಳಕೊಂಡೀ ಧಾತ್ರಿಯೊಳ್
ಭಾವಿಸಲ್
ಸತತಂ ಶೋಭಿಸುವಂ ಸುರೇಂದ್ರನವೊಲೀ ಬಲ್ಲಾಳ
ಭೂಪಾಳಕಂ॥"[೧೯]

ಎಂದು ವರ್ಣಿಸಿದ್ದಾನೆ.

ಹೊಯ್ಸಳರಲ್ಲಿ ಕೃಷಿ ಚಟುವಟಿಕೆಗಾಗಿ ಹಲವಾರು ಕೆರೆಗಳ ನಿರ್ಮಾಣವಾಗಿರುವುದು ಕಂಡು ಬರುವುದು. ಅದರಂತೆ ಅರಸೀಕೆರೆಯ ಬಾಣವರದಲ್ಲಿ ಕಲ್ಲನ ಕೆರೆ, ಮಾವಿನ ಕೆರೆ ಮುಂತಾದ ಕೆರೆಗಳನ್ನು ಕಟ್ಟಿಸಿದ್ದರು. ಶಾಸನ ಕವಿಯಾದ ತ್ರಿವಿಕ್ರಮಾಂಕನು ಈ ಕೆರೆಯ ಸೌಂದರ್ಯ, ಬಾಣಪುರಿನಲ್ಲಿದ್ದ ನಂದನ ವನಗಳು, ಅಲ್ಲಿ ಚಿಲಿಪಿಲಿಗುಟ್ಟುವ ಗಿಳಿಗಳ ಹಿಂಡುಗಳನ್ನು ಕುರಿತಾಗಿ

"ಬೆಳದೆಱಗಿದ ಕಳವೆಗಳಿಂ
ಗಿಳಿವಿಂಡಿಂ ನಂದನಂಗಳಿಂದಳಿಕುಳದಿಂ
ಬಳಸಿದ ಪೂರ್ಣತಟಾಕಾ
ವಳಿಯಿಂದುರ್ವ್ವರೆಗೆ ಬಾಣಪೂರ್ ಸೊಗಯಿಸುಗುಂ॥"[೨೦]

ಎಂದು ಸುಂದರಾವಾಗಿ ವರ್ಣಿಸಿದ್ದಾನೆ.

**ತ್ರಿವಿಕ್ರಮ ಪಂಡಿತ** : ಈತನ ಎರಡು ಶಾಸನಗಳನ್ನು ರಚಿಸಿದ್ದು ಅವುಗಳು ಅರಸೀಕೆರೆಯಲ್ಲಿ ದೊರೆಯುವುದು. ಈತನ ಕುರಿತು ಶಾಸನದಲ್ಲಿ **"ತ್ರಿವಿಕ್ರಮಪಂಡಿತರ ಪದ್ಯ ಲ್ಲಿಖಿತ"**[೨೧] ಎಂದು ಮಾತ್ರ ಉಲ್ಲೇಖವಿದ್ದು ಹೆಚ್ಚಿನ ವಿವರ ದೊರೆಯುವುದಿಲ್ಲ. ಹೆಸರಿನಲ್ಲಿರುವಂತೆ ಈತ ಪಂಡಿತನು ಹೌದು, ದೊರೆತಿರುವ ಎರಡು ಶಾಸನದಲ್ಲಿ ಸುಂದರ ಚಂಪೂಕಾವ್ಯವನ್ನೆ ರಚಿಸಿದ್ದಾನೆ. ಎರಡನೆ ಬಲ್ಲಾಳನ ಧೀರೋದಾತ್ತ ಮತ್ತು ಇನ್ನಿತರ ಗುಣಗಳನ್ನು

"ಫಣಿನಾಥಂ ಪಾಟಿ ಭೋಗಕ್ಕಮರಪತಿ ಸಮಂ
ರೂಪಸಂಪತ್ತಿಗ
ಬ್ಜೇಕ್ಷಣನುದ್ಯದ್ ವಿಕ್ರಮಾಡಂಬರಕೆ ದೊರೆ ಮಹೇಶಂ
ನಿಜಾಜ್ಞಾವಿಶೇಷ
ಕ್ಕೆಣೆ ಧೀರೋದಾತ್ತ ಚಿತ್ತಕ್ಕಮಮ ಸರಿ ದಶಾಸ್ಯಾರಿ ದಾನಕ್ಕೆ
ಮತ್ತ
ತೊಣೆಕರ್ಣ್ನಂ ತಾನೆನಲ್ಕೀ ವಸುಧೆಯೊಳೆಸೆದಂ
ವೀರಬಲ್ಲಾಳಭೂಪಂ॥"[೨೨]

ಎಂದು ಪ್ರಶಂಸಿದ್ದಾನೆ.

ಎರಡನೆ ಬಲ್ಲಾಳನ ಮತ್ತೊಬ್ಬ ರಾಣಿ ಉಮಾದೇವಿಯೂ ಬಲ್ಲಾಳನೊಂದಿಗೆ ರಾಜಕೀಯ ಮತ್ತು ಆಡಳಿತ ದಲ್ಲಿ ಪಾಲ್ಗೊಂಡಿದ್ದಳು. ಬೆಳಗುತ್ತಿ ಸಿಂಧರನ್ನು ಸೋಲಿಸಿದಳು. ವೀರಬಲ್ಲಾಳನು ವಿಜಯಯಾತ್ರೆಗಾಗಿ ರಾಜಧಾನಿಯಿಂದ ಹೊರಗಡೆ ಇದ್ದಾಗ, ಇವಳು ರಾಜಧಾನಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಇವಳನ್ನು ಕುರಿತಾಗಿ ತ್ರಿವಿಕ್ರಮ ಪಂಡಿತನು

"ಕುಮುದದಳನಯನೆ ಕೋಮಳೆ
ಕುಮುದಾಸವೆಯೆನಿಸಿ ನೆಗರ್ದುಮಾದೇವಿಗೆ ವಿ
ಕ್ರಮಸೋಮವಂಶ ಬಲ್ಲಾ
ಳಮಹೀಶಂ ಕೂರ್ಪ್ಪನೆಂಬುದದು ತಕ್ಕುದೆದೆಲ್॥"[೨೩]

ಎಂದು ಕಂದ ಪದ್ಯದಲ್ಲಿ ವರ್ಣಿಸಿದ್ದಾನೆ.

ದಕ್ಷಿಣ ಅಯ್ಯಾವೊಳೆ ಎಂದು ಖ್ಯಾತಿಯನ್ನು ಪಡೆದಿದ್ದ ಅರಸೀಕೆರೆಯನ್ನು ಶಾಸನ ಕವಿಗಳು ವಿವಿಧ ರೀತಿಯಾಗಿ ವರ್ಣಿಸಿದ್ದಾರೆ. ಅದರಂತೆ ತ್ರಿವಿಕ್ರಮ ಪಂಡಿತನೂ ಸಹ ಅರಸೀಕೆರೆಯನ್ನು

"ಮುಳಿದಾಗಡೆ ಕೂರ್ಪ್ಪವರೊ
ಳ್ತಿಳಿವುದು ತಿಳಿವುದು ಗಡೆನ್ದು ಸಾಱುವ ತೆಱದಿಂ
ಗಳಪುವ ಗಿಳಿವಿಂಡಿನ ಕಳ
ಕಳವರಸಿಕೆಱೆಯ ಬನದೊಳೊಪ್ಪುತ್ತಿರ್ಕ್ಕುಂ॥"[೨೪]

ಹಾಗೆಯೇ ಅರಸೀಕೆರೆಯಲ್ಲಿದ್ದ ತಟಾಕಗಳನ್ನು ಸಾಗರಗಳಿಗೆ ಹೋಲಿಸಿ ಈ ಊರ ಸಮೃದ್ಧಿಯನ್ನು ಹೊಗಳಿ

"ನವರತ್ನವಿಸರದಂಶುಗ
ಳೆ ವಿಹಾಸದಲ್ಲಿ ಮದನಚಾಪದವೊಲ್ತೋ
ರ್ಪ್ಪುವುಬೇಳ್ವಗ್ಗುರ್ಗ್ಧಸುವ
ರ್ಣ್ನವೃಷ್ಟಿಯಂ ಕಱೆಯುತೊಪ್ಪುವರಸಿಕೆಱೆಯೊಳ್॥
ಮುಳಿದಾಗಡೆ ಕೊರ್ಪ್ಪವರೊಳ್

ತಿಳಿವುದು ಗಡೆಂದು ಸಾಱುವ ತೆಱದಿಂ ಗಳಪುವ
ಗಿಳಿವಿಂಡಿನ ಕಳಕಳವರ
ಸಿಕೆಱಿೞಿಯ ಬನದೊಳೊಪ್ಪುತ್ತಿರ್ಕ್ಕುಂ॥"[೨೫]

ಎಂದು ವರ್ಣಿಸಿದ್ದಾನೆ. ಈ ವರ್ಣನೆಯು ಪಂಪನು ಬನವಾಸಿಯನ್ನು ವಿವಿಧ ರೀತಿಯಾಗಿ ವರ್ಣನೆ ಮಾಡಿದ್ದಾನೆ ಅದರಂತೆ ತ್ರಿವಿಕ್ರಮ ಪಂಡಿತನು ಅರಸೀಕೆರೆಯ ವರ್ಣನೆ ಮಾಡಿರುವನು. ಇದರಿಂದ ಸಾಹಿತ್ಯ ಕವಿಗಳ ಪ್ರಭಾವಗಳು ಶಾಸನ ಕವಿಗಳ ಮೇಲೆ ಆಗಿರುವುದು ಕಂಡುಬರುವುದು.

**ಹರಿಹರ ಸೂರಿ :** ಅರಸೀಕೆರೆಯ ಬೊಮ್ಮೆನ ಹಳ್ಳಿಯ ಶಾಸನವನ್ನು ರಚಿಸಿದ್ದಾನೆ. **"ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾಗ್ವಿ ರಚಿಸಿದಂ"**[೨೬] ಎಂದು ಶಾಸನದಲ್ಲಿ ಉಲ್ಲೇಖಿಸಿದೆ. ಈತನು ಕಾಮ ತಮ್ಮ ಎಂದು ತಿಳಿದುಬರುವುದು, ಆದರೆ ಈ ಕಾಮ ಯಾರು ಎಂಬುದನ್ನು ಶಾಸನದಲ್ಲಿ ತಿಳಿಸಿಲ್ಲ. ಶಾಸನಕವಿಯಾದ ಹರಿಹರ ಸೂರಿಗೆ 'ಉಮೇಶದತ್ತ ವಾಗ್ವಿ' ಎಂಬ ಬಿರುದು ಇದ್ದುದನ್ನು ಶಾಸನದಲ್ಲಿ ತಿಳಿಸಿದೆ. ಈತನೂ ಸಹ ಎರಡನೆ ಬಲ್ಲಾಳನ ಶೌರ್ಯ, ಪರಾಕ್ರಮವನ್ನು ಕುರಿತಾಗಿ

"ಕೇಳ ವಸಂತ ಬಾಳಸಹಕಾರದ ತಂಣೆಳಲಾಶ್ರಿತಾಳಿಗಾ
ಭೀಳಲಯಾಹಿನಿಷ್ಠುರಫಣೌಘದ ಮೆಯ್ನೆಳಲುದ್ಧತಾರಿಗು
ನ್ನೀಳಿತಪುಂಡರೀಕದ ನೆಳಲ್ ಜಯಲಕ್ಷ್ಮಿಗೆನಿಪ್ಪ ವೀರಬ
ಲ್ಲಾಳನ ತೋಳ ಬಾಳ ನೆಳಲಾದುದು ಧಾತ್ರಿಗೆ
ವಜ್ರಪಂಜರಂ॥"[೨೭]

ಎಂದು ಹೊಗಳಿದ್ದಾನೆ. ಈ ಶಾಸನ ಪದ್ಯವು ಬೇಲೂರು–೧೦೮, ಅರಸೀಕೆರೆ–೭೨ರ ಶಾಸನದಲ್ಲೂ ಬಂದಿದೆ. ಈ ಮೂರು ಶಾಸನದ ರಚನೆ ಹರಿಹರ ಸೂರಿಯೇ ಆಗಿರಬಹುದು. ಆದರೆ ಹೆಚ್ಚಿನ ವಿವರವಿಲ್ಲದ ಕಾರಣ ಖಚಿತವಾಗಿ ಹೇಳುವುದು ಕಷ್ಟ. ನಂತರ ಎರಡನೆ ಬಲ್ಲಾಳನ ಅಧಿಕಾರಿ ಮಾಚ ಚಮೂಪನ ಸಹೋದರನಾದ ಮಧೂಸೂದನ ದಂಡನಾಯಕನನ್ನು ಹರಿಹರ ಸೂರಿಯು ಶಾಸನದಲ್ಲಿ

"ಅನುಬಂಧಂ ಮನುಸಾಮ್ಯವೃತ್ತ ಕುಲದೊಳ್ ವಿತ್ತಾಗಮಂ
ನ್ಯಾಯವ
ರ್ತ್ತನದೊಳ್ ಮಾಳ್ಪ ಬಿಯಂ ಪ್ರಸಿದ್ಧ ಶುಭಕಾರ್ಯ್ಯ
ವ್ಯಾಪ್ತಿಯೊಳ್ ವಾಣಿ ಸ
ತ್ಯನಿಯೋಗೋಚಿತದೊಳ್ ಸ್ವಕೀಯವನಿತಾ ಸಂಭೋಗ
ದೊಳ್ ಪ್ರೀತಿ ಸ
ಲ್ವಿನಮಿಂತಾರ್ಗ್ಗುಣಿ ದಾಸಿರಾಜನವೊಲನ್ಯರ್ ಖ್ಯಾತಿಯಂ
ತಾಳ್ದಿದರ್॥"
"ಶೀಲಾಮಳಗುಣವತಿಸತಿ ನಾ
ಲಲೆಗಂ ದಾಸಿರಾಜವಿಭುಗಂ ನೆಗಳ್ದಂ
ಪಾಲಿತನಯನೂರ್ಜ್ಜಿತಗು
ಣಲೋಲ ಮಧುಸೂದನಂ ಚಮೂಪತಿತಿಳಕಂ॥"[೨೮]

ಎಂದು ವರ್ಣಿಸಿದ್ದಾನೆ.

**ಜನ್ನ :** ಜನ್ನನು ರನ್ನ ನಾಗಚಂದ್ರರಂತೆ ಕವಿಯೂ ಹೌದು ಶಾಸನ ಕವಿಯೂ ಹೌದು. ಈತನು ಕಾವ್ಯ ರಚಿಸುವ ಮುನ್ನ ಶಾಸನಗಳನ್ನು ರಚಿಸಿರುವನು. ಈತ ಒಟ್ಟು ನಾಲ್ಕು ಶಾಸನಗಳನ್ನು ರಚಿಸಿದ್ದಾನೆ. ಅವುಗಳು ಚನ್ನರಾಯಪಟ್ಟಣ ಮತ್ತು ತರೀಕೆರೆಯಲ್ಲಿ ದೊರೆತಿವೆ. ಈತನ ಕುರಿತು ಹೆಚ್ಚಿನ ವಿವರಗಳು ಅವನು ರಚಿಸಿದ ಕಾವ್ಯಗಳಲ್ಲಿ ತಿಳಿದುಬರುವುದು. ವೀರಬಲ್ಲಾಳನಂದ 'ಕವಿಚಕ್ರವರ್ತಿ' ಎಂಬ ಬಿರುದನ್ನು ಪಡೆದಿದ್ದನು. ಇಮ್ಮಡಿ ನರಸಿಂಹನ ಆಸ್ಥಾನದಲ್ಲಿ ಮಂತ್ರಿ ಮತ್ತು ದಂಡಾಧೀಶನಾಗಿದ್ದನು. ಈತನ ತಂದೆ ಶಂಕರ, ತಾಯಿ ಗಂಗಾದೇವಿ, ಹೆಂಡತಿ ಲಕುಮಾದೇವಿ. ಮಲ್ಲಿಕಾರ್ಜುನ ಸಹೋದರಿಯ ಗಂಡ, ಕೇಶಿರಾಜ ಸೋದರಳಿಯನಾಗಿದ್ದನು. ಈತನಿಗೆ 'ಉದ್ಧಂಡ ಕವಿ ಬಾಳಲೋಚನ', 'ಕವಿಬಾಳ ಲೋಚನ', 'ಬಾಳಲೋಚನ', 'ಸಾಹಿತ್ಯರತ್ನಾಕರ', 'ಉಭಯ ಕವಿಚಕ್ರವರ್ತಿ', 'ಅಭಿನವ ಮಧನ' ಎಂಬ ಬಿರುದುಗಳಿದ್ದವು ಇನ್ನು ಶಾಸನದಲ್ಲಿ ಈತನ ಬಗ್ಗೆ **"ಉದ್ದಂಡಕವಿಭಾಳನೇತ್ರಂ ಸುಕವಿ ಜನಮಿತ್ರಂ ಜನ್ನಯ್ಯನ ಕವಿತೆ"**[೨೯] ಎಂದು ಅಮೃತಾಪುರ ಶಾಸನದಲ್ಲಿ ಉಲ್ಲೇಖಿಸಿದೆ.

ಜನ್ನನ ಆರಂಭದಲ್ಲಿನ ಶಾಸನಗಳಲ್ಲಿ ಹೆಚ್ಚಿನ ಪಾಂಡಿತ್ಯ ಇಲ್ಲದಿರುವುದು ಕಂಡುಬರುವುದು. ಅನಂತರ ತನ್ನ ಕಾವ್ಯಗಳನ್ನು ರಚಿಸಿರುವುದು ಕಂಡುಬರುವುದು. ಜನ್ನನು ಎರಡನೆ ಬಲ್ಲಾಳನನ ಆಶ್ರಯದಲ್ಲಿ 'ಯಶೋಧರ ಚರಿತೆಯನ್ನು ರಚಿಸಿದ್ದಾನೆ. ಕಾವ್ಯದಲ್ಲಿ ಎರಡನೆ ಬಲ್ಲಾಳನ ಬಗ್ಗೆ ಹೆಚ್ಚು ವರ್ಣಿಸದೆ ಶಾಸನದಲ್ಲಿ ಸುಂದರವಾದ ವರ್ಣನೆಗಳನ್ನು ತಂದಿರುವನು. ಅವನು ಚನ್ನರಾಯಪಟ್ಟಣದ ಆನೆಕೆರೆ ಶಾಸನದಲ್ಲಿ ಎರಡನೆ ಬಲ್ಲಾಳನನ್ನು ವಿಷ್ಣುವಿಗೆ ಹೋಲಿಸಿದ್ದಾನೆ. ಆತನು ಉಚ್ಚಂಗಿ ದುರ್ಗವನ್ನು ಜಯಿಸಿ 'ಗಿರಿದುರ್ಗ ಮಲ್ಲ' ಎಂಬ ಬಿರುದನ್ನು ಹೊಂದಿದ್ದನು ಎಂಬುದನ್ನು

"ಶ್ರೀವಧುವಿಂಗೆ ಪೀಲಿದಟೀೞಿಯಿರ್ಪವೊಲಿರ್ದ್ದುದು
ಕೋಡೊಳಿರ್ದ್ದ ಧಾ
ತ್ರಿವಳಯಂ ಸಮುದ್ರಮದು ಝಲ್ಲರಿಯಿರ್ಪ್ಪವೊಲಿರ್ದ್ದು
ದಾಂತದಂ
ಷ್ಟ್ರಾವರಶೋಭೆ ತೆತ್ತಿಸಿದ ಮುತ್ತಿನ ಕಾವುವೊಲಿರ್ದುದಿಂತು ಸ
ದ್ಭಾವಮನಾಳ್ದ ಸೂಕರವರಂ ಪೊರೆಗಿ ಗಿರಿದುರ್ಗ
ಮಲ್ಲನಂ॥"[೩೦]

ಎಂದು ವರ್ಣಿಸಿದ್ದಾನೆ. ಅದೇ ಶಾಸನದಲ್ಲಿ ಎರಡನೆ ಬಲ್ಲಾಳನು ಸೇವುಣ ಸೈನ್ಯದೊಂದಿಗೆ ಹೋರಾಡಿದ ಯುದ್ಧದ ವರ್ಣನೆಯು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

"ಇಂನುಂ ಬೀರದ ತೋರಬಿತ್ತನಗೆವೊಂಬ್ದಂ
ತಿರ್ಪ್ಪುದಾರೂಢಸಂ
ಪಂನಂ ದಕ್ಷಿಣಚಕ್ರಿಗೆಲ್ದ ಸೋಜಟೂರಿಂ ಬೆಳ್ವೊಲಂ ಮುಟ್ಟೆ
ಸಂ
ಛಂನೋದ್ಧೃಷ್ಟಕೃಷೀವಳಾವಳಿಹಳಪ್ರಾಗ್ಭಾಗನಿಃಕೀಲಿತೋ
ತ್ಪನ್ನಂ ಸೇವುಣಸೈನ್ಯಸದ್ಭಟಕರೋಟೀಕೋಟೀ
ಸಂಘಟ್ಟನಂ॥"[೩೧]

ಎರಡನೆ ಬಲ್ಲಾಳನ ಅಧಿಕಾರಿಯಾದ ಅಮಿತಯ್ಯ ಂಡನಾಯಕ. ಈತನು ಜನ್ನನ ಆಶ್ರಯದಾತ, ಈತನು ೀಕೆರೆಯಲ್ಲಿ ಅಮತೇಶ್ವರ ದೇವಾಲಯವನ್ನು, ಗದಗಿನಲ್ಲಿ ರೆಯನ್ನು ಕಟ್ಟಿಸಿದ್ದನು. ಈತನನ್ನು ಕುರಿತು ಜನ್ನನು

"ಕಡುವಲ್ಪಿಂ ಭೀಮನೆಂಬಂ ನೆಗಟ್ದನೆಳೆಯೊಳಂದಾತ
ನಿಂದೀತನನ್ತೋ
ನುಡಿಯಿಂದಂ ರಾಮನೆಂಬ ನೆಗಟ್ದನೆಳೆಯೊಳಂದಾತ
ನಿಂದೀತನಾಗ್ಗ್ಗಂ
ಕುಡುವಾರ್ಪ್ಪಿಂ ಕರ್ಣ್ಣನೆಂಬಂ ನೆಗಟ್ದನೆಳೆಯೊಳಂದಾತ
ನಿಂದೀತನಿಂ ಪೇ
ಳ್ವಡೆ ಮುತ್ತಿಲ್ಲಾರುವೆಂಬಂತೆಸೆದಪನಮಿತಂ
ದಂಡನಾಥತ್ರಿಣೇತ್ರಂ॥"[೩೨]

ಂದು ಶಾಸನದಲ್ಲಿ ಅಮಿತಯ್ಯ ದಂಡನಾಯಕನನ್ನು ಬಲದಲ್ಲಿ ೀಮನಂತೆ ಬಲಶಾಲಿ, ಆಡುವ ನುಡಿಯಲ್ಲಿ ರಾಮನಂತೆ, ಾನ ಮಾಡುವಲ್ಲಿ ದಾನ ಶೂರ ಕರ್ಣನಂತೆ, ಶಿವನಂತೆ ್ರತಾಪಿಯು ಆಗಿದ್ದನು ಎಂದು ಹೊಗಳಿದ್ದಾನೆ ಹೀಗೆ ಜನ್ನನು ವಿಯೂ ಶಾಸನ ಕವಿಯೂ ಆಗಿದ್ದನು ಎಂದು ತಿಳಿದು ರುತ್ತದೆ.

**ಕವಿಕಂದರ್ಪ :** ಈತನು ಕೊಪ್ಪಳ, ಮದ್ದೂರಿನ ಾಸನಗಳನ್ನು ರಚನೆ ಮಾಡಿರುವನು. ಈತನ ತಂದೆ ಾಳಚಂದ್ರ, ಸೊನ್ನಾದೇವಿ ಈತನ ಹೆಂಡತಿ. ಈತನನ್ನು ಕೊಪ್ಪಳದ ಶಾಸನವು **"ಶಾಸನಸೂರಿ . . ಗಮಸೂರಿ ಚಾತುರ್ಭಾಷಾ ಚಕ್ರವರ್ತಿ ಕವಿಕಂದರ್ಪ್ಪಂ"**[೩೩] ಮದ್ದೂರಿನ ಶಾಸನವು **"ಉಭಯಭಾಷ ಚಕ್ರವರ್ತಿ"**[೩೪] ಎಂದು ಉಲ್ಲೇಖಿಸಿದೆ. ಬೆಳಗಾವಿಯ ಕೌಲೂರ ಶಾಸನವು ಈತನದೇ ಎಂದು ವಿದ್ವಾಂಸರ ಅಭಿಪ್ರಾಯ. ಈತನ ಬಗ್ಗೆ ಇನ್ನು ಹೆಚ್ಚಿನ ವಿವರಗಳು ದೊರೆಯುವುದಿಲ್ಲ ಹಾಗು ದೊರೆತ ಶಾಸನಗಳು ತ್ರುಟಿದವಾದ ಕಾರಣ ಇವನ ಪ್ರತಿಭೆಯೂ ತಿಳಿದು ಬರುವುದಿಲ್ಲ.

ಶಾಸನ ಕವಿಗಳು ಗ್ರಾಂಥಿಕ ಕವಿಗಳಂತೆ ಮಹಾಕಾವ್ಯಗಳನ್ನು ಬರೆಯದೆ ಹೋದರು ಆಶ್ರಿತ ರಾಜರ, ಅಧಿಕಾರಿಗಳ ವಂಶ, ಯುದ್ಧ, ಆತನ ಪರಾಕ್ರಮ, ಉದಾತ್ತಗುಣಗಳನ್ನು, ಪ್ರಾಚೀನ ಧಾರ್ಮಿಕ ನಾಯಕರಿಗೆ ತಮ್ಮ ಆಶ್ರಿತರನ್ನು ಹೋಲಿಸಿ ಉಪಮೆ ಮತ್ತು ಶ್ಲೇಷೆಯಿಂದ ಹೊಗಳಿ ಶಾಸನಗಳನ್ನು ರಚಿಸಿದ್ದಾರೆ. ಶಾಸನಕವಿಗಳು ಕಾವ್ಯ ರಚನೆ ಮಾಡುವುದು ಅವರ ಮೂಲ ಉದ್ದೇಶವಲ್ಲ. ರಾಜನ ಪ್ರಕಟಣೆಯನ್ನು ಜನಸಾಮನ್ಯರಿಗೆ ತಿಳಿಯುವಂತೆ ಬರೆಯುವುದು ಆಗಿತ್ತು. ಆದರೆ ಶಾಸನ ಕವಿಗಳಿಗೆ ಗ್ರಾಂಥಿಕ ಕವಿಗಳ ಪ್ರಭಾವ ಅವರ ಮೇಲೆ ಆಗಿರುವಂತೆ ಕಾಣುವುದು. ಅವರು ಸಹ ವಿದ್ಯಾವಂತರು, ಪಂಡಿತರಾಗಿದ್ದರು. ವ್ಯಾಕರಣ, ಛಂದಸ್ಸುಗಳಲ್ಲಿ ಪ್ರೌಢವಾಗಿ ರಚಿಸುವಂತಹ ಪ್ರತಿಭಾವಂತರಾಗಿದ್ದರು. ಸುಂದರವಾದ, ಛಂದೋಬದ್ಧವಾದ ನೂರಾರು ಸಾಲುಗಳನ್ನು ರಚಿಸಿದ್ದಾರೆ, ರಾಜ ಮತ್ತು ಅಧಿಕಾರಿಗಳನ್ನು ತುಂಬು ಮನಸ್ಸಿನಿಂದ ಕೆಲವೊಮ್ಮೆ ಉತ್ಪ್ರೇಕ್ಷೆಗಳಿಂದಲೂ ಹೊಗಳಿದ್ದಾರೆ. ಆದರೆ ತಮ್ಮ ವೈಯಕ್ತಿಕ ಬದುಕಿನ ವಿವರ ಇತಿ ವೃತ್ತಾಂತಗಳನ್ನು ಹೇಳಿಕೊಳ್ಳದೆ ಶಾಸನದ ಕೊನೆಯಲ್ಲಿ ಮಾತ್ರ ತಮ್ಮ ಹೆಸರನ್ನು ಹೇಳಿ ಕೊಳ್ಳುವುದಷ್ಟಕ್ಕೆ ಮಾತ್ರ ಸೀಮಿತವಾಗಿ ಉಳಿದುಕೊಂಡರು.



## ಆಧಾರಸೂಚಿ


ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೭, ಅರಸೀಕೆರೆ-೬೩.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೮೮.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೮೮.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೮೮.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೮೮.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೨೩.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೨೩.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೨೩.
ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೨೩.

೧೦. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೧೫೧
೧೧. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೯೬.
೧೨. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೧೫೨.
೧೩. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೯೬.
೧೪. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೯೬.
೧೫. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೬.
೧೬. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೬.
೧೭. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೬.
೧೮. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೫೫.
೧೯. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕೆರೆ-೫೫.
೨೦. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೫೫.
೨೧. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೫೫
೨೨. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೭.
೨೩. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೭.
೨೪. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೭.
೨೫. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೪೪.
೨೬. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೧೩೯.
೨೭. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೧೩೯.
೨೮. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಅರಸೀಕರೆ-೧೩೯.
೨೯. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೨, ತರೀಕೆರೆ-೧೨.
೩೦. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಚನ್ನರಾಯಪಟ್ಟಣ-೩೩.
೩೧. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೦, ಚನ್ನರಾಯಪಟ್ಟಣ-೩೩.
೩೨. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೧೨, ತರೀಕೆರೆ-೧೨.
೩೩. ಶಾಸನ ಸಂಪುಟ ೨, ಕೊಪ್ಪಳ-೩.
೩೪. ಎಪಿಗ್ರಾಪಿಯ ಕರ್ನಾಟಿಕಾ, ಸಂಪುಟ ೭, ಮದ್ದೂರು-೫೩.

## ಆಕರ ಗ್ರಂಥಗಳ ಪಟ್ಟಿ

**ಕೃತಿಗಳು**

೧. ಕೇಶವಭಟ್ಟ ಎಂ.ಪಿ.& ಕೃಷ್ಣರಾವ್ಎಂ. (ಸಂ) : **ಕರ್ನಾಟಕದ ಇತಿಹಾಸ ದರ್ಶನ,** ಬೆಂಗಳೂರು. ೧೯೭೯.
೨. ಜಯದೇವ ಹು.ಕ. : ಶಾಸನ ಮತ್ತು ಗದ್ಯ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೨.
೩. ದಿವಾಕರ್ಆರ್.ಆರ್ (ಸಂ) : **ಕರ್ನಾಟಕದ ಪರಂಪರೆ ಸಂಪುಟ-೧,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪.
೪. ನರಸಿಂಹಾಚಾರ್ಯ ಆರ್. : **ಶಾಸನ ಪದ್ಯ ಮಂಜರಿ,** ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.
೫. ಮೇವುಂಡಿ ಮಲ್ಲಾರಿ : **ಕನ್ನಡನಾಡಿನ ಕೆಲವು ಶಾಸನ ಕವಿಗಳು,** ಪ್ರತಿಭಾ ಗ್ರಂಥಮಾಲೆ ಧಾರವಾಡ, ೧೯೭೮.
೬ ಸೀತಾರಾಮಯ್ಯ ಪಿ. (ಸಂ) : **ಜನ್ನ,** ಕವಿ ಕಾವ್ಯ ಪರಂಪರೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೨.
೭. ಷೇಕ್ಅಲಿ ಬಿ. (ಸಂ) : **ಕರ್ನಾಟಕ ಚರಿತ್ರೆ, ಸಂಪುಟ ೨,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

## ಶಾಸನ ಸಂಪುಟಗಳು

೧. ಎಪಿಗ್ರಾಫಿಯ ಕರ್ನಾಟಿಕ, ಬಿ.ಎಲ್. ರೈಸ್ ಸಂಪಾದಿತ, ಸಂಪುಟ VII.
೨. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ೭, ೧೦, ೧೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೩. ಶಾಸನ ಸಂಪುಟ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.



# ಹೊಯ್ಸಳ ರಾಜ್ಯಾಡಳಿತದಲ್ಲಿ ಪಟ್ಟಣಸ್ವಾಮಿ ಒಂದು ಚಾರಿತ್ರಿಕ ಅಧ್ಯಯನ

**ಮಹಾಂತೇಶ ಕುತನಿ* ಡಾ. ಎಸ್. ಶಿವರಾಮು****

ಮಧ್ಯಯುಗೀನ ಕರ್ನಾಟಕದಲ್ಲಿ ಹಲವು ಪಟ್ಟಣಗಳು ಅಸ್ತಿತ್ವದಲ್ಲಿದ್ದು, ಆ ಎಲ್ಲಾ ಪಟ್ಟಣಗಳು ಅಥವಾ ವ್ಯಾಪಾರ ಕೇಂದ್ರಗಳು ಸಾಮಾನ್ಯವಾಗಿ ಪಟ್ಟಣಸ್ವಾಮಿ ಅಥವಾ ಪಟ್ಟಣ ಶೆಟ್ಟಿಯ ಅಧಿಕಾರಕ್ಕೆ ಒಳಗಾಗಿದ್ದವು. ಪಟ್ಟಣಸ್ವಾಮಿ ಪಟ್ಟಣದ ಪ್ರಮುಖವಾದ ಅಧಿಕಾರಿ ಯಾಗಿದ್ದನು. ಅವನು ಒಬ್ಬ ಧನಿಕ ವ್ಯಾಪಾರಿಯೂ ಮತ್ತು ಪಟ್ಟಣದ ಮೇಯರ್ ಕೂಡ ಆಗಿದ್ದನು. ಅಲ್ಲದೇ ಅವನು ಸ್ಥಳೀಯ ವ್ಯಾಪಾರಿ ಸಂಘದ ಅಧ್ಯಕ್ಷನಾಗಿಯೂ ಸಹಾ ಇದ್ದನು. ಪಟ್ಟಣಸ್ವಾಮಿ ಪಟ್ಟಣದ ಸಂತೆಗಳು ಮತ್ತು ಇನ್ನಿತರ ವಾಣಿಜ್ಯ ಚಟುವಟಿಕೆಗಳ ಮೇಲ್ವಿಚಾರಣೆ ಯನ್ನು ನೋಡಿಕೊಳ್ಳುತ್ತಿದ್ದನು. ಅಲ್ಲದೇ ಅವನು ಪಟ್ಟಣ ಸಮಿತಿಯ ಒಬ್ಬ ಬಹುಮುಖ್ಯ ಸದಸ್ಯನಾಗಿದ್ದನು. ಹೊಯ್ಸಳರ ಶಾಸನಗಳು ವರ್ತಕರನ್ನೂ, ಪಟ್ಟಣಸ್ವಾಮಿಗಳನ್ನೂ ಮೂಲಸ್ತಂಭ ಅಥವಾ ರಾಜ್ಯದ ಅಭ್ಯುದಯಕ್ಕೆ ಕಂಬದಂತೆ ಆಧಾರವಾಗಿರುವವರು ಎಂದು ವರ್ಣಿಸುತ್ತವೆ.

ಹೊಯ್ಸಳರ ಕಾಲದ ಹಲವು ಶಾಸನಾಧಾರಗಳ ಪ್ರಕಾರ ಪಟ್ಟಣಸ್ವಾಮಿ ಅಥವಾ ನಗರ ಮೇಯರ್‌ನು ನಗರಾಡಳಿತದಲ್ಲಿ ಬಹುಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದ್ದನೆಂಬುದನ್ನು ತಿಳಿಸುತ್ತವೆ. ಸಂತೆಗಳನ್ನು ನಡೆಸುವುದು ಪಟ್ಟಣ ಅವಲಂಬಿತ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡುವುದು ಮತ್ತೀತರ ಜನೋಪಯೋಗಿ ಸ್ಥಾನ, ಕಾರ್ಯ ಮತ್ತು ಅವನ ಪಾತ್ರವನ್ನು ವಿಶ್ಲೇಷಿಸುವ ಪ್ರಯತ್ನ ನಡೆಸಲಾಗಿದೆ.

ಸಾಮಾನ್ಯವಾಗಿ ಒಂದು ಪಟ್ಟಣಕ್ಕೆ ಒಬ್ಬ ಪಟ್ಟಣಸ್ವಾಮಿ ಇರುತ್ತಿದ್ದನು. ಆದರೆ ನಗರ ವಿಸ್ತರಣೆ ಮತ್ತು ಸಂಕೀರ್ಣ ಹಲವು ಸಂಖ್ಯೆಯ ಪಟ್ಟಣಸ್ವಾಮಿಗಳನ್ನು ಅವಲಂಬಿಸಿತ್ತು. ಕ್ರಿ.ಶ. ೧೧೪೨ರ ಶಾಸನದ ಪ್ರಕಾರ ಹಳೇಬೀಡು ಪಟ್ಟಣದಲ್ಲಿ ಹೊಯ್ಸಳಶೆಟ್ಟಿ ಮತ್ತು ಗುಮ್ಮಿಶೆಟ್ಟಿ ಎಂಬ ಇಬ್ಬರು ಪಟ್ಟಣಸ್ವಾಮಿಗಳಿದ್ದರು.[೧] ಪಟ್ಟಣಸ್ವಾಮಿಗೆ ಪಟ್ಟಣದ ಶ್ರೀಮಂತ ಮತ್ತು ಹಿರಿಯ ವ್ಯಾಪಾರಿಯ ಸ್ಥಾನಮಾನವನ್ನು ದಯಪಾಲಿಸಿದ್ದು ತೋರಿಸುತ್ತದೆ. ಕ್ರಿ.ಶ. ೧೨೦೫ರ ಒಂದು ಶಾಸನವು ಮಲಪರಾಜ ಒಬ್ಬ ನಿಶ್ಚಿತವಾದ ಶೆಟ್ಟಿಗೆ ಪಟ್ಟಣ ಶೆಟ್ಟಿಯ ಸ್ಥಾನಮಾನ ನೀಡಿದ್ದನ್ನು ವಿವರಿಸುತ್ತದೆ. ಪಟ್ಟಣಸ್ವಾಮಿ ಜನರ ಮತ್ತು ಪಟ್ಟಣ ವ್ಯಾಪಾರಿಗಳ ಮಧ್ಯೆ ಸರ್ಕಾರದ ನಂಬಿಕೆಯ ಅಧಿಕಾರಿಯಾಗಿದ್ದನು. ಅವನು ಸರ್ಕಾರ ದೊಂದಿಗಿನ ಆತ್ಮೀಯ ಸಂಬಂಧವನ್ನು ಈ ಕೆಳಗಿನ ಉದಾಹರಣೆಗಳೊಡನೆ ತಿಳಿಯಬಹುದಾಗಿದೆ. ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಹೊಸಹೊಳಲುವಿನ ಕ್ರಿ.ಶ. ೧೧೨೫ರ ಒಂದು ದಾಖಲೆಯು ಪಟ್ಟಣಸ್ವಾಮಿ ಹೊಯ್ಸಳಶೆಟ್ಟಿ ಅಥವಾ ನೊಳಂಬ ಶೆಟ್ಟಿ ಎಂದು ಕರೆಯುತ್ತಿದ್ದ ಅವನು ರಾಜವಿಷ್ಣುವರ್ಧನನ ಪಾದ ಸೇವಕನೆಂದು ತಿಳಿಸಿದೆ.[೨]

ಮಂಡ್ಯ ಜಿಲ್ಲೆಯ ನಾಗಮಂಗಲತಾಲ್ಲೂಕಿನ ಹಟ್ನ ಗ್ರಾಮದ ಕ್ರಿ.ಶ. ೧೧೭೮ರ ದಾಖಲೆಯು ಪಟ್ಟಣಸ್ವಾಮಿ ಸೋವಿಶೆಟ್ಟಿ ಸಾವಂತ ನರಸಿಂಗನಾಯಕನ ಅಧೀನನಾಗಿದ್ದನೆಂದು ವಿವರಿಸುತ್ತದೆ.[೩] ಕ್ರಿ.ಶ. ೧೧೯೫ರ ಶ್ರವಣ ಬೆಳಗೊಳದಲ್ಲಿನ ಇನ್ನೊಂದು ದಾಖಲೆಯು ನಾಗದೇವನು ದೊರೆ ಎರಡನೆಯ ವೀರಬಲ್ಲಾಳನ ಕಾಲದಲ್ಲಿ ಪಟ್ಟಣಸ್ವಾಮಿ ಯಾಗಿದ್ದನೆಂದು ವಿವರಿಸುತ್ತದೆ.[೪] ದಾವಣಗೆರೆ ತಾಲ್ಲೂಕು ಕುಂದವಾಡ ಗ್ರಾಮದ ಕ್ರಿ.ಶ. ೧೨೧೮ರ ಒಂದು ಶಾಸನದ ಪ್ರಕಾರ ಅಭಿನವ ಕೇತಲದೇವಿಯು ಪಟ್ಟಣಸ್ವಾಮಿ ಸೇಂಗಿ ಶೆಟ್ಟಿಗೆ ನಿರ್ದೇಶನ ನೀಡಿ ಬುಧವಾರ ಸಂತೆ ಸ್ಥಾಪನೆಗಾಗಿ ದತ್ತಿ ನೀಡಿದಳು. ಅದನ್ನು ಆ ಪಟ್ಟಣಸ್ವಾಮಿ ಸ್ವೀಕರಿಸಿ ಆ ರಾಣಿಯ ಆಜ್ಞೆಯನ್ನು ನೆರವೇರಿಸಿದನು.[೫]

ಪಟ್ಟಣಸ್ವಾಮಿಯು ಹಲವು ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಸಂತೆ, ಜಾತ್ರೆಗಳ ಸ್ಥಾಪನೆ, ಮೇಲ್ವಿಚಾರಣೆ ಮತ್ತು ಪಟ್ಟಣದ ಪುರಪ್ರಮುಖ ಇವು ಅವನ ಪ್ರಧಾನ ಕರ್ತವ್ಯವಾಗಿದ್ದವು. ಪಟ್ಟಣದ ಸಾಮಾಜಿಕ-ಆರ್ಥಿಕ ಚಟುವಟಿಕೆಗಳಲ್ಲಿ ಇವನು ಪ್ರಮುಖ ಪಾತ್ರ ನಿರ್ವಹಿಸುತ್ತಿದ್ದನು. ಪಟ್ಟಣಸ್ವಾಮಿ ಕೆಲವು ವೇಳೆ ಪಟ್ಟಣದ ಸ್ಥಾಪಕನಾಗಿದ್ದನು.

* ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ)., ಮಂಡ್ಯ-೫೭೧೪೦೧.

** ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನಂಜನಗೂಡು, ಮೈಸೂರು ಜಿಲ್ಲೆ-೫೭೧೩೦೧.

ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕು, ಮದ್ದೂರು ಗ್ರಾಮದಲ್ಲಿ ದೊರೆತಿರುವ ಕ್ರಿ.ಶ. ೧೩೨೮ರ ಒಂದು ಶಾಸನವು ಉಪೇಂದ್ರಪುರದ ಮಹಾಜನರು ಪಟ್ಟಣ ಸ್ವಾಮಿಗೆ ವಿಸ್ತೀರ್ಣದಲ್ಲಿ ವಿಶಾಲವಾದ ಆರು ಮನೆಗಳನ್ನು ಮಾನ್ಯವಾಗಿ ಅಥವಾ ಉಂಬಳಿಯಾಗಿ ಅವನು ಪಟ್ಟಣ ನಿರ್ಮಾಣಕ್ಕಾಗಿ ನೀಡಿದ್ದನ್ನು ವಿವರಿಸುತ್ತದೆ.[೬]

ಪಟ್ಟಣಸ್ವಾಮಿಯು ಸಂತೆಗಳನ್ನು ಸ್ಥಾಪಿಸುವುದರಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದನು. ನಂಜನಗೂಡು ಹೋಬಳಿಯ ಉಪ್ಪಿನಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ. ೧೨೭೮ರ ಒಂದು ದಾಖಲೆಯ ಮನಲಿಯಲ್ಲಿ ಒಂದು ಸಂತೆಯನ್ನು ಶಂಕಶೆಟ್ಟಿ ಎಂಬ ಪಟ್ಟಣಸ್ವಾಮಿ ಮಾಚನದಂಡನಾಯಕ ಮತ್ತು ಹಿರಿಯ ನಾಡು ಮಹಾಪ್ರಭುವಿನ ಜೊತೆ ಪ್ರಾರಂಭಿಸಿದನೆಂದು ಉಲ್ಲೇಖಿಸುತ್ತದೆ.[೭] ೧೩೧೮ರಲ್ಲಿ ಮೂರನೇ ಬಲ್ಲಾಳನ ಮಂತ್ರಿ ಸೋಮರಸ ಎನ್ನುವವನು ಚಿಟ್ಟಾರಿ ಬಾಲಸೆಟ್ಟಿ ಹಾಗೂ ಮಾಸಣಸೆಟ್ಟಿ ಎನ್ನುವವರಿಗೆ ಮುಗುಲುನಹಳ್ಳಿಯನ್ನು ನಾನಾ ದೇಶಿ ಪಟ್ಟಣವಾಗಿ ಪರಿವರ್ತಿಸಿ ಅಲ್ಲೊಂದು ಸಂತೆಯನ್ನು ಸ್ಥಾಪಿಸಿದ್ದಕ್ಕಾಗಿ ಸನ್ನದನ್ನು ನೀಡಿದನು.[೮] ಹನ್ನೆರಡನೆಯ ಶತಮಾನದ ಶ್ರವಣಬೆಳಗೊಳದ ಒಂದು ದಾಖಲೆಯು ಪಟ್ಟಣಸ್ವಾಮಿ ನೇಮಿಶೆಟ್ಟಿಯು ಮೊಸಲೆಯ ಸಂತೆಯ ಪಟ್ಟಣಸ್ವಾಮಿಯಾಗಿದ್ದನೆಂದು ಅಲ್ಲದೇ ಅವನು ಒಂದು ಸಂತೆಯನ್ನು ನಿರ್ಮಿಸಿದ್ದರಿಂದ ಅವನು ಸ್ಥಾಪಿಸಿದ ಸ್ಥಳದ ಹೆಸರಿನಿಂದಲೇ ಅವನನ್ನು ಕರೆಯಲಾಗುತ್ತಿತ್ತು.[೯] ಸಂತೆಗಳ ಖರ್ಚು-ವೆಚ್ಚಗಳನ್ನು ನೀಗಿಸಲು ಸಣ್ಣ ಪ್ರವಾಣದ ತೆರಿಗೆಗಳನ್ನು ಹಣ ಅಥವಾ ವಸ್ತುಗಳ ರೂಪದಲ್ಲಿ ಸಂತೆಗೆ ಪ್ರವೇಶಿಸುತ್ತಿದ್ದ ಸರಕುಗಳು ಮತ್ತು ಮಾರಾಟ ಮತ್ತು ಕೊಳ್ಳುತ್ತಿದ್ದ ವಸ್ತುಗಳ ಮೇಲೆ ಹಾಕಿ ವ್ಯಾಪಾರಿಗಳಿಂದ ವಸೂಲು ಮಾಡಲಾಗುತ್ತಿತ್ತು. ಈ ಮೇಲ್ಕಂಡ ದಾಖಲೆಯು ಸಂತೆಗಳ ನಿರ್ಮಾಣದಂತಹ ಜವಾಬ್ದಾರಿಯುತವಾದ ಕಾರ್ಯವು ಪಟ್ಟಣಸ್ವಾಮಿಯು ಪ್ರಮುಖ ಕರ್ತವ್ಯ ವಾಗಿತ್ತೆಂಬುದರ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಆ ಕಾಲದಲ್ಲಿ ಪ್ರಮುಖ ಅರ್ಹತೆಯುಳ್ಳ ಕಾರ್ಯ ಗಳಾದ ಹೊಸಕೆರೆಗಳ ನಿರ್ಮಾಣ, ದೇವಾಲಯಗಳನ್ನು ಕಟ್ಟಿಸುವಂತಹ ಕಾರ್ಯಗಳ ಸಮಾನ ವಾದ ಕಾರ್ಯವಾಗಿ ಪಟ್ಟಣಸ್ವಾಮಿಯ ಕಾರ್ಯ ವಿತ್ತೆಂದು ತಿಳಿಸುತ್ತದೆ. ಈ ರೀತಿಯ ಸಂತೆಗಳ ಸ್ಥಾಪನೆ ವ್ಯಾಪಾರ ಮತ್ತು ವ್ಯವಹಾರದ ಕೇಂದ್ರಗಳ ಬೆಳವಣಿಗೆ ಮತ್ತು ದೇಶಿಯ ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ಅಪಾರವಾದ ಕೊಡುಗೆಗಳನ್ನು ನೀಡಿವೆ.

ಪಟ್ಟಣಸ್ವಾಮಿ ಸ್ಥಾಪಿಸಿಧ ಸಂತೆಗಳ ನಿರ್ವಹಣೆಯ ವೆಚ್ಚವನ್ನು ಭರಿಸಲು ಕೊಡುಗೆಯಾಗಿ ರೈತರು ವ್ಯಾಪಾರಿಗಳು ಮತ್ತು ಇನ್ನಿತರ ವ್ಯಕ್ತಿಗಳು ಒಟ್ಟಾಗಿ ಭೂ ದತ್ತಿಗಳನ್ನು ಮತ್ತು ಹಲವು ಸುಂಕಗಳನ್ನು ಉದಾರವಾಗಿ ದಾನ ನೀಡಿದ್ದರು. ಅದರಲ್ಲಿ ಪಟ್ಟಣಸ್ವಾಮಿಯ ಬಹುಮುಖ್ಯವಾದ ಆದಾಯದ ಮೂಲವೆಂದರೆ ಭೂದತ್ತಿ ಅಥವಾ ಭೂಮಾನ್ಯ ಒಂದು ಸಣ್ಣ ಪ್ರಮಾಣದ ಸೆಸ್ ಸಂಗ್ರಹವು ಸಹಾ ಪಟ್ಟಣಸ್ವಮಿಯ ಇನ್ನೊಂದು ಆದಾಯದ ಮೂಲವಾಗಿತ್ತು. ಅವನು ಹಲವು ಕೊಡುಗೆಗಳು ಮತ್ತು ದತ್ತಿಗಳನ್ನು ಒದಗಿಸುತ್ತಿದ್ದನು. ನಾವು ಈ ಕೆಳಕಂಡ ಹೊಯ್ಸಳರ ಕಾಲದ ಸಾಕ್ಷಾಧಾರಗಳಿಂದ ಇದನ್ನು ಉದಾಹರಿಸಬಹುದು. ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಕ್ರಿ.ಶ. ೧೩೧೬ ಒಂದು ಶಾಸನವು ಪಟ್ಟಣಸ್ವಾಮಿ-ಚೊಕ್ಕಶೆಟ್ಟಿ ಹೊಮ್ಮಲಿಗೆ ನಾಡುವಿನ ರೈತರಾದ ಮಾಚನಾಯಕ ಮತ್ತು ಚೊಕ್ಕನಂದರು ಗಲ್ಲಹಾಳುವಿನಲ್ಲಿ ಸಂತೆ ಸ್ಥಾಪಿಸಿದ್ದಕ್ಕಾಗಿ ಭೂಮಿಯನ್ನು ಮತ್ತು ಕೆಲವು ತೆರಿಗೆಗಳನ್ನು ಕೊಡುಗೆಯಾಗಿ ನೀಡಿದರ ಬಗ್ಗೆ ಆ ದಾಖಲೆಯು ವಿವರಿಸುತ್ತದೆ.[೧೦] ಬೆಂಗಳೂರು ತಾಲ್ಲೂಕಿನ ಕ್ರಿ.ಶ.೧೩೩೨ರ ಒಂದು ದಾಖಲೆಯು ಮುಕ್ತಿಶೆಟ್ಟಿ ಎಂಬ ಚಿಕ್ಕಹುಂಡಿಯ ಪಟ್ಟಣಸ್ವಾಮಿ ಸ್ಥಾಪಿಸಿದ ಒಂದು ಸಂತೆಗಾಗಿ ಭೂಮಿಯನ್ನು ಕೊಡುಗೆಯಾಗಿ ನೀಡಿದ್ದಲ್ಲದೇ, ಸುಂಕಗಳು ಮತ್ತಿತರ ಪಾವತಿಗಳನ್ನು ಉದಾರವಾಗಿ ನೀಡಿದ್ದನು.[೧೧] ಕ್ರಿ.ಶ. ೧೩-೧೪ನೇ ಶತಮಾನದ ಮೂರನೆಯ ಬಲ್ಲಾಳನ ಆಳ್ವಿಕೆಯ ಟಿ.ನರಸೀಪುರ ತಾಲ್ಲೂಕು ಬೆಟ್ಟಹಳ್ಳಿಯ ಒಂದು ದಾಖಲೆಯು ತಲಕಾಡು ನಗರತ್ತರರು ಪಟ್ಟಣಸ್ವಾಮಿಗೆ ತರಿ ಜಮೀನನ್ನು ನೀಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ.[೧೨] ಕ್ರಿ.ಶ. ೧೨೫೩ರಲ್ಲಿ ನಂತರ ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಗಂಡಗೆರೆಯ ಪಟ್ಟಣಸ್ವಾಮಿಗಳಾದ ತಿವಾದಿಶೆಟ್ಟಿ, ಬುಕ್ಕಿಶೆಟ್ಟಿ ಮತ್ತು ಕೇತಿಶೆಟ್ಟಿ ಇವರುಗಳು ಕುಂಬಾರ ಮತ್ತು ದೇವಗೆರೆಯ ಜಮೀನನ್ನು ದೇವ ಮಾನ್ಯವಾಗಿ ಕೊಟ್ಟರು. ಈ ದತ್ತಿಯನ್ನು ಕಳಲೇಶ್ವರ ಉದಾರವಾಗಿ ನೀಡಿದರು ಮತ್ತು ಪಟ್ಟಣಸ್ವಾಮಿಯವರು ಈ ದತ್ತಿಯನ್ನು ಆ ದೇವಾಲಯದ ಪರವಾಗಿ ಸ್ವೀಕರಿಸಿ ದರು.[೧೩]

ಭೂದತ್ತಿಗಳೇ ಅಲ್ಲದೇ ಪಟ್ಟಣಸ್ವಾಮಿ ಮನೆಗಳು, ನಿವೇಶನ ಮತ್ತು ಎತ್ತುಗಳನ್ನು ತನ್ನ ಸೇವೆಗೆ ಪ್ರತಿಯಾಗಿ ಅಥವಾ ಕೊಡಿಗೆಯಾಗಿ ಕೆಲವು ಸಮಯದಲ್ಲಿ ಸ್ವೀಕರಿಸು ತ್ತಿದ್ದನು. ಇದಕ್ಕೆ ನಿದರ್ಶನವಾಗಿ ಕ್ರಿ.ಶ. ೧೩೨೮ರ ಚಾಮರಾಜ ನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಒಂದು ಶಾಸನವು ವಿಸ್ತೀರ್ಣದಲ್ಲಿ ದೊಡ್ಡ ಅಳತೆಯುಳ್ಳ ೬ ಮನೆಗಳನ್ನು ಪಟ್ಟಣಸ್ವಾಮಿಗೆ ಮಾನ್ಯವಾಗಿ ನೀಡಲಾಯಿತೆಂಬುದನ್ನು ಉಲ್ಲೇಖಿಸುತ್ತದೆ.[೧೪] ಕ್ರಿ.ಶ. ೧೩೩೧ರ ಗುಬ್ಬಿ ತಾಲ್ಲೂಕಿನ ಮತ್ತೊಂದು ಶಾಸನವು ವೀರಬಲ್ಲಾಳ ತ್ರೈಲೋಕ್ಯ

ಟ್ಟಣಸ್ವಾಮಿ ಕಾಳಿಶೆಟ್ಟಿಯ ಮಗ ಸಂಗಶೆಟ್ಟಿಯು ಸಂಪಿಗೆ ಂಬ ನಿವೇಶನವನ್ನು ಸುಂಕರಹಿತವಾಗಿ ಕೊಡುಗೆಯಾಗಿ ೀಡಿದನು.[೧೫] ಇದಕ್ಕೆ ಪ್ರತಿಯಾಗಿ ಎತ್ತುಗಳನ್ನು ದತ್ತಿಯಾಗಿ ೀಡಲಾಯಿತು. ಕ್ರಿ.ಶ. ೧೨೦೩ರ ಶಿವಮೊಗ್ಗ ತಾಲ್ಲೂಕಿನ ಂದು ದಾಖಲೆಯು ೧೦೦ ಎತ್ತುಗಳನ್ನು ಚಿಕ್ಕೇಶ್ವರ ೀವಾಲಯಕ್ಕೆ ದತ್ತಿಯಾಗಿ ನೀಡಲಾಯಿತು. ಅದರಲ್ಲಿ ೨೦ ತ್ತುಗಳನ್ನು ಪಟ್ಟಣಸ್ವಾಮಿ ಗಾಯಿಶೆಟ್ಟಿಗೆ ದತ್ತಿಯಾಗಿ ಂಡಲಾಯಿತು.[೧೬] ರಾಜ್ಯದ ಇತರೆ ಅಧಿಕಾರಿಗಳಂತೆ ಟ್ಟಣಸ್ವಾಮಿ ತನ್ನ ಜನೋಪಯೋಗಿ ಚಟುವಟಿಕೆಗಳಿಂದ ಸಿದ್ದನಾಗಿದ್ದನು. ಅವನು ದೇವಾಲಯಗಳ ನಮಾರ್ಣ ತ್ತು ಅವುಗಳಿಗೆ ಉದಾರ ದತ್ತಿಕೊಡುವುದರಿಂದ ಅವನು ಶಿಷ್ಟವಾದ ಅರ್ಹತೆಗಳಿಸುತ್ತಿದ್ದುದನ್ನು ಈ ಕೆಳಕಂಡ ಕ್ಷ್ಯಾಧಾರಗಳಿಂದ ತಿಳಿಯಬಹುದಾಗಿದೆ.

ಕ್ರಿ.ಶ. ೧೧೯೫ರ ಶ್ರವಣ ಬೆಳಗೊಳದ ಒಂದು ಸನವು ಎರಡನೇ ಬಲ್ಲಾಳನ ಪಟ್ಟಣಸ್ವಾಮಿ ನಾಗದೇವನ ರ್ಮಶ್ರದ್ದೆಯುಳ್ಳ ಕೆಲಸಗಳ ಬಗ್ಗೆ ದಾಖಲೆಯಾಗಿದೆ. ಈತನು ನ ಗುರು ನಯಕೀರ್ತಿಯ ನೆನಪಿಗಾಗಿ ನಗರ ನಾಲಯವನ್ನು ಕಟ್ಟಿಸಿದನು ಮತ್ತು ಕಲ್ಲು ಹಾಸಿದ ನೃತ್ಯ ಂಟಪವನ್ನು ಶ್ರವಣಬೆಳಗೊಳದ ಕಮಟ ಪಾರ್ಶ್ವ ಬಸದಿ ುಂದೆ ನಿರ್ಮಿಸಿದನು.[೧೭] ಕ್ರಿ.ಶ. ೧೧೪೧ರ ಕಡೂರು ಲ್ಲೂಕು, ಸೋಮನಹಳ್ಳಿಯ ಶಾಸನವು ಪಟ್ಟಣಸ್ವಾಮಿ ೋವಿಶೆಟ್ಟಿಯು ಆಸಂದಿ ನಾಡಿನ ಸೋಮನಹಳ್ಳಿಯಲ್ಲಿ ಭಿನವ ಸೋಮೇಶ್ವರ ದೇವರನ್ನು ಪ್ರತಿಷ್ಠಾಪಿಸಿದನು.[೧೮] ಶ. ೧೨೩೮ರ ಗುಬ್ಬಿ ತಾಲ್ಲೂಕಿನ ಮತ್ತೊಂದು ಶಾಸನವು ಟ್ಟೂರು ಪಟ್ಟಣಸ್ವಾಮಿ ನಿರ್ಮಿಸಿದ್ದ ದೊಡ್ಡ ಕೆರೆಯ ಭಾಗದ ಭೂಮಿಯನ್ನು ಸಂಪಿಗೆ ಮಲ್ಲಿಕಾರ್ಜುನ ದೇವರಿಗೆ ೀಡಿದ್ದನ್ನು ಉಲ್ಲೇಖಿಸುತ್ತದೆ.[೧೯]

ಕ್ರಿ.ಶ. ೧೨೧೪ರ ತಿಪಟೂರು ತಾಲ್ಲೂಕಿನ ಶಾಸನವು ಟ್ಟಣಸ್ವಾಮಿ ಮಹದೇವಶೆಟ್ಟಿಯು ಸಂತೆಯ ಸುಂಕದ ಕಿಯನ್ನು ಚನ್ನಕೇಶ್ವರ ದೇವರಿಗೆ ನೀಡಿದ್ದನ್ನು ತಿಳಿಸುತ್ತದೆ.[೨೦] ಶ. ೧೧೯೮ರ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ದ್ರಿಯ ಮತ್ತೊಂದು ದಾಖಲೆಯು ಶಾಂತಿನಾಥ ೀವಾಲಯದಲ್ಲಿ ನಂದಾದೀಪ ಮತ್ತು ನಿತ್ಯದೀಪೋತ್ಸವದ ಣ್ಣೆಯ ನಿರ್ವಹಣೆಗಾಗಿ ಭೂದತ್ತಿ ನೀಡಿದ ಬಗ್ಗೆ ಲ್ಲೇಖಿಸುತ್ತದೆ.[೨೧] ಕ್ರಿ.ಶ. ೧೨೨೦ರ ಅರಸೀಕೆರೆ ತಾಲ್ಲೂಕಿನ ಖಲೆಯು ಪಟ್ಟಣಸ್ವಾಮಿ ಕಾಲ್ಲೆಶೆಟ್ಟಿ ಒಂದು ಅಂಗಡಿ ತ್ತು ೨ ಗದ್ಯಾಣವನ್ನು ಶಾಂತಿನಾಥ ದೇವರ ಪೂಜೆಗಾಗಿ ತ್ತಿಯಾಗಿ ನೀಡಿದನೆಂದು ತಿಳಿಸುತ್ತದೆ.[೨೨] ಕ್ರಿ.ಶ. ೧೨೭೩ರ ದೇ ತಾಲ್ಲೂಕಿನ ದಾಖಲೆಯು ಪಟ್ಟಣಸ್ವಾಮಿ ಶಂಕರ ಧನಸಹಾಯವನ್ನು ಬೇಲೂರಿನ ಹೊರಗಡೆಯಿಂದ ಬಂದ ಬ್ರಾಹ್ಮಣರ ಊಟೋಪಚಾರಕ್ಕಾಗಿ ದತ್ತಿ ನೀಡಿದನೆಂದು ತಿಳಿಸುತ್ತದೆ.

ಈ ಮೇಲೆ ಹೇಳಿದ ಧರ್ಮಕಾರ್ಯಗಳ ಜೊತೆಗೆ ಪಟ್ಟಣಸ್ವಾಮಿಯು ಗ್ರಾಮಗಳ ರಕ್ಷಣಾ ಕಾರ್ಯಗಳನ್ನು ಮಾಡುತ್ತಿದ್ದನು. ಶತ್ರುಗಳು ಗ್ರಾಮಗಳ ಮೇಲೆ ಆಕ್ರಮಣ ಮಾಡಿದಾಗ ಅವರುಗಳ ರಕ್ಷಣಾಕಾರ್ಯ ಇವನ ಹೊಣೆಯಾಗಿತ್ತು. ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಅಗ್ರಹಾರ ಬಾಚಹಳ್ಳಿಯ ಒಂದು ದಾಖಲೆಯು ಮಲೆಯ ಎಂಬ ಪಟ್ಟಣಸ್ವಾಮಿ ಕನ್ನೆಯನ ವಿರುದ್ದ ಹೋರಾಡಿ ಬಾಚಹಳ್ಳಿಯನ್ನು ರಕ್ಷಿಸಿ ನಂತರ ಮಡಿದನೆಂದು ತಿಳಿಸುತ್ತದೆ.[೨೩] ಮುಂದೆ ಪಟ್ಟಣಸ್ವಾಮಿಯ ಸಮ್ಮತಿಯ ಮೇರೆಗೆ ಅದನ್ನು ಮಾನ್ಯವನ್ನಾಗಿ ಪರಿಗಣಿಸಲಾಯಿತು. ಕ್ರಿ.ಶ. ೧೨೭೭ ರ ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲ್ಲೂಕಿನ ಒಂದು ದಾಖಲೆಯು ಪಟ್ಟಣಸ್ವಾಮಿ ದಾಸಶೆಟ್ಟಿ ಮೂಗೂರು ಗ್ರಾಮವನ್ನು ದತ್ತಿಯನ್ನಾಗಿ ನೀಡಿ ಅ ನಂತರ ಅದನ್ನು ನಗರವನ್ನಾಗಿ ಪರಿವರ್ತಿಸಲಾಯಿತು.

ಹೊಯ್ಸಳರು ವಾಣಿಜ್ಯಕೇಂದ್ರಗಳು, ನಗರ ವಾಣಿಜ್ಯ ಕೇಂದ್ರಗಳ ಪಾತ್ರದ ಬಗ್ಗೆ ತಿಳಿದಿದ್ದು, ಅಗತ್ಯವಾದಾಗಲೆಲ್ಲಾ ಪಟ್ಟಣಗಳನ್ನು ಸ್ಥಾಪಿಸಲು ತಮ್ಮ ಅಧಿಕಾರಿಗಳನ್ನು ಪ್ರೋತ್ಸಾಹಿಸುತ್ತಿದ್ದರು. ವರ್ತಕರು ಅಥವಾ ಸೆಟ್ಟಿಯರೊಂದಿಗೆ ಒಳ್ಳೆಯ ಸಂಬಂಧಗಳನ್ನು ಹೊಂದಿದ್ದರು. ಸೆಟ್ಟಿಗಳೂ ಕೂಡ ಹೊಯ್ಸಳ ಚಕ್ರವರ್ತಿಗೆ ತಮ್ಮ ಗೌರವ ನಿಷ್ಠೆ ತೋರಿಸಲು ಉತ್ಸುಕರಾಗುತ್ತಿದ್ದರು. ರಾಜಧಾನಿಗಳಲ್ಲಿ ಧಾರ್ಮಿಕ ಕಟ್ಟಡಗಳನ್ನು ಕಟ್ಟಿಸುವುದರಲ್ಲಿ ಅವರ ಒಲವು ವ್ಯಕ್ತವಾಗುತ್ತಿದ್ದಿತ್ತು. ಕೆಲವು ಸಂದರ್ಭಗಳಲ್ಲಿ ಚಕ್ರವರ್ತಿಯ ಹೆಸರಿನಲ್ಲಿ ದತ್ತಿಗಳನ್ನು ಬಿಡುತ್ತಿದ್ದರು. ಶ್ರೀಮಂತ ವರ್ತಕನಾದ ದೇವಿಸೆಟ್ಟಿ ಎನ್ನುವವನು ದೋರಸಮುದ್ರದಲ್ಲೊಂದು ಜಿನಾಲಯವನ್ನು ನಿರ್ಮಿಸಿ ಅದಕ್ಕೆ ವೀರಬಲ್ಲಾಳ ಜಿನಾಲಯವೆಂದು ಹೆಸರಿಟ್ಟನು. ಶ್ರೀಮಂತ ಜೈನ ವರ್ತಕರು ತಮ್ಮ ಘನತೆಯನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಬಯಸುತ್ತಿದ್ದರು. ಮರಿಶೆಟ್ಟಿ, ಕಾಮಿಶೆಟ್ಟಿ, ಭರಸೆಟ್ಟಿ ಮತ್ತು ರಾಜಸೆಟ್ಟಿ ಇವರು ದೋರ ಸಮುದ್ರದಲ್ಲಿ ಅಭಿನವ ಶಾಂತಿನಾಥನಗಾಗಿ ಒಂದು ಸುಂದರ ವಾದ ಜಿನಾಲಯವನ್ನು ಕಟ್ಟಿಸಿದರು.[೨೪]

ಈ ಸಂಗತಿಗಳ ವಿಶ್ಲೇಷಣೆಯು ಹೊಯ್ಸಳರ ಅವಧಿಯಲ್ಲಿ ಪಟ್ಟಣಸ್ವಾಮಿ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ನಿರ್ವಹಿಸಿದ್ದನೆಂಬುದನ್ನು ಸೂಚಿಸುತ್ತವೆ. ಪಟ್ಟಣಸ್ವಾಮಿಯು ಸ್ಥಳೀಯ ವ್ಯಾಪಾರಿ ಸಂಘಟನೆಯ ಮುಖಂಡನಾಗಿ ವ್ಯಾಪಾರ

ವಾಣಿಜ್ಯಗಳು, ಸಂತೆಗಳು, ವ್ಯಾಪಾರ ಕೇಂದ್ರಗಳು ಹಾಗೂ ಆಂತರಿಕ ವ್ಯಾಪಾರ ಅಭಿವೃದ್ಧಿಗೊಳ್ಳುವಲ್ಲಿ ಪ್ರಧಾನ ಪಾತ್ರ ವಹಿಸಿದ್ದನು. ಸಾರ್ವಜನಿಕ ಆರೋಗ್ಯ ಕಾಪಾಡುವಲ್ಲಿ ಇವನು ಬಹುಮುಖ್ಯವಾದ ವ್ಯಕ್ತಿಯಾಗಿದ್ದನು. ಧರ್ಮಛತ್ರಗಳು, ವ್ಯಾಪಾರಗಳು, ರಸ್ತೆಗಳ ನಿರ್ವಹಣೆ ಮತ್ತು ಇನ್ನಿತರ ಜನೋಪಯೋಗಿ ಕಾರ್ಯಗಳಲ್ಲೂ ತೊಡಗಿಸಿಕೊಂಡಿದ್ದನು.

## ಆಧಾರಸೂಚಿ


೧. Epigraphia carnatica.vol.XV.Bl.332.P.86.

೨. E.C.(old) vol.IV.Kp.2.P.227.

೩. E.C.Vol.VII.Ng.118.P.118.

೪. E.C.Vol.II.Sb.457.P.278.

೫. E.C.(old)Vol.XI.Dg.105.P.173.

೬ E.C.Vol.IV.Yl.62.P.744.

೭. E.C.Vol.III.Ng.354.P.406.

೮. ಕರ್ನಾಟಕ ಚರಿತ್ರೆ ಸಂ.೨.ಹಂಪಿ.ಪುಟ.೨೦೭.೨೦೮.

೯. E.C.Vol.II.Sb.301.P.168.

೧೦. E.C.(old) Vol.IX.Kanakanahalli.6.P.31.

೧೧. E.C.(old) Vol.IX.Bg.61.P.13.

೧೨. E.C.Vol.V.Tn.87.P472.

೧೩. E.C.Vol.VII.Ml.23.P.360.

೧೪. E.C.Vol.IV.Yl.62.P.744.

೧೫. E.C.(old) Vol.XII.Gb.30.P.69.

೧೬. E.C.(old) Vol.Pt.1.Sm.88.P.34.

೧೭. E.C.Vol.II.Sb.457.P.278.

೧೮. E.C.(old) Vol.VI.Kd.102.P.59.

೧೯. E.C.Vol.XII.Gb.31.P.23.

೨೦. E.C.Vol.XII.Tm.48.

೨೧. E.C.Vol.XIII.Sm.P.34.

೨೨. E.C.Vol.V.AK.77.P.325.

೨೩. E.C.Vol.VI.Kr.Pet.82.P.66.

೨೪. ಕರ್ನಾಟಕ ಚರಿತ್ರೆ ಸಂಪುಟ–೨. ಹಂಪಿ ಪುಟ ೨೧೧.



# ಶಾಸನೋಕ್ತ ನಿಡುವಣಿಯ ಈಶ್ವರಕವಿ: ಮೂಲಸ್ಥಳ ಕುರಿತು ಜಿಜ್ಞಾಸೆ

ಡಾ. ಅಮರೇಶ ಯತಗಲ್*

**ಸಾ**ಹಿತ್ಯ ಚರಿತ್ರೆಯ ಛಂದಃಕ್ಷೇತ್ರದ ನಾಲ್ಕು ಪ್ರಮುಖ ...ತಿಗಳೆಂದರೆ, ನಾಗವರ್ಮನ–ಛಂದೋಂಬುಧಿ, ...ಶ್ವರಕವಿಯ – ಕವಿಜಿಹ್ವಾಬಂಧನಂ, ಗುಣಚಂದ್ರನ – ...ಂದಸ್ಸಾರ, ವೀರಭದ್ರನ – ನಂದಿಛಂದೋರ್ಣವ. ಇವರಲ್ಲಿ ...ಶ್ವರಕವಿಯು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ...ಪನ್ನು ಮೂಡಿಸಿದವನು. ಈತ 'ಕವಿಜಿಹ್ವಾಬಂಧನಂ' ...ತಿಯ ಕರ್ತೃ. ಈ ಕೃತಿಯು ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ...ಲಕ್ಷಣವಾದ ಗ್ರಂಥ. 'ಕವಿಜಿಹ್ವಾಬಂಧನಂ' ಎಂದರೆ "ಕವಿಯ ...ಲಗೆ ಕಟ್ಟು"[೧]. ಈ ಕವಿಯ ತಂದೆಯೂ ಕವಿಯಾಗಿದ್ದನಂತೆ. ...ವಿಜಿಹ್ವಾಬಂಧನಂ'ದಲ್ಲಿ ೭ನೆಯ ಪದ್ಯದಲ್ಲಿ 'ಕವಿಸತ್ತ್ರಟಯಕಃ ...ಪೇಶನ ಸುಕಮಾರಂ' ಎಂದು ಹೇಳಲಾಗಿದೆ. ಈತನ ...ಂದೆ ಕಚ್ಚುಟೇಶ, ಈಶ್ವರಕವಿಗೆ ಅಭಿನವಕೇಶಿರಾಜ ಅಥವಾ ...ಭಿನವಕೇಶವ[೨] ಎಂಬ ಬಿರುದಿತ್ತು.

ಆಂಧ್ರ ಕವಿಗಳು ಉಪಯೋಗಿಸುವ 'ವಡಿ'ಗಳನ್ನು ...ೂಟ್ಟ ಮೊದಲನೆಯ ಬಾರಿಗೆ ಕನ್ನಡದಲ್ಲಿ ಪ್ರಯೋಗ ...ಾಡಿದ ಕೀರ್ತಿಗೆ ಭಾಜನನಾದ ವ್ಯಕ್ತಿ ಈತ. ಪಾದಾದಿಯಲ್ಲಿ ...ಂದ ಅಕ್ಷರವು (ಅಥವಾ ಅದರ ಸವರ್ಣವು) ಯತಿ ...ಥಾನದಲ್ಲಿಯೂ ಬಂದರೆ ಅದಕ್ಕೆ 'ವಡಿ' ಎಂದು ಹೆಸರು. ...ದು ಯತಿಯೇ ಅಲ್ಲ. 'ಯತಿ' ಎಂದರೆ 'ವಿರಾಮಸ್ಥಾನ'. ...ದ್ದರಿಂದ ಅದನ್ನು 'ಯತಿ' ಅಥವಾ 'ಯತಿ ವಿಶೇಷ' ...ನ್ನುವುದಕ್ಕಿಂತ 'ಪ್ರಾಸವಿಶೇಷ' ಎನ್ನುವುದು ಸೂಕ್ತವಾದುದು.[೩]

ಈಶ್ವರಕವಿಯು ಕ್ರಿ.ಶ. ಸು. ೧೫೦೦ರಲ್ಲಿದ್ದವನು. ಈ ...ರಿತು ಅನೇಕ ವಿದ್ವಾಂಸರು ಬೇರೆ ಬೇರೆ ಕಾಲಘಟ್ಟಗಳನ್ನು ...ೀಳುತ್ತಾರೆ. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಯವರು ಕ್ರಿ.ಶ. ...೫೦೦, ಕಿಟ್ಟೆಲ್‌ರವರು ೧೬ನೇ ಶತಮಾನದ ಆದಿ, ಪ್ರೊ. ...ಚ್. ಚನ್ನಕೇಶವ ಅಯ್ಯಂಗಾರ್ ಕ್ರಿ.ಶ. ಸು. ೧೭೦೦, ...ಂಡಿತ ಹೆಚ್. ಶೇಷಯ್ಯಂಗಾರ್ ಕ್ರಿ.ಶ. ೧೭೩೦ ಎಂದು ...ಭಿಪ್ರಾಯಪಡುತ್ತಾರೆ. ಆದರೆ ಈತನ ಕಾಲದ ಕುರಿತಾಗಿ ...ಮಗೆ ಕೆಲವು ಸುಳಿವುಗಳು ಸಿಗುತ್ತವೆ. ಈತ ತನ್ನನ್ನು ತಾನು 'ಅಭಿನವ ಕೇಶವ', 'ಅಭಿನವ ಕೇಶಿರಾಜ'ನೆಂದು ಕರೆದುಕೊಂಡಿದ್ದಾನೆ. ಇವು ಈತನಿಗಿದ್ದ ಬಿರುದುಗಳಾಗಿವೆ. ಅಂದರೆ ಈತನು ಕೇಶಿರಾಜನ ನಂತರ ಇದ್ದವನು ಎಂಬುದನ್ನು ಈತನ ಬಿರುದೇ ಸಾಕ್ಷೀಕರಿಸುತ್ತದೆ. ಕನಕದಾಸನು (ಕ್ರಿ.ಶ. ೧೬ನೇ ಶತಮಾನ) ಮೋಹನ ತರಂಗಿಣಿಯಲ್ಲಿ ತೆಲುಗಿನ ವಡಿ ಪ್ರಾಸ ಉಪಯೋಗಿಸಿದ್ದಾರೆ. ಹೀಗಾಗಿ ಕನಕದಾಸನಿಗಿಂತ ಈಶ್ವರಕವಿ ಮೊದಲಿದ್ದವನು. ವೀರಭದ್ರಕವಿ ವಿರಚಿತ ನಂದಿ ಛಂದಸ್ಸಿನಲ್ಲಿ ಕವಿಜಿಹ್ವಾಬಂಧನಂದ ೩ ಪದ್ಯಗಳಿವೆ. ಹೀಗಾಗಿ ಈತನಿಗಿಂತ ಈಶ್ವರಕವಿ ಮೊದಲಿದ್ದವನು. ಈತನು ತೆಲುಗಿನ ಭೀಮಣ (II–೨೦ನೇ ಪದ್ಯ)ನನ್ನು ಈಶ್ವರಕವಿ ತನ್ನ ಕೃತಿಯಲ್ಲಿ ಸ್ಮರಿಸುತ್ತಾನೆ. ಈತ ೧೨ನೇ ಶತಮಾನದಲ್ಲಿದ್ದವನು. ತೆಲುಗಿನಲ್ಲಿ ವಡಿ ಪ್ರಯೋಗವನ್ನು ಹೇಳಿದವನು ಇವನು. ಹಾಗೂ ಆಂಧ್ರದ ಅಪ್ಪಕವಿಯ (ಸು. ೧೪೫೦) ನಂತರದವನು. ಹೀಗಾಗಿ ಈಶ್ವರಕವಿ ೧೨ನೇ ಶತಮಾನದ ನಂತರ ೧೫ನೇ ಶತಮಾನಕ್ಕಿಂತ ಮೊದಲಿದ್ದವನೆಂಬ ಅಭಿಪ್ರಾಯಕ್ಕೆ ಬಹುತೇಕ ವಿದ್ವಾಂಸರು ಬರುತ್ತಾರೆ.

'ಕವಿಜಿಹ್ವಾಬಂಧನಂ' ಕೃತಿಯ ಪ್ರತಿಗಳು ಮೂರು ಮುದ್ರಣಗಳಲ್ಲಾಗಿವೆ. ೧೯೩೯ರಲ್ಲಿ ಮೊಟ್ಟಮೊದಲ ಬಾರಿಗೆ ಪಂಡಿತ ಎಚ್. ಶೇಷಯ್ಯಂಗಾರ್ಯರು ಮದ್ರಾಸಿನ Annuals of Oriental Research (ಸಂ. III ಮತ್ತು IV) ಪತ್ರಿಕೆಯಲ್ಲಿ ಪ್ರಕಟಿಸಿದರು. ೧೯೫೦ರಲ್ಲಿ ವಿದ್ಯಾರತ್ನ ಆರ್.ಎಸ್. ಪಂಚಮುಖಿಯವರು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಿಂದ ಪ್ರಕಟಿಸಿದರೆ, ೧೯೫೨ರಲ್ಲಿ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿಸಿದರು. ಕೆಲವು ವಿದ್ವಾಂಸರು ಈ ಕುರಿತು ಲೇಖನಗಳನ್ನೂ ಬರೆದಿದ್ದಾರೆ. ಅವರಲ್ಲಿ ಕೆಲವರನ್ನು ಹೆಸರಿಸುವುದಾದರೆ, ರೆವರೆಂಡ್ ಫರ್ಡಿನೆಂಟ್ ಕಿಟ್ಟೆಲ್ (ಛಂದೋಂಬುಧಿಯ ಪೀಠಿಕೆ–LXI), ರೈಸ್ (ಶಬ್ದಾನುಶಾಸನದ ಪೀಠಿಕೆ), ಎಂ.ವಿ. ಸೀತಾರಾಮಯ್ಯ, ಆರ್. ನರಸಿಂಹಾಚಾರ್ಯ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ರಾಣಿ ಚನ್ನಮ್ಮ ವಿವಿ, ಸ್ನಾತಕೋತ್ತರ ಕೇಂದ್ರ, ತೊರವಿ, ವಿಜಯಪುರ.

(ಕವಿಚರಿತೆ, ಸಂಪುಟ-೨, ಪುಟ-೧೫೦-೧೫೧), ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ, ಡಾ. ಎಲ್. ಬಸವರಾಜು ಇನ್ನೂ ಮುಂತಾದವರು ಪ್ರಮುಖರುಗಳು. ಇವರುಗಳು 'ಈಶ್ವರಕವಿ' ಹಾಗೂ 'ಕವಿಜಿಹ್ವಾಬಂಧನಂ' ಕೃತಿಯ ಕುರಿತು ಬರೆದಿದ್ದಾರೆ. ಆದರೆ ಇವರುಗಳೆಲ್ಲ ಕವಿಯ ಮೂಲಸ್ಥಳದ ಕುರಿತು ಭಿನ್ನಾಭಿಪ್ರಾಯಗಳನ್ನು ತಾಳಿರುವುದುಂಟು.

ಈಶ್ವರಕವಿಯು ತನ್ನ 'ಕವಿಜಿಹ್ವಾಬಂಧನಂ'ದ ಪ್ರಥಮಾಶ್ವಾಸದಲ್ಲಿ ನಿಡುವಣಿಯ ಒಡೆಯನಾದ ಕಲ್ಲಿನಾಥ ನನ್ನು ಈ ರೀತಿ ಸ್ಮರಿಸುತ್ತಾನೆ-

**"ಶ್ರೀ ಮದ್ಗಂಗಾತತಂಗಾಂಕಿತ ಕಪಿಲಜಟಾಜೂಟ**
**ಭಾರಾಭಿರಾಮಂ**
**ವಾಮಾಂಗಾಲಿಂಗ ಸಂಗಪ್ರವರಗಿಸುತಾ ಚಾರುಲೀಲಾ**
**ವಿಲಾಸಂ।**
**ಭೀಮಂ ಕಾಮಾಂಗನಾಶಜ್ವಲಿತಚಟುಲಭಾಳ ಪ್ರತಾಪಾಗ್ನಿ**
**ನೇತ್ರಂ**
**ಪ್ರೇಮಂ ಪರ್ವಿಕ್ಕೆ ನಂಮೊಳ್ ನಿಡುವಣಿಗೊಡೆಯಂ**
**ಕಲ್ಲಿನಾಥಾಖ್ಯಲಿಂಗಂ॥"**[೪]

ಈ ಎಲ್ಲಾ ವಿದ್ವಾಂಸರುಗಳು ಈಶ್ವರ ಕವಿಯ ಸ್ಥಳದ ಕುರಿತು ಬರೆಯುತ್ತಾ, "ಈತನ ಮೂಲ ಸ್ಥಳವು ಬಿಜಾಪುರ (ಇಂದಿನ ವಿಜಯಪುರ) ಜಿಲ್ಲೆಯ ನಿಡೋಣಿಯೋ? ಅಥವಾ ಹಾಸದ ಜಿಲ್ಲೆಯ ನಿಡುವಾನಿಯೋ?" ಎಂದು ಸಂಶಯ ವ್ಯಕ್ತಪಡಿಸುತ್ತಾರೆ. ಆದರೆ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಈ ಸ್ಥಳದ ಕುರಿತು ತಿಳಿದುಕೊಳ್ಳಲು ರಾವ್‌ಬಹದ್ದೂರ್ ಮತ್ತು ಬಿಜಾಪುರದ ಫ.ಗು. ಹಳಕಟ್ಟಿ ಅವರಿಗೆ ಪತ್ರವನ್ನು ಬರೆಯುತ್ತಾರೆ. ನಿಡೋಣಿ ಊರಿನ ಕುರಿತು ಅಲ್ಲಿ ಕಲ್ಲಿನಾಥ ದೇವಾಲಯ ಇದೆಯೋ, ಇಲ್ಲೊ ಎಂಬುದನ್ನು ತಿಳಿಸಲು ಕೇಳಿಕೊಳ್ಳುತ್ತಾರೆ. ಆಗ ಫ.ಗು. ಹಳಕಟ್ಟಿಯವರು ಸೆಪ್ಟಂಬರ್ ೮, ೧೯೫೫ರಲ್ಲಿ ಎ.ಆರ್. ಕೃಷ್ಣಶಾಸ್ತ್ರಿಯವರಿಗೆ ಪತ್ರವನ್ನು ಬರೆಯುತ್ತಾರೆ. ಅದು ಇಂತಿದೆ : "Niduvani is a big village in the Bijapur Taluka, 12 miles distance form Bijapur city it is called Nidoni now by the People. I have passed many a time by the village, but have not actually gone in to the village. I Shall inquire about the temple you Refer to. If you can inform the Particulars about the temple about which you intend to have Special information, I Shall make detailed local inquiry and inform you"........[೫]

ಆದರೆ ಫ.ಗು. ಹಳಕಟ್ಟಿಯವರು ಬಿಡುವಿಲ್ಲದ ಕೆಲಸಗಳ ಮಧ್ಯೆ ನಿಡುವಣಿಗೆ ಹೋಗುವುದು ಆಗಲಿಲ್ಲವೆಂದು ಕಾಣುತ್ತದೆ. ಹೀಗಾಗಿ ಎ.ಆರ್. ಕೃಷ್ಣಶಾಸ್ತ್ರಿಯವರಿಗೆ ಮಾಹಿತಿಯನ್ನು ನೀಡಲಾಗಲಿಲ್ಲವೆಂದು ತೋರುತ್ತದೆ. ಹೀಗಾಗಿ ಕೃಷ್ಣಶಾಸ್ತ್ರಿ ಯವರು ೧೯೫೧ರಲ್ಲಿ ಹಾಗೆಯೇ ಈ ಕೃತಿಯನ್ನು ಪ್ರಕಟಿಸಿದರು.

ನಾನು ಈ ಅಂಶವನ್ನು ಗಮನಿಸಿ ಬಿಜಾಪುರ ಜಿಲ್ಲೆಯ ಇಂದಿನ 'ನಿಡೋಣಿ'ಗೆ ಹಾಗೂ ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಹಳ್ಳಿಮೈಸೂರು ಹೋಬಳಿಯ ನಿಡುವಣಿ ಗ್ರಾಮಕ್ಕೆ ಕ್ಷೇತ್ರಕಾರ್ಯವನ್ನು ಕೈಗೊಂಡೆನು. ಅಲ್ಲಿ ಸಂಶೋಧನೆಯನ್ನು ಕೈಗೊಂಡಾಗ ಈಶ್ವರಕವಿ ಉಲ್ಲೇಖಿಸಿದ 'ಕಲ್ಲಿನಾಥ ದೇವಾಲಯ' ಇಲ್ಲ.

ಅಲ್ಲದೇ ನಿಡುವಣಿಯಲ್ಲಿ ಎರಡು ಶಾಸನಗಳಿವೆ. ಗ್ರಾಮದ ಉತ್ತರಕ್ಕೆ ಹೊಲದಲ್ಲಿ ನೆಟ್ಟಿರುವ ವೀರಗಲ್ಲಿನ ಮೇಲೆ ಬರೆಯಲ್ಪಟ್ಟ ಕ್ರಿ.ಶ. ೯೭೦ರ ಶಾಸನದಲ್ಲಿ 'ನಿಡುವಾನಿ'[೬] ಎಂದು ಉಲ್ಲೇಖವಾಗಿದೆ. ಇದು ಆ ಊರಿನ ಹೆಸರು.

ಇದೇ ಊರಿನ ಆಂಜನೇಯ ದೇವಸ್ಥಾನದ ಮುಂದೆ ನೆಟ್ಟಿರುವ ಕಲ್ಲಿನ ಮೇಲೆ ಇನ್ನೊಂದು ಶಾಸನವಿದೆ. ಇದು ೧೬ನೇ ಶತಮಾನದ ಶಾಸನ. ಇಲ್ಲಿ 'ನಿಡುವೊಣಿ' ಗ್ರಾಮದ ಉಲ್ಲೇಖವಿದೆ. ಈ ಊರಿಗೆ 'ಲಕ್ಷ್ಮಣಪುರ'[೭] ವೆಂದು ಪ್ರತಿ ನಾಮಕರಣ ಮಾಡಲಾಯಿತು ಎಂದು ಶಾಸನವು ವಿವರಣೆಯನ್ನು ನೀಡುತ್ತದೆ.

ಬಿಜಾಪುರ ಜಿಲ್ಲೆಯ ನಿಡೋಣಿಯಲ್ಲಿಯೂ ನಾಲ್ಕು ಶಾಸನಗಳಿವೆ. ನಿಡೋಣಿಯ ಗ್ರಾಮದ ಪಾಟೀಲರ ಮನೆಯ ಸಮೀಪದಲ್ಲಿರುವ ಕಲ್ಲಿನ ಮೇಲಿರುವ ಕ್ರಿ.ಶ. ೧೧೧೫ರ ಕಲ್ಯಾಣ ಚಾಲುಕ್ಯರ ಕಾಲದ ಶಾಸನದಲ್ಲಿ 'ನಿಡುವಣಿ'[೮] ಎಂದು ಈ ಊರಿನ ಉಲ್ಲೇಖವಿದೆ. ಇದೇ ಗ್ರಾಮದ ಹನುಮಂತ ದೇವರ ದೇವಸ್ಥಾನದ ಪೂರ್ವದ ಗೋಡೆಗೆ ಸೇರಿಸಿರುವ ಕಲ್ಲಿನ ಮೇಲಿನ ಕ್ರಿ.ಶ. ೧೧೭೦ರ ಶಾಸನವು ಕಳಚೂರಿಯರ ಕಾಲದ್ದು. ಈ ಶಾಸನದಲ್ಲಿ 'ಅಗ್ರಹಾರ ನಿಡುವಣಿ'[೯] ಎಂಬ ಉಲ್ಲೇಖವಿದೆ. ಊರಬಾಗಿಲ ಬಳಿಯಿರುವ ಬಾವಿಯ ಪಾರ್ಶ್ವ ಗೋಡೆಗೆ ಸೇರಿಸಿ ಕಟ್ಟಿರುವ ಕಲ್ಲಿನ ಮೇಲಿನ ಕ್ರಿ.ಶ. ೧೨೯೯ರ ಶಾಸನ ಯಾದವರ ಕಾಲಕ್ಕೆ ಸೇರಿದ್ದುದು. ಇದರಲ್ಲಿಯೂ 'ಅಗ್ರಹಾರ ನಿಡುವಣಿ'[೧೦] ಎಂದು ಉಲ್ಲೇಖವಾಗಿದೆ. ಅದೇ ಸ್ಥಳದ ಮತ್ತೊಂದು ಕಲ್ಲಿನ ಮೇಲಿನ ಶಾಸನವು ಕ್ರಿ.ಶ. ೧೨೫೫ರ ಯಾದವರ ಕಾಲದ್ದು, ಇಲ್ಲಿಯೂ 'ಅಗ್ರಹಾರ ನಿಡುವಣಿ'[೧೧] ಯ ಉಲ್ಲೇಖವಿದೆ.

ಈ ಎರಡೂ ಊರಿನ ಶಾಸನಗಳನ್ನು ಗಮನಿಸಲಾಗಿ ಹಾಸನ ಜಿಲ್ಲೆಯ ಇಂದಿನ 'ನಿಡುವಣಿ'ಯು ಶಾಸನಗಳಲ್ಲಿ 'ನಿಡುವಾನಿ' (ಕ್ರಿ.ಶ. ೯೭೦), ನಿಡುವೊಣಿ (೧೬ನೇ ಶತಮಾನ), 'ನಿಡೋಣಿ' (೧೬ನೇ ಶತಮಾನ) ಇದ್ದುದು, ಇಂದು ಆ ಊರು 'ನಿಡುವಾಣಿ' ಎಂದು ಕರೆಯಲ್ಪಡುತ್ತದೆ. ಆದರೆ

ಶ್ವರಕವಿ ಉಲ್ಲೇಖಿಸಿದ ನಿಡುವಣಿಯು ಅಂದಿನ ಹಾಸನ ಲ್ಲೆಯ ಶಾಸನಗಳಲ್ಲಿ ಉಲ್ಲೇಖವಿಲ್ಲ. ಆದರೆ ಇತ್ತೀಚಿಗೆ ಮು ಮಾರ್ಪಾಡುಗೊಂಡು 'ನಿಡುವಾಣಿ' ಆಗಿದೆ. ಆದರೆ ಜಯಪುರ ಜಿಲ್ಲೆಯ ಇಂದಿನ ನಿಡೋಣಿಯು ಅಂದಿನ ಲ್ಕು ಶಾಸನಗಳಲ್ಲಿ ಸ್ಪಷ್ಟವಾಗಿ 'ನಿಡುವಣಿ' ಎಂದು ಲ್ಲೇಖಗೊಂಡಿದೆ. ಈಗ ಮಾತ್ರ 'ನಿಡೋಣಿ' ಎಂದು ರೆಯಲ್ಪಡುತ್ತದೆ. ಈ ನಿಡುವಣಿಯು ಈಶ್ವರಕವಿ ಉಲ್ಲೇಖಿಸಿದ ಡುವಣಿ' ಎಂಬ ಊರು ಬಿಜಾಪುರ ಶಾಸನಗಳಲ್ಲಿ ಷ್ಟವಾಗಿರುವುದನ್ನು ಗಮನಿಸಬಹುದು.



ಈಶ್ವರಕವಿ ಉಲ್ಲೇಖಿಸಿದ ಕಲ್ಲಿನಾಥ ದೇವಾಲಯದ ಮುಂಭಾಗ



ಈಶ್ವರಕವಿ ಉಲ್ಲೇಖಿಸಿದ ಕಲ್ಲಿನಾಥ ದೇವಾಲಯದ ಹಿಂದಿನ ನೋಟ



ಶ್ವರಕವಿ ಉಲ್ಲೇಖಿಸಿದ ಕಲ್ಲಿನಾಥ ದೇವಾಲಯದ ಒಳಗಿರುವ ಈಶ್ವರಲಿಂಗ

ಬಿಜಾಪುರದ ಇಂದಿನ ನಿಡೋಣಿಗೆ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಅಲ್ಲಿ ಊರಿನ ದಕ್ಷಿಣ ದಿಕ್ಕಿಗೆ ಕಲ್ಲಿನಾಥ ದೇವಾಲಯವಿದೆ. ಅದು ಶಿಥಿಲಾವಸ್ಥೆಯಲ್ಲಿದ್ದಾಗ ನಂತರದಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಶಿಥಿಲಗೊಂಡ ಈ ದೇವಾಲಯದ ಕಲ್ಲುಗಳನ್ನು ಒಂದೆಡೆ ಹಾಕಲಾಗಿದೆ. ಕಲ್ಲಿನಾಥನು ನಿಡೋಣಿಯ ಬಹುತೇಕ ಜನತೆಯ ಆರಾಧ್ಯ ದೈವನಾಗಿದ್ದಾನೆ. ಕೆಲವರ ಮನದೇವರೂ ಹೌದು.



ಮುರಿಗೆಪ್ಪ ಶಿವಪ್ಪ ಗದ್ಯಾಳರ ಹೊಲದಲ್ಲಿಯ ಈಶ್ವರ ದೇವಾಲಯ (ಇತ್ತೀಚಿನದು)



ವಿರಕ್ತಮಠದ ಓಣಿಯ ಸಂದೀಪ ಪಾಟೀಲರ ಮನೆಯ ಮುಂದಿನ ಕಲ್ಲಿನಾಥ ದೇವಾಲಯ

ಕೆಲವರು ಇತ್ತೀಚಿಗೆ ತಮ್ಮ ಹೊಲದಲ್ಲಿಯೇ ಕಲ್ಲಿನಾಥನ ಸಣ್ಣ ದೇವಾಲಯಗಳನ್ನು ನಿರ್ಮಿಸಿಕೊಂಡ ಉದಾಹರಣೆಗಳಿವೆ. ಮುರಿಗೆಪ್ಪ ಶಿವಪ್ಪ ಗದ್ಯಾಳರ ಹೊಲದಲ್ಲಿ, ಶಿರಗುಪ್ಪಿ ಬಸವರಾಜಪ್ಪನವರ ಹೊಲದಲ್ಲಿ, ವಿರಕ್ತಮಠದ ಓಣಿಯ ಸಂದೀಪ ಪಾಟೀಲ್ ಅವರ ಮನೆಯ ಮುಂದೆ ಕಲ್ಲಿನಾಥ ದೇವಾಲಯಗಳಿವೆ. ಪ್ರತಿವರ್ಷ ಈ ಊರಿನಲ್ಲಿ ಶ್ರಾವಣ ಮಾಸದ ದಿನದಂದು ಕಲ್ಲಿನಾಥನ ಜಾತ್ರೆಯು ನಡೆಯುತ್ತದೆ. ಅಲ್ಲದೆ ಕಾರ್ತಿಕಮಾಸ, ಯುಗಾದಿ ಹಾಗೂ ಶ್ರಾವಣ ಮಾಸಗಳಲ್ಲಿ ವಿಶೇಷ ಪೂಜೆಯು ನಡೆಯುತ್ತದೆ.[೨] ಹಾಗೂ

ಈಶ್ವರಕವಿ 'ಕವಿಜಿಹ್ವಾಬಂಧನಂ' ಕೃತಿಯಲ್ಲಿ ಅನೇಕ ತೆಲುಗು ಪದಗಳನ್ನು ಬಳಸಿದ್ದಾನೆ. ಹಾಗೂ ಈಗಾಗಲೇ ಚರ್ಚಿಸಿದಂತೆ ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ವಡಿಯ ಪ್ರಯೋಗವನ್ನು ಮಾಡಿದ್ದರಿಂದ ಈತನಿಗೆ ತೆಲುಗಿನ ಪ್ರಭಾವವು ಇರಲೇಬೇಕು. ಆತ ತೆಲುಗನ್ನು ಕಲಿತವನು ಅಥವಾ ತೆಲುಗು ಪ್ರದೇಶದಿಂದ ಬಹಳ ದಿನಗಳ ಹಿಂದೆ ಎಂದು ಮುಂತಾಗಿ ಊಹಿಸಬಹುದಾಗಿದೆ. ಈ ಊರಿನಲ್ಲಿ ಕೆಲವು ಮನೆತನಗಳು ಆಂಧ್ರ ಭಾಗದಿಂದ ಬಂದಂಥವುಗಳಿವೆ. ಒಂದು ಕಾಲಕ್ಕೆ ಈ ರೀತಿ ವಲಸೆ ಬರುವುದು, ಒಂದೆಡೆಯಿಂದ ಇನ್ನೊಂದೆಡೆಗೆ ತೆರಳಿ ವಾಸಿಸುವುದು ಸಾಮಾನ್ಯವಾಗಿತ್ತು. ಹೀಗಾಗಿ ಅಂದು ಆಂಧ್ರದಿಂದ ಬಂದ ಕುಟುಂಬಗಳಲ್ಲಿ ಈಶ್ವರಕವಿಯ ಕುಟುಂಬವು ಒಂದಾಗಿತ್ತು. ಹೀಗಾಗಿ ಈ ಕವಿಯ 'ಕವಿ ಜಿಹ್ವಾಬಂಧನಂ' ದಲ್ಲಿ ಕೆಲವು ತೆಲುಗು ಪದಗಳು ಬಳಕೆಯಾಗಿರುವುದು ಈ ಕವಿಯ ಮೇಲೆ ತೆಲುಗು ಪ್ರಭಾವವಾಗಿರುವುದನ್ನು, ಈತನಿಗೆ ಸಂಪೂರ್ಣವಾಗಿ ತೆಲುಗು ಭಾಷೆ ಬರುತ್ತಿತ್ತೆಂಬುದನ್ನು ಸಾಬೀತುಪಡಿಸುತ್ತದೆ.

ಈ ಎಲ್ಲಾ ಆಕರಗಳ ಮೂಲಕ 'ಕವಿಜಿಹ್ವಾಬಂಧನಂ' ಛಂದಸ್ಸುಶಾಸ್ತ್ರದ ಕರ್ತೃ ಈಶ್ವರಕವಿಯು ಬಿಜಾಪುರ (ಇಂದಿನ ವಿಜಯಪುರ) ತಾಲ್ಲೂಕಿನ 'ನಿಡುವಣಿ' (ಇಂದಿನ ನಿಡೋಣಿ)ಯವನೇ ಹೊರತು, ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಹಳ್ಳಿಮೈಸೂರು ಹೋಬಳಿಯ 'ನಡವಾಣಿ'ಯವನಲ್ಲ ಎನ್ನುವುದಕ್ಕೆ ಸಾಕಷ್ಟು ಸಾಕ್ಷಿಗಳು ಹಾಗೂ ಆಕರಗಳು ಲಭ್ಯವಾಗಿವೆ.

ಹೀಗಾಗಿ ಇನ್ನಾದರೂ 'ಈಶ್ವರಕವಿ'ಯ ಹಾಗೂ 'ಕವಿಜಿಹ್ವಾಬಂಧನಂ' ಕೃತಿಯ ಕುರಿತು ಬರೆಯುವ ಸಂಶೋಧಕರು, ವಿದ್ವಾಂಸರು, ಬೋಧಿಸುವ ಅಧ್ಯಾಪಕರು ಈತನ ಸ್ಥಳದ ಕುರಿತಾಗಿ ಸ್ಪಷ್ಟವಾದ ಅಭಿಪ್ರಾಯಕ್ಕೆ ಬರಬೇಕಾಗಿದೆ. ಈಗಾಗಲೇ ಈ ಕುರಿತು ಪ್ರಕಟವಾದ ವಿವಿಧ ವಿದ್ವಾಂಸರ ಕೃತಿಗಳು ಮರು ಮುದ್ರಣವಾಗುವಲ್ಲಿ ಈ ಅಂಶವನ್ನು ಸೇರಿಸುವ ಅವಶ್ಯಕತೆ ಇದೆ.

### ಅಡಿಟಿಪ್ಪಣಿ

೧. ಎಂ.ವಿ.ಸೀತಾರಾಮಯ್ಯ, **ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಾಹಿತ್ಯ ಸಂ : ೩**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫, ಪುಟ ೧೩೯.

೨. ಆರ್. ನರಸಿಂಹಾಚಾರ್ಯ, **ಕರ್ಣಾಟಕ ಕವಿ ಚರಿತೆ, (ದ್ವಿತೀಯ ಸಂಪುಟ)**, (ಹದಿನೇಳನೆಯ ಶತಮಾನದ ಕೊನೆಯವರೆಗೆ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧, ಪುಟ ೯೦).

೩. ಎ.ಆರ್.ಕೃಷ್ಣಶಾಸ್ತ್ರೀ, (ಸಂ.), **ಈಶ್ವರಕವಿ ವಿರಚಿತಂ ಕವಿಜಿಹ್ವಾಬಂಧನಂ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಜೂನ್-ಡಿಸೆಂಬರ್, ಸಂಪುಟ ೩೬, ಸಂಚಿಕೆ ೧-೨, ೧೯೫೧, ಪುಟ ೨೭ ಮತ್ತು ೩೮.

೪. **ಅದೇ,** ಪುಟ ೩೦.

೫. **ಅದೇ,** ಪುಟ ೨೨.

೬ **Epigraphia Carnatica**, Vol. 8, Holenarasipura, ೧೯೮೪, ಪುಟ ೯೪.

೭. **Epigraphia Carnatica,** vol. 8, Holenarasipura, ೧೯೮೪, ಪುಟ ೯೩.

೮. ಡಾ. ದೇವರಕೊಂಡಾರೆಡ್ಡಿ ಮತ್ತು ಇತರರು, (ಸಂ.), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧೦, ಬಿಜಾಪುರ ಜಿಲ್ಲೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೧, ಪುಟ ೧೨೧.

೯. **ಅದೇ,** ಪುಟ ೧೧೯.

೧೦. **ಅದೇ,** ಪುಟ ೧೨೫.

೧೧. **ಅದೇ,** ಪುಟ ೧೨೩.

೧೨. **ಬಸವರಾಜಪ್ಪ,** ಸಾ: ನಿಡೋಣಿ ಇವರ ಹೇಳಿಕೆಯಿಂದ.




# ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಆಯಗಾರರು

ಮಂಜುಳಾ.ಎಂ.ಆಚಾರಿ*

ಆಯಗಾರಿಕೆ ಪ್ರಾಚೀನ ಕೃಷಿ ಸಮಾಜದ ಬಹುಮುಖ್ಯ ...ರ್ಥಿಕ ಮತ್ತು ಸಾಮಾಜಿಕ ಪದ್ಧತಿಯಾಗಿತ್ತು. ಇದೊಂದು ...ತರ್ ಕುಟುಂಬ ಸಂಬಂಧಗಳ ತಾಳಿಕೆ ಮತ್ತು ಬಾಳಿಕೆಯ ...ವಸ್ಥೆಯಾಗಿತ್ತು. ಅದೊಂದು ಸಮೂಹ ಹೊಣೆಗಾರಿಕೆಯ ...ಗತಿಯಾಗಿತ್ತು, ಉತ್ಪಾದಕ ರೈತ ಕುಟುಂಬಗಳು ಮತ್ತು ...ಸುಬಿನವರು ಪರಸ್ಪರ ಆಶ್ರಯಿಸಿ ಬದುಕುವ ಕರ್ತವ್ಯ ...ಜ್ಞೆಯನ್ನು, ಧರ್ಮ ಪ್ರಜ್ಞೆಯನ್ನು ಹೊಂದಿದ್ದು, ಇದರ ...ಗವಾಗಿ ಆಯ ಪ್ರಚಲಿತವಿತ್ತು.

ಆಯ ಎಂದರೆ ಕೃಷಿ ಕಾರ್ಯಗಳಿಗೆ ಬೇಕಾದ ಸೇವೆ ...ನ್ನು ಸಲಕರಣೆಗಳನ್ನು ಒದಗಿಸುವ ಸಮುದಾಯಗಳಿಗೆ ...ರು ಬೆಳೆದಿದ್ದರ ಒಂದು ಪಾಲನ್ನು ಧಾನ್ಯರೂಪದಲ್ಲಿ ...ಡುವ ಪ್ರತಿಫಲವೇ ಆಯ ಎನ್ನಲಾಗುತ್ತದೆ. 'ಆಯ' ನೀಡುವ ...ನ್ನು ಆಯದಕುಳನೆಂದೂ ಆಯ ಪಡೆಯುವವರನ್ನು, ...ಬಿನವರನ್ನು ಆಯಗಾರರೆಂದು ಕರೆಯಲಾಗುತ್ತದೆ.

ಜನ ಬೆಳೆದು ಜನಾಂಗವಾದಾಗಲೇ ಆಯಗಾರ ಪದ್ಧತಿ ...ಟ್ಟಿಕೊಂಡಿತೆಂದು, ಜೀವನದ ಅವಶ್ಯಕತೆ ಪರಸ್ಪರ ...ವಾರ್ಯತೆಯೇ ಆಯಗಾರಿಕೆಯ ಉಗಮಕ್ಕೆ ಕಾರಣವೆಂದೂ ...ದ್ವಾಂಸರ ಅಭಿಪ್ರಾಯವಾಗಿದೆ. ಪ್ರಾಚೀನ ಕಾಲದ ಜನಪದ ...ಘಜೀವನಕ್ಕೆ ಈ ಆಯಗಾರ ಪದ್ಧತಿ ಉತ್ತಮ ...ರ್ಶನವಾಗಿದೆ. ಈ ಆಯಗಾರ ಮಂಡಲ ಒಕ್ಕಲಿಗರನ್ನು ...ಂದ್ರವಾಗಿಟ್ಟುಕೊಂಡು ಪರಸ್ಪರ ಜೋಲಿ ಹಿಡಿದುಕೊಂಡು ...ಸುತ್ತದೆ. ಜೀವನಾವಶ್ಯಕತೆಯ ಪರಿಣಾಮದಿಂದ ಹುಟ್ಟಿದ ... ವೃತ್ತಿಗಳು ಕೇವಲ ಚಾಕರಿ ವೃತ್ತಿಗಳಾಗಿ ಉಳಿಯದೇ ...ಯಾಗಿ ಅರಳಿದವು ಮತ್ತು ಕಲೋಪಾಸನೆಯಾಗಿ ಬೆಳೆದವು. ...ದರಿಂದ ಹಿಡಿದು ತಳವಾರನವರೆಗೆ ಪ್ರತಿಯೊಂದು ...ತ್ತಿಯನ್ನು ಹಳ್ಳಿಯ ಏಳ್ಗೆಗೆ ಶ್ರಮಿಸುವ ಜೊತೆಗೆ ಸಾಮಾಜಿಕ ...ವನದ ಐಕ್ಯತೆಗೆ ಎಲ್ಲಾ ಕಸುಬಿನವರು ಪಾತ್ರವಹಿಸಿರುವುದು ...ಡುಬರುತ್ತದೆ.

ಸಮಾಜದ ಅಥವಾ ರಾಜ್ಯದ ಸೇವೆಯ ಜೊತೆಗೆ ...ಣೆಯ ಭಾರವನ್ನು ಹೊತ್ತಿರುವ ಪ್ರಮುಖ ಆಯಗಾರ ರೆಂದರೆ ಕಮ್ಮಾರರು, ಕುಂಬಾರರು, ಬಡಗಿಗಳು, ಹೂಗಾರರು, ಕ್ಷೌರಿಕರು, ಸಮಗಾರರು ಆಗಿದ್ದರೆಂದು ಮತ್ತು ಅವರಿಗೆ ದಾನ, ಧರ್ಮ ಕೊಡುತ್ತಿದ್ದ ಹಾಗೂ ಉಂಬಳಿ ನೀಡುತ್ತಿದ್ದ ಸಂಗತಿಗಳು ತಿಳಿದು ಬರುತ್ತವೆ.

ಆಯಗಾರರಲ್ಲಿ ವಿವಿಧ ಜಾತಿ ಕಸುಬಿನವರಿದ್ದರೂ ಒಂದೊಂದು ಕಸುಬಿನವರು ಇತರ ಕಸುಬುಗಾರರ ನೆರವು ಪಡೆಯುವುದನ್ನು ಗಮನಿಸಲಾಗುತ್ತದೆ. ಉದಾಹರಣೆಗೆ ಕಂಬಾರನಗೆ ತಿದಿಬೇಕು ಅದಕ್ಕಾಗಿ ಆತ ಮಾದಿಗನ ಮೇಲೆ ಅವಲಂಬಿತನಾಗಿರುತ್ತಾನೆ. ಅದೇ ರೀತಿ ಬಡಿಗ ಮತ್ತು ಅಕ್ಕಸಾಲಿಗರೂ ಕಂಬಾರ ಮೇಲೆ ಅವಲಂಬಿತರಾಗಿರುತ್ತಾರೆ. ಇದರಂತೆ ರಾಜರು, ಪ್ರಜೆಗಳು ವಿಶೇಷವಾಗಿ ಕೃಷಿಕರು ಈ ಆಯಗಾರರ ಮೇಲೆ ಅವಲಂಬಿತರಾಗಿದ್ದು ತಿಳಿಯುತ್ತದೆ. ಇಂಥ ಆಯಗಾರರ ಒಂದು ಪ್ರಸ್ತಾಪ ಮತ್ತು ಅವರ ವೈಶಿಷ್ಟತೆಯನ್ನು ಶಾಸನಗಳ ಮೂಲಕ ಈ ಕೆಳಗಿನಂತೆ ವಿವರಿಸಲಾಗಿದೆ.

## ಶಾಸನಗಳಲ್ಲಿ ಆಯಗಾರರು

ಆಯಗಾರರ ಬದುಕು ಸೇವಾ ವೃತ್ತಿಗೆ ಮಾತ್ರ ಸೀಮಿತ ವಾಗಿರದೇ ಸಮಕಾಲೀನ ರಾಜಮನೆತನಗಳ ಆಡಳಿತಾವಧಿ ಯಲ್ಲಿ ರಾಜ್ಯದ ಹಿತದೃಷ್ಟಿಯನ್ನು ಕಾಪಾಡುವುದಾಗಿತ್ತು ಎಂಬುದು ಶಾಸನಗಳಿಂದ ತಿಳಿಯುತ್ತದೆ. ಇವರು ಯುದ್ಧ ಸಂದರ್ಭದಲ್ಲಿ ತಮ್ಮನ್ನು ತೊಡಗಿಸಿಕೊಂಡು ಹೋರಾಡಿ ವೀರಮರಣ ವನ್ನಪಿದ್ದು ಅದಕ್ಕೆ ಪ್ರತಿಯಾಗಿ ದಾನ ಆದಾಯ ಉಂಬಳಿಯನ್ನು ಪಡೆದ ಉಲ್ಲೇಖಗಳು ಕನ್ನಡ ನಾಡಿನ ಹಲವು ಶಾಸನಗಳಿಂದ ತಿಳಿದುಬರುತ್ತದೆ. ಅಷ್ಟೇ ಅಲ್ಲದೇ ಆಯಗಾರನು ಸಾಮಾಜಿಕ ನಿರ್ಮಾತೃವಾಗಿದ್ದು, ಒಂದು ರಾಜ್ಯದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ವ್ಯವಸ್ಥೆಯ ಸುಗಮ ನಡಿಗೆಗೆ ಅತ್ಯವಶ್ಯಕವಾಗಿದ್ದನು. ಸಮಾಜದ ಭೌತಿಕ ಮತ್ತು ಆಂತರಿಕ ನೀತಿ ನಿರ್ಧಾರಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕರಕುಶಲ ಕಲಾವಿದರು. ಕೆಳವರ್ಗದ ಕೆಲಸಗಾರರು ಪ್ರಮುಖ

* ಇತಿಹಾಸ ಉಪನ್ಯಾಸಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಇರಕಲ್‌ಗಡ, ಕೊಪ್ಪಳ.

ರಾಗಿದ್ದರೆಂದು ತಿಳಿಯಲಾಗುತ್ತದೆ. ಈ ಕುಶಲಕರ್ಮಿ ಆಯಗಾರರ ಉಲ್ಲೇಖವು ಕ್ರಿ.ಶ. ೧೧ನೇ ಶತಮಾನ ದಿಂದೀಚೆಗೆ ಕನ್ನಡ ನಾಡಿನ ಶಾಸನಗಳಲ್ಲಿ ಬಿಡಿ ಬಿಡಿಯಾಗಿ ಪ್ರಸ್ತಾಪಿಸಿದ್ದು ಕಾಣಬರುತ್ತದೆ. ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಹಲವು ಪ್ರದೇಶಗಳಲ್ಲಿಯ ಶಾಸನ ಮತ್ತು ವೀರಗಲ್ಲುಗಳ ಮೂಲಕವೂ ಅವರ ವೈಶಿಷ್ಟತೆ ತಿಳಿಯುತ್ತದೆ. ಪ್ರಮುಖವಾಗಿ ಹಾವೇರಿ ಜಿಲ್ಲೆಯು ಪ್ರಾಚೀನ ರಾಜಮನೆತನ ಗಳಾದ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಯಾದವರು, ವಿಜಯನಗರ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದು ಆಯಾ ರಾಜಮನೆತನಗಳ ಕಾಲಾವಧಿಯಲ್ಲಿ ನಿರ್ಮಿತಗೊಂಡ ಶಾಸನ ವೀರಗಲ್ಲುಗಳಲ್ಲಿ ಈ ಆಯಗಾರರ ಸೇವೆ ತ್ಯಾಗ ಬಲಿದಾನಗಳ ಬಗ್ಗೆ ಮಾಹಿತಿ ದೊರೆಯುತ್ತದೆ. ಇಲ್ಲಿ ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಯಾದವರು, ವಿಜಯನಗರ ಅರಸರು, ಇವರ ಕಾಲಾವಧಿಯಲ್ಲಿಯ ಶಾಸನಗಳಲ್ಲಿಯೇ ಇವರ ಕುರಿತು ಅತ್ಯಧಿಕ ಉಲ್ಲೇಖಗಳು ಸಿಗುತ್ತವೆ.

ಹಾವೇರಿ ತಾಲ್ಲೂಕಿನ ಕಳ್ಳಿಹಾಳದ ದುರ್ಗಾ ಪರಮೇಶ್ವರಿ ದೇಗುಲ ವೀರಗಲ್ಲು ಶಾಸನವು ಕ್ರಿ.ಶ. ೧೨೩೬ರಲ್ಲಿ ಯಾದವ ಸಿಂಹಣ ಕಾಲಕ್ಕೆ ಸೇರಿದ್ದು ಇದರಲ್ಲಿ ಪಾಂಡ್ಯದೇವನು ಅಜ್ಜಡಿಯ ಮೇಲೆ ದಾಳಿ ಮಾಡಿದಾಗ ಬಡಿಗ ಲಕ್ಕೋಜನು ಆತನ ವಿರುದ್ಧ ಹೋರಾಡಿ ವೀರಮರಣವನ್ನಪಿದನೆಂದು ಉಲ್ಲೇಖಿತಗೊಂಡಿದೆ.

ಇದೇ ತಾಲ್ಲೂಕಿನ ದೇವಿಹೊಸೂರಿನ ಬಸವಣ್ಣ ಗುಡಿಯ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲುಶಾಸನದಲ್ಲಿ ಅಕ್ಕಸಾಲಿ ದಾಸೋಜನು ಗೋಗ್ರಹಣದ ವೇಳೆ ಮರಣ ಹೊಂದಿದ ಉಲ್ಲೇಖವು ದೊರೆಯುತ್ತದೆ. ಈತನ ಸ್ಮರಣೆಗಾಗಿಯೇ ವೀರಗಲ್ಲು ಹಾಕಿಸಿದ್ದು ವಿಶೇಷವಾಗಿದೆ.

ಹಾವೇರಿ ತಾಲೂಕಿನ ಕ್ರಿ.ಶ. ೧೨೨೦ರ ಕೋಳೂರು ಶಾಸನದಲ್ಲಿ ಮತ್ತು ಸವಣೂರು ತಾಲ್ಲೂಕಿನ ಕ್ರಿ.ಶ. ೧೨೩೬ರ ಕಡಕೋಳ ಶಾಸನದಲ್ಲಿ ಹನ್ನೆರಡು ಹಿಟ್ಟಿನ ಉಲ್ಲೇಖಗಳು ಸಿಗುತ್ತವೆ. ಅದೇ ರೀತಿ ಹಾನಗಲ್ಲ ತಾಲೂಕಿನ ಕ್ರಿ.ಶ. ೧೨೬೬ರ ಅಕ್ಕಿ ಅಲೂರು ಶಾಸನದಲ್ಲಿ ಹನ್ನೆರಡು ಹಿಟ್ಟುಕಾರರ ಉಲ್ಲೇಖ ಸಿಗುತ್ತದೆ.

ಇಲ್ಲಿ ಹಿಟ್ಟು ಪದದ ಉಲ್ಲೇಖವನ್ನು ಗಮನಿಸಲಾಗಿ ಒಂದು ಆಹಾರ ಪದಾರ್ಥವಾಗಿದೆ. ಕಾರಣ ಹಿಟ್ಟು ಶಬ್ದಕ್ಕೆ ಆಯ, ಬದುಕುವ ಸಾಧನ, ಸಂಭಾವನೆ, ಪ್ರತಿಫಲ ಎನ್ನುವ ಅರ್ಥ ಬಂದಿದೆ. ಆಯಗಾರರಿಗೆ ಇದು ಜೀವನಾಧಾರ ಪವಿತ್ರ ಪದಾರ್ಥವಾಗಿತ್ತೆಂದು ಮೇಲಿನ ಶಾಸನದಿಂದ ತಿಳಿದುಬರುತ್ತದೆ. ೧೨ ಹಿಟ್ಟಿನ ಉಲ್ಲೇಖ ಗಮನಿಸಿದರೆ ಗ್ರಾಮದ ಸಾಂಘಿಕ ಜೀವನದಲ್ಲಿ ಮಹತ್ವದ ಸಂದರ್ಭದಲ್ಲಿ ವಿಶೇಷ ಪಾತ್ರವಹಿಸುತ್ತಿದ್ದು, ದುಡಿವ ವರ್ಗಗಳಿಗೆ ನಿರಂತರ ಅನ್ನಕ್ಕೆ ಆಧಾರವಾಗುವ ಮಹತ್ವದ ಆಶಯಗಳನ್ನು ಇಲ್ಲಿ ಕಾಣಬಹುದು.

ಇಂಥ ಹಿಟ್ಟುಗಾರರಿಗೆ ಉಂಬಳಿ ದಾನ ನೀಡುವುದಲ್ಲದೆ ತೆರಿಗೆಯಿಂದ ವಿನಾಯಿತಿ ನೀಡಲಾಗುತ್ತಿತ್ತು. ೧೨ ಹಿಟ್ಟುಗಾರ ರೆಂದರೆ ಗೌಡ, ಬಣಕಾರ, ಬಡಿಗ, ಕಮ್ಮಾರ, ಅಕ್ಕಸಾಲಿ, ಕುಂಬಾರ, ತಳವಾರ, ಅಗಸ, ಬಾರಿಕ, ನಾಯಿಂದ, ಮಾದಿಗ, ಹೂಗಾರ ಎನ್ನುವ ಜಾತಿ ಕಸುಬಿಗೆ ಸೇರಿದ ಗುಂಪುಗಳಾಗಿದ್ದು ಈ ಶಾಸನದಿಂದ ತಿಳಿಯಲಾಗಿದೆ.

ಬ್ಯಾಡಗಿ ತಾಲ್ಲೂಕಿನ ಕೆಂಗೊಂಡ ವೀರಗಲ್ಲು ಶಾಸನವು ಕಲ್ಮೇಶ್ವರ ದೇಗುಲದ ಹತ್ತಿರದಲ್ಲಿದ್ದು ಕ್ರಿ.ಶ. ೧೨೫೯ರ ಯಾದವ ಕಂದರಸನ ಆಡಳಿತಾವಧಿಗೆ ಸೇರಿದೆ ಇದರಲ್ಲಿ ಮನ್ನೆಯ ಜೊಯಿದೇವನು ಹೊನುಗಲಿ ಮೇಲೆ ದಾಳಿ ಮಾಡಿದಾಗ ಕಮ್ಮಾರ ಕೇತೋಜನು ಹೋರಾಡಿ ವೀರಮರಣ ಹೊಂದಿದ ಉಲ್ಲೇಖವು ಸಿಗುತ್ತದೆ.

ಬ್ಯಾಡಗಿಯ ಮುತ್ತೂರಿನ ಕಲ್ಲೇಶ್ವರ ಗುಡಿಯಲ್ಲಿಯ ವೀರಗಲ್ಲು ಶಾಸನವು ಕಲ್ಯಾಣ ಚಾಲುಕ್ಯ ಅರಸ ಮೂರನೇ ಸೋಮೇಶ್ವರ ಕ್ರಿ.ಶ. ೧೧೩೮ನ ಕಾಲಕ್ಕೆ ಸೇರಿದ್ದು ಇದರಲ್ಲಿ ಕಮ್ಮನವಳ್ಳಿಯ ಜಕ್ಕಿಸೆಟ್ಟಿಯು ಮುತ್ತೂರಿನ ಮೇಲೆ ದಾಳಿ ಮಾಡಿದಾಗ ಆ ಗ್ರಾಮದ ಕಮ್ಮಾರ ಮಾಚನು ಅವನೊಂದಿಗೆ ಹೋರಾಟ ಮಾಡಿ ವೀರಮರಣ ಹೊಂದಿದನೆಂದು ಉಲ್ಲೇಖಿತಗೊಂಡಿದೆ. ಇದರ ಪ್ರತಿಫಲವಾಗಿ ಮಾಚನ ಅಣ್ಣನಿಗೆ ಜಕ್ಕಿಗೌಡಾದಿಗಳಿಂದ ೨೨ ಕಮ್ಮಭೂಮಿ ೫೦ ಕಮ್ಮ ಹಕ್ಕಲನ್ನು ದಾನ ನೀಡಿದ ವಿಷಯ ಬರುತ್ತದೆ.

ಮುತ್ತೂರಿನ ಕಲ್ಲೇಶ್ವರ ದೇಗುಲದ ೧೨ನೇ ಶತಮಾನದ ವೀರಗಲ್ಲು ಶಾಸನದಲ್ಲಿ ಮುತ್ತೂರ ಗೋಗ್ರಹಣದಲ್ಲಿ ಕಮ್ಮಾರ ಗಣ ಕೋಜನು ವೀರಮರಣ ಹೊಂದಿದ ವಿವರ ತಿಳಿಯು ತ್ತದೆ.

ರಾಣೆಬೆನ್ನೂರಿನ ಸಿದ್ದೇಶ್ವರ ದೇಗುಲದ ಶಾಸನವು ಕ್ರಿ.ಶ. ೧೫೫೦ರ ವಿಜಯನಗರದ ಅರಸ ಸದಾಶಿವರಾಯನ ಆಡಳಿತಾವಧಿಗೆ ಸೇರಿದ್ದು, ಇದರಲ್ಲಿ ರಾಮರಾಜು, ತಿಮ್ಮರಾಜ ಅರಸರು ಕ್ಷೌರಿಕ ವೃತ್ತಿಯ ತಿಮ್ಮೋಜ, ಕೊಂಡೋಜ ಮತ್ತು ಭದ್ರೋಜರಿಗೆ ಸುಂಕ ಮತ್ತು ಆದಾಯ ದಾನ ನೀಡಿದ ವಿವರವಿದೆ.

ಹಾನಗಲ್ಲಿನ ಆಡೂರು ಗ್ರಾಮದ ಸೋಮೇಶ್ವರ ಗುಡಿಯ ಹತ್ತಿರವಿರುವ ವೀರಗಲ್ಲು ಕ್ರಿ.ಶ. ೧೧೪೬ರ ಕಲ್ಯಾಣಿ

ಳುಕ್ಯರ ಜಗದೇಕ ಮಲ್ಲನ ಆಡಳಿತಾವಧಿಗೆ ಸಂಬಂಧಿಸಿದ್ದು ಇದರಲ್ಲಿ ಸಿರಿವೊಳಲಲ್ಲಿ ಕಾಗಿನೆಲೆಯ ಪ್ರಜೆಗಳೊಂದಿಗೆ ಹೋರಾಡುವಾಗ ನಾಳ್ಪ್ರಭು ಕೇತಿಸೆಟ್ಟಿ ಮತ್ತು ಕಮ್ಮಾರ ಸಂತೋಜ ವೀರಮರಣ ಹೊಂದಿದ ವಿವರ ದೊರೆಯುತ್ತದೆ.

ಹಾನಗಲ್ಲಿನ ಕೆಲವರಕೊಪ್ಪದ ಈಶ್ವರ ದೇಗುಲದ ಹತ್ತಿರವಿರುವ ವೀರಗಲ್ಲು ಹೊಯ್ಸಳ ಬಲ್ಲಾಳನ ಆಡಳಿತಾವಧಿಗೆ ಸಂಬಂಧಿಸಿದ್ದು ಇದರಲ್ಲಿ ಮಾಲಗಾರ ಏಚನು ತುರುಗೋಗ್ರಹಣದಲ್ಲಿ ವೀರಮರಣ ಹೊಂದಿದ್ದು ತಿಳಿಯುತ್ತದೆ. ಈ ಶಾಸನವು ತೃಟಿತಗೊಂಡಿದೆ.

ಹಾನಗಲ್ಲಿನ ಬಾಳೆಹಳ್ಳಿಯ ಸಿದ್ದೇಶ್ವರ ದೇಗುಲದ ಹೊರಗೆ ನಿಲ್ಲಿಸಿದ ವೀರಗಲ್ಲು ಹಾನಗಲ್ಲ ಕದಂಬರ ಕೀರ್ತಿದೇವ ಅರಸನ ಆಡಳಿತಾವಧಿಗೆ ಒಳಪಟ್ಟಿದ್ದು ಇದರಲ್ಲಿ ಹೊಯ್ಸಳ ಸೋಮನ ಬಾಳಹಳ್ಳಿಯನ್ನು ಮುತ್ತಿದಾಗ ಈತನ ಯುದ್ಧ ಕಮ್ಮಾರ ಬೋಕೋಜನು ಹೋರಾಡಿ ವೀರಮರಣ ಹೊಂದಿದ ಉಲ್ಲೇಖವಿದೆ.

ಅದೇ ಬಾಳೆಹಳ್ಳಿಯ ಸಿದ್ದೇಶ್ವರ ದೇಗುಲದ ಮತ್ತೊಂದು ವೀರಗಲ್ಲು ಶಾಸನದಲ್ಲಿ ಆಯಗಾರ ಆಯ್ತಮನ ಬಮ್ಮೋಜ ಎಂಬ ಉಲ್ಲೇಖ ಬರುತ್ತದೆ. ಇದು ಕೂಡ ಹಾನಗಲ್ಲ ಕದಂಬರ ಕೀರ್ತಿದೇವನ ಆಡಳಿತಾವಧಿಗೆ ಒಳಪಟ್ಟಿದೆ.

ಅದೇ ಬಾಳೆಹಳ್ಳಿಯ ಸಿದ್ಧೇಶ್ವರ ದೇಗುಲದ ಹೊರಗೆ ಇರುವ ವೀರಗಲ್ಲು ೧೧೬೩ರಲ್ಲಿ ನಿರ್ಮಿತಗೊಂಡಿದ್ದು ಇದರಲ್ಲಿ ಸಮ್ಮಗಾರ ನನ್ನೋಜನ ಮಗ ಬಮ್ಮಣನು ವೀರಮರಣ ಹೊಂದಿದ್ದು ತಿಳಿಯುತ್ತದೆ.

ಹಾನಗಲ್ಲಿನ ಮಕರವಳ್ಳಿಯ ವೀರಗಲ್ಲು ಕಲ್ಯಾಣ ಚಾಲುಕ್ಯ ದೊರೆ ಎರಡನೇ ಜಗದೇಕ ಮಲ್ಲನ ೧೧೪೫ ಆಡಳಿತಾವಧಿಗೆ ಸೇರಿದ್ದು ಅದರಲ್ಲಿ ಕುಂಬಾರ ಬೀರಣ್ಣನು ವೀರಮರಣ ಹೊಂದಿದ ಉಲ್ಲೇಖ ಸಿಗುತ್ತದೆ. ಈ ಶಾಸನವು ತೃಟಿತಗೊಂಡಿದೆ.

ಹಾನಗಲ್ಲಿನ ಮಂತಗಿ ಗ್ರಾಮದ ವೀರಗಲ್ಲಿನಲ್ಲಿ ಬಡಗಿ ಮಸಣೋಜ ಮತ್ತು ಸಿದ್ದೇಶ್ವರ ದೇವ ಎಂಬ ಉಲ್ಲೇಖ ಕಂಡು ಬಂದಿದೆ.

ಹಿರೇಕೆರೂರು ತಾಲೂಕಿನ ಅಬ್ಬಲೂರು ಗ್ರಾಮದ ಬ್ರಹ್ಮೇಶ್ವರ ದೇವಾಲಯ ಆವರಣದಲ್ಲಿನ ವೀರಗಲ್ಲು ೧೨೯೯ರ ಯಾದವ ಸಿಂಘಣ ಆಡಳಿತಾವಧಿಗೆ ಸೇರಿದೆ ಇದರಲ್ಲಿ ಬೆಳಗವತ್ತಿಯ ಈಶ್ವರ ದೇವನ ಅಬ್ಬಲೂರು ಗೋಗ್ರಹಣದಲ್ಲಿ ಬಡಗಿ ಮಾಚ ಮತ್ತು ಹೋಮರು ವೀರಮರಣ ಹೊಂದಿದ ಉಲ್ಲೇಖ ಬರುತ್ತದೆ.

ಹೀಗೆ ಜಿಲ್ಲೆಯ ವಿವಿಧ ಪ್ರದೇಶಗಳ ಶಾಸನ ಮತ್ತು ವೀರಗಲ್ಲುಗಳಲ್ಲಿ ಈ ಆಯಗಾರರ ಉಲ್ಲೇಖವು ವಿಶೇಷವಾಗಿ ಕಂಡುಬರುತ್ತದೆ. ಒಟ್ಟಾರೆ ಶಾಸನ ಉಲ್ಲೇಖಿತಗೊಂಡ ವಿಷಯಾನುಸಾರ ಆಯಗಾರರ ಪ್ರಾಚೀನ ಸಂಸ್ಕೃತಿಯ ಹಲವು ಮಾಹಿತಿ ದೊರೆತಿದ್ದು ಅವರು ವೃತ್ತಿ ಬದುಕಿನ ಜೊತೆಗೆ ಯುದ್ಧಕಲಿಗಳೂ ಆಗಿ ರಾಜ್ಯರಕ್ಷಣೆಯಲ್ಲಿ ಪ್ರಾಣತ್ಯಾಗ ಮಾಡಿ ವೀರರೆಂದೆನಿಸಿಕೊಂಡು ಶಾಸನದ ಮೂಲಕ ತಮ್ಮ ವೈಶಿಷ್ಟ್ಯತೆಯನ್ನು ಅಮರವಾಗಿಸಿದ್ದಾರೆ. ಅಂಥ ವೀರ ಆಯಗಾರ ವರ್ಗಗಳ ಚರ್ಚೆ ಇತಿಹಾಸದಲ್ಲಿ ಗೌಣವಾಗಿರುವುದು ವಿಷಾಧನೀಯ ಆದ್ದರಿಂದ ರಾಜಮಹಾರಾಜರ ಇತಿಹಾಸದ ಜೊತೆಗೆ ಅವರ ಏಳ್ಗೆಗೆ ಶ್ರಮಿಸಿದ ಇಂಥ ವರ್ಗಗಳ ಮೇಲೂ ಬೆಳಕು ಚೆಲ್ಲಬೇಕೆಂಬುದು ಲೇಖನದ ಆಶಯವಾಗಿದೆ.



**ಆಧಾರಸೂಚಿ**

ಡಾ. ಎಂ.ಎಂ. ಕಲಬುರ್ಗಿ, ಸಂ. ೧೯೭೫, ಧಾರವಾಡ ಜಿಲ್ಲೆಯ ಶಾಸನ ಸೂಚಿ, ಧಾರವಾಡ.

ಡಾ. ಎಂ. ಚಿದಾನಂದಮೂರ್ತಿ, ೨೦೦೨, (ತೃ.ಮು.), ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು.

ಡಾ. ವೀರೇಶ ಬಡಿಗೇರ, ೨೦೧೦, ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ವೀರೇಶ ಬಡಿಗೇರ, ೨೦೦೬, ರಾಶಿಬುತ್ತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ನಾಗಮಂಗಲ ತಾಲ್ಲೂಕಿನ ಜೈನ ಶಾಸನಗಳು

ಡಾ. ಡಿ.ಎಂ. ನಾಗರಾಜು*

ದಕ್ಷಿಣ ಭಾರತದ ರಾಜವಂಶಗಳಲ್ಲಿ ಗಂಗರು, ಹೊಯ್ಸಳರು, ಮೈಸೂರು ಒಡೆಯರು ಹರತಿ ಮನೆತನದವರು, ಇವರ ಆಳ್ವಿಕೆಯ ಕಾಲವು ಒಂದು ಪ್ರಮುಖ ಹಾಗೂ ಸ್ಮರಣೀಯ ಅಧ್ಯಾಯವಾಗಿದೆ. ಕ್ರಿ.ಶ. ೮ನೇ ಶತಮಾನದಲ್ಲಿ ಗಂಗರು, ಕ್ರಿ.ಶ. ೧೦ನೇ ಶತಮಾನದ ಕೊನೆಯಲ್ಲಿ ಕರ್ನಾಟಕದ ಇತಿಹಾಸದಲ್ಲಿ ಕಾಣಿಸಿಕೊಂಡು ೧೧ನೇ ಶತಮಾನದಲ್ಲಿ ಪ್ರಾಬಲ್ಯಕ್ಕೆ ಒಂದು ಕರ್ನಾಟಕ ಸಾಮ್ರಾಜ್ಯವನ್ನು ಕಟ್ಟಿ ೧೪ನೇ ಶತಮಾನದ ಪೂರ್ವಾರ್ಧದ ಕೊನೆಯವರೆಗೂ ಯಶಸ್ವಿಯಾದ ಪ್ರಭುತ್ವವನ್ನು ನಡೆಸಿದ ಹೊಯ್ಸಳರ ಆಳ್ವಿಕೆಯ ಮಹತ್ಸಾಧನೆಗಳಿಂದ ಕೂಡಿದೆ. ಕರ್ನಾಟಕ ಮತ್ತು ದಕ್ಷಿಣ ಭಾರತದ ಪ್ರಬಲ ಸಾಮ್ರಾಜ್ಯವಾಗಿ ಶತಮಾನಗಳ ಕಾಲ ಪ್ರಭುತ್ವ ನಡೆಸಿದರು. ಹೊಯ್ಸಳ ಸಂತತಿಯೂ ಆಡಳಿತ, ಧರ್ಮ, ಸಾಹಿತ್ಯ ಮತ್ತು ಕಲೆಗೆ ಪ್ರೋತ್ಸಾಹ ನೀಡಿದರು. ಕ್ರಿ.ಶ. ೧೧ ರಿಂದ ೧೪ನೆಯ ಶತಮಾನದ ಕೊನೆಯವರೆಗೂ ಹೊಯ್ಸಳ ಕಾಲದಲ್ಲಿ ಪ್ರಮುಖವಾಗಿ ವೈಷ್ಣವ, ಶೈವ, ಜೈನ ಶಾಸನಗಳನ್ನು ಕಾಣಬಹುದು.

ದಕ್ಷಿಣ ಭಾರತದ ಪ್ರಮುಖ ಅರಸು ಮನೆತನಗಳಲ್ಲಿ ಮೈಸೂರು ಒಡೆಯರು ಮತ್ತು ಹರತಿ ವಂಶವು ಇವರ ಕಾಲದಲ್ಲಿ ಕನ್ನಡನಾಡು ಸಾಹಿತ್ಯ ಕಲೆಗಳಲ್ಲಿ ಧಾರ್ಮಿಕ ಪ್ರಗತಿ ಸಾಧಿಸಿರುವುದನ್ನು ನೋಡಬಹುದು.

ಗಂಗರ ಶ್ರೀಪುರುಷನ ಕ್ರಿ.ಶ. ೭೭೬-೭೭೭ರ ದೇವರಹಳ್ಳಿ ಶಾಸನದಲ್ಲಿ ಶ್ರೀಪುರದಲ್ಲಿ ಲೋಕತಿಲಕ ಎಂಬ ಹೆಸರಿನ ಬಸದಿಯನ್ನು ಜೀರ್ಣೋದ್ಧಾರಮಾಡಿಸಿ ದೇವರ ಪೂಜೆಗೋಸ್ಕರ ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೯೭೫ನೇ ಬಿಂಡಿಗನವಿಲೆ ಶಾಸನದಲ್ಲಿ ಅಮೃತಚಿಕನ್ತಿಯ ನಿಧನದ ನಂತರ ಪದ್ಮನಂದಿಭಟ್ಟಾರಕನು ತನ್ನ ತಾಯಿಯ ಜ್ಞಾಪಕಾರ್ಥವಾಗಿ ಸಮಾಧಿ ಮಾಡಿಸಿದ್ದನ್ನು ತಿಳಿಸುತ್ತದೆ.

ಮುತ್ಸಂದ್ರ (ಬೇಚಿರಾಕ್) ಗ್ರಾಮ ಸುಮಾರು ೧೧ನೇ ಶತಮಾನದ ಶಾಸನ ಚೊಕ್ಕ ಜಿನಾಲಯಗೋಸ್ಕರ ಮತ್ತಿಜೆಯು ಗ್ರಾಮವನ್ನು ಕಲುಕೆಜೆನಾಡಾಳ್ವ ಮುಖ್ಯಸ್ಥರು ದಾನ ನೀಡಿದ ವಿವರವಿದೆ.

ಹೊಯ್ಸಳ ವಿಷ್ಣವರ್ಧನನ ಕಾಲದಲ್ಲಿ ಅನೇಕ ಜೈನಮಂದಿರಗಳು ನಿರ್ಮಾಣಗೊಂಡವು. ಈತನ ಪಟ್ಟಮಹಷಿ ಶಾಂತಲೆ ಪುಣಿಸಮಯ್ಯ ಬೊಪ್ಪ ಮುಂತಾದವರು ಜೈನರೇ ಆಗಿದ್ದು ಇವನು ವಿಷ್ಣವಿರ್ಧನನ ಆಪ್ತ ದಂಡನಾಯಕನಾಗಿದ್ದು ಪಾರ್ಶ್ವನಾಥ ಬಸದಿ, ಆದಿನಾಥ ಬಸದಿ ಮತ್ತು ಶಾಂತಿನಾಥ ಬಸದಿಗಳನ್ನು ಕಟ್ಟಿಸಿದರು.

ಕ್ರಿ.ಶ. ೧೧೧೮-೧೯ರ ಕಂಬದಹಳ್ಳಿ ಶಾಸನ ಹೊಯ್ಸಳ ವಿಷ್ಣವರ್ಧನನ ದಂಡನಾಯಕ ಮಹಾಸಾಮನ್ತ ಶ್ರೀ ಮನ್ಮಹಾಪ್ರಧಾನಿ ಗಂಗರಾಜನು ತಳಕಾಡನ್ನು ಗೆದ್ದ ಸಂದರ್ಭದಲ್ಲಿ ವಿಷ್ಣುವರ್ಧನ ಗಂಗರಾಜನಿಗೆ ತಳವೃತ್ತಿಯನ್ನು ನೀಡಿದನು. ಗಂಗರಾನು ಮೂಲಸಂಘದೇಸಿಗಣದ, ಪುಸ್ತಕ ಗಚ್ಛದ, ಕೊಣ್ಡಕುಂದಾನ್ವಯದ ಸಂತತಿಯ ಶುಭಚಂದ್ರ ಸಿದ್ಧಾನ್ತದೇವರ ಪಾದಪೂಜೆ ಮಾಡಿ ದತ್ತಿಯನ್ನು ನೀಡಿದ ವಿವರ ಹಾಗೂ ಜೈನ ಮುನಿಗಳ ವಂಶಾವಳಿಯನ್ನು ತಿಳಿಸುತ್ತದೆ. ಕ್ರಿ.ಶ. ೧೧೪೨ರ ಕಸಲಗೆರೆ ಶಾಸನ ವಿಷ್ಣುವರ್ಧನನ ಕಾಲದ ಆಳ್ವಿಕೆಯಲ್ಲಿ ಕಲುಕಣಿನಾಡಿನಲ್ಲಿ ಹೆಬ್ಬದಿರೂರ್ವ್ವಾಡಿಯಲ್ಲಿ ಚೈತ್ಯಾಲಯ ನಿರ್ಮಿಸಿ ಪಾರ್ಶ್ವದೇವರ ಪ್ರತಿಷ್ಠೆ ಮಾಡಿಸಿ ಶ್ರೀ ಮೂಲಸಂಘಸೂರಸ್ತಿಗಣದ ಬ್ರಹ್ಮದೇವರ ಕಾಲನ್ನು ತೊಳೆದು ದೇವರ ಅಂಗಭೋಗಕ್ಕೆ ಗ್ರಾಮವನ್ನು ದತ್ತಿಯಾಗಿ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೪೪ರ ಬೋಗಾದಿ ಶಾಸನ ಚಾಲುಕ್ಯ ರಾಜನ ಹೆಸರು ಸ್ಪಷ್ಟವಿಲ್ಲ ಶಾಸನ ತುಂಬ ಸವೆದಿದದೆ. ಬೋಗವತಿ ಗ್ರಾಮದಲ್ಲಿ ಶ್ರೀಕರಣದ ಮಾದಿರಾಜನು ತನ್ನದೇ ಹೆಸರಿನಲ್ಲಿ ಶ್ರೀಕರಣ ಜಿನಾಲಯ ಕಟ್ಟಿ ದತ್ತಿ ನೀಡಿದನ್ನು ಹಾಗೂ ದ್ರಮಿಳಸಂಘದ ಜೈನಮುನಿಗಳ ಧಾರ್ಮಿಕ ಪ್ರಚಾರಕರ ವಂಶಾವಳಿಯನ್ನು ಸಹ ತಿಳಿಸುತ್ತದೆ. ವಿಷ್ಣುವರ್ಧನ ಕಾಲದ ಸುಕದೆರೆ ಶಾಸನದಲ್ಲಿ ಗ್ರಾಮದ ದಕ್ಷಿಣ ಪೂರ್ವದ ಒಂದು ಕೆರೆ ಉತ್ಖನನ ಮಾಡುವಾಗ ಒಂದು ಬಸದಿಯನ್ನು ನಿರ್ಮಾಣ ಮಾಡಿ ತೆರಿಗೆ ಸುಂಕಗಳಿಂದ ಬರುವ ಆದಾಯಗಳಿಂದ ಬಸದಿಯ ಗುರುಗಳಿಗೆ ಮತ್ತು

* ಮೈಸೂರು.

ೂಜೆ ನೈವೇದ್ಯಕ್ಕೆ ಜಕ್ಕಿಸೆಟ್ಟಿಯು ದಾನ ನೀಡಿದ್ದಾನೆ. ಇದೇ ೋಜನ ಕಾಲದ ದಡಗಶಾಸನದಲ್ಲಿ ದಡಗನಕೆರೆಯ ಂಚಬಸದಿಗೆ ಬಾಹುಬಲಿ ಕೊಟಮಂ ಧಾರಪೂರ್ವಕವಾಗಿ ೂಟ್ಟು ಕೆಲವು ಭೂಮಿಗಳನ್ನು ಎಲ್ಲಾ ಆದಾಯಗಳಿಂದ ಬ್ಬರು ಮಹಾಪ್ರಧಾನ ದಂಡನಾಯಕರಾದ ಮಜೆಯಾನೆ ುತ್ತು ಭರತಿಮಯ್ಯಂಗಳು ಸೇರಿ ಮೂಲಸಂಘ, ೂಂಡಕುಂದಾನ್ವಯ, ಕಾಣೂರ್ಗ್ಗಣ, ತಿಂತ್ರಿಣಿಗಚ್ಛದ ಂತತಿಯ ಮುನಿಭದ್ರಸಿದ್ಧಾನ್ತದೇವರಶಿಷ್ಯ ಮೇಘಚಂದ್ರ ದ್ಧಾನ್ತದೇವರಿಗೆ ದಾನ ನೀಡಿದ ದಾಖಲೆಯಿದೆ. ಶಾಸನ ವೆದಿದೆ. ಯಲ್ಲಾದಹಳ್ಳಿ ಶಾಸನದಲ್ಲಿ ಸೂರನಹಳ್ಳಿಯ ಾರ್ಶ್ವಜಿನದೇವಾಲಯ ನಿರ್ಮಿಸಿ ಹೊಯ್ಸಳ ವಿಷ್ಣುವರ್ಧನನ ುಹಾಪ್ರಧಾನನಾದ ಕೌಶಿಕಗೋತ್ರದ ದೇವರಾಜನು ಭೂಮಿ ಾನ ಮಾಡಿ ೪೦ ಹೊನ್ನನ್ನು ಗ್ರಾಮದ ಸುಂಕದ ದಾಯದಿಂದ, ೧೦ ಹೊನ್ನನ್ನು ರಾಜನಿಂದ ದೇವಸ್ಥಾನಕ್ಕೆ ಾನ ನೀಡಿದ ದಾಖಲೆ ಹಾಗೂ ಈ ದಾನವನ್ನು ಪುಸ್ತಕಗಚ್ಛದ ುತ್ತು ದೇಶಿಯಗಣ, ಕೊಂಡಕುಂದಾನ್ವಯದ ಮೂಲಸಂಘದ ಂತತಿಯ ಮುನಿಚಂದ್ರ ಭಟ್ಟಾರಕರಿಗೆ ಒಪ್ಪಿಸಿದೆ. ಈ ಾಸನದಲ್ಲಿ ದಾನ ಕೊಡುವವನ ಮತ್ತು ದಾನ ಪಡೆದವನ ಂಶಾವಳಿಯ ವಿವರವಿದೆ.

ಕ್ರಿ.ಶ. ೧೧೪೫ರ ಕಂಬದಳ್ಳಿ ಒಂದನೇ ನರಸಿಂಹನ ಾಸನದಲ್ಲಿ ದತ್ತಿಯನ್ನು ದಾಖಲಿಸಿದೆ. ಬಸದಿಯಲ್ಲಿ ನಡೆವ ೂಜೆಗೆ ಮತ್ತು ಆಹಾರದಾನಕ್ಕೆ ಹಿರಿಯದೇವ ಷ್ಣುವರ್ಧನನು ಬಿಟ್ಟ ದತ್ತಿ ಖರ್ಚಿಗೆ ಸಾಲದಿರಲು ಜಗದೇಕ ಲ್ಲ ನರಸಿಂಹನು ಮೊದಲಹಳ್ಳಿಯನ್ನು ಶಾನ್ತಿನಾಥದೇವರಿಗೆ ೂಜೆಗೆಂದು ಮತ್ತು ಗಣ್ಡವಿಮುಕ್ತಿ ಸಿದ್ಧಾನ್ತದೇವರ ಶಿಷ್ಯರಾದ ುಜೆಯಾನೆದಣ್ಣನಾಯಕರಿಗೂ ಮತ್ತು ಭರತಿಮಯ್ಯ ಣ್ಡನಾಯಕರಿಗೂ ಧಾರಾಪೂರ್ವಕವಾಗಿ ಕೊಟ್ಟನು. ಕ್ರಿ.ಶ. ೧೬೮ರ ಕಂಬದಹಳ್ಳಿ ಶಾಸನದಲ್ಲಿ ಪಾರ್ಶ್ವನಾಥದೇವರ ೇವಾಲಯ ಜೀರ್ಣೋದ್ಧಾರಗೋಸ್ಕರ ಗಂಗ ವಂಶದ ುದ್ದರಸಿ ಮತ್ತು ನೇಮಿದಂಡೇಶನ ಮಗ ಪಾರ್ಶ್ವದೇವನು ೪ ಖಂಡುಗ ಗದ್ದೆಎ ಮತ್ತು ೫೦ ಖುಷ್ಕಿ ಭೂಮಿಯನ್ನು ದ್ಯಾರ್ಥಿಗಳ ಆಹಾರದಾನಕ್ಕೆ ದತ್ತಿಯನ್ನು ಬಿಟ್ಟ ಾಖಲೆಯಿದೆ. ಮತ್ತು ಪುಸ್ತಕಗಚ್ಛ, ದೇಶಿಯಗಣ, ೂಲಸಂಘದ ಸಂತತಿಯಲ್ಲಿ ಹನಸೋಗೆ ದಿವ್ಯ ಮುನಿಗಳಿಗೆ ೇರಿದ ದೇವಾಲಯವಿದೆ ಎಂದು ತಿಳಿಸುತ್ತದೆ. ಕ್ರಿ.ಶ. ಸುಮಾರು ೨ನೇ ಶತಮಾನದ ಇದೇ ಗ್ರಾಮದ ಶಾಸನ ಶಾಂತಿನಾಥ ೇವರ ಪೂಜೆಗೋಸ್ಕರ ದಕ್ಷಿಣದ ತೂಬಿನ ಕೆಳಗೆ ಒಂದು ಂಡುಗ ನೀರಾವರಿ ಭೂಮಿಯನ್ನು ಚಂಗಿಕುಳ ಸಾಮಂತ ಭರತೆಯ ನಾಯಕನು ಧಾರಾಪೂರ್ವಕವಾಗಿ ದತ್ತಿ ಬಿಟ್ಟ ದಾಖಲೆಯಿದೆ. ಮತ್ತೊಂದು ಶಾಸನದಲ್ಲಿ ಶ್ರೀಮೂಲಸಂಘದ ಕೊಂಡಕುಂದಾನ್ವಯದ, ದೇಶಿಗಣದ, ಪುಸ್ತಕಗಚ್ಛದ ಸಂತತಿಯ ಶ್ರೀಪ್ರಭಾಚಂದ್ರ ಸೈದ್ಧಾನ್ತಿಕರ ಶಿಷ್ಯತಿಯರು ಕಮವ್ವೆ ಜಕವೆಕನ್ತಿಯರ ನಿಸಿಧಿಯನ್ನು ಮಾಡಿಸಿದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ಶಾಸನ ಶಾನ್ತಿನಾಥ ಬಸದಿಯನ್ನು ಕಟ್ಟಿಸಿದ ವಿವರಗಳನ್ನು ನೀಡುತ್ತದೆ. ದ್ರೋಹಘರಟ್ಟ ಬಿರುದಿನ ಗಂಗರಾಜನ ಪುತ್ರ ಬೋಪ್ಪದೇವ ನಿಗೆ ಅದೇ ಬಿರುದನ್ನು ಹೊಂದಿದ ರುವಾರಿ (ದ್ರೋಹಘರಟ್ಟಾ ಚಾರಿ) ಹೊಸಬದಿಯೊಂದನ್ನು ಕಟ್ಟಿ ಒಪ್ಪಿಸಿದ ವಿವರವಿದೆ. ಕಸಲಗೆರೆ ೧೨ನೇ ಶತಮಾನದ ಶಾಸನದಲ್ಲಿ ಕಲ್ಕಣಿನಾಡ ಎಕ್ಕೋಟಿ ಜಿನಾಲಯ ಎಂದು ಹೆಸರಿಸಿದೆ. ಈ ಜಿನಾಲಯದ ರೂವಾರಿ ಮಾಚೋಜ ಕಲುಕಣಿನಾಡಿನವನು ಎಂಬ ಬರಹವಿದೆ.

ಕ್ರಿ.ಶ. ೧೧೭೫ರ ಎರಡನೇ ಬಲ್ಲಾಳನ ಬೋಗಾದಿ ಶಾಸನ ಶ್ರೀಕರಣ ಜಿನಾಲಯದ ಶ್ರೀ ಪಾರ್ಶ್ವದೇವರ ಅಷ್ಟಾವಿಧ್ಯಾರ್ಚನೆಗೆಂದು ಮಹಾಪ್ರಧಾನನಾದ ಸರ್ವಾಧಿಕಾರಿ ಹೆಗ್ಗಡೆಬಲ್ಲಯ್ಯನು ಶ್ರೀ ಪದ್ಮಪ್ರಭುಸ್ವಾಮಿಗಳಿಗೆ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೭೮ರ ಹಟ್ಟಣ ಶಾಸನದಲ್ಲಿ ಪಾರ್ಶ್ವ ಜಿನಾಲಯ ಜೀರ್ಣೋದ್ಧಾರಕ್ಕೆ ಮತ್ತು ಪೂಜೆ, ನೈವೇದ್ಯ, ಆಹಾರದಾನಕ್ಕೆಂದು ನಾಯಕೀರ್ತ್ತಿಸಿದ್ಧಾನ್ತ ದೇವರ ಶಿಷ್ಯ ಬಾಳಚಂದ್ರರ ಕಾಲು ತೊಳೆದು ಪಟ್ಟಣಸ್ವಾಮಿ ಸೋವಿಸೆಟ್ಟಿ ದಾನ ನೀಡಿದ್ದಾನೆ. ಕ್ರಿ.ಶ. ೧೧೮೨ರ ಅಳೀಸಂದ್ರ ಶಾಸನದಲ್ಲಿ ಚಾಕೆಯನಹಳ್ಳಿ ಬಸದಿಯಪೂಜೆ ನೈವೇದ್ಯಕ್ಕೋಸ್ಕರ ಮೂಲ ಸಂಘ, ದೇಸಿಯಗಣ, ಪುಸ್ತಕಗಚ್ಛ, ಕೊಂಡಕುಂದಾನ್ವಯ ಸಂತತಿಯ ದೇವಕೀರ್ತ್ತಿಪಂಡಿತ ದೇವರ ಶಿಷ್ಯರಾದ ದೇವಚಂದ್ರ ಪಂಡಿತದೇವರಿಗೆ ಮಹಾಪ್ರಧಾನ ಭರತಿಮಯ್ಯ ದಂಡನಾಯಕನು ಮತ್ತು ಬಾಹುಬಲಿ ದಂಡನಾಯಕನು ದಾನ ನೀಡಿದ ದಾಖಲೆಯಿದೆ. ಹಾಗೂ ಈ ಶಾಸನ ಹೊಯ್ಸಳ ವಂಶಾವಳಿಯನ್ನು ತಿಳಿಸುವುದರ ಜೊತೆಗೆ ನಾಲ್ಕು ತೇದಿಗಳನ್ನು ಹೊಂದಿರುವ ಶಾಸನವಾಗಿದೆ.

ಕ್ರಿ.ಶ. ೧೩ನೇ ಶತಮಾನದ ಕೆಳಗೆರೆ ಶಾಸನ ಮೂರನೇ ಬಲ್ಲಾಳ ವಂಶಾವಳಿಯನ್ನು ತಿಳಿಸುತ್ತದೆ. ಈ ಒಂದು ಕಂಬದ ಶಾಸನದಲ್ಲಿ ತ್ರಿಕೋಟರತ್ನತ್ರಯದ ಶಾಂತಿನಾಥಬಸದಿಯ ಅಂಗರಂಗಭೋಗ ಆಹಾರದಾನಕ್ಕೆ ಚಿಕಕಂನೆಯ ಹಳ್ಳಿ ಗ್ರಾಮವನ್ನು ಬಲತ್ಕಾರಗಣ ಮೂಲಸಂಘ ಕುಮುದ ಚಂದ್ರಭಟ್ಟಾರಕ ದೇವನ ಶಿಷ್ಯನಾದ ಮಹಾಘನನಂದಿ ಸಿದ್ಧಾನ್ತ ಚಕ್ರವರ್ತಿಗೆ ಮೂರನೇ ವೀರನರಸಿಂಹನು ದಾನನೀಡಿದ ದಾಖಲೆಯಿದೆ. ಇದೇ ಶತಮಾನದ ಕಂಬದಹಳ್ಳಿ

ತೀರ್ಥಬಸದಿಗೆ ಏಕ್ಕೋಟಿಜಿನಾಲಯ ಎಂಬ ಬಿರುದನ್ನು ಮತ್ತು ಬಸದಿಗೆ ಪಂಚಾಮಹಾಶಬ್ದ ಮರ್ಯಾದೆಯನ್ನು ಜೊತೆಗೆ ಬೆರಿ ವಾದ್ಯ ಸೇರಿದ ವಿವರವಿದೆ.

ಕ್ರಿ.ಶ. ಸುಮಾರು ೧೭ನೇ ಶತಮಾನದ ಮೈಸೂರು ದೇವರಾಜ ಒಡೆಯರ ಬೆಳ್ಳೂರು ಶಾಸನದಲ್ಲಿ ಸಕ್ಕರೆಸೆಟ್ಟಿ ಎಂಬುವನು ವಿಮಲನಾಥನ ಚೈತ್ಯಾಲಯ ನಿರ್ಮಿಸಿ ಶ್ರೀ ಮತ್ತು ಡಿಳ್ಳಿ ಕೊಲ್ಲಾಪುರ ಜಿನಕಂಚಿಪೆನುಗೊಂಡೆ ಸಿಂಹಾಸನಾ ಧಿಶ್ವರನಾದ ಲಕ್ಷ್ಮೀಸೇನಭಟ್ಟಾರಕರ ಪ್ರತಿಭೋದದಿಂದ ದೇವರಾಜ ಒಡೆಯರು ಚೈತ್ಯಾಲಯಕ್ಕೆ ದಾನ ನೀಡಿದ ದಾಖಲೆಯಿದೆ. ಇದೇ ಊರಿನ ಮತ್ತೊಂದು ಶಾಸನ ಹುಲಿಕಲ್ಲ ಪದ್ಮಕುಲಕ್ಕೆ ಸೇರಿದ ಒಬ್ಬ ವ್ಯಾಪಾರಸ್ಥ ಸರಕರ ಜಿನಮಂದಿರ ಪ್ರತಿಷ್ಠಾಪಿಸಿದ ವಿವರವಿದೆ. ೧೭ನೇ ಶತಮಾನದ ಬೆಳ್ಳೂರು ಶಾಸನದಲ್ಲಿ ಸಮಂತಭದ್ರಾಚಾರ್ಯ್ಯರ ಶಿಷ್ಯ ಲಕ್ಷ್ಮೀ ಸೇನಾಚಾರ್ಯ್ಯರು ವಿಮಲನಾಥ ವಿಗ್ರಹ ಪ್ರತಿಷ್ಠಾಪಿಸಿದ ವಿವರವಿದೆ.

ಕ್ರಿ.ಶ. ೧೬೮೦ರ ಹರತಿ ಮನೆತನದ ರಾಯಪ್ಪ ರಾಜನ ಬೆಳ್ಳೂರು ತಾಮ್ರಶಾಸನದಲ್ಲಿ ಸಿರೆಹಡಸೀಮಯೊಳಗಣ ಸಂತೆದೊಡ್ಡೇರಿ ಹೋಬಳಿಯ ಬಡುವನಹಳ್ಳಿ ಸ್ಥಳದಲ್ಲಿ ಇರುವ ಅಪ್ಪಿನಹಳ್ಳಿ ಗ್ರಾಮವನ್ನು ಭಟ್ಟಾರಕರ ಶಿಷ್ಯರಾದ ಜೈನ ಪ್ರವಾಚಕರಾದ ಲಕ್ಷ್ಮೀಸೇನ ಭಟ್ಟಾರಕರಿಗೆ ದಾನ ನೀಡಿದ ವಿವರ ಹಾಗೂ ಈ ದಾನವನ್ನು ಪಡೆದವನು ರತ್ನಗಿರಿಯಲ್ಲಿ ಜೀರ್ಣೋದ್ಧಾರ ಮಾಡಿಸಿ ಜೈನ ಪ್ರತಿಮೆಯನ್ನು ಸ್ಥಾಪಿಸಲು ಹರತಿ ಮುಖ್ಯಸ್ಥ ರಂಗಪ್ಪರಾಜನ ಮೊಮ್ಮಗ ಕೃಷ್ಣಪ್ಪರಾಜನ ಮಗನು ರಾಯಪ್ಪ ರಾಜನು ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೧೭-೧೮ನೆಯ ಕಂಬದಹಳ್ಳಿ ಶಾಸನ ಬೆಟ್ಟದ ಶ್ರೀಚಂದ್ರಪ್ರಭಸ್ವಾಮಿಯ ಅರ್ಚನೆಗೆ ಕೋಮಲಕಟ್ಟೆ ಕಟ್ಟಿ ಅರ್ಪಿಸಿದ ಸೇವೆಯನ್ನು ತಿಳಿಸುತ್ತದೆ. ಬೆಟ್ಟದ ಮೇಲೆ ಚಂದ್ರಪ್ರಭಸ್ವಾಮಿಯ ಜಿನಾಲಯ ಇದ್ದಿತೆ ಎಂಬುದು ಪ್ರಶ್ನೆ.

ಜೈನಧರ್ಮಕ್ಕೆ ಮಹತ್ತರವಾದ ಕಾಲ ಹೆಚ್ಚಿನ ಸಂಖ್ಯೆಯ ಜನರು ಮತ್ತು ಸ್ಥಳೀಯ ಆಳ್ವಿಕೆಗಾರರ ಮನೆತನ ಅದರಲ್ಲಿಯೂ ೧೨ ನೇ ಶತಮಾನದಲ್ಲಿ ಅನೇಕ ವಾಣಿಜ್ಯ ಸಂಘಗಳು ಮತ್ತು ಸ್ಥಳೀಯ ವಿಧಾನಸಭೆ, ಹಳೆಕಟ್ಟಡಗಳನ್ನು ಜೀರ್ಣೋದ್ಧಾರ ಮಾಡಿ ಹೊಸ ಜೈನ ಬಸದಿಗಳನ್ನು ಕಟ್ಟಿದ್ದಾರೆ. ಜೈನ ಧರ್ಮೀಯರಲ್ಲಿ ಭಕ್ತಿ ಒಂದು ಸಾಮಾನ್ಯವಾದ ಚಟುವಟಿಕೆ. ಅನೇಕ ಆಳುವ ಮನೆತನಗಳು ಅವರ ಸೇವೆಗಳು ಯಾವುದೇ ವಿವರಣೆ ಇಲ್ಲದೆ ಒಂದು ನಂಬಿಕೆ ಪ್ರಾಂತ್ಯಗಳ ಮಿತಿಯಲ್ಲಿ ಅವರ ಸ್ವಂತ ಚಿಕ್ಕ ಚಿಕ್ಕ ಸಂಸ್ಥಾನಗಳಾಗಿದ್ದವು. ಕೆಲವು ಶಾಸನಗಳು ಜೈನ ಧರ್ಮ ಮತ್ತು ಜೈನ ಬಸದಿಗಳು ಈ ಪಟ್ಟಣಗಳಲ್ಲಿ ಮಹಾರಾಜರ ಸಾಮ್ರಾಜ್ಯದ ಅಧಿಕಾರ, ಸ್ಥಳೀಯ ಆಳ್ವಿಕೆಗಾರರ ಸ್ಥಳೀಯ ಸಂಘಗಳಲ್ಲಿತ್ತು. ಜೈನ ಮುನಿಗಳು ಅಧಿಕಾರ ಸ್ಥಾಪಿಸಿದರು. ಜೈನ ಶಿಕ್ಷಕರು ಅನೇಕ ಬಿರುದುಗಳನ್ನು ಹೊಂದಿದ್ದರು. ರಾಜಗುರು ಮತ್ತು ಕುಲಗುರು ಅನೇಕ ಚೈತ್ಯಾಲಯಗಳನ್ನು ಕಟ್ಟಿ ಜೋರ್ಣೋದ್ಧಾರ ಮಾಡಿದ್ದಾರೆ. ಜೈನ ಮುನಿಗಳ ಹೇಳಿಕೆಯ ಮೇರೆಗೆ ಈ ದೇವಸ್ಥಾನ ಈ ಚೈತ್ಯಾಲಯಗಳಿಗೆ ಹಿಂದಿನ ದಿನಗಳಲ್ಲಿ ಅನೇಕ ದತ್ತಿಗಳು ಮಧ್ಯಕಾಲದ ದಿನಗಳಲ್ಲಿ ದತ್ತಿಕೊಟ್ಟ ಬಗ್ಗೆ ಶಾಸನಗಳಲ್ಲಿ ವಿವರವಿದೆ.

ಜೈನ ಧರ್ಮದಲ್ಲಿ ನಾಲ್ಕು ದಾನಗಳು ಪ್ರಮುಖವಾದವು

೧. ಆಹಾರದಾನ

೨. ಅಭಯದಾನ (ರಕ್ಷಣೆ)

೩. ಅಶುದ್ಧದಾನ ಔಷಧೋಪಚಾರ

೪. ಶಾಸ್ತ್ರದಾನ (ಧರ್ಮದ ತಿಳುವಳಿಕೆ)

ಜೈನ ವಾಸ್ತುಶಿಲ್ಪ ದೃಷ್ಟಿಯಿಂದ ಅಧ್ಯಯನ ಮಾಡಲು ಬಸದದಿಗಳು, ಮಾನಸ್ತಂಭಗಳು, ವಾಸ್ತುಶಿಲ್ಪಕಲ್ಲು ಮತ್ತು ಕಂಚು, ಗೋರಿಗಳು, ಮಂಟಪಗಳು ಎತ್ತರ ಉದ್ದವಾದ ಕಂಬಗಳು ಹಿಂದೂ ದೇವಾಲಯಗಳ ರೀತಿಯಲ್ಲಿವೆ.

ಜೈನಧರ್ಮ ಬೌದ್ಧ ಧರ್ಮದಂತೆ ವಿದೇಶಗಳಲ್ಲಿ ಪ್ರಸರಿಸಿಲ್ಲವಾದರೂ ಭಾರತಾದ್ಯಂತ ಹರಡಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಕರ್ನಾಟಕದಲ್ಲಿ ಇದರ ಪ್ರವೇಶ ಯಾವಾಗ ಆಯಿತೆಂಬುದು ಖಚಿತವಾಗಿ ಹೇಳಲು ಕಷ್ಟಸಾಧ್ಯವಾಗಿದೆ. ಜೈನ ಸಂಪ್ರದಾಯಿಕ ಆಧಾರವನ್ನು ಅವಲಂಬಿಸಿರುವ ಈ ಸಂಗತಿಗೆ ಐತಿಹಾಸಿಕ ದಾಖಲೆಗಳು ಕಡಿಮೆ.



## ಅಧ್ಯಯನ ಪುಸ್ತಕಗಳು


೧. ಐ.ಆರ್.ಐ.ಇ.

೨. ಎಪಿಗ್ರಾಪಿಯ ಕರ್ನಾಟಕ ಸಂಪುಟ ೭.



# ನಂಜನಗೂಡು ಪ್ರದೇಶದ ಶಾಸನೋಕ್ತ ನಾಡುಗಳು

ಡಾ. ಎಸ್. ಶಿವರಾಮು*

**ಚ**ರಿತ್ರೆಯ ವಿವಿಧ ಕಾಲಘಟ್ಟಗಳನ್ನು ಅವಲೋಕಿಸಿದಾಗ ವಿವಿಧ ಅರಸು ಮನೆತನಗಳು ಆಡಳಿತವನ್ನು ಸರಳವಾಗಿ, ಸುಲಭವಾಗಿ, ಪ್ರಾಮಾಣಿಕವಾಗಿ ಹಾಗೂ ತೃಪ್ತಿಕರವಾಗಿ ನಿರ್ವಹಿಸಲು ಒಂದು ಸಾಮ್ರಾಜ್ಯವನ್ನು ಶ್ರೇಣಿಕೃತವಾಗಿ ವಿಭಜಿಸಿಕೊಂಡು ನಿರ್ವಹಿಸುತ್ತಿದ್ದರು. ಸಮರ್ಪಕವಾಗಿ ಸಾಮ್ರಾಜ್ಯವನ್ನು ವಿಭಜಿಸಿ ಆಡಳಿತ ನಿರ್ವಹಣೆಯಲ್ಲಿ ಒಂದು ಹೊಸ ಆಯಾಮವನ್ನು ಅಂದಿನ ಆಡಳಿತಗಾರರು ಸೃಷ್ಟಿಸಿದರೆಂದರೆ ತಪ್ಪಾಗಲಾರದು ಮಧ್ಯಕಾಲೀನ ಕಾಲಘಟ್ಟದ ಆಡಳಿತ ನಿರ್ವಹಣೆಯನ್ನು ಗಮನಿಸಿದಾಗ ರಾಜ್ಯವನ್ನು ನಾಡು, ಮಂಡಲ, ವಿಷಯ, ಸೀಮೆ, ವೇಂಟೆ, ಚಾವಡಿ, ವಳಿತ, ಸ್ಥಳ, ನಗರ, ಗ್ರಾಮ ಹಳ್ಳಿ ಮುಂತಾದ ಘಟಕಗಳ ಮೂಲಕ ಆಡಳಿತ ನಿರ್ವಹಿಸುತ್ತಿದ್ದುದು ಶಾಸನಗಳ ಅಧ್ಯಯನದಿಂದ ಗೊತ್ತಾಗುತ್ತದೆ.

ಈ ರೀತಿಯ ಆಡಳಿತ ವ್ಯವಸ್ಥೆಯು ಎಲ್ಲಾ ಅರಸು ಮನೆತನಗಳು ಅನುಸರಿಸುತ್ತಿದ್ದು, ಕಾಲಕಾಲಕ್ಕೆ ಒಂದು ಅರಸು ಮನೆತನದಿಂದ ಮತ್ತೊಂದಕ್ಕೆ ಅದು ಸಾಕಷ್ಟು ರೂಪಾಂತರ ಗೊಳ್ಳುತ್ತಲೇ ಬಂದಿರುವುದು ಗಮನಾರ್ಹ. ಕಾಲಕ್ರಮೇಣ ಅದರ ವ್ಯಾಪ್ತಿ ಭಾಷಿಕವಾಗಿ ಮತ್ತು ಹೆಸರುಗಳಲ್ಲಿ ಕೆಲವೊಂದು ಮಾರ್ಪಾಟುಗಳು ಆಗುತ್ತಿದ್ದವು. ಈ ಹಿನ್ನಲೆಯಲ್ಲಿ ಈ ಪ್ರಬಂಧದಲ್ಲಿ ನಾಡು ಎಂಬ ಒಂದು ಆಡಳಿತ ಘಟಕದ ಬಗ್ಗೆ ಚರ್ಚಿಸಲಾಗಿದ್ದು, ನಂಜನಗೂಡು ಪ್ರದೇಶದ ವ್ಯಾಪ್ತಿಯಲ್ಲಿ ನಾಡುಗಳ ರಚನೆ, ವಿಕಾಸ ಮತ್ತು ಬೆಳವಣಿಗೆಯ ಹಂತಗಳನ್ನು ಶಾಸನಗಳ ಹಿನ್ನಲೆಯಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ನಾಡು ಎಂಬ ಆಡಳಿತ ಘಟಕದ ಬಗ್ಗೆ ಹಲವು ಅಭಿಪ್ರಾಯಗಳನ್ನು ವಿದ್ವಾಂಸರು ನೀಡಿದ್ದಾರೆ. 'ನಾಡು' ಎಂಬುದಕ್ಕೆ ಕಾಡಲ್ಲದ ಜನವಸತಿಯುಳ್ಳ ಪ್ರದೇಶ ಭೂಭಾಗ ಎಂಬ ಅರ್ಥವಿದೆ. ಈ ಪದ ದೇಶ, ರಾಜ್ಯ, ರಾಷ್ಟ್ರ ಎಂಬ ಅರ್ಥದಲ್ಲೂ ಬಳಕೆಯಾಗಿದೆ. ಕನ್ನಡದಲ್ಲಿ ಲಭ್ಯವಿರುವ ಅತ್ಯಂತ ಪ್ರಾಚೀನ ಕಾವ್ಯವಾದ ಕವಿರಾಜಮಾರ್ಗದಲ್ಲಿ 'ನಾಡು' ಪದ ಬಳಕೆಯಾಗಿದೆ. ಈ ಕೃತಿಯಲ್ಲಿ ಕಾವೇರಿ ಮತ್ತು ಗೋದಾವರಿ ನದಿಗಳ ಮಧ್ಯದ ನಾಡು ಕನ್ನಡ ನಾಡಾಗಿತ್ತು ಎಂದು ಹೇಳಲಾಗಿದೆ.[೧]

ಒಂದು ರಾಜಮನೆತನ ರಾಜಧಾನಿಗೆ ಹತ್ತಿರವಿರುವ ಪ್ರದೇಶಗಳನ್ನು ರಾಜನೇ ನೇರವಾಗಿ ಆಡಳಿತ ನಡೆಸುತ್ತಿದ್ದನು. ಉಳಿದ ಭಾಗಗಳನ್ನು ಅಧಿಕಾರಿ ವರ್ಗದವರಿಂದ ಆಳ್ವಿಕೆ ನಡೆಸುತ್ತಿದ್ದನು. ಇಲ್ಲಿ ರಾಜನ ಪರೋಕ್ಷ ಆಳ್ವಿಕೆ ಇರುತ್ತಿತ್ತು. ಅವುಗಳನ್ನು ಮಂಡಲಗಳಾಗಿ ವಿಂಗಡಿಸಿ ಒಂದೊಂದು ಮಂಡಲಕ್ಕೂ ಮಂಡಲೇಶ್ವರರನ್ನು ನೇಮಿಸುತ್ತಿದ್ದರು. ಆ ಮಂಡಲವನ್ನು ಮತ್ತೆ ನಾಡುಗಳಾಗಿ ವಿಂಗಡಿಸಿ ಆಯಾ ನಾಡುಗಳಿಗೆ 'ನಾಡಪ್ರಭು' ಅಥವಾ 'ನಾಡಗಾವುಂಡು' ಗಳನ್ನು ನೇಮಿಸುತ್ತಿದ್ದರು. ರಾಜ ಅವನ ಅಧೀನನಾಗಿ ಮಂಡಳೇಶ್ವರ ಅವನ ಕೆಳಗೆ ನಾಡಪ್ರಭು ಅವನ ಕೆಳಗೆ ಗಾವುಂಡ ಈ ಶ್ರೇಣಿ ಕೃತ ವ್ಯವಸ್ಥೆಯ ಅಧಿಕಾರಿಗಳಿದ್ದರೆಂದು ತಿಳಿದು ಬರುತ್ತದೆ ಎಂಬುದು ಚಿದಾನಂದಮೂರ್ತಿಯವರ ಅಭಿಪ್ರಾಯವಾಗಿದೆ.[೨]

ನಂಜನಗೂಡು ಪ್ರದೇಶದಲ್ಲಿ ದೊರೆತಿರುವ ಶಾಸನ ಗಳಲ್ಲಿ ಹಲವು ನಾಡುಗಳ ಪ್ರಸ್ತಾಪವಿದೆ. ಅವುಗಳಲ್ಲಿ ಮುಖ್ಯವಾದವು ಎಡೆತೊರೆನಾಡು ಅಥವಾ ಎಡೆನಾಡು, ತೊರೆನಾಡು, ಪುನ್ನಾಡು, ಕೊಂಗುನಾಡು, ಮೈಸೆನಾಡು ಅಥವಾ ಮಹಿಶೂರನಾಡು, ಇಡ್ಯೆನಾಡು, ಕರ್ಯೆನಾಡು, ನಗುನಾಡು, ಹಿರಿಯನಾಡು, ಬಡಗೆರೆನಾಡುಗಳನ್ನು ಶಾಸನಗಳು ಉಲ್ಲೇಖಿಸಿವೆ. ಎಡೆದೊರೆ ಪದದ ಅತ್ಯಂತ ಪ್ರಾಚೀನ ಉಲ್ಲೇಖ ಕ್ರಿ.ಶ. ೭-೮ನೇ ಶತಮಾನದ ನಂಜನಗೂಡು ತಾಲ್ಲೂಕಿನ ಬಸವನಪುರ ಶಾಸನದಲ್ಲಿದೆ.[೩] ಅದನ್ನು ಎಡೆದೊರೆನಾಡು ವಿಷಯವೆಂದು ಶಾಸನವು ಸ್ಪಷ್ಟವಾಗಿ ಉಲ್ಲೇಖಿಸಿದೆ. ಆದ್ದರಿಂದ ಈ ವೇಳೆಗಾಗಲೇ ಅದು ಒಂದು ಆಡಳಿತ ವಿಭಾಗವಾಗಿದ್ದಿತು. ಮೈಸೂರು ಜಿಲ್ಲೆಯಲ್ಲಿ ಬರುವ ಈ ಎಡದೊರೆ-೧೦೦೦ ವಿಭಾಗವು ಕಾವೇರಿ ನದಿಯ ಸಮೀಪದಲ್ಲಿದೆ. ಎಡೆನಾಡಿನ ಉಲ್ಲೇಖ ೭-೮ನೇ ಶತಮಾನದಿಂದ ಸುಮಾರು ೧೬ನೇ ಶತಮಾನ ದವರೆಗೆ ಶಾಸನಗಳಲ್ಲಿ ಸತತವಾಗಿ ಅದರ ಪ್ರಸ್ತಾವನೆಯನ್ನು

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನಂಜನಗೂಡು, ಮೈಸೂರು ಜಿಲ್ಲೆ-೫೭೧೩೦೧.

ಗಮನಿಸಬಹುದಾಗಿದೆ. ಅಂದರೆ ಈ ವಿಭಾಗವು ಸರಿಸುಮಾರು ೯೦೦ವರ್ಷಗಳವರೆಗೆ ಹೆಚ್ಚಿನ ಬದಲಾವಣೆಗಳಿಲ್ಲದೆ ಎಲ್ಲಾ ಅರಸು ಮನೆತನದವರು ಸದರಿ ಆಡಳಿತ ವಿಭಾಗವನ್ನು ಉಳಿಸಿಕೊಂಡು ಬಂದಿರುವುದು ಸಾಬೀತಾಗುತ್ತದೆ.[೪]

ಎಡೆತೊರೆನಾಡು, ಎಡೆದೊರೆನಾಡು, ಎಡೆನಾಡು ಎಂದು ಪ್ರತ್ಯೇಕವಾಗಿಯೂ ಅದರ ಜೊತೆಗೆ ಸ್ಥಳ ನಾಮದೊಂದಿಗೆ ಕಲೆತು ಶಾಸನಗಳಲ್ಲಿ ಉಕ್ತವಾಗಿದೆ. ಎಡತೊರೆ ಎಡದೊರೆನಾಡು ತಮಿಳುಭಾಷೆಯಲ್ಲಿ ಇರುವ ಶಾಸನಗಳಲ್ಲಿ ತಮಿಳೀಕರಣಗೊಂಡು ಇಡೈತುರೈನಾಡು, ಇಡೈನಾಡು ಎಂದು ಉಲ್ಲೇಖಿಸಲ್ಪಟಿದೆ. ಎಡತೊರೆನಾಡು ಹಾಗೂ ಎಡೆನಾಡು ಒಂದೇ ಆಗಿದ್ದು, ಶಾಸನಗಳಲ್ಲಿ ಎರಡು ರೀತಿಯಾಗಿಯೂ ಕಾಣಿಸಿಕೊಳ್ಳುತ್ತದೆ.

ಎಡತೊರೆನಾಡು, ಎಡೆನಾಡು ಪದದ ನಿಷ್ಪತ್ತಿಯು ಈ ರೀತಿಯಾಗಿದೆ. ಎಡ (ಡೆ) + ತೊ(ದೊ)ರೆ +ನಾಡು ಎಂಬ ಎರಡು ಪದಗಳಿಂದ ಕೂಡಿದೆ. ಎಡ ಎಂದರೆ ಎಡೆಯಲ್ಲಿ ಇರುವ ಪ್ರದೇಶವೆಂದು, ಎಡತೊರೆ, ಎಡದೊರೆ ಎಂದರೆ ಎರಡು ನದಿಗಳ /ತೊರೆಗಳ ನಡುವಿನ ಪ್ರದೇಶಕ್ಕೆ ಎಡತೊರೆ ಎಂದು ಹೆಸರು. ಎಡದರೆ ಎಡಗಡೆ ಇರುವುದು ಎಂಬುದಾಗಿಯೂ, ರಾಜ್ಯದ ಎಡಗಡೆ ಇರುವ ನಾಡು ಎಂದು ಅರ್ಥೈಸಬಹುದಾಗಿದೆ.[೫] ಬಸವನಪುರ ಶಾಸನವು ಪುನ್ನಾಡಿನ ಒಡೆಯ ಸ್ಕಾಂದವರ್ಮನು ಎಡತೊರೆನಾಡಿನ ಕಪಿನಿನದಿ ಸಮೀಪದ ಮುತ್ತಲವಿಯೂರು ಗ್ರಾಮವನ್ನು ಬ್ರಾಹ್ಮಣರಿಗೆ ದಾನ ಮಾಡಿದ ವಿವರಗಳನ್ನು ನೀಡುತ್ತದೆ. ನಂಜನಗೂಡು ತಾಲ್ಲೂಕಿನ ಶಿವಸ್ಕಂದವರ್ಮನ ಆಳ್ವಿಕೆಯ ಅವಧಿಯ ಮೂಡಹಳ್ಳಿಯ ಶಾಸನವು ಬಹಳಷ್ಟು ಶಿಥಿಲಗೊಂಡಿದ್ದು ಅದರಲ್ಲಿ ಎಡೆತೊರೆನಾಡು ಪ್ರದೇಶದಲ್ಲಿ ದಾನದ ವಿವರವಿದೆ.[೬]

ಪುನ್ನಾಡನ್ನು ಪ್ರಸ್ತಾಪಿಸುವ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ನಂಜನಗೂಡು ಪ್ರದೇಶದಲ್ಲಿ ದೊರೆತಿವೆ.[೭] ಪುನ್ನಾಡನ್ನು ಎಡೆನಾಡು ಅಥವಾ ಎಡೆತೊರೆ ನಾಡಿನ ಜೊತೆಯಲ್ಲಿ ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ಪುನ್ನಾಡು ಕಾವೇರಿ ಮತ್ತು ಕಪಿನಿ ನದಿಗಳ ನಡುವೆ ಇರುವ ಪ್ರದೇಶ ಕ್ರಿ.ಶ. ೮೭೦–೮೭೧ರ ನಂಜನಗೂಡು ತಾಲ್ಲೂಕಿನ ಒಂದು ಶಾಸನದಲ್ಲಿ ಗಂಗಯುವರಾಜ ಬೂತುಗ ಕೊಂಗುನಾಡು ಹಾಗೂ ಪುನ್ನಾಡನ್ನು ಆಳುತ್ತಿದ್ದನೆಂಬ ಪ್ರಸ್ತಾಪವಿದೆ.

ಬಡಗೆರೆನಾಡಿನ ಪ್ರಸ್ತಾಪಗಳು ನಂಜನಗೂಡು ಮತ್ತು ಮಳವಳ್ಳಿ ತಾಲ್ಲೂಕಿನ ಶಾಸನಗಳಲ್ಲಿ ಬಂದಿದೆ.[೮] ಮೈಸೆನಾಡಿನ ಬಗ್ಗೆ ಪ್ರಸ್ತಾಪಿಸಿರುವ ಶಾಸನಗಳು ನಂಜನಗೂಡು ತಾಲ್ಲೂಕಿನಲ್ಲಿ ದೊರೆತಿವೆ. ಕ್ರಿ.ಶ. ೧೭ನೇ ಶತಮಾನದ ಕಾರ್‌ಮಂಡಲ ಸಾತಕಮ್ ಎಂಬ ತಮಿಳು ಕಾವ್ಯ ಕರ್ನಾಟಕ ಮತ್ತು ತಮಿಳುರಾಜ್ಯಗಳ ನಡುವೆ ರೈತರಿಗೆ ಇದ್ದ ಸಂಪರ್ಕದ ಮೇಲೆ ಬೆಳಕು ಚೆಲ್ಲುತ್ತದೆ. ಇದರಲ್ಲಿ ಗಂಗವಾಡಿಯನ್ನು ಮುಮ್ಮಡಿಚೋಳ ಮಂಡಲಮ್ ಅಥವಾ ಮಹಿಶೂರನಾಡು ಎಂದು ಕರೆಯಲಾಗುತ್ತಿದ್ದದ್ದನ್ನು ಪ್ರಸ್ತಾಪಿಸಲಾಗಿದೆ. ಮಹಿಶೂರನಾಡು ಆ ನಂತದಲ್ಲಿ ಮೈಸೂರುನಾಡು ಅಥವಾ ಮಹಿಷನಾಡು ಆಗಿರಬೇಕೆಂದು ಖ್ಯಾತ ಇತಿಹಾಸಕಾರನಾದ ಬರ್ಟನ್‌ಸ್ಟೈನ್ ಅಭಿಪ್ರಾಯಪಟ್ಟಿದ್ದಾರೆ.[೯] ನಂಜನಗೂಡು ತಾಲ್ಲೂಕಿನ ಒಂದು ಶಾಸನದಲ್ಲಿ ಇಡೈನಾಡಿನ ಬಗ್ಗೆ ಪ್ರಸ್ತಾಪವಿದೆ.[೧೦] ಇಡೈನಾಡು ಗಂಗವಾಡಿಯ ದಕ್ಷಿಣಕ್ಕಿರುವ ಪ್ರದೇಶ. ನಂಜನಗೂಡು ತಾಲ್ಲೂಕಿನ ೨೬ ಶಾಸನಗಳಲ್ಲಿ ೪೦ ನಾಡುಗಳ ಬಗ್ಗೆ ಪ್ರಸ್ತಾಪವಿದೆ. ಕಾವೇರಿ ನದಿಯ ವಿಶಾಲವಾದ ಹರಿವುಳ್ಳ ನಂಜನಗೂಡು ತಾಲ್ಲೂಕಿನಲ್ಲಿ ಬರುವ ನಾಡುಗಳ ಪ್ರಸ್ತಾಪಗಳು ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಹಾಗೂ ವಿಶೇಷವಾಗಿ ಫಲವತ್ತಾದ ಭೂಮಿಯನ್ನು ಬ್ರಾಹ್ಮಣ ಮತ್ತು ದೇವಾಲಯಗಳಿಗೆ ದಾನಕೊಟ್ಟ ವಿವರಗಳಲ್ಲದೆ; ಕೆರೆ, ದೇವಾಲಯಗಳ ನಿರ್ಮಾಣ, ಹೊಸ ಗ್ರಾಮಗಳ ಸ್ಥಾಪನೆ ಮತ್ತು ಸಂತೆಗಳ ಸ್ಥಾಪನೆಯ ಹಿನ್ನಲೆಯಲ್ಲಿ ಮಾತ್ರವೇ ನಾಡುಗಳ ಪ್ರಸ್ತಾಪ ಬರುತ್ತದೆ.

ನಂಜನಗೂಡು ತಾಲ್ಲೂಕು ಪ್ರದೇಶದಲ್ಲಿ ಕಾವೇರಿ ಮತ್ತು ಕಪಿನಿನದಿ ಹರಿಯುವ ನಡುವಿನ ಪ್ರದೇಶ ಈ ಪ್ರದೇಶದ ನಾಡುಗಳು ಚೋಳ ಹಾಗೂ ಹೊಯ್ಸಳರ ಆಳ್ವಿಕೆಯ ಅವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಬೆಳೆದು ವ್ಯಾಪ್ತಿಯಲ್ಲಿ ವಿಶಾಲ ಪ್ರದೇಶದಲ್ಲಿ ಹರಡಿದ್ದಲ್ಲದೆ ಹಲವು ರೀತಿಯ ಸಾಮಾಜಿಕ ಹಾಗೂ ಆಥಿಕ ಬದಲಾವಣೆಗೆ ಒಳಪಟ್ಟವು. ನಂಜನಗೂಡು ತಾಲ್ಲೂಕಿನ ಕ್ರಿ.ಶ. ೧೧೦೬ರ ಮತ್ತೊಂದು ಶಾಸನ ಕರ್ಯೆನಾಡಿನ ಮುತ್ತಗವುಡನು ದೇವಾಲಯವನ್ನು ನಿರ್ಮಿಸಿ ಒಂದು ಕೆರೆಯನ್ನು ಕಟ್ಟಿಸಿ ಕಾಲುವೆಯನ್ನು ಮಾಡಿಸಿದ ವಿಷಯವನ್ನು ಪ್ರಸ್ತಾಪಿಸುತ್ತದೆ.[೧೧] ನಂಜನಗೂಡು ತಾಲ್ಲೂಕಿನ ಕ್ರಿ.ಶ. ೧೧೯೮ ರ ಒಂದು ಶಾಸನದಲ್ಲಿ ಕಟುರ, ಹುಟಿದ. ಅರಿದರ ಮತ್ತು ಕೊಳದಮ ಎಂಬ ನುಗುನಾಡಿನ ನಾಲ್ವರು ಒಂದು ಕೆರೆಯನ್ನು ತೋಡಿ ದೇವಾಲಯವನ್ನು ನಿರ್ಮಿಸಿದ ಬಗ್ಗೆ ದಾಖಲೆ ಇದೆ.[೧೨]

ನಂಜನಗೂಡು ತಾಲ್ಲೂಕಿನ ೧೨೯೨ರ ಬಂಕಹಳ್ಳಿಯ ಒಂದು ಶಾಸನದಲ್ಲಿ ಕೆರೆಯ ನಿರ್ಮಾಣದ ಬಗ್ಗೆ ಆಕರ್ಷಕ ಮಾಹಿತಿ ದಾಖಲಾಗಿದೆ. ಈ ಶಾಸನದಲ್ಲಿ ಬಯಿಚಯನಾಯಕ ಹಾಗೂ ಮಂಚಣನಾಯಕ ಹೊಕ್ಕುನಾಡಿನ ನಾಡಪ್ರಭು ಗವುಡರು ಹಾಗೂ ಅವರು ಕರೆನಾಡು ಮತ್ತು ಕುಮಾರನಾಡಿನ

ಮೇಲೆ ಪ್ರಭುತ್ವ ಹೊಂದಿದ ವಿಷಯ ತಿಳಿಸುತ್ತದೆ. ಇದರ ಆರಾಧಕರಾದ ಬಿಮುಕಗವುಡ, ಮಲ್ಲಣ್ಣಗವುಡ, ಸಾಂಬವಗವುಡ, ಕೇತಗವುಡ ಹಾಗೂ ಬಿಚ್ಚುಗವುಡು ಬಂಕಿಹಳ್ಳಿ ಎಂಬ ಹೊಸ ಗ್ರಾಮವನ್ನು ಸ್ಥಾಪಿಸಿ ಅಲ್ಲಿ ನೆಲೆಸಿ ಕಾಲಾನುಕ್ರಮದಲ್ಲಿ ಆ ಗ್ರಾಮದಲ್ಲಿ ಒಂದು ಹೊಸಕೆರೆ ಮತ್ತು ಒಂದು ದೇವಾಲಯಗಳನ್ನು ನಿರ್ಮಿಸಿ ಆ ದೇವಾಲಯದ ಸೇವೆಗೆ ಒಂದು ಎಣ್ಣೆಯ ಗಾಣವನ್ನು ಸ್ಥಾಪಿಸಿದ ವಿವರವಿದೆ.[೧೩] ಸ್ಥಳೀಯ ನಾಡಿನ ರೈತರು ವಿವಿಧ ಹಂತಗಳಲ್ಲಿ ನಾಡುಗಳ ದೇವಾಲಯಗಳೊಡನೆ ಸಂಪರ್ಕ ಏರ್ಪಡಿಸಿಕೊಂಡಿದ್ದುದು ಶಾಸನಗಳಿಂದ ವ್ಯಕ್ತವಾಗುತ್ತದೆ. ಕ್ರಿ.ಶ. ೧೧ನೆಯ ಶತಮಾನದ ನಂಜನಗೂಡು ತಾಲ್ಲೂಕಿನ ನಗರ್ಲೆಯ ಒಂದು ಶಾಸನದಲ್ಲಿ ವಿದ್ಯಾಧರಯ್ಯನು ನಾಣಯ್ಯ ದೇವಾಲಯಕ್ಕೆ ಭೂಮಿಯನ್ನು ದಾನಕೊಟ್ಟ ವಿವರ ಮತ್ತು ಸಕ್ಕಿಲೆಬೆಲಗುಂದೂರು, ಕಿರುವೆಲ ಗುಂದೂರು, ಸತ್ತಯೂರು, ಸಿಂಗೂರು ನಗರ್ಲೆ ಗ್ರಾಮಗಳ ಜನರು ಹಾಗೂ ಎಡೆನಾಡಿನ ೩ ಜನ ನಾಡಗವುಡರು ಈ ದಾನಕ್ಕೆ ಸಾಕ್ಷಿಗಳು ಎಂಬ ಉಲ್ಲೇಖವಿದೆ.[೧೪]

ನಂಜನಗೂಡು ತಾಲ್ಲೂಕಿನ ಕ್ರಿ.ಶ. ೧೦೨೧ರ ನಂದಿಗುಂದದ ಒಂದು ಶಾಸನದಲ್ಲಿ ಮಲ್ಲೇಶ್ವರ ದೇವರಿಗೆ ಮೈಸೆನಾಡಿನ ಒಬ್ಬ ಗವುಡನು ದಾನಕೊಟ್ಟ ವಿವರ ಮತ್ತು ದೇವಾಲಯವನ್ನು ಮಲ್ಲಗವುಡ, ಎರಮ್ಮ ಹಾಗೂ ಕುಮಯ್ಯ ಕಟ್ಟಿಸಿದರು ಎಂಬ ಉಲ್ಲೇಖವಿದೆ.[೧೫] ನಂಜನಗೂಡು ತಾಲ್ಲೂಕಿನ ಕ್ರಿ.ಶ. ೧೧೦೬ರ ಸಿಂಧುವಳ್ಳಿಯ ಒಂದು ತಮಿಳು ಶಾಸನದಲ್ಲಿ ಕರೈನಾಡಿನ ಮುತ್ತಗವುಡನು ಒಂದು ದೇವಾಲಯವನ್ನು ಕಟ್ಟಿಸಿ ಮತ್ತು ಒಂದು ಕೆರೆಯನ್ನು ತೋಡಿಸಿ ತೂಬನ್ನು ಕಟ್ಟಿಸಿದ ಮಾಹಿತಿ ಇದೆ.[೧೬] ಕ್ರಿ.ಶ. ೧೨೨೨ರ ನಂಜನಗೂಡು ತಾಲ್ಲೂಕಿನ ಒಂದು ಶಾಸನದಲ್ಲಿ ಕರೆನಾಡಿನ ಎಲಿಚಿಗೆರೆ ಗ್ರಾಮದಲ್ಲಿ ಚಂದಗವುಡನ ಮಗ ವೀರಗವುಡನು ಒಂದು ಶಿವಾಲಯವನ್ನು ಸ್ಥಾಪಿಸಿ ಭೂಮಿಯನ್ನು ನಾಲ್ಕು ದೇವಾಲಯುಕ್ಕೆ ದಾನ ನೀಡಿದ ಉಲ್ಲೇಖವಿದೆ.[೧೭] ನಂಜನಗೂಡು ತಾಲ್ಲೂಕಿನ ಉಪ್ಪಿನಹಳ್ಳಿಯ ಕ್ರಿ.ಶ. ೨೭೮ರ ಒಂದು ಶಾಸನದಲ್ಲಿ ಹಿರಿಯನಾಡಿನ ಮಹಾಪ್ರಧಾನ ಮಂಚಣ ದಂಡನಾಯಕ ಚಾವುಂಡದೇವ ಮತ್ತು ಕೆರೆಯ ಬಚ್ಚಗವುಡ ಪ್ರಭುಗವುಡ, ಮರಿಗವುಡ ಹಾಗೂ ಮಳಲಿಯ ಸುಂಕಶೆಟ್ಟಿ ಮತ್ತು ಇತರ ನಕರರು, ನರಸಿಂಹಪಟ್ಟಣಸ್ವಾಮಿ, ನವುನಮಾಣಿಕ್ಯಶೆಟ್ಟಿ, ಮಮ್ಮಳಿಶೆಟ್ಟಿ, ದೇಶಿಯ ಮಾಣಿಕ್ಯಶೆಟ್ಟಿ ಮತ್ತು ಇತರರು ಒಂದಾಗಿ ಸೇರಿ ವಾರಕ್ಕೊಮ್ಮೆ ಮಂಗಳವಾರ ದಂದು ಸಂತೆ ನಡೆಯುವಂತೆ ಏರ್ಪಾಡು ಮಾಡಿದರು.[೧೮]

ನಾಡುಗಳನ್ನು ಆಳುತ್ತಿದ್ದ ವಿವಿಧ ಸಾಮಾಜಿಕ ಹಾಗೂ ರಾಜಕೀಯ ಹಿನ್ನಲೆಯಲ್ಲಿ ನಾಯಕರ ವಿವರಗಳು ಸಾಕಷ್ಟು ವೈವಿಧ್ಯಮಯವಾಗಿವೆ. ಗಂಗ ಅರಸರ ಆಳ್ವಿಕೆಯ ಅವಧಿಯಲ್ಲಿ ಹಲವಾರು ನಾಡುಗಳನ್ನು ಗಂಗವಂಶಸ್ಥರು ಹಾಗೂ ಸ್ವತಃ ಗಂಗ ಅರಸರೇ ಆಳುತ್ತಿದ್ದುದಕ್ಕೆ ಶಾಸನಗಳಲ್ಲಿ ಮಾಹಿತಿ ಸಿಗುತ್ತದೆ. ಗಂಗಯುವರಾಜ ಬೂತುಗರಸನು ಕೊಂಗುನಾಡು ಹಾಗೂ ಪುನ್ನಾಡನ್ನು ಆಳುತ್ತಿದ್ದ ವಿವರವನ್ನು ಕ್ರಿ.ಶ. ೮೭೦ರ ನಂಜನಗೂಡು ತಾಲ್ಲೂಕಿನ ಹುಸುಕೂರು ಶಾಸನದಲ್ಲಿ ಕೊಡಲಾಗಿದೆ.[೧೯] ಗಂಗ ಅರಸ ಹರಿವರ್ಮ ಕೊರಟಯ್ಯ ಗೌಡನು ಹೆಂಜೇರು ಕಾಳಗದಲ್ಲಿ ಶೌರ್ಯ ಸಾಹಸಗಳನ್ನು ಪ್ರದರ್ಶಿಸಿ ಶತ್ರುಗಳ ಭಂಡಾರವನ್ನು ದೋಚಿದ ಸಾಹಸಕ್ಕಾಗಿ ಬಡಗೆರೆನಾಡಿನ ಅಪ್ಪೊಗಲ್‌ಹಳ್ಳಿಯನ್ನು ದಾನವಾಗಿ ಕೊಟ್ಟ ವಿವರವನ್ನು ತಗಡೂರು ಶಾಸನವು ತಿಳಿಸುತ್ತದೆ.[೨೦] ನಂಜನಗೂಡು ತಾಲ್ಲೂಕಿನ ಕ್ರಿ.ಶ. ೯೭೭ರ ಶಾಸನದಲ್ಲಿ ಎಡೆನಾಡಿನ ಪಿರಿಯಹೊಮ್ಮದ ೧೨ ಮಂದಿ ದಾನಿಗಳು ಅಯ್ಯಪ್ಪಗವುಡನ ಜೊತೆಗೂಡಿ ಭೂಮಿಯನ್ನು ಸರ್ವ ಮಾನ್ಯವಾಗಿ ಸ್ಥಳೀಯ ದೇವರ ಕೈಂಕರ್ಯಕ್ಕಾಗಿ ದಾನಕೊಟ್ಟ ವಿವರವಿದೆ.[೨೧] ನಂಜನಗೂಡು ತಾಲ್ಲೂಕು ಕ್ರಿ.ಶ. ೧೨೭೮ರ ತಾಂಡ್ಯ ಶಾಸನದಲ್ಲಿ ಹಲವು ಗವುಡರು ಜೊತೆಗೂಡಿ ಕಂದಾಯಕ್ಕೆ ಸಂಬಂಧಪಟ್ಟಂತೆ ಒಂದು ನಿರ್ಣಯವನ್ನು ಕೈಗೊಂಡ ಮಾಹಿತಿ ಇದೆ ಕೀರ್ತಿಗವುಡ, ಅಂಕಗವುಡ, ಮಾರಗವುಡ, ಪೆಟ್ಟಿಗವುಡ, ಭೈರೆಗವುಡ ಹಾಗೂ ಚನ್ನಗವುಡರು ಜೊತೆಗೂಡಿ ಒಂದು ನಿರ್ಣಯವನ್ನು ತೆಗೆದು ಕೊಂಡು ಆ ನಿರ್ಣಯದಂತೆ ಸ್ಥಳೀಯ ದೇವಾಲಯದ ಸ್ಥಾನಿಕರು ನಿಬಂಧಿಯಾಗಿ ಕೊಡುವ ೬ ಗದ್ಯಾಣಗಳಲ್ಲಿ ೨ ಗದ್ಯಾಣ ಹಾಗೂ ೫ ಪಣ ಬೆಲೆಯ ಅಕ್ಕಿಯನ್ನು ದೇವಾಲಯದ ಪೂಜೆಗಳಿಗೆ ವಿನಿಯೋಗಿಸುವಂತೆ ನಿರ್ದೇಶಿಸಿದರು.[೨೨]

ನಂಜನಗೂಡು ತಾಲ್ಲೂಕಿನ ಸುತ್ತೂರಿನ ೧೧೯೬ನೇ ಇಸವಿಯ ಸೋಮೇಶ್ವರ ದೇವಸ್ಥಾನದ ಉತ್ತರ ಗೋಡೆಯ ಸಮೀಪದಲ್ಲಿ ನಿಂತಿರುವ ವೀರಗಲ್ಲಿನ ಮೇಲ್ಭಾಗ ತುಂಡಾಗಿದ್ದು, ಕ್ರಿ.ಶ. ೧೧೯೬–೧೧೯೭ರಲ್ಲಿ ಹಿರಿಯನಾಡಿನ ಎಡೆನಾಡಿಗೆ ಸೇರಿದ ಸೊತ್ತಿಯೂರ ಮೇಲೆ ಕುಮಾರ ಲಕ್ಷ್ಮೀದೇವ ದಂಡನಾಯಕನು ದಾಳಿ ಮಾಡಿದಾಗ ಯಭರಸಾಲೆಯನ ತಮ್ಮ ಮಂಚೆಯಣನು ಹೋರಾಡಿ ಹಲವರನ್ನು ಕೊಂದು ತಾನೂ ಮೃತಪಟ್ಟನೆಂದು ಈ ಶಾಸನ ದಿಂದ ತಿಳಿದು ಬರುತ್ತದೆ.[೨೩] ನಂಜನಗೂಡು ತಾಲ್ಲೂಕಿನ ಸುತ್ತೂರಿನ ೧೦೧೫–೧೬ನೇ ವರ್ಷದಲ್ಲಿನ ಶಾಸನವು ಇಲ್ಲಿನ ಶಿವರಾತ್ರೀಶ್ವರ ಮಠದ ಎದುರು ನಿಂತಿರುವ ಶಾಸನ ಕಲ್ಲು ಸುತ್ತೂರು ಮೊದಲು ಗಂಗವಾಡಿಗೆ ಸೇರಿತ್ತು. ಆದರೆ ಚೋಳರು ಗಂಗವಾಡಿಯನ್ನು ವಶಪಡಿಸಿಕೊಂಡಾಗ

ವಿಶೇಷವಾಗಿ ಕಾವೇರಿ–ಕಪಿಲಾನದಿ ಪ್ರದೇಶದ ಬಹುಭಾಗ ಅವರ ಆಳ್ವಿಕೆಗೆ ಒಳಪಟ್ಟಿತ್ತು. ಆಡಳಿತ ಪದ್ಧತಿ ಬದಲಾಯಿತು. ಚೋಳರ ಆಡಳಿತ ಶೈಲಿಗೆ ಅನುಗುಣವಾಗಿ ಆಡಳಿತ ವಿಭಾಗಗಳು ರೂಪುಗೊಂಡು ಹೊಸ ಹೆಸರುಗಳನ್ನು ಧರಿಸಿದವು. ಹೀಗಾಗಿ ಸುತ್ತೂರು ಗ್ರಾಮವು ಮುಡಿಗೊಂಡ ಚೋಳಮಂಡಲದ ಗಂಗೈಕೊಂಡ ಚೋಳವಳನಾಡಿಗೆ ಸೇರಿದ ಇಡೈನಾಡಿಗೆ ಸೇರಿದ್ದು ಎಡೆನಾಡಿನ ತಮಿಳುರೂಪ ಇಡೈನಾಟ್ಟು ಎಂದಿದೆ.[೨೪]

ನಂಜನಗೂಡು ತಾಲ್ಲೂಕಿನ ಬದನಾಳುವಿನ ಮಹಾಲಿಂಗೇಶ್ವರ ದೇವಾಲಯದ ಮುಂದೆ ಬೀದಿಯಲ್ಲಿ ನೆಟ್ಟಕಲ್ಲಿನಲ್ಲಿ ಕ್ರಿಶ. ೧೨೨೮ರಲ್ಲಿ ಹೊಯ್ಸಳ ವೀರ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಸಮಸ್ತಗೌಡ ಪ್ರಭುಗಳು ಎಡೆನಾಡು ಶ್ರೀಗಂಗಾಪುರವಾದ ಬಣವಾಳ ಶ್ರೀ ಮೂಲಸ್ತಾನ ದೇವರಿಗೆ ಆದೊಂಬೇಶ್ವರ ದೇವರಿಗೆ ಸಮಸ್ತ ಪ್ರಭುಗಾವುಂಡಗಳು ಆ ಸ್ಥಾನಿಕರಿಗೆ ನಿಬಂಧಿಯಾಗಿ ೬ ಗದ್ಯಾಣವನ್ನು ೨ ಗದ್ಯಾಣದ ಅಕ್ಕಿಯನ್ನು ಧಾರಾಪೂರ್ವಕವಾಗಿ ಮಾಡಿ ಬಿಟ್ಟ ಧರ್ಮವಾಗಿದೆ.[೨೫] ನಂಜನಗೂಡು ತಾಲ್ಲೂಕಿನ ಅಂಕುಸಯ್ಯನಪುರದ ತಮಿಳು ಶಾಸನವು ಇಡೈನಾಡು ಅಥವಾ ಪಿರಿಯನಾಡುವಿನ ಮುಡಿಗೊಂಡ ಸೂಳಪುರಮ್‌ನ ದೇಶಿಪೆರುಮಾಳ್ ದೇವರಿಗೆ ದೇವಾದಾಯ ನೀಡಿದ ಉಲ್ಲೇಖವಿದೆ.[೨೬] ನಂಜನಗೂಡು ತಾಲ್ಲೂಕಿನ ಹಳೇಪುರದ ತಮಿಳು ಶಾಸನವು ಹೊಯ್ಸಳ ಎರಡನೇ ನರಸಿಂಹನು ರಾಜ್ಯವಾಳುತ್ತಿರುವಾಗ ಕುಲವೂರ ಕೇಶವನಾಥ ದೇವರಿಗೆ ಪಿರಿಯನಾಡು ಅಥವಾ ಇಡೈನಾಡಿನ ಮಹಾಪ್ರಧಾನ ಸರ್ವಾಧಿಕಾರಿಗಳಾದ ಮಲ್ಲಿಕಾರ್ಜುನ ದಣ್ಣಾಯಕ ಮತ್ತು ಜಲ್ಲ ದಣ್ಣಾಯಕ ಮತ್ತು ಗಾವುಂಡಗಳು ತರಿ ಮತ್ತು ಖುಷ್ಕಿ ಭೂಮಿಯನ್ನು ಕೊಡುಗೆಯಾಗಿ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೨೭]

ಕೃಷಿ ಗುಂಪುಗಳು ಕಾವೇರಿ ನದಿಬಯಲು ಪ್ರದೇಶದ ವಿವಿಧ ಪ್ರದೇಶಗಳಲ್ಲಿ ನೆಲೆನಿಂತ ಸೂಚನೆಯಾಗಿ ಕ್ರಿ.ಶ. ೭–೮ನೇ ಶತಮಾನದ ನಂತರ ನಾಡುಗಳ ಪ್ರಸ್ತಾಪ ಕಂಡುಬರುತ್ತದೆ. ಎಡೆತೊರೆನಾಡು, ಎಡೆನಾಡು, ತೊರೆನಾಡು ಇವು ಕಾವೇರಿ ನದಿಯ ಪರಿಸರದಲ್ಲಿ ಕೃಷಿ ಚಟುವಟಿಕೆ ಪ್ರಾರಂಭವಾದುದಕ್ಕೆ ಸೂಚನೆಯಾಗಿದೆ. ಹಾಗೆಯೇ ಕಾವೇರಿ ಮತ್ತು ಕಬಿನಿ ನಡುವಿನ ಪ್ರದೇಶ ಕೃಷಿಗೆ ಒಳಪಟ್ಟಿರುವುದನ್ನು ಮುನ್ನಾಡಿನ ಶಾಸನಗಳು ಸ್ಪಷ್ಟಪಡಿಸುತ್ತವೆ. ಕಾವೇರಿ ನದಿಯ ಹಾಗೂ ಅದರ ಉಪನದಿಗಳ ವಿಶಾಲವಾದ ಹರವುಳ್ಳ ನಂಜನಗೂಡು ಶಾಸನಗಳಲ್ಲಿ ಬರುವ ನಾಡಿನ ಪ್ರಸ್ತಾಪಗಳು ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಬರುತ್ತವೆ. ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ ಫಲವತ್ತಾದ ಭೂಮಿಯನ್ನು ಬ್ರಾಹ್ಮಣ ಮತ್ತು ದೇವಾಲಯಗಳಿಗೆ ದಾನಕೊಟ್ಟು ಕೆರೆ ದೇವಾಲಯಗಳ ನಿರ್ಮಾಣ ಹೊಸ ಗ್ರಾಮಗಳ ಸ್ಥಾಪನೆ ಮತ್ತು ಸಂತೆಗಳ ಸ್ಥಾಪನೆಯ ಹಿನ್ನಲೆಯಲ್ಲಿ ನಾಡುಗಳ ಪ್ರಸ್ತಾಪ ಬರುತ್ತದೆ.

೧೮ನೇ ಶತಮಾನದ ನಂತರ ಆದ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳು ನಾಡುಗಳ ಮಹತ್ವವನ್ನು ತಗ್ಗಿಸಿದವು. ೭–೮ನೇ ಶತಮಾನದ ನಂತರ ಕೃಷಿ ಗುಂಪುಗಳು ಒಂದೆಡೆ ನೆಲೆನಿಂತು ವ್ಯವಸಾಯದಲ್ಲಿ ತೊಡಗಿದುದನ್ನು ಸೂಚಿಸಲು ನಾಡುಪದ ಬಳಕೆಯಾಗುತ್ತಿತ್ತು. ಸಣ್ಣ ರೈತ ಗುಂಪುಗಳ ಸಹಕಾರ ಮತ್ತು ಸಂಬಂಧಗಳ ತಳಪಾಯದ ಮೇಲೆ ರಚಿತವಾಗಿದ್ದ ನಾಡುಗಳ ಸಾಮಾಜಿಕ ವ್ಯವಸ್ಥೆ ಕ್ರಮೇಣ ಇವರ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳ ಹಿನ್ನಲೆಯಲ್ಲಿ ತನ್ನ ವಿಶಿಷ್ಟತೆಯನ್ನು ಕಳೆದುಕೊಂಡಿತು. ಕೃಷಿಯ ಪ್ರಗತಿಯಿಂದಾಗಿ ವ್ಯಾಪಾರ ಹಾಗೂ ಇತರ ಕಸಬುಗಳು ವೃದ್ಧಿ ಹೊಂದಿ ಕೃಷಿಯೇತರ ಆರ್ಥಿಕ ಚಟುವಟಿಕೆ ಪ್ರಾಬಲ್ಯ ಸಾಧಿಸಿತು. ಆರಂಭದಲ್ಲಿ ಕೃಷಿ ಗುಂಪುಗಳು ನೆಲೆನಿಂತ ಪ್ರದೇಶಗಳನ್ನು ಸೂಚಿಸಲು ನಾಡು ಪದ ಬಳಕೆಯಾಗುತ್ತಿತ್ತು. ಆದರೆ ಕ್ರಮೇಣ ಗ್ರಾಮಗಳು ತಮ್ಮದೇ ಆದ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನವನ್ನು ಗಳಿಸಿಕೊಳ್ಳುವಲ್ಲಿ ಯಶಸ್ವಿಯಾದವು. ಹೀಗಾಗಿ ಗ್ರಾಮೀಣ ಪ್ರದೇಶದಲ್ಲಿ ನಾಡಿಗೆ ಬದಲಾಗಿ ಗ್ರಾಮಗಳು ಹೆಚ್ಚು ನಿರ್ದಿಷ್ಟ ಹಾಗೂ ಸ್ಪಷ್ಟ ಘಟಕಗಳಾಗಿ ಹೊರಹೊಮ್ಮಿದವು. ೧೩ನೇ ಶತಮಾನದ ವೇಳೆಗೆ ಹೊಯ್ಸಳ ಅರಸರ ರಾಜಕೀಯ ಸೈನಿಕ ಸೇವೆಯಲ್ಲಿದ್ದ ಅಧಿಕಾರಿಗಳು ನಾಡುಗಳ ಮೇಲೆ ಹತೋಟಿ ಸಾಧಿಸಿ ಕಂದಾಯ ವ್ಯವಸ್ಥೆಯನ್ನು ಸುವ್ಯವಸ್ಥೆಗೊಳಿಸಿ, ಈ ಕಾರ್ಯಕ್ಕಾಗಿ ಅಧಿಕಾರಿಗಳನ್ನು ನೇಮಿಸಿದರು. ಇದರಿಂದಾಗಿ ಸ್ಥಳೀಯ ಕಂದಾಯ ಹಾಗೂ ತೆರಿಗೆ ವ್ಯವಸ್ಥೆಯ ಮೇಲೆ ಸ್ಥಳೀಯ ನಾಡಿನ ಮುಖಂಡರಿಗಿದ್ದ ಹತೋಟಿ ತಪ್ಪಿ ಹೋಯಿತು. ಕ್ರಮೇಣ ನಾಡು ಪದವು ತನ್ನ ವಿಶಿಷ್ಟ ಅರ್ಥವನ್ನು ಕಳೆದುಕೊಂಡಿತು.

## ನಂಜನಗೂಡು ಪ್ರದೇಶದ ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ನಾಡುಗಳ ಹೆಸರು

| ಕ್ರ.ಸಂ. | ಊರ ಹೆಸರು | ನಾಡಿನ ವಿವಿಧ ರೂಪಗಳು | ಉಲ್ಲೇಖ |
|---|---|---|---|
| ೧ | ಬಸವನಪುರ | ಎಡೆತೊರೆನಾಡು | ಎ.ಕ. III ನಂಜನಗೂಡು.೧೭೫ |
| ೨ | ಮೂಡಹಳ್ಳಿ | ಎಡೆತೊರೆನಾಡು | ಎ.ಕ. III ನಂಜನಗೂಡು.೧೯೩ |
| ೩ | ದೇವನೂರು | ಎಡೆನಾಡು/ಪುನ್ನಾಡು | ಎ.ಕ. III ನಂಜನಗೂಡು.೨೭೮ |
| ೪ | ದೊಡ್ಡಹೊಮ್ಮ | ಎಡೆನಾಡು | ಎ.ಕ. III ನಂಜನಗೂಡು.೨೯೪ |
| ೫ | ಸುತ್ತೂರು | ಹಿರಿಯನಾಡು ಎಡೆನಾಡು | ಎ.ಕ. III ನಂಜನಗೂಡು.೨೨೦ |
| ೬ | ಬದನಾಳು | ಎಡನಾಡು | ಎ.ಕ. III ನಂಜನಗೂಡು.೨೭೪ |
| ೭ | ಸುತ್ತೂರು | ಎಡೆತೊರೆನಾಡು | ಎ.ಕ. III ನಂಜನಗೂಡು.೨೧೩ |
| ೮ | ಅಂಕುಶಯ್ಯನಪುರ | ಇಡ್ಯೆನಾಡು | ಎ.ಕ. III ನಂಜನಗೂಡು.೨೯೭ |
| ೯ | ಹಳೇಪುರ | ಇಡ್ಯೆನಾಡು | ಎ.ಕ. III ನಂಜನಗೂಡು.೩೨೧ |
| ೧೦ | ತಗಡೂರು | ಬಡಗೆರೆನಾಡು | ಎ.ಕ. III ನಂಜನಗೂಡು.೨೬೨ |
| ೧೧ | ಜೋಡಿಕಾಟೂರು | ನಗುನಾಡು | ಎ.ಕ. III ನಂಜನಗೂಡು.೧೫೬ |
| ೧೨ | ಬಂಕಹಳ್ಳಿ | ಹೊಕ್ಕುನಾಡು | ಎ.ಕ. III ನಂಜನಗೂಡು.೩೭೬ |
| ೧೩ | ನಂದಿಗುಂದ | ಮೈಸುನಾಡು | ಎ.ಕ. III ನಂಜನಗೂಡು.೨೦೧ |
| ೧೪ | ಸಿಂಧುವಳ್ಳಿ | ಕರ್ಯೆನಾಡು | ಎ.ಕ. III ನಂಜನಗೂಡು.೩೪೮ |
| ೧೫ | ಎಲಿಚಿಗೆರೆ | ಕರೆನಾಡು | ಎ.ಕ. III ನಂಜನಗೂಡು.೩೯ |
| ೧೬ | ಉಪ್ಪಿನಹಳ್ಳಿ | ಹಿರಿಯನಾಡು | ಎ.ಕ. III ನಂಜನಗೂಡು.೩೫೪ |
| ೧೭ | ಹುಸುಕೂರು | ಕೊಂಗುನಾಡು | ಎ.ಕ. III ನಂಜನಗೂಡು.೩೮೫ |

### ಆಧಾರಸೂಚಿ


೧. ಹಾ.ಮಾ.ನಾಯಕ (ಸಂ).ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೨, ಪುಟ ೭೭೭.
೨. ಚಿದಾನಂದಮೂರ್ತಿ.ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪುಟ ೩೪೨.
೩. ಎಪಿಗ್ರಾಫಿಯಾ ಕರ್ನಾಟಕ, III, ನಂಜನಗೂಡು, ೭೫, ಪುಟ ೨೭೯, ೨೮೦.
೪. ವಾಸುದೇವನ್.ಸಿ.ಎಸ್., ಎಡೆನಾಡು-ಒಂದು ಆಡಳಿತಾಂಗ ವಿಭಾಗ-ಒಂದು ಅಧ್ಯಯನ ಇತಿಹಾಸ ದರ್ಶನ, ಸಂಪುಟ ೧೨, ಬೆಂಗಳೂರು, ೧೯೯೭, ಪು. ೧೫೭, ೧೫೮.
೫. ವಾಸುದೇವನ್ ಸಿ.ಎಸ್., ಪೂರ್ವೋಕ್ತ, ಪುಟ ೧೫೮.
೬. ಎ.ಕ. III, ನಂಜನಗೂಡು, ೧೯೩, ಪುಟ ೨೯೦, ೨೯೧.
೭. ಎ.ಕ. III, ನಂಜನಗೂಡು, ೧೨೯, ೨೭೮, ೩೮೫, ೩೫೨, ೪೨೨.
೮. ಎ.ಕ. III, ನಂಜನಗೂಡು, ೨೬೨, ಪುಟ ೩೪೦.
೯. Burton stein – *Peasent State and society in Medieral South India*, Delhi, PP. 309, 321.
೧೦. ಎ.ಕ. III, ನಂಜನಗೂಡು, ೨೧೩, ಪು. ೩೧೦.
೧೧. ಎ.ಕ. III, ನಂಜನಗೂಡು; ೩೪೮, ಪು. ೪೦೩.
೧೨. ಎ.ಕ. III, ನಂಜನಗೂಡು, ೧೫೬, ಪು. ೨೭೦.
೧೩. ಎ.ಕ. III, ನಂಜನಗೂಡು, ೩೭೬, ಪು. ೪೧೭.
೧೪. ಎ.ಕ. III, ನಂಜನಗೂಡು, ೨೩೯, ಪು. ೩೨೬.
೧೫. ಎ.ಕ. III, ನಂಜನಗೂಡು, ೨೦೧, ಪು. ೨೯೪.
೧೬. ಎ.ಕ. III, ನಂಜನಗೂಡು, ೩೪೮, ಪು. ೪೦೩.
೧೭. ಎ.ಕ. III, ನಂಜನಗೂಡು, ೩೯, ಪು. ೪೧೩.
೧೮. ಎ.ಕ. III, ನಂಜನಗೂಡು, ೩೫೪, ಪು. ೪೦೬.
೧೯. ಎ.ಕ. III, ನಂಜನಗೂಡು, ೩೮೫, ಪು. ೪೨೨.
೨೦. ಎ.ಕ. III, ನಂಜನಗೂಡು, ೨೬೨, ಪು. ೩೪೦.
೨೧. ಎ.ಕ. III, ನಂಜನಗೂಡು, ೨೯೪, ಪುಟ. ೩೬೬, ೩೬೭.
೨೨. ಎ.ಕ. III, ನಂಜನಗೂಡು, ೧೭೮, ಪು. ೨೮೩.
೨೩. ನಾಗರಾಜರಾವ್.ಹೆಚ್.ಎಂ., ಸುತ್ತೂರಿನ ಶಾಸನಗಳು, ಮೈಸೂರು, ೨೦೧೧, ಪು. ೧೯.
೨೪. ಎ.ಕ. III, ನಂಜನಗೂಡು, ೨೧೩, ಪು. ೩೧೦.
೨೫. ಎ.ಕ. III, ನಂಜನಗೂಡು, ೨೭೪, ಪು. ೩೪೯.
೨೬. ಎ.ಕ. III, ನಂಜನಗೂಡು, ೨೯೭, ಪು. ೩೬೮, ೩೬೯.
೨೭. ಎ.ಕ. III, ನಂಜನಗೂಡು, ೩೨೧, ಪುಟ ೩೮೫, ೩೮೬.

## ೪೭

# ಲಕ್ಕುಂಡಿ ಶಾಸನಗಳಲ್ಲಿ ಸ್ಥಳೀಯ ಅಧಿಕಾರಿಗಳು

**ಡಾ. ಕೆ.ಎಸ್. ಪಾಟೀಲ***

ಲಕ್ಕುಂಡಿ ಗ್ರಾಮದಲ್ಲಿ ದೊರೆತ ಶಾಸನಗಳನ್ನು ಅಭ್ಯಸಿಸಿದಾಗ ಅರಸರುಗಳ ಅಧೀನದಲ್ಲಿ ದಂಡನಾಯಕರು, ಪ್ರಭುಗಳು, ಸಾಮಂತರು, ಗಾವುಂಡರು, ಪೆರ್ಗ್ಗಡೆಗಳು, ತಳಾರರು, ಕರಣಿಕರು, ಸೇನಭೋವರು, ಕೇಣಿಕಾರರು, ಕೋಲುಕಾರರು ಮತ್ತು ಕುಳಕರಣಿಗಳು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಅಂತಹ ಸ್ಥಳೀಯ ಅಧಿಕಾರಿ ವರ್ಗದವರನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಮಹಾಸಾಮಂತ ಗೊಲ್ಲಿಮಯ್ಯ:** ಕೊಪ್ಪದ ಪರಪ್ಪನ ಮನೆಯ ಹಿಂಭಾಗದಲ್ಲಿ ದೊರೆತಿರುವ ಕ್ರಿ.ಶ. ೧೦೩೦ರ ಶಾಸನದ ಪ್ರಕಾರ[೧] ಕಲ್ಯಾಣದ ಚಾಳುಕ್ಯ ಅರಸ ಎರಡನೆಯ ಜಯಸಿಂಹದೇವನು (ಒಂದನೆಯ ಜಗದೇಕಮಲ್ಲ ಕ್ರಿ.ಶ. ೧೦೧೫-೧೦೪೪) ರಾಜ್ಯವಾಳುತ್ತಿರುವಾಗ ಗೊಲ್ಲಿಮಯ್ಯನು ಲಕ್ಕುಂಡಿಯ ಮಹಾಸಾಮಂತನಾಗಿ ಆಡಳಿತ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದನು.

**ದಂಡನಾಯಕ ಮಲ್ಲಿದೇವ:** ಸೋಮನಕೆರೆಯ ಕ್ರಿ.ಶ. ೧೦೭೫ರ ಶಾಸನದ ಪ್ರಕಾರ[೨] ಕಲ್ಯಾಣದ ಚಾಳುಕ್ಯ ಅರಸ ಭುವನೈಕಮಲ್ಲದೇವನು (ಸೋಮೇಶ್ವರ-೨) ರಾಜ್ಯವಾಳುತ್ತಿರುವಾಗ ಮಲ್ಲಿದೇವನು ಲಕ್ಕುಂಡಿಯಲ್ಲಿ ದಂಡನಾಯಕನಾಗಿ ಕಾರ್ಯನಿರ್ವಹಿಸುತ್ತಿದ್ದನು. ಈತನು ಮರುಳೇಶ್ವರ ದೇವರ ನಂದಾದೀವಿಗೆಗೆ ೬ ಗದ್ಯಾಣ ದಾನ ಮಾಡಿದನೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

**ಪೆರ್ಗ್ಗಡೆ ಕೇಶವದೇವ:** ಕಾಶೀವಿಶ್ವೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೫೨ರ ಶಾಸನದ ಪ್ರಕಾರ ಚಾಳುಕ್ಯ ತ್ರಿಭುವನಮಲ್ಲ (ತೈಲ-೩)ನು ರಾಜ್ಯವಾಳುತ್ತಿರುವಾಗ ಪೆರ್ಗ್ಗಡೆ ಕೇಶವದೇವನು ಲಕ್ಕುಂಡಿ ಸ್ಥಳೀಯ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದನು. ಈತನು ಶ್ರೀ ಕವತಾಳೇಶ್ವರ ದೇವರ ತುಯ್ಯಲ ನೈವೇದ್ಯಕ್ಕಾಗಿ, ಶ್ರೀ ಕವತಾಳೇಶ್ವರ ದೇವರ ಆಚಾರ್ಯರಾದ ಶ್ರೀಮತ್ ಸೋಮೇಶ್ವರ ಪಂಡಿತದೇವರ ಪಾದವನ್ನು ತೊಳೆದು ವರ್ಷಂಪ್ರತಿ ನೂರಯಿಪ್ಪತ್ತು ಗದ್ಯಾಣ ಹೊನ್ನ, ಚಿನ್ನದವಟ್ಟ ಮತ್ತು ಮೂರು ಹೊನ್ನವನ್ನು ದಾನ ಮಾಡಿದನು.[೩]

**ಸೇನಭೋವರು:** ಗ್ರಾಮುಗಳ ಲೆಕ್ಕ ಪತ್ರವನ್ನು ಬರೆಯುವವ ಸೇನಭೋವ. ಈತನಿಗೆ ಗ್ರಾಮಲೆಕ್ಕಾಧಿಕಾರಿ ಮತ್ತು ಶಾಸನಗಳ ಕರಡನ್ನು ತಯಾರಿಸುವ ಅಧಿಕಾರಿ ಎಂತಲೂ ಕರೆಯುತ್ತಾರೆ.[೪] ಈತನು ಗ್ರಾಮದ ಒಡೆಯನಾದ 'ಗಾವುಂಡ'ನ ಕೆಳಗಿನ ಅಧಿಕಾರಿ. ಈ ಸೇನಭೋವರನ್ನೇ ಇಂದು 'ಶ್ಯಾನುಭೋಗ'ರೆಂದು ಹಳ್ಳಿಗಳಲ್ಲಿ ಕರೆಯಲಾಗುತ್ತದೆ. ಒಂದೊಂದು ಗ್ರಾಮಕೊಬ್ಬ ಸೇನಭೋವನಿರುತ್ತಿದ್ದನು, ಅತೀ ಚಿಕ್ಕಗ್ರಾಮಗಳಾಗಿದ್ದರೆ ಎರಡು ಮೂರು ಗ್ರಾಮಗಳಿಗೆ ಒಬ್ಬ ಸೇನಭೋವ ಇರುತ್ತಿದ್ದನು.[೫]

**ಹಿರಿಯ ಸೇನಭೋವ ಕೇಶವದೇವ:** ಕ್ರಿ.ಶ. ೧೧೮೧ರ ಸೋಮನ ಕೆರೆಯ ಶಾಸನದ ಉಲ್ಲಿಖಿತದಂತೆ ಕಳಚೂರಿ ಅರಸ ಅಹವಮಲ್ಲದೇವನು ರಾಜ್ಯವಾಳುತ್ತಿರುವಾಗ ಹಿರಿಯ ಸೇನಭೋವ ಕೇಶವದೇವನು ಲಕ್ಕುಂಡಿಯ ಆಡಳಿತ ವ್ಯವಸ್ಥೆಯಲ್ಲಿ ಸೇನಭೋವನಾಗಿ ಕಾರ್ಯ ನಿರ್ವಹಿಸುತ್ತಿದ್ದನು.[೬]

**ಹಿರಿಯ ಸೇನಭೋಗ ಕಳಲಕನ್ದರ ವಾಮರಸ:** ಚಂದ್ರಮೌಳೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೪ರ ಶಾಸನದಲ್ಲಿ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಹಿರಿಯ ಸೇನಭೋಗ ಕಳಲಕನ್ದರ ವಾಮರಸನು ಲಕ್ಕುಂಡಿ ಲೆಕ್ಕಪತ್ರವನ್ನು ನೋಡಿಕೊಳ್ಳುತ್ತಿದ್ದನೆಂದು ಹೇಳಲಾಗಿದೆ. ಈತನು ಕೇಶವಾದಿತ್ಯದೇವರ ನಂದಾದೀವಿಗೆಗೆ ಒಂದು ಪಣ(ಹಣ)ವನ್ನು ದಾನ ಮಾಡಿದನೆಂದು ಹಾಗೂ ಸೇನಭೋವ ಲಕ್ಕರಸ ಮಲ್ಲಯ್ಯಂಗಳು ಇದೇ ದೇವರ ನಂದಾದೀವಿಗೆಗೆ ಒಂದು ಪಣ(ಹಣ) ದಾನ ಮಾಡಿದರು.[೭]

**ಹಿರಿಯ ಸೇನಭೋಗ ಮಾಧವದೇವ:** ಇದೇ (ಚಂದ್ರಮೌಳೇಶ್ವರ) ದೇವಾಲಯದಲ್ಲಿ ದೊರೆತ ಮತ್ತು ಇದೇ ತೇದಿಗೆ ಸಂಬಂಧಿಸಿದಂತೆ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಕಮ್ಮಟದ ಹಿರಿಯ ಸೇನಭೋಗ ಮಾಧವದೇವನು ಲಕ್ಕುಂಡಿ ಆಡಳಿತ ವ್ಯವಸ್ಥೆಯಲ್ಲಿ ಸೇನಭೋಗನಾಗಿ ಕಾರ್ಯನಿರ್ವಹಿಸುತ್ತಿದ್ದನು.

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುಂದಗೋಳ-೫೮೧೧೧೩, ಧಾರವಾಡ ಜಿಲ್ಲೆ.

ಈತನು ಸಹ ಕೇಶವಾದಿತ್ಯದೇವರ ಅಂಗಭೋಗಕ್ಕೆ ಸಾಸಿರ್ವ್ವರ ಸನ್ನಿಧಾನದಲ್ಲಿ ಒಂದು ಪಣ(ಹಣ) ದಾನ ಮಾಡಿದನು.[೮]

**ಕೇಣಿಕಾರರು:** ಕೇಣಿಕಾರರೆಂದರೆ ಗುತ್ತಿಗೆದಾರರ ಸಂಘ ಎಂದು ಹೇಳಬಹುದು (Guild of Contractors) ಇವರು ಗುತ್ತಿಗೆದಾರರ ಮೇಲ್ವಿಚಾರಕರಾಗಿ ಕೆಲಸ ನಿರ್ವಹಿಸಿದ್ದುಂಟು.[೯] ಇವರು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಭಾಗಿಯಾಗಿರುತ್ತಿದ್ದರು.

**ಕೇಣಿಕಾರ ನಾಗಿಸೆಟ್ಟಿ:** ಜೈನ ಬಸದಿಯ ಪ್ರವೇಶ ದ್ವಾರದಲ್ಲಿರುವ ಕ್ರಿ.ಶ. ೧೧೭೩ರ ಶಾಸನವು ಪ್ರಸ್ತಾಪಿಸುವಂತೆ ಕಳಚೂರಿ ಅರಸ ರಾಯಮುರಾರಿ ಸೋವಿದೇವನು ರಾಜ್ಯವಾಳುತ್ತಿರುವಾಗ ಕೇಣಿಕಾರ ನಾಗಿಸೆಟ್ಟಿಯು ಲಕ್ಕುಂಡಿ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯ ನಿರ್ವಹಿಸುತ್ತಿದ್ದು, ಬಲ್ಲೆಯ ಜೇಮಯ್ಯನ ಬಸದಿಯ ದೇವರಷ್ಟವಿಧಾರ್ಚನೆಗೆ ಅಲ್ಲಿಯ ಆಚಾರ್ಯ ಶ್ರೀ ಷುಷೇನ ಪಂಡಿತದೇವರ ಪಾದವನ್ನು ತೊಳೆದು ಧಾರಾಪೂರ್ವಕವಾಗಿ ಹತ್ತು ಗದ್ಯಾಣ ದಾನ ನೀಡಿದನು.[೧೦]

**ಕೇಣಿಕಾರ ಕೇಶವದೇವ:** ವೀರಭದ್ರ ದೇವಾಲಯ ದಲ್ಲಿರುವ ಕ್ರಿ.ಶ. ೧೧೭೯ರ ಶಾಸನದ ಪ್ರಕಾರ ಕಳಚೂರಿ ಸಂಕಮನು ರಾಜ್ಯವಾಳುತ್ತಿರುವಾಗ ಕೇಶವದೇವನು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯ ನಿರ್ವಹಿಸುತ್ತಿದ್ದು, ಶ್ರೀ ಮದ್‌ಅಭಿನವಪ್ರಸನ್ನಕೇಶವದೇವರಿಗೆ ೨೦೦ ಎಲೆ ದಾನ ಮಾಡಿದನು.[೧೧]

**ಕೇಣಿಕಾರ ಬಸವರಸ ಸಿದ್ಧಯ್ಯಂಗಳು:** ಚಂದ್ರಮೌಳೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೪ರ ಶಾಸನದ ಪ್ರಕಾರ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ತಳಭೋಗದ ಕೇಣಿಕಾರ ಬಸವರಸ ಸಿದ್ಧಯ್ಯಂಗಳು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯನಿರ್ವಹಿಸುತ್ತಿದ್ದು, ಅಸಿತರ ಕೇಶವಾದಿತ್ಯ ದೇವರ ನಂದಾದೀವಿಗೆಗೆ ತಮ್ಮ ತಳಭೋಗದ ಸ್ಥಳದಲ್ಲಿ ಒಂದು ಪಣ(ಹಣ) ದಾನ ಮಾಡಿದರು.

**ಕೇಣಿಕಾರ ಮಹಾದೇವಸೆಟ್ಟಿ:** ಚಂದ್ರಮೌಳೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೪ರ ಶಾಸನವು ಪ್ರಸ್ತಾಪಿಸುವಂತೆ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಕೇಣಿಕಾರ ಮಹಾದೇವಸೆಟ್ಟಿಯು ಲಕ್ಕುಂಡಿ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯನಿರ್ವಹಿಸುತ್ತಿದ್ದು, ಅಸಿತರ ಕೇಶವಾದಿತ್ಯದೇವರ ಅಂಗಭೋಗಕ್ಕೆ ಸಾಸಿರ್ವ್ವರ ಸನ್ನಿಧಿಯಲ್ಲಿ ೫ ಹಣ ದಾಣ ಮಾಡಿದನು.[೧೨]

**ಕೇಣಿಕಾರ ವಿಷ್ಣುಸೆಟ್ಟಿ:** ಕ್ರಿ.ಶ. ೧೧೮೫ರ ಶಾಸನದ ಉಲ್ಲಿಖಿತದಂತೆ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಅಚ್ಚಿನ ಮೊಳೆಯ ಕೇಣಿಕಾರ ವಿಷ್ಣುಸೆಟ್ಟಿಯು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯನಿರ್ವಹಿಸುತ್ತಿದ್ದು, ಲಕ್ಕುಂಡಿ ಊರೊಡೆಯ ಪ್ರಮುಖ ಸಾಸಿರ್ವ್ವರ ಸನ್ನಿಧಾನದಲ್ಲಿ ನೋಂಪಿಯ ಬಸದಿಯ ದೇವರ ಅಷ್ಟವಿಧಾರ್ಚನೆಗೆ ೫ ಪಣ ದಾನ ಮಾಡಿದನು.[೧೩]

**ಕೇಣಿಕಾರ ಬಂಡಿಯ ಬಸವಿಸೆಟ್ಟಿಯರ ಮಗ ಶ್ರೀ ಶಂಕರಶೆಟ್ಟಿ:** ನನ್ನೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೬ರ ಶಾಸನದ ಪ್ರಕಾರ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಕೇಣಿಕಾರ ಬಂಡಿಯ ಬಸವಿಸೆಟ್ಟಿಯರ ಮಗ ಶ್ರೀಶಂಕರಶೆಟ್ಟಿಯು ಲಕ್ಕುಂಡಿ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೇಣಿಕಾರನಾಗಿ ಕಾರ್ಯ ನಿರ್ವಹಿಸುತ್ತಿದ್ದು, ನನ್ನೇಶ್ವರ ದೇವರ ಅಂಗಭೋಗಕ್ಕೆ ತಮ್ಮ ಅಕ್ಕಸಾಲದ ಅಚ್ಚಿನ ಕಮ್ಮಟದಲು ೫ ಪಣ ದಾನ ಮಾಡಿದನು.[೧೪]

**ಹಿರಿಯ ಕೇಣಿಕಾರ ವಿನಯ ಸಿಂಹನಪ್ಪ ಯೇಚಿಸೆಟ್ಟಿ:** ಚಂದ್ರಮೌಳೇಶ್ವರ ದೇವಾಲಯದ ತೊಲೆಯ ಮೇಲಿರುವ ಕ್ರಿ.ಶ. ೧೨ನೆಯ ಶತಮಾನದ ಶಾಸನದ ಪ್ರಕಾರ ಸಾಸಿರ್ವ್ವರ ಮಗನಾದ ಹಿರಿಯ ಕೇಣಿಕಾರ ವಿನಯ ಸಿಂಹನಪ್ಪ ಯೇಚಿಸೆಟ್ಟಿಯು ಲಕ್ಕುಂಡಿ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಹಿರಿಯ ಕೇಣಿಕಾರನಾಗಿ ಕಾರ್ಯನಿರ್ವಹಿಸುತ್ತಿದ್ದು, ತನ್ನ ಅಕ್ಕಸಾಲದ ಕೇಣಿಯಲ್ಲಿ ದೀಪಾವಳಿ ಪರ್ವ್ವ (ಹಬ್ಬ)ದಲು ದೇವರ ವೀಳಯಕ್ಕೆ ೪೦೦ ಅಡಿಕೆ ದಾನ ಮಾಡಿದನು.[೧೫]

**ಕೋಲುಕಾರರು:** ಕೋಲುಕಾರರು ಎಂದರೆ ಕಾವಲುಗಾರರು ಅಥವಾ ಸೇವಕರು. ಕೆಲವೊಂದು ಸಲ ಇವರುಗಳು ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ತೆರಿಗೆಯನ್ನು ವಸೂಲಿ ಮಾಡಲು ಸಹಾಯಕರಾಗುತ್ತಿದ್ದರು.[೧೬]

**ಕೋಲುಕಾರ ಬಸವಣ್ಣ:** ಚಂದ್ರಮೌಳೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೪ರ ಶಾಸನದ ಪ್ರಕಾರ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ರಾಜ್ಯವಾಳುತ್ತಿರುವಾಗ ಕೋಲುಕಾರ ಬಸವಣ್ಣನೆಂಬುವನು ಲಕ್ಕುಂಡಿಯಲ್ಲಿ ತೆರಿಗೆ ವಸೂಲಿ ಮಾಡುವ ಅಧಿಕಾರಿಯಾಗಿದ್ದು, ಅಸಿತರ ಕೇಶವಾದಿತ್ಯ ದೇವರಿಗೆ ಒಂದು ಹಾಗ ದಾನ ಮಾಡಿದನು.[೧೭] ಅಲ್ಲದೆ ಕೋಲುಕಾರ ನಾರಣದೇವ ಮತ್ತು ದಾಮಯ್ಯ ಎಂಬುವರು ಕೇಶವಾದಿತ್ಯದೇವರ ಅಂಗಭೋಗಕ್ಕೆ ಒಂದು ಪಣ ದಾನ ಮಾಡಿದರು.[೧೮]

**ತಳಾರರು:** ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿ 'ತಳಾರರು' ಎಂಬ ಚಿಕ್ಕ ಹುದ್ದೆಯ ಅಧಿಕಾರಿಗಳಾಗಿ ಮಹತ್ವದ ಪಾತ್ರವಹಿಸಿದುದು ಶಾಸನಗಳಿಂದ ತಿಳಿಯುತ್ತದೆ. ಇವರು ಗ್ರಾಮಗಳಲ್ಲಿಯ ಇಂದಿನ 'ತಳವಾರ'ರಾಗಿದ್ದಾರೆ. ವೀರರಾದ ಇವರು ಗ್ರಾಮದ ರಕ್ಷಣೆಗಾಗಿ ತನ್ನ ಒಡೆಯನಿಗಾಗಿ, ಮಿತ್ರನಿಗಾಗಿ ಪ್ರಾಣವನ್ನು ಪಣಕ್ಕಿಟ್ಟು ಹೋರಾಡಿ ಮಡಿದ ಉಲ್ಲೇಖವಿದೆ.[೧೯]

**ತಳಾರ ಮಲ್ಲಯ್ಯ ನಾಯಕ:** ವೀರಭದ್ರ ದೇವಾಲಯ ದಲ್ಲಿರುವ ಕ್ರಿ.ಶ. ೧೧೭೯ರ ಶಾಸನದ ಪ್ರಕಾರ ಕಳಚುರಿ ಸಂಕಮನು ರಾಜ್ಯವಾಳುತ್ತಿರುವಾಗ ತಳಾರಮಲ್ಲೆಯ ನಾಯಕನ ಕುರಿತು ಪ್ರಸ್ತಾಪವಿದೆ. ಈತನು ಪ್ರಸನ್ನ ಕೇಶವ ದೇವರ ಅಂಗಭೋಗಕ್ಕೆ ೫ ಪಣ ದಾನ ಮಾಡಿದನು.[೨೦]

**ಗ್ರಾಮ ರಕ್ಷ ಪಾಳಕ:** ಗ್ರಾಮ ರಕ್ಷ ಪಾಳಕನೆಂದರೆ ಗ್ರಾಮದ ರಕ್ಷಣೆಯ ಅಧಿಕಾರಿ.[೨೧] (Police Officer of the Village) ಚಂದ್ರಮೌಳೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೮೦ರ ಶಾಸನದ ಉಲ್ಲಿಖಿತದಂತೆ ಕಳಚೂರಿ ಸಂಕಮನು ರಾಜ್ಯವಾಳುತ್ತಿರುವಾಗ ಲಕ್ಕುಂಡಿಯಲ್ಲಿ ಗ್ರಾಮರಕ್ಷಪಾಳಕನ ಪ್ರಸ್ತಾಪವಿದ್ದು, (ಆತನ ಹೆಸರು ತ್ರುಟಿತಗೊಂಡಿದೆ) ಆತನು ಅಸಿತರ ಕೇಶವಾದಿತ್ಯದೇವರ ಚೈತ್ರ ಪವಿತ್ರಕ್ಕೆ ೪ ಪಣ ದಾನ ಮಾಡಿದನು.[೨೨]

ಹೀಗೆ ಲಕ್ಕುಂಡಿ ಆಡಳಿತ ವ್ಯವಸ್ಥೆಯಲ್ಲಿ ಈ ಮೇಲಿನ ಎಲ್ಲ ಸ್ಥಳೀಯ ಅಧಿಕಾರಿಗಳು ಆಡಳಿತ ವ್ಯವಸ್ಥೆಯಲ್ಲಿ ಭಾಗಿಯಾಗಿದ್ದರೆಂಬುದು ಅಲ್ಲಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ.



## ಆಧಾರಸೂಚಿ


೧. ಕರ್ನಾಟಕ ಇನ್ಸ್ಕ್ರಿಪ್ಸನ್ಸ್, ಸಂ. ೨, ಶಾ.ಸಂ. ೭, ಪು. ೧೮–೨೦.

೨. ಅದೇ, ಶಾ.ಸಂ. ೯, ಪು. ೨೫–೨೬.

೩. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಶಾ.ಸಂ. ೪೮, ಪು. ೬೪–೬೫.

೪. ರಿತ್ತಿ ಶ್ರೀನಿವಾಸ, **'ಪ್ರಾಚೀನ ಕರ್ನಾಟಕದ ಆಡಳಿತ ಪಾರಿಭಾಷಾಕೋಶ'**, ಪು. ೨೮.

೫. ನಾಗಯ್ಯ, ಜೆ.ಎಂ., **'ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದ ಅಧ್ಯಯನ'**, ಪು. ೩೫೮.

೬ ಕರ್ನಾಟಕ ಇನ್ಸ್ಕ್ರಿಪ್ಸನ್ಸ್, ಸಂ. ೨, ಶಾ.ಸಂ. ೧೦, ಪು. ೨೬–೩೪.

೭. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಪು. ೫೮–೮೭.

೮. ಅದೇ, ಶಾ.ಸಂ. ೬೨, ಪು. ೮೭–೮೮.

೯. ಪೂರ್ವೋಕ್ತ, ಪು. ೩೩.

೧೦. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಶಾ.ಸಂ. ೧೧೯, ಪು. ೧೪೯–೧೫೦.

೧೧. ಅದೇ, ಶಾ.ಸಂ. ೧೩೫, ಪು. ೧೭೪–೧೭೮.

೧೨. ಅದೇ, ಶಾ.ಸಂ. ೬೦, ಪು. ೮೫–೮೭.

೧೩. ಅದೇ, ಶಾ.ಸಂ. ೬೨, ಪು. ೮೭–೮೮.

೧೪. ಅದೇ, ಶಾ.ಸಂ. ೬೭, ಪು. ೯೨–೯೪.

೧೫. ಅದೇ, ಶಾ.ಸಂ. ೭೦, ಪು. ೯೫–೯೬.

೧೬. ಅದೇ, ಶಾ.ಸಂ. ೫೪೯, ಪು. ೩೭೫.

೧೭. ರಿತ್ತಿ ಶ್ರೀನಿವಾಸ, **'ಪ್ರಾಚೀನ ಕರ್ನಾಟಕದ ಆಡಳಿತ ಪಾರಿಭಾಷಾಕೋಶ'**, ಪು. ೧೦ ಮತ್ತು ೩೪.

೧೮. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಶಾ.ಸಂ. ೬೦, ಪು. ೮೫–೮೭.

೧೯. ಅದೇ.

೨೦. ಪೂರ್ವೋಕ್ತ ಪು. ೩೩.

೨೧. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಶಾ.ಸಂ. ೧೩೫, ಪು. ೧೭೪–೧೭೮.

೨೨. ಪೂರ್ವೋಕ್ತ ಪು. ೧೧.

೨೩. ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಸಂ. ೧೫, ಶಾ.ಸಂ. ೧೦೭, ಪು. ೧೭೮–೧೭೯.




# ಸೂಡಿಯ 'ಟಂಕಶಾಲೆ'

ಡಾ. ಮಲ್ಲಿಕಾರ್ಜುನ ಕುಂಬಾರ*

**ಶಾ**ಸನಗಳ ಅಧ್ಯಯನ ಎಷ್ಟು ಮುಖ್ಯವೋ, ನಾಣ್ಯಗಳ ಅಧ್ಯಯನವೂ ಅಷ್ಟೇ ಮುಖ್ಯವಾದುದು. ಶಾಸನಗಳಲ್ಲಿ ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳು ಇರುವಂತೆ ಇಲ್ಲಿಯೂ ಮಾನವನ ನಾಗರೀಕತೆ, ಸಂಸ್ಕೃತಿಯ ಅಧ್ಯಯನಕ್ಕೆ ನೆರವಾಗುವ ಅಂಶಗಳನ್ನು ನಾಣ್ಯಗಳಲ್ಲಿ ಕಾಣಬಹುದು. ಶಾಸನಗಳು ರಾಜರ ಆಡಳಿತ ಮೇಲೆ ಬೆಳಕು ಚಲ್ಲುವಂತೆ, ನಾಣ್ಯಗಳು ಕೂಡಾ ರಾಜರ, ಸಾಮಂತರ, ಮಂಡಲೇಶ್ವರರ ಆಡಳಿತ ವೈಖರಿಯನ್ನು ಅರಿಯುವಲ್ಲಿ ಬಹಳಷ್ಟು ನೆರವಾಗುತ್ತವೆ. ಶಾಸನಗಳಲ್ಲಿ ಸಾಹಿತ್ಯಕ ಕೃತಿಗಳಲ್ಲಿ ಕಂಡು ಬರುವ ವಿಷಯಗಳು ನಾಣ್ಯಶಾಸ್ತ್ರಗಳ ಅಧ್ಯಯನಕ್ಕೆ ನಮಗೆ ನೆರವಾಗುತ್ತವೆ. ನಾಣ್ಯಗಳ ಉದ್ದ, ಅಗಲ, ತೂಕ, ಗಾತ್ರ, ಹಿಂಭಾಗ, ಮುಂಭಾಗ, ಅದರಲ್ಲಿರು ಚಿನ್ಹೆ ಮತ್ತು ಬರಹಗಳಲ್ಲಿ ಹೇಳಲಾದ ಮಾಹಿತಿಗಳಿಂದ ಅಂದಿನ ಚಿತ್ರಣವನ್ನು ಅಧ್ಯಯನ ಮಾಡಬಹುದು. ವರಹ, ಗದ್ಯಾಣ, ಹಣ, ಕಾಕನಿ, ಪೊನ್, ಮತ್ತು ತಾರದಂತಹ ಹೆಸರುಗಳುಳ್ಳ ನಾಣ್ಯಗಳಿಂದ, ಅಂದಿನ ಕಂದಾಯ, ತೆರಿಗೆಗಳ ಮಾಹಿತಿಗಳು ಸಿಗುತ್ತವೆ.

ಇಂದಿನ ಗದಗ ಜಿಲ್ಲೆಯ ಸೂಡಿ ಅಂದು ಕಿಸುಕಾಡು-೭೦ ಕ್ಕೆ ಸೇರಿತ್ತು. ಇಲ್ಲಿ ಗಂಗರ ಮಾಂಡಲೀಕನ ನಾಲ್ವರ ಹೆಂಡರಲ್ಲಿ ಒಬ್ಬಳಾದ ದೀವಳಾಂಬಾ ಎಂಬವಳು ಕ್ರಿ.ಶ. ೯೩೮ರಲ್ಲಿ ಜೈನ ಬಸದಿಯೊಂದನ್ನು ಕಟ್ಟಿಸುತ್ತಾಳೆಂಬ ವಿಷಯವು ಶಾಸನದಲ್ಲಿ ಬರುತ್ತದೆ. ಆದರೆ ಇಂದು ಆ ಬಸದಿಯು ಸೂಡಿಯಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ. ನಂತರ ಕಲ್ಯಾಣ ಚಾಲುಕ್ಯ ಅರಸ ಜಯಸಿಂಹನ ಸಹೋದರಿ ಅಕ್ಕಾದೇವಿಯು ಈ ಪ್ರದೇಶವನ್ನು ಆಳ್ವಿಕೆ ಮಾಡಿದಳು. ಆ ಕಾಲದಲ್ಲಿ ಅನೇಕ ದೇವಾಲಯಗಳು ತಲೆಎತ್ತಿದವು. ಅಂದು ದೊಡ್ಡ ಅಗ್ರಹಾರವಾಗಿದ್ದ ಸೂಡಿಯನ್ನು ಆಳಿ ಅಕ್ಕಾದೇವಿಯ ಹೆಸರಿನಲ್ಲಿ ಅಕ್ಕೇಶ್ವರ ದೇವಾಲಯವು ನಿರ್ಮಾಣವಾಯಿತು. ಅದು ಕಾಲಾಂತರದಲ್ಲಿ ಮಲ್ಲಿಕಾರ್ಜುನ ದೇವಾಲಯವೆಂಬ ಪರಿವರ್ತನೆ ಪಡೆದುಕೊಂಡಿತು. ಅಕ್ಕಾದೇವಿಯ ಆಳ್ವಿಕೆಯ ಕಾಲದಲ್ಲಿ ಇಲ್ಲಿ ಟಂಕಶಾಲೆಯೊಂದು ಇತ್ತೆಂದು ತ್ರಿಭುವನ ಮಲ್ಲನ ಕಾಲದ ಶಾಸನದಿಂದ ತಿಳಿದುಬರುತ್ತದೆ. ಊರೊಳಗಿರುವ ಕಲ್ಯಾಣ ಚಾಲುಕ್ಯರ ಶೈಲಿಯ ಪೂರ್ವಾಭಿಮುಖವಾಗಿರುವ ನೆಲಮನೆಯಂತಿರುವ ದೇವಾಲಯವಿದೆ. ಅದು ಆಯಾತಾಕಾರದಲ್ಲಿದ್ದು. ಅದನ್ನು ಸ್ಥಳಿಕರು ಈಗ ನಗರೇಶ್ವರ ದೇವಾಲಯವೆಂದು ಕರೆತಯುತ್ತಾರೆ. ಆಗ ಈ ದೇವಾಲಯವು ನಾಣ್ಯಗಳನ್ನು ತಯಾರಿಸುವ ಟಂಕಶಾಲೆಯಾಗಿತ್ತೆಂದು ಧೃಡಪಟ್ಟಿದೆ. ಇಲ್ಲಿ ನಾಣ್ಯವನ್ನು ಟಂಕಿಸುವ ಕಮ್ಮಟದ ಅಕ್ಕಸಾಲಿಗಳಿಗೆ ನಾಣ್ಯವನ್ನು ಟಂಕಿಸುವ ಅಧಿಕಾರವನ್ನು ಈ ದೇವಾಲಯದವರು ಬಿಟ್ಟುಕೊಟ್ಟಿದ್ದು, ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಇಂತಿಷ್ಟು ಹಣವೆಂದು ಗೊತ್ತು ಮಾಡಿಕೊಂಡು ವಸೂಲಿ ಮಾಡುತ್ತಿದ್ದರು.

ಶಾಸನಗಳನ್ನು ಗಮನಿಸಿದರೆ ಈ ಟಂಕಶಾಲೆಯಲ್ಲಿ ಕಮ್ಮಟಾಧಿಕಾರಿ (ಕುಶಲಕರ್ಮಿ)ಯಾಗಿ 'ಉತ್ತಮೋಜ' ಎಂಬವನಿದ್ದನು. ಉತ್ತಮೋಜನು ೬ನೆಯ ವಿಕ್ರಮಾದಿತ್ಯನಿಗೆ ಆಪ್ತನಾಗಿದ್ದನು. ಇತನನ್ನು ಶಾಸನಗಳು 'ತ್ರಿಭುವನ ಮಲ್ಲದೇವನಕ್ಕಸಾಲಿಉತ್ತಮೋಜ' ಎಂದು ಕರೆದಿವೆ. ತನ್ನ ತಂಗಿ ಆಳ್ವಿಕೆ ಮಾಡುತ್ತಿದ್ದ ಸೂಡಿಯಲ್ಲಿಯೂ ಇತನು ಟಂಕಶಾಲೆಯನ್ನು ನಿರ್ವಹಿಸುತ್ತಿದ್ದನು. ಉತ್ತಮೋಜನ ಆದೇಶದ ಮೇರೆಗೆ ಇಲ್ಲಿ ಚಿನ್ನದ ನಾಣ್ಯಗಳನ್ನು ಟಂಕಿಸುತ್ತಿದ್ದರು. ನಾಣ್ಯಗಳನ್ನು ಮುದ್ರಿಸಲು ಬೇಕಾದ ಮಹಾರಾಜನ ಮೊಹರನ್ನೊಳಗೊಂಡ 'ಕಮ್ಮಟದ ಅಣೆಯನ್ನು (ಡೈ)' ತನ್ನ ಬಳಿ ಇಟ್ಟುಕೊಂಡಿದ್ದನು. ಅಂದು ಆಳ್ವಿಕೆ ಮಾಡುವ ರಾಜರೊಂದಿಗೆ ಕಮ್ಮಟದ ಅಧಿಕಾರಿಯು ನಾಣ್ಯಗಳನ್ನು ಬಿಡುಗಡೆ ಮಾಡುವ ಅಧಿಕಾರವನ್ನು ಹೊಂದಿದ್ದರು. ಅಂತೆಯೇ ಉತ್ತಮೋಜನು ೬ನೆಯ ವಿಕ್ರಮಾದಿತ್ಯನ ಮೊಹರಿನಿಂದ ಕೂಡಿದ ಅಚ್ಚಿನ ಜವಾಬ್ದಾರಿಯನ್ನು ಹೊಂದಿದ್ದನು. ಶಾಸನಗಳಲ್ಲಿ ಬರುವ ವರಹ, ಗದ್ಯಾಣ, ಶುದ್ಧಗದ್ಯಾಣ, ಬಾರಕೂರ ಗದ್ಯಾಣ, ಲೊಕ್ಕಿಗದ್ಯಾಣ, ಕುಳಗದ್ಯಾಣ, ಘಟ್ಟಿವರಹ, ಶುದ್ಧವರಹ, ಚಕ್ರವರಹ, ಸಣ್ಣಪ್ರತಾಪ, ಗಜಬೇಂಟೆಕಾರಹೊನ್ನ, ನವಿಲ್‌ಪೊನ್‌ದಂತಹ ಹೆಸರುಗಳಿವೆ. ಆದರೆ ಇಲ್ಲಿ ಟಂಕಿಸುವ ಚಿನ್ನದ ನಾಣ್ಯದ ಹೆಸರು ಯಾವುದೆಂದು ಗೊತ್ತಾಗುವುದಿಲ್ಲ. ಈ ಬಗೆಗೆ ಶೋಧನೆ ನಡೆಯಬೇಕಾಗಿದೆ.

* 'ವಚನ', ರೋಣ ತಾ., ಗದಗ ಜಿ., ರಾಜೂರ-೫೮೨೨೩೦.



# ಕುರಿತೆರಿಗೆ : ಕೆಲವು ವಿಚಾರಗಳು

ಡಾ. ಎಫ್.ಟಿ. ಹಳ್ಳಿಕೇರಿ*

ಒಂದು ದೇಶ ಅಥವಾ ರಾಜ್ಯ ಸಮಗ್ರವಾಗಿ ಅಭಿವೃದ್ಧಿ ಹೊಂದಬೇಕಾದರೆ ವಿವಿಧ ಮೂಲಗಳಿಂದ ಸಂಪನ್ಮೂಲವನ್ನು ಸಂಗ್ರಹಿಸುವುದು ಬಹುಮುಖ್ಯವಾಗುತ್ತದೆ. ಅಂಥ ಸಂಪನ್ಮೂಲಗಳಲ್ಲಿ ತೆರಿಗೆ ಪದ್ಧತಿಯೂ ಒಂದು. ಪ್ರಾಚೀನ ಕಾಲದಿಂದಲೂ ಈ ತೆರಿಗೆ ಪದ್ಧತಿಯಲ್ಲಿ ಸಾಕಷ್ಟು ವಿಧಾನಗಳಿರುವುದನ್ನು ನಮ್ಮ ಶಾಸನಗಳು ನಿರೂಪಿಸುತ್ತವೆ. ವ್ಯಾಪಾರ ಉದ್ಯೋಗ ವೃತ್ತಿ ಕುಲಕಸಬು ಇತ್ಯಾದಿ ಮೂಲಗಳಿಂದ ತೆರಿಗೆ ಸಂಗ್ರಹಿಸುವುದರ ಮೂಲಕ ರಾಜ್ಯದ ಆದಾಯವನ್ನು ಹೆಚ್ಚಿಸಲಾಗುತ್ತಿತ್ತು ಎಂಬುದಕ್ಕೆ ಅನೇಕ ಉದಾಹರಣೆಗಳು ಶಾಸನಗಳಲ್ಲಿ ಸಿಗುತ್ತವೆ. ಅಂಥ ತೆರಿಗೆಗಳಲ್ಲಿ ಕುರಿದೆರಿಗೆಯೂ ಒಂದು.

ಕುರಿಗಳ ಪಾಲನೆ ಪೋಷಣೆ ಮಾಡುತ್ತಿದ್ದ ಕುರುಬರಿಗೆ ಹಾಕುತ್ತಿದ್ದ ತೆರಿಗೆಗಳಲ್ಲಿ ಶಾಸನಗಳಲ್ಲಿ ಕುರಿದೆರಿಗೆ, ಕುರಿದೆರೆ, ಕುರಿತೆರಿಗೆ ಎಂದು ಕರೆಯಲಾಗಿದೆ. ಕೆಲವು ಮಾಂಡಲೀಕರು ಊರಪ್ರಮುಖರು ಈ ತೆರಿಗೆಯ ಹಣವನ್ನು ದೇವಸ್ಥಾನಕ್ಕೋ ಕುರುಬ ಸಮಾಜದವರಿಗೋ ದಾನಬಿಟ್ಟ ಉಲ್ಲೇಖಗಳು ಶಾಸನಗಳಲ್ಲಿವೆ. ಅಂಥ ಎಲ್ಲ ಉಲ್ಲೇಖಗಳನ್ನು ಅವಲೋಕಿಸಿ ಕುರಿದೆರಿಗೆಯ ಬಗ್ಗೆ ಚರ್ಚಿಸುವುದು ಈ ಸಂಪ್ರಬಂಧದ ಆಶಯವಾಗಿದೆ.

ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆಯ ತ್ರಿಯಂಬಕಪುರದ ತ್ರಿಯಂಬಕೇಶ್ವರನ ಅರ್ಚಕನ ವಶದಲ್ಲಿದ್ದ ತಾಮ್ರಶಾಸನ (ಎ.ಕ.೩, ಪುಟ ೧೧೯)ದಲ್ಲಿ "ತ್ರಿಯಂಬಕ ದೇವರಿಗೆ ಸಲುವ ಗ್ರಾಮಗಳ ಹೊರತೆರಿಗೆಯ ಬಿಟ್ಟು ದೇವಸ್ಥಾನಕ್ಕೆ ಪಾಲಿಸಿದುದು ಗಣಾರಕಮ್ಮಾರತೆರಿಗೆ ಕುರಿತೆರಿಗೆ ಮಾದಾರಿಕೆ ಉಪಿನಕವಲಿಸುಂಕ ಯೆಲೆತೆರಿಗೆ ಬೆಟ್ಟದಕಾವಲು ಯಿದನು ಸರ್ವಮಾನ್ಯವಾಗಿ ಬಿಟ್ಟುದು..."

ಚಾಮರಾಜನಗರ ಜಿಲ್ಲೆಯ ಬಸವಟ್ಟಿ ಗ್ರಾಮದ ಈಶ್ವರ ದೇವಸ್ಥಾನದ ಆವರಣದಲ್ಲಿರುವ ಶಿಲಾಶಾಸನ (ಎ.ಕ-೪, ಪುಟ ೭೩)ವು ಕೊಂಗುಣಿವರ್ಮನ ಕಾಲ(ಶಕ ೭೨೨)ದ್ದು. "ಅರ್ಮ್ಮಳೆಯಪಳ್ಳಿ ಕುರಿಪಟ್ಟಿಯೊಳೆ ಕಲಿಪಟ್ಟೊಡೆಯ ಕುರಿಂಬಗಾವುಣ್ಡಂಗಂ ಕಟಕಯುಗಂ ಬೆಟ್ಟೆರುಗ್ಗಂಡುಗಂ ಮಣ್ಣದೆರೆಯೊಕ್ಕಲೆಲ್ಲಾ ಕಾಲಕ್ಕಂ ಕುರುಂಬದೆರೆಯಂ ಪರಿಹಾರಂ ಬಿಟ್ಟರ್.

ಚಾಮರಾಜನಗರ ಜಿಲ್ಲೆಯ ಅಂಚವಾಡಿ ಗ್ರಾಮದ ಪಶ್ಚಿಮದಲ್ಲಿರುವ ಆಂಜನೇಯ ದೇವಸ್ಥಾನದ ಉತ್ತರ ಭಾಗದಲ್ಲಿ ನೆಟ್ಟಿರುವ ಶಿಲಾಶಾಸನವು ಚಿಕ್ಕರಸ ಗೌಡನಿಗೆ ಕೊಟ್ಟ ಉಂಬಳಿಯನ್ನು ತಿಳಿಸುತ್ತದೆ. ಈ ಶಾಸನವು ವಿಜಯನಗರದ ಅರಸ ಸದಾಶಿವರಾಯನ ಕಾಲದಲ್ಲಿ ಮಹಾಮಂಡಳೇಶ್ವರ ರಾಮರಾಜ ಮತ್ತು ತಿರುಮಲರಾಜರ ನಿರೂಪದಿಂದ ದಳವಾಯಿ ತಿಪ್ಪಣ್ಣನಾಯಕನು ಶಕ ೧೪೬೬ರಲ್ಲಿ ಚಿಕ್ಕರಪ್ಪಸಗೌಡನಿಗೆ "ಹದಿನಾಡ ಸೀಮೆಯೊಳಗಣ ಅಮಚವಾಡಿಯ ಸ್ಥಳ ಅಮಚವಾಡಿಹಳ್ಳಿ ಹಿರಿಯೂರು ವೊಳಗಾದ ಗೆದ್ದೆ ಬೆದ್ದಲು ತೋಟ ತುಡುಕೆ ಕುರಿದರೆ ಸುಂಕ ಸುವರ್ಣಾದಾಯ ಮೊದಲಾದ ಪಯಿಂದಗಳು ಸಹವಾಗಿ ನಿನಗೆ ಉಂಬಳಿಯಾಗಿ ಕೊಟ್ಟೆವು. ನೀನು ನಿನ್ನ ಪುತ್ರ ಪಉತ್ರ ಪರಂಪರೆಯಾಗಿ ಆಚಂದ್ರಾರ್ಕ್ಕಸ್ಥಾಯಿಯಾಗಿ ಅನುಭವಿಸಿ ಕೊಂಡು ಬಹೆಯೆಂದು ಕೊಟ್ಟ ಸಿಲಾಶಾಸನ॥

ಮೈಸೂರು ಜಿಲ್ಲೆಯ ನರಸೀಪುರ ತಾಲೂಕಿನ ಮುತ್ತತ್ತಿ ಗ್ರಾಮದ ಮಾರೀ ಚಾವಡಿಯಲ್ಲಿರುವ ಸುಮಾರು ೯-೧೦ನೆಯ ಶತಮಾನದ ತುಂಡಾದ ಶಿಲಾಶಾಸನ(ಎ.ಕ.-೫, ಪುಟ ೪೫೯)ದಲ್ಲಿ ಕುರಿದೆರಿಗೆಯು ಪ್ರಸ್ತಾಪವಿದೆ. "...ವಲ್ಲಭಪುರವರೇಶ್ವರ ಪಂಚನೇತ್ರ ಧ್ವಜವಿರಾಜಮಾನ ಅರಿರೂಪಸಿಂಗ ನನ್ನಿಯುಸೇಕರನು ಮುತ್ತತ್ತಿಯು ನಾಗಕುಮಾರಯ್ಯಂಗೆ ಕೊಟ್ಟದೆನ್ತೊಡೆ ಸಿದ್ಧಾಯಮಯ್ಯ ಗದ್ಯಾಣ ಗದ್ಯಾಣ ಪುಟ್ಟಗೋಜ ವ್ರಳಿಮೂರು ಕುಳಗವು ವಳ್ಳಗೊಳಗಂ ಇಧ ಕುರಿದೆರೆಯೆಲ್ಲ...ಲ್ವೊಂಬೊ....".

ಮೈಸೂರಿನ ಗುಂಡಲಪಂಡಿತ ಲಕ್ಷ್ಮಣಾಚಾರ್ಯರ ವಶದಲ್ಲಿದ್ದ ತಾವ್ರುಪತ್ರ(ಶಕ೧೪೫೫)ವು ೪೭೬ ಸಾಲುಗಳನ್ನೊಳಗೊಂಡ ದೀರ್ಘವಾದ ಶಾಸನ. ಇದರಲ್ಲಿ ಎಂಟನೆಯ ಪತ್ರದ ಹಿಂಭಾಗದ ೪೧೩ನೆಯ ಸಾಲಿನಲ್ಲಿ

* ಪ್ರಾಧ್ಯಾಪಕ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬.

ಕುರಿದೆರಿಗೆಯ ಉಲ್ಲೇಖವಿದೆ. ಉಯ್ಯಂಬಳ್ಳಿ ಗ್ರಾಮದ "ಚತುಸ್ಸೀಮೆಯೊಳಗುಳ್ಳ ಗದೆಬೆದ್ದಲು ತೋಟ ತುಡಿಕೆ ಆಣೆ ಅಚ್ಚುಕಟ್ಟು ಕಾಡಾರಂಭ ನೀರಾರಾಂಭ ಮಗ್ಗ ಮನೆವಣ ಸುಂಕ ಸುವರ್ಣಾದಾಯ ಕಾಣಿಕೆ ಬೇಡಿಗೆ ಹುಲ್ಲುಹಣ ಹೊಗೆಹಣ ಹೊಗೆಕಾಣಿಕೆ ಕುರಿದೆರಿಗೆ ಜಾತಿಗೂಟ ದೇವರಾಯವಟ್ಟ ಹೆಚ್ಚು ಬೇಡಿಗೆ ಗ್ರಾಮಾದಾಯ ಚರಾದಾಯ ಇವು ಮೊದಲಾದ ಆ ಸಕಲಸ್ವಾಮ್ಯವನೂ ಊಳಿಗಮಾನ್ಯದ ಅರೆವಾಸಿಯನ್ನೂ ಕೂಡಾ ಈ ದೇವನಗರದ ದ್ವಿತಿಯ್ಯ ಶತಕದ ೮೦ ವೃತ್ತಿ ಮಹಾಜನಂಗಳು ಸರ್ವಮಾನ್ಯವಾಗಿ ಶಾಶ್ವತವಾಗಿ ಪುತ್ರಪೌತ್ರಪರಂಪರೆಯಾಗಿ ಆಚಂದ್ರಾರ್ಕ್ಯ ಸ್ಥಾಯಿಯಾಗಿ ಅನುಭವಿಸಿಕೊಂಡು ಬಹರು...."

ಮಂಡ್ಯ ಜಿಲ್ಲೆಯ ಪಾಂಡಪುರ ತಾಲೂಕಿನ ತೊಣ್ಣೂರಿನ ಕೃಷ್ಣದೇವಾಲಯದಲ್ಲಿರುವ ಶಕ ೧೬೪೪ರ ತಾವ್ರುಶಾಸನ(ಎ.ಕ-೬ ಪುಟ ೧೮೪)ದಲ್ಲಿಯೂ ಕುರಿದೆರಿಗೆಯ ಉಲ್ಲೇಖ ಬಂದಿದೆ. ಈ ಶಾಸನವೂ ಸಹ ತುಂಬ ದೀರ್ಘವಾಗಿದ್ದು, ೭೩೩ ಸಾಲುಗಳನ್ನು ಒಳಗೊಂಡಿದೆ. ೬೭೫ನೆಯ ಸಾಲಿನಲ್ಲಿ ಉಕ್ತವಾದ ಹುಲ್ಲುಹಣ ಹೊಗೆಕಾಣಿಕೆ ಕುರಿದೆರಿಗೆ ಮೊದಲಾದ ತೆರಿಗೆಗಳಿಂದ ಬರುವ ಆದಾಯವನ್ನು ಯಾದವಪುರೀ ಅಗ್ರಹಾರ(ತೊಣ್ಣೂರು)ದ ೧೧೨ ವೃತ್ತಿ ಮಹಾಜನಂಗಳು ಸುಖದಿಂದ ಅನುಭವಿಸಬೇಕೆಂದು ಸೂಚಿಸಲಾಗಿದೆ.

ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನ ಕೂಲಿಗೆರೆ ಗ್ರಾಮದ ಕೆರೆ ಏರಿಯ ಮೇಲಿರುವ ಶಕ ೯೧೬ರ ಶಿಲಾಶಾಸನ(ಎ.ಕ-೭, ಪುಟ ೩೧೩)ದಲ್ಲಿ ಕನಕಗಿರಿತೀರ್ಥದಲ್ಲಿ ಬಸದಿಯನ್ನು ನಿರ್ಮಿಸಿ, ಕನಕಸೇನ ಭಟ್ಟಾರಕರಿಗೆ ತಿಪ್ಪೆಯೂರೊಳಾದ ಅಟ್ಟದರೆ ಕುರಿದರೆ ಸಾಮಂತದೆರೆ ಯನ್ನು ದಾನಬಿಟ್ಟ ವಿಷಯವಿದೆ.

ಹಾಸನ ಜಿಲ್ಲೆಯ ಅರಕಲಗೂಡು ತಾಲೂಕಿನ ಬೆಳಗುಲಿ ಗ್ರಾಮದ ಹೊಲದಲ್ಲಿ ನೆಟ್ಟಿರುವ ಸುಮಾರು ೧೦ನೆಯ ಶತಮಾನದ ವೀರಗಲ್ಲು ಶಾಸನ(ಎ.ಕ-೮, ಪುಟ ೧೪೦)ದಲ್ಲಿ "ಸ್ವಸ್ತಿ ಸತ್ಯವಾಕ್ಯ ಕೊಂಗಣಿವರ್ಮ್ಮಧರ್ಮ್ಮ ಮಹಾ ರಾಜಾಧಿರಾಜ ಕೊವಳಾಲಪುರವರೇಶ್ವರಂ ನನ್ದಗಿರಿನಾಥ ಶ್ರೀಮತ್ ಪೆವ್ಮಾನಡಿಗಳ್ ಗಂಗಮುಹಾದೇವಿ.... ರೇವಕನಿಮ್ಮಡಿಗೆ ವೇಳೆಗೊಣ್ಡು ನೆರಪಿದಂಕದ ಕೇತಯ್ಯಂಗೆ ಬೆಳ್ಗಲಿಯು ಕಲ್ನಾಟುಗೊಟ್ಟ ಸ್ಥಿತಿಕ್ರಮವಾವುದೆನ್ದಡೆ ಪುತ್ರಾನುಪೂರ್ವ್ವಕಂಗೊಂಡನೇಸರುಳ್ಳನ್ನೆಗಂ ಗೋಸನಂತಾಗಿ ಯಾಳ್ವಂ ನಾಡಬೋವ ನಾಳ್ಗಾವುಂಡನು ಆಟ್ಟದೆರೆ ಕುರುದೆರೆ ಎನ್ದಿವೊನ್ದು...." ಎಂಬ ವಿವರಗಳಿವೆ.

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ತಿರುಪತಿ ಗ್ರಾಮದ ದೇವಸ್ಥಾನದಲ್ಲಿರುವ ಶಕೆ ೧೬೬೬ರ ತಾಮ್ರಶಾಸನ(ಎ.ಕ-೧೦, ಪುಟ ೧೭೪)ದಲ್ಲಿ ಬಾಣಾವರದ ಶ್ರೀಕಂಠೀರಾಯ ಪೇಟೆಯಲ್ಲಿರುವ ಬಸವೇಶ್ವರದೇವರಿಗೆ ಬಿಟ್ಟಂಥ ದಾನಗಳ ವಿವರಗಳಿವೆ. ಬಾಣಾವರದ ಸಂತೆಗೆ ಬರುವ ವಿವಿಧ ವೃತ್ತಿಯವರು ವ್ಯಾಪಾರಸ್ಥರು ತಮಗೂ ಧರ್ಮಕೀರ್ತಿ ಬರಲೆಂದು ತೆರಿಗೆ ರೂಪದಲ್ಲಿ ಹಣ ಹಾಗೂ ಅಡ್ಡ ವೀಸವನ್ನು ಸಂಗ್ರಹಿಸಿ ದಾನ ಮಾಡಿದ್ದಾರೆ. ಇವರಲ್ಲಿ ಗಾಣಿಗರು ಕುಂಬಾರರು ಕುರುಬರು ಅಗಸರು ದೇವಾಂಗದವರು ಪಂಚಾಲದವರು ಆರಂಭಗಾರರು ಇದ್ದಾರೆ. ಕುರುಬರ ವೃತ್ತಿಗಳಲ್ಲಿ ಒಂದಾದ ಕಂಬಳಿ ನೇಕಾರಿಕೆ. ಈ ಕಂಬಳಿ ನೇಯಲು ಮಗ್ಗ ಅತಿ ಅತಿ ಅವಶ್ಯ. ಹೀಗಾಗಿ ಕರುಬರ ವಂದು ಮಗ್ಗಕ್ಕೆ ಹಾಗ, ಮಾರ್ಗದ ನೂರು ಕುರಿಗಳಿಗೆ ಒಂದು ಹಾಗ, ಸ್ಥಳದಲ್ಲಿ ಮಾರಿದ ನೂರು ಕುರಿಗೆ ಹಾಗದಷ್ಟು ತೆರಿಗೆಯ ಹಣವನ್ನು ದಾನಮಾಡಿದ್ದನ್ನು ಈ ಶಾಸನವು ತಿಳಿಸುತ್ತದೆ.

ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಮಠದಲ್ಲಿರುವ ತಾಮ್ರಶಾಸನ(ಎ.ಕ-೧೧, ಪುಟ ೨೬೦)ದಲ್ಲಿ ಬೇಲೂರು ಸ್ಥಳದ ಬೆಳವಾಡಿ ಗ್ರಾಮದ ಉಪಗ್ರಾಮಗಳ ಕಂದಾಯದ ತೋಟದ ಪೈರು, ಜಾತಿಕೂಟ ಸಮಯಾಚಾರ ಕುರಿತೆರಿಗೆ ಬಾಲತೆರಿಗೆ ಹುಲ್ಲಹಣಾ ಸೇರಿದ ಮಾನ್ಯ ದಂಡಿನ ಕಾಣಿಕೆ ಸುವರ್ಣಾದಾಯ ಸುಂಕದ ಹುಟ್ಟುವಳಿ, ೧೨೦೦ ವರಹಾಗಳನ್ನು ಮಹಾಲಯ ಪುಣ್ಯಕಾಲದಲ್ಲು ಧಾರೆಯನೆರೆದು ಕೊಟ್ಟಿರುವುದನ್ನು ಉಲ್ಲೇಖಿಸಲಾಗಿದೆ.

ಕುರಿದೆರಿಗೆಯನ್ನೇ ಮುಖ್ಯವಾಗಿ ನಿರೂಪಿಸುವ ಶಾಸನಗಳು ಎರಡು. ಮೊದಲನೆಯದು ಬಾಗಳಿ ಕಲ್ಲೇಶ್ವರ ದೇವಸ್ಥಾನದ ಆವರಣದಲ್ಲಿರುವ ಶಕ ೧೪೭೨ರ ಶಿಲಾಶಾಸನ (ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಪುಟ ೫೮೫). ೨೧ ಸಾಲುಗಳನ್ನು ಒಳಗೊಂಡ ಈ ಶಾಸನದ ಪೂರ್ಣಪಾಠ ಹೀಗಿದೆ :

೧. ಶುಭಮಸ್ತು ॥ ಸ್ವಸ್ತಿಶ್ರೀ
೨. ಜಯಾಬ್ಯುದಯ ಶಾಲಿವಾಹನ ಷಕವರ್ಷ
೩. ೧೪೭೨ನೆಯ ಸಾಧಾರಣ ಸಂವತ್ಸರದ
೪. ಫಾಲ್ಗುಣ ಶು ೫ ಮಿಲು ಶ್ರೀಮತ್ತು ರಾಜಾಧಿರಾ
೫. ಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀ
೬. ಸದಾಶಿವಮಹಾರಾಯರು ವಿದ್ಯಾನಗ
೭ ರದೊಳು ರತ್ನಸಿಂಹಾಸನಾರೂಢರಾಗಿ

೮. ಸುಖಸಂಕಥಾವಿನೋದದಿಂದ ರಾಜ್ಯಂಗೆ
೯. ಯುತ್ತಂಮಿರಲು । ಆ ಸದಾಶಿವರಾ
೧೦. ಯರು ಹಡಪದ ಕೃಷ್ಣಪ್ಪನಾಯಕರಿಗೆ
೧೧. ಕೊಟ್ಟ ಕೊಟೂರ ಸೀಮೆಗೆ ಸಲುವ ಬಾಗು
೧೨. ಳಿಯ ಚಾಮಿನಾಯಕರ ಮಗ ಹೆಳವಿನಾ
೧೩. ಯಕರೂ ಬಾಗುಳಿಯ ಕುಮಕರ ಬಸವಿಗೌಂಡ
೧೪. ನ ಮಗ ಲಿಂಗಗೊಂಡ ಮುಂತಾದ ಕುರುಬಗೌಡ
೧೫. ಗಳಿಗೆ ಕುರಿದೆರಿಗೆ ಯಿಲ್ಲಾ ಎಂದು ಬಿಟ್ಟುಕೊಟ್ಟ ಶಾಸ
೧೬. ನ ಹಸ್ತಿನಾವತಿಯ ವಳಿತದ ಪಾಂಡ್ಯದನಾಡ ವಳಗಣ
೧೭. ಕೋಗಳಿಯ ವೇಂಠೆಯಕೆ ಸಲುವ ಕೊಟ್ಟೂರ ಸೀಮೆ
೧೮. ಯ ವೊಳಗಣ ಬಾಗುಳಿಯ ಗ್ರಾಮ ೧ ಆ ಗ್ರಾಮಕ್ಕೆ ಸಲುವ
೧೯. ಕಾಲುವಳಿಗಳು ಮುಂತಾದ ಗ್ರಾಮೋಪಗ್ರಾಮಂ
೨೦. ಗಳಲು ಯಿಹಂತಾ ಕುರಿಗಳಿಗೆ ತೆರಿಗೆ ಯಿಲ್ಲಾ ಎಂದು ಬಿಟ್ಟ ಧರ್ಮಶಾಸನ ॥

ವಿಜಯನಗರದಲ್ಲಿ ಸದಾಶಿವರಾಯರು ರಾಜ್ಯಭಾರ ಮಾಡುತ್ತಿರುವಾಗ ಶಕ ೧೪೭೨ರಲ್ಲಿ ಬಾಗುಳಿಯ ಹೆಳವಿನಾಯಕನು ಬಾಗುಳಿಯ ಸುತ್ತಮುತ್ತಲ ಗ್ರಾಮದಲ್ಲಿರುವ ಕುರುಬರಿಗೆ ಕುರಿತೆರಿಗೆಯನ್ನು ಮನ್ನಾ ಮಾಡಿದ ವಿಷಯವನ್ನು ಈ ಶಾಸನ ವಿವರಿಸುತ್ತದೆ. ಶಾಲಿವಾಹನ ಶಕವರ್ಷ ೧೪೭೨ನೆಯ ಸಾಧಾರಣ ಸಂವತ್ಸರದ ಫಾಲ್ಗುಣ ಶು ೫ ಅಂದರೆ ಫೆಬ್ರುವರಿ ೧೧, ೧೫೫೧ರ ಬುಧವಾರ ಈ ಶಾಸನದ ಕಾಲ. ಕೊಟ್ಟೂರ ಸೀಮೆಯನ್ನು ಆಳುತ್ತಿದ್ದ ಬಾಗುಳಿಯ ಚಾಮಿನಾಯಕರ ಮಗ ಹೆಳವಿನಾಯಕನು ಬಾಗುಳಿಯ ಕುಮಕರ ಬಸವಿಗೌಡನ ಮಗ ಲಿಂಗಗೌಡ ಮೊದಲಾದ ಕುರುಬ ಸಮುದಾಯದವರಿಗೆ ಕುರಿದೆರಿಗೆ ಯನ್ನು ಮನ್ನಾ ಮಾಡಿದ ವಿಷಯವನ್ನು ಈ ಶಾಸನ ಹೇಳುತ್ತದೆ. ಇನ್ನೂ ಮುಂದುವರಿದು, ಹಸ್ತಿನಾವತಿಯ ವಳಿತದ ಪಾಂಡ್ಯದ ನಾಡೊಳಗಣ ಕೋಗಳಿಯ ವೇಂಠೆಯಕೆ ಸಲ್ಲುವ ಕೊಟ್ಟೂರ ಸೀಮೆಯೊಳಗಣ ಬಾಗುಳಿಯ ಗ್ರಾಮ ಮತ್ತು ಅದರ ಸುತ್ತಮುತ್ತಲ ಗ್ರಾಮಗಳಲ್ಲಿ ಇರುವಂಥ ಕುರಿಗಳಿಗೂ ತೆರಿಗೆ ಇಲ್ಲ ಎಂದೂ ತಿಳಿಸುತ್ತದೆ.

ಕುರಿತೆರಿಗೆಯನ್ನು ಮನ್ನಾ ಮಾಡಿದ ಇನ್ನೊಂದು ಮಹತ್ವದ ಶಾಸನ (ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧ ಬಳ್ಳಾರಿ ಜಿಲ್ಲೆ, ಪುಟ ೨೫೦) ಕೊಟ್ಟೂರು ಗ್ರಾಮದಲ್ಲಿದೆ. ಅಲ್ಲಿನ ಕರಣಿಕರ ಮನೆಯ ಮುಂದಿರುವ ಆ ಶಿಲಾಶಾಸನದ ಕಾಲ ಶಕವರ್ಷ ೧೫೫೦೨. ಅಂದರೆ ಕ್ರಿ.ಶ. ೧೫೮೮೦ರಲ್ಲಿ ರಾಮರಾಜಯ್ಯನ ಮಗನಾದ ಆನೆಗೊಂದಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಆತನ ಕಾರ್ಯಕರ್ತನಾದ ಬಾಗುಳಿಯ ಮಾಚಿನಾಯಕನ ಮಗನಾದ ಮಾದಿನಾಯಕನು ಕೊಟ್ಟೂರ ಸೀಮೆಯ ಕುರುಬರಾದ ಸಿದ್ಧಪ್ಪ ಒಡೆಯರ ಮತ್ತು ಆತನ ಅಳಿಯ ರೇವಣ್ಣ ಒಡೆಯರ, ಲಿಂಗಣ್ಣ ಒಡೆಯರ, ಬಾಗುಳಿಯ ಗೋಪನಗೌಡ ಮಗ ಚಿಕ್ಕನಗೌಡ ಗುರುವಗೌಡ ಮೊದಲಾದ ಕೊಟ್ಟೂರ ಸಮಸ್ತ ಕುರುಬ ಪ್ರಜೆಗಳಿಗೆ ಕುರಿದೆರಿಗೆಯನ್ನು ಮನ್ನಾ ಮಾಡಿದ್ದನ್ನು ಈ ಶಾಸನ ಸವಿವರವಾಗಿ ನಿರೂಪಿಸುತ್ತದೆ.

ಸಾಲುಗಳನ್ನು ಒಳಗೊಂಡ ಈ ಶಾಸನದ ಆಯ್ದ ಮಹತ್ವದ ಪಠ್ಯ ಭಾಗ ಹೀಗಿದೆ :

"...ಅರಮನೆಗೆ ತೆರುವಂಥಾ ಕುರಿದೆರಿಗೆಯನು...ಪಕ್ಷದ ಸಮಯ ಪ್ರಸಂಗಗಳು ಬಂದು ಮಹಾಪರ್ವದ ಪುಣ್ಯಕಾಲದಲ್ಲಿ ಶ್ರೀ ಬಾಗಳಿಯ ಕಲ್ಲಿನಾಥದೇವರ ಸಂನಿಧಿಯಲ್ಲಿ ನಮ್ಮ ಗುರುಸ್ವಾಮಿಗೂ ನಮ್ಮ ಮಾತಾಪಿತೃಗಳಿಗೂ ಪುಣ್ಯ ಅಧಿಕವಾಗಬೇಕು ಎಂದು ನಿಮ್ಮ ಸಮಸ್ತ ಪುತ್ರ ಪೌತ್ರಪಾರಂಪರೆಯಾಗಿ ಸರ್ವಮಾನ್ಯವಾಗಿ ನಡೆವ ಹಾಗೆ ಆ ಕುರಿದೆರಿಗೆಯನೂ ಮಾನ್ಯವ ಮಾಡಿ ಬಿಟ್ಟಂಥಾ ಧರ್ಮವನು ಯೀ ಭೂಮಿಯು ಯೀ ಸೂರ್ಯಚಂದ್ರಾದಿಗಳು ಉಳ್ಳಲ್ಲಿ ಪರಿಯಂತ್ರದಲ್ಲೂ ತಪ್ಪದೆ ನಡಸಲುಳವರು ಯೀ ಧರ್ಮಕೆ ಆರು ತಪ್ಪಿದರೂ ಅವರು ತಂಮ ಗುರುದೈವಕೆ ದ್ರೋಹವೆನಿಸಿದವರು । ತಂಮ ಮಾತಾಪಿತೃಗಳು ವಾರಣಾಸಿಯಲಿ ಕೊಂದ ಪಾತಕಕೆ ಹೋಹರು । ಯೀ ಧರ್ಮವನು ಆರು ತಪ್ಪದೆ ಪ್ರತಿಪಾಲಿಸಿಕೊಂಡು ಬಂದರೆ ಅವರಿಗೆ ಇಹಪರದಲ್ಲಿ ಸುಖಸದ್ಗತಿಗಳುಂಟು । ಯೆಂದು ನಾಉ ನಂಮ ಸ್ವನುರಿಚಯಿಂದಲೂ ತ್ರಿವಾಚಾ ವಡಂಬಟ್ಟು ಕೊಟ್ಟ ಕುರಿದೆರಿಗೆಯ ಸರ್ವಮಾನ್ಯವಾಗಿ ಬಿಟ್ಟ ಧರ್ಮಶಾಸನದ ನಕಲು ॥ ಶ್ರೀ ಬೀರಲಿಂಗ ॥

ಇನ್ನು ದೇವಸ್ಥಾನದಲ್ಲಿ ನಂದಾದೀಪವನ್ನು ಹಚ್ಚುವದಕ್ಕಾಗಿ ಕುರಿ–ಆಡುಗಳನ್ನು ದಾನದತ್ತಿಯಾಗಿ ನೀಡಿದ ಬಗ್ಗೆ ರಾಷ್ಟ್ರಕೂಟರ ಕಾಲದ ತಮಿಳು ಶಾಸನಗಳಲ್ಲಿ ಕೆಲವು ಉಲ್ಲೇಖಗಳು ಸಿಗುತ್ತವೆ. ಹರಕೆಯನ್ನು ತೀರಿಸಲಿಕ್ಕಾಗಿ, ಪಾಪಪರಿಹಾರಕ್ಕಾಗಿ ಹಾಗೂ ಸತ್ತ ವ್ಯಕ್ತಿಗೆ ಪುಣ್ಯಪ್ರಾಪ್ತಿಯಾಗ ಲೆಂದು ಕುರಿ–ಆಡುಗಳನ್ನು ದಾನವಾಗಿ ನೀಡಿದ್ದಾರೆ. ಅಂಥ ಕೆಲವು ಶಾಸನಗಳ ವಿವರಗಳು ಹೀಗಿವೆ.

೧. ವಾಣಗೋಪ್ಪಾಡಿ ಪೆಣ್ಣೈ ದಕ್ಷಿಣತಟದಲ್ಲಿರುವ ಇರಲಿಕುಲಶೂಲಾನಂಇ ಚತುರ್ವೇದಿ ಮಂಗಲದಲ್ಲಿರುವ ಪಿಡಾರಿ ಇಡೈಮಲೈನಜ್ಞೈ

ದೇವಾಲಯದಲ್ಲಿ ನಂದಾದೀಪವನ್ನು ಬೆಳಗಲು ಇಳಜ್ಜಳಿಕೋನ್ ಎಂಬ ಕುರುಬನು ೯೬ ಕುರಿಗಳನ್ನು ಆ ಊರ ಸಭಾಸದರಿಗೆ ದಾನವಿತ್ತುದನ್ನು ದಕ್ಷಿಣ ಅರ್ಕಾಟ ಜಿಲ್ಲೆಯ ಕರಡಿ ಗ್ರಾಮದ ಶಾಸನವು ನಿರೂಪಿಸುತ್ತದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೨೯, ಪು. ೨೪).

೨. ದೀಪಕ್ಕೆ ಬೇಕಾಗುವ ತುಪ್ಪವನ್ನು ಪಡೆಯುವುದಕ್ಕಾಗಿ ೪೫ ಕುರಿಗಳನ್ನು ದಾನ ನೀಡಿದ ಬಗ್ಗೆ ಕನ್ನರದೇವನ ಕಾಲದ ಕಂಡಮಂಗಲಮ್ ಶಾಸನ ತಿಳಿಸುತ್ತದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೩೦, ಪು. ೨೫)

೩. ತಿರುಮುನೈಪ್ಪಾಡಿ ಭಾಗದಲ್ಲಿರುವ ತಿರುಮುಂಡ್ಯೆಯೂರ ಶ್ರೀ ಅಚ್ಚುತ್ತಳಿ ಮಹಾದೇವಿಗೆ ನಂದಾದೀಪಕ್ಕಾಗಿ ದಕ್ಷಿಣ ತಟದಲ್ಲಿರುವ ಶಮ್ಮಣಕ್ಕೂರ ಉಡ್ಯೆಯನ್ ಮುಣ್ಯೆಯಚೂಳಾಮಣಿಯು ನೂರು ಕುರಿಗಳನ್ನು ದಾನವಾಗಿ ನೀಡಿದುದನ್ನು ಹೇಳುತ್ತದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೩೫, ಪು. ೩೧).

೪. ಬಾಹೂರನಾಡು ಕುರುಬರು ತಮ್ಮ ಯಾರದೇ ಮನೆಯಲ್ಲಿ ಮದುವೆ ಆದಾಗ ಒಂದು ಕುರಿಯನ್ನು ವಾಗೂರ ಮೂಲಸ್ಥಾನ ದೇವರಿಗೆ ನೀಡಿದ್ದನ್ನು ಬಾಹೂರಿನ ಕನ್ನರದೇವನ ಒಂದು ಶಾಸನ ಉಲ್ಲೇಖಿಸಿದೆ. ಒಂದು ವೇಳೆ ಕುರಿಯನ್ನು ನೀಡದಿದ್ದರೆ ಅವರಿಂದ ಎರಡು ಕುರಿಗಳನ್ನು ದಂಡದರೂಪದಲ್ಲಿ ಪಡೆಯಲು ಗಣಪ್ಪೆರುಮಕ್ಕಳು ಹಾಗೂ ದೇವರಡಿಯಾರರು ಅಧಿಕಾರವನ್ನು ಹೊಂದಿದ್ದರು (ರಾಷ್ಟ್ರಕೂಟರು ತಮಿಳು ಶಾಸನಗಳು ನಂ. ೪೨, ಪು. ೩೬).

೫. ಚಿಂಗಲ್‌ಪೇಟ ಜಿಲ್ಲೆಯ ಉತ್ತರಮೇರೂರ ಮಹಾಸಭೆಯ ನಿರ್ಣಯಗಳನ್ನು ಕನ್ನರದೇವನ ಕಾಲದ ಶಾಸನವು ದಾಖಲಿಸಿದೆ. ಕುರಿ ತೆರಿಗೆಗೆ ಸಂಬಂಧಿಸಿದಂತೆ ತಮಿಳಿನ ಮಹತ್ವದ ಶಾಸನವಿದು. ತಿರುವಳ್ಳಿಯೂರಿನ ಈಶ್ವರ ಭಟ್ಟಾರರ ದೇವಾಲಯಕ್ಕೆ ಬರಬೇಕಾದ ಕೆಲವು ತೆರಿಗೆಗಳನ್ನು ಮನ್ನಾ ಮಾಡಲಾಗಿದೆ. ಅಂಥ ತೆರಿಗೆಗಳಲ್ಲಿ ತಲ್ಯೆಯರ್ಯೆ ಆಣೆಲ್ಲು (ಪಶುಗಂದಾಯ), ವಾರಕಾಣಂ ಅಟ್ಟುಕಿರ್ಯೆ (ಕುರಿಗಳ ಮೇಲಿನ ತೆರಿಗೆ), ಪಟ್ಟಿಕಾಡಿ ರಹಿತ (Tax on the utilisation of manure from the patti) ಅಂದರೆ ಕುರಿಗಳನ್ನು ತರುಬಿ ಅವುಗಳ ಗೊಬ್ಬರದಿಂದ ಶಕ್ತಿಯುತವನ್ನಾಗಿ ಮಾಡಿದ ಭೂಮಿಯನ್ನು ಬಿಟ್ಟು, ಉಳಿದ ಭೂಮಿಯಿಂದ ಬರುವ ಆದಾಯದ ಮೇಲಿನ ತೆರಿಗೆಯನ್ನು ಮನ್ನಾ ಮಾಡಲಾಗಿದೆ. (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೫೪, ಪು. ೪೬).

೬. ತಿರುವಾಲನ್ದುರ್ಯೆ ಆಳ್ವಾರದೇವರಿಗೆ ದೀಪವನ್ನು ಬೆಳಗಲು ೪೫ ಕುರಿಗಳನ್ನು ಕೊರ್ಱುಭಾನ್ ಕಾಮಡಿಯು ದಾನವಾಗಿತ್ತುದನ್ನು ಎಮಪ್ಪೇರೂರ ಶಾಸನ ನಿರೂಪಿಸುತ್ತದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೫೫, ಪು. ೪೭).

೭ ಮಲಾಡು ಪ್ರದೇಶದ ಕುರುಕ್ಕೈಕೂರ್ರಂ ಭಾಗದಲ್ಲಿರುವ ತಿರುಕ್ಕೋವಲೂರು ತಿರುವೀರಟ್ಟಾನತ್ತು ಆಳ್ವಾರರ ದೇವಾಲಯದಲ್ಲಿ ೨೪ ನಂದಾದೀಪಗಳನ್ನು ಬೆಲಗಲು ವೈದುಂಬದೊರೆ ತಿರುವಯ್ಯಾರನು ೨೩೦೪ ಕುರಿಗಳನ್ನು ದಾನ ನೀಡಿದುದನ್ನು ದಕ್ಷಿಣ ಅರ್ಕಾಟ ಜಿಲ್ಲೆಯ ಕಿಲೂರ ಶಾಸನವು ಹೇಳುತ್ತದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೬೬, ಪು. ೫೫).

೮. ತಿರುವಾಯಿಪ್ಪಾಡಿಯ ಕುರುಬ ಕೋಣೂರನಕ್ಕನ್ ಎಂಬ ವ್ಯಕ್ತಿಯು ಬಾಹೂರದಲ್ಲಿರುವ ಮೂಲಸ್ಥಾನದ ಮಹಾದೇವರಿಗೆ ಅರ್ಧ ನಂದಾದೀಪ ಬೆಳಗಲು ೪೬ ಕುರಿಗಳನ್ನು ದಾನ ಮಾಡಿದುದನ್ನು ಬಾಹೂರಿನ ಮೂಲೇಶ್ವರ ದೇವಾಲಯದ ಶಾಸನದಲ್ಲಿದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೬೮, ಪು. ೫೭).

೯. ಕುಮಣಮಂಗಲಂ ಗ್ರಾಮದ ಮುಖ್ಯಸ್ಥರು ಸಭೆ ಸೇರಿ ವಾಳ್ವೆಯೂರ ತಿರುತ್ತಾನ್ರೋನ್ಹಿ ಆಳ್ವಾರ ದೇವಾಲಯದಲ್ಲಿರುವ ಸೂರ್ಯದೇವರಿಗೆ ನಂದಾದೀಪವನ್ನು ಬೆಳಗಲು ೯೬ ಕುರಿಗಳನ್ನು ದಾನ ನೀಡಿದ್ದನ್ನು ದಕ್ಷಿಣ ಅರ್ಕಾಟ ಜಿಲ್ಲೆಯ ಜಂಬಾಯಿ ಗ್ರಾಮದ ಜಂಬುನಾಥ ದೇವಾಲಯದ ಶಾಸನವೊಂದು ನಿರೂಪಿಸಿದೆ (ರಾಷ್ಟ್ರಕೂಟರ ತಮಿಳು ಶಾಶನಗಳು ನಂ. ೭೬, ಪು. ೬೬).

೧೦. ಉತ್ತರ ಅರ್ಕಾಟ ಜಿಲ್ಲೆಯ ತಕ್ಕೋಲಂ ಗ್ರಾಮದ ಜಲನಾಥೇಶ್ವರ ದೇವಾಲಯದ ಒಂದು ಶಾಸನವು ಕುರಿಗಳನ್ನು ದಾನ ನೀಡಿದ್ದನ್ನು ವಿವರಿಸುತ್ತದೆ. ಈ ಗ್ರಾಮದ ತಿರುವೂರಮಠದೊಡೆಯ ವಿಜ್ಞಾನಕ್ಷೇಮ ಭಟ್ಟಾರರ ಮಗ ವಾಚಸ್ಪತಿ ಭಟ್ಟಾರಕನು ತಿರವೂರ ಮಹಾದೇವರಿಗೆ ನಂದಾದೀಪವನ್ನು ಬೆಳಗಲು ಕುರುಬ ಮುಮೆಮಲ್ಯೆಗೆ ೯೦ ಕುರಿಗಳನ್ನು ದಾನ ಕೊಟ್ಟನು (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೮೪, ಪು. ೭೪).

೧೧. ಸುಬ್ರಹ್ಮಣ್ಯ ದೇವರ ನಂದಾದೀಪಕ್ಕಾಗಿ ಪೆರುಮೂರ ನಾಡಿನ ಇಡೈಯೂರನೇನ್ಮಲಿಕೀಳಾನನು ದೇವಡಿಗೆ ಪುಣ್ಯವಾಗಲಿ ಎಂದು ೧೦೦ ಕುರಿಗಳನ್ನುದಾನ ನೀಡಿದ್ದನ್ನು ಚಂಗಲ್‌ಪೇಟ ಜಿಲ್ಲೆಯ ವಿದ್ಯೆಯೂರಿನ ಕಂದಸ್ವಾಮಿ ದೇವಾಲಯದ ಶಾಸನವೊಂದರಲ್ಲಿ ಹೇಳಲಾಗಿದೆ. (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೮೬, ಪು. ೭೬).

೧೨. ಎಮಪ್ಪೆರೂರ ತಿರುವಾಲನ್ದುರೈಪ್ಪ ಶ್ವಾಮಿಗಳ್ಗೆ ನಂದಾದೀಪ ಬೆಳಗಲು ಊರ ಓಲೆಯ ಅಧಿಕಾರಿ ವಾಣಂದರಯನ್ ೯೬ ಕುರಿಗಳನ್ನು ದಾನ ನೀಡಿದ್ದನ್ನು ಒಂದು ಶಾಸನ ತಿಳಿಸಿದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೮೮, ಪು. ೭೮).

೧೩. ಚಿತ್ತೂರ ಜಿಲ್ಲೆಯ ವ್ಯಾಸಪುರಂ ಗ್ರಾಮದ ಒಂದು ಶಾಸನವು ಮುತ್ತರೈಯನ್ ಎಂಬುವವನು ನಕ್ಕಾರ ದೇವರಿಗೆ ನಂದಾದೀಪ ಬೆಳಗಿಸುವುದಕ್ಕೆ ೧೮೦ ಕುರಿಗಳನ್ನು ದಾನ ನೀಡಿದ್ದನ್ನು ನಿರೂಪಿಸಿದೆ, ಹಾಗೆಯೇ ಆತನಿಂದ ೧೦ ಕುರಿಗಳನ್ನು ಅರುಮೈ ಮನ್‌ರಾಡಿ ಹಾಗೂ ಇಳಮೈ ಮನ್‌ರಾಡಿ ಎಂಬಿಬ್ಬರು ಕುರುಬರು ತುಪ್ಪವನ್ನು ನೀಡುವುದಕ್ಕಾಗಿ ಪಡೆದರೆಂಬುದನ್ನೂ ಈ ಶಾಸನ ಹೇಳಿದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೯೩, ಪು. ೮೧).

೧೪. ಚಂಲ್‌ಪೇಟ ಜಿಲ್ಲೆಯ ತಿರುವಿಲಂಬೂದೂರ ಗ್ರಾಮದ ಶಾಸನವು ವಿಳಾಮ್ಪೋಗಿ ಊರಿನ ಸಭೆಯವರು ಅರ್ಧದೀಪಕ್ಕಾಗಿ ೪೫ ಕುರಿಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ. ಈ ಕುರಿಗಳನ್ನು ರಕ್ಷಣೆ ಮಾಡಲು ವಿಳಂದೈ ಗ್ರಾಮದ ಕುರುಬರಾದ ಕಾಡನ್ ಮತ್ತು ನಾಗನ್ ಎಂಬಿಬ್ಬರ ವಶಕ್ಕೆ ನೀಡಿದ್ದನ್ನು ವಿವರಿಸಲಾಗಿದೆ (ರಾಷ್ಟ್ರಕೂಟರ ತಮಿಳು ಶಾಸನಗಳು ನಂ. ೧೦೨, ಪು: ೯೦).

ಮೇಲಿನ ಶಾಸನೋಲ್ಲೇಖಗಳನ್ನು ಗಮನಿಸಿದಾಗ ಕಂಡುಬರುವ ಸಂಗತಿಗಳನ್ನು ಈ ಕೆಳಗಿನಂತೆ ಕ್ರೋಡೀಕರಿಸಬಹುದು: ೧. ಕುರಿಸಾಕಾಣಿಕೆ ಅಥವಾ ಸಂಗೋಪನೆ ಆದಾಯ ತರುವ ವೃತ್ತಿಗಳಲ್ಲಿ ಬಹುಮುಖ್ಯವಾಗಿತ್ತು. ೨. ಈ ವೃತ್ತಿಯಲ್ಲಿದ್ದ ಕುರುಬರಿಗೆ ಹಾಕುತ್ತಿದ್ದ ತೆರಿಗೆಯನ್ನು ಕೆಲವು ಸಂದರ್ಭಗಳಲ್ಲಿ ಮನ್ನಾ ಮಾಡಲಾಗುತ್ತಿತ್ತು. ೩. ದೇವಾಲಯ ಮಠ ಮಂದಿರಗಳಲ್ಲಿ ನಂದಾದೀಪವನ್ನು ಹಚ್ಚುವುದಕ್ಕಾಗಿ ಕುರಿಗಳನ್ನು ದಾನ ಮಾಡುತ್ತಿದ್ದರು. ೪. ಬೆಳೆಗಳು ಹುಲುಸಾಗಿ ಬೆಳೆಯಲೆಂದು ಕುರಿಹಿಕ್ಕಿಯ ಗೊಬ್ಬರವನ್ನು ಹೊಲಗದ್ದೆಗಳಲ್ಲಿ ಬಳಸುತ್ತಿದ್ದರು. ಇದಕ್ಕಾಗಿ ಕುರಿಗಳನ್ನು ಹೊಲಗದ್ದೆಗಳಲ್ಲಿ ತರುಬುತ್ತಿದ್ದರು. ೫. ಇಂಥ ಸಂದರ್ಭದಲ್ಲಿ ಕುರಿತೆರಿಗೆಯನ್ನು ವಿಧಿಸುತ್ತಿರಲಿಲ್ಲ. ೬. ಮದುವೆ ಸಂದರ್ಭದಲ್ಲಿ ಕುರಿಗಳನ್ನು ದೇವಸ್ಥಾನಗಳಿಗೆ ದಾನ ನೀಡುತ್ತಿದ್ದರು. ೭. ಕುರಿತೆರಿಗೆಯ ಹಣವನ್ನು ಕುರುಬ ಸಮಾಜದ ಅಭಿವೃದ್ಧಿಗೆ ವಿನಿಯೋಗಿಸಲಾಗುತ್ತಿತ್ತು.

ಹೀಗೆ ನಾನು ಗಮನಿಸಿದ ಕೆಲವು ಶಾಸನಗಳ ಆಧಾರದಿಂದ ಕುರಿತೆರಿಗೆಗೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳನ್ನು ಇಲ್ಲಿ ಅವಲೋಕನ ಮಾಡಿದ್ದೇನೆ. ಈ ವಿಷಯವನ್ನು ಇನ್ನೂ ವಿಸ್ತಾರವಾಗಿ ಚರ್ಚಿಸುವುದಕ್ಕೆ ಈ ಲೇಖನ ಒಂದು ದಿಕ್ಸೂಚಿಯಾಗಲಿದೆ.



## ಸಹಾಯಕ ಗ್ರಂಥಗಳು


೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, (ಬಳ್ಳಾರಿ ಜಿಲ್ಲೆ), ಸಂ. ಡಾ. ದೇವರಕೊಂಡಾರೆಡ್ಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೨. ಎಪಿಗ್ರಾಫಿಯ ಕರ್ನಾಟಿಕಾ ಸಂಪುಟಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩. ರಾಷ್ಟ್ರಕೂಟರ ತಮಿಳು ಶಾಸನಗಳು, ಸಂ. ಡಾ. ಎಸ್. ಸ್ವಾಮಿನಾಥನ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.



# ಶಾಸನಗಳಲ್ಲಿ ಬೀರಪ್ಪ ಚಿತ್ರಣ

ಡಾ. ರಾಜಶ್ರೀ ಪಾಟೀಲ*

**ಕ**ರ್ನಾಟಕದಲ್ಲಿ ಬೀರಪ್ಪ ಅಥವಾ ಬೀರಲಿಂಗೇಶ್ವರನ ಆರಾಧನೆ ನಾಡಿನಾದ್ಯಂತ ಪ್ರಾಚೀನ ಕಾಲದಿಂದಲೂ ವಿಶಿಷ್ಟವಾಗಿ ಮುಂದುವರಿದುಕೊಂಡು ಬಂದಿದೆ. ಬೀರಪ್ಪನ ಆರಾಧನೆ ಕರ್ನಾಟಕವಲ್ಲದೆ ನೆರೆಯ ಮಹಾರಾಷ್ಟ್ರ ಆಂಧ್ರಪ್ರದೇಶಗಳಲ್ಲೂ ವಿಸ್ತರಿಸಿದೆ.

ಪ್ರಸ್ತುತ ಪ್ರಬಂಧದಲ್ಲಿ ಶಾಸನ ಹಿನ್ನಲೆಯಲ್ಲಿ ಬೀರಲಿಂಗೇಶ್ವರನ ಪ್ರಾಚೀನತೆಯನ್ನು ಕುರಿತು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಬೀರಪ್ಪನಿಗೆ ಸಂಬಂಧಪಟ್ಟ ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ವಿಚಾರಗಳ ಬಗ್ಗೆ ಶಾಸನಗಳು ಮಹತ್ವದ ಸಂಗತಿಗಳನ್ನು ಹೊರಹಾಕುತ್ತವೆ. ಹಾಲುಮತ ಸಮುದಾಯದ ಬೀರಪರಂಪರೆಯಲ್ಲಿ ಈ ಬೀರಪ್ಪನಗೆ ಅಗ್ರಸ್ಥಾನವಿದೆ. ಬೀರಪ್ಪ, ಬೀರೋಬಾ, ಬೀರದೇವ, ಬೀರಲಿಂಗ, ವೀರಲಿಂಗೇಶ್ವರ, ಕರಿಯಪ್ಪ, ಕರಿಸಿದ್ದ, ಕರಿಸಿದ್ದೇಶ್ವರ, ಕೆಂಚರಾಯ, ಹೀಗೆ ನಾನಾ ಹೆಸರುಗಳಿಂದ ಈತ ಪೂಜೆಗೊಳ್ಳುತ್ತಿದ್ದಾನೆ. ಅವನ ಮಹಿಮೆಯನ್ನು ಡೊಳ್ಳಿನ ಹಾಡುಗಳಲ್ಲಿ ಮೌಖಿಕ ಕಥಾನಕಗಳಲ್ಲಿ ನಾನಾ ರೀತಿಯಿಂದ ಕೊಂಡಾಡಲಾಗಿದೆ. ಕುರುಬ ಜನಾಂಗವು ಭಾರತದ ಅತ್ಯಂತ ಪ್ರಾಚೀನ ಜನಸಮುದಾಯುಗಳಲ್ಲಿ ಒಂದು. ಅದು ವೇದಕಾಲದಿಂದ ಕ್ರಿ.ಪೂ. ೧೨೦೦-೨೦೦೦ ವರ್ಷಗಳಷ್ಟು ಹಳೆಯದೆಂದು ಶಂಬಾಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ. ಕುರುಬರ ಆರಾಧ್ಯ ದೈವನಾದ ಬೀರಪ್ಪ ಆ ಜನಸಮುದಾಯ ದಷ್ಟೇ ಪ್ರಾಚೀನ ದೇವರಾಗಿದ್ದಾನೆ. ಕೆಲವು ಜನ ವಿದ್ವಾಂಸರು ಬೀರಪ್ಪನ ಕಾಲವನ್ನು ಕ್ರಿ.ಶ. ೨ನೆಯ ಶತಮಾನವೆಂದು ಗುರುತಿಸಲು ಪ್ರಯತ್ನಿಸಿದ್ದಾರೆ. ಮಹಾರಾಷ್ಟ್ರದಲ್ಲಿ ಕ್ರಿ.ಶ. ೫ನೆಯ ಶತಮಾನದಲ್ಲಿಯೇ ಖಂಡೋಬಾ ಮತ್ತು ಬೀರೋಬಾ ಆರಾಧನೆಗೊಳ್ಳುತ್ತಿರುವ ಬಗ್ಗೆ ದಾಖಲೆಗಳಿವೆ.

ಕುರುಬರಿಗೆ ಸಂಬಂಧಿಸಿದಂತೆ ಕೆಲವು ವಿಷಯಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಬೆಳಗಾವಿ ಜಿಲ್ಲೆ ಸೌದತ್ತಿ ತಾಲೂಕಿನ ಸೊಲಗದ ಕ್ರಿ.ಶ. ೯೮೦ರ ಶಾಸನವು ಬೆಳಗಾವಿಯ ಧನಗರ (ಕುರುಬರ) ಸಮುದಾಯದ ಕರಿಯ ಕೋತಿಮಯ್ಯ ಮತ್ತು ಅವನ ಹೆಂಡತಿ ಕಂಚಿಕವ್ವೆಯ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ಅವಳು ವರ್ಣಾಕ್ಷಿ ದೇವರಿಗೆ ದಾನ ನೀಡಿದ ವಿಷಯವನ್ನು ವಿವರಿಸುತ್ತದೆ.[೧] ಇದು ಕುರುಬರಿಗೆ ಸಂಬಂಧಿಸಿದ ಈತನಕ ದೊರೆತ ಶಾಸನಗಳಲ್ಲಿ ಮೊದಲ ಶಾಸನ ಎಂದು ತಿಳಿದುಬರುತ್ತದೆ. ವಿಜಯಪುರ ಜಿಲ್ಲೆ ಮುದ್ದೇಬಿಹಾಳ ತಾಲೂಕಿನ ಸರೂರ ಶಾಸನಗಳು. ಶಾಸನಗಳಲ್ಲಿ ಬೀರಪ್ಪ, ಬೀರಗಾವುಂಡ, ಬಿರೇಗೌಡ ವ್ಯಕ್ತಿನಾಮಗಳು ಬೀರನಹಳ್ಳಿ, ಬೀರುಗೆಹಳ್ಳಿ, ಬೀರಗೌಡನಹಳ್ಳಿ ಎಂಬ ಸ್ಥಳನಾಮಗಳು ಕ್ರಿ.ಶ. ೧೩-೧೪ನೇ ಶತಮಾನದ ಬಳಿಕ ಶಾಸನಗಳಲ್ಲಿ ಕಂಡುಬರುವುದು ಕ್ರಿ.ಶ. ೧೭ನೆಯ ಶತಮಾನದ ನಂತರ ಕೊಣ್ಣೂರಿನ ಬೀರಪ್ಪನಿಗೆ ಸಂಬಂಧಿಸಿದ ಪ್ರಾಚೀನ ಶಾಸನ ಕ್ರಿ.ಶ. ೧೦೬೧ರ ಸಾಲಿನ "ಯೀ ಬೀರಲಿಂಗಕ್ಕೆ ಹೂಲಬಾವಿ ಕಳೆಕೊಟ್ಟಿರು" ಎಂದಿದೆ.[೨] ಬಾಗಲಕೋಟೆ ಜಿಲ್ಲೆ ಕೊಣ್ಣೂರು, ಬೀರದೇವರ ಗುಡಿಗೆ ಗೋಡೆಗೆ ಸೆರಿಸಿ ಕಟ್ಟಿರುವ ಶಾಸನ. ಇದರ ಕಾಲ ೧೬೨೫-೨೬ ಶಾಸನದಲ್ಲಿ ಉಲ್ಲೆಖವಾಗಿರುವ ಕಾಲವು ಅಪೂರ್ಣವಾಗಿದ್ದು ಶಕ ೧೫೪೭ ಕ್ರೋಧ ನಾಮ ಸಂವತ್ಸರದ ದಸಮಿ ಸನವಾರವೆಂದಿದೆ. ಹೀಗಾಗಿ ಇದು ಕ್ರಿ.ಶ. ೧೬೨೫-೨೬ಕ್ಕೆ ಸಮಾನವಾಗುತ್ತದೆ. ಕೊಣಗನೂರಿನ ಭೂಸಣ್ಣಗೌಡನ ಮಗ ನಾಗಣಗೌಡನು ಬೀರದೇವರ ದೇವಾಲಯದ ಚಂದ್ರಶಾಲೆಯನ್ನು ಕಟ್ಟಿಸಿದಂತೆ ತಿಳಿಸುತ್ತದೆ. ಕುಲಕರಣಿ ಚಿಕ್ಕಪ್ಪನನ್ನು ಇದು ಉಲ್ಲೇಖಿಸುತ್ತದೆ.

ಆದರೆ ಇದಕ್ಕಿಂತಲೂ ಪೂರ್ವದ ಶಾನವು ಬಿಜಾಪೂರ ಜಿಲ್ಲೆ ಸಿಂದಗಿ ತಾಲೂಕಿನ ಗೋಲಗೇರಿಯ ಗೊಲ್ಲಾಳೇಶ್ವರ ಮಂದಿರದಲ್ಲಿರುವ ೧೬.೪.೧೦೨೭ರ ಶಾಸನದಲ್ಲಿ ಬಾಚಗೊಂಡನ ಮಂದಿರ ಎಂದು ಹೇಳಿದೆ. ಇದೇ ಮಂದಿರದಲ್ಲಿ ಕುಳಿತು ವಚನ ಬರೆದ ವಚನಕಾರನ ವೀರಗೊಲ್ಲಾಳನ ಅಂಕಿತನಾಮ ವೀರಬೀರೇಶ್ವರಲಿಂಗ ಮತ್ತು ವೀರಬೀರೇಶ್ವರ ಇದರಿಂದ ಈ ಮಂದಿರ ಬೀರಪ್ಪನದೇ ಆಗಿದೆ. ಹಾಗೆಯೇ ಕ್ರಿ. ೧೧೪೯-೫೦ರ ಶಾಸನದಲ್ಲಿ "ಜಂಬುಖಂಡಿಯ ಬೀರಣದೇವನ ಅರವಟ್ಟಿಗೆಗೆ ಕೊಣೆಗನೂರು ಮಹಾಜನರಿಂದ ಭೂಮಿ ಮತ್ತು ಗೃಹದಾನ" ಮಾಡಿದ ಉಲ್ಲೇಖಗಳಿವೆ.

*

ಕ್ರಿ.ಶ. ೧೨೫೮ರ ದೇವಗಿರಿ ಯಾದವ ಅರಸ ಕನ್ನರದೇವನ ಕಾಲದ ಶಾಸನದಲ್ಲಿ ಬೀರನಾಥ ದೇವರ ಉಲ್ಲೇಖವಿದೆ. (ಕವಿವಿಶಾಸಂ.೧ ಪು.೨೯೯) ಹಾಗೆಯೇ ನಂತರ ಕಾಲದ ಶಾಸನ ದೊರೆಯುವುದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ರಾಮಗಿರಿ ಬೆಟ್ಟದಲ್ಲಿ ರಾಮಗಿರಿ ಬೆಟ್ಟದ ಕರಿಸಿದ್ದೇಶ್ವರಸ್ವಾಮಿ ದೇವಾಲಯದ ಬಗ್ಗೆ ಶಾಸನಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಕ್ರಿ.ಶ.೧೪ನೆಯ ಶತಮಾನಕ್ಕೂ ಪೂರ್ವದ್ದಾಗಿದೆ. ಈ ದೇವಾಲಯಕ್ಕೆ ಕ್ರಿ.ಶ. ೧೪೧೮ರಲ್ಲಿ ವಿಜಯನಗರದ ದೇವರಾಯನ ದಂಡನಾಯಕನಾದ ಲಕ್ಕಣ್ಣವೊಡೆಯನ ಅವಧಿಯಲ್ಲಿ ಹೊಸಬುಳ್ಳಪ್ಪ ಎಂಬುವನು ರಾಮಯದೇವ ಮತ್ತು ವೀರಭದ್ರ ದೇವರಿಗೆ ಐದು ಹಣವನ್ನು ದಾನನೀಡಿದ ವಿವರವಿದೆ. ಕ್ರಿ.ಶ. ೧೫೨೬ರ ಶಾಸನದಲ್ಲಿ ಶ್ರೀ ಕೃಷ್ಣದೇವರಾಯನ ಮಹಾಪ್ರಧಾನ ಬಾಗೂರು ಮಲ್ಲರಸನು ಈ ಭಾಗದ ಆಡಳಿತ ನೋಡಿಕೊಳ್ಳುತ್ತಿದ್ದು. ಸಿದ್ದಪ್ಪ, ರಾಮಯ್ಯ ಎಂಬುವರು ರಾಮಲಿಂಗೇಶ್ವರನಿಗೆ ಉದಯಕಾಲದಲ್ಲಿ ನಡೆಯುವ ಮೊಸರು ಭೋಜನದ ನೈವೇದ್ಯಕ್ಕೆ ದಾನವನ್ನು ನೀಡಿದ ವಿವರವಿದೆ.[೩] ಕ್ರಿ.ಶ. ೧೫೮೦ಕ್ಕೆ ಸೇರಿದ ಕೊಟ್ಟೂರಿನ ಶಾಸನದಲ್ಲಿ ಕಲ್ಲಿನಾಥ ದೇವರಿಗೆ ಸ್ಥಳದಾನ ನೀಡುವ ಸಂದರ್ಭದಲ್ಲಿ ಶ್ರೀ ಬೀರಲಿಂಗನನ್ನು ಉಲ್ಲೇಖಿಸಲಾಗಿದೆ.[೪] ಅದೇ ರೀತಿ ಕ್ರಿ.ಶ. ೧೧೮೩ರ ಅರಸೀಕೆರೆ ತಾ. ಹಾಸನ ಜಿಲ್ಲೆಯ ಕುರುವಂಕ ಎಂಬ ಗ್ರಾಮದಲ್ಲಿ ಕುರುವಂಕೆವನ್ನು ಕುರುವಕ ಎಂದು ಕರೆಯಲಾಗಿದೆ.

ಈಶ್ವರ ದೇವಸ್ಥಾನದೊಳಗೆ ರಂಗಮಂಟಪದಲ್ಲಿ ನೆಟ್ಟಿರುವ ಕಲ್ಲು ಶಾಸನ (ಕ್ರಿ.ಶ. ೧೧೮೬ರಲ್ಲಿ) ಹೊಯ್ಸಳ ಬೀರಬಲ್ಲಾಳನ ಕಾಲದ್ದಾಗಿದೆ. ಈ ಶಾಸನದಲ್ಲಿ ಬಿಟ್ಟಯ್ಯನೆಂಬುವನು ಬೀರೇಶ್ವರಾಲಯವನ್ನು ಕಟ್ಟಿಸಿದ್ದು, ಬೀರದೇವರನ್ನು ಪ್ರತಿಷ್ಠಾಪಿಸಿದು. ಮಹದೇವರಸ ಮೊದಲಾದವರು ಈ ದೇವಾಲಯಕ್ಕೆ ದಾನದತ್ತಿ ನೀಡಿದ ಸ್ಪಷ್ಟ ವಿವರವಿದೆ. ಇಲ್ಲಿ ೧೭ನೇ ಶತಮಾನದ ಬೀರಲಿಂಗೇಶ್ವರ ದೇವಾಲಯ ಕಂಡುಬರುತ್ತದೆ. ಇದು ಕುರುಬರ ಮುಖ್ಯನೆಲೆಯಾಗಿದೆ ಕಾಲೇಭೈರವ, ಸಪ್ತಮಾತೃಕೆಯರು, ಭೈರವನ ಪಾದದ ಶಿಲ್ಪಗಳು ಕಂಡುಬರುತ್ತವೆ. ಶಾಸನದಲ್ಲಿ ಹೇಳುವಂತೆ "ಶಾಸನದ ಪಾಠ ಈ ಕೆಳಗಿನಂತಿದೆ.

> **"…. ಪಿರಿದೆನಿಪ ಭಕ್ತಿಯಿಂದೆ ವರಗುಣೆ ಮಲ್ಲವೆಯ ವಲ್ಲಭಂ**
> **ಬಿಟ್ಟಿಯ್ಯಂ ಪರಮಾರಾಧ್ಯಂ ಬೀರೇಶ್ವರಮಂ ಪ್ರಿಯದಿಂ**
> **ಪ್ರತಿ ಷ್ಟೇಯಂ**
> **ಮಾಡಿಸಿದಂ ಜನವಿನುತೆ ದಾಸಿಯಕ್ಕನೆ ತನಗೆ**
> **ಸಹೋದರಿಯ ಬೀರಿಸೆಟ್ಟಿಯ ಭಾವಂ ವಿನುತ**
> **ನೆನೆ ಬಿಟ್ಟೆಯಂ ಸಜ್ಜನನೀ ಬೀರೇಶ್ವರಾಲಯ**
> **ಮನೆತ್ತಿಸಿದಂ"**
>
> **ಸ್ವಸ್ತಿ ಶ್ರೀಸಕವರ್ಷ ೧೧೦೭ನೆಯ ವಿಸ್ವಾವ**
> **ಸುಸಂವತ್ಸರದ ಪೌಷ್ಯದಮವಾಸ್ಯೆ ಸೋಮವಾರ**
> **ವಿತೀವಾ ತಸಂಕ್ರಮಾಣದಂದು ಶ್ರೀ ಬೀರೇಶ್ವರ**
> **ದೇವರ ನಿತ್ಯನಿವೇದ್ಯಕ್ಕಂ ನಂದಾದೀವಿಗೆಗಂ**
> **ಜೀರ್ಣೋದ್ಧಾರಕ್ಕಂ ಪೂಜಾರಿಪರಿಚಾರಕರಾಹಾರ**
> **ದಾನಕ್ಕುವೆಂದು ಸ**
> **ಮಗ್ರ ಪ್ರಜೆಗಳ ಸಂವಿದಾನದಲು ಮಹದೇವರಸ**
> **ನುಂ ಕಳುವೆ ಮಲ್ಲೆಯಣೊಳಗಾದ ನಾಲ್ವತ್ತು ಮನುಷ್ಯ**[೫]

ಇದರಿಂದ ಕುರುವಂಕದಲ್ಲಿ ಬಿಟ್ಟಯ್ಯನು ಬೀರೇಶ್ವರಾಲಯವನ್ನು ಕಟ್ಟಿಸಿದಂತೆ ಹೇಳಿದೆ. ಈಗ ಈಶ್ವರ ದೇವಾಲಯವೆಂದು ಸ್ಥಳೀಯರು ಕರೆಯುತ್ತಿರುವರು. ಈ ಮೇಲಿನ ಹೇಳಿಕೆಗಳಿಗೆ ಪೂರಕವೆನ್ನುವಂತೆ ಇಂದಿಗೂ ಅಚ್ಚಳಿಯದೆ ಉಳಿದುಬಂದಿರುವ ಹೊಯ್ಸಳ ಶೈಲಿಯ ದೇವಾಲಯ ಹಾಗೂ ದೇವಾಲಯದ ನವರಂಗದ ಆಗ್ನೇಯ ದಿಕ್ಕಿನ ಒಳಭಾಗದ ಗೋಡೆಯಲ್ಲಿ ಹಾಕಿಸಲಾದ ಶಿಲಾಶಾಸನಗಳು ಬೀರೇಶ್ವರ ದೇವಾಲಯ ಎಂಬುದನ್ನು ದೃಢಪಡಿಸುತ್ತವೆ. ಇನ್ನೊಂದು ಶಾಸನದಲ್ಲಿ ೧೦೮೫ರಲ್ಲಿ ಕರ್ಣಾಲದೇವನ ವೀರನಾಥದೇವ ಎಂದು ಕಂಡುಬರುತ್ತದೆ. ಶಾಸನದಲ್ಲಿ ಬಿಟ್ಟೇಯನು ತನ್ನ ಪರಮಾರಾಧ್ಯ ದೈವನಾದ ಬೀರೇಶ್ವರ ದೇವರಿಗೆ ಕುರುವಂಕದಲ್ಲಿ ಗುಡಿಕಟ್ಟಿಸಿ ದತ್ತಿ ನೀಡಿದ್ದನ್ನು ಹೇಳಿದೆ. ಕ್ರಿ.ಶ. ೧೫೮೦ಕ್ಕೆ ಸೇರಿದ ಕೊಟ್ಟೂರಿನ ಶಾಸನದಲ್ಲಿ ಕಲ್ಲಿನಾಥ ದೇವರಿಗೆ ಸ್ಥಳದಾನ ನೀಡುವ ಸಂದರ್ಭದಲ್ಲಿ ಶೀ ಬೀರಲಿಂಗನನ್ನು ಉಲ್ಲೇಖಿಸಲಾಗಿದೆ. (ಕವಿವಿಶಾಸಂ.೧, ಪು. ೨೩೧) ಮೈಸೂರು ಒಡೆಯರಾದ ರಣಧೀರ ಕಠೀರವ ನರಸರಾಜ ಒಡೆಯರ ಕಾಲದಲ್ಲಿ ಕ್ರಿ.ಶ. ೧೬೫೩ರ ಶಾಸನದಲ್ಲಿ (ಎ.ಕ. ೩, ಪು. ೩೯೪ ಹೆಂಮರಗಾಲ, ನಂಜನಗೂಡ) ಹೆಂಮರಗಾಲದ ಬೀರದೇವರ ಗುಡಿಯ ಜೀರ್ಣೋದ್ಧಾರ ಮಾಡಿದ ವಿವರವಿದೆ. ದೊಡ್ಡಬೀರೇಗೌಡ ಎಂಬುವನು ಯಜಮಾನನಾಗಿದ್ದು ದೇವಸ್ಥಾನದ ದೂಪದೀಪ ಮೊದಲಾದವುಗಳನ್ನು ನಡೆಸಿಕೊಂಡು ಹೋದನೆಂಬ ವಿವರವಿದೆ. ಇದರ ಕೊನೆಯಲ್ಲಿ "ನಡೆಯದೆಯಿದರೆ! ಉಗಡತನಕ್ಕೆ ಕರುಣವಿಲ್ಲ, ಕುರುಬನಾಗಿ ಯಿಹಾಗುಣಯಿದಕ್ಕೆ ಸಾಕ್ಷಿಗಳು ಸಮಸ್ತರು ಗವುಡಗಳು" ಎಂದಿದೆ. ೧೩೯೫ ಮಳವಳಿ ತಾಲೂಕಿನ ಶಾಸನದಲ್ಲಿ ಸಂಬೋಧಿಸಲಾಗಿದೆ. ಇಲ್ಲಿಯ ರೇವಣಸಿದ್ದನ ಗೋತ್ರಕಸ್ವಾಮಿ ಬೀರಣ್ಣ ಬೀರಪ್ಪನೇ ಆಗಿದ್ದಾನೆ. ಬೀರಣ್ಣ, ಬೀರಲಿಂಗ, ಲಿಂಗದ ಬೀರಣ್ಣ ಎಂಬ ಪದಗಳನ್ನು ಶಾಸನದ ಮತ್ತು ಸಾಹಿತ್ಯಗಳಲ್ಲಿ ಬಳಸಿದ್ದನ್ನು ಕಂಡರೂ ಅನೇಕ ವಿದ್ವಾಂಸರು ವೀರಭದ್ರ ಎಂದು ಚರ್ಚಿಸಿದ್ದಾರೆ. ಇದರಿಂದ ಬೀರಪ್ಪನೇ ಇಂದಿನ ವೀರಭದ್ರ, ಕೆಲವು ವಿದ್ವಾಸರು ವೀರಭದ್ರ ಮತ್ತು ಬೀರಪ್ಪ ಅಭಿನ್ನರು ಎಂದು ವಾದಿಸಿದ್ದಾರೆ. ಆದ್ದರಿಂದಲೇ ಎಂ.ಜಿ. ನಾಗರಾಜ

ಅವರು ರುದ್ರ, ವೀರಭದ್ರ, ಶಿವನನ್ನು ಸಮಾನಾರ್ಥವಾಗಿ ಬಳಸಿಕೊಂಡರೆ ಯಾವ ಬಾಧಕವಿಲ್ಲ ಎಂದು ಹೇಳುತ್ತಾರೆ.[೬]

ಕರ್ನಾಟಕದಲ್ಲಿ ವೀರಭದ್ರನ ಕುರಿತು ಪ್ರಾಚೀನ ಶಾಸನ ಮಂಡ್ಯ ಜಿಲ್ಲೆಯ ರಾಯಶೆಟ್ಟಿ ಗ್ರಾಮದ ಇಮ್ಮಡಿ ಗೊಲ್ಲಾಳ ಅರಸನ ಕ್ರಿ.ಶ. ೧೧೮೫ರ ಶಾಸನ ಎಂದು ಶ್ರೀನಿವಾಸ ಪಾಡಿಗಾರ ಅವರ ಅಭಿಪ್ರಾಯ. ಆದರೆ ಅದಕ್ಕೂ ಪ್ರಾಚೀನವಾದ ಶಾಸನ ಗುಲಬರ್ಗಾ ಜಿಲ್ಲೆಯ ಶಹಪೂರ ತಾಲೂಕಿನ ಸಿರವಾಳ ಗ್ರಾಮದ ೧೧೭೮ರಲ್ಲಿ ಹುಟ್ಟಿಕೊಂಡ ಶಾಸನದಲ್ಲಿ ಶಾಂತಿಮಯ್ಯ ತತುಕ್ಷಣದೊಳ ಉಲ್ಲೇಖವಿದೆ. ಇದಕ್ಕೂ ಪ್ರಾಚೀನವಾದ ಶಾಸನ ಮಂಡ್ಯ ಜಿಲ್ಲೆಯ ಮುದ್ದನಗೆರೆಯದು. ಮುದ್ದನಗೆರೆ ಮಂಡ್ಯ ಜಿಲ್ಲೆ ಮತ್ತು ರಾಯಶೆಟ್ಟಿ ಶಾಸನಗಳಲ್ಲಿ ವೀರಭದ್ರದೇವರು ಬೀರಲಿಂಗೇಶ್ವರ ಎಂಬ ಪ್ರಸ್ತಾಪವಿದೆ.[೭] ಮಂಡ್ಯ ಜಿಲ್ಲೆಯ ಮುದ್ದನಗೆರೆ ಮತ್ತು ರಾಯಶೆಟ್ಟಿಪುರ ಶಾಸನಗಳ್ಲಿ ಕೈಲಾಸದ ದೇವತೆಗಳ ಪೈಕಿ ಬೀರಪ್ಪ ವೀರಭದ್ರ ದೇವರು ಒಬ್ಬ ಎಂಬ ಪ್ರಸ್ತಾಪವಿದೆ.

**"..........ಸ್ವಸ್ತಿ ಶ್ರೀ ಮನ್ನುಮಹಾಮಹಿಮನಪ್ಪ ಶ್ರೀಕೆಲಾಸ ಪುರವರಾಧೀಶ್ವರಂ........**
**ಪಂಚವಕ್ತ್ರ ಪರಮೇಶ್ವರನ ವೋಲಗದ ಭೃಂಗಿ (ಶ.....**
**ಸಾಲೋಕ್ಯ ಸಾಮೀಪ್ಯ ಸಾರೂಪ್ಯ.....**
**ದೇವಲೋಕದ ದೇವಗಣಂಗಳು ವೀರಭದ್ರ......**
**ಸ್ವಸ್ತಿ ಶ್ರೀ..... ಮಾಡಿದ ಅಸಂಖ್ಯಾತ...... ವೀರಭದ್ರ ದೇವರು ಮುಖ್ಯವಾದ ವೀರಸೋಮನಾಥಪುರದ ಭಿತ್ತಿ"[೮]**

ಈ ಶಾಸನಗಳಲ್ಲಿ ವೀರಭದ್ರನ ಪೂರ್ವಾವತಾರ ಬೀರಪ್ಪ ಬೀರಪ್ಪ ವೀರಭದ್ರನಾಗಿರಬಹುದು.

ವಾರಂಗಲ್ಲು ಕಾಕತೀಯರು ಮೂಲತಃ ಕರ್ನಾಟಕದವರು. ಇವರ ಕುಲದೈವ ಬೀರಪ್ಪ ಇವರ ಆಡಳಿತ ಕೇಂದ್ರವಾದ ಕೊಲ್ಲಿಪಾಕಿಯಲ್ಲಿ ವೀರಭದ್ರ (ಬೀರಪ್ಪ) ಮಂದಿರ ಕಟ್ಟಿಸುವುದರ ಮೂಲಕ ಕೊಲ್ಲಿಪಾಕಿಯ ವೀರಭದ್ರ ಬೀರಪ್ಪ ಅವರ ಕುಲದೇವತೆ. ಆ ಕಾರಣಕ್ಕಾಗಿಯೇ ವೀರಭದ್ರ ಅವರ ರಾಜದೇವತೆಯೂ ಆಗಿದ್ದ. ಕ್ರಿ.ಶ. ೧೫೫೧ರ ತಗರಪುರ ಶಾಸನದಲ್ಲಿ..... ಓರಂಗಲ್ಲಾ ಬೀದೇಯ ಪ್ರವರ ಪುರವರೋ ವಿರುರದ್ರಾವನಿಗೊಂ ಎಂದು ಓರಂಗಲ್ ಕಾಕತೀಯರ ರಾಜದೇವತೆಯ ಸ್ಮರಣೆ ಇದೆ.[೯]

ವಿರೂಪಾಕ್ಷ ಶಬ್ದದ ಅರ್ಥ ಅಸವನೇತ್ರನು ಅವನೇ ಶಿವ. ಬೀರಪ್ಪ, ವೀರಭದ್ರನೇ ವಿರೂಪಾಕ್ಷನಾದ ಬಗ್ಗೆ ಪ್ರಜ್ಞಾವಂತ ಜನರಿಗೆ ತಿಳಿದೇ ಇದೆ. ವಿರೂಪಾಕ್ಷನ ಭವ್ಯ ಮಂದಿರ ಇರುವುದು ಹಂಪೆ, ವಿಜಯನಗರ ರಾಜರು ತಮ್ಮ ಶಾಸನಗಳ ಹಾಗೂ ರಾಜಾಜ್ಞೆಗಳ ಕೊನೆಯಲ್ಲಿ 'ಶ್ರೀ ವಿರೂಪಾಕ್ಷ' ಎಂಬ ಒಪ್ಪ ಬಳಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರಾದ ಹಕ್ಕಬುಕ್ಕರು ಕುರುಬ ಕುಲದ ಒಡೆಯರ ಪಂಗಡಕ್ಕೆ ಸೇರಿದವರು. ಆದ್ದರಿಂದ ಹಂಪೆಯಲ್ಲಿ ಸುಮಾರು ೫೦ಕ್ಕೂ ಮಿಗಿಲಾಗಿ ವಿವಿಧ ಭಂಗಿಯಲ್ಲಿ ವೀರಭದ್ರನ ವಿಗ್ರಹಗಳಿವೆ. ಭಾರತದಲ್ಲಿ ಒಂದೇ ದೇವರ ಇಷ್ಟೊಂದು ವಿಗ್ರಹಗಳಿರುವುದು ಇದೊಂದೇ ಸ್ಥಳ ಮಾತ್ರ. ಬೀರಪ್ಪ ವೀರಭದ್ರ ಸಂಪ್ರದಾಯವೇ ಕಾಲಕ್ರಮೇಣ ವಿರೂಪಾಕ್ಷ ಸಂಪ್ರದಾಯವಾಗಿ ಪರಿವರ್ತನೆಗೊಂಡಿದೆ. ಬೀರಪ್ಪ ಅಥವಾ ವೀರಭದ್ರನು ಮುಂದೆ ವಿರೂಪಾಕ್ಷ ಎಂಬ ರೂಪ ಪಡೆಯಿತು ಎಂದು ಡಾ. ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.

ಬೀರಪ್ಪನ ಅಥವಾ ವೀರಭದ್ರನ ಮೂಲ ನೆಲೆಗಳೆಲ್ಲವೂ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿಯೇ ಹೆಚ್ಚು ಕಂಡುಬರುತ್ತವೆ. ರೇವಣಸಿದ್ದ ನೆಲೆನಿಂತ ಮತ್ತು ಸಂಚರಿಸಿದ ಪ್ರದೇಶಗಳಲ್ಲಿಯೇ ಬೀರಪ್ಪ ವೀರಭದ್ರನ ಕ್ಷೇತ್ರಗಳನ್ನು ಕಾಣಬಹುದು. ಕಲ್ಯಾಣ ಚಾಲುಕ್ಯರ ಉಪರಾಜಧಾನಿಗಳಾದ ಕೊಣ್ಣೂರು, ಆಲಕನೂರು, ಹೊನ್ನೂರು, ಆರೇವಾಡಿ, ರಾಯಬಾಗ ತಾಲೂಕು ಮುಂತಾದ ಕಡೆಗೆ ಬೀರಪ್ಪನ ಪ್ರಸಿದ್ದ ಮಂದಿರಗಳಿವೆ. ಬೆಂಗಳೂರು, ಮೈಸೂರು, ಮಂಡ್ಯ ಚಾಮರಾಜನಗರ, ಚಿತ್ರದುರ್ಗ, ತುಮಕೂರು, ಬಿಜಾಪುರ, ಬೆಳಗಾವಿ, ಗುಲಬರ್ಗಾ, ಕೊಲ್ಲಾಪುರ, ಸೋಲಾಪುರ, ಧಾರವಾಡ, ಬಾಗಲಕೋಟೆ ಜಿಲ್ಲೆಗಳಲ್ಲಿಯ ಪ್ರತಿಯೊಂದು ಗ್ರಾಮಗಳ ಕುರುಬರ ಕೇರಿಗಳಲ್ಲಿ ಬೀರದೇವರ ಮಂದಿರಗಳಲ್ಲಿ ಕೆಲವು ಬೀರಪ್ಪನಿಗೆ ಸಂಬಂಧಪಟ್ಟ ಶಾಸನಗಳು ದೊರೆಯುತ್ತವೆ.

## ಆಧಾರಸೂಚಿ ಮತ್ತು ಅಡಿಟಿಪ್ಪಣಿ


೧. ಎಪಿಗ್ರಾಫಿಯಾ ಇಂಡಿಕಾ, ೧೭, ಪು. ೪.
೨. ಎಪಿಗ್ರಫಿಯಾ ಕರ್ನಾಟಕಾ, ೭, ಎಸಕೆ, ಪು. ೬೯.
೩. ಎಪಿಗ್ರಫಿಯಾ ಕರ್ನಾಟಕ, ೧೧, ಪು. ೩೫೩–೫೪.
೪. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೧, ಪು. ೨೩೧.
೫. ಎಪಿಗ್ರಾಫಿಯಾ ಕರ್ನಾಟಕ, ಭಾಗ ೧೦, ಅರಸೀಕೆರೆ ೫೯, ಪು. ೮೬.
೬. ನಾಗರಾಜ ಎಂ.ಜಿ., ಸಾಂಸ್ಕೃತಿಕ ವೀರಭದ್ರಸ್ವಾಮಿ, ೧೯೯೯, ಪು. ೨೫.
೭. ಅದೇ ಪು. ೨೧.
೮. ಅದೇ ಪು. ೨೨.




# ಶಾಸನೋಕ್ತ ಮಾದಿಗರು

**ಸುರೇಶ ವೈ. ಮಾದಾರ* ಡಾ. ಎಸ್.ಕೆ. ಮೇಲಕಾರ****

ಇತಿಹಾಸದಲ್ಲಿ ಶಾಸನಗಳ ಪಾತ್ರ ಬಹಳ ಮುಖ್ಯವಾದ ಆಕರಗಳಾಗಿವೆ. ಅವುಗಳಲ್ಲಿ ವಿವಿಧ ಜಾತಿ–ಜನಾಂಗದ ಕುರಿತು ಶಾಸನಗಳಲ್ಲಿ ಉಲ್ಲೇಖ ಕಂಡು ಬರುವವು. ಚರಿತ್ರೆಯಲ್ಲಿ ಇವರ ಪಾತ್ರ ಪ್ರಮುಖವಾಗಿದ್ದರೂ ಇತ್ತೀಚಿನ ಸಂಶೋಧನೆಯಲ್ಲಿ ಮಾದಿಗ ಜನಾಂಗದ ಕುರಿತಾದ ಉಲ್ಲೇಖಗಳು ಬೆರಳೆಣಿಕೆಯಷ್ಟು ಮಾತ್ರ ಕಂಡು ಬರುತ್ತವೆ. ವಿವಿಧ ಜನವರ್ಗಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳು ಚರಿತ್ರೆಯ ಪುನರ್ ರಚನೆಗೆ ಅಮೂಲ್ಯವಾಗಿವೆ. ಅಂತಹ ಶಾಸನಗಳು ಮಾದಿಗರ ಸಮಾಜದ ಕುರಿತಾಗಿ ಉಲ್ಲೇಖಿಸುವ ನಾಡಿನ ವಿವಿಧ ಶಾಸನಗಳನ್ನು ಸಂಶೋಧಿಸಿ ನನ್ನ ಈ ಲೇಖನವನ್ನು ಸಿದ್ಧಪಡಿಸಿರುತ್ತೇನೆ.

## ಮಾದಿಗರ ಕುರಿತು ಉಲ್ಲೇಖಿತ ಶಾಸನಗಳು

ಕ್ರಿ.ಶ. ೪೫೯ರ ಗಂಗರ ಕಾಲದ ಶಾಸನವೊಂದರಲ್ಲಿ "ಹದಿನೆಂಟು(೧೮) ಜಾತಿಗಳ ಉಲ್ಲೇಖವಿದೆ. ಅವುಗಳಲ್ಲಿ ಮಾದಿಗ ಜಾತಿಯು ಕೂಡಾ ಒಂದಾಗಿದೆ ಎಂದು ಹೇಳಲಾಗಿದೆ. ಇದೇ ಉಲ್ಲೇಖ ೧೨ನೆಯ ಶತಮಾನ ನಿಜ ಶರಣು ಅಂಬಿಗರ ಚೌಡಯ್ಯನವರ ವಚನಗಳಲ್ಲಿ ಕಂಡುಬಂದಿದೆ.

"ಕ್ರಿ.ಶ. ೭೨೫ರ ಬದಾಮಿ ಚಾಲುಕ್ಯರ ಕಾಲದ ಲಕ್ಷ್ಮೇಶ್ವರ ಶಾಸನಗಳಲ್ಲಿ ಮಹಾರಾಜರು ಅಂದರೆ ಬ್ರಾಹ್ಮಣರು, ನಗರ್ತರು ಮತ್ತು ಹದಿನೆಂಟು ಪ್ರಕೃತಿಗಳು ಪಾಲಿಸಬೇಕಾದ ನೇಮಗಳನ್ನು" ಉಲ್ಲೇಖಿಸಿದೆ"[೧]. ಇಲ್ಲಿಯೂ ಕೂಡಾ ಮೊದಲ ಬಾರಿಗೆ ಜಾತಿಗಳ ಉಲ್ಲೇಖ ಕಂಡುಬಂದಿದೆ.

"ಕ್ರಿ.ಶ. ೯೬೪ರ ಹುನವಳ್ಳಿ ಶಾಸನ ಕಲ್ಯಾಣಿ ಚಾಲುಕ್ಯರ ಕಾಲದ ಶಿವಮೊಗ್ಗೆ ಜಿಲ್ಲೆಯ ಸೊರಬ ತಾಲೂಕಿನ ಹುನವಳ್ಳಿ (ಪುಲವಳ್ಳಿ) ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಹಾಕಿಸಿರುವ ಶಾಸನವೊಂದರಲ್ಲಿ "ಮಾದಿಗ" ಪದ ಬಳಕೆಯಾಗಿರುವುದು ಕಂಡುಬರುತ್ತದೆ. ಈ ಶಾಸನವು ಮಾದಿಗರ ಕಮ್ಮಯ್ಯನ ಮಗ ಅರಿವಮ್ಮನ ತಮ್ಮನಾದ ನಾಣೆಯೆಂಬುವನು ಮಹಾಜನಂಗಳಿಗೆ ಗೋವುಗಳನ್ನು ದಾನ ಕೊಟ್ಟಿರುವುದನ್ನು ತಿಳಿಸುತ್ತದೆ"[೨].

"ಕ್ರಿ.ಶ. ೯೯೭ರ ಹುನವಳ್ಳಿ(ಪುಲವಳ್ಳಿ)ಯ ಮತ್ತೊಂದು ಶಾಸನದಲ್ಲಿ ಅದೇ ಗ್ರಾಮದ ಅರಿವರ್ಮ ಎಂಬಾತನು ತನ್ನ ಊರಿನ ಗೋವುಗಳನ್ನು ಕಳ್ಳರು ಅಪಹರಿಸಿದಾಗ ಅವರೊಂದಿಗೆ ಹೋರಾಡಿ ಸತ್ತಿದ್ದಕ್ಕೆ ಅವನಿಗಾಗಿ ಕನ್ನಯ್ಯ ವೀರಗಲ್ಲನ್ನು ನಿಲ್ಲಿಸುತ್ತಾನೆ. ಈ ಶಾಸನಗಳು ಒಳಗೊಂಡಿರುವ ಸಂಗತಿಗಳು ಮಾದಿಗರು ಊರಿನ ಗೋವು ಕಾಯುವ ಕೆಲಸವನ್ನು ನಿರ್ವಹಿಸುತ್ತಿದ್ದ ಸಂಗತಿ ಮತ್ತು ಮಾದಿಗರು ಬ್ರಾಹ್ಮಣರಿಗೆ ಗೋವುಗಳನ್ನು ದಾನವಾಗಿ ಕೊಟ್ಟಿರುವುದನ್ನು ಖಚಿತಪಡಿಸುತ್ತವೆ"[೩].

ಕ್ರಿ.ಶ. ೧೦೪೪ರ ಆಡೂರ ಶಾಸನದಲ್ಲಿ "ರಾಜಪೂಜಿತ ವಿಭುಮಾದಿಗಂ" ಅರಸನಾದ ಮಾದಿಗ ಎಂದೂ ಉಲ್ಲೇಖ ಇರುವುದು ಕಂಡುಬರುತ್ತದೆ.

ಕ್ರಿ.ಶ. ೧೨೦೦ರ ಅಬ್ಬಲೂರ ಶಾಸನ ಮತ್ತು ಕ್ರಿ.ಶ. ೧೨೭೯ರ ಜಗಳೂರಿನ ಕಲ್ಲೇದೇವರಪುರದ ಶಾಸನಗಳಲ್ಲಿ ಮಾದಾರ ಚನ್ನಯ್ಯನ ಉಲ್ಲೇಖ ವಿಶೇಷವಾಗಿ ಪ್ರಸ್ತಾಪ ವಾಗಿರುವುದು ಕಂಡುಬರುತ್ತದೆ.

"ಕ್ರಿ.ಶ. ೧೨ನೇ ಶತಮಾನದ ಕಲಘಟಗಿ ಶಾಸನದಲ್ಲಿ ಮಾಂಡಲಿಕ ಮಾದಿಗನನ್ನು ಹೆಸರಿಸುತ್ತದೆ. ಹಿನ್ನಲೆಯಲ್ಲಿ ನೋಡಿದಾಗ ೧೧, ೧೨ನೇ ಶತಮಾನದಲ್ಲಿ ಮಾದಿಗರು ಅರಸರ ಮಾಂಡಲೀಕರಾಗಿ ಇದ್ದುದು ತಿಳಿದುಬರುತ್ತದೆ. ಶಾಸನವೊಂದರಲ್ಲಿ ಮಾದಿಗರು ತಾವು ಕೈಗೊಂಡಿದ್ದ ಪ್ರಧಾನ ವೃತ್ತಿಯಾದ ಚರ್ಮಗಾರಿಕೆಗೂ ತೆರಿಗೆಗಳನ್ನು ಸಲ್ಲಿಸುತ್ತಿದ್ದುದು ಕಂಡುಬರುತ್ತದೆ. ಬದಾಮಿಯ ಮಹಾಜನರು ಊರಿನ ಚರ್ಮಕಾರರ ತೆರಿಗೆಗಳನ್ನು ತೆಗೆದುಹಾಕಿದರಂತೆ ಎಂಬ ಸಂಗತಿಯ ಹಿನ್ನಲೆಯಲ್ಲಿ ರಾಜ್ಯದ ಬೊಕ್ಕಸಕ್ಕೆ ಬರುತ್ತಿದ್ದ ಆದಾಯಗಳಲ್ಲಿ ಚರ್ಮಗಾರಿಕೆಯ ತೆರಿಗೆ ಒಂದಾಗಿತ್ತು"[೪]. ಇದಲ್ಲದೆ ಮಾದಾರಿಕೆ ಎಂಬುದು ಒಂದು ಮಾದಿಗರು ಕೊಡುವ ಸುಂಕದ ಹೆಸರಾಗಿ ಅನೇಕ ಶಾಸನಗಳಲ್ಲಿದೆ.

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ಮತ್ತು ಪ್ರಾಚ್ಯವಸ್ತು ವಿಭಾಗ, ಕ.ವಿ.ವಿ., ಧಾರವಾಡ.

** ಕ್ಯೂರೇಟರ್, ಸಂಶೋಧನಾ ಸಂಸ್ಥೆ, ಧಾರವಾಡ.

"೧೪ನೇ ಶತಮಾನದ ಶ್ರವಣಬೆಳಗೊಳ ಶಾಸನದಲ್ಲಿ ಸಾತ್ವಿಕರು, ಬೋಷ್ಟಿಕರು, ತಿರುವಡಿ ತಂಣ್ಣಿರವರು ನಾಲ್ವತ್ತೆಂಟು ಜನಂಗಳು ಸಾವಂತ ಬೊವಕ್ಕಳು ತಿರಿಕುಲ ಜಾಂಬವ ಕುಲವೊಳಗಾದ ಹದಿನೆಂಟು ನಾಡ ಎಂಬ ಉಲ್ಲೇಖವಿದೆ. ಇದರಲ್ಲಿ ಪ್ರಸ್ತಾಪಗೊಂಡಿರುವ ಜಾಂಬವ ಕುಲ ಬೇರಾವುದಾಗಿರದೆ ಮಾದಿಗ ಜಾತಿಯೇ ಆಗಿದೆ"[೫]. ಏಕೆಂದರೆ ಮಾದಿಗರು ತಮ್ಮ ಮೂಲ ಪುರುಷನಾದ ಆದಿಜಾಂಬವನ ಹೆಸರಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ.

"ಕ್ರಿ.ಶ. ೧೬೦೦ ಶಾಸನವೊಂದು ದಕ್ಷಿಣ ಕರ್ನಾಟಕದಲ್ಲಿನ ಬಲಗೈ–ಎಡಗೈ ಅಸ್ಪೃಶ್ಯರು ಮತ್ತು ಉತ್ತರ ಕರ್ನಾಟಕದಲ್ಲಿನ ಹೊಲೆ–ಮಾದಿಗರು ಒಂದೇ ಶ್ರೇಣಿಯ ಅಸ್ಪೃಶ್ಯರು ಹಾಗೂ ಸಾಹಿತ್ಯದಲ್ಲಿ ಬರುವ ಹೊಲೆ–ಮಾದಿಗರು ಭಿನ್ನ ಜಾತಿಗಳೆಂಬುದನ್ನು ಸ್ಪಷ್ಟಗೊಳಿಸಿದೆ"[೬].

"ಕ್ರಿ.ಶ. ೧೬೫೪ರ ಅಪ್ರಕಟಿತ ದಾನ ಶಾಸನವೊಂದರಲ್ಲಿ (ರಾಜಶೇಖರಪ್ಪ ಬಿ. ಅವರಿಗೆ ಜಗಳೂರು ತಾಲೂಕಿನ ಮೆದಕೇರನಹಳ್ಳಿಯಲ್ಲಿ ೧೯೮೭ ರಲ್ಲಿ ಸಿಕ್ಕಿರುವ ಶಿಲಾಶಾಸನ) ಮಾದಿಗರ ಸಿದ್ಧ ಎಂಬುವನು ತಳವಾರಿಕೆಯನ್ನು ಕೊಟ್ಟ ಸ್ಥಳ ಚಿತ್ರದುರ್ಗ ಜಿಲ್ಲೆ, ಅದರಲ್ಲೂ ಮಾದಿಗ ಜನಾಂಗದವನೊಬ್ಬ ಹಳ್ಳಿಯ ತಳವಾರಿಕೆಯ ಗೌರವ ಸ್ಥಾನ ಪಡೆದಿರುವುದು ಮಹತ್ವದ ಸಂಗತಿ"[೭].

ಗುಂಡಲ ಪಂಡಿತ ಲಕ್ಷ್ಮಣಾಚಾರ್ಯರ ವಶದಲ್ಲಿರುವ "ಕ್ರಿ.ಶ. ೧೬೭೪ರ ತಾಮ್ರ ಶಾಸನದ ಎಂಟನೆಯ ಹಲಗೆಯ ಮುಂಭಾಗದಲ್ಲಿ ಈ ಗ್ರಾಮಕ್ಕೆ ಪಡವಲು ಹೊಲೆರ ಬಿಳಿಗಿರಿ ಹೊಲದ ಚುಜ್ಜಲ ತಾಳಲ್ಲೂ ನೆಟ್ಟ ಕಲ್ಲ ಎಂಬ ಸ್ಪಷ್ಟ ಉಲ್ಲೇಖವಿದೆ"[೮].

"೧೭ನೇ ಶತಮಾನದ ಶಾಸನವೊಂದರಲ್ಲಿ ದಾನದ ಶಾಪಾಶಯ ಭಾಗದಲ್ಲಿ ದಾನವನ್ನು ಅಪಹರಿಸುವುದು ತನ್ನ ಹೆಂಡತಿಯನ್ನು ಹೊಲೆ–ಮಾದಿಗರಿಗೆ ಕೊಟ್ಟದ್ದಕ್ಕೆ ಸಮಾನವೆನ್ನುತ್ತದೆ. ಇದು ಮುನ್ನೆಚ್ಚರಿಕೆಗಾಗಿ ಹಾಕಿಸಿದ ಶಾಸನವಾದರೂ ಎರಡು ಜಾತಿಯ ಉಲ್ಲೇಖವನ್ನು ಮಾಡಿರುವುದರಿಂದ ಒದಗಬಹುದಾದ ಕೇಡನ್ನೂ ಪರೋಕ್ಷವಾಗಿ ತಿಳಿಸುವುದು ಇದರ ಉದ್ದೇಶವಾಗಿದೆ"[೯].

"ತಮಿಳು ಶಾಸನವೊಂದರಲ್ಲಿ ಇಡಂಗೈ (ಎಡಗೈ) ಅವರಲ್ಲಿ ತೊಂಬತ್ತೆಂಟು ಉಪಜಾತಿಗಳಿವೆ ಎಂದು ಹೇಳಿ, ಇವರನ್ನು ವರ್ಣೀಯ ಬ್ರಾಹ್ಮಣ ಮತ್ತು ವಲ್ಲಾಲ ಕುಲದ ಭೂಮಾಲೀಕರು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದರು[೧೦]" ಎಂದು ಉಲ್ಲೇಖವಿದೆ. ಮತ್ತೊಂದು ಶಾಸನದಲ್ಲಿ "ದೇವಸ್ಥಾನವನ್ನು ಕಟ್ಟುವಾಗ ಗ್ರಾಮದ ಎಲ್ಲಾ ಜಾತಿಯವರು ಕಾಣಿಕೆಯನ್ನು ಕೊಡುತ್ತಿದ್ದರು. ಅದರಂತೆ 'ಮಾದಿಗ' ಜಾತಿಯ ವ್ಯಕ್ತಿ ಹಲವು ಗೋವುಗಳನ್ನು ಕೊಡುತ್ತಾನೆ. ಅವುಗಳನ್ನು ತೆಗೆದುಕೊಂಡು ತಾಳಗುಂದದ ಬ್ರಾಹ್ಮಣರು ಅವನನ್ನು ಹರಸಿದ ಪ್ರಸ್ತಾಪದ" ಉಲ್ಲೇಖ ಸಹ ಶಾಸನದಲ್ಲಿದೆ.

"ಊರಿನ ಸತ್ತ ದನಗಳನ್ನು ಎತ್ತುವವರು ಮತ್ತು ಜನರಿಗೆ ಚರ್ಮದ ವಸ್ತುಗಳನ್ನು ಮಾಡಿಕೊಡುವವರನ್ನು 'ಸಮಗಾರ(ಚರ್ಮಕಾರ)'ರೆಂದು ಕರೆಯುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಆಧಾರವಿದೆ. ಅಲ್ಲದೇ 'ಬದಾಮಿಯ ಮಹಾಜನರು ಆ ಊರಿನ ಚರ್ಮಕಾರರ ತೆರಿಗೆಗಳನ್ನು ತೆಗೆದು ಹಾಕಿದನೆಂದು' ಶಾಸನವೊಂದು ಹೇಳುತ್ತದೆ.

"ಕ್ರಿ.ಶ. ೧೨೨೧ರ ಶಾಸನವೊಂದರಲ್ಲಿ ಚಂಡಾಲರು ಊರ ಹೊರಗೆ ವಾಸಿಸುತ್ತಿದ್ದರೆಂಬುದನ್ನು ಉಲ್ಲೇಖವಿದೆ. "ನೀರು ಸಾಗರಕ್ಕೆ ಹೋ ಓಣಿಯುಂ ಪಡವಲು ಹೊಲಗೇರಿಯಂ ಪಡುಮುಖವಾಗಿದೆ" ಎಂದು ಉಲ್ಲೇಖಿಸಿದೆ. ಹೊಲೆ ಸುಂಕದ ಉಲ್ಲೇಖ ಪಾಂಡವಪುರ ತಾಲ್ಲೂಕು, ತೊಣ್ಣೂರು ಲಕ್ಷ್ಮೀ ನಾರಾಯಣಸ್ವಾಮಿ ದೇವಾಲಯದ ಹತ್ತಿರ ಇರುವ ಶಾಸನವೊಂದರ ಮೂರನೇ ಸಾಲಿನಲ್ಲಿರುವುದು ತಿಳಿದುಬರುತ್ತದೆ. ಅಲ್ಲದೆ ಇನ್ನೊಂದು ಶಾಸನದಲ್ಲಿ "ಊರ ಕಡೆಯ ತೋರೆಯ ತಡಿಯ ಕರಿಯಕಲ್ಲು ತೊರದಿಂ ಪುತ್ತೂರ, ಪೊಲೆಯರಿಪ್ಪ ಕೇರಿಯ ನೀರು ಭೂಮಿಯಂಸಾರ ಭೋರು ಹಂಗಳೋಳಿಯೊಳೆ ನರೆಯ ಕೆರೆಯನಂ ಭೋರು ಹಾಕಿನನ್ನು ಧನದಿನೊಪ್ಪ ಮಾಡಿಸಿದಂ" ಎಂಬ ಉಲ್ಲೇಖವಿದೆ"[೧೧]. ಇದರಿಂದ ಹೊಲೆಯರಿಗೆ ಪ್ರತ್ಯೇಕ ಕೇರಿ ಇತ್ತೆಂದು ಸ್ಪಷ್ಟವಾಗುತ್ತದೆ.

"ಕ್ರಿ.ಶ. ೧೩೬೮ರ ಹೊತ್ತಿಗೆ ಜಾತಿಗಳ ಸಂಖ್ಯೆ ಹದಿನೆಂಟು ಇದ್ದು, ಹೊಲೆ, ಮಾದಿಗ ಜನಾಂಗಗಳು ಪ್ರತ್ಯೇಕವಾಗಿ ಜೀವನ ನಡೆಸುತ್ತಿದ್ದರೆಂಬುದನ್ನು ತಿಳಿಯಬಹುದು"[೧೨].

ಶಾಸನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇನ್ನೂ ಅನೇಕ ಮಹತ್ವದ ಸಂಗತಿಗಳು ಕಂಡುಬರುತ್ತವೆ. ಚಿದಾನಂದ ಮೂರ್ತಿ (೧೯೮೫) ಅವರು ಪರಂಪರೆಯ ನೆರಳಿನಲ್ಲಿಯೇ ವರ್ಣ ವ್ಯವಸ್ಥೆಯನ್ನು ತಾತ್ವಿಕವಾಗಿ ಕನ್ನಡಿಗರು ಒಪ್ಪಿಕೊಂಡಿದ್ದರಾದರೂ ಪ್ರಾಚೀನ ಕರ್ನಾಟಕದಲ್ಲಿ ವರ್ಣ ಪದ್ಧತಿಯ ಪರಿಪಾಲನೆ ಬಹುಮಟ್ಟಿಗೆ ಕುಸಿದು ಹೋಗಿತ್ತು. ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಹೆಸರುಗಳು ಶಾಸನ–ಕಾವ್ಯಗಳಲ್ಲಿ ದೊರಕಿದರೂ ಆ ನಾಲ್ಕು ವಿಭಾಗದವರು ತಮ್ಮದಲ್ಲದ ಕೃತಿಗಳನ್ನು ಅವಲಂಬಿಸಿದರುವುದು ಎದ್ದು ಕಾಣುವ ಸಂಗತಿ" ಎಂದಿದ್ದಾರೆ. ಪ್ರಾಚೀನ ಕಾಲದಲ್ಲಿ ಮತಂಗ, ಕಿರಾತ, ಶಬರ ಇತ್ಯಾದಿ ಜಾತಿಗಳು ಕೂಡ ಸ್ವತಂತ್ರವಾಗಿ ರಾಜ್ಯವನ್ನು ಕಟ್ಟಿಕೊಂಡು ಆಳಿದವು ಎಂಬುದು ಶಾಸನಗಳಿಂದ ಸ್ಪಷ್ಟವಾಗುವುದು.

ಪ್ರಾಚೀನ ಕಾಲದಿಂದ ಹಿಡಿದು ವಸಾಹತು ಕಾಲದ ವರೆಗೆ ರೂಪಿತಗೊಂಡ ಚರಿತ್ರೆಯಲ್ಲಿ ಮುಖ್ಯವಾಗಿ ಕಂಡುಬರುವುದು ರಾಜಮಹಾರಾಜರ ಆಡಳಿತ, ಸಾಮ್ರಾಜ್ಯ ವಿಸ್ತರಣೆಗಾಗಿ ಕೈಗೊಂಡ ಯುದ್ಧಗಳು, ಅವರ ಜೀವನ ಅವರು ದೇವಾಲಯಗಳಿಗೆ ನೀಡಿದ ದಾನದತ್ತಿ ಮುಂತಾದ ಸಂಗತಿಗಳು. ಈ ಚರಿತ್ರೆಯಲ್ಲಿ ಜನಸಾಮಾನ್ಯರ ಬದುಕಿಗೆ ಜಾಗವಿಲ್ಲ. ಹೀಗಿರುವಾಗ ಸಾಮಾಜಿಕವಾಗಿ ಕೆಳಹಂತಕ್ಕೆ ತಳ್ಳಲ್ಪಟ್ಟ ಮಾದಿಗರ ಪಾತ್ರವನ್ನುಂಟು ದಾಖಲಿಸುವ ಮಾತು ತುಂಬಾ ದೂರ. ಆದರೂ ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ಚರಿತ್ರೆಯ ಅನೇಕ ಪುಟಗಳಲ್ಲಿ ಅವರು ದಾಖಲಾಗಿದ್ದಾರೆ. ಈ ಸಂಬಂಧ ಮಾದಿಗರು ಸೈನ್ಯದ ಮುಖಂಡರಾಗಿ, ಸೈನಿಕರಾಗಿ, ಕೋಟೆ ಕಾವಲುಗಾರರಾಗಿ ಸೇವೆ ಮಾಡಿರುವ ಹಾಗೂ ಊರಿನ ಒಳಿತಿಗಾಗಿ ಬಲಿ ಯಾಗಿರುವ ಸಂಗತಿಗಳು ಇವೆ.

ಇತಿಹಾಸ ಕಾಲದಲ್ಲಿ ಇವರ ಕುರಿತಾಗಿ ಉಲ್ಲೇಖಿಸುವ ಶಾಸನಗಳು, ಸಾಹಿತ್ಯಿಕ ಗ್ರಂಥಗಳು, ಪುರಾತತ್ವ ಆಕರಗಳು ನಾಡಿನಾದ್ಯಂತ ಕಂಡುಬರುತ್ತಿದ್ದ, ಅವುಗಳ ಕುರಿತಾಗಿ ಹೆಚ್ಚಿನ ಅಧ್ಯಯನಗಳು ಆಗಬೇಕಾಗಿದೆ.



## ಆಧಾರಸೂಚಿ


೧. ಸಿಂಗೆ.ಎಸ್.ಆರ್ ಹೊಲೆಯರು: ಒಂದು ಅಧ್ಯಯನ ೧೯೯೧ ಪುಟ ಸಂ. ೩೧.

೨. ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ. ೧೯೯೩ ಪುಟ ಸಂ. ೨೪.

೩. ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ. ೧೯೯೩ ಪುಟ ಸಂ. ೨೭.

೪. ಡಾ. ಮೈಲಹಳ್ಳಿ ರೇವಣ್ಣ ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪುಟ ಸಂ. ೩೩.

೫. ಡಾ. ಮೈಲಹಳ್ಳಿ ರೇವಣ್ಣ ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು ೧೯೯೬, ಪುಟ ಸಂ. ೩೪.

೬ ಸಿಂಗೆ.ಎಸ್.ಆರ್ ಹೊಲೆಯರು ಒಂದು ಅಧ್ಯಯನ ೧೯೯೧ ಪುಟ ಸಂ.೩೫.

೭. ಡಾ.ಮೈಲಹಳ್ಳಿ ರೇವಣ್ಣ ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ ೨೦೦೪ ಪುಟ ಸಂ. ೨೮.

೮. ಸಿಂಗೆ.ಎಸ್.ಆರ್ ಹೊಲೆಯರು: ಒಂದು ಅಧ್ಯಯನ ೧೯೯೧ ಪುಟ ಸಂ. ೩೫.

೯. ಡಾ.ಎಂ.ಚಿದಾನಂದ ಮೂರ್ತಿ ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ ೧೯೮೫ ಪುಟ ಸಂ. ೩೬.

೧೦. ಡಾ.ಮೈಲಹಳ್ಳಿ ರೇವಣ್ಣ ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ ೨೦೦೪ ಪುಟ ಸಂ. ೨೬.

೧೧. ಸಿಂಗೆ.ಎಸ್.ಆರ್. ಹೊಲೆಯರು ಒಂದು ಅಧ್ಯಯನ ೧೯೯೧ ಪುಟ ಸಂ. ೩೩, ೯೯.

೧೨. ಡಾ. ಮೈಲಹಳ್ಳಿ ರೇವಣ್ಣ ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ ೨೦೦೪ ಪುಟ ಸಂ. ೨೭.




# ತುಮಕೂರು ಜಿಲ್ಲೆಯ ರಾಷ್ಟ್ರಕೂಟರ ಕಾಲದ ಶಾಸನಗಳ ಐತಿಹಾಸಿಕ ಮಹತ್ವ

**ವಿಜಯಶಂಕರ ಬಿ.ಎನ್.* ರವೀಶ ಜಿ.ಎನ್.****

**ವೈ**ಭವಪೂರಿತ ಕನ್ನಡ ಗರಿಮೆಯನ್ನು ಉತ್ತರ ಭಾರತದಲ್ಲೂ ಹರಿಸಿದ ರಾಷ್ಟ್ರಕೂಟ ಮನೆತನಕ್ಕೆ ಸಂಬಂಧಿಸಿದ ಅಧಿಕೃತ ದಾಖಲೆಗಳು ತುಮಕೂರು ಜಿಲ್ಲೆಯಲ್ಲಿ ಅತಿ ವಿರಳವೆಂದರೆ ಆಶ್ಚರ್ಯವೆನಿಸುತ್ತದೆ. ಬಹುಶಃ ಇವರು ಉತ್ತರದ ಕಡೆ ಹೆಚ್ಚಿನ ಗಮನವನ್ನು ಹರಿಸಿದ್ದರಿಂದ ಮೈಸೂರು ಭಾಗವನ್ನು ನಿರ್ಲಕ್ಷಿಸಿರುವ ಸಾಧ್ಯತೆಗಳಿವೆ. ಈ ಭಾಗದಲ್ಲಿ ಆಳ್ವಿಕೆ ಮಾಡುತ್ತಿದ್ದ ಗಂಗ ಅರಸು ಮನೆತನದ ಶ್ರೀಪುರುಷ ಮತ್ತು ೨ನೆಯ ಶಿವಮಾರನ ನಂತರ ಬಹುತೇಕರು ರಾಷ್ಟ್ರಕೂಟರಿಗೆ ಬಹು ನಂಬಿಕಸ್ಥ ಗೆಳೆಯರಾದರು. ಹಾಗಾಗಿಯೇ ರಾಷ್ಟ್ರಕೂಟರು ತುಮಕೂರು ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದರೆನ್ನಲು ಬಹುಅಪರೂಪಕ್ಕೆ ಆಧಾರಗಳು ದೊರೆಯುತ್ತವೆ. ಬಾದಾಮಿ ಚಾಳುಕ್ಯರ ಎರಡನೆಯ ಕೀರ್ತಿ ವರ್ಮನನ್ನು ಕ್ರಿ.ಶ. ೭೫೩ರಲ್ಲಿ ದಂತಿದುರ್ಗನು ಸೋಲಿಸುವುದರ ಮೂಲಕ ರಾಷ್ಟ್ರಕೂಟ ಮನೆತನದ ಹುಟ್ಟಿಗೆ ಕಾರಣೀಭೂತನಾಗಿದ್ದಾನೆ. ಆದರೆ ಇವನ ಆಳ್ವಿಕೆಗೆ ಸಂಬಂಧಿಸಿದ ಯಾವ ಕುರುಹುಗಳು ಜಿಲ್ಲೆಯಲ್ಲಿ ದೊರೆಯುವುದಿಲ್ಲ.

## ೧. ಒಂದನೆಯ ಕೃಷ್ಣ

ಚಾಳುಕ್ಯರ ಸಾಮಂತರಾಗಿದ್ದ ಗಂಗರ ಮೇಲೆ ದಾಳಿ ಮಾಡಿ ಅವರ ಗಂಗ ಮಂಡಲವನ್ನು ತಮ್ಮ ಅಧೀನಕ್ಕೆ ತೆಗೆದುಕೊಳ್ಳಲು ಒಂದನೆಯ ಕೃಷ್ಣನ ಕಾಲದಿಂದಲೇ ಪ್ರಯತ್ನ ಆರಂಭವಾಗಿದ್ದಿರಬೇಕು. ಹಾಗಾಗಿಯೇ ಹಿರೀಗುಂಡಗಲ್ ಬಳಿ ಸುಮಾರು ೨೧ ವೀರಗಲ್ಲುಗಳು ಕಂಡುಬರುತ್ತವೆ. ಇಂತಹ ಕೆಲವು ವೀರಗಲ್ಲುಗಳಲ್ಲಿ ಒಂದನೆಯ ಕೃಷ್ಣ ಎಂಬುದಾಗಿ ಉಲ್ಲೇಖ ಸಿಗುವುದರಿಂದ ರಾಷ್ಟ್ರಕೂಟರಿಗೆ ಸಂಬಂಧಿಸಿದ ಮೊದಲ ಕುರುಹು ಈ ವೀರಗಲ್ಲುಗಳಿಂದ ದೊರೆಯುತ್ತದೆ. ಬಹುಶಃ ಒಂದನೆಯ ಕೃಷ್ಣನು ತುಮಕೂರು ಮಾರ್ಗವಾಗಿ ಶ್ರೀಪುರುಷರ ರಾಜಧಾನಿ ಮನ್ನೆಗೆ ದಾಳಿ ಮಾಡಲು ಬಂದಿದ್ದಿರಬೇಕು. ಆಗ ಈ ಮಾರ್ಗಮಧ್ಯೆ ಇರುವ ಹಿರೀಗುಂಡಗಲ್ ಬಳಿ ಇಬ್ಬರಿಗೂ ಕದನವಾಗಿರಬೇಕೆಂದು ಹಿರೀಗುಂಡಗಲ್‌ನ ವೀರಗಲ್ಲು ಶಾಸನವು ೧೦೪ ಉಲ್ಲೇಖಿಸುತ್ತದೆ. ಆದರೂ ತುಮಕೂರು ಭಾಗಗಳನ್ನು ನೊಳಂಬರ ಅರಸ ಸಿಂಹಪೂತನು ಪೆರ್ವಾನಡಿ (ಶ್ರೀಪುರುಷ)ಯ ಸಾಮಂತನಾಗಿದ್ದನೆಂದು ಈ ಕಾಳಗದ ನಂತರದ ಕಾಲಕ್ಕೆ ಸೇರಿದ ಚಳ್ಳಕೆರೆಯ ದೊಡ್ಡವಳವರ್ತಿ ಶಾಸನವು೧೦೫ ಉಲ್ಲೇಖಿಸುವುದರಿಂದ ಒಂದನೆಯ ಕೃಷ್ಣನು ಬಲವಂತವಾಗಿ ಜಿಲ್ಲೆಯಿಂದ ಹೊರದೂಡಲ್ಪಟ್ಟನೆಂದು ಸ್ಪಷ್ಟವಾಗುತ್ತದೆ. ಅದೇ ರೀತಿ ೩ನೇ ಗೋವಿಂದನ ಕಡಬದ ತಾಮ್ರ ಶಾಸನದಲ್ಲಿ೧೦೬ ಸಮಸ್ತ ಸಿದ್ಧಂತ ಸಾಗರ ಪಾರಗ ಮುನಿಕತಸಂಕುಲಂ ದೇವಕುಲ ಮಾಸೀತ್ ಕನ್ನೇಶ್ವರನ್ನಾಯ ಸ್ವನಾಮಧೇಯಾಂಕಿತಂ ಅಸಾವಕಾಲವರ್ಷ ಇತಿವಿಖ್ಯತಃ ತಸ್ಯಸೂಃ ಅನತನೃಪ ಮಕುಟ ಮಣಿಗಣಕಿರಣಬಾಲರಂಜಿತ ಪದಯುಗಲ ನಖಮಯೂಖ ಪ್ರಭಾಭಾಸಿತ ಸಿಂಹಾಸನೋಪಾನ್ತಃ ಎಂಬುದಾಗಿ ಉಲ್ಲೇಖಗೊಂಡಿರುವುದರಿಂದ ಕ್ರಿ.ಶ. ೭೫೬ರಿಂದ ೭೭೪ರ ವರೆಗೆ ಆಳ್ವಿಕೆ ನಡೆಸಿರುವ ರಾಷ್ಟ್ರಕೂಟರ ಒಂದನೆಯ ಕೃಷ್ಣ–ಕಣ್ಣ–ಕನ್ಹ ಎಂಬ ಅರಸನೇ ಕನ್ನರಸನಾಗಿರಬೇಕು. ಅಲ್ಲದೆ ತಾನು ನಿರ್ಮಿಸಿದ ದೇವಾಲಯವೊಂದು ಅವನ ಅಧಿಕಾರಕ್ಕೆ ಮುಕುಟಪ್ರಾಯವಾಗಿದೆ ಎಂದು ಅದನ್ನು ವರ್ಣಿಸಿರುವುದರಿಂದ ಬಹುಶಃ ಎಲ್ಲೋರದಲ್ಲಿ ನಿರ್ಮಿಸಿದ ಕೈಲಾಸನಾಥ ದೇವಾಲಯದ ಮತ್ತೊಂದು ಹೆಸರು ಈ ಕನ್ಯೇಶ್ವರ ಎಂಬುದಾಗಿರಬೇಕು. ಈ ದೇವಾಲಯದ ಹೆಸರನ್ನೇ ತನ್ನ ನಾಮದೇಯವನ್ನಾಗಿ ಹೊಂದಿರಬೇಕು. ಇಲ್ಲಿ ಮತ್ತೊಂದು ವಿಶೇಷ ಸಂಗತಿಯೆಂದರೆ ಕನ್ನ, ಕಣ್ಣ, ಕನ್ಹ ಇವೆಲ್ಲಾ ಬೇಡ ಮೂಲ ಹೆಸರುಗಳು. ಆದರೆ ಇವರು ತಮಗೆ ಮೊದಲೆ ಹೆಸರಿದ್ದರೂ, ಇಂತಹ ಬೇಡಮೂಲ ಹೆಸರುಗಳನ್ನು ಏಕೆ ಇಟ್ಟುಕೊಳ್ಳುತ್ತಿದ್ದರೆಂಬುದು ಆಶ್ಚರ್ಯವೆನಿಸುತ್ತದೆ, ನಂತರದಲ್ಲಿ ಬಂದ ೨ನೇ ಕೃಷ್ಣನ ಮಗ ಕನ್ನರ ಸಹ ಹೇಮಾವತಿ ಶಾಸನ ಕನ್ನರಸ, ಕನ್ನರದೇವ

* S/o ಭರಮಪ್ಪ, ೧೧ನೇ ವಾರ್ಡ್, ವಿದ್ಯಾನಗರ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ–೫೮೩೨೨೭.

** S/o ನಾರಾಯಣಪ್ಪ, ಗುಂಡ್ಲಾರಹಳ್ಳಿ, ಬ್ಯಾಡನೂರು ಪೋಸ್ಟ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ–೫೬೧೨೦೨.

ಎಂಬುದಾಗಿ ಉಲ್ಲೇಖಿಸುವುದರಿಂದ ಇದರ ಕುರಿತು ಮತ್ತಷ್ಟು ಅಧ್ಯಯನಗಳಾಗುವ ಅವಶ್ಯಕತೆಯಿದೆ.

### ೨. ಎರಡನೆಯ ಗೋವಿಂದ ಕ್ರಿ.ಶ. ೭೭೪-೮೦

ಇವನ ಕಾಲದಲ್ಲೂ ತುಮಕೂರು ಜಿಲ್ಲೆಯ ಬಹು ಭಾಗವನ್ನು ತಮ್ಮ ನಿಯಂತ್ರಣಕ್ಕೆ ಒಳಪಡಿಸಿಕೊಳ್ಳಲಾಗ ದಿರುವುದನ್ನು ಗಮನಿಸಿದರೆ ಬಹುಶಃ ಧ್ರುವ ಆಳ್ವಿಕೆಗೆ ಬರುವವರೆಗೂ ರಾಷ್ಟ್ರಕೂಟ ಸಾಮ್ರಾಜ್ಯ ಅಷ್ಟು ಪ್ರಬಲ ವಾಗಿರಲಿಲ್ಲ ಎನಸುತ್ತದೆ. ಏಕೆಂದರೆ ರಾಷ್ಟ್ರಕೂಟ ಹೈಹಯ, ಚಾಳುಕ್ಯ, ಭಟರಿಂದ ಕೂಡಿದ ಬಿಕ್ಕುಟ ವಲ್ಲಭ ಸೈನ್ಯವನ್ನು ಮುನ್ನಡೆಸುತ್ತಿದ್ದ ಧೋರನನ್ನು ಎರಡನೆಯ ಶಿವಮಾರ ನೊಬ್ಬನೇ ಸೋಲಿಸಿದ್ದನ್ನು೧೦೭ ನೋಡಿದರೆ ರಾಷ್ಟ್ರಕೂಟರ ಸೈನ್ಯ ಬಲ ಎಷ್ಟಿತ್ತೆಂಬುದು ತಿಳಿಯುತ್ತದೆ. ಅಲ್ಲದೆ ಗಂಗರಲ್ಲಾದ ಅಂತಹ ಕಲಹದ ಸದುಪಯಗಪಡೆದ ಎರಡನೆಯ ಗೋವಿಂದ ಎರಡನೆಯ ಶಿವಮಾರನಿಗೆ ಸಿಂಹಾಸನವನ್ನು ದೊರೆಯುವಂತೆ ಮಾಡಿ ಅವನನ್ನು ತನ್ನ ಸಾಮಂತನ ನ್ನಾಗಿಸಿಕೊಂಡನು. ಆದರೂ ಈ ಕಾರ್ಯ ಶ್ರೀಪುರುಷ ಬದುಕಿರುವವರೆಗೂ ಸಾಧ್ಯವಾಗಿಲ್ಲ. ಏಕೆಂದರೆ ತುಮಕೂರಿನ ಉತ್ತರ ಗಡಿಗೆ ಹೊಂದಿಕೊಂಡಿರುವ ಚಳ್ಳಕೆರೆ ತಾಲೂಕಿನಲ್ಲಿ ಶ್ರೀಪುರುಷನ ಎರಡು ಶಾಸನಗಳಿವೆ. ಹಾಗಾಗಿ ಇವನ ಮರಣದ ನಂತರವೇ ಈ ಭಾಗಗಳನ್ನು ತಮ್ಮ ನಿಯಂತ್ರಣಕ್ಕೆ ತೆಗೆದು ಕೊಳ್ಳಲು ಸಾಧ್ಯವಾಗಿರುವುಂತಹದ್ದು ಎಂಬುದು ಗಂಗರ ಸಾಮಂತರಾಗಿದ್ದ ನೊಳಂಬರ ಸಿಂಹಪೋತನ ಮಗ ಚಾರುಪೊನ್ನರು ರಾಷ್ಟ್ರಕೂಟರ ಮಾಂಡಳಿಕತ್ವವನ್ನು ಒಪ್ಪಿಕೊಂಡಿರುವುದು ಚಿಕ್ಕ ಮದುರೆಯ ಶಾಸನದಿಂದ ತಿಳಿಯುತ್ತಿದೆ.

### ೩. ಧ್ರುವ ಕ್ರಿ.ಶ. ೭೮೦-೯೩

ಎರಡನೆಯ ಗೋವಿಂದನ ಮರಣದ ನಂತರ ಅವನ ಸೋದರ ಧ್ರುವನು ಪಟ್ಟಕ್ಕೆ ಬಂದನು. ತನ್ನ ವಿರುದ್ಧ ಗೋವಿಂದನಿಗೆ ಬೆಂಬಲ ನೀಡಿದ್ದ ಶಿವಮಾರನನ್ನು ಬಂದಿಸಿ ಗಂಗಮಂಡಲವನ್ನು ನೋಡಿಕೊಳ್ಳಲು ತನ್ನ ಹಿರಿಯ ಮಗನಾದ ಸ್ತಂಭ ಅಥವಾ ಕಂಬಯ್ಯನನ್ನು ನೇಮಿಸಿದನೆಂದೂ ಇವನ ಕೆಳಗೆ ಸಿರಾ ತಾಲೂಕಿಗೆ ಸೇರಿದ್ದ ಅಗಳಿ-೧೨ನ್ನು ಪುಲಿಯ ಎಂಬುವವನು ಆಳುತ್ತಿದ್ದನೆಂದು ಮೇಲಾಗಣಿ ಶಿಲಾಶಾಸನ೧೦೮ದಿಂದ ತಿಳಿಯುತ್ತದೆ. ಪೈಠಾಣ ತಾಮ್ರ ಶಾಸನವು೧೦೯ ಸಹ ಶ್ರೀ ಕಾಞ್ಚೀಪತಿ ಸ್ಮತಾನ್‌ಕ್ಷಿತಿ ಭೃತೋಯ! ಪ್ರಪದ್ಯೋಪರಿ ಸ್ವಂಯಾನ ಪ್ರತಿತಂ ತಥಾಪಿನ ಕೃತಂ ಚೇತೋನ್ಯಥಾ ಭ್ರಾತರಂ ಎಂಬುದಾಗಿ ತನ್ನ ಅಧಿಕಾರಕ್ಕೆ ಪ್ರತಿರೋಧ ವ್ಯಕ್ತಪಡಿಸಿದ್ದ ಪಲ್ಲವ, ಗಂಗ, ವೆಂಗಿ, ಮಾಳವ ದೇಶಿಯರನ್ನು ಸೋಲಿಸಿ ಅವರ ಪ್ರದೇಶಗಳನ್ನು ವಶಪಡಿಸಿ ಕೊಂಡಿರುವುದಾಗಿ ಉಲ್ಲೇಖಿಸುತ್ತದೆ. ಇದೇ ಮಾಹಿತಿ ಮಾರಸಿಂಹನ ಆಲೂರು ತಾಮ್ರಶಾಸನ, ಗಂಚಾಂ ಮಣ್ಣೆತಾಮ್ರ ಶಾಸನಗಳು ಹಾಗೂ ರಾಷ್ಟ್ರಕೂಟರ ರಾಧನಪುರ ಮತ್ತು ವಾಣೀತಾಮ್ರ ಶಾಸನಗಳು ಸಹ ಉಲ್ಲೇಖಿಸುತ್ತವೆ.

### ೪. ಮೂರನೆಯ ಗೋವಿಂದ ಕ್ರಿ.ಶ. ೭೯೩-೮೧೪

ಧ್ರುವನ ಕಿರಿಯ ಮಗನಾದ ಮೂರನೆಯ ಗೋವಿಂದ ನಿಗೆ ಪಟ್ಟ ಕಟ್ಟಿದ್ದರಿಂದ ಇವನ ಇನ್ನೊಬ್ಬ ಮಗ ಗಂಗ ಮಂಡಲದ ಪ್ರಾಂತ್ಯಾಧಿಪತಿಯಾಗಿದ್ದ ಸ್ತಂಭನು ತನ್ನ ತಮ್ಮನ ವಿರುದ್ಧವೇ ತಿರುಗಿಬಿದ್ದು ಪರಾಜಿತಗೊಂಡನು. ಆದರೂ ಗೋವಿಂದ ಅಣ್ಣನನ್ನು ಕ್ಷಮಿಸಿ ಮತ್ತೆ ಕ್ರಿ.ಶ. ೭೯೮ರಲ್ಲಿ ಅಧಿಕಾರ ದೊರಕಿಸಿಕೊಟ್ಟನೆಂದು ನವಸಾರಿ ಮತ್ತು ಪೈಠಾಣ, ಶಿವವಾಯಿ, ವಾಣೀ, ರಾಧನಪುರ ಶಾಸನಗಳು ತಿಳಿಯತ್ತದೆ. ಕಡಬದ ಶಾಸನವು೧೧೦ ಆರ್ಕಕೀರ್ತಿರಿತಿ ಖ್ಯಾತಿ ಯಾತನ್ವನ್ಮುನಿಸತ್ತಮಃ, ತಸ್ಮೈಮುನಿವರಾಯ ತಸ್ಯ ವಿಮಳಾದಿತ್ಯ ಸ್ಯ, ಶವನೈಶರ ಪೀಡಾನೋದಾಯ ಮಯೂರ ಖಣ್ಡಿಮಧಿ ವಸತಿ, ವಿಜಯಸ್ಕಸ್ಥಾವರೇ ಬಾಕಿರಾಜೇನ ವಿಜ್ಞಾಪಿತೋ ವಲ್ಲಬೇನ್ದ್ರಃ ಜಾಲಮಂಗಲನಾಮ, ಧೇಯಂ ಗ್ರಾಂ ಮಾನ್ಯ ಎಂಬುದಾಗಿ ಉಲ್ಲೇಖವಿದೆ. ಅಂದರೆ ವಲ್ಲಭನ ಕುಣಿಗಲ್ ಅಧಿಕಾರಿ ವಿಮಲಾದಿತ್ಯ ಶನಿಪೀಡಾನಿವಾರಣೆಗಾಗಿ ಆರ್ಕಕೀರ್ತಿ ಎಂಬ ಜೈನ ಮುನಿಗೆ ದತ್ತಿ ನೀಡಿದ್ದನ್ನು ತಿಳಿಸುತ್ತದೆ.

### ೫. ಅಮೋಘವರ್ಷ ಕ್ರಿ.ಶ.೮೧೪-೮೭೮

ಅಮೋಘ ವರ್ಷನು ತುಮಕೂರಿನ ಕೆಲವು ಪ್ರದೇಶಗಳನ್ನು ಹಿರೀಗುಂಡಲ್, ಕೈದಾಳ ಕಾಳಗಗಳ ಮೂಲಕ ಪಡೆದುಕೊಂಡನೆಂದು ನೀಲುಗುಂದ, ಶಿರೂರು, ಕಲ್ಲಭಾವಿ, ಕನ್ನೂರು ಶಾಸನಗಳು ಉಲ್ಲೇಖಿಸುತ್ತವೆ. ಈತ ತನ್ನ ನೆಚ್ಚಿನ ದಂಡನಾಯಕ ಬಂಕೇಶನನ್ನು ಗಂಗವಾಡಿಯ ಮೇಲೆ ದಾಳಿಮಾಡಲು ಕಳಿಸಿದಾಗ ತುಮಕೂರಿಗೆ ಸೇರಿದ ಕೈದಾಳ ಮೊದಲಾದ ದುರ್ಗಗಳನ್ನು ಗೆದ್ದುಕೊಂಡನೆಂದು ಕನ್ನೂರು ಶಾಸನ ತಿಳಿಸುತ್ತದೆ. ಈ ಶಾಸನ೧೧೧ ತಕ್ಕೇದಾಳಾಭಿದಾನಂ ದುರ್ಗ್ಗಂ ವಪ್ಪಾರ್ಗ್ಗಳಾದಿ ದುರ್ಲ್ಲಂಘ್ಯಂ ಮೌಳ ಬಲಾರಿಪ್ಪಿ ತಮಪಿಸದಯಃ ಎಂಬುದಾಗಿ ಕೈದಾಳದ ದುರ್ಗದ ಅಬೇಧ್ಯತೆಯನ್ನು ತಿಳಿಸುತ್ತದೆ. ಆದರೂ ತುಮಕೂರಿನ ಎಲ್ಲಾ ಪ್ರದೇಶಗಳನ್ನು ತನ್ನ ಅಧಿಪತ್ಯಕ್ಕೆ ಸೇರಿಸಿಕೊಂಡಿರಲಿಲ್ಲ ಎಂಬುದು ಒಂದನೆಯ ರಾಚಮಲ್ಲನ ಕೆರೆಗೋಡು ರಂಗಾಪುರ ಶಾಸನದಿಂದ ತಿಳಿಯುತ್ತದೆ. ಅಲ್ಲದೆ ಬಂಕೇಶನಿಗೆ ಯುದ್ಧರಂಗದಿಂದ ಹಿಂದಿರುಗುವಂತೆ ಆದೇಶಿಸಿ ತನ್ನ ಮಗಳಾದ ಚಂದ್ರೋಬ್ಬಲಬ್ಬೆಯನ್ನು ಎರಗಂಗನ ಮಗ

ಬೂತರಸನಿಗೆ ಕೊಟ್ಟು ವಿವಾಹ ಮಾಡಿ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಈ ಶಾಸನದ ವಿಶೇಷತೆಯೆಂದರೆ ತುಮಕೂರು ಜಿಲ್ಲೆಯಲ್ಲಿ ಕ್ರಿ.ಶ. ೮ನೆಯ ಶತಮಾನಕ್ಕೂ ಹಿಂದೆಯೇ ಕೋಟೆ ಕೊತ್ತಲಗಳು ಇದ್ದಿರಬಹುದೆಂಬ ಊಹೆಗೆ ಪುಷ್ಟಿಯನ್ನು ಈ ಕೈದಾಳದುರ್ಗದ ಉಲ್ಲೇಖದಿಂದ ತಿಳಿಯುತ್ತದೆ. ಅಲ್ಲದೆ ಕಲ್ಲಬಾವಿ ಶಾಸನದಲ್ಲಿ ಶಿವಮಾರ ಅಮೋಘವರ್ಷನ ಮಾಂಡಲೀಕನಾಗಿದ್ದನೆಂದು ಉಲ್ಲೇಖವಿದೆ.೧೧೨

## ೬. ಎರಡನೆಯ ಕೃಷ್ಣ ಕ್ರಿ.ಶ. ೮೭೮–೯೧೪

ಚಿಕ್ಕ ಸಾರಂಗಿಯ ಕ್ರಿ.ಶ. ೯೦೩ ಶಾಸನವು೧೧೪ ಸ್ವಸ್ತಿಕಾಲವರ್ಷ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಜ್ಯಸಲ್ಲುತಿರೆ ಪ್ರಚಣ್ಣ ದಣ್ಣನಾಯಕ ಶ್ರೀದಾಮಪ್ಪೆಯ್ಯ ತೆಙ್ಕಣದಿಶಾವರಕ್ಕೆಲ್ಲ ದಡ್ಡನಾಯಕನಾಗಿ ಮಣ್ಣೆಯಾಳಿಗ ಎಂಬುದಾಗಿ ಉಲ್ಲೇಖಿಸಿರುವುದರಿಂದ ಗಂಗರನ್ನು ಸೋಲಿಸಿ ಮಣ್ಣಿಗೆ ಒಳಪಡುವ ತುಮಕೂರಿನ ಪ್ರದೇಶಗಳನ್ನು ತನ್ನ ನೇರ ಆಳ್ವಿಕೆಗೆ ಒಳಪಡಿಸಿಕೊಂಡಿದ್ದನೆಂದು ತಿಳಿಯುತ್ತದೆ. ಇವನ ನಂತರ ಬಂದ ಮೂರನೆಯ ಇಂದ್ರ ಉತ್ತರದ ಭಾರತದ ಕಡೆ ಹೆಚ್ಚು ಆಧ್ಯತೆ ನೀಡಿದ್ದರಿಂದ ಗಂಗ ಮಂಡಲವನ್ನು ನಿರ್ಲಕ್ಷಿಸಿದನೆಂದೆ ಹೇಳಬೇಕು. ಈತನನ್ನು ಉಲ್ಲೇಖಿಸುವ ಯಾವ ಶಾಸನಗಳು ಜಿಲ್ಲೆಯಲ್ಲಿ ದೊರೆಯುವುದಿಲ್ಲ.

## ೭. ಮೂರನೆಯ ಕೃಷ್ಣ

ಗಜಾಂಕುಶ ಚೋಳನ ವಿರುದ್ಧ ತನ್ನ ಸಾಮಂತ ದೀಪನ ಸೇನೆಯೊಂದಿಗೆ ಪೊನ್ನಯ್ಯನು ಕೃಷ್ಣನ ಆದೇಶದ ಮೇರೆಗೆ ಇರೀಜಿಯಲ್ಲಿ (ಇಂದಿನ ಆಂಧ್ರ ಪ್ರದೇಶದ ಪರಿಗಿ) ಹೋರಾಡುತ್ತಾ ಸತ್ತನೆಂದು ಮಡಕಸಿರ ಶಾಸನ ಹೇಳುತ್ತದೆ.೧೧೩ ಈ ಶಾಸನದಲ್ಲಿ ಉಲ್ಲೇಖವಿರುವ ಪೊನ್ನಯ್ಯ ನೊಳಂಬರ ಅರಸ ದಿಲೀಪನ ಸೇನಾನಾಯಕನಾಗಿದ್ದಿರಬೇಕು. ಈ ಸೇನಾನಾಯಕನಿಗೆ ೩ನೆಯ ಕೃಷ್ಣನು ಗಜಾಂಕುಶ ಚೋಳನ ವಿರುದ್ಧ ಆದೇಶಿಸಿದನೆಂದರೆ ಬಹುಶಃ ದಿಲೀಪರಸನು ಕೃಷ್ಣನ ಸಾಮಂತತ್ವವನ್ನು ಒಪ್ಪಿಕೊಂಡಿರಬೇಕು. ಹೆಬ್ಬಾಳ ಶಾಸನವು ಗಂಗಮಂಡಲವನ್ನು ಆಳ್ವಿಕೆ ಮಾಡುತ್ತಿದ್ದ ಬೂತಗನಿಗೆ ಕನ್ನರ ದೇವನು (೩ನೇ ಕೃಷ್ಣ) ತನ್ನ ಸೋದರಿ ರೇವಕ ನಿರ್ಮ್ಮಡಿಯನ್ನು, ಬದ್ದಗದೇವ (ಅಮೋಘವರ್ಷ–೩)ನು ತನ್ನ ಮಗಳನ್ನು ಕೊಟ್ಟು ವೈವಾಹಿಕ ಸಂಬಂಧವನ್ನು ಬೆಳೆಸಿಕೊಂಡರೆಂದು ತಿಳಿಸುವುದರಿಂದ ಇವರ ಮಧ್ಯೆ ಇದ್ದಂತಹ ಶತ್ರುತ್ವ ಇಲ್ಲವಾಗಿ ಮಿತ್ರುತ್ವ ಉದಯಿಸಿತು. ಬಹುಶಃ ಈ ಉದ್ದೇಶದಿಂದಲೇ ರಾಷ್ಟ್ರಕೂಟರ ಕೊನೆಯ ಅರಸನಾದ ಖೊಟ್ಟಿಗನನ್ನು ಇಮ್ಮಡಿ ತೈಲಪ ಕ್ರಿ.ಶ. ೯೭೩ರಲ್ಲಿ ಸೋಲಿಸಿ ರಾಷ್ಟ್ರಕೂಟ ಮನೆತನದ ಅವಸಾನಕ್ಕೆ ಕಾರಣವಾಗುವುದದ್ದನ್ನು ತಡೆಯಲು ಗಂಗರು ಬಹುಯತ್ನಿಸಿದರು. ಒಂದು ಕಾಲದಲ್ಲಿ ಬದ್ಧ ವೈರಿಗಳಾದ ಗಂಗರು ಕೊನೆ ಕೊನೆಗೆ ವಿಶಾಲ ಸಾಮ್ರಾಜ್ಯ ಅವಸಾನದ ಹಾದಿ ಹೊಂದುತ್ತಿದ್ದದನ್ನು ಕಂಡು ಸಹಿಸದಾದರು ಹಾಗೂ ಈ ಸಾಮ್ರಾಜ್ಯದ ಉಳಿಯುವಿಕೆಗಾಗಿ ಬಹುಪ್ರಯತ್ನಿಸಿದರೂ ಕಲ್ಯಾಣದ ಚಾಳುಕ್ಯರಿಗೆ ಶರಣಾಗಲೇಬೇಕಾಯಿತು.



## ಆಧಾರಸೂಚಿ


೧. ನಂಜುಂಡಸ್ವಾಮಿ ಎ.ಎಸ್., ೨೦೦೯, ಪೂರ್ವೋಕ್ತ, ಪುಟ ೯೩, ೯೭, ೯೮.
೨. Ec vol, xxvi, ೨೦೧೪, ಹಿರೀಗುಂಡಗಲ್ ಶಾಸನ ಸಂಖ್ಯೆ ೯೫, ಪುಟ ೧೬೦.
೩. Ec vol, xi, ಚಳ್ಳಕೆರೆ ದೊಡ್ಡ ಉಳ್ಳವರ್ತಿ ೩೫, ಶಾಸನ ಸಂಖ್ಯೆ ೩೩–೩೪.
೪. Ec vol, xxvi, ೨೦೧೪, ಕಡಬ, ಶಾಸನ ಸಂಖ್ಯೆ ೧೬, ಪುಟ ೨೭೨.
೫. ಲಕ್ಷ್ಮಿನಾರಾಯಣರಾಯ, ಪಂಚಮುಖಿ, ೨೦೦೮, ಪೂರ್ವೋಕ್ತ, ಪುಟ ೧೫೦.
೬ ಪಂಚಮುಖಿ, ೨೦೦೮, ಕರ್ನಾಟಕದ ಇತಿಹಾಸ ಸಂಪುಟ ೧, ಪುಟ ೨೫೮.
೭. Ep.Ind. vol.III, p.105.
೮. Ec vol, xxvi, ೨೦೧೪, ಕಡಬ, ಶಾಸನ ಸಂಖ್ಯೆ ೧೬, ಪುಟ ೨೭೪.
೯. Ep.Ind. vol.vi, ಕೆನ್ನೂರು ಶಿಲಾಶಾಸನ, ಶಾಸನ ಸಂಖ್ಯೆ.
೧೦. ಪಂಚಮುಖಿ, ೨೦೦೮, ಪೂರ್ವೋಕ್ತ, ಪುಟ ೨೭೨–೨೭೩.
೧೧. ಅದೇ, ೨೦೦೮, ಪುಟ ೨೦೨.




# ಮುಡಿಗೊಂಡ ಚೋಳಮಂಡಲ

ಎಸ್.ಹೆಚ್. ಗೋವರ್ಧನ*

**ಚಾ**ಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನಲ್ಲಿರುವ ಮುಡಿಗೊಂಡವು ಇಂದಿಗೆ ಒಂದು ಸಣ್ಣ ಊರಾಗಿದೆ. ಆದರೆ ಇದು ಕನ್ನಡ ನಾಡಿನಲ್ಲಿ ಚೋಳರನ್ನು ಭದ್ರವಾಗಿ ನೆಲೆಯೂರಿಸಿದ ಮಹಾನ್ ಐತಿಹಾಸಿಕ ಪ್ರಮುಖ ನೆಲೆಯಾಗಿ ನಾಲ್ಕು ಶತಮಾನಗಳ ಕಾಲ ರಾಜಧಾನಿಯಾಗಿ ಮೆರೆದ ಪ್ರದೇಶವಾಗಿದೆ. ಕೊಳ್ಳೆಗಾಲದಿಂದ ಯಳಂದೂರಿಗೆ ಹೋಗುವ ದಾರಿಯಲ್ಲಿರುವ ಮುಡಿಗೊಂಡವು ಇಲ್ಲಿನ ಅನೇಕ ಶಾಸನಗಳಿಂದ ಬಿಡಿಬಿಡಿಯಾಗಿ ಬಿದ್ದಿರುವ ಅನೇಕ ಐತಿಹಾಸಿಕ ಪ್ರಮುಖ ಸ್ಮಾರಕಗಳಿಂದ, ದೇವಾಲಯಗಳಿಂದ ಕಂಗೊಳಿಸುತ್ತಿವೆ. ಚೋಳರ ಕಾಲದಿಂದ ಪ್ರವರ್ಧಮಾನದತ್ತ ಸಾಗಿ, ಹೊಯ್ಸಳರ ಕಾಲದಲ್ಲಿ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡ ಮುಡಿಗೊಂಡ ಮಂಡಲವು ವಿಜಯನಗರದ ಅರಸರ ಉದ್ದೇಶಪೂರ್ವಕವಾದ ಅವಗಣನೆಗೆ ತುತ್ತಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡು ಕೇವಲ ಒಂದು ಗ್ರಾಮವಾಗಿ ತನ್ನ ಅಸ್ಮಿತೆಯನ್ನು ಕುಗ್ಗಿಸಿಕೊಂಡಿತು.

ಕಾವೇರಿ ಪ್ರದೇಶದ ಸಂಪದ್ಭರಿತವಾದ ಆಯಕಟ್ಟಿನ ಪ್ರದೇಶವನ್ನು ಪಡೆಯಲು ದಕ್ಷಿಣ ಭಾರತದ ಬಹುತೇಕ ಎಲ್ಲ ರಾಜಮನೆತನಗಳು ಹಂಬಲಿಸುತ್ತಿದ್ದ ಯುಗದಲ್ಲಿ ಗಂಗರು ತಲಕಾಡು ಪ್ರಾಂತ್ಯವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ತಮಿಳುನಾಡಿನಲ್ಲಿ ರಾಜ ರಾಜ ಚೋಳನು ಕ್ರಿ.ಶ. ೯೮೫ ರಲ್ಲಿ ಪಟ್ಟಕ್ಕೆ ಬಂದವನೇ ಕಾವೇರಿ ಪ್ರದೇಶವನ್ನು ಸಾಧಿಸಲು ಪ್ರಯತ್ನಿಸಿದಂತೆ ತೋರುತ್ತದೆ. ತನ್ನ ಚೋಳ ಸಾಮ್ರಾಜ್ಯದ ವಿಸ್ತರಣೆಯ ಫಲವಾಗಿ ತಲಕಾಡು ಗಂಗರನ್ನು ಸೋಲಿಸಿ ಗಂಗವಾಡಿಯನ್ನು ವಶಪಡಿಸಿಕೊಂಡನು. ಚೋಳರ ಅತ್ಯಂತ ಪ್ರಾಚೀನ ಉಲ್ಲೇಖ ಕನ್ನಡ ನಾಡಿನಲ್ಲಿ ಕಂಡುಬಂದಿರುವುದು ಚಾಮರಾಜನಗರ ಜಿಲ್ಲೆಯ ಕೆಂಚನಪುರದಲ್ಲಿ. ಈ ಶಾಸನದ[1] ಕಾಲ ೨೪.೧೨.೯೯೧. ಈ ಶಾಸನದಲ್ಲಿ ರಾಜರಾಜನನ್ನು ಚೋಳ ನಾರಾಯಣ ಎಂದು ಕರೆದಿರುವುದು ಅತ್ಯಂತ ವಿಶೇಷವಾಗಿದೆ. ಯಾಕೆಂದರೆ ಚೋಳರು ಅಪ್ಪಟ ಶೈವರಾಗಿದ್ದರು. ಕೆಂಚನಪುರದ ಚೋಳರ ಶಾಸನ ಸಂಪೂರ್ಣವಾಗಿ ಕನ್ನಡ ಭಾಷೆಯಲ್ಲಿದ್ದು ಕನ್ನಡ ಲಿಪಿಯಲ್ಲಿಯೇ ಬರೆಯಲಾಗಿದೆ.

ಚೋಳರು ತಮ್ಮ ರಾಜ್ಯವಿಸ್ತರಣೆಯ ಮೊದಲ ಹೆಜ್ಜೆಯಾಗಿ ಕುಡುಮಲೈ ನಾಡಿನ [ಕೊಡಗು ಜಿಲ್ಲೆ] ಮೇಲೆ ದಂಡೆತ್ತಿ ಬಂದು ಈ ಪ್ರದೇಶವನ್ನು ಮೊದಲು ವಶಪಡಿಸಿಕೊಂಡರು. ಕಾವೇರಿಯ ಆರಂಭಿಕ ಹಂತದ ಭೂಪ್ರದೇಶವನ್ನು ಹಿಡಿಯುವುದು ಇವರ ಮುಖ್ಯವಾದ ಉದ್ದೇಶದಂತೆ ತೋರುತ್ತದೆ. ಕೊಡಗಿನ ಪ್ರದೇಶದಲ್ಲಿ ಏಳುಸಾವಿರ ಸೀಮೆಗೆ ಚೋಳರ ನಂಬಿಕಸ್ಥ ಸಾಮಂತರಾದ ಕೊಂಗಾಳ್ವರನ್ನು ನೇಮಕ ಮಾಡಿ ಆ ಮೂಲಕ ಚೋಳರ ಆಡಳಿತ ಕ್ರಮವನ್ನು ಕನ್ನಡ ನಾಡಿನಲ್ಲಿ ಪರಿಚಯಿಸಿದರು. ಈ ಯುದ್ಧದಲ್ಲಿ ರಾಜರಾಜ ಚೋಳನ ಮಗನಾದ ಒಂದನೆಯ ರಾಜೇಂದ್ರ ಚೋಳನ ಪಾತ್ರವೂ ಕೂಡ ಪ್ರಮುಖವಾಗಿತ್ತು.

ಈ ದಂಡಯಾತ್ರೆಯ ಮುಂದಿನ ಭಾಗವಾಗಿ ತೆಡಿಗೈಪಾಡಿ [ದಡಿಗಾವಳಿ] ಮೇಲೆ ವಿಜಯವನ್ನು ಸಾಧಿಸಿದರು. ಗಂಗವಾಡಿ ಪ್ರದೇಶವಾಗಿದ್ದ ಮಂಡ್ಯ, ಮೈಸೂರು ಜಿಲ್ಲೆಯ ಭಾಗಗಳು ಗಂಗರ ದುರ್ಬಲತೆಯಿಂದ ಸುಲಭವಾಗಿ ಚೋಳರ ವಶವಾಯಿತು. ತಾವು ಸಾಧಿಸಿಕೊಂಡ ರಾಜ್ಯವನ್ನೆಲ್ಲ ತಮ್ಮದೇ ಆದ ತಮಿಳು-ಚೋಳ ಮಾದರಿಯ ಆಡಳಿತ ವ್ಯವಸ್ಥೆಯಲ್ಲಿ ಬಂಧಿಸುವುದರ ಮೂಲಕ ಕನ್ನಡ ನಾಡಿನ ದಕ್ಷಿಣ ಭಾಗವನ್ನೆಲ್ಲ ಕ್ರಮೇಣ ಆವರಿಸಿಕೊಳ್ಳುತ್ತಾ ನೊಳಂಬವಾಡಿಯನ್ನು ಕೂಡ ಚೋಳರು ತಮ್ಮ ತೆಕ್ಕೆಗೆ ತೆಗೆದುಕೊಂಡರು.

ಚೋಳರು ಈಗಾಗಲೇ ತಮಿಳುನಾಡಿನಲ್ಲಿ ರೂಪುಗೊಂಡಿದ್ದ ಆಡಳಿತ ವ್ಯವಸ್ಥೆಯನ್ನು ಕನ್ನಡ ನಾಡಿನಲ್ಲಿಯೂ ಆರೋಪಿಸಿದರು ಕ್ರಿ.ಶ. ೯೯೧ರಲ್ಲಿ ಕನ್ನಡ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿ ಶಾಸನವನ್ನು ಹಾಕುವುದರ ಮೂಲಕ ಇಲ್ಲಿನವರ ನಂಬಿಕೆಯನ್ನು ಗಿಟ್ಟಿಸಿಕೊಂಡ ಚೋಳರು ಹೊಂಗನೂರಿನಲ್ಲಿ ಶಾಸನವನ್ನು ಹಾಕಿಸುವಷ್ಟರಲ್ಲಿ ನಿಂತು ನೋಡುವವರಿಗೆ ಮೋಸ ಮಾಡುವಂತೆ ಕನ್ನಡ ಲಿಪಿಯಲ್ಲಿ

* ಸಂಶೋಧನಾ ವಿದ್ಯಾರ್ಥಿ, ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾಲಯ, ತುಮಕೂರು.

ತಮಿಳು ಭಾಷೆಯ ಶಾಸನವನ್ನು ಹಾಕಿಸಿದರು[೨]. ಕ್ರಮೇಣ ಎಲ್ಲ ಶಾಸನಗಳನ್ನು ಚೋಳರು ತಮಿಳು ಭಾಷೆ ಮತ್ತು ಲಿಪಿಯಲ್ಲಿಯೇ ಎಂದರೆ ಗ್ರಂಥ ಲಿಪಿಯಲ್ಲಿಯೇ ಹಾಕಿಸುತ್ತಾ ಸಾಗಿದರು. ಎಲ್ಲಿ ಬಹುಮುಖ್ಯ ಆಯಕಟ್ಟಿನ ಭಾಗಗಳಲ್ಲಿಯೂ ತಮಿಳು ಅಧಿಕಾರಿಗಳೇ ಬಂದು ನೆಲೆ ನಿಂತಿದ್ದರಿಂದಲೇ ಬಹುತೇಕ ಶಾಸನಗಳು ತಮಿಳುಮಯವಾಗುತ್ತಾ ಸಾಗಿತು. ಇಲ್ಲಿನ ಸ್ಥಳಗಳ ಹೆಸರೆಲ್ಲ ತಮಿಳು ಭಾಷೆಗೆ ರೂಪಾಂತರ ವಾಯಿತು.

ಕೆಲವು ಗ್ರಾಮಗಳನ್ನು ಸೇರಿಸಿ ತನಿಯಾರ್‌ಗಳಾಗಿ ರೂಪಿಸಲಾಗುತ್ತಿತ್ತು. ಈ ತನಿಯಾರ್‌ಗಳೆಂದರೆ ದೊಡ್ಡ ಗ್ರಾಮಗಳು ಎಂದಷ್ಟೆ ಅರ್ಥ. ಹಲವು ಗ್ರಾಮಗಳನ್ನು ಸೇರಿಸಿ ಕೂಟ್ರಗಳೆಂದು ಕರೆಯಲಾಯಿತು. ಈ ಕೂಟ್ರಗಳೆಂದರೆ ನಮ್ಮಲ್ಲಿ ನಾಡು ಎಂದು. ಹಲವು ಕೂಟ್ರಗಳು ಸೇರಿ ವಳನಾಡುಗಳನ್ನು ಮಾಡಲಾಯಿತು. ಕೆಲವಾರು ವಳನಾಡುಗಳನ್ನು ಸೇರಿಸಿ ಮಂಡಲಗಳನ್ನಾಗಿ ರೂಪಿಸಲಾಯಿತು. ಚೋಳರ ಆಡಳಿತ ಘಟಕಗಳಲ್ಲಿ ಮಂಡಲವೇ ಎಲ್ಲಕ್ಕಿಂತ ದೊಡ್ಡದಾಗಿತ್ತು.[೩]

ಮುಡಿಗೊಂಡ ಚೋಳಮಂಡಲ, ನಿಗಿರಿಲಿ ಚೋಳ ಮಂಡಲ, ಜಯಂಗೊಂಡ ಚೋಳ ಮಂಡಲ, ವಿಕ್ರಮ ಚೋಳಮಂಡಲಗಳು ದೊಡ್ಡದಾದ ಆಡಳಿತ ಘಟಕಗಳಾಗಿತ್ತು. ಇವುಗಳ ವಳನಾಡುಗಳಾಗಿ ರಾಜೇಂದ್ರ ಚೋಳ ವಳನಾಡು, ಗಂಗೈಕೊಂಡ ಚೋಳ ವಳನಾಡು, ವೀರ ರಾಜೇಂದ್ರಚೋಳ ವಳನಾಡು, ಉಯ್ಯಕೊಂಡಾನ್ ವಳನಾಡು, ಕ್ಷತ್ರಿಯ ಶಿಖಾಮಣಿ ಚೋಳ ವಳನಾಡು, ಶೋವಿ ವಳನಾಡು, ನಿತ್ಯ ವಿನೋದ ಚೋಳ ವಳನಾಡು, ಹಾಗೂ ಅರುಮುಳಿದೇವ ಚೋಳ ವಳನಾಡುಗಳು ಅಂತರ್ಗತವಾಗಿದ್ದವು ಈ ಎಲ್ಲವೂ ಚೋಳರಾಜರ ಬಿರುದುಗಳೇ ಆಗಿದ್ದವು. ಈ ವಳನಾಡುಗಳಲ್ಲಿ ಅನೇಕ ಕೂಟ್ರಗಳು ಎಂದರೆ ನಾಡುಗಳು ಸೇರಿ ಕೊಂಡಿದ್ದವು.

ರಾಜರಾಜಚೋಳನ [೯೮೫–೧೦೧೪ ಕ್ರಿ.ಶ] ಮಗನಾದ ಒಂದನೆಯ ರಾಜೇಂದ್ರ ಚೋಳನ [ಕ್ರಿ.ಶ. ೧೦೧೨–೧೦೪೪] ಕಾಲದಲ್ಲಿ ರೂಪುಗೊಂಡ ಮಂಡಲ ಗಳಲ್ಲಿ ಅತ್ಯಂತ ಪ್ರಮುಖವಾದ ಮಂಡಲವೆಂದರೆ "ಮುಡಿಗೊಂಡ ಚೋಳ ಮಂಡಲ". ಇದು ಇಂದಿನ ಚಾಮರಾಜನಗರ ಜಿಲ್ಲೆಯ ಪೂರ್ಣಭಾಗದೊಡನೆ ಮೈಸೂರು ಜಿಲ್ಲೆಯ ನಂಜನಗೂಡು, ತಿರಮಕೂಡಲು ನರಸೀಪುರ, ಹೆಗ್ಗಡದೇವನಕೋಟೆ ತಾಲೂಕುಗಳ ಕೆಲವು ಭಾಗಗಳು ಹಾಗೂ ಮಂಡ್ಯ ಜಿಲ್ಲೆಯ ಶ್ರಿರಂಗ ಪಟ್ಟಣ ಹಾಗೂ ಮಳವಳ್ಳಿ ತಾಲೂಕುಗಳ ಕೆಲವು ಭಾಗಗಳು ಅಂತರ್ಗತವಾಗಿದ್ದವು.

ಮುಡಿಗೊಂಡ ಚೋಳ ಎನ್ನುವುದು ಕೂಡ ರಾಜೇಂದ್ರ ಚೋಳನ ಬಿರುದೇ ಆಗಿದೆ. ಇವನ ಇನ್ನಿತರ ಬಿರುದುಗಳಲ್ಲಿ ಎರಡು ಪ್ರಮುಖವಾದ ಬಿರುದುಗಳೆಂದರೆ ಗಂಗೈಕೊಂಡ ಚೋಳ ಹಾಗೂ ವೀರ ರಾಜೇಂದ್ರ ಚೋಳ ಎಂಬುದು. ಇವನ್ನು ಇಲ್ಲಿ ಪ್ರಸ್ತಾಪಿಸುತ್ತಿರುವ ಮುಖ್ಯ ಉದ್ದೇಶವೆಂದರೆ ಈ ಎರಡೂ ಬಿರುದುಗಳನ್ನು ಉಪಯೋಗಿಸಿಕೊಂಡು ಗಂಗೈಕೊಂಡ ಚೋಳ ವಳನಾಡು ಹಾಗೂ ವೀರ ರಾಜೇಂದ್ರ ಚೋಳ ವಳನಾಡುಗಳನ್ನು ಈ ಪ್ರಮುಖ ಮುಡಿಗೊಂಡ ಚೋಳಮಂಡಲರ ವಳನಾಡುಗಳಾಗಿ ರೂಪಿಸಲಾಯಿತು.

ಮುಡಿಗೊಂಡ ಚೋಳಪುರ ಎನ್ನುವುದು ತಮಿಳು ನಾಡಿನ ಕುಂಭಕೋಣಂ ಸಮೀಪದಲ್ಲಿರುವ ಕಾವೇರಿನದಿಯ ಪ್ರಮುಖ ಶಾಖಾ ನದಿಯಾದ ಮುಡಿಗೊಂಡ ಶಾಖಾನದಿಯ ತೀರದ ಪಳೈಯೂರು ಗ್ರಾಮದ ಪ್ರತಿನಾಮದೇಯವಾಗಿದೆ. ಪ್ರಾಯಃ ಮುಡಿಗೊಂಡವನ್ನು ರಾಜಧಾನಿಯಾಗಿ ರೂಪಿಸಲು ರಾಜೇಂದ್ರ ಚೋಳನಿಗೆ ಈ ಹೆಸರೇ ಪ್ರೇರಣೆಯನ್ನು ಒದಗಿಸಿದೆ. ಪಶ್ಚಿಮ ಘಟ್ಟಗಳ ವಸ್ತುಗಳನ್ನು ವ್ಯಾಪಾರಕ್ಕೆಂದು ಸಾಗಿಸಲು ಹಾಗೂ ಕಾವೇರಿ ತೀರದ ಕೃಷಿ ಬೆಳೆಗಳಿಂದ ಬರುತ್ತಿದ್ದ ಉತ್ಪನ್ನಗಳನ್ನು ಸಾಗಿಸಲು ಮುಡಿಗೊಂಡ ಪ್ರಮುಖ ವಾಣಿಜ್ಯಮಾರ್ಗದ ಹೆದ್ದಾರಿಯಲ್ಲಿ ಇದ್ದುದರಿಂದಲೂ, ಬಯಲು ಪ್ರಸ್ತಭೂಮಿಯು ಸಮತಟ್ಟಿಗೆ ಬಂದುದರಿಂದಲೂ ಚೋಳರು ಮುಡಿಗೊಂಡಕ್ಕೆ ಒಳ್ಳೆಯ ಪ್ರಾಶಸ್ತ್ಯ ನೀಡಿದರು. ತಮಿಳುನಾಡಿನ ಪ್ರದೇಶಕ್ಕೆ ಸುಲಭವಾಗಿ ಸಂಚರಿಸ ಬಹುದಿತ್ತು ಹಾಗೂ ನಿಧಾನವಾಗಿ ಕನ್ನಡ ನಾಡನ್ನು ಚೋಳಮಯ ಆಡಳಿತವಾಗಿ ಸಾಧಿಸಬಹುದಿತ್ತು. ಎಲ್ಲಕ್ಕೂ ಮಿಗಿಲಾಗಿ ಕಾವೇರಿಯ ಮೇಲು ತುದಿಯನ್ನು ಹಿಡಿದಿದ್ದ ಚೋಳರಿಗೆ ಕೆಳತುದಿಯು ಸಹಜವಾಗಿಯೇ ಅವರ ಹಿಡಿತದಲ್ಲಿತ್ತು ಅವರ ಮುಖ್ಯಗುರಿಯಿದ್ದುದು ಕಾವೇರಿಯ ನಡುವಿನ ಭಾಗದ ಹಿಡಿತವಾಗಿತ್ತು. ಮುಡಿಗೊಂಡವನ್ನು ಮಂಡಲದ ಕೇಂದ್ರವನ್ನಾಗಿ ಮಾಡಿ ಚೋಳರು ಅದನ್ನು ಸಾಧಿಸಿದರು.

ಮುಡಿಗೊಂಡ ಚೋಳಮಂಡಲದಲ್ಲಿ ಎರಡು ವಳನಾಡುಗಳು ಇದ್ದವು. ಗಂಗೈಕೊಂಡ ಚೋಳವಳನಾಡು. ಎರಡನೆಯದು ವೀರ ರಾಜೇಂದ್ರ ಚೋಳ ವಳನಾಡು. ಈ ವೀರರಾಜೇಂದ್ರ ಚೋಳ ವಳನಾಡಿನ ಉಲ್ಲೇಖ ಭದ್ರಳ್ಳಿ ಶಾಸನ[೪] ಮುಂತಾದೆಡೆಗಳಲ್ಲಿ ಬರುತ್ತದೆಯಾದರೂ ಇದರ ಉಲ್ಲೇಖಗಳು ಕ್ವಚಿತ್ತಾಗಿ ಕಂಡುಬರುತ್ತದೆ. ಉಳಿದಂತೆ ಗಂಗೈಕೊಂಡ ಚೋಳ ವಳನಾಡಿನ ಉಲ್ಲೇಖಗಳೇ ಅಧಿಕವಾಗಿ ಕಂಡುಬರುತ್ತದೆ.

ಇವತ್ತಿನ ಇಡೀ ಚಾಮರಾಜನಗರ ಜಿಲ್ಲೆಯ ಬಹುತೇಕ ಭಾಗಗಳು ಚೋಳರ ಕಾಲದಲ್ಲಿ ಗಂಗೈಕೊಂಡ ಚೋಳ

ವಳನಾಡಿನಲ್ಲಿ ಅಂತರ್ಗತವಾಗಿತ್ತು. ಗಂಗೈಕೊಂಡ ಚೋಳಮಂಡಲವೆಂದೇ ಶಾಸನಗಳು ಈ ವಳನಾಡನ್ನು ಗುರುತಿಸುವಷ್ಟು ಪ್ರಮುಖವಾದ ಆಡಳಿತ ಕೇಂದ್ರವಾಗಿ ಇದು ಜನಪ್ರಿಯವಾಗಿತ್ತು. ಈ ಗಂಗೈಕೊಂಡ ಚೋಳ ವಳನಾಡಿನಲ್ಲಿ ಕುಂದನಾಡು, ಪದಿನಾಡು, ಎಣ್ಣೈನಾಡು, ತೇನ್‌ಕುಂದ ನಾಡು, ಕೈಯ್ವರ ನಾಡು, ಪಕಳು ನಾಡು, ಇಡ್ಯೆನಾಡು, ತೊಡನೂರು ನಾಡು, ಮುಂತಾದ ನಾಡುಗಳು ಅಂತರ್ಗತವಾಗಿದ್ದವು. ಕ್ರಿ.ಶ. ೧೨೭೩ರ ಹೊಯ್ಸಳರ ಕಾಲದ ೨ ಶಾಸನಗಳು ಎರಡು ರೀತಿಯ ವಿಚಾರವನ್ನು ನಮಗೆ ತಿಳಿಸುತ್ತದೆ. ಕಟ್ನವಾಡಿಯ ಶಾಸನವು[೫] ಕುಮಾರ ನಾಡು, ಹಿರಿಯನಾಡು ಹಾಗೂ ತೊರೆನಾಡುಗಳು ಪದಿನಾಡಿನಲ್ಲಿದುವು ಎಂದು ತಿಳಿಸಿದರೆ ಅಂಚವಾಡಿಯ ಶಾಸನವು[೬] ಕೈಯ್ವರ ನಾಡು ಹಾಗೂ ಪಕಳುನಾಡುಗಳು ಗಂಗೈಕೊಂಡ ಚೋಳ ವಳನಾಡಿನಲ್ಲಿದ್ದವು ಎಂಬುದಾಗಿ ತಿಳಿಸುತ್ತದೆ. ಕೆಲವು ಶಾಸನಗಳ ಪ್ರಕಾರ ಕುಮಾರನಾಡು ಹಾಗೂ ತುರೈನಾಡುಗಳು ಒಂದೇ ಆಗಿದ್ದವು. ಇದರರ್ಥವನ್ನು ನಾವು ನಿಧಾನವಾಗಿ ಬಿಡಿಸಿಕೊಳ್ಳಬೇಕಾದ ಅವಶ್ಯಕತೆಯಿದೆ. ಈ ನಾಡಿನ ಹೆಸರು ತುರೈನಾಡು ಎಂಬುದಾಗಿಯೇ ಇತ್ತು. ಇದನ್ನು ಕುಮಾರ ನಾಡು ಎಂದು ಕರೆಯಲು ಇದ್ದ ಪ್ರಮುಖವಾದ ಕಾರಣವೆಂದರೆ ಇಲ್ಲಿ ರಾಜರ ಕುಮಾರರಿಗೆ ವಿದ್ಯಾಭ್ಯಾಸ ಕಲಿಸಲಾಗುತ್ತಿತ್ತು. ಆದಕಾರಣ ಇದನ್ನು ಕುಮಾರ ನಾಡು ಎಂದು ಕರೆಯಲಾಗಿದೆ.

ಚೋಳರ ಕಾಲದಲ್ಲಿ ರೂಪುಗೊಂಡ ಈ ಮಂಡಲ, ವಳನಾಡು ಹಾಗೂ ನಾಡುಗಳ ವ್ಯವಸ್ಥೆಯನ್ನು ಅವುಗಳ ಆಡಳಿತ ಕ್ರಮವನ್ನು ಚೋಳರನ್ನು ಸೋಲಿಸಿ ಓಡಿಸಿದ ನಂತರವೂ ಹೊಯ್ಸಳರು ಮುಂದುವರೆಸಿದರು. ಈ ವ್ಯವಸ್ಥೆಯಲ್ಲಿ ಯಾವುದೇ ಬದಲಾವಣೆಯನ್ನು ಉಂಟು ಮಾಡದೇ ಅಲ್ಲಿದ್ದ ತಮಿಳು ಅಧಿಕಾರಿಗಳನ್ನು ಬದಲಾಯಿಸದೇ ಅವರನ್ನು ಹಾಗೆಯೇ ಮುಂದುವರೆಸಿದ್ದು ಹೊಯ್ಸಳರು ಮಾಡಿದ ಅತ್ಯಂತ ದೊಡ್ಡ ತಪ್ಪಾಯಿತು. ಹಾಗಾಗಿ ಅಲ್ಲಿಯವರೆಗೆ ಯಾವ ರೀತಿಯ ತಮಿಳು ಆಡಳಿತ ಕ್ರಮವಿತ್ತೋ ಕನ್ನಡಿಗರ ಹೊಯ್ಸಳ ಚಕ್ರವರ್ತಿಗಳ ಅಡಿಯಾಳಾಗಿದ್ದ ಕಾಲದಲ್ಲಿಯೂ ಅದನ್ನು ಮುಂದುವರೆಸಿದರು ಉದಾಹರಣೆಗೆ ಇಮ್ಮಡಿ ಬಲ್ಲಾಳನ ಆಳ್ವಿಕೆಗೆ ಸಂಬಂಧಿಸಿದಂತೆ ಚಾಮರಾಜನಗರ ಜಿಲ್ಲೆಯಲ್ಲಿ ದೊರೆತಿರುವ ೧೫ ಶಾಸನಗಳಲ್ಲಿ ೧೨ ಶಾಸನಗಳು ತಮಿಳಿನಲ್ಲಿಯೇ ಇದೆ. ಹಾಗೂ ಹೊಯ್ಸಳ ಸೋಮೇಶ್ವರನ ಎಲ್ಲ ಶಾಸನಗಳೂ ತಮಿಳುನಲ್ಲಿಯೇ ಇದೆ.

ಸದ್ಯಕ್ಕೆ ದೊರತಿರುವ ಶಾಸನದ ಹಿನ್ನೆಲೆಯಲ್ಲಿ ಮುಡಿಗೊಂಡ ಚೋಳಮಂಡಲ ಎಂಬ ಆಡಳಿತ ಘಟಕದ ಅತ್ಯಂತ ಪ್ರಾಚೀನ ದಾಖಲೆ ದೊರೆಯುವುದು ೧೦೧೫–೧೬ ಕ್ಕೆ ಸೇರಿದ ತಡಿ ಮಾಲಿಂಗಿಯ ಶಾಸನದಿಂದ[೭]. ಒಂದನೇ ರಾಜೇಂದ್ರ ಚೋಳನ ನಾಲ್ಕನೆಯ ವರ್ಷದ ಆಳ್ವಿಕೆಯ ಕಾಲದಲ್ಲಿ ಹೊರಡಿಸಲಾದ ಈ ಶಾಸನವು ಚೋಳರು ಹೇಗೆ ಕನ್ನಡ ನಾಡಿನ ಮೇಲೆ ಪ್ರಭುತ್ವವನ್ನು ಸಾಧಿಸಿದರು ಎಂದು ತಿಳಿಸುತ್ತದೆ. ಈ ಶಾಸನದಲ್ಲಿ ಮುಡಿಗೊಂಡ ಚೋಳಮಂಡಲದ ಆಡಳಿತ ಘಟಕವಾಗಿ ಗಂಗೈಕೊಂಡ ಚೋಳ ವಳನಾಡು ಇದ್ದುದಾಗಿಯೂ ಇದರಲ್ಲಿ ಇಡ್ಯೆನಾಡು ಇತ್ತೆಂದು ತಿಳಿಸುತ್ತದೆ. ಈ ಇಡ್ಯೆನಾಡಿನಲ್ಲಿ ಜನನಾಥಪುರ ಇತ್ತು ಈ ಜನನಾಥಪುರವೆಂದು ತಮಿಳೀಕರಣಗೊಂಡಿರುವ ಊರಿನ ಹೆಸರು ತಡಿಮಾಲಿಂಗಿ. ಇದೇ ವರ್ಷದ ಸುತ್ತೂರಿನ ಶಾಸನದಲ್ಲಿ[೮] ಇದೇ ಇಡ್ಯೆನಾಡಿನಲ್ಲಿ ಸೊತ್ತಿಯೂರು (ಇಂದಿನ ಸುತ್ತೂರು) ಇದ್ದ ಸಂಗತಿಯು ಹೇಳಲಾಗಿದೆ. ಈ ಸುತ್ತೂರಿನ ಶಾಸನವು ತಮಿಳು ಮತ್ತು ಕನ್ನಡ ಭಾಷೆಗಳಲ್ಲಿದ್ದು ಕನ್ನಡ ಲಿಪಿಯನ್ನು ಹೊಂದಿದೆ.

ಕ್ರಿ.ಶ. ೭.೭.೧೦೨೦ರ ಬೆಳತೂರು ಶಾಸನದ[೯] ಪ್ರಕಾರ ನುಗುನಾಡು, ೧೫.೦೨.೧೦೬೩ರ ಗುಜ್ಜಪ್ಪನಹುಂಡಿಯ ಶಾಸನದ[೧೦] ಪ್ರಕಾರ ನವಲೆನಾಡು, ೧೧೦೬ರ ಸಿಂದುವಳ್ಳಿ ಶಾಸನದ[೧೧] ಪ್ರಕಾರ ಕಾರ್ಯೆನಾಡು ಕ್ರಿ.ಶ. ೧೧೮೮ರ ಬನ್ನೂರಿನ ಶಾಸನದ[೧೨] ಪ್ರಕಾರ ವಡಗರ್ಯೆನಾಡು, ೧೨ನೇ ಶತಮಾನದ ಕೆಲಸೂರಿನ ಶಾಸನದ[೧೩] ಪ್ರಕಾರ ಕುಡುಗೂರು ನಾಡುಗಳು ಈ ಮಂಡಲದಲ್ಲಿ ಸೇರಿಕೊಂಡಿದ್ದವು. ಕ್ರಿ.ಶ. ೧೧೬೩ ಸಾಲ್ಲಂ ಶಾಸನವು[೧೪] ಗಂಗೈಕೊಂಡ ಚೋಳ ವಳನಾಡಿನಲ್ಲಿ ತೇನ್‌ಕುಂದ ನಾಡಿದ್ದುದನ್ನು ತಿಳಿಸಿದರೆ ಕ್ರಿ.ಶ. ೧೧೭೩ರ ಕುಲಗಾಣದ ಶಾಸನವು[೧೫] ಗಂಗೈಕೊಂಡ ಚೋಳ ವಳನಾಡಿನಲ್ಲಿ ಪರಿಯನಾಡಾದ ಇಡ್ಯೆನಾಡಿತ್ತು ಇದರಲ್ಲಿ ಕೊಳಗಣ (ಇಂದಿನ ಕುಲಗಾಣ) ವಿತ್ತು ಎಂದು ತಿಳಿಸುತ್ತದೆ. ಕ್ರಿ.ಶ. ೧೧೮೯ರ ಮುಡಿಗೊಂಡದ ಶಾಸನವು ಮುಡಿಗೊಂಡ ಚೋಳಪುರಕ್ಕೆ ದೇಶಿಯುಯ್ಯಕ್ಕೊಣ್ಡ ಚೋಳಪುರ ಎಂಬ ನಾಮಾಂತರವಿದ್ದುದನ್ನು ತಿಳಿಸುತ್ತದೆ.

ಈ ದೇಶಿಯುಯ್ಯಕ್ಕೊಣ್ಡವು ಹಲವಾರು ಶಾಸನಗಳಲ್ಲಿ ಉಕ್ತವಾಗಿದೆ. ಇದು ಮುಡಿಗೊಂಡರ ಪರ್ಯಾಯ ನಾಮವಾಗಿದೆ. ಮುಡಿಗೊಂಡ ಚೋಳ ಮಂಡಲಕ್ಕೆ ಕೂಡ ಕೆಲವು ಬಾರಿ ಪರ್ಯಾಯವಾಗಿ ದೇಶಿಯುಯ್ಯಕ್ಕೊಣ್ಡ ಮಂಡಲವೆಂದು ಕರೆಯಲಾಗಿದೆ. ೧೧೯೧ ರ ಹೊನ್ನೂರಿನ ಶಾಸನದನ್ವಯ[೧೬] ಗಂಗೈಕೊಂಡ ಚೋಳ ವಳನಾಡಿನಲ್ಲಿದ್ದ ಇಡ್ಯೆನಾಡಿನಲ್ಲಿ ಅಗರ ಎಂಬ ಗ್ರಾಮವಿದ್ದ ಸಂಗತಿಯನ್ನು ತಿಳಿಸುತ್ತದೆ. ಈ ಅಗರವನ್ನು ಉದ್ಧರಿಸುತ ಅನೇಕ ಶಾಸನಗಳಿದ್ದು ಇದನ್ನು ದುಗ್ಗೈಯಾರ್ ಅಗ್ರಹಾರ ಎಂದು ಕರೆಯಲಾಗುತ್ತಿತ್ತು.

ಹೊಯ್ಸಳರ ಕಾಲವಾದ ಕ್ರಿ.ಶ. ೧೨೦೧ರಲ್ಲಿಯೂ ಇಲ್ಲಿನ ತಮಿಳು ಮಾದರಿಯ ಆಡಳಿತ ವ್ಯವಸ್ಥೆ ಬದಲಾಗದೆ ಹಾಗೇ ಉಳಿದಿದ್ದುದು ತಮಿಳು ಅಧಿಕಾರಿಗಳೇ ಮುಂದುವರೆದಿದ್ದು ಸೋಜಿಗದ ಸಂಗತಿಯಾಗಿದೆ. ಕೊಳ್ಳೆಗಾಲದ ಈ ಕಾಲದ ಶಾಸನವು[೧೭] ಮಡಿಗೊಂಡ ಚೋಳಪುರವನ್ನು ದೇಶಿಲುಯ್ಯಕ್ಕೊಂಡ ಚೋಳಪಟ್ಟಣವೆಂಬ ಹೆಸರಿನಲ್ಲಿ ಕರೆದು ಇಲ್ಲಿ ತ್ರಿಭುವನ ಚತುರ್ವೆದಿಮಂಗಲ ವೆಂಬ ಅಗ್ರಹಾರವನ್ನು ಸ್ಥಾಪಿಸಿದ ಸಂಗತಿಯನ್ನು ತಿಳಿಸುತ್ತದೆ.

ಕಾವೇರಿ ನದಿಯ ಆ ತೀರದಲ್ಲಿದ್ದ ತಡಿಮಾಲಿಂಗಿಯು ಇಡೈನಾಡಿನಲ್ಲಿದ್ದರೆ ಈ ತೀರದಲ್ಲಿದ್ದ ಪ್ರಸಿದ್ಧ ರಾಜಧಾನಿ ಪಟ್ಟಣ ತಲೆಕಾಡು ವಡಗರೈ ನಾಡಿನಲ್ಲಿತ್ತು ಎಂದು ೧೩ ನೆಯ ಶತಮಾನದ ಚಟ್ಟಹಳ್ಳಿಯ ಶಾಸನವು[೧೮] ತಿಳಿಸುತ್ತದೆ. ಈ ತಲಕಾಡನ್ನು ಶಾಸನವು ರಾಜರಾಜಪುರಂ ಎಂದು ದಾಖಲಿಸುತ್ತದೆ. ಆ ತೀರದ ತಡಿಮಾಲಿಂಗಿಯು ಗಂಗೈಕೊಂಡ ಚೋಳ ವಳನಾಡಿಗೆ ಸೇರಿದ್ದರೆ ಈ ತೀರದ ತಲಕಾಡು ರಾಜೇಂದ್ರ ಚೋಳ ವಳನಾಡಿನಲ್ಲಿತ್ತು. ಈ ರಾಜೇಂದ್ರ ಚೋಳ ವಳನಾಡಿನ ಉಲ್ಲೇಖ ಗಂಗೈಕೊಂಡ ಚೋಳ ವಳನಾಡಿನಷ್ಟು ದೊರೆಯುದೆ ಹೋದರೂ ಕೆಲವು ಶಾಸನಗಳಲ್ಲಿ ಕಂಡುಬರುತ್ತದೆ. ೧೧೮೮ರ ಬನ್ನೂರಿನ ಶಾಸನವು[೧೯] ಕೇವಲ ಚೋಳ ವಳನಾಡೆಂದು ಕರೆದರೂ ಇದು ರಾಜೇಂದ್ರ ಚೋಳ ವಳನಾಡೇ ಎಂಬುದು ತಿಳಿಯುತ್ತದೆ. ವಣ್ಣಿಯೂರು ವಡಗರೈ ನಾಡಿಗೆ ಸೇರಿದ್ದು ಈ ವಡಗರೈನಾಡು ಚೋಳ ವಳನಾಡಿ ನಲ್ಲಿತ್ತು ಎಂದು ಈ ಶಾಸನ ತಿಳಿಸುತ್ತದೆ ವಣ್ಣಿಯೂರೆಂದರೆ ಈಗಿನ ಬನ್ನೂರು. ೧೨ನೇ ಶತಮಾನ ಮಳವಳ್ಳಿಯ ಶಾಸನವು[೨೦] ಈ ರಾಜೇಂದ್ರ ಚೋಳ ವಳನಾಡಿನಲ್ಲಿದ್ದ ಸೋಮನಹಳ್ಳಿಯನ್ನು ಉಲ್ಲೇಖಿಸುತ್ತದೆ. ಈ ಸೋಮನಹಳ್ಳಿ ಯನ್ನು ವಾಗೀಶ್ವರ ತುಂಗಲಂ ಎಂದು ಕರೆಯಲಾಗಿದೆ.

ಹೊಯ್ಸಳರು ತಮ್ಮ ಕೇಂದ್ರಸ್ಥಾನವನ್ನು ಉಳಿಸಿಕೊಳ್ಳಲು ಹರಸಾಹಸ ಪಡುತ್ತಿದ್ದುದರಿಂದ ಅವರು ಕಾವೇರಿ ತೀರದ ಈ ಪರಿಸರದಲ್ಲಿ ರಾಜಕೀಯವಾಗಿ ಅಷ್ಟೇನೂ ಬದಲಾವಣೆ ಯನ್ನು ಮಾಡಲಿಲ್ಲ. ಚೋಳರನ್ನು ಸೆರೆಬಡಿದು ಓಡಿಸಿದಂತೆ ತಮಿಳು ಅಧಿಕಾರಿಗಳನ್ನು ಬದಲಾಯಿಸಲಿಲ್ಲ ಬಹುಶಃ ಇದಕ್ಕೆ ಪ್ರಮುಖ ಕಾರಣವನ್ನು ಹೀಗೆ ಯೋಚಿಸಬಹುದು ಎಂದೆನಿಸುತ್ತದೆ. ಶಿವನಿಷ್ಠೆಯಿದ್ದ ಚೋಳರ ಕೈಕೆಳಗಿನ ಬಹುತೇಕ ಚೋಳ ಅಧಿಕಾರಿಗಳು ವೈಷ್ಣವ ನಿಷ್ಠೆಯನ್ನು ಹೊಂದಿದ್ದರು. ಅನೇಕ ವೈಷ್ಣವ ದೇವಾಲಯಗಳು ಈ ಚೋಳ ಅಧಿಕಾರಿಗಳ ಸಮಯದಲ್ಲಿ ಪುನರುಸ್ಥಾನಗೊಂಡವು. ಹಾಗಾಗಿಯೇ ಏನೋ ವೈಷ್ಣವ ನಿಷ್ಠೆಯನ್ನು ಹೊಂದಿದ್ದ ಹೊಯ್ಸಳರ ಕೃಪಾದೃಷ್ಟಿ ಚೋಳ ಅಧಿಕಾರಿಗಳ ಮೇಲೆ ಬಿದ್ದು ಅವರನ್ನು ಮುಂದುವರೆಸಿದರು. ಅಥವಾ ಈಗಾಗಲೇ ಕನ್ನಡ ನಾಡಿನಲ್ಲಿ ನೆಲೆನಿಂತ ಚೋಳ ಅಧಿಕಾರಿಗಳು ಇಲ್ಲಿನವ ರಂತೆಯೇ ಬೆರೆತು ಇಲ್ಲಿನ ಜನರಿಗೆ ಅನುಕೂಲ ವಾಗುವಂತಹ ಕೃಷಿ ವ್ಯವಸ್ಥೆ, ಮಾರು ಕಟ್ಟೆ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆಯನ್ನು ಬಲಗೊಳಿಸಿದ್ದರಿಂದ ಹೊಯ್ಸಳರು ಇವರನ್ನು ಮುಂದುವರೆಸಿ ರಬೇಕು. ಸಾಮಾಜಿಕ ಜೀವನದಲ್ಲಿ ಏನೇ ಬದಲಾವಣೆಯನ್ನು ಈ ಅಧಿಕಾರಿಗಳು ತಂದಿರಬಹುದು. ಆದರೆ ಭಾಷಿಕವಾಗಿ, ಭೌದ್ಧಿಕವಾಗಿ ಮಾತ್ರ ಇವರು ಅಪ್ಪಟ ತಮಿಳು ಮಣಿಗಳಾಗಿ ದ್ದರು.

ಕ್ರಿ.ಶ. ೧೩೨೩ರ ಮುಡಿಗೊಂಡರ ಶಾಸನದ[೨೧] ಹೊತ್ತಿಗೂ ಕೂಡ ಮುಡಿಗೊಂಡ ಚೋಳಪುರವೆಂಬ ಹೆಸರೇ ಉಳಿದುಕೊಂಡು ಬಂದಿತ್ತು. ಹಾಗೂ ಈ ಹಿಂದೆಯೇ ತಿಳಿಸಿದ ದೇಶಿಯುಯ್ಯಕ್ಕೊಣ್ಣ ಚೋಳಪುರ ಅಥವಾ ಚೋಳಪಟ್ಟಣ ಎಂಬ ಹೆಸರುಗಳೇ ಪ್ರಚಲಿತವಾಗಿತ್ತು. ಈ ಮುಡಿಗೊಂಡ ಚೋಳಪುರದ ವ್ಯಾಪ್ತಿಯಲ್ಲಿ ೧೮ ಪಟ್ಟಣಗಳಿದ್ದವು. ಕ್ರಿ.ಶ. ೧೩೨೭ರ ಹಳೇ ಆಲೂರಿನ ಶಾಸನವು[೨೨] ಕೂಡ ಮುಡಿಗೊಂಡ ಚೋಳನಮಂಡಲದಲ್ಲಿರುವ ಗಂಗೈಕೊಂಡ ಚೋಳ ವಳನಾಡಿನಲ್ಲಿದ್ದ ತಡಿನಾಡಿನಲ್ಲಿ ಆಲೂರಿತ್ತು ಎಂಬುದನ್ನು ತಿಳಿಸುತ್ತದೆ. ಅಂದರೆ ೧೪ನೆಯ ಶತಮಾನದ ಆರಂಭದಲ್ಲಿಯೂ ಮುಡಿಗೊಂಡವು ಮಂಡಲದ ಪರಿಮಿತಿ ಯನ್ನು ಹೊಂದಿದ್ದು ಅದೇ ಆಡಳಿತವನ್ನು ಮುಂದುವರೆಸಿತ್ತು.

ಆದರೆ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾದ ನಂತರ ರಾಜ್ಯಾಡಳಿತದಲ್ಲಿ ಆಮೂಲಾಗ್ರಬದಲಾವಣೆಗಳು ಕಂಡುಬಂದವು. ಚೋಳರ ಕಾಲದಿಂದಲೂ ರೂಢಿಗೆ ಬಂದಿದ್ದ ಮಂಡಲದ ಕೇಂದ್ರ ವ್ಯವಸ್ಥೆಗೆ ಪರ್ಯಾಯವಾಗಿ ವಿಜಯನಗರದ ಅರಸರು ರಾಜ್ಯವ್ಯವಸ್ಥೆಯನ್ನು ಪರಿಚಯಿಸಿ ದರು. ಈಗಾಗಲೇ ಮಂಡಲ ಕೇಂದ್ರಗಳಾಗಿ ಮೆರೆದ ಭಾಗ ಗಳನ್ನು ಬೇಕಂತಲೇ ಮೂಲೆಗೆ ಸರಿಸಿ ಹೊಸ ರಾಜ್ಯಗಳ ಸ್ಥಾಪನೆಗೆ ಮುಂದಾದರು ಆರಂಭದಿಂದಲೂ ಕುಡುಗು ನಾಡಿನ[೨೩] ಕೇಂದ್ರವಾಗಿದ್ದ ತೆರೆಕಣಾಂಬಿಯನ್ನು[೨೪] ಒಂದು ವಿಸ್ತಾರವಾದ ರಾಜ್ಯವನ್ನಾಗಿ ರೂಪಿಸಿ ಇದುವರೆವಿಗೂ ಮುಡಿಗೊಂಡ ಚೋಳ ಮಂಡಲದಲ್ಲಿ ಅಂತರ್ಗತವಾಗಿದ್ದ ಎಲ್ಲ ನಾಡುಗಳನ್ನು ಇದರಲ್ಲಿ ಸಮಾವೇಶಗೊಳಿಸಲಾಯಿತು. ಆರಂಭದಲ್ಲಿ ಹಲಕೆಲವು ರಾಜ್ಯಗಳನ್ನು ರೂಪಿಸಲು ಹೊರಟ ವಿಜಯನಗರದ ಅರಸರು ಪರಿಸ್ಥಿತಿಯ ಅನುಕೂಲಕ್ಕೆ ತಕ್ಕಂತೆ ಅವಶ್ಯಕತೆಗೆ ತಕ್ಕಂತೆ ವ್ಯಾಪಾರದ ತೀವ್ರತೆಯಿರುವ ಭಾಗಗಳನ್ನು ಮಾತ್ರ ರಾಜ್ಯಗಳಾಗಿ ಉಳಿಸಿಕೊಂಡು ಮಿಕ್ಕವುಗಳನ್ನು ಅದರ ಉಪ ವಿಭಾಗಗಳಾದ ಸ್ಥಳಗಳನ್ನಾಗಿಯೋ ಸೀಮೆಗಳ ನ್ನಾಗಿಯೇ ಮರುರೂಪಿಸಿದರು.

ಕ್ರಿ.ಶ. ೧೩೫೪ರ ಹೊತ್ತಿಗೆ ಮುಡಿಗೊಂಡವು ತನ್ನ ಸ್ಥಾನವನ್ನು ಕಳೆದುಕೊಂಡ ಸಂಗತಿಯನ್ನು ಕಾಮಗೆರೆಯ ಶಾಸನವು[೨೫] ತಿಳಿಸುತ್ತದೆ. ಈ ಶಾಸನವು ಬಂಡೆಹಳ್ಳಿಯ ರಾಜ್ಯದಲ್ಲಿ ಕಂತೆರಾಜ ತಲ್ರಣವಿದ್ದ ಸಂಗತಿಯನ್ನು ತಿಳಿಸುತ್ತದೆ. ಈ ಕಂತೆ ರಾಜ ಪಟ್ಟಣವೆಂದರೆ ಮುಡಿಗೊಂಡ ಮಾಂಬಳ್ಳಿಯ ದೆಸೆಗಳೇ ಆಗಿದ್ದವು. ಈ ಮುಡಿಗೊಂಡ ಮಾಂಬಳ್ಳಿಯ ರಸ್ತೆಯಲ್ಲಿ ವೋಡಿಹಳ್ಳಿ, ಸಿಂಗಣನಲ್ಲೂರು ಎಂಬ ಗ್ರಾಮಗಳಿದ್ದವೆಂದು ತಿಳಿಸುತ್ತದೆ. ಅಂದರೆ ವಿಸ್ತಾರವಾದ ಮಂಡಲದ ಕೇಂದ್ರಸ್ಥಾನದಲ್ಲಿದ್ದ ಮುಡಿಗೊಂಡವು ಚೋಳರು ಹಾಗೂ ಹೊಯ್ಸಳರ ಕಾಲದಲ್ಲಿ ಮೆರೆದಂತೆ ಅಧಿಕಾರ ಕೇಂದ್ರವಾಗಿ ಮುಂದುವರೆಯದೆ ವಿಜಯನಗರದ ಅರಸರ ಕಾಲದಲ್ಲಿ ಕೇವಲ ಒಂದು ಸ್ಥಳವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾಯಿತು. ಇದಕ್ಕೆ ಉದಾಹರಣೆಯಾಗಿ ಕ್ರಿ.ಶ. ೧೫೪೪ರ ಕೆಂತನಪಾಳ್ಯದ ಶಾಸನವು[೨೬] ಮುಡುಗುಂಡದ ಸ್ಥಳವನ್ನು ಹೆಸರಿಸುತ್ತದೆ. ಕೋಟೆ, ಬೋಗರ ಪುರ, ನಾಗದೇವಪುರ ಹಾಗೂ ಜಕ್ಕಹಳ್ಳಿಗಳು ಈ ಮುಡುಗೊಂಡರ ಸ್ಥಳದಲ್ಲಿದ್ದವು ಎಂದು ಈ ಶಾಸನ ತಿಳಿಸುತ್ತದೆ. ತಮಿಳುಮಯವಾಗಿದ್ದ ಹೆಸರುಗಳು, ಅಧಿಕಾರಿಗಳು, ಕೇಂದ್ರಗಳು ಎಲ್ಲವೂ ಈಗ ಕನ್ನಡಮಯವಾಗಿರುವುದನ್ನು ಗಮನಿಸಲೇಬೇಕಾಗುತ್ತದೆ.

ಮುಡುಗುಂಡದ ಉಲ್ಲೇಖಗಳು ನಂತರದ ಕಾಲಘಟ್ಟದಲ್ಲಿಯೂ ಕಂಡುಬರುತ್ತದೆ. ಆದರೆ ಕೇವಲ ಒಂದು ಗ್ರಾಮವಾಗಿ ಮಾತ್ರ ಅದು ತೋರುತ್ತದೆ. ಉದಾಹರಣೆಗೆ ಕ್ರಿ.ಶ. ೧೭೪೪ರ ಹೊರರನಹಳ್ಳಿಯ ಶಾಸನದಲ್ಲಿ[೨೭] ಉಕ್ತವಾಗಿರುವಂತೆ ಮುಡಗುಂಡವು ತನ್ನ ಸ್ಥಳದ ಅಧಿಕಾರವನ್ನು ಸಹ ಕಳೆದುಕೊಂಡು ಸತ್ಯಗಾಲದ ಸ್ಥಳದಲ್ಲಿ ಅಂತರ್ಗತವಾಗಿದ್ದ ಸಾಮಾನ್ಯರ ಒಂದು ಗ್ರಾಮವಾಗಿತ್ತು. ಈ ಶಾಸನವು ಕಾವೇರಿ ಮತ್ತು ಕಪಿಲ ಸಂಗಮ ವಂಶದ ಹತ್ತಿರವಿರುವ ಹಂಪಾಪುರಕ್ಕೆ ವೆಂಕಟರಾಮ ಸಮುದ್ರ ಎಂಬ ಪ್ರತಿನಾಮವಿದ್ದುದನ್ನ ತಿಳಿಸಿ ಈ ಹಂಪಾಪುರದ ಎಲ್ಲೆಗಳನ್ನು ತಿಳುಸುವಾಗ ಮುಡುಗೊಂಡವನ್ನು ಕೇವಲ ಉಲ್ಲೇಖಿಸುತ್ತದೆ.

## ಮುಡಿಗೊಂಡ ಚೋಳ ಮಂಡಲದ ಅಧಿಕಾರಿಗಳು

ಚೋಳರ ಆಡಳಿತ ವ್ಯವಸ್ಥೆಯಲ್ಲಿ ಅಪರಿಮಿತವಾದ ಸೇನಾ ವ್ಯವಸ್ಥೆಯಿದ್ದಂತೆಯೇ ತಮಿಳು ನಿಷ್ಟೆ, ಚೋಳ ನಿಷ್ಟೆ ಅಧಿಕಾರಿಗಳಿದ್ದರು. ಅವರು ಕನ್ನಡ ನಾಡಿನಲ್ಲಿರಲಿ, ಆಂಧ್ರದಲ್ಲಿರಲಿ ಎಲ್ಲೆಲ್ಲೂ ಅವರ ಹುದ್ದೆಗಳ ಹೆಸರುಗಳಿಂದ ಹಿಡಿದು ವ್ಯಕ್ತಿನಾಮಗಳಿಂದ ಹಿಡಿದು ಅಧಿಕಾರವಲಯದವರೆಗೆ, ಪ್ರತಿಯೊಂದು ತಮಿಳು ಮಯವಾಗಿಯೇ ಇತ್ತು.

ಎಲ್ಲ ಅಧಿಕಾರಿಗಳೂ 'ಕರುವಿಗಳಂ' ಹಾಗೂ ಪಣಿಮಕ್ಕಳ್ ಎಂಬ ಹೆಸರುಗಳೇ ಇದ್ದವು. ಚೋಳರ ಇನ್ನಿತರ ಅಧಿಕಾರಿಗಳೆಂದರೆ ವಿಡೈಯಲ್ ಅಧಿಕಾರಿ, ಉಡನ್ ಕೊಟ್ಟಾನ್, ನಾಡುವಿರುಕ್ಕುಮ್, ತಣ್ ಕಾಣಿ, ಮೂಗ ವೆಟ್ಟಿ, ಮೂವೇಂದು ವೇಳಾರ್, ಮಹಾ ಮಾತ್ಯ, ಏರಿಗ ಪತ್ತಿಗಮ್ ಇತ್ಯಾದಿ, ಮುಡಿಗೊಂಡ ಚೋಳ ಮಂಡಲದಲ್ಲಿಯೂ ಇಂತಹ ಅಧಿಕಾರಿಗಳಿದ್ದರು. ಸಭಾ ಮತ್ತು ಮಹಾ ಸಭಾಗಳೆಂಬ ಗ್ರಾಮಮುಖಂಡರೂ ತಮ್ಮ ಅಧಿಕಾರವನ್ನು ಚಲಾಯಿಸುತ್ತಿದ್ದರು. ಎಲ್ಲ ಮುಖ್ಯ ಅಧಿಕಾರಿಗಳೂ ತಮ್ಮನ್ನು ತಾವು ಚೋಳರಾಜರ ಹೆಸರಿನಿಂದಲೂ ಬಿರುದುಗಳಿಂದಲೂ ಗುರುತಿಸಿಕೊಳ್ಳುತ್ತಿದ್ದರು.

ಒಂದನೆಯ ರಾಜೇಂದ್ರ ಚೋಳನ ನಾಲ್ಕನೇ ವರ್ಷದ ಆಡಳಿತದಲ್ಲಿ ೨ ಕಂಡುಗ ೧೦ ಬಳ್ಳಗಳ ಭೂಮಿಯನ್ನು ಮಾರಿದ ಇಡ್ಯೆನಾಡಿಗೆ ಸೇರಿದ ಸೊತ್ತಿಯೂರಿನ ಸಭಾವು ಇದರ ಬೆಲೆಗೆ ೩ ಕಳಂಜು ಚಿನ್ನವನ್ನು ಕೊಂಡುಕೊಂಡು ಅದನ್ನು ಸೊತ್ತಿಯೂರಿನ ಸುತ್ತೂರು ಇಂದಿನ ತೇವನಾಡು ವೇಳನ್‌ಗೆ ಬ್ರಹ್ಮದಾಯವಾಗಿ ನೀಡಿದರು[೨೮]

ಒಂದನೆಯ ರಾಜೇಂದ್ರ ಚೋಳನ ೧೦ನೇ ವರ್ಷದ ಆಳ್ವಿಕೆಯಲ್ಲಿ (೧೦೨೧-೨೨) ಅವನ ಸೇನಾಪತಿಯಾದ ರಾಜೇಂದ್ರ ಚೋಳ ಜಯಮೂರ್ ನಾಡಾಳ್ವೆನಾದ ಕುರುವನ್ ಉಲಗಳಿಂಡಾನ್ ಎಂಬ ವ್ಯಕ್ತಿಯು ಉಲ್ಲೇಖ ತಡಿಮಾಲಿಂಗಿಯ ಶಾಸನದಲ್ಲಿದೆ[೨೯]

ಎರಡನೆಯ ರಾಜೇಂದ್ರ ಚೋಳನ ೧೨ನೇ ವರ್ಷದ ಆಳ್ವಿಕೆಯಲ್ಲಿ (೧೫.೨.೧೦೬೩) ನಡೆದ ಯುದ್ಧವೊಂದನ್ನು ಗುಜ್ಜಪ್ಪನ ಹುಂಡಿಯ ಶಾಸನವು[೩೦] ತಿಳಿಸುತ್ತದೆ. ಮುಡಿಗೊಂಡ ಚೋಳ ಮಂಡಲಕ್ಕೆ ಸೇರಿದ ನವಲೆನಾಡಿನ ಕೊಳಿಗಾಲದ ಸಂಗಯ್ಯನನ್ನು ಕರೆಯೂರಿನ ನಾಗಯ್ಯನು ಯುದ್ಧದಲ್ಲಿ ಕೊಂದನು. ಇದಕ್ಕೆ ಪ್ರತಿಯಾಗಿ ಹದಗ ಕುಲರ ಗಂಗಗೊಂಡರ ಮಗ ರಾಚಗೊಂಡನು ಈ ನಾಗಯ್ಯನನ್ನು ಕೊಂದನು ಈ ಸಂದರ್ಭದಲ್ಲಿ ನಾಡಗಂಡರಾದಿತ್ಯ ಚೋಳಗಾಮುಂಡ ಕೇತಚಾರಿಗೆ ಹಣವನ್ನು ಕೊಟ್ಟು ಭೂಮಿಯನ್ನು ಕೊಂಡು ವೀರಹಣವನ್ನು ಈತನಿಗೆ ನೀಡಲಾಗಿದೆ. ಈ ಶಾಸನ ಮೊದಲು ತಮಿಳಿನಲ್ಲಿ ಈ ಸಂಗತಿಯನ್ನು ತಿಳಿಸಿ ಮುಂದುವರೆದು ಕನ್ನಡದಲ್ಲೂ ಇದೇ ಸಂಗತಿಯನ್ನು ತಿಳಿಸುತ್ತದೆ.

ಕೆಂಪನಪುರದ ಶಾಸನವು[೩೧] ಮುಡಿಗೊಂಡ ಚೋಳಮಂಡಲದ ಗಂಗೈಕೊಂಡ ಚೋಳ ವಳನಾಡಾದ ಪದಿನಾಡಿನಲ್ಲಿರುವ ವೇಲೂರನ್ನು ರಾಜಾಧಿರಾಜ ಚತುರ್ವೇದಿ ಮಂಗಲವಾಗಿ ರೂಪಿಸಿದಾಗ ಇದ್ದ ಹಲವಾರು ಅಧಿಕಾರಿಗಳನ್ನು ಪ್ರಸ್ತಾಪಿಸುತ್ತದೆ. ಶಾಗ್ಯಂ ಶಾಸನವು[೩೨] ಕ್ರಿ.ಶ. ೧೦೪೫ಕ್ಕೆ

ಸೇರಿದ್ದು ಇದು ಕುಂದು ನಾಡು ಹಾಗೂ ತೊಡನೂರು ನಾಡಿನ ಗಾವುಂಡನಾದ ರಾಜೇಂದ್ರ ಚೋಳ ಗಾಮುಂಡನನ್ನು ಉಲ್ಲೇಖಿಸುತ್ತದೆ. ತನ್ನ ಒಡೆಯನ ಹೆಸರನ್ನೆ ಈ ಗಾಮುಂಡನು ಇಟ್ಟುಕೊಂಡಿದ್ದಾನೆ. ಈತನ ಹೆಸರು ಬಹುಶಃ ಈ ಶಾಸನ ಪ್ರಸ್ತಾಪಿಸುವ ಕಾರ್ಯೆಕುಂಡಿಯನ್ ಇರಬೇಕು.

ಕ್ರಿ.ಶ. ೧೦೫೮ರ ಹರೇ ಆಲೂರಿನ ಶಾಸನವು[೩೩] ಗಂಗೈಕೊಂಡ ಚೋಳ ವಳನಾಡಿನಲ್ಲಿದ್ದ ಪದಿನಾಡಿನಲ್ಲಿ ಕೋಮುಮ್ಮಾನ ಚೋಳ ವಿಚ್ಚಾದಿರ ನಲ್ಲೂರಿನ ಗಾಮುಂಡ ರಾದ ಎಂಬ ಪೆರ್ಮಾನ್ ಹಾಗೂ ಕುಂಡಣಲೇಗನ್ ಎಂಬುವವರನ್ನು ಪ್ರಸ್ತಾಪಿಸುತ್ತದೆ.

ಹೊಯ್ಸಳರ ಅಧೀನರಾಗಿಯೂ ಅನೇಕ ಅಧಿಕಾರಿ ಗಳು ಮುಡಿಗೊಂಡ ಚೋಳ ಮಂಡಲದಲ್ಲಿದ್ದರು. ಪಾಲ್ಯಂ ಶಾಸನದ[೩೪] ಪ್ರಕಾರ ಹೊಯ್ಸಳ ವೀರ ನರಸಿಂಹನ ಕಾಲದಲ್ಲಿ ಗಂಗೈಕೊಂಡ ಚೋಳ ವಳನಾಡಿಗೆ ಸೇರಿದ ತೇನ್‌ಕುಂದ ನಾಡಿನ ನಾಡಗಾವುಂಡನಾಗಿದ್ದವನು ಗಂಗಾಧಿರಾಜನ್ ಕುಂದುನಾಡಾಳ್ವನ್. ಈತನು ವಿಷ್ಣುವಿನ ಪರಮಭಕ್ತನಾಗಿದ್ದನು. ಈ ಶಾಸನವು ಪಮ್ಮಗಾವುಂಡನನ್ನು ಕೂಡ ಪ್ರಸ್ಥಾಪಿಸುತ್ತದೆ.

ಮುಡಿಗೊಂಡದ ಹೊಯ್ಸಳ ವೀರಬಲ್ಲಾಳನ ಕ್ರಿ.ಶ. ೧೧೮೯ ರ ಶಾಸನವು[೩೫] ಚೊಕ್ಕಾಂಡ ಪೆರ್ಗಡೆ ಅಲಿಯಾಸ್ ಶ್ರೀನಿವಾಸದಾಸನನ್ನು ಹೆಸರಿಸುತ್ತದೆ. ಈತನು ದೇಸಿಲುಯ್ಯ ಕೊಂಡ ಚೋಳ ಪಟ್ಟಣದ ಅಧಿಕಾರಿಯಾಗಿದ್ದನು. ಹೊನ್ನೂರಿನ ಕ್ರಿ.ಶ. ೧೧೯೧ರ ಶಾಸನವು[೩೬] ವೀರಬಲ್ಲಾಳನ ಅಧೀನವಾಗಿ ಅಬಾಧಿರುಣ ಗಾಮುಂಡ ಆತನ ಮಗನಾದ ವಾರಗಾವುಂಡ ಹಾಗೂ ಹೆರಬಡ್ಡೆ ಪಾಚಾಕ್ಕು ಗಾಮುಂಡನನ್ನು ಉಲ್ಲೇಖಿಸುತ್ತದೆ. ಕುಲೇಶ್ವರ ದೇವರಿಗೆ ನೀಡಲಾದ ದಾನದಲ್ಲಿ ಈ ಅಧಿಕಾರಿಗಳ ಪಾಲೂ ಇದೆ.

ಯರಿಯೂರಿನ ಕ್ರಿ.ಶ. ೧೧೯೬ರ ಶಾಸನವು[೩೭] ವೀರಬಲ್ಲಾಳನ ಪರವಾಗಿ ಮುಡಿಗೊಂಡ ಚೋಳಮಂಡಲದ ಗಂಗೈಕೊಂಡ ಚೋಳ ವಳನಾಡಿಗೆ ಸೇರಿರುವ ಪದಿನಾಡಿನಲ್ಲಿ ಉತ್ತಮಚೋಳ ನಲ್ಲೂರನ್ನು ಸ್ಥಾಪಿಸಲಾಯಿತು ಈ ಕೆಲಸವನ್ನು ನೆರವೇರಿಸಿದ ಅಧಿಕಾರಿ ಕುಂಡ್ಯೆಯಾಮಾಣನ್.

೧೧ನೇ ಶತಮಾನದ ಮುಡಿಗೊಂಡದ ಶಾಸನವು[೩೮] ಮುಡಿಗೊಂಡ ಚೋಳ ಮಂಡಲದ ಅಧಿಕಾರಿಗಳಾದ ವಿಟಂಕದೇವ ಹಾಗೂ ನಂಬಿ ಕಟ್ಟಿಯಾರರನ್ನು ಉಲ್ಲೇಖಿ ಸುತ್ತದೆ. ಕ್ರಿ.ಶ. ೧೧೮೯ರ ಮುಡಿಗೊಂಡದ ಶಾಸನವು[೩೯] ಹೊಯ್ಸಳ ದೊರೆ ವೀರಬಲ್ಲಾಳನ ಕಾಲದಲ್ಲಿ ದೇಸಿ ಪೆರುವಾಳೆ ದೇವಾಲಯಕ್ಕೆ ದಾನವನ್ನು ನೀಡುವ ಸಂದರ್ಭದಲ್ಲಿ ಚೊಕ್ಕಾಂಡ ಪೆರ್ಗ್ಗಡೆಯಾದ ಶ್ರೀವೈಷ್ಣವ ದಾನವನ್ನು ಹೆಸರಿಸುತ್ತದೆ. ಕ್ರಿ.ಶ. ೧೧೯೦ರ ಶಾಸನವು[೪೦] ಮುಡಿಗೊಂಡ ಚೋಳಪುರದ ಅಧಿಕಾರಿ ದಾಸಯ ನಾಯಕನನ್ನು, ಸೇನಾಪತಿ ಅಗತ್ತಿಯಾಂಡಿನಾಯಕನನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದ ಶಾಸನ ವೊಂದು[೪೧] ಸೋಡಿವೆಳನ್ ದಿವಸನಾಗ ನಂಬಿಯು ಕಣ್ಣಿವಳ್ಳಿಯ ಒಡೆಯನಾಗಿದ್ದನು ಎಂಬ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೨೧೦ರಲ್ಲಿ[೪೨] ವೀರಬಲ್ಲಾಳನ ಮಹಾಪ್ರಧಾನ ಪರಿಯ ದಣ್ಣಾಯಕ ಹಾಗೂ ಸೋವಣ್ಣ ದಣ್ಣಾಯುಕರು ಮುಡಿಗೊಂಡ ಚೋಳಮಂಡಲದ ದಂಡನಾಯಕರಾಗಿದ್ದರು ಎಂಬ ಅಂಶ ತಿಳಿಯುತ್ತದೆ. ಮುಡಿಗೊಂಡ ಚೊಳಮಂಡಲದ ಇತಿಹಾಸದಲ್ಲಿ ಮೊದಲನೆಯ ಬಾರಿಗೆ ದಂಡನಾಯಕರ ಉಲ್ಲೇಖ ಬರುವುದು ಇಲ್ಲಿಯೇ ಮುಂದೆ ಮುಡಿಗೊಂಡ ಚೋಳ ಮಂಡಲದ ದಂಡನಾಯಕನಾದವನು ಶ್ರಿರಂಗ ದಣ್ಣಾಯಕ ಕ್ರಿ.ಶ. ೧೨೨೯ರ ಮುಡಿಗೊಂಡ ಶಾಸನವು[೪೩] ಈತನನ್ನು ಪ್ರಸ್ತಾಪಿಸುತ್ತದೆ.

ವೀರಸೋಮೇಶ್ವರನ ಕಾಲದ ಕ್ರಿ.ಶ. ೧೨೩೭ರ ಶಾಸನವು[೪೪] ವೇಳೂರ ಉಡ್ಯೆಯಾನ್ ಹಾಗೂ ಮಂಡಲ ಸ್ವಾಮಿಯಾಗಿದ್ದ ಆಳ್ವಾಂಡ್ಯೆ ಪೆರ್ಗಡಿಯನ್ನು ಉಲ್ಲೇಖಿಸುತ್ತದೆ. ಈತ ಬೋಗ್ಯದ ಭೂಮಿಗೆ ಸಂಬಂಧಿಸಿದ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದ. ಇದೇ ವೀರ ಸೋಮೇಶ್ವರನ ಕಾಲದ ೧೨೩೮ರ ಶಾಸನವು[೪೫] ಮುಡಿಗೊಂಡ ಚೋಳಮಂಡಲದ ಕೋಡ್ಯೆ ಆಶ್ವಾನ್, ಎಡುತ್ತಗ್ಯೆ ಅಳಗಿಯಾನ್ ಹಾಗೂ ಚಂಗಟ್ಟಲಗನ್ ಎಂಬ ಮೂರು ಜನ ಅಧಿಕಾರಿಗಳನ್ನು ಪರಿಚಯಿಸುತ್ತದೆ.

**ಅಗ್ರಹಾರಗಳು**

ಮುಡಿಗೊಂಡ ಚೋಳಮಂಡಲದಲ್ಲಿ ಅಗ್ರಹಾರಗಳನ್ನು ದೇವಾಲಯಗಳನ್ನು ನಿರ್ಮಿಸಿ ಈ ಧಾರ್ಮಿಕ ವ್ಯವಸ್ಥೆಯನ್ನು ಬಲಗೊಳಿಸಿದರು. ಅಗ್ರಹಾರಗಳನ್ನು ನಿರ್ಮಿಸುವಾಗ ನಾಲ್ಕು ವೇದಗಳನ್ನು ಬಲ್ಲ ಬ್ರಾಹ್ಮಣರನ್ನು ಆದಷ್ಟು ಮಟ್ಟಿಗೆ ತಮಿಳುನಾಡಿನಿಂದ ಕರೆಸಿಕೊಂಡು ಅವರಿಗೆ ಇಲ್ಲಿ ನೆಲೆಯನ್ನು ಕಲ್ಪಿಸಿ ಚತುರ್ವೇದಿ ಮಂಗಲಗಳನ್ನು ಚೋಳ ಅಧಿಕಾರಿಗಳು ಸ್ಥಾಪಿಸಿದರು. ಕ್ರಮೇಣ ಇಲ್ಲಿನ ಎಲ್ಲ ಧಾರ್ಮಿಕ ಕೇಂದ್ರಗಳ ನಿರ್ವಹಣೆ ಈ ರೀತಿಯವರ ಬಳಿಯೇ ಇದ್ದುದಕ್ಕೆ ಶಾಸನಗಳಲ್ಲಿ ಆಧಾರಗಳಿವೆ.

ಚೋಳರ ನಂತರ ಹೊಯ್ಸಳರೂ ಸಹ ಇದೇ ರೀತಿಯ ಚತುರ್ವೇದಿ ಮಂಗಲಗಳನ್ನು ರೂಪಿಸುತ್ತಾ ಸಾಗಿದ್ದು ಮಾತ್ರ

ದುರದೃಷ್ಟಕರವಾದ ಸಂಗತಿಯಾಗಿದೆ. ಹೊಯ್ಸಳರ ಕಾಲದಲ್ಲಿಯೂ ಹೊಯ್ಸಳ ಸಂಸ್ಥಾನದ ಸಂಪತ್ತು ಉಪಯೋಗಿಸಿಕೊಂಡು ಕೂಡ ಹಲವು ಬಾರಿ ಚೋಳರಸರ ಹೆಸರುಗಳಲ್ಲಿ ಚತುರ್ವೇದಿ ಮಂಗಲಗಳನ್ನು ರೂಪಿಸುತ್ತಾ ಸಾಗಿದರು. ಹೊಯ್ಸಳ ಅರಸರು ಯಾರೂ ಈ ಪ್ರಕ್ರಿಯೆಯನ್ನು ಪ್ರತಿಭಟಿಸಲೇ ಇಲ್ಲ. ಹಾಗೂ ತಮ್ಮ ಹೆಸರಿನಲ್ಲಿ ಒಂದೇ ಒಂದು ಚತುರ್ವದಿ ಮಂಗಲವನ್ನು ಕೂಡ ಮುಡಿಗೊಂಡ ಚೋಳಮಂಡಲದಲ್ಲಿ ಸ್ಥಾಪಿಸಲೂ ಇಲ್ಲ.

ಕೆಂಪನಪುರದ ರಾಜೇಂದ್ರಚೋಳನಿಗೆ ಸಂಬಂಧಿಸಿದ ಶಾಸನವೊಂದು[೪೬] ಈ ಪ್ರಾಂತ್ಯದಲ್ಲಿ ಚತುರ್ವೇದಿಮಂಗಲವನ್ನು ಸ್ಥಾಪಿಸಿದ ಸಂಗತಿಯನ್ನು ತಿಳಿಸುವ ಮೊದಲ ಶಾಸನವಾಗಿದೆ. ಕ್ರಿ.ಶ. ೧೦೧೮ರಿಂದ ೧೦೫೪ ರ ವರೆಗೆ ಈತನ ಆಳ್ವಿಕೆಯ ಕಾಲವಾಗಿದೆ. ಈ ಶಾಸನವು ಬಹುಶಃ ಇದೇ ಕೆಂಪನಪುರವನ್ನು ರಾಜಾಧಿರಾಜ ಚತುರ್ವೇದಿ ಮಂಗಲವಾಗಿ ರೂಪಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೫೮ಕ್ಕೆ ಸೇರಿದ ಹಳೇ ಆಲೂರಿನ ಶಾಸನವು[೪೭] ಈ ಆಲೂರನ್ನು ಕೊಮುಮ್ಮಾನ ಶೋಳಚ್ಚಾದಿರ ನಲ್ಲೂರು ಎಂದು ಮರುನಾಮಕರಣ ಮಾಡಿದ ಸಂಗತಿಯನ್ನು ತಿಳಿಸುತ್ತದೆ.

ಹರಳುಕೋಟೆಯ ಕ್ರಿ.ಶ. ೧೧೬೭ಕ್ಕೆ ಸೇರಿದ ಶಾಸನವು[೪೮] ಹಟ್ಟಲ ಎಂಬ ಗ್ರಾಮವನ್ನು ಕೇರಳಾಂತಕ ಚತುರ್ವೇದಿಮಂಗಲವನ್ನಾಗಿ ರೂಪಿಸಿದ್ದನ್ನು ತಿಳಿಸುತ್ತದೆ. ಈ ಹಟ್ಟಲವೇ ಇಂದಿನ ಹರಳುಕೋಟೆಯಾಗಿದೆ. ಹೊನ್ನೂರಿನ ಕ್ರಿ.ಶ. ೧೧೯೧ರ ಶಾಸನವು[೪೯] ಹೊಯ್ಸಳ ವೀರಬಲ್ಲಾಳನ ಕಾಲವಾಗಿದ್ದು ಈ ಶಾಸನವು ಕೊಳ್ಳೇಗಾಲವನ್ನು ತುಳುವಲ ಮಹಾದೇವಿ ಚತುರ್ವೇದಿ ಮಂಗಲವೆಂದು ಕರೆದಿದ.

ಯರಿಯೂರಿನ ಕ್ರಿ.ಶ. ೧೧೯೬ರ ಶಾಸನವು[೫೦] ವೀರಬಲ್ಲಾಳನ ಕಾಲದಲ್ಲಿಯೂ ಮರ್ರೈಯೂರನ್ನು ಉತ್ತಮಚೋಳ ನಲ್ಲೂರು ಎಂದು ಮರುನಾಮಕರಣ ಮಾಡಿರುವುದನ್ನು ಗಮನಿಸಿದರೆ ಇಲ್ಲಿನ ಚೋಳ ಅಧಿಕಾರಿಗಳ ಮರ್ಮವನ್ನು ಅರಿಯಬಹುದಾಗಿದೆ ಹೊಯ್ಸಳ ದೊರೆಯ ಕಾಲದಲ್ಲಿ ಆತನ ಹೆಸರನ್ನು ಹೇಳಿ ನಂತರ ಚೋಳದೊರೆಯ ಹೆಸರಿನಲ್ಲಿ ಊರೊಂದನ್ನು ಸ್ಥಾಪಿಸಿರುವುದು ವಿಪರ್ಯಾಸವಲ್ಲವೇ? ಈ ಮರ್ರೈಯೂರಿನ ಇಂದಿನ ಹೆಸರೇ ಯರಿಯೂರು.

ಇದೇ ರೀತಿ ಮೂರನೆಯ ನರಸಿಂಹನ ಕಾಲದ ಅಂಬಳೆಯ ಶಾಸನವು[೫೧] ಅಂಬಳೆಯನ್ನು ಅರುಳ್ವಿ ಎಂದು ಕರೆದು ಇದನ್ನು ಚೋಳೇಂದ್ರಸಿಂಹ ಚತುರ್ವೇದಿ ಮಂಗಲವನ್ನಾಗಿ ರೂಪಿಸಿದ ಸಂಗತಿಯನ್ನು ತಿಳಿಸುತ್ತದೆ. ಅಂತೆಯೇ ಮದ್ದೂರಿನ ಶಾಸನವು[೫೨] ಈ ಮದ್ದೂರನ್ನು ಪೆರುಮರುದೂರು ಎಂದು ಕರೆಯುತ್ತದೆ. ಈ ಪೆರುಮರುದೂರನ್ನು ಶ್ರಿಶವನಮಾದೇವಿ ಚತುರ್ವೇದಿ ಮಂಗಲ ಎಂದು ಕರೆದಿದೆ. ಅಂತೆಯೇ ಮುಳ್ಳೂರಿನ ಶಾಸನವು[೫೩] ವೀರಬಲ್ಲಾಳನ ಕಾಲದಲ್ಲಿ ಮುಳ್ಳೂರನ್ನು ವಿಜ್ಯಳರಾಳ ಚತುರ್ವೇದಿ ಮಂಗಲವನ್ನಾಗಿ ರೂಪಿಸಿದ ಸಂಗತಿಯನ್ನು ತಿಳಿಸುತ್ತದೆ.

ಯಳಂದೂರಿನ ಶಾಸನವು[೫೪] ಕ್ರಿ.ಶ. ೧೨೬೬ಕ್ಕೆ ಸೇರಿದ್ದು ಹೊಯ್ಸಳ ದೊರೆ ವೀರನರಸಿಂಹನ ಕಾಲದ್ದಾಗಿದೆ. ಈ ಶಾಸನವು ಯಳಂದೂರನ್ನು ರಾಜಕೇಸರಿ ನಲ್ಲೂರು ಎಂದು ಮರುನಾಮಕರಣ ಮಾಡಿದ ವಿಷಯವನ್ನು ತಿಳಿಸಿದರೆ ಕ್ರಿ.ಶ. ೧೨೯೪ರ ಆಲೂರಿನ ಶಾಸನವು[೫೫] ಆಲೂರನ್ನು ಅರಸುಗಂಡರಾಮ ಚತುರ್ವೇದಿ ಮಂಗಲವನ್ನಾಗಿ ರೂಪಿಸಿದ್ದನ್ನು ತಿಳೀಸುತ್ತದೆ.

ಇದರಂತೆಯೇ ಇನ್ನಿತರ ಅಗ್ರಹಾರಗಳು ಈ ಪ್ರಾಂತ್ಯದ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಇವುಗಳಲ್ಲಿ ಯಳಂದೂರು ತಾಲೂಕಿನ ಗಣಿಗ ನೂರು ಶಾಸನ ತಿಳಿಸುವ[೫೬] ತಿರುವರಂಗ ನಾರಾಯಣ ಚತುರ್ವೇದಿ ಮಂಗಲಿ. ಇದು ಗಣಿಗ ನೂರನ್ನು ೧೩ನೆಯ ಶತಮಾನದಲ್ಲಿ ಪರಿವರ್ತಿಸಿ ಮರುನಾಮಕರಣ ಮಾಡಿದ್ದಂತಾಗಿದೆ. ಅಗರದ ಶಾಸನ[೫೭] ತಿಳಿಸುವ ವಿರುದರಾಜ ಭಯಂಕರ ಚತುರ್ವೇದಿ ಮಂಗಲ ಹೊಮ್ಮದ ಶಾಸನ[೫೮] ತಿಳಿಸುವ ಅಕಳಂಕ ಚತುರ್ವೇದಿ ಮಂಗಲಗಳು ಪ್ರಮುಖವಾದವುಗಳು.

ಈ ಚತುರ್ವೇದಿಮಂಗಲಗಳನ್ನು ಹೊರತುಪಡಿಸಿ ಉಳಿದಂತೆ ಹಲವು ಅಗ್ರಹಾರಗಳ ನಿರ್ಮಾಣಗಳೂ ಈ ಕಾಲದಲ್ಲಿ ಆಗಿದ್ದು ಎಲ್ಲವೂ ಇದೇ ರೀತಿ ಚೋಳ ಪಾರಮ್ಯವನ್ನು ಎತ್ತಿಹಿಡಿಯುತ್ತದೆ.



## ಆಧಾರಸೂಚಿ


೧. ಎಪಿಗ್ರಾಫಿಯೂ ಕರ್ನಾಟಕ [ಎ.ಕ], ಸಂಪುಟ ೪, ಚಾಮರಾಜನಗರ, ೧೪೫.

೨. ಅದೇ, ಚಾಮರಾಜನಗರ, ೧೬೭.

೩. K.A. Nilakanta Sastri, The colas, University of Madras, 1955.

೪. ಎಕ ೪, ಕೊಳ್ಳೇಗಾಲ, ೭೩.

೫. ಎಕ ೪, ಚಾಮರಾಜನಗರ ೩೧೦.

೬. ಎಕ ೪, ಚಾಮರಾಜನಗರ ೨೫೩.

೭. ಎಕ ೫, ಟಿ. ನರಸಾಪುರ, ೨೩೩.

೮. ಎಕ ೩, ನಂಜನಗೂಡು, ೨೧೩.

೯. ಎಕ ೩, ಹೆಗ್ಗಡದೇವನಕೊಟೆ, ೫೮.

೧೦. ಎಕ ೩, ಹೆಗ್ಗಡದೇವನಕೊಟೆ, ೩೪.

೧೧. ಎಕ ೩, ನಂಜನಗೂಡು ೩೪೮.

೧೨. ಎಕ ೪; ತಿ. ನರಸಿಪುರ, ೭೦.

೧೩. ಎಕ ೩, ಗುಂಡ್ಲುಪೇಟೆ, ೧೦೨.

೧೪. ಎಕ ೪, ಕೊಳ್ಳೆಗಾಲ, ೪೧.

೧೫. ಎಕ ೪, ಚಾಮರಾಜನಗರ, ೩೪೨.

೧೬. ಎಕ ೪, ಯಳಂದೂರು, ೧೮.

೧೭. ಎಕ ೪, ಕೊಳ್ಳೇಗಾಲ, ೫.

೧೮. ಎಕ ೫, ಟಿ. ನರಸಿಪುರ, ೮೭.

೧೯. ಎಕ ೫, ಟಿ. ನರಸಿಪುರ, ೭೦.

೨೦. ಎಕ ೭, ಮಳವಳ್ಳಿ, ೧೦೯.

೨೧. ಎಕ ೪, ಕೊಳ್ಳೇಗಾಲ, ೯೭.

೨೨. ಎಕ ೪, ಚಾಮರಾಜನಗರ, ೧೮೭.

೨೩. ನೋಡಿ, Studies in Karnataka History and Culture, ed: M.V. Shrinivas ಕೃತಿಯಲ್ಲಿನ ಸುಂಕಂ ಗೋವರ್ಧನ ಅವರ 'ಶಾಸನಗಳ ಹಿನ್ನೆಲೆಯಲ್ಲಿ ಕುಡುಗುನಾಡಿನ ಭೌಗೋಳಕ ವ್ಯಾಪ್ತಿ' ಲೇಖನ.

೨೪. ಸುಂಕಂ ಗೋವರ್ಧನ, ತರಕಣಾಂಬಿ ರಾಜ್ಯ, ಇತಿಹಾಸ ದರ್ಶನ, ಸಂ. ಡಾ. ಪಿ.ವಿ. ಕೃಷ್ಣಮೂರ್ತಿ ಮತ್ತು ಡಾ. ಎಂ.ಜಿ. ನಾಗರಾಜ್.

೨೫. ಎಕ ೪, ಕೊಳ್ಳೇಗಾಲ, ೬೨.

೨೬. ಎಕ ೪, ಕೊಳ್ಳೇಗಾಲ, ೮೮.

೨೭. ಎಕ ೪, ಚಾಮರಾಜನಗರ, ೨೯೧.

೨೮. ಎಕ ೩, ನಂಜನಗೂಡು, ೨೧೩.

೨೯. ಎಕ ೫, ಟಿ. ನರಸಿಪುರ, ೨೨೯.

೩೦. ಎಕ ೩, ಹೆಗ್ಗಡದೇವನಕೋಟೆ, ೩೪.

೩೧. ಎಕ ೪, ಚಾಮರಾಜನಗರ, ೧೪೬.

೩೨. ಎಕ ೪, ಕೊಳ್ಳೇಗಾಲ, ೬೫.

೩೩. ಎಕ ೪, ಚಾಮರಾಜನಗರ, ೧೮೬.

೩೪. ಎಕ ೪, ಕೊಳ್ಳೇಗಾಲ, ೪೧.

೩೫. ಎಕ ೪, ಕೊಳ್ಳೆಗಾಲ, ೯೮.

೩೬. ಎಕ ೪, ಯಳಂದೂರು, ೧೮.

೩೭. ಎಕ ೪, ಯಳಂದೂರು, ೩೯.

೩೮. ಎಕ ೪, ಕೊಳ್ಳೇಗಾಲ, ೧೦೩.

೩೯. ಎಕ ೪, ಕೊಳ್ಳೇಗಾಲ, ೯೮.

೪೦. ಎಕ ೪, ಕೊಳ್ಳೇಗಾಲ, ೧೧೩.

೪೧. ಎಕ ೪, ಕೊಳ್ಳೇಗಾಲ, ೧೦೫.

೪೨. ಎಕ ೪, ಕೊಳ್ಳೇಗಾಲ, ೧೧೦.

೪೩. ಎಕ ೪, ಕೊಳ್ಳೇಗಾಲ, ೧೦೯.

೪೪. ಎಕ ೪, ಕೊಳ್ಳೇಗಾಲ, ೯೩.

೪೫. ಎಕ ೪, ಕೊಳ್ಳೇಗಾಲ, ೯೪.

೪೬. ಎಕ ೪, ಚಾಮರಾಜನಗರ, ೧೪೬.

೪೭. ಎಕ ೪, ಚಾಮರಾಜನಗರ, ೧೮೬.

೪೮. ಎಕ ೪, ಚಾಮರಾಜನಗರ, ೨೨೨.

೪೯. ಎಕ ೪, ಯಳಂದೂರು, ೧೮.

೫೦. ಎಕ ೪, ಯಳಂದೂರು, ೩೯.

೫೧. ಎಕ ೪, ಯಳಂದೂರು, ೭.

೫೨. ಎಕ ೪, ಯಳಂದೂರು, ೪೭.

೫೩. ಎಕ ೪, ಕೊಳ್ಳೇಗಾಲ, ೧೬.

೫೪. ಎಕ ೪, ಯಳಂದೂರು, ೯.

೫೫. ಎಕ ೪, ಚಾಮರಾಜನಗರ, ೧೪೯.

೫೬. ಎಕ ೪, ಯಳಂದೂರು, ೧೭೪.

೫೭. ಎಕ ೪, ಯಳಂದೂರು, ೯೫.

೫೮. ಎಕ ೪, ಚಾಮರಾಜನಗರ, ೧೪೮.




# ಕದಂಬ ದೊರೆ ರವಿವರ್ಮ ಮತ್ತು ಮಹಾಮಂಡಳೇಶ್ವರಿ ಚೆನ್ನಭೈರಾದೇವಿಯ ಅಪರೂಪದ ನಾಣ್ಯಗಳು

**ಮಂದರ್ಕೆ ನಿತ್ಯಾನಂದ ಪೈ***

**ಶಾ**ತವಾಹನರ ಪತನಾನಂತರ ಕರ್ನಾಟಕವನ್ನು ಆಳಿದ ಮೊಟ್ಟ ಮೊದಲನೇಯ ಕನ್ನಡ ರಾಜವಂಶವೆಂದು ಪ್ರಸಿದ್ಧವಾಗಿರುವ 'ಕದಂಬ ಕುಉಲ'ವನ್ನು ಕ್ರಿ.ಶ. ೩೨೫ರ ಸುಮಾರಿಗೆ ಮಯೂರಶರ್ಮನು ಸ್ಥಾಪಿಸಿ ಬನವಾಸಿ (ವೈಜಯಂತಿ)ಯಿಂದ ಆಳ್ವಿಕೆಯನ್ನು ಪ್ರಾರಂಭಿಸಿದನು.

ಪದ್ಮಟಂಕ ಮಾದರಿಯ ಚಿನ್ನದ ನಾಣ್ಯಗಳನ್ನು ಕರ್ನಾಟಕದಲ್ಲಿ ಮೊದಲಾಗಿ ಟಂಕಿಸಲು ಪ್ರಾರಂಭಿಸಿದವರು ಬನವಾಸಿ ಕದಂಬರೆಂದು ಸಾಮಾನ್ಯವಾಗಿ ನಂಬಲಾಗಿತ್ತು. ಆದರೆ ಬನವಾಸಿ ಕದಂಬ ರಾಜರುಗಳ ಹೆಸರಿರುವ ಯಾವುದೇ ಪದ್ಮಟಂಕ ಮಾದರಿಯ ಚಿನ್ನದ ನಾಣ್ಯಗಳು ಮತ್ತು ಇನ್ನಿತರ ಲೋಹದ ಯಾವುದೇ ನಾಣ್ಯಗಳು ಇತ್ತೀಚಿನ ವರೆಗೂ ಲಭ್ಯವಾಗಿರಲಿಲ್ಲಾ. ಆದರೆ ೨೦೦೫ನೇ ಇಸವಿಯ ವೇಳೆಗೆ ಬನವಾಸಿ ಸಮೀಪದ 'ವರದಾನದಿ'ಯಲ್ಲಿ ಸಾವಿರಾರು ಸಂಖ್ಯೆಯ ಮಿಶ್ರಲೋಹದ (Potin) ನಾಣ್ಯಗಳು ಸಿಗಲಾರಂಭಿಸಿದವು. ಇದರಲ್ಲಿ ಮಾನರಾಶಿ, ದೋಷರಾಶಿ, ತದುವರಾಶಿ ಶಶಾಂಕ ಕನ್ನಡ ಲಿಪಿ ಇರುವ ನಾಣ್ಯಗಳಿದ್ದವು. ಇವುಗಳಲ್ಲಿ 'ದೋಷ'ರಾಶಿ ಹೆಸರಿನ ನಾಣ್ಯಗಳನ್ನು ಕದಂಬ ದೊರೆ ಕೃಷ್ಣವರ್ಮ I ಮತ್ತು ಕೃಷ್ಣವರ್ಮ II ನ ನಾಣ್ಯಗಳೆಂದು ಪ್ರಕಟಿಸಲ್ಪಟ್ಟಿವೆ. ಮಾತ್ರವಲ್ಲದೇ ಚಕ್ರ, ಶಂಕ, ಪದ್ಮ ಮುದ್ರಾಂಕಿತ ನಾಣ್ಯಗಳನ್ನು ಹೇರಳವಾಗಿ ದೊರಕಿವೆ.

ಮೂರು ವರ್ಷಗಳ ಹಿಂದೆ ನಾನು ಬನವಾಸಿಗೆ ಹೋದಾಗ ಸಮೀಪದ ಬಂಗಾರದ ಅಂಗಡಿಯಲ್ಲಿ ಇಕ್ಕೇರಿ ವರಹದ ಜತೆ ಕೆಲವು ಬನವಾಸಿ ಕದಂಬರ ನಾಣ್ಯಗಳು ನೋಡಲು ಸಿಕ್ಕವು ಇವುಗಳಲ್ಲಿ ಪ್ರಸ್ತುತ ಪ್ರಬಂಧದ ವಿಷಯವಾಗಿರುವ ಅಪರೂಪದ ನಾಣ್ಯವು ಸಹ ಒಂದಾಗಿತ್ತು.

## ನಾಣ್ಯದ ವಿವರ

ಲೋಹ : ಮಿಶ್ರಲೋಹ (Potin) ತೂಕ : ೦.೬ ಗ್ರಾಂ ವ್ಯಾಸ : ೧೨ ಮಿ.ಮಿ.

ಮುಂಭಾಗ : ೫ ಗೆರೆಗಳ ನಡುವೆ ವೃತ್ತಾಕಾರದಲ್ಲಿ ಶ್ರೀ / ಕಾ / ಮಾ/ ಲ/ ಯ ಎಂಬ ೫ನೇ ಶತಮಾನದ ಕನ್ನಡ ಲಿಪಿ ಇದ್ದು, ಈ ೫ ಗೆರೆಗಳು ಕೂಡುವಲ್ಲಿ ಚುಕ್ಕೆಗಳಿಂದ ಮಾಡಿದ ಹೂವಿನ ವಿನ್ಯಾಸವಿದೆ.





ಹಿಂಬದಿ : ೨ ಸಾಲಿನ ಕನ್ನಡ ಲಿಪಿಯಲ್ಲಿ ಶ್ರೀ ರವಿ/ ವರ್ಮ ಎಂದಿದ್ದು ನಾಣ್ಯದ ಬಲಬದಿಗೆ ಶಂಖದ ವಿನ್ಯಾಸವಿದೆ.





ಕದಂಬ ದೊರೆ ರವಿವರ್ಮನು (ಕ್ರಿ.ಶ. ೪೮೫–೫೧೮) ಮೃಗೇಶ ವರ್ಮನ ಮೂವರು ಮಕ್ಕಳಲ್ಲಿ ಓರ್ವನ ತಾಯಿ ಕೇಕಯ ರಾಜಕುಮಾರಿ ಪ್ರಭಾವತಿ ದೇವಿ. ರವಿವರ್ಮನು ಗಂಗ, ಪಲ್ಲವ, ಪುನ್ನಾಟ, ಆಳೂಪ ರಾಜರುಗಳಿಂದ ಕಪ್ಪ ಕಾಣಿಕೆಗಳನ್ನು ಪಡೆಯುತ್ತಿದ್ದನೆಂದು ಶಾಸನಗಳು ಹೇಳುತ್ತಿವೆ. ಬನವಾಸಿಯ ಸಮೀಪದ 'ಗುಡ್ನಾಪುರ'ದ ಶಾಸನವೊಂದು ರವಿವರ್ಮನು 'ಕಾಮಜಿನಾಯ'ವನ್ನು ಕಟ್ಟಿಸಿದ ವಿಷಯವನ್ನು ದಾಖಲಿಸಿದೆ. ೨೦' ಎತ್ತರ ಈ ಶಾಸನವನ್ನು ಪೇಟಿಕಾ ಶಿರೋಲಿಪಿಯಲ್ಲಿ ಬರೆದಿದ್ದು ಭಾಷೆ ಸಂಸ್ಕೃತವಾಗಿದೆ. ೨೭ ಸಾಲಿನ ಈ ಬೃಹತ್ ಶಾಸನವು ಕದಂಬ ಕುಲದ ಬಗ್ಗೆ ಬೆಳಕನ್ನು ಚೆಲ್ಲಲಿದೆ. ಜಯಂತಿ ಸುರವದು ಮನ್ಮಥ ಕಾಮಿನಿ........ ಎಂದು ಪ್ರಾರಂಭವಾಗುವ ಈ ಶಾಸನದ ೧೭ನೇ ಸಾಲಿನಲ್ಲಿ ಅಥಸ್ಯ ಕಾಮಜಿನಾಲಯಸ್ಯ (ಪೂಜಾ) ಸಂಸ್ಕಾರಾರ್ಥಮಸ್ ಮಹಾರಾಜ ಶ್ರೀ ರವಿವರ್ಮ

* ಮೂಡಬಿದಿರೆ.

ಇಡಿವೂರಗ್ರಾಮಮ್... ಎಂದಿದೆ. ಈ ಶಾಸನದ ಪ್ರಕಾರ ರವಿವರ್ಮನು ಮನ್ಮಥನಿಗಾಗಿ ತನ್ನ ಅರಮನೆಯ ಸಮೀಪ 'ಕಾಮಜಿನಾಲಯ'ವನ್ನು ಸ್ಥಾಪಿಸಿ ದೈನಂದಿನ ಪೂಜೆಗಳಿಗಾಗಿ ಹಲವು ಗ್ರಾಮವನ್ನು ಬಿಟ್ಟುಕೊಟ್ಟ ವಿವರಗಳಿವೆ. ಮಾತ್ರವಲ್ಲದೆ ಮಧುಮಾಸದಲ್ಲಿ ಅಥವಾ ಬೇರೆ ಯೋಗ್ಯ ಸಮಯದಲ್ಲಿ ಉತ್ಸವವನ್ನು ನಡೆಸಬೇಕೆಂದು ಅಜ್ಞಾಪಿಸಿದ್ದಾನೆ.

ಇದುವರೆಗೆ ಬನವಾಸಿ ಕಂದಬರ ಬಿರುದುಗಳಿರುವ ಮಿಶ್ರಲೋಹದ ನಾಣ್ಯಗಳು ದೊರಕಿದ್ದು ರಾಜನ ಹೆಸರಿರುವ ನಾಣ್ಯವೊಂದು ದೊರಕಿರುವುದು ಇದುವೇ ಮೊದಲನೆಯ ದಾಗಿದೆ. ಈ ಸಣ್ಣ ನಾಣ್ಯದಲ್ಲಿ ಸ್ಥಳದ ಅಭಾವವಿರುದರಿಂದ ಜಿನ ಪದವನ್ನು ಬಿಟ್ಟು ಕೇವಲ ಶ್ರೀ ಕಾಮಾಲಯವೆಂದು ಟಂಕಿಸಿರಬಹುದು. ಆದರಿಂದ ಈ ನಾಣ್ಯವು ಕದಂಬದೊರೆ ರವಿವರ್ಮನು ಕಾಮಾಜಿನಾಲಯವನ್ನು ಕಟ್ಟಿಸಿದ ನೆನಪಿಗಾಗಿ ಮುದ್ರಿಸಿದ ಸ್ಮರಣಾರ್ಥ ನಾಣ್ಯವಾಗಿದ್ದು ಕರ್ನಾಟಕದ ನಾಣ್ಯ ಪರಂಪರೆಗೆ ಮತ್ತೊಂದು ಅಪರೂಪದ ನಾಣ್ಯವು ಸೇರ್ಪಡೆಯಾದಂತಾಯಿತು.

**ಚೆನ್ನಭೈರಾದೇವಿಯ ನಾಣ್ಯ**

ವಿಜಯನಗರದ ಆಳ್ವಿಕೆಯ ಕಾಲದಲಿ ಬಲಿಷ್ಠರಾಗಿದ್ದ ಸಾಮಂತ ಅರಸು ಮನೆತನಗಳಲ್ಲಿ ಹಾಡುವಳ್ಳಿ (ಸಂಗೀತ ಪುರ)ಯ ಸಾಳ್ವರು ಮತ್ತು ನಗಿರೆ (ಗೇರು ಸೊಪ್ಪೆ)ಯ ಸಾಳ್ವರು ಪ್ರಮುಖರು. ಹಾಡುವಳ್ಳಿ ಮತ್ತು ಗೇರುಸೊಪ್ಪೆ ಅಕ್ಕಪಕ್ಕದ ಪ್ರಾಂತ್ಯಗಳಾಗಿದ್ದು ಎರಡು ಮನೆತನಗಳ ನಡುವೆ ಸಾಮರಸ್ಯ ವೈವಾಹಿಕ ಸಂಬಂಧಗಳು ನಡೆದಿದ್ದರೂ ಯಾದವಿ ಕಲಹದಿಂದ ಒಂದೇ ಬೇರಿಗೆ ಸೇರಿದ ಇವರುಗಳ ಅಲ್ಲಿ ತಾತ್ಕಾಲಿಕ ಹೊಂದಾಣಿಕೆಗಳಾಗಿದ್ದವು. ಅಂತಿಮವಾಗಿ ಈ ಒಳಜಗಳಕ್ಕೆ ಪೂರ್ಣವಿರಾಮ ಹಾಕಿದ ಕೀರ್ತಿ ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿಗೆ ಸೇರಿದೆ. ರಾಣಿ ಪದುಮಲ ದೇವಿ (ಕ್ರಿ.ಶ. ೧೫೨೮-೪೦) ರಾಣಿ ಚೆನ್ನಾದೇವಿ (ಕ್ರಿ.ಶ. ೧೫೪೦-೫೯)ಯ ನಂತರ ಪಟ್ಟಕ್ಕೆ ಬಂದ ಚೆನ್ನಭೈರಾದೇವಿ (ಕ್ರಿ.ಶ. ೧೫೫೪-೧೬೦೩) ಹೀಗೆ ಒಂದೇ ಮನೆತನದ ಮೂವರು ರಾಣಿಯರ ಆಳ್ವಿಕೆ ಒಂದು ಅಪೂರ್ವ ದಾಖಲೆ. ಸತತವಾಗಿ ಧೀಮಂತರಾಗಿ ಆಳಿದ ೩ ತಲೆಮಾರಿನ ಈ ಕ್ಷಾತ್ರರಮಣೀಯರ ಸಾಹಸ ಚರಿತ್ರೆಯ ಅಪೂರ್ವ ಅಧ್ಯಾಯ.

ಇದುವರೆಗೆ ಸಾಳುವರ ಬೆಳ್ಳಿಯ ನಾಣ್ಯಗಳು ಸಾಕಷ್ಟು ಸಿಕ್ಕಿದರೂ ತಾಮ್ರದ ನಾಣ್ಯಗಳು ಬಹಳ ಅಪರೂಪ. ಬೆಳ್ಳಿಯ ನಾಣ್ಯಗಳಲ್ಲಿ ಕನ್ನಡ ಲಿಪಿಯ ಸಾಳುವಮಲ್ಲ, ನಾಗರಿ ಲಿಪಿಯ ರಾಜಾಧಿರಾಜ, ಶ್ರೀ ದೇವರಾಯ ಎಂಬ ಬರಹಗಳಿವೆ. ಇಂತಹ ನಾಣ್ಯಗಳ ಮುಂಭಾಗದಲ್ಲಿ ಸಿಂಹ, ಆನೆಗಳ ಚಿತ್ರವಿದ್ದು, ತಾಮ್ರದ ನಾಣ್ಯಗಳ ಮುಂಭಾಗದಲ್ಲಿ ವಿಜಯನಗರ ತಾಮ್ರದ ನಾಣ್ಯಗಳಲ್ಲಿ ಇರುವಂತಹ ಗಂಡಭೇರುಂಡ ಗರುಡನ ಚಿತ್ರವಿದ್ದು ಹಿಂಬದಿಯಲ್ಲಿ ಕನ್ನಡ ಲಿಪಿಯ ಸಾಳುವಮಲ್ಲ ಅಥವಾ ಸಾಳುವ ಮಲ್ಲನು ಎಂಬ ಬರಹವಿದೆ. ಆದರೆ ದೊರಕಿರುವ ೩ ಗ್ರಾಂ.ತೂಕದ ನಿಂತಿರುವ ಗರುಡನ ವಿನ್ಯಾಸವಿರುವ ತಾಮ್ರದ ನಾಣ್ಯವು ದೊರಕಿದ್ದು ಹಿಂಬದಿಲ್ಲಿ ಕನ್ನಡ ಲಿಪಿಯ ಚೆನ್ನಭೈರಾದೇವಿ ಎಂಬ ಕನ್ನಡ ಬರಹಿವಿದೆ. ಆದರೆ ಈ ನಾಣ್ಯದಲ್ಲಿ ಚೆನ್ನ ಎಂಬ ಪದವು ಮಾತ್ರ ಕಾಣುತ್ತಿದ್ದು ಉಳಿದ ಅಕ್ಷರಗಳು ಅಸ್ಪಷ್ಟವಾಗಿದೆ. ಇತ್ತೀಚಿಗೆ ನನಗೆ ದೊರಕಿದ ನಾಣ್ಯದ ವಿವರಗಳು ಹೀಗೆವೆ

ತೂಕ : ೯ ಗ್ರಾಂ. ಲೋಹ : ತಾಮ್ರ ವ್ಯಾಸ : ೧೮ ಮಿ.ಮಿ.




ಮುಂಬದಿ : ವೀರಾಸನದಲ್ಲಿ ಕುಳಿತಿರುವ ಗರುಡನ ಚಿತ್ರವಿದ್ದು ಗರುಡನ ಎಡಬದಿಗೆ ಚಕ್ರದ ವಿನ್ಯಾಸವಿದೆ.

ಹಿಂಬದಿ : ಎರಡು ಸಮಾನಾಂತರ ಗೆರೆಗಳು ಈ ನಾಣ್ಯವನ್ನು ೩ ವಿಭಾಗಗಳಾಗಿ ವಿಂಗಡಿಸಿ ಮೇಲಿನ ಭಾಗದಲ್ಲಿ ಸಾಮಾನ್ಯವಾಗಿ ಸಾಳುವರ ಬೆಳ್ಳಿಯ ನಾಣ್ಯದ ಮೇಲಿರುವಂತಹ ಬಿಲ್ವ ಪತ್ರೆಯ ಎಲೆಗಳನ್ನು ಹೋಲುವ ೩ ದಳಗಳಿದ್ದು ಇಕೆಲ್ಲಗಳಲ್ಲಿ ಚಂದ್ರ ಸೂರ್ಯರಿದ್ದಾರೆ. ೨ನೇ ಮತ್ತು ೩ನೇ ಸಾಲಿನಲ್ಲಿ ಚೆಂನ ಬೈ / ರಾಂಬೆ ಎಂಬ ೧೬ನೇ ಶತಮಾನದ ಕನ್ನಡ ಬರಹ ಇದೆ.

ಚೆನ್ನಭೈರಾದೀ ಅಮ್ಮ, ಚೆಂನಭೈರವ ಮಹಾದೇವಿ, ಚಂನಭೈರಾದೇವಿ, ಇಮ್ಮಡಿ ಚೆನ್ನಭೈರಾದೇವಿಯಮ್ಮ ಎಂದು ಶಾಸನಗಳಲ್ಲಿ ಕರೆಸಿಕೊಂಡಿರುವ ಶ್ರೀ ಮನ್ಮಹಾ ಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿಯು ಕಿರಿ ವಯಸ್ಸಿನಲ್ಲೇ ಪಟ್ಟಕ್ಕೇರಿ ಸುಮಾರು ಅರ್ಧಶತಮಾನಗಳವರೆಗೂ ಆಳಿದ್ದು ಭಾರತೀಯ ಇತಿಹಾಸದಲ್ಲೇ ಸರಿಸಾಟಿಯಿಲ್ಲದೇ ದಾಖಲೆಯಾಗಿದೆ. ಕ್ರಿ.ಶ. ೧೫೫೪-೧೬೦೩ವರೆಗೂ ಆಳಿದ ಚೆನ್ನಭೈರಾದೇವಿಯು ಕ್ರಿ.ಶ. ೧೫೫೬-೬೨ರಲ್ಲಿ ಹಾಡುವಳ್ಳಿ (ಸಂಗೀತಪುರ) ಮತ್ತು ೧೫೬೨ರ ನಂತರ ಗೇರುಸೊಪ್ಪೆಯಿಂದ ಆಳ್ವಿಕೆ ಮಾಡಿದ್ದಳು. ಆದರೆ ಕೊನೆಯ ೨೦ ವರ್ಷಗಳ ಕಾಲ ರಾಣಿಗೆ ತುಂಬಾ ಸಂಕಷ್ಟಮಯವಾಗಿತ್ತು. ಒಂದಡೆ ವಿದೇಶಿ ಪೋರ್ಚುಗೀಸರ ಕಿರುಕುಳ ಮತ್ತೊಂದೆಡೆ ಕೆಳದಿ ನಾಯಕರ ಆಕ್ರಮಣ

ಇವರಿಬ್ಬರಿಗೂ ಗೇರುಸೊಪ್ಪೆಯ ಫಲವತ್ತಾದ ಭೂಮಿ ಅದರ ಆದಾಯ ಮತ್ತು ರಾಣಿಯ ವಶದಲ್ಲಿದ್ದ ಮಿರ್ಜಾನ್, ಬಟಕಳ, ಬಸರೂರು, ಹೊನ್ನಾವರ ಬಂದರಿನ ಮೇಲೆ ಕಣ್ಣಿತ್ತು. ಈ ಬಂದರುಗಳಿಂದ ವಿಜಯನಗರದ ಸಾಮ್ರಾಜ್ಯಕ್ಕೆ ಅರೇಬಿಯಾ, ಕೆಂಟಿ, ಪರ್ಶಿಯಾ ದೇಶಗಳಿಂದ ಹಡಗಿನಿಂದ ಬಂದ ಯುದ್ಧದ ಕುದುರೆಗಳನ್ನು ರವಾನಿಸುತ್ತಿದ್ದರು. ಪೋರ್ಚಗೀಸರು ಈ ಬಂದರನ್ನು ವಶಪಡಿಸಿಕೊಳ್ಳುವ ಹುನ್ನಾರ ವಿಜಯನಗರರಾಯ ಸದಾಶಿವರಾಯನಿಗೆ ಗೊತ್ತಿದ್ದರು ಅವನು ಚೆನ್ನಾಭೈರಾದೇವಿಯನ್ನು ಬೆಂಬಲಿಸಿದ್ದನು. ರಾಣಿಯ ನಾಣ್ಯದಲ್ಲಿರುವ ಗರುಡನ ಚಿತ್ರವು ವಿಜಯನಗರದ ಸದಾಶಿವರಾಯರ ತಾಮ್ರದ ನಾಣ್ಯದಲ್ಲಿರುವ ಗರುಡನ ಚಿತ್ರವನ್ನು ಬಹಳಷ್ಟು ಹೋಲುವುದು ಗಮನಾರ್ಹವಾಗಿದೆ. ಸ್ವತಃ ಬಂದೂಕು ಹಿಡಿದು ಪೋರ್ಚುಗೀಸರನ್ನು ಎದುರಿಸಿದ ಕರಿಮೆಣಸಿನ ರಾಣಿಯೆಂದು ಪ್ರಸಿದ್ಧಳಾದ ಚೆನ್ನಭೈರಾದೇವಿಯ ಅಂತ್ಯ ಕೆಳದಿ ನಾಯಕರ ಸಮಯದಲ್ಲಾಯ್ತು. ಕೆಳದಿ ನೃಪವಿಜಯದ ಉಲ್ಲೇಖದಂತೆ ಕೆಳದಿಯ ಒಂದನೇ ವೆಂಕಟಪ್ಪ ನಾಯಕನು ತನ್ನ ಸೈನ್ಯವನ್ನು ಕಳುಹಿಸಿ ಗೇರುಸೊಪ್ಪೆ, ಹಾಡುವಳ್ಳಿಯನ್ನು ನಾಶಮಾಡಿ ರಾಣಿಯನ್ನು ಸೆರೆಹಿಡಿದು ಕೆಳದಿಗೆ ಕರೆದೊಯ್ದನು. ತನ್ನ ಜೀವಿತದ ಕೊನೆಕಾಲವನ್ನು ಸೆರೆಮನೆಯಲ್ಲೇ ಕಳೆದ ಮಹಾಮಂಡಲೇಶ್ವರಿ ಚೆನ್ನಭೈರಾದೇವಿಯು ಅಲ್ಲಿಯೇ ಅಸುನೀಗಿದಳು. ಹೀಗೆ ಸಾಳುವರ ರಾಜ್ಯ ಕೆಳದಿಯ ಪಾಲಾಯ್ತು.

ಇಂತಹ ಧೀಮಂತ ರಾಣಿಯ ಅಪರೂಪದ ಈ ನಾಣ್ಯವು ರಾಣಿಯ ಯಶೋಗಾಥೆಯನ್ನು ನೆನಪಿಸುವ ಒಂದು ಸಾಕ್ಷ್ಯವಾಗಿ ಉಳಿದುಕೊಂಡಿದೆ.

## ಆಧಾರ ಗ್ರಂಥಗಳು


೧. ಬಿ.ಆರ್. ಗೋಪಾಲ, ಬನವಾಸಿ ಕದಂಬಾಸ್, ೧೯೮೩.

೨. ಎ.ವಿ. ನರಸಿಂಹ ಮೂರ್ತಿ, ಕರ್ನಾಟಕ ನಾಣ್ಯ ಪರಂಪರೆ, ಬೆಂಗಳೂರು, ೨೦೦೩.

೩. ನಾಡೋಜ ಪ್ರೊ. ಕಮಲಾ ಹಂಪನ್, ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ.

೪. ಡಾ. ಗುರುರಾಜ್ ಭಟ್, ಸ್ಟಡೀಸ್ ಇನ್ ತುಳುವಾ ಹಿಸ್ಟರಿ ಎಂಡ್ ಕಲ್ಚರ್.

೫. ಡಾ. ರಮೇಶ್ ಕೆ.ವಿ. ತುಳುನಾಡಿನ ಇತಿಹಾಸ.



# "ಬುದ್ಧನ ಚಿತ್ರವಿರುವ ನಾಣ್ಯ"

ಡಾ. ಬಿ. ಬಸವರಾಜ ತಗರಪುರ* ಎಂ.ಎನ್. ನಿರ್ಮಲ**

**ಕೊ**ಳ್ಳೇಗಾಲ ತಾಲ್ಲೂಕು ಒಡೆಯರ ಪಾಳ್ಯ ಗ್ರಾಮದ ಪಶ್ಚಿಮಕ್ಕಿರುವ ಟಿಬೆಟಿಯನ್ ಕಾಲೋನಿಗೆ ಪೂರ್ವಕ್ಕೆ ಹೊಲವೊಂದರಲ್ಲಿ ಬುದ್ಧನ ಚಿತ್ರವಿರುವ ನಾಣ್ಯ ದೊರೆತಿದೆ. ಈ ನಾಣ್ಯವನ್ನು ಕ್ರಿಶ ೧೬೧೬ನೇ ಸಾಲಿನಲ್ಲಿ ಟಂಕಿಸಲಾಗಿದ್ದು, ಈ ನಾಣ್ಯದ ಮೇಲೆ ಇರುವ ಬರವಣಿಗೆಯಿಂದ ಇದು ಈಸ್ಟ್ ಇಂಡಿಯಾ ಕಂಪನಿಯ ಕಾಲಕ್ಕೆ ಸೇರಿರುವುದು ತಿಳಿದು ಬರುತ್ತದೆ. ಈ ನಾಣ್ಯ ವೃತ್ತಾಕಾರವಾಗಿದ್ದು, ಬುದ್ಧನು ಪದ್ಮಾಸನದಲ್ಲಿ ಕುಳಿತ್ತಿದ್ದು ಒಂದು ಕೈಯನ್ನು ಕೆಳಗೆ ಇಳಿಬಿಟ್ಟಿದ್ದು ಮತ್ತೊಂದು ಕೈಯಿಂದ ಆಶೀರ್ವಾದ ಮಾಡುವಂತೆ ಟಂಕಿಸಲಾಗಿದೆ. ಅಲ್ಲದೆ ಹಿಂದಿ ಅಕ್ಷರದಲ್ಲಿ ಗೌತಮ ಬುದ್ಧ ಎಂದು ಸಹ ಬರೆಯಲಾಗಿದೆ. ಈ ನಾಣ್ಯ ಒಡೆಯರ ಪಾಳ್ಯದಲ್ಲಿ ದೊರೆತಿರುವುದು ಮತ್ತೊಂದು ವಿಶೇಷವೆಂದೇ ಹೇಳಬಹುದಾಗಿದೆ. ಭಾರತ ದೇಶದ ಪ್ರಾಚೀನ ಇತಿಹಾಸವನ್ನು ನೋಡಿದ ಪ್ರಾಚೀನ ಧರ್ಮಗಳಲ್ಲಿ ಬೌದ್ಧ ಧರ್ಮವು ಸಹ ಒಂದಾಗಿದೆ. ಆದರೆ ಬೌದ್ಧ ಧರ್ಮ ಭಾರತದಲ್ಲಿ ಹುಟ್ಟಿ ಅಂದಿನ ಕಾಲಕ್ಕೆ ವಿಸ್ತಾರವಾಗಿ ಬೆಳೆದು, ನಂತರ ಅನೇಕ ಹೊರ ದೇಶಗಳಲ್ಲಿಯೂ ತನ್ನ ವ್ಯಾಪಕವಾದ ಪ್ರಸಾರವನ್ನು ಪಡೆದುಕೊಂಡಿತು.

ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲೂರು ತಾಲ್ಲೂಕು, ಸಿದ್ದಾಪುರ, ಬ್ರಹ್ಮಗಿರಿ, ಜಟ್ಟಿಂಗರಾಮೇಶ್ವರ, ರಾಯಚೂರು ಜಿಲ್ಲೆಯ, ಮಸ್ಕಿ, ಕೊಪ್ಪ, ಕಲಬುರ್ಗಿ ಜಿಲ್ಲೆಯ ಸನ್ನತಿಗಳನ್ನು ಅಶೋಕನ ಕಾಲಕ್ಕೆ ಸೇರಿದ ಶಿಲಾ ಶಾಸನಗಳು ದೊರೆತಿವೆ. ಬಾಗಲಕೋಟೆ ಜಿಲ್ಲೆಯ ಬಾದಾಮಿ, ಐಹೊಳೆ ಗಳಲ್ಲಿ ಚಾಲುಕ್ಯರ ಕಾಲದ ಬೌದ್ಧ ಸ್ಮಾರಕಗಳು ಕಂಡುಬಂದಿದೆ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ, ಧಾರವಾಡ ಜಿಲ್ಲೆಯ ಕೋಳಿವಾಡ, ಬಳ್ಳಾರಿ ಜಿಲ್ಲೆಯ ಹಂಪಿ ಪ್ರದೇಶದ ಸುತ್ತ ಮುತ್ತಲು ಬೌದ್ಧ ಅವಶೇಷಗಳು ದೊರೆತಿವೆ.

ಇತ್ತೀಚಿನ ಉತ್ಖನನದಲ್ಲಿ ಡಾ|| ಎಂ.ಎಸ್. ಕೃಷ್ಣಮೂರ್ತಿ ಯವರು, ಡಾ|| ಎಂ.ವಿ. ಕೃಷ್ಣಪ್ಪನವರು, ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದಿಂದ ಸುಮಾರು ೮ ಕಿಲೋ ಮೀಟರ್ ದೂರದಲ್ಲಿರುವ ರಾಜಘಟ್ಟದಲ್ಲಿ ಪುರಾತತ್ವ ಅನ್ವೇಷಣೆಗಳು ನಡೆಸಿದ್ದು ಬೃಹತ್ ಶಿಲಾಯುಗದ ಸಂಸ್ಕೃತಿಯ ಅನೇಕ ಸಮಾಧಿಗಳು ಬೆಳಕಿಗೆ ಬಂದಿವೆ. ಅಲ್ಲದೆ ಇದು ಒಂದು ಪ್ರಸಿದ್ಧವಾದ ಬೌದ್ಧನೆಲೆಯೂ ಆಗಿತ್ತು ಎಂಬುದಕ್ಕೆ ಆಧಾರಗಳು ದೊರೆತಿವೆ. ರಾಜಘಟ್ಟದ ಬೂದಿಗುಂಡಿಯೆಂದು ಕರೆಯುತ್ತಿದ್ದ ಪ್ರದೇಶಗಳಲ್ಲಿ ಉತ್ಖನನ ನಡೆಸಿದಾಗ ಗೋಚರಿಸಿದ ಬೌದ್ಧ ಚೈತ್ಯಾಲಯ ಅವಶೇಷಗಳು ದಕ್ಷಿಣ ಕರ್ನಾಟಕದಲ್ಲಿಯೇ ಮೊದಲನೆಯದು ಎನ್ನಬಹುದಾಗಿದೆ. ಅಲ್ಲದೆ ಮಣ್ಣಿನಿಂದ ಮಾಡಿದ ಅನೇಕ ಸಣ್ಣಸಣ್ಣ ಹರಿಕೆ ಸ್ತೂಪಗಳು ಉತ್ಖನನದಲ್ಲಿ ದೊರೆತಿವೆ. ಈ ಚೈತ್ರಾಲಯದ ಕಾಲವನ್ನು ಹರಿಕೆ ಸ್ತೂಪಗಳ ಮೇಲಿರುವ ಲಿಪಿಯ ಆಧಾರದಿಂದ ಕ್ರಿ.ಶ. ೪ರಿಂದ ಕ್ರಿ.ಶ. ೬ನೇ ಶತಮಾನದ ಕಾಲಕ್ಕೆ ಸೇರಿಸಬಹುದಾಗಿದೆ. ಈ ಮಾದರಿಯ ಸ್ತೂಪಗಳ ಅರ್ಪಣೆ ಟಿಬೆಟ್‌ನ ಬೌದ್ಧ ಧರ್ಮಿಯರಲ್ಲಿ ಈಗಲೂ ಈ ಸಂಸ್ಕೃತಿ ಇರುವುದಾಗಿ ತಿಳಿದು ಬಂದಿದೆ. ಕೋಲಾರ ಜಿಲ್ಲೆಯ ಕುರುಡು ಮಲೈಯಲ್ಲಿ ಬುದ್ಧನ ಪ್ರತಿಮೆಯೊಂದು ದೊರೆತಿರುವುದು ಕೂಡ ವರದಿಯಾಗಿದೆ. ಈ ಎಲ್ಲಾ ಸಾಕ್ಷ್ಯಾಧಾರಗಳ ಹಿನ್ನೆಲೆಯನ್ನು ಗಮನಸಿದಾಗ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೌದ್ಧ ಧರ್ಮ ಬೆಳೆದಿತ್ತೆಂದು ತಿಳಿದು ಬರುತ್ತದೆ. ಕೊಳ್ಳೇಗಾಲ ತಾಲ್ಲೂಕಿನ ಒಡೆಯರ ಪಾಳ್ಯ ಗ್ರಾಮದ ಹೊರವಲಯದ ಪರಿಸರದಲ್ಲಿ ಬುದ್ಧನ ಚಿತ್ರವಿರುವ ಅಲ್ಲದೆ ಇದರ ಕಾಲ ಕ್ರಿ.ಶ. ೧೬೧೬ಕ್ಕೆ ಸೇರಿರುವುದರಿಂದ ಸಂಶೋಧನೆಗೆ ಉಪಯುಕ್ತವಾಗಿದೆ. ಈ ನಾಣ್ಯದ ಮೇಲೆ ಈಸ್ಟ್ ಇಂಡಿಯಾ ಕಂಪನಿಯ ಕಾಲವನ್ನು ಸಹ ತಿಳಿಸಿರುವುದರಿಂದ ಅಂದಿನ ಕಾಲಕ್ಕೆ ಈ ನಾಣ್ಯ ವರ್ತಕರ ಮನಸ್ಸನ್ನು ಬೌದ್ಧ ಧರ್ಮದ ಕಡೆ ಪರಿವರ್ತಿಸಲು ನಾಣ್ಯವನ್ನು ಚಲಾವಣೆಗೆ ತಂದಿರಬೇಕು. ಅಲ್ಲದೆ ಕ್ರಿ.ಶ. ೧೬೧೬ರ ಕಾಲಕ್ಕೆ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಬೌದ್ಧ ಧರ್ಮಕ್ಕೆ ಪೂರಕವಾದ ಅಧಿಕಾರಿಗಳು ವ್ಯಕ್ತಿಗಳು ಇರಬಹುದೆಂದೂ ಸಹ ತಿಳಿದು ನೋಡಬೇಕಾಗುತ್ತದೆ. ಈ ಎಲ್ಲಾ ಬೆಳವಣಿಗೆ

* ತಗರಪುರ, ತಳಕವಾಡಿ (ಅಂಚೆ), ಕೊಳ್ಳೇಗಾಲ ತಾಲ್ಲೂಕು–೫೭೧೪೪೦.
** ಕೋಂ. ಎಸ್. ದಿವಾಕರ್, # ೨೯೮, ಹೆಚ್‌ಪಿಓ & ಆರ್‌ಎಂಹೆಚ್ ಬಡಾವಣೆ, ಸಾತಗಳ್ಳಿ ಶಕ್ತಿನಗರ, ಮೈಸೂರು–೫೭೦೦೧೯.






ಯನ್ನು ಗಮನಿಸಿದರೆ ಒಡೆಯರ ಪಾಳ್ಯದಲ್ಲಿ ಬುದ್ಧನ ಚಿತ್ರದ ನಾಣ್ಯ ದೊರೆತಿರುವುದು ಈ ಭಾಗದ ಬೌದ್ಧ ಸಂಸ್ಕೃತಿಗೆ ಪೂರಕವಾಗಿದೆ ಎಂದು ಮಾತ್ರ ಹೇಳಬಹುದು. ಈ ನಾಣ್ಯದ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವೂ ಸಹ ಇದೆ.

## ಆಕರ ಗ್ರಂಥಗಳು


೧. ಡಾ. ಬಿ. ಬಸವರಾಜು ತಗರ್‌ಪುರ, ಐತಿಹ್ಯ ದರ್ಶನ, ಸುನಿಲ್ ಪ್ರಕಾಶನ, ಮೈಸೂರು–೨೦೦೮.

೨. ಡಾ. ಎಂ.ಎಸ್. ಕೃಷ್ಣಮೂರ್ತಿ, ಕರ್ನಾಟಕದ ಬೌದ್ಧ ಧರ್ಮದ ಮೇಲೆ ಹೊಸ ಬೆಳಕು ರಾಜಘಟ್ಟ ಉತ್ಖನನ, ಇತಿಹಾಸ ದರ್ಶನ, ಸಂ. ೧೬, ಪು. ೧–೧೧.

೩. ಡಾ. ಎಂ.ಎಸ್. ಕೃಷ್ಣಮೂರ್ತಿ ಮತ್ತು ಡಾ. ಎಂ.ಎ. ಕೃಷ್ಣಪ್ಪ, ಕರ್ನಾಟಕದ ಬೌದ್ಧ ಧರ್ಮದ ಮೇಲೆ ಹೊಸ ಬೆಳಕು ರಾಜಘಟ್ಟ ಉತ್ಖನನ ಭಾಗ–೨, ಇತಿಹಾಸನ ದರ್ಶನ, ಸಂ. ೨೦, ಪು. ೨೦–೩೧.

೪. ಡಾ. ಸಿ.ಯು. ಮಂಜುನಾಥ್, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಕ್ರಿ.ಶ. ೧೧೫೦–೧೩೪೦, ಪು. ೧೨೨-೧೩೫.

೫. ಎಂ. ಚಿದಾನಂದಮೂರ್ತಿ, ಬುದ್ಧಿಸಂ ಇನ್ ಕರ್ನಾಟಕ ಕ್ಯೂ. ಜೆ.ಎಂ.ಎಸ್. Liii-4, ಪು .೧೩೩.

೬ ಟಿ.ಎ. ವೆಂಕಟಾಚಲ ಶಾಸ್ತ್ರಿ, ಬೌದ್ಧ ಧರ್ಮ ಮತ್ತು ಕನ್ನಡ ಸಾಹಿತ್ಯ, ಹರಿತಿಸಿರಿ ಕೆ.ಬಿ. ೧೪೯, ಹಸ್ತಪ್ರತಿ ಭಂಡಾರ, ಕ.ಹ. ಸಂಸ್ಥೆ.



# ದಾವಣಗೆರೆ ಜಿಲ್ಲೆಯ ಸೂರ್ಯ ಶಿಲ್ಪಗಳು

**ಸಂತೇಬೆನ್ನೂರು ಸುಮತೀಂದ್ರ ನಾಡಿಗ್***

**ಚಾ**ಲುಕ್ಯರ ಆಡಳಿತ ಕಾಲದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ೩೦ಕ್ಕೂ ಹೆಚ್ಚು ತ್ರೈಪುರುಷ ದೇವಾಲಯಗಳನ್ನು ನಿರ್ಮಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಸಾಮಾನ್ಯವಾಗಿ ಅವರು ಪ್ರತಿಷ್ಠಾಪಿಸಿದ ತ್ರೈಪುರುಷ ದೇವಾಲಯಗಳಲ್ಲಿ ಪೂರ್ವಭಿಮುಖವಾಗಿ ಶಿವಲಿಂಗ ಅದರ ಎದುರು ನಂದಿ, ದಕ್ಷಿಣಾಭಿಮುಖವಾಗಿ ವಿಷ್ಣುಶಿಲ್ಪ ವಿದ್ದರೆ, ಪಶ್ಚಿಮಾಭಿಮುಖವಾಗಿ ಉದಯಿಸುತ್ತಿರುವ ಸೂರ್ಯನ ನೇನಪಿಗಾಗಿ ಸೂರ್ಯನಾರಾಯಣ ಶಿಲ್ಪವನ್ನು ಪ್ರತಿಸ್ಥಾಪಿಸಿ ಅವುಗಳ ಪೂಜಾ ಕೈಂಕರ್ಯಗಳಿಗಾಗಿ ದತ್ತಿ ನೀಡಿ ಶಿಲಾ ಶಾಸನ ಹಾಕಿಸಿರುವುದು ಕಾಣಬಹುದು. ಈ ದೇವತೆಗಳಲ್ಲದೆ ಗಣೇಶ, ಶಕ್ತಿ ದೇವತೆಗಳಾದ ಚಾಮುಂಡಿ, ಭೈರವ, ಸಪ್ತ ಮಾತೃಕೆಯರ ವಿಗ್ರಹಗಳನ್ನು ದೇವಾಲಯದಲ್ಲಿ ಪ್ರತಿಸ್ಥಾಪಿಸಿರುವುದು ಕಂಡುಬರುತ್ತದೆ.

ದಾವಣಗೆರೆ ಜಿಲ್ಲೆಯಲ್ಲಿ ಚಾಲುಕ್ಯರ ಕಾಲದಲ್ಲಿ ಪ್ರತಿಸ್ಥಾಪಿಸಿದ್ದ ಬಹಳಷ್ಟು ತ್ರೈಪುರುಷ ದೇವಾಲಯಗಳು ಈಗ ಹಾಳಾಗಿವೆ. ಕೆಲವೊಂದು ದೇವಾಲಯಗಳ ಹಳೆಯ ವಿಗ್ರಹಗಳು ಭಗ್ನಗೊಂಡಿವೆ ಎಂದು ಹೊಸದಾಗಿ ವಿಗ್ರಹಮಾಡಿಸಿ ಪುನರ್ ಪ್ರತಿಸ್ಥಾಪಿಸಿದ್ದಾರೆ. ಕೆಲವು ಪ್ರಾಚೀನ ವಿಗ್ರಹಗಳನ್ನು ಅಲ್ಲೇ ಭೂಗತ ಮಾಡಿರುವುದಾಗಿಯೂ ತಿಳಿದು ಬಂದಿದ್ದು ಇನ್ನು ಕೆಲವು ದೇವಾಲಯಗಳ ವಿಗ್ರಹಗಳು ಸಂಪೂರ್ಣ ಭಗ್ನಗೊಂಡಿದ್ದು, ಪ್ರಾಚೀನ ಪಳವುಳಿಕೆಗಳಂತಿವೆ. ಕೆಲವು ಸೂರ್ಯ ವಿಗ್ರಹಗಳು ಅನ್ಯಮತೀಯರ ಧಾಳಿಗೆ ಒಳಗಾಗಿ ಕಾಣೆಯಾಗಿವೆ. ಕೇವಲ ೩–೪ ದೇವಾಲಯಗಳು ಮಾತ್ರ ಇಂದಿಗೂ ಸುಸ್ಥಿತಿಯಲ್ಲಿದ್ದು, ಹಿಂದಿನಂತೆಯೇ ಈಗಾಗಲೂ ಅವುಗಳಿಗೆ ಪೂಜೆ, ಅರ್ಚನೆ ಅಭಿಷೇಕ ಇತ್ಯಾದಿ ನಡೆದುಕೊಂಡು ಬರುತ್ತಿವೆ. ಅವುಗಳಲ್ಲಿ ಕೆಲವೊಂದು ವೈಶಿಷ್ಟಪೂರ್ಣ, ಜಿಲ್ಲೆಯ ಪ್ರಮುಖ ಸೂರ್ಯ ನಾರಾಯಣ ಶಿಲ್ಪಗಳ ಕುರಿತು ಈ ಸಂಪ್ರಬಂಧದಲ್ಲಿ ಚರ್ಚಿಸಿದ್ದೇನೆ.

ಸೂರ್ಯರಾಧನೆ ಭಾರತದಲ್ಲಿ ಬಹಳ ಹಿಂದಿನಿಂದಲೂ ಬುಡಕಟ್ಟು ಜನಾಂಗ ಆರಾಧಿಸುತ್ತಾ ಬಂದಿದ್ದಾರೆ ನಂತರ ಇದಕ್ಕೆ ವೈದಿಕ ಸಂಪ್ರದಾಯದವರು ಶೈವ ಪಂಚಾಯತನದಲ್ಲಿ ಗಣೇಶ, ಅಂಬಿಕೆ, ವಿಷ್ಣು, ಶಿವ ಮತ್ತು ಸೂರ್ಯನನ್ನು ಸೇರಿಸಿ ಮೂರ್ತಿ ಪೂಜೆಯನ್ನು ಆರಂಭಿಸಿದ್ದಾಗಿ ತಿಳಿದು ಬರುತ್ತದೆ. ಸೂರ್ಯನು ಮುಕ್ತಿ ದಾಯಕನಾದ ಆಧ್ಯಾತ್ಮಿಕ ದೇವತೆ. ಇವನು ಶತೃವಿನಾಶಕ, ಕಾಲಗತಿಸೂಚಕ, ರೋಗನಿವಾರಕ ಹಾಗೂ ಸಂತಾನದಾಯಕ ಲೌಕಿಕ ದೇವತೆಯೆನಿಸಿದ್ದಾನೆ.

ಸೂರ್ಯ ಶಿಲ್ಪದ ಲಕ್ಷಣವನ್ನು ಶಾಸ್ತ್ರ ಗ್ರಂಥಗಳು ವೈವಿಧ ಪೂರ್ಣವಾಗಿ ವಿವರಿಸುತ್ತವೆ ಆಗಮದಲ್ಲಿ ಸೂರ್ಯ ಶಿಲ್ಪವು ಎರಡು ಕೈಗಳನ್ನು ಹೊಂದಿರಬೇಕೆಂದು ಅವುಗಳಲ್ಲಿ ಕಮಲ ಪುಷ್ಪವನ್ನು ಹಿಡಿದಿರಬೇಕೆಂದು ಮುಂಗೈಗಳನ್ನು ಭುಜಕ್ಕೆತಾಗುವಂತೆ ಮೇಲಕ್ಕೆತ್ತಿರಬೇಕೆಂದೂ, ಶಿರವು ಕಾಂತಿಮಂಡಲದಿಂದ ಪರಿವೃತವಾಗಿರಬೇಕೆಂದೂ ಸರ್ವಾಲಂಕೃತವಾಗಿ ಆಭರಣಭೂಷಕವಾಗಿರಬೇಕೆಂದು ಹೇಳಿದೆ. ಸಮಭಂಗಿಯಲ್ಲಿ ನಿಂತಿರುವ ಸೂರ್ಯಶಿಲ್ಪದಲ್ಲಿ ಸೂರ್ಯನಗೆ ಲತಾತೋರಣವನ್ನು ಖಂಡರಿಸಿ ತಲೆಯಮೇಲೆ ಕಿರೀಟ, ಕೊರಳಲ್ಲಿ ಹಾರ ಯಜ್ಞೋಪವೀತ, ಕರ್ಣಕುಂಡಲ, ವೈಜಯಂತಿಮಾಲ, ಉಡುದಾರ, ಕೈ ಕಾಲು ಕಡಗಗಳು ಭುಜಕೀರ್ತಿ ಇತ್ಯಾದಿಗಳಿಂದ ಶೃಂಗರಿಸಿರುತ್ತಾರೆ. ಸಾಮಾನ್ಯವಾಗಿ ಸೂರ್ಯಶಿಲ್ಪದ ಜೊತೆಗೆ ಏಳು ಅಶ್ವಗಳನ್ನು ಅದರ ಸಾರಥಿಯದ ಅರುಣನನ್ನು ಚಿತ್ರಿಸಲಾಗಿರುತ್ತದೆ. ಅಲ್ಲದೆ ಅದರ ಜೊತೆಗೆ ಸೂರ್ಯನ ಪತ್ನಿಯರಾದ ಉಷಾಪ್ರತ್ಯಷ (ಉಷಾ–ಛಾಯ) ರನ್ನು ಸೂರ್ಯನ ಎಡಬಲ ಬಿಡಿಸಲಾಗಿರುತ್ತದೆ. ಸೂರ್ಯನ ಬಲಗೈಯ ವಿಕಸಿತ ಕಮಲಪುಷ್ಪವು ಹಗಲು ಹೊತ್ತನ್ನು ಎಡಗೈಯಲ್ಲಿನ ಮೊಗ್ಗಾಗಿರುವ ಕಮಲ ಪುಷ್ಪವು ರಾತ್ರಿಯನ್ನು ಸೂಚಿಸುತ್ತದೆ. ಏಳು ದಿನಗಳ ಸಂಕೇತವಾಗಿ ಸಪ್ತಾಶ್ವಗಳನ್ನು ಪ್ರಭಾವಳಿಯಲ್ಲಿ ೧೨ ತಿಂಗಳ ಸಂಕೇತಿಸುವ ದ್ವಾದಶಾದಿತ್ಯರನ್ನು (ಸೂರ್ಯನ ೧೨ಜನ ಸಹೋದರರು) ಇಲ್ಲವೆ ನವ ಗ್ರಹಗಳನ್ನು ಖಂಡರಿಸಲಾಗಿರುತ್ತದೆ.

ನಮ್ಮ ತಾಲೂಕಿನ ಪ್ರಾಚೀನ ಸೂರ್ಯ ಶಿಲ್ಪ ಇರುವುದು ಬಾಗಳಿಯಲ್ಲಿ. ಹರಪನಹಳ್ಳಿ ತಾಲೂಕು ಕೇಂದ್ರದ ಆಗ್ನೇಯದಿಕ್ಕಿಗೆ ೮ ಕಿ.ಮೀ. ದೂರ ಇರುವ ಈ ಊರಿನ

* ಪತ್ರಕರ್ತ (ನಿವೃತ್ತ), ಸಂತೇಬೆನ್ನೂರು, ದಾವಣಗೆರೆ ಜಿಲ್ಲೆ–೫೭೭೫೫೨.

ಉತ್ತರಕ್ಕೆ ಕೆರೆಏರಿಯ ಕೆಳಗೆ ಕಲ್ಲೇಶ್ವರ ದೇವಸ್ಥಾನವಿದೆ. ಇದೊಂದು ತ್ರೈತರುಷ ದೇವಾಲಯವಾಗಿದೆ. ಇದು ಚಾಲುಕ್ಯರ ಕಾಲದಲ್ಲಿ ನಿರ್ಮಿತವಾಗಿದ್ದು ಇಲ್ಲಿಯ ಮುಖ್ಯದೇವರು ಕಲ್ಲೇಶ್ವರ.ಕರ್ನಾಟಕದ ಖಜುರೂಹು ಎಂದು ಕರೆಯಲ್ಪಡುವ ಈ ದೇವಸ್ಥಾನದಲ್ಲಿ ಪೂರ್ವಕ್ಕೆ ಎದುರಾಗಿ ಶಿವಲಿಂಗ ಅದರ ಎದರು ನಂದಿ ಇದ್ದರೆ, ದಕ್ಷಿಣಕ್ಕೆ ನರಸಿಂಹಸ್ವಾಮಿ ವಿಗ್ರಹವಿದೆ ಪಶ್ಚಿಮಾಭಿಮುಖವಾಗಿ ಸೂರ್ಯನಾರಾಯಣ ಗುಡಿ ಪ್ರತ್ಯೇಕವಾಗಿ ಇದೆ ಇಲ್ಲಿ ನಾಲ್ಕು ಅಡಿ ಎತ್ತರದ ಸರ್ವಾಲಂಕೃತವಾಗಿ ಸೂರ್ಯನಾರಾಯಣ ವಿಗ್ರಹವಿದ್ದು ಸಮಬಾಹುವಿನಲ್ಲಿ ನಿಂತಿರುವ ಈ ವಿಗ್ರಹ ಸುಂದರವಾಗಿದ್ದು ಈಗಲೂ ಭಿನ್ನವಾಗದೆ ಪೂಜೆಗೊಳ್ಳುತ್ತಿದೆ. ಪಾಣಿಪೀಠದಲ್ಲಿ ಸಪ್ತಾಶ್ವಗಳನ್ನು ಅರುಣ ಓಡಿಸುವಂತ್ತಿದ್ದು ಪ್ರಭಾವಳಿಯಲ್ಲಿ ನವಗ್ರಹ ಶಿಲ್ಪ ಸುತ್ತಲೂ ಬಿಡಿಸಿದ್ದು ಎರಡೂ ಕೈಯಲ್ಲಿ ಕಮಲ ಪುಷ್ಪ ಹಿಡಿದುಕೊಂಡಿದೆ. ಪಕ್ಕದಲ್ಲಿ ಉಷಾ-ಪ್ರತ್ಯುಷರು ಇದ್ದು ಇದು ಈ ಜಿಲ್ಲೆಯ ಅತೀ ಪ್ರಾಚೀನ ವಿಗ್ರಹವಾಗಿದೆ. ಅಲ್ಲಿರುವ ಒಂದು ಶಾಸನದಲ್ಲಿ ಅಹಮಲ್ಲನ ಕಾಲದಲ್ಲಿ ಅವನ ಮಹಾಸಾಮಂತ ಆಯ್ತವರ್ಮ ಕಿಸುನಾಡು-೭೦, ಕೋಗಿಲೆ-೫೦ ಆಳುತ್ತಿದ್ದಾಗ ಬಾಳ್ಗುಳಿಯ ೫೦ಜನರು ದುಗ್ಗಿಮಯ್ಯ ಪ್ರತಿಷ್ಟಾಪಿಸಿದ ಆದಿತ್ಯ ದೇವರಿಗೆ ದತ್ತಿ ಬಿಟ್ಟಿದ್ದನ್ನು ಸೂಚಿಸುತ್ತದೆ. ಇಲ್ಲಿನ ಕಲ್ಲೇಶ್ವರ ದೇವಸ್ಥಾನದ ಗರ್ಭಗುಡಿ ಹಿಂದೆ ವಾಯವ್ಯದಿಕ್ಕಿನಲ್ಲಿ ಪಶ್ಚಿಮಾಭಿಮುಖವಾಗಿ ಒಂದು ಸೂರ್ಯನ ಉಬ್ಬುಶಿಲ್ಪ ಇರುವುದು ಕಾಣಬಹುದು. ಇದಲ್ಲದೆ ಬಾಗಳಿಯ ಪ್ರಾಚ್ಯ ಇಲಾಖೆಯ ವಸ್ತು ಸಂಗ್ರಹಾಲಯದಲ್ಲೂ ಒಂದು ಸೂರ್ಯನಾರಾಯಣ ಶಿಲ್ಪವಿದ್ದು ಪ್ರಭಾವಳಿಯಲ್ಲಿ ಐದು ಹೆಡೆಯನಾಗರ ವಿರುವುದು ವಿಶಿಷ್ಟ. ಈ ಎರಡೂ ವಿಗ್ರಹಗಳು ಸರ್ವಾಲಂಕೃತವಾಗಿವೆ.

ಈ ತಾಲೂಕಿನ ಹಗರಿಗುಡಿಹಳ್ಳಿ ಮತ್ತು ಚಿರಸ್ತನಹಳ್ಳಿಯಲ್ಲಿಯೂ ಸೂರ್ಯ ಶಿಲ್ಪಗಳ ಕಂಡುಬಂದಿವೆ. ಈ ಚಿರಸ್ತನಹಳ್ಳಿಯಲ್ಲಿರುವ ಇರುವ ಶಂಕರಲಿಂಗಸ್ವಾಮಿ ದೇವಸ್ಥಾನದ ಬಳಿ ಇರುವ ಶಾಸನದಂತೆ ಇಮ್ಮಡಿ ನೊಳಂಬ ಕೋಗಳಿ ಮತ್ತು ಕದಂಬಳಿ ಆಳುತ್ತಿದ್ದಾಗ ದುಗ್ಗತಿ ಪಂಡಿತನ ಶಿಷ್ಯ ಮಲ್ಲಿಕಯ್ಯನು ಆದಿತ್ಯ, ಮಾತೃಕೆ, ವಿನಾಯಕ ಮುಂತಾದ ಪ್ರತಿಮೆ ಮಾಡಿಸಿದ್ದನ್ನು ಉಲ್ಲೇಖಿಸಿದೆ. ಇದಲ್ಲದೆ ಹರಪನಹಳ್ಳಿ ತಾಲೂಕಿನ ಹಿರೇಮಾಗಳಗೇರಿ, ನಿಲಗುಂದದಲ್ಲಿಯೂ ಸೂರ್ಯಶಿಲ್ಪಗಳು ಇದ್ದುದಾಗಿ ಹೇಳಲಾಗುತ್ತದೆ.

ಹರಿಹರ ತಾಲೂಕಿನ ನಂದಿಗುಡಿಯಲ್ಲಿರುವ ಬಸವೇಶ್ವರ ದೇವಸ್ಥಾನದಲ್ಲಿ ಈಗಲೂ ಪೂಜೆಗೊಳ್ಳುತ್ತಿರುವ ಚಾಲುಕ್ಯರ ಕಾಲದ ಸೂರ್ಯಶಿಲ್ಪವಿದೆ. ಅದನ್ನು ಸೂರ್ಯನೆಂದು ಗುರುತಿಸದೆ ಅದನ್ನು ನೀಲಮ್ಮ ಎಂದು ಹೆಣ್ಣು ದೇವತೆ ಎಂದು ಕರೆಯುವುದು ಅಚ್ಚರಿ ತರುತ್ತದೆ. ಈಗಲೂ ಅಲ್ಲಿನ ಬಸವಣ್ಣನಗೆ ಈ ನೀಲಮ್ಮ ಶಿಲ್ಪಕ್ಕೆ (ಸೂರ್ಯ) ಶಿವರಾತ್ರಿಯಾದ ೧೧ದಿನಕ್ಕೆ ಮದುವೆಯನ್ನು ಮಾಡುತ್ತಾರಂತೆ. ೩ಅಡಿ ಎತ್ತರದ ಚಾಲುಕ್ಯ ಶೈಲಿಯ ಈ ಸುಂದರ ಶಿಲ್ಪ ಕೋಲುಮುಖವಾಗಿದ್ದು ಸರ್ವಾಲಂಕೃತವಾಗಿದೆ. ಮಕರ ತೋರಣದಲ್ಲಿ ನವಗ್ರಹಗಳ ಚಿತ್ರವನ್ನು ಕೊರೆಯಲಾಗಿದೆ. ಈ ಸೂರ್ಯನಾರಾಯಣನಗೆ ಸಾರಥಿ ಅರುಣನಾಗಲಿ ಅಶ್ವಗಳನ್ನಾಗಲಿ ಹಾಗೂ ಉಷ ಪ್ರತ್ಯುಷರನ್ನಾಗಲಿ ಇರವುದಿಲ್ಲ. ಸೂರ್ಯನ ಎಡಬಲದಲ್ಲಿ ಶಿವಲಿಂಗ, ಬಸವಣ್ಣನ ಪ್ರತಿಮೆಗಳಿದ್ದು ಇದರ ಎದುರುಗಡೆ ದೊಡ್ಡ ನಂದಿವಿಗ್ರಹವಿದೆ. ಇದೇ ತರಹೆ ಸೂರ್ಯವಿಗ್ರಹ ಸಮೀಪದ ಕೂಕ್ಕನೂರಿನಲ್ಲಿಯೂ ಇದೆ. ಹರಿಹರ ತಾಲೂಕಿನ ಹರ್ಲ್ಲಾಪುರ, ದೇವರ ಬೆಳೆಗೆರೆ, ನಂದಿತಾವರೆಗಳಲ್ಲಿಯೂ ಸೂರ್ಯವಿಗ್ರಹ ವಿರುವುದು ಕಾಣಬಹುದಾಗಿದೆ. ಇದೇ ತಾಲೂಕಿನ ಭಾನುವಳ್ಳಿಯೂ ಒಂದು ಭಾಸ್ಕರ ಕ್ಷೇತ್ರವಾಗಿರುವ ಸಾಧ್ಯತೆ ಇದೆ.

ದಾವಣಗೆರೆ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಸೂರ್ಯ ವಿಗ್ರಹಗಳು ಕಂಡುಬಂದಿರುವುದು ದಾವಣಗೆರೆ ತಾಲೂಕಿನಲ್ಲಿ. ದಾವಣಗೆರೆ ತಾಲೂಕಿನ ಬಾಡ, ಆನಗೊಡು, ಲೋಕಿಕೆರೆ, ಮಳಲಕೆರೆ, ಕೂಗ್ಗನೂರು, ಕೊಡಗನೂರು, ಕಂದಗಲ್ಲು, ಶ್ಯಾಗಲೆ, ಅಣಬೇರು, ನಲ್ಕುಂದ, ಕಬ್ಬೂರುಗಳಲ್ಲಿ ಸೂರ್ಯನ ವಿಗ್ರಹಗಳಿದ್ದು ಬಹಳಷ್ಟು ವಿಗ್ರಹಗಳು ಭಿನ್ನವಾಗಿವೆ. ಶ್ಯಾಗಲೆಯಲ್ಲಿ ನಾನು ನೋಡಿರುವ ಸೂರ್ಯವಿಗ್ರಹ ಈಗ ಭೂಗತಮಾಡಿ ಹೊಸವಿಗ್ರಹ ಮಾಡಿಸಿದ್ದಾರೆ. ಆನೆಕೊಂಡದಲ್ಲಿ ಒಂದು ಭಗ್ನ ಸೂರ್ಯಶಿಲ್ಪವಿದೆ. ಇದೇ ತಾಲೂಕಿನ ಬೇತೂರುನಲ್ಲಿಯೂ ತ್ರೈಪುರುಷ ದೇವಾಲಯವಿದ್ದು ಅಲ್ಲಿಯೂ ಸೂರ್ಯಶಿಲ್ಪ ಇದ್ದ ಸಾಧ್ಯತೆ ಇದೆ.

ಚನ್ನಗಿರಿ ತಾಲೂಕಿನ ಮೆದಿಕೆರೆಯಲ್ಲಿ ಒಂದು ಸುಂದರ ಸೂರ್ಯನಾರಾಯಣ ವಿಗ್ರಹವಿದೆ. ಅಲ್ಲಿನ ಪುರಾತನ ಹಿಂದಿದ್ದ ದೇವಾಲಯವನ್ನು ಪೂರಾ ತೆಗೆದು ಹೊಸ ದೇವಸ್ಥಾನ ನಿರ್ಮಿಸುತ್ತಿದ್ದಾರೆ. ಈ ಸೂರ್ಯನಾರಾಯಣ ಬಹಳ ಮುದ್ದಾಗಿದ್ದು ಮಕರ ತೋರಣದಲ್ಲಿ ನವಗ್ರಹಗಳನ್ನು ಕಾಲಬಳಿ ಉಷಾ-ಪ್ರತ್ಯುಷರನ್ನು ಕಂಡರಿಸಲಾಗಿದೆ. ಪಾಣಿಪೀಠದಲ್ಲಿ ಸಪ್ತಾಶ್ವಗಳನ್ನು ಅರುಣನೊಂದಿಗೆ ಬಿಡಿಸಲಾಗಿದೆ.

ಚನ್ನಗಿರಿ ತಾಲೂಕಿನ ಹಳೆ ನಲ್ಕುದುರೆಯ ಕಲ್ಲಪ್ಪನ ಗುಡಿಯಲ್ಲಿ ಭಿನ್ನವಾದ ಸೂರ್ಯವಿಗ್ರಹವಿದೆ. ಇದು ತಾಲೂಕಿನ ಅತಿ ಪ್ರಾಚೀನ ಸೂರ್ಯವಿಗ್ರಹವಾಗಿದೆ. ಇದಲ್ಲದೆ ಈ ತಾಲೂಕಿನ ಬಸವಾಪಟ್ಟಣದಲ್ಲಿ ಒಂದು ಬಿನ್ನ ಸೂರ್ಯಶಿಲ್ಪವಿದೆ. ನಮ್ಮ ಮಾಜಿ ಮುಖ್ಯಮಂತ್ರಿಗಳಾದ ಜೆ.ಹೆಚ್.


ಬಾಗಳಿ ಕಲ್ಲೇಶ್ವರ ದೇವಸ್ಥಾನದಲ್ಲಿರುವ ಸೂರ್ಯ ಶಿಲ್ಪ


ಬಾಗಳಿ ಪ್ರಾಚ್ಯ ವಸ್ತು ಇಲಾಖೆಯ ಸಂಗ್ರಹಾಲಯದಲ್ಲಿರುವ ಸೂರ್ಯ ಶಿಲ್ಪ


ಮೆದಿಕೆರೆ ಗ್ರಾಮದಲ್ಲಿರುವ ಸೂರ್ಯ ಶಿಲ್ಪ

ಪಟೇಲ್‌ರ ಗ್ರಾಮವಾದ ಕಾರಿಗನೂರಿನಲ್ಲಿಯೂ ಒಂದು ಸೂರ್ಯಶಿಲ್ಪವಿದದ್ದು ಅವರಿಗೆ ಯಾರೂ ಏನೋ ಹೇಳಿದರೆಂದು ಅಲ್ಲಿದ್ದ ಸೂರ್ಯನ ವಿಗ್ರಹವನ್ನು ಸಮುದ್ರಕ್ಕೆ ಹೋಗಿ ಹಾಕಿ ಬಂದಿದ್ದಾರೆ.

ಇನ್ನು ಈ ತಾಲೂಕಿನ ಕೋಗಲೂರಿನ ಕಲ್ಲೇಶ್ವರ ದೇವಸ್ಥಾನದಲ್ಲಿರುವ ಶಾಸನ ಅದನ್ನು ಆದಿತ್ಯವೊಳಲು ಎಂದು ಕರೆದಿದೆ. ಆದರೆ ಅಲ್ಲಿಯ ಗರ್ಭಗುಡಿಯಲ್ಲಿ ಸೂರ್ಯವಿಗ್ರಹ ಇಲ್ಲ. ಆ ವಿಗ್ರಹ ಎಲ್ಲಿಗೆ ಹೋಯಿತು ಗೊತ್ತಾಗಿಲ್ಲ.ಇನ್ನೊಂದು ಗರ್ಭಗುಡಿಯಲ್ಲಿದ್ದ ನಾರಾಯಣ ವಿಗ್ರಹ ಮಾತ್ರ ಈಗ ಶಿವಮೊಗ್ಗದ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಚನ್ನಗಿರಿ ತಾಲೂಕಿನ ಕಲ್ಕೆರೆ, ತಾಲೂಕ್ ಕೇಂದ್ರ ಚನ್ನಗಿರಿಯಲ್ಲಿಯೂ ಮೂರು ಗರ್ಭಗುಡಿಗಳಿರುವ ದೇವಾಲಯವಿದ್ದು ಅಲ್ಲೂ ಈಗ ಸೂರ್ಯಶಿಲ್ಪ ಕಾಣುತ್ತಿಲ್ಲ ಕೇಳಿದರೆ ಮಹಮದಿಯರ ಧಾಳಿಗೆ ಅವೆಲ್ಲಾ ಹಾಳಾಗಿವೆ ಎಂದು ಹೇಳಲಾಗುತ್ತಿದೆ. ಸಂತೇಬೆನ್ನೂರಿನ ಐತಿಹಾಸಿಕ ಪುಷ್ಕರಣಿಯ ಪೂರ್ವ ಮಂಟದಲ್ಲೂ ಸೂರ್ಯನ ಉಬ್ಬು ಶಿಲ್ಪವಿದೆ.

ಇನ್ನೂ ಹೊನ್ನಾಳಿ ತಾಲೂಕಿನ ಕುರುವ, ಬಳ್ಳೇಶ್ವರ, ತೀರ್ಥರಾಮೇಶ್ವರಗಳಲ್ಲೂ ಸೂರ್ಯ ಶಿಲ್ಪ ಕಂಡುಬಂದಿದ್ದು ನನಗೆ ದೊರೆತ ಮಾಹಿತಿಯಂತೆ ಈ ಜಿಲ್ಲೆಯ ಜಗಲೂರು ತಾಲೂಕಿನಲ್ಲಿ ಮಾತ್ರ ಯಾವ ಸೂರ್ಯ ಶಿಲ್ಪ ಕಂಡು ಬಂದಿರುವುದಿಲ್ಲ.

## ಆಧಾರ ಗ್ರಂಥಗಳು


೧. ಇತಿಹಾಸ ದರ್ಶನ, ಸಂ. ೧೧, ೧೨, ೧೩, ೧೫, ೧೯ ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨. District Gazatters Shimoga, chitradurga and Bellary Govt of Mysore / Karnataka Bangalore.

೩. ಶಾಸನ ಸಂಪುಟ, ಬಿ.ಎಲ್. ರೈಸ್ (ಶಿವಮೊಗ್ಗ, ಚಿತ್ರದುರ್ಗ).

೪. ಬಳ್ಳಾರಿ ಜಿಲ್ಲಾ ಶಾಸನ ಸಂಪುಟ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೫. ದಾವಣಗೆರೆ ಇದು ನಮ್ಮ ಜಿಲ್ಲೆ, ಟಿ.ಗಿರಿಜ.

೬ ಹೊನ್ನಲೆಗಳು, ಡಾ. ನಾ. ಕೊಟ್ರೇಶ್ ಉತ್ತಂಗಿ.

೭. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಕುಂಬಾ ಸದಾಶಿವಪ್ಪ.



# ಹಂಪಿಯ ಶಿಲ್ಪಗಳಲ್ಲಿ ಗ್ರಹಣದ ಶಿಲ್ಪಗಳು

ಧನುಂಜಯ ಸಿ.*

ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯವು ಧಾರ್ಮಿಕ ರಕ್ಷಣೆಗೋಸ್ಕರ ಉದಯಿಸಿದ ಸಾವ್ರಾಜ್ಯವಾಗಿದ್ದು, ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ತನ್ನದೇ ಆದ ಮಹತ್ವವನ್ನು ಪಡೆದು ಬೆಳವಣಿಗೆ ಕಂಡಿರುವುದನ್ನು ಕಾಣಬಹುದು. ಇವುಗಳ ಜೊತೆಗೆ ಈ ಸಾಮ್ರಾಜ್ಯವು ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೂ ವಿಶೇಷ ಸ್ಥಾನಮಾನ ನೀಡಿದ್ದರು ಎಂಬುದನ್ನು ಇಂದಿಗೂ ಹಂಪಿಯಲ್ಲಿ ಕಂಡುಬರುವ ಹಲವು ದೇವಾಲಯಗಳು ಮತ್ತು ಸ್ಮಾರಕಗಳಿಂದ ನಾವು ತಿಳಿಯ ಬಹುದು.

ಪ್ರಸ್ತುತ ಹಂಪಿಯಲ್ಲಿ ಹಲವು ಹೊಸ ಹೊಸ ವಿಚಾರಗಳನ್ನು ತಿಳಿಸುವಂತಹ ಸಾಕಷ್ಟು ಶಿಲ್ಪಗಳು ನನಗೆ ಕಂಡುಬಂದಿರುತ್ತವೆ. ಅಂತಹವುಗಳಲ್ಲಿ ಮುಖ್ಯವಾಗಿರುವ ಗ್ರಹಣದ ಶಿಲ್ಪಗಳನ್ನು ಪರಿಚಯಿಸುವುದರ ಜೊತೆಗೆ ಈ ಗ್ರಹಣದ ಶಿಲ್ಪಗಳ ಹಿನ್ನೆಲೆ, ಸ್ಥಳನಿರ್ದೇಶನ, ಮಹತ್ವ ಮತ್ತು ಗ್ರಹಣದ ಕುರಿತು ಜನಸಾಮಾನ್ಯರಲ್ಲಿರುವ ನಂಬಿಕೆ ಆಚರಣೆಗಳನ್ನು ತಿಳಿಸುವುದು ಪ್ರಸ್ತುತ ಲೇಖನದ ಉದ್ದೇಶ ವಾಗಿದೆ. ಪ್ರಸ್ತುತ ಹಂಪಿಯಲ್ಲಿ ನನಗೆ ಸಾಕಷ್ಟು ಗ್ರಹಣದ ಶಿಲ್ಪಗಳು ಕಂಡುಬಂದಿವೆ.

ಗ್ರಹಣ ಎಂದರೇನು? ಎಂಬುದರ ಕುರಿತು ಎರಡು ರೀತಿಯ ವಾದಗಳನ್ನು ನೋಡಬಹುದು.

ಪುರಾಣದ ಹಿನ್ನೆಲೆಯಲ್ಲಿ ಈ ಸಂಬಂಧದ ಕಥೆ ಎಲ್ಲರಿಗೂ ತಿಳಿದಿರುವುದೇ ಆಗಿದೆ. ಸುರಾಸುರರು ಸಮುದ್ರ ಮಥನ ಮಾಡುವ ಸಂದರ್ಭದಲ್ಲಿ ಅಮೃತ ಸಿದ್ಧಿಸಿತು. ಅದನ್ನು ಸುರಾಸುರರಿಗೆ ಹಂಚುವ ಕೆಲಸ ಮೋಹಿನಿಯ ರೂಪ ಧರಿಸಿದ್ದ ವಿಷ್ಣುವಿನದಾಗಿತ್ತು. ಜಾಣತನದಿಂದ ಈ ಮೋಹಿನಿ ಸುರರಿಗೆ ಅಮೃತವನ್ನು, ಅಸುರರಿಗೆ ಮದಿರೆಯನ್ನು ಹಂಚು ತ್ತಿದ್ದಳು. ಇದನ್ನು ತಿಳಿದ ಸ್ವರ್ಭಾನು ಎಂಬ ಅಸುರ ತನ್ನ ಪಂಕ್ತಿಯನ್ನು ಬಿಟ್ಟು ಸುರರ ನಡುವೆ ಕುಳಿತನು. ಮೋಹಿನಿಯು ಇದನ್ನು ಅರಿಯದೇ ಅಮೃತವನ್ನು ಬಡಿಸಿದಳು. ಆಗ ಅಸುರ ಅಮೃತವನ್ನು ನುಂಗುವುದರಲ್ಲಿದ್ದಾಗ ಸೂರ್ಯಚಂದ್ರರು ಈ ವಿಷಯವನ್ನು ಮೋಹಿನಿಗೆ ತಿಳಿಸಿಬಿಟ್ಟರು. ಆಗ ಮೋಹಿನಿಯ ರೂಪದಲ್ಲಿದ್ದ ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಸ್ವರ್ಭಾನುವಿನ ರುಂಡವನ್ನು ಕತ್ತರಿಸಿದನು. ಕಂಠದ ಮೇಲ್ಭಾಗದಲ್ಲಿ ಅಮೃತ ಉಳಿದಿದ್ದರಿಂದ ಅದು ಅಮರ ವಾಯಿತು[೧]. ಹಾಗಾಗಿ ರುಂಡಕ್ಕೆ ರಾಹುವೆಂದು, ಮುಂಡಕ್ಕೆ ಕೇತು ಎಂದು ಹೆಸರಾಯಿತು. ಅವು ಪೂರ್ವದ್ವೇಷದಿಂದ ಆಗಾಗ್ಗೆ ಸೂರ್ಯಚಂದ್ರರನ್ನು ನುಂಗಲು ಹೋಗುವುದೇ ಗ್ರಹಣವೆಂದು ಪ್ರಸಿದ್ಧವಾಗಿದೆ[೨].



ಸೂರ್ಯಗ್ರಹಣದ ಶಿಲ್ಪ





ಚಂದ್ರಗ್ರಹಣದ ಶಿಲ್ಪಗಳು

* ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ, ವಿದ್ಯಾರಣ್ಯ-೫೬.

ಇಂತಹ ಕಥೆಗಳನ್ನು ಇಂದಿಗೂ ಇರುವುದನ್ನು ನಾವು ಕಾಣಬಹುದು. ಹಂಪಿಯ ಅನೇಕ ದೇವಾಲಯಗಳಲ್ಲಿ ಹಾವಿನಂತಹ ಪ್ರಾಣಿಯೊಂದು ಸೂರ್ಯನನ್ನು ಅಥವಾ ಚಂದ್ರನನ್ನು ನುಂಗುತ್ತಿರುವ ಶಿಲ್ಪಗಳ ಕೆತ್ತನೆಗಳಿವೆ. ಹಾಗಾಗಿ ಈ ಕಥೆ ಈ ಪರಿಸರದಲ್ಲಿ ಹೆಚ್ಚು ಪ್ರಚಾರ ಪಡೆದುಕೊಂಡಿದೆ ಎಂದೇ ಹೇಳಬಹುದು.

**ವೈಜ್ಞಾನಿಕ ಅನ್ವೇಷಣೆಯ ಪ್ರಕಾರ:** ಗ್ರಹಣ ಎಂದರೆ ಹಿಡಿಯುವುದು ಎಂಬ ಅರ್ಥಬರುತ್ತದೆ[೩]. ಇಲ್ಲಿ ಸೂರ್ಯ, ಭೂಮಿ ಮತ್ತು ಚಂದ್ರರು ಒಂದೇ ರೇಖೆಯಲ್ಲಿ ನೇರವಾಗಿ ಬಂದರೆ ಗ್ರಹಣಗಳು ಏರ್ಪಡುತ್ತವೆ. ಹಾಗೆಯೇ ಒಂದು ಆಕಾಶಕಾಯದ ನೆರಳಿನಿಂದಾಗಿ ಮತ್ತೊಂದು ಆಕಾಶಕಾಯ ಮರೆಯಾಗುವುದು ಅಥವಾ ಮಸುಕಾಗುವುದೇ ಗ್ರಹಣವೆಂದು ಸಾಮಾನ್ಯವಾಗಿ ಅರ್ಥೈಸಬಹುದು[೪].

ಗ್ರಹಣಗಳಲ್ಲಿ ಮುಖ್ಯವಾಗಿ ಸೂರ್ಯಗ್ರಹಣ ಮತ್ತು ಚಂದ್ರಗ್ರಹಣ ಎಂದು ಎರಡು ಬಗೆಯ ಗ್ರಹಣಗಳನ್ನು ಕಾಣಬಹುದು.

* **ಸೂರ್ಯಗ್ರಹಣ** ಎಂದರೇ ಭೂಮಿಯ ಮೇಲೆ ಚಂದ್ರನ ನೆರಳು ಬೀಳುವಾಗ ಸೂರ್ಯಗ್ರಹಣವಾಗುತ್ತದೆ.




* ಹಾಗೆಯೇ ಭೂಮಿಯ ನೆರಳು ಚಂದ್ರನ ಮೇಲೆ ಬೀಳುವಾಗ **ಚಂದ್ರಗ್ರಹಣವಾಗುತ್ತದೆ**[೫].




ಒಟ್ಟಾರೆ ಗ್ರಹಣಗಳೆಂದರೆ ಬೆಳಕು ಮತ್ತು ನೆರಳಿನ ಒಂದು ಆಟ ಅಥವಾ ಕ್ರಿಯೆ ಎಂದು ಹೇಳಬಹುದು. ಹೀಗೆ ಗ್ರಹಣದ ಕುರಿತಾಗಿರುವ ಈ ಎರಡು ವಾದಗಳಲ್ಲಿ ಪುರಾಣದ ಕಥೆಯು ಕೇವಲ ಕಲ್ಪನೆಯೆಂದೇ ಹೇಳಬಹುದು. ಆದರೆ ವೈದಿಕ ಕಾಲದ ಜನರಿಗೆ ಆಕಾಶಕಾಯಗಳ ಚಲನೆ ಮತ್ತು ಗ್ರಹಣಗಳ ಕುರಿತು ಅವರಿಗೆ ತಿಳಿದಿತ್ತೆಂಬ ವಿಚಾರಗಳು ನಮಗೆ ಸಾಹಿತ್ಯ ಆಕರಗಳಿಂದ ತಿಳಿದುಬರುತ್ತದೆ.

ಹಾಗೆಯೇ ಧಾರ್ಮಿಕ ವಿಧಿಗಳ ಬಗ್ಗೆಯೂ ಸಹ ಅನೇಕ ನಂಬಿಕೆಗಳು ಬೆಳೆದುಬಂದಿವೆ. ಉಪವಾಸ ಮಾಡುವುದು, ತೀರ್ಥಸ್ನಾನ ಮಾಡುವುದು, ಜಪ, ಯಜ್ಞ, ಗ್ರಹಶಾಂತಿ ನಡೆಸುವುದು ಈ ಬಗೆಯ ಅನೇಕ ನಂಬಿಕೆಗಳಿವೆ. ಆದರೆ ಈಗ ಗ್ರಹಣದ ವೈಜ್ಞಾನಕ ತತ್ವವನ್ನು ಚೆನ್ನಾಗಿ ತಿಳಿದಿರುವುದರಿಂದ ಗಾಭರಿಗೆ ಅವಕಾಶವಿಲ್ಲ. ಆದರೂ ಆಚರಣೆ ಮಾತ್ರ ರೂಢಿಯಲ್ಲಿ ಉಳಿದುಬಿಟ್ಟಿರುವುದನ್ನು ನೋಡಬಹುದು.

ಹಾಗೆಯೇ ಗ್ರಹಣಗಳ ಕಾಲವನ್ನು ಶುಭ ಮತ್ತು ಅಶುಭದ ಎರಡೂ ಕಾರ್ಯಗಳಿಗೆ ಬಳಸಿಕೊಳ್ಳುವುದನ್ನು ನಾವು ಕಾಣಬಹುದು. ಈ ಗ್ರಹಣದ ಕಾಲಾವಧಿಯನ್ನು ಶುಭಕಾರ್ಯಕ್ಕೆ ಬಳಸಿರುವುದಕ್ಕೆ ಉದಾಹರಣೆಯನ್ನು ನೀಡುವುದಾದರೆ ಕ್ರಿ.ಶ. ೧೫೧೩ ಜೂನ್ ೮ರಂದು ಸೂರ್ಯಗ್ರಹಣದ ದಿವಸ ಕೃಷ್ಣದೇವರಾಯನು ತನ್ನ ಮರುಪಟ್ಟಾಭಿಷೇಕದ ಕಾಲದಲ್ಲಿ ಅನೇಕ ಗ್ರಾಮಗಳನ್ನು ದಾನವಾಗಿ ನೀಡಿರುವನು. ಇದೇ ದಿವಸವೇ ವಿಠಲನಗೂ, ಹಜಾರರಾಮಸ್ವಾಮಿಗೂ ವೈಭೋಗದ ದಾನಗಳನ್ನು ನೀಡಿದ್ದಾನೆ. ಇದೇ ದಿವಸ ತಿರುಪತಿಯ ವೆಂಕಟರಮಣನಗೂ ದಾನಗಳನ್ನು ನೀಡಿ ೧೬ ಶಾಸನಗಳನ್ನು ಹಾಕಿಸಿರುವನು[೬] ಎಂಬ ವಿಚಾರವು ಕೃಷ್ಣದೇವರಾಯನ ಶಾಸನಗಳ ಸಂಪುಟ ೧ರಲ್ಲಿ ಇರುವುದನ್ನು ನಾವು ಗಮನಸಬಹುದು. ಆದರೆ ಗ್ರಹಣದ ಕಾಲವನ್ನು ಅಶುಭದ ಕಾರ್ಯಗಳಿಗೆ ಬಳಸಿಕೊಳ್ಳುತ್ತಾರೆಂಬುದಕ್ಕೆ ನಮಗೆ ಜನಪದರಲ್ಲಿರುವ ಮೌಖಿಕ ಆಕರಗಳಿಂದ ತಿಳಿಯಬಹುದೇ ವಿನಃ ಯಾವುದೇ ಶಾಸನಗಳಲ್ಲಿ ಉಲ್ಲೇಖವಾಗಿಲ್ಲವೆಂದೇ ಹೇಳಬಹುದು. ಹಾಗಾಗಿ ಗ್ರಹಣದ ಕಾಲವು ಶುಭ ದಿನವೆಂಬುದು ಸಂಕ್ಷಿಪ್ತ ವಿವರಣೆಯಾಗಿದೆ.

ನಂತರ ಇಂತಹ ಗ್ರಹಣಗಳನ್ನು ಉಲ್ಲೇಖಿಸುವಂತಹ ಅಥವಾ ಸೂಚಿಸುವಂತಹ ಸುಮಾರು ೧೬ ಶಿಲ್ಪಗಳು ಹಂಪಿಯಲ್ಲಿ ನಮಗೆ ಕಂಡುಬಂದಿರುತ್ತವೆ. ಅವುಗಳ ಕೊಷ್ಟಕ ಈ ಕೆಳಗಿನಂತಿದೆ.

## ಗ್ರಹಣ ಶಿಲ್ಪಗಳ ಕೋಷ್ಟಕ

| ಕ್ರಮ ಸಂಖ್ಯೆ | ದೇವಾಲಯಗಳು | ಶಿಲ್ಪಗಳ ಸಂಖ್ಯೆ | ಶಿಲ್ಪವಿರುವ ಸ್ಥಳ |
|---|---|---|---|
| ೧. | ಮಾಲ್ಯವಂತ ರಘುನಾಥ ದೇವಾಲಯ | ೮ | * ಪ್ರಕಾರ ಗೋಡೆಯ ಒಳಭಾಗ-೪<br>* ಪ್ರಕಾರ ಗೋಡೆಯ ಹೊರಭಾಗ-೪ |
| ೨. | ಕೃಷ್ಣ ದೇವಾಲಯ | ೨ | * ಪೂರ್ವದ ದ್ವಾರಗೋಪುರ-೧ |
| ೩. | ವರಾಹ ದೇವಾಲಯ | ೨ | * ಪೂರ್ವದ ದ್ವಾರಗೋಪುರ |
| ೪. | ಅಚ್ಯುತರಾಯ ದೇವಾಲಯ | ೨ | * ೧ನೇ ಪ್ರಕಾರಗೋಡೆಯ ದ್ವಾರಗೋಪುರ-೧<br>* ನೂರು ಕಂಬಗಳ ಮಂಟಪದ ಕಂಬಗಳಲ್ಲಿ-೧ |
| ೫. | ಕೋಟಿಶಂಕರ ದೇವಾಲಯ | ೧ | ಮುಖಮಂಟಪದ ಮೇಲ್ಛಾವಣಿ |
| ೬. | ಕನಕಗಿರಿ ಗೋಪುರ ಮುಂಭಾಗದ ಚಿಕ್ಕಗೋಪುರ | ೧ | ಚಿಕ್ಕಗೋಪುರದ ಮೇಲ್ಛಾವಣಿ |

ಸೂರ್ಯಗ್ರಹಣದ ಶಿಲ್ಪಗಳು – ೧೦

ಚಂದ್ರಗ್ರಹಣದ ಶಿಲ್ಪಗಳು – ೬

ಒಟ್ಟಾರೆ ಹಂಪಿ ಪರಿಸರದ ದೇವಾಲಯಗಳಲ್ಲಿ ನಮಗೆ ಗ್ರಹಣವನ್ನು ಉಲ್ಲೇಖಿಸುವಂತ ಅಥವಾ ಸೂಚಿಸುವಂತ ಸಾಕಷ್ಟು ಶಿಲ್ಪಗಳು ಕಂಡುಬಂದಿರುವುದರಿಂದ ಈ ಪರಿಸರದಲ್ಲಿ ಗ್ರಹಣಕ್ಕೆ ಸಂಬಂಧಿಸಿದಂತಿರುವ ಪುರಾಣದ ಕಥೆಯು ಹೆಚ್ಚು ಪ್ರಸಿದ್ಧಿ ಪಡೆದಿತ್ತು ಎಂಬುದನ್ನು ನಾವು ತಿಳಿಯಬಹುದು. ಹಾಗೆಯೇ ಗ್ರಹಣದ ದಿನದಂದೇ ಅನೇಕ ಶುಭಕಾರ್ಯಗಳು ನಡೆದಿರುವುದು ಇಲ್ಲಿನ ಶಾಸನಗಳಿಂದ ನಮಗೆ ತಿಳಿದು ಬರುತ್ತದೆ. ಹಾಗಾಗಿ ಗ್ರಹಣದ ದಿನ ಶುಭ ದಿನವೆಂಬುದು ನನ್ನ ಅಭಿಪ್ರಾಯವಾಗಿದೆ. ಹಾಗೆಯೇ ಗ್ರಹಣಕ್ಕೆ ಸಂಬಂಧಿಸಿದಂತೆ ಹಲವು ನಂಬಿಕೆ ಆಚರಣೆಗಳು ನಾಡಿನಾದ್ಯಂತ ಇದೆ. ವಿಜಯನಗರ ಆಡಳಿತ ಪೂರ್ವದಲ್ಲಿ ದೇವಾಲಯ ಭಿತ್ತಿಶಿಲ್ಪಗಳಲ್ಲಿ ಈ ರೀತಿ ಗ್ರಹಣ ಶಿಲ್ಪಗಳು ತೀರಾ ಕಡಿಮೆ ಎನ್ನಬಹುದು. ವಿಜಯನಗರ, ವಿಜಯ ನಗರೋತ್ತರ ದೇವಾಲಯ ಭಿತ್ತಿಗಳಲ್ಲಿ ಹೆಚ್ಚು ಗ್ರಹಣ ಶಿಲ್ಪಗಳು ಕಂಡುಬರುತ್ತವೆ. ಕರ್ನಾಟಕ ಶಾಸನಗಳನ್ನು ಗಮನಿಸಿದಾಗ ಸೂರ್ಯಗ್ರಹಣ ಕಾಲದಲ್ಲಿ ಹೆಚ್ಚು ದಾನ ದತ್ತಿ ಬಿಟ್ಟಿರುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ. ಹೆಚ್ಚಿನ ಅಧ್ಯಯನದ ಅವಶ್ಯಕತೆ ಕಂಡು ಬರುತ್ತದೆ.

[ಸಿದ್ಧಪಡಿಸಲು ನನಗೆ ಸಲಹೆ ಸೂಚನೆಗಳನ್ನು ನೀಡಿದ ನನ್ನ ಮಾರ್ಗದರ್ಶಕರಾದ ಡಾ. ಸಿ.ಎಸ್. ವಾಸುದೇವನ್ ಅವರಿಗೆ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಗೆಳೆಯರಿಗೆ ನನ್ನ ಕೃತಜ್ಞತೆಗಳು]

### ಆಧಾರಸೂಚಿ

೧. ಶೈಲಜಾ. ಬಿ.ಎಸ್., ೧೯೯೫, ಗ್ರಹಣ, ಬೆಂಗಳೂರು ಅಸೋಸಿಯೇಷನ್ ಸಾರ್ವೈನ್ಸ್ ಎಜುಕೇಷನ್, ಬೆಂಗಳೂರು. ಪು ಸಂ. ೨.

೨. ಗೋಪಾಲಕೃಷ್ಣಶಾಸ್ತ್ರಿ. ಸಿ., ೨೦೦೨, ದಶಾವತಾರ ಉಪನ್ಯಾಸಗಳು, ಕನ್ನಡ ಪ್ರಪಂಚ ಪ್ರಕಾಶನ, ಪು ಸಂ. ೨೭.

೩. ಶೈಲಜಾ. ಬಿ.ಎಸ್., ಪೂರ್ವೋಕ್ತ, ಪು ಸಂ. ೨೩.

೪. ಅಡ್ಯನಡ್ಕ ಕೃಷ್ಣಭಟ್., ೧೯೯೫, ಗ್ರಹಣ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು. ಪು ಸಂ. ೫.

೫. ದುರ್ಗೋಜಿರಾವ್. ಎಸ್.ಎಸ್., ೨೦೦೨, ಆಧುನಿಕ ಖಗೋಳ ವಿಜ್ಞಾನ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪು ಸಂ. ೧೬೦.

೬. ಪರಮಶಿವಮೂರ್ತಿ. ಡಿ.ವಿ. (ಸಂ)., ೨೦೧೦, ಕೃಷ್ಣದೇವರಾಯನ ಶಾಸನಗಳು ಸಂ. ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೭. ಕ್ಷೇತ್ರಕಾರ್ಯದ ವರದಿ.




# ಹಂಪೆಯ ಅಪರೂಪದ ತುಲಾಪುರುಷ ಮಹಾದಾನದ ಶಿಲ್ಪ

ಎಸ್. ನಾಗರಾಜಪ್ಪ*

ಹಂಪಿಯ ವಿರೂಪಾಕ್ಷ ದೇವಾಲಯದ ಮುಂಬದಿಯ ಬಜಾರಿನ ಎಡಬದಿಯ ಸಾಲುಮಂಟಪದಲ್ಲಿ ಕಾಳಿ ದೇವಸ್ಥಾನ ಎಂದು ಪ್ರಸ್ತುತ ಕರೆಯಲ್ಪಡುವ ದೇವಾಲಯದ ಕಂಬದಲ್ಲಿ ಅಪರೂಪದ ತುಲಾಪುರಷ ಮಹಾದಾನದ ಶಿಲ್ಪವಿದೆ. ತುಲಾಪುರಷ ಮಹಾದಾನದ ಉಲ್ಲೇಖಗಳು ಯಥೇಚ್ಛವಾಗಿ ದೊರೆಯುತ್ತವೆ. ಆದರೆ ಶಿಲ್ಪ ದೊರೆತಿರುವುದು ಅತಿ ವಿರಳ.

ಷೋಡಶ ಮಹಾದಾನಗಳಲ್ಲಿ ತುಲಾಪುರಷ ಮಹಾದಾನವೂ ಒಂದು. ಬಂಗಾರ ಮತ್ತು ಇತರೆ ಪ್ರಶಸ್ತ ಲೋಹ ಅಥವಾ ವಸ್ತುಗಳಿಂದ ರಾಜ ಅಥವಾ ಗಣ್ಯ ವ್ಯಕ್ತಿಗಳನ್ನು ತಕ್ಕಡಿಯಲ್ಲಿ ತೂಗಿ, ಅದನ್ನು ದೇವಾಲಯ ಮತ್ತು ಬ್ರಾಹ್ಮಣರಿಗೆ ದಾನ ನೀಡುವುದನ್ನು ತುಲಾಪುರುಷ ದಾನ ಎನ್ನಲಾಗುತ್ತದೆ. ಮತ್ಸ್ಯಪುರಾಣ, ಲಿಂಗಪುರಾಣ ಮತ್ತು ಅಥರ್ವವೇದಪರಿಶಿಷ್ಟಗಳು ಷೋಡಶ ಮಹಾದಾನಗಳ ಬಗ್ಗೆ ವಿವರವಾಗಿ ತಿಳಿಸುತ್ತವೆ. ತುಲಾಪುರುಷ ಮಹಾದಾನವನ್ನು ಶ್ರೇಷ್ಠ ದಾನವೆಂದು ಇವುಗಳು ಬಣ್ಣಿಸಿರುವುದು ಗಮನಾರ್ಹ. ಮಹಾದಾನಗಳನ್ನು ಮಾಡುವಾಗ ಅನುಸರಿಸಬೇಕಾದ ನೀತಿ ನಿಯಮ, ಧಾರ್ಮಿಕ ವಿಧಿವಿಧಾನಗಳನ್ನು ವಿವರವಾಗಿ ಮತ್ಸ್ಯಪುರಾಣವು ತಿಳಿಸುತ್ತದೆ.

ತುಲಾಪುರುಷದಾನ ಎಂಬುದು ಸಂಸ್ಕೃತ ಪದ. ಇದಕ್ಕೆ ತುಲಾಭಾರ, ತುಲಾದಾನ, ತುಲಾಪುರುಷ ದಾನ, ತುಲಾಪುರುಷ ಮಹಾದಾನ, ತುಲಾರೊಹಣ ಮತ್ತು ತುಲಾಧಿರೋಹಣ ಎಂಬ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಭಾರತದ ವಿವಿಧ ಭಾಗಗಳಲ್ಲಿನ ಶಾಸನಗಳಲ್ಲಿ ಷೋಡಶ ಮಹಾದಾನಗಳ ಉಲ್ಲೇಖಗಳಿವೆ. ಆದರೆ ಸಾಹಿತ್ಯ ಕೃತಿಗಳಲ್ಲಿ ಲಭ್ಯವಿರುವಂಥ ದೀರ್ಘ ವಿವರಗಳು ಶಾಸನಗಳಲ್ಲಿ ದೊರೆಯುವುದಿಲ್ಲ.

ತುಲಾಪುರುಷದಾನವನ್ನು ಮಾಡಬೇಕಾದ ಸಂದರ್ಭವನ್ನು ಶಾಸ್ತ್ರಗ್ರಂಥಗಳು ತಿಳಿಸುತ್ತವೆ. ಗ್ರಹಣ, ಸಂಕ್ರಾಂತಿ ವಿಷುವ ಸಂಕ್ರಮಣ, ಮುಂತಾದ ಕೆಲವು ಶುಭ ಮತ್ತು ಅಶುಭ ಸಮಯಗಳಲ್ಲಿ ಮತ್ತು ಯಜ್ಞ ಯಾಗಗಳು, ಹಬ್ಬ ಉತ್ಸವಗಳು, ವಿವಾಹ ಮತ್ತು ಸಂಪತ್ತನ್ನು ಗಳಿಸುವ ಸಂದರ್ಭಗಳಲ್ಲಿ ತುಲಾಪುರುಷ ಮಹಾದಾನ ಮಾಡಬೇಕು. ಆದರೆ ಸೂರ್ಯ ಮತ್ತು ಚಂದ್ರಗ್ರಹಣಗಳ ಸಮಯದಲ್ಲಿ ಹೆಚ್ಚಿನದಾಗಿ ತುಲಾಪುರುಷದಾನ ನೀಡಿರುವುದು ಶಾಸನಗಳಿಂದ ತಿಳಿಯುತ್ತದೆ. ಆದರೆ ರಾಷ್ಟ್ರಕೂಟ ಅರಸರು ತಮ್ಮ ಪಟ್ಟಾಭಿಷೇಕದ ಸಮಯದಲ್ಲಿ ತುಲಾಭಾರ ಸೇವೆ ಮಾಡಿರುವುದು ವಿಶೇಷ. ತುಲಾಪುರುಷದಾನವನ್ನು ಆಚರಿಸಲು ಸಹ ಕೆಲವು ಉದ್ದೇಶಗಳನ್ನು ಶಾಸ್ತ್ರಗ್ರಂಥಗಳು ವಿವರಿಸುತ್ತವೆ. ಮೋಕ್ಷ, ಆಯುವೃದ್ಧಿ ಮತ್ತು ಅಧಿಕ ಸಂಪತ್ತನ್ನು ಕ್ರೊಢಿಕರಿಸುವ ಹಂಬಲವುಳ್ಳ ವ್ಯಕ್ತಿಗಳು ತುಲಾಪುರುಷದಾನ ಮಾಡಬಹುದು. ಇದು ದಾನ ಮಾಡುವವರ ಪೂರ್ವದ ಏಳು ತಲೆಮಾರಿನ ಪೂರ್ವಜರ ದೋಷಗಳನ್ನು ತೊಡೆದುಹಾಕಿ, ಅವರ ಪಾಪಕರ್ಮಗಳನ್ನು ನಿವಾರಿಸುತ್ತದೆ. ಹಾಗಾಗಿ ತುಲಾಪುರುಷ ಮಹಾದಾನ ಶ್ರೇಷ್ಠದಾನವೆಂದು ಶಾಸ್ತ್ರಗ್ರಂಥಗಳು ತಿಳಿಸುತ್ತವೆ. ರಾಜನಿಂದ ಹಿಡಿದು ಜನಸಾಮಾನ್ಯರವರೆಗೆ ಅವರವರ ಶಕ್ತ್ಯಾನುಸಾರ ಯಾವುದೇ ವಸ್ತುವಿನಿಂದ ತುಲಾಭಾರ ಮಾಡಿ ಅವರ ತೂಕದ ವಸ್ತು ಬಟ್ಟೆ, ಹಣ, ಧಾನ್ಯಗಳನ್ನು ದಾನ ಮಾಡುವ ಪದ್ಧತಿ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ಹರಕೆಯ ಸಂಕಲ್ಪವಾಗಿ, ರಾಜಕೀಯ, ಧಾರ್ಮಿಕ, ಸಾಮಾಜಿಕ ಪದ್ಧತಿಯಾಗಿ, ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು, ಇಂದಿಗೂ ವ್ಯಾಪಕವಾಗಿ ತುಲಾಭಾರ ದಾನಪದ್ಧತಿ ಮುಂದುವರೆದು ಬಂದಿದೆ.

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲೂಕಿನ ಹುಂಚದಲ್ಲಿ ಅಪರೂಪದ ತುಲಾಪುರಷ ಮಹಾದಾನದ ಶಿಲ್ಪವಿದೆ. ಸುಂದರವಾಗಿ ಕಡೆಯಲ್ಪಟ್ಟಿರುವ ಶಿಲ್ಪದಲ್ಲಿ ಅರಸ ತುಲಾಭಾರ ಸೇವೆ ಮಾಡಿ, ಆಭರಣಗಳನ್ನು ದಾನ ನೀಡುತ್ತಿರುವುದನ್ನು ತೋರಲಾಗಿದೆ. ಈ ಅರಸನನ್ನು ವಿಕ್ರಮ ಸಾಂತರನೆಂದು ಗುರುತಿಸಲಾಗಿದೆ. ವಿಜಯನಗರದ ಅರಸು ಹಲವು ಮಹಾದಾನಗಳನ್ನು ನೀಡಿದ್ದ ಬಗ್ಗೆ ಶಾಸನಾಧಾರಗಳಿವೆ. ಅದರಲ್ಲಿ ತುಲಾಪುರುಷ ಮಹಾದಾನದ ಆಧಾರಗಳು ಹೆಚ್ಚಿನದಾಗಿರುವುದು ಗಮನಾರ್ಹ. ಇದನ್ನು ಇವರ ಅವಧಿಯಲ್ಲಿ ತುಲಾಭಾರವು ಹೆಚ್ಚು ಪ್ರಾಮುಖ್ಯತೆ ಪಡೆದಿತ್ತು.

* ಸಹಾಯಕ ಶಾಸನತಜ್ಞ, ಭಾರತೀಯ ಪುರಾತತ್ವ ಸರ್ವೇಕ್ಷಣ, ಹೆಬ್ಬಾಳ ೨ನೇ ಹಂತ, ಸಂಕ್ರಾಂತಿ ವೃತ್ತದ ಬಳಿ, ಮೈಸೂರು-೧೭.

ಸಂಗಮ ಅರಸರ ಕಾಲದಲ್ಲಿ ತುಲಾಪುರುಷ ಮಹಾದಾನದ ಉಲ್ಲೇಖಗಳಿದ್ದರೂ ಕೃಷ್ಣದೇವರಾಯ ಮತ್ತು ಅಚ್ಯುತರಾಯನ ಕಾಲದಲ್ಲಿ ಹೆಚ್ಚಿನ ಆಧಾರಗಳು ದೊರೆತಿರುವುದು ಉಲ್ಲೇಖನೀಯ.

ವಿಜಯನಗರ ಕಾಲದ ಸು.೪೦ಕ್ಕೂ ಅಧಿಕ ಶಾಸನಗಳಲ್ಲಿ ತುಲಾಪುರಷ ಭಾಗದ ಉಲ್ಲೇಖಗಳಿವೆ.

ಇಮ್ಮಡಿ ಹರಿಹರರಾಯನು ಕ್ರಿ.ಶ. ೧೩೯೪ರಲ್ಲಿ ತುಂಗಭದ್ರಾ ನದಿಯಲ್ಲಿ ದಡದಲ್ಲಿ ತುಲಾಭಾರ ಸೇವೆ ಮಾಡಿ, ಎರಡು ಹಳ್ಳಿಗಳನ್ನು ಜ್ಯೋತಿಷ್ಯಶಾಸ್ತ್ರಜ್ಞನಿಗೆ ದಾನ ನೀಡಿದ್ದನು. ಒಂದನೇ ದೇವರಾಯನು ಕ್ರಿ.ಶ. ೧೩೯೭ರಲ್ಲಿ ಗೋದಾವರಿ ನದಿತೀರದಲ್ಲಿ ತುಲಾದಾನ ಆಚರಣೆ ಮಾಡಿದ್ದನ್ನು ಅವನ ಶಾಸನವೊಂದು ಅರಹುತ್ತದೆ. ಆಗ ದೇವರಾಯ ಯುವರಾಜನಾಗಿದ್ದು, ಇಮ್ಮಡಿ ಹರಿಹರರಾಯ ಜೀವಂತವಾಗಿದ್ದನು. ಮಲ್ಲಿಕಾರ್ಜುನರಾಯನ ಕ್ರಿ.ಶ. ೧೪೪೮ರ ತಾಮ್ರಶಾಸನವು ತುಂಗಭದ್ರಾನದಿ ತೀರದ ವಿಜಯನಗರ ಪಟ್ಟಣದ ವಿರೂಪಾಕ್ಷನ ಸನ್ನಿಧಿಯಲ್ಲಿ ತುಲಾಭಾರ ಮಹಾದಾನ ಮಾಡಿಕೊಂಡಿದ್ದನು. ಕೃಷ್ಣದೇವರಾಯ ತುಲಾಭಾರ ಸೇವೆ ಮಾಡಿದ ಅನೇಕ ಶಾಸನಗಳು ಕನ್ನಡ, ತೆಲುಗು ಮತ್ತು ತಮಿಳು ಭಾಷೆಯಲ್ಲಿವೆ. ಕೃಷ್ಣದೇವರಾಯನು ಹಂಪಿ, ಕಾಳಹಸ್ತಿ, ವೆಂಕಟಾದ್ರಿ, ಕಂಚಿ, ಶ್ರೀಶೈಲ, ಶೋಣಶೈಲ, ಹರಿಹರ, ಅಹೋಬಲ, ಶ್ರೀರಂಗ, ಕುಂಭಕೋಣ ಮುಂತಾದ ಸ್ಥಳಗಳಲ್ಲಿ ವಿವಿಧ ದಾನಗಳ ಜೊತೆ ತುಲಾಪುರುಷ ಮಹಾದಾನ ಮಾಡಿದ್ದನು. ಅಚ್ಯುತರಾಯನು ಈ ಪರಂಪರೆಯನ್ನು ಮುಂದುವರೆಸಿದನು. ಕ್ರಿ.ಶ.೧೫.೩.೨೩ರ ಕಂಚಿಯ ಶಾಸನವು ಅಚ್ಯುತರಾಯ ತನ್ನ ಪಟ್ಟದರಸಿ ಮತ್ತು ರಾಜಕುಮಾರ ವೆಂಕಟಾದ್ರಿಯೊಡನೆ ಮುತ್ತಿನ ತುಲಾಪುರುಷ ದಾನ ಮಾಡಿದ್ದನ್ನು ಅರಹುತ್ತದೆ. ಇದೇ ರೀತಿ ಕಾಳಹಸ್ತಿಯಲ್ಲಿ ತುಲಾಭಾರ ಮಾಡಿಕೊಂಡಿದ್ದುದಾಗಿ ಅವನ ಕಾಳಹಸ್ತಿಯ ಶಾಸನ ತಿಳಿಸುತ್ತದೆ. ಶ್ರೀಮಂತರು, ರಾಜಪ್ರಮುಖರು ಚಿನ್ನ, ಆಭರಣಗಳು ಅಥವಾ ಮುತ್ತುಗಳಿಂದ ತುಲಾಭಾರ ಮಾಡಿಸಿಕೊಳ್ಳುತ್ತಿದ್ದರು. ಇದು ಸಮಾಜದಲ್ಲಿನ ಅವರ ಸ್ಥಾನಮಾನ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿರುತ್ತಿತ್ತು.

ಹಂಪಿ ಪರಿಸರದಲ್ಲಿ ತುಲಾಪುರುಷ ಮಹಾದಾನ ಮಾಡಿದ ಆಧಾರಗಳಿವೆ. ಗುಲ್ಬರ್ಗಾ ಜಿಲ್ಲೆಯ ಕುಳಗೇರಿ ಯಲ್ಲಿರುವ ೬ನೇ ವಿಕ್ರಮಾದಿತ್ಯನ ಕ್ರಿ.ಶ.೧೧೦೬ರ ಶಾಸನವು ರಾಣಿ ಮೈಲಾಳದೇವಿ ತುಂಗಭದ್ರಾ ನದಿತೀರದ ಪಂಪಾ ಸರೋವರದಲ್ಲಿ ತುಲಾಪುರುಷ ಮಹಾದಾನ ಮಾಡಿ, ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಇದೇ ವರ್ಷ ತ್ರಿಭುವನಮಲ್ಲನ ಮಹಾಮಂಡಳೇಶ್ವರ ಹೆರ್ಮಾಡಿದೇವನ ಅಧೀನದಲ್ಲಿದ್ದ ಬಲ್ಲವರಸ ಪಂಪಾ ಸರೋವರದಲ್ಲಿ ತುಲಾಭಾರ ದಾನ ಮಾಡಿದ್ದನು. ಈ ಎರಡೂ ಹಂಪಿ ಪರಿಸರದಲ್ಲಿ ತುಲಾಭಾರ ಮಹಾದಾನ ಮಾಡಿದ ಅತ್ಯಂತ ಪ್ರಾಚೀನ ಆಧಾರಗಳು. ಈ ಅವಧಿಯಲ್ಲಿ ಪಂಪಾ ಕ್ಷೇತ್ರವು ಅತ್ಯಂತ ಪವಿತ್ರ ಕ್ಷೇತ್ರವೆಂದು ಪರಿಗಣಿತವಾಗಿದ್ದರಿಂದ ಈ ದಾನಕಾರ್ಯಗಳು ಅಲ್ಲೇ ನಡೆದಿದ್ದಂತೆ ತೋರುತ್ತದೆ. ಕ್ರಿ.ಶ. ೧೨–೧೩ನೇ ಶತಮಾನದ ವೇಳೆಗೆ ವಿರೂಪಾಕ್ಷ ದೇವಾಲಯ ಮಹತ್ವ ಪಡೆದುಕೊಂಡಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ಆನಂತರದಲ್ಲಿ ಹಂಪಿಯು ಪ್ರಮುಖ ಸ್ಥಳವಾಗಿ ಮಹತ್ವ ಗಳಿಸಿದ್ದುದು ಗಮನೀಯ ಸಂಗತಿ. ತ್ರಿಯಂಬಕಪುರ (ಗುಂಡ್ಲುಪೇಟೆ ತಾಲೂಕು)ದ ಕ್ರಿ.ಶ. ೧೪೪೮ರ ತಾಮ್ರಶಾಸನವು ವಿಜಯನಗರದ ದೊರೆ ಮಲ್ಲಿಕಾರ್ಜುನರಾಯ ಹೊರಡಿಸಿದ ಶಾಸನ. ರಾಯನು ತುಂಗಭದ್ರಾನದಿ ತೀರದ ವಿರೂಪಾಕ್ಷ ಸನ್ನಿಧಿ (ಇಂದಿನ ಹಂಪಿ)ಯಲ್ಲಿ ತುಲಾಪುರುಷ ಮಹಾದಾನ ಮಾಡಿ, ಕಾಡಸೂರು ಗ್ರಾಮವನ್ನು ಪ್ರೌಢದೇವರಾಯಪುರವೆಂದು ಪ್ರತಿನಾಮ ಮಾಡಿ, ಇವರೊಡನೆ ಮೂರು ಹಳ್ಳಿಗಳನ್ನು ಬ್ರಾಹ್ಮಣರಿಗೆ ದಾನ ನೀಡಿದ್ದನು. ಪ್ರಸ್ತುತ ಶಾಸನವು ಹಂಪಿ ವಿರೂಪಾಕ್ಷನ ಸನ್ನಿಧಿಯಲ್ಲಿ ನಡೆದ ತುಲಾಪುರುಷ ಮಹಾದಾನದ ಆಧಾರ ನೀಡುವ ಮಹತ್ವದ ಶಾಸನವೆಂಬುದು ಪ್ರಮುಖ ಸಂಗತಿ.

ವಿರೂಪಾಕ್ಷ ಬಜಾರಿನ ಬಲಬದಿಯ ಸಾಲುಮಂಟಪ ದಲ್ಲಿ ಪ್ರಸ್ತುತ ಕಾಳಿ ದೇವಾಲಯ ಎಂದು ಕರೆಯಲ್ಪಡುವ ದೇವಾಲಯದ ಕಂಬದಲ್ಲಿ ತುಲಾಪುರುಷ ಮಹಾದಾನದ ಶಿಲ್ಪವಿದೆ. ಇದರ ಜೊತೆ ಇತರ ಶಿಲ್ಪಿಗಳಿರುವುದು ವಿಶೇಷ. ಚಿತ್ರಖಂಡ ಸ್ತಂಭದ ಕೆಳಗಿನ ಭಾಗದಲ್ಲಿ ತುಲಾಭಾರ ಶಿಲ್ಪ ಕೆತ್ತಿರುವರು. ತುಲಾಭಾರ ಅಥವಾ ತಕ್ಕಡಿಯಲ್ಲಿ ಪದ್ಮಾಸನದಲ್ಲಿ ಕುಳಿತಿರುವ ರಾಜಪ್ರಮುಖ ಅಂಜಲಿಮುದ್ರೆಯಲ್ಲಿದ್ದಾನೆ. ಇನ್ನೊಂದು ಬದಿಯಲ್ಲಿ ತುಲಾಭಾರದ ವಸ್ತುವನ್ನು ತೋರಲಾಗಿದೆ. ಮಧ್ಯದಲ್ಲಿ ತಕ್ಕಡಿಗಳಿಗೆ ಹಾಕಿರುವ ತೂಕದಪಟ್ಟಿಯು ಸಮಾನಾಂತರವಾಗಿದೆ. ಗಂಧರ್ವನು ತಕ್ಕಡಿಯನ್ನು ಹಿಡಿದುಕೊಂಡಿದ್ದಾನೆ. ಇದು ಅತ್ಯಂತ ಶ್ರೇಷ್ಠವಾದ ದಾನ ಎಂಬ ಕಲ್ಪನೆ ಇರುವುದರಿಂದ ಇದು ಮೋಕ್ಷದ ಉದ್ದೇಶದಿಂದ ನಡೆಸುವುದರಿಂದಾಗಿ ಬಹುಶಃ ಗಂಧರ್ವನು ತುಲಾಭಾರವನ್ನು ಹಿಡಿದುಕೊಂಡಿರುವಂತೆ ತೋರಲಾಗಿದೆ. ಕಂಬದ ಮಧ್ಯಭಾಗದಲ್ಲಿ ಇಬ್ಬರು ವ್ಯಕ್ತಿಗಳು ತಮ್ಮ ಕೈಗಳನ್ನು ಮೇಲೆತ್ತಿ ನಿಂತಿದ್ದರೆ. ಇಬ್ಬರು ಬಹುಶಃ ಅರಸನ ಆಸ್ಥಾನಕ್ಕೆ ಸಂಬಂಧಪಟ್ಟವರಾಗಿದ್ದು. ಅರಸನನ್ನು ಹೊಗಳುತ್ತಿರಬಹುದು.

ಕಂಬದ ಮೇಲಿನ ಭಾಗದಲ್ಲಿ ರಾಜಪ್ರಮುಖ ಲಿಂಗವನ್ನು ಪೂಜಿಸುತ್ತಿರುವ ಶಿಲ್ಪವಿದೆ. ಅರಸ ಉತ್ತರೀಯವನ್ನು ಎಡಕಂಕುಳಲ್ಲಿ ಇಟ್ಟುಕೊಂಡಿದ್ದಾನೆ. ಬಲಗೈಯಿಂದ ಬಹುಶಃ ಲಿಂಗಕ್ಕೆ ಪುಷ್ಪಾರ್ಪಣೆ ಮಾಡುತ್ತಿದ್ದಂತೆ ತೋರುತ್ತದೆ. ತುಲಾಭಾರ ದಾನವನ್ನು ಮಾಡಿದ ನಂತರ ರಾಜಪ್ರಮುಖನು ವಿರೂಪಾಕ್ಷ ಲಿಂಗವನ್ನು ದರ್ಶನ ಮಾಡಿದ್ದಿರಬೇಕು. ರಾಜಪ್ರಮುಖ ವಿರೂಪಾಕ್ಷನ ದರ್ಶನ ಪಡೆದುದ್ದನ್ನು ಸಂಕೇತಿಸಲು ಬಹುಶಃ ಲಿಂಗದ ಮುಂದೆ ನಿಂತು ಪೂಜಿಸುತ್ತಿರುವಂತೆ ಶಿಲ್ಪವನ್ನು ಹಾಕಿದ್ದಿರಬಹುದು. ಒಟ್ಟಾರೆ ಸನ್ನಿವೇಶವನ್ನು ಅವಲೋಕಿಸಿದರೆ ತುಲಾಪುರುಷ ದಾನವನ್ನು ವಿರೂಪಾಕ್ಷ ದೇವಾಲಯಕ್ಕೆ ನೀಡಿದ್ದಿರಬಹುದು ಎಂದು ಊಹಿಸಬಹುದು. ಪ್ರಸ್ತುತ ಶಿಲ್ಪಗಳಿರುವ ಮಂಟಪವನ್ನು ಕಟ್ಟಿದವರ ಬಗ್ಗೆ ಯಾವುದೇ ಬಗ್ಗೆ ದಾಖಲೆಗಳು ಇಲ್ಲದಿರುವುದರಿಂದ ತುಲಾಭಾರ ಮಹಾದಾನ ಮಾಡಿದ ರಾಜಪ್ರಮುಖನನ್ನು ಗುರುತಿಸುವುದು ಕಷ್ಟದ ಕೆಲಸ.

ತುಲಾಪುರುಷ ಮಹಾದಾನಕ್ಕೆ ಪ್ರತ್ಯೇಕವಾದ ತುಲಾಭಾರ ಮಂಟಪವನ್ನು ವಿಠಲಾಪುರದ ವಿಜಯವಿಠಲ ದೇವಾಲಯದ ನೈರುತ್ಯ ದಿಕ್ಕಿನಲ್ಲಿ ಕಟ್ಟಲಾಗಿದೆ. ಎತ್ತರದ ಎರಡು ಕಂಬಗಳನ್ನು ನಿಲ್ಲಿಸಿ ಅದರ ಮೇಲೆ ದೊಡ್ಡ ತೊಲೆಯನ್ನು ಅಡ್ಡವಾಗಿ ಇರಿಸಲಾಗಿದೆ. ಎರಡೂ ಕಂಬಗಳ ಕೆಳಬದಿಯಲ್ಲಿ ಸುತ್ತಲೂ ಕಲ್ಲು ದಿಮ್ಮಿಗಳನ್ನು ಬಳಸಿ ಚೌಕಾಕಾರದ ಕಟ್ಟೆಯನ್ನು ವ್ಯವಸ್ಥಿತವಾಗಿ ಕಟ್ಟಲಾಗಿದೆ. ಕಂಬಗಳ ಮೇಲಿನ ಅಡ್ಡತೊಲೆಯ ಮೇಲೆ ಮಧ್ಯದಲ್ಲಿ ಮೂರು ಕಳಶಗಳ ಶಾಲಾಕಾರದ ಸುಂದರ ರಚನೆಯನ್ನು ಕಾಣಬಹುದು. ಅಲಂಕಾರದ ದೃಷ್ಟಿಯಿಂದ ವ್ಯಾಳಿಗಳ ರಚನೆಯನ್ನು ಮಾಡಲಾಗಿದೆ. ಕಂಬಗಳ ಮೇಲೆ ಪೂರ್ಣಕುಂಭಗಳಲ್ಲಿ ಕಂಬಗಳಿರುವಂತೆ ಅಲಂಕರಿಸಿರುವುದು ಆಸಕ್ತಿದಾಯಕ. ಕಂಬದ ಸುತ್ತಲೂ ಕೆಳಬದಿಯಲ್ಲಿ ಕಟ್ಟಿರುವ ಕಟ್ಟೆಯಲ್ಲಿ ಅಂಜಲಿಮುದ್ರೆಯಲ್ಲಿ ಇಬ್ಬರು ಪತ್ನಿಯರೊಡನೆ ನಿಂತಿರುವ ರಾಜನನ್ನು ತೋರಲಾಗಿದೆ. ಇವರನ್ನು ಕೃಷ್ಣದೇವರಾಯನೊಡನೆ ನಿಂತಿರುವ ಚಿನ್ನಾದೇವಿ ಮತ್ತು ತಿರುಮಲಾದೇವಿಯರೆಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಶಿಲ್ಪಗಳಿರುವುದರಿಂದ ಇದನ್ನು ಬಹುಶಃ ಶ್ರೀಕೃಷ್ಣದೇವರಾಯ ನಿರ್ಮಿಸಿದ್ದಿರಬಹುದು.

ಹಂಪಿ ಪರಿಸರದಲ್ಲಿ ಪ್ರಮುಖನೊಬ್ಬನ ತುಲಾಪುರುಷ ಮಹಾದಾನದ ಅಪರೂಪದ ಶಿಲ್ಪ ದೊರೆತಿರುವುದು ಗಮನಾರ್ಹ ಸಂಗತಿ. ಈ ಶಿಲ್ಪದಲ್ಲಿನ ಪ್ರಮುಖನನ್ನು ಗುರುತಿಸಲು ಸಾಧ್ಯವಿಲ್ಲ. ಈ ಕಂಬದ ಪೂರ್ವ ಮತ್ತು ಪಶ್ಚಿಮ ಬದಿಯಲ್ಲಿ ಗೋಡೆಗಳನ್ನು ಕಟ್ಟಿರುವುದರಿಂದ ಅಲ್ಲಿನ ಶಿಲ್ಪಗಳು ಮುಚ್ಚಿಕೊಂಡಿವೆ. ಈ ಭಾಗ ತೆರವಾದಲ್ಲಿ ತುಲಾಭಾರಕ್ಕೆ ಸಂಬಂಧಪಟ್ಟ ಶಿಲ್ಪಗಳು ಇಲ್ಲಿ ದೊರಕಬಹುದು.



## ಆಧಾರಸೂಚಿ


೧. ಅನ್ನಟ್ಟೆ ಶ್ಮಿಮಿಡ್‌ಚೆನ್ 'ದ ಕಾನ್ಸೆಫ್ಟ್ ಆಫ್ ತುಲಾಪುರುಷ: ದ ಪುರಾಣಿಕ್ ಅಂಡ್ ಎಫಿಗ್ರಾಫಿಕಲ್ ಎವಿಡೆನ್ಸ್', ಅಡಲ್‌ಬರ್ಟ್ ಜೆ. ಗೈಲ್ ಮತ್ತು ಇತರರು (ಸಂ,) ಸ್ಕ್ರಿಪ್ಟ್ ಅಂಡ್ ಇಮೇಜ್, ಪು. ೧೪೫.

೨. ಸುಂದರ ಅ. (ಸಂ). ಪೂರ್ವೋಕ್ತ, ಪು. ೪೮೯.

೩. ಎ.ಕ., ಸಂ. ೧೩, ಶಾಸನ ಸಂಖ್ಯೆ ೭೨.

೪. ವೆಂಕಟರಮಣಯ್ಯ ಎನ್., ಕಲ್ಲೇಶ್ವರಂ ಇನ್ಸ್‌ಕ್ರಿಪ್ಷನ್ ಆಫ್ ದೇವರಾಯ– I, ಶಕ ೧೨೧೯, ಇ.ಐ., ಸಂ. ೩೬, ಪು. ೧೯೯–೨೦೨.

೫. ಎ.ಕ., ಸಂ. ೩, ಗುಂಡ್ಲುಪೇಟೆ, ಶಾಸನ ಸಂಖ್ಯೆ ೧೪೭.

೬. ಹುಲ್ಷ್ ಇ. ಹಂಪೆ ಇನ್ಸ್‌ಕ್ರಿಪ್ಷನ್ ಆಫ್ ಕೃಷ್ಣದೇವರಾಯ, ಡೇಟೆಡ್ ಶಕ ೧೪೩೦, ಇ.ಐ., ಸಂ.೧, ಪು.೩೬೧–೭೧ ಮತ್ತು ದೇವರಕೊಂಡಾರೆಡ್ಡಿ, ಹಂಪಿ ಶಾಸನಗಳು, ಶಾಸನ ಸಂಖ್ಯೆ ೩೪.

೭. ಎಸ್.ಐ.ಐ., ಸಂ. IX, ಭಾಗ–II, ನಂ. ೫೪೭, ೫೫೨ ಮತ್ತು ಎ.ಆರ್.ಐ.ಇ., ೧೯೫೪–೫೫ ಬಿ. ೩೦೪.

೮. ಎ.ಆರ್.ಐ.ಇ., ೧೯೯೧–೯೨ ಬಿ. ೫೪.

೯. ದೇವರಕೊಂಡಾರೆಡ್ಡಿ (ಸಂ), ಕ.ವಿ.ಶಾ.ಸಂ.–೭, ರಾಯಚೂರು ಜಿಲ್ಲೆ, ಸಿಂದನೂರು ೨೩.

೧೦. ರಾಜಶೇಖರ್ ಎಸ್., ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ್ಸ್, ಪು.




# ಕೆಳದಿ ಕಾಲದಲ್ಲಿ ವಜ್ರಮುಷ್ಠಿ ಕಾಳಗ ಶಿಲ್ಪಗಳು

ಡಾ. ಜಗದೀಶ*

**ಮೈ**ಸೂರು ದಸರಾ ಸಂದರ್ಭದಲ್ಲಿ ಆಯುಧಪೂಜೆಯ ನಂತರ ಸವಾರಿ ತೊಟ್ಟಿಯ ಆವರಣದಲ್ಲಿ ವಜ್ರಮುಷ್ಠಿ ಕಾಳಗ ನಡೆಯುತ್ತದೆ. ಇದು ಮೈಸೂರು ಅರಸರು ಆಚರಿಸುವ ಒಂದು ಸಂಪ್ರದಾಯ. ಇಬ್ಬರು ಜಟ್ಟಿಗಳು ಬಲ ಕೈಯಲ್ಲಿ ವಜ್ರಮುಷ್ಠಿಯನ್ನು ಧರಿಸಿ ಪರಸ್ಪರ ಯುದ್ಧಕ್ಕೆ ತೊಡಗುತ್ತಾರೆ. ಮೊದಲಿಗೆ ಯಾರ ಶಿರಸ್ಸಿನ ಭಾಗದಿಂದ ರಕ್ತ ಬರುತ್ತದೆಯೋ ಅವರು ಸೋತಂತೆ ಮತ್ತು ವಜ್ರಮುಷ್ಠಿಯಿಂದ ರಕ್ತ ಬರಿಸಿದವನು ಗೆದ್ದಂತೆ.

ಮೈಸೂರು ಅರಸರು ದಸರಾ ಪರಂಪರೆಯನ್ನು ವಿಜಯನಗರದ ಅರಸ ನಂತರ ಮುಂದುವರೆಸಿದರೆಂಬುದು ಐತಿಹ್ಯ. ಜೆಟ್ಟಿಗಳು ರಾಜಸ್ಥಾನ ಪ್ರದೇಶದವರಾಗಿದ್ದು ಪ್ರಮುಖವಾಗಿ, ವಜ್ರಮುಷ್ಠಿ ಕಾಳಗ ಇವರಿಗೆ ಸಂಬಂಧಿಸಿದೆ. ವಜ್ರಮುಷ್ಠಿ ಮುಷ್ಠಿಯುದ್ಧದ ಒಂದು ಪ್ರಕಾರ ಎಂದು ತಿಳಿಯ ಬಹುದು. ಹೊಯ್ಸಳ ಅರಸರ ಕಾಲದಲ್ಲಿ ಜಟ್ಟಿಗಳ ಉಲ್ಲೇಖ ಬರುತ್ತದೆ. ಇವರು ನಿಂಬಜಾ ದೇವಿಯ ಆರಾಧಕರು. ಶ್ರೀರಂಗಪಟ್ಟಣದಲ್ಲಿರುವ ಇಂದಿನ ನಿಮಿಷಾಂಬಾ ದೇವಾಲಯ ಮೊದಲು ಮೈಸೂರು ಅರಸರ ಕಾಲದಲ್ಲಿ ನಿಂಬಜಾ ದೇವಿಯ ದೇವಾಲಯವಾಗಿತ್ತು.

ಕೆಳದಿ ಅರಸರು ವಿಜಯನಗರ ಅರಸರಿಂದ ಮೊದಲ ಎಂಟು ಹಳ್ಳಿಗಳ ಮಾಗಣೆ ಪಡೆದು, ನಂತರ ಪ್ರತಿನಿಧಿಗಳಾಗಿ ಆಳ್ವಿಕೆ ಪ್ರಾರಂಭಿಸಿದರು. ವಿಜಯನಗರ ಪತನಾನಂತರ ಸ್ವತಂತ್ರ ಅರಸರಾದರು. ಕ್ರಿ.ಶ. ೧೪೯೯ರಿಂದ ೧೭೬೩ರವರೆಗೆ ಕೆಳದಿ ಅರಸರು ಆಳಿದ್ದಾರೆ. ಕೆಳದಿ ಅರಸು ಕೂಡಾ ವಿಜಯನಗರ ಅರಸರ ಪರಂಪರೆಯನ್ನು ಮುಂದುವರಿಸಿದರು ಎಂದು ಹೇಳಲಾಗುತ್ತದೆ. ದಸರಾ ಆಚರಣೆ ಮಹಾಭಾರತ ಕಾಲ ದಿಂದಲೂ ಇದೆ. ಪಾಂಡವರ ಅಜ್ಞಾತವಾಸ ಕೊನೆಗೊಳ್ಳು ವುದೇ ಶಮೀವೃಕ್ಷದಲ್ಲಿ (ಬನ್ನಿ ಮರದಲ್ಲಿ) ಇಟ್ಟಿದ್ದ ಆಯುಧ ಗಳನ್ನು ಇಳಿಸಿಕೊಂಡ ನಂತರ.

ಶ್ರೀ ಎಂ.ಎನ್. ನರಸಿಂಹಮೂರ್ತಿ ತಮ್ಮ 'ಮಲ್ಲಯುದ್ಧ' ಕೃತಿಯಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಭೀಮನಕಟ್ಟೆ ಅಗ್ರಹಾರ (ಮುನಿಬೃಂದ) ಈಶ್ವರ ದೇವಾಲಯದ ಭಿತ್ತಿಯಲ್ಲಿ ಬಿಂಬಿವಾಗಿರುವ ವಜ್ರಮುಷ್ಠಿ ಕಾಳಗದ ಶಿಲ್ಪ ಕುರಿತಾಗಿ ಉಲ್ಲೇಖಿಸುತ್ತಾರೆ. ಅಲ್ಲದೇ ಹಂಪಿಯ ಮಹಾನವಮಿ ದಿಬ್ಬದಲ್ಲಿರುವ ಮಲ್ಲರ ಶಿಲ್ಪ ಮತ್ತು ಹಂಪಿಯಲ್ಲಿ ಇತರ ಕಡೆ ಲಭ್ಯವಿರುವ ಕುಸ್ತಿ ಶಿಲ್ಪಗಳನ್ನು ಉಲ್ಲೇಖಿಸಿದ್ದಾರೆ.

ಕೆಳದಿ ಕಾಲದ ಕೆಲವು ದೇವಾಲಯಗಳಲ್ಲಿ ವಜ್ರಮುಷ್ಠಿ ಕಾಳಗ ಶಿಲ್ಪಗಳನ್ನು ಬಿಂಬಿಸಲಾಗಿದೆ. ಒಟ್ಟು ಆರು ದೇವಾಲಯಗಳಲ್ಲಿ ವಜ್ರಮುಷ್ಠಿ ಕಾಳಗ ಬಿಂಬಿತವಾಗಿದೆ. ಇಕ್ಕೇರಿ ಪಾರ್ವತಿ ದೇವಾಲಯ, ನಗರ ಕಲ್ಲುಮಠ ಪ್ರದೇಶ ದಲ್ಲಿರುವ ಸಮಾಧಿ ಮಂದಿರ, ಭೀಮನಕಟ್ಟೆಯಲ್ಲಿರುವ ಮೂರು ಈಶ್ವರ ದೇವಾಲಯಗಳ ಭಿತ್ತಿಯಲ್ಲಿ ವಜ್ರಮುಷ್ಠಿ ಕಾಳಗ ಶಿಲ್ಪಗಳಿವೆ.

ಇಕ್ಕೇರಿ ಪಾರ್ವತಿ ದೇವಾಲಯದ ಅರ್ಧಮಂಟಪದ ಕಕ್ಷಾಸನದ ಕೆಳಗಿನ ಅಧಿಷ್ಠಾನ ಭಾಗದಲ್ಲಿ ಪೂರ್ವ ಮತ್ತು ಪಶ್ಚಿಮ ಗೋಡೆಯಲ್ಲಿ ವಜ್ರಮುಷ್ಠಿ ಕಾಳಗದಲ್ಲಿ ತೊಡಗಿರುವ ಇಬ್ಬರು ಜಟ್ಟಿಗಳ ಶಿಲ್ಪವಿದೆ. ಪರಸ್ಪರ ಎದಿರುಬದಿರಾಗಿರುವ ಜೆಟ್ಟಿಗಳು ತಮ್ಮ ಬಲಗೈಯಲ್ಲಿ ವಜ್ರಮುಷ್ಠಿಯನ್ನು ಹಿಡಿದಿದ್ದಾರೆ. ಬಲಭಾಗದಲ್ಲಿರುವ ಜಟ್ಟಿಯು ಬಲಗಾಲಿನ ಮೇಲೆ ಮಂಡಿಯೂರಿ ಕುಳಿತಿದ್ದಾನೆ. ಅವನ ಚಾಚಿದ ಎಡಗಾಲನ್ನು ಬಲಗಡೆ ಇರುವ ಜೆಟ್ಟಿಯು ತನ್ನ ಎಡ ಕೈಯಿಂದ ಹಿಡಿದು ಕೊಂಡಿದ್ದಾನೆ. ಇದೇ ರೀತಿ ಬಲಗಡೆ ಇರುವ ಜಟ್ಟಿಯು ಎಡಗಾಲಿನ ಮೆಲೆ ಮಂಡಿಯೂರಿದ್ದಾನೆ ಮತ್ತು ಅವನ ಚಾಚಿದ ಬಲಗಾಲನ್ನು ಎಡಗಡೆ ಇರುವ ಜಟ್ಟಿಯು ಬಲಗೈ ಯಿಂದ ಹಿಡಿದಿದ್ದಾನೆ. ಬಲಗಡೆ ಇರುವ ಜಟ್ಟಿಯು ವಜ್ರಮುಷ್ಠಿ ಯಿಂದ ಪ್ರಹಾರ ಮಾಡದಂತೆ ಎಡಗಡೆಯ ಜಟ್ಟಿಯು ಅವನ ತೋಳನ್ನು ಕೆಳಕ್ಕೆ ಒತ್ತಿ ಹಿಡಿದಿದ್ದಾನೆ. ಜಟ್ಟಿಗಳು ಹುರಿ ಮೀಸೆಯನ್ನು ಹೊಂದಿ ತಲೆಯನ್ನು ಬೋಳಿಸಿಕೊಂಡಿರು ವಂತೆ ಮತ್ತು ತುದಿಯಲ್ಲಿ ಮಾತ್ರ ಮುಡಿಯನ್ನು ಕಟ್ಟದ್ದಾರೆ. ಕಿವಿಯಲ್ಲಿ ಆಭರಣ ಮತ್ತು ಸೊಂಟದಲ್ಲಿ ಕೌಪೀನ ಧರಿಸಿದ್ದಾರೆ. ಈ ಶಿಲ್ಪದ ಚೌಕಟ್ಟಿನಲ್ಲಿ ಇನ್ನಿಬ್ಬರು ಜಟ್ಟಿಗಳು ನಿಂತಿದ್ದಾರೆ, ಇವರಿಬ್ಬರ ಕೈಯಲ್ಲಿ ಪ್ರಾಯಶಃ ಹಣದ ಗಂಟಿದೆ. ಇದೇ ಮಾದರಿಯ ಶಿಲ್ಪವು ಪಶ್ಚಿಮ ಭಾಗದಲ್ಲಿದೆ. ಚೌಕಟ್ಟಿನಲ್ಲಿರುವ ನಿಂತ ಜಟ್ಟಿಗಳನ್ನು ಹೊರತು ಪಡಿಸಿದಂತೆ ಒಳಗಿರುವ

* (ಅಗಸಿಬಾಗಲವರ), ನಂ. ೩೩, ಮೊದಲ ಅಡ್ಡರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ-೫೭೭೨೦೧.



ನಗರ, ಹೊಸನಗರ ತಾಲೂಕು,
ಕಲ್ಲುಮಠ ಹೊರ ಭಿತ್ತಿ



ಇಕ್ಕೇರಿ, ಸಾಗರ ತಾಲೂಕು, ಅಖಿಲಾಂಡೇಶ್ವರಿ
ದೇವಾಲಯ ಒಳ ಭಾಗ



ಇಕ್ಕೇರಿ, ಸಾಗರ ತಾಲೂಕು, ಅಖಿಲಾಂಡೇಶ್ವರಿ
ದೇವಾಲಯ ಒಳ ಭಾಗ



ಭೀಮನಕಟ್ಟೆ, ತೀರ್ಥಹಳ್ಳಿ
ತಾಲೂಕು ಈಶ್ವರ
ದೇವಾಲಯ (೧) ಹೊರ ಭಿತ್ತಿ





ಭೀಮನಕಟ್ಟೆ, ತೀರ್ಥಹಳ್ಳಿ ತಾಲೂಕು, ಈಶ್ವರ ದೇವಾಲಯ (೨) (೩) ಹೊರ ಭಿತ್ತಿ

ಜೆಟ್ಟಿಗಳ ಶಿಲ್ಪ ಮೇಲೆ ವಿವರಿಸಿದ ಮಾದರಿಯಲ್ಲೇ ಇದೆ. ಬಲಗಡೆ ಇರುವ ಜಟ್ಟಿಯ ವಜ್ರಮುಷ್ಠಿ ಹಿಡಿದ ಕೈಯನ್ನು ಮೇಲೆತ್ತದಂತೆ ಪಟ್ಟು ಹಾಕಿ ಹಿಡಿದಿರುವುದನ್ನು ಕಾಣಬಹುದು.

ಹೊಸನಗರ ತಾಲೂಕು, ನಗರ ಕಲ್ಲುಮಠ ಪ್ರದೇಶ ದಲ್ಲಿರುವ ಸಮಾಧಿ ಮಂದಿರದ ಪೂರ್ವಾಭಿಮುಖವಾಗಿರುವ ಭಿತ್ತಿಯ ಎಡಗಡೆ ಭಾಗದಲ್ಲಿ ವಜ್ರಮುಷ್ಠಿ ಕಾಳಗ ಶಿಲ್ಪ ಇದೆ. ಪರಸ್ಪರ ಎದಿರು ಬದಿರಾಗಿ ನಿಂತಿರುವ ಜಟ್ಟಿಗಳು ಒಬ್ಬರ ಕಾಲಿನ ಪಾದಗಳನ್ನು ಮತ್ತೊಬ್ಬರು ಮೆಟ್ಟಿ ನಿಂತಿದ್ದಾರೆ. ಕಾಲುಗಳಲ್ಲಿ ಕಡಗ ಇದೆ. ಜಟ್ಟಿಗಳು ಉಡಿದಾರ ಮತ್ತು ಚಲ್ಲಣ ಧರಿಸಿದ್ದಾರೆ. ಇಬ್ಬರ ಕುತ್ತಿಗೆಯಲ್ಲಿ ತಾಯತ ಇದೆ. ತೋಳಬಂದಿ ಮತ್ತು ಮುಂಗೈಯಲ್ಲಿ ಕಡಗ ಇದೆ. ಎಡಗಡೆ ಇರುವ ಜಟ್ಟಿಯ ಮೇಲೆತ್ತಿದ ಬಲಗೈಯಲ್ಲಿ ಮತ್ತು ಬಲಗಡೆ ಇರುವ ಜಟ್ಟಿಯ ಮೇಲೆತ್ತಿದ ಎಡಗೈಯಲ್ಲಿ ವಜ್ರಮುಷ್ಠಿ ಎದಿರು ಬದಿರಾಗಿವೆ. ಉಳಿದ ಕೈ ಮತ್ತೊಬ್ಬರ ಬೆನ್ನು ಆವರಿಸಿ ಪಕ್ಕೆಯನ್ನು ಹಿಡಿದಂತಿದೆ.

ಭೀಮನಕಟ್ಟೆಯ ಈಶ್ವರ ದೇವಾಲಯದ (೧) ಹೊರಭಿತ್ತಿಯಲ್ಲಿ ಪರಸ್ಪರ ಎದಿರು ಬದಿರಾಗಿರುವ ನಂತ ಜೆಟ್ಟಿಗಳು ಎಡಗಡೆ ಇರುವ ಜೆಟ್ಟಿಯ ಎಡಗಾಲಿನ ಪಾದವನ್ನು ಬಲಗಡೆ ಇರುವ ಜೆಟ್ಟಿಯು ಬಲಗಾಲಿನ ಪಾದದಿಂದ ಮೆಟ್ಟಿ ನಂತಿದ್ದಾನೆ. ಜಟ್ಟಿಗಳು ಉಡಿದಾರ ಮತ್ತು ಚಲ್ಲಣ ಧರಿಸಿದ್ದಾರೆ. ಇಬ್ಬರ ಕುತ್ತಿಗೆಯಲಿ ತಾಯತ ಇದೆ. ತೋಳಬಂದಿ ಮತ್ತು ಮುಂಗೈಯಲ್ಲಿ ಕಡಗ ಇದೆ. ಎಡಗಡೆ ಮತ್ತು ಬಲಗಡೆ ಇರುವ ಜಟ್ಟಿಯ ಬಲಕೈಗಳಲ್ಲಿರುವ ವಜ್ರಮುಷ್ಠಿಗಳು ಎದಿರು ಬದಿರಾಗಿವೆ. ಮೇಲೆತ್ತಿದ ಎಡಕೈಗಳು ಪರಸ್ಪರ ತಾಗಿವೆ. ಇಬ್ಬರ ಕಿವಿಯಲ್ಲಿ ಆಭರಣ, ಮೇಲೆತ್ತಿ ಕಟ್ಟಿದ ಮುಡಿ ಮತ್ತು ಹುರಿ ಮೀಸೆ ಇದೆ.

ಭೀಮನಕಟ್ಟೆಯ ಈಶ್ವರ ದೇವಾಲಯದ (೨) ಹೊರಭಿತ್ತಿಯಲ್ಲಿ ಪರಸ್ಪರ ಎದಿರುಬದಿರಾಗಿ ಜೆಟ್ಟಿಗಳು ನಿಂತಿದ್ದಾರೆ. ಜಟ್ಟಿಗಳು ಉಡಿದಾರ ಮತ್ತು ಚಲ್ಲಣ ಧರಿಸಿದ್ದಾರೆ. ಇಬ್ಬರ ಕುತ್ತಿಗೆಯಲಿ ತಾಯತ ಇದೆ. ತೋಳಬಂದಿ ಮತ್ತು

ಮುಂಗೈಯಲ್ಲಿ ಕಡಗ ಇದೆ. ಕಾಲುಗಳಲ್ಲಿ ಕಡಗ ಇದೆ. ಎಡಗೆಡೆ ಮತ್ತು ಬಲಗಡೆ ಇರುವ ಜಟ್ಟಿಯ ಬಲಗೈಗಳಲ್ಲಿರುವ ವಜ್ರಮುಷ್ಟಿಗಳು ಎದಿರುಬದಿರಾಗಿವೆ. ಮೇಲೆತ್ತಿದ ಎಡಕೈಗಳು ಪರಸ್ಪರ ಮುಖ ಮಾಡಿವೆ. ಇಬ್ಬರ ಕಿವಿಯಲ್ಲಿ ಆಭರಣ, ಮೇಲೆತ್ತಿ ಕಟ್ಟಿದ ಮುಡಿ ಇದೆ.

ಭೀಮನಕಟ್ಟೆಯ ಈಶ್ವರ ದೇವಾಲಯದ (೩) ಹೊರಭಿತ್ತಿಯಲ್ಲಿ ಪರಸ್ಪರ ಎದಿರುಬದಿರಾಗಿ ಜಟ್ಟಿಗಳು ನಿಂತಿದ್ದಾರೆ. ಜಟ್ಟಿಗಳು ಉಡಿದಾರ ಮತ್ತು ಚಲ್ಲಣ ಧರಿಸಿದ್ದಾರೆ. ಇಬ್ಬರ ಕುತ್ತಿಗೆಯಲ್ಲಿ ತಾಯತ ಇದೆ. ತೋಳಬಂದಿ ಮತ್ತು ಮುಂಗೈಯಲ್ಲಿ ಕಡಗ ಇದೆ. ಕಾಲುಗಳಲ್ಲಿ ಕಡಗ ಇದೆ. ಎಡಗೆಡೆ ಮತ್ತು ಬಲಗಡೆ ಇರುವ ಜಟ್ಟಿಯ ಬಲಕೈಗಳಲ್ಲಿರುವ ವಜ್ರಮುಷ್ಟಿಗಳು ಎದಿರು ಬದಿರಾಗಿವೆ. ಮೇಲೆತ್ತಿದ ಎಡಕೈಗಳು ಪರಸ್ಪರ ತಾಗಿವೆ. ಇಬ್ಬರ ಕಿವಿಯಲ್ಲಿ ಆಭರಣ, ಮೇಲೆತ್ತಿ ಕಟ್ಟಿದ ಮುಡಿ ಇದೆ.

ಕಿರಿಯ ಸೋಮಶೇಖರನಾಯಕನ (ಕ್ರಿ.ಶ. ೧೭೧೪–೧೭೪೦) ಕಾಲದಲ್ಲಿದ್ದ ಮೋದಿ ರುದ್ರ (೧೭೩೨) ನೂರೊಂದು ವಿರಕ್ತರ ಹೆಸರಿನಲ್ಲಿ ವಜ್ರಮುಷ್ಟಿ ಹಿಡಿದ ಜಟ್ಟಿ ಶಾಂತನ ಉಲ್ಲೇಖವಿದೆ. ಪ್ರಾಯಶಃ ವಜ್ರಮುಷ್ಟಿ ಕಾಳಗ ಕೆಳದಿ ಕಾಲದಲ್ಲಿ ಜನಪ್ರಿಯ ಕ್ರೀಡೆ ಆಗಿದ್ದು ದೇವಾಲಯಗಳ ಭಿತ್ತಿಯಲ್ಲಿ ಕಂಡುಬಂದಿದೆ. ಈ ಕ್ರೀಡೆಯನ್ನು ಆಚರಿಸುತ್ತಿರುವ ಜಟ್ಟಿಗಳ ಉಲ್ಲೇಖ ಹೊಯ್ಸಳ ಶಾಸನಗಳಲ್ಲೂ ಬರುತ್ತದೆ.




# ಉತ್ತರ ಕನ್ನಡ ಜಿಲ್ಲೆಯ ನೀರಲಗಾ ಗ್ರಾಮದಲ್ಲಿ ಇತ್ತೀಚಿಗೆ ಪತ್ತೆಯಾದ ಜೈನ ಶಿಲ್ಪಗಳು


**ಭರಮಪ್ಪ ಭಾವಿ* ಡಾ. ಎಸ್.ಕೆ. ಮೇಲಕಾರ****


**ಉ**ತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲೂಕಿನ ನೀರಲಗಾ ಗ್ರಾಮದ ಬಳರಾಮ ಶೆಟವಪ್ಪಾ ಬೂರ್ಜಿ ಇವರ ಹೊಲದಲ್ಲಿ ನೀರಾವರಿ ಪೈಪ್‌ಲೈನ ಸಲುವಾಗಿ ನೆಲ ಅಗೆಯುವಾಗ ಪತ್ತೆಯಾದ ಪಾರ್ಶ್ವನಾಥ ವಿಗ್ರಹ ಮತ್ತು ಯಕ್ಷ-ಯಕ್ಷಿಣಿಯರ ಶಿಲ್ಪಗಳ ಕುರಿತು ದಿ. ೧೦-೨-೨೦೧೫ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಇದರ ಛಾಯಾಚಿತ್ರ ನೀಡಿ ಪ್ರಕಟಿಸಲಾಗಿತ್ತು, ಅದರನ್ವಯ ಶಿಲ್ಪಗಳನ್ನು ಹಾಗೂ ಆ ಪ್ರದೇಶದಲ್ಲಿ ಸಂಶೋಧನ ಕ್ಷೇತ್ರಕಾರ್ಯವನ್ನು ಮಾಡಲಾಗಿ ಆ ಶಿಲ್ಪಗಳ ಕಾಲಮಾನ ಮತ್ತು ಅವುಗಳ ಐತಿಹಾಸಿಕತೆಯನ್ನು ತಿಳಿಸಿ, ನಾಡಿನ ಜನತೆಗೆ ಆ ಶಿಲ್ಪಗಳನ್ನು ಪರಿಚಯಿಸುವದೆ ಈ ಲೇಖನದ ಉದ್ಧೇಶವಾಗಿದೆ.

ಸಮಭಂಗಿಯಲ್ಲಿ ನಿಂತ ಈ ಪಾರ್ಶ್ವನಾಥನ ವಿಗ್ರಹ ೩೪ ಇಂಚು ಎತ್ತರ, ೨೦ ಇಂಚು ಅಗಲ, ಹಾಗೂ ೭ ಇಂಚು ದಪ್ಪವಾಗಿರುತ್ತದೆ. ಪಾರ್ಶ್ವನಾಥನ ತಲೆಯ ಮೇಲೆ ೭ ನಾಗಹೆಡೆಗಳಿವೆ. ಈ ಹೆಡೆಗಳಿಗೆ ಏಕ ದೇಹಾಂಗವೂ ಮೇಲಿನಿಂದ ಕೆಳಗಿನವರೆಗೆ ಸುರುಳಿ ಸುರುಳಿಯಾಗಿ ಆತನ ದೇಹದ ಹಿಂದೆ ಇಳಿಬಿಟ್ಟು ತೋರಿಸಿದ್ದಾರೆ. ತಲೆಯ ಬದಿಗಳಲ್ಲಿ ಚಾಮರಗಳಿವೆ. ತಲೆಯ ಮೇಲೆ ಮುಕ್ಕೋಡೆ (ಛತ್ರಿ) ಇದೆ. ಕೆಳಗಡೆ ಬದಿಗಳಲ್ಲಿ ಕುಳಿತ ಧರಣೇಂದ್ರ ಮತ್ತು ಪದ್ಮಾವತಿ ಯಕ್ಷ-ಯಕ್ಷಿಣಿಯರಿದ್ದಾರೆ. ಪಾರ್ಶ್ವನಾಥನ ಸಮಗ್ರ ದೇಹಾಂಗ ಹಾಗೂ ನಾಗರ ಹೆಡೆಗಳು ಪ್ರಮಾಣಬದ್ಧ ವಾಗಿವೆ. ಮುಖದಲ್ಲಿ ತೇಜಸ್ಸು ಎದ್ದು ಕಾಣುತ್ತಿದ್ದು, ನಿಳವಾದ ಮೂಗು, ಉದ್ಧವಾದ ಕಿವಿಗಳು, ತೆರೆದ ಕಣ್ಣುಗಳಿವೆ. ದೇಹಾಂಗ ರಚನೆ ಶೈಲಿಯಿಂದ ಈ ಶಿಲ್ಪದ ಕಾಲಮಾನ ಕ್ರಿ.ಶ. ಸು. ೧೨ನೆಯ ಶತಮಾನವೆಂದು ಡಾ. ಆರ್.ಎಂ. ಷಡಕ್ಷರಯ್ಯ ನವರ ಅಭಿಪ್ರಾಯವಾಗಿದೆ. ಸಮಕಾಲೀನವಾಗಿ ಕಲ್ಯಾಣ ಚಾಲುಕ್ಯರಿಗೆ ಸಾಮಂತರಾಗಿ ಆಳುತ್ತಿದ್ದ ಗೋವಾ ಕದಂಬರ ಆಳ್ವಿಕೆಯಲ್ಲಿ ಈ ಶಿಲ್ಪವನ್ನು ರಚಿಸಿರಬೇಕು. ನಾಗಸರ್ಪ ಸುತ್ತಿದ ದೇಹಾಂಗದ ವಿನ್ಯಾಸ, ತೆರೆದ ಕಣ್ಣುಗಳು ಹಾಗೂ ಇಳಿಬಿಟ್ಟ ಕೈಗಳ ಕೆಳಗಡೆ ಹಾಗೂ ಸುತ್ತಿದ ನಾಗದೇಹದ ಭಾಗದಲ್ಲಿರುವ ಪುಷ್ಪದ ಅಲಂಕರಣೆ ವಿಶೇಷ ಗಮನ ಸೆಳೆಯುತ್ತವೆ. ಈ ಸುಂದರ ಶಿಲ್ಪ ಸಿಕ್ಕ ಸ್ಥಳದಲ್ಲಿ ಹಾಳಾದ ಮಣ್ಣಿನ ದಿಬ್ಬವಿರುವು ದರಿಂದ ಅಲ್ಲೊಂದು ಹಾಳಾದ ಬಸದಿ ಮುಚ್ಚಿರುವ ಸಾಧ್ಯತೆ ಹೆಚ್ಚು.

ಪಾರ್ಶ್ವನಾಥ ಶಿಲ್ಪ ದೊರೆತ ಸ್ಥಳದಲ್ಲಿಯೇ ಮತ್ತೊಂದು ಸುಂದರವಾದ ಹಾಗೂ ಅಪರೂಪವಾದ ಯಕ್ಷ-ಯಕ್ಷಿಣಿಯರ ಶಿಲ್ಪವಿದೆ, ಅದರಲ್ಲಿ ದಂಪತಿಗಳಿಬ್ಬರು ತ್ರಿಭಂಗಿಯಲ್ಲಿ ನಿಂತಿರುವರು. ಯಕ್ಷನು ಚತುರ್ಭುಜದಾರಿ, ಯಕ್ಷಿಯು ದ್ವಿಭುಜದಾರಿಯಾಗಿದ್ದು ಯಕ್ಷನ ಕೈಗಳಲ್ಲಿ ಪದ್ಮ, ಪಾಶ, ಅಂಕುಶ, ಮತ್ತು ಫಲಗಳಿವೆ. ಯಕ್ಷಿಯ ಕೈಗಳಲ್ಲಿ ಪದ್ಮಗಳಿವೆ ಈರ್ವರು ಹೆಚ್ಚಿನ ವಸ್ತ್ರಾಭರಣಗಳನ್ನು ಧರಿಸಿರುವರು. ಈರ್ವರ ಕಿರೀಟ ತುದಿಯ ಬದಿಗಳಲ್ಲಿರುವ ರಂದ್ರಗಳ ಸಹಾಯದಿಂದ ಯಕ್ಷ-ಯಕ್ಷಿಣಿಯರಿಗೆ ಪೂಜಾ ಸಂದರ್ಭದಲ್ಲಿ ವಸ್ತ್ರವನ್ನು ಕಟ್ಟಿ ಅಲಂಕರಿಸುತ್ತಿದ್ದರೆಂದು ತಿಳಿಯುತ್ತದೆ. ಇವರ ತಲೆಯ ಮೇಲುಗಡೆ ಇರುವ ಕೀರ್ತಿ ಮುಖದ ಬದಿಗಳಲ್ಲೂ ಅರ್ಧವೃತ್ತಾಕಾರದ ಅಂಚಿನ ಉದ್ದಕ್ಕೂ ಏಕಸಾಲಿನಲ್ಲಿ ಮಣಿಗಳ ಹಾರವನ್ನು ಕೆತ್ತಲಾಗಿದೆ. ಈ ಮೂರ್ತಿಯ ಕೆಳಭಾಗ ಮುರಿದು ಹೋಗಿದೆ. ಇವರ ದೇಹಾಂಗ ಮತ್ತು ವಸ್ತ್ರಾಭರಣಗಳ ಶೈಲಿಯಿಂದ ಈ ಶಿಲ್ಪದ ಕಾಲಮಾನವೂ ಕ್ರಿ.ಶ. ೧೨ನೆಯ ಶತಮಾನವಾಗಿದೆ. ಈ ಶಿಲ್ಪಗಳು ದೊರೆತ ಪ್ರದೇಶದಲ್ಲಿ ಉತ್ಖನನ ಕೈಗೊಂಡರೆ ಬಸದಿಯ ಹೆಚ್ಚಿನ ಪ್ರಾಚ್ಯಾವಶೇಷಗಳು ಇನ್ನೂ ಬೆಳಕಿಗೆ ಬರುವ ಸಾಧ್ಯತೆ ಯಿರುತ್ತದೆ.

ಈ ರೀತಿ ನೆಲದಡಿಯಲ್ಲಿ ಜೈನ ಶಿಲ್ಪಗಳು ದೊರೆಯು ತ್ತಿರುವದು ಇದೆ ಮೊದಲಲ್ಲ. ಕರ್ನಾಟಕದಲ್ಲಿ ಈ ಮೊದಲು ಕಸಮಳಗಿ, ದೇವಗಿರಿ, ಹಳಿಂಗಳಲ್ಲಿ ದೊರೆತಿರುವುದು


* ಸಂಶೋಧನ ವಿದ್ಯಾರ್ಥಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

** ಮೇಲ್ವಿಚಾರಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.



ಪಾರ್ಶ್ವನಾಥ ಶಿಲ್ಪ



ಯಕ್ಷ-ಯಕ್ಷಿಣಿಯರ ಶಿಲ್ಪ



ಹಾಳಾದ ಬಸದಿ ಮುಚ್ಚಿರುವ ಮಣ್ಣಿನ ದಿಬ್ಬವಿರುವ ಸ್ಥಳ

ಉಲ್ಲೇಖಾರ್ಹವಾಗಿವೆ. ಹೆಚ್ಚಾಗಿ ಜೈನರ ಭಗ್ನವಾದ ಸ್ವರೂಪದಲ್ಲಿರುವ ಶಿಲ್ಪಗಳು ಜೈನೇತರರ ಆಕ್ರಮಣದಿಂದಲೋ ಅಥವಾ ನಿರ್ಮಾಣ ಹಂತದಲ್ಲಿ ಶಿಲ್ಪಿಯ ದೋಷದಿಂದಲೋ ನೆಲದಡಿ ಸೇರಿದರೆ, ಭಗ್ನವಾಗದೆ ಇರುವ ರೂಪದಲ್ಲಿ ದೊರೆಯುತ್ತಿರುವ ತೀರ್ಥಂಕರ ಶಿಲ್ಪಗಳು ಅವು ಅನ್ಯರ ದಾಳಿಯ ರಕ್ಷಣೇಗಾಗಿ ಜೈನರಿಂದಲೆ ನೆಲದಡಿ ಸರಿದುದರ ಸುಳಿವನ್ನು ನೀಡುತ್ತವೆ. ಆದರೆ ಹೆಚ್ಚಾಗಿ ಪಾರ್ಶ್ವನಾಥರ ಶಿಲ್ಪಗಳೆ ದೊರೆಯುತ್ತಿರುವದು ಯೋಚಿಸಲೇಬೇಕಾದ ಸಂಗತಿಯಾಗಿದೆ, ಈ ಶಿಲ್ಪ ಸರ್ಪವನ್ನು ಹೊಂದಿರುವುದರಿಂದ ಈ ಶಿಲ್ಪವನ್ನು ಅನ್ಯಮತಿಯುರು ಭಗ್ನಗೊಳಿಸಲು ಹಿಂಜರಿದಿರುವ ಸಾಧ್ಯತೆಯನ್ನು ಇಲ್ಲಿ ಗಮನಿಸಬಹುದು. ಜೈನ ಧರ್ಮದಲ್ಲಿ ಮುಖ್ಯವಾಗಿ ಯಕ್ಷ-ಯಕ್ಷಿ ಸಹಿತ ತೀರ್ಥಂಕರ ಶಿಲ್ಪಗಳು, ಯಕ್ಷ-ಯಕ್ಷಿ ರಹಿತ ತೀರ್ಥಂಕರ ಶಿಲ್ಪಗಳು, ಯಕ್ಷ-ಯಕ್ಷಿಯರ ಸ್ವತಂತ್ರ ಶಿಲ್ಪಗಳು, ಯಕ್ಷ-ಯಕ್ಷಿಯರ ಜೋಡಿ ಶಿಲ್ಪಗಳನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಇನ್ನು ಅಧ್ಯಯನ ಮಾಡುವ ಅವಶ್ಯಕತೆ ಕಂಡುಬರುತ್ತದೆ.

ಒಟ್ಟಾರೆಯಾಗಿ ಇತಿಹಾಸದ ಪದರುಗಳಲ್ಲಿ ಜೈನ ಧರ್ಮಿಯರು ಅತ್ಯಂತ ಉತ್ಕೃಷ್ಟ ಸಾಹಿತ್ಯ ಹಾಗೂ ಕಲೆ-ವಾಸ್ತುಶಿಲ್ಪವನ್ನು ಹೊಂದಿರುವುದು ಎಷ್ಟು ಸತ್ಯವೂ ಅಷ್ಟೆ ಇಂದು ಅವರು ಭಗ್ನವಾದ ಬಸದಿ, ಮೂರ್ತಿಶಿಲ್ಪಗಳನ್ನು ತಮ್ಮ ಪಾಲಿಗೆ ಹೊಂದಿರುವುದನ್ನು ಎಲ್ಲರೂ ಒಪ್ಪಲೆಬೇಕಾಗಿದೆ. ಸಂರಕ್ಷಿಸುವುದು ಅತೀ ಅವಶ್ಯದ ಕೆಲಸವಾಗಿದೆ.

[ಈ ಮೂರ್ತಿಗಳ ಅಧ್ಯಯನ ಕಾರ್ಯದಲ್ಲಿ ಸಹಕರಿಸಿದ ಹಿರಿಯ ನಿವೃತ್ತ ಪ್ರಾಧ್ಯಾಪಕರಾದ ಡಾ. ಆರ್.ಎಂ. ಷಡಕ್ಷರಯ್ಯನವರಿಗೂ, ಡಾ. ಶಾಂತಿನಾಥ ದಿಬ್ಬದ ಅವರಿಗೂ, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ಪ್ರಾಚ್ಯವಸ್ತು ಸಂಗ್ರಹಾಲಯದ ಮೇಲ್ವಿಚಾರಕರಾದ ಡಾ. ಎಸ್.ಕೆ. ಮೇಲಕಾರವರಿಗೂ, ಹಾಗೂ ನೀರಲಗಾ ಗ್ರಾಮದ ಜನರಿಗೂ ನನ್ನ ವಂದನೆಗಳೂ.]

## ಆಧಾರಸೂಚಿ


೧. ಮಿರ್ಜಿ ಅಣ್ಣಾರಾಯ, ೧೯೮೧ : **'ಭಾರತಿಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ'**, ಜೈನ ಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ.

೨. ನಾಗರಾಜಯ್ಯ ಹಂಪ, ೧೯೭೬ : **'ಯಕ್ಷ ಯಕ್ಷಿಯರು'**, ಚಂದ್ರಸಾಗರವರ್ಣೀ ಗ್ರಂಥಮಾಲೆ, ಬೆಂಗಳೂರು.

೩. Kamat, Suryanath, 1985 : '*Uttar Kannada District Gazetteer*, Govt. of Karnataka, Bengaluru.



# ಉಮ್ಮತ್ತೂರಿನ ಗಂಗಾಧರೇಶ್ವರ ಶಿಲ್ಪ

**ಉಮೇಶ.ಸಿ.ಜಿ.***

**ಉ**ಮ್ಮತ್ತೂರು ಗ್ರಾಮವು ಜಿಲ್ಲಾ ಕೇಂದ್ರವಾದ ಚಾಮರಾಜನಗರದಿಂದ ವಾಯುವ್ಯಕ್ಕೆ ೨೫ ಕಿ.ಮೀ. ದೂರದಲ್ಲಿದೆ. ಇದು ವಿಜಯನಗರದಅರಸರ ಸಾಮಂತರಾಗಿದ್ದ ಉಮ್ಮತ್ತೂರು ಪಾಳೆಯಗಾರರ ರಾಜಧಾನಿಯಾಗಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಪ್ರಸ್ತುತ ಗ್ರಾಮದಲ್ಲಿ ರಂಗನಾಥಸ್ವಾಮಿ ದೇವಾಲಯ, ಭುಜಂಗೇಶ್ವರ ದೇವಾಲಯ, ವರ್ಧಮಾನ ಬಸದಿ ಮತ್ತು ಆದಿನಾಥ ಬಸದಿಗಳಿವೆ.

ಗ್ರಾಮದ ಮಧ್ಯಭಾಗದಲ್ಲಿರುವ ಈ ಭುಜಂಗೇಶ್ವರ ದೇವಾಲಯವು ಗಮನ ಸೆಳೆಯುತ್ತದೆ. ಗರ್ಭಗೃಹ, ಸುಕನಾಸಿ, ನವರಂಗತೆರೆದ ಮುಖಮಂಟಪ, ಕಲ್ಯಾಣಮಂಟಪ ಅಮ್ಮನವರಗುಡಿ, ಪಂಚಲಿಂಗೇಶ್ವರಗುಡಿ, ಪ್ರಕಾರ ಮತ್ತು ದೀಪಸ್ತಂಭವನ್ನು ಒಳಗೊಂಡಿರುವ ಏಕಕೂಟದೇವಾಲಯವಾಗಿದ್ದು ಕಣಶಿಲೆಯಿಂದ ನಿರ್ಮಿಸಲಾಗಿದೆ. ಇಲ್ಲಿ ದೊರೆತಿರುವ ಕ್ರಿ.ಶ. ೧೫೪೫ರ ತೇದಿಯುಳ್ಳ ವಿಜಯನಗರ ದೊರೆ ಸದಾಶಿವರಾಯನ ಕಾಲದ ಶಾಸನದಲ್ಲಿ ಅವುಭಳೇಶ್ವರದ ಮಹಾ ಅರಸರುಗಳು ಸದಾಶಿವರಾಯನಿಗೆ ಪುಣ್ಯವಾಗಲೆಂದು ಭುಜಂಗೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟ ವಿಚಾರವನ್ನು ಉಲ್ಲೇಖಿಸುತ್ತದೆ. ಬಹುಶಃ ಈ ದೇವಾಲಯವು ಉಮ್ಮತ್ತೂರು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿರಬಹುದು.

ದೇವಾಲಯದ ಹಿಂಭಾಗದಲ್ಲಿ ಪ್ರಕಾರಕ್ಕೆ ಹೊಂದಿಕೊಂಡಂತೆ ಪಂಚಲಿಂಗೇಶ್ವರ ಗುಡಿ ಇದ್ದು ಇಲ್ಲಿ ಒಂದೇ ಸಾಲಿನಲ್ಲಿ ೯ ಶಿವಲಿಂಗಗಳನ್ನು ಇಡಲಾಗಿದೆ. ಪ್ರತಿಯೊಂದು ಗುಡಿಗೆ ಪ್ರವೇಶದ್ವಾರಗಳಿವೆ. ಈ ಪ್ರವೇಶದ್ವಾರಗಳ ಲಲಾಟಬಿಂಬದಲ್ಲಿ ನಂದಿಯ ಉಬ್ಬು ಕೆತ್ತನೆಯನ್ನು ಕಾಣಬಹುದಾಗಿದೆ. ಈ ಪಂಚಲಿಂಗೇಶ್ವರ ಗುಡಿಯ ಎಡ ಭಾಗದಿಂದ ಮೂರನೆ ಶಿವಲಿಂಗವು ಗಂಗಾಧಾರೇಶ್ವರ ಶಿಲ್ಪವಾಗಿದ್ದು ಇದು ವಿಶಿಷ್ಟ ಲಕ್ಷಣಗಳನ್ನು ಹೊಂದಿದೆ. ಶಿವಲಿಂಗವು ಜಟೆಯನ್ನು ಹೊಂದಿದ್ದು ಅದರ ಮೇಲೆ ಚತುರ್ಭುಜಗಂಗೆಯ ಶಿಲ್ಪವಿದ್ದು, ಇದು ಬಹಳ ಅಪರೂಪದ ಶಿಲ್ಪವಾಗಿದೆ.ಈ ಶಿವಲಿಂಗವನ್ನು ಕುರಿತು ಮಾತ್ರವೆ ಲೇಖನವನ್ನು ಮಂಡಿಸುತ್ತಿದ್ದೇನೆ.

ಈ ಶಿವಲಿಂಗವನ್ನು ೨ ಅಡಿ ಎತ್ತರವಿರುವ ಆಯತಕಾರದ ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಲಿಂಗವು ೨ ಅಡಿ ಎತ್ತರವಾಗಿದೆ. ಈ ಲಿಂಗದ ಪೂಜಾಭಾಗ ಅಥವಾ ರುದ್ರ ಭಾಗವು ಸಾಮಾನ್ಯ ಲಿಂಗಗಳ ಲಕ್ಷಣಗಳನ್ನು ಹೊಂದಿರದೆ ವಿಶಿಷ್ಟ ಲಕ್ಷಣಗಳನ್ನು ಹೊಂದಿದೆ. ಲಿಂಗದ ಶಿರೋಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಗಂಗೆಯ ಶಿಲ್ಪವಿದ್ದು ಚತುರ್ಭುಜಗಳನ್ನು ಹೊಂದಿದೆ. ಮುಂದಿನ ಎರಡು ಕೈಗಳೂ ಅಭಯ ಮತ್ತು ವರದಮುದ್ರೆಯಲ್ಲಿವೆ. ಹಿಂದಿನ ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದೆ. ಕರ್ಣಕುಂಡಲಗಳನ್ನು ಹೊಂದಿದ್ದು ಅವು ಅಸ್ಪಷ್ಟವಾಗಿವೆ. ಕತ್ತಿನಲ್ಲಿ ಕಂಠಿಹಾರ ಕೈಗಳಲ್ಲಿ ಕೇಯೂರಗಳಿವೆ. ಗಂಗೆಯು ಕಿರೀಟ ಮುಕುಟವನ್ನು ಹೊಂದಿದ್ದಾಳೆ. ಶಿಲ್ಪದ ಮೇಲ್ಭಾಗದಲ್ಲಿ ಜಟೆಯನ್ನು ಹಾವಿನ ಹೆಡೆಯ ರೀತಿಯಲ್ಲಿ ತೋರಿಸಲಾಗಿದೆ. ಈ ರೀತಿಯಾಗಿ ತೋರಿಸಿರುವುದು ಗಂಗೆಯು ಶಿವನ ಜಟೆಯಲ್ಲಿ ಬಂಧಿಯಾಗಿರುವುದನ್ನು ಸೂಚಿಸುತ್ತದೆ.

ಇದೇ ರೀತಿಯ ಶಿಲ್ಪವನ್ನು ಅಥವಾ ಲಿಂಗವನ್ನು ತುಮಕೂರು ಜಿಲ್ಲೆಯ ತುರುವೇಕೆರೆಯಲ್ಲಿರುವ ಗಂಗಾಧಾರೇಶ್ವರ ದೇವಾಲಯದ ಗರ್ಭಗೃಹದಲ್ಲಿ ಕಾಣಬರುವುದು. ಈ ಶಿಲ್ಪವು ದ್ವಿಬುಜವನ್ನು ಹೊಂದಿದ್ದು ಅಭಯ ಮತ್ತು ವರದ ಹಸ್ತವನ್ನು ಹೊಂದಿದೆ.ಈ ದೇವಾಲಯದ ಕಾಲಮಾನವನ್ನು ೧೯೧೭ ರಎಂ.ಎ.ಆರ್ ವಾರ್ಷಿಕ ವರದಿಯಲ್ಲಿ ೧೪ನೇ ಶತಮಾನ ಎಂದು ಉಲ್ಲೇಖಿಸಲಾಗಿದೆ. ಅದರೆ ಉಮ್ಮತ್ತೂರಿನ ಭುಜಂಗೇಶ್ವರ ದೇವಾಲಯದ ಕಾಲಮಾನವನ್ನು ೧೯೩೬ರ ಎಂ.ಎ.ಆರ್ ವಾರ್ಷಿಕ ವರದಿಯಲ್ಲಿ ೧೬ನೇ ಶತಮಾನ ಎಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಉಮ್ಮತ್ತೂರಿನ ಭುಜಂಗೇಶ್ವರ ದೇವಾಲಯದದಲ್ಲಿರುವ ಗಂಗಾಧಾರೇಶ್ವರ ಲಿಂಗ ಅಥವಾ

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು.



ವಿಶಿಷ್ಟ ಗಂಗಾಧಾರೇಶ್ವರ ಶಿಲ್ಪ, ಪಂಚಲಿಂಗೇಶ್ವರ ಗುಡಿ
ಭುಜಂಗೇಶ್ವರ ದೇವಾಲಯ, ಉಮ್ಮತ್ತೂರು



ವಿಶಿಷ್ಟ ಗಂಗಾಧಾರೇಶ್ವರ ಶಿಲ್ಪ, ಪಂಚಲಿಂಗೇಶ್ವರ ಗುಡಿ
ಭುಜಂಗೇಶ್ವರ ದೇವಾಲಯ, ಉಮ್ಮತ್ತೂರು

ಶಿಲ್ಪವೆ ಪ್ರಾಚೀನವಾದುದ್ದು ಎಂದು ಹೇಳಬಹುದು. ಅಲ್ಲದೆ ಉಮ್ಮತ್ತೂರಿನ ಭುಜಂಗೇಶ್ವರ ದೇವಾಲಯದಲ್ಲಿರುವ ಶಿಲ್ಪವು ಚತುರ್ಭುಜವನ್ನು ಹೊಂದಿದ್ದು ಈ ಲಿಂಗವನ್ನು ಸೋಪುಗಲ್ಲಿನಿಂದ ನಿರ್ಮಿಸಲಾಗಿದೆ.

ಉಮ್ಮತ್ತೂರಿನ ಭುಜಂಗೇಶ್ವರ ದೇವಾಲಯದ ಪಂಚಲಿಂಗ ಗುಡಿಯಲ್ಲಿರುವ ಈ ಶಿವಲಿಂಗವು ವಿಶಿಷ್ಟವಾದ ಲಕ್ಷಣವನ್ನು ಹೊಂದಿದೆ ಎಂದು ಹೇಳಬಹುದು. ಏಕೆಂದರೆ ಲಿಂಗದ ಶಿರೋಭಾಗದಲ್ಲಿ ಗಂಗೆಯ ಶಿಲ್ಪವಿರುವುದರಿಂದ ಇದೊಂದು ಅಪರೂಪದ ಲಿಂಗ ಅಥವಾ ಶಿಲ್ಪ ಎಂದು ಹೇಳಬಹುದು.

## ಆಧಾರಸೂಚಿ


೧. ಸೂರ್ಯನಾಥ ಯು ಕಾಮತ್, ಮೈಸೂರು ಜಿಲ್ಲಾ ಗ್ಯಾಸೆಟಿಯರ್, ೧೯೮೮.

೨. ಎಪಿಗ್ರಾಫಿಯ ಕರ್ನಾಟಿಕ, ಸಂ. ೩ ಮತ್ತು ೪.

೩. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ೨೦೦೮.

೪. ರಾಮಚಂದ್ರರಾವ್. ಎಸ್.ಕೆ. ಮೂರ್ತಿ ಶಿಲ್ಪನೆಲೆ ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫.

೫. ಮೈಸೂರು ನಾಗರಾಜ ಶರ್ಮ, ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು, ವಿಶ್ವವಿದ್ಯಾನಿಲಯ, ೨೦೧೦.

೬. Mysore Archaeological Reports -1917, 1936,

೮. Ramachandra Rao S.K., Encyclopaedia of Indian Iconography Hinduism-Buddhism-Jainism Vol - I,II,III. Sri Satguru Publications, Delhi,2003.




# ಹಂಪೆ ವಿರೂಪಾಕ್ಷ ದೇವಾಲಯದಲ್ಲಿರುವ ಪ್ರಾಣಿಭಕ್ತಿ ಶಿಲ್ಪಗಳು

**ಶ್ರೀಶೈಲ ಮನಗುತ್ತಿ***

"ವಿಜಯನಗರ ಸಾಮ್ರಾಜ್ಯ ದಕ್ಷಿಣ ಭಾರತದ ಮಧ್ಯಕಾಲೀನ ಚರಿತ್ರೆಯಲ್ಲಿ ವಿಶೇಷವಾದ ಸ್ಥಾನವನ್ನು ಪಡೆದಿದೆ. ಈ ಸಾಮ್ರಾಜ್ಯದಲ್ಲಿ ಸಂಗಮ, ಸಾಳ್ವ, ತುಳುವ, ಮತ್ತು ಅರವೀಡು ಮನೆತನದ ಅರಸರು ರಾಜ್ಯ ಭಾರವನ್ನು ಮಾಡಿದರು. ವಿಜಯನಗರ(ಹಂಪಿ)ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಬಲಾಢ್ಯವಾದ ಸಾಮ್ರಾಜ್ಯವನ್ನು ಕಟ್ಟಿದರು. ಹಂಪೆಯನ್ನು ಶಾಸನಗಳಲ್ಲಿ ಪಂಪಾತೀರ್ಥ, ಪಂಪಾಕ್ಷೇತ್ರ, ಪಂಪಾಪುರ, ಪಂಪಾಸ್ಥಳ, ವಿರೂಪಾಕ್ಷಪುರ ಮತ್ತು ವಿರೂಪಾಕ್ಷತೀರ್ಥ ಇತ್ಯಾದಿಯಾಗಿ ಅನೇಕ ಹೆಸರುಗಳಿಂದ ಕರೆಯಲಾಗಿದೆ".[೧]

ಹಂಪೆ ಪರಿಸರದಲ್ಲಿರುವ ದೇವಾಲಯಗಳಲ್ಲಿ ಹಲವು ಪ್ರಾಣಿಶಿಲ್ಪಗಳು ಶಿವಲಿಂಗವನ್ನು ಪೂಜಿಸುತ್ತಿರುವಂತೆ ಕೆತ್ತಲಾಗಿದೆ. ಶೈವ ದೇವಾಲಯಗಳಲ್ಲಿ ಲಿಂಗವನ್ನು ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿ ಪೂಜಿಸುವುದು ವಾಡಿಕೆ. ಆದರೆ ಪ್ರಾಣಿಶಿಲ್ಪಗಳು ತಮ್ಮ ಮನಪೂರ್ವಕವಾಗಿ ಶಿವನನ್ನು ಆರಾಧಿಸುವುದು ಗಮನಾರ್ಹ. ದೇವಾಲಯಗಳ ಅಧಿಷ್ಠಾನ ಭಾಗದಲ್ಲಿ ಮತ್ತು ನವರಂಗ, ಮಹಾಮಂಟಪ ಮತ್ತು ಪ್ರಾಕಾರ ಮಂಟಪದ ಸ್ತಂಭಗಳಲ್ಲಿ ಪ್ರಾಣಿಗಳ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಆದರೆ ಪ್ರಾಣಿಭಕ್ತ ಶಿಲ್ಪಗಳನ್ನು ಸ್ತಂಭಗಳಲ್ಲಿ ಹೆಚ್ಚಾಗಿ ಕೆತ್ತಲಾಗಿದೆ. ಅವುಗಳಲ್ಲಿ ಹಸು, ನಂದಿ, ಗಜ, ಹಲ್ಲಿ, ಮತ್ತು ಹಾವುಗಳು ಶಿವನನ್ನು ಆರಾಧಿಸುವ ಭಕ್ತ ಪ್ರಾಣಿಗಳಾಗಿರುತ್ತವೆ.[೨]

## ಪ್ರಾಣಿಭಕ್ತ ಶಿಲ್ಪಗಳು

"ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿರುವ ಪ್ರಾಣಿಭಕ್ತ ಶಿಲ್ಪಗಳು ವಿಶೇಷವಾಗಿವೆ. ಈ ದೇವಾಲಯದ ಸ್ತಂಭಗಳಲ್ಲಿ ಶಿಲ್ಪಿಯು ತನ್ನ ಕೈಚಳಕವನ್ನು ತೋರಿಸಿದ್ದಾನೆ. ಪ್ರಾಣಿಗಳು ತಮ್ಮ ಭಕ್ತಿಯನ್ನು ವಿಧೇಯತೆಯಿಂದ ಶಿವನನ್ನು ಅರ್ಚಿಸುತ್ತಿರುವಂತೆ ಶಿಲ್ಪಿಯು ತನ್ನ ಕೈಚಳಕದಿಂದ ಶಿಲ್ಪಗಳನ್ನು ಕೆತ್ತಿದ್ದಾನೆ. ಪ್ರಮುಖವಾಗಿರುವ ಪ್ರಾಣಿಭಕ್ತ ಶಿಲ್ಪಗಳು ಈ ಕೆಳಗಿನಂತಿವೆ.[೩]

೧. ಹಸು.

೨. ನಂದಿ.

೩. ಗಜ.

೪. ಹಲ್ಲಿ.

೫. ಹಾವು.

## ಹಸು ಶಿಲ್ಪ



ಹಸುವು ಪವಿತ್ರ ಮತ್ತು ಪೂಜನೀಯವಾದ ಪ್ರಾಣಿಯಾಗಿದ್ದು, ಕಾಮಧೇನು ಎಂದೂ ಪೂಜಿಸಲಾಗುತ್ತದೆ. ವಿರೂಪಾಕ್ಷ ದೇವಾಲಯದಲ್ಲಿರುವ ವಿವಿಧ ಭಂಗಿಯಲ್ಲಿ ಶಿವನನ್ನು ಪೂಜಿಸುತ್ತಿರುವ ಹಸು ಶಿಲ್ಪಗಳನ್ನು ಶಿಲ್ಪಿಯು ಕೆತ್ತಿದ್ದಾನೆ. ವಿಶೇಷವಾಗಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಮತ್ತು ಪ್ರಾಕಾರ ಮಂಟಪದ ಕಂಭಗಳಲ್ಲಿ ಈ ಶಿಲ್ಪಗಳಿವೆ.

"ಹಸು ಶಿವಲಿಂಗವನ್ನು ತನ್ನ ನಾಲಿಗೆಯಿಂದ ಲಿಂಗವನ್ನು ಸ್ಪರ್ಶಿಸುತ್ತಿರುವಂತೆ ತೋರಿಸಲಾಗಿದೆ. ಮತ್ತೊಂದು ಶಿಲ್ಪವು ಆಕರ್ಷಕವಾಗಿದ್ದು, ಹಸು ಶಿವಲಿಂಗಕ್ಕೆ ತನ್ನ ಹಾಲಿನಿಂದ ಅಭಿಷೇಕವನ್ನು ಮಾಡುತ್ತಿರುವಂತೆ ತೋರಿಸಲಾಗಿದೆ".[೪]

## ನಂದಿ ಶಿಲ್ಪ



* ಕ್ಷೇತ್ರ ಸಂಪನ್ಮೂಲ ಕೇಂದ್ರ, ಹುಕ್ಕೇರಿ, ಬೆಳಗಾವಿ ಜಿಲ್ಲೆ.

"ಹಂಪಿ ಪರಿಸರದಲ್ಲಿ ನಂದಿ ಶಿಲ್ಪಗಳು ಸಾಕಷ್ಟು ಪ್ರಮಾಣದಲ್ಲಿವೆ. ಶಿವನ ವಾಹನವಾದ ನಂದಿಯು ಶಿವನನ್ನು ಭಕ್ತಿಪೂರ್ವಕವಾಗಿ ಪೂಜಿಸುವಂತೆ ಶಿವಲಿಂಗದ ಎದುರುಗಡೆ ಕುಳಿತಿರುವುದು ಕಂಡುಬರುತ್ತದೆ. ಶೈವ ಶಾಸನಗಳ ಮೇಲ್ಭಾಗದಲ್ಲಿ ಶಿವಲಿಂಗ ಮತ್ತು ನಂದಿಯನ್ನು ಕಾಣಬಹುದು. ಇದು ಭಕ್ತಿಯ ದ್ಯೋತಕವಾಗಿದೆ".[೫]

## ಗಜ ಶಿಲ್ಪ





"ವಿರೂಪಾಕ್ಷ ದೇವಾಲಯದಲ್ಲಿರುವ ಗಜ ಶಿಲ್ಪವು ತನ್ನ ಸೊಂಡಿಲಿನಿಂದ ಜಲಾಭಿಷೇಕ ಮಾಡುತ್ತಿರುವಂತೆ ಕೆತ್ತಲಾಗಿದೆ ಮತ್ತು ಗಜವು ತನ್ನ ಭಕ್ತಿಯ ನೈಜತೆಯನ್ನು ತೋರಿಸುವಂತೆ ಶಿಲ್ಪಿಯು ಕೆತ್ತಿದ್ದಾನೆ. ಇದಕ್ಕೆ ಉದಾ: ಪ್ರಸ್ತುತ ದಿನಗಳಲ್ಲಿ ವಿರೂಪಾಕ್ಷ ದೇವಾಲದಲ್ಲಿರುವ ಗಜವು ವಿರೂಪಾಕ್ಷನಿಗೆ ತನ್ನ ಸೊಂಡಿಲಿನಿಂದ ನಮನಗಳನ್ನು ಸಲ್ಲಿಸುತ್ತಿದೆ. ಶಿಲ್ಪಿಯು ಕೆತ್ತಿರುವ ಶಿಲ್ಪವು ಇದಕ್ಕೆ ಸಾಮ್ಯವೆನಿಸುತ್ತದೆ".[೬]

## ಹಲ್ಲಿ ಶಿಲ್ಪ





"ವಿರೂಪಾಕ್ಷ ದೇವಾಲಯದ ಮಹಾರಂಗ ಮಂಟಪದ ಸ್ತಂಭದಲ್ಲಿರುವ ಈ ಶಿಲ್ಪವು ವಿಶೇಷವಾಗಿದ್ದು, ಶಿವಲಿಂಗವನ್ನು ಹಲ್ಲಿಯು ಪೂಜಿಸುತ್ತಿರುವಂತೆ ಕೆತ್ತಿದ್ದು, ಅದರ ನೈಜ ಭಕ್ತಿಯನ್ನು ತೋರಿಸುವಲ್ಲಿ ಶಿಲ್ಪಿಯು ತನ್ನ ಕಲಾ ನೈಪುಣ್ಯತೆಯನ್ನು ಪ್ರದರ್ಶಿಸಿದ್ದಾನೆ. ಪ್ರಾಣಿಗಳಿಗೂ ದೈವಿಕ ಭಕ್ತಿ ಇರುವುದನ್ನು ನಿರೂಪಿಸಿರುವುದು ಇಲ್ಲಿ ಗಮನಾರ್ಹವಾಗಿದೆ".[೭]

## ಹಾವಿನ ಶಿಲ್ಪ





"ಶಿವನ ಆಭರಣವಾಗಿರುವ ಹಾವು ಕೂಡ ಶಿವಲಿಂಗಕ್ಕೆ ತನ್ನ ಹೆಡೆಗಳನ್ನು ಬಿಚ್ಚಿ ನೆರಳನ್ನು ನೀಡುತ್ತಿರುವಂತೆ ಕೆತ್ತಲಾಗಿದೆ. ಇದು ಹಾವಿನ ಭಕ್ತಿಯನ್ನು ತೋರ್ಪಡಿಸುತ್ತದೆ. ಹಾವು ಕೂಡ ಶಿವನನ್ನು ಪೂಜಿಸುವಂತೆ ಕೆತ್ತಿರುವ ರೀತಿಯು ಮನೋಜ್ಞವಾಗಿದೆ".[೮]

ಈ ರೀತಿಯಾಗಿ ಹಲವು ಪ್ರಾಣಿಗಳು ಶಿವಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಿರುವಂತೆ ಶಿಲ್ಪಗಳನ್ನು ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಕೆತ್ತಲಾಗಿರುತ್ತದೆ. ಪ್ರಾಣಿಗಳು ಕೂಡ ದೇವರಲ್ಲಿ ಭಕ್ತಿಯನ್ನು ತೋರಿಸಿರುವುದು ಈ ಶಿಲ್ಪಗಳಿಂದ ತಿಳಿದು ಬರುತ್ತದೆ. ಪ್ರಾಣಿಗಳು ತಮ್ಮ ಭಕ್ತಿ-ಶ್ರದ್ಧೆಯ ಮನೋಭಾವವನ್ನು ತಮಗೆ ತೋರಿದಂತೆ ಶಿವನನ್ನು ಪೂಜಿಸುತ್ತಿರುವುದು ಗಮನಾರ್ಹ. ಅದನ್ನು ಶಿಲ್ಪಿಯು ತನ್ನ ಜಾಣ್ಮೆಯಿಂದ ಕೆತ್ತಿರುವುದು ವಿಶೇಷವಾಗಿದೆ.

## ಉಪಸಂಹಾರ

ಒಟ್ಟಾರೆಯಾಗಿ ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿರುವ ಪ್ರಾಣಿಭಕ್ತ ಶಿಲ್ಪಗಳು ಶಿವನಲ್ಲಿ ವಿಶೇಷವಾದ ಭಕ್ತಿಯನ್ನು ಹೊಂದಿವೆ ಎಂಬುದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಶಿಲ್ಪಿಯು ತನ್ನ ಕಲ್ಪನೆಯಲ್ಲಿ ಪ್ರಾಣಿಗಳಿಗೂ ದೈವ ಭಕ್ತಿ ಇರುವುದನ್ನು ಶಿಲ್ಪಗಳಲ್ಲಿ ನಿರೂಪಿಸಿದ್ದಾನೆ.

### ಆಧಾರಸೂಚಿ


೧. ದೇಸಾಯಿ ಪಿ.ಬಿ., 'ಕರ್ನಾಟಕದ ಇತಿಹಾಸ', ಪು. ೧೦-೧೧.
೨. ರಾಮಚಂದ್ರರಾವ್ ಎಸ್.ಕೆ., 'ಮೂರ್ತಿ ಶಿಲ್ಪದ ನೆಲೆ, ಹಿನ್ನೆಲೆ' ಪು. ೨೦-೨೧.
೩. ಅನ್ನಾಡೆಲ್ಲಾಪಿಕ್ಕೋಲ್ಲಾ ಮತ್ತು ಅನಿಲಾವರ್ಗೀಸ್, 'ಸ್ಕಲ್ಪಚರಲ್ ಆರ್ಟ್ ಆ್ಯಟ್ ವಿಜಯನಗರ, ಐಕನೋಗ್ರಫಿ ಆಂಡ ಸ್ಟೈಲ್.'
೪. ಅದೇ., ಪು. ೧೦೨.
೫. ಅದೇ., ಪು. ೧೦೪.
೬. ಅದೇ., ಪು. ೧೦೫.
೭. ಅದೇ., ಪು. ೧೦೬.
೮. ಅದೇ., ಪು. ೧೦೭-೧೦೮.



# ಕೊಪ್ಪಳ ಪ್ರದೇಶದ ವಿಜಯನಗರ ಕಾಲದ ಶಿಲ್ಪಗಳು

**ಗೀತಾ ಸಿ. ಪೋಲಿಸ ಪಾಟೀಲ್***

ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿದ್ದ ಕೊಪ್ಪಳ ಪರಿಸರವು ಕೂಡಾ ಆ ಕಾಲದ ಹತ್ತು ಹಲವು ಶಿಲ್ಪಗಳನ್ನು ಒಳಗೊಂಡಿದೆ. ಕೊಪ್ಪಳ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ದೊರೆತ ಹಲವು ವಿಶಿಷ್ಟ ಶಿಲ್ಪಗಳು ಕಲಾ ಮಹತ್ವವನ್ನು ಸಾದರಪಡಿಸುತ್ತಿದ್ದು, ಪ್ರಸ್ತುತ ಪ್ರಬಂಧದಲ್ಲಿ ವಿವೇಚಿಸಲಾಗಿದೆ.

### ವೀರಭದ್ರ ಶಿಲ್ಪ

ಅಯೋಧ್ಯ ಗ್ರಾಮದಲ್ಲಿ ಶಿಥಿಲಗೊಂಡ ವೀರಭದ್ರ ದೇವಾಲಯ ಇದೆ. ಗರ್ಭಗೃಹ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರವಾದ ವೀರಭದ್ರನ ಮೂರ್ತಿ ಇದೆ. ವೀರಭದ್ರನು ತ್ರಿಭಂಗಿಯಲ್ಲಿ ನಿಂತಿದ್ದು, ಚತುರ್ಭುಜಗಳನ್ನು ಹೊಂದಿರುವನು. ಮೇಲಿನ ಎರಡು ಕೈಗಳಲ್ಲಿ ಕ್ರಮವಾಗಿ ಬಾಣ ಮತ್ತು ಬಿಲ್ಲುಗಳನ್ನು ಹಿಡಿದಿದ್ದು, ಕೆಳಗಿನ ಕೈಗಳಲ್ಲಿ ಕ್ರಮವಾಗಿ ಖಡ್ಗ ಮತ್ತು ಖೇಟಕವನ್ನು ಹಿಡಿದಿರುವನು. ಕಿವಿಯಲ್ಲಿ ವೃತ್ತ ಕುಂಡಲಗಳು, ಕೊರಳಹಾರ, ತೋಳಬಂದಿ, ಮುಂಗೈ ಕಡಗ, ಕಾಲ ಕಡಗ ಮುಂತಾದ ವಸ್ತ್ರಭರಣಗಳನ್ನು ಧರಿಸಿರುವನು. ವೀರಭದ್ರನ ಕಾಲುಗಳಲ್ಲಿ ಪಾದುಕೆಗಳಿರುತ್ತವೆ. ವೀರಭದ್ರನ ಬಲಭಾಗದಲ್ಲಿ ಕುರಿತಲೆಯ ದಕ್ಷನು ಅಂಜಲಿ ಬದ್ಧನಾಗಿ ನಿಂತಿದ್ದಾನೆ. ವೀರಭದ್ರ ಮೂರ್ತಿಗೆ ಎದುರು ಮುಖಮಂಟಪದಲ್ಲಿ ನಂದಿಯನ್ನು ನಿಲ್ಲಿಸಿದ್ದಾರೆ. ಈ ಶಿಲ್ಪದ ಕೆತ್ತನೆಯ ಶೈಲಿಗಳನ್ನು ಅನುಲಕ್ಷಿಸಿ ಇದು ವಿಜಯನಗರ ಕಾಲಕ್ಕೆ ಸೇರುವ ಶಿಲ್ಪವೆಂದು ನಿರ್ಧರಿಸಲಾಗಿದೆ.

### ಆಂಜನೇಯ ಶಿಲ್ಪ

ಅಯೋಧ್ಯ ಗ್ರಾಮದಲ್ಲಿರುವ ಗದ್ದೆಯ ಒಂದು ಮಂಟಪದಲ್ಲಿ ಆಂಜನೇಯ ಮೂರ್ತಿ ಇದೆ. ಈ ಮೂರ್ತಿಯ ಮೇಲೆ ಪ್ರಭಾವಳಿ ಇದೆ. ಆಂಜನೇಯ ಮೂರ್ತಿಯು ದಕ್ಷಿಣ ದಿಕ್ಕಿಗೆ ಮುಖಮಾಡಿ ಓರೆಯಾಗಿ ನಿಂತಿದ್ದು, ಎಡ ಮತ್ತು ಬಲಕಾಲು ಹಿಂದು ಮುಂದು ಇರುವುದು ಕಂಡುಬರುತ್ತದೆ. ಮುಖವು ಎಡಕ್ಕೆ ತಿರುಗಿದ್ದು, ಕಣ್ಣನ್ನು ಮುಚ್ಚಿರುವುದು, ಬಾಲವು ತಲೆಯನ್ನು ದಾಟಿದೆ. ಎಡಭಾಗಕ್ಕೆ ಬಾಗಿ ಸುರುಳಿಯಾಕಾರದಲ್ಲಿದೆ. ಈ ಮೂರ್ತಿಯನ್ನು ಸುಮಾರು ಐದು ಅಡಿ ಎತ್ತರದ ಒಂದೇ ಬಂಡೆಯಲ್ಲಿ ಕೆತ್ತಲಾಗಿದ್ದು, ಉಬ್ಬು ಶಿಲ್ಪ ಮೂರ್ತಿಯಾಗಿದೆ. ಕಾಲಲ್ಲಿ ಕಡಗಗಳಿದ್ದು, ಮೈಮೇಲೆ ಮಾಲೆ, ಸೊಂಟಕ್ಕೆ ವಸ್ತ್ರಾಭರಣಗಳಿವೆ. ಕೈಗಳ ತೋಳಲ್ಲಿ ಕಡಗ ಹಾಗೂ ಕೈಗಳಲ್ಲಿ ಕಡಗಗಳಿದ್ದು, ಬಲಗೈಯು ಅಭಯ ಹಸ್ತದಲ್ಲಿದೆ. ಎಡಗೈಯು ಮೈಮೇಲಿನ ಮಾಲೆಯನ್ನು ಸೊಂಟದ ಪಕ್ಕದಲ್ಲಿ ಹಿಡಿದುಕೊಂಡಿದೆ. ಎಡಗೈಯಲ್ಲಿ ಬಾಣವನ್ನು ಹಿಡಿದ್ದಾನೆ. ಕಿವಿಯಲ್ಲಿ ಓಲೆ ಮತ್ತು ತಲೆಯ ಮೇಲೆ ಪೇಟಾದ ಅಲಂಕರಣೆ ಇದೆ. ಆಂಜನೇಯನ ಎಡ ಮತ್ತು ಬಲ ಕಾಲುಗಳ ಮಧ್ಯೆ ಪುರುಷ (ಅಕ್ಷಯ ಕುಮಾರ) ತನ್ನ ಎರಡು ಕಾಲು ಮತ್ತು ಕೈಗಳನ್ನು ನೆಲಕ್ಕೆ ಊರಿದ ರೀತಿಯಲ್ಲಿ ಚಿತ್ರಣಗೊಂಡಿದೆ. ಈ ಮೂರ್ತಿಯನ್ನು ಕಣಶಿಲೆಯಲ್ಲಿ ಬಹು ಸುಂದರವಾಗಿ ವಸ್ತ್ರಾಭರಣಗಳಿಂದ ಕಂಡರಿಸಲಾಗಿದೆ. ಇದರಿಂದ ಇದು ಅಕ್ಷಯ ಕುಮಾರನನ್ನು ಸಂಹರಿಸುತ್ತಿರುವ ವೀರಾಂಜನೆಯನ ಶಿಲ್ಪವೆಂದು ಹೇಳಬಹುದು.

### ಕಾಳಭೈರವನ ಶಿಲ್ಪ

ಅಗಳಕೇರಾದ ವೀರಭದ್ರೇಶ್ವರ ದೇವಾಲಯದ ಗರ್ಭಗೃಹದಲ್ಲಿ ಭೈರವನ ಮೂರ್ತಿ ಇದೆ. ಇದನ್ನು ಗ್ರಾನೈಟ್ ಶಿಲೆಯಲ್ಲಿ ಕೆತ್ತಲಾಗಿದೆ. ಈ ಭೈರವನು ಚತುರ್ಭುಜಗಳನ್ನು ಹೊಂದಿದ್ದು, ಹಿಂದಿನ ಕೈಗಳಲ್ಲಿ ಡಮರು, ತ್ರಿಶೂಲ ಮುಂದಿನ ಕೈಗಳಲ್ಲಿ ಕತ್ತಿ ಹಾಗೂ ಕಪಾಲ ಮತ್ತು ರುಂಡವನ್ನು ಹಿಡಿದಿರುತ್ತವೆ. ಹಾಗೂ ರುಂಡಕ್ಕೆ ನಾಯಿಯು ಬಾಯಿ ಹಾಕಿರುವಂತೆ ಕೆತ್ತಲಾಗಿದೆ. ಭೈರವನ ಕೊರಳಲ್ಲಿ ಹಾರ, ರುಂಡಮಾಲೆಗಳಿವೆ. ಭೈರವನ ಮುಖದಲ್ಲಿ ಭೀಬತ್ಸ ಭಾವವನ್ನು ತೋರಲು ಬಾಯಲ್ಲಿ ಕೋರೆ ಹಲ್ಲುಗಳನ್ನು ತೋರಿಸಲಾಗಿದೆ. ವಿಶೇಷವಾಗಿ ಭೈರವನ ಪಾದಗಳಲ್ಲಿ ಅಂದುಗೆ, ಗೆಜ್ಜೆಗಳಲ್ಲದೇ ಎತ್ತರದ ಪಾದುಕೆಗಳನ್ನು ತೋರಿಸಿದ್ದಾರೆ. ಬಲಗಾಲ ಬದಿಯಲ್ಲಿ (ದಕ್ಷ)ನ ಶಿಲ್ಪವಿದೆ. ಇದರ ಕೆಳಗೆ ಚೇಳು ಇದೆ. ಸ್ಥಳೀಯರು ಇದನ್ನು ವೀರಭದ್ರೇಶ್ವರನೆಂದು ಕರೆಯುತ್ತಾರೆ.

* ಸಂಶೋಧನಾ ವಿದ್ಯಾರ್ಥಿನಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

## ಚತುರ್ಮುಖ ಲಿಂಗ

ಅಗಳಕೆರೆಯ ವೀರಭದ್ರ ದೇವಾಲಯದ ಗರ್ಭಗುಡಿಯಲ್ಲಿ ಚತುರ್ಮುಖ ಲಿಂಗವಿದೆ. ಕಣ ಶಿಲೆಯಿಂದ ರಚಿಸಿರುವ ಈ ಚತುರ್ಮುಖ ಲಿಂಗದಲ್ಲಿ ನಾಲ್ಕುಮುಖಗಳಿವೆ. ಗರ್ಭಗೃಹದಲ್ಲಿ ಭೈರವನ ಮೂರ್ತಿಯ ಪಕ್ಕ ಬನ್ನಿ ಮರದ ಮುಂದೆ ನೆಲದಲ್ಲಿ ಹುದುಗಿದ್ದಾರೆ. ಈ ಲಿಂಗದ ಮೂರು ಮುಖಗಳನ್ನು ಸ್ಪಷ್ಟವಾಗಿ ನೋಡಬಹುದು. ಈ ಮೂರು ಮುಖಗಳ, ಮುಖದ ಭಾವಗಳನ್ನು ಗುರುತಿಸುವುದು ಕಷ್ಟ. ಏಕೆಂದರೆ ಕಣಶಿಲೆಯಲ್ಲಿ ಅಸ್ಪಷ್ಟವಾಗಿ ಕಂಡರಿಸಲಾಗಿದೆ. ಇನ್ನೊಂದು ಮುಖ ನೋಡಲು ಕಾಣುವುದಿಲ್ಲ. ಈ ಲಿಂಗದ ಶಿರೋಭಾಗವು ವಿಶಿಷ್ಟತೆಯನ್ನು ಹೊಂದಿದೆ. ಚತುರ್ಮುಖ ಲಿಂಗದ ಮೇಲೆ ಅಡ್ಡ ಪಟ್ಟಿ ಬಂದಿದ್ದು, ಪಟ್ಟಿಯ ಮೇಲ್ಭಾಗದಲ್ಲಿ ಜಟಾಮುಕುಟವಿದೆ. ಅದರ ಮೇಲೆ ಲಿಂಗ ರೂಪ ಗೋಚರಿಸುತ್ತದೆ. ಪ್ರತ್ಯೇಕವಾಗಿ ಒಂದೊಂದು ಲಿಂಗವನ್ನು ನೋಡಿದರೆ ಜಟಾಮುಕುಟವು ಸ್ಪಷ್ಟವಾಗಿ ಕಾಣಿಸುತ್ತದೆ.

ಚತುರ್ಮುಖ ಲಿಂಗವೆಂದರೆ ಅದು ನಿಜಕ್ಕೂ ಪಂಚಮುಖ ಲಿಂಗವೇ. ನಾಲ್ಕು ದಿಕ್ಕುಗಳಿಗೂ ಎದುರಾಗಿರುವ ಮುಖಗಳು ಕ್ರಮವಾಗಿ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ರೂಪಗಳು. ಈಶಾನ್ಯ ವಕ್ತ್ರವು ಊರ್ಧ್ವ ಭಾಗದಲ್ಲಿರುತ್ತದೆ ಎಂದು ಹೇಳಲಾಗುತ್ತದೆ. ಈ ಮುಖವು ಕೇವಲ ಯೋಗಿಗಳಿಗೆ ಮಾತ್ರವೇ ಕಾಣಿಸುವುದರಿಂದ ಈ ಮುಖವನ್ನು ರೂಪಿಸಕೂಡದು ಎಂದು ರೂಪಮಂಡನ ಹೇಳುತ್ತದೆ. ಈ ಶಾಸ್ತ್ರದನ್ವಯ ಪ್ರಸ್ತುತ ಲಿಂಗವನ್ನು ಕಂಡರಿಸಲಾಗಿರುವುದನ್ನು ಗುರುತಿಸಬಹುದು.

## ವೃಷಭಾರೂಢಮೂರ್ತಿ (ನಂದಿವಾಹನ)

ನಂದಿವಾಹನ ಶಿವ-ಪಾರ್ವತಿ ಶಿಲ್ಪವು ಕೆರೆಹಳ್ಳಿಯಲ್ಲಿದೆ. ಶಿವನು ತನ್ನ ವಾಹನವಾದ ವೃಷಭನನ್ನು ಏರಿ ಕುಳಿತ ಮೂರ್ತಿಗೆ ವೃಷಭಾರೂಢಮೂರ್ತಿ ಎನ್ನುವರು. ವೃಷಭಾರೂಢ ಶಿವ ಪಾರ್ವತಿ ಶಿಲ್ಪವು ಬಿಳಿಕಣ ಶಿಲೆಯಲ್ಲಿ ಕಂಡರಿಸಲಾಗಿದ್ದು. ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಇದ್ದಾರೆ. ಸುಮಾರು ೨ ಅಡಿ ಎತ್ತರ ೩ ಅಡಿ ಅಗಲ ಇದೆ. ಶಿಲ್ಪದಲ್ಲಿ ಶಿವನು ತನ್ನ ವಾಹನವಾದ ವೃಷಭನನ್ನು ಪತ್ನಿ ಸಮೇತ ಏರಿಕುಳಿತಿದ್ದಾನೆ. ನಂದಿಯು ಚಲನೆಯ ಭಂಗಿಯಲ್ಲಿದೆ. ಶಿವ ಪಾರ್ವತಿಯರ ಬಲಗೈ ಕಟಕ ಮುದ್ರೆಯಲ್ಲಿ ಇವೆ. ಶಿವನ ತಲೆಯಲ್ಲಿ ಜಟಾಮುಕುಟವಿದೆ. ಶಿವನ ಎಡಗೈಯಲ್ಲಿ ವೃಷಭದ ಮುಗುದಾರ ಹಿಡಿದಂತೆ ತೋರುತ್ತದೆ

## ಯುದ್ಧಕ್ಕೆ ಹೊರಟ ರಾಜನ ದೃಶ್ಯ

ಗಂಗಾವತಿ ತಾಲೂಕಿನ ಚಿಕ್ಕ ಬೆಣಕಲ್ಲು ಗ್ರಾಮದ ಟೊಕ್ಕಪ್ಪನ ಗುಡಿಯ ಗರ್ಭಗೃಹದಲ್ಲಿ ಈ ಶಿಲ್ಪವಿದೆ. ಇದರ ಎತ್ತರ ೩.೧೦ ಮೀ ಅಗಲ ೩ ಮೀ. ಇದೆ. ಅರಸನು ಅಶ್ವರೂಢನಾಗಿ ಯುದ್ಧಕ್ಕೆ ಹೊರಟ ದೃಶ್ಯವನ್ನು ಇದು ಬಿಂಬಿಸುತ್ತದೆ. ಕುದುರೆಯ ಹಿಂಭಾಗದಲ್ಲಿ ಪ್ರಾಯಶಃ ಅವನ ಮೂರು ಜನ ರಾಣಿಯರು ಮತ್ತು ಇಬ್ಬರ ಮಕ್ಕಳ ಶಿಲ್ಪವಿದೆ. ಮಕ್ಕಳಲ್ಲಿ ಒಬ್ಬ ಬಾಲಕ ನಿಂತಿದ್ದು. ಇನ್ನೊಂದು ಶಿಶುವನ್ನು ಮಧ್ಯದ ಸ್ತ್ರೀ ಎತ್ತಿಕೊಂಡಿದ್ದಾಳೆ. ಕುದುರೆಯ ಮುಂಭಾಗದಲ್ಲಿ ಫತಾಕೆಯನ್ನು ಹಿಡಿದ ಸೇವಕ ಹೊರಟಿದ್ದಾನೆ. ಅಶ್ವರೂಢನಾದ ಅರಸನು ಎಡಗೈಯಿಂದ ಕುದುರೆಯ ಮೂಗುದಾರ ಹಿಡಿದ್ದಾನೆ. ಬಲಗೈಯಲ್ಲಿ ಉದ್ದವಾದ ಭರ್ಚಿ ಇದೆ. ಅರಸ ಮತ್ತು ರಾಣಿಯರ ವೇಷಭೂಷಣಗಳು ಸಮಕಾಲೀನ ಉಡುಗೆ ತೊಡುಗೆಗಳನ್ನು ಸ್ಪಷ್ಟವಾಗಿ ಬಿಂಬಿಸುತ್ತವೆ. ಅರಸ ಮತ್ತು ಬಾಲಕನ ತಲೆಯ ಮೇಲೆ ಪೇಟ(ಮುಂಡಾಸು)ಗಳನ್ನು ಸುತ್ತಲಾಗಿದೆ. ಅರಸನು ಉದ್ದವಾದ ನಿಲ್ಲುವಂಗಿ ಧರಿಸಿದ್ದು, ಅದರಲ್ಲಿ ನೇರಿಗೆಗಳು ಸ್ಪಷ್ಟವಾಗಿದೆ. ಅರಸನ ಸೊಂಟದಲ್ಲಿ ಗುರಾಣಿ ಮತ್ತು ಖಡ್ಗಗಳಿವೆ. ಕುದುರೆಗೆ ಮುಖವಾಡ ಮತ್ತು ಕಾಲು ಇಡಲು ರಿಕಾಪು ಇದೆ. ರಾಣಿಯರ ಕೇಶವನ್ನು ಹಿಂದಕ್ಕೆ ಬಾಚಿ ತುರುಬು ಕಟ್ಟಲಾಗಿದೆ. ಕುಪ್ಪಸ ಮತ್ತು ಸೀರೆಯನ್ನು ಧರಿಸಿದ್ದು. ಕಿವಿಯಲ್ಲಿ ಕಿವಿಯೊಲೆಗಳು, ಕೊರಳಲ್ಲಿ ಮಣಿಸರಗಳಿವೆ. ಮುಂಗೈಯಲ್ಲಿ ಕಂಕಣಗಳಿವೆ. ಈ ಎಲ್ಲಾ ಶಿಲ್ಪಗಳು ಕನಕಗಿರಿಯ ಪಾಳೆಗಾರರಿಗೆ ಸಂಬಂಧಿಸಿದ ಶಿಲ್ಪವೆಂದು ಹೇಳಬಹುದು. ಇಂತಹವೇ ಶಿಲ್ಪಗಳು ಕನಕಗಿರಿಯಲ್ಲಿವೆ.

## ಅರಸನ ಶಿಲ್ಪ

ಕಪ್ಪು ಶಿಲೆಯ ಅಶ್ವರೂಢ ಅರಸನ ಶಿಲೆಯು ಚಿಕ್ಕ ಬೆಣಕಲ್ಲ ಗ್ರಾಮದ ದೇವಾಲಯದಲ್ಲಿದೆ. ಇಲ್ಲಿ ಅರಸನು ಅಶ್ವರೂಢನಾಗಿದ್ದು, ಬಲಗೈಯಲ್ಲಿ ಉದ್ದವಾದ ಭರ್ಚಿಯನ್ನು, ಎಡಗೈಯಲ್ಲಿ ಕುದುರೆಯ ಮುಗೂಧಾರವನ್ನು ಹಿಡಿದ್ದಾನೆ. ಕುದುರೆಗೆ ಮುಗೂಧಾರ, ಥಡಿ, ರಿಕಾಪುಗಳನ್ನು ಹಾಕಲಾಗಿದೆ. ಕುದುರೆಯ ಮೇಲೆ ಪೀಠದ ಮೇಲೆ ಅರಸ ಕುಳಿತಿದ್ದು, ಅರಸನು ಉದ್ದವಾದ ನೆರಿಗೆವುಳ್ಳ ನಿಲುವಂಗಿ ಧರಿಸಿದ್ದಾನೆ. ಅವನ ಸೊಂಟದಲ್ಲಿ ಗುರಾಣಿ ಇದೆ. ಕುದುರೆಯ ಮುಂಭಾಗದಲ್ಲಿ ಫತಾಕೆಯನ್ನು ಹಿಡಿದು ಸೇವಕ ನಿಂತಿದ್ದಾನೆ. ಕುದುರೆಯ ಸನ್ನದ್ಧತೆ ಹಾಗೂ ಅರಸನ ಭಂಗಿಯಿಂದ ಇದು ಅರಸನು ಯುದ್ಧಕ್ಕೆ ಹೊರಟ ಸಂಗತಿಯನ್ನು ಸೂಚಿಸುವ ಶಿಲ್ಪವೆಂದು ಹೇಳಬಹುದು. ಈ ಶಿಲ್ಪವು ಕನಕಗಿರಿಯ ನಾಯಕರಿಗೆ ಸಂಬಂಧಿಸಿವೆ.

## ಹತ್ತೋಟಿ ಅಂಜಲಿಬದ್ಧ ಸ್ತ್ರೀಶಿಲ್ಪ

ಇದು ಆಂಜನೇಯ ದೇವಾಲಯದ ಹಿಂಭಾಗಕ್ಕೆ ದೊಡ್ಡ ಬಂಡೆಯಲ್ಲಿದೆ. ಇದನ್ನು ಬಿಳಿಕಣಶಿಲೆಯಿಂದ ನಿರ್ಮಿಸಲಾಗಿದೆ ಹಾಗೂ ವಿಜಯನಗರ ಶೈಲಿಯನ್ನು ಹೊಂದಿದೆ. ಪ್ರಸ್ತುತ ಈ ಉಬ್ಬುಶಿಲ್ಪ ಸಮುಚ್ಚಯವು ಸುಮಾರು ೫ ಅಡಿ ವಿಸ್ತಾರವಾದ ಬಂಡೆಯಲ್ಲಿ ಕೆತ್ತಲ್ಪಟ್ಟಿದೆ. ಇಲ್ಲಿ ಅಂಜಲಿಬದ್ಧ ಸ್ತ್ರೀ ಬದಿಯಲ್ಲಿ ಮತ್ತೊಬ್ಬ ಸ್ತ್ರೀ, ಏಳು ಹೆಡೆಯ ನಾಗಶಿಲ್ಪ ಮತ್ತು ಗಣೇಶನ ಶಿಲ್ಪಗಳನ್ನು ಒಳಗೊಂಡಿದೆ. ಅಂಜಲಿಬದ್ಧ ಸ್ತ್ರೀ ಪ್ರತಿಮೆಯು ೩ ಅಡಿ ಎತ್ತರವಾಗಿದ್ದು, ಸ್ತ್ರೀ ಬಲಗಾಲನ್ನು ಮುಂದಕ್ಕೆ ಇರಿಸಿದಂತಿದ್ದು, ಕೈಗಳು ಅಂಜಲಿಬದ್ಧ ಮುದ್ರೆಗಳಲ್ಲಿವೆ. ತಲೆಯ ಕೇಶಗಳನ್ನು ಸುಂದರವಾಗಿ ಬಾಚಲಾಗಿದೆ. ಕೈಗಳಲ್ಲಿ ಬಳೆಗಳು ಇವೆ. ಸ್ತ್ರೀಯು ಸೀರೆಯನ್ನು ಧರಿಸಿದ್ದು, ಅದರ ನೆರಿಗೆ ಸ್ಪಷ್ಟವಾಗಿ ಗೋಚರಿಸುತ್ತವೆ. ಸ್ತ್ರೀ ಶಿಲ್ಪದ ಪಾದಗಳು ಕಂಡರಿಸಲಾಗಿಲ್ಲ. ಹಾಗಾಗಿ ಜಲದಲ್ಲಿ ನಿಂತಂತೆ ತೋರುತ್ತದೆ. ಇದರ ಬದಿಯಲ್ಲಿ ನಾಗಸರ್ಪದ ದೊಡ್ಡ ಶಿಲ್ಪವಿದ್ದು, ಅದು ಏಳು ಹೆಡೆಗಳನ್ನು ಬಿಚ್ಚಿದೆ. ಸರ್ಪವು ಎರಡು ಸುತ್ತುಗಳನ್ನು ಹೊಂದಿದಂತೆ ಇಡೀ ಬಾಲದ ಹೊರಗೆ ಪೂರ್ಣವಾಗಿ ಕೆತ್ತಲಾಗಿದೆ. ಸ್ತ್ರೀಯ ತಲೆಯ ಎಡಬದಿಯಲ್ಲಿ ಚಿಕ್ಕ ಗಣೇಶನ ಶಿಲ್ಪವಿದೆ. ಮತ್ತು ಕೆಳಭಾಗದಲ್ಲಿ ಅಪೂರ್ಣವಾಗಿ ಕೆತ್ತಿದ್ದ ಕುಳಿತ ಸ್ತ್ರೀಯ ಶಿಲ್ಪವೊಂದು ಗೋಚರಿಸುತ್ತದೆ. ಒಟ್ಟಾರೆ ಶಿಲ್ಪ ಫಲಕವನ್ನು ಅನುಲಕ್ಷಿಸಿ ರಾಣಿ ಅಥವಾ ಗಣ್ಯ ಸ್ತ್ರೀ ಒಬ್ಬಳು ಧಾರ್ಮಿಕ ವಿಧಿಯಲ್ಲಿ ನಿರತಳಾದ ಸಂದರ್ಭವೆಂದು ತರ್ಕಿಸಬಹುದಾಗಿದೆ.

## ವೀರಮಾಸ್ತಿಗಲ್ಲು: (ಚಿರತೆ ಬೇಟೆ)

ಕಡೇ ಬಾಗಿಲಿನಿಂದ ಆನೆಗೊಂದಿಗೆ ಹೋಗುವ ಮುಖ್ಯ ರಸ್ತೆಯ ಬಲಭಾಗಕ್ಕೆ (ಪಶ್ಚಿಮ) ಪೂರ್ವಾಭಿಮುಖವಾಗಿ ಒಂದು ಶಿಲ್ಪವಿದೆ. ಇದು ವೀರ ಮತ್ತು ಮಾಸ್ತಿ ಕಲ್ಲು ಆಗಿದೆ. ಇದು ಸುಮಾರು ೪.೨ ಅಡಿ ಉದ್ದ, ಅಗಲ ೫ ಅಡಿ ಇದೆ. ಇಲ್ಲಿ ವೀರ ಹಾಗೂ ಮಾಸ್ತಿಯ ಉಬ್ಬು ಶಿಲ್ಪಗಳು ಸುಂದರವಾಗಿ ಮೂಡಿ ಬಂದಿವೆ.

ವೀರನು ತನ್ನ ಬಲಗೈಯಿಂದ ಚಿರತೆಯೊಂದರ ತಲೆಗೆ ತಿವಿಯುತ್ತಿರುವ ದೃಶ್ಯವಿದೆ. ಈ ಭಾಗದಲ್ಲಿ ಚಿರತೆಗಳು ಸರ್ವೆಸಾಮಾನ್ಯವಾಗಿದ್ದು, ಚಿರತೆಯ ಹಾವಳಿಯಿಂದ ಗ್ರಾಮವನ್ನು ರಕ್ಷಿಸಲು ಅಥವಾ ಯಾರನ್ನೋ ರಕ್ಷಿಸಲು ಅದರೊಂದಿಗೆ ಹೋರಾಡಿ ವೀರ ಮರಣವನ್ನು ಹೊಂದಿರಬಹುದಾದ ಸ್ಪಷ್ಟತೆಗಳಿವೆ. ವೀರನ ಸೊಂಟದಲ್ಲಿ ಒಂದು ಕಿರುಗತ್ತಿಯೂ ಇದ್ದು, ವೀರನ ಕೊರಳಲ್ಲಿ ವೈವಿಧ್ಯಮಯ ಆಭರಣಗಳಿವೆ. ಕಿವಿಯಲ್ಲಿ ಕಿವಿಯೋಲೆಗಳು, ಕಾಲಲ್ಲಿನ ಕಡಗ ಮುಂತಾದವುಗಳು ಅಂದಿನ ಸಾಂಸ್ಕೃತಿಕ ಚಹರೆಯನ್ನು ಪರಿಚಯಿಸುತ್ತವೆ.

## ವೀರಮಾಸ್ತಿ ಮತ್ತು ವೀರಗಲ್ಲು

ಹಿರೇಬೆಣಕಲ್ಲನ್ನು ಶಾಸನದಲ್ಲಿ ಬೆಣ್ಣಕಲ್ಲು ಎಂದು ಕರೆಯಲಾಗಿದೆ. ಈ ಗ್ರಾಮದಲ್ಲಿ ವೀರಮಾಸ್ತಿಗಲ್ಲು ಮತ್ತು ವೀರಗಲ್ಲು ಶಿಲ್ಪಗಳನ್ನು ಪೂರ್ವಾಭಿಮುಖವಾಗಿ ಕಟ್ಟೆಯ ಮೇಲೆ ಇಟ್ಟಿದ್ದಾರೆ. ಈ ವೀರನು ಬಲಗೈಯಲ್ಲಿ ಖಡ್ಗ ಮತ್ತು ಎಡಗೈಯಲ್ಲಿ ಚಾಕು(ಕಿರುಗತ್ತಿ)ಗಳನ್ನು ಹಿಡಿದ್ದಾನೆ. ತಲೆಗೂದಲುಗಳನ್ನು ತಿರುವಿ ಬಲಕ್ಕೆ ತುರುಬು ಕಟ್ಟಿದ್ದಾನೆ. ಕಿವಿಗಳಲ್ಲಿ ಕಿವಿಯೊಲೆಗಳಿವೆ. ಕಾಲು ಮತ್ತು ಕೈಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಪದಕವಿರುವ ಸರವಿದೆ. ಸೊಂಟವನ್ನು ವಸ್ತ್ರದಿಂದ ಬಿಗಿಯಲಾಗಿದೆ. ಈ ಶಿಲ್ಪದ ಪಕ್ಕದಲ್ಲಿ ಮಾಸ್ತಿಯು ತನ್ನ ಬಲಗೈಯಲ್ಲಿ ಕಿರುಗತ್ತಿ ಮತ್ತು ಎಡಗೈಯಲ್ಲಿ ನಿಂಬೆ ಹಣ್ಣು ಹಿಡಿದು ತನ್ನ ಹೊಟ್ಟೆಯ ಮೇಲೆ ಇಟ್ಟುಕೊಂಡಿದ್ದಾಳೆ. ಕಿವಿಗಳಲ್ಲಿ ಕಿವಿಯೋಲೆ, ತೋಳುಗಳಿಗೆ ತೋಳುಬಂಧಿ, ಕಾಲು ಮತ್ತು ಕೈಗಳಲ್ಲಿ ಕಡಗಗಳಿದ್ದು, ಕೊರಳಲ್ಲಿ ಪದಕವಿರುವ ಸರವಿದೆ. ಮೇಲೆ ಸೂರ್ಯ ಚಂದ್ರರನ್ನು ಕಂಡರಿಸಲಾಗಿದೆ.

ಈ ಶಿಲ್ಪದ ಪಕ್ಕದಲ್ಲಿ ಇನ್ನೊಂದು ವೀರಗಲ್ಲು ಇದೆ. ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಎಡಗೈಯಲ್ಲಿ ಕಿರುಗತ್ತಿ (ಚಾಕು)ವನ್ನು ಹಿಡಿದ್ದಾನೆ. ವೀರನು ತಲೆಗೂದಲುಗಳನ್ನು ತಿರುವಿ ಬಲಕ್ಕೆ ತುರುಬು ಕಟ್ಟಿದ್ದಾನೆ. ಕಿವಿಯಲ್ಲಿ ಕಿವಿಯೊಲೆ, ಕೊರಳಲ್ಲಿ ಸರಗಳಿವೆ. ಮೇಲೆ ಸೂರ್ಯ ಮತ್ತು ಚಂದ್ರರನ್ನು ಕಂಡರಿಸಲಾಗಿದೆ.

## ವೀರಗಲ್ಲು

ಗಡ್ಡಿ ಗ್ರಾಮದ ಪಶ್ಚಿಮಕ್ಕೆ ಆಗೋಲಿಗೆ ಹೋಗುವ ಮಾರ್ಗದ ಎಡ ಭಾಗದ ಬನ್ನಿಕಟ್ಟೆಯಲ್ಲಿ ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿರುವ ಈ ವೀರಗಲ್ಲು ವಿಶಿಷ್ಟ ವೇಷಭೂಷಣಗಳಿಂದ ಕೂಡಿದೆ. ವೀರನು ಬಲಗೈಯಲ್ಲಿ ಖಡ್ಗದ ಹಿಡಿಕೆಯನ್ನು ಹಿಡಿದು ಎಡಗೈಯಲ್ಲಿ ಖಡ್ಗದ ಮಧ್ಯಭಾಗವನ್ನು ಹಿಡಿದು ಗಂಭೀರವಾಗಿ ನಿಂತಿರುವ ಚಿತ್ರಣವಿದೆ. ತಲೆಗೆ ಪೇಟ ಸುತ್ತಿದ್ದಾನೆ ಹಾಗೂ ಅಲ್ಲಿ ಹಕ್ಕಿಗಳ ಪುಕ್ಕಗಳನ್ನು ಅಲಂಕರಿಸಿಕೊಂಡಿದ್ದಾನೆ. ಕಿವಿಗಳಲ್ಲಿ ಕಿವಿಯೋಲೆಗಳನ್ನು ಹಾಕಿದ್ದಾನೆ. ವೀರನ ಹಣೆಯ ಮೇಲೆ ಧಾರ್ಮಿಕ ಸಂಕೇತ ರೀತಿಯಲ್ಲಿ ತಿಲಕವನ್ನು ಅರ್ಧ ಚಂದ್ರಾಕೃತಿಯಲ್ಲಿ ಕೆತ್ತಲಾಗಿದೆ. ವೀರನ ತೋಳುಗಳಿಗೆ ತೋಳುಬಂಧಿ, ಕೈಗಳಲ್ಲಿ ಖಡ್ಗವನ್ನು ಕೊರಳಲ್ಲಿ ಪದಕವಿರುವ ಸರವಿದೆ. ಮೈಮೇಲೆ ಬಟ್ಟೆಯನ್ನು ಚಿತ್ರಿಸಿದೆ. ಸೊಂಟವನ್ನು ವಸ್ತ್ರದಿಂದ



ಅಗಳಕೆರಾ ಚತುರ್ಮುಖ ಲಿಂಗ



ಚಿಕ್ಕಬೆಣಕಲ್ಲು ಯುದ್ಧಕ್ಕೆ ಹೊರಟ ರಾಜನ ದೃಶ್ಯ

ಬಿಗಿಯಲಾಗಿದೆ. ಕಾಲುಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ಈ ಅಂಶಗಳು ಅಂದಿನ ಸಮಾಜದಲ್ಲಿ ಪ್ರಚಲಿತವಿದ್ದ ಸಂಸ್ಕೃತಿಯನ್ನು ತಿಳಿಸಿ ಕೊಡುತ್ತದೆ, ಮತ್ತು ಪುರುಷರ ಅಲಂಕಾರ ಪ್ರಿಯತೆಯನ್ನು ತಿಳಿಸಿಕೊಡುತ್ತವೆ. ಸ್ಥಳೀಯರು ಇದನ್ನು ಪಿಡ್ಡಪ್ಪನ ಮೂರ್ತಿ ಎಂದು ಆರಾಧಿಸುತ್ತಾರೆ.

## ವೀರಗಲ್ಲು

ಹೇರೂರು ಗ್ರಾಮದ ಬಸ್ ನಿಲ್ದಾಣದ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿ ಒಂದು ಶಿಲ್ಪವಿದೆ. ಈ ಶಿಲ್ಪದಲ್ಲಿ ವೀರನು ತನ್ನ ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ ಹುಟ್ಟನ್ನು ಹಿಡಿದಿದ್ದಾನೆ. ವೀರನು ಸಾದಾರಣವಾದ ಮೈಯಂಗಿ ಮತ್ತು ಪಂಜೆಯನ್ನು ಧರಿಸಿದ್ದು, ಸಾಮನ್ಯ ಜನರು ಧರಿಸುವ ಉಡುಗೆಗಳನ್ನು ಧರಿಸಿದ್ದಾನೆ. ಈ ಶಿಲ್ಪದ ಐತಿಹ್ಯ ಈ ರೀತಿ ಇದೆ. ಅಂಬಿಗನಾದ ಈತನು ದೋಣಿ ನಡೆಸುವ ಕಾಯಕ ಮಾಡುತ್ತಿದ್ದ ಸಂದರ್ಭದಲ್ಲಿ ಈ ಕೆರೆಯಲ್ಲಿ ಮೊಸಳೆಯೂ ಇತ್ತು. ಒಂದು ದಿನ ಆ ಕೆರೆಯಲ್ಲಿ ಈಜುತ್ತಿದ್ದ ಒಬ್ಬ ಬಾಲಕನ ಕಾಲನ್ನು ಹಿಡಿದಿತ್ತು. ಆ ಬಾಲಕನನ್ನು ರಕ್ಷಿಸಿ ತನ್ನ ಪ್ರಾಣವನ್ನು ಕಳೆದುಕೊಂಡನು. ಆದ್ದರಿಂದ ಆತನ ಸ್ಮರಣಾರ್ಥವಾಗಿ ಈ ವೀರಗಲ್ಲು ಹಾಕಲಾಗಿದೆ. ಕಲ್ಲಿನ ವಿಧ ಹಾಗೂ ಲಕ್ಷಣ ಗಳನಾಧರಿಸಿ ಇದು ವಿಜಯನಗರ ಕಾಲಕ್ಕೆ ಸೇರಿಸಬಹುದು.

## ಮಾಸ್ತಿಗಲ್ಲು

ಕಡೇಬಾಗಿಲು ಗ್ರಾಮದ ಹೊರಭಾಗದ ಹನುಮಂತ ದೇವಾಲಯದ ಎದುರಿನ ಬೆಟ್ಟದ ಮೇಲೆ ಉತ್ತರಾಭಿಮುಖ ವಾಗಿ ಒರಟಾದ ಬಿಳಿಯ ಕಣಶಿಲೆಯಲ್ಲಿ ಈ ಮಾಸ್ತಿಕಲ್ಲು ಇದೆ. ಇದು ಸುಮಾರು ೫ ಅಡಿ ಎತ್ತರ, ೨ ಅಡಿ ಅಗಲ ಇದೆ. ಇದು ಒಕ್ಕೈ ಮಾಸ್ತಿಗಲ್ಲು ಆಗಿದೆ. ಇಲ್ಲಿ ಮಾಸತಿಯು ನಿಂತಭಂಗಿಯಲ್ಲಿದ್ದಾಳೆ. ಕಿವಿ ಮತ್ತು ಕೊರಳಲ್ಲಿ ಆಭರಣವಿದೆ. ಕೊರಳಲ್ಲಿ ಆಭರಣವಿದ್ದು, ಸವೆದು ಹೋದ ಸ್ಥಿತಿಯಲ್ಲಿದೆ. ಈ ಸವೆದು ಹೋದ ಸ್ಥಿತಿಗೆ ಐತಿಹ್ಯವಿದೆ. ಅದೇನೆಂದರೆ " ಈ ಮಾಸ್ತಿಗಲ್ಲನ್ನು ಈ ಭಾಗದ ಜನರು ಹೊಟ್ಟೆಮುರುಕವ್ವ ಎಂದು ಕರೆಯುತ್ತಾರೆ. ಈ ಮಾಸ್ತಿಗಲ್ಲನ್ನು ಈ ಭಾಗದಲ್ಲಿ ಸಂಚರಿಸುವ ಯಾರೇ ಆಗಲಿ ಇದಕ್ಕೆ ಕಲ್ಲಿನಿಂದ ಹೊಡೆಯ ಬೇಕು. ಇಲ್ಲದಿದ್ದರೆ ಈ ಕಲ್ಲಿನಲ್ಲಿರುವ ಆತ್ಮ ಅಲ್ಲಿ ಸಂಚರಿಸುವ ಜನರ ಹೊಟ್ಟೆಯಲ್ಲಿ ಹೊಕ್ಕು ಅವರ ಹೊಟ್ಟೆ ಮುರಿಯಲಿಕ್ಕೆ ಆರಂಭವಾಗುತ್ತದೆ. ವಿಪರೀತವಾಗಿ ಹೊಟ್ಟೆ ಮುರಿತದಿಂದ ಸತ್ತೇ ಹೋಗುತ್ತಾರೆ ಎಂಬ ನಂಬಿಕೆ ಇದೆ. ಆದ್ದರಿಂದಾಗಿ ಈ ಭಾಗದಲ್ಲಿ ಸಂಚರಿಸುವ ಪ್ರತಿಯೋರ್ವರು ಅದಕ್ಕೆ ಕಲ್ಲಿನಂದ ಹೊಡೆದು ಅದರಲ್ಲಿರುವ ಆತ್ಮವನ್ನು ಹೊರ ಬರದಂತೆ ತಡೆಯಲಾಗುತ್ತದೆಂದು ಸ್ಥಳೀಯರು ಹೇಳುತ್ತಾರೆ. ಈ ಶಿಲ್ಪದ ಮುಂಭಾಗದಲ್ಲಿ ಚಿಕ್ಕ ಕಲ್ಲುಗಳ ರಾಶಿ ಇವೆ.

ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದ ಕೊಪ್ಪಳ ಪರಿಸರದಲ್ಲಿ ಆ ಕಾಲದ ಮೂರ್ತಿಶಿಲ್ಪಗಳ ಅಧ್ಯಯನಕ್ಕಾಗಿ ೧೫ ಶಿಲ್ಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಶಿಲ್ಪಗಳಲ್ಲಿ ದೇವತಾ ಮೂರ್ತಿಗಳಾದ ವೀರಭದ್ರ, ಆಂಜನೇಯ, ಕಾಳಭೈರವ, ಚತುರ್ಮುಖ ಲಿಂಗ, ವೃಷಭಾರೂಢ ಮೂರ್ತಿ ಶಿಲ್ಪ ಹಾಗೂ ಲೌಕಿಕ ಶಿಲ್ಪ ಪಟ್ಟಿಕೆ ಗಳಲ್ಲಿ ರಾಜ ಯುದ್ಧಕ್ಕೆ ಹೊರಟ ದೃಶ್ಯ ಶಿಲ್ಪ, ಅರಸನ ವ್ಯಕ್ತಿ ಪ್ರತಿಮೆ ಮತ್ತು ಹಲವಾರು ವೀರಗಲ್ಲು, ಮಾಸ್ತಿಗಲ್ಲುಗಳು


ಕಡೇಬಾಗಿಲು ಬೆಟ್ಟದ ಮೇಲಿನ ಮಹಾಸತಿಶಿಲ್ಪ


ಹತೋಟಿ ಅಂಜಲೀಬದ್ಧ ಶಿಲ್ಪ


ಕಡೇಬಾಗಿಲು ಚಿರತೆ ಬೇಟೆ ಶಿಲ್ಪ


ಹೆರೂರು ವೀರಗಲ್ಲು

ಗಮನಾರ್ಹವಾಗಿವೆ. ಇವುಗಳಿಂದ ಈ ಪ್ರದೇಶದಲ್ಲಿದ್ದ ಧಾರ್ಮಿಕ ನಂಬಿಕೆ, ಆಚರಣೆ, ರಾಜಕೀಯ ಘಟನಾವಳಿ ದೃಶ್ಯಗಳ ಪರಿಕಲ್ಪನೆ ಹಾಗೂ ಸಾಮಾಜಿಕ ಆಚರಣೆಯಾದ ಸತಿ ಆಚರಣೆ ಹಾಗೂ ವೀರರ ನೆನಪಿನಲ್ಲಿ ಸ್ಮಾರಕ ಶಿಲ್ಪ ಹಾಕಿಸುವ ಹಿನ್ನಲೆ ಮುಂತಾದ ಹಲವಾರು ಸಂಗತಿಗಳನ್ನು ತಿಳಿದುಕೊಳ್ಳಬಹುದು. ಶೈಲಿಯಿಂದ ಶಿಲ್ಪಗಳು ಅಂಥ ವಿಶೇಷತೆಯನ್ನು ಹೊಂದಿರದಿದ್ದರೂ ರೂಢಿ ಬದ್ಧ ಸಂಪ್ರದಾಯವನ್ನು ಮೀರಿಲ್ಲ. ಧಾರ್ಮಿಕವಾಗಿ ಚತುರ್ಮುಖ ಲಿಂಗ ಈ ಪ್ರದೇಶದಲ್ಲಿ ಅಪರೂಪವಾಗಿ ಕಂಡುಬರುತ್ತದೆ. ಅದೇ ರೀತಿ ಲೌಕಿಕ ಸಂಕಲನದಲ್ಲಿ ಚಿಕ್ಕಬೆಣಕಲ್ಲಿನ ದೃಶ್ಯಶಿಲ್ಪಗಳು ಗಮನಾರ್ಹವಾಗಿವೆ. ಒಟ್ಟಿನಲ್ಲಿ ವಿಜಯನಗರ ಕಾಲದ ಶಿಲ್ಪಕಲೆಯ ಬಗೆಗಿನ ಹೆಚ್ಚಿನ ತಿಳುವಳಿಕೆಗೆ ಕೊಪ್ಪಳ ಜಿಲ್ಲೆ ಪ್ರದೇಶದ ಶಿಲ್ಪಗಳು ಸಹಾಯಕವಾಗುತ್ತವೆನ್ನಬಹುದು.

## ಆಧಾರಸೂಚಿ


೧. ಜ್ಞಾನಾನಂದ. ಈ., ೧೯೯೮, ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ ( ಉತ್ತರಾರ್ಧ), ಕರ್ನಾಟಕ ಶಿಲ್ಪ ಕಲಾ ಅಕಾಡೆಮಿ, ಬೆಂಗಳೂರು.
೨. ನರಸಿಂಹನ್, ಅ. ಲ., ೨೦೦೮, ವಿಜಯನಗರ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.
೩. ಪರಮಶಿವಮೂರ್ತಿ, ಡಿ.ವಿ., ೧೯೯೯, ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪. ರಾಮಚಂದ್ರರಾವ. ಎಸ್.ಕೆ., ೨೦೧೨, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.




# "ಮಂಡ್ಯ ಮತ್ತು ಮದ್ದೂರು ತಾಲ್ಲೂಕಿನಲ್ಲಿ ಸಪ್ತಮಾತೃಕೆಯರ ಆರಾಧನೆ"

ಡಾ. ಬಿ.ಸಿ. ಸುರೇಶ*

**ಪು**ರಾಣಗಳಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಸಪ್ತಮಾತೃಕೆಯರ ಉಲ್ಲೇಖ ಹಾಗೂ ವರ್ಣನೆಯಿದೆ. ಬ್ರಾಹ್ಮಿ, ಮಹೇಶ್ವರಿ, ಕೌಮಾರೀ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಇವರೇ ಸಪ್ತಮಾತೃಕೆಯರು. ಸಾಮಾನ್ಯವಾಗಿ ಸ್ತ್ರೀದೇವತೆಗಳನ್ನು ಶಕ್ತಿ ದೇವತೆಗಳು ಎಂದು ಕರೆಯುತ್ತಾರೆ. ಇವರು ಒಂದೊಂದು ದೈವದ ಶಕ್ತಿ ಎಂದು ಹೇಳುತ್ತಾರೆ. ಇವರನ್ನು ಕ್ರಮವಾಗಿ ಬ್ರಹ್ಮ, ಮಹೇಶ್ವರ, ಕುಮಾರ, ವಿಷ್ಣು, ವರಾಹ, ಇಂದ್ರ, ಯಮ ದೇವರುಗಳ ಶಕ್ತಿದೇವತೆಯರೆಂದು ಹೇಳುವುದುಂಟು. ಸಪ್ತಮಾತೃಕೆಯರ ಶಿಲ್ಪಗಳನ್ನು ದೇವಾಲಯಗಳ ನವರಂಗದ ಒಂದು ಭಾಗದ ಪಟ್ಟಿಕೆಗಳಲ್ಲಿ ಶಿಲ್ಪಿಸಲಾಗುತ್ತದೆ. ಇವುಗಳು ಒಂದೇ ಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಂತೆ ಕಂಡುಬಂದರೂ ಅವರವರ ಲಾಂಛನಸಹಿತವಾಗಿ ಶಿಲ್ಪಿಸಲಾಗಿರುತ್ತದೆ ಕೆಲವೊಮ್ಮೆ ಇವರ ಜೊತೆಯಲ್ಲಿ ಗಣಪತಿ ಮತ್ತು ಭೈರವನನ್ನು ಅಥವಾ ವೀಣಾಧಾರಿಯಾದ ಶಿವನನ್ನು ಶಿಲ್ಪಿಸಲಾಗಿರುತ್ತದೆ. ವಾಸ್ತು ವಿದ್ಯಾ ಗ್ರಂಥದಲ್ಲಿ ಸೂರ್ಯ ಮತ್ತು ಶಕ್ತಿ ದೇವತೆಗಳಿಗೆ ಈ ದೇವಿಯರು ಶ್ರೀಯೊಡನೆ ನಾಲ್ಕು ದಿಕ್ಕುಗಳ ಬಾಗಿಲು ಕಾಯುವವರಾಗಿದ್ದಾರೆ. ಇವರಲ್ಲಿ ಬ್ರಾಹ್ಮಿ ಮತ್ತು ಮಹೇಶ್ವರಿಯರು ಪಶ್ಚಿಮದ ಬಾಗಿಲಲ್ಲೂ, ಕೌಮಾರಿ ಮತ್ತು ವೈಷ್ಣವಿಯರು ಉತ್ತರದ ಬಾಗಿಲಲ್ಲೂ, ವಾರಾಹಿ ಮತ್ತು ಇಂದ್ರಾಣಿಯರು ಪೂರ್ವದ ಬಾಗಿಲಲ್ಲೂ, ಚಾಮುಂಡಿ ಮತ್ತು ಶ್ರೀಯರು ದಕ್ಷಿಣದ ಬಾಗಿಲಲ್ಲೂ ಇರಬೇಕೆಂದು ತಿಳಿಸಿದೆ.

**ಬ್ರಾಹ್ಮಿ:** ಬ್ರಾಹ್ಮಿಯು ಹಂಸವಾಹನೆ. ಈಕೆ ಬ್ರಹ್ಮನ ಶಕ್ತಿದೇವತೆ ಬ್ರಹ್ಮನ ರೀತಿಯಲ್ಲಿ ನಾಲ್ಕು ಮುಖ, ಆರು ಕೈಗಳನ್ನು ಹೊಂದಿರುತ್ತಾಳೆ. ಮೂರು ಬಲಕೈಗಳಲ್ಲಿ ವರಮುದ್ರೆ, ಪಾಶ, ಸ್ರುವವಿದ್ದು ಮೂರು ಎಡಕೈಗಳಲ್ಲಿ ಅಭಯಮುದ್ರೆ, ಪುಸ್ತಕ, ಕಮಂಡಲವನ್ನು ಹಿಡಿದಿರುತ್ತಾಳೆ. ಗುತ್ತಲಿನಲಿರುವ ಬ್ರಾಹ್ಮಿ ಶಿಲ್ಪವು ತ್ರಿಮುಖವನ್ನು ಹೊಂದಿರುತ್ತದೆ.

**ಮಹೇಶ್ವರಿ:** ಈಕೆ ಮಹೇಶ್ವರನ ಶಕ್ತಿದೇವತೆ ಇವಳ ವಾಹನ ವೃಷಭ. ಇವಳು ಐದು ಮುಖ, ಮೂರು ಕಣ್ಣು ಹಾಗೂ ಹತ್ತು ಕೈಗಳನ್ನು ಹೊಂದಿದ್ದು ಬಾಲಚಂದ್ರ ಭೂಳಣಳಾಗಿದ್ದಾಳೆ ಐದು ಬಲಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಶೂಲ, ವಜ್ರ, ಖಡ್ಗವನ್ನೂ ಐದು ಎಡಕೈಗಳಲ್ಲಿ ವರಮುದ್ರೆ, ಅಂಕುಶ, ನಾಗ, ಘಂಟೆ, ಮತ್ತು ಪಾಶವನ್ನು ಹಿಡಿದಿದ್ದಾಳೆ.

**ಕೌಮಾರಿ:** ಕೌಮಾರಿಯು ಸಾಮಾನ್ಯವಾಗಿ ಆರು ತಲೆ ಹಾಗೂ ಹನ್ನೆರಡು ಕೈಗಳನ್ನು ಹೊಂದಿರುತ್ತಾಳೆ ಆರು ಬಲಕೈಗಳಲ್ಲಿ ವರಮುದ್ರೆ, ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣವನ್ನು ಆರು ಎಡಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಕುಕ್ಕುಟ, ಕಮಲ, ಬಿಲ್ಲು ಮತ್ತು ಗಂಟೆಯನ್ನು ಹೊಂದಿರುತ್ತಾಳೆ ಇವಳ ವಾಹನ ನವಿಲು ಈಕೆ ಕುಮಾರನ ಶಕ್ತಿದೇವತೆ. ಈ ಪ್ರಾಂತ್ಯದಲ್ಲಿ ಏಕಮುಖವನ್ನು ಹೊಂದಿರುವ ಕೌಮಾರಿಯ ಶಿಲ್ಪಗಳೇ ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

**ವೈಷ್ಣವಿ:** ವೈಷ್ಣವಿಯು ಆರು ಕೈಗಳನ್ನು ಹೊಂದಿದ್ದು ಎಡಕೈಗಳಲ್ಲಿ ಚಕ್ರ, ಶಂಖವನ್ನು ಕೆಲವು ಸಂದರ್ಭಗಳಲ್ಲಿ ವಿಶೇಷವಾಗಿ ವನಮಾಲೆಯನ್ನು ಹೊಂದಿರುತ್ತಾಳೆ. ಬಲಕೈಗಳಲ್ಲಿ ವರಮುದ್ರೆ, ಗದ, ಪದ್ಮವಿದ್ದು ಎಡಕೈಗಳಲ್ಲಿ ಅಭಯಮುದ್ರೆ, ಚಕ್ರ ಮತ್ತು ಶಂಖವನ್ನು ಹೊಂದಿರುತ್ತಾಳೆ ಇವಳ ವಾಹನ ಗರುಡ, ಈಕೆ ವಿಷ್ಣುವಿನ ಶಕ್ತಿದೇವತೆ.

**ವಾರಾಹಿ:** ವಾರಾಹಿಯು ವರಾಹದ ಮುಖವನ್ನು ಹೊಂದಿರುತ್ತಾಳೆ, ದೊಡ್ಡವಾದ ಹೊಟ್ಟೆಯಿಂದ ಕೂಡಿರುತ್ತಾಳೆ ಇವಳು ಆರು ಕೈಗಳನ್ನು ಹೊಂದಿದ್ದು ಬಲಕೈಗಳಲ್ಲಿ ವರದಹಸ್ತ, ಖಡ್ಗ, ದಂಡವಿದ್ದು ಎಡಕೈಗಳಲ್ಲಿ ಅಭಯಮುದ್ರೆ, ಖೇಟಕ ಮತ್ತು ಪಾತ್ರೆಯನ್ನು ಹೊಂದಿರುತ್ತಾಳೆ ಹಾಗೂ ಇವಳ ವಾಹನ ಗರುಡ, ಈಕೆ ವರಾಹದ ಶಕ್ತಿದೇವತೆ.

**ಇಂದ್ರಾಣಿ:** ಇಂದ್ರಾಣಿಯು ಇಂದ್ರನ ರೀತಿಯಲ್ಲಿ ಸಾವಿರ ಕಣ್ಣುಗಳನ್ನು ಹೊಂದಿರುತ್ತಾಳೆ, ಆರು ಕೈಗಳನ್ನು ಹೊಂದಿದ್ದು,

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಶ್ರೀ ಮದ್ದಾನೇಶ್ವರ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಬ್ಬಹಳ್ಳಿ, ಗುಂಡ್ಲುಪೇಟೆ ತಾ, ಚಾಮರಾಜನಗರ.

ಬಲಕೈಗಳಲ್ಲಿ ವರಮುದ್ರೆ, ಸೂತ್ರ, ವಜ್ರವನ್ನೂ ಎಡಕೈಗಳಲ್ಲಿ ಅಭಯಮುದ್ರೆ, ಪಾತ್ರೆ ಮತ್ತು ಪದ್ಮವನ್ನು ಹೊಂದಿರುತ್ತಾಳೆ ಇವಳ ವಾಹನ ಆನೆ ಈಕೆ ಇಂದ್ರನ ಶಕ್ತಿದೇವತೆ. ಈಕೆಯು ಸಹ ಸಪ್ತಮಾತೃಕೆಯರಲ್ಲಿ ಪ್ರಮುಖವಾದ ದೇವತೆಯಾಗಿದ್ದಾಳೆ.

**ಚಾಮುಂಡಿ:** ಚಾಮುಂಡಿ ಕಪ್ಪನೆಯ ಶರೀರಕಾಂತಿಯ ಉಗ್ರದೇವತೆಯಾಗಿದ್ದು, ಈಕೆಯು ಸರ್ಪಗಳನ್ನು ಭೂಷಣವಾಗಿ ಪಡೆದು ಕೋರೆಹಲ್ಲುಗಳಿಂದಲೂ, ದೊಡ್ಡದಾದ ಶರೀರದಿಂದಲೂ, ಗುಳಿ ಕಣ್ಣುಗಳಿಂದಲೂ ಸಣ್ಣ ಹೊಟ್ಟೆಯಿಂದಲೂ ಕೂಡಿದವಳಾಗಿ, ಕಾಮರೂಪಿಣಿಯಾಗಿ ಕೊರಳಿಗೆ ರುಂಡಮಾಲೆಯನ್ನು ಧರಿಸಿರುತ್ತಾಳೆ. ಇವಳನ್ನು ಹಲವು ಕಡೆ ದುರ್ಗಿ ಎಂದು ಕರೆಯುವುದುಂಟು. ಈಕೆಯು ಹತ್ತು ಕೈಗಳನ್ನು ಹೊಂದಿದ್ದು ಬಲಕೈಗಳಲ್ಲಿ ಖಡ್ಗ, ಬಾಣ, ಒನಕೆ, ಚಕ್ರ, ಚಾಮರವಿದ್ದು ಎಡಕೈಗಳಲ್ಲಿ ಖೇಟ, ಪಾಶ, ದಂಡ, ಕೊಡಲಿ ಮತ್ತು ಬಿಲ್ಲನ್ನು ಹೊಂದಿರುತ್ತಾಳೆ. ಇವಳ ವಾಹನ ನರಿ. ಈಕೆ ಯಮನ ಶಕ್ತಿದೇವತೆಯಾಗಿದ್ದಾಳೆ. ಚಾಮುಂಡಿಯನ್ನು ಬಿಟ್ಟು ಉಳಿದವರಿಗೆ ಎಷ್ಟು ಕೈಗಳಿರಬೇಕೆಂಬ ಬಗೆಗೆ ನಿಯಮವಿಲ್ಲ. ಚಾಮುಂಡಿಗೆ ೮ರಿಂದ ೧೦ ಕೈಗಳನ್ನು ಉಳಿದವರಿಗೆ ೨ರಿಂದ ೬ ಕೈಗಳನ್ನೂ ಬಿಡಿಸಿರುವುದುಂಟು ಕೆಲವು ಕಡೆಯಲ್ಲಿ ನಾಲ್ಕು ಕೈಗಳನ್ನು ಕೆತ್ತಲಾಗಿದೆ. ಆಯುಧಗಳ ಸಂಖ್ಯೆಯ ವಿಚಾರದಲ್ಲೂ ಇದೇ ರೀತಿಯಿರುತ್ತದೆ. ಮೇಲೆ ತಿಳಿಸಿರುವಂತೆ ಎಲ್ಲಾ ದೇವತೆಗಳು ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದರೂ ಈಗ ದೊರೆಯುವ ಏಕಶಿಲಾ ಪಟ್ಟಿಕಾ ಸಮೂಹದ ಶಿಲ್ಪಗಳಲ್ಲಿ ಒಂದು ತಲೆ ಹಾಗೂ ೨-೪ ಕೈಗಳನ್ನು ಹೊಂದಿರುವಂತಹ ಶಿಲ್ಪಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಸಾಮಾನ್ಯವಾಗಿ ಈ ಶಿಲ್ಪಗಳು ದೇವಾಲಯಗಳಲ್ಲಿ ಅಥವಾ ಕೆರೆಯ ದಂಡೆಯಲ್ಲಿ ಕಾಣಬರುತ್ತವೆ. ಈ ರೀತಿಯಲ್ಲಿ ಮದ್ದೂರು ತಾಲ್ಲೂಕಿನ ತೈಲೂರು ಗ್ರಾಮದ ಪೂರ್ವ ಭಾಗದಲ್ಲಿ ಒಂದು ದೊಡ್ಡದಾದ ಕೆರೆಯಿದೆ. ಈ ಕೆರೆಯ ದಡದಲ್ಲಿ ಗಂಗರ ಕಾಲದ ಸಪ್ತಮಾತೃಕೆಯರ ಶಿಲ್ಪ ಪಟ್ಟಿಕೆಯಿದೆ. ಇವರ ರಕ್ಷಣೆಗೆ ಗಣಪತಿ, ಭೈರವ, ಸ್ಕಂಧ ಇತ್ಯಾದಿ ದೇವತೆ ಗಳಿರುತ್ತವೆ. ಇವರನ್ನು ಮಾತೃದೇವತೆಗಳ ಕುಮಾರರೆಂದೇ ಪುರಾಣಗಳು ಪರಿಗಣಿಸಿವೆ.

ಸಪ್ತಮಾತೃಕೆಯರನ್ನು ಸಾಮಾನ್ಯಾವಾಗಿ ಕುಳಿತಿರುವಂತೆಯೂ ಕೆಲವ ಕಡೆ ಮಕ್ಕಳನ್ನು ಎತ್ತಿಕೊಂಡಿರುವಂತೆಯೂ ಶಿಲ್ಪಿಸಿರುವ ಉದಾಹರಣೆಗಳಿವೆ. ರಾವಳಘಡಿಯ ದೇವಾಲಯದಲ್ಲಿ ಸಪ್ತಮಾತೃಕೆಯರು ಶಿವನೊಡನೆ ನೃತ್ಯ ಮಾಡುತ್ತಿರುವುದು ವಿಶಿಷ್ಟವಾದುದಾಗಿದೆ. ಇವರುಗಳು ವಿವಿಧ ಭಂಗಿಗಳಲ್ಲಿ ಕುಣಿಯುತ್ತಿರುವಂತೆಯೂ ಕೆತ್ತಲಾಗಿದೆ.

ಹೊಳಲಿನ ಹೊಳಲಮ್ಮ ದೇವಾಲಯದಲ್ಲಿ ಸುಮಾರು ಎರಡುವರೆ ಅಡಿ ಎತ್ತರದ ಸಪ್ತಮಾತೃಕೆಯರ ಶಿಲ್ಪ ಪಟ್ಟಿಕೆಯಿದೆ. ಹೆಮ್ಮನಹಳ್ಳಿಯ ಅರ್ಕೇಶ್ವರ ದೇವಾಲಯದ ನವರಂಗದಲ್ಲಿ ಸಪ್ತಮಾತೃಕೆಯರ ಪಟ್ಟಿಕೆಯಿದೆ. ಗುತ್ತಲಿನ ದೇವಮ್ಮ ದೇವಾಲಯಗಳಲ್ಲಿ ಸಪ್ತಮಾತೃಕೆಯರ ಬಿಡಿ ಶಿಲ್ಪಗಳಿವೆ. ಬಸರಾಳಿನ ಮಲ್ಲಿಕಾರ್ಜುನ ದೇವಾಲಯ ಕೊಮ್ಮೇರಹಳ್ಳಿ, ಹೊಸಬೂದನೂರಿನ ಕಾಶಿವಿಶ್ವೇಶ್ವರ ದೇವಾಲಯ, ಮಾದನಾಯಕನಹಳ್ಳಿಯ ಮಹಾಬಲೇಶ್ವರ ದೇವಾಲಯದ ನವರಂಗದ ಈಶಾನ್ಯ ಭಾಗದಲ್ಲಿ ಅಪರೂಪದ ಪಂಚಮಾತೃಕಾ (ಸಪ್ತಮಾತೃಕೆಯರ) ಪಟ್ಟಿಕೆಯಿದೆ, ಇಲ್ಲಿ ವೀಣಾಧಾರಿ ವೀರಭದ್ರ, ವೈಷ್ಣವಿ ಇಂದ್ರಾಣಿ, ಬ್ರಾಹ್ಮಿ, ವಾರಾಹಿ, ಚಾಮುಂಡಿ ಹಾಗೂ ಗಣಪತಿಯ ಚಿತ್ರಗಳಿರುವುದು ಬಹಳ ವಿಶಿಷ್ಟವಾಗಿದೆ.

ಈ ಪ್ರಾಂತ್ಯದಲ್ಲಿ ಗಂಗರ ಕಾಲದ ಸಪ್ತಮಾತೃಕಾ ದೇವಾಲಯಗಳು ಹಾಗೂ ಶಿಲ್ಪಗಳು ಜಿಲ್ಲೆಯಲ್ಲಿ ಯಥೇಚ್ಛವಾಗಿ ಕಂಡುಬಂದಿವೆ. ಗುತ್ತಲು, ಬೇಲೂರು, ಹೊಳಲು, ಕಾಡುಕೊತ್ತನಹಳ್ಳಿ, ಹಳೇಬೂದನೂರು, ಹೊಸಬೂದನೂರು ಮುಂತಾದ ಭಾಗಗಳಲ್ಲಿರುವ ದೇವಾಲಯಗಳಲ್ಲಿ ಸಪ್ತಮಾತೃಕಾ ಶಿಲ್ಪಗಳು ಕಂಡುಬರುತ್ತವೆ. ಈ ಗುಡಿಗಳೆಲ್ಲವೂ ಸಹ ಗಂಗರ ಕಾಲದ ಲಕ್ಷಣಗಳನ್ನು ಹೊಂದಿವೆ, ಪ್ರಸ್ತುತವಾಗಿ ಎಲ್ಲವೂ ಸಹ ಶಿಥಿಲವಾಗುತ್ತಿವೆ. ಈ ಭಾಗದಲ್ಲಿ ಗುತ್ತಲು, ಯಾಳದಹಳ್ಳಿ, ಕಾಡುಕೊತ್ತನಹಳ್ಳಿ, ಮಾದನಾಯಕನಹಳ್ಳಿ, ಹೊಳಲು ಹಾಗೂ ಬೇಲೂರಿನ ಗುಡಿಗಳು ಬಹಳ ಪ್ರಮುಖವಾದ ಸಪ್ತಮಾತೃಕೆಯರ ಗುಡಿಗಳಾಗಿವೆ.

**ಬಸರಾಳು ಮಲ್ಲಿಕಾರ್ಜುನಸ್ವಾಮಿ ದೇವಾಲಯ :** ಕ್ರಿ.ಶ. ೧೨೩೪ರ ಶಾಸನವು ಹೊಯ್ಸಳ ಇಮ್ಮಡಿ ನರಸಿಂಹನ ದಂಡನಾಯಕನಾದ ಹರಿಹರನು ಸೇವುಣರನ್ನು ಗೆದ್ದು ತನ್ನ ಹುಟ್ಟೂರಾದ ಬಸರಾಳಿನಲ್ಲಿ ಮೇರು ಪರ್ವತಕ್ಕೆ ಸಮನಾದ ಮಲ್ಲಿಕಾರ್ಜುನ ಆಲಯವನ್ನು ತಂದೆ ಮಲ್ಲೆಯನಾಯಕನ ಹೆಸರಲ್ಲೂ, ಕೆರೆಯನ್ನು ತಾಯಿಗುಜ್ಜವ್ವೆಯ ಹೆಸರಲ್ಲೂ ನಿರ್ಮಿಸಿ, ದೇವರ ಸೇವೆಗೆಂದು ದತ್ತಿ ಬಿಟ್ಟ ಉಲ್ಲೇಖವಿದೆ ದಕ್ಷಿಣ ಭಾಗದ ದೇವಕೋಷ್ಠದಲ್ಲಿ ಶಾರದೆ (ಸರಸ್ವತಿ)ಯ ಶಿಲ್ಪವಿದೆ. ಇದರ ಪಕ್ಕದಲ್ಲಿ ಗಣಪತಿಯ ಶಿಲ್ಪವಿದೆ. ಇದರ ಮುಂಭಾಗದಲ್ಲಿ ಸುಮಾರು ೨.೫ ಅಡಿ ಎತ್ತರವಿರುವ ಸಪ್ತಮಾತೃಕಾ ಪಟ್ಟಿಕೆಯಿದೆ, ಇಲ್ಲಿ ಬ್ರಾಹ್ಮಿ, ಮಹೇಶ್ವರಿ, ಕೌಮಾರೀ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿಯ ಚಿತ್ರಗಳಿವೆ. ಕೊನೆಯ ಭಾಗದಲ್ಲಿ ಗಣಾಧಿಪತಿಗಳಾಗಿ ಭೈರವ ಮತ್ತು ಗಣೇಶನ ಶಿಲ್ಪವಿದೆ. ಈ ಶಿಲ್ಪ ಪಟ್ಟಿಕೆಯು ಪ್ರಭಾವಳಿಯನ್ನು ಹೊಂದಿದ್ದು ಬಹಳ ಅಲಂಕಾರಿಕವಾಗಿ ಕೆತ್ತಲಾಗಿದೆ.

ಪ್ರತಿಯೊಂದು ಶಿಲ್ಪದ ಕೆಳಭಾಗದಲ್ಲಿ ಆಯಾ ದೇವತೆಗಳ ವಾಹನಗಳ ಚಿತ್ರಗಳನ್ನು ಕೆತ್ತಲಾಗಿದೆ.

**ಬೇಲೂರು ಚೆನ್ನಕೇಶವ ದೇವಾಲಯ:** ಈ ಬೇಲೂರು ಗ್ರಾಮವು ಮಂಡ್ಯದಿಂದ ಆಗ್ನೇಯಕ್ಕೆ ಸುಮಾರು ೧೯ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ದಕ್ಷಿಣ ಭಾಗದಲ್ಲಿ ಚೆನ್ನಕೇಶವ ದೇವಾಲಯವಿದೆ. ಮೂಲ ದೇವಾಲಯವು ಸಂಪೂರ್ಣವಾಗಿ ನಾಶವಾಗಿದೆ, ಪ್ರಸ್ತುತ ದೇವಾಲಯವನ್ನು ಇತ್ತೀಚೆಗೆ ಇಟ್ಟಿಗೆ ಮತ್ತು ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ ಇದು ಸಹ ಶಿಥಿಲವಾಗುತ್ತಿದೆ. ಈ ಗ್ರಾಮದ ಕೆರೆ ಏರಿಯ ಬದಿಯಲ್ಲಿ ಸುಮಾರು ೩ ಅಡಿ ಎತ್ತರದ ಸಪ್ತಮಾತೃಕೆಯರ ಬಿಡಿ ಶಿಲ್ಪಗಳಿವೆ ಇವು ಬಹಳ ಸುಂದರವಾಗಿವೆ. ಇವುಗಳ ಲಕ್ಷಣಗಳನ್ನು ಗಮನಿಸಿದಾಗ ಇವುಗಳು ಗಂಗರ ಕಾಲದ್ದಾಗಿವೆ. ಈ ರೀತಿಯ ಶಿಲ್ಪಗಳನ್ನು ಹೊಳಲು ಗ್ರಾಮದಲ್ಲಿನ ಹೊಳಲಮ್ಮ ದೇವಾಲಯದಲ್ಲಿರುವ ಸಪ್ತಮಾತೃಕೆಯ ಶಿಲ್ಪಗಳ ರೀತಿಯಲ್ಲಿಯೇ ಇವೆ.

**ದುದ್ದ:** ಮಂಡ್ಯದಿಂದ ಸುಮಾರು ೧೫ ಕಿಮೀ. ವಾಯುವ್ಯಕ್ಕೆ ಮೇಲುಕೋಟೆ ರಸ್ತೆಯಲ್ಲಿದೆ. ಇದೊಂದು ಹೋಬಳಿ ಕೇಂದ್ರವಾಗಿದೆ. ಊರಿನ ಹೊರಭಾಗದ ಕೆರೆಯ ದಡದ ಬೆಟ್ಟಳ್ಳಿ ರಸ್ತೆಯ ಬದಿಯಲ್ಲಿ ಸೋಮೇಶ್ವರ ಗುಡಿಯಿದೆ. ಸೋಮೇಶ್ವರ ದೇವಾಲಯದ ಅನತಿ ದೂರದಲ್ಲಿ ಪಾಳು ಮಂಟಪವಿದೆ. ಇಲ್ಲಿ ಹೊಯ್ಸಳರ ಕಾಲದ ಗಣಪತಿ ಹಾಗೂ ಸುಮಾರು ೨ ಅಡಿ ಎತ್ತರವಿರುವ ಸಪ್ತಮಾತೃಕಾ ಪಟ್ಟಿಕೆಯಿದೆ.

**ಗುತ್ತಲಿನ ಅರ್ಕೇಶ್ವರ ದೇವಾಲಯ:** ಈ ದೇವಾಲಯವು ಗ್ರಾಮದಿಂದ ಅನತಿ ದೂರದಲ್ಲಿರುವ ವೃತ್ತದಲ್ಲಿದೆ. ಮೂಲ ದೇವಾಲಯವು ಸಂಪೂರ್ಣವಾಗಿ ಭಗ್ನವಾಗಿದ್ದು ಇತ್ತೀಚೆಗೆ ಗ್ರಾಮದವರು ದೇವಾಲಯದ ಹೊಸದಾಗಿ ಕಟ್ಟಿದ್ದಾರೆ. ದೇವಾಲಯವನ್ನು ಹೊರ ಆವರಣದಲ್ಲಿ ಮೂರು ನಂದಿಶಿಲ್ಪಗಳು, ಸಪ್ತಮಾತೃಕೆಯರ ಶಿಲ್ಪಪಟ್ಟಿಕೆಯಿದೆ ಇದು ಗಂಗರ ಕಾಲದ್ದಾಗಿವೆ.

**ಗುತ್ತಲಿನ ದೇವಮ್ಮ ದೇವಾಲಯ:** ಅರ್ಕೇಶ್ವರ ದೇವಾಲಯದಿಂದ ಅನತಿ ದೂರದಲ್ಲಿಯೇ ರಸ್ತೆಯ ಬದಿಯಲ್ಲಿ ದೇವಮ್ಮ ಎಂಬ ದೇವಾಲಯವಿದೆ. ಇದು ಸಹ ಸಂಪೂರ್ಣವಾಗಿ ಭಗ್ನವಾಗಿದ್ದು ಇತ್ತೀಚೆಗೆ ಇಲ್ಲಿ ದೇವಾಲಯ ಗಳನ್ನು ಕಟ್ಟುತ್ತಿದ್ದಾರೆ. ಇಲ್ಲಿ ಸುಮಾರು ೩.೫ ಅಡಿ ಎತ್ತರವಾದ ಬಹಳ ಸುಂದರವಾದ ಸಪ್ತಮಾತೃಕೆಯರಾದ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿಯ ಬಿಡಿ ಶಿಲ್ಪಗಳಿವೆ. ಇದರ ಪಕ್ಕದಲ್ಲಿ ಯೋಗಿನಿಯ ಬಿಡಿ ಶಿಲ್ಪವು ಸಹ ಇದೆ. ಈ ಯೋಗಿನಿಯು ಸಪ್ತಮಾತೃಕೆಯರಿಗೆ ತಾಯಿ ಎಂದು ಹೇಳಲಾಗುತ್ತದೆ. ಜೊತೆಗೆ ಇಲ್ಲಿ ಗಣಪತಿ, ಸ್ಕಂದ ಮತ್ತು ನಗ್ನಭೈರವನ ಶಿಲ್ಪವಿದೆ. ಈ ಮೂವರನ್ನು ಮಾತೃದೇವತೆಯ ಕುಮಾರರೆಂದೇ ಪುರಾಣಗಳು ಪರಿಗಣಿಸಿವೆ. ಇಲ್ಲಿ ಪ್ರತಿಯೊಂದು ಶಿಲ್ಪಕ್ಕೆ ಪೀಠವಿದ್ದು, ಪ್ರತಿಯೊಂದು ಪೀಠದಲ್ಲಿ ಆಯಾ ದೇವತೆಗಳಿಗೆ ಸಂಬಂಧಿಸಿದ ವಾಹನಗಳನ್ನು ಸಹ ಚಿತ್ರಿಸಲಾಗಿದೆ. ಎಲ್ಲಾ ಶಿಲ್ಪಗಳನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ಇವುಗಳಲ್ಲಿ ಬ್ರಾಹ್ಮಿಯು ಮೂರು ಮುಖವನ್ನು ಹೊಂದಿದೆ. ವರಾಹಿಯ ಬಲಭಾಗದ ಮೇಲ್ಭಾಗದ ಕೈಯಲ್ಲಿ ಸರ್ಪವನ್ನು ಹಿಡಿದಿರುವುದು ಇದರ ವಿಶೇಷ. ಬಹುಶಃ ಈ ಭಾಗದಲ್ಲಿ ಎಲ್ಲಿಯೂ ಯೋಗಿನಿಯ ಶಿಲ್ಪವು ಕಂಡುಬಂದಿರುವುದಿಲ್ಲ ಇಲ್ಲಿ ಬಹಳ ಅಲಂಕಾರಿಕವಾದ ಯೋಗಿನಿಯ ಶಿಲ್ಪವಿರುವುದು ವಿಶೇಷ ಎನ್ನಬಹುದು. ಚಾಮುಂಡಿಯ ಶಿಲ್ಪವನ್ನು ಬಹಳ ಉಗ್ರರೂಪದಲ್ಲಿ ಕೆತ್ತಲಾಗಿದೆ. ಚಾಮುಂಡಿಯು ಕೋರೆ ಹಲ್ಲನ್ನು ಹೊಂದಿದ್ದು, ಕೂದಲನ್ನು ಕೆದರಿದ್ದು ಕಪಾಳದ ಹಾರವನ್ನು ಹಾಕಲಾಗಿದೆ. ಚಾಮುಂಡಿಯನ್ನು ಉಗ್ರರೂಪದಲ್ಲಿ ಕೆತ್ತಿರುವ ಶಿಲ್ಪಗಳು ಬಹಳ ವಿರಳ ಎನ್ನಬಹುದು. ಇಲ್ಲಿರುವ ಎಲ್ಲಾ ಶಿಲ್ಪಗಳು ಸಹ ಬಹಳ ಅಲಂಕೃತವಾಗಿವೆ. ಬಹುಶಃ ಇಡಿ ಜಿಲ್ಲೆಯಲ್ಲೇ ಬಹಳ ಎತ್ತರವಾಗಿ ಸುಂದರವಾಗಿರುವ ಸಪ್ತಮಾತೃಕೆಯರ ಬಿಡಿ ಶಿಲ್ಪಗಳಿರುವುದು ಈ ಗ್ರಾಮದಲ್ಲೇ ಎಂದು ಹೇಳಬಹುದು. ಕ್ರಿ.ಶ. ೧೬೫೪ರ ಶಾಸನದಲ್ಲಿ ದೇವಮ್ಮ ದೇವಾಲಯದ ಉಲ್ಲೇಖವಿದೆ.

**ಹೊಸ ಬೂದನೂರಿನ ಕಾಶಿವಿಶ್ವನಾಥನ ದೇವಾಲಯದ** ನವರಂಗದಲ್ಲಿ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವರಾಹಿ, ಇಂದ್ರಾಣಿ, ವೈಷ್ಣವಿ, ಚಾಮುಂಡಿಯ ಸಪ್ತಮಾತೃಕೆಯರ ಪಟ್ಟಿಕೆಯಿದೆ. ಚಾಮುಂಡಿಯ ಅನಂತರ ಶಿವ ಮತ್ತು ಗಣೇಶನನ್ನು ಚಿತ್ರಿಸಲಾಗಿದೆ. ಪ್ರತಿ ಶಿಲ್ಪದ ಕೆಳಭಾಗದಲ್ಲಿ ಆಯಾ ದೇವತೆಗಳ ವಾಹನಗಳ ಚಿತ್ರಗಳನ್ನು ಕೆತ್ತಲಾಗಿದೆ. ಪ್ರತಿಯೊಂದು ಶಿಲ್ಪವು ಸಹ ಬಹಳ ಅಲಂಕರಣೆಯನ್ನು ಹೊಂದಿದ್ದು ಸರಳವಾದ ಪ್ರಭಾವಳಿಯನ್ನು ಹೊಂದಿವೆ. ಪಟ್ಟಿಕೆಯ ಮೇಲ್ಭಾಗದ ಮಧ್ಯಭಾಗದಲ್ಲಿ ಬಹಳ ಸುಂದರವಾಗಿ ವ್ಯಾಳದ ರಚನೆಯನ್ನು ಚಿತ್ರಿಸಲಾಗಿದೆ. ಇಲ್ಲಿ ಬ್ರಾಹ್ಮಿ ಮತ್ತು ಕೌಮಾರಿಯ ಶಿಲ್ಪಗಳು ಮೂರು ಮುಖಗಳನ್ನು ಹೊಂದಿವೆ. ಅದಲ್ಲದೆ ಶಿಲ್ಪದ ಪ್ರತಿಯೊಂದು ಪ್ರಭಾವಳಿಯಲ್ಲಿನ ಮಧ್ಯಭಾಗದಲ್ಲಿಯೂ ಸಹ ಆಯಾ ದೇವತೆಗಳ ವಾಹನದ ಶಿಲ್ಪವನ್ನು ಕೆತ್ತಿರುವುದು ವಿಶೇಷ ಎನ್ನಬಹುದು. ಅದಲ್ಲದೆ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವ ಶಿಲ್ಪ ಪಟ್ಟಿಕೆಗಳಲ್ಲಿ ಇದು ಬಹಳ ಅಲಂಕಾರಿಕವಾಗಿ ಸುಂದರವಾಗಿದೆ ಎನ್ನಬಹುದು.

**ಹೊಳಲಿನ ತಾಂಡವೇಶ್ವರ ದೇವಾಲಯ:** ನವರಂಗದ ಎಡಭಾಗದಲ್ಲಿ ಗಣಪತಿಯ ವಿಗ್ರಹವಿದೆ ಇದು ಸುಮಾರು ನಾಲ್ಕು ಅಡಿ ಎತ್ತರವಿದೆ. ಇದರ ಪಕ್ಕದಲ್ಲಿ ಸಪ್ತಮಾತೃಕೆಯರಾದ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ ಶಿಲ್ಪಗಳಿವೆ. ಸಪ್ತಮಾತೃಕೆಯರ ಬಲ ಮತ್ತು ಎಡಭಾಗದಲ್ಲಿ ಗಣಾಧಿಪತಿಗಳಾಗಿ ಗಣಪತಿ ಹಾಗೂ ಭೈರವ ಶಿಲ್ಪಗಳಿವೆ.

**ಹೊಳಲುವಿನ ಹೊಲಳಮ್ಮ ದೇವಾಲಯ:** ಈ ದೇವಾಲಯವು ಊರಿನ ಆಗ್ನೇಯ ದಿಕ್ಕಿಗೆ ಸುಮಾರು ಅರ್ಧ ಕಿ.ಮೀ. ದೂರದಲ್ಲಿದೆ. ಇದು ಪೂರ್ವಾಭಿಮುಖ ವಾಗಿದೆ. ದೇವಾಲಯವು ಸಂಪೂರ್ಣವಾಗಿ ಭಗ್ನವಾಗಿದೆ. ಇಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿದ್ದು ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿಯ ಶಿಲ್ಪಗಳಿವೆ. ಚಾಮುಂಡಿಯ ಶಿಲ್ಪವು ಮುರಿದು ಹೋಗಿದ್ದು ಇದನ್ನು ಪಕ್ಕದ ಸಣ್ಣ ಗುಡಿಯಲ್ಲಿ ಇಟ್ಟಿದ್ದಾರೆ. ಇದರ ಪಕ್ಕದಲ್ಲಿ ದಕ್ಷಿಣಾಭಿಮುಖವಾಗಿರುವ ಒಂದು ಸಣ್ಣ ಗುಡಿಯಿದೆ. ಇಲ್ಲಿ ಒಂದು ಲಿಂಗರೂಪದ ಕಲ್ಲಿದ್ದು ಇದರ ಪಕ್ಕದಲ್ಲಿ ಚಾಮುಂಡಿಯ ಶಿಲ್ಪವಿದೆ. ಇದರ ಮೂಲ ಸಪ್ತಮಾತೃಕೆಯರ ಪಟ್ಟಿಕೆಯು ಮುರಿದಿದ್ದು ಇದನ್ನು ಈ ಗುಡಿಯಲ್ಲಿ ಇಟ್ಟಿದ್ದಾರೆ.

ಹೊಳಲಮ್ಮನ ಗುಡಿಯು ಗಿಡ್ಡನೆಯ ೨೦ ಕಂಬಗಳ ಮೇಲೆ ನಿಂತಿರುವ ೧೬ ಅಂಕಣದ ಆಯತಾಕಾರದ ರಚನೆಯಾಗಿದ್ದು, ಒಳಗೆ ಗಂಗರ ಕಾಲದ ಸಪ್ತಮಾತೃಕಾ ಶಿಲ್ಪಗಳಿದ್ದು, ಈ ದೇವಾಲಯವು ನಂತರದಲ್ಲಿ ಪುನರ್ ನಿರ್ಮಾಣ ಗೊಂಡಿರುವಂತೆ ತೋರುತ್ತದೆ.

**ಕೊಮ್ಮೇರಹಳ್ಳಿ:** ಸಾತನೂರಿನಿಂದ ಸುಮಾರು ೨ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ಊರಾಚೆ ಹೊಲ ದಲ್ಲಿರುವ ಗಂಗರ ಕಾಲದ ಹಿರಿಯಮ್ಮನ ಗುಡಿಯು ೧೨ ಕಂಬಗಳನ್ನು ಹೊಂದಿರುವ ಚಿಕ್ಕ ದೇವಾಲಯವಾಗಿದೆ. ಗುಡಿಯೊಳಗೆ ಎರಡು ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ನವರಂಗದಲ್ಲಿ ಬ್ರಾಹ್ಮಿ, ಮಹೇಶ್ವರಿ, ಇಂದ್ರಾಣಿ, ಕೌಮಾರಿ, ವೈಷ್ಣವಿ, ವರಾಹಿ, ಚಾಮುಂಡಿ, ಭೈರವಿ ಶಿಲ್ಪಗಳಿವೆ. ಸಪ್ತಮಾತೃಕೆಯರ ಜೊತೆಗೆ ಗಣಪತಿ ಮತ್ತು ಭೈರವನ ಶಿಲ್ಪಗಳಿವೆ

**ಹೆಮ್ಮನಹಳ್ಳಿಯ ಅರ್ಕೇಶ್ವರ ದೇವಾಲಯ:** ಈ ದೇವಾಲಯವು ಮದ್ದೂರಿನಿಂದ ಸುಮಾರು ೧೫ ಕಿ.ಮೀ. ದೂರದಲ್ಲಿದೆ, ನವರಂಗದ ಎಡಭಾಗದಲ್ಲಿ ಸಪ್ತಮಾತೃಕಾ ಪಟ್ಟಿಕಾ ಶಿಲ್ಪಗಳಿವೆ. ಪ್ರತಿ ಶಿಲ್ಪದ ಕೆಳಭಾಗದಲ್ಲಿ ಆಯಾ ದೇವತೆಗಳ ವಾಹನಗಳ ಚಿತ್ರಗಳನ್ನು ಕೆತ್ತಲಾಗಿದೆ. ಪ್ರತಿಯೊಂದು ಶಿಲ್ಪವು ಸಹ ಬಹಳ ಅಲಂಕರಣೆಯನ್ನು ಹೊಂದಿದೆ. ಇದು ಗಂಗರ ಕಾಲದ್ದಾಗಿದೆ.

**ಕಾಡಕೊತ್ತನಹಳ್ಳಿಯ ವೀರಭದ್ರ ದೇವಾಲಯ:** ಮದ್ದೂರಿನಿಂದ ೨೦ ಕಿ.ಮೀ. ಹಾಗೂ ಹನುಮಂತ ನಗರದಿಂದ ೧೦ ಕಿ.ಮೀ. ಅಂತರದಲ್ಲಿರುವ ಇದು ದೊಡ್ಡರಸಿನಕೆರೆ ಗ್ರಾಮದಿಂದ ಸುಮಾರು ಎರಡು ಕಿ.ಮೀ. ಅಂತರದಲ್ಲಿ ಗದ್ದೆಗಳ ನಡುವೆ ೧೬ ಕಿರು ಕಂಬಗಳನ್ನುಳ್ಳ ಒಂಭತ್ತು ಅಂಕಣದ ಸಾಕುದೇವಮ್ಮನ ಗುಡಿಯಿದೆ. ಈ ಗುಡಿಯು ಸುತ್ತ ಮಣ್ಣಿನಿಂದ ಮುಚ್ಚಲ್ಪಟ್ಟಿದ್ದು, ಒಳಹೋಗಲು ಕಿರಿದಾದ ಮಾರ್ಗವಿದೆ. ಒಳಗೆ ಗಂಗರ ಕಾಲದ ಸಪ್ತಮಾತೃಕೆಯರ ಬಿಡಿ ಶಿಲ್ಪಗಳಿವೆ. ಇಕ್ಕೆಲಗಳಲ್ಲಿ ವೀರಭದ್ರ ಹಾಗೂ ಗಣಪತಿಯ ಶಿಲ್ಪಗಳಿವೆ. ಇಲ್ಲಿನ ಸಪ್ತಮಾತೃಕೆಯರ ಶಿಲ್ಪಗಳೆಲ್ಲವೂ ಸಹ ಬಿಡಿ ಶಿಲ್ಪಗಳಾಗಿವೆ. ಪ್ರತಿಯೊಂದು ಶಿಲ್ಪಗಳ ಪೀಠದಲ್ಲಿ ಆಯಾ ದೇವತೆಗಳ ವಾಹನಗಳ ಚಿತ್ರವಿದೆ. ಪ್ರತಿ ಶಿಲ್ಪವೂ ಸುಮಾರು ಮೂರು ಅಡಿ ಎತ್ತರವನ್ನು ಹೊಂದಿವೆ.

**ಮದ್ದೂರಿನ** ಹೆದ್ದಾರಿ ಬದಿಯಲ್ಲಿರುವ ಮದ್ದೂರಮ್ಮನ ಗುಡಿಯು ಛಾವಣಿ ರಹಿತ ಬಯಲು ಗುಡಿಯಾಗಿದೆ, ಇಲ್ಲಿನ ಐತಿಹ್ಯದ ಪ್ರಕಾರ ಈ ದೇವತೆ ಕೊಡಗಿನ ಕಡೆಗೆ ಹೋಗಿದ್ದ ಮದ್ದೂರಿನ ವ್ಯಾಪಾರಿಗಳ ಜೊತೆ ಇಲ್ಲಿಗೆ ಬಂದು ನೆಲೆಸಿದಳೆಂಬ ಅಭಿಪ್ರಾಯವಿದೆ. ವಿಶಾಲವಾದ ಪ್ರಾಕಾರದಲ್ಲಿ ನಡುವೆ ಮಂಡಿಮಟ್ಟದ ತಗ್ಗಿನಲ್ಲಿ ಸಪ್ತಮಾತೃಕೆಯರು ಹಾಗೂ ತ್ರಿಶೂಲಗಳಿದ್ದು, ಅದರ ಹಿಂಭಾಗದಲ್ಲಿರುವ ಮರದ ಬುಡದಲ್ಲಿ ಬನ್ನಿಯಮ್ಮನದೆಂದು ಹೇಳುವ ಮೂರು ದೇವತಾ ಶಿಲ್ಪಗಳಿವೆ. ಈ ದೇವಾಲಯದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಚಾಮುಂಡಿ (ದುರ್ಗಿ)ಯ ಶಿಲ್ಪವಿದೆ. ಇದರ ಲಕ್ಷಣಗಳನ್ನು ಗಮನಿಸಿದಾಗ ಇದು ಕ್ರಿ.ಶ. ೧೭ನೆಯ ಶತಮಾನದ್ದಾಗಿರ ಬಹುದು. ಇದಲ್ಲದೆ ಇಲ್ಲಿ ಸಪ್ತಮಾತೃಕೆಯ ಶಿಲ್ಪಗಳಿವೆ. ಇವುಗಳು ಸಹ ಅದೇ ಕಾಲದ್ದಾಗಿರಬಹುದು. ಈ ಭಾಗದಲ್ಲಿ ಹೆಚ್ಚಿನ ರೀತಿಯಲ್ಲಿ ಸ್ತ್ರೀಶಕ್ತಿ ದೇವತೆಗಳ ಪೂಜೆಗಳು ಇದ್ದುದರಿಂದ ಇಲ್ಲಿ ಸಪ್ತಮಾತೃಕೆಯರ ಪೂಜೆಯ ಜೊತೆಗೆ ದುರ್ಗಿಗೂ ಸಹ ಪೂಜೆಯನ್ನು ಸಲ್ಲಿಸುತ್ತಿದ್ದಾರೆ ಇದನ್ನು ಇಲ್ಲಿ ಮದ್ದೂರಮ್ಮ ಎಂದೇ ಬಹಳ ಪ್ರಸಿದ್ಧಿ ಪಡೆದಿದೆ.

**ಮಾದನಾಯಕನಹಳ್ಳಿ:** ಈ ಗ್ರಾಮವು ಮದ್ದೂರಿನಿಂದ ಈಶಾನ್ಯಕ್ಕೆ ಸುಮಾರು ಎಂಟು ಕಿಮೀ. ದೂರದಲ್ಲಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಸಿದ್ಧರಾಮೇಶ್ವರ ಹಾಗೂ ಊರಿನ ಕೆರೆಯ ದಡದ ಕೆಳಗೆ ಮಹಾಬಲೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳಿವೆ. ಗ್ರಾಮದ ಕೆರೆ ಏರಿಯ ಕೆಳಭಾಗದಲ್ಲಿ

ಗುತ್ತಲಿನಲ್ಲಿರುವ ಸಪ್ತಮಾತೃಕೆಯರ ಬಿಡಿ ಶಿಲ್ಪಗಳು



ಬ್ರಾಹ್ಮಿ



ಮಹೇಶ್ವರಿ



ಕೌಮಾರಿ



ವೈಷ್ಣವಿ



ವರಾಹಿ



ಇಂದ್ರಾಣಿ



ಚಾಮುಂಡಿ



ಯೋಗಿನಿ




ಬಸರಾಳಿನ ಮಲ್ಲಿಕಾರ್ಜುನಸ್ವಾಮಿ ದೇವಾಲಯದಲ್ಲಿರುವ ಸಪ್ತಮಾತೃಕೆಯರ ಪಟ್ಟಿಕೆ



ಹೊಸಬೂದನೂರಿನ ಕಾಶಿವಿಶ್ವನಾಥ ದೇವಾಲಯದಲ್ಲಿರುವ ಸಪ್ತಮಾತೃಕೆಯರ ಪಟ್ಟಿಕೆ



ಹೊಳಲಿನ ಹೊಳಲಮ್ಮ ದೇವಾಲಯದಲ್ಲಿರುವ ಸಪ್ತಮಾತೃಕೆಯರ ಪಟ್ಟಿಕೆ



ಹೆಮ್ಮನಹಳ್ಳಿ ಅರ್ಕೇಶ್ವರ ದೇವಾಲಯದಲ್ಲಿರುವ ಸಪ್ತಮಾತೃಕೆಯರ ಪಟ್ಟಿಕೆ



ತೈಲೂರು ಗ್ರಾಮದ ಕೆರೆ ಏರಿಯ ಮೇಲಿರುವ ಸಪ್ತಮಾತೃಕೆಯರ ಪಟ್ಟಿಕೆ



ಯಾಳದಹಳ್ಳಿಯಲ್ಲಿರುವ (ಸಾಕಮ್ಮ ದೇವಾಲಯ) ಸಪ್ತಮಾತೃಕೆಯರ ಪಟ್ಟಿಕೆ

ಮಹಾಬಲೇಶ್ವರ (ಈಶ್ವರ) ಎಂಬ ದೇವಾಲಯವಿದೆ. ನವರಂಗದ ಈಶಾನ್ಯ ಭಾಗದಲ್ಲಿ ಅಪರೂಪದ ಪಂಚಮಾತೃಕಾ (ಸಪ್ತಮಾತೃಕೆಯರ) ಪಟ್ಟಿಕೆಯಲ್ಲಿ ವೀಣಾಧಾರಿ ವೀರಭದ್ರ, ವೈಷ್ಣವಿ ಇಂದ್ರಾಣಿ, ಬ್ರಾಹ್ಮಿ, ವಾರಾಹಿ, ಚಾಮುಂಡಿ ಹಾಗೂ ಗಣಪತಿಯ ಚಿತ್ರಗಳಿರುವುದು ಬಹಳ ವಿಶಿಷ್ಟವಾಗಿದೆ.

**ತೈಲೂರು ಮಹದೇಶ್ವರ ದೇವಾಲಯ:** ಈ ಗ್ರಾಮವು ಮದ್ದೂರಿನಿಂದ ವಾಯುವ್ಯಕ್ಕೆ ಮದ್ದೂರು-ಹಲಗೂರು ರಸ್ತೆಯಲ್ಲಿದ್ದು ಸುಮಾರು ಏಳು ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಕೆರೆ ದಂಡೆಯ ಮೇಲೆ ಗಂಗರ ಕಾಲದ ಸುಮಾರು ಎರಡುವರೆ ಅಡಿ ಎತ್ತರದ ಸಪ್ತಮಾತೃಕಾ ಉಬ್ಬು ಶಿಲ್ಪಗಳಿರುವ ಪಟ್ಟಿಕೆಯಿದೆ. ಪ್ರತಿ ಶಿಲ್ಪದ ಕೆಳಭಾಗದಲ್ಲಿ ಆಯಾ ದೇವತೆಗಳ ವಾಹನವನ್ನು ಕೆತ್ತಲಾಗಿದೆ. ಕೆರೆಯ ದಡದಲ್ಲಿರುವ ಶಿಲ್ಪಗಳಲ್ಲಿ ಇದು ಪ್ರಮುಖವಾದುದಾಗಿದೆ.

**ವೈದ್ಯನಾಥಪುರದ ವೈದ್ಯನಾಥೇಶ್ವರ ದೇವಾಲಯ:** ಈ ಗ್ರಾಮವು ಮದ್ದೂರಿನಿಂದ ಆಗ್ನೇಯಕ್ಕೆ ಸುಮಾರು ಮೂರು ಕಿ.ಮೀ. ದೂರದಲ್ಲಿದೆ. ದೇವಾಲಯದ ಮುಂಭಾಗದಲ್ಲಿ ಅಂದರೆ ನದಿಯ ತೀರದಲ್ಲಿ ಕಲ್ಲಿನ ಸೋಪಾನವನ್ನು ಕಟ್ಟಿದ್ದು ಇಲ್ಲಿಯೂ ಸಹ ಭಗ್ನವಾಗಿರುವ ಸಪ್ತಮಾತೃಕೆಯರ ಶಿಲ್ಪಗಳಿವೆ.

**ಯಾಳದಹಳ್ಳಿಯ ಸಾಕಮ್ಮ ದೇವಾಲಯ:** ಈ ದೇವಾಲಯವು ಮದ್ದೂರು ತಾಲ್ಲೂಕಿನಲ್ಲಿದೆ. ಇಲ್ಲಿ ಸುಮಾರು ೨.೫ ಅಡಿ ಎತ್ತರವಾದ ಬಹಳ ಸುಂದರವಾದ ಸಪ್ತಮಾತೃಕೆಯರಾದ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿಯ ಬಿಡಿ ಶಿಲ್ಪಗಳಿವೆ. ಇಲ್ಲಿ ಪ್ರತಿಯೊಂದು ಶಿಲ್ಪಕ್ಕೆ ಪೀಠವಿದ್ದು, ಪ್ರತಿಯೊಂದು ಪೀಠದಲ್ಲಿ ಆಯಾ ದೇವತೆಗಳಿಗೆ ಸಂಬಂಧಿಸಿದ ವಾಹನಗಳನ್ನು ಸಹ ಚಿತ್ರಿಸಲಾಗಿದೆ. ಎಲ್ಲಾ ಶಿಲ್ಪಗಳನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ಇವುಗಳಲ್ಲಿ ಬ್ರಾಹ್ಮಿಯು ಮೂರು ಮುಖವನ್ನು ಹೊಂದಿದೆ.

ಹೀಗೆ ಈ ಭಾಗದಲ್ಲಿ ಹಲವಾರು ಕಡೆಯಲ್ಲಿ ಸಪ್ತಮಾತೃಕೆಯರ ಪಟ್ಟಿಕೆಗಳು/ಬಿಡಿಶಿಲ್ಪಗಳು ಇವೆ. ಆದರೆ ಹಲವಾರು ಕಡೆ ಈ ಶಿಲ್ಪಗಳಿಗೆ ಪೂಜೆಗಳು ನಡೆಯುತ್ತಿದ್ದರು ಸಹ ದೇವತೆಗಳ ಮೂಲ ಹೆಸರಿನಲ್ಲಿ ನಡೆಯುತ್ತಿಲ್ಲ. ಸಪ್ತಮಾತೃಕೆಯರನ್ನು ತಮ್ಮ ಊರಿನ ಅಧಿ ದೇವತೆಗಳೆಂದು ಊರಿನ ಹೆಸರಿನ ಮುಂದೆ 'ಅಮ್ಮ' (ಉದಾಹರಣೆಗೆ, ಮದ್ದೂರಮ್ಮ, ತೈಲೂರಮ್ಮ, ಹೊಳಲಿನ ಹೊಳಲಮ್ಮ, ಯಾಳದಹಳ್ಳಿ ಸಾಕಮ್ಮ ಇತ್ಯಾದಿ) ಎಂದು ಹೆಸರಿನ್ನಿಟ್ಟುಕೊಂಡು ಪೂಜೆ ಮಾಡುತ್ತಿರುವುದು ಇಲ್ಲಿನ ವಿಶೇಷ ಎನ್ನಬಹುದು.



**ಆಧಾರಸೂಚಿ**


೧. ಆಚಾರ್ಯ, ಪಿ.ಕೆ., ಎ ಡಿಕ್ಷನರಿ ಆಫ್ ಹಿಂದು ಆರ್ಕಿಟೆಕ್ಚರ್, ಆಕ್ಸ್‌ಫರ್ಡ್, ೧೯೨೭.
೨. ಅಲೈಹಿನ್ ಡ್ಯಾನಿಯಿಲು, ಹಿಂದು ಪಾಲಿಥಿಇಜ್ಮ್, ನ್ಯೂಯಾರ್ಕ್, ೧೯೬೪.
೩. ಗೋಪಿನಾಥರಾವ್ ಟಿ.ಎ., ಎಲಿಮೆಂಟ್ಸ್ ಆಫ್ ಹಿಂದು ಐಕಾನಾಗ್ರಫಿ, ಸಂ. ೧, ಭಾಗ ೧.
೪. ಲಕ್ಷ್ಮಣ್ ತೆಲಗಾವಿ (ಸಂ). ಹರತಿಸಿರಿ (ಸಪ್ತಮಾತೃಕೆಯರು).
೫. ದೇವರಕೊಂಡಾ ರೆಡ್ಡಿ, ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಬೆಂಗಳೂರು, ೧೯೯೪.
೬ ಜ್ಞಾನಾನಂದ, ಜಿ., ಶಿಲ್ಪದರ್ಶ, ಸಂಪುಟ ೧ ಮತ್ತು ೨, ಹಂಪಿ, ೨೦೦೨.
೭. ಅನಂತರಾಮು, ಕೆ., ಸಕ್ಕರೆಯ ಸೀಮೆ (ಮಂಡ್ಯ ಜಿಲ್ಲೆಯ ಪ್ರವಾಸ ಕಥನ), ಮೈಸೂರು, ೧೯೮೩.
೮. ಕಾಳೇಗೌಡ, ಕೆ., ಮಂಡ್ಯ ಜಿಲ್ಲಾ ದರ್ಶಿನಿ, ಭಾರತಿ ಪ್ರಕಾಶನ, ಮಂಡ್ಯ.
೯. ಚಿದಾನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು ೨೦೦೨.
೧೦. ಭಾರತದ ಗ್ಯಾಸೆಟಿಯರ್ (ಕರ್ನಾಟಕ ರಾಜ್ಯ), (ಪರಿಷ್ಕೃತ, ೨೦೦೩) ಮಂಡ್ಯ ಜಿಲ್ಲೆ.



# ಕರ್ನಾಟಕದಲ್ಲಿ ಚೋಳರ ಕಾಲದ ದೇವಾಲಯಗಳು ಅವುಗಳ ಬೆಳವಣಿಗೆ

ಎಂ.ಎನ್. ಪ್ರಭಾಕರ್*

ಕರ್ನಾಟಕದಲ್ಲಿರುವ ವಾಸ್ತು ರಚನೆಗಳನ್ನು ಪರೀಕ್ಷಿಸಿದಾಗ ಔತ್ತರೇಯ ಮತ್ತು ದಾಕ್ಷಿಣಾತ್ಯ ಎಂಬ ಎರಡು ಸಂಪ್ರದಾಯಗಳು ಬೆಳೆದುಬಂದಿರುವುದು ಮೇಲುನೋಟಕ್ಕೆ ಗೋಚರ ವಾಗುತ್ತದೆ. ಇವುಗಳ ಅಧ್ಯಯನದಲ್ಲಿ ತೊಡಗಿರುವ ವಿದ್ವಾಂಸರು ಇಂಗ್ಲೀಷಿನಲ್ಲಿ Northern ಅಥವಾ Indo-Aryan ಮತ್ತು Southern ಅಥವಾ Dravidian ಎಂದು ಇವುಗಳನ್ನು ಗುರುತಿಸುತ್ತಾರೆ. ಇದು ಔತ್ತರೇಯ ಮತ್ತು ದಾಕ್ಷಿಣಾತ್ಯಗಳ ಭಾಷಾಂತರವೇ ಆಗಿದೆ. Indo-Aryan ಮತ್ತು Dravidian ಎನ್ನುವುದು, ವಿದ್ವಾಂಸ James Fergusson ರೂಢಿಗೆ ತಂದ ವರ್ಗೀಕರಣ. ಆದರೆ ವಾಸ್ತುಶಾಸ್ತ್ರ ರೀತ್ಯಾ ಅಧ್ಯಯನ ಎಂಬಂತೆ ಬಳಸುತ್ತಾರೆ. ಇದರೊಂದಿಗೆ ವೇಸರವನ್ನು ಗುರುತಿಸಲಾಗದೆ ಪರಿತಪಿಸುತ್ತಾರೆ.

ನಾಗರ, ದ್ರಾವಿಡ, ವೇಸರಗಳು ದೇವಾಲಯ ಶೈಲಿಗಳು; ಔತ್ತರೇಯ ಮತ್ತು ದಾಕ್ಷಿಣಾತ್ಯ ಎನ್ನುವುದು ಸಂಪ್ರದಾಯಗಳು. ಸಂಪ್ರದಾಯ ಎನ್ನುವ ಮಹಾವೃಕ್ಷದ ಕೆಳಗೆ ಶೈಲಿಗಳೆಂಬ ಬಿಳಿಲುಗಳು ಹರಡಿವೆ. ದಾಕ್ಷಿಣಾತ್ಯ ಸಂಪ್ರದಾಯದ ಅಡಿಯಲ್ಲಿ ನಾಗರ–ದ್ರಾವಿಡ–ವೇಸರ ಎಂಬ ಶೈಲಿಗಳು ಔತ್ತರೇಯ ದ್ರಾವಿಡ, ಭೂಮಿಜ, ಫಾಂಸನಾಕಾರ ಎಂಬ ಶೈಲಿಗಳು ಕರ್ನಾಟಕದಲ್ಲಿವೆ. ಕರ್ನಾಟಕದ ದೇವಾಲಯಗಳನ್ನು ಗುರುತಿಸುವಲ್ಲಿ ಇದು ಮೊದಲ ಹಂತ.

ಕರ್ನಾಟಕದಲ್ಲಿ ಎರಡೂ ಸಂಪ್ರದಾಯಗಳು ಆರಂಭ ಗೊಂಡು ಒಂದು ಹಂತದಲ್ಲಿ ಕವಲೊಡೆದವು. ಔತ್ತರೇಯ ಸಂಪ್ರದಾಯದ ಮೂಲರೂಪ ಇಲ್ಲಿಂದ ಉತ್ತರಕ್ಕೆ ಜಿಗಿಯಿತು. ಕೆಲವು ಶೈಲಿಗಳು ಪ್ರಾದೇಶಿಕ ರೂಪತಳೆದು ದಾಕ್ಷಿಣಾತ್ಯ ಶೈಲಿಗಳೊಡನೆ ಸಾಮರಸ್ಯ ಸ್ಥಾಪಿಸಿ ಇಲ್ಲಿಯೇ ಸಮೃದ್ಧವಾಗಿ ಅನಾವರಣಗೊಂಡವು. ಇದನ್ನು ತಿಳಿಯದ ಅಧ್ಯಯನ ಅಪೂರ್ಣ. ಐಹೊಳೆ, ಬಾದಾಮಿ, ಪಟ್ಟದಕಲ್ಲು ಮಹಾಕೂಟಗಳಲ್ಲಿ ದೇವಾಲಯ ರಚನೆಯ ಹಲವು ಪ್ರಯೋಗಗಳು ನಡೆದಿವೆ. ಇವುಗಳನ್ನು ಕೂಲಂಕುಷವಾಗಿ ವಿಶ್ಲೇಷಿಸಬೇಕು. ಆಗ ಕರ್ನಾಟಕದಲ್ಲಿ ಈ ಶೈಲಿ ಸಂಪ್ರದಾಯಗಳು ಅರಳಿರುವುದು ಖಚಿತವಾಗುತ್ತದೆ.

ಬಾದಾಮಿ ಚಲುಕ್ಯರ ಆಳ್ವಿಕೆಯ ಮಧ್ಯೆ ಕೆಲವು ವರ್ಷ ಪಲ್ಲವರ ಆಳ್ವಿಕೆ ಇದ್ದುದು ನಿಜ. ಇದನ್ನೇ ನೆಪವಾಗಿರಿಸಿ ದಾಕ್ಷಿಣಾತ್ಯ ರಚನೆಗಳು ಪಲ್ಲವರ ನಾಡಿನಿಂದ ಪಡೆದದ್ದು ಎಂದು ವಾದಿಸುವುದು ಅಸಂಗತ. ಇದರೊಂದಿಗೆ "ತೆಂಕಣದಿಶೆ" ಎಂಬ ಶಾಸನೋಲ್ಲೇಖವನ್ನೂ ತಿರುಚಿ ಅರ್ಥೈಸಿರುವುದು, ಶಾಸ್ತ್ರಗ್ರಂಥಗಳನ್ನೂ ಶಾಸನಗಳನ್ನೂ ಸರಿಯಾಗಿ ಗ್ರಹಿಸದ ಫಲ ಎನ್ನಬಹುದು.

ಕರ್ನಾಟಕ ಮೂಲದ ವಾಸ್ತುಗ್ರಂಥಗಳು ಈವರೆಗೆ ಬೆಳಕುಕಂಡಿಲ್ಲ. ಆದರೆ ವೈವಿಧ್ಯಮಯ ವಾಸ್ತುರಚನೆಗಳು ಈ ನಾಡಿನಲ್ಲಿವೆ. ಲಭ್ಯವಿರುವ ವಾಸ್ತು ಗ್ರಂಥಗಳನ್ನು ಅಭ್ಯಸಿಸಿ, ಪ್ರಾಚೀನ ವಾಸ್ತು ರಚನೆಗಳೊಂದಿಗೆ ಸಮೀಕರಿಸಿ ನೋಡಬೇಕು. ಹಳೆಯ ಮೈಸೂರು ಪರಿಸರದಲ್ಲಿ ಚೋಳರ ಆಡಳಿತವಿದ್ದಾಗ ರಚನೆಗೊಂಡ ಹಲವು ಕಟ್ಟೋಣಗಳಿವೆ. ಇವು ಹೆಚ್ಚಾಗಿ ಕಾವೇರಿ, ಕಪಿನಿ ನದಿಗಳ ತೀರದಲ್ಲಿವೆ. ಅವುಗಳ ಪ್ರಭಾವ ಮುಂದುವರೆದು ಮತ್ತಷ್ಟು ದೇವಾಲಯಗಳು ಬೆಳೆದಿವೆ. ಇವುಗಳನ್ನು ಗುರುತಿಸಿ, ತಮಿಳುನಾಡಿನಿಂದ ಪಡೆದದ್ದು ಎಷ್ಟು ಎಂದು ಖಚಿತವಾಗಿ ಹೇಳಬೇಕು. ಇದು ಪ್ರಸ್ತುತ ಲೇಖನದ ಉದ್ದೇಶ.

ಚೋಳರು ಕರ್ನಾಟಕವನ್ನು ಅಧಿಕೃತವಾಗಿ ಪ್ರವೇಶಿಸಿದ್ದು ಕ್ರಿ.ಶ. ೧೦೦೪ರಲ್ಲಿ ಎಂದು ಗಮನಿಸಬೇಕು. ತಲಕಾಡಿನ ಆಚೆಯ ದಡದಲ್ಲಿ ತಡಿಮಾಲಿಂಗಿ ಇದೆ. ಇದಕ್ಕೆ ನಾಲ್ಕಾರು ಕಿ.ಮಿಾ. ದೂರದಲ್ಲಿ ಕಲಿಯೂರು ಇದೆ. ಕ್ರಿ.ಶ. ೧೦೦೪ರಲ್ಲಿ ಚೋಳರ ಸೇನಾನಿಯಾದ ಅಪ್ರಮೇಯನಿಗೂ, ಕರ್ನಾಟಕದ ಹಲವು ಸಾಮಂತರಿಗೂ ಘೋರ ಯುದ್ಧ ಕಲಿಯೂರಿನಲ್ಲಿ ನಡೆಯಿತು. ಈ ಯುದ್ಧದಲ್ಲಿ ಅಪ್ರಮೇಯ ವಿಜಯಶಾಲಿಯಾದ. ಇವನು ರಾಜರಾಜ ಚೋಳನ ಸೇನಾಧಿಪತಿ ಅಪ್ರಮೇಯನು ಕಲಿಯೂರಿನಲ್ಲಿ

* # ೪೨, ಬ್ಲಾಕ್, ೧೭, ಬ್ಯಾಂಕ್ ಕಾಲನಿ, ಶ್ರೀರಾಂಪುರ ೨ನೇ ಹಂತ, ಮೈಸೂರು–೫೭೦೦೨೩.

ಜಯಸ್ತಂಭವನ್ನು ನಿಲ್ಲಿಸಿ, ಸುದೀರ್ಘವಾದ ಶಾಸನವನ್ನು ಹಾಕಿಸಿದ. ಈ ಯುದ್ಧದ ಜಯದಿಂದಾಗಿ ಚೋಳರಿಗೆ ಕರ್ನಾಟಕದಲ್ಲಿ ಅಧಿಕೃತ ಪ್ರವೇಶ ದೊರೆಯಿತು. ರಾಜರಾಜಚೋಳನ ಆಳ್ವಿಕೆಯ ಕಾಲ ಕ್ರಿ.ಶ. ೯೮೫ರಿಂದ ೧೦೧೫ರವರೆಗೆ; ಈತ ಮಾನಂಗಿಯಲ್ಲಿ ಕ್ರಿ.ಶ. ೧೦೧೦ರ ಸುಮಾರಿನಲ್ಲಿ ಜನಾರ್ದನ ದೇವಾಲಯವನ್ನು ನಿರ್ಮಿಸಿದ್ದಾನೆ. ತಮಿಳು ಶಾಸನಗಳಲ್ಲಿ ಈ ಸ್ಥಳವನ್ನು ವಾಯಿಲಜ್ಞಿ ಎಂದು ಸಂಬೋಧಿಸಲಾಗಿದೆ. ಇಲ್ಲಿ ಜೀರ್ಣೋದ್ಧಾರಗೊಂಡ ಮಹಾಲಿಂಗೇಶ್ವರ ದೇವಾಲಯ ವಿದೆ. ಮೂಲತಃ ಈ ದೇವಾಲಯ ಗಂಗರ ಕಾಲದ್ದು. ಆದರೆ ಗಂಗರ ಕಾಲದ ಶಾಸನಗಳಿಲ್ಲ. ನಾಶಗೊಂಡಿರುವ ಸಾಧ್ಯತೆ ಗಳುಂಟು.

ರಾಜರಾಜಚೋಳ ನಿರ್ಮಿಸಿದ ಜನಾರ್ದನ ದೇವಾಲಯ ಬಹುಶಃ ಮೊದಲನೆಯದು; ಚೋಳರ ಪ್ರವೇಶದೊಂದಿಗೆ ತಮಿಳರೂ ಕರ್ನಾಟಕವನ್ನು ಪ್ರವೇಶಿಸಿ ಕಾವೇರಿ, ಕಪಿನೀ ನದಿಗಳ ಎರಡು ದಂಡೆಯಲ್ಲಿ ಬೀಡು ಬಿಟ್ಟರು. ಇಂದಿಗೂ ಈ ಸ್ಥಳಗಳಲ್ಲಿ ಹೆಚ್ಚಾಗಿ ತಮಿಳು ಶ್ರೀವೈಷ್ಣವ ಸಮುದಾಯದವರು ಬೇರೂರಿರುವುದನ್ನು ಕಾಣಬಹುದು. ಹೊಯ್ಸಳರ ವಿಷ್ಣುವರ್ಧನನು ಚೋಳರನ್ನು ತಲಕಾಡಿನಿಂದ ಕ್ರಿ.ಶ. ೧೧೧೬ರಲ್ಲಿ ಹಿಮ್ಮೆಟ್ಟಿಸಿ, ಚೋಳರ ಆಡಳಿತವನ್ನು ಅಂತ್ಯಗೊಳಿಸಿದ. ಚೋಳರ ಆಡಳಿತ ಅಂತ್ಯಗೊಂಡರೂ, ಹಲವು ತಮಿಳು ಅಧಿಕಾರಿಗಳು ಅವರ ಕುಟುಂಬಗಳೂ ಇಲ್ಲಿಯೇ ಉಳಿದು, ಹೊಯ್ಸಳರಿಗೆ ನಿಷ್ಠಾವಂತರಾಗಿ ಅಧಿಕಾರ ದಲ್ಲಿ ಮುಂದುವರೆದರು. ಅನಂತರ ವಿಜಯನಗರದ ಅರಸರ ಕಾಲದಲ್ಲಿಯೂ ಸೇವೆಸಲ್ಲಿಸಿದರು. ಇವರ ಅಧಿಕಾರ ವಿರುವೆಡೆಯಲ್ಲಿ ಹಲವು ದೇವಾಲಯಗಳು ರಚನೆಗೊಂಡಿದ್ದು, ಇವು ಮಾನಂಗಿಯ ಜನಾರ್ದನ ದೇವಾಲಯದ ಮುಂದುವರೆದ ಹಂತಗಳೆನಿಸಿವೆ. ಬೆಳಗೊಳದ ಜನಾರ್ದನ, ಕುಲಗಾಣದ ಜಲವಾಸುದೇವ, ಬನ್ನೂರಿನ ಕೈಲಾಸೇಶ್ವರ, ರಾಘವಪುರದ ಲಕ್ಷ್ಮೀಕಾಂತ, ನಾಗಮಂಗಲದ ನರಸಿಂಹ, ತೊಂಡನೂರಿನ ಕೃಷ್ಣ, ನರಸಿಂಹ ದೇವಾಲಯಗಳನ್ನು ಪ್ರಾತಿನಿಧಿಕವಾಗಿ ಹೆಸರಿಸಬಹುದು. ಈ ದೇವಾಲಯಗಳ ವಿನ್ಯಾಸವನ್ನು ಶಾಸ್ತ್ರಗ್ರಂಥಗಳ ಉಲ್ಲೇಖದ ಮೂಲಕ ಕಾಣಲು ಸಾಧ್ಯವೇ ಎಂದು ಪರಿಶೀಲಿಸ ಬೇಕು.

ದಾಕ್ಷಿಣಾತ್ಯ ದೇವಾಲಯಗಳ ಗರ್ಭಗೃಹದ ತಲಚ್ಛಂದವು ಮೂರು ವಿಧ. ಇವನ್ನು ಏಕಭಿತ್ತಿಕ, ದ್ವಿಭಿತ್ತಿಕ ಮತ್ತು ಅಲಿಂದ್ರಕ ಎಂದು ವರ್ಗೀಕರಿಸಲಾಗಿದೆ. ಏಕಭಿತ್ತಿಕ ಎಂದಲ್ಲಿ ಒಂದು ಭಿತ್ತಿಯಿರುವ ಗರ್ಭಗೃಹ. ದ್ವಿಭಿತ್ತಿಕ ಎಂದಲ್ಲಿ ಎರಡು ಭಿತ್ತಿ ಒಳಗೊಂಡಿರುವುದು; ಗರ್ಭಗೃಹಕ್ಕೆ ಪ್ರದಕ್ಷಿಣಾಪಥವಿರುವುದು. ಅಲಿಂದ್ರಕವು ಸಾಮಾನ್ಯವಾಗಿ ಗರ್ಭ ಗೃಹ ಮತ್ತು ಅಂತರಾಳವನ್ನೂ ಆವರಿಸುತ್ತದೆ. ಪ್ರದಕ್ಷಿಣಾ ಪಥಕ್ಕಿಂತ ಹೆಚ್ಚು ವಿಸ್ತಾರವುಳ್ಳದ್ದು.

ದೇವಾಲಯದ ಪರಿಕಲ್ಪನೆ ಕೇವಲ ಗರ್ಭಗೃಹ ವೊಂದರಿಂದಲೇ ಸಾಧ್ಯವಿದೆ. ಕೇವಲ ಗರ್ಭಗೃಹ; ಅದರ ಛಾವಣಿ ಅಥವಾ ಪ್ರಸ್ತರದ ಮೇಲೆ ಅರಳುವ ಶಿಖರ ರಚನೆ; ಇದನ್ನು ದೇವಾಲಯ ಎನ್ನಲು ಸಾಧ್ಯ. ಪಾದ್ಮಸಂಹಿತಾಕಾರನು "ಆರಭೇತ್‌ಸ್ಥಪತಿಭಿಸ್ಸಾಕಂ ರಥಕೃದಾಲಯಂ" ಎನ್ನುತ್ತಾನೆ. ದೇವಾಲಯವು ರಥದಂತಿರಬೇಕು ಎನ್ನುವುದು ಅವನ ಆಶಯ. ಇಲ್ಲಿ ಕೇವಲ ಗರ್ಭಗೃಹವಿದೆ. ಹೊಯ್ಸಳರ ಕಾಲದ ಶಾಸನ ವೊಂದು, ರಥವನ್ನು ನಡೆದೇಗುಲವೆಂದೂ, ದೇವಾಲಯ ರಚನೆಯನ್ನು ನೆಲೆದೇಗುಲವೆಂದು ವಿವರಿಸಿದೆ. ಕೇವಲ ಗರ್ಭಗೃಹವುಳ್ಳ ರಚನೆಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ಇದರ ಮುಂದುವರೆದ ಹಂತವಾಗಿ ಗರ್ಭಗೃಹದೊಂದಿಗೆ ಅರ್ಧಮಂಟಪ ಅಥವಾ ಮುಖಮಂಟಪವನ್ನು ಕಾಣಬಹುದು. ಮಹಾಬಲಿಪುರಂ ಕಡಲತಡಿಯಲ್ಲಿ ಕಾಣುವ ಎರಡು ದೇವಾಲಯಗಳು ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿವೆ. ಅರ್ಧಮಂಟಪವನ್ನು ಕೊಂಚ ಮುಂಚಾಚಿದರೆ ಮುಖಮಂಟಪವೆನ್ನಿಸುತ್ತದೆ. ಐಹೊಳೆಯ ರಾವಳಫಡಿಯ ಗುಹೆಯ ಎಡಬಲಗಳಲ್ಲಿ ಇಂಥ ರಚನೆಗಳಿವೆ. ಎಡಭಾಗದ ರಚನೆಯಲ್ಲಿ ಗರ್ಭಗೃಹದ ಮೇಲೆ ಒರಟಾದ ಶಿಖರವನ್ನು ಕಾಣಬಹುದು. ಕಾಶ್ಯಪ ಶಿಲ್ಪ ಗ್ರಂಥಕಾರನು ಗರ್ಭಗೃಹದ ಮುಂದೆ ರಚನೆಗೊಳ್ಳುವ ಮಂಟಪಗಳನ್ನು ಹೆಸರಿಸಿದ್ದಾನೆ. (ವಿ.ಜಿ. ಆಪ್ಟೆ, ೧೯೨೬, ೧೧೭)

**ಮುಖಮಂಟಪಮಾದೌ ಪ್ರತಿಮಾ ಮಂಟಪಂ ತತಃ**
**ಸ್ನಾಪನಾರ್ಥಂ ತು ತೃತೀಯಂ ನೃತ್ಯಾರ್ಥಂ ನೃತ್ಯಮಂಟಪಂ**

ಗರ್ಭಗೃಹದೊಂದಿಗೆ ಮೊದಲು ಮುಖಮಂಟಪ, ನಂತರ ಪ್ರತಿಮಾ ಮಂಟಪ, ಮೂರನೆಯದು ಸ್ನಪನ ಮಂಟಪ, ನಂತರ ನೃತ್ಯ ಮಂಟಪ. ಇವು ಗರ್ಭಗೃಹದೊಂದಿಗೆ ಸಾಲಾಗಿ ಜೋಡಣೆಗೊಳ್ಳುವಂಥದ್ದು. ಆದರೆ ಈ ನಾಲ್ಕನ್ನೂ ಒಂದೆಡೆ ಕಾಣುವುದು ಅಸಾಧ್ಯ. ಸ್ನಪನ ಮಂಟಪದ ರಚನೆ ಬಹುಶಃ ಇಲ್ಲವೆನ್ನಬಹುದು.

ಗರ್ಭಗೃಹ, ಪ್ರತಿಮಾ ಮಂಟಪದ ನಡುವೆ ಇರುವ ಮಂಟಪವನ್ನು ಅಂತರಾಳ ಎನ್ನಲಾಗುತ್ತದೆ. ಎರಡು ಮಂಟಪಗಳ ನಡುವೆ ಇರುವುದು ಅಂತರಾಳ. ಪ್ರತಿಮಾ ಮಂಟಪ ಎನ್ನುವುಕ್ಕಿಂತ ರಂಗಮಂಟಪವೆಂಬ ಪದ ಹೆಚ್ಚು ಬಳಕೆಯಲ್ಲಿದೆ. ರಂಗಮಂಟಪದ ಪೂರ್ವ ಹಾಗೂ ದಕ್ಷಿಣ

ದಿಕ್ಕಿನಲ್ಲಿ ಸಾಮಾನ್ಯವಾಗಿ ಪ್ರವೇಶದ್ವಾರಗಳಿವೆ. ಏಕಭಿತ್ತಿಕ ರಚನೆಗಳಲ್ಲಿ ಗರ್ಭಗೃಹ, ಅಂತರಾಳ, ರಂಗಮಂಟಪ, ಮುಖಮಂಟಪಗಳನ್ನು ಕಾಣಬಹುದು. ಅಗರದ ನರಸಿಂಹ, ಮದ್ದೂರಿನ (ಚಾಮರಾಜನಗರ ಜಿಲ್ಲೆ) ಚಕ್ರಪಾಣಿ, ಗುಂಡ್ಲುಪೇಟೆಯ ರಾಮೇಶ್ವರ, ಉಮ್ಮತ್ತೂರಿನ ಭುಜಂಗೇಶ್ವರ ದೇವಾಲಯಗಳನ್ನು ಕೆಲವು ಉದಾಹರಣೆಗಳಾಗಿ ಗಮನಿಸಬಹುದು. ದೊಡ್ಡಮಳೂರಿನ ಅಪ್ರಮೇಯ, ಹರದನಹಳ್ಳಿಯ ದಿವ್ಯಲಿಂಗ ಅಣಿಲೇಶ್ವರ ದೇವಾಲಯಗಳು ಕೊಂಚ ವಿಶಾಲವಾದ ರಚನೆಗಳು. ತಲಕಾಡಿನ ವೈದ್ಯನಾಥ ದೇವಾಲಯವನ್ನು ರಾಜ ರಾಜೇಶ್ವರ ಎನ್ನುತ್ತಾರೆ. ಈಗ ಕಾಣುತ್ತಿರುವ ರಚನೆ ವಿಜಯನಗರದ ಅರಸರ ಕಾಲದ್ದು. ಈ ದೇವಾಲಯದಲ್ಲಿ ಆಯತಾಕಾರ ಮಂಟಪವಿದೆ. ಪೂರ್ವ ಮತ್ತು ದಕ್ಷಿಣ ದಿಕ್ಕಿನಲ್ಲಿ ಮುಖಮಂಟಪಗಳಿವೆ. ಪೂರ್ವದ ಮುಖಮಂಟಪ ತೆರೆದದ್ದು; ದಕ್ಷಿಣ ದಿಕ್ಕಿನಲ್ಲಿರುವುದು ಕಕ್ಷಾಸನವನ್ನು ಒಳಗೊಂಡಿದೆ. ವಿಜಯನಗರ ಅರಸರ ಕಾಲದಲ್ಲಿ ಸಂಪೂರ್ಣ ಪುನರ್ ನಿರ್ಮಾಣವಾಗಿದೆ ಎನ್ನಬಹುದು.

ದ್ವಿಭಿತ್ತಿಕ ರಚನೆಗಳು ಚೋಳರ ಆಡಳಿತ ಕಾಲದಲ್ಲಿ ಇಲ್ಲಿ ನಿರ್ಮಾಣಗೊಂಡಿಲ್ಲವೆನ್ನಬಹುದು. ಆದರೆ ಅವುಗಳ ಪ್ರಭಾವದ ರಚನೆಯನ್ನು ಮುಂದೆ ಕಾಣುತ್ತೇವೆ. ಚೋಳರ ಪೂರ್ವಯುಗದಲ್ಲಿ ರಚನೆಗೊಂಡ ಕಂಚಿಯ ವರದರಾಜ, ಕೈಲಾಸನಾಥ ದೇವಾಲಯಗಳು ಪ್ರದಕ್ಷಿಣಾಪಥವನ್ನೊಳಗೊಂಡಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಇವೆರಡೂ ಮರಳುಗಲ್ಲಿನ ರಚನೆಗಳು. ದ್ವಿಭಿತ್ತಿಕ ಹಾಗೂ ಮರಳುಗಲ್ಲಿನ ರಚನೆಗಳು ಅಲ್ಲಿಯೂ ಅಪರೂಪವೇ. ಬಾದಾಮಿ ಚಲುಕ್ಯರ ಕಾಲದಲ್ಲಿ ಹೆಚ್ಚು ರಚನೆಗಳಿವೆ. ಕಂಚಿಯ ದೇವಾಲಯಗಳಿಗೆ ಬಾದಾಮಿಯ ಚಲುಕ್ಯರ ಕಾಲದ ದೇವಾಲಯಗಳು ಮುನ್ನುಡಿ ಬರೆದಿರಲು ಸಾಧ್ಯ.

ಹಂಪೆಯ ವಿರೂಪಾಕ್ಷ, ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯಗಳು ದ್ವಿಭಿತ್ತಿಕ ರಚನೆಗಳಿಗೆ ಸಾಕ್ಷಿಯಾಗಿವೆ. ಶೃಂಗೇರಿಯ ವಿದ್ಯಾಶಂಕರ ದೇವಾಲಯ ದ್ವಿಭಿತ್ತಿಕ ರಚನೆ ಎನ್ನಬಹುದು. ಆದರೆ ಇದು ಸಫಲಗೊಳ್ಳದ ಪ್ರಯೋಗ ಎಂದೆನಿಸಿದೆ. ಇಕ್ಕೇರಿಯ ಅಘೋರೇಶ್ವರ ದೇವಾಲಯವೂ ದ್ವಿಭಿತ್ತಿಕವೇ. ಈ ರಚನೆಗಳಲ್ಲಿ ಪ್ರದಕ್ಷಿಣಾಪಥವು ಕೇವಲ ಗರ್ಭಗೃಹವನ್ನು ಆವರಿಸುತ್ತದೆ. ಗರ್ಭಗೃಹದ ಮುಂದೆ ಅಂತರಾಳ, ರಂಗಮಂಟಪಗಳಿವೆ. ಗರ್ಭಗೃಹದ ಅಳತೆಗೆ ಹೋಲಿಸಿದರೆ ಅಂತರಾಳದ ಹರವು ತುಸು ಹೆಚ್ಚು. ಕೆಲವೊಮ್ಮೆ ಅಂತರಾಳದಲ್ಲಿ ಕಂಭಗಳುಂಟು. ದ್ವಿಭಿತ್ತಿಕ ರಚನೆಗಳು ಹೆಚ್ಚು ಬೆಳೆಯಲಿಲ್ಲ ಎಂದು ಗಮನಿಸಬಹುದು.

ಅಲಿಂದ್ರ ರಚನೆಯನ್ನು ಗಮನಿಸೋಣ. ದಾಕ್ಷಿಣಾತ್ಯ ಸಂಪ್ರದಾಯದಲ್ಲಿ "ಅಲಿಂದ್ರ" ಪದ ಬಳಕೆಯಲ್ಲಿದ್ದಂತೆ, ಔತ್ತರೇಯ ಸಂಪ್ರದಾಯದಲ್ಲಿ "ಅಲಿಂದ" ಪದ ಪ್ರಯೋಗದಲ್ಲಿದೆ. ಐಹೊಳೆಯ ಲಾಡ್‌ಖಾನ್ ದೇವಾಲಯದಲ್ಲಿ ಚತುಷ್ಕದ ಸುತ್ತ ಅಲಿಂದವಿದೆ. ಇದರ ಸ್ವರೂಪ, ಬೆಳವಣಿಗೆಯನ್ನು ಪ್ರತ್ಯೇಕ ಅಧ್ಯಾಯದಲ್ಲಿ ಕಾಣಬೇಕು. ಔತ್ತರೇಯ, ದಾಕ್ಷಿಣಾತ್ಯ ಸಂಪ್ರದಾಯಗಳು ಕವಲೊಡೆಯುವಲ್ಲಿ ಇದರ ಪಾತ್ರ ಗಮನಾರ್ಹ.

ಚೋಳರ ಕಾಲದಲ್ಲಿ ಕಂಡ ಅಲಿಂದ್ರಕ ರಚನೆ ಎರಡು ರೀತಿಯದು. ಒಂದು ಗರ್ಭಗೃಹ, ಅಂತರಾಳವನ್ನು ಸುತ್ತುವರೆದಿದೆ; ಮತ್ತೊಂದು ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪವನ್ನು ಸುತ್ತುವರೆದಿದೆ. ಇವುಗಳ ಆರಂಭವನ್ನು ಮಾನಂಗಿಯ ಜನಾರ್ಧನ ದೇವಾಲಯದಿಂದ ಗುರುತಿಸಬೇಕು. ಅಲಿಂದವು ಒಂದು ರೀತಿಯ ಪ್ರದಕ್ಷಿಣಾ ಪಥವೇ ಆದರೆ ಕಂಭಗಳಿಂದ ಕೂಡಿದ್ದು ಹೆಚ್ಚು ವಿಸ್ತಾರವುಳ್ಳದ್ದು. ಅಲಿಂದ ರಚನೆ ಮತ್ತು ಗರ್ಭಗೃಹ ಅಂತರಾಳಗಳ ನಡುವೆ ಪ್ರಸ್ತರ ಭಾಗದಲ್ಲಿ ಕಿರಿದಾದ ತೆರೆದ ಭಾಗವಿರುತ್ತದೆ. ಇದಕ್ಕೆ 'ಜಲಪಾತನ ಸ್ಥಳ' ಎಂದು ಹೆಸರಿಸಲಾಗಿದೆ. ಗರ್ಭಗೃಹ, ಅಂತರಾಳದ ಮೇಲೆ ಬಿದ್ದ ಮಳೆನೀರು ಈ ಮೂಲಕ ಕೆಳಗೆ ಬೀಳುತ್ತದೆ. ಅಲಿಂದದ ಅಧಿಷ್ಠಾನ ಮತ್ತು ಗರ್ಭಗೃಹ ಅಂತರಾಳಗಳ ಅಧಿಷ್ಠಾನದ ನಡುವೆ ಕಿರಿದಾದ ಜಾಗವಿದೆ. ಇದಕ್ಕೆ 'ಜಲಸ್ಥಳ' ಎಂದು ಹೆಸರು. ಇಲ್ಲಿ ಬಿದ್ದ ನೀರು ಹೊರಗೆ ಹರಿಯಲು ಅವಕಾಶವಿದೆ. ದೇವಾಲಯದ ಪ್ರನಾಳ ಭಾಗವೂ ಇಲ್ಲಿದೆ. ಅಭಿಷೇಕದ ನೀರು ಈ ಮೂಲಕ ಹರಿದು ಹೋಗುತ್ತದೆ.

ಗರ್ಭಗೃಹ, ಅಂತರಾಳದ ಮುಂದೆ ಆಯತಾಕಾರದ ರಂಗಮಂಟಪ; ನಂತರ ಮುಖಮಂಟಪ ಅಥವಾ ವಿಶಾಲ ಮಂಟಪ. ರಂಗಮಂಟಪದ ಹೊರಗೆ ಎಡಬಲಗಳಲ್ಲಿ ಎರಡೂ ಕಡೆಯಿಂದ ಅಲಿಂದಕ್ಕೆ ಪ್ರವೇಶ. ಆಗ ಅಲಿಂದವು ರಂಗಮಂಟಪವನ್ನು ಆವರಿಸಿದೆ. ಮುಖಮಂಟಪದ ಮುಂದೆ ನೀಳವಾದ ಸ್ತಂಭಗಳುಳ್ಳ ಪಾತಾಳಾಂಕಣ, ಪ್ರಾಕಾರದ ಪ್ರವೇಶದ್ವಾರದವರೆಗೆ ವಿಸ್ತರಿಸಲ್ಪಡುತ್ತದೆ. ಈ ರೀತಿಯ ರಚನೆಯನ್ನು ಹಲವು ದೇವಾಲಯಗಳಲ್ಲಿ ಕಾಣಬಹುದು.

ಮೊದಲಿಗೆ ಅತಿ ಸರಳ ರಚನೆ ಎನಿಸಿದ ಮಾನಂಗಿಯ ಜನಾರ್ದನ ದೇವಾಲಯವನ್ನು ಗಮನಿಸಬಹುದು. ಮೂಲತಃ ಇದೊಂದು ವಿಸ್ತಾರಮಂಟಪ ರಚನೆ ೬x೧೦ ಕಂಭಗಳ ಕ್ಷೇತ್ರವುಳ್ಳದ್ದು. ಇದರಲ್ಲಿ ೪x೭ರ ಮಧ್ಯಾಂಕಣದಲ್ಲಿ ಕಂಭಗಳಿಲ್ಲದೆ ಆಲಯ ರಚನೆ ಇದೆ. ದೇವಾಲಯದ ಸುತ್ತ ಎಡ ಬಲ ಭಾಗದಲ್ಲಿ ಹಾಗೂ ಹಿಂಭಾಗದಲ್ಲಿ ಒಂದು ಅಂಕಣದಷ್ಟು

ವಿಸ್ತಾರವುಳ್ಳ ಅಲಿಂದ. ಇದು ಸುತ್ತ ಕಂಭಗಳುಳ್ಳ ತೆರೆದ ಭಾಗ. ಮುಂಭಾಗದಲ್ಲಿ ಎರಡು ಅಂಕಣದ ಮಂಟಪ ೬x೨ ಕಂಭಗಳುಳ್ಳ ಕ್ಷೇತ್ರ. ಆಲಯ ರಚನೆಯಲ್ಲಿ ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪವಿದೆ. ಅಲಿಂದದ ಭಾವಣಿ ಮತ್ತು ಗರ್ಭಗೃಹ ಅಂತರಾಳಗಳ ನಡುವೆ ಕೊಂಚ ತೆರೆದ ಭಾಗ, ಜಲಪಾತನ ಸ್ಥಳ. ರಂಗಮಂಟಪದ ಅಗಲ, ಗರ್ಭಗೃಹ ಅಂತರಾಳಕ್ಕಿಂತ ತುಸು ಹೆಚ್ಚು, ದೇವಾಲಯದ ಅಧಿಷ್ಠಾನ ಭಾಗವು ಭಾಗಶಃ ಮಣ್ಣಿನಿಂದ ಮುಚ್ಚಿದೆ. ಈ ಭಾಗವನ್ನು ಸ್ವಚ್ಛಗೊಳಿಸಿದಲ್ಲಿ ಜಲಸ್ಥಳ ವಿತ್ತೇ? ಎಂದು ಗಮನಿಸಬಹುದು. ರಂಗಮಂಟಪದ ಮುಂಭಾಗದಲ್ಲಿ ಎರಡು ಕಂಭಗಳ ಸಾಲಿನ ನಂತರ ಭದ್ರಭಾಗದಲ್ಲಿ ದ್ವಾರಬಂಧವನ್ನು ಜೋಡಿಸಿದ್ದು ಮುಂಚಾಚಿದೆ. ದೇವಾಲಯಕ್ಕೆ ಇಲ್ಲಿಂದ ಪ್ರವೇಶ. ದೇವಾಲಯದ ಮೇಲೆ ಗಿಡಗಂಟೆಗಳು ಬೆಳೆದು ಪೂರ್ಣ ಪೊದೆಯಂತಾಗಿದೆ. ಗರ್ಭಗೃಹದ ಮೇಲೆ ಕಲ್ಲಿನ ಚತುರಶ್ರಾಕಾರದ ನಾಗರ ಶಿಖರ ಕಾಣಿಸುತ್ತದೆ. ಗರ್ಭಗೃಹ, ಅಂತರಾಳ, ರಂಗಮಂಟಪಗಳು ಅತೀ ಸರಳ ರಚನೆಗಳು. ರಂಗಮಂಟಪದಲ್ಲಿ ಎರಡು ಸಾಲು, ಮೂರುಮೂರು ಸ್ತಂಭಗಳಿವೆ. ಇದು ದೇವಾಲಯದ ಸ್ಥೂಲರೂಪ. ಈ ರೀತಿಯ ರಚನೆಗಳಿಗೆ ಶಾಸ್ತ್ರರೀತ್ಯಾ ವಿವರಗಳಿವೆಯೇ ಎಂದು ಪರೀಕ್ಷಿಸಬಹುದು.

ಮಯಮತ ಮತ್ತು ಮಾನಸಾರ ಗ್ರಂಥಗಳಲ್ಲಿ ವಿಶಾಲ ವಾದ ಮಂಟಪಗಳನ್ನು ವಿವರಿಸುವ ಪ್ರತ್ಯೇಕ ಅಧ್ಯಾಯಗಳಿವೆ. ಇವು ಚತುರಶ್ರ ಹಾಗೂ ಆಯತಾಕಾರದ ಮಂಟಪಗಳು. ಇವುಗಳ ಮಧ್ಯೆ ಸ್ತಂಭರಹಿತ ಮಧ್ಯಾಂಕಣವನ್ನು ಸೂಚಿಸಲಾಗಿದೆ. ಮಧ್ಯಾಂಕಣವು ಪೂರ್ಣಜಲಸ್ಥಲವಾಗ ಬಹುದು ಅಥವಾ ಸಭಾ ರಚನೆಯನ್ನು ಹೊಂದಿರಬಹುದು. ಸಭಾರಚನೆಯ ಆಕಾರವನ್ನೂ ಸೂಚಿಸಲಾಗಿದೆ. ಜನಾರ್ದನ ದೇವಾಲಯಕ್ಕೆ ಸಮೀಪವೆನಿಸುವ ವಿವರವನ್ನು ಮಯಮತ ಗ್ರಂಥದಿಂದ ಉದ್ಧರಿಸಲಾಗಿದೆ (ಬ್ರೂನೋಡಗೆನ್ಸ್): ೧೯೭೦: ೯೫೫) ಇದು ಸೃಗ ಎಂಬ ಪ್ರಬೇಧದ ವಿವರಣೆ.

> **ವಿಸ್ತೃತಂ ದ್ವಿಭಕ್ತ್ಯಾಧಿಕಮಾಯತಂ**
> **ಚತುರ್ದ್ವಿಭಕ್ತಿಕಂ ದೈರ್ಘ್ಯ ವ್ಯಾಸ ಮಧ್ಯೇ ಸಭೋದಯಂ॥**
> **ಪರಿತೋ ಮಂಡಪಂ ದ್ವಯಂಶಮಿಷ್ಟದಿಕ್ ಮುಖಭದ್ರಕಂ**
> **ಷಷ್ಟ್ಯಂಘ್ರಿಯುತ ಮಾದ್ಯಂಗಂಯುಕ್ತ್ಯಾ ನಾಸ್ಯಂಗ ಸಂಯುಕ್ತಂ॥**
> **ಸರ್ವಾಲಂಕಾರ ಸಂಯುಕ್ತಂ ಸೃಗಾಖ್ಯಂ ತನ್ಮನೋಹರಂ**
> **(೨೫: ೧೨೨-೧೨೪)**

ಈ ಮಂಟಪವು ಆರುಭಾಗ ಅಗಲ ಎಂಟು ಭಾಗ ಉದ್ದವುಳ್ಳ ವಿಸ್ತಾರವಾದ ಆಯತಾಕಾರ ರಚನೆ (೭x೯ ಕಂಬಗಳ ಹರಹಿನ ಕ್ಷೇತ್ರ), ಮಧ್ಯೆ ೪x೨ ಅಂಕಣಗಳ ಮಧ್ಯಾಂಕಣ, ಇದರಲ್ಲಿ ಸಭಾರಚನೆ ಸುತ್ತ ಎರಡು ಅಂಕಣ ದಷ್ಟು ಮಂಟಪ ಯಾವ ದಿಕ್ಕಿನಲ್ಲಾದರೂ ಮುಖಭದ್ರ. ಒಟ್ಟು ೬೦ ಕಂಭಗಳು. ಶೋಭೆಗೆ ತಕ್ಕಷ್ಟು ನಾಸಿ ರಚನೆ ಹಾಗೂ ಅಲಂಕಾರ. ಇದು ಸೃಗಾ ಪ್ರಬೇಧದ ಲಕ್ಷಣಗಳು. ಸೃಗ ವಿವರಣೆಗೆ ತಕ್ಕಂತೆ ಸಂಭಾವ್ಯ ಚಿತ್ರವಿದೆ.

ಮಧ್ಯೆ ಸಭಾ ರಚನೆ ಎಂದಲ್ಲಿ, ಕರಾವಳಿ ಪ್ರದೇಶದ ಉಪಾದೇವಾಲಯಗಳನ್ನು ಗಮನದಲ್ಲಿರಿಸಿಕೊಂಡ ರಚನೆಯ ವಿವರಗಳೆನಿಸಿವೆ. ಇಳಿಜಾರಿನ ಲುಪಾಶಿಖರದ ಮೇಲೆ ಬಿದ್ದ ಮಳೆನೀರು ಹರಿಯಲು ಜಲಸ್ಥಳದ ಕಲ್ಪನೆ ಎನ್ನಬಹುದು.

ಮಂಗಲವೆಂಬ ಪ್ರಬೇಧದಲ್ಲಿ ೧೦x೧೨ ಅಂಕಣಗಳ ಕ್ಷೇತ್ರ; ಮಧ್ಯೆ ೨x೩ ಅಂಕಣಗಳ ಮಧ್ಯಾಂಕಣದಲ್ಲಿ ಸಭಾರಚನೆ. ಸುತ್ತ ಜಲಪಾತನ ಪ್ರದೇಶ ಒಂದು ಅಂಕಣದಷ್ಟು ಭಾಗ; ನಂತರ ಒಂದು ಭಾಗ ಅಲಿಂದ್ರ ರಚನೆ (ಬ್ರೂನೋಡಗೆನ್ಸ್: ೧೯೭೦:೬೫೭)

> **ಪಂಕ್ತಿಭಾಗ ವಿಶಾಲಂ ತು ತಸ್ಮಾದ್ ದ್ವಂಶಾಧಿಕಾಯತಂ॥**
> **ದ್ವಿಚತುರ್ಭಾಗ ವಿಸ್ತಾರಾಯಾಮಂ ಮಧ್ಯೇ ಸಭೋದಯಂ**
> **ಪರಿತೋ ಲಿಂದ್ರಮೇಕಾಂಶಂ ಭಾಗೇನ ಜಲ ಪಾತನಂ॥**
> **(೨೫ : ೧೩೪-೧೭೫)**

ಸುತ್ತ ಎರಡು ಅಂಕಣಗಳುಳ್ಳ ಮಂಟಪವನ್ನು ಸ್ತಂಭ, ಭಿತ್ತಿ, ಮುಖಭದ್ರಗಳೊಂದಿಗೆ ರಚಿಸಬಹುದು. ಅಥವಾ ಕೂಟವುಳ್ಳ (ಷಡ್ವರ್ಗ) ಆಲಯವನ್ನೂ, ಎಂದಿನಂತೆ ಅಲಿಂದವನ್ನು ರಚಿಸಬಹುದು. ಜಲಸ್ಥಳವಿಲ್ಲದೆ ಮಂಟಪವನ್ನೇ ವಿಸ್ತರಿಸಬಹುದು.

> **ತದ್ಬಾಹ್ಯೇ ದ್ವಯಂಶೇನ ಪರಿತೋ ಮಂಡಪಂ ಭವೇತ್**
> **ಸ್ತಂಭಂ ಕುಡ್ಯಂ ಮುಖಭದ್ರಂ ಯಥೇಷ್ಟಂ ಪರಿಕಲ್ಪಯೇತ್॥**
> **ಅಥವಾ ಮಧ್ಯಕೂಟಂ ಚಾಪ್ಯಾಲಿಂದ್ರ ಚಾಪಿ ಪೂರ್ವವತ್**
> **ಜಲಸ್ಥಲಂ ವಿನಾ ಸರ್ವಂ ಮಂಡಪಂ ಪರಿಕಲ್ಪಯೇತ್ ॥**
> **(೨೫: ೧೩೬-೧೩೭)**

ಲುಪಾ ರಚನೆಗೆ ಬದಲಾಗಿ ಕೂಟರಚನೆಯನ್ನು ಹೇಳಿದೆ. ಕೂಟರಚನೆ ಎಂದಲ್ಲಿ ಷಡ್ವರ್ಗರಚನೆಯೇ. ಕಾಮಿಕಾ ಗಮದ ಗ್ರಂಥಕಾರನು ಸಭಾ ಅಥವಾ ಮಂಡಪಾಕಾರವನ್ನು ರಚಿಸಬಹುದೆನ್ನುತ್ತಾನೆ. (ಸ್ವಾಮಿನಾಥ ಶಿವಾಚಾರ್ಯ: ೧೯೭೫: ೯೯)

> **ಮಧ್ಯಮಂ ಚಾಂಕಣಸ್ಥಾನಂ ಮಂಡಪೇನಯುತಂ ತು ವಾ**
> **ಸಭಾಕಾರಯುತಂ ವಾಪಿ ಕೇವಲಂ ವಾ ಜಲಸ್ಥಲಂ**
> **(೪೪:೬೭)**

ಅಲಿಂದ್ರ ರಚನೆ, ಜಲಪಾತನ ಸ್ಥಳ, ಜಲಸ್ಥಳ ಇವುಗಳ ಸ್ವರೂಪ ಮೊದಲಿಗೆ ನಿರಂತರ ಮಳೆ ಬೀಳುವ ಪ್ರದೇಶಕ್ಕೆ

ಹೊಂದಿಕೊಳ್ಳುವಂತೆ ರಚನೆಗೊಂಡಿದ್ದು, ನಂತರ ಪ್ರಾದೇಶಿಕ ಮಾರ್ಪಾಡುಗಳೊಂದಿಗೆ ಇತರೆಡೆಯಲ್ಲಿಯೂ ನಿರ್ಮಾಣ ವಾಯಿತು. ಮೊದಲ ಪ್ರಾಕಾರದೊಳಗಿನ ಆವೃತಮಂಟಪಗಳ ರಚನೆಗೆ ಅಲಿಂದ ರಚನೆಯೇ ಮೂಲವೆಂದೂ ಗುರುತಿಸ ಬಹುದು.

ಮಾನಂಗಿಯ ಜನಾರ್ದನ ದೇವಾಲಯದ ನಂತರ, ಬೆಳಗೊಳದ ಜನಾರ್ದನ ದೇವಾಲಯವನ್ನು ಗುರುತಿಸಬೇಕು. ಈ ದೇವಾಲಯದ ಮುಂಭಾಗ ಹಾಳಾಗಿದೆ. ಇದರಿಂದ ಮೂಲಸ್ವರೂಪಕ್ಕೆ ಧಕ್ಕೆಯಾಗಿಲ್ಲ. ಗರ್ಭಗೃಹದೊಂದಿಗೆ ನೀಳವಾದ ಅಂತರಾಳವಿದೆ. ಅಂತರಾಳದ ದ್ವಾರದ ಇಕ್ಕೆಲಗಳಿಂದ ಅಲಿಂದ ಭಾಗಕ್ಕೆ ಪ್ರವೇಶ. ಅಲಿಂದ್ರವು ಸುತ್ತ ಭಿತ್ತಿಯಿಂದ ಕೂಡಿದ್ದು ಒಳಭಾಗದಲ್ಲಿ ನಿಯತ ಅಂತರದಲ್ಲಿ ಕಂಭಗಳಿವೆ. ಅಲಿಂದ ಹಾಗೂ ಗರ್ಭಗೃಹ ಅಂತರಾಳಗಳ ನಡುವೆ ಮೇಲ್ಭಾಗದಲ್ಲಿ ಕಿರಿದಾದ ತೆರೆದ ಜಲಪಾತನ ಪ್ರದೇಶ. ಈ ಭಾಗದಿಂದಲೇ ಅಲಿಂದ್ರ ಭಾಗಕ್ಕೆ ಗಾಳಿ ಬೆಳಕು. ಅಧಿಷ್ಠಾನ ಭಾಗದಲ್ಲಿ ಕಿರಿದಾದ ಜಲಸ್ಥಳಪ್ರದೇಶ.

ಅಲಿಂದ್ರ ಹಾಗೂ ಅಂತರಾಳಗಳ ಮುಂಭಾಗದಲ್ಲಿ ಆರು ಕಂಭಗಳ ಸಾಲುಗಳನ್ನು ಹೊರಗಿನಿಂದ ನಿಚ್ಚಳವಾಗಿ ಕಾಣಬಹುದಾಗಿದೆ. ಈ ಭಾಗದಲ್ಲಿ ವಿಶಾಲವಾದ ಕಂಭಗಳುಳ್ಳ ಮಂಟಪ; ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರವಿತ್ತು ಎಂದು ಊಹಿಸಬಹುದು. ಮಂಟಪ ಭಾಗದಲ್ಲಿ ಹೊರಭಿತ್ತಿಯಲ್ಲಿ ಗಾಳಿ ಬೆಳಕಿಗಾಗಿ ಜಾಲಂಧ್ರಗಳಿತ್ತು ಎಂದು ಊಹಿಸಬಹುದು.

ಕುಲಗಾಣದ ಜಲವಾಸುದೇವ ದೇವಾಲಯ ಇದೇ ರೀತಿಯದು. ಅಲಿಂದ್ರ ಮತ್ತು ಗರ್ಭಗೃಹ ಅಂತರಾಳಗಳ ನಡುವೆ ಅಧಿಷ್ಠಾನ ಭಾಗದಲ್ಲಿರುವ ಜಲಸ್ಥಳದಿಂದಾಗಿ ಜಲವಾಸುದೇವ ಎಂಬ ಹೆಸರು ಬಂದಿರಬೇಕು. ಗರ್ಭಗೃಹ, ಅಂತರಾಳದ ಮುಂದೆ ಹಲವು ಕಂಭದ ಸಾಲುಗಳಿವೆ. ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು, ಮುಖಮಂಟಪವನ್ನು ಜೋಡಿಸಲಾಗಿದೆ. ಜಲಪಾತನ ಸ್ಥಳವು ಹೆಚ್ಚು ತೆರೆದುಕೊಂಡಿದ್ದು ಹೆಚ್ಚು ಗಾಳಿಬೆಳಕಿಗೆ ಅವಕಾಶವಿದೆ.

ರಾಘವಾಪುರದ ಲಕ್ಷೀಕಾಂತ ದೇವಾಲಯ ಒಂದು ಅಪೂರ್ಣ ರಚನೆ. ಗರ್ಭಗೃಹ ಅಂತರಾಳದ ಸುತ್ತ ಹೊರಗಡೆ ಅಧಿಷ್ಠಾನ ಭಾಗದಲ್ಲಿ ಜಲಸ್ಥಳಕ್ಕೆ ಅವಕಾಶ ಕಲ್ಪಿಸಿದ್ದಾರೆ. ಅಲಿಂದ್ರಕ್ಕಾಗಿ ಅಧಿಷ್ಠಾನವಿದೆ. ಕಂಭ ಹಾಗೂ ಛಾವಣಿ ರಚಿಸದೆ ಅಪೂರ್ಣವಾಗಿದೆ. ಅಲಿಂದ್ರದ ಹೊರಭಿತ್ತಿ ನಿರ್ಮಿಸಿದ್ದಾರೆ. ಹೊರಭಿತ್ತಿಯಲ್ಲಿ ಜಾಲಂಧ್ರವಿದೆ. ಗರ್ಭಗೃಹ, ಅಂತರಾಳದ ಹೊರಭಿತ್ತಿಯಲ್ಲಿ ಭಿತ್ತಿಕೋಷ್ಠಗಳನ್ನೂ, ಕುಂಭಪಂಜರ ಅಲಂಕಾರವನ್ನು ಕಾಣಬಹುದು. ಮುಂದುಗಡೆ ಮುಖ ಮಂಟಪವಿದ್ದು ಇಕ್ಕೆಲಗಳಲ್ಲಿ ಹಸ್ತಿಹಸ್ತ ಹಾಗೂ ಸೋಪಾನ ರಚನೆ ಇದೆ.

ನಾಗಮಂಗಲದ ನರಸಿಂಹ, ಹರವೆಯ ಶ್ರೀರಾಮ ದೇವಾಲಯಗಳು ಕೊಂಚ ವಿಶಾಲ ರಚನೆಗಳು. ಇವುಗಳಲ್ಲಿ ಗರ್ಭಗೃಹ, ಅಂತರಾಳ ರಂಗಮಂಟಪಗಳಿವೆ. ರಂಗ ಮಂಟಪವು ಆಯತಾಕಾರವುಳ್ಳದ್ದು. ಹಲವು ಕಂಭಗಳುಳ್ಳ ಈ ಮಂಟಪ ವಿಶಾಲವಾಗಿದೆ. ರಂಗಮಂಟಪದೊಳಗೆ ಅಂತರಾಳದ ಪ್ರವೇಶದ ಎರಡು ಬದಿಯಲ್ಲಿ ದ್ವಾರಪಾಲಕರು, ನಂತರ ಅಲಿಂದ್ರಕ್ಕೆ ಪ್ರವೇಶ. ಇದು ಪ್ರದಕ್ಷಿಣಾಪಥವೇ ರಂಗಮಂಟಪದ ಮುಂಭಾಗದಲ್ಲಿ ಮುಖಮಂಟಪ, ನಂತರ ಪಾತಾಳಾಂಕಣ, ವಿಶಾಲವಾದ ಪಾತಾಳಾಂಕಣವು ನೀಳವಾದ ಸ್ತಂಭಗಳುಳ್ಳದ್ದು; ನೆಲಮಟ್ಟದಿಂದ ಛಾವಣಿಯವರೆಗೆ ಬೋದಿಗೆಯೊಡನೆ ನಿಂತ ನೀಳ ಸ್ತಂಭಗಳು ಅಧಿಷ್ಠಾನ ರಹಿತವಾದವು. ಇದು ಪ್ರಪಾರಚನೆಯ ವಿಸ್ತರಣೆ. ಪಾತಾಳಾಂಕಣವು ಗೋಪುರದವರೆಗೆ ವಿಸ್ತರಿಸುತ್ತದೆ.

ಅಲಿಂದ ರಚನೆಯಿಂದ ಉಂಟಾದ ಪ್ರದಕ್ಷಿಣಾ ಪಥವನ್ನು ಕೆಲವೆಡೆ ಕತ್ತಲು ಪ್ರದಕ್ಷಿಣಾ ಪಥ ಎಂದಿದ್ದಾರೆ. ಇಲ್ಲಿ ಹೆಚ್ಚಿನ ಬೆಳಕು ದೊರೆಯದಿರುವುದೇ ಇದಕ್ಕೆ ಕಾರಣ ಎನ್ನಬಹುದು. ಕೆಲವೆಡೆ ಮುಚ್ಚಲಾಗಿದೆ. ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದಲ್ಲಿ ಕತ್ತಲು ಪ್ರದಕ್ಷಿಣಾ ಪಥವಿದೆ! ಈ ಕತ್ತಲು ಪ್ರದಕ್ಷಿಣಾ ಪಥಕ್ಕೆ ಮಕರಸಂಕ್ರಾಂತಿಯ ಕಾಲದಲ್ಲಿ ಮೂರು ದಿನ ಪ್ರವೇಶ. ಇದಕ್ಕೆ ವೈಕುಂಠದ್ವಾರವೆಂದು ಹೆಸರು. ಉಳಿದ ದಿನಗಳಲ್ಲಿ ಮುಚ್ಚಲಾಗುತ್ತದೆ. ಈ ದೇವಾಲಯದ ಗರ್ಭಗೃಹ ಮತ್ತು ಅಂತರಾಳ (ಸುಕನಾಸಿ) ಹೊಯ್ಸಳರ ಕಾಲದ ರಚನೆ; ಬಿತ್ತಿಯ ರಚನೆ ತಲಕಾಡಿನ ಕೀರ್ತಿನಾರಾಯಣ ದೇವಾಲಯದಂತಿದೆ. ಕಣಶಿಲೆಯ ರಚನೆ. ಇದನ್ನು ಸುತ್ತುವರೆದ ಅಲಿಂದ್ರ ರಚನೆ ವಿಜಯನಗರದ ಅರಸರ ಕಾಲದ್ದು. ಇವೆರಡರ ಮಧ್ಯೆ ಇರುವ ಜಲಪಾತನ ಸ್ಥಳ ಕಿರಿದಾದದ್ದು. ಇಲ್ಲಿಂದ ಬರುವ ಬೆಳಕು ಕಡಿಮೆ. ಗರ್ಭಗೃಹ ಸುಕನಾಸಿ ಮತ್ತು ಅಲಿಂದ್ರದ ನಡುವಿನ ಜಲಸ್ಥಳ ಕೊಂಚ ದೊಡ್ಡದು. ಗರ್ಭಗೃಹ, ಸುಕನಾಸಿಯ ಮುಂಭಾಗದಲ್ಲಿ ಹಲವು ಕಂಭಗಳ ರಂಗಮಂಟಪ. ಸುಕನಾಸಿಯ ದ್ವಾರದ ಇಕ್ಕೆಲಗಳಲ್ಲಿ ಅಲಿಂದ್ರಕ್ಕೆ ಪ್ರವೇಶದ್ವಾರ. ರಂಗಮಂಟಪದ ಮುಂಭಾಗದಲ್ಲಿ ಪೂರ್ವದಿಕ್ಕಿನಲ್ಲಿ ಪ್ರಮುಖ ದ್ವಾರವಿದೆ. ದಕ್ಷಿಣ ದಿಕ್ಕಿನಲ್ಲಿಯೂ ಒಂದು ದ್ವಾರವಿದೆ. ಇದು ಗೌಣ. ನಿರ್ಗಮನಕ್ಕಾಗಿ ಹೆಚ್ಚು ಬಳಕೆಯಲ್ಲಿದೆ.

ಮೇಲುಕೋಟೆಯ ಚಲುವನಾರಾಯಣಸ್ವಾಮಿ ದೇವಾಲಯದಲ್ಲಿಯೂ ಕತ್ತಲು ಪ್ರದಕ್ಷಿಣಾ ಪಥವಿದೆ. ಇದಕ್ಕೆ





ಪ್ರವೇಶವೂ ರಂಗಮಂಟಪದ ಪಶ್ಚಿಮ ಭಿತ್ತಿಯಲ್ಲಿ ಎರಡು ಬದಿಗಳಿಂದ. ಇಲ್ಲಿಯೂ ವೈರಮುಡಿ ಉತ್ಸವ ಕಾಲದಲ್ಲಿ ಮಾತ್ರ ಪ್ರವೇಶವುಂಟು. ಉಳಿದಂತೆ ನಿಷಿದ್ಧ. ಕರ್ನಾಟಕದ ದೇವಾಲಯಗಳಿಗೂ, ಚೋಳರ ಕಾಲದಲ್ಲಿ ಅಡಿ ಇರಿಸಿದ ದೇವಾಲಯಗಳಿಗೂ ಇರುವ ಪ್ರಮುಖ ವ್ಯತ್ಯಾಸಗಳನ್ನು ತಿಳಿಯುವುದು ಇಲ್ಲಿ ಸೂಕ್ತ. ಕರ್ನಾಟಕದ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ/ಸುಕನಾಸಿ ಮತ್ತು ನವರಂಗಗಳಿರುತ್ತವೆ. ಚೋಳರ ಕಾಲದ ದೇವಾಲಯಗಳು ಹಾಗೂ ಅವುಗಳ ಪ್ರಭಾವದಿಂದ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪಗಳಿರುತ್ತವೆ.

ಆರಂಭದ ಕರ್ನಾಟಕದ ದೇವಾಲಯಗಳಲ್ಲಿ ಅಂತರಾಳ ರಚನೆ ಗೌಣ. ನಂತರ ಅರ್ಧಮಂಟಪದಂತೆ ಅರಳಿದೆ. ನವರಂಗದಿಂದ ಪ್ರತ್ಯೇಕಿಸುವ ಸಲುವಾಗಿ ಮೊದಲಿಗೆ ಎರಡು ಕಂಭಗಳನ್ನು ಹೊಂದಿದ್ದು, ಮುಂದುವರೆದಂತೆ ದ್ವಾರಬಂಧ, ತೋರಣಭಾಗ ಜಾಲಂದ್ರಗಳನ್ನು ಅಳವಡಿಸಿಕೊಂಡಿತು. ಅಳತೆಯಲ್ಲಿ ಸಾಮಾನ್ಯವಾಗಿ ಗರ್ಭಗೃಹದಷ್ಟು ಅಥವಾ ಕೊಂಚ ಕಡಿಮೆಯೇ. ಚಾಲುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಸುಕನಾಸಿ ಎಂಬ ಅಭಿದಾನ ಪಡೆಯಿತು. ಉಳಿದಂತೆ ಅಂತರಾಳವೇ.

ಚೋಳರ ಕಾಲದ ದೇವಾಲಯಗಳಲ್ಲಿ ಅಂತರಾಳ ಹೆಸರಿಗಷ್ಟೇ ಇದೆ. ಒರಟಾದ ರಚನೆ. ಗರ್ಭಗೃಹ ಅಂತರಾಳಗಳ ಅಳತೆಯಲ್ಲಿ ಯಾವುದೇ ಸಾಮರಸ್ಯವನ್ನು ಕಾಣಲಾಗದು.

ಕರ್ನಾಟಕದ ದೇವಾಲಯಗಳಲ್ಲಿ ಸಾಂಪ್ರದಾಯಿಕವಾಗಿ ನವರಂಗ ರಚನೆ ಇದೆ. ಇದು ಚತುರಶ್ರಾಕೃತಿಯೇ. ಮಧ್ಯದ ಚತುಷ್ಕವನ್ನು ಒಳಗೊಳ್ಳುತ್ತದೆ. ಇದರ ಮೂಲ ಐಹೊಳೆಯ ಲಾಡ್‌ಖಾನ್ ದೇವಾಲಯದಿಂದ ಗುರುತಿಸಬೇಕು. ಒಂಬತ್ತು ಅಂಕಣಗಳು ನವರಂಗದಲ್ಲಿ ಸಾಮಾನ್ಯವೆನಿಸಿದರೂ, ಆರಂಭದ ದೇವಾಲಯಗಳಲ್ಲಿ ಹೆಚ್ಚು ವಿಶಾಲವಾಗಿವೆ. ನಾಲ್ಕು ಪ್ರಧಾನಸ್ತಂಭಗಳು; ಉಳಿದವು ಭಿತ್ತಿಯೊಡನೆ ಸೇರಿ ಅರೆಗಂಭಗಳೆಂದು ನವರಂಗದಲ್ಲಿ ಗುರುತಿಸಬಹುದು. ಮಧ್ಯದ ನಾಲ್ಕು ಕಂಭಗಳ ಮಧ್ಯೆ ನೆಲಮಟ್ಟವು ಕೊಂಚ ಎತ್ತರಿಸಿದ್ದು ವೇದಿ ಎನ್ನಲಾಗಿದೆ. 'ರಂಗ' ಎಂಬ ಪದವನ್ನೂ ಬಳಸುತ್ತಾರೆ. ರಂಗ ಎಂಬ ಪದವನ್ನು ಮುಚ್ಚಿಗೆ ಎಂಬ ಅರ್ಥದಲ್ಲಿಯೂ ಬಳಸಲಾಗಿದೆ.

ಚೋಳರ ಆಡಳಿತಾವಧಿ ಕರ್ನಾಟಕದಲ್ಲಿ ಕೊನೆಗೊಂಡ ನಂತರವೂ ಆಗ ರಚನೆಗೊಂಡ ದೇವಾಲಯಗಳ ಪ್ರಭಾವದಿಂದ ಹೊಯ್ಸಳರ ಕಾಲದಲ್ಲಿ ಮತ್ತು ವಿಜಯನಗರ ಅರಸರ ಕಾಲದಲ್ಲಿಯೂ ಹಲವು ದೇವಾಲಯಗಳು ಮುಂದುವರೆದವು. ಇವುಗಳಲ್ಲಿ ಕಾಣುವ ರಂಗಮಂಟಪ ರಚನೆ ವಿಶಾಲವಾಗಿದ್ದು ಹಲವು ಕಂಭಗಳ ಆಯತಾಕಾರ ರಚನೆ; ಈ ಸ್ತಂಭಗಳು ನೀಳವಾಗಿದ್ದು ಪೀಠಗಳಿಲ್ಲವೆಂದು ಗಮನಿಸಬೇಕು. ಸರಳ ಬೋದಿಗೆಗಳನ್ನು ಪಡೆದಿರುತ್ತವೆ. ಈ ಕಂಭಗಳು ವಿಜಯನಗರದ ಅರಸರ ಕಾಲದಲ್ಲಿ ಪೀಠಗಳನ್ನು ಅಳವಡಿಸಿಕೊಂಡವು. ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದ ಕತ್ತಲು ಪ್ರದಕ್ಷಿಣಾ ಪಥದ ಕಂಭಗಳಲ್ಲಿ ಪೀಠವಿದೆ. ಇದಕ್ಕಿಂತ ಮುಂಚೆ ರಚಿಸಿದ ದೇವಾಲಯಗಳ ಸ್ತಂಭಗಳಲ್ಲಿ ಪೀಠವನ್ನು ಕಾಣಲಾಗದು. ಹರವುವಿನ ಶ್ರೀರಾಮ ದೇಗುಲದಲ್ಲಿ ಪ್ರಾಕಾರಕ್ಕೆ ಹೊಂದಿಕೊಂಡಂತೆ ಇರುವ ಮುಖಮಂಟಪದ ಸ್ತಂಭಗಳಲ್ಲಿ ಪೀಠವಿದೆ. ಪಾತಾಳಾಂಕಣದಲ್ಲಿರುವ ಸ್ತಂಭಗಳೆಲ್ಲವೂ ಪೀಠವಿಲ್ಲದ್ದು. ಇದು ಚೋಳರ ಕಾಲದ ಕೊಡುಗೆ. ಕತ್ತಲು ಪ್ರದಕ್ಷಿಣಾ ಪಥವು ಹಂಪೆಯ ದೇವಾಲಯಗಳಿಗೆ ಹಂತ ಹಂತವಾಗಿ ದಾಂಗುಡಿ ಇಟ್ಟಿದ್ದನ್ನು ಈಗ ಗುರುತಿಸಬಹುದು.

ಹಂಪೆಯ ಚಂದ್ರಮೌಳೇಶ್ವರ ದೇವಾಲಯದ ತಳವಿನ್ಯಾಸ, ಗರ್ಭಗೃಹ ಅಂತರಾಳಗಳನ್ನು ಆವರಿಸಿದ ತೆರದ

ಕಂಬಗಳ ಸಾಲಿನ ಅಲಿಂದ, ಒಂದು ರೀತಿಯಲ್ಲಿ ಮಾನಂಗಿಯ ಜನಾರ್ದನ ದೇವಾಲಯವನ್ನು ನೆನಪಿಸುತ್ತದೆ. ಆನೆ ಲಾಯದ ಹಿಂಬದಿಯಲ್ಲಿರುವ ಜೈನಬಸದಿ, ಶೃಂಗಾರದ ಹೆಬ್ಬಾಗಿಲ ಬಳಿ ಇರುವ ವೈಷ್ಣವ ದೇವಾಲಯ, ಇವುಗಳಲ್ಲಿ ಪ್ರದಕ್ಷಿಣಾ ಪಥಕ್ಕೆ ನವರಂಗದ ಹಿಂಬದಿಯಿಂದ ಪ್ರವೇಶ ಕಲ್ಪಿಸಲಾಗಿದೆ.

ಗಮನಾರ್ಹವಾದ ಬದಲಾವಣೆಯನ್ನು ದೊಡ್ಡ ದೇವಾಲಯಗಳಾದ ಕೃಷ್ಣ, ವಿಠಲ, ತಿರುವೆಂಗಡನಾಥ ದೇವಾಲಯಗಳಲ್ಲಿ ಕಾಣಬಹುದು. ಈ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳದ ನಂತರ ಅರ್ಧಮಂಟಪವಿದೆ. ಇದು ವಿಜಯನಗರ ಅರಸರ ಕಾಲದ ಸೇರ್ಪಡೆ, ವೈಶಿಷ್ಟ್ಯವೂ ಹೌದು. ಇದು ಪ್ರದಕ್ಷಿಣಾಪಥದ ಸಲುವಾಗಿಯೇ ಮಾಡಿದ್ದು. ಈ ಅರ್ಧಮಂಟಪದೊಳಗೆ ಎಡಬಲಭಾಗದಲ್ಲಿ ಪ್ರದಕ್ಷಿಣಾ ಪಥಕ್ಕೆ ಇಳಿಯಲು ಅವಕಾಶ ಕಲ್ಪಿಸಲಾಗಿದೆ. ಈ ಹಿಂದೆ ಗಮನಿಸಿದ ದೇವಾಲಯಗಳಲ್ಲಿ ರಂಗಮಂಟಪವಿತ್ತು. ಈಗ ಮುಂದೆ ನವರಂಗವಿದೆ. ನವರಂಗದ ಪಶ್ಚಿಮ ಭಿತ್ತಿಯಲ್ಲಿ ಪ್ರವೇಶಾವಕಾಶವನ್ನು ಜೈನಬಸದಿಯಲ್ಲಿ, ವೈಷ್ಣವ ದೇವಾಲಯದಲ್ಲಿ ಕಲ್ಪಿಸಿದೆ. ರಾಮಚಂದ್ರ ದೇವಾಲಯದಲ್ಲಿ ಪ್ರದಕ್ಷಿಣಾ ಪಥವಿಲ್ಲ. ಆದರೂ ನವರಂಗದ ಪಶ್ಚಿಮ ಭಿತ್ತಿಯಲ್ಲಿ ಎರಡೂ ಕಡೆ ದ್ವಾರಗಳಿವೆ! ಹಂಪೆಯ ದೇವಾಲಯಗಳಲ್ಲಿ ನವರಂಗ ರಚನೆಗೆ ಹೆಚ್ಚು ಒತ್ತು ಕೊಟ್ಟಿದೆ. ಈ ದೇವಾಲಯಗಳೆಲ್ಲವೂ ಕಣಶಿಲೆ-ಗ್ರಾನೈಟ್‌ನಲ್ಲಿ ನಿರ್ಮಾಣಗೊಂಡಿವೆ. ಸಾಕಷ್ಟು ಎತ್ತರವಾಗಿ, ವಿಸ್ತಾರವಾಗಿ ಬೆಳೆದಿವೆ. ಹಲವು ರೀತಿಯ ಮಂಟಪಗಳು ನಿರ್ಮಾಣವಾಗಿವೆ. ಅದೇ ರೀತಿ ಅಂತರಾಳ ಮತ್ತು ನವರಂಗದ ನಡುವೆ ಪ್ರದಕ್ಷಿಣಾ ಪಥಕ್ಕಾಗಿ ಅರ್ಧಮಂಟಪ ಜೋಡಣೆಗೊಂಡಿತು. ಹೆಚ್ಚಿನ ದೇವಾಲಯಗಳಲ್ಲಿ ಅಧಿಷ್ಠಾನದ ಕೆಳಗೆ ಉಪಪೀಠದ ರಚನೆಯೂ ಗಮನಾರ್ಹವಾಗಿ ವೃದ್ಧಿಸಿದೆ. ಹಿಂದಿನ ದೇವಾಲಯಗಳಲ್ಲಿ ದೇವಾಲಯ ರಚನೆಯೂ ಅಲಿಂದ್ರ ರಚನೆಯೂ ಒಂದೇ ಎತ್ತರದಲ್ಲಿ ಇವೆ. ಕೃಷ್ಣ, ವಿಠಲ ದೇವಾಲಯಗಳಲ್ಲಿ ಅಲಿಂದ್ರದ ಸುತ್ತು ರಚನೆ ಕೆಳಹಂತದಲ್ಲಿದೆ. ಅದಕ್ಕಾಗಿ ಅರ್ಧಮಂಟಪದಿಂದ ಪ್ರದಕ್ಷಿಣಾ ಪಥಕ್ಕೆ ಇಳಿಯಲು ಸೋಪಾನಗಳಿವೆ. ಈ ದೇವಾಲಯಗಳಲ್ಲಿ ಜಲಪಾತನ ಸ್ಥಳವು ಕಿರಿದೆಂದೇ ಹೇಳಬೇಕು. ಅಲಿಂದ ಭಾಗಕ್ಕೆ ಹೆಚ್ಚು ಗಾಳಿ ಬೆಳಕಿಗೆ ಅವಕಾಶವಿಲ್ಲ. ಜಲಸ್ಥಳವನ್ನು ಗುರುತಿಸಬಹುದಾಗಿದೆ. ಈ ದೇವಾಲಯಗಳಲ್ಲಿ ಜೋಡಿಸಿದ ಅರ್ಧಮಂಟಪ, ಮುಂದೆ ಇತರ ದೇವಾಲಯಗಳಲ್ಲಿ ಪ್ರದಕ್ಷಿಣಾ ಪಥ ಇರಲಿ, ಇಲ್ಲದಿರಲಿ ಅವಶ್ಯಕ ಎನ್ನುವಂತೆ ಕಾಣಿಸತೊಡಗಿತು. ಹೊಸಪೇಟೆಯ ಜಂಬುಕೇಶ್ವರ ದೇವಾಲಯದಲ್ಲಿಯೂ ಪ್ರದಕ್ಷಿಣಾ ಪಥವಿದೆ.

ಹಂಪೆಯ ಪರಿಸರದ ಮಾಲ್ಯವಂತ ಬೆಟ್ಟದ ಮೇಲಿರುವ ರಘುನಾಥ ದೇವಾಲಯದ ರಚನೆ ಸಾರಸ್ಯಕರವಾದುದು. ಈ ದೇವಾಲಯವು ಪಶ್ಚಿಮ, ವಾಯುವ್ಯ ಹಾಗೂ ಉತ್ತರ ದಿಕ್ಕಿನಲ್ಲಿ ಭಾಗಶಃ ಬಂಡೆಯನ್ನು ಒಳಗೊಂಡಂತೆ ರಚನೆಗೊಂಡಿದೆ. ದೇವಾಲಯದೊಳಗೆ ಪ್ರದಕ್ಷಿಣಾ ಪಥವನ್ನೂ ರಚಿಸಲಾಗಿದೆ. ಗರ್ಭಗೃಹ, ಅಂತರಾಳ, ಅರ್ಧಮಂಟಪಗಳಿದ್ದು ಅರ್ಧಮಂಟಪದಿಂದ ಎಡಬಲಗಳಲ್ಲಿ ಪ್ರದಕ್ಷಿಣಾ ಪಥಕ್ಕೆ ಅವಕಾಶ, ಪ್ರದಕ್ಷಿಣಾಪಥದಲ್ಲಿ ಹಲವು ಕಂಭಗಳಿದ್ದರೂ ಭಾಗಶಃ ಬಂಡೆಯಿದ್ದು ಪಶ್ಚಿಮ, ವಾಯುವ್ಯ, ಉತ್ತರ ದಿಕ್ಕಿನಲ್ಲಿ ಬಂಡೆಯಡಿ ಚಲಿಸಬೇಕು. ಕತ್ತಲು ಪ್ರದಕ್ಷಿಣಾ ಪಥವೇ ಆಗಿದೆ. ಅರ್ಧಮಂಟಪದ ಮುಂದೆ ನವರಂಗ ರಚನೆ. ಬಂಡೆಯ ಮೇಲೆ ದೇವಾಲಯದ ಶಿಖರ ರಚನೆ. ಹಂಪೆಯ ದೇವಾಲಯಗಳ ಪ್ರದಕ್ಷಿಣಾ ಪಥದ ಮೂಲವನ್ನು ಈವರೆಗೆ ಗ್ರಹಿಸಲು ಸಾಧ್ಯವಾಗಿರಲಿಲ್ಲ. ಈಗ ಇವನ್ನು ಕುರಿತ ಪ್ರತ್ಯೇಕ ಅಧ್ಯಯನದ ಅಗತ್ಯವಿದೆ.

ಮೈಸೂರು, ಚಾಮರಾಜನಗರ ಜಿಲ್ಲೆಗಳ, ತ್ರಯಂಬಕಪುರದ ತ್ರಯಂಬಕೇಶ್ವರ, ತೆರಕಾಣಾಂಬಿಯ ಜನಾರ್ದನ, ಹಿಮವದ್ ಗೋಪಾಲಸ್ವಾಮಿ ಬೆಟ್ಟದ ವೇಣುಗೋಪಾಲ, ಮೈಸೂರಿನ ಲಕ್ಷ್ಮೀಕಾಂತ ದೇವಾಲಯಗಳನ್ನೂ ಈ ಪರಿಧಿಯಲ್ಲಿ ಅಧ್ಯಯನಕ್ಕೆ ಒಳಪಡಿಸಬೇಕು. ಕೆಲವು ದೇವಾಲಯಗಳು ಖಾಸಗಿ ಸಂಸ್ಥೆಗಳ ಅಧೀನದಲ್ಲಿದ್ದು, ಮೂಲವನ್ನು ತಿಳಿಯದೆ ಮಾರ್ಪಡಿಸಿರುವುದೂ ಕಂಡುಬಂದಿದೆ. ಇವುಗಳನ್ನು ಎಚ್ಚರಿಕೆ ವಹಿಸಿ ಅಧ್ಯಯನ ಕೈಗೊಳ್ಳಬೇಕು.

## ಆಧಾರಸೂಚಿ


೧. ಬ್ರೂನೋಡಗೆನ್ಸ್ (೧೯೭೦) ಮಯಮತ, ಫ್ರೆಂಚ್ ಇನ್‌ಸ್ಟಿಟ್ಯೂಟ್ ಆಫ್ ಇಂಡಾಲಜಿ, ಪಾಂಡಿಚೇರಿ.

೨. ಸ್ವಾಮಿನಾಥ ಶಿವಾಚಾರ್ಯ (೧೯೭೫) ಕಾಮಿಕಾಗಮಂ (ಪೂರ್ವಭಾಗ) ದಕ್ಷಿಣ ಭಾರತ ಅರ್ಚಕ ಸಂಘ, ಮದ್ರಾಸ್.

೩. ವಿ.ಜಿ. ಆಪ್ಟೆ (೧೯೨೬) ಕಾಶ್ಯಪ ಶಿಲ್ಪಂ, ಆನಂದಾಶ್ರಮ ಮುದ್ರಣಾಲಯ, ಪುಣೆ.



# ದೇವಾಲಯಗಳ ದ್ವಾರಗಳು ಮತ್ತು ವಿತಾನಗಳು ಒಂದು ಶಾಸ್ತ್ರೀಯ ವಿವರಣೆ

ಡಾ. ಕೂ.ಸ. ಅಪರ್ಣ*

ಎಲ್ಲ ಆಲಯಗಳಲ್ಲಿ ನಾವು ಕಾಣುವ ಬಾಗಿಲುಗಳೇ 'ದ್ವಾರ'ಗಳು. ಮನೆ, ದೇವಾಲಯ ಮುಂತಾದೆಡೆಗಳಲ್ಲಿರುವ ಬಾಗಿಲುಗಳನ್ನು ಶಾಸ್ತ್ರ ದೃಷ್ಟಿಯಿಂದ 'ದ್ವಾರ' ಎಂದು ಗುರುತಿಸಲಾಗುತ್ತದೆ. ಮಯಮತ, ಮಾನಸಾರ ಗ್ರಂಥಗಳಲ್ಲಿ ದ್ವಾರ ರಚನೆಯ ಬಗ್ಗೆ ವಿವರಣೆ ಇದೆ. ಮಯಮತದಲ್ಲಿ 'ದ್ವಾರವಿಧಾನಂ' (ಅ.೩೦) ಎಂಬ ಒಂದು ಅಧ್ಯಾಯವಿದ್ದರೆ, ಮಾನಸಾರದಲ್ಲಿ 'ದ್ವಾರಸ್ಥಾನವಿಧಾನಂ' (ಅ.೩೮) ಹಾಗೂ 'ದ್ವಾರಮಾನಂ' (ಅ.೩೯) ಎಂದು ಎರಡು ಅಧ್ಯಾಯಗಳಿವೆ. ಗಾರ್ಗಸಂಹಿತೆಯಲ್ಲೂ ದ್ವಾರಪ್ರಮಾಣ, ದ್ವಾರನಿರ್ದೇಶ, ದ್ವಾರಸ್ತಂಭೋಚ್ಛ್ರಯವಿಧಿ' ಎಂದು ಮೂರು ಅಧ್ಯಾಯಗಳಿರುವುದಾಗಿ ತಿಳಿದುಬರುತ್ತದೆ (ಉದ್ಧೃತ) ಮಾನಸಾರ ಸೀರೀಸ್.ಸಂ.VII, ಪು. ೨೩೮). ಬೃಹತ್ಸಂಹಿತಾ (C.LVI ಮತ್ತು LIII), ತಂತ್ರಸಮುಚ್ಚಯ (ಅ.II), ಕಾಮಿಕಾಗಮ (I. ಪೂರ್ವಭಾಗ ಅ.೫೫)ಗಳಲ್ಲೂ ದ್ವಾರದ ಬಗ್ಗೆ ವಿವರಗಳಿವೆ. ಅಂಶುಮದ್‌ಭೇದ (ಅ.೧೬ ಮತ್ತು ೧೭), ಈಶಾನಶಿವ ಗುರುದೇವ ಪದ್ಧತಿ (ಕ್ರಿಯಾ ಅ.೩೧), ಮರೀಚಿಸಂಹಿತಾ (ಅ.೯), ಕಾಶ್ಯಪಜ್ಞಾನಕಾಂಡ (ಅ.೩೧) ಸುಪ್ರಭೇದಾಗಮ (ಅ.೩೧), ಶಿಲ್ಪರತ್ನ (ಅ.೨೨) ಮುಂತಾದ ಗ್ರಂಥಗಳೂ ದ್ವಾರಗಳ ಬಗ್ಗೆ ವಿವರಗಳನ್ನು ನೀಡಿರುವುದಾಗಿ ತಿಳಿದುಬರುತ್ತದೆ (ಉದ್ಧೃತ) ಮಯಮತ–ಅ.೩೦, ಅಟಿ.೧, ಪು.೬೮೧). ಇವು ದೇವಾಲಯಗಳ ದ್ವಾರಗಳನ್ನು ಮಾತ್ರವಲ್ಲದೆ, ಜನವಸತಿಯ ದ್ವಾರಗಳ ಬಗ್ಗೆಯೂ ಹೇಳಿವೆ. 'ದೇವಾನಾಂ ಭುಸುರಾದೀನಾಂ ವರ್ಣಾನಾಂಚ ಗೃಹೇ ಗೃಹೇ' ಎಂದು ಮಾನಸಾರವು (೩೮.೧) ಈ ಬಗ್ಗೆ ಸ್ಪಷ್ಟಪಡಿಸಿದೆ. ದ್ವಾರದ ಬಗೆಗೆ ವಿವರಿಸುವಾಗ, ಗೋಪುರ–ಮಹಾದ್ವಾರಗಳ ಬಗ್ಗೆಯೂ ಅಲ್ಲಲ್ಲಿ ಹೇಳಿರುವುದು ಮಾತ್ರವಲ್ಲದೆ, ದ್ವಾರದ ಬಗೆಗಿನ ವಿವರಗಳು ಬೇರೆ ಅಧ್ಯಾಯಗಳಲ್ಲೂ ದೊರೆಯುತ್ತವೆ. 'ದ್ವಾರ' ಅಂದರೆ, ಬಾಗಿಲುಗಳನ್ನು 'ಚಾರ' ಎಂಬ ಪರ್ಯಾಯ ಪದದಿಂದಲೂ ಅಪರೂಪವಾಗಿ ಗುರುತಿಸಲಾಗಿದೆ ಎಂದು ತಿಳಿದುಬರುತ್ತದೆ. ದ್ವಾರಗಳ ಸ್ಥಾನ, ಅಭಿಮುಖ, ದ್ವಾರಗಳ ಅಂಗಭಾಗಗಳು, ಪ್ರಮಾಣ, ಅವುಗಳ ಅಲಂಕಾರ, ಶುಭಾಶುಭ ದ್ವಾರಗಳು–ಎಲ್ಲವನ್ನೂ ಈ ಗ್ರಂಥಗಳು ನಿರೂಪಿಸಿವೆ.

ದ್ವಾರವನ್ನು ಮರ ಅಥವಾ ಕಲ್ಲಿನಿಂದ ಮಾಡಬೇಕು ಎಂದು ಮಾನಸಾರವು ಹೇಳಿದೆ (೩೯.೪೬೨). ದೇವಾಲಯಗಳ ದ್ವಾರವನ್ನು ಮಧ್ಯದಲ್ಲಿ ಇಡಬೇಕು ಎಂದೂ ಅದು ಹೇಳಿದೆ (೩೮.೨೫ಬಿ). ದೇವ ದ್ವಿಜ ಭೂಪತಿಗಳಿಗೆ ಮಧ್ಯದ್ವಾರವು ಸೂಕ್ತವಾದುದು; ಉಳಿದವರಿಗೆ ಉಪಮಧ್ಯ ದ್ವಾರವು ಸೂಕ್ತವಾದುದೆಂದು ಮಯಮತವು ಹೇಳಿದೆ (೩೦.೪೩). ಎಲ್ಲ ದೇವಾಲಯ, ಮಂಟಪ, ಗೃಹಗಳಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದ್ವಾರಗಳು ಇರಬೇಕೆಂದೂ ಉಪದ್ವಾರಗಳು (–'ಸುರಂಗ'ಗಳು) ಎಷ್ಟಾದರೂ ಇರಬಹುದೆಂದೂ ಮಾನಸಾರವು ಹೇಳಿದೆ (೩೮.೧–೨). ದ್ವಾರವು, ಮುಂದಿನ ಭಿತ್ತಿಯ ಮಧ್ಯದಲ್ಲಿರಬೇಕೆಂದೂ, ಪ್ರತಿಮೆಯೂ ಇದೇ ಸಾಲಿನಲ್ಲಿದ್ದರೆ ಉತ್ತಮವೆಂದೂ ಬೃಹತ್ಸಂಹಿತಾದಲ್ಲಿದೆ (LVI.10). ಬಾಹ್ಯಭಿತ್ತಿಯಲ್ಲಿ ನಾಲ್ಕು ದ್ವಾರಗಳು ಅಥವಾ ಒಂದು ದ್ವಾರ ಇರಬೇಕೆಂದಿದೆ (ಸುಪ್ರಭೇದಾಗಮ–೩೧.೭). ನಾಲ್ಕು ದ್ವಾರಗಳಿರುವ ರಚನೆಯನ್ನು 'ಸರ್ವತೋಭದ್ರ' ಎಂದು ಬೃಹತ್ಸಂಹಿತಾ ಕರೆದಿದೆ (LIII.31). ದೇವಾಲಯಗಳಲ್ಲಿ ಎದುರಿನ ದ್ವಾರವನ್ನು ಭಿತ್ತಿಯ ಮಧ್ಯದಲ್ಲಿ ಕಟ್ಟಬೇಕು (ಮಾನ–೩೮.೩ ಮತ್ತು ೨೫ಬಿ). ಇದರಿಂದ, ಒಳಗಿರುವ ದೇವತೆಯ ಪೂರ್ಣ ಸ್ವರೂಪವು ಹೊರಗಿನವರಿಗೆ ಚೆನ್ನಾಗಿ ಕಾಣುತ್ತದೆ. 'ಅಂತರಾಲ' ಪ್ರದೇಶದಲ್ಲಿ ಮಧ್ಯೆ ದ್ವಾರ ಇರಬೇಕೆಂದೂ ಮಾನಸಾರದಲ್ಲಿದೆ (೩೮.೩೨).

ದೇವಾಲಯಗಳಲ್ಲಿ ಪ್ರಮಾಣಕ್ಕನುಗುಣವಾಗಿ ದ್ವಾರಗಳನ್ನೂ ಇಡಬೇಕು; ಇದಕ್ಕಿಂತ ಭಿನ್ನವಾಗಿದ್ದರೆ ಒಳ್ಳೆಯದಲ್ಲ (ಮಾನ–೩೯.೨೧ಬಿ–೨೩). ದ್ವಾರಗಳು ಕನಿಷ್ಠ ೩ ವಿತಸ್ತಿ ಅಗಲ (Spans) ಮತ್ತು ೭ ವಿತಸ್ತಿ ಎತ್ತರವಾಗಿರಬೇಕು; ಇದನ್ನೇ ೬ ವಿತಸ್ತಿಯಂತೆ ಹೆಚ್ಚಿಸಿಕೊಳ್ಳುತ್ತಾ, ೧೫

* # ೧೬೪೮, ೧೭ನೇ ಮುಖ್ಯರಸ್ತೆ, ಬಿ.ಎಸ್.ಕೆ. ೧ನೇ ಹಂತ, ಬೆಂಗಳೂರು–೬೦೦೫೦.

ವಿತಸ್ತಿಯವರೆಗೆ ಅಗಲವನ್ನೂ ೧೨ ವಿತಸ್ತಿ ಹೆಚ್ಚಿಸಿಕೊಳ್ಳುತ್ತಾ, ೩೧ ವಿತಸ್ತಿಯವರೆಗೆ ಎತ್ತರವನ್ನೂ ಹೆಚ್ಚಿಸಬಹುದು; ಹೀಗೆ ಮಾಡುವುದರಿಂದ ೨೫ ರೀತಿಯ ದ್ವಾರದ ಪ್ರಮಾಣಗಳು ದೊರೆಯುತ್ತವೆ (ಮಯ-೩೦.೨-೩ ಹಾಗೂ ಅಟಿ.೨, ಪು.೬೮೧). ಮಾನಸಾರದಲ್ಲಿ ಒಟ್ಟು ೪೯ ರೀತಿಯ ಎತ್ತರಗಳನ್ನು ಹೇಳಿದೆ (೩೯.೫-೯). ತಂತ್ರಸಮುಚ್ಚಯದಲ್ಲಿ, ಲಿಂಗ ಸ್ಥಾಪಿಸುವ ಸಂದರ್ಭದಲ್ಲಿ ಬಾಗಿಲಿನ ಎತ್ತರ ಮತ್ತು ವಿಸ್ತಾರಗಳಲ್ಲಿ ವಿಶೇಷವನ್ನು ಹೇಳಲಾಗಿದೆ. ಗರ್ಭಗೃಹದ ವಿಸ್ತಾರದಲ್ಲಿ, ೩, ೫, ೯ ಅಥವಾ ೨ ರಿಂದ (ಯಾವುದಾದರೂ ಸಂಖ್ಯೆಯಿಂದ) ಭಾಗಿಸಲ್ಪಟ್ಟಾಗ ಕ್ರಮವಾಗಿ ೨, ೩, ೫ ಅಥವಾ ೧ ಅಂಶಗಳಿಂದ ಲಿಂಗದ ಬಾಗಿಲಿನ ಎತ್ತರವನ್ನು ಮಾಡಬೇಕು. ಆ ಬಾಗಿಲಿನ ಎತ್ತರದಲ್ಲಿ ಕ್ರಮವಾಗಿ ೨, ೧೭, ೧೧ ಅಥವಾ ೭ – ಈ ಪ್ರಕಾರದಿಂದ ವಿಭಾಗಿಸಿದಾಗ ಕ್ರಮವಾಗಿ ೮, ೫, ೩– ಈ ಭಾಗದಿಂದ ಅದರ ವಿಸ್ತಾರವನ್ನು ಕಲ್ಪಿಸಬೇಕು..... ಹೀಗೆ, ಗರ್ಭಗೃಹದ ಪ್ರಮಾಣದಿಂದ ಲಿಂಗದ್ವಾರದ ಅಳತೆಯನ್ನು ಇಲ್ಲಿ ನೀಡಲಾಗಿದೆ (II.28); ಅಲ್ಲದೆ, ಕಂಬಗಳ ಎತ್ತರ-ಅಗಲದ ಆಧಾರದಿಂದ ಬಾಗಿಲ ವಿಸ್ತಾರವನ್ನೂ ಅದು ಹೇಳಿದೆ (II. ೨೯). ಕೆಲವು ಗ್ರಂಥಗಳ ಪ್ರಕಾರ ದ್ವಾರದ ಅಳತೆಯನ್ನು ದ್ವಾರಭೂಷಣಗಳನ್ನೂ ಸೇರಿಸಿ ಮಾಡಬೇಕು (ಮಾನ-೩೯.೪೮ಎ); ಅಲ್ಲದೆ, ದ್ವಾರಗಳ ಅಳತೆಯಲ್ಲಿ ದ್ವಾರಶಾಖೆಗಳ ಅಳತೆಯನ್ನೂ ಪರಿಗಣಿಸಬೇಕು (ಮಾನ.೩೯.೨); ಆದರೆ, ದ್ವಾರಪಕ್ಕದ ಕುಡ್ಯಸ್ತಂಭಗಳ ಅಳತೆಯನ್ನು ಸೇರಿಸಬಾರದು (ಅದೇ.೩೯.೩).

ದೇವಾಲಯಗಳಲ್ಲಿ ದ್ವಾರದ ಎತ್ತರವು ಅದೇ ತಲದ ಸ್ತಂಭಗಳ ೭ನೇ/೮ರಷ್ಟು, ೮ನೇ/೯ರಷ್ಟು ಅಥವಾ ೯ನೇ/೧೦ರಷ್ಟು ಇರಬೇಕು; ಮತ್ತು ಅಗಲವು ಎತ್ತರದ ಅರ್ಧದಷ್ಟಿರಬೇಕು; ಒಂದಕ್ಕಿಂತ ಹೆಚ್ಚು ತಲಗಳಿದ್ದಾಗ, ಆಯಾ ತಲದ ಕಂಬಗಳ ಪ್ರಮಾಣಕ್ಕೆ ಹೊಂದುವಂತಹ ದ್ವಾರವನ್ನು ಪ್ರತೀ ತಲದಲ್ಲೂ ಇಡಬೇಕು-ಎಂದೂ ಮಯಮತದಲ್ಲಿದೆ (೧೦-೧೧ಎ). ಯಾವ ಪ್ರಮಾಣದ ದ್ವಾರವನ್ನು ಎಲ್ಲಿಗೆ ಬಳಸಬೇಕೆಂದೂ ಮಯಮತವು ಹೇಳಿದೆ: ಅದರಂತೆ, ದೊಡ್ಡದಾದ ೧೨ ಅಳತೆಗಳು ಪಟ್ಟಣ, ಗ್ರಾಮ, ಕೋಟೆ ಮತ್ತು ಅರಮನೆಗಳಿಗೆ ಸೂಕ್ತವಾದುದು; ದ್ವಾರದ ಎತ್ತರವು ಅಗಲದ ಎರಡಷ್ಟಿರಬೇಕು ಮತ್ತು ಅದಕ್ಕೆ ೬ ಅಥವಾ ೯ ಅಂಗುಲ ಸೇರಿಸಬೇಕು (೩೦.೪-೬ಎ). ಇದು ಎಲ್ಲ ಸಂದರ್ಭಗಳಿಗೂ ಸೂಕ್ತವಾದುದು ಎಂದು ಇಲ್ಲಿ ಹೇಳಿದ್ದರೂ, ಮುಂದೆ, ವಾಸದ ಮನೆಗಳಿಗೆ ಈ ರೀತಿ ಇರಬಾರದೆಂದಿದೆ (೩೦.೮ಬಿ-೯). ದ್ವಾರದ ಎತ್ತರವು ಅಗಲದ ಎರಡರಷ್ಟಿರಬೇಕು ಎಂದು ಮಾನಸಾರವೂ ಹೇಳಿದೆ (೩೯.೧೮). ಈ ಅಳತೆಯ ದ್ವಾರವು ಆಯತಾಕಾರದ ರಚನೆ. ಆದರೆ ಇನ್ನೊಂದೆಡೆ ಮಾನಸಾರವು, ದ್ವಾರವು ಆಯತಾಕಾರ ಮಾತ್ರವಲ್ಲದೆ, ಚೌಕಾಕಾರವಾಗಿಯೂ ಇರಬಹುದೆಂದು ಏಕೆ ಹೇಳಿದೆಯೋ (೩೯.೩೨ಎ) ಗೊತ್ತಿಲ್ಲ.

ದ್ವಾರಚೌಕಟ್ಟಿನಲ್ಲಿ ಯೋಗ (Jambs), ಉತ್ತರ (Lintel), ಕವಾಟ (Door Leaf) ಮತ್ತು ಪ್ರತೀಕ (Sill) ಮತ್ತಿತರ ಅಂಗಗಳು ಇರುತ್ತವೆ. ದ್ವಾರದ ಅಂಗಗಳ ಬಗ್ಗೆ ಹೇಳುವಾಗ ಮಾನಸಾರವು ಕವಾಟ (Door Panel), ದ್ವಾರಸಂಧಿ (Door Joint), ಫಲಕ (Door Plank) ಮತ್ತು ಕೀಲಭಾಜನ (Bolt) ಎಂದು ಹೇಳಿದೆ (೩೯.೬೯ ಇ.). ದ್ವಾರ ಚೌಕಟ್ಟಿನಲ್ಲಿ ಬಾಗಿಲ ಎರಡೂ ಕಡೆ ಇರುವ (ಸಾಲಂಕೃತ) ಲಂಬಪಟ್ಟಿಗಳಿಗೆ 'ಯೋಗ' ಎಂದು ಹೆಸರು (ಮಯ-೩೦.೧೧ಬಿ, ಕಾಮಿಕಾ-೫.೫೫.೩೧ಬಿ). 'ದ್ವಾರ ಶಾಖಾಭಿಧಾನಿ ಯೋಗಾನಿ' ಎಂದು ತಂತ್ರಸಮುಚ್ಚಯವು ಹೇಳಿದೆ (II.26). ಅಂದರೆ, ದ್ವಾರಶಾಖೆ, ದ್ವಾರಯೋಗ ಎರಡೂ ಒಂದೇ ಎಂದು ಹೇಳಬಹುದು. ದ್ವಾರಬಂಧದ ಮೇಲೇ ಈ ಶಾಖಾಲಂಕರಣ ಇರುತ್ತದೆ. ಇದರ ಸ್ವಲ್ಪಭಾಗವು ತಳದಲ್ಲಿ ಉಡುಗಿಹೋಗಿದ್ದು, ಇದು 'ನಿಖಾತಸ್ತಂಭ'ದಂತೇ ಆಗುತ್ತದೆ (ಮಯ-೩೦.೩೦ಬಿ). ಎರಡು ಕಡೆಗಳಲ್ಲೂ ಶಾಖೆಗಳಿರಬೇಕೆಂದು ಬೃಹತ್ಸಂಹಿತಾ ಹೇಳಿದೆ; ಅಲ್ಲದೆ, ೩, ೫, ೭ ಅಥವಾ ೯ ಶಾಖೆಗಳಿರಬೇಕೆಂದೂ ಅದರಲ್ಲಿದೆ (LIII.24, LVI.13-14). ಮತ್ಸ್ಯಪುರಾಣವೂ ಇದೇ ರೀತಿಯಾಗಿ ಹೇಳಿದೆ (CCLXX.20-21). ದ್ವಾರಶಾಖೆಯ ಕೆಳಗಿನ ಭಾಗವನ್ನು 'ಪೇದ್ಯಾ' ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ ಯಾದರೂ, ಈ ಹೆಸರು ಗ್ರಂಥಗಳಲ್ಲಿಲ್ಲ. ಇಲ್ಲಿ 'ಪ್ರತೀಹಾರ' ರನ್ನು ನಿಲ್ಲಿಸಬೇಕೆಂದು ಬೃಹತ್ಸಂಹಿತಾದಲ್ಲಿದೆ (LIII.24, LVI.13-14). ಶಾಖೆಯ ಉಳಿದ ಭಾಗವನ್ನು, ಅಂದರೆ, ಪೇದ್ಯಾ ಭಾಗವನ್ನು, ಮಿಥುನಗಳಿಂದ ಅಲಂಕರಿಸಬೇಕು ಎಂದು ಅಗ್ನಿಪುರಾಣವು ಹೇಳಿದೆ (CIV.28-30). ಈ ಸ್ಥಾನದಲ್ಲಿ ಪೂರ್ಣಕುಂಭ, ಕನ್ನಡಿಗಳ ಅಲಂಕರಣವಿರಬೇಕೆಂದು ಮಾನಸಾರದಲ್ಲಿದೆ (೩೯.೪೧ಬಿ). ಪೂರ್ಣಕುಂಭ ಮಾತ್ರವಲ್ಲದೆ, ಶಂಖನಿಧಿ-ಪದ್ಮನಿಧಿ, ಗಂಗೆ-ಯಮುನೆ, ಮಿಥುನಗಳು ಮುಂತಾದ ಶಿಲ್ಪಗಳ ಕೆತ್ತನೆಯೂ ದೇವಾಲಯ ಗಳಲ್ಲಿ ಕಂಡುಬರುತ್ತದೆ.

ಬಾಗಿಲಿನ ಮೇಲ್ಭಾಗ ಅಥವಾ ಮೇಲ್ಪಟ್ಟಿಯೇ 'ಉತ್ತರ' (ಮಯ-೧೧ಬಿ-೧೨). ಬಾಗಿಲುವಾಡದ ಮೇಲೆ ಅಥವಾ ಕಿಟಕಿಯ ಮೇಲೆ, ಮೇಲಿನ ಕಟ್ಟಡದ ಭಾರವನ್ನು ಹೊರಲು ಹಾಕುವ ಹಾಸುಗಲ್ಲು ಇದು. ಇದಕ್ಕೆ ಪತಂಗ, ವಿಮಲಾ ಎಂಬ ಪರ್ಯಾಯ ಪದಗಳೂ ಇವೆ. ಇದನ್ನು 'ಊರ್ಧ್ವಪಟ್ಟಿಕಾ'

ಎಂದೂ ತಂತ್ರಸಮುಚ್ಚಯವು ಗುರುತಿಸಿದೆ (II.30). ಇದನ್ನು ಸಾಮಾನ್ಯವಾಗಿ 'ಉತ್ತರಾಂಗ' ಎಂದು ಹೇಳಲಾಗುತ್ತದೆ. ಇಲ್ಲಿ ವಿವಿಧ ಪ್ರಕಾರದ ಶಿಖರ, ಶಾಲಾ-ಕೂಟ, ಅಷ್ಟಮಂಗಲ ಇತ್ಯಾದಿ ಅಲಂಕರಣಗಳಿರುತ್ತವೆ. ಶಾಸ್ತ್ರಗ್ರಂಥಗಳಲ್ಲಿ ಈ ಬಗ್ಗೆ ಯಾವುದೇ ವಿವರಗಳಿಲ್ಲ.

ದ್ವಾರದ ಅಲಂಕರಣದ ಬಗ್ಗೆ ಹೇಳುವಾಗ ಕೆಲವು ಗ್ರಂಥಗಳು 'ಮಂಗಲಾಢ್ಯಫಲಕ' ಎಂಬ ಶಬ್ದವನ್ನು ಬಳಸಿವೆ (ಶಿಲ್ಪರತ್ನ-೨.೨೫; ತಂತ್ರಸ.II.30). ಇದು ದ್ವಾರದ ಮೇಲ್ಭಾಗ ದಲ್ಲಿ ಮಧ್ಯದಲ್ಲಿರುವ ಫಲಕ. ಇದನ್ನು ಸಾಮಾನ್ಯವಾಗಿ 'ಲಲಾಟಫಲಕ' ಎನ್ನುವುದುಂಟು. ಇಲ್ಲಿ ಮಂಗಲದಾಯಕ ವಾದ ಲಕ್ಷ್ಮಿಯ ಫಲಕವನ್ನು ಮಾಡಬೇಕು (ತಂತ್ರಸ-II.30). ಮಾನಸಾರದ ಪ್ರಕಾರ, ಇಲ್ಲಿ ಅಧಿರಾಜರ ಶಿಲ್ಪವನ್ನು ಪರಿವಾರ ದೊಂದಿಗೆ ಕೆತ್ತಬೇಕು ಮತ್ತು ಅಂತ್ಯಗಳಲ್ಲಿ ಆನೆಯನ್ನು ಕೆತ್ತಬೇಕು; ಬಲಕ್ಕೆ ಗಣೇಶನನ್ನೂ, ಎಡಕ್ಕೆ ಸರಸ್ವತಿಯನ್ನೂ ಕೆತ್ತಬೇಕು ಛತ್ರ-ಚಾಮರಗಳಿಂದ ಕೂಡಿದ್ದು, ಅದನ್ನು ತೋರಣ ಗಳಿಂದ ಅಲಂಕರಿಸಬೇಕು. ಇದನ್ನು ರಕ್ಷಾರ್ಥ ಮತ್ತು ಸಂಪದಭಿವೃದ್ಧಿಗಾಗಿ ಮಾಡಬೇಕು ಎಂದು ಮಾನಸಾರವು ಹೇಳಿದೆ (೩೯.೩೮-೪೨). ಮಧ್ಯ ಅಥವಾ ಅಂತ್ಯದಲ್ಲಿ ಪದ್ಮಾಲಂಕರಣವನ್ನೂ ಒಂದೆಡೆ ಹೇಳಿದೆ (ಮಾನ-೩೯.೩೫). ಕಲ್ಯಾಣ ಚಾಳುಕ್ಯ ಮತ್ತು ಹೊಯ್ಸಳರ ಕಾಲದ ದೇವಾಲಯ ಗಳಲ್ಲಿ ಮಂಗಳಫಲಕದ ಅಕ್ಕಪಕ್ಕ ಕಮಲದ ಮೊಗ್ಗಿನ ಅಲಂಕರಣವಿರುತ್ತದೆ. ಗಣೇಶ ಮತ್ತು ಸರಸ್ವತಿಯನ್ನು ಕೆತ್ತಿರುವುದನ್ನು ಶೃಂಗೇರಿಯ ವಿದ್ಯಾಶಂಕರ ದೇವಾಲಯದಲ್ಲಿ ದ್ವಾರದ ಸ್ತಂಭಶಾಖೆಯ ಮೇಲಿನ ಅಲಂಕರಣದಲ್ಲಿ ಕಾಣಬಹುದು. ಆದರೆ, ಸಾಮಾನ್ಯವಾಗಿ ಮಂಗಳಫಲಕದಲ್ಲಿ ಗಜಲಕ್ಷ್ಮಿಯ ಶಿಲ್ಪವಿರುತ್ತದೆ, ಇಲ್ಲವಾದಲ್ಲಿ, ಮೂಲದೇವತೆಯ ಶಿಲ್ಪ ಅಥವಾ ಮೂಲದೇವತೆಗೆ ಸಂಬಂಧಿಸಿದ ಇತರ ದೇವತಾಶಿಲ್ಪಗಳನ್ನೇ ಇಲ್ಲಿ ಬಿಡಿಸಲಾಗಿರುತ್ತದೆ. ಮಾನಸಾರದಲ್ಲಿ ಹೇಳಿರುವಂತೆ ಇಲ್ಲಿ ಅಧಿರಾಜರನ್ನು ಕೆತ್ತುವುದಕ್ಕಿಂತಲೂ, ದೇವಾಲಯದ ಅಧಿದೇವತೆಯನ್ನು ಕೆತ್ತುವುದೇ ಸೂಕ್ತವೆನಿಸಿರ ಬೇಕು. ಇದರಿಂದ ಅಲ್ಲಿ ಮೂಲದೇವತೆ ಅಥವಾ ಆ ಸಂಬಂಧದ ಶಿಲ್ಪವನ್ನು ಕೆತ್ತಲಾರಂಭವಾಯಿತು. ಅಂತೇ, ಇವುಗಳನ್ನು ರಕ್ಷಾರ್ಥವಾಗಿ ಹಾಗೂ ಸಂಪದಭಿವೃದ್ಧಿಗಾಗಿ ಮಾಡಬೇಕೆಂದು ಹೇಳಿರುವುದನ್ನೂ ಹಾಗೂ ಇದನ್ನು 'ಮಂಗಲಾಢ್ಯಫಲಕ' ಎಂದೇ ಕರೆದಿರುವುದನ್ನೂ ಇಲ್ಲಿ ಗಮನಿಸ ಬೇಕು. ಇದರಂತೆ, ಸಂಪದಭಿವೃದ್ಧಿಯ ಸಂಕೇತವಾಗಿ ಗಜಗಳೂ, ಮಂಗಲಕರಳಾಗಿ, ರಕ್ಷಣಾರ್ಥಳಾಗಿ, ಲಕ್ಷ್ಮಿಯೂ ಸ್ಥಾನವನ್ನು ಪಡೆದಳು. ಹೀಗಾಗಿ ಈ ಫಲಕದ ಮೇಲೆ ಗಜಲಕ್ಷ್ಮಿಯನ್ನು ಕೆತ್ತುವ ಪರಿಪಾಠ ಆರಂಭವಾಯಿತು. ದ್ವಾರವನ್ನು ಪತ್ರ, ವಲ್ಲಿಗಳಿಂದ ಅಲಂಕರಿಸಬೇಕೆಂದೂ ಮಾನಸಾರವು ಹೇಳಿದೆ (೩೯.೩೯ಎ).

ದ್ವಾರಗಳಲ್ಲಿ ಕೆಳಗೆ ಸ್ವಲ್ಪ ಎತ್ತರವಾಗಿರುವ ಹೊಸ್ತಿಲಿಗೆ 'ಪ್ರತೀಕ' ಎಂದು ಹೆಸರು (ಮಯ-೧೧ಬಿ-೧೨, ಕಾಮಿಕಾಗಮ-I.೫೫.೩೧ಬಿ-೩೨). ಇದಕ್ಕೆ ಗುಲ್ಫ, ಭುವಂಗ ಎಂಬ ಪರ್ಯಾಯ ಶಬ್ದಗಳೂ ಇವೆ (ಮಯ-೩೦.೧೬ ಶಿಲ್ಪರತ್ನ-೨೨.೨೬, ವಾಸ್ತು ವಿದ್ಯಾ-೧೩.೨೬ಬಿ). ದ್ವಾರದ ಮೇಲ್ಭಾಗದ ಪಟ್ಟಿಯನ್ನು ಊರ್ಧ್ವಪಟ್ಟಿಕಾ ಎಂದಂತೆ, ಈ ಕೆಳಗಿನ ಪಟ್ಟಿಯನ್ನು ತಂತ್ರಸಮುಚ್ಚಯವು 'ಆಧಾರಪಟ್ಟಿಕಾ' (lower band) ಎಂದೂ ಗುರುತಿಸಿದೆ (II.30). ಇದನ್ನು ಬೃಹತ್ಸಂಹಿತಾ 'ಉದುಂಬರ' ಎಂದಿದೆ (LIII.26). ದೇಹಲೀ ಎಂದೂ ಸಾಮಾನ್ಯವಾಗಿ ಹೇಳಲಾಗುತ್ತದೆ. ಹೊಸ್ತಿಲ ಭಾಗದಲ್ಲಿ ಇರುವ 'ಚಂದ್ರಶಿಲಾ' ಎಂದು ಹೇಳುವ ಅಂಗದ ಬಗ್ಗೆ ಗ್ರಂಥಗಳಲ್ಲಿ ವಿವರವಿಲ್ಲ.

ದ್ವಾರದ ಒಳಸುತ್ತಿನಲ್ಲಿ, 'ಉತ್ತರ'(lintel)ದ ಕೆಳಗೆ ಮತ್ತು ಹೊಸ್ತಿಲಿನ ಮೇಲೆ ಪಟ್ಟಿಕಾದಂತೆ ಇರುವ ಒಂದು ಅಂಗವನ್ನು ಗ್ರಂಥಗಳು ಹೇಳಿದ್ದು (ಕಾಮಿಕಾಗಮ, ಮಯಮತ), ಅದನ್ನು 'ವಾಜನ' ಎಂದು ಮಯಮತವೂ (೩೦.೧೨), ಕ್ಷೆಪಣ ಎಂದು ಮಾನಸಾರವೂ (೩೯.೫೩-೫೫) ಗುರುತಿಸಿವೆ. ಕೆಲವು ಗ್ರಂಥಗಳ ಪ್ರಕಾರ, ದ್ವಾರಶಾಖೆಯೂ ಸೇರಿದಂತೆ ಇದು 'ಉತ್ತರ'ದಿಂದ ಹೊಸ್ತಿಲವರೆಗೂ ಇರುತ್ತದೆ (ತಂತ್ರಸ-೨.೯-೪೦, ಶಿಲ್ಪರತ್ನ-೨೨.೩,೨೫). ಇದು ಮುಖ್ಯದ್ವಾರ ಶಾಖೆಯ ಒಳಗಿರುವುದೆಂದು ಮಯಮತವು ಹೇಳಿದ್ದರೆ, ದ್ವಾರಕವಾಟದಲ್ಲಿ ಕೊನೆಯಾಗುವುದೆಂದು ಮಾನಸಾರವು ಹೇಳಿದೆ (೩೯.೫೩-೫೫). 'ಕವಾಟ'ವನ್ನು ಉದ್ದವಾಗಿ ಮಾಡಿ, ಕ್ಷೆಪಣವನ್ನು (door frame) ಅದಕ್ಕಿಂತ ಅಗಲವಾಗಿ ಮಾಡಬೇಕು; ಅಂದರೆ, ದ್ವಾರಕವಾಟದ ಉದ್ದ-ಅಗಲಗಳಿಗೆ ಹೊಂದುವಂತೆ ಕ್ಷೆಪಣವನ್ನು ಮಾಡಬೇಕು (ಮಾನ-೩೯.೫೪-೫೫).

ಬಾಗಿಲಿನ ಮುಖ್ಯಭಾಗ ಹಾಗೂ ದೊಡ್ಡ ಫಲಕ ಗಳಂತಹ ಭಾಗವೇ 'ಕವಾಟ' ಅಥವಾ ಕದ. 'ದ್ವಾರಕಂಟಕ' ಎಂದೂ ನಿಘಂಟಿನಲ್ಲಿ ಹೇಳಿದೆ. ಇದನ್ನು 'ತಲ್ಪ' ಎಂದು ಕಾಮಿಕಾಗಮವು ಕರೆದಿದೆ (I.೫೫.೧೫ಬಿ). ಮಾನಸರವು ಇದನ್ನು 'ಶುದ್ಧದ್ವಾರ' ಎಂದಿದೆ (೩೯.೫೩). ಕವಾಟವು ಒಂದಿರಲಿ ಎರಡಿರಲಿ, ಅದನ್ನು ಸೂಕ್ತರೀತಿಯಲ್ಲಿ ಯೋಜಿಸ ಬೇಕು; ಒಂದು ಕವಾಟಕ್ಕೆ ಮರದ ಎರಡು ತುಂಡುಗಳನ್ನು ಉಪಯೋಗಿಸಬಾರದು; ಮರದ ಒಂದೇ ತುಂಡಿನಿಂದ ಕವಾಟವನ್ನು ಮಾಡಬೇಕು; ಎರಡು ಕವಾಟಗಳನ್ನು ಮಾಡುವಾಗ ಎರಡಕ್ಕೂ ಒಂದೊಂದು ತುಂಡನ್ನು

ಬಳಸಬಹುದು – ಎಂದು ಮಾನಸಾರದಲ್ಲಿದೆ (೩೯.೪೯–೫೦). ದೇವರು, ಬ್ರಾಹ್ಮಣರು ಮತ್ತು ರಾಜರ ದ್ವಾರಗಳ ಕವಾಟಗಳು ಎರಡಿರಬೇಕು; ಸಾಮಂತ ಇತ್ಯಾದಿ ಪ್ರಮುಖರ ದ್ವಾರಗಳೂ ಎರಡಿರಬೇಕು: ಉಳಿದಂತೆ, ಒಂದು ಕವಾಟ (–'ಅಯುಗ್ಮ ಫಲಕ') ಇರಬೇಕೆಂದು ಮಯಮತವು ಹೇಳಿದೆ (೩೦.೧೩–೧೪). ಮಾನಸಾರವೂ, ದೇವರ ಆಲಯಗಳಿಗೆ (–ಮಹಾದ್ವಾರ / ಪ್ರವೇಶದಲ್ಲಿ) ಎರಡು ಕವಾಟಗಳಿರ ಬೇಕೆಂದು ಹೇಳಿದೆ (೩೮.೬).

ಕವಾಟದ ಮಧ್ಯೆ ಸಂಧಿಯನ್ನು ಮಾಡಬಾರದು. ಕವಾಟದ ಉದ ಮತ್ತು ಅಗಲವು ದ್ವಾರದ ಉದ್ದ ಮತ್ತು ಎತ್ತರಕ್ಕೆ ಸರಿಹೊಂದುವಂತಿರಬೇಕು; ಅದನ್ನು ದ್ವಾರದಲ್ಲಿ ಸಮಂಜಸವಾಗಿ ಸೇರಿಸಬೇಕು (ಮಾನ–೩೯.೪೮ಬಿ–೪೯). ಎರಡು ಕವಾಟಗಳಿದ್ದಾಗ, ಒಂದು ಕವಾಟವು ಹೆಚ್ಚು ಅಗಲವಾಗಿದ್ದು, ಮತ್ತೊಂದು ಕವಾಟವು ಅದಕ್ಕಿಂತ ಚಿಕ್ಕದಾಗಿರಬೇಕೆಂದು ಗ್ರಂಥದಲ್ಲಿದೆ (ಮಯ–೩೦.೧೭ಬಿ–೧೯). ಕೆಲವೆಡೆ (ಶಿಲ್ಪರತ್ನ–೨೨.೪೩, ವಾಸ್ತುವಿದ್ಯಾ–೧೪.೧–ಉದ್ಧೃತ) ಎಡಕವಾಟವನ್ನು 'ತಾಯಿ' ಎಂದೂ, ಬಲ ಕವಾಟವನ್ನು 'ಮಗಳು' ಎಂದೂ ಹೇಳಲಾಗಿದೆ. ಅಂದರೆ, ಎಡಕವಾಟವು ಅಗಲವಾಗಿರಬೇಕು ಎನಿಸುತ್ತದೆ. ಎಡ ಕವಾಟವೇ ದೊಡ್ಡದಾಗಿರಬೇಕೆಂದೂ ಒಂದೆಡೆ ಇದೆ (ಮಾನ–೩೯.೬೮ಎ). ಆದರೆ, ಬಲಕವಾಟವೇ ಅಗಲವಾಗಿರುವುದೆಂದು ಅದರಲ್ಲೇ ಸೂಚ್ಯವಾಗಿದೆ (ಮಾನ–೩೯.೫೧–೫೨).

ಕವಾಟಗಳ ಅಳತೆಯೂ ಕೂಡಾ ಆಯಾ ತಲದ ಕಂಬಗಳ ಅಗಲದ ೩ನೇ/೧ರಷ್ಟು, ೪ನೇ/೧ರಷ್ಟು ಅಥವಾ ೫ನೇ/೧ರಷ್ಟು ಇರಬೇಕು ಎಂದು ಮಯಮತವು ಪ್ರತ್ಯೇಕವಾಗಿ ಹೇಳಿದೆ (೩೦.೧೩–೧೪). ಕವಾಟಗಳ ಅಳತೆಯ ಬಗ್ಗೆ ಹೇಳುವಾಗ, ಮಯಮತವು 'ಆವಾರ' (Wicket door) ಎಂಬ ಒಂದು ಅಂಗದ ಬಗ್ಗೆ ಹೇಳಿದೆ (೩೦.೧೯). ಇದನ್ನು ಕಾಮಿಕಾಗವು (I.೫೫.೪೦ಬಿ) ಮತ್ತು ಕೌಟಿಲ್ಯನ ಅರ್ಥಶಾಸ್ತ್ರಗಳು (II.೩.೨೭) ಕ್ರಮವಾಗಿ ಅಣಿದ್ವಾರ, ಆಣಿದ್ವಾರ (Miniature door) ಎಂದು ಕರೆದಿವೆ. ಇದು, ದೊಡ್ಡ ಬಾಗಿಲಿನ ಒಂದು ಕವಾಟಕ್ಕೆ ಹೊಂದಿಕೊಂಡಂತಿರುವ ಅದರ ಚಿಕ್ಕದ್ವಾರ. ಕೆಳಅರ್ಧವನ್ನು ಮಾತ್ರ ಮುಚ್ಚುವ ಕದವೆಂದು ಹೇಳಬಹುದು. ದೊಡ್ಡದ್ವಾರವು ತೆರೆದಿಲ್ಲದಾಗ ಬಳಸುವ ದ್ವಾರವಿದು. 'ಪಟ್ಟ' ದಿಂದ ಅದನ್ನು ದೃಢಗೊಳಿಸಿ ಬಲಯುತವಾಗಿ, ಶೋಭಾಯ ಮಾನವಾಗಿ ಮಾಡಬೇಕೆಂದು ಅದೇ ಗ್ರಂಥಗಳು ಹೇಳಿವೆ. ದೊಡ್ಡ ದೇವಾಲಯಗಳ ಮುಂಭಾಗದ ದ್ವಾರದಲ್ಲಿ ಈ ಅಣಿದ್ವಾರದ ಯೋಜನೆ ಇರುತ್ತದೆ.

ಕವಾಟವು ಶ್ರೀಮುಖ, ವಾಮದಂಡ, ಪಿಂಜರೀ, ಗಲಕ(ಕಾ), ಕ್ಷೆಪಣ, ಸಂಧಿಪತ್ರ, ಚಿತ್ರಗಳಿಂದ ಕೂಡಿದ ಅಲಂಕಾರ ಫಲಕಗಳು, ಹೂಗೊಂಚಲು ಇತ್ಯಾದಿಗಳಿಂದ ಕೂಡಿರಬೇಕು(ಮಯ.೩೦.೨೬–೩೦, ತಂತ್ರಸ–೨.೩೨, ಶಿಲ್ಪರತ್ನ–೨೨.೯೫೩.). ಇಲ್ಲಿ 'ಶ್ರೀಮುಖ'ವೆಂದರೆ, ಸಿಂಹದಂತೆ ಕಾಣುವ 'ಕೀರ್ತಿಮುಖ'ದ ಅಲಂಕರಣವೇ. 'ವಾಮದಂಡ' ಎಂಬುದನ್ನು ಕೀಲುಗಳು ಮೇಲಿನ ಅಲಂಕರಣ ಎನ್ನಲಾಗಿದೆ. 'ಪಿಂಜರೀ' ಎಂಬುದನ್ನು ಕೆಲವೆಡೆ 'ಪಂಜರ' ಎಂದೂ ಕರೆಯಲಾಗಿದೆ; ಪಂಜರಾಲಂಕರಣ ಎನ್ನಬಹುದು. 'ಅರ್ಗಲ'ವು ಕವಾಟದ ಒಳಭಾಗದಲ್ಲಿ ಅದನ್ನು ಮುಚ್ಚುವ ಸಲಕರಣೆ; ಕ್ಷೆಪಣ ಅಥವಾ 'ಪ್ರಕ್ಷೇಪಣೀಯ'ವು ಅದೇ ರೀತಿಯಾಗಿ ಕವಾಟದ ಹೊರಭಾಗದಲ್ಲಿರುವ ಸಲಕರಣೆ. ಒಂದರ ಚಾಚು ಮತ್ತೊಂದರಲ್ಲಿ ಕೂರುವಂತೆ ಮೆಟ್ಟಿಲಿನಾಕಾರದಲ್ಲಿ ಮಾಡಿರುವ ಪಟ್ಟಿಗೆ 'ಸಂಧಿಪತ್ರ' (Rabbet Bar) ಎಂದು ಹೆಸರು (ಮಯ–ಅಟಿ.೨೧, ಪು.೬೧). ಇದನ್ನು ತಲ್ಪತೀವ್ರ, ಸ್ಕಂಧಪಟ್ಟಿಕಾ ಎಂದೂ ಕರೆಯಲಾಗಿದೆ (ಮಯ–೩೦.೩೧–೩೨). ಮಾನಸಾರವು ಇದನ್ನು 'ಸಂಧಿಮಧ್ಯ' ಎಂದು ಹೇಳಿ, ಅದನ್ನು ಪದ್ಮಪತ್ರಗಳಿಂದ ಅಲಂಕರಿಸಬೇಕೆಂದಿದೆ (೩೯.೫೭;ಮಯ–೩೦.೩೧–೩೨.). ಇದು ಎರಡು ಕವಾಟಗಳ ನಡುವಿನ ಅಂತರವನ್ನು ಮುಚ್ಚುತ್ತದೆ (ಮಯ. ೩೦.೨೬–೩೦). ಇದನ್ನು ನಾವು ಪ್ರವೇಶಿಸುವಲ್ಲಿನ ಬಲಕವಾಟಕ್ಕೆ ಸೇರಿಸಬೇಕು. ಬಾಗಿಲಿನ ಬಲಭಾಗದಲ್ಲಿರುವ, ಬಾಗಿಲು ತೆರೆಯುವುದನ್ನು ತಡೆಯುವ ಯಂತ್ರವಿಶೇಷ–'ಸಂಧಿಪಾಲ' ಎಂದೂ, ಇದೇ ಕಾರ್ಯಕ್ಕಾಗಿ ಬಾಗಿಲ ಹೊರಭಾಗದಲ್ಲಿರುವ ಯಂತ್ರವಿಶೇಷ–'ಸೂತ್ರಫಲಕ' ಎಂದೂ, ಸೂತ್ರಫಲಕವು ಸಾಲಂಕೃತವಾಗಿರಬೇಕೆಂದೂ ತಂತ್ರಸಮುಚ್ಚಯ ದಲ್ಲಿದೆ; ಅಲ್ಲದೆ, ದ್ವಾರದ ಚಿಲಕವನ್ನು ಇದು 'ಪ್ರಕ್ಷೇಪಣೀಯ' ಎಂದಿದೆ (II.೩೧–೩೨); ಬಹುಶಃ ಈ ಸಂಧಿಪಾಲ ಮತ್ತು ಸೂತ್ರಫಲಕಗಳು ಮಯಮತದ ಅರ್ಗಲ, ಕ್ಷೆಪಣಗಳಿಗೆ ಕ್ರಮವಾಗಿ, ಪರ್ಯಾಯಪದಗಳಂತೆ ತೋರುತ್ತವೆ.

ಕವಾಟಕ್ಕೆ 'ಇಂದ್ರಕೀಲ' ಇರಬೇಕೆಂದು ಗ್ರಂಥಗಳು ಹೇಳಿವೆ. 'ಇಂದ್ರಕೀಲ' (Vertical Bolt) ಎಂಬುದು ಕವಾಟ ವನ್ನು ಹೊಸ್ತಿಲಿಗೆ ಲಂಬವಾಗಿ ಭದ್ರವಾಗಿ ಸೇರಿಸುವ ಅಗಳಿ. ಇದನ್ನು ಚಿತ್ರಗಳಿಂದ ಅಲಂಕರಿಸಿ, ಸುಂದರವಾಗಿ ಮಾಡ ಬೇಕು. ಇಂದ್ರಕೀಲ'ವು ಗುಲ್ಫ(ಹೊಸ್ತಿಲು)ವನ್ನು ಮುಂಭಾಗ ದಲ್ಲಿ, ಅಂದರೆ ಹೊರಭಾಗದಲ್ಲಿ, ಎಲ್ಲಿ ಸೇರುತ್ತದೆಯೋ ಅಲ್ಲಿ ಎಲ್ಲವನ್ನೂ ಸೇರಿಸುತ್ತದೆ. ಅಂದರೆ, ಗುಲ್ಮ (-interior handles), ಮಧ್ಯಕುಂಡಲ (ring in the middle), 'ಅಂತರ್ಗತ್ಯೈಗ್ರಾಹ್ಯೈರ್ವಾಲಾಭೈ' (tail like ornamentation)

–ಮುಂತಾದ ಎಲ್ಲವನ್ನೂ ಸೇರಿಸುತ್ತದೆ. 'ವಿಷಾಣಪರಿಘಾ' ಅಂದರೆ, ಕೊಂಬಿನಿಂದ ಅಥವಾ ಕಬ್ಬಿಣದಿಂದ ಎಲ್ಲ ಅಂಗ ಗಳನ್ನೂ ಸೇರಿಸಬೇಕು ಎಂದು ಹೇಳಲಾಗಿದೆ; ಅಲ್ಲದೆ, ಇವುಗಳನ್ನು ಪದ್ಮದಮೊಗ್ಗು, ಚೂಪಾದ ಮತ್ತು ವಿಸ್ತೃತವಾದ ಪತ್ರತ್ರಿನೇತ್ರಗಳಿಂದ ಅಲಂಕರಿಸಬೇಕೆಂದೂ ಹೇಳಿದೆ (ಮಯ–೩೦.೨೬–೩೦). ಪತ್ರತ್ರಿನೇತ್ರ ಎಂಬುದು ಬಿಲ್ವಪತ್ರೆ ರೀತಿಯ ಅಲಂಕರಣವಿರಬಹುದು.

ದ್ವಾರ/ಕವಾಟದ ಇನ್ನೊಂದು ಅಂಗ–'ಭಾಜನ' (Socket). ಇದು ಕವಾಟದ ಕೆಳಗಿರುವ ಕುಳಿ. ಬಾಗಿಲಿನ ಅಳತೆಗೆ ತಕ್ಕಂತೆ(–ಮಹತ್ತರ, ಮಧ್ಯಮ ಮತ್ತು ಹೀನ), ಭಾಜನದ ಒಳವ್ಯಾಸವನ್ನು ನಿರ್ಣಯಿಸಬೇಕು. ಕದವನ್ನು ಬಾಗಿಲುವಾಡಕ್ಕೆ ಸೇರಿಸುವ ತಿರುಗಣಿ/ಕೀಲನ್ನು ಈ 'ಭಾಜನ'ದೊಳಗೆ ಸೇರಿಸಲಾಗುತ್ತದೆ (ಮಯ–೩೦.೨೦–೨೨ಎ). ಇದನ್ನು 'ಹಸ್ತಿಹಸ್ತ' ಎಂದೂ ಅದರಲ್ಲಿ ಹೇಳಲಾಗಿದೆ; ಬಹುಶಃ ಇದು ಆನೆಯ ಸೊಂಡಿಲಿನಂತಿರಬೇಕು ಎಂಬುದನ್ನು ಸೂಚಿಸುತ್ತಿರಬಹುದು ಎಂದು ಸಂಪಾದಕರು ಹೇಳಿದ್ದಾರೆ. ಎರಡು ಕವಾಟಗಳಿದ್ದಾಗ, ಇದೇ 'ಕೀಲಭಾಜನ'ವು ಬಲಭಾಗದ ಕವಾಟದ ಮೇಲಿರಬೇಕು ಮತ್ತು ಆ ದ್ವಾರದ ಕೆಳಭಾಗದಲ್ಲೂ ಇರಬೇಕು (ಮಾನ–೩೯.೬೧–೬೨). ಕೀಲದ (Nail) ಉದ್ದವು ಕೀಲಭಾಜನಕ್ಕೆ ಸರಿಯಾದ ಅಳತೆಯಲ್ಲಿರ ಬೇಕು; ಅಗಲವು, ೧, ೨ ಅಥವಾ ೩ ಅಂಗುಲ ಅಥವಾ ಅವರವರ ಇಚ್ಛೆಯಂತೆ ಇರಬಹುದು (ಅದೇ.) ಕವಾಟದ ಮತ್ತೊಂದು ಅಂಗ–'ಭೇಷಣೀ'(ಮಯ–೩೦.೨೩). ಇದನ್ನು 'ಪೋಷಣ' ಎಂದೂ ಹೇಳಲಾಗಿದೆ (ಕಾಮಿಕಾ–I.೫೫.೩೬–೩೭). ಇದು ದ್ವಾರದ ಮೇಲಿನ ಅಡ್ಡಪಟ್ಟಿ; ಇದು ದ್ವಾರಕ್ಕೆ ಆಧಾರವಾಗಿರುತ್ತದೆ. ಭೇಷಣಿಯು ಕವಾಟದ ಮಧ್ಯದಲ್ಲಿರ ಬಾರದು. ಎರಡು ಕವಾಟಗಳಿದ್ದಾಗ ಭದ್ರತೆಗೆ ಅವಶ್ಯವಿಲ್ಲದಿದ್ದಲ್ಲಿ ಭೇಷಣೀ ಇರುವುದಿಲ್ಲ (ಮಯ–೨೨ಬಿ–೨೩). ಕವಾಟದ ಮೇಲೆ ೩, ೫, ೭, ೯ ಅಥವಾ ೧೧ ತೆಳುವಾದ ಕಿರಿಯಗಲದ ಪಟ್ಟಿಗಳಿರುತ್ತವೆ (Laths). ಇದನ್ನು ಮಯಮತವು 'ದಂಡ' ಎಂದಿದೆ (೩೦.೨೪). ಅವುಗಳು ಕುದುರೆಯ ಭುಜ, ಅಶ್ವತ್ಥ ಪತ್ರ, ಸ್ವಸ್ತಿಕ, ಘಟಿಕಾ (ಮಡಕೆ/ಚಿಕ್ಕ ಗಡಿಗೆ = ಕುಂಭ?) ಅಥವಾ ಮಿರ್ಣಕ (ಸಂಸ್ಕೃತ ನಿಘಂಟಿನಲ್ಲಿ ಈ ಶಬ್ದ ನನಗೆ ದೊರೆಯಲಿಲ್ಲ) ದಂತಿರುತ್ತವೆ (ಮಯ–೩೦.೨೪–೨೫); ಅಂದರೆ, ಅವುಗಳನ್ನು ಈ ರೀತಿ ಅಲಂಕರಿಸಬೇಕೆಂದು ಅಭಿಪ್ರಾಯ.

ಇಷ್ಟೇ ಅಲ್ಲದೆ, ದ್ವಾರದ ಅಕ್ಕ–ಪಕ್ಕ ಸ್ತಂಭವಿರಬೇಕೆಂದೂ ಮಾನಸಾರ ಗ್ರಂಥದಲ್ಲಿದೆ. ಇವು, ದ್ವಾರದಷ್ಟೇ ಎತ್ತರವಿರ ಬಹುದು ಅಥವಾ 'ಉತ್ತರ' ಅಥವಾ 'ತಲ'ದವರೆಗಿರಬಹುದು (ಮಾನ–೩೯.೨೫.೨೬). ಇದರಂತೆ, ದ್ವಾರದ ಶಾಖೆಗಳು/ ದ್ವಾರಪಾಲಕರ ಪಕ್ಕ ಕುಡ್ಯಸ್ತಂಭವಿರುವುದನ್ನು ಅನೇಕ ದೇವಾಲಯಗಳಲ್ಲಿ ಕಾಣುತ್ತೇವೆ. ಎಲ್ಲ ದೇವಾಲಯಗಳಲ್ಲಿ ಮಧ್ಯದ ದ್ವಾರಕ್ಕೆ ಜಾಲಕ ಇರಬೇಕು ಎಂದು ಮಾನಸಾರದಲ್ಲಿದೆ (೩೯.೯ಬಿ). 'ಅಂತರಾಲ' ಪ್ರದೇಶದಲ್ಲಿ ಮಧ್ಯೆ ದ್ವಾರ ಇರಬೇಕು ಎಂದು ಮಾನಸಾರವು ಇನ್ನೊಂದೆಡೆ ಹೇಳಿರುವುದು (೩೮.೩ಎ), ಈ ಮಧ್ಯದ ದ್ವಾರಕ್ಕೇ ಅನ್ವಯಿಸುವಂತಿದೆ. ಹೊಯ್ಸಳರ ಕಾಲದ ಅನೇಕ ದೇವಾಲಯ ಗಳಲ್ಲಿ ಅಂತರಾಲ ದ್ವಾರದಲ್ಲಿ ಜಾಲಕದ ರಚನೆಯನ್ನು ಕಾಣುತ್ತೇವೆ. ಮುಖ್ಯದ್ವಾರದ ಮುಂದೆ ಸೋಪಾನಗಳಿರ ಬೇಕೆಂದು ಮಾನಸಾರ (೩೮.೬) ಮತ್ತು ತಂತ್ರ ಸಮುಚ್ಚಯಗಳು (II.೩೩) ಹೇಳಿವೆ. ಮೆಟ್ಟಿಲುಗಳು ಪ್ರಧಾನ ದ್ವಾರದ ಎದುರಿನ ಭೂಭಾಗದ ತಳದಿಂದ ಆರಂಭವಾಗಿರ ಬೇಕೆಂದೂ, ಅಂದರೆ, ಅದರ ಎದುರಿಗಿರಬೇಕೆಂದೂ ಹೇಳಲಾಗಿದೆ; ಮೊಸಳೆಯ ಬಾಯಿಯಿಂದ ಹೊರಚಾಚಿದ ಎರಡು ಪಕ್ಕಗಳು (Railings) ಇರಬೇಕೆಂದೂ, ಅವು ದ್ವಾರಶಾಖೆಗಳೆರಡರ ಪಕ್ಕದಿಂದ ಆರಂಭವಾಗಿರಬೇಕೆಂದೂ ಇದರಲ್ಲಿದೆ (ತಂತ್ರಸ.II.೩೩). ಪ್ರಾಚೀನ ಕಾಲದಿಂದಲೂ ಇದರ ಸರಳ ರಚನೆಯನ್ನು ನಾವು ದೇವಾಲಯಗಳಲ್ಲಿ ಕಾಣುತ್ತೇವೆ.

ಪೂರ್ಣ ದೇವಾಲಯಗಳಿಗಿರುವಂತೆ, ದ್ವಾರಗಳಿಗೂ ಷಡ್ವರ್ಗ, ಚತುರ್ವರ್ಗಗಳನ್ನು ಮಾನಸಾರವು ಹೇಳಿದೆ (೩೮.೭೧ಬಿ–೭೮ಎ). ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ – ಇವೇ ಷಡ್ವರ್ಗಗಳು. ದ್ವಾರವನ್ನು ೮ ಭಾಗಗಳಾಗಿ ಮಾಡಿ, ಷಡ್ವರ್ಗದ ಯಾವ ಯಾವ ವರ್ಗಕ್ಕೆ ಎಷ್ಟೆಷ್ಟು ಭಾಗ ನೀಡಬೇಕೆಂದು ಅದರಲ್ಲಿದೆ. ಸ್ತಂಭ ಮತ್ತು ಶಿರಸ್ಸಿಗೆ ಎರಡೆರಡು ಭಾಗಗಳಿದ್ದು, ಉಳಿದವಕ್ಕೆ ಒಂದೊಂದು ಭಾಗ ನೀಡಲಾಗಿದೆ. ಇದರಲ್ಲಿನ ವಿವರದಂತೆ, ದ್ವಾರದಲ್ಲಿ ಕೆಳಭಾಗದಲ್ಲಿರುವ 'ಪೇದ್ಯಾ' ಭಾಗವು ಷಡ್ವರ್ಗಗಳಲ್ಲಿ ಮೊದಲನೆಯದಾದ 'ಮಸೂರಕ'(–ಅಧಿಷ್ಠಾನ)ದ ಸ್ಥಾನದಲ್ಲಿ ನಿಲ್ಲುತ್ತವೆ; ದ್ವಾರಶಾಖೆಗಳು ಸ್ತಂಭ / ಭಿತ್ತಿಯ ಸ್ಥಾನವನ್ನು ಪಡೆದರೆ, ಮೇಲಿನ ಉತ್ತರಾಂಗ / ಪ್ರಸ್ತರವು ಮೂರನೆಯ ವರ್ಗ ಎನಿಸುತ್ತದೆ. ಅದರ ಮೇಲೆ ಕೆತ್ತಿರುವ ವೇದಿಯು 'ಗ್ರೀವ' ಭಾಗವಾದರೆ, ಕೆಲವೆಡೆ ಕೆತ್ತಿರುವ ಕೂಟ ಶಾಲಾಗಳು / ಶಿಖರಗಳು(ಶಿರಸ್ಸು) ಐದನೆಯ ಭಾಗ ಹಾಗೂ ಅದರ ಮೇಲಿನ ಸ್ತೂಪಿ–ಆರನೆಯ ಭಾಗ. 'ಷಡ್ವರ್ಗಮಿತಿಪ್ರೋಕ್ತಂ' ಎಂದೇ ಗ್ರಂಥದಲ್ಲಿದ್ದು, ದ್ವಾರದಲ್ಲೂ ಷಡ್ವರ್ಗಗಳನ್ನು ರೂಪಿಸಬಹುದೆಂಬುದನ್ನು ಮಾನಸಾರವು ಸೂಚಿಸಿದೆ (೩೯.೭೪–೭೬). ಅನೇಕ ಪ್ರಾಚೀನ ದೇವಾಲಯಗಳಲ್ಲೇ

ಈ ರೀತಿಯ ಷಡ್ವರ್ಗದ್ವಾರ ರಚನೆಯನ್ನು ಗಮನಿಸಬಹುದಾಗಿದೆ. ಇದೇ ರೀತಿ, ವೇದಿಕಾ, ಪಾದ, ಶಿರ ಮತ್ತು ಶಿಖಾಗಳಿಂದ ಕೂಡಿದ ಚತುರ್ವರ್ಗ ದ್ವಾರದ ವಿವರವನ್ನೂ ಮಾನಸಾರವು ನೀಡಿದೆ (೩೯.೭೭–೭೮).

ಮಾನಸಾರದ ಮತ್ತೊಂದು ವಿವರವನ್ನಿಲ್ಲಿ ಗಮನಿಸಬೇಕು. ಪ್ರತೀ ದ್ವಾರಸಂಧಿಯಲ್ಲಿ (door-joint) (ಅಂದರೆ, ಪಟ್ಟಿಕಾ ದ್ವಾರಯೋಗದ ಮಧ್ಯೆ) ಎರಡು ರಂಧ್ರಗಳನ್ನು ಮಾಡಬೇಕು. 'ಪಟ್ಟಿಕಾ'ದ ಮೇಲೆ ಮತ್ತು ಕೆಳಗೆ ದ್ವಾರದಲ್ಲಿ 'ಶಿಖಾ' ('pointed projection' ಎಂದು ಅನುವಾದವಿದೆ) ಇರಬೇಕು (ಮಾನ–೩೯.೨೭). ಬಹುಶಃ ಈ 'ಶಿಖಾ'ವನ್ನು ರಂಧ್ರದಲ್ಲಿ ಸೇರಿಸಬೇಕೆನಿಸುತ್ತದೆ. ಕವಾಟದ ಮೇಲ್ಭಾಗದಲ್ಲಿ ಹಾಗೂ ಅಧಿಷ್ಠಾನಕ್ಕೆ ಸೇರಿದ ಪಟ್ಟಿಕಾದ ಕೆಳ ಅರ್ಧದಲ್ಲಿ ರಂಧ್ರಗಳನ್ನು ಮಾಡಬೇಕು; ಕವಾಟದ ಮೇಲ್ಭಾಗವನ್ನು ಈ ರಂಧ್ರದೊಳಗೆ ಕೂರಿಸಬೇಕು. ಒಳದ್ವಾರಗಳಿಗೆ ಒಂದು ಕವಾಟ, ಕೀಲ ಮತ್ತು ಭಾಜನಗಳನ್ನು ಕೂರಿಸಬಹುದು. ಕವಾಟದ ಉದ್ದ–ಅಗಲಗಳ ಮಧ್ಯದಲ್ಲಿ ಎರಡು ರಂಧ್ರಗಳಿರಬೇಕು. ಈ ರಂಧ್ರಗಳಲ್ಲಿ ಕೀಲಗಳನ್ನು ಮೇಲಕ್ಕೆ ಚಲಿಸುವಂತೆ ಸೇರಿಸಬೇಕು (ಮಾನ–೩೯.೬೪ಬಿ–೬೭). ಈ ವಿವರಣೆಯು, ಕವಾಟವನ್ನು ಮೇಲೆ ದ್ವಾರಕ್ಕೆ ಸೇರಿಸುವ ವಿಧಾನವನ್ನು ಹೇಳುತ್ತಿದೆ.

ಶುಭಾಶುಭದ್ವಾರಗಳ ಬಗ್ಗೆ ಮಯಮತದಲ್ಲಿ ವಿವರವಿದೆ. ಕವಾಟವು ಒಂದಿರಲಿ, ಎರಡಿರಲಿ, ತೆಗೆಯುವಾಗ / ಮುಚ್ಚುವಾಗ ಅದು ಮಾಡುವ ಶಬ್ದಕ್ಕೆ ಗಮನಕೊಡಬೇಕು; ಭೇರಿ, ವೀಣೆ ಅಥವಾ ಕೊಳಲಿನ ಶಬ್ದವಿದ್ದರೆ ಒಳ್ಳೆಯದು. ಅಸಮಂಜಸ ಶಬ್ದಗಳು, ಅಳುವಿನ ಶಬ್ದ ಈ ರೀತಿ ಇರುವುದು ಶುಭವಲ್ಲ. ದ್ವಾರ ತೆರೆದಾಗ / ಮುಚ್ಚಿದಾಗ ಅದು, ಸ್ಥಾಪಿಸಿದ ಸ್ಥಾನದಲ್ಲೇ / ಸ್ಥಿತಿಯಲ್ಲೇ ಇರಬೇಕು; ಬಾಗಿಲು ತೆರೆಯುವಲ್ಲಿ ಮೇಲೆ ಮತ್ತು ಕೆಳಗೆ ಒಂದೇ ರೀತಿಯಾಗಿರಬೇಕು, ಒಂದೇ ಪ್ರಮಾಣದಲ್ಲಿರಬೇಕು. ದ್ವಾರಗಳ ಲಂಬ ಪ್ರಮಾಣವು ಒಂದೇ ನೇರದಲ್ಲಿ ಸಮನಾಗಿರುವಂತೆ ದ್ವಾರಗಳನ್ನು ಸ್ಥಾಪಿಸಬೇಕು; ಅವು ಬಾಗಿರುವಂತಿರಬಾರದು. ಅಂತ್ಯಾರ್ಗಲ (interior bolt) ಮತ್ತು ಛಿದ್ರವು (clasp) ಕೂಡಾ ಸರಿಯಾಗಿ ಹೊಂದುವಂತಿರಬೇಕು; 'ಯೋಗ' ವನ್ನು ಉಜ್ಜುವಂತಿರಬಾರದು. ತಾನೇ ತಾನಾಗಿ ತೆರೆದುಕೊಳ್ಳುವ(–'ಪಿಧಾನಂ') ಹಾಗೂ ಮುಚ್ಚಿಕೊಳ್ಳುವ (–'ಅಪಾವೃತ') ದ್ವಾರಗಳೂ ಒಳ್ಳೆಯದಲ್ಲ. ದ್ವಾರದ ಪರಿಧಿಯಲ್ಲಿ ಮರ, ಮೂಲೆ, ಹುತ್ತ, ಬೂದಿಗುಡ್ಡ, ಕೂಪ, ದೇವಾಲಯ, ಸ್ತಂಭ ಇತ್ಯಾದಿ ಏನಾದರೂ ಇದ್ದರೆ, ಅದು ಒಳ್ಳೆಯದಲ್ಲ (ಮಯ–೩೦.೩೩–೪೦). ಇಷ್ಟೇ ಅಲ್ಲದೆ, ರಾಜನಿಗೆ ಸಂಬಂಧಿಸಿದಂತೆ ಕೂಡಾ ಶುಭದ್ವಾರ ರಚನೆಯನ್ನು ಈ ಗ್ರಂಥವು ಹೇಳಿದೆ (ಮಯ–೩೦.೪೧–೪೨).

'ಬ್ರಹ್ಮಪದ'ಕ್ಕೆ ಎದುರಾಗಿ ಅಥವಾ ಅಭಿಮುಖವಾಗಿ ಯಾವ ದ್ವಾರವನ್ನೂ ಇಡಬಾರದು (ಮಾನ–೩೯.೨೧–೨೩, ಮಯ–೩೦.೪೬). ಶುಭದಾಯಕವಾಗಿರಬೇಕೆಂದರೆ, ೩೨ ಪದಗಳ ನಕ್ಷೆಯಲ್ಲಿ, ಮಹೇಂದ್ರ, ರಾಕ್ಷಸ, ಪುಷ್ಪದಂತ, ಭಲ್ಲಾಟ 'ಪದ'ಗಳಲ್ಲಿ ದ್ವಾರವನ್ನಿಡಬೇಕು. 'ಪದ'ಗಳ ವಿವರಗಳಿಗೆ ನೋಡಿ: ಅಪರ್ಣ, ಕೂ.ಸ.(ಲೇಖನ)–ಪದ ನಿರ್ಣಯ ಅಥವಾ ವಾಸ್ತುಮಂಡಲ). ಅದಕ್ಕೆ ಸಂಬಂಧಿಸಿದ ದಿಕ್ಕಿನ ಅಧೀಶರ ರಕ್ಷಣೆಯನ್ನು ಇದಕ್ಕೆ ಮುಂಚೆಯೇ ನೀಡಿರಬೇಕು. ಈ ರೀತಿಯಾಗಿ ಒಳಗಿನ ಮತ್ತು ಹೊರಗಿನ ದ್ವಾರಗಳನ್ನು (–ಅಂತರ್ದ್ವಾರ, ಬಹಿರ್ದ್ವಾರ) ವ್ಯವಸ್ಥೆಗೊಳಿಸಬೇಕು. ಬೇರೆ ಎಲ್ಲ ದ್ವಾರಗಳೂ ದೋಷಯುಕ್ತವಾದವು (ಮಯ–೩೦.೪೪–೪೭ಎ). ಯಾವುದೇ ಆಸೆಯಿಂದ, ಅಲಕ್ಷ್ಯದಿಂದ ದ್ವಾರಗಳನ್ನು ಬೇರೆ ರೀತಿಯಲ್ಲಿ ನಿರ್ಮಿಸಿದರೆ, ಅದರಿಂದ ತೊಂದರೆ ಎಂದೂ ಹೇಳಲಾಗಿದೆ (ಮಾನ–೩೯.೭೯ಎ) ಅಲ್ಲದೆ, ಕಟ್ಟಡವನ್ನು ರಕ್ಷಿಸಲೆಂದು ಮಾಡಿರುವ ದ್ವಾರವು ಸ್ಥೂಲವಾಗಿರಬೇಕು, ಗಟ್ಟಿಯಾಗಿರಬೇಕು; ಅದು ತಿಳಿದು ಸರಿಯಾಗಿ ಮಾಡಿದರೆ ಸಂತಸಕರ ಎಂದೂ ಮಯಮತವು ಸೂಚಿಸಿದೆ (೩೦.೪೦ಬಿ).

ದೇವಾಲಯಗಳ ಸಾಲಂಕೃತ ಭಾಗಗಳಲ್ಲಿ ದ್ವಾರದಂತೇ ಪ್ರಮುಖವಾದ ಇನ್ನೊಂದು ಭಾಗವೆಂದರೆ – ವಿತಾನ ಅಥವಾ ವಿತಾನಾಲಂಕರಣ (decorated ceiling). ನನಗೆ ತಿಳಿದಿರುವಂತೆ, 'ವಿತಾನ' ಎಂಬ ಶಬ್ದವು ನಾನು ಗಮನಿಸಿದಂತೆ ದಾಕ್ಷಿಣಾತ್ಯ ಗ್ರಂಥಗಳಲ್ಲಿಲ್ಲ. ಇದು ಮೇಲ್ಕಟ್ಟು ಅಥವಾ (ಒಳ) ಛಾವಣಿಯ ಸಾಲಂಕೃತ ಭಾಗ. Ceiling ಎಂಬುದಕ್ಕೆ ಗೂಡು, ಬಾಗಿಲುಗಳ ಮೇಲೆ ಹಾಕುವ ಛಾವಣಿಯಂತಹ ಚಿತ್ರಕೆಲಸದ ಚಾಚು ಭಾಗ ಎಂದು ನಿಘಂಟಿನಲ್ಲಿದೆ; ಅದೇ, 'ವಿತಾನ' ಎಂಬುದಕ್ಕೆ ಮೇಲ್ಕಟ್ಟು, ಚಪ್ಪರದ ಮೇಲುಭಾಗದಲ್ಲಿ ವಸ್ತ್ರದಿಂದ ಮಾಡಿದ ಛಾವಣಿ ಎಂದು ಸಂಸ್ಕೃತ ನಿಘಂಟಿನಲ್ಲಿದೆ. ಇದನ್ನು 'ಭುವನೇಶ್ವರಿ' ಎಂದೂ ಕೆಲವೆಡೆ ತಪ್ಪಾಗಿ ಕರೆದಿರುವುದುಂಟು. 'ವಿತಾನ' ಎಂಬುದೇ ಹೆಚ್ಚು ಅರ್ಥವಿರುವ ಶಬ್ದ.

ಕಂಡರಣೆಯ ರೀತಿ ಮತ್ತು ಅಲಂಕರಣದ ಆಧಾರದ ಮೇಲೆ ಅವುಗಳನ್ನು ಸಮತಲ, ಕ್ಷಿಪ್ತ, ಕ್ಷಿಪ್ತೋತ್ಕ್ಷಿಪ್ತ, ಉತ್ಕ್ಷಿಪ್ತ, ಪದ್ಮಮಂಡಲ ಮುಂತಾದ ಹೆಸರುಗಳಿಂದ ಗುರುತಿಸಲಾಗಿದೆ. ಸಮತಲ ವಿತಾನವು ಹೆಸರೇ ಸೂಚಿಸುವಂತೆ, ಯಾವುದೇ ಆಲಂಕಾರಿಕ ಉಬ್ಬುತಗ್ಗುಗಳಿಲ್ಲದೆ, ಸಮತಟ್ಟಾದ ಒಳಛಾವಣಿಯ ಮೇಲೆ ಮಾಡಿದ ಕಂಡರಣೆ(ಇದು ಚೌಕಾಕಾರ, ವರ್ತುಲಾಕಾರ ಮುಂತಾದ ವಿವಿಧ ಆಕಾರಗಳಲ್ಲಿರುತ್ತದೆ). ಇದಕ್ಕೆ ವಿರುದ್ಧ ರೀತಿಯ ರಚನೆ ಎಂದರೆ, ಕ್ಷಿಪ್ತ ಇತ್ಯಾದಿ ರೀತಿಗಳು. 'ಕ್ಷಿಪ್ತ' ರೀತಿಯ ರಚನೆಯಲ್ಲಿ ಕಂಡರಣೆಯ ಪಟ್ಟಿಕೆಗಳು

# ದ್ವಾರದ ಅಂಗಗಳು–ಶಾಸ್ತ್ರೀಯವಾಗಿ




ಚಿತ್ರ–1

## ದ್ವಾರದ ಅಂಗಗಳ ಸಾಮಾನ್ಯ ಹೆಸರುಗಳು







ಚಿತ್ರ–2




ಚಿತ್ರ–3 – ದ್ವಾರದ ಲಲಾಟ ಮತ್ತು ಉತ್ತರಾಂಗದ ಅಲಂಕರಣ, ಬಾಗಳಿ



ಚಿತ್ರ–4 – ದ್ವಾರದ ಪ್ರಾಚೀನ ಸ್ವರೂಪ (ಷಡ್ವರ್ಗಕ್ಕೆ ಅನ್ವಯಿಸುವಂತೆ)



ಚಿತ್ರ–6 – ಕ್ಷಿಪ್ತವಿತಾನ



ಚಿತ್ರ–5 – ಸಮತಲ ವಿತಾನ (‘ಪದ್ಮಮಂಡಲ’)



ಚಿತ್ರ–8 – ಅಷ್ಟದಿಕ್ಪಾಲ ವಿತಾನ



ಚಿತ್ರ–7 – ಕ್ಷಿಪ್ತೋತ್ಕ್ಷಿಪ್ತ ವಿತಾನ

ಒಂದರಿಂದೊಂದು ಒಳಸರಿದಂತಿರುತ್ತವೆ; ಅದೇ 'ಉತ್‌ಕ್ಷಿಪ್ತ' ರೀತಿಯ ರಚನೆಯಲ್ಲಿ ಈ ಪಟ್ಟಿಕೆಗಳು ಒಂದರಿಂದೊಂದು ಉಬ್ಬಿದ ಪಟ್ಟಿಕೆಗಳಾಗಿರುತ್ತವೆ. 'ಕ್ಷಿಪ್ತೋತ್ಕ್ಷಿಪ್ತ' ರೀತಿಯ ರಚನೆಯಲ್ಲಿ ಸಾಲಂಕೃತ ಪಟ್ಟಿಕೆಗಳು ಒಂದರಿಂದೊಂದು ಒಳಸರಿದಂತಿದ್ದರೂ, ಮುಂದೆ, ಅದರಿಂದಲೇ ಹೊರಬಂದಂತೆ ಒಂದರಿಂದೊಂದು ಪಟ್ಟಿಕೆಗಳು ಹೊರ ಉಬ್ಬಿದಂತಿದ್ದು, ಅಂತ್ಯದಲ್ಲಿ ಇಳಿಬಿದ್ದ ಕಮಲಾಲಂಕರಣವಿರುತ್ತದೆ. ಅಲ್ಲದೆ, ಮುಂಚಾಚಿ ಇಳಿಬಿದ್ದಂತೆ, ಅಧೋಮುಖಿಯಾದ ಕಮಲದ ಮೊಗ್ಗು/ಬಾಳೆಯ ಮೊಗ್ಗಿನ ಅಲಂಕರಣವಿರುತ್ತದೆ. ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಇಂತಹ ವಿವಿಧ ಪ್ರಕಾರದ ವಿತಾನಗಳನ್ನು ಕಾಣುತ್ತೇವೆ. ಉಳಿದಂತೆ, ಕರ್ನಾಟಕದಲ್ಲಿ ಸಮತಲ ವಿತಾನವನ್ನೇ ಹೆಚ್ಚಾಗಿ ಕಾಣುತ್ತೇವೆ. ಅಲಂಕರಣದ ದೃಷ್ಟಿಯಿಂದ ಹೇಳುವುದಾದರೆ, ಪದ್ಮಮಂಡಲ ಅಲಂಕಾರ, ಅಷ್ಟದಿಕ್ಪಾಲ, ವಿಷ್ಣು-ಶಿವರ ವಿವಿಧ ರೂಪಗಳು, ಸಪ್ತಮಾತೃಕೆ ಮುಂತಾದ ಶಿಲ್ಪಗಳೂ ಇರುತ್ತವೆ.

ಹೀಗೆ ಗ್ರಂಥಗಳು, ದ್ವಾರದ ಪ್ರತೀ ಅಂಗಗಳಿಗಿರುವ ವಿವಿಧ ನಾಮಗಳನ್ನೂ, ಅವುಗಳ ಸ್ಥಾನ, ಅಲಂಕರಣವನ್ನೂ ವಿಶದವಾಗಿ ಪ್ರಸ್ತುತಪಡಿಸಿವೆ. 'ಕವಾಟ' ರಚನೆಯ ಬಗ್ಗೆ ಹೆಚ್ಚಿನ ವಿವರಣೆಗಳು ಗ್ರಂಥಗಳಲ್ಲಿವೆ. ಆದರೆ, ಲೇಖನದಲ್ಲಿ ಅಲ್ಲಲ್ಲೇ ಹೇಳಿರುವಂತೆ, ಒಂದೆರಡು ಅಂಗಗಳಿಗೆ ಸಂಬಂಧಿಸಿದಂತೆ ವಿವರಗಳಿಲ್ಲ. ಅಲ್ಲದೆ, ಸಾಮಾನ್ಯವಾಗಿ ನಾವು ಬಳಸುವ ಶಬ್ದಗಳಿಗೂ, ಗ್ರಂಥಗಳಲ್ಲಿ ಹೇಳಿರುವ ಪಾರಿಭಾಷಿಕ ಶಬ್ದಗಳಿಗೂ ವ್ಯತ್ಯಾಸವಿರುವುದು ಕಂಡುಬರುತ್ತದೆ. 'ವಿತಾನ'ದ ಸಂಬಂಧದಲ್ಲೂ ಹೀಗೇ 'ಭುವನೇಶ್ವರಿ' ಎಂದು ಹೇಳುವುದುಂಟು. ಒಂದು ವಿಷಯಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ಶಬ್ದಗಳಿರುವಾಗ, ಅಂತಹ ಶಬ್ದಗಳನ್ನೇ ಬಳಸುವುದು ಹೆಚ್ಚು ಸೂಕ್ತವಾದುದು ಎನಿಸುತ್ತದೆ. ಮಯಮತ ಮತ್ತು ಕಾಮಿಕಾಗಮಗಳ ವಿವರಗಳಲ್ಲಿ ಕೆಲವೆಡೆ ಹೋಲಿಕೆ ಇದೆ; ಶಿಲ್ಪರತ್ನವೂ ಕೂಡಾ ಅದರಂತೇ ವಿವರಿಸುವುದು ಒಂದೆರಡು ಕಡೆ ಕಂಡುಬಂದಿದೆ.

## ಗ್ರಂಥಋಣ


**Bruno Dagens (Ed., Tr.)**: Mayamatam(Sanskrit), Indira Gandhi National Centre for Arts, New Delhi and Motilal Banarasidas Publishers Pvt. Ltd. - Delhi, 1994.

**Acharya, P.K. (Ed.)** : Manasara Series-Vol.III - Sanskrit Text with Critical Notes, 1995.
Vol.IV - An Architecture of Manasara (Translated from original text) - 1994.
Vol.VII - An Encyclopaedia of Hindu Architecture, 1993.
- All published by - Munshiram Manoharlal Publishers Pvt. Ltd. - New Delhi.

**ಸ್ವಾಮಿನಾಥ ಶಿವಾಚಾರ್ಯ. ಜಿ(ಸಂ.)** : ಕಾಮಿಕಾಗಮ(ಪೂರ್ವಭಾಗ) (ಸಂ.), ಮದ್ರಾಸು, ೧೯೭೬.

**ಶಂಕರ ಸೋಮಯಾಜಿ. ಕೆ.ಪಿ.(ಅನು.)** : ನಾರಾಯಣ ನಂಬೂದಿರಿ ಕೃತ ತಂತ್ರಸಮುಚ್ಚಯ, ಶ್ರೀ ಭಗವತ್ಪಾದ ಪ್ರಕಾಶನ, ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ, ಶಿರಸಿ, ೨೦೦೮.

**ಅಪರ್ಣ .ಕೂ.ಸ.** : (ಲೇಖನ) 'ಪದನಿರ್ಣಯ ಅಥವಾ ವಾಸ್ತುಮಂಡಲ', ಇತಿಹಾಸದರ್ಶನ, ಸಂ.೨೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೭.



# ಬೀದರ ಜಿಲ್ಲೆಯ ಬಿಜಾಪುರ ಆದಿಲ್‌ಶಾಹಿಗಳ ಧಾರ್ಮಿಕೇತರ ಕಟ್ಟಡಗಳು

ಪ್ರೊ. ಎಮ್.ಎನ್. ಬೆನ್ನೂರ*

ಕ್ರಿ.ಶ. ೧೪೮೯ರಲ್ಲಿ ಯೂಸುಫ್ ಆದಿಲ್ ಶಾಹಿ ಸ್ವತಂತ್ರವಾದ ಸಾಮ್ರಾಜ್ಯವನ್ನು ದಖ್ಖನ ಭಾರತದಲ್ಲಿ ಸ್ಥಾಪಿಸಿದನು. ಒಟ್ಟು ೯ ಜನ ಸುಲ್ತಾನರು ೨೦೦ ವರ್ಷಗಳ ಕಾಲ ಬಿಜಾಪುರವನ್ನು ರಾಜಧಾನಿ ಮಾಡಿಕೊಂಡು ದಕ್ಷಿಣ ಭಾರತದಲ್ಲಿ ಅನೇಕ ರಾಜ ಮನೆತನಗಳ ಸೋಲಿಸುವುದರ ಮುಖಾಂತರ ದಖ್ಖನದಲ್ಲಿ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು[೧]. ಅದರಲ್ಲಿ ಬೀದರ ಜಿಲ್ಲೆ ಒಂದಾಗಿದೆ. ಈ ಜಿಲ್ಲೆಯಲ್ಲಿ ಅನೇಕ ಧಾರ್ಮಿಕೇತರ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಇವುಗಳ ಬಗ್ಗೆ ೧೪ ಪ್ರಕಟಿತ ಪರ್ಶಿಯನ್ ಮತ್ತು ಅರೆಬೀಕ್ ಭಾಷೆಯ ಶಾಸನಗಳಲ್ಲಿ ದಾಖಲಿಸಿದ್ದಾರೆ. ನನ್ನ ಸಂಶೋಧನಾ ಮಹಾ ಪ್ರಬಂಧದ ವಿಷಯದ ಕುರಿತಂತೆ ಈ ಭಾಗದಲ್ಲಿ ಕ್ಷೇತ್ರ ಕಾರ್ಯ ಕೈಗೊಂಡು, ಆದಿಲ್ ಶಾಹಿಗಳ ಧಾರ್ಮಿಕೇತರ ಕಟ್ಟಡಗಳ ಸಮಗ್ರ ಚರಿತ್ರೆಯ ಪುನರ ರಚನೆಯ ಹಿನ್ನಲೆಯಲ್ಲಿ ಸಂಶೋಧನಾತ್ಮಕ ಲೇಖನವನ್ನು ಸಿದ್ದಪಡಿಸಿದ್ದೇನೆ. ಬೀದರ ಜಿಲ್ಲೆಯಲ್ಲಿ ೧ ನೇ ಅಲಿ ಆದಿಲ್ ಶಾಹಿ, ೨ನೇ ಇಬ್ರಾಹಿಂ ಆದಿಲ್ ಶಾಹಿ ಹಾಗೂ ಮಹಮ್ಮದ ಆದಿಲ್ ಶಾಹಿಗೆ ಸಂಬಧಿಸಿದ ಶಾಸನಗಳು ಬೀದರದಲ್ಲಿ ೪ ಹಾಗೂ ಬಸವ ಕಲ್ಯಾಣದಲ್ಲಿ ೧೦ ಶಾಸನಗಳನ್ನು ಆದರಿಸಿ ಈ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ಧಾರ್ಮಿಕೇತರ ಕಟ್ಟಡಗಳೆಂದರೆ ಪೂಜೆ ಮತ್ತು ಪ್ರಾರ್ಥನೆಗಳು ಮಾಡದೇ ಇರುವಂತಹ ಸ್ಥಳಗಳಾಗಿವೆ. ಉದಾಹರಣೆಗೆ: ಮಸೀದಿ ಮತ್ತು ದರ್ಗಾಗಳು ಧಾರ್ಮಿಕ ಕಟ್ಟಡಗಳಾಗಿವೆ. ಇವುಗಳನ್ನು ಹೊರತುಪಡಿಸಿದ ಕಟ್ಟಡಗಳೇ ಧಾರ್ಮಿಕೇತರ ಕಟ್ಟಡಗಳು. ಕೋಟೆಗಳು, ಕೊತ್ತಲಗಳು, ಅರಮನೆಗಳು, ಬುರುಜುಗಳು, ಆಡಳಿತ ಕಛೇರಿಗಳು, ಸಂಗೀತ ಮಹಲಗಳು, ನ್ಯಾಯಾಲಯಗಳು, ಕೆರೆ–ಬಾವಿ, ಕಾಲುವೆ, ಗೋರಿಗಳು ಮುಂತಾದವುಗಳಾಗಿವೆ[೨].

**ಬೀದರ:** ಕರ್ನಾಟಕ ಉತ್ತರ–ಪೂರ್ವ ಭಾಗದಲ್ಲಿರುವ ಬೀದರ ಜಿಲ್ಲೆಯು ಉತ್ತಮ ಹವಾಮಾನ ಪ್ರಕೃತಿ ಸೌಂದರ್ಯದಿಂದ ಕೂಡಿದೆ. ಇದರ ವಿಸ್ತೀರ್ಣ ೫೪೫೮೧ ಚ.ಕಿ.ಮೀ. ಹೊಂದಿದೆ. ಬಿದಿರೂರುಪುರ, ಮೊಹಮ್ಮದಾಬಾದ, ಬೀದರ, ಜಾಫರಾಬಾದ ಬೀದರ ಎಂದು ಈ ಸ್ಥಳಕ್ಕೆ ಕರೆಯುತ್ತಾರೆ. ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ತಘಲಕ್, ವಿಜಯನಗರ, ಬಹುಮನಿಗಳು, ಆದಿಲ್ ಶಾಹಿಗಳು, ಬರೀದ್ ಶಾಹಿ ಹಾಗೂ ಔರಂಗಜೇಬನ ಆಳ್ವೀಕೆಗೆ ಒಳಪಟ್ಟಿತ್ತು. ೧ನೇ ಅಹಮ್ಮದ ಷಾ ಎಂಬ ಬಹುಮನಿ ಸುಲ್ತಾನ ಕ್ರಿ.ಶ ೧೪೨೪ರಲ್ಲಿ ಗುಲ್ಬರ್ಗಾದಿಂದ–ಬೀದರಗೆ ರಾಜಧಾನಿ ಬದಲಾವಣೆ ಮಾಡಿದ ಬಳಿಕ ಇಲ್ಲಿ ಭದ್ರವಾದ ಕೋಟೆ, ಕೊತ್ತಳ, ಬುರುಜು, ಕಂದಕ, ಕಾಲುವೆ, ಬಾವಿ, ಕೆರೆ, ಟರ್ಕಿಶ್ ಮಹಲ, ತಕ್ತ ಮಹಲ, ಗಗನ ಮಹಲ, ರಂಗಿನ ಮಹಲ, ಚಾಂದಗಿ ಚಬುತರಾ, ಸೋಲಾಕಂಬ ಮಸೀದಿ ಎಂಬ ಕಟ್ಟಡಗಳನ್ನು ನಿರ್ಮಿಸಿದರು. ಈ ಮೇಲಿನ ಕಟ್ಟಡಗಳು ದಖ್ಖನಿ ಹಾಗೂ ಟರ್ಕಿ ಶೈಲಿಯಲ್ಲಿ ನಿರ್ಮಿಸಿದ್ದಾರೆ. ಅರಮನೆ ಹಾಗೂ ದರ್ವಾಜಗಳನ್ನು ಬಿಜಾಪುರದ ಶ್ರೇಷ್ಠ ಸುಲ್ತಾನನಾದ ೨ನೇ ಇಬ್ರಾಹಿಂ ಆದಿಲ್ ಶಾಹಿ ಬೀದರನ್ನು ಗೆದ್ದ ಬಳಿಕ ಜೀರ್ಣೋದ್ದಾರ ಮಾಡಿರುವ ಬಗ್ಗೆ ಮೂರು ಪರ್ಶಿಯನ ಶಾಸನಗಳಲ್ಲಿ ಉಲ್ಲೇಖವಾಗಿವೆ[೩].

ಬೀದರದಲ್ಲಿರುವ ಕೋಟೆ ನಿರ್ಮಾಣ ಕ್ರಿ.ಶ. ೧೪೨೪ ರಿಂದ ೧೪೩೨ರವರೆಗೆ ಕಟ್ಟಲ್ಪಟ್ಟಿದೆ. ಬೀದರದ ಹೊರಕೋಟೆ ೪ ಕಿ.ಮೀ. ಸುತ್ತಳತೆ ಹಾಗೂ ೮ ದರ್ವಾಜಗಳಿಂದ ಕೂಡಿದೆ. ಶಾರ್ಜಾ ದರ್ವಾಜ ಇಲ್ಲಿಯ ಮುಖ್ಯ ದ್ವಾರವಗಿದೆ. ಈ ಕೋಟೆಯಲ್ಲಿ ೩೭ ಬುರುಜಗಳು ಹಾಗೂ ೮ ಬತೇರಿಗಳಿದ್ದು, ಆಳವಾದ ಕಂದಕವಿದೆ. ಒಳಕೋಟೆ ೫ ದರ್ವಾಜಗಳಿಂದ ಕೂಡಿದೆ. ಕೋಟೆಯ ಒಳಆವರಣದಲ್ಲಿ ಸುಂದರವಾದ ಅರಮನೆಗಳು, ಮಸೀದಿಗಳು ಕುಸರಿ ಕೆಲಸ, ಕಬ್ಬಿಣ, ಇಟ್ಟಂಗಿ, ಕಲ್ಲು ಹಾಗೂ ಕುಸರಿ ಕೆಲಸದಿಂದ ನಿರ್ಮಾಣವಾಗಿದೆ.ಇವುಗಳಲ್ಲಿನ ಅನೇಕ ಕಟ್ಟಡಗಳು ಬಿಜಾಪುರದ ೨ನೇ ಇಬ್ರಾಹಿಂ ಆದಿಲ್ ಶಾಹಿಯಿಂದ ಜೀರ್ಣೋದ್ದಾರಗೊಂಡಿವೆ[೪]. ಬಿಜಾಪುರದ ಸುಲ್ತಾನರು ಕ್ರಿ.ಶ. ೧೬೧೮–

* ಮುಖ್ಯಸ್ಥರು, ಇತಿಹಾಸ ವಿಭಾಗ, ಎಸ್.ಟಿ.ಸಿ. ಕಾಲೇಜು, ಬನಹಟ್ಟಿ.

೧೯ರಿಂದ ೧೬೨೮ರವರೆಗೆ ಬೀದರದಲ್ಲಿ ಆಳ್ವಿಕೆ ಮಾಡಿದರು. ಕ್ರಿ.ಶ. ೧೬೧೮-೧೯ರ ಪರ್ಶಿಯನ್ ಭಾಷೆ ಹಾಗೂ ನಸ್ತಲೀಖ್ ಲಿಪಿಯ ಶಾಸನ ಪದ್ಯ ರೂಪದಲ್ಲಿದೆ. ಈ ಶಾಸನ ರಂಗಿನಮಹಲ ಸಮೀಪದ ಪಾಳು ಬಿದ್ದಿರುವ ಅರಮನೆಯಲ್ಲಿ ದೊರೆತಿದೆ. ೨ನೇ ಇಬ್ರಾಹಿಂ ಆದಿಲ್‌ಶಾಹಿ ರಾಜನಾಗಿದ್ದಂತೆಯೂ ಔದರ್ಯದಲ್ಲಿ ಅವನಿಗೆ ಸಮಾನ ರಾದವರು ಯಾರೂ ಇಲ್ಲವೆಂದು ಅವನು ದಖ್ಖನನ್ನು ಗೆದ್ದಂತೆಯೂ ಉಲ್ಲೇಖಿಸುತ್ತದೆ[೪].

ಕ್ರಿ.ಶ. ೧೬೧೯ರಲ್ಲಿ ೨ನೇ ಇಬ್ರಾಹಿಂ ಆದಿಲ್ ಶಾಹಿಯೂ ಬೀದರದ ಒಳಕೋಟೆಯಲ್ಲಿ ನವರಸ ದರವಾಜನ್ನು ನಿರ್ಮಿಸಿದನು. ಇದು ನಗರದ ಮುಖ್ಯ ಪ್ರವೇಶ ದ್ವಾರವಾಗಿದ್ದು ೧೭ ಅಡಿ ಉದ್ದ ೧೨ ಅಡಿ ೬ ಇಂಚು ಅಗಲವಾಗಿದೆ. ಕ್ರಿ.ಶ. ೧೬೫೬ರಲ್ಲಿ ಔರಂಗಜೇಬ ಇದಕ್ಕೆ ಫತ್ತೆ ದರವಾಜ ಎಂದು ಹೆಸರಿಟ್ಟನು[೬].(ಗೆಲವು)

ಕ್ರಿ.ಶ. ೧೬೨೭-೨೮ರ ಪರ್ಶಿಯನ ಭಾಷೆಯ ಶಾಸನ ಅರಮನೆಯ ಅಡಿಗೆ ಮನೆ ಆವರಣದಲ್ಲಿ ದೊರೆತಿದೆ. ಇಬ್ರಾಹಿಂ ಆದಿಲ್ ಶಾಹಿಯ ಅಧಿಕಾರಿ ಅಮರಜಾನ ಎಂಬುವನು ಇಲ್ಲಿಯ ಕೋಟೆ, ಅರಮನೆ, ಮಸೀದಿ ಹಾಗೂ ರಾಜ ಸಭಾಂಗಣ ಕೊಠಡಿಗಳನ್ನು ಜೀರ್ಣೋದ್ದಾರ ಕಾರ್ಯ ವನ್ನು ಮಾಡಿಸಿದನೆಂದು ತಿಳಿಸುತ್ತದೆ. ಟರ್ಕಿ ಮಹಲದ ಎರಡನೇ ಮಹಡಿ ಕಟ್ಟಡದ ಜೀರ್ಣೋದ್ದಾರವನ್ನು ಇಬ್ರಾಹಿಂ ಆದಿಲ್‌ಶಾಹಿ ಮಾಡಿದ್ದಾನೆ[೬].

**ಬಸವ ಕಲ್ಯಾಣ:** ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇಲ್ಲಿನ ಕೋಟೆ ನಿರ್ಮಾಣಗೊಂಡು, ಕಲಚೂರಿಗಳು, ಸೇವಣರು, ವಿಜಯನಗರ ಹಾಗೂ ಆದಿಲ್ ಶಾಹಿಗಳ ಕಾಲದಲ್ಲಿ ಜೀರ್ಣೋದ್ದಾರ ಕಾರ್ಯ ನಡೆಯಿತು. ಇದು ಮೂರು ಸುತ್ತಿನ ಕೋಟೆ ಹಾಗೂ ದೀರ್ಘ ವೃತ್ತಾಕಾರವನ್ನು ಹೊಂದಿದೆ. ಮೊದಲನೆಯ ಹಾಗೂ ಎರಡನೆಯ ಸುತ್ತನ್ನು ಬೆಟ್ಟದ ಬುಡದಲ್ಲಿ ಕಟ್ಟಲಾಗಿದೆ. ಇವೆರೆಡು ಮಧ್ಯದಲ್ಲಿ ಆಳವಾದ ಕಂದಕವಿದೆ. ಕೈಪಿಡಿ ಗೋಡೆಯಲ್ಲಿ ಬಂದೂಕನ್ನು ಇಟ್ಟು ಚಲಾಯಿಸುವಂತೆ ರಂಧ್ರಗಳಿವೆ. ಬೆಟ್ಟದ ಮೇಲಿರುವ ಮೂರನೆಯ ಕೋಟೆ ಹೃದಯದಂತಿದೆ. ಹೋರ ಕೋಟೆಗೆ ಏಳು ಮಹಾದ್ವಾರಗಳಿವೆ. ದಕ್ಷಿಣ ದಿಕ್ಕಿನಲ್ಲಿರುವ ವೇದಿಕೆ ಸುಲ್ತಾನರು ಆನೆಯನ್ನು ಹತ್ತಲು ನೆರವಾಗಿದೆ. ಕೋಟೆಯ ಒಳಭಾಗದಲ್ಲಿ ಕೈಸಾಲೆ, ಕಾರಂಜಿ, ಉದ್ಯಾನ, ರಾಜ ಮಹಲ್, ಹೈದರ ಮಹಲ್, ಕಬೂತರ ಖಾನ (ಪಾರಿವಾಳ ಮನೆ), ಗರಡಿಮನೆ, ಬಾವಿ ಮುಂತಾದ ಕಟ್ಟಡಗಳಿವೆ. ಅರಮನೆ ಪ್ರವೇಶ ದ್ವಾರದ ಎರಡು ಬದಿಯಲ್ಲಿ ವಿಶಾಲವಾದ ವೃತ್ತಾಕಾರದ ಬುರುಜುಗಳಿವೆ. ಇವುಗಳನ್ನು ಕೆಂಪು ಕಲ್ಲು, ಕಬ್ಬಿಣ ಹಾಗೂ ಗಾರೆಯಿಂದ ಅಲಂಕರಿಸಲಾಗಿದೆ. ಎತ್ತರವಾದ ಗೋಡೆ ಇವುಗಳಿಗೆ ಹೊಂದಿಕೊಂಡಂತೆ ೧೪ ಬುರುಜು ಗಳಿವೆ. ಹೊರಗಡೆಯಲ್ಲಿ ೧೧ ಬುರುಜುಗಳು ಮತ್ತು ತೋಪುಗಳಿವೆ. ಹೈದರ ಮಹಲದಲ್ಲಿರುವ ನವಗಂಜ್ ತೋಪು ೭.೯೪ ಮೀಟರ ಉದ್ದವಿದೆ[೮].

ಕ್ರಿ.ಶ. ೧೫೩೩-೬೫ಕ್ಕೆ ಸಂಬಂಧಿಸಿದ ಪರ್ಶಿಯನ್ ಭಾಷೆಯ ಶಾಸನ-ಆದಿಲ್ ಷಾನ ಪುತ್ರ ಮುಬಾರಕ ಷಾ. ಸುಲ್ತಾನನ ಆಜ್ಞೆ ಮೇರೆಗೆ ಕೋಟೆ ಬುರುಜಿನಲ್ಲಿರುವ ತೋಪನ್ನು ನಿರ್ಮಾಣ ಮಾಡಿರುವ ಉಲ್ಲೇಖವಿದೆ[೯].

ಕ್ರಿ.ಶ. ೧೫೬೩-೬೪ರ ೧ನೇ ಆದಿಲ್ ಷಾನ ಕಾಲದ ಪರ್ಶಿಯನ್ ಭಾಷೆ ನಸ್ಖ ಲಿಪಿಯಲ್ಲಿರುವ ಈ ಶಾಸನ ಸಿದ್ದಿ ಬುರುಜಿನ ಗೋಡೆಯಲ್ಲಿದೆ. ಈ ಬುರುಜನ್ನು ರಚಿಸಲು ಅಂದು ಪವಿತ್ರ ಸಮಯವಾಗಿತ್ತು. ಅವನ ಜೀವನ ಪರ್ಯಂತ ಅಭಿವೃದ್ಧಿಯಲ್ಲಿರಲಿ ಮತ್ತು ಕಾಮಿಲ್ ಖಾನನು ಎಂದೆಂದೂ ಜಯಶಾಲಿಯಾಗಿ ಜಯಭೇರಿ ಬಾರಿಸಲಿ. ಖಾನರ ಖಾನನಾದ ನಾಯಿಬ್-ಇ-ಘಬತ್ ಖಾನ್-ಇ- ಆಜಮ್ ರುಸ್ತುಮ ಖಾನನ ಆಜ್ಞೆ ಮೇರೆಗೆ ಕಾಮಿಲ್ ಖಾನ ಸಿದ್ದಿ ಬುರ್ಜನ್ನು ನಿರ್ಮಾಣ ಮಾಡಿದ್ದರ ಬಗ್ಗೆ ಶಾಸನ ದಾಖಲಿಸುತ್ತದೆ[೧೦].

ಕ್ರಿ.ಶ. ೧೫೬೭ರ ಪರ್ಶಿಯನ ಭಾಷೆ ಹಾಗೂ ನಸ್ಖ ಲಿಪಿಯಲ್ಲಿರುವ ೧ನೇ ಆದಿಲ್ ಷಾನ ಕಾಲದ ಈ ಶಾಸನ ನಾಯಿಬ್-ಇ-ಘಬತ ಸಯ್ಯದ ಮಹಮ್ಮದನ ಆಡಳಿತದಲ್ಲಿ ಖಾನರ ಖಾನನಾದ ಕಾಮಿಲ್ ಖಾನ ಮಂಗನಿ ಬುರ್ಜನ್ನು ನಿರ್ಮಿಸಿರುವುದನ್ನು ಉಲ್ಲೇಖಿಸುತ್ತದೆ[೧೧].

ಕ್ರಿ.ಶ. ೧೫೬೮ರ ಪರ್ಶಿಯನ್ ಭಾಷೆಯ ಗದ್ಯ, ಪದ್ಯ ಮಿಶ್ರಿತ ಶಾಸನವು ಹುಸ್ಸೈನಿ ಬುರ್ಜನ್ನು ಸುಲ್ತಾನ ಅಬ್ದುಲ್-ಮುಜಾಪಿಯರ ಷಾ ಅಲೀ ಆದಿಲ್ ಶಾನ ಖಾನರ ಖಾನನಾದ ಕಾಮಿಲ್ ಖಾನ ನಾಯಿಬ್-ಇ-ಘಬತ ಮಲಿಖುಷ್- ಶರ್ಖ ಮಲಿಕನ ಆಜ್ಞೆಯ ಮೇರೆಗೆ ಈ ಬುರ್ಜನ್ನು ನಿರ್ಮಾಣ ಮಾಡಿರುವುದನ್ನು ತಿಳಿಸುತ್ತದೆ[೧೨].

ಪರ್ಶಿಯನ ಭಾಷೆಯ ಬಲ್ಲಮ್ ಬುರ್ಜಿನಲ್ಲಿರುವ ಶಾಸನ ೧ನೇ ಅಲಿ ಆದಿಲ್ ಶಾನ ಖಾನ್ ಕಾಮಿಲ್ ಖಾನ ನಾಯಿಬ್-ಇ-ಘಬತ (ರಾಜ ಪ್ರತಿನಿಧಿ) ನ ಆಡಳಿತಾ ವಧಿಯಲ್ಲಿ ಈ ಬುರ್ಜನ್ನು ೧೯.೩.೧೫೭೩ರಲ್ಲಿ ನಿರ್ಮಾಣ ಮಾಡಿರುವುದನ್ನು ಹಾಗೂ ಕಾಮಿಲ್ ಖಾನ ಎಂದೆಂದಿಗೂ ಜಯವಾಗಲಿ ಎಂದು ತಿಳಿಸುತ್ತದೆ[೧೩].

ಕ್ರಿ.ಶ. ೧೫೮೦ ಏಪ್ರಿಲ್ ೨೦ರಂದು ಪರ್ಶಿಯನ್ ಹಾಗೂ ನಸ್ಖ ಲಿಪಿಯಲಿರುವ ಈ ಶಾಸನ ಚಾಂದನಿ

ಚಬೂತರ ಎಂಬ ಬುರ್ಜನ್ನು ೧ನೇ ಅಲಿ ಆದಿಲ್ ಶಾಹನ ನಾಯಿಬ್-ಇ-ಘಬತ ಮಾಮ್ಲಾ (ಜಿಲ್ಲಾ ರಾಜಪ್ರತಿನಿಧಿ)ನ ಕಾಲದಲ್ಲಿ ಖಾನರ ಖಾನ ದಿಲಾವರ ಖಾನ ಎಂಬುವನು ೬ ಸಾವಿರ ಹೊನ್ನುಗಳ ಖರ್ಚಿನಲ್ಲಿ ಕಲ್ಯಾಣದಲ್ಲಿರುವ ಕೋಟೆ ಗೋಡೆಯನ್ನು ನಿರ್ಮಾಣ ಮಾಡಿರುವುದನ್ನು ದಾಖಲಿಸುತ್ತದೆ[೨೪].

ಕ್ರಿ.ಶ. ೧೫೫೨-೫೩ರ ಪರ್ಶಿಯನ್ ಭಾಷೆಯ ಶಾಸನ ರಾಜಮಹಲ್ಲಿನ ದಕ್ಷಿಣ ಗೋಡೆಯ ಕಮಾನಿನ ಮೇಲಿರುವ ಶಾಸನದ ಉಲ್ಲೇಖದಂತೆ ೨ನೇ ಇಬ್ರಾಹಿಂ ಆದಿಲ್‌ಷಾನ ಅಧಿಕಾರಿ ನಿಜಾಮುದ್ದೀನಖಾನ ರಾಜಮಹಲ ಎಂಬ ಅರಮನೆಯನ್ನು ನಿರ್ಮಾಣ ಮಾಡಿರುವ ವಿಷಯವನ್ನು ತಿಳಿಸುತ್ತದೆ. ಈ ಕಟ್ಟಡ ವಿಶಾಲವಾಗಿದ್ದು, ಅಷ್ಟಕೋನಾಕೃತಿಯ ಕಮಾನುಗಳನ್ನು, ಹಜಾರ ಹಾಗೂ ಕೋಟೆಯನ್ನು ಹೊಂದಿದೆ. ಇದನ್ನು ಗಾರೆ ವಾಸ್ತುಶಿಲ್ಪದಿಂದ ಅಲಂಕರಿಸಲಾಗಿದೆ. ಈ ಕಟ್ಟಡವನ್ನು ಆದಿಲ್‌ಶಾಹಿ ಟರ್ಕಿ ಶೈಲಿಯಲ್ಲಿ ನಿರ್ಮಾಣ ಮಾಡಿದ್ದಾನೆ. ಇದು ಬಿಜಾಪುರದಲ್ಲಿರುವ ಗಗನ ಮಹಲದ ಶೈಲಿಯನ್ನು ಹೊಂದಿದೆ[೨೫].

ಕ್ರಿ.ಶ. ೧೬೪೬ ಫೆಬ್ರುವರಿಯಲ್ಲಿ ಪರ್ಶಿಯನ ಭಾಷೆ ಹಾಗೂ ನಸ್ಖ ಲಿಪಿಯಲ್ಲಿ ಷೆಖ್-ಹುಸೈನ ದಬೀರ್ (ಕಾರ್ಯದರ್ಶಿ) ಮೊಹಮ್ಮದ ಆದಿಲ್ ಶಾನ ಆಜ್ಞೆ ಮೇರೆಗೆ ಶಾಸನ ಬರೆದನು. ಈ ಶಾಸನ ರಾಜಮಹಲದ ಪೂರ್ವ ಗೋಡೆಯಲ್ಲಿ ಬರೆಯಲಾಗಿದೆ. ಈಗಾಗಲೇ ಅಸ್ತಿತ್ವದಲ್ಲಿದ್ದ ಕೋಟೆಯನ್ನು ಭದ್ರಪಡಿಸಿ ಅದಕ್ಕೆ ಬುರ್ಜುಗಳನ್ನು ಹಾಗೂ ಆಳ್ವೇರಿಗಳನ್ನು ಜೋಡಿಸಿರುವ ವಿಚಾರ ಮತ್ತು ಸಿದ್ದಿ ದಿಲಾವರಖಾನನನ್ನು ಕಲ್ಯಾಣದ ಅಧಿಕಾರಿ ಹುದ್ದೆ ನೀಡಿರುವ ಸಂಗತಿಯನ್ನು ತಿಳಿಸುತ್ತದೆ[೨೬].

ಪರ್ಶಿಯನ್ ಭಾಷೆಯ ಶಾಸನ ಕೋಟೆಯಲ್ಲಿರುವ ರಾಜಮಹಲದ ದಕ್ಷಿಣದ ಹೊರ ಗೋಡೆಯಲಿದ್ದು, ಈ ಶಾಸನ ಆದಿಲ್‌ಶಾನ ಅಧಿಕಾರಿ ಖಾನ ಖವಾಸಖಾನ ಕೋಟೆಯ ಬುರ್ಜುಗಳನ್ನು ಕಟ್ಟಿಸಿರುವ ಬಗ್ಗೆ ತಿಳಿಸುತ್ತದೆ. ಈಶಾಸನದ ವಿವರಗಳು ಅಳಸಿ ಹೋಗಿರುವುದರಿಂದ ಇನ್ನುಳಿದ ವಿವರಗಳು ಅಸ್ಪಷ್ಟವಾಗಿವೆ[೨೭].

ಪರ್ಶಿಯನ್ ಭಾಷೆಯ ಶಾಸನವು ಕೋಟೆಯ ಮದ್ದುಗುಂಡಿನ ಮನೆಯ ಬಾಗಿಲ ಮೇಲಿದೆ. ಮಹಮ್ಮದ ಆದಿಲ್ ಶಾಹನ ಕಲ್ಯಾಣ ಜಿಲ್ಲೆ(ಮಾಮ್ಲಾ)ಯ ಹವಾಲ್ದಾರ ಸಿದ್ದಿ ದಿಲಾವರಖಾನ ಎಂಬ ಅಧಿಕಾರಿ ಭದ್ರವಾದ ಅರಮನೆ ಮತ್ತು ಉನ್ನತವಾದ ಕಾವಲು ಗೋಪುರವನ್ನು ನಿರ್ಮಾಣ ಮಾಡಿರುವುದನ್ನು ದಾಖಲಿಸುತ್ತದೆ[೨೮].

ಬೀದರ ಜಿಲ್ಲೆಯಲ್ಲಿರುವ ಆದಿಲ್ ಶಾಹಿಗಳ ಧಾರ್ಮಿಕೇತರ ಕಟ್ಟಡಗಳನ್ನು ವಿಶ್ಲೇಷಿಸಿದಾಗ ಸುಲ್ತಾನರ ಸ್ಥಾನ ಮಾನಗಳು ಎಷ್ಟು ಗೌರವವಿತ್ತೋ ಅಷ್ಟೇ ಗೌರವ ರಾಜ ಪ್ರತಿನಿಧಿಗಳು ಹಾಗೂ ದಂಡನಾಯಕರಿಗೂ ಕೂಡವಿತ್ತು. ಕಾಮಿಲ್ ಖಾನ, ದಿಲವಾರಖಾನ, ಹಾಗೂ ಖವಾಸಖಾನ ಬಸವ ಕಲ್ಯಾಣದ ಮುಖ್ಯ ಅಧಿಕಾರಿಗಳಾಗಿ ಕೋಟೆ, ಬುರುಜು, ಅರಮನೆಗಳನ್ನು ನಿರ್ಮಿಸಿದರು. ಬೀದರದಲ್ಲಿ ೨ನೇ ಇಬ್ರಾಹಿಂ ಆದಿಲ್ ಶಾಹಿ ಕೇವಲ ೧೦ ವರ್ಷಗಳ ಕಾಲ ಆಳ್ವಿಕೆ ಮಾಡಿ, ದಖ್ಖನಿ ಶೈಲಿಯಲ್ಲಿ ಇಲ್ಲಿರುವ ಅರಮನೆ ಗಳನ್ನು ದರವಾಜಾಗಳನ್ನು ನಿರ್ಮಿಸಿದನು. ಇಲ್ಲಿರುವ ಟರ್ಕಿಶ್ ಅರಮನೆಗೆ ಸೋಲಾಕಂಬ ಮಸೀದಿ ಸಮೀಪದ ಬಾವಿ ಯಿಂದ ನೀರು ಸರಬರಾಜು ಮಾಡುವ ತಂತ್ರಜ್ಞಾನ ಟರ್ಕಿ ದೇಶದಲ್ಲಿನ ಶೈಲಿಯನ್ನು ಇಲ್ಲಿ ಅಳವಡಿಸಿದ್ದಾರೆ. ಬಿಜಾಪುರದ ಆದಿಲ್‌ಶಾಹಿಗಳು ಗಾರೆ ಹಾಗೂ ಕುಸುರಿ ವಾಸ್ತುಶಿಲ್ಪಕ್ಕೆ ಮಹತ್ವ ನೀಡಿದರು. ಬಸವ ಕಲ್ಯಾಣದಲ್ಲಿರುವ ಅನೇಕ ಕಟ್ಟಡಗಳು ಟರ್ಕಿ ಮತ್ತು ಬಹುಮನಿ ವಾಸ್ತುಶಿಲ್ಪದಿಂದ ಕೂಡಿವೆ. ೨ನೇ ಇಬ್ರಾಹಿಂ ಆದಿಲ್‌ಶಾಹಿಯೂ ವಿಜಯ ನಗರದ ವಾಸ್ತುಶಿಲ್ಪವನ್ನು ಬಸವಕಲ್ಯಾಣದ ರಂಗಿನ ಮಹಲದಲ್ಲಿ ಅಳವಡಿಸಿದ್ದಾನೆ. ರಂಗಿನಮಹಲ ಮುಂಭಾಗ ದಲ್ಲಿರುವ ಉದ್ಯಾನಗಳು ಬೀದರದಲ್ಲಿರುವ ಉದ್ಯಾನ ಕಾರಂಜಿಗಳನ್ನು ಹೋಲುವಂತಿವೆ. ಈ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಬಸವಕಲ್ಯಾಣ ಮತ್ತು ಬೀದರನ್ನು ಹೊರತುಪಡಿಸಿ ಬೇರೆ ಸ್ಥಳಗಳಲ್ಲಿ ಆದಿಲ್‌ಶಾಹಿಗಳ ಧಾರ್ಮಿಕೇತರ ಕಟ್ಟಡಗಳು ಕಂಡುಬಂದಿರುವುದಿಲ್ಲ.



**ಆಧಾರಸೂಚಿ**


೧. Henry Cuzens: *BIJAPUR-The old capital of the Adilshahi kings-Poona printed at the orphanage press, 1889, p. no. 11.*

೨. Vinay Shrivastava: *Probing New Dimensions of Medieval History-Radha Publications New Delhi 2015,p.no-184*

೩. Proceedings of UGC Sponsored National Level Seminar Seminar on Bahumani Monuments of Bidar Organized by S.I.R.C. Methodist Arts College Bidar. 2013.p.no.106

೪. ಸುಂಕಂ ಗೋವರ್ಧನ, ಕನ್ನಡ ನಾಡಿನ ಪ್ರಮುಖ ಕೋಟೆಗಳು, ಇಳಾ ಮುದ್ರಣ, ಬೆಂಗಳೂರು, ೨೦೧೨, ಪು. ಸಂ. ೮೭.

೫. ಡಾ. ದೇವರಕೊಂಡಾ ರೆಡ್ಡಿ, ***ಬೀದರ*** *ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೮, ೨೦೦೬, ಪು.ಸಂ. ೧೩೨* .

೬ Proceedings of UGC Sponsored National Level Seminar Seminar on Bahumani Monuments of Bidar Organized by S.I.R.C. Methodist Arts College, Bidar, 2013, p.no.108.

೭. ಎಂ.ಯೂಸೀನ್ ಖುದ್ದೂಸಿ–ಸೀತಾರಾಮ ಜಾಗೀರದಾರ್, ***ಕರ್ನಾಟಕದ ಪರ್ಶಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು*** *ಪು.ಸಂ. ೪೨.*

೮. ಸುಂಕಂ ಗೋವರ್ಧನ, ಕನ್ನಡ ನಾಡಿನ ಪ್ರಮುಖ ಕೋಟೆಗಳು, ಇಳಾ ಮುದ್ರಣ, ಬೆಂಗಳೂರು, ೨೦೧೨, ಪು.ಸಂ. ೭೦–೭೧.

೯. ಎಂ. ಯೂಸೀನ್ ಖುದ್ದೂಸಿ, ಸೀತಾರಾಮ ಜಾಗೀರದಾರ್, ***ಕರ್ನಾಟಕದ ಪರ್ಶಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು,*** *ಪು.ಸಂ. ೬೪.*

೧೦. ಡಾ. ದೇವರಕೊಂಡಾ ರೆಡ್ಡಿ, ***ಬೀದರ*** *ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೮, ೨೦೦೬, ಪು.ಸಂ. ೪೧.*

೧೧. ಅದೇ, ಪು.ಸಂ. ೪೧.

೧೨. ಅದೇ, ಪು.ಸಂ. ೪೨.

೧೩. ಅದೇ, ಪು.ಸಂ. ೪೩.

೧೪. ಅದೇ, ಪು.ಸಂ. ೪೩.

೧೫. ಎಂ.ಯೂಸೀನ್ ಖುದ್ದೂಸಿ, ಸೀತಾರಾಮ ಜಾಗೀರದಾರ್, ***ಕರ್ನಾಟಕದ ಪರ್ಶಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು,*** *ಪು.ಸಂ. ೬೯.*

೧೬. ಅದೇ, ಪು.ಸಂ. ೭೦.

೧೭. ಅದೇ, ಪು.ಸಂ. ೭೨.

೧೮. ಅದೇ, ಪು.ಸಂ. ೭೩.



# ದರಿಯಾ ದೌಲತ್ ಬಾಗ್-ಒಂದು ಐತಿಹಾಸಿಕ ಸ್ಮಾರಕ


ನಮಿತಾ.ಪಿ.*


**ಹೈ**ದರ್ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಯ ಅವಧಿಯು ಮೈಸೂರು ಇತಿಹಾಸದಲ್ಲಿ ಒಂದು ಅಚ್ಚಳಿಯದ ಯುಗ. ಇವರ ಆಳ್ವಿಕೆಯ ಅವಧಿ ಅತ್ಯಲ್ಪವಾದರೂ (೧೭೬೧–೧೭೯೯) ಇವರ ಕಾಲದ ಘಟನೆಗಳು ಭಾರತದ ಇತಿಹಾಸದಲ್ಲಿ ಪ್ರಮುಖವಾದುದು. ಇವರ ಸ್ಮರಣೆಯು ಕೇವಲ ಯುದ್ಧಗಳು ಮತ್ತು ಆರ್ಥಿಕ ನೀತಿಗಳಿಗೆ ಸಂಬಂಧಿಸಿದಂತೆ ಮಾತ್ರವಲ್ಲದೇ ಅನೇಕ ಸ್ಮಾರಕಗಳ ನಿರ್ಮಾಣದಲ್ಲೂ ಕಾಣಸಿಗುತ್ತದೆ. ಕಾಲದ ಹೊಡೆತಕ್ಕೆ ಸಿಲುಕಿ ಮತ್ತು ನಿರ್ವಹಣೆಯ ಕೊರತೆಯಿಂದಾಗಿ ಇವರ ಹೆಚ್ಚಿನ ನಿರ್ಮಾಣಗಳು ಹಾನಿಗೊಳಗಾಗಿದ್ದು, ಇಂದು ಕೆಲವೇ ಸ್ಮಾರಕಗಳು ಮಾತ್ರ ಉಳಿದಿವೆ. ಅಂತಹವುಗಳಲ್ಲಿ ದರಿಯಾ ದೌಲತ್ ಬಾಗ್ ಅರಮನೆಯೂ ಒಂದಾಗಿದೆ. ಹೈದರ್ ಮತ್ತು ಟಿಪ್ಪು ಕಾಲದಲ್ಲಿ ನಿರ್ಮಾರ್ಣವಾದ ಐದು ಅರಮನೆಗಳಲ್ಲಿ ದರಿಯಾ ದೌಲತ್ ಬಾಗ್ ಅರಮನೆಯು ಪ್ರಮುಖವಾದದು. ಉಳಿದವು ಬೆಂಗಳೂರಿನ ಟಿಪ್ಪು ಅರಮನೆ, ಶ್ರೀರಂಗಪಟ್ಟಣದ ಲಾಲ್ ಮಹಲ್, ನಂದಿ ಬೆಟ್ಟದ ಬೇಸಿಗೆ ಅರಮನೆ ಹಾಗೂ ಗಂಜಾಂನ ರಂಗ್ ಮಹಲ್.

ದರಿಯಾ ದೌಲತ್ ಅರಮನೆಯು ಮೈಸೂರಿನಿಂದ ೧೪ ಕಿ.ಮೀ. ದೂರದಲ್ಲಿದ್ದು, ಮೈಸೂರು ಮತ್ತು ಬೆಂಗಳೂರು ನಡುವಣ ಹೆದ್ದಾರಿಯಲ್ಲಿ ಕಂಡುಬರುತ್ತದೆ. ಶ್ರೀರಂಗಪಟ್ಟಣ ದ್ವೀಪದ ಗಂಜಾಂನಲ್ಲಿ ಈ ಅರಮನೆ ನಿರ್ಮಾಣವಾಗಿದ್ದು, ಕೋಟೆಯಿಂದ ೧ ಕಿ.ಮೀ. ದೂರದಲ್ಲಿದೆ. ಇದು ಬಹುತೇಕ ಮರದಿಂದ ನಿರ್ಮಾಣವಾದ ಬೇಸಿಗೆ ಅರಮನೆಯಾಗಿದ್ದು, ಇದನ್ನು ಕ್ರಿ.ಶ. ೧೭೮೪ ರಲ್ಲಿ ಟಿಪ್ಪು ಸುಲ್ತಾನನು ನಿರ್ಮಿಸಿದನು. ದರಿಯಾ ದೌಲತ್ ಬಾಗ್ ಎಂದರೆ ಸಮುದ್ರ ಸಂಪತ್ತಿನ ತೋಟ (The garden of the wealth of sea) ಎಂಬರ್ಥ ವಿದ್ದು, ಟಿಪ್ಪು ಸುಲ್ತಾನನು ತನ್ನ ರಾಜ್ಯವನ್ನು ಸಮುದ್ರ ತೀರದ ವರೆಗೂ ವಿಸ್ತರಿಸಿದರ ನೆನಪಿಗಾಗಿ ದರಿಯಾ ದೌಲತ್ ಬಾಗ್ ಅರಮನೆಯನ್ನು ನಿರ್ಮಿಸಿದನು. ಈ ಅರಮನೆಯು ಶ್ರೀರಂಗ ಪಟ್ಟಣದ ಉಪನಗರವಾಗಿದ್ದ ಷಹರ್ ಗಂಜಾಂನ ಉತ್ತರ ಕಾವೇರಿ ನದಿ ತೀರದಲ್ಲಿ ಸುಂದರವಾದ ಉದ್ಯಾನವನದ ಮಧ್ಯೆ ನಿರ್ಮಾಣಗೊಂಡಿದೆ. ಇದು ಟಿಪ್ಪು ಸುಲ್ತಾನನ ವಿಶ್ರಾಂತಿ ಮತ್ತು ವಿಹಾರದ ತಾಣವಾಗಿತ್ತು.

ಅರಮನೆಯು ನಿರ್ಮಾಣವಾಗಿರುವ ಸ್ಥಳದಲ್ಲಿ ಮೊದಲು ನವರಾತ್ರಿ ಹಬ್ಬದ ಉತ್ಸವವು ಜರುಗುತ್ತಿತ್ತೆಂದು ತಿಳಿದುಬರುತ್ತದೆ. ವಿಜಯ ನಗರದ ಅರಸರು ನಡೆಸುತ್ತಿದ್ದ ನವರಾತ್ರಿ ಉತ್ಸವವನ್ನು ವಿಜಯ ನಗರದ ಪ್ರತಿನಿಧಿಯಾದ ಶ್ರೀರಂಗರಾಯನು ಶ್ರೀರಂಗ ಪಟ್ಟಣದಲ್ಲೂ ಆಚರಿಸಲು ವ್ಯವಸ್ಥೆ ಮಾಡಿ, ವಿಜಯ ನಗರ ದಲ್ಲಿದ್ದ ಮಹಾ ನವಮಿ ದಿಬ್ಬದ ಮಾದರಿಯೊಂದನ್ನು ಉತ್ತರ ಕಾವೇರಿ ನದಿ ತೀರದಲ್ಲಿ ಕಟ್ಟಿಸಿದನು. ನಂತರ ಅಧಿಕಾರಕ್ಕೆ ಬಂದ ಮೈಸೂರು ಒಡೆಯರು ದಸರಾ ಹಬ್ಬವನ್ನು ಈ ಮಹಾನವಮಿ ಮಂಟಪದಲ್ಲಿಯೇ ಆಚರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಮುಂದೆ ಹೈದರಾಲಿಯು ಕ್ರಿ.ಶ. ೧೭೬೧ರಲ್ಲಿ ಅಧಿಕಾರಕ್ಕೆ ಬಂದು ಈ ಮಂಟಪವನ್ನು ತನ್ನ ಸೈನಿಕ ಶಿಬಿರವನ್ನಾಗಿ ಮಾಡಿಕೊಂಡ ನೆಂದು ಹೇಳಲಾಗುತ್ತದೆ. ನಂತರ ಟಿಪ್ಪು ಇದೇ ವೇದಿಕೆಯ ಮೇಲೆಯೇ ಅರಮನೆಯನ್ನು ನಿರ್ಮಾಣ ಮಾಡಿಕೊಂಡಿರ ಬಹುದು ಎಂದು ಅಭಿಪ್ರಾಯ ವ್ಯಕ್ತವಾಗಿದೆ. ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

ಟಿಪ್ಪು ಸುಲ್ತಾನನು ಈ ಅರಮನೆಯನ್ನು ಮೊಘಲ್ ರಾಜ್ಯಪಾಲನಾದ ದಿಲ್‌ವರ್‌ಖಾನ್‌ನು ಶಿರಾದಲ್ಲಿ ನಿರ್ಮಿಸಿದ ಅರಮನೆಯ ಮಾದರಿಯಲ್ಲಿಯೇ ನಿರ್ಮಿಸಿದನು. ಇದನ್ನು ಇಂಡೋ-ಸಾರ್ಸೆನಿಕ್ ಶೈಲಿಯಲ್ಲಿ ರಚಿಸಲಾಗಿದ್ದು, ಬಹುತೇಕ ತೇಗದ ಮರದಿಂದ ಕಟ್ಟಲ್ಪಟ್ಟಿದೆ. ಇದು ಬೇಸಿಗೆ ಅರಮನೆ ಯಾಗಿದ್ದರಿಂದ ಕಟ್ಟಡವು ತಂಪಾಗಿರಲೆಂದು ಮರವನ್ನು ಹೆಚ್ಚಾಗಿ ಬಳಸಲಾಗಿದೆ. ಇಲ್ಲಿ ಟಿಪ್ಪುವು ತನ್ನ ಬಿಡುವಿನ ಸಮಯದಲ್ಲಿ ವಿಶ್ರಮಿಸುತ್ತಿದ್ದನು. ಹಾಗೂ ಇಲ್ಲಿ ನೆಲೆಸಿದರೂ ರಾತ್ರಿ ತಂಗದೆ ಶ್ರೀರಂಗಪಟ್ಟಣ ಕೋಟೆಯ ಅರಮನೆಗೆ ಬರುತ್ತಿದ್ದನು. ತನ್ನ ಮುಖ್ಯ ಅತಿಥಿಗಳು ಮತ್ತು ರಾಯಭಾರಿ ಗಳನ್ನು ಸಂದರ್ಶಿಸುತ್ತಿದುದು ಇಲ್ಲಿಯೇ. ಏಕೆಂದರೆ ಶ್ರೀರಂಗಪಟ್ಟಣದಲ್ಲಿ ನಡೆದ ಒಳಸಂಚುಗಳಿಂದಾಗಿ ಕೋಟೆಯ ಹಿತರಕ್ಷಣೆಯ ದೃಷ್ಟಿಯಿಂದ ಹೊರಗಿನವರು ಕೋಟೆಯೊಳಗೆ ಪ್ರವೇಶಿಸಲು ಅವಕಾಶ ನೀಡುತ್ತಿರಲಿಲ್ಲ.


* ಕರ್ನಾಟಕ ಸಂಘ, # ೨೦-೨೩೫, ಕೆ.ಜಿ. ರಸ್ತೆ, ಗಾಂಜಾಂ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ-೫೭೧೪೭೭.

ದರಿಯಾ ದೌಲತ್ ಅರಮನೆಯು ೫ ಅಡಿ ಎತ್ತರದ ಚಚ್ಚೌಕಾಕಾರದ ವೇದಿಕೆಯ ಮೇಲೆ ನಿರ್ಮಾಣವಾಗಿದೆ. ಅರಮನೆಯ ನಾಲ್ಕು ದಿಕ್ಕಿನಲ್ಲೂ ತೆರೆದ ಹೊರಾಂಗಣವಿದೆ, ಮೇಲ್ಛಾವಣೆಗೆ ಆಧಾರವಾಗಿ ದಪ್ಪನಾದ ಕಮಲದಾಕಾರದ ಕೆತ್ತನೆ ಹೊಂದಿದ ಮರದ ಕಂಬಗಳನ್ನು ಸಾಲಾಗಿ ನಿಲ್ಲಿಸಲಾಗಿದ್ದು, ಅರೆಗೋಲಾಕೃತಿಯ ಕಮಾನುಗಳಿಂದ ಕೂಡಿದೆ. ಪಶ್ಚಿಮ ಮತ್ತು ಪೂರ್ವದ ಭಾಗದಲ್ಲಿ ಇಟ್ಟಿಗೆಯ ಗೋಡೆಗಳಿದ್ದು, ಉಳಿದೆರಡು ಕಡೆಗಳಲ್ಲಿ ಸಾಲಂಕೃತ ಕಂಬಗಳ ಮಧ್ಯೆ ವಿಶಾಲವಾದ ದರ್ಬಾರು ಸಭಾಂಗಣವಿದೆ. ದರ್ಬಾರ್ ಸಭಾಂಗಣಕ್ಕೆ ಒಂದು ಮುಂಚಾಚಿದ ಬಾಲ್ಕನಿಯಿದ್ದು, ಟಿಪ್ಪುವು ಅಲ್ಲಿ ರಾಯಭಾರಿಗಳನ್ನು ಮತ್ತು ಅತಿಥಿಗಳನ್ನು ಬರಮಾಡಿಕೊಳ್ಳುತ್ತಿದ್ದನು. ಮೇಲಿನ ಮಹಡಿಯಲ್ಲಿ ಹೊರಚಾಚಿದ ಎರಡು ಮೊಗಸಾಲೆಯಿದ್ದು, ಅಲ್ಲಿಂದ ಕೆಳಗಿರುವ ಭಾಗದ ಎರಡೂ ದಿಕ್ಕುಗಳಲ್ಲಿ ಸುಂದರವಾದ, ವಿಶಾಲವಾದ ಪ್ರೇಕ್ಷಕರ ಸಭಾಂಗಣವಿದೆ. ಕಟ್ಟಡದ ಪೂರ್ವ ಮತ್ತು ಪಶ್ಚಿಮ ಗೋಡೆಗಳ ಮಧ್ಯಭಾಗದಲ್ಲಿ ಮೆಟ್ಟಿಲುಗಳಿದ್ದು, ಮೇಲಂತಸ್ತಿಗೆ ಕರೆದೊಯ್ಯುತ್ತದೆ. ಪೂರ್ವ ಮತ್ತು ಪಶ್ಚಿಮ ಪಾರ್ಶ್ವಗಳಲ್ಲಿ ಮೂರು ಕೊಠಡಿಗಳಿದ್ದು, ಇವು ನವಾಬರ ಮತ್ತು ಜನಾನಾ ಕೊಠಡಿಗಳಾಗಿವೆ.

ಕಟ್ಟಡದ ಪ್ರತಿಯೊಂದು ಭಾಗವನ್ನು ಅಂದರೆ ಗೋಡೆಗಳು, ಛಾವಣಿಗಳು, ಕಂಬಗಳು, ಮೊಗಸಾಲೆಗಲು, ಕಮಾನುಗಳು ಮತ್ತು ಅಡ್ಡಪಟ್ಟಿಕೆಗಳನ್ನು ಸುಂದರವಾಗಿ ವರ್ಣರಂಜಿತ ಕರಕುಶಲತೆಯಿಂದ ಚಿತ್ರಿಸಿರುವುದು ಅರಮನೆಯ ಮುಖ್ಯ ವೈಶಿಷ್ಟ್ಯವಾಗಿದೆ. ಅರಮನೆಯ ಸ್ವಾರಸ್ಯಕರವಾದ ಅಂಶವೆಂದರೆ ಅದರ ಗೋಡೆಗಳು, ಕಂಬಗಳು ಮತ್ತು ಕಮಾನುಗಳನ್ನು ವಿಧವಿಧವಾದ ಬಣ್ಣಗಳಿಂದ ಅಲಂಕಾರ ಮಾಡಿರುವುದು. ಇದು ಟಿಪ್ಪುವಿನ ಬಳಿ ಬಹಳ ಒಳ್ಳೆಯ ಕಲ್ಪನಾಶಕ್ತಿಯುಳ್ಳ ಕಲಾವಿದರು ಇದ್ದರೆಂಬುದನ್ನು ಸೂಚಿಸುತ್ತದೆ. ಇಲ್ಲಿನ ಚಿತ್ರಗಳ ರಚನೆಗೆ ಅವನು ಮರಾಠಿ ಭಾಗಗಳಿಂದ ಸೋಮವಂಶ ಆರ್ಯ ಕ್ಷತ್ರಿಯರನ್ನು (ಮರಾಠಿಗರು) ಕರೆದು ತಂದನೆಂದು ತಿಳಿದುಬರುತ್ತದೆ. ಪ್ರಸ್ತುತ ಗಂಜಾಂನಲ್ಲಿ ಇಂದಿಗೂ ಈ ಜನ ವರ್ಗವು ಕಂಡು ಬರುತ್ತದೆ. ಅರಮನೆಯ ಬೋದಿಗೆಗಳಿಂದ ಹೊರಡುವ ಕಮಾನುಗಳು ಮತ್ತು ಕಮಾನುಗಳ ಎರಡೂ ಬದಿಗಳಲ್ಲಿರುವ ಸುಂದರ ಹೂವುಗಳ ವಿನ್ಯಾಸವು ಮೋಹಕವಾಗಿದ್ದು, ಛಾವಣಿಯನ್ನು ನೋಡಿದರರೆ ಎತ್ತರದಲ್ಲಿ ನೇಯ್ದಿರಿಸಿದ ಪರ್ಷಿಯನ್ ರತ್ನಗಂಬಳಿಯಂತೆ ಕಾಣುತ್ತದೆ. ಬಾಲ್ಕನಿಯು ಮೊಗಲ್ ಕಲೆಯ ಭವ್ಯತೆಯನ್ನೂ, ಸೌಂದರ್ಯವನ್ನು ಉಳಿಸಿಕೊಂಡಿದೆ.

**ವರ್ಣಚಿತ್ರಗಳು:** ದರಿಯಾ ದೌಲತ್ ಬಾಗ್ ಅರಮನೆಯ ಪೂರ್ವ ಮತ್ತು ಪಶ್ಚಿಮ ಗೋಡೆಯು ವರ್ಣಚಿತ್ರಗಳಿಂದ ಅಲಂಕೃತವಾಗಿದ್ದು, ಪಶ್ಚಿಮ ಗೋಡೆಯಲ್ಲಿ ಹೈದರ್ ಮತ್ತು ಟಿಪ್ಪು ಕ್ರಿ.ಶ. ೧೭೮೦–೧೭೮೪ರಲ್ಲಿ ಬ್ರಿಟಿಷರೊಂದಿಗೆ ಹೋರಾಡಿದ ೨ನೇ ಆಂಗ್ಲೋ–ಮೈಸೂರು ಯುದ್ಧದ ದೃಶ್ಯಗಳನ್ನು ವಿಸ್ತಾರವಾಗಿ ರಚನೆ ಮಾಡಲಾಗಿದೆ. ಈ ಗೋಡೆಯ ಮೇಲೆ ವರ್ಣಚಿತ್ರಗಳನ್ನು ನಾಲ್ಕು ವಿಭಾಗವಾಗಿ ಚಿತ್ರಿಸಿದ್ದು, ೧೭೮೦ರಲ್ಲಿ ಕರ್ನಲ್ ಬೇಲಿಯ ನಾಯಕತ್ವದ ಆಂಗ್ಲ ಸೈನ್ಯವನ್ನು ಕಾಂಚಿಪುರದ ಹತ್ತಿರದ ಪೊಲಿಲೂರು ಯುದ್ಧದಲ್ಲಿ ಸೋಲಿಸಿದ ದೃಶ್ಯಗಳನ್ನು ಹಾಗೂ ಎಡಪಾರ್ಶ್ವದ ಅಂಕಣದಲ್ಲಿ ಹೈದರ್ ಮತ್ತು ಟಿಪ್ಪು ನಾತಕತ್ವದ ಸುಸಜ್ಜಿತ ಸೇನೆ ರಣರಂಗಕ್ಕೆ ಹೋರಾಟ ಮೆರವಣಿಗೆಯ ದೃಶ್ಯವನ್ನು, ಬಲಪಾರ್ಶ್ವದಲ್ಲಿ ಆಂಗ್ಲ ಸೈನಕರೊಡನೆ ಕರ್ನಲ್ ಬೇಲಿ ಪಲ್ಲಕ್ಕಿಯಲ್ಲಿ ಆಸೀನನಾಗಿ ದಿಗ್ಭ್ರಮೆಯಿಂದ ಸೈನ್ಯವನ್ನು ನೋಡುತ್ತಿರುವುದು ಮತ್ತು ಆಂಗ್ಲರ ಮದ್ದು ಸಂಗ್ರಹವು ಸ್ಫೋಟಗೊಂಡಿರುವುದನ್ನು ಚಿತ್ರಿಸಲಾಗಿದೆ.

ಪೂರ್ವ ಗೋಡೆಯ ಉದ್ದಗಲಕ್ಕೂ ಏಳು ಸಾಲುಗಳಲ್ಲಿ ಸ್ವತಂತ್ರವಾಗಿ ಚಿತ್ರಿಸಿರುವ ಭಾವ ಚಿತ್ರಗಳಿದ್ದು, ನೂರಕ್ಕಿಂತ ಹೆಚ್ಚು ಚಿತ್ರಗಳಿವೆ. ಇಲ್ಲಿ ನಾನಾ ರೀತಿಯ ವಾಸ್ತುಶಿಲ್ಪದ ಕಟ್ಟಡಗಳು, ಜೊತೆಗೆ ಟಿಪ್ಪು ಸುಲ್ತಾನನ ಸಮಕಾಲೀನ ರಾಜರ ವೈಭವವನ್ನು ಚಿತ್ರಿಸಲಾಗಿದೆ.

ಟಿಪ್ಪು ಸುಲ್ತಾನನು ಕ್ರಿ.ಶ. ೧೭೯೯ರ ೪ನೇ ಆಂಗ್ಲೋ ಮೈಸೂರು ಯುದ್ಧದ ಸಮಯದಲ್ಲಿ ದರಿಯಾ ದೌಲತ್ ಅರಮನೆಯ ಚಿತ್ರಗಳನ್ನು ಭಾಗಶಃ ನಾಶಪಡಿಸಿದನು. ನಂತರ ಬಂದ ಕರ್ನಲ್ ವೆಲ್ಲೆಸ್ಲಿಯು ದರಿಯಾ ದೌಲತ್ ಅರಮನೆಯನ್ನು ಕೆಲಕಾಲ ತನ್ನ ವಾಸದ ಮನೆಯನ್ನಾಗಿ ಮಾಡಿಕೊಂಡಿದ್ದು, ಚಿತ್ರಗಳು ಹಾಳಾಗದಂತೆ ಉಳಿಸಿದನು. ಕ್ರಿ.ಶ. ೧೮೫೫ರಲ್ಲಿ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿ ಅರಮನೆಯಲ್ಲಿ ತಂಗಿದ್ದ ಲಾರ್ಡ್ ಡಾಲ್‌ಹೌಸಿಯು ಮಾಸು ಹೋಗಿದ್ದ ಚಿತ್ರಗಳ ದುರಸ್ತಿ ಹಾಗೂ ನವೀಕರಣ ಕಾರ್ಯವನ್ನು ಕೈಗೊಂಡನು. ಹೀಗೆ ದರಿಯಾ ದೌಲತ್ ಭಿತ್ತಿ ವರ್ಣಚಿತ್ರವು ಎರಡು ಬಾರಿ ಪುನರ್ರಚನೆಗೊಂಡಿದ್ದರೂ ಮೂಲವನ್ನು ಯಥಾಪ್ರಕಾರ ಉಳಿಸಿಕೊಳ್ಳಲಾಗಿದೆ.

ಒಟ್ಟಿನಲ್ಲಿ ಹೈದರ್ ಮತ್ತು ಟಿಪ್ಪು ಕಾಲಾವಧಿಯಲ್ಲಿ ಇಡೀ ಕರ್ನಾಟಕದಲ್ಲಿ ಒಂದೇ ಎಡೆಯಲ್ಲಿ ಇಷ್ಟು ವಿಸ್ತಾರವಾದ ಪ್ರದೇಶದಲ್ಲಿ ಚಿತ್ರರಚನೆ ಆಗಿರುವುದು, ಅದರಲ್ಲಿಯೂ ಯುದ್ಧ ಒಂದರ ಸಮಕಾಲೀನ ಚಿತ್ರಣ ದೊರೆಯುವುದು ಈ ಅರಮನೆಯಲ್ಲಿಯೇ. ದೇಶೀಯ ಕಲೆಯ ಅಧ್ಯಯನದ

ದೃಷ್ಟಿಯಿಂದ ಈ ಅರಮನೆಯು ಮಹತ್ತರವಾದುದು. ವಿವಿಧ ಅರಸರು ಮತ್ತು ಸೈನಿಕರ ಉಡುಗೆ-ತೊಡುಗೆಗಳು, ಯುದ್ಧೋಪಕರಣಗಳು, ಅವರ ರಕ್ಷಣಾ ವ್ಯವಸ್ಥೆ, ಯುದ್ಧದಲ್ಲಿ ತೊಡಗಿಸುತ್ತಿದ್ದ ಪ್ರಾಣಿಗಳು, ಕಾದಾಟದಲ್ಲಿಯ ಚಲನಶೀಲತೆ ಇತ್ಯಾದಿ ಚಿತ್ರಗಳು ಐತಿಹಾಸಿಕ ದಾಖಲೆಯಾಗಿ ಮಹತ್ವ ವೆನಿಸಿದೆ.

**ವಸ್ತು ಸಂಗ್ರಹಾಲಯ:** ದರಿಯಾ ದೌಲತ್ ಬಾಗ್ ಅರಮನೆಯನ್ನು ಕ್ರಿ.ಶ. ೧೯೫೯ರಲ್ಲಿ ರಾಷ್ಟ್ರೀಯ ಸ್ಮಾರಕವೆಂದು ಘೋಷಿಸಿ, ಇಲ್ಲಿ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸ ಲಾಯಿತು. ಇದು ಒಬ್ಬನೇ ವ್ಯಕ್ತಿಯ ವಿವರಗಳುಳ್ಳ ಅತಿ ದೊಡ್ಡ ಸಂಗ್ರಹಾಲಯವೆಂಬ ಹೆಗ್ಗಳಿಕೆಯನ್ನು ಹೊಂದಿದೆ. ಅರಮನೆಯ ವಸ್ತು ಸಂಗ್ರಹಾಲಯದಲ್ಲಿ ಹೈದರ್ ಮತ್ತು ಟಿಪ್ಪುವಿಗೆ ಸೇರಿದ ವರ್ಣಚಿತ್ರಗಳು, ಟಿಪ್ಪು ಯುದ್ಧ ಕೈಗೊಂಡ ದುರ್ಗಗಳ ಚಿತ್ರಗಳು, ನಿಸರ್ಗ ಚಿತ್ರಗಳು, ತೈಲವರ್ಣದ ಭಾವ ಚಿತ್ರಗಳು, ಟಿಪ್ಪುವಿನ ಅಧಿಕಾರಿಗಳು ಹಾಗೂ ಆತನ ಏಳು ಜನ ಗಂಡು ಮಕ್ಕಳ ಭಾವಚಿತ್ರಗಳು ಕಂಡುಬರುತ್ತದೆ. ಇದರ ಜೊತೆಗೆ ಟಿಪ್ಪುವಿನ ಉಡುಗೆ-ತೊಡುಗೆಗಳು, ಬಳಸುತ್ತಿದ್ದ ವಸ್ತುಗಳು, ಯುದ್ಧದ ಸಲಕರಣೆಗಳು ವಿವಿಧ ನಾಣ್ಯಗಳ ಸಂಗ್ರಹವಿದೆ.



## ಪರಾಮರ್ಶನ ಗ್ರಂಥಗಳು


### ಕನ್ನಡ ಗ್ರಂಥಗಳು

೧. ಅನಂತರಾಮು.ಕೆ., ಸಕ್ಕರೆಯ ಸೀಮೆ, ಅನಂತ ಪ್ರಕಾಶನ, ಮೈಸೂರು, ೧೯೮೨.

೨. ಕಲಬುರ್ಗಿ ಎಂ.ಎಂ., ಕರ್ನಾಟಕ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೩. ತೈಲೂರು ವೆಂಕಟಕೃಷ್ಣ. ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ (೩ನೇ ಆವೃತ್ತಿ), ಬಾನು ಪ್ರಕಾಶನ, ಮಂಡ್ಯ, ೨೦೦೨.

೪. ನಾಗೇಗೌಡ.ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ (ಸಂಪುಟ ೮), ಪ್ರಸಾರಾಂಗ, ಮೈಸೂರು, ೧೯೯೮.

೫. ಮಹಮ್ಮದ್ ಷೌಕತ್ ಅಲಿ, ಮೈಸೂರು ಹುಲಿ ಟೀಪೂ ಸುಲ್ತಾನ್, ಶಾಂತಿ ಸಾಹಿತ್ಯ ಪ್ರಕಾಶನ, ಬೆಂಗಳೂರು, ೧೯೬೫.

೬ ಮೊಹಿಬುಲ್ ಹಸನ್ (ಮೂಲ), ಸಮೇತನ ಹಳ್ಳಿ ರಾಮರಾಯ(ಅನು), ಟೀಪೂ ಸುಲ್ತಾನನ ಇತಿಹಾಸ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೮.

೭. ಶಾಮಶಾಸ್ತ್ರಿ ಆರ್., ಗೋವಿಂದ ವೈದ್ಯ ಕೃತ ಕಂಠೀರವ ನರಸರಾಜ ವಿಜಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, .

೮. ಶ್ರೀನಿವಾಸ ಮೂರ್ತಿ ಎಸ್.ಎಲ್., ವಸಂತಶ್ರೀ ವಿ. (ಸಂ), ಜಂಗ್ ನಾಮಾ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, ೨೦೧೧.

೯. ಷೇಕ್ ಅಲಿ ಬಿ., (ಪ್ರ.ಸಂ)., ಕರ್ನಾಟಕ ಚರಿತ್ರೆ, ಸಂಪುಟ-೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

### ENGLISH BOOKS

೧. Diwakara R.R. (ed), Karnataka through ages, Government of Mysore, 1968.

೨. Hayavadana Rao.C., History of mysore (vol-3), Mysore, 1946.

೩. Hayavadana Rao.C., Mysore gazetteer (vol-5), Mysore, 1930.

೪. Krishna .M.H., A guide to srirangapatna, 1985.

೫. Rice B.L., Mysore gazetteer(vol-2), Mysore, 1897.

೬ Irfan Habib, Resistance and modernization under Haider ali and Tippu sultan (confronting colonialism), Tulika publication, New Delhi, 1999.

೭. Sheik Ali B., Tipu Sultan , Geetha publishers, Mysore, 1982.



# ಗುಳೇದಗುಡ್ಡ ಪರಿಸರದಲ್ಲಿ ವಸಾಹತು ಕಾಲದ ಚರ್ಚುಗಳು

**ಲೋಕಣ್ಣ ಭಜಂತ್ರಿ***

**ಗು**ಳೇದಗುಡ್ಡ ಬಾದಾಮಿಯಿಂದ ಈಶಾನ್ಯಕ್ಕೆ ೨೨ ಕಿ.ಮೀ. ದೂರದಲ್ಲಿರುವ ಬಾಗಲಕೋಟೆ ಜಿಲ್ಲೆಯ ಪ್ರಮುಖ ವ್ಯಾಪಾರ ಕೇಂದ್ರ. ಕ್ರಿ.ಶ. ೧೮೧೮ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ ಸರ್ ಥಾಮಸ್ ಮನ್ರೋ ಬೃಹತ್ತಾದ ಸೈನ್ಯದೊಂದಿಗೆ ಬಾದಾಮಿಗೆ ಮುತ್ತಿಗೆ ಹಾಕಿ ಬಾದಾಮಿ, ಗುಳೇದಗುಡ್ಡ ಹಾಗೂ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರ ಬಾಗಲಕೋಟೆ, ಹವೇಲಿ, ಮುರನಾಳ, ಕಲಾದಗಿ ಇತ್ಯಾದಿ ಪ್ರದೇಶಗಳು ಸಂಪೂರ್ಣವಾಗಿ ಕ್ರಿ.ಶ. ೧೮೧೮ ಮೇ ೧೭ರಂದು ಬ್ರಿಟಿಷರ ಕೈವಶವಾದವು. ಗುಳೇದಗುಡ್ಡ ಸಂಪತ್ಭರಿತ ಪ್ರದೇಶವಾಗಿರುವುದರಿಂದ ಬ್ರಿಟಿಷರು ಇಲ್ಲಿ ವಾಸ್ತವ್ಯ ಹೂಡಿ, ಚರ್ಚು, ಶಾಲೆ, ನೇಕಾರಿಕೆಗಾಗಿ ಕೈಮಗ್ಗ ಕೊಠಡಿ, ವಾಸಿಸಲು ಬಂಗಲೆ ಹಾಗೂ ಸುಗಮ ರಸ್ತೆ ಸಂಚಾರಕ್ಕಾಗಿ ಸೇತುವೆಗಳನ್ನು ನಿರ್ಮಿಸಿದರು. ವಸಾಹತು ಕಾಲದಲ್ಲಿ ಅಂದರೆ ಬ್ರಿಟಿಷರ ಆಡಳಿತದ ಅವಧಿಯಲ್ಲಿ ನಿರ್ಮಾಣಗೊಂಡಂತಹ ಗುಳೇದಗುಡ್ಡ ಪ್ರದೇಶದ ಭೌಗೋಳಿಕ ವ್ಯಾಪ್ತಿಗೊಳಪಡುವ ಚರ್ಚುಗಳ ಕುರಿತು ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶವಾಗಿದೆ.

ಕ್ರೈಸ್ತ ಮಿಶನರಿಯಾಗಿದ್ದ ರೆವರೆಂಡ್ ಜಿ.ಕೇಜರ್ ಅವರು ಗುಳೇಗುಡ್ಡದ ಸಮೀಪ ೩ ಕಿ.ಮೀ. ದೂರವಿರುವ ಸುಮಡ್ಡಿ ಎಂಬ ಸ್ಥಳದಲ್ಲಿ ವಾಸ್ತವ್ಯ ಮಾಡಿ ಕ್ರಿ.ಶ. ೧೮೪೯ ಜುಲೈ ೨೨ರಿಂದ ಆಗಸ್ಟ್ ೯ರವರೆವಿಗೆ ಇದ್ದು ಬೈಬಲ್ಲಿನ ಮಥಾಯ್‌ನ ಸುವಾರ್ತೆ ಎಂಬ ಭಾಗದಿಂದ ಗುಳೇದಗುಡ್ಡದಲ್ಲಿ ಕ್ರೈಸ್ತ ಮತದ ಬೋಧನೆ ನೀಡಿದರು. ಕೀಜರ್ ಜೊತೆಗೆ ಜೆ.ಜೆ.ಥೂಮ್ ಮತ್ತು ಕ್ರಿಸ್ಟನ್ ವೈಗ್ಲೆ ಎಂಬ ಸಹಪಾಠಿಗಳಿದ್ದರು.

ಇಲ್ಲಿ ಒಬ್ಬ ಮಿಷನರಿಯು ಬಂದು ವಾಸ ಮಾಡುವುದಾದರೆ ನಾವು ಕ್ರೈಸ್ತರಾಗುತ್ತೇವೆ, ಎಂದು ಗುಳೇದಗುಡ್ಡದ ಐದು ಜನರು ರೆವರೆಂಡ್ ಜಿ.ಕೀಜರಲ್ಲಿ ಮನವಿ ಮಾಡಿಕೊಳ್ಳುತ್ತಾರೆ. ಇದರ ತತ್ಪರಿಣಾಮವಾಗಿ ಕ್ರಿ.ಶ. ೧೮೫೧ರಲ್ಲಿ ಗುಳೇದಗುಡ್ಡದಲ್ಲಿ ಐದು ಜನರಿಂದ ಸಭಾ ಸೇವೆ ಪ್ರಾರಂಭವಾಗಿ ಗುಳೇದಗುಡ್ಡ ಬಾಸೆಲ್ ಮಿಶನ್ ಸಭೆಗೆ ೧೦ ಜನರು ಹಾಗೂ ಇಬ್ಬರು ಮಕ್ಕಳು ಪ್ರಥಮ ಸದಸ್ಯರಾದರು.

## ವೈಗ್ಲೆ ಸ್ಮಾರಕ ಚರ್ಚ್ (ದೇವಾಲಯ)

ರೆವರೆಂಡ್ ಜಿ.ಕೀಜರ್ ಹಾಗೂ ಥೂಮ್ ಗುಳೇದಗುಡ್ಡದಲ್ಲಿ ಸೇವೆ ಸಲ್ಲಿಸಿ ಕ್ರಿ.ಶ. ೧೮೬೦ರಲ್ಲಿ ಮರಳಿ ಯುರೋಪ್‌ಗೆ ಹೋದರು. ಕ್ರಿ.ಶ. ೧೮೭೦ರಲ್ಲಿ ರೆವೆರೆಂಡ ಸಿ. ವೈಗ್ಲೆ ಗುಳೇದಗುಡ್ಡದಲ್ಲಿ ಬಂದು ಕ್ರೈಸ್ತಮತದ ಬೋಧನೆ ಆರಂಭಿಸಿದನು. ಬರಗಾಲದ ಸಮಯದಲ್ಲಿ ಸತತ ಬಿಡುವಿಲ್ಲದ ಸೇವೆಯಲ್ಲಿ ನಿರತರಾಗಿದ್ದರಿಂದ ವೈಗ್ಲೆ ತುಂಬಾ ಜ್ವರದಿಂದ ಬಳಲಿ ಕ್ರಿ.ಶ. ೧೮೭೬ ಡಿಸೆಂಬರ್ ೨೧ರಲ್ಲಿ ನಿಧನ ಹೊಂದಿದನು. ವೈಗ್ಲೆ ಸಮಾಧಿ ಚರ್ಚ್‌ನ ಎಡಭಾಗದಲ್ಲಿ ನಿರ್ಮಿಸಿ, ಈ ಚರ್ಚ್‌ಗೆ ವೈಗ್ಲೆ ಸ್ಮಾರಕ ಚರ್ಚ್ (ದೇವಾಲಯ) ಎಂದು ಕರೆಯಲಾಯಿತು. ಬಾಗಲಕೋಟೆ ಜಿಲ್ಲೆಯಲ್ಲಿಯೇ ೧೮೪೯ರಲ್ಲಿ ಬ್ರಿಟಿಷರು ನಿರ್ಮಿಸಿದ ಪ್ರಥಮ ಚರ್ಚ್ ಇದಾಗಿದೆ. ಬೃಹತ್ತಾದ ಎಂಟು ಕಂಬಗಳನ್ನು ಕೆಂಪು ಮಿಶ್ರಿತ ಕಲ್ಲಿನಿಂದ ನಿರ್ಮಿಸಿದ್ದಾರೆ. ಪ್ರಾರ್ಥನೆಗಾಗಿ ವಿಶಾಲ ಪ್ರಾಂಗಣ, ಬಲಿಪೀಠ, ವೇದಿಕೆ ಎಲ್ಲವೂ ಕಟ್ಟಿಗೆ ಮತ್ತು ಕಲ್ಲಿನಿಂದ ನಿರ್ಮಿಸಿದ್ದಾರೆ. ಬಾಗಿಲು, ಕಿಟಕಿ, ಗಾಜಿನ ಬಳ್ಳಿಯಾಕಾರದಿಂದ ಅಲಂಕೃತ ಗೊಂಡಿದೆ. ಮೇಲ್ಛಾವಣಿಗೆ ಮೊದಲು ಮಂಗಳೂರು ಹೆಂಚು ಉಪಯೋಗಿಸಿದ್ದರು. ಕಲ್ಲಿನ ಕಂಬದಲ್ಲಿಯೇ ವೇದಿಕೆ ನಿರ್ಮಿಸಿರುವುದು ಇಲ್ಲಿ ವಿಸ್ಮಯಕಾರಿಯಾಗಿದೆ. ಚರ್ಚ್ ಸುತ್ತಲೂ ಕಾಂಪೌಂಡ್ ನಿರ್ಮಿಸಿ ಇತ್ತೀಚಿಗೆ ೨೦೧೦–೧೧ರಲ್ಲಿ ಜೀರ್ಣೋದ್ಧಾರಗೊಂಡು ವೈಗ್ಲೆ ಚರ್ಚ್ ಕಂಗೊಳಿಸುತ್ತಿದೆ. ವೈಗ್ಲೆ ಸ್ಮಾರಕ ಚರ್ಚ್‌ನ ಹತ್ತಿರದಲ್ಲಿ ೦೧–೦೩–೧೮೫೮ರಲ್ಲಿ ಬಾಸೆಲ್ ಮಿಶನ್ ಶಾಲೆಯನ್ನು ಸಹ ಬ್ರಿಟಿಷರು ಪ್ರಾರಂಭಿಸಿದರು. ಬಾಸೆಲ್ ಮಿಶನ್ ಶಾಲೆ ಕಟ್ಟಡ ಇಂದಿಗೂ ಸುವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಇಂದಿಗೂ ಸಹ ವಿದೇಶಿ ಕ್ರೈಸ್ತರು ಈ ಚರ್ಚಗೆ ಬಂದು ಭೇಟಿ ಕೊಡುತ್ತಾರೆ.

## ಐಸ್ಪೆಲ್ಡರ್ ಸ್ಮಾರಕ ಚರ್ಚ್ (ದೇವಾಲಯ)

ಗುಳೇದಗುಡ್ಡದಿಂದ ೩ ಕಿ.ಮೀ. ದೂರದ ಸುಮಡ್ಡಿಯಲ್ಲಿ ಕ್ರಿ.ಶ. ೧೯೦೩ರಲ್ಲಿ ಬಾಸೆಲ್ ಮಿಷೆನ್ ಬಾಲಕಿಯರ

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೭೬.

ವಸತಿಶಾಲೆ ಹಾಗೂ ಐಸ್ವೆಲ್ಡರ್ ಸ್ಮಾರಕ ಚರ್ಚ್‌ನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಸುಮಡ್ಡಿ ಸುಂದರ ಪರಿಸರವನ್ನು ಒಳಗೊಂಡ ಎತ್ತರದ ಪ್ರದೇಶವಾಗಿರುವುದರಿಂದ ಬ್ರಿಟಿಷ್ ಅಧಿಕಾರಿಗಳು ಇಲ್ಲಿ ಬಂಗಲೆ, ಚರ್ಚ್, ಶಾಲೆ, ವಸತಿ ನಿಲಯಗಳನ್ನು ಸಹ ಇಲ್ಲಿ ನಿರ್ಮಿಸಿದ್ದಾರೆ. ಐಸ್ವೆಲ್ಡರ್ ಸ್ಮಾರಕ ಚರ್ಚ್ ಇಂದು ಜೀರ್ಣೋದ್ಧಾರಗೊಂಡು ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಸಾಮೂಹಿಕ ಪ್ರಾರ್ಥನೆಗಾಗಿ ಬೃಹತ್ತಾದ ಪ್ರಾಂಗಣ, ಬಲಿಪೀಠ, ವೇದಿಕೆ, ಸಿಲುಬೆ ಎಲ್ಲವನ್ನು ಒಳಗೊಂಡಿದ್ದು, ಚರ್ಚ್ ಸುತ್ತಲೂ ಕಾಂಪೌಂಡ್ ನಿರ್ಮಿಸ ಲಾಗಿದೆ. ಬ್ರಿಟಿಷ್ ಬಂಗಲೆ ಅವಸಾನದಂಚಿನಲ್ಲಿದೆ. ವಸತಿ ಶಾಲೆಯು ಅತ್ಯಂತ ತ್ವರಿತಗತಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯನ್ನು ನೀಡುವ ಮೂಲಕ ಸಮಾಜ ಸೇವೆಯಲ್ಲಿ ನಿರತವಾಗಿದೆ. ಗುಳೇದಗುಡ್ಡದ ವೈಗ್ಲೆ ಸ್ಮಾರಕ ಚರ್ಚ್ ಹಾಗೂ ಸುಮಡ್ಡಿಯ ಐಸ್ವೆಲ್ಡರ್ ಚರ್ಚ್ ಈ ಎರಡು ಚರ್ಚ್‌ಗಳು ದಕ್ಷಿಣ ಭಾರತ ಕ್ರೈಸ್ತ ಸಭೆ (ಸಿ.ಎಸ್.ಐ.) ಹಾಗೂ ಉತ್ತರ ಕರ್ನಾಟಕ ಕ್ರೈಸ್ತ ಸಭಾ ಪ್ರಾಂತ (ಕೆ.ಎನ್.ಡಿ)ಕ್ಕೆ ಸೇರಿದ ಪ್ರೊಟೆಸ್ಟೆಂಟ್ ಪಂಗಡಕ್ಕೆ ಸಂಬಂಧಿಸಿವೆ. ಬ್ರಿಟಿಶರು ಊರ ಹೊರಗೆ, ಎತ್ತರವಾದ ಪ್ರಶಾಂತ ಸ್ಥಳ, ನದಿಗೆ ಹತ್ತಿರವಾಗುವ ಸ್ಥಳಗಳಲ್ಲಿ ನಿರೀಕ್ಷಣಾ ಮಂದಿರ, ಬಂಗಲೆ, ಚರ್ಚ್, ಶಾಲೆಯನ್ನು ನಿರ್ಮಿಸುವ ಮೂಲ ಉದ್ದೇಶ ಏನಾಗಿತ್ತು? ಎಂಬುದು ಇಲ್ಲಿ ವಿವೇಚಿಸಬೇಕಿದೆ. ಅಂದರೆ ಬ್ರಿಟಿಷರು ತಮ್ಮ ಅಧಿಕಾರ ಪ್ರಭುತ್ವದ ಯೋಜನೆಗಳು, ಸ್ಥಳೀಯರಿಗೆ ಗೊತ್ತಾಗದ ರೀತಿಯಲ್ಲಿ ಗುಪ್ತವಾಗಿ ರೂಪಿಸುವ ಉದ್ದೇಶವಿದ್ದಿರಬಹುದು.

**ಸೆಂಟ್ ಝೇವಿಯರ್ಸ್ ಚರ್ಚ್**

ಗುಳೇದಗುಡ್ಡದಿಂದ ೬ ಮೈಲು (೯.೬ ಕಿ.ಮೀ) ದೂರದ ಕಟಗಿನಹಳ್ಳಿ(ಆಸಂಗಿ)ಯಲ್ಲಿ ಕ್ರಿ.ಶ. ೧೮೬೩ರಲ್ಲಿ ಸೆಂಟ್ ಝೇವಿಯರ್ಸ್ ಚರ್ಚ್ ಸ್ಥಾಪಿಸಲಾಯಿತು. ನಂತರದಲ್ಲಿ ಗುಳೇದಗುಡ್ಡ ಉಪಠಾಣ್ಯಕ್ಕೆ ಈ ಚರ್ಚ್ ಸೇರಿಸಲಾಯಿತು. ಇದು ಕ್ಯಾಥೋಲಿಕ್ ಪಂಗಡಕ್ಕೆ ಸೇರಿದೆ. ಕ್ರಿ.ಶ. ೧೯೧೫ರಲ್ಲಿ ಫಾ॥ ಫ್ರಾಂಕನ್ ಕ್ಯಾಥೋಲಿಕ್ ಸಭೆಗೆ ಬುನಾದಿ ಹಾಕಿದ ನಂತರ ಫಾ॥ ಜಾರ್ಜ್ ಡೇಸಾರವರು ಹಳ್ಳಿಗಳಿಗೆ ಹೋಗಿ ವಿದ್ಯೆ ಹೇಳಿ ಬಡವರ ಸೇವೆ ಮಾಡುತ್ತಾ ಆರೋಗ್ಯಕೇಂದ್ರ ನಿರ್ಮಾಣ, ಶಾಲೆಗಳ ಆರಂಭ ಇತ್ಯಾದಿ ಸಮಾಜ ಸೇವೆಯ ಕಾರ್ಯದಲ್ಲಿ ತೊಡಗಿದರು. ಕೆಂಪು, ಕಪ್ಪು ಕಲ್ಲಿನಿಂದ ನಿರ್ಮಿಸಿದ ಸೆಂಟ್ ಝೇವಿಯರ್ಸ್ ಚರ್ಚ್ ಇಂದು ಜೀರ್ಣೋದ್ಧಾರಗೊಂಡು ಹೊಸ ಶೈಲಿಯಿಂದ ಕಂಗೊಳಿಸು ತ್ತಿದೆ. ಬಲಿಪೀಠ ಅಲಂಕೃತಗೊಂಡಿದ್ದು ಶಿಲುಬೆ ಇದೆ. ವೇದಿಕೆಯ ಎಡಬಲಕ್ಕೆ ಮೂರ್ತಿಶಿಲ್ಪಗಳು ಸಾಮೂಹಿಕ ಪ್ರಾರ್ಥನೆಗೆ ವಿಶಾಲ ಸಭಾಂಗಣ ಸುವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ. ಗೋಡೆ, ಕಿಟಕಿ, ಬಾಗಿಲು ಮೇಲ್ಛಾವಣಿ ಎಲ್ಲವೂ ಆಧುನಿಕ ಶೈಲಿಗೊಳಪಟ್ಟು ಅಲಂಕೃತಗೊಂಡಿವೆ. ಮೋಸಾಯಿಕ್ ಕಲಾಶೈಲಿಯಲ್ಲಿ ನಿರ್ಮಿಸಿದಂತಹ ಚರ್ಚ್ ಇದಾಗಿದೆ. ಸೆಂಟ್ ಝೇವಿಯರ್ಸ್ ಶಾಲೆಯ ಆವರಣದಲ್ಲಿಯೇ ಚರ್ಚ್ ಇರುವುದು ವಿಶೇಷ. ಕ್ರೈಸ್ತಮತದ ಪ್ರೋಟೆಸ್ಟೆಂಟ್ ಮತ್ತು ಕ್ಯಾಥೋಲಿಕ ಎರಡು ಪಂಗಡಕ್ಕೆ ಸೇರಿದ ಚರ್ಚ್‌ಗಳು ಗುಳೇದಗುಡ್ಡದಲ್ಲಿ ನಿರ್ಮಾಣಗೊಳ್ಳಲು ಕಾರಣ ಏನಿರ ಬಹುದು? ಎಂಬ ಪ್ರಶ್ನೆ ಕಾಡದೇ ಇರಲಾರದು.

ಬಾಗಲಕೋಟೆ ಜಿಲ್ಲೆಯಲ್ಲಿ ಹೆಚ್ಚಾಗಿ ಬಾದಾಮಿ ತಾಲೂಕಿನ ಹಳ್ಳಿಗಳಾದ ಮುಷ್ಟಿಗೇರಿ, ಆಡಗಲ, ಪಟ್ಟದಕಲ್ಲು, ಕಟಗಿನಹಳ್ಳಿ (ಆಸಂಗಿ), ಹಲಕುರ್ಕಿ, ಸುಮಡ್ಡಿ, ಗುಳೇದಗುಡ್ಡ, ಚಿಕನಾಳ ಈ ಎಲ್ಲ ಸ್ಥಳಗಳಲ್ಲಿ ಮಾತ್ರ ಚರ್ಚಗಳು ಇವೆ. ಅದರಂತೆ ಬಾಗಲಕೋಟೆಯಲ್ಲಿ ಎರಡು ಚರ್ಚ್, ಹುನುಗುಂದ ತಾಲೂಕಿನ ಕರಡಿ ಗ್ರಾಮದಲ್ಲಿ ಒಂದು ಚರ್ಚ್ ಇದೆ. ಬ್ರಿಟಿಷ್‌ರ ಪ್ರಭುತ್ವ ಬಾಗಲಕೋಟೆ, ಹುನಗುಂದ, ಬಾದಾಮಿ ತಾಲೂಕಿನಲ್ಲಿ ಹೆಚ್ಚಾಗಿದ್ದು, ಮುಧೋಳ ಘೋರ್ಪಡೆ ಸಂಸ್ಥಾನಿಕರು ಹಾಗೂ ಜಮಖಂಡಿ ಪಟವರ್ಧನ ಸಂಸ್ಥಾನಿಕರ ಆಡಳಿತ ಈ ಭಾಗದಲ್ಲಿದ್ದು, ಬ್ರಿಟಿಷರ ಪರವಾಗಿದ್ದುದರಿಂದ ಮುಧೋಳ, ಜಮಖಂಡಿ, ಬೀಳಗಿ ತಾಲೂಕಿನಲ್ಲಿ ಚರ್ಚ್‌ಗಳನ್ನು ನಿರ್ಮಾಣ ಮಾಡಲು ಅಸಾಧ್ಯವಾಗಿರಬಹುದು. ಈ ಎರಡು ಸಂಸ್ಥಾನಿಕರು ಅಪ್ಪಟ ಮರಾಠ ಆಡಳಿತ ವೈಖರ್ಯದಿಂದ ಕೂಡಿದ್ದು ಹಿಂದುತ್ವವಾದಿಗಳಾಗಿರುವುದರಿಂದ ಚರ್ಚ್ ಗಳನ್ನು ಸ್ಥಾಪಿಸಲು ಬ್ರಿಟಿಷರಿಗೆ ಅವಕಾಶ ನೀಡದೆ ಇದ್ದಿರ ಬಹುದು ಎಂದು ಊಹಿಸಬಹುದು. ಕ್ರೈಸ್ತಮತದ ಪ್ರಚಾರ ಮಾಡಲು, ಸ್ಥಳೀಯ ಬ್ರಿಟಿಶ್ ಅಧಿಕಾರಿಗಳು ಪ್ರಾರ್ಥನೆಗಾಗಿ, ಜೊತೆಗೆ ಸಾಮಾಜಿಕ ಕಳಕಳಿ, ಸಮಾನತೆ ತತ್ವ ಪಾಲಿಸಲು ಚರ್ಚಗಳನ್ನು ಇಲ್ಲಿ ನಿರ್ಮಿಸಲು ಮೂಲ ಉದ್ದೇಶಗಳನ್ನು ಇಟ್ಟುಕೊಂಡು ಬ್ರಿಟಿಶರು ಕಾರ್ಯಪ್ರವೃತ್ತರಾದರು.

ಬಾದಾಮಿಯಲ್ಲಿ ನೀಲಕಂಠ ಸುಬೇದಾರ ಮೇಲೆ ಬ್ರಿಟಿಶರು ದಾಳಿ ಮಾಡಿ ಈ ಪ್ರದೇಶಗಳೆಲ್ಲವನ್ನು ವಶಪಡಿಸಿ ಕೊಂಡರು. ಪುನಃ ಸುಬೇದಾರ ಬಂಡೇಳಬಾರದು ಎಂಬ ದೂರದೃಷ್ಟಿ ಇಟ್ಟುಕೊಂಡು ಗುಳೇದಗುಡ್ಡ, ಬಾದಾಮಿ ಪ್ರದೇಶ ಗಳಲ್ಲಿ ಸಮಾಜ ಸೇವೆಗೆ ಮುಂದಾದರು. ಈ ಸಮಯದಲ್ಲಿ ಅನೇಕ ದಲಿತರು, ಅಂದರೆ ತಳಸಮುದಾಯದ ಜನರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರು. ಗುಳೇದಗುಡ್ಡ ಪ್ರದೇಶ ದಲ್ಲಿ ಇರುವಂತಹ ಕ್ರೈಸ್ತರು ಯಾರು ಸಹ ಮೂಲ ಕ್ರೈಸ್ತರಲ್ಲ. ಆದರೆ ಮೂರ್‍ನಾಲ್ಕು ತಲೆಮಾರಿನಿಂದೀಚೆ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದವರಾಗಿದ್ದಾರೆ. ಇಂದಿಗೂ ಸಹ ಇವರ ಧಾರ್ಮಿಕ ಆಚರಣೆಗಳು ಕ್ರೈಸ್ತಧರ್ಮಕ್ಕನು ಸಾರವಾಗಿಯೇ



ಸೆಂಟ್ ಝೇವಿಯರ್ಸ್ ಚರ್ಚ್, ಗುಳೇದಗುಡ್ಡ



ಐಸ್ಬೆಲ್ಡರ್ ಸ್ಮಾರಕ ದೇವಾಲಯ, ಸುಮಡ್ಡಿ




ವೈಗ್ಲೆ ಸ್ಮಾರಕ ದೇವಾಲಯ, ಗುಳೇದಗುಡ್ಡ



ವೈಗ್ಲೆ ಸ್ಮಾರಕ ದೇವಾಲಯ ಪ್ರಾಂಗಣ, ಗುಳೇದಗುಡ್ಡ

ನೆರವೇರುತ್ತವೆ. ಪ್ರಸ್ತುತ ದಿನಗಳಲ್ಲಿ ಸಾಮೂಹಿಕ ವಿವಾಹ, ಆರೋಗ್ಯ ಶಿಬಿರಗಳನ್ನು ಏರ್ಪಡಿಸುವುದು, ಬಡಮಕ್ಕಳಿಗೆ ಶಿಕ್ಷಣ ಇತ್ಯಾದಿ ಸಮಾಜ ಸೇವೆಯ ಕಾರ್ಯಕ್ರಮಗಳನ್ನು ಈ ಚರ್ಚುಗಳು ಹಮ್ಮಿಕೊಂಡು ಬರುತ್ತಿವೆ.

[ಪ್ರಬಂಧ ಸಿದ್ಧಪಡಿಸಲು ಮಾರ್ಗದರ್ಶನ ಮಾಡಿದ ಡಾ. ವಾಸುದೇವ ಬಡಿಗೇರ ಗುರುಗಳಿಗೆ ಹಾಗೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಕರಿಸಿದ ಗುಳೇದಗುಡ್ಡ ಬಾಸೆಲ್ ಮಿಷನ್ ಪ್ರಾಥಮಿಕ ಶಾಲೆಯ ಮುಖ್ಯ ಗುರುಮಾತೆಯರಾದ ಶ್ರೀಮತಿ ಶಾಂತಾ ಎ. ಕರಡಿಗುಡ್ಡ, ಡಾ. ಸಂಗಮೇಶ ಕಲ್ಯಾಣಿ, ಡಾ. ವಿ.ಎ. ಬೆನಕನಾಳ, ಹಾಗೂ ಸಹೋದರರಾದ ಭುಜಂಗ, ಶ್ರೀಕಾಂತ, ವಿಠ್ಠಲ, ಕೃಷ್ಣಾ, ದುರಗಣ್ಣ ಇವರುಗಳನ್ನು ಪ್ರೀತಿಯಿಂದ ನೆನೆಯುತ್ತೇನೆ]

## ಗ್ರಂಥಋಣ

೧. ಮುನಿಸ್ವಾಮಿ ಆರ್., ೧೯೯೯, **ವಿಜಾಪುರ ಜಿಲ್ಲೆ (ಬಾಗಲಕೋಟೆ ಜಿಲ್ಲೆಯು ಸೇರಿದಂತೆ) ಗ್ಯಾಸೆಟಿಯರ್**, ಭಾರತ ಸರ್ಕಾರ, ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೨. Combell James Macnabb(Ed), 1884, **Bijapur District Gazetteer's**, Bombay.

೩. ಮಹಾದೇವ ಬಣಕಾರ, ೧೯೮೬, **ಆಂಗ್ಲರ ಆಡಳಿತದಲ್ಲಿ ಕನ್ನಡ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪. ವೆಂಕಟರಂಗೋ ಕಟ್ಟಿ (ಸಂ), ೧೮೯೩, **ಬಾಂಬೆ ಕರ್ನಾಟಕ ಗ್ಯಾಸೆಟಿಯರ್**, ಮುಂಬೈ.

೫. ದೇವರಕೊಂಡಾ ರೆಡ್ಡಿ (ಸಂ), ೨೦೦೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯**, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬ ತಲ್ವಾಡಿ ಜಿ.ಎಸ್., ೧೯೯೯, **ಕರ್ನಾಟಕದ ಚರ್ಚುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಸ್ವಾಮಿ ಡಾ. ಐ. ಅಂತಪ್ಪ, ೨೦೦೧, **ಉತ್ತರ ಕರ್ನಾಟಕದಲ್ಲಿ ಕ್ರೈಸ್ತ ಧರ್ಮದ ಉಗಮ (೧೮೦೦ಕ್ಕೂ ಹಿಂದೆ)**, ಕಥೋಲಿಕ ಕ್ರೈಸ್ತರ ಕನ್ನಡ ಸಾಹಿತ್ಯ ಸಂಘ, ಬೆಂಗಳೂರು.

೨೦

# ಬಹುಮನಿ ಸುಲ್ತಾನ್ ಫಿರೋಜಶಾಹ ನಿರ್ಮಿಸಿದ ಹೊಸ ಬೇಸಿಗೆ ರಾಜಧಾನಿ : ಫಿರೋಜಬಾದ್

**ಪ್ರೊ. ಶಾಶ್ವತಸ್ವಾಮಿ ಮುಕ್ಕುಂದಿಮಠ***

ಬಹುಮನಿ ಸಲ್ತಾನರಲ್ಲಿ ಅತ್ಯಂತ ಪ್ರಬಲಶಾಲಿ ಫಿರೋಜಶಾಹ (೧೩೭೭-೧೪೨೨) ಸುಲ್ತಾನ್ ೨೫ ವರ್ಷಗಳ ಕಾಲ ಆಳಿದ ಅವಧಿಯಲ್ಲಿ ಆತನು ಬಹಮನಿ ರಾಜ್ಯದ ಅಭಿವೃದ್ಧಿಗೆ ಹೆಚ್ಚು ಗಮನಹರಿಸಿದ್ದನು. ದಕ್ಕನ ಪ್ರದೇಶ ಆತನ ಸ್ವಾಧೀನದಲ್ಲಿ ಇತ್ತು. ವಿಜಯನಗರದ ವಶದಲ್ಲಿದ್ದ ದೊ-ಆಬ್ (ರಾಯಚೂರು-ಮುದುಗಲ್) ಪ್ರದೇಶವನ್ನು ಕಸಿದುಕೊಂಡು ಕೃಷ್ಣ ನದಿಯವರೆಗೆ ರಾಜ್ಯವನ್ನು ವಿಸ್ತರಿಸಿದನು. ಫಿರೋಜಶಾಹನು ಉದಾರಿ, ಧರ್ಮಭೀರು, ಅನೇಕ ಭಾಷಾವಿಶಾರದನು, ರಸಿಕನು ಹಾಗೂ ನೀತಿವಂತನಾಗಿದ್ದನು. ಇವುಗಳಲ್ಲದೆ, ಫಿರೋಜಶಾಹನಿಗಿರುವ ಬಹುಭಾಷಾ ಪಾಂಡಿತ್ಯ, ಕಾವ್ಯಾಭಿರುಚಿ, ಸ್ವತಃ ಕಾವ್ಯರಚನೆಯ ಪರಿಣಿತಿ ಇತ್ಯಾದಿ ಗುಣಗಳನ್ನು ಫರಿಶ್ತಾ ಬಹುವಾಗಿ ವರ್ಣಿಸುತ್ತಾನೆ. "ಆತನು ಪ್ರಪಂಚದ ಬಹಳಷ್ಟು ಭಾಷೆಗಳನ್ನು ಬಲ್ಲವನಾಗಿದ್ದ ಮತ್ತು ಪ್ರತಿ ದೇಶದ ಪ್ರಜೆಯೊಂದಿಗೆ ಅತನ ದೇಶದ ಭಾಷೆಯಲ್ಲಿಯೆ ಮಾತನಾಡುತಿದ್ದ. ಆತನ ಸ್ಮರಣಾ ಶಕ್ತಿ ಅದ್ಭುತವಾಗಿತ್ತು. ಒಮ್ಮೆ ಕೇಳಿದ ಮಾತನ್ನು ಇಡೀ ಜೀವಂತ ಮರೆಯುತ್ತಿರಲಿಲ್ಲ. ಆತನಿಗೆ ಅಧಿಕೃತ ಕವಿಗಳ ದ್ವಿಪದಿಗಳು ಚನ್ನಾಗಿ ಕಂಠಪಾಠವಾಗಿದ್ದವು. ಅವನು ಸ್ವತಃ ದ್ವಿಪದಿಯನ್ನು ಹೇಳಲು ಪ್ರಯತ್ನಿಸುತ್ತಿದ್ದ. ಅವನು ಎಲ್ಲ ವಿದ್ಯೆಗಳಲ್ಲಿ ಅಭಿರುಚಿ ಹೊಂದಿದವನಾಗಿದ್ದ. ವಿಶೇಷವಾಗಿ ಕುರಾನ್, ವಿಶ್ಲೇಷಣೆ, ವೈದ್ಯಕೀಯ ತತ್ವಗಳು, ಭೌತಿಕ ಹಾಗೂ ಆಧ್ಯಾತ್ಮ ಶಾಸ್ತ್ರಗಳಲ್ಲಿ ಆಸಕ್ತಿಹೊಂದಿದ್ದ. ಸೂಫಿ ಸಂತರ ತಂತ್ರಗಳಲ್ಲಿಯೂ ಈತ ಅಭಿರುಚಿ ಹೊಂದಿದ್ದ. ಈತನು ಓದುವ ವಿಶೇಷ ಗ್ರಂಥಗಳಲ್ಲಿ ಜಾಹಿದಿ, ತರಹೇತಜಕಿರಾ, ಫನ್ನೆರಿಯಾಬೆ (ಗಣಿತ ಶಾಸ್ತ್ರಕ್ಕೆ ಸಂಬಂಧಿಸಿದ ಪಟ್ಟಿ) ಶರಹ ಮಕಾಸಿದ ಕಲಾಂ, ಅಕ್ಲಿದನ್, ಇಲ್ರಮೆ ಹಿಂದಸಾ (ರೇಖಾ ಗಣಿತ) ಮತ್ತು ಇಲ್ವ್-ಎ ಮಾಧಿ ಬಯಾನ್ ಆಗಿದ್ದವು: ಫಿರೋಜ್‌ಶಾಹ ತನ್ನ ಜ್ಞಾನಭಂಡಾರದಿಂದ ಎಲ್ಲರ ಮನಸನ್ನು ಶ್ರೀಮಂತಗೊಳಿಸುತ್ತಿದ್ದ."[೧]

ಪ್ರಖರ ಪಂಡಿತನಾಗಿದ್ದ ಫಿರೋಜ್‌ಶಾಹ ಅಪ್ರತಿಮ ಯೋಧನಾಗಿದ್ದನು. ತನ್ನ ಪರಾಕ್ರಾಮದಿಂದ ಬಹಮನಿ ರಾಜ್ಯವನ್ನು ಬಹುವಾಗಿ ವಿಸ್ತರಿಸಿದನು. ಆತನು ೨೪ ಯುದ್ಧಗಳನ್ನು ಮಾಡಿದನು. ಅವುಗಳಲ್ಲಿ ನಾಲ್ಕು ವಿಜಯನಗರದೊಂದಿಗೆ ನಡೆದಿದ್ದು ವಿಶೇಷವಾಗಿ ದೇವರಾಯನೊಂದಿಗೆ ಮಾಡಿದ್ದ ಮುದುಗಲ್ಲ ಮತ್ತು ಹಾನಗಲಗಳ ಕಾಳಗ ಭಯಂಕರವಾಗಿತ್ತು. ಮುದುಗಲ್ ಯುದ್ಧದಲ್ಲಿ ವಿಜಯನಗರ ಸೋತು ಬಹು ನಷ್ಟವನ್ನು ಅನುಭವಿಸಿತ್ತು. ಹಾನಗಲ್ಲ ಯುದ್ಧವು ವಿಜಯನಗರದ ರಾಜರಿಗೆ ಜಯ ದೊರೆಕಿಸಿತ್ತು. ಈ ಯುದ್ಧವು ಮುದಗಲ್ ಯುದ್ಧವು ಬಹುಮನಿ ಸುಲ್ತಾನರಿಗೆ ಅಪಾರ ನಷ್ಟವನ್ನುಂಟು ಮಾಡಿತು. ಇದರಿಂದ ಅವಮಾನಿತನಾದ ಫಿರೋಜ್‌ಶಾಹ ಅಂದಿನಿಂದ ವಿಜಯನಗರದ ಕಡೆ ತಲೆಹಾಕಲಿಲ್ಲ. ಈತನು ಸುಂದರ ಮತ್ತು ಚತುರಮತಿಯರಾದ ಅನೇಕ ಸ್ತ್ರೀಯರನ್ನು ತನ್ನ ರಾಣಿಯರನ್ನಾಗಿ ಮಾಡಿಕೊಂಡು ಅವರಿಗಾಗಿ ಪ್ರತ್ಯೇಕ ರಾಣಿವಾಸ ಕಟ್ಟಡಗಳನ್ನು ನಿರ್ಮಿಸಿದನು. ಅದೇ ಕಾರಣಕ್ಕಾಗಿ ಆತನು ಒಂದು ಹೊಸ ರಾಜ್ಯವನ್ನು ನಿರ್ಮಿಸಿದನು. ಗುಲ್ಬರ್ಗ ರಾಜಧಾನಿಯಿಂದ ನೈಋತ್ಯಕ್ಕೆ ೩೫ ಕಿ.ಮೀ. ದೂರದಲ್ಲಿ ಭೀಮಾ ನದಿಯ ಎಡದಂಡೆಯ ಮೇಲೆ ಹೊಸ ರಾಜಧಾನಿ ನಿರ್ಮಾಣವಾಯಿತು. ಈ ಹೊಸ ರಾಜ್ಯವನ್ನು ತನ್ನ ಹೆಸರಿನಿಂದ ಕರೆದುದ್ದರಿಂದ ಅದು 'ಫಿರೋಜಾಬಾದ್' ಎಂದು ನಾಮಕರಣಗೊಂಡಿತು. ಅದು ಈಗಿನ ಜೇವರ್ಗಿ ತಾಲೂಕಿನಲ್ಲಿರುವ ಅದೇ ಹೆಸರಿನ ಊರು ಈಗ ಅದು ಭಾಗಶಃ ಹಾಳಾದ ಚಿಕ್ಕಗ್ರಾಮ.

### ಬೇಸಿಗೆ ರಾಜಧಾನಿ: ಫಿರೋಜಬಾದ್

ಈ ಹೊಸ ರಾಜಧಾನಿಯನ್ನು ಕುರಿತು ಫರ್ಶಿಯ ದೇಶದಿಂದ ಭಾರತಕ್ಕೆ ಬಂದಿದ್ದ ಮಹಮ್ಮದ್ ಕಾಸೀಮ್ ಫರಿಶ್ತಾ ಎಂಬ ಪ್ರವಾಸಿ ತನ್ನ ತಾರೀಖ-ಎ-ಫರಿಶ್ತಾ (೧೫೬೦-೧೬೧೨) ಗ್ರಂಥದಲ್ಲಿ ಬಹುವಿಸ್ತಾರವಾಗಿ ವರ್ಣಿಸಿದ್ದಾನೆ. ಬಿಜಾಪುರ ಆದಿಶಾಹಿ ಎರಡನೆಯ ಇಬ್ರಾಹಿಂ ಆದಿಲ್‌ಶಾಹನ ಕಾಲದಲ್ಲಿದ್ದ ಇತನು ಫಿರೋಜಾಬಾದ್ ನಗರವನ್ನು ಕಣ್ಣಾರೆ ಕಂಡು ಬಣ್ಣಿಸಿರಬೇಕು. ನಗರದಲ್ಲಿರುವ

* ಸಾಹಿತಿ, ಸಂಶೋಧಕ, ವಿಶ್ರಾಂತ ಪ್ರಾಂಶುಪಾಲರು, 'ಮಾತೃಕೃಪಾ', ಪಟೇಲವಾಡಿ, ಸಿಂಧನೂರು-೫೮೪೧೨೮.

ಅರಮನೆ, ಬೀದಿ, ಕೋಟೆ, ಸುಂದರವಾದ ತೋಟ, ಸರೋವರಗಳನ್ನು ಮನೋಜ್ಞವಾಗಿ ವರ್ಣಿಸುತ್ತಾನೆ. ಫಿರೋಜಾಬಾದ್ ನಗರ ಭೀಮಾ ನದಿಯ ಮೇಲಿರುವುದನ್ನು ತಪ್ಪಾಗಿ ತುಂಗಾನದಿಯೆಂದು ಹೇಳಿದ್ದಾನೆ. ಫಿರೋಜಬಾದನ್ನು ಪೈರೋಜಾಬಾದ್ ಎಂದು ಕರೆದಿದ್ದಾನೆ. ಫಿರಿಸ್ತಾ ನಗರ ಮತ್ತು ರಾಜ ಅರಮನೆಗಳನ್ನು ಬಹುರಮಣೀಯವಾಗಿ ಬಣ್ಣಿಸಿರುವುದು ತಿಳಿಯುತ್ತದೆ. "ಬಾದುಶಾಹನು ಒಂದು ನಗರವನ್ನು ನಿರ್ಮಾಣ ಮಾಡಿದನು. ಅದಕ್ಕೆ ಪೈರೋಜಾ ಬಾದ್ ಎಂದು ನಾಮಕರಣ ಮಾಡಿದನು. ಈ ಹೊಸ ನಗರವನ್ನು ತನ್ನ ಸಾಮ್ರಾಜ್ಯದ ರಾಜಧಾನಿಯಾಗಿ ಮಾಡಿದನು. ಈ ನಗರದಲ್ಲಿ ಬಹಳಷ್ಟು ಉತ್ತಮ ಸುಂದರ ಮಾರುಕಟ್ಟೆಗಳನ್ನು ನಿರ್ಮಿಸಿದನು. ರಸ್ತೆಗಳು ನೇರ ಅಗಲ ಹಾಗೂ ದೂರದ ವರೆಗೂ ಹರಡಿದ್ದವು. ಒಂದು ಹೊಸ ಕೋಟೆಯನ್ನು ಕಟ್ಟಿಸಿದನು. ಅವರ ಒಂದು ತೀರ ನದಿಯ ದಡದವರೆಗು ಇತ್ತು. ಭೀಮಾ ನದಿ (ತುಂಗಾಭದ್ರೆ) ಯಿಂದ ಒಂದು ಕಾಲುವೆ ಯನ್ನು ಕೊರೆದು ನೀರು ಅರಮನೆಯೊಳಗೆ ಹರಿವ ಹಾಗೆ ಮಾಡಿತ್ತು. ಈ ಕೋಟೆಯಲ್ಲಿ ಅತ್ಯುತ್ತಮ ಹಾಗೂ ವೈಭವಯುಕ್ತ ಅರಮನೆಗಳನ್ನು ಕಟ್ಟಲಾಗಿತ್ತು. ಪ್ರತಿ ಅರಮನೆಯನ್ನು ಒಬ್ಬ ಧರ್ಮಪತ್ನಿಯ ವಶಕ್ಕೆ ಕೊಡಲಾಗಿತ್ತು".[೨]

ಫಿರೋಜ್‌ಶಾಹ ಈ ಹೊಸ ನಗರ ನಿರ್ಮಿಸುವುದಕ್ಕೆ ಎರಡು ಪ್ರಮುಖ ಕಾರಣಗಳಿರಬೇಕು ಒಂದು, ಗುಲ್ಬರ್ಗದ ಬೇಸಿಗೆಯ ಧಗೆಗೆ ದೂರವಿರಲು ತಂಪಾದ ಹಿತಕರವಾದ ವಾತಾವರಣದಲ್ಲಿ ರಾಜಧಾನಿಯನ್ನು ನಿರ್ಮಿಸಿದನು. ಎರಡು, ಫಿರೋಜಶಾಹನಿಗೆ ಅನೇಕ ಜನ ಪತ್ನಿಯರಿದ್ದರು. ಒಂದು ಅಂದಾಜಿನ ಪ್ರಕಾರ ಐದುನೂರು ಬೇರೆ ಬೇರೆ ದೇಶದ ಬೇರೆ ಭಾಷೆಗಳನ್ನಾಡುವ ಪತ್ನಿಯರಿದ್ದರೆಂದು ಇತಿಹಾಸಕಾರರ ಅಭಿಪ್ರಾಯ. ಅವರಿಗಾಗಿ ಪ್ರತ್ಯೇಕ ಸುಂದರ ಅರಮನೆಗಳನ್ನು ಕಟ್ಟಿಸಿ ವ್ಯವಸ್ಥೆ ಮಾಡುವುದು. ಈ ಕಾರಣಕ್ಕಾಗಿ ಫಿರೋಜ್ ಶಾಹನು ಭೀಮಾ ನದಿಯ ಅಹ್ಲಾದಕರ ಹಿತವಾದ ವಾತಾವರಣದಲ್ಲಿ ರಾಜಧಾನಿಯನ್ನು ನಿರ್ಮಿಸಿದನು.

ಫಿರೋಜ್‌ಶಾಹ ತನ್ನ ಪತ್ನಿಯರಿಗಾಗಿ ಸುಂದರವಾದ ಅರಮನೆಗಳನ್ನು ಕಟ್ಟಿಸಿದ್ದನು. ಪ್ರಪಂಚದ ಅತಿ ಸಂದರ ಸ್ತ್ರೀಯರು ಈತನ ಪತ್ನಿಯರು. ಇವರು ಸುಖಸಂತೋಷದಿಂದ ಸದಾ ಇರಲೆಂದು ಪ್ರತಿಯೊಬ್ಬರಿಗೆ ಪ್ರತ್ಯೇಕ ಅರಮನೆಗಳನ್ನು ಕಟ್ಟಿಸಿ ಅಲ್ಲಿ ಸಕಲ ಸೌಕರ್ಯಗಳನ್ನು ಮಾಡಿದನು. ಫರಿಸ್ತಾ ಈ ಅರಮನೆ ಹಾಗೂ ಬಾದುಶಾಹ ಪತ್ನಿಯರ ವೈಭವ ರಸಿಕ ಜೀವನವನ್ನು ಬಲು ಸೊಗಸಾಗಿ ವರ್ಣಿಸುತ್ತಾನೆ. "ಅರಮನೆಗಳು ಅಧಿಕ ಸಂಖ್ಯೆಯಲ್ಲಿದ್ದವು. ಅದಕ್ಕಾಗಿ ಅರಮನೆ ಗೋಸ್ಕರ ಬಹಷ್ಟು ಶಾಸನಗಳನ್ನು ರಚಿಸಲಾಗಿತ್ತು. ಅವು ಎಲ್ಲವು ಜಾರಿಯಲ್ಲಿದ್ದವು. ಫಿರೋಜ್‌ಶಾನು ಸುಂದರ ಹಾಗೂ ಕುಶಲ ಹೆಣ್ಣಮಕ್ಕಳನ್ನು ಅತಿಯಾಗಿ ಪ್ರೀತಿಸುತ್ತಿದ್ದ. ಪ್ರತಿ ಅರಮನೆಗಳಲ್ಲಿ ವಿಶೇಷ ಬೇಗಮಾತ್ (ಪತ್ನಿಯರಿಗಿರುವ) ಪ್ರತಿ ಅರಮನೆಗೊಂದು ಕಾನೂನು ಇತ್ತು. ಅಲ್ಲಿ ಒಬ್ಬ ಪತ್ನಿಯ ಹತ್ತಿರ ಮೂರು ಸೇವಕರಿರುತ್ತಿದ್ದರು. ಇವರ ಹೊರತುಪಡಿಸಿ ಬೇರೆಯಾವ ಮಹಿಳೆಯೂ ಒಳಗೆ ಹೋಗಲು ಪರವಾನಿಗೆ ಇರಲಿಲ್ಲ. ಆ ಸೇವಕಿಯರು ಬೇಗಮಳ ಭಾಷೆ ಬಲ್ಲವರಾಗಿರು ತ್ತಿದ್ದರು. ಫಿರೋಜ್‌ಶಾಹನಿಗೆ ಅರಬ್ಬಿ ಭಾಷೆಯೆಂದರೆ ಬಲು ಇಷ್ಟ. ವಿಶೇಷವಾಗಿ ದಖನಿ ಮಹಲ್ ಇಲ್ಲಿ ಅರಬ್ಬಿ ಮಾತನಾಡುವ ರಾಣಿಯರಿದ್ದರು. ಈ ಅರಬ್ಬಿ ಮಹಿಳೆಯರು ಹಿಜಾಜ್, ಮೆಕ್ಕಾ ಮತ್ತು ಇತರೆ ಪಟ್ಟಣದವರಾಗಿದ್ದರು. ಮತ್ತು ಅತ್ಯುತ್ತಮ ಅರಬ್ಬಿ ಭಾಷೆಯಲ್ಲಿ ಮಾತನಾಡುತಿದ್ದರು. ಇದಕ್ಕೆ ಅರಬ್ಬಿಮಹಲ್ ಎನ್ನುತ್ತಿದ್ದರು. ಅರಬ್ಬಿ ಭಾಷೆ ಬರದವರಿಗೆ ಈ ಅರಮನೆಯಲ್ಲಿ ಅನುಮತಿ ಇರಲಿಲ್ಲ. ಯಾಕಂದರೆ ಇತರೆ ಭಾಷೆ (ವಿಶೇಷವಾಗಿ ಫರ್ಷಿಯನ್ ಭಾಷೆ) ಗಳನ್ನಾಡುವವರು ಬೆರೆತರೆ ಅರಬ್ಬಿ ಮಹಿಳೆಯರ ಭಾಷೆ ಕೆಡಬಹುದಾಗಿತ್ತು. ರಾಜವಕೀರು ಸರಿಯಾಗಿ ಪ್ರತಿ ವರ್ಷ ಅರಬಸ್ಥಾನಕ್ಕೆ ಹೋಗುತ್ತಿದ್ದರು. ಅರಬ್ಬಿ ರಾಣಿಯು ಮರಣಹೊಂದಿದರೆ ತುರಂತ ಆಸ್ಥಾನವನ್ನು ತುಂಬಲಾಗು ತ್ತಿತ್ತು. ಇದೇ ರೀತಿಯಾಗಿ ಅಜ್ಮಿ ಎಂದರೆ (ಫರ್ಷಿಯನ್ ಅಥವಾ ಅರಬಿಯೆತರರು) ಇತರೆ ಮಹೆಳೆಯರು ಬೇರೊಂದು ಅರಮನೆಯಲ್ಲಿ ಇರುತ್ತಿದ್ದರು. ಸಂಖ್ಯೆಯಲ್ಲಿ ಅವರು ಒಂಭತ್ತು ಜನರಿದ್ದರು. ಆ ಬೇಗಂಳ ಸೇವಕಿಯರು ಚರಸಿ, ತುರ್ಕಿ, ರಸಿಯಾನ, ಕಜಿಯಾಗಿದ್ದರು. ಅತ್ಯಂತ ಪರ್ಶಿಯನ್ ಭಾಷೆಯನ್ನು ಬಹಳ ಸಿಹಿಯಾಗಿ ಮಾತನಾಡುತ್ತಿದ್ದರು. ಇವರನ್ನು ಹೊರೆತುಪಡಿಸಿ ತುರ್ಕಿ, ಫಿರಂಗಿ, ಕತಾಯಿ, ಅಫ್ಘಾನಿ, ರಜಪುತ್, ಬಂಗಾಲಿ, ಗುಜರಾತಿ, ತೆಲಂಗಿ, ಕನ್ನಡ, ಮರಾಠಿ ಬೇಗಮರ ಒಂದು ಬೇರೆ ವರ್ಗವಾಗಿತ್ತು. ಇವರಲ್ಲಿಯ ಪ್ರತಿ ಮಹಿಳೆಯ ಬಾದುಶಹನು ದಿನಾಲು ಒಂದು ಅರಮನೆಯಲ್ಲಿ ವಿರಮಿಸುತ್ತಿದ್ದನು. ಪತ್ನಿಯರೊಂದಿಗೆ ಅವರ ಭಾಷೆಯಲ್ಲಿ ಮಾತನಾಡಿ ಸಮನಾಗಿ ವರ್ತಿಸುತ್ತಿದ್ದನು. ಬಾದುಶಹನು ಎಲ್ಲರಿಗಿಂತ ಹೆಚ್ಚು ಪ್ರೀತಿಸುತ್ತಾನೆಂದು ಪ್ರತಿಯೊಬ್ಬ ಬೇಗಮ್‌ಳು ತಿಳಿಯುತ್ತಿದ್ದಳು.[೩]

ಸುಮಾರು ಇಸ್ವಿ ೧೪೧೦ರಲ್ಲಿ ನಿರ್ಮಾಣಗೊಂಡು ಈ ಫಿರೋಜಬಾದ್ ಪೂರ್ಣಪ್ರಮಾಣದ ರಾಜಧಾನಿಯಾಗಿ ಪರಿವರ್ತನೆಗೊಂಡಿದೆ. ರಾಜಧಾನಿಗಿರಬೇಕಾದ ಕೋಟೆ ಕೊತ್ತಲು-ಅಗಸಿ, ಅರಮನೆ, ನಾಗರೀಕರ ಮನೆಗಳು, ಸುಂದರ ಮಹಡಿಯ ಕಟ್ಟಡಗಳು ನಿರ್ಮಾಣವಾದವು. ಈ ನಗರ ಸುಂದರ ಮತ್ತು ಭೌವ್ಯತೆಯನ್ನು ಫರಿಶ್ತಾ ಇತಿಹಾಸ

ಕಾರನು ಬಹುವಾಗಿ ವರ್ಣಿಸುತ್ತಾನೆ. ವಿಶಾಲ ಬೀದಿಗಳು ಬಹು ದೂರ ನೇರವಾಗಿ ಸಾಗಿ ರಸ್ತೆಗಳ ಎಡಬಲಕ್ಕೆ ಎತ್ತರದ ಕಟ್ಟಡಗಳು. ಸುಲ್ತಾನನ ಅರಮನೆ. ಅದರ ರಕ್ಷಣೆಗೆ ವ್ಯವಸ್ಥಿತ ವಾಗಿ ಕಟ್ಟಡ ಭದ್ರ ಗೋಡೆಗಳು. ಫಿರೋಜಶಾಹನ ರಾಣಿಯರ ಪ್ರತ್ಯೇಕ ಮಹಲುಗಳು ಅವು ಸುಂದರವಾಗಿ ಎಲ್ಲ ಸೌಲಭ್ಯಗಳಿಂದ ಆಕರ್ಶಕವಾಗಿದ್ದವು ಎಂದು ಬಣ್ಣಿಸುತ್ತಾನೆ.

೧. ಅರಬ್ಬಿ ಮಾತನಾಡುವ ರಾಣಿಯರ ಈ ಭಾಷೆ ಹೊರತು ಫರ್ಷಿಯನ್ನ ಇತ್ಯಾದಿ ಯಾವ ಭಾಷೆಗಳು ಬೇರೆಯದಂತೆ ನೋಡಿಕೊಳ್ಳಲಾಗುತ್ತಿತ್ತು. ಅವರಲ್ಲಿ ಯಾರಾದರು ಒಬ್ಬರು ತೀರಿದರೆ ಕೂಡಲೆ ಆ ಸ್ಥಾನ ತಂಬಲು ಅರಬ್ ದೇಶದಿಂದ ಮತ್ತೊಬ್ಬ ಸುಂದರ ಸ್ತ್ರೀಯನ್ನು ತರಲು ವಕೀಲರ ವ್ಯವಸ್ತೆ ಮಾಡಲಾಗಿತ್ತು. ವಕೀಲರು ಅರಬ್ಬ್ ದೇಶಕ್ಕೆ ಹೋಗಿ ಫಿರೋಜ್‌ಶಾಹನಿಗೆ ಅನರೂಪಳಾದ ಸ್ತ್ರೀಯರನ್ನು ಕರೆದುಕೊಂಡು ಅವರನ್ನು ಅರಮನೆಯಲ್ಲಿ ಪ್ರವೇಶ ಮಾಡುವವರೆಗೂ ಜವಬ್ದಾರಿ ಇರುತಿತ್ತು.

೨. ಅಜ್ಮಿ ಎಂಬುದು ಮತ್ತೊಂದು ಪಂಗಡ. ಅರಬ್ಬಿ ಮತ್ತು ಫರ್ಷಿಯನ್ ಭಾಷೆಯೇತರ ರಾಣಿಯರು ಬೇರೊಂದು ಅರಮನೆಯಲ್ಲಿರುತ್ತಿದ್ದರು. ಸಂಖ್ಯೆಯಲ್ಲಿ ಇವರು ಒಂಭತ್ತು ಜನ. ಈ ಬೇಗಮ್‌ಗಳ ಸೇವೆಗಾಗಿ ಚರಸ್, ಟರ್ಕಿ, ರಷ್ಯನ್, ಕರಾಚಿ ದೇಶದವರಾಗಿದ್ದರು ಅವರು ಫರ್ಷಿಯನ್ನು ಭಾಷೆಯನ್ನು ಬಹಳ ಸಿಹಿಯಾಗಿ ಮಾತನಾಡಬಲ್ಲರಾಗಿದ್ದರು.

೩. ಇವರನ್ನು ಹೊರೆತು ಪಡಿಸಿದರೆ, ಟರ್ಕಿ, ಫರಂಗಿ, ಖತ್ತಾಯ, ಅಜಪೂತ, ಬಂಗಾಲಿ, ಗುಜರಾತಿ, ತೆಲುಗು, ಕನ್ನಡ ಭಾಷೆಗಳನ್ನಾಡುವ ಬೇಗಮ್‌ರಿಗೆ ಪ್ರತ್ಯೇಕ ಇರುತ್ತಿದ್ದವು.

ಫಿರೋಜ್‌ಶಾಹ ಹೀಗೆ ಬೇರೇ ದೇಶಗಳ ಬೇರೆ ಭಾಷೆ ಗಳ ರಾಣಿಯರು ಬೇರೆ ಅರಮನೆಯಲ್ಲಿ ವಾಸಿಸುವುದರಿಂದ ಆಗುವ ಪರಸ್ಪರದಲ್ಲಿಯ ಅಸಮಾಧಾನ, ದ್ವೇಷಾಸೂಯೆ, ವೈಮಸ್ಸುಗಳು ಕಾಣಿಸಿಕೊಂಡು ದಾಂಪತ್ಯ ಜೀವನದ ಮಧುರ ವನ್ನು ಸುಖ, ಸರಸಗಳಿಗೆ ತೊಂದರೆಯಾಗಬಾರದೆಂದು ವಿಂಗಡಿಸಿ ಪ್ರತ್ಯೇಕ ಅರಮನೆಗಳಲ್ಲಿ ವಾಸಿಸುವಂತೆ ವ್ಯವಸ್ಥೆ ಮಾಡಿದ್ದು ಆತನ ದೂರಾದೃಷ್ಠಿ ಮತ್ತು ಜಾಣತನ.

ಕನ್ನಡ ಮಾತನಾಡುವ ಬೇಗಮ್ ಇದ್ದಾಳೆಂದು ಫರಿಶ್ತಾ ಉಲ್ಲೇಖಿಸಿರುವುದು ಗಮನಾರ್ಹ. ಈ ಕನ್ನಡದ ರಾಣಿಯರು ಯಾರು ಇರಬಹುದು? ಬಹುಶಃ ಮದಗಲ್ ಕೋಟೆ ವಿಜಯನಗರದೊಂದಿಗೆ ನಡೆದ ಯುದ್ಧದಲ್ಲಿ ಅಲ್ಲಿಯ ಅಕ್ಕಸಾಲಿಗ ಸ್ತ್ರೀಯು ಇಲ್ಲಿ ಪ್ರಾಸಂಗಕಲಾಗಿರಬಹುದೆ? ಅಥವಾ ದೇವರಾಯ ತನ್ನ ಮಗಳನ್ನು ಫಿರೋಜಶಾಹರಿಗೆ ಕೊಟ್ಟು ಮದುವೆ ಮಾಡಿದ ಸ್ತ್ರೀ ಇರಬಹುದೇ? ವಿಚಾರಕ್ಕೆ ಇಂಬು ನೀಡುತ್ತದೆಯೇ?



**ಅಡಿಟಿಪ್ಪಣಿಗಳು**

೧. ತಾರೀಖ–ಎ–ಫರಿಸ್ತಾ ಪ್ರ: ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರ, ವಿಜಯಪುರ, ಭಾಗ ೨, ಪುಟ ೫೬೦.

೨. ಅದೇ ಪು. ೫೬೧.

೩. ಅದೇ ಪು. ೫೬೨.

## ೭೧

# ಬಿಲ್ಲಿನಕೋಟೆಯಲ್ಲೊಂದು ಪ್ರಾಚೀನ ದೇವಾಲಯ

ಡಾ. ಎಚ್.ಎಸ್. ಗೋಪಾಲರಾವ್*

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಬಿಲ್ಲಿನಕೋಟೆಯು ರಾಷ್ಟ್ರೀಯ ಹೆದ್ದಾರಿ ೪ರಲ್ಲಿ ನೆಲಮಂಗಲ ಮತ್ತು ಡಾಬಸ್ ಪೇಟೆಗಳ ನಡುವೆ ಇದೆ. ಅಲ್ಲಿನ ಪ್ರಕಟಿತ ಭೂಕಂಪದ ಉಲ್ಲೇಖವಿರುವ ಕಾರಣದಿಂದ ಶಾಸನಾಭ್ಯಾಸಿಗಳ ಗಮನಕ್ಕೆ ಬಂದಿದೆ. ಕೆಲವು ತಿಂಗಳುಗಳ ಹಿಂದೆ ಭೂಕಂಪದ ಉಲ್ಲೇಖವಿರುವ ಶಾಸನವನ್ನು ನೆಲಮಂಗಲದ ಆಸಕ್ತ ಪತ್ರಿಕಾ ವರದಿಗಾರರಿಗೆ ತೋರಿಸುವ ಸಲುವಾಗಿ ಹೋಗಿದ್ದಾಗ, ಬಹಳ ವರ್ಷಗಳಿಂದ ಕುತೂಹಲ ವನ್ನು ಕೆಣಕುತ್ತಿದ್ದ, ಬಿಲ್ಲಿನಕೋಟೆ ಕೆರೆಯ ಕೋಡಿಯಲ್ಲಿ ಬಂಡೆಯ ಮೇಲಿರುವ ದೇವಾಲಯವನ್ನು ಗಮನಿಸಲಾಯಿತು.

ಕೆರೆಯ ಕೋಡಿಯಲ್ಲಿನ ಕಲ್ಲು ಬಂಡೆಯ ಮೇಲೆ ಈ ದೇವಾಲಯ ನಿರ್ಮಾಣವಾಗಿದೆ. ಈಗ ಇದರಲ್ಲಿ ಪೂಜಾ ಮೂರ್ತಿ ಇಲ್ಲ. ದೇವಾಲಯದ ಬಹು ಬಾಗ ಬಿದ್ದುಹೋಗಿದೆ. ಊರಿನ ಜನ ಈ ದೇವಾಲಯವನ್ನು ಲಿಂಗಪ್ಪನ ಗುಡಿ ಎಂದು ತಿಳಿದಿದ್ದಾರೆ. ಇದಕ್ಕೆ ಕಾರಣ ಬಹುತೇಕ ಇಲ್ಲಿದ್ದ ಶಿವಲಿಂಗ. ಈಗ ಶಿವಲಿಂಗವಿಲ್ಲ. ಪಾಣಿಪೀಠ ಮಾತ್ರ ದೇವಾಲಯದ ಹೊರಗೆ ಬಿದ್ದಿದೆ. ವಾಸ್ತುಶಿಲ್ಪದ ಅರಿವಿದ್ದವರಿಗೆ ಸಹಜವಾಗಿ ಇದೊಂದು ಪ್ರಾಚೀನ ದೇವಾಲಯ ಎಂಬ ಕುತೂಹಲ ಎದುರಾಗುತ್ತದೆ. ಸಾಮಾನ್ಯವಾಗಿ ಊರಿನ ಕೆರೆಯ ಗದ್ದೆಯ ಬಯಲಿನಲ್ಲಿ, ಅಂದರೆ ಕೆರೆಯ ಕೋಡಿಯ ನಂತರ ಶಿವಾಲಯಗಳಿರುವುದು ಸಾಮಾನ್ಯ. ಇವು ಗ್ರಾಮದ ಈಶಾನ್ಯಕ್ಕಿರುತ್ತವೆ ಎಂಬುದು ಸಾಮಾನ್ಯ ತಿಳಿವಳಿಕೆ. ಈಗ ಇರುವ ಭಗ್ನ ಶಿವಾಲಯ ಕೆರೆಯ ಒಳಗೇ ಇದೆ ಮತ್ತು ಅದು ಗ್ರಾಮದ ನೈರುತ್ಯಕ್ಕಿದೆ. ಜನರು ಹೇಳುವ ಪ್ರಕಾರ ಈಗ ಕೆರೆ ಇರುವ ವಾಯುವ್ಯಕ್ಕೆ ಹಳೆಯ ಊರು ಇತ್ತು. ಅಂದರೆ ಹಳೆಯ ಊರಿನ ಈಶಾನ್ಯಕ್ಕೆ, ಆದರೆ ಕೆರೆಯ ಒಳಗೇ ಶಿವ ದೇವಾಲಯ ಇತ್ತು. ಈಗ ಹಳೆಯ ಊರು ಇಲ್ಲದ ಕಾರಣ ಮತ್ತು ಹೊಸ ಊರು ಹಳೆಯ ಊರಿನ ಪೂರ್ವದಲ್ಲಿ ನೆಲೆಕಂಡಿರುವುದರಿಂದ ಈಗಿನ ಶಿವಾಲಯವು ಊರಿನ ನೈರುತ್ಯಕ್ಕಿದೆ.

ಪೂರ್ವಾಭಿಮುಖವಾಗಿರುವ ದೇವಾಲಯವು ಕೆರೆಯ ಕೋಡಿಯಲ್ಲಿರುವುದರಿಂದ ಅದರ ಪೀಠಭಾಗವು ಪೂರ್ವದ ಕಡೆಗೆ ಕಡಿಮೆ ಎತ್ತರವಾಗಿ ಮತ್ತು ಪಶ್ಚಿಮದ ಕಡೆ ಸ್ವಲ್ಪ ಹೆಚ್ಚು ಎತ್ತರವಾಗಿ ನಿರ್ಮಾಣವಾಗಿದೆ. ಇಲ್ಲದಿದ್ದರೆ ದೇವಾಲಯದ ಎತ್ತರವು ಒಂದೇ ಮಟ್ಟದಲ್ಲಿ ಇರುತ್ತಿರಲಿಲ್ಲ. ಕೆರೆಯ ಕೋಡಿಯ ಹಾಸುಬಂಡೆಯ ಇಳಿಜಾರಿನ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡೇ ದೇವಾಲಯದ ಅಧಿಷ್ಠಾನವನ್ನು ನಿರ್ಮಿಸಲಾಗಿದೆ. ಮುಂಭಾಗದಲ್ಲಿ ಅರ್ಧ ಅಡಿ ಎತ್ತರವೂ ಇಲ್ಲದ ಅಧಿಷ್ಠಾನ ಹಿಂದಕ್ಕೆ ಸಾಗುತ್ತಾ ಸುಮಾರು ೧.೫ ಅಡಿ ಎತ್ತರವಿದೆ. ಅಧಿಷ್ಠಾನದ ಮೇಲೆ ಎರಡು ಸಾಲಿನಲ್ಲಿ ಕಲ್ಲಿನ ಗೋಡೆ, ಎಂದರೆ ಭಿತ್ತಿಯನ್ನು ನಿರ್ಮಿಸಲಾಗಿದ್ದು, ಈಗ ಗೋಡೆಯ ಹೊರಸಾಲು ಬಿದ್ದು ಹೋಗಿದೆ. ಆ ಕಲ್ಲುಗಳೆಲ್ಲಾ ಅಲ್ಲಲ್ಲೇ ಚೆದರಿ ಬಿದ್ದಿವೆ. ಅಧಿಷ್ಠಾನವೂ ಸೇರಿದಂತೆ ದೇವಾಲಯದ ಮುಂಭಾಗವು ಸು.೮ ಅಡಿ ಎತ್ತರವಿದ್ದು, ಹಿಂಭಾಗವು ಸು.೧೧ ಅಡಿ ಎತ್ತರವಿದೆ. ದೇವಾಲಯದ ಭಿತ್ತಿಯು ಸು.೭.೫ ಅಡಿ ಎತ್ತರವಿದೆ. ಅದರ ಮೇಲೆ ಸು.೦.೫ ಅಡಿ ಗೋಪುರಗಳಿವೆ. ಕದಂಬನಾಗರ ಶೈಲಿಯ ಈ ಗೋಪುರಗಳ ಪೂರ್ಣ ಭಾಗ ಉಳಿದಿಲ್ಲ. ಕೆಲವೇ ಕೆಲವು ಚಪ್ಪಡಿಯಾಕಾರದ ಕಲ್ಲುಗಳು ಒಂದರ ಮೇಲೊಂದು ಅಸ್ತವ್ಯಸ್ತವಾಗಿ ಉಳಿದಿವೆ. ಕಲ್ಲುಗಳ ಜೋಡಣೆಗೆ ಯಾವ ಹಂತದಲ್ಲೂ ಗಾರೆಯನ್ನು ಬಳಸಿದ ಸುಳಿವಿಲ್ಲ. ಕೇವಲ ಕಲ್ಲುಗಳ ಜೋಡಣೆಯಿಂದ ನಿರ್ಮಾಣ ವಾಗಿರುವ ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪ ಗಳನ್ನು ಹೊಂದಿದೆ. ಗರ್ಭಗೃಹದ ಅಗಲವು ಮುಖಮಂಟಪ ಕ್ಕಿಂತ ಸು.೧ ಅಡಿ ಹೆಚ್ಚಾಗಿದೆ. ಗರ್ಭಗೃಹವು ೬.೫ ಅಡಿ ಉದ್ದ ಮತ್ತು ೭.೫ ಅಡಿ ಅಗಲ ಇದೆ. ಆಯತಾಕಾರದ ಇದರ ಮುಂದಿರುವ ಮುಖಮಂಟಪದ ಉದ್ದ ೭.೫ ಅಡಿ ಮತ್ತು ಅಗಲ ೬.೫ ಅಡಿ.

ಅಧಿಷ್ಠಾನದ ಮೇಲೆ ಸುತ್ತಲೂ ಸುಮಾರು ೦.೫ ಅಡಿ ಅಗಲ ಜಾಗ ಬಿಟ್ಟು ನಿರ್ಮಾಣವಾಗಿರುವ

* 'ಅಕ್ಷರ', ಐ.ವೈ.ಹಿ. ೨ನೇ ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–೫೬೨೧೨೩.



ಭಿತ್ತಿ(ಗೋಡೆ)ಗೆ ಬಳಸಲಾಗಿರುವುದು ಸು.೦.೭೫ ಅಡಿ ದಪ್ಪವಿರುವ ಕಲ್ಲುಗಳು. ಈಗಾಗಲೇ ತಿಳಿಸಿರುವಂತೆ ಗೋಡೆಯ ಹೊರಬದಿಯ ಸಾಲಿನ ಕಲ್ಲುಗಳು ಬಿದ್ದು ಹೋಗಿವೆ. ಒಳಭಾಗದ ಗೋಡೆಯ ಕೆಲವು ಕಲ್ಲುಗಳು ಉಳಿದಿವೆ; ಕೆಲವು ಜಾರಿವೆ. ಉತ್ತರದ ಗೋಡೆಯಲ್ಲಿ ಗರ್ಭಗೃಹದ ಭಿತ್ತಿಯ ಭಾಗವು ಬಿದ್ದುಹೋಗಿದೆ. ದ್ವಾರಬಂಧವು ಸರಳವಾಗಿದ್ದು, ಪ್ರವೇಶಿಸಿದ ತಕ್ಷಣ ಎದುರಾಗುವ ಮುಖಮಂಟಪ ಅಥವಾ ಮಂಟಪದ ಮೇಲಿನ ಛಾವಣಿ ಹಾಳಾಗಿದೆ. ನಂತರದ ಗರ್ಭಗೃಹದ ಭಾಗದ ಛಾವಣಿಯ ಕೆಳಭಾಗ ಎಂದರೆ ನವರಂಗ ಎಂದು ಗುರುತಿಸಬಹುದಾದ ಭಾಗದಲ್ಲಿ ಪದ್ಮದ ಸರಳ ಕೆತ್ತನೆ ಇದೆ. ಗರ್ಭಗೃಹ ಮತ್ತು ಮುಖಮಂಟಪ ಎರಡರ ಮೇಲೂ ಈಗಾಗಲೇ ಹೇಳಿರುವ ಕದಂಬ ನಾಗರ ಶೈಲಿಯ ಗೋಪುರದ ಕೆಲವು ಚಪ್ಪಡಿ ಕಲ್ಲುಗಳು ಉಳಿದಿವೆ. ಇದರಿಂದ ಗೋಪುರವು ಗರ್ಭಗೃಹಕ್ಕೆ ಮಾತ್ರವಲ್ಲ ಕಟ್ಟಡದ ಎಲ್ಲ ಭಾಗಗಳಿಗೂ ಪ್ರತ್ಯೇಕವಾಗಿಯೇ ಇರುತ್ತಿತ್ತು ಎಂದು ಭಾಸವಾಗುತ್ತದೆ. ಈವರೆಗೆ ತಿಳಿದಿರುವಂತೆ ದೇವಾಲಯದ ಗರ್ಭಗೃಹದ ವಿನಃ ಮತ್ತೆಲ್ಲೂ ಗೋಪುರ ಇರುವುದಿಲ್ಲ. ಇಲ್ಲಿ ಮಾತ್ರ ಎರಡೂ ಭಾಗಗಳ ಮೇಲೆ





ಗೋಪುರಗಳಿದ್ದ ಸುಳಿವುಗಳಿವೆ. ಇವು ಗೋಪುರಗಳೋ ಅಥವಾ ಗಾಳಿಗೆ ಮೇಲ್ಛಾವಣಿ ಹಾರದಿರಲಿ ಎಂಬ ಕಾರಣದಿಂದ ಜೋಡಿಸಿರುವ ಕಲ್ಲು ಚಪ್ಪಡಿಗಳೋ ಎಂಬುದನ್ನು ಮತ್ತಷ್ಟು ಅಧ್ಯಯನದ ಮೂಲಕ ತಿಳಿಯಬೇಕು. ಇವು ಎತ್ತರದ ಗೋಪುರಗಳೂ ಅಲ್ಲ; ಒಂದೆರಡು ಸಾಲಿನ ಚಪ್ಪಡಿಗಳ ಜೋಡಣೆಯಷ್ಟೆ. ಆದ್ದರಿಂದ ಈ ಬಗ್ಗೆ ಇನ್ನೂ ಅಧ್ಯಯನ ಮತ್ತು ಚರ್ಚೆಗಳು ನಡೆಯುವ ಅವಶ್ಯಕತೆ ಇದೆ.

ದೇವಾಲಯದ ಮುಂಭಾಗದ ಬಾಗಿಲುವಾಡವು ಅತ್ಯಂತ ಸರಳವಾಗಿದೆ. ಅದರ ಎತ್ತರ ಸು.೪ ಅಡಿ ಮತ್ತು ಅಗಲ ಸು.೨ಅಡಿ. ಅಲ್ಲಿ ಯಾವುದೇ ರೀತಿಯ ಅಲಂಕರಣ ವಿಲ್ಲ ಮತ್ತು ದಾರಪಾಲಕರಿಗೂ ಇಲ್ಲಿ ಅವಕಾಶ ಕಲ್ಪಿಸಿಲ್ಲ. ಯಾವುದೇ ಅಲಂಕರಣವಿಲ್ಲದ, ಸರಳವಾದ ದೇವಾಲಯದ ಒಳಗೆ ಯಾವುದೇ ಕಂಬಗಳಿಲ್ಲ. ಈ ವಾಸ್ತುವಿಗೆ ಕಂಬಗಳ ಆಧಾರದ ಅವಶ್ಯಕತೆ ಇಲ್ಲ. ದೇವಾಲಯದ ಗರ್ಭಗೃಹದ ನಾಲ್ಕು ಮೂಲೆಗಳು ಮತ್ತು ಮುಖಮಂಟಪದ ನಾಲ್ಕು ಮೂಲೆಗಳು ಕೂಡುವೆಡೆ ಮೇಲ್ಛಾವಣಿಯ ಭಾರವನ್ನು

ಹೊರಲು ಅನುಕೂಲವಾಗುವಂತೆ ತಲಾ ಒಂದೊಂದು ಸರಳಬೋದಿಗೆ ಸಹಿತ ಅಲಂಕೃತವಲ್ಲದ ಕಂಬಗಳಿವೆ. ಗರ್ಭಗೃಹಕ್ಕೂ ಪ್ರತ್ಯೇಕ ದ್ವಾರವಿದೆ. ಅದೂ ಅಲಂಕೃತವಲ್ಲ. ಅದರ ಹಿಂಬದಿಯ ಭಿತ್ತಿಯಲ್ಲಿ ಪೂಜಾ ಸಾಮಗ್ರಿಗಳನ್ನು ಇಟ್ಟುಕೊಳ್ಳಲು ಅನುಕೂಲವಾಗುವಂತೆ ಒಂದು ಕಲ್ಲಿನ ಪಟ್ಟಿಯನ್ನು ಇಡಲಾಗಿದೆ. ಪ್ರತ್ಯೇಕವಾಗಿರುವ ಮುಖಮಂಟಪ ಮತ್ತು ಗರ್ಭಗೃಹಗಳು ಕೂಡುವೆಡೆ ಮೇಲ್ಭಾಗದಲ್ಲಿ ಜೋಡಣೆ ಇದೆ. ಅಧಿಷ್ಠಾನ ಮತ್ತು ಗರ್ಭಗೃಹದ ಒಳಮೇಲ್ಛಾವಣಿಯನ್ನು ಬಿಟ್ಟರೆ ಮತ್ತೆ ಯಾವ ಭಾಗದಲ್ಲೂ ಯಾವುದೇ ರೀತಿಯ ಅಲಂಕರಣವಿಲ್ಲ. ಇರುವ ಅಲಂಕರಣವೂ ಪದ್ಮಬಂಧ ಮತ್ತು ಪದ್ಮ ಮಾತ್ರ.

ಅತ್ಯಂತ ಸರಳ ದೇವಾಲಯ ವಾಸ್ತುವಿಗೆ ಉದಾಹರಣೆಯಾಗಿ ಬಿಲ್ಲಿನಕೋಟೆಯ ಲಿಂಗಪ್ಪನ ದೇವಾಲಯ ಎದುರಾಗುತ್ತದೆ. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿ ಪ್ರಾಚೀನ ದೇವಾಲಯಗಳ ಸುಳಿವಿದೆ. ಅಲ್ಲಿ ದೇವಾಲಯ ವಾಸ್ತುವಿಗೆ ಸಂಬಂಧಿಸಿದಂತೆ ಹಲವು ಪ್ರಯೋಗಗಳು ನಡೆದಿರುವುದು ಸ್ಪಷ್ಟ. ಬಂಡೆಗಳನ್ನು ಕೊರೆದು ಗುಹೆಗಳನ್ನು ಮಾಡಿ, ಅವುಗಳಲ್ಲಿ ಸ್ಥಂಭಸಹಿತ ದೇವಾಲಯಗಳನ್ನು ನಿರ್ಮಿಸಿದ ಕೀರ್ತಿಗೆ ಬಾದಾಮಿ ಚಲುಕ್ಯರ ಕಾಲದ ವಾಸ್ತುತಜ್ಞರು ಪಾತ್ರರಾಗಿದ್ದಾರೆ. ಅದರಂತೆಯೇ ಅವರು ದೇವಾಲಯಗಳನ್ನು ಕಟ್ಟುವುದರ ಮೂಲಕವೂ ಹಲವು ಪ್ರಯೋಗಗಳನ್ನು ಮಾಡಿದ್ದಾರೆ. ಇಂತಹ ಪ್ರಯೋಗಗಳು ಕರ್ನಾಟಕದ ಈ ಭಾಗದಲ್ಲಿಯೂ ಆಗಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ.

ಈ ಭಾಗದಲ್ಲೂ, ವಿಶೇಷವಾಗಿ ಶಿವಗಂಗೆ, ನಿಜಗಲ್ಲು, ಹೆಗ್ಗುಂದ ಮುಂತಾದ ಸ್ಥಳಗಳಲ್ಲಿ ಸಹಜವಾದ ಮತ್ತು ಮಾರ್ಪಾಡುಗೊಂಡ ಗುಹಾದೇವಾಲಯಗಳಿವೆ ಹಾಗೂ ಕಟ್ಟಲಾದ ದೇವಾಲಯಗಳಿವೆ. ಕಟ್ಟಲಾದ ದೇವಾಲಯಗಳಿಗೆ ಮಣ್ಣೆಯು ಹಲವು ಪ್ರಮುಖ ಉದಾಹರಣೆಗಳನ್ನು ಒದಗಿಸಿದೆ ಮತ್ತು ಅಲ್ಲಿ ಹಲವು ಪ್ರಯೋಗಗಳಾಗಿರುವುದನ್ನು ಮರೆಯುವಂತಿಲ್ಲ. ಅಧಿಷ್ಠಾನದಂತೆಯೇ ಇಟ್ಟಿಗೆಯ ತಳಪಾಯವಿರುವ ಕಪಿಲೇಶ್ವರ ದೇವಾಲಯವಲ್ಲದೆ, ಕೆಳಭಾಗದಲ್ಲಿ ಒರಟು ಕಂಬಗಳನ್ನು ಆಧಾರ ಮಾಡಿಕೊಂಡು, ನಿರ್ಮಾಣವಾಗಿರುವ ಶ್ರೀವಿಜಯ ಜಿನಾಲಯ (ಸೂಳೆಯರ ಗುಡಿ) ಇದೆ. ಮಣ್ಣೆಗೆ ಸಮೀಪವೇ ಇರುವ ಬಿಲ್ಲಿನಕೋಟೆಯಲ್ಲೂ ದೇವಾಲಯ ನಿರ್ಮಾಣದಲ್ಲಿ ಪ್ರಯೋಗಗಳಾಗಿರುವುದಕ್ಕೆ ಗುರುತಾಗಿ ಎಂಬಂತೆ ಲಿಂಗಪ್ಪನ ದೇವಾಲಯವಿದೆ.

ಕೆರೆಯ ಏರಿಯ ಹಿಂಭಾಗ, ಗದ್ದೆಯ ಬಯಲಿನಲ್ಲಿ ಶಿವಾಲಯವನ್ನು ಕಟ್ಟುವುದರ ಬದಲು ಕೆರೆಯ ಒಳಗೇ, ಕೋಡಿಗೆ ಹೊಂದಿಕೊಂಡಂತೆ, ಕೆರೆ ತುಂಬಿ ಕೋಡಿ ಹರಿದಾಗ ಅಧಿಷ್ಠಾನದ ವಿನಹ ದೇವಾಲಯದ ಮತ್ತಾವ ಭಾಗವೂ ನೀರಿನಲ್ಲಿ ಮುಳುಗದಂತೆ ಎಚ್ಚರ ವಹಿಸಿ ನಿರ್ಮಿಸಲಾಗಿರುವ ಲಿಂಗಪ್ಪನ ದೇವಾಲಯವು ಗಂಗ ವಾಸ್ತುಶಿಲ್ಪಿಗಳ ಪ್ರಯೋಗಕ್ಕೊಂದು ಸಾಕ್ಷಿ. ಬಿಲ್ಲಿನಕೋಟೆಯು ಮಣ್ಣೆಗೆ ಸಮೀಪವಿರುವುದರಿಂದ ಮತ್ತು ಇಲ್ಲಿನ ಕೆರೆಯ ಸಮೀಪ ಗಂಗರ ಕಾಲದ ಒಂದು ವೀರಗಲ್ಲೂ ಇರುವುದರಿಂದ ಈ ದೇವಾಲಯವನ್ನು ಗಂಗರ ಕಾಲಕ್ಕೇ ಸೇರಿಸುವುದು ಸೂಕ್ತ ಎಂದು ತಿಳಿಯಲಾಗಿದೆ.



೭೨

# ಕರ್ನಾಟಕದಲ್ಲಿ ಪ್ರಾಕೃತ ಸಾಹಿತ್ಯದ ಕವಿಗಳು

**ಡಾ. ಸಂತೋಷ ಹಾನಗಲ್***

ನಮ್ಮ ದೇಶದ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಪ್ರಾಕೃತವೂ ಒಂದು. ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಪ್ರಾಕೃತಭಾಷೆಯ ಸಾಹಿತ್ಯಕ್ಕೂ ಒಂದು ಮಹತ್ತ್ವಪೂರ್ಣವಾದ ಸ್ಥಾನವಿದೆ. ಪ್ರಾಕೃತಭಾಷೆಯು ಬಹುಕಾಲದವರೆಗೆ ಜನ ಸಾಮಾನ್ಯರಿಗೂ ಹತ್ತಿರವಾದ ಭಾಷೆಯಾಗಿ, ವೈವಿಧ್ಯಮಯ ವಾದ ಸಾಹಿತ್ಯರಾಶಿಯನ್ನು ಸೃಷ್ಟಿಸುವಲ್ಲಿ ಕವಿ-ವಿದ್ವಾಂಸರ ಪ್ರಿಯ ಮಾಧ್ಯಮಗಳಲ್ಲೊಂದಾಗಿ, ಭಾರತೀಯ ಭಾಷೆಗಳು, ಧರ್ಮ, ಸಂಸ್ಕೃತಿಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಭಾರತದ ಶಿಲಾಶಾಸನಗಳ ಮೊಟ್ಟಮೊದಲ ಭಾಷೆಯೂ ಪ್ರಾಕೃತವೇ. ಪ್ರಾಕೃತಸಾಹಿತ್ಯದ ಅಧ್ಯಯನದಿಂದ ಭಾರತದ ಸಾವಿರಾರು ವರ್ಷಗಳ ರಾಜನೈತಿಕ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಬಹುದಾಗಿದೆ. ಪ್ರಾಕೃತಭಾಷೆಯ ಉತ್ಪತ್ತಿಯ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಹೇಮಚಂದ್ರನೇ ಮೊದಲಾದ ಪ್ರಾಕೃತ ವೈಯಾಕರಣರೂ, ಪ್ರಾಚೀನ ಆಲಂಕಾರಿಕರೂ ಕೂಡ ಸಂಸ್ಕೃತವೇ ಪ್ರಾಕೃತದ ಮೂಲವಾತ್ಮಕೆಯೆಂದಿದ್ದಾರೆ. ಹೇಮಚಂದ್ರನು ಪ್ರಾಕೃತಭಾಷೆಯ ಉತ್ಪತ್ತಿಯ ಕುರಿತಾಗಿ ಹೀಗೆ ಹೇಳುತ್ತಾನೆ-

**'ಪ್ರಕೃತಿಃ ಸಂಸ್ಕೃತಂ, ತತ್ರ ಭವಂ ತತ ಆಗತಂ ವಾ ಪ್ರಾಕೃತಮ್, ಸಂಸ್ಕೃತಾನಂತರಂ ಪ್ರಾಕೃತಮಧಿಕ್ರಿಯತೇ'**

ಇನ್ನೊಂದು ವಾದವೆಂದರೆ ಸಂಸ್ಕೃತವು ಪ್ರಾಕೃತದ ಜನಕವಲ್ಲ. ಸಂಸ್ಕೃತ-ಪ್ರಾಕೃತಗಳೆರಡೂ ಒಟ್ಟೊಟ್ಟಿಗೇ ಹುಟ್ಟಿ ಬೆಳೆದು ಬಂದಿವೆ ಮತ್ತು ಅವೆರಡೂ ಒಂದೇ ಮೂಲದಿಂದ ಬಂದಿವೆ. ಇನ್ನೂ ಕೆಲವು ಆಧುನಿಕ ವಿದ್ವಾಂಸರು ಪ್ರಾಕೃತವೇ ಮೂಲಭಾಷೆ. ಅದರ ಶಬ್ದಗಳೇ ಉಚ್ಚಾರಣಸೌಷ್ಠವ ಹಾಗೂ ವಿಶಿಷ್ಟ ವ್ಯಾಕರಣಾದಿ ಸಂಸ್ಕಾರಗಳಿಗೆ ಒಳಪಟ್ಟು ಸಂಸ್ಕೃತ ಭಾಷೆ ಹುಟ್ಟಿಬಂದಿದೆ ಎಂಬ ವಾದವನ್ನು ಮುಂದಿಡುತ್ತಾರೆ. ಹೀಗೆ ಒಟ್ಟಿನಲ್ಲಿ ನೋಡಿದಾಗ ಪ್ರಾಕೃತಭಾಷೆಯ ಉತ್ಪತ್ತಿಯ ವಿಚಾರವು ಬೀಜ-ವೃಕ್ಷನ್ಯಾಯದಂತೆ ತೋರುತ್ತದೆ. ಅದೇನೇ ಇರಲಿ ಸಂಸ್ಕೃತ-ಪ್ರಾಕೃತಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಂತೆ ಭಾರತೀಯ ವಾಙ್ಮಯದ ಗಂಗೆ-ಯಮುನೆಗಳಂತಿವೆ. ಸಂಸ್ಕೃತ ನಾಟಕಗಳನ್ನು ಅವಲೋಕಿಸಿದರೆ ಈ ತಥ್ಯವು ಸ್ಪಷ್ಟವಾಗಿ ವೇದ್ಯವಾಗುತ್ತದೆ. ಸಂಸ್ಕೃತ ನಾಟಕಗಳಲ್ಲಿ ಅನೇಕ ಪಾತ್ರಗಳ ಮಾತುಗಳು ಪ್ರಾಕೃತದಲ್ಲಿರುತ್ತವೆ. ಸಂಸ್ಕೃತ ನಾಟಕಗಳ ಈ ಪ್ರಾಕೃತಭಾಗಗಳಲ್ಲಿಯೂ ಸುಕುಮಾರ ಮನೋಹರವಾದ ಸಾಹಿತ್ಯವನ್ನು ಕಾಣಬಹುದು. ಸತಾಳ-ವಿತಾಳ ಗೇಯಗಳಿಗೆ ಒಗ್ಗುವ ಸರಳವೂ, ಸುಂದರವೂ ಆದ ಅನೇಕ ಪ್ರಾಕೃತ ಪದ್ಯಗಳನ್ನು ನಾಟಕಗಳಲ್ಲಿ ಕಾಣಬಹುದು. ಮಹಾಕವಿ ಕಾಲಿದಾಸನ ವಿಕ್ರಮೋರ್ವಶೀಯನಾಟಕದ ಈ ಪ್ರಾಕೃತಪದ್ಯವನ್ನು ಉದಾಹರಣೆಗೆ ನೋಡಬಹುದು

**ಚಿಂತಾದುಮ್ಮಿಅ-ಮಾಣಸಿಆ**
**ಸಹಅರಿದಂಸಣ-ಲಾಲಸಿಆ ।**
**ವಿಅಸಿಅ ಕಮಲಮಣೋಹರಏ**
**ವಿಹರಇ ಹಂಸೀ ಸರವರಏ ॥**

ಪ್ರಾಕೃತದಲ್ಲಿ ಮಾಗಧೀ, ಅರ್ಧಮಾಗಧೀ, ಶೌರಸೇನೀ, ಮಹಾರಾಷ್ಟ್ರೀ, ಪೈಶಾಚೀ ಮತ್ತು ಅಪಭ್ರಂಶವೆಂಬ ಆರು ಉಪಭಾಷೆ(dialects)ಗಳಿವೆ. ಇವುಗಳಲ್ಲಿ ಮಹಾರಾಷ್ಟ್ರೀ ಪ್ರಾಕೃತವು ಸುಕುಮಾರಶೈಲಿಯ ಸಾಹಿತ್ಯಕ್ಕೆ ತುಂಬ ಯೋಗ್ಯವೆನಿಸಿದ್ದು ಅದರಲ್ಲಿ ಬಹುಪಾಲು ಪ್ರಮಾಣದ ಸಾಹಿತ್ಯವು ರಚನೆಯಾಗಿದೆ. ಇನ್ನು ಕರ್ನಾಟಕದ ಸಂದರ್ಭಕ್ಕೆ ಬಂದರೆ ಪ್ರಾಚೀನ ಕಾಲದಿಂದಲೂ ಇಲ್ಲಿ ಪ್ರಾಕೃತಭಾಷೆಯ ಶಿಲಾಶಾಸನಗಳು ಹಾಗೂ ಸಾಹಿತ್ಯಿಕ ಚಟುವಟಿಕೆಗಳು ನಡೆದು ಬಂದಿರುವುದನ್ನು ಕಾಣಬಹುದಾಗಿದೆ. ಇವುಗಳಲ್ಲಿ ಪೈಶಾಚೀ ಪ್ರಾಕೃತದ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಕರ್ನಾಟಕದ ಪ್ರಾಕೃತಕ್ಕೂ ಒಂದು ವಿಶಿಷ್ಟವಾದ ಸ್ವರೂಪವಿದ್ದು ಇದನ್ನು 'ಕನಾಟೀ' ಎಂದು ಕರೆಯಲಾಗಿದೆ.

ಇದುವರೆಗೆ ಕರ್ನಾಟಕದ ಪ್ರಾಂತದಲ್ಲಿ ಅಲ್ಲಲ್ಲಿ ಅನೇಕ ಪ್ರಾಕೃತ ಶಾಸನಗಳು ಉಪಲಬ್ಧವಾಗಿವೆ. ಅವುಗಳು ಕ್ರಿ.ಪೂ. ೩ನೇ ಶತಮಾನದಿಂದ ಕ್ರಿ.ಶ. ೪ನೇ ಶತಮಾನದವರೆಗಿನ ಅವಧಿಗೆ ಸೇರಿದವುಗಳಾಗಿದ್ದು ಮೌರ್ಯ, ಸಾತವಾಹನ ಮೊದಲಾದ ರಾಜವಂಶಗಳಿಗೆ ಸಂಬಂಧಿಸಿದವುಗಳಾಗಿವೆ. ಕರ್ನಾಟಕದಲ್ಲಿಯ ಅಶೋಕನ ಲಘು ಮತ್ತು ಪ್ರಧಾನ ಶಿಲಾ

* ಉಪನಿರ್ದೇಶಕರು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು.

ಶಾಸನಗಳು ಅಶೋಕಮೌರ್ಯನಿಗೆ ಸಂಬಂಧಿಸಿದವುಗಳಾಗಿವೆ. ಈ ಶಾಸನಗಳಲ್ಲಿ ಶಾಸನಗಳನ್ನು ಕೊರೆದವರ ಹೆಸರುಗಳು ಮಾತ್ರ ದೊರೆಯುತ್ತವೆ. ಅವುಗಳ ಒಕ್ಕಣಿಕೆಗಳನ್ನು ರಚಿಸಿದವರು ಅಂದರೆ ಕವಿಗಳ ಹೆಸರುಗಳು ಅಲ್ಲಿ ಕಂಡು ಬರುವುದಿಲ್ಲ. ಇದಕ್ಕೂ ಮೊದಲು ಅಶೋಕನ ತಂದೆ ಚಂದ್ರಗುಪ್ತನು ಭದ್ರಬಾಹುವಿನಿಂದ ಕೂಡಿಕೊಂಡು ಕರ್ನಾಟಕಕ್ಕೆ ಬಂದಿದ್ದನೆಂದೂ ಮತ್ತು ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿ ಸಲ್ಲೇಖನ ವ್ರತದಿಂದ ಮೃತನಾದನೆಂದು ಶ್ರವಣಬೆಳಗೊಳದ ಒಂದು ಶಿಲಾಶಾಸನದಿಂದ ಗೊತ್ತಾಗುತ್ತದೆ.

ಪ್ರಾಚೀನ ಕರ್ನಾಟಕದ ವಿಶಾಲ ಸೀಮೆಯನ್ನು ಪರಿಗಣಿಸುವುದಾದರೆ ಮಹಾಕವಿ ಗುಣಾಢ್ಯನು (ಕ್ರಿ.ಶ. ೧ನೆಯ ಶತಮಾನ) ಒಂದರ್ಥದಲ್ಲಿ ಕರ್ನಾಟಕದ ಪ್ರಾಕೃತ ಕವಿಯೆಂದು ಅಥವಾ ಕರ್ನಾಟಕದೊಂದಿಗೆ ನಿಕಟ ಸಂಬಂಧ ಹೊಂದಿದ್ದ ಕವಿಯೆಂದು ಹೇಳಬಹುದು. ಅವನ ಊರು ಪ್ರತಿಷ್ಠಾನ (ಈಗಿನ ಗೋದಾವರಿ ತೀರದಲ್ಲಿರುವ ಪೈಠಣ) ಅವನು ಒಬ್ಬ ಶಾತವಾಹನ ಅರಸನಲ್ಲಿ ಆಶ್ರಯ ಪಡೆದಿದ್ದನು ಅವನು 'ಬೃಹತ್ಕಥಾ' ಎಂಬುದನ್ನು ಪ್ರಾಕೃತ (ಪೈಶಾಚಿ) ಭಾಷೆಯಲ್ಲಿ ರಚಿಸಿದ್ದಾನೆ. ಶಾತವಾಹನ ಅರಸರು ಬಹುತರವಾಗಿ ಬೌದ್ಧರಾಗಿದ್ದು, ಅವರ ಆಶ್ರಯದಲ್ಲಿ ಇರುವ ಗುಣಾಢ್ಯನು ಮತದಿಂದ ಬೌದ್ಧನಾಗಿದ್ದನು.

ಇದೇ ರೀತಿಯಲ್ಲಿ ನೋಡಿದರೆ ಮತ್ತೊಬ್ಬ ಪ್ರಸಿದ್ಧ ಪ್ರಾಕೃತ ಕವಿ ಹಾಲನು (ಕ್ರಿ.ಶ. ೨೧ ಅಥವಾ ೮೧) 'ಗಾಥಾಸಪ್ತಶತೀ' ಅಥವಾ ಗಾಹಾಸತ್ತಸಈ ಎಂಬ ಗ್ರಂಥದ ಕರ್ತೃವು ಅವನು ಜೈನನೆಂದು ಕೆಲವರು ಹೇಳುತ್ತಾರೆ. ಆದರೆ ಅವನು ಗಾಥಾಸಪ್ತಶತೀ ಮಂಗಳಾಚರಣ ಶ್ಲೋಕದಲ್ಲಿ ಶಿವ-ಪಾರ್ವತಿಯರನ್ನು ಸ್ತುತಿಸಿದ್ದಾನೆ. ಕೆಲವೆಡೆಯಲ್ಲಿ ಬುದ್ಧನನ್ನು ವರ್ಣಿಸಿದ್ದಾನೆ. ಆದ್ದರಿಂದ ಅವನು ಬೌದ್ಧನೆಂದು ಕೆಲವರು ಹೇಳುತ್ತಾರೆ. ಏನೇ ಇರಲಿ, ಸಪ್ತಶತಿಯಲ್ಲಿ ಬರುವ ಶೃಂಗಾರ ಪೂರ್ಣ ವರ್ಣನೆಗಳಿಂದ ಅವನು ವ್ರಾತ್ಯನೆಂಬುದಂತೂ ಒಡೆದು ಕಾಣುವದು. ಪುಜ್ಜುಸನದಲ್ಲಿ ನಡೆಯಲಿದ್ದ ಪ್ರವಚನಗಳನ್ನು ಕೇಳಲು ಮತ್ತು ಚರ್ಚೆಗಳಲ್ಲಿ ಭಾಗವಹಿಸಲು ಪಂಥ ಅರಸನಿಗೆ ಕಲಕಚಾರ್ಯ ಶ್ವೇತಾಂಬರ ಮುನಿಯಿಂದ ಆಮಂತ್ರಿಸಲ್ಪಟ್ಟಿದ್ದನೆಂದು ತಿಳಿದು ಬರುವದು.

ಮತ್ತೋರ್ವ ಪ್ರಖ್ಯಾತ ಜೈನಾಚಾರ್ಯ, ಕವಿ ಕುಂದಕುಂದಾಚಾರ್ಯನು (ಕ್ರಿ.ಶ. ೧ನೆಯ ಶತಮಾನ) ಕುಂದಕುಂದ ಅಂದರೆ ಇಂದಿನ ಆಂಧ್ರಪ್ರದೇಶ ರಾಜ್ಯದ ಗುಂತಕಲ್ಲ ಹತ್ತಿರವಿರುವ ಕೋನ್‌ಕೊಂಡ್ಲ ಎಂಬ ಒಂದು ಊರಿನವನಾಗಿರಬೇಕೆಂದು ಇತಿಹಾಸತಜ್ಞರು ಊಹಿಸುತ್ತಾರೆ. ತನ್ನ ಪ್ರವಚನ ಸಾರ, ಸಮಧುಸಾರ ಮುಂತಾದವುಗಳನ್ನು ತನ್ನ ಶಿಷ್ಯನಾದ ಒಬ್ಬ ಶಿವಕುಮಾರ ರಾಜನ ಸಲುವಾಗಿ ರಚಿಸಿದನೆಂದು ತಿಳಿದು ಬರುವದು. ಈ ಶಿವಕುಮಾರನು ಕದಂಬ ವಂಶದ ಮೃಗೇಶವರ್ಮ ಮಹಾರಾಜನೆಂದು ಕೆಲ ಇತಿಹಾಸಕಾರರ ಅಭಿಮತ. ಕದಂಬರು ಮೈಸೂರಿನ ಪಶ್ಚಿಮ ಭಾಗವನ್ನು ಕ್ರಿ.ಶ. ೩ನೆಯ ಶತಮಾನದಿಂದ ಆಳುತ್ತ ಬಂದಿದ್ದರು. ಆದರೆ ಈ ಶಿವಕುಮಾರ ಮಹಾರಾಜನು ಪಲ್ಲವ ಶಿವಸ್ಕಂದವರ್ಮನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಕ್ರಿ.ಶ. ಆರನೇ ಶತಮಾನದಲ್ಲಿ ಜೀವಿಸಿದ್ದ ಕರ್ನಾಟಕದವನೆನ್ನಲಾದ ಜೋಇಂದು ಎಂಬ ಜೈನ ಕವಿಯು ಅನೇಕ ಪ್ರಾಕೃತ ಕೃತಿಗಳನ್ನು ರಚಿಸಿದ್ದಾನೆ. ಜೋಇಂದು ಎಂಬುದು ಯೋಗೀಂದ್ರ ಎಂಬ ಸಂಸ್ಕೃತಪದದ ಪ್ರಾಕೃತರೂಪ. ಈತನು ಪರಮಪ್ಪಪಯಾಸು, ಯೋಗಸಾರ, ನೌಕಾರಶ್ರಾವಕಾಚಾರ, ದೋಹಾ ಪಾಹಡ, ಅಮೃತಾಪೀತಿ ಮತ್ತು ನಜಾತ್ಮಾಷ್ಟಕ ಎಂಬ ಕೃತಿಗಳನ್ನು ರಚಿಸಿದ್ದಾನೆ.

ಪ್ರಾಕೃತದ ಉಪಭಾಷೆಯಾದ ಅಪಭ್ರಂಶದಲ್ಲಿ ಕಾವ್ಯಗಳನ್ನು ರಚಿಸಿದ ಪ್ರಸಿದ್ಧ ಪ್ರಾಚೀನ ಕವಿ ಸ್ವಯಂಭು ಕರ್ನಾಟಕದಲ್ಲಿಯೇ ನೆಲೆಸಿದವನಾಗಿದ್ದನು. ಇವನು ಯಾಪನೀಯ ಸಂಘಕ್ಕೆ ಸೇರಿದವನಾಗಿದ್ದನು. ಇವನು ಪುಮ ಚರಿಉ, ರಿಟ್ಠಣೇಮಿಚರಿಉ, ಪಂಚಮಚರಿಉ ಎಂಬ ಮಹಾಕಾವ್ಯಗಳನ್ನೂ, ಸ್ವಯಂಭು ಛಂದ ಎಂಬ ಛಂದೋಲಕ್ಷಣಗ್ರಂಥವನ್ನೂ, ಸ್ವಯಂಭು ವ್ಯಾಕರಣ ಎಂಬ ವ್ಯಾಕರಣ ಶಾಸ್ತ್ರಗ್ರಂಥವನ್ನೂ ರಚಿಸಿದ್ದಾನೆ.

ದಿಗಂಬರ ಜೈನರ ಆದಿಗ್ರಂಥವಾದ ಷಟ್ಖಂಡಾಗಮಕ್ಕೆ ವೀರಸೇನನೆಂಬ ಆಚಾರ್ಯನು ಧವಲಾ ಎನ್ನುವ ವ್ಯಾಖ್ಯಾನವನ್ನು ಬರೆದಿದ್ದಾನೆ. ರಾಷ್ಟ್ರಕೂಟ ಅರಸನಾದ ಅಮೋಘವರ್ಷ ನೃಪತುಂಗನ ಗುರುವಾಗಿದ್ದ ಪ್ರಸಿದ್ಧ ಜೈನಾಚಾರ್ಯ ಜಿನಸೇನನು, ವೀರಸೇನನ ಧವಲಾ ಟೀಕೆಯ ಉತ್ತರಾರ್ಧವನ್ನು ಜಯಧವಲಾ ಎನ್ನುವ ಹೆಸರಿನಲ್ಲಿ ರಚಿಸಿ ಪೂರ್ಣಗೊಳಿಸಿದ್ದಾನೆ. ಈ ಟೀಕೆಯು ಸಂಸ್ಕೃತ-ಪ್ರಾಕೃತ ಮಿಶ್ರರೂಪದಲ್ಲಿದೆ.

ಅತ್ಯಂತ ಪ್ರಮುಖ ಹಾಗೂ ಪ್ರಸಿದ್ಧ ಜೈನಾಚಾರ್ಯರಲ್ಲಿ ನೇಮಿಚಂದ್ರನೂ ಒಬ್ಬನು. ನೇಮಿಚಂದ್ರನು ದೇಶಿಯ ಗಣಕ್ಕೆ ಸೇರಿದವನಾಗಿದ್ದನು. ನೇಮಿಚಂದ್ರನನ್ನು ಚಾಮುಂಡರಾಯನು ತುಂಬ ಆದರಿಸುತ್ತಿದ್ದನು ಎಂದು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನ ಪದ್ಮಾವತಿ ಮಂದಿರದಲ್ಲಿಯ ಶಿಲಾಶಾಸನ (ಕ್ರಿ.ಶ. ೧೫೩೦)ದಿಂದ ತಿಳಿದುಬರುತ್ತದೆ.

"__________ ಭುವಿ ನೇಮಿಚಂದ್ರ:
ವಿಭೂತಿ ಸೈದ್ಧಾಂತಿಕ ಸಾರ್ವಭೌಮ:
ಚಾಮುಂಡರಾಜಾರ್ಚಿತ ಪಾದಪದ್ಮ: ।
(*Epigraphia Carnatika* Vol. 8 Nagar Taluk No. 46)

ನೇಮಿಚಂದ್ರನೂ ಸಹ ತನ್ನ ಗೊಮ್ಮಟಸಾರವೆಂಬ ಗ್ರಂಥದಲ್ಲಿ ಅವನನ್ನು ಚಾಮುಂಡರಾಯ ರಾಜ, ಗೊಮ್ಮಟರಾಯ ಎಂದು ಕರೆದಿದ್ದಾನೆ. ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರನು ದ್ರವ್ಯಸಾರ ಸಂಗ್ರಹ, ಗೊಮ್ಮಟಸಾರ, ಲಬ್ಧಸಾರ, ಕ್ಷಪಣಸಾರ, ತಿಲೋಕ ಸಾರ, ಪ್ರತಿಷ್ಠಾಪಥಾ ಎಂಬ ಆರು ಕೃತಿಗಳನ್ನು ರಚಿಸಿದ್ದಾನೆ.

ಮೂಲಾಚಾರವೆಂಬ ಗ್ರಂಥವನ್ನು ರಚಿಸಿದ ವಟ್ಟಕೇರನು ಕರ್ನಾಟಕಕ್ಕೆ ಸಂಬಂಧಿಸಿದವನೆಂದು ಚರಿತ್ರಕಾರರು ತಿಳಿಯಪಡಿಸುತ್ತಾರೆ. 'ವಟ್ಟಕೇರ' ಹೆಸರಿನ ಬದಲು ಕೆಲವೆಡೆ ಗಳಲ್ಲಿ ವಟ್ಟೇರಕ ಎಂಬ ಹೆಸರೂ ಬರುವುದು. ವಟ್ಟಕೇರನು ಒಬ್ಬ ಪ್ರಭಾವೀ ಜೈನ ಗ್ರಂಥಕಾರನು. ವಟ್ಟಕೇರ ಎಂಬುದು ಭಟ್ಟಾರಕ, ವೃತ್ತಿಕಾರ ಎಂಬುದರ ಪ್ರಾಕೃತ ರೂಪ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. 'ವಟ್ಟಕೇರ' ಎಂಬುದರಲ್ಲಿಯ ಕೊನೆಯ ಪದ ಕೇರ–ಕೆರೆ ಅಥವಾ ಕೇರಿಗೆ ಸಂಬಂಧಿತವಾಗಿದೆ ಎಂದೂ ಅದರ ಮೇಲಿಂದ ಅವನು ಕರ್ನಾಟಕದವನೆಂದೂ ಇನ್ನು ಕೆಲವು ಪಂಡಿತರು ನಿರ್ಣಯಿಸುತ್ತಾರೆ. ಪಂ. ನಾಥುಪ್ರೇಮಿಯವರು ತಮ್ಮ ಜೈನಧರ್ಮ ಔರ ಇತಿಹಾಸ್ ಎಂಬ ಗ್ರಂಥದಲ್ಲಿ ವಟ್ಟಕೇರ, ವೆಟ್ಟಕೇರಿ, ವಟ್ಟಕೇರಿ ಎಂದು ಪ್ರಸ್ತಾಪಿಸಿ, ಅದು ಊರಿನ ಹೆಸರೆಂದೂ, ಕರ್ನಾಟಕದಲ್ಲಿ ಊರಿನ ಹೆಸರನ್ನು ಸ್ವನಾಮಧೇಯದ ಪೂರ್ವದಲ್ಲಿ ಹಚ್ಚಿಕೊಳ್ಳುವ ಪರಿಪಾಠವಿದೆಯಾದ್ದರಿಂದ ವಟ್ಟಕೇರಿಯು ಈಗಿನ ಬೆಟಗೇರಿ, ಕರ್ನಾಟಕದ ಒಂದು ಊರು; ವಟ್ಟಕೇರನು ಆ ಊರಿನವನೆಂದೂ ಹೇಳಿದ್ದಾರೆ. ಕರ್ನಾಟಕದಲ್ಲಿ ಬೆಟಗೇರಿ ಎಂಬ ಊರಿನ ಹೆಸರುಗಳು ಅನೇಕ ಇವೆ. ಬೆಟ್ಟಗೆರೆ ಎಂಬ ಊರಿನ ಹೆಸರು ಕರ್ನಾಟಕದ ಹಿರೇಯಂಗಡಿ ಬಸದಿಯ ಪದ್ಮಾವತಿದೇವಿಯ ಮಂದಿರದಲ್ಲಿ ಒಂದು ಕಂಬದ ಮೇಲೆ ಸಂವತ್ಸರ ೧೪೬ರ ಶಾಸನದಲ್ಲಿ ಕನ್ನಡಭಾಷೆಯಲ್ಲಿ ಇರುವ ಶಿಲಾಲೇಖದಲ್ಲಿ ಬರುವದು. ಆದ್ದರಿಂದ ಕಾರ್ಕಳದ ಹತ್ತಿರ, ಆ ಊರು ಇರಬೇಕು; ಎಂದು ಒಂದು ಮತ. ಪಂಡಿತ ಸುಬ್ಬಯ್ಯ ಶಾಸ್ತ್ರಿಯವರು ಶ್ರವಣಬೆಳಗೊಳದ ಒಂದು ಮೊಹಿಲ್ಲಾದ ಹೆಸರು ಬೆಟಗೆರೆಇರುವದೆಂದೂ ಹೇಳಿದ್ದಾರೆ. ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯಲ್ಲಿ ಬೆಟಗೇರಿ ಎಂಬ ಗ್ರಾಮವೂ ಒಂದು ಇದೆ. ಇವುಗಳಲ್ಲಿ ವಟ್ಟಕೇರನ ಊರು ಬೆಟಗೇರಿ ಎಂಬುದನ್ನು ನಿಶ್ಚಿತವಾಗಿ ಗೊತ್ತುಪಡಿಸಲು ಸಾಧನಗಳಿಲ್ಲ. ವಟ್ಟಕೇರನ ಊರು ವಟ್ಟಕೇರಿ–ವಟಗೇರಿ (ವಳಕೇರಿ) ಯಾಗಿರಬಹುದೇನೋ? ಧಾರವಾಡ ಜಿಲ್ಲೆಯ ಬಂಕಾಪುರದ ಹತ್ತಿರ 'ವಳಕೇರಿ' ಎಂಬ ಗ್ರಾಮವಿದೆ. ಆ ವಳಕೇರಿಯೂ ವಟಕೇರಿಯಾಗಿರಬಹುದು. ಬಂಕಾಪುರವು ಪ್ರಾಚೀನ ಕಾಲದಲ್ಲಿ ಜೈನಧರ್ಮ ಹಾಗೂ ಸಂಸ್ಕೃತಿಯ ಕೇಂದ್ರವಾಗಿತ್ತೆಂದು ಇತಿಹಾಸದಿಂದ ಗೊತ್ತಾಗುತ್ತದೆ. ವಟಕೇರಿಯು ವಳಕೇರಿ ರೂಪವನ್ನು ಹೊಂದಿರಬಹುದು. "ಟ" ಕಾರವು ಕನ್ನಡದಲ್ಲಿ 'ಳ' ಕಾರವಾಗುವುದು ಸರ್ವಸಮ್ಮತ ವಾದದ್ದು, ಬಂಕಾಪುರ ಮತ್ತು ವಟಗ್ರಾಮ (ವಟಗೇರಿ) ಗಳ ಉಲ್ಲೇಖವು ಮುಂಬರುವ ಜೈನಾಚಾರ್ಯರ ಬಗ್ಗೆ ಇರುವ ಪ್ರಕರಣಗಳಲ್ಲಿಯೂ ಕಂಡುಬರುತ್ತವೆ.

ಪುಷ್ಪದಂತನು ಇನ್ನೊಬ್ಬ ಸುಪ್ರಸಿದ್ಧ ಜೈನ ಪ್ರಾಕೃತ ಮಹಾಕವಿ. ಇವನ ಇನ್ನೊಂದು ಹೆಸರು 'ಹಂಡ'ವೆಂಬುದು ಆಗಿತ್ತು. ಖಂಡವೆಂಬುವದು ಸಂಸ್ಕೃತ ಸ್ಕಂದ ಶಬ್ದದ ಪ್ರಾಕೃತ ರೂಪ. ಕವಿಯು ಕಾಶ್ಯಪ ಗೋತ್ರದಲ್ಲಿ ಹುಟ್ಟಿದ್ದು ತಂದೆಯ ಹೆಸರು ಕೇಶವಭಟ್ಟ ಮತ್ತು ತಾಯಿಯ ಹೆಸರು ಮುಗ್ಗಲಾದೇವಿ. ಗೋತ್ರ ಹಾಗೂ ತಾಯಿ–ತಂದೆಗಳ ಹೆಸರಿನ ಮೇಲಿಂದ, ಅವನು ಜಾತಿಯಿಂದ ಬ್ರಾಹ್ಮಣನೆಂದು ವಿದಿತವಾಗುವದು. ಮೊದಲು ಅವನು ಶೈವನಾಗಿದ್ದು ಆಮೇಲೆ ಜೈನಧರ್ಮಕ್ಕೆ ಮತಾಂತರ ಹೊಂದಿ ಜೈನ ಸನ್ಯಾಸದ ವ್ರತವನ್ನು ಪಡೆದು ನಿರ್ವಾಣ ಹೊಂದಿದನು. ತಾಯಿ–ತಂದೆಗಳು ಮತಾಂತರ ಹೊಂದುವ ಪೂರ್ವದಲ್ಲಿಯೇ ಅವನು ಜನಿಸಿದ್ದನೋ ಅಥವಾ ಆಮೇಲೆ ಜನಿಸಿದನೋ ಎಂಬುದನ್ನು ಹೇಳಲು ಆಧಾರಗಳಿಲ್ಲ. ಆದರೆ ಅವನು ಜೈನವಿದ್ಯೆಗಳಲ್ಲಿ ಪ್ರವೀಣ ನಾಗಿರುವಂತೆ ಬ್ರಾಹ್ಮಣ ವಿದ್ಯೆಯಲ್ಲಿಯೂ ಪ್ರವೀಣನಾಗಿದ್ದಾನೆ. ಇವನ ವಿಷಯಗಳು ಹೆಚ್ಚಾಗಿ ತಿಳಿದುಬರುವುದಿಲ್ಲವಾದರೂ ಇವನು ಕರ್ನಾಟಕಕ್ಕೆ ಸೇರಿದವ ನೆಂದು ಹೇಳಬಹುದು. ರಾಷ್ಟ್ರಕೂಟ ರಾಜಧಾನಿ ಮಾನ್ಯಖೇಟ (ಮಳಖೇಡ)ಕ್ಕೆ ಬರುವ ಮುನ್ನ ಅವನು ಯಾರ ಆಶ್ರಯದಲ್ಲಿದ್ದನೆಂಬುದನ್ನು ನಿಶ್ಚಿತ ವಾಗಿ ಹೇಳಲಿಕ್ಕಾಗದು. ದಿಗಂಬರ ಜೈಧರ್ಮ ಪ್ರಚಾರದಲ್ಲಿದ್ದ ಇವನು ದಕ್ಷಿಣದ ಕಂಚಿಯಿಂದ ಬಂದಿದ್ದನೆಂದು ಕೆಲವರು ವಾದಿಸುತ್ತಾರೆ. ಅವನು ಮಾನ್ಯಖೇಟದಲ್ಲಿ ರಾಷ್ಟ್ರಕೂಟ ರಾಜನಾದ ೩ನೆಯ ಕೃಷ್ಣನ ಮಂತ್ರಿಯಾದ ಭರತನ ಆಶ್ರಮದಲ್ಲಿ ಇದ್ದನು. ಅವನು ಮಹಾಪುರಾಣವನ್ನು ಕ್ರಿ.ಶ. ೯೬೫ರಲ್ಲಿ ರಚಿಸಿದನು. ಮಹಾಪುರಾಣದಲ್ಲಿ ಮಾನ್ಯಖೇಟ ವನ್ನು ವರ್ಣಿಸಿದ್ದಾನೆ. "ಮಾನ್ಯಖೇಟಪುರಂ ಪುರಂದ ಪುರಲೀಚಾರಹಂ ಸುಂದರಮ್॥" ಮುಂದೆ ಅವನು ಭರತನು ಮರಣಹೊಂದಿದ ನಂತರ (ಅಂದರೆ ಕ್ರಿ.ಶ. ೯೬೬ರಲ್ಲಿ) ಭರತನ ಪುತ್ರನಾದ ನನ್ನನ ಆಶ್ರಮದಲ್ಲಿದ್ದು 'ಜಸಹರಚರಿಉ' 'ಣಾಯಕುಮಾರ ಚರಿಉ' ಎಂಬ ಗ್ರಂಥಗಳನ್ನು ರಚಿಸಿದನು. ನನ್ನ ಹಾಗೂ ಅವನ ಮಕ್ಕಳು (ಗುಣವಮ್ಮ ಮತ್ತು ಸೋಹಣ)

'ಣಾಮಕುಮಾರ ಚರಿಉ'ವನ್ನು ಬರೆಯಲು ಪ್ರೇರೆಸಿದರು. ಇವೆಲ್ಲವುಗಳ ಮೇಲಿಂದ ಕವಿಯ ನಿಶ್ಚಿತಕಾಲವನ್ನು ಹೇಳಲಿಕ್ಕಾಗದಿದ್ದರೂ, ೧೧ನೆಯ ಶತಮಾನದವನೆಂದು ಹೇಳಬಹುದು.

ತ್ರಿವಿಕ್ರಮನು ಕರ್ನಾಟಕ ಮೂಲದ ಮೊತ್ತೊಬ್ಬ ಶ್ರೇಷ್ಠ ಪ್ರಾಕೃತ ಕವಿ. ಇವನ ಜೀವನ ಮತ್ತು ಕುಟುಂಬ ಮುಂತಾದವುಗಳ ಬಗ್ಗೆ ನಿರ್ದಿಷ್ಟ ಮಾಹಿತಿಯು ದೊರೆಯು ವುದಿಲ್ಲ. ಆದರೆ ಅವನ ಪ್ರಾಕೃತ ಶಬ್ದಾನುಶಾಸನದ ಪ್ರಾಸ್ತಾವಿಕ ಶ್ಲೋಕಗಳಲ್ಲಿ ಮತ್ತು ಉಪಸಂಹಾರ ವಾಕ್ಯಗಳಲ್ಲಿ ತ್ರಿವಿಕ್ರಮನು ತನ್ನ ಬಗ್ಗೆ ಕೆಲವು ವಿಷಯಗಳನ್ನು ತಿಳಿಸುತ್ತಾನೆ. ತಾನು ಬಾಣಸುಕುಲೋತ್ಪನ್ನನಾಗಿದ್ದು, ತನ್ನ ಅಜ್ಜನ ಹೆಸರು ಆದಿತ್ಯವರ್ಮನೆಂದೂ ತಂದೆಯ ಹೆಸರು ಮಲ್ಲಿನಾಥನೆಂದೂ ತಾಯಿಯ ಹೆಸರು ಲಕ್ಷ್ಮೀಯೆಂದೂ ಹೇಳುತ್ತಾನೆ. ಒಬ್ಬ ಸಹೋದರ ಬಾಮನೆಂದೂ ಮತ್ತು ಅವನು ಮಹಾ ಪಂಡಿತನೆಂದು ಪ್ರಸಿದ್ಧನಾಗಿದ್ದನೆಂದೂ ಹೇಳಿಕೊಂಡಿದ್ದಾನೆ. ಅಲ್ಲದೆ ತನ್ನ ಗುರುವಿನ ಹೆಸರು ಅರ್ಗನಂದಿಯೆಂದಿದ್ದು, ಅವನು ಜಿನಶಾಸ್ತ್ರಗಳಲ್ಲಿ ಪಾರಂಗತನಾಗಿದ್ದು ತ್ರೈವಿಧ್ಯಮುನಿಯೆಂದು ಪ್ರಸಿದ್ಧನಾಗಿದ್ದಾನೆಂದೂ ಹೇಳಿದ್ದಾನೆ. ತಾನು ಒಬ್ಬ ಸುಕವಿಯೆಂದೂ ಮತ್ತು ಶಬ್ದಾನುಶಾಸನ ಕಾವ್ಯವು ಪಾರಾಯಣ ಮಾಡಲು, ಇಷ್ಟ ಉದ್ದೇಶಗಳನ್ನು ದೊರಕಿಸಿ ಕೊಡಲು ಅರ್ಹವೆಂದೂ ಸಾಹಿತ್ಯ ಕಲಾಭಿಮಾನಿಗಳು ಅದನ್ನು ಓದಿ ಪ್ರಶಂಸೆಯನ್ನು ಮಾಡುವರೆಂದು ಹೇಳಿಕೊಂಡಿದ್ದಾನೆ. ತ್ರಿವಿಕ್ರಮನು ಮಹಾವೀರನಲ್ಲದೆ ಧಮಾಲಾ ಟೀಕಾಕೃತ ವೀರಸೇನ ಜಿನಸೇನೆಂಬ ಆಚಾರ್ಯರನ್ನೂ ತನ್ನ ಮಂಗಲಾಚರಣ ಶ್ಲೋಕದಲ್ಲಿ ಸ್ತೋತ್ರ ಮಾಡಿದ್ದರಿಂದ, ಅವನು ದಿಗಂಬರ ಜೈನನೆಂದೂ ಗೊತ್ತಾಗುವದು ಕಾವ್ಯದ ನಾಲ್ಕನೆಯ ಶ್ಲೋಕದಲ್ಲಿ ವೀರಸೇನ ಜಿನಸೇನರನ್ನು ಆಚಾರ್ಯರೆಂದೂ ಭಕ್ತಿಪೂರ್ವಕ ಸ್ಮರಿಸಿದ್ದರಿಂದ ಅವನು ದಿಗಂಬರ ಜೈನನೆಂದೂ ಆದರೂ ಶ್ವೇತಾಂಬರ ಸಂಪ್ರದಾಯದ ಹೇಮಚಂದ್ರನನ್ನು ೧೧ನೆಯ ಶ್ಲೋಕದಲ್ಲಿ ಸ್ಮರಿಸಿದ್ದರಿಂದ, ಅವನು ಉದಾರ ಧರ್ಮವಾದಿಯಾಗಿದ್ದನೆಂದೂ ತಿಳಿದುಬರುವದು.

ತ್ರಿವಿಕ್ರಮನು ತಾನು ಯಾವ ಪ್ರದೇಶದವನೆಂದು ಎಲ್ಲಿಯೂ ಸ್ಪಷ್ಟವಾಗಿ ನಿರ್ದೇಶಿಸಿಲ್ಲ. ಅವನು ದಿಗಂಬರ ಜೈನನಾಗಿದ್ದರಿಂದ, ದಾಕ್ಷಿಣಾತ್ಯನು, ಕರ್ನಾಟಕದವನು. ಕರ್ನಾಟಕದಲ್ಲಿ, ಜಿನಸೇನ ಮತ್ತು ವೀರಸೇನರ ಧವಲಾ ಮತ್ತು ಜಯಧವಲಾ ಟೀಕೆಗಳ ಅಧ್ಯಯನವು ತ್ರಿವಿಕ್ರಮನನ್ನು ವ್ಯಾಕರಣವನ್ನು ಬರೆಯಲು ತುಂಬ ಪ್ರೇರಣೆ ನೀಡಿದ್ದರಿಂದ ಅವನು ಕರ್ನಾಟಕದ ನಿಕಟವರ್ತಿಯಾಗಿರಬೇಕು. ತ್ರಿವಿಕ್ರಮನು ಆಂಧ್ರದವನಾಗಿದ್ದು, ಕರ್ನಾಟಕದ ಅತ್ಯಂತ ನಿಕಟ ಸಂಪರ್ಕವುಳ್ಳವನಾಗಿದ್ದನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಹೀಗೆ ಕರ್ನಾಟಕದವರಾದ ಅಥವಾ ಕರ್ನಾಟಕಕ್ಕೆ ಅತ್ಯಂತ ನಿಕಟವರ್ತಿಗಳಾಗಿದ್ದ ಅನೇಕ ಕವಿಗಳು ಪ್ರಾಕೃತ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಪ್ರಾಕೃತಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಜೈನಕವಿಗಳ ಕೊಡುಗೆ ತುಂಬ ದೊಡ್ಡದು. ತಮ್ಮ ಧರ್ಮಪ್ರಸಾರ ಹಾಗೂ ತತ್ತ್ವ-ಸಿದ್ಧಾಂತಗಳ ಕ್ರೋಢೀಕರಣಕ್ಕಾಗಿ ಅವರು ಪ್ರಾಕೃತಸಾಹಿತ್ಯವನ್ನು ಸಮರ್ಥ ವಾಗಿ ಬಳಸಿಕೊಂಡಿದ್ದಾರೆ. ವಿಪುಲವಾದ ಪ್ರಾಕೃತಸಾಹಿತ್ಯವು ಕಾವ್ಯದೃಷ್ಟಿಯಿಂದಲೂ, ಧಾರ್ಮಿಕ ಹಾಗೂ ಸಮಾಜ ಶಾಸ್ತ್ರೀಯ ಅಧ್ಯಯನ ಹಾಗೂ ಸಂಶೋಧನೆಯ ದೃಷ್ಟಿ ಯಿಂದಲೂ, ಐತಿಹಾಸಿಕ ಅಧ್ಯಯನದ ದೃಷ್ಟಿಯಿಂದಲೂ ತುಂಬ ಮಹತ್ತ್ವ ಪಡೆದಿದೆ. ಕರ್ನಾಟಕದ ಇತಿಹಾಸದ ಅನೇಕ ಮಗ್ಗಲುಗಳ ಸೂಕ್ಷ್ಮಾನ್ವೇಷಣೆಗೂ ಈ ಪ್ರಾಕೃತಸಾಹಿತ್ಯವು ತುಂಬ ಸಹಕಾರಿಯಾಗಿದೆ. ಈ ನಿಟ್ಟಿನಲ್ಲಿ ಹಲವು ಬಗೆಯ ಸಂಶೋಧನೆಗಳಿಗೆ ಇನ್ನೂ ವ್ಯಾಪಕವಾದ ಅವಕಾಶವಿದೆ.

### ಆಧಾರ ಗ್ರಂಥಗಳು


೧. Introduction to Prakrit, ಲೇ. ಎ.ಪಿ. ಉಲ್ನರ್, ಪ್ರ. ಮೋತಿಲಾಲ್ ಬನಾರಸೀದಾಸ್, ದೆಹಲಿ, ೧೯೮೬.

೨. ಕರ್ನಾಟಕ ಪ್ರಾಕೃತ ಕವಿಚರಿತೆ, ಲೇ. ಡಾ. ವರದರಾಜ ಆರ್ ಉಮರ್ಜಿ, ಪ್ರ. ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮.

೩. ಪ್ರಾಕೃತ ಸಾಹಿತ್ಯ ಕಾ ಇತಿಹಾಸ್, ಲೇ. ಜಗದೀಶಚಂದ್ರ ಜೈನ್.

೪. ಪ್ರಾಕೃತ ಸಾಹಿತ್ಯ ಕೈಪಿಡಿ. ಲೇ. ಪ್ರೊ. ಶುಭಚಂದ್ರ, ಪ್ರ. ಪ್ರಾಕೃತ ಜ್ಞಾನಭಾರತಿ ಎಜುಕೇಷನ್ ಟ್ರಸ್ಟ್, ಬೆಂಗಳೂರು, ೧೯೯೦.

೫. ಪ್ರಾಕೃತ ಭಾಷೆ-ಸಾಹಿತ್ಯ, ಸಂ, ಡಾ. ಎಸ್. ಪಿ. ಪಾಟೀಲ, ಪ್ರ. ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೭೩

# ಕಲ್ಯಾಣ ಚಾಲುಕ್ಯರ ಕಾಲದ ಸಂಸ್ಕೃತ ಸಾಹಿತ್ಯ

**ಡಾ. ಕೇಯೂರ ಕರಗುದರಿ***

**ಪ್ರಾ**ಚೀನ ಕಾಲದಿಂದಲೂ ಕರ್ನಾಟಕವು ಎಲ್ಲ ಕ್ಷೇತ್ರಗಳಲ್ಲಿ ಗಣನೀಯವೂ, ವಿಶಿಷ್ಟವೂ ಆದ ಕೊಡುಗೆಯನ್ನು ನೀಡಿದೆ. ಧರ್ಮ, ತತ್ತ್ವಶಾಸ್ತ್ರ, ವಿಜ್ಞಾನ, ವಿವಿಧ ಕಲೆಗಳು – ಹೀಗೆ ಅನೇಕ ಕ್ಷೇತ್ರಗಳಲ್ಲಿ ಕನ್ನಡಿಗರ ಕಾಣ್ಕೆ–ಜಾಣ್ಮೆಗಳು ಮಹತ್ತ್ವಯುತವೂ, ಪ್ರಶಂಸಾರ್ಹವೂ ಆಗಿವೆ. ಹಾಗೆಯೇ ಸಂಸ್ಕೃತ ಸಾಹಿತ್ಯದ ವಿಷಯದಲ್ಲೂ ಕೂಡ ಕರ್ನಾಟಕವು ಹೆಮ್ಮೆ ಪಟ್ಟುಕೊಳ್ಳಬಹುದಾದಷ್ಟು ದೊಡ್ಡ ಪ್ರಮಾಣದ ಮತ್ತು ಅಷ್ಟೇ ಗುಣಮಟ್ಟದ ಕೊಡುಗೆಯನ್ನು ಕೊಟ್ಟಿದೆ. ಸಂಸ್ಕೃತ ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ಕನ್ನಡ ನೆಲದ ಕವಿಗಳು ಸಾಕಷ್ಟು ಕೃತಿರಚನೆಗೈದಿರುವರಾದರೂ, ವಿಶೇಷತಃ ಚಂಪೂ ಶೈಲಿಯ ಹಾಗೂ ವಿಶ್ವಕೋಶಾತ್ಮಕ ಕೃತಿಗಳ ರಚನೆಯಲ್ಲಿ ಕರ್ನಾಟಕದ ಕೊಡುಗೆ ಅನನ್ಯವೂ, ಅಪೂರ್ವವೂ ಆಗಿದೆ.

ಕರ್ನಾಟಕದ ಪ್ರಸಿದ್ಧ ರಾಜವಂಶಗಳಾದ ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಗಂಗ, ಸೇವುಣ, ಹೊಯ್ಸಳ ಮತ್ತು ವಿಜಯನಗರದ ಅರಸರು ಹಾಗೂ ಇಕ್ಕೇರಿಯ ನಾಯಕರಂಥ ಹಲವು ಸಾಮಂತ ದೊರೆಗಳು ಶಾಸ್ತ್ರ, ಕಲೆ, ಸಾಹಿತ್ಯಗಳ ದೊಡ್ಡ ಅಭಿಮಾನಿಗಳೂ, ಪೋಷಕರೂ ಆಗಿದ್ದರು. ಅವರಲ್ಲಿ ಅದೆಷ್ಟೋ ಜನ ಅರಸರು ಸ್ವತಃ ಕವಿಗಳೂ, ವಿದ್ವಾಂಸರೂ ಆಗಿದ್ದುದನ್ನು ಗಮನಿಸಬಹುದು.

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲವು ಸಂಸ್ಕೃತದ ಅನೇಕ ಉತ್ಕೃಷ್ಟ ಸಾಹಿತ್ಯಕೃತಿಗಳು ಮತ್ತು ಶಾಸ್ತ್ರಕೃತಿಗಳ ರಚನೆಗೆ ಸಾಕ್ಷಿಯಾಗಿದೆ. ಅನೇಕ ಕಾವ್ಯಕೃತಿಗಳಲ್ಲದೇ ಧರ್ಮಶಾಸ್ತ್ರ, ಆಡಳಿತ, ಸಂಗೀತ, ವ್ಯಾಕರಣ, ಗಣಿತಶಾಸ್ತ್ರ ಮುಂತಾದ ಹಲವು ವಿಭಿನ್ನ ಕ್ಷೇತ್ರಗಳಲ್ಲಿ ವೈಶಿಷ್ಟಪೂರ್ಣವಾದ ಪ್ರೌಢಗ್ರಂಥಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿಪುಲವಾಗಿ ಮೂಡಿಬಂದವು. ಸುವಿಖ್ಯಾತ ಜೈನಯತಿಯೂ, ಶ್ರೇಷ್ಠ ಕವಿಯೂ ಆಗಿದ್ದ ವಾದಿರಾಜನು, ಕ್ರಿ.ಶ. ೧೦೧೬ ರಿಂದ ೧೦೪೨ರ ವರೆಗೆ ಆಳಿದ ಇಮ್ಮಡಿ ಜಯಸಿಂಹನ ಆಸ್ಥಾನದಲ್ಲಿ ವಿಶೇಷ ಗೌರವ ಹಾಗೂ ಮನ್ನಣೆಯನ್ನು ಪಡೆದಿದ್ದನು. ಈತನು ಷಣ್ಮುಖನೆಂಬ ಹೆಸರಿನಿಂದಲೂ ಕರೆಯಲ್ಪಡುತ್ತಿದ್ದನಲ್ಲದೇ ದ್ವಾದಶವಿದ್ಯಾಪತಿ ಎಂದೂ ಹೆಸರುವಾಸಿಯಾಗಿದ್ದನು. ಪ್ರಾಯಃ ಹನ್ನೆರಡು ವಿದ್ಯೆ ಅಥವಾ ಶಾಸ್ತ್ರಗಳ ಮೇಲೆ ಪ್ರಭುತ್ವವನ್ನು ಅವನು ಸಾಧಿಸಿದ್ದಿರಬಹುದು ಎಂಬುದನ್ನು ಇದು ಸೂಚಿಸುತ್ತದೆ. ಆದರೆ ಇವನ ನಿಜವಾದ ಹೆಸರಿದ್ದುದು ಕನಕಸೇನ ಭಟ್ಟಾರಕ ಎಂದು. ಅನೇಕ ಜೈನ ಶಾಸನಗಳು, ಇವನನ್ನು ಮಹಾಜ್ಞಾನಿ, ಕವಿ, ವಾದಕೋವಿದ ಮತ್ತು ಮುನಿಶ್ರೇಷ್ಠನೆಂದು ಹಾಡಿ ಹೊಗಳುತ್ತವೆ. ಶ್ರವಣಬೆಳಗೊಳದ ಸಂಸ್ಕೃತ ಶಾಸನವೊಂದರ ಪದ್ಯವೊಂದನ್ನು ಇಲ್ಲಿ ಉದಾಹರಣೆಗಾಗಿ ನೋಡಬಹುದು

> **ವಾಗ್ದೇವೀ ಸುಚಿರಪ್ರಯೋಗಸುದೃಢಪ್ರೇಮಾಣಮಪ್ಯಾದರಾ–**
> **ದಾದತ್ತೇ ಮಮ ಪಾರ್ಶ್ವತೋಽಯಮಧುನಾ**
> **ಶ್ರೀವಾದಿರಾಜೋ ಮುನಿಃ ।**
> **ಭೋ ಭೋಃ ಪಶ್ಯತ ಪಶ್ಯತೈಷ ಯಮಿನಾಂ ಕಿಂ ಧರ್ಮ**
> **ಇತ್ಯುಚ್ಚಕೈ–**
> **ರಬ್ರಹ್ಮಣ್ಯಪರಾ ಪುರಾತನಮುನೇರ್ವಾಗ್ವೃತ್ತಯಃ ಪಾಂತು**
> **ವಃ ॥೧**

ಈ ಕನಕಸೇನ ಭಟ್ಟಾರಕನು **ಯಶೋಧರಚರಿತ** ಮತ್ತು **ಪಾರ್ಶ್ವನಾಥಚರಿತ**ಗಳೆಂಬ ಎರಡು ಸುಂದರವಾದ ಕಾವ್ಯಗಳನ್ನು ರಚಿಸಿದ್ದಾನೆ. ಜೈನ ಮತಾನುಯಾಯಿಯಾಗಿದ್ದು ರಾಜರ್ಷಿಯಂತಿದ್ದ ಉಜ್ಜಯಿನಿಯ ಅರಸು ಯಶೋಧರನ ಜೀವನಗಾಥೆಯೇ ಯಶೋಧರಚರಿತ. ಈ ಕಾವ್ಯದ ಮೇಲೆ ಲಕ್ಷ್ಮಣನೆಂಬುವವನ ವ್ಯಾಖ್ಯಾನವೊಂದಿದೆ. ಯಶೋಧರಚರಿತ ಮತ್ತು ಪಾರ್ಶ್ವನಾಥಚರಿತಗಳೆರಡೂ ಕಾಲಿದಾಸನ ಮಹಾಕಾವ್ಯಗಳ ನಂತರ ಬಂದ ಆ ಮಾದರಿಯ ಉತ್ತಮ ಕಾವ್ಯಕೃತಿಗಳೆಂದು ಡಾ. ಕೆ. ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. ಇವಲ್ಲದೇ ವಾದಿರಾಜನು **ನ್ಯಾಯವಿನಿಶ್ಚಯ ವಿವರಣ, ಪ್ರಮಾಣನಿರ್ಣಯ** ಮತ್ತು **ಏಕೀಭಾವಸ್ತೋತ್ರ**ಗಳೆಂಬ ಕೃತಿಗಳನ್ನು ರಚಿಸಿದ್ದಾನೆ. ಪಾರ್ಶ್ವನಾಥಚರಿತದಲ್ಲಿ, ವಾದಿರಾಜನು ತಾನು ಆ ಕಾವ್ಯವನ್ನು ಶಕ ೯೪೭ (ಕ್ರಿ.ಶ. ೧೦೨೫)ರಲ್ಲಿ ದೊರೆ ಜಯಸಿಂಹನ ಆಶ್ರಯದಲ್ಲಿ ಬರೆದನೆಂದೂ ಮತ್ತು ಶ್ರೀಪಾಲಮುನಿಯ ಶಿಷ್ಯನಾಗಿದ್ದ ಮತಿಸಾಗರನು ತನ್ನ ಗುರುವೆಂದೂ ಹೇಳಿಕೊಂಡಿದ್ದಾನೆ.

* ಅಧ್ಯಾಪಕರು, ಹಿರೇಮಲ್ಲೂರು ಈಶ್ವರನ್ ವಿಜ್ಞಾನ ಮಹಾವಿದ್ಯಾಲಯ, ಧಾರವಾಡ–೯೭೪೧೦೫೫೨೪೨.

ವಾದಿರಾಜನಿಗೆ ಸಮಕಾಲೀನನಾಗಿದ್ದ ಮತ್ತೊಬ್ಬ ಜೈನ ಯತಿ ದಯಾಪಾಲಮುನಿಯು **ರೂಪಸಿದ್ಧಿ** ಎಂಬ ವಿದ್ವತ್ಪೂರ್ಣವಾದ ಸಂಸ್ಕೃತ ವ್ಯಾಕರಣ ಗ್ರಂಥವೊಂದನ್ನು ಬರೆದಿದ್ದಾನೆ. ಈ ವ್ಯಾಕರಣ ಗ್ರಂಥವು ಶಾಕಟಾಯನ[೨] ಅಥವಾ ಪಾಲ್ಯಕೀರ್ತಿಯ (ಕ್ರಿ.ಶ. ೮೧೭-೮೭೭) ಸಂಪ್ರದಾಯಕ್ಕೆ ಸೇರಿದುದಾಗಿದೆ. ಈ ದಯಾಪಾಲಮುನಿಯು ತನ್ನ ಗುರು ಮತಿಸಾಗರರ ಬಳಿಯಲ್ಲಿ ವಿದ್ಯಾರ್ಜನೆ ಮಾಡುತ್ತಿದ್ದಾಗ ವಾದಿರಾಜನು ಸಹಪಾಠಿಯಾಗಿದ್ದನೆಂದು ತಿಳಿದುಬರುತ್ತದೆ. ಇದಕ್ಕೆ ಸಮರ್ಥನೆಯಾಗಿ ಶ್ರವಣಬೆಳಗೊಳದ ಪಾರ್ಶ್ವನಾಥ ಬಸದಿಯಲ್ಲಿನ ಶಾಸನವೊಂದು, ಗುರು ಮತಿಸಾಗರರಿಗೆ ದಯಾಪಾಲಮುನಿ ಹಾಗೂ ವಾದಿರಾಜ ಎಂಬ ಇಬ್ಬರು ಪ್ರತಿಭಾಶಾಲಿಗಳಾದ ಶಿಷ್ಯರಿದ್ದರೆಂದು ತಿಳಿಸುತ್ತದೆ.

**ಯಸ್ಯ ಶ್ರೀ ಮತಿಸಾಗರೋ ಗುರುರಸೌ**
**ಚಂಚದ್ಯಶಶ್ಚಂದ್ರಸೂಃ**
**ಶ್ರೀಮಾನ್ಯಸ್ಯ ಸ ವಾದಿರಾಜಗುಣಭೃತ್ ಸಬ್ರಹ್ಮಚಾರೀ**
**ವಿಭೋಃ ।**
**ಏಕೋತೀವ ಕೃತೀ ಸ ಏವ ಹಿ ದಯಾಪಾಲವ್ರತೀ ಯನ್ಮನ-**
**ಸ್ಯಾಸ್ತಾಮನ್ಯಪರಿಗ್ರಹಗ್ರಹಕಥಾ ಸ್ವೇ ವಿಗ್ರಹೇ ವಿಗ್ರಹಃ ॥**[೩]

ವಾದೀಭಸಿಂಹನೆಂಬ ಮತ್ತೋರ್ವ ಜೈನಕವಿಯು ಹಲವಾರು ಶ್ರೇಷ್ಠ ಸಂಸ್ಕೃತ ಕೃತಿಗಳನ್ನು ರಚಿಸುವ ಮೂಲಕ ಸಂಸ್ಕೃತವಾಙ್ಮಯಕ್ಕೆ ಕರ್ನಾಟಕದ ಕೊಡುಗೆಯನ್ನು ವಿಸ್ತರಿಸಿದ್ದಾನೆ. ಈತನು ದಿಗಂಬರ ಜೈನ ಸಂಪ್ರದಾಯಕ್ಕೆ ಸೇರಿದವನಾಗಿದ್ದು ಪುಷ್ಪಸೇನನೆಂಬ ಜೈನಯತಿಯ ಶಿಷ್ಯನಾಗಿದ್ದನೆಂದು ತಿಳಿದುಬರುತ್ತದೆ. ಇವನ ನಿಜವಾದ ಹೆಸರು ಒಡೆಯದೇವ ಎಂದು. ಇವನು **ಗದ್ಯಚಿಂತಾಮಣಿ** ಮತ್ತು **ಕ್ಷಾತ್ರಚಿಂತಾಮಣಿ** ಎಂಬ ಎರಡು ಶ್ರೇಷ್ಠ ಸಂಸ್ಕೃತ ಗದ್ಯಕೃತಿಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಕ್ಷಾತ್ರಚಿಂತಾಮಣಿಯು ಕೆಲವು ಐತಿಹಾಸಿಕ ಮಾಹಿತಿಗಳನ್ನೂ ಒಳಗೊಂಡಿದೆ. ಗದ್ಯಚಿಂತಾಮಣಿಯು ೧೧ ಲಂಭಗಳುಳ್ಳ ಮನೋಜ್ಞ ಕೃತಿಯಾಗಿದ್ದು ಜೀವಂಧರನ ಮಗನಾದ ಸತ್ಯಧರ ಮಹಾರಾಜನ ಜೀವನವನ್ನು ಕುರಿತಾಗಿದೆ.[೪] ಕಲ್ಯಾಣ ಚಾಲುಕ್ಯರ ಕಾಲದ ಮತ್ತೊಂದು ಮಹತ್ತ್ವದ ಸಂಸ್ಕೃತ ಗ್ರಂಥವೆಂದರೆ ಜಯಕೀರ್ತಿಯು ರಚಿಸಿದ **ಛಂದೋನುಶಾಸನ**. ಸಂಸ್ಕೃತ ಛಂದಃಶಾಸ್ತ್ರ ಪರಂಪರೆಯ ಒಂದು ಮಹತ್ತ್ವದ ಗ್ರಂಥವಿದಾಗಿದ್ದು ಸಂಸ್ಕೃತ ಛಂದಃಶಾಸ್ತ್ರದ ಬೆಳವಣಿಗೆಯಲ್ಲಿ ಕೇದಾರಭಟ್ಟನ ವೃತ್ತರತ್ನಾಕರ ಮತ್ತು ಹೇಮಚಂದ್ರನ ಛಂದೋನುಶಾಸನಗಳೆರಡರ ಮಧ್ಯೆ ನಿಲ್ಲುವ ಮಹತ್ತ್ವಪೂರ್ಣವಾದ ಛಂದೋಗ್ರಂಥವಾಗಿದೆ. ಅಷ್ಟೇ ಅಲ್ಲದೇ ಕನ್ನಡ ಛಂದಸ್ಸು ಮತ್ತು ಸಾಹಿತ್ಯದ ಪ್ರಾಚೀನತೆಯನ್ನು ಅರ್ಥ ಮಾಡಿಕೊಳ್ಳುವ ನಿಟ್ಟಿನಲ್ಲಿಯೂ ಈ ಗ್ರಂಥವು ಸಹಕಾರಿಯಾಗಿದೆ.[೫]

ಕಲ್ಯಾಣ ಚಾಲುಕ್ಯರ ಕಾಲದ ಇನ್ನೋರ್ವ ಜೈನಾಚಾರ್ಯ, ಕವಿ ಮಲ್ಲಿಷೇಣನು ಹಲವು ಸಂಸ್ಕೃತ ಕೃತಿಗಳನ್ನು ರಚಿಸಿದ್ದಾನೆ. ಇವನಿಗೆ ಕವಿಶೇಖರಗಾರುಡ, ಮಂತ್ರವೇದಿ ಎಂಬ ಬಿರುದುಗಳಿದ್ದವಲ್ಲದೇ ಈತನು ಸಂಸ್ಕೃತ ಮತ್ತು ಪ್ರಾಕೃತಗಳೆರಡರಲ್ಲೂ ಅಗಾಧ ಪಾಂಡಿತ್ಯವನ್ನು ಹೊಂದಿದ್ದನೆಂದು ತಿಳಿದುಬರುತ್ತದೆ. ಇವನು ಸಂಸ್ಕೃತದಲ್ಲಿ, **ಮಹಾಪುರಾಣ, ಸರಸ್ವತೀಮಂತ್ರಕಲ್ಪ, ಕಾಮಚಾಂಡಾಲೀಕಲ್ಪ, ಭೈರವತೀಕಲ್ಪ, ಜ್ವಾಲಿನೀಕಲ್ಪ, ಸಜ್ಜನಚಿತ್ತಕಲ್ಪ** ಮತ್ತು **ನಾಗಕುಮಾರಕಾವ್ಯ** ಎಂಬ ಏಳು ಕೃತಿಗಳನ್ನು ರಚಿಸಿದ್ದಾನೆ. ನಾಗಕುಮಾರಕಾವ್ಯಕ್ಕೆ **ವ್ರತಪಂಚಮೀಕಥಾ** ಎಂಬ ಹೆಸರೂ ಇದ್ದು ಒಟ್ಟು ಐದು ಸರ್ಗಗಳಲ್ಲಿ ರಚಿತವಾಗಿದೆ. ಸಜ್ಜನಚಿತ್ತವಲ್ಲಭವು ನೀತಿಬೋಧಕವಾದ ಮುಕ್ತಕಗಳ ಮಾದರಿಯ ಇಪ್ಪತ್ತೈದು ಪದ್ಯಗಳನ್ನು ಒಳಗೊಂಡ ಪುಟ್ಟ ಕೃತಿಯಾಗಿದೆ.

ಸಂಸ್ಕೃತದ ಸುಪ್ರಸಿದ್ಧ ಐತಿಹಾಸಿಕ ಮಹಾಕಾವ್ಯಗಳಲ್ಲೊಂದಾದ **ವಿಕ್ರಮಾಂಕದೇವಚರಿತ**ವನ್ನು ಕಾಶ್ಮೀರದ ಕವಿಯಾದ ಬಿಲ್ಹಣನು, ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ (ಕ್ರಿ.ಶ. ೧೦೭೬-೧೧೨೬) ಆಶ್ರಯದಲ್ಲಿ ರಚಿಸಿದನು. ಕಾಶ್ಮೀರದ ಪ್ರವರಪುರ ಬಿಲ್ಹಣನ ಮೂಲ ಸ್ಥಳ. ವ್ಯಾಕರಣ, ಕಾವ್ಯಶಾಸ್ತ್ರ, ತರ್ಕ ಮುಂತಾದ ಅನೇಕ ವಿಷಯಗಳಲ್ಲಿ ಪಾಂಡಿತ್ಯವನ್ನು ಗಳಿಸಿದ ಇವನು ಕಾಶ್ಮೀರದಿಂದ ದಕ್ಷಿಣದ ಕಡೆಗೆ ಪ್ರಯಾಣ ಬೆಳೆಸಿ ಕೊನೆಗೆ ಕಲ್ಯಾಣ ಚಾಲುಕ್ಯರ ಅತ್ಯಂತ ಪ್ರಸಿದ್ಧ ಚಕ್ರವರ್ತಿ ತ್ರಿಭುವನಮಲ್ಲ ವಿಕ್ರಮಾದಿತ್ಯನ ಆಶ್ರಯವನ್ನು ಪಡೆದನು. ತನ್ನ ಆಶ್ರಯದಾತನ ಜೀವನ ಮತ್ತು ಸಾಧನೆಗಳನ್ನು ಈ ಸುಂದರವಾದ ಮಹಾಕಾವ್ಯದಲ್ಲಿ ಚಮತ್ಕೃತಿಜನಕವಾದ ಶೈಲಿಯೊಂದಿಗೆ ಚಿತ್ರಿಸಿದ್ದಾನೆ. ಚಾಲುಕ್ಯರ ವಿಸ್ತಾರವಾದ ವಂಶಾವಳಿ, ವಿಕ್ರಮಾದಿತ್ಯನು ತನ್ನ ಅಣ್ಣ ಇಮ್ಮಡಿ ಸೋಮೇಶ್ವರನನ್ನು ಸರಿಸಿ ಸಿಂಹಾಸನಾರೂಢನಾದ ಪ್ರಸಂಗ, ವಿಕ್ರಮಾದಿತ್ಯನ ವಿವಾಹ, ಅವನ ದಿಗ್ವಿಜಯ, ವಿಶೇಷತಃ ಅವನು ಚೋಳರನ್ನು ಸೋಲಿಸಿದ ಪರಿ, ಹೀಗೆ ಅವನ ಸಮಗ್ರ ಜೀವನವೃತ್ತಾಂತವನ್ನು ೧೮ ಸರ್ಗಗಳ ಈ ಮಹಾಕಾವ್ಯದಲ್ಲಿ ಸುಮನೋಹರವಾದ ವೈದರ್ಭೀ ಶೈಲಿಯಲ್ಲಿ ವರ್ಣಿಸಿದ್ದಾನೆ. ಹಾಗಾಗಿ ಐತಿಹಾಸಿಕ ದೃಷ್ಟಿಯಿಂದಲೂ ಮತ್ತು ಸಾಹಿತ್ಯಿಕ ದೃಷ್ಟಿಯಿಂದಲೂ ಈ ಕೃತಿಯು ತುಂಬ ಮಹತ್ತ್ವ ಪಡೆದಿದೆ. ಬಿಲ್ಹಣನ ರಚನಾಪದ್ಧತಿ ಅತ್ಯಂತ ರಸಪೇಶಲವೂ, ಸಹೃದಯಾಸ್ವಾದ್ಯವೂ ಆಗಿದೆ. ಉದಾಹರಣೆಗಾಗಿ ಒಂದೆರಡು ಪದ್ಯಗಳನ್ನು ಅವಲೋಕಿಸಬಹುದು

**ಅನನ್ಯಸಾಮಾನ್ಯಗುಣತ್ವಮೇವ ಭವತ್ಯನರ್ಥಾಯ**
**ಮಹಾಕವೀನಾಮ್ ।**
**ಜ್ಞಾತುಂ ಯದೇಷಾಂ ಸುಲಭಾಃ ಸಭಾಸು ನ ಜಲ್ಪಮಲ್ಪ**
**ಪ್ರತಿಭಾಃ ಕ್ಷಮಂತೇ ॥**[೬]

ಕೀರ್ತಿಶರೀರಿಗಳಾಗಿ ಅಮರರಾಗಬೇಕಾದರೆ ರಾಜರು ಸತ್ಕವಿಗಳನ್ನು ಗೌರವಿಸಬೇಕೆಂದು ಈ ರೀತಿಯಲ್ಲಿ ಕವಿಮಾತನ್ನು ಹೇಳುತ್ತಾನೆ

**ಸ್ವೇಚ್ಛಾಭಂಗುರಭಾಗ್ಯಮೇಘತಡಿತಃ ಶಕ್ಯಾ ನ ರೋದ್ಧುಂ ಶ್ರಿಯಃ**
**ಪ್ರಾಣಾನಾಂ ಸತತಂ ಪ್ರಯಾಣಪಟಹಶ್ರದ್ಧಾ ನ ವಿಶ್ರಾಮ್ಯತಿ।**
**ತ್ರಾಣಂ ಯೇತ್ರ ಯಶೋಮಯೇ ವಪುಷಿ ವಃ ಕುರ್ವಂತಿ ಕಾವ್ಯಾಮೃತೈಃ**
**ತಾನಾರಾಧ್ಯ ಗುರೂನ್ವಿಧತ್ತ ಸುಕವೀನ್ ನಿರ್ಗರ್ವ ಮುರ್ವೀಶ್ವರಾಃ ॥**[೭]

ಆರನೇ ವಿಕ್ರಮಾದಿತ್ಯನ ಆಶ್ರಯದಲ್ಲಿ ಬೆಳೆದು ದೊಡ್ಡ ಹೆಸರನ್ನು ಗಳಿಸಿದ ಮತ್ತೊಬ್ಬ ಸಂಸ್ಕೃತ ವಿದ್ವಾಂಸನೆಂದರೆ ವಿಜ್ಞಾನೇಶ್ವರ. ಈತನು ಯಾಜ್ಞವಲ್ಕ್ಯಸ್ಮೃತಿಗೆ **ಮಿತಾಕ್ಷರಾ** ಎಂಬ ಅತ್ಯಂತ ಪಾಂಡಿತ್ಯಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಭಾರತೀಯ ಧರ್ಮಶಾಸ್ತ್ರ (ಕಾನೂನು) ಪರಂಪರೆಯಲ್ಲಿ ಇದಕ್ಕೆ ಅತ್ಯಂತ ಮಹತ್ತ್ವಪೂರ್ಣವಾದ ಸ್ಥಾನವಿದ್ದು ಜಗತ್ತಿನೆಲ್ಲೆಡೆ ಪ್ರಸಿದ್ಧಿಯನ್ನು ಗಳಿಸಿದೆ. ಮಿತಾಕ್ಷರದ ಕುರಿತಾಗಿ ಮಹಾಮಹೋಪಾಧ್ಯಾಯ ಡಾ. ಪಿ.ವಿ. ಕಾಣೆಯವರು ಹೀಗೆ ಹೇಳುತ್ತಾರೆ, "ಸಮಗ್ರ ಧರ್ಮಶಾಸ್ತ್ರವಾಙ್ಮಯದಲ್ಲಿ ಮಿತಾಕ್ಷರಾ ವ್ಯಾಖ್ಯಾನಕ್ಕಿರುವ ಸ್ಥಾನಮಾನವು ಅನ್ಯಾದೃಶವಾದುದು. ಇದು ವ್ಯಾಕರಣಶಾಸ್ತ್ರದಲ್ಲಿ ಪತಂಜಲಿಯ ಮಹಾಭಾಷ್ಯಕ್ಕೂ, ಕಾವ್ಯಶಾಸ್ತ್ರದಲ್ಲಿ ಮಮ್ಮಟನ ಕಾವ್ಯಪ್ರಕಾಶಕ್ಕೂ ಇರುವ ಸ್ಥಾನಮಾನಕ್ಕೆ ಸಂವಾದಿಯಾಗಿದೆ. ಸಾವಿರಾರು ವರ್ಷಗಳಿಂದ ಮುಂದುವರೆದುಕೊಂಡು ಬಂದಿರುವ ಧರ್ಮಶಾಸ್ತ್ರದ ಸೂಕ್ಷ್ಮಾತಿಸೂಕ್ಷ್ಮವಾದ ತಾರ್ಕಿಕ ಚರ್ಚೆ, ವಿಮರ್ಶೆಗಳ ಸಾರವನ್ನು ಅದು ಪ್ರತಿನಿಧಿಸುತ್ತದೆ. ಭಾರತೀಯ ಸಂವಿಧಾನದ ರಚನೆಯಲ್ಲಿ, ಹಿಂದೂ ಕಾನೂನಿಗೆ ಸಂಬಂಧಿಸಿದ ದತ್ತು ಸ್ವೀಕಾರ, ವಾರಸುದಾರಿಕೆ, ಆಸ್ತಿ ಹಂಚಿಕೆ ಹೀಗೆ ಅನೇಕ ವಿಷಯಗಳನ್ನು ನಿರ್ಣಯಿಸುವಾಗ ಮಿತಾಕ್ಷರವು ಒಂದು ಅಧಿಕೃತವಾದ ಪ್ರಮಾಣವಾಗಿ ಪರಿಗಣಿಸಲ್ಪಟ್ಟಿರುವುದನ್ನು ಕಾಣಬಹುದು......"[೮] ವಿಜ್ಞಾನೇಶ್ವರನು ತನ್ನ ಮಿತಾಕ್ಷರಾ ಕೃತಿಯ ಬಗ್ಗೆ ಅದರ ಕೊನೆಯಲ್ಲಿ ಹೀಗೆ ಹೇಳಿಕೊಂಡಿದ್ದಾನೆ.

**ಇತಿ ಯಾಜ್ಞವಲ್ಕ್ಯಮುನಿಶಾಸ್ತ್ರಗತಾ ವಿವೃತಿರ್ನ ಕಸ್ಯ ವಿಹಿತಾ ವಿದುಷಃ ।**
**ಪ್ರಮಿತಾಕ್ಷರಾಪಿ ವಿಪುಲಾರ್ಥವತೀ ಪರಿಷಿಂಚತಿ ಶ್ರವಣಯೋರಮೃತಮ್ ॥**

ಮಿತಾಕ್ಷರವು ಕೇವಲ ಯಾಜ್ಞವಲ್ಕ್ಯಸ್ಮೃತಿಯ ಮೇಲಿನ ವ್ಯಾಖ್ಯಾನವಷ್ಟೇ ಆಗಿರದೇ, ಪೂರ್ವಮೀಮಾಂಸಾಶಾಸ್ತ್ರ ವಿಹಿತವಾದ ಭಾಷ್ಯ-ವ್ಯಾಖ್ಯಾನನಿಯಮಗಳಿಗೆ ಅನುಸಾರವಾಗಿ ವಿವಿಧ ಸ್ಮೃತಿಗಳ ನಡುವೆ ಇರುವ ಸಾಮ್ಯ-ವೈಷಮ್ಯಗಳ ವಿವರಣೆಯನ್ನೂ ನೀಡುವ ಮೂಲಕ ಧರ್ಮಶಾಸ್ತ್ರಾಧ್ಯೇತೃಗಳಿಗೆ ಒಂದು ಪರಮೋಪಕಾರಿಯಾದ ಕೈಪಿಡಿಯಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ ಅಪರಾರ್ಕನೆನ್ನುವ ಮತ್ತೋರ್ವ ಘನ ವಿದ್ವಾಂಸನು ಯಾಜ್ಞವಲ್ಕ್ಯಸ್ಮೃತಿಯ ಮೇಲೆ **ಯಾಜ್ಞವಲ್ಕೀಯಧರ್ಮಶಾಸ್ತ್ರನಿಬಂಧನಮ್** ಎಂಬ ಪ್ರಗಲ್ಭವಾದ ವ್ಯಾಖ್ಯಾನವನ್ನು ಬರೆದನು. ಇದು ಮಿತಾಕ್ಷರದಂತಲ್ಲದೇ ಗಾತ್ರದಲ್ಲಿ ತುಂಬ ದೊಡ್ಡದಾಗಿದ್ದು ಗೃಹ್ಯಸೂತ್ರಗಳು, ಧರ್ಮಸೂತ್ರಗಳು, ಸ್ಮೃತಿಗಳು ಹಾಗೂ ಪುರಾಣಗಳೇ ಮೊದಲಾದವುಗಳ ವಾಕ್ಯಗಳನ್ನು ಧಾರಾಳವಾಗಿ ಉದ್ಧರಿಸಲಾಗಿದೆ. ಈ ಅಪರಾರ್ಕನು ಅಪರಾದಿತ್ಯನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದು ಕೊಂಕಣ ಭಾಗದಲ್ಲಿ ಆಳುತ್ತಿದ್ದ ಶಿಲಾಹಾರ ರಾಜಮನೆತನಕ್ಕೆ ಸೇರಿದವನಾಗಿದ್ದನು.[೯]

ಆರನೇ ವಿಕ್ರಮಾದಿತ್ಯನ ಮಗನಾದ ಭೂಲೋಕಮಲ್ಲ ಸೋಮೇಶ್ವರ ಅಥವಾ ಮೂರನೇ ಸೋಮೇಶ್ವರನು ಸ್ವತಃ ದೊಡ್ಡ ಸಂಸ್ಕೃತ ಪಂಡಿತನಾಗಿದ್ದನು. ಈತನು ರಚಿಸಿದ **ಮಾನಸೋಲ್ಲಾಸ** ಅಥವಾ **ಅಭಿಲಷಿತಾರ್ಥಚಿಂತಾಮಣಿ** ಜಗತ್ಪ್ರಸಿದ್ಧವಾಗಿದೆ. ಪ್ರಾಯಃ ಇದನ್ನು ಸಂಸ್ಕೃತದ ಮೊದಲ ವಿಶ್ವಕೋಶಾತ್ಮಕ ಕೃತಿಯೆನ್ನಬಹುದು. ಸಮಾಜದ ಎಲ್ಲ ವರ್ಗಗಳಿಗೂ ಸಂಬಂಧಿಸಿದ ವಿಷಯಗಳನ್ನು ಇದು ಒಳಗೊಂಡಿದೆ. ಇದೊಂದು ಬೃಹತ್ ವಿಶ್ವಕೋಶವಾಗಿದ್ದು, ಪ್ರತಿಯೊಂದರಲ್ಲೂ ಇಪ್ಪತ್ತು ಉಪವಿಭಾಗಗಳುಳ್ಳ ಐದು ಅಧ್ಯಾಯಗಳಲ್ಲಿ ಒಟ್ಟು ೮೦೦೦ ಶ್ಲೋಕಗಳನ್ನು ಒಳಗೊಂಡಿದೆ. ಈ ರೀತಿಯಲ್ಲಿ ಮಾನಸೋಲ್ಲಾಸವು ಒಟ್ಟು ನೂರು ಅಧ್ಯಾಯಗಳನ್ನು ಹೊಂದಿದ್ದು ವೈದ್ಯಶಾಸ್ತ್ರ, ಸಂಗೀತ ಶಾಸ್ತ್ರ, ಮನೋರಂಜನೆ ಮುಂತಾದವುಗಳೂ ಸೇರಿದಂತೆ ಒಟ್ಟು ನೂರು ವಿವಿಧ ವಿಷಯಗಳನ್ನು ಒಳಗೊಂಡಿದೆ. ವಿಶೇಷವಾಗಿ ರಾಜಪರಿವಾರದ ಸದಸ್ಯರ ಶಿಕ್ಷಣಕ್ಕಾಗಿ ಈ ಗ್ರಂಥವು ರಚಿತವಾಗಿರುವುದೆಂದು ತೋರುತ್ತದೆ. ಮಾನಸೋಲ್ಲಾಸಕಾರನು ಅದರ ಮೊದಲ ಅಧ್ಯಾಯವನ್ನು ರಾಜ್ಯಪ್ರಾಪ್ತಿಕರಣವಿಂಶತಿ ಎಂದು ಹೆಸರಿಸಿದ್ದಾನೆ. ಈ ಅಧ್ಯಾಯವು ಸಾಮ್ರಾಜ್ಯವನ್ನು ಪಡೆದುಕೊಳ್ಳಲು ಬೇಕಾದ ಸಾಧನ, ಮಾರ್ಗೋಪಾಯಗಳನ್ನು ಕುರಿತು ವಿವರಿಸುತ್ತದೆ. ಎರಡನೆಯ ಅಧ್ಯಾಯದ ಹೆಸರು ಪ್ರಾಪ್ತರಾಜ್ಯಸ್ಥಿರೀಕರಣ ವಿಂಶತಿ ಎಂದು. ಹೆಸರೇ ಸೂಚಿಸುವಂತೆ ಗಳಿಸಿಕೊಂಡ ಸಾಮ್ರಾಜ್ಯವು ಸುಭದ್ರವಾಗಿ ನೆಲೆಗೊಳ್ಳಲು ಬೇಕಾದ ಉತ್ತಮ ಆಡಳಿತ ವ್ಯವಸ್ಥೆ ಮತ್ತು ಅದರ ನಿರ್ವಹಣೆಯ ಕುರಿತಾಗಿ ಈ ಅಧ್ಯಾಯವು ಹೇಳುತ್ತದೆ. ಮೂರನೆಯ ಅಧ್ಯಾಯವು ಉಪಭೋಗವಿಂಶತಿ ಎಂದಿದ್ದು ಇದರಲ್ಲಿ ಮುಖ್ಯವಾಗಿ ವಾಸ್ತುಶಿಲ್ಪ, ಚಿತ್ರಕಲೆ ಮುಂತಾದ ವಿಷಯಗಳ ವಿಸ್ತಾರವಾದ

ವಿವರಣೆಯಿದೆ. ನಾಲ್ಕನೆಯ ಅಧ್ಯಾಯವಾದ ವಿನೋದ ವಿಂಶತಿಯು ವಿವಿಧ ಪ್ರಕಾರದ ಮನೋರಂಜನೆ ಹಾಗೂ ವೈನೋದಿಕ ಸಾಧನಗಳ ವಿಶದವಾದ ವಿವರಣೆಯನ್ನೊಳಗೊಂಡಿದೆ. ಐದನೆಯ ಹಾಗೂ ಕೊನೆಯ ಅಧ್ಯಾಯವು ಕ್ರೀಡೆಗಳನ್ನು ಕುರಿತಾಗಿದೆ. ಮಾನಸೋಲ್ಲಾಸಕಾರನು ಸಂಗೀತಕ್ಕೆ ಅಗ್ರತಾಂಬೂಲವನ್ನಿತ್ತಿದ್ದು ಒಟ್ಟು ೨೫೦೦ ಶ್ಲೋಕಗಳನ್ನು ಸಂಗೀತಶಾಸ್ತ್ರ ಮತ್ತು ವಿವಿಧ ಸಂಗೀತೋಪಕರಣಗಳಿಗಾಗಿ ವಿನಿಯೋಗಿಸಿದ್ದಾನೆ. ಪ್ರಬಂಧಗಳೇ ಮೊದಲಾದ ಸಂಗೀತದ ವಿಶಿಷ್ಟ ಸಂಗತಿಗಳನ್ನೂ ಚರ್ಚಿಸಿದ್ದಾನೆ. ಎಂ. ಕೃಷ್ಣಮಾಚಾರಿಯರ್ ಅವರು ಈ ಕುರಿತಾಗಿ ಹೀಗೆ ಬರೆಯುತ್ತಾರೆ– 'ಸೋಮೇಶ್ವರನು ಮಾನಸೋಲ್ಲಾಸದಲ್ಲಿ ಸಂಗೀತದೆಡೆಗೆ ವಿಶೇಷ ಆಸಕ್ತಿ ಹಾಗೂ ಶ್ರದ್ಧೆಯನ್ನು ತೋರಿದ್ದಾನೆ. ಇದರ ಪ್ರಭಾವ ಯಾವ ಮಟ್ಟದ್ದೆಂದರೆ, ಆತನು ಕರ್ನಾಟಕದ ದೊರೆಯಾದ್ದರಿಂದ ದಕ್ಷಿಣ ಭಾರತೀಯ ಸಂಗೀತಕ್ಕೆ ಕರ್ನಾಟಕ ಸಂಗೀತವೆಂಬ ಹೆಸರು ಪ್ರಚಾರಕ್ಕೆ ಬಂದಿತು.'[೧೦] ಮಾನಸೋಲ್ಲಾಸವು ಆ ಕಾಲದಲ್ಲಿ ವಿಭಿನ್ನ ವಿಷಯಗಳ ಬಗ್ಗೆ ಇದ್ದ ಜ್ಞಾನದ ಸ್ತರವನ್ನು ಅರಿಯುವ ನಿಟ್ಟಿನಲ್ಲಿ ಒಂದು ಹೆಗ್ಗುರುತಾಗಿ ನಿಲ್ಲುತ್ತದೆ. ಮೂರನೇ ಸೋಮೇಶ್ವರನು **ವಿಕ್ರಮಾಂಕಾಭ್ಯುದಯ** ಎಂಬ ಗದ್ಯಕಾವ್ಯವೊಂದನ್ನೂ ರಚಿಸಿದ್ದಾನೆ. ಆದರೆ ಅದು ಪೂರ್ಣವಾಗಿ ಉಪಲಬ್ಧವಿಲ್ಲ. ಬಿಲ್ಹಣನ ವಿಕ್ರಮಾಂಕದೇವಚರಿತದಂತೆಯೇ ಇದೂ ಸಹ ಆರನೇ ವಿಕ್ರಮಾದಿತ್ಯನ ಯಶೋಗಾಥೆಯನ್ನು ವಿಷಯವಸ್ತುವಾಗಿ ಹೊಂದಿದೆ.

ಕಲ್ಯಾಣ ಚಾಲುಕ್ಯರ ಕಾಲದ ಮತ್ತೊಬ್ಬ ಅಪ್ರತಿಮ ಪ್ರತಿಭಾಶಾಲಿಯಾದ ವಿದ್ವತ್ಕವಿ ವಿದ್ಯಾಮಾಧವ. ನಾಲ್ಕನೇ ಸೋಮೇಶ್ವರನ ಆಸ್ಥಾನದಲ್ಲಿದ್ದ ಇವನು **ಪಾರ್ವತೀ ರುಕ್ಮಿಣೀಯಮ್** ಎಂಬ ದ್ವ್ಯಾಶ್ರಯಕಾವ್ಯವನ್ನು ರಚಿಸಿದ್ದಾನೆ. ಶಿವ–ಪಾರ್ವತಿ ಹಾಗೂ ಕೃಷ್ಣ–ರುಕ್ಮಿಣಿಯರ ವಿವಾಹದ ಕಥೆಯನ್ನು ದ್ವಿಸಂಧಾನರೂಪದಲ್ಲಿ ಚಮತ್ಕಾರಿಕವಾಗಿಯೂ ಮನೋಹರವಾಗಿಯೂ ವರ್ಣಿಸುವ ಈ ಮಹಾಕಾವ್ಯವು ಒಂಬತ್ತು ಸರ್ಗಗಳಲ್ಲಿ ರಚಿಸಲ್ಪಟ್ಟಿದೆ.

ಕಲ್ಯಾಣ ಚಾಲುಕ್ಯ ವಂಶದ ಮತ್ತೊಬ್ಬ ರಾಜ ಇಮ್ಮಡಿ ಜಗದೇಕಮಲ್ಲನು **ಸಂಗೀತಚೂಡಾಮಣಿ** ಎಂಬ ಸಂಗೀತಶಾಸ್ತ್ರಗ್ರಂಥವೊಂದನ್ನು ರಚಿಸಿದ್ದಾನೆ. ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಸೌಂದತ್ತಿ ರಟ್ಟ ಅರಸರ ಆಶ್ರಯದಲ್ಲಿದ್ದ ಪಾರ್ಶ್ವದೇವನೆಂಬ ಜೈನಾಚಾರ್ಯನು **ಸಂಗೀತ ಸಮಯಸಾರ**ವೆಂಬ ಕೃತಿಯನ್ನು ರಚಿಸಿದ್ದಾನೆ.

ಶಾಸನಸಾಹಿತ್ಯ: ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸಂಸ್ಕೃತ ಶಾಸನಗಳ ಸಂಖ್ಯೆ ತುಂಬ ಕಡಿಮೆ ಎಂದೇ ಹೇಳಬೇಕು. ಆ ಕಾಲಕ್ಕಾಗಲೇ ಕನ್ನಡವು ಜನಪ್ರಿಯ ಶಾಸನಭಾಷೆಯಾಗಿ ಹೊರಹೊಮ್ಮಿತ್ತು. ಅಲ್ಲದೇ ಆ ಕಾಲದ ತಾಮ್ರಪತ್ರಶಾಸನಗಳಿಗೆ ಹೋಲಿಸಿದರೆ ಶಿಲಾಶಾಸನಗಳ ಸಂಖ್ಯೆ ತುಂಬ ದೊಡ್ಡದು. ಆದಾಗ್ಯೂ ಕಲ್ಯಾಣ ಚಾಲುಕ್ಯರ ಕಾಲದ ಕೆಲವು ಸಂಸ್ಕೃತ ಶಾಸನಗಳು ಸಾಹಿತ್ಯಿಕ ದೃಷ್ಟಿಯಿಂದ ಮಹತ್ತ್ವ ಪಡೆದವುಗಳಾಗಿವೆ. ಉದಾಹರಣೆಗೆ, ಇಂದಿನ ಮಹಾರಾಷ್ಟ್ರ ರಾಜ್ಯದ ನಾಂದೇಡ ಜಿಲ್ಲೆಯ ದೆಗಳೂರ ತಾಲೂಕಿನ ಹೊಟ್ಟೂಲ ಎಂಬ ಗ್ರಾಮದಲ್ಲಿ ದೊರೆತ ಸಂಸ್ಕೃತ ಶಾಸನವೊಂದು[೧೧] ಅಭಿಜಾತ ಕಾವ್ಯಶೈಲಿಯಲ್ಲಿ ರಚಿತವಾಗಿದೆ. ಈ ಶಾಸನದಲ್ಲಿ ಅದರ ಕಾಲನಿರ್ದೇಶವಿಲ್ಲ, ಆದರೆ ಶಾಸನವನ್ನು ಸಂಪಾದಿಸಿದ ಡಾ. ಶ್ರೀನಿವಾಸ ರಿತ್ತಿಯವರು ಅದು ಎರಡನೇ ಸೋಮೇಶ್ವರನ ಕಾಲಕ್ಕೆ (ಕ್ರಿ.ಶ. ೧೦೬೮–೧೦೭೬) ಸೇರಿದುದೆಂದು ನಿರ್ಣಯಿಸಿದ್ದಾರೆ. ಶಾಸನದ ಪಠ್ಯವು ಒಟ್ಟು ೪೩ ಸಂಸ್ಕೃತ ಪದ್ಯಗಳಲ್ಲಿ ರಚಿತವಾಗಿದೆ. ಶಾಸನದಲ್ಲಿ ಅದರ ಕವಿಯ ಹೆಸರಿನ ಉಲ್ಲೇಖವಿಲ್ಲ. ಶಾಸನದ ಕೊನೆಗೆ ಲಕ್ಷ್ಮಣ ಎಂಬುವವನು ಶಾಸನವನ್ನು ಬರೆದವನು (***ಲಿಖಿತಂ ಲೇಖಕ–ಲಕ್ಷ್ಮಣೇನ***) ಎಂದು ಹೇಳಲಾಗಿದ್ದರೂ ಅವನು ಕೇವಲ ಶಾಸನದ ಪಠ್ಯವನ್ನು ಕಲ್ಲಿನ ಮೇಲೆ ಬರೆದವನಾಗಿರಬೇಕೇ ಹೊರತು ಕವಿಯಾಗಿರಲಾರ. ಅಜ್ಞಾತನಾಗಿದ್ದರೂ ಈ ಶಾಸನದ ಕವಿಯು ಶ್ಲಾಘ್ಯವಾದ ಕಾವ್ಯಪ್ರತಿಭೆಯನ್ನು ತೋರಿದ್ದಾನೆ. ಶಾಸನವನ್ನು ಒಂದು ಪುಟ್ಟ ರಸವತ್ಕಾವ್ಯವನ್ನಾಗಿಸುವ ಪ್ರಯತ್ನ ಮಾಡಿದ್ದಾನೆ. ಕಾವ್ಯಶಾಸ್ತ್ರಾನುಸಾರವಾಗಿ ವಿಭಿನ್ನ ಛಂದಸ್ಸುಗಳನ್ನೂ, ಅಲಂಕಾರಗಳನ್ನೂ ಬಳಸಿದ್ದಾನೆ. ಶಾರ್ದೂಲವಿಕ್ರೀಡಿತ, ಸ್ರಗ್ಧರಾ, ವಸಂತತಿಲಕ, ಮಂದಾಕ್ರಾಂತ, ಸ್ವಾಗತ, ಇಂದ್ರವಜ್ರ, ಉಪಜಾತಿ ಮತ್ತು ಅನುಷ್ಟುಪ್–ಹೀಗೆ ಎಂಟು ಬಗೆಯ ಛಂದಸ್ಸುಗಳನ್ನು ಇಲ್ಲಿ ಉಪಯೋಗಿಸಲಾಗಿದೆ. ಕವಿ ಮತ್ತು ಕಾವ್ಯದ ಬಗೆಗಿರುವ ಅಪಾರ ಅಭಿಮಾನ ಮತ್ತು ಶ್ರದ್ಧೆಯನ್ನು ಶಾಸನದ ರಚನಕಾರನು ಹೀಗೆ ಪ್ರಕಟಪಡಿಸುತ್ತಾನೆ–

**ಕಾವ್ಯಾಮೃತೈರ್ವಾಥ ಕಥಾಮೃತೈರ್ವಾ ಅದ್ಯಾಪಿ ಜೀವಂತಿ**
**ಮೃತಾ ಮಹೀಶಾಃ ।**
**ಪೂರ್ವಪ್ರಸಾದಾತ್ಕವಿಪುಂಗವಾನಾಂ ನೃಪಸ್ಯ**
**ತಸ್ಮಾತ್ಕವಿರೇವ ಮಿತ್ರಮ್ ॥**[೧೨]

(ಮೃತರಾದ ರಾಜರು, ಕವಿವರೇಣ್ಯರು ರಚಿಸಿದ ಕಾವ್ಯಾಮೃತದಿಂದಲೇ ಇಂದಿಗೂ ಜೀವಂತವಾಗಿದ್ದಾರೆ. ಹಾಗಾಗಿ ಕವಿಯೇ ರಾಜನ ನಿಜವಾದ ಮಿತ್ರನು.) ಈ ಶ್ಲೋಕವನ್ನು ಈ ಹಿಂದೆ ಉಲ್ಲೇಖಿಸಲಾಗಿರುವ ಬಿಲ್ಹಣನ ವಿಕ್ರಮಾಂಕದೇವಚರಿತದ 'ಸ್ವೇಚ್ಛಾಭಂಗುರಭಾಗ್ಯ...' ಎಂಬ ಪದ್ಯದೊಂದಿಗೆ ಹೋಲಿಸಬಹುದು.

ತನ್ನ ಒಡೆಯನಾದ ಸಿದ್ದುಗಿ ಎಂಬುವವನನ್ನು ಅತಿಶಯವಾಗಿ ಕೊಂಡಾಡುತ್ತ ಕವಿಯು ಹೀಗೆ ಹೇಳುತ್ತಾನೆ–ಶ್ರೀ ಸಿದ್ದುಗಿಯು

ತನ್ನ ಅಸಾಮಾನ್ಯವಾದ ಶಕ್ತಿ, ಗುಣಸಂಪತ್ತಿ ಹಾಗೂ ಲೋಕೋತ್ತರವಾದ ಕೀರ್ತಿಯಿಂದ ವಿಕ್ರಮ, ಶಿಬಿ ಮೊದಲಾದ ಗತಕಾಲದ ಅನೇಕ ಶ್ರೇಷ್ಠ ಪುರುಷರನ್ನೂ ಮೀರಿಸಿದನು. ಇದನ್ನೇ ಸಸಂದೇಹಾಲಂಕಾರಯುತವಾದ ಈ ಕೆಳಗಿನ ಪದ್ಯದಲ್ಲಿ ವರ್ಣಿಸಿದ್ದಾನೆ.

**ಕಿಂ ನಾಗಾರ್ಜುನ ಏಷ ಕರ್ಣನೃಪತಿಃ ಕಿಂ ವಾವತೀರ್ಣೋ ಭುವಿ**
**ಕಿಂ ವಾ ವಿಕ್ರಮಭೂಪತಿಃ ಶಿಬಿರಯಂ ಕಿಂ ವಾಥ ವೈರೋಚನಿಃ ।**
**ಇತ್ಥಂ ಭ್ರಾಂತಿಮಯಂ ಜನಸ್ಯ ಜನಯನ್ನ ಜ್ಞಾಯತೇ ತೇಷು ಕಃ**
**ಶ್ರೀಮತ್ಸಿದ್ದುಗಿರಿತ್ಯಗಾತ್ಪರಮಸೌ ಖ್ಯಾತಿಂ ಜನೇ ಸಾಂಪ್ರತಮ್ ॥**[೧೩]

ಮತ್ತೊಂದು ಪದ್ಯದಲ್ಲಿ ಅರ್ಗದೇವನೆಂಬ ರಾಜನನ್ನು ವರ್ಣಿಸುತ್ತ, ದಿಕ್ಕು-ದಿಕ್ಕುಗಳಲ್ಲಿಯೂ, ದೇಶ-ದೇಶಗಳಲ್ಲಿಯೂ, ಊರೂರುಗಳಲ್ಲಿಯೂ, ನದಿ-ಪರ್ವತಾದಿಗಳಲ್ಲಿಯೂ ವ್ಯಾಪಿಸಿರುವ ಈತನ ಅತಿಶಯವಾದ ಕೀರ್ತಿಯ ಕಾರಣ ದಿಂದಾಗಿ ಮಹಾಭಾರತ, ರಾಮಾಯಣದಂಥ ಮಹಾ ಕೃತಿಗಳೂ ಕೂಡ ಮಾಸಿ ಮರೆಯಾದವು, ಪುರಾಣ-ಚರಿತ್ರೆಗಳು ನುಚ್ಚುನೂರಾದವು.

**ಭಗ್ನಾ ಭಾರತಭಾವತಾ ವಿಗಲಿತೋ ರಾಮಾಯಣೋಪಕ್ರಮಃ**
**ಶೀರ್ಣಾ ಜೀರ್ಣಪುರಾಣಪದ್ಧತಿರಿತೋ ನಾಖ್ಯಾಯಿಕಾನಾಂ ಗತಿಃ ।**
**ಪ್ರತ್ಯಾಶಂ ಪ್ರತಿಮಂಡಲಂ ಪ್ರತಿಪುರಂ ಪ್ರತ್ಯಾಪಗಂ ಪ್ರತ್ಯಗಂ**
**ತಸ್ಯ ಕ್ಷತ್ರಿಯಪುಂಗವಸ್ಯ ಯಶಸಾ ತ್ರೈಲೋಕ್ಯಮಾಪೂರಿತಮ್ ॥**[೧೪]

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸಾಮಂತ ದೊರೆಯಾಗಿದ್ದ ಕದಂಬ ಜಯಕೇಶಿಯ ತಾಮ್ರಶಾಸನದಲ್ಲಿ[೧೫] ಬಂದಿರುವ ಪದಪ್ರಯೋಗವೊಂದು ಗಮನಾರ್ಹವಾಗಿದೆ. ಆ ಶಾಸನದ ಕವಿಯಾದ ವಿಶ್ವರೂಪನೆಂಬುವನು ತನ್ನನ್ನು ವ್ಯವಹಾರ ಪತ್ರಕವಿ[೧೬] ಎಂದು ಕರೆದುಕೊಳ್ಳುತ್ತಾನೆ. ಆಡಳಿತದ ಅಥವಾ ಇನ್ನಿತರ ವ್ಯವಹಾರಗಳ ಅಧಿಕೃತ ದಾಖಲೆಪತ್ರಗಳನ್ನು ಸೊಗಸಾದ ಕಾವ್ಯಶೈಲಿಯಲ್ಲಿ ಬರೆಯುವವನೆಂದು ಅದರರ್ಥ. ಪ್ರಸಿದ್ಧ ಆಲಂಕಾರಿಕನಾದ ರಾಜಶೇಖರನು ತನ್ನ ಕಾವ್ಯ ಮೀಮಾಂಸೆಯಲ್ಲಿ ಶಾಸ್ತ್ರಕವಿ, ಕಾವ್ಯಕವಿ ಮುಂತಾದ ಅನೇಕ ಕವಿಪ್ರಭೇದಗಳನ್ನು ನಿರ್ದೇಶಿಸುತ್ತಾನೆ. ಇಲ್ಲಿ ಬಂದಿರುವ ವ್ಯವಹಾರಪತ್ರಕವಿ ಎಂಬ ಪ್ರಯೋಗವು ಪ್ರಾಯಃ ಕಾವ್ಯಶಾಸ್ತ್ರದಲ್ಲಿ ಅನುಕ್ತವಾದ ಹೊಸದೊಂದು ಕವಿಪ್ರಭೇದವನ್ನು ಪರಿಚಯಿಸುತ್ತದೆ ಎನ್ನಬಹುದೇನೋ.

ಹೀಗೆ ಕಲ್ಯಾಣ ಚಾಲುಕ್ಯ ವಂಶದ ರಾಜರು ಮತ್ತು ಅವರ ಅಧೀನ ದೊರೆಗಳು ಸಂಸ್ಕೃತ ಸಾಹಿತ್ಯದ ಪುರೋಭಿವೃದ್ಧಿಗೆ ವಿಪುಲವಾದ ಅವಕಾಶವನ್ನು ಕಲ್ಪಿಸಿಕೊಟ್ಟರು. ಅವರು ತಮ್ಮ ಸಾಮ್ರಾಜ್ಯದಲ್ಲಿ ಜ್ಞಾನ, ಕಲೆ, ಸಾಹಿತ್ಯ ಹಾಗೂ ವಿವಿಧ ವಿದ್ಯೆಗಳ ವಿಸ್ತಾರ, ಪ್ರಸಾರ, ಪ್ರಚಾರಕ್ಕೆ ಸಾಕಷ್ಟು ಒತ್ತುಕೊಟ್ಟಿದ್ದರು. ತಮ್ಮ ರಾಜಕೀಯ ಮಹತ್ವಾಕಾಂಕ್ಷೆಗಳ ಸಾಧನೆಯ ಜೊತೆ ಜೊತೆಗೇ ಅವರು ಅನೇಕ ಕವಿಗಳಿಗೆ, ವಿದ್ವಾಂಸರಿಗೆ ಆಶ್ರಯವನ್ನು, ಉದಾರವಾದ ದಾನ-ಮಾನಗಳನ್ನೂ ನೀಡಿದ್ದರು. ಇಮ್ಮಡಿ ಪುಲಕೇಶಿಯ ಐಹೊಳೆ ಪ್ರಶಸ್ತಿಯಲ್ಲಿ ಬಂದಿರುವ 'ಶೂರೇ ವಿದುಷಿ ಚ ವಿಭಜನ್ಮಾನಂ ದಾನಂ ಚ ಯುಗಪದೇಕತ್ರ'[೧೭] ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು. ಹೀಗೆ ಒಟ್ಟಿನಲ್ಲಿ ಕಲ್ಯಾಣ ಚಾಲುಕ್ಯರ ಯುಗವು ಸಂಸ್ಕೃತ ಸಾಹಿತ್ಯದ ಇತಿಹಾಸದಲ್ಲಿ ಒಂದು ಮಹತ್ತ್ವದ ಕಾಲಘಟ್ಟವಾಗಿದೆ.



## ಆಧಾರಸೂಚಿ


೧. ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೨, ನಂ. ೭೭, ಪು. ೪೬, ಸಾಲುಗಳು ೧೨೭-೧೩೦.
೨. ಪಾಣಿನಿಯು ಉಲ್ಲೇಖಿಸಿದ ಶಾಕಟಾಯನನು ಇವನಲ್ಲ.
೩. ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೨, ನಂ. ೭೭, ಪು. ೪೬, ಸಾಲುಗಳು ೧೦೮-೧೧೧.
೪. ಎಂ. ಕೃಷ್ಣಮಾಚಾರಿಯರ್, *History of Classical Sanskrit Literature*, Delhi, 1970 p. 476.
೫. ಪಿ.ಜಿ. ಕುಲಕರ್ಣಿ, *ಭಾರತೀಯ ಛಂದಶ್ಶಾಸ್ತ್ರ*, ಬೆಳಗಾವಿ, ೧೯೯೪, ಪು. ೮೧೫.
೬. ಮಹೇಶ ಅಡಕೋಳಿ, *ಸಂಸ್ಕೃತ ಕಾವ್ಯ*, ಪ್ರ. ಭಾರತೀಯ ವಿದ್ಯಾಭವನ. ಬೆಂಗಳೂರು ೨೦೦೨, ಪು. ೬೧.
೭. ಅದೇ.
೮. ಪಿ.ವಿ. ಕಾಣೆ, *History of Dharmashastra*, ಸಂ. ೧, ಪು. ೨೮೭.
೯. ಕಾರ್ಪಸ್ ಇನ್ಸ್ಕ್ರಿಪ್ಷನಂ ಇಂಡಿಕೇರಂ, ಸಂ. ೬, ಪು.
೧೦. ಎಂ. ಕೃಷ್ಣಮಾಚಾರಿಯರ್, *History of Classical Sanskrit Literature*, p. 853.
೧೧. ಶ್ರೀನಿವಾಸ ರಿತ್ತಿ, *Inscriptions from Nanded District*, Nanded, 1968 Ins. No. 33 pp. 63.
೧೨. ಅದೇ ಪು. ೭೧, ಪದ್ಯಸಂಖ್ಯೆ ೪೨. ೧೩. ಅದೇ ಪು. ೬೯, ಪದ್ಯಸಂಖ್ಯೆ ೩೧.
೧೪. ಅದೇ ಪು. ೬೭ ಪದ್ಯಸಂಖ್ಯೆ ೨೧.
೧೫. ಎಂ.ಎಸ್. ನಾಗರಾಜರಾವ್ ಮತ್ತು ಕೆ.ವಿ. ರಮೇಶ, *Copper Plate Inscriptions From Karnataka-Recent Discoveries*, ಮೈಸೂರು, ೧೯೮೫ No. 8 pp. 62 ff.
೧೬. ಅದೇ ನಂ. ೮, ಪು. ೬೯, ಸಾಲು. ೫೫. ೧೭. ಎಪಿಗ್ರಾಫಿಯಾ ಇಂಡಿಕಾ, ಸಂ. ೬, ಪುಟ. ೧.



# ಫ.ಗು. ಹಳಕಟ್ಟಿ: ಚಾರಿತ್ರಿಕ ಕಾವ್ಯ ಸಂಪಾದನೆ

**ಡಾ. ಕೆ. ರವೀಂದ್ರನಾಥ***

**ಈ**ಗಿನ ಬಾಗಲಕೋಟೆ ಜಿಲ್ಲೆಯನ್ನೊಳಗೊಂಡಂತೆ ಅಖಂಡ ಬಿಜಾಪುರ ಜಿಲ್ಲೆಯ ಇತಿಹಾಸದಲ್ಲಿ ಮೂರು ಜನ ಸ್ಮರಣೀಯ ವ್ಯಕ್ತಿಗಳು ನೆನಪಾಗುತ್ತಾರೆ. ಪೂಜ್ಯ ಹಾನಗಲ್ಲ ಕುಮಾರಸ್ವಾಮಿಗಳು, ಹರ್ಡೇಕರ ಮಂಜಪ್ಪನವರು, ವಚನಪಿತಾಮಹ ಫ.ಗು. ಹಳಕಟ್ಟಿಯವರು. ಈ ಮೂವರಲ್ಲಿ ಹಾನಗಲ್ಲ ಶ್ರೀಗಳದ್ದು ಧಾರ್ಮಿಕ ಪ್ರಜ್ಞೆ; ಹರ್ಡೇಕರ ಮಂಜಪ್ಪನವರದು ರಾಷ್ಟ್ರ ಪ್ರಜ್ಞೆ; ಫ.ಗು. ಹಳಕಟ್ಟಿ ಅವರದು ಸಮಾಜ ಪ್ರಜ್ಞೆ. ಇದರರ್ಥ ಹಳಕಟ್ಟಿ ಅವರಲ್ಲಿಯ ಸಮಾಜ ಪ್ರಜ್ಞೆ ಹಾನಗಲ್ಲ ಶ್ರೀಗಲ್ಲಾಗಲೀ ಅಥವಾ ಹರ್ಡೇಕರರಲ್ಲಾಗಲೀ ಇಲ್ಲವೆಂದರ್ಥವಲ್ಲ. ಹಳಕಟ್ಟಿ ಸಮಾಜವನ್ನು ಬೆನ್ನಿಗೆ ಕಟ್ಟಿಕೊಂಡ ಕಾರಣ, ಹಾನಗಲ್ಲ ಶ್ರೀಗಳವರು ಶಿವಯೋಗ ಮಂದಿರದ ಮೂಲಕ ಮಾಡಿದ ಧಾರ್ಮಿಕ ಪುನರುತ್ಥಾನದ ಕಾರಣ, ಕರ್ನಾಟಕ ಗಾಂಧಿ ಎನಿಸಿಕೊಂಡಿದ್ದ ಹರ್ಡೇಕರ ರಾಷ್ಟ್ರಧರ್ಮ ದ್ರಷ್ಟಾರ ಕಾರಣವಾಗಿ ಅವರಲ್ಲಿಯ ಇಂಥ 'ಪ್ರಜ್ಞಾ' ವಿಶೇಷಣ ಗಳನ್ನು ಎತ್ತಿಹೇಳಬೇಕಾಗುತ್ತದೆ. ಇನ್ನೂ ಕುತೂಹಲದ ಸಂಗತಿ ಯೆಂದರೆ ಈ ಮೂರು ಜನ ಬಿಜಾಪುರ ಜಿಲ್ಲೆಗೆ ಹೊರಗಿನಿಂದ ವಲಸೆ ಬಂದು ನೆಲೆಸಿದವರು.

ಫ.ಗು. ಹಳಕಟ್ಟಿ ಎಂದಾಕ್ಷಣ ವಚನ ಸಾಹಿತ್ಯ ನೆನಪಾಗುತ್ತದೆ. ತಮ್ಮ ಜೀವಮಾನದುದ್ದಕ್ಕೂ ವಚನ ಶೋಧ, ಸಂಗ್ರಹ, ಸಂಪಾದನೆ, ಪ್ರಕಟಣೆ ಹಾಗೂ ವಿವೇಚನೆಯನ್ನು ಮಾಡಿದವರು. ಆದರೆ ವಚನಗಳನ್ನು ಹೊರತುಪಡಿಸಿ ೧೯೪೨ರ ಕಾಲಾವಧಿಯಲ್ಲಿ ಚಾರಿತ್ರಿಕ ಕಾವ್ಯಗಳಾದ ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ; ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಮತ್ತು ವೀರಶೈವ ರಾಜಮನೆತನಗಳ ಚರಿತ್ರೆಗಳನ್ನು ಸಂಪಾದಿಸಿಕೊಟ್ಟಿರುವುದು ಇವರ ಚಾರಿತ್ರಿಕ ಪ್ರಜ್ಞೆಗೆ ನಿದರ್ಶನವಾಗಿದೆ. ಇಂಥ ಚಾರಿತ್ರಿಕ ಕಾವ್ಯಗಳ ಸಂಪಾದನೆ, ಪ್ರಕಟಣೆಯ ಹಿಂದಿರುವ ಇತಿಹಾಸವನ್ನು ಪರಿಚಯಿಸುವುದು ಈ ಪ್ರಬಂಧದ ಆಶಯವಾಗಿದೆ.

**೧. ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ:** ೧೮೦೭ರಲ್ಲಿ ರಚನೆಯಾದ ಈ ಕೃತಿ ಇಂಗ್ಲೀಷರಿಗೆ ನೀಡಿರುವ ಸ್ಪಷ್ಟೀಕರಣದ ಪತ್ರ, ಅಂದರೆ ಟಿಪ್ಪುವಿನ ಕಡೆಯವರು ಕೊಡಗಿನ ವೀರರಾಜೇಂದ್ರನ ವಿರುದ್ಧ ಕಂಪನ ಸರಕಾರಕ್ಕೆ ಚಾಡಿ ಹೇಳಿದ ಕಾರಣವಾಗಿ ಕಂಪನಿ ಸರಕಾರ ಸ್ಪಷ್ಟೀಕರಣಕ್ಕಾಗಿ ಪತ್ರ ಬರೆದಿರುತ್ತಾರೆ. ಆ ಪತ್ರಕ್ಕೆ ಬರೆದ ವಿವರಣೆ ರಾಜೇಂದ್ರನಾಮೆ ಯದಾಗಿದೆ. ಹೀಗಿದ್ದೂ ೧೬೮೭ರಿಂದ ೧೭೩೬ರವರೆಗೆ ಆಳ್ವಿಕೆ ಮಾಡಿದ ದೊಡ್ಡ ವೀರಪ್ಪನ ಕಾಲದ ಅನೇಕ ಘಟನೆಗಳು ಇದರಲ್ಲಿ ದಾಖಲಾಗಿವೆ. ಇಂಥ ಚಾರಿತ್ರಿಕ ಕಾವ್ಯವನ್ನು ೧೯೪೩ರ ವೇಳೆಗೆ ಶಿವಾನುಭವ ಗ್ರಂಥಮಾಲೆಯ ೩೧ನೇ ಕೃತಿಯಾಗಿ ಹಳಕಟ್ಟಿ ಅವರು ಮೊದಲ ಬಾರಿಗೆ ಪ್ರಕಟಿಸಿದರು. ಆಗ ಈ ಕೃತಿಯ ಬೆಲೆ ೧-೦-೦ ರೂಪಾಯಿ.

**ಹಸ್ತಪ್ರತಿಯ ಸ್ವರೂಪ ಹಾಗೂ ಸಂಗ್ರಹ:** ಹಳಕಟ್ಟಿ ಪ್ರಕಟಿತ ಈ ರಾಜೇಂದ್ರನಾಮೆ ಅಪೂರ್ಣವಾದದ್ದು ಇದರರ್ಥ ಹಸ್ತಪ್ರತಿಯೇ ಅಪೂರ್ಣವಾಗಿದೆಂದಲ್ಲ. ಮದ್ರಾಸ್‌ನಲ್ಲಿ ವಾಸವಾಗಿದ್ದ ಬಿ. ರಾಮರಾಯರು ರಿಟೈರ್ಡ್ ಸೀನಿಯರ್ ಟ್ರಾನ್ಸಿಲೇಟರ್ ಅವರು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಹಸ್ತಪ್ರತಿಯನ್ನು ಸಿದ್ಧಪಡಿಸಿ ಕೊಟ್ಟಿದ್ದರು. "ಅನಾರೋಗ್ಯ ನಿಮಿತ್ತ ಅದನ್ನು ಮುಂದುವರಿಸಲು ಅವರಿಗೆ ಶಕ್ಯವಾಗಲಿಲ್ಲ. ಗ್ರಂಥವನ್ನು ಪೂರ್ತಿಗೊಳಿಸಬೇಕೆಂದು ಅನೇಕವರ್ತಿ ಸೂಚಿಸುತ್ತಾ ಬಂದರೂ ಅವರಿಗೆ ನೇತ್ರದ ಬಾಧೆ ಮತ್ತು ಶಾರೀರಿಕ ದೌರ್ಬಲ್ಯ ಇವುಗಳ ಮೂಲಕ ಅದನ್ನು ಪೂರ್ಣಗೊಳಿಸುವುದು ಆಗಲಿಲ್ಲ. ಕೆಲವು ದಿವಸಗಳ ಹಿಂದೆ ದಿವಂಗತರಾದರು" ಎಂದು ಹಳಕಟ್ಟಿ ಅವರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ.

ಇದರಿಂದ ವಿಧಿತವಾಗುವ ಸಂಗತಿಯೆಂದರೆ ಮದ್ರಾಸ್ ಪ್ರಾಚ್ಯ ಗ್ರಂಥಾಲಯದಲ್ಲಿ ರಾಜೇಂದ್ರನಾಮೆಯ ಪೂರ್ಣ ಪ್ರಮಾಣದ ಪ್ರತಿ ಇರಬಹುದು. ಶಿವಾನುಭವ ಪತ್ರಿಕೆಗಾಗಿ ಬಿಡಿಬಿಡಿ ರೂಪದಲ್ಲಿ ಪ್ರತಿ ಮಾಡಿ ಕಳಿಸುವ ಉಪಕ್ರಮವನ್ನು ಬಿ.ರಾಮರಾಯರು ಹೊಂದಿದ್ದಾರೆನಿಸುತ್ತದೆ. ಇವರ ಅಕಾಲಿಕ ಮರಣ ಕೃತಿ ಅಪೂರ್ಣತೆಗೆ ಕಾರಣವಾಗಿರಬಹುದು. ಕಾವೇರಿ ಪ್ರಕಾಶನ ಮಡಿಕೇರಿಯಿಂದ ಕೊಡಗಿನ ರಾಜೇಂದ್ರನಾಮೆ ಪ್ರಕಟವಾಗಿದೆ. ಅದು ಪೂರ್ಣ ಪ್ರಮಾಣದ ನಾಮೆ ಆಗಿರಬಹುದು. ಅದೇ ರೀತಿ ೧೯೭೧ರಲ್ಲಿ ಸಂಪಾದಿಸಿದ

* ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹೊಸಪೇಟೆ ತಾ., ಬಳ್ಳಾರಿ ಜಿಲ್ಲೆ. ವಿದ್ಯಾರಣ್ಯ-೫೮೩೨೭೬.

ತಿ.ತಾ. ಶರ್ಮಾ ಅವರ 'ಚಾರಿತ್ರಿಕ ದಾಖಲೆಗಳಲ್ಲಿ'ರುವುದು ರಾಜೇಂದ್ರ ಪತ್ರ ಎಂದು ಪ್ರೊ. ಲಕ್ಷ್ಮಣ ತೆಲಗಾವಿಯವರು ಅಭಿಪ್ರಾಯಪಡುತ್ತಾರೆ. ಹೀಗಾಗಿ ಮಡಿಕೇರಿಯ ಕಾವೇರಿ ಪ್ರಕಾಶನದ ಪ್ರತಿ, ಹಳಕಟ್ಟಿ ಪ್ರಕಟಿತ ಪ್ರತಿ ಹಾಗೂ ತಿ.ತಾ. ಶರ್ಮಾ ಸಂಪಾದಿತ ಪ್ರತಿ – ಈ ಮೂರು ಪ್ರತಿಗಳನ್ನು ಗಮನಿಸಿದರೆ ರಾಜೇಂದ್ರನಾಮೆಯ ನಿಜ ಸ್ವರೂಪ ತಿಳಿದುಬರುತ್ತದೆ.

ಹಳಕಟ್ಟಿ ಅವರಿಗೆ ಪ್ರಕಟಣೆಗಾಗಿ ಸಿದ್ಧಪಡಿಸಿದ ಶ್ರೀ ರಾಮರಾಯರು ರಾಜೇಂದ್ರನಾಮೆಯ ೨ ಪ್ರತಿಗಳನ್ನು ಬಳಸಿಕೊಂಡಿದ್ದಾರೆನ್ನುವುದಕ್ಕೆ ಪದ್ಯದೊಳಗೆ ಕೆಲವು ಪದಗಳನ್ನು ಚೌಕ ಕಂಸದಲ್ಲಿ ಕೊಟ್ಟ ಅಡಿಟಿಪ್ಪಣಿಯಲ್ಲಿ ಈ ಅಂಶವು 'ಅ' ಪ್ರತಿಯಲ್ಲಿ ಇಲ್ಲ. ಈ ಅಂಶವು 'ಬ' ಪ್ರತಿಯಲ್ಲಿ ಇಲ್ಲ ಎಂಬ ಉಲ್ಲೇಖದಿಂದ ಬಿ. ರಾಮರಾಯರೇ ಎರಡು ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಿಸಿದ್ದಾರೆಂದು ತಿಳಿದುಬರುತ್ತದೆ. ಹಳಕಟ್ಟಿಯವರು ಕೇವಲ ಸಂಪಾದಕ/ಪ್ರಕಾಶಕರೆಂದು ಹೇಳಬಹುದು.

**೨. ಕೆಳದಿ ಸಂಸ್ಥಾನದ ರಾಯರ ವಂಶಾವಳಿ:** ೧೯೪೩ರಲ್ಲಿ ಶಿವಾನುಭವ ಗ್ರಂಥಮಾಲೆಯ ೫೯ನೇ ಕೃತಿಯಾಗಿ ಪ್ರಕಟವಾಗಿದೆ. ಇದರ ಬೆಲೆ ೦–೨–೬ ಪೈಸೆ. ಇತಿಹಾಸತಜ್ಞರಿಗೆ ತಿಳಿದಿರುವಂತೆ ಕೆಳದಿ ಚೌಡಪ್ಪನಾಯಕನಿಂದ ಮೊದಲ್ಗೊಂಡು ಸದಾಶಿವನಾಯಕ, ದೊಡ್ಡ ಸಂಕಣ್ಣನಾಯಕ, ಈತನ ತಮ್ಮ ಚಿಕ್ಕ ಸಂಕಣನಾಯಕ, ಈತನ ಅಣ್ಣನ ಮಕ್ಕಳಾದ ಹಿರೇ ವೆಂಕಟಪತಿನಾಯಕ, ರಾಮನಾಯಕರ ವೃತ್ತಾಂತವನ್ನು ಈ ವಂಶಾವಳಿ ಒಳಗೊಂಡಿದೆ. ಇದನ್ನು ಮದ್ರಾಸಿನ ಬಿ. ರಾಮರಾಯರು ಮುದ್ರಣಕ್ಕಾಗಿ ಸಂಪಾದಿಸಿ ಕಳಿಸಿದ ಅಪೂರ್ಣ ಕೃತಿಯಾಗಿದೆ.

**ಹಸ್ತಪ್ರತಿಯ ಸ್ವರೂಪ:** ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಮೂಲ ಪ್ರತಿ ಮದ್ರಾಸ್ ಪ್ರಾಚ್ಯ ಗ್ರಂಥಾಲಯದಲ್ಲಿ ತಾಳೆಪ್ರತಿ ಡಿ.ನಂ. ೧೧೨೩ ಕ್ರಮ ಸಂಖ್ಯೆಯಲ್ಲಿದೆ. ಇದನ್ನಾಧರಿಸಿಯೇ ಬಿ. ರಾಮರಾಯರು ಹಳಕಟ್ಟಿ ಅವರಿಗೆ ಅಚ್ಚಿಗಾಗಿ ಸಿದ್ಧಪಡಿಸಿ ಕಳುಹಿಸಿರಬಹುದು. ಇದೇ ಪ್ರತಿಯ ನಕಲನ್ನು ಕಾಗದದಲ್ಲಿ ಪ್ರತಿ ಮಾಡಲಾಗಿದೆ. ಕ್ರಿ.ಶ. ೧೯೨೦ರಲ್ಲಿ ಮೈಸೂರಿನ ಪ್ರಾಚ್ಯ ಸಂಶೋಧನಾಲಯದ ಪಂಡಿತರೊಬ್ಬರು ಪ್ರತಿಮಾಡಿರುವುದಾಗಿ ಡಾ. ವೈ.ಸಿ. ಭಾನುಮತಿ ಅವರು ತಿಳಿಸುತ್ತಾರೆ. ಈಗ ಈ ಪ್ರತಿ ಮೈಸೂರು ವಿಶ್ವವಿದ್ಯಾನಿಲಯದ ಕೆ.ಎ. ೨೬೬೫ ಕ್ರಮಸಂಖ್ಯೆಯಲ್ಲಿ ಸಂಗ್ರಹಗೊಂಡಿದೆ.

ಈಗ ಕೆಳದಿ ಸಂಸ್ಥಾನದ ರಾಯರ ವಂಶಾವಳಿಯ ೪ ಪ್ರತಿಗಳು ಕೃತಿರೂಪದಲ್ಲಿ ಸಿಗುತ್ತವೆ. ಅವುಗಳಲ್ಲಿ ೨ ಅಪೂರ್ಣ ೨ ಪೂರ್ಣ. ೧೯೪೩ರಲ್ಲಿ ಮೊದಲ ಬಾರಿಗೆ ಹಳಕಟ್ಟಿ ಅವರು ಮಾಡಿರುವ ಅಪೂರ್ಣ ಕೃತಿ; ಅದನ್ನೆ ಸಮಗ್ರ ಸಂಪುಟದಲ್ಲಿ ಪ್ರಕಟಿಸಿದ ಕಲಬುರ್ಗಿ ಅವರದು ಅಪೂರ್ಣ ಕೃತಿ. ಉಳಿದಂತೆ ವೈ.ಸಿ. ಭಾನುಮತಿ ಅವರು ಸಂಪಾದಿಸಿರುವ 'ಕೆಳದಿ ಕಾಲದ ಕನ್ನಡ ಸಾಹಿತ್ಯ' ಕೃತಿಯಲ್ಲಿ ಸಂಪಾದನೆಗೊಂಡ ಪೂರ್ಣ ಪ್ರತಿ; ಮೈಸೂರು ವಿಶ್ವವಿದ್ಯಾನಿಲಯದ ಈ ಪ್ರತಿಯನ್ನೇ ಬಳಸಿಕೊಂಡು ಸಂಪಾದಿಸಿದ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಮಾಲಿಕೆಯಲ್ಲಿ ಡಾ. ಹನುಮಾಕ್ಷಿ ಗೋಗಿ ಅವರದು ಪೂರ್ಣ ಪ್ರತಿ.

ಲಿಂಗಣ್ಣಕವಿಯ ಕೆಳದಿ ನೃಪವಿಜಯ ಈ ವಂಶಾವಳಿಗೆ ಆಕರವಾಗಿದೆ. ಕೆಳದಿ ನೃಪವಿಜಯದ ವರ್ಣನಾ ಭಾಗಗಳನ್ನು ಹೊರತುಪಡಿಸಿ ಸಂಕ್ಷಿಪ್ತಗೊಳಿಸುವ ಉದ್ದೇಶದಿಂದ ಚೌಡಪ್ಪ ನಾಯಕನಿಂದ (ಕ್ರಿ.ಶ. ೧೫೦೦ರಿಂದ) ಕ್ರಿ.ಶ. ೧೭೫೮ರ ಸೋಮಶೇಖರ ನಾಯಕವರೆಗೆ ಕೆಳದಿ ನೃಪವಿಜಯ ವಿಸ್ತಾರಗೊಂಡಿದ್ದರೆ, ವಂಶಾವಳಿ ಚನ್ನಮ್ಮಾಜಿಯ ಆಳ್ವಿಕೆಗೆ ಮುಕ್ತಾಯವಾಗಿದೆ. ಅಂದರೆ ಕೆಳದಿ ನೃಪವಿಜಯ ೧೨ ಆಶ್ವಾಸಗಳಿಂದ ಕೂಡಿದ್ದರೆ. ಈ ವಂಶಾವಳಿ ಕೆಳದಿ ನೃಪವಿಜಯದ ೯ನೇ ಆಶ್ವಾಸದವರೆಗಿನ ಆಕರವನ್ನು ಬಳಸಿಕೊಂಡಿದೆ. ಹೀಗಾಗಿ ಬಹುಶಃ ವಂಶಾವಳಿ ರಚನೆಕಾರ ಕೆಳದಿ ನೃಪವಿಜಯದ ಅಪೂರ್ಣ ಹಸ್ತಪ್ರತಿಯೊಂದನ್ನು ಆಕರವಾಗಿ ಬಳಸಿಕೊಂಡಿರಬಹುದೆ? ಎಂಬ ಸಂದೇಹ ಹುಟ್ಟುತ್ತದೆ.

**೩. ವೀರಶೈವ ರಾಜಮನೆತನಗಳ ಚರಿತ್ರೆಗಳು:** ಹಳಕಟ್ಟಿ ಅವರು ಕೆಳದಿ, ಸ್ವಾದಿ, ಬೀಳಗಿ, ಕೊಡಗು, ಮೈಸೂರು, ಹಾಗಲವಾಡಿ, ಪುಂಗನೂರು, ಸುಗಟೂರು, ಯಲಹಂಕ, ಗುತ್ತರಸರು, ದೇವಗಿರಿ ಯಾದವರು ಮುಂತಾದ ಅರಸು ಮನೆತನಗಳ ಸಾಹಿತ್ಯ–ಶಿಲ್ಪ, ಧಾರ್ಮಿಕ ಸಂಪ್ರದಾಯಗಳನ್ನು ಶಾಸನ, ಸಾಹಿತ್ಯ, ಸ್ಥಳೀಯ ಚರಿತ್ರೆಯ ನೆರವಿನಿಂದ ವೀರಶೈವ ರಾಜಮನೆತನಗಳ ಚರಿತ್ರೆಯನ್ನು ನಿರೂಪಿಸಿದ್ದಾರೆ. ಶಿವಾನುಭವದ ೧೬, ೧೭, ೧೮, ೧೯ ೪ ಸಂಪುಟಗಳ ೨೨ ಸಂಚಿಕೆಯಲ್ಲಿ ವೀರಶೈವ ಅರಸರ ಸಮಗ್ರ ಚರಿತ್ರೆ ಬರೆಯುವ ಪ್ರಥಮ ಪ್ರಯತ್ನ ಮಾಡಿದ್ದಾರೆ. ಸಂಪಾದನೆಗಿಂತ ಸಂಶೋಧನೆಗೆ ಇಲ್ಲಿ ಇಂಬು ದೊರೆತಿದೆ. ಹತ್ತಾರು ಶಾಸನ, ಕಾವ್ಯ, ಸ್ಥಳೀಯ ಇತಿಹಾಸದ ಅವಲೋಕನದಿಂದಾಗಿ ಹಳಕಟ್ಟಿ ಅವರ ಪರಿಶ್ರಮ ಇಲ್ಲಿ ಎದ್ದು ಕಾಣುತ್ತದೆ.

## ಸಂಪ್ರಬಂಧದ ಫಲಿತಗಳನ್ನು ವಿದ್ವಾಂಸರಿಗೆ ಹೀಗೆ ಹೇಳಬಯಸುತ್ತೇನೆ

೧. ಶಿವಶರಣರ ಚರಿತ್ರೆಯನ್ನು ಸಂಗ್ರಹಿಸಿದ ಹಳಕಟ್ಟಿ ಅವರಿಗೆ ನಮ್ಮ ನಾಡಿನ ಚಾರಿತ್ರಿಕ ಸಂಗತಿಗಳನ್ನು

ನಿರೂಪಿಸಬೇಕೆಂಬ ಹಂಬಲ ಎದ್ದು ಕಾಣುತ್ತದೆ. ಯಾಕೆಂದರೆ ಶಿವಾನುಭವದ ಸಂಚಿಕೆಗಾಗಿ ಸಿದ್ಧಪಡಿಸಿದ ಅಥವಾ ತರಿಸಿಕೊಂಡ ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ ಹಾಗೂ ಕೆಳದಿ ಸಂಸ್ಥಾನದ ರಾಯರ ವಂಶಾವಳಿಗಳಂಥ ಅಪೂರ್ಣಕೃತಿಗಳನ್ನು 'ಶಿವಾನುಭವ ಗ್ರಂಥಮಾಲೆ' ಅಡಿಯಲ್ಲಿ ಪ್ರಕಟಿಸಿದ್ದು. ಇಂಥಹ ಚರಿತ್ರೆಗಳು ಕರ್ನಾಟಕಸ್ಥರಿಗೆ ತಿಳಿಯ ಬೇಕೆಂದು ಅಪೂರ್ಣ ಕೃತಿ ಪ್ರಕಟಿಸಿದ್ದೇವೆ. ಯಾರಲ್ಲಾದರೂ ಈ ಪ್ರತಿಗಳು ಇರಬಹುದು. ಕಳುಹಿಸಿದ್ದಲ್ಲಿ ಹೆಚ್ಚಿನದಾಗಿ ಸೇರಿಸಿ ಪ್ರಕಟಿಸಲಾಗುವುದೆಂದು ಅವರೇ ಹೇಳಿಕೊಂಡಿದ್ದಾರೆ.

೨. 'ವೀರಶೈವ ಅರಸುಮನೆತನಗಳ ಚರಿತ್ರೆಯ ನರೂಪಣೆಯಲ್ಲಿ ಹಳಕಟ್ಟಿ ಅವರು ಲೇಖಕರಾಗಿ ಕಾರ್ಯ ನಿರ್ವಹಿಸಿದ್ದಾರೆ.' ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ ಹಾಗೂ ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಪ್ರಕಟಣೆಯಲ್ಲಿ ಗ್ರಂಥಸಂಪಾದಕರಾಗಿ ಅಲ್ಲ, ಸಂಪಾದಕರಾಗಿ (Editor) ಕಂಡುಬರುತ್ತಾರೆ.

೩. ರಾಜೇಂದ್ರನಾಮೆ-ಕೆಳದಿ ವಂಶಾವಳಿ-ಎರಡೂ ಅಪೂರ್ಣವಾಗಿ ಪ್ರಕಟವಾದ ಕಾರಣ ಇವು ಶಿವಾನುಭವ ಪತ್ರಿಕೆಗಾಗಿ ಸಿದ್ಧಪಡಿಸಿ ಕಳಿಸಿದ ಕಾವ್ಯಗಳು ಎಂಬುದು ಒಂದಾದರೆ, ಬಿ. ರಾಮರಾಯರ ಅನಾರೋಗ್ಯ-ಅಕಾಲಿಕ ಮರಣ ಇನ್ನೊಂದು ಕಾರಣ.

ಹೀಗೆ ಒಂದು ಕಾಲದ ಸಾಹಿತ್ಯ ಪ್ರಕಟಣೆಗೆ ಒದಗಿರಬಹುದಾದ ಆಪತ್ತು-ವಿಪತ್ತುಗಳ ಸಂದರ್ಭಗಳು ಐತಿಹಾಸಿಕ ಚಟುವಟಿಕೆಗಳ ಕಾಲಗಣನೆಯ ದೃಷ್ಟಿಯಿಂದಲೂ ಚರ್ಚಿಸುವ ಸಂಗತಿಗಳಾಗುತ್ತವೆಂಬುದು ಇದರಿಂದ ವಿಧಿತವಾಗುತ್ತದೆ.





# ಕೊಡಗಿನಲ್ಲಿ ಭಾಷೆ-ಸಾಹಿತ್ಯ ಪರಂಪರೆ ಮತ್ತು ಸಾಂಸ್ಕೃತಿಕ ಅನ್ವಯಗಳು

ಡಾ. ಎಂ.ಜಿ. ನಾಗರಾಜ್*

**ಕೊ**ಡಗು ಮಲೆಗಳ ಹಸಿರು ಕಾನನದ ತವರೂರು. ಇಲ್ಲಿನ ನಿಸರ್ಗದ ಚೇತೋಹಾರಿ ಚೆಲುವು, ಭಾವನೆಗಳ ಪುಳಕೋತ್ಸವದ ಕೇಂದ್ರವಾಗಿದೆ. ಇಲ್ಲಿ ಸಾಹಿತ್ಯ ಅರಳಿರುವ ಮಾದರಿ ವಿವಿಧ ಸ್ವರೂಪಗಳನ್ನು ತೋರಿವೆ. ಸಾಹಿತ್ಯ ಸಂಸ್ಕೃತಿ ಸಂಶೋಧನೆಗಳ ತ್ರಿಕೂಟ ಈ ಪುಟ್ಟ ಜಿಲ್ಲೆಯ ಪರಿಸರದಲ್ಲಿ ಕಾಣಬರುತ್ತದೆ. ೭.೫ ಮಿಲಿಯನ್ ವರ್ಷಗಳ ಹಿಂದಿನಿಂದಲೂ ಇದ್ದ ಕಾವೇರಿ ಪಶ್ಚಿಮಘಟ್ಟಗಳ ಏರೆತ್ತರವಾಗುವಲ್ಲಿ, 'ಕುಡಹೊಳೆ' (ಕುಡ' ಎಂದರೆ ಪಶ್ಚಿಮ) ಎಂದೆನಿಸಿದ್ದ ಕಾವೇರಿ. ಪಶ್ಚಿಮದಲ್ಲಿ ಎರಡು ಮುಖ್ಯ ಕವಲುಗಳನ್ನು (ನಿಜಗುಣರ **ವಿವೇಕಚಿಂತಾಮಣಿ**ಯಲ್ಲಿ 'ಮರುದ್ವೃದೆ' ಎಂದು ಸಂಬೋಧಿತಳಾದ ಕಾವೇರಿ) ಹೊಂದಿದ್ದು ಗಂಗೆಗಿಂತಲೂ ಹಿರಿಯಳೆನಿಸಿದವಳು. ಕಾವೇರಿಯ ಮೂಲಹೆಸರೆನ್ನಬಹುದಾದ 'ಕುಡಹೊಳೆ' ಶಬ್ದದಿಂದ 'ಕೊಡಗು' ಸ್ಥಳನಾಮವು ರೂಪಗೊಂಡಿದೆ. ಇಂಥ ಕಾವೇರಿಯನ್ನು ಕುರಿತು ಕೊಡಗು ಸಂಬಂಧಿತ ಪುರಾಣ ಭಾಗಗಳಲ್ಲಿ ಭಾಷಾವಲಯದಲ್ಲಿ ಶಾಸನಗಳಲ್ಲಿ ಜಾನಪದದಲ್ಲಿ, ಕಥೆ, ಇತಿಹಾಸ, ಕಾವ್ಯಮಾಧ್ಯಮಗಳಲ್ಲಿ ಉಕ್ತಿಗಳಿವೆ.

ಕ್ರಿ.ಪೂ. ೨೫೦೦ರ ನವಶಿಲಾಯುಗ ಕಾಲದಲ್ಲಿ ಆಡುತ್ತಿದ್ದ ಭಾಷೆ ಪೂರ್ವದ್ರಾವಿಡ ಭಾಷೆ ಆಗಿತ್ತು. ಅದರ ಆರಂಭದ ನೆಲೆ ಕರ್ನಾಟಕವೇ ಆಗಿತ್ತು ಎಂಬುದು ವಿದ್ವಾಂಸರ ಅಭಿಪ್ರಾಯದಲ್ಲಿದೆ. ಮೂಲದ್ರಾವಿಡ ಭಾಷೆಯಿಂದ ಮೂಲ ದಕ್ಷಿಣದ್ರಾವಿಡ ಹುಟ್ಟಿತು. ಅದರಿಂದ ಮೂಲಕನ್ನಡವರ್ಗ ಮೂಲ ತಮಿಳು, ತುಳು, ತೆಲುಗು ವರ್ಗಗಳು ಭಾಷಾ ಪರಿವಾರವಾಗಿ ಹುಟ್ಟಿದವು. ಡಾ. ಹಂಪನಾ ಅವರ ರೀತ್ಯಾ ಮೂಲಕನ್ನಡ ವರ್ಗದಿಂದ ಕನ್ನಡ, ಬಡಗ ಹಾಗೂ ಕೊಡಗು ಭಾಷೆಗಳು ಹುಟ್ಟಿದವೆನ್ನಲಾಗಿದೆ. ಡಾ. ಐ.ಮಾ. ಮುತ್ತಣ್ಣನವರು ತಮ್ಮ ಕೊಡವ-ಕನ್ನಡ ನಿಘಂಟುವಿನಲ್ಲಿ ಕೊಡವರು ಆಡುವ ಭಾಷೆಯಲ್ಲಿ ಶೇ. ೪೦ರಷ್ಟು ಕನ್ನಡ ಶಬ್ದಗಳು ಇಂದಿಗೂ ಪ್ರಚಲಿತವೆಂದಿದ್ದಾರೆ. ತಮಿಳಿನ ಸಂಗಂಸಾಹಿತ್ಯದಲ್ಲಿ 'ಕನ್ನಡಂ, ಕುಡಕಂ ......' ಎಂದು ಭಾಷೆಗಳ ಉಲ್ಲೇಖ ಮಾಡಿರುವಲ್ಲಿ ಕೊಡವ ಭಾಷೆಯ ಹಳಮೆಯೂ ಕ್ರಿಸ್ತಪೂರ್ವಕ್ಕೂ ಹೋಗುತ್ತದೆ. ಪೂರ್ವಹಳಗನ್ನಡ ಭಾಷೆಯಲ್ಲಿ ಬಳಕೆಗಿದ್ದ 'ಅಕ್ಕುಂ' (ಮಂಗಲೀಶನ ಬಾದಾಮಿಯ ಶಾಸನ, ಕ್ರಿ.ಶ. ೬೦೦) ಶಬ್ದ ಇಂದಿಗೂ ಕೊಡವ ಭಾಷಿಕ ಕೊಡವರಲ್ಲಿ 'ಅಕ್ಕು', 'ಅಕ್ಕುವ' ಎಂಬ ರೂಪದಲ್ಲಿ ಬಳಕೆ ಆಗುತ್ತಿದೆ. ಇದಲ್ಲದೆ ಕೊಡಗಿನ ಶಾಸನಗಳಲ್ಲಿ ಶೇ. ೯೯.೫ ಭಾಗ ಕನ್ನಡ ಭಾಷೆಯ ವಾಗಿವೆ.

ಆಳಿದ ದೊರೆಗಳಲ್ಲದೆ ಜನಸಾಮಾನ್ಯರೂ ಸೇರಿದಂತೆ ಹಾಕಿಸಿದ ಪ್ರಕಟಿತ ಶಾಸನಗಳು ೧೦೬, ಅಪ್ರಕಟಿತ ಶಾಸನಗಳು ಸದ್ಯ ಕಂಡುಹಿಡಿರುವಂತೆ ಸುಮಾರು ೧೫ ಶಾಸನಗಳಿದ್ದು, ಒಟ್ಟಾರೆ ಶಾಸನಗಳಲ್ಲಿ ಎರಡು ಶಾಸನಗಳನ್ನು ಬಿಟ್ಟರೆ ಉಳಿದವೆಲ್ಲ ಕನ್ನಡ ಭಾಷೆಯಲ್ಲಿವೆ. ಇವು ಕ್ರಿ.ಶ. ೫ನೇ ಶತಮಾನದಿಂದ ೧೯ನೇ ಶತಮಾನದವರೆಗಿನವಾಗಿದೆ. ಈ ಶತಮಾನಗಳ ನಡುವೆ ಕಾವ್ಯ, ಶಾಸ್ತ್ರ ಸಾಹಿತ್ಯ, ಜನಪದಸಾಹಿತ್ಯ ಬೆಳೆದು ಬಂದುದಕ್ಕೆ ಲಭ್ಯ ಕೃತಿಗಳು ಹಾಗೂ ಜನರಾಡುವ ಮಾತುಗಳೇ ಸಾಕ್ಷಿಯಾಗಿವೆ. ಕೊಡಗು-ತೆರಕಣಾಂಬಿ ಪ್ರದೇಶದವರೆಗೆ ಭೌಗೋಳಿಕ ವಿಸ್ತಾರದಲ್ಲಿ ಹರಡಿಕೊಂಡಿತ್ತು. ಕುಡುಗನಾಡವೊಳಗಣ ತೆರಕಣಾಂಬಿ ಸೀಮೆಯನ್ನು ಬಯಲ್ನಾಡ ಕದಂಬರು ಕಲ್ಪಾತಿ-ವೈನಾಡುಗಳನ್ನೊಳಗೊಂಡ ಬಯಲ್ನಾಡನ್ನೂ ಆಳಿದರು. ಅಂದರೆ ತೆರಕಣಾಂಬಿ ಕಲ್ಪಾತಿ-ವೈನಾಡುಗಳನ್ನೊಗೊಂಡ ಪ್ರದೇಶ 'ಕೊಡಗೂರ್ವಿಷಯೆ ಕುಡುಗನಾಡು' ಎನಿಸಿದ್ದ ಸಂಗತಿ ಚಾಮರಾಜನಗರ ತಾಲೂಕು ಕುಲಗಾಣ ಗ್ರಾಮದ ಕ್ರಿ.ಶ. ೭-೮ನೇ ಶತಮಾನದ ಶಾಸನಗಳಿಂದ ತಿಳಿಯುತ್ತದೆ[೧].

ಬನವಾಸಿ ಕದಂಬರ ಪೈಕಿಯ ವಿಷ್ಣುವರ್ಮನ ಕೊಡಗಿನ ಪ್ರದೇಶವಾಗಿದ್ದ (ಇಂದು ಕೇರಳಕ್ಕೆ ಸೇರಿರುವ) ವೈನಾಡಿನ ಎಡಕಲ್ಲುಗುಡ್ಡದ ಗವಿಯ (ಮುನಕಲ್ ಬೆಟ್ಟದ ಗವಿ) ಕ್ರಿ.ಶ. ೩-೫ ಶತಮಾನದ ಶಾಸನದಿಂದ, ಆ ಕದಂಬರು ಆಳಿದ ಬಗ್ಗೆ ಸೂಚನೆ ಕಾಣುತ್ತದೆ. ೧೦-೧೧ನೇ ಶತಮಾನದಲ್ಲಿ ಹಾನುಗಲ್ಲು ಕದಂಬ ವಂಶಿಕರಾದ ಬಯಲ್ನಾಡ ಕದಂಬರ

* 'ಅನರ್ಘ್ಯ ಶ್ರೀಜಚನಿ ಕೃಪ', # ೨೨೧, ೬೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦.

'ಉರವಿಯ್ಯಮ್ಮರಸ ಚಾಗಿ ('ಉರವಿಯ್ಯಮ್ಮರಸ ಬಯ್ಲನಾಡ-ರಾಜ್ಯಂಗೆಯ್ವನ್ದು', ಸ್ವಸ್ತಿ ಶ್ರೀಮತ್ ಚಾಗಿ ಬಯಲ್ನಾಡಂ ....') ಕನ್ದವರ್ಮ ಮುಂತಾದವರು ಕೊಡಗು ಪ್ರದೇಶವನ್ನೂ ಆಳಿದ ಸಂಗತಿ ಕಾಣುವಲ್ಲಿ ಕನ್ನಡ ಭಾಷೆಯ ಅಂದಿನ ಪ್ರಾಚಲಿತ್ಯದ ಬಗ್ಗೆ ತಿಳಿಯುತ್ತದೆ.

ಕವಿರಾಜಮಾರ್ಗಕಾರನ ಕಾಲಕ್ಕೆ ಕಾವೇರಿಯ ಉತ್ತರ ಮತ್ತು ದಕ್ಷಿಣದಲ್ಲಿದ್ದವರು 'ವಡುಗರು' ಎಂದು ತಮಿಳರಿಂದ ಕರೆಯಲ್ಪಟ್ಟಿದ್ದವರು, ಕನ್ನಡ, ತುಳು, ಕೊಡವ ಭಾಷೆಗಳನ್ನು ಮಾತನಾಡುತ್ತಿದ್ದರು ಎಂದು 'ಶಂಗಂ ತಮಿಳಗಂ'ನಲ್ಲಿ ಷಟ್ಟರ್ ಅವರು ಅಭಿಪ್ರಾಯಪಟ್ಟಿದ್ದಾರೆ. ತೊಲ್‌ಕಾಪ್ಪಿಯಂ ವ್ಯಾಕರಣವೃತ್ತಿಯಲ್ಲಿ 'ಕನ್ನಾಡಂ ವಡುಗಂ ಕುಡಗಂ' ಮತ್ತು ನನ್ನೂಲ್ ವ್ಯಾಕರಣ ವೃತ್ತಿಯಲ್ಲಿ 'ತುಳುವಂ ಕುಡುಗಂ ಕೊಂಗಣಂ ಕನ್ನಡಂ' ಎಂದಿರುವ ಬಗ್ಗೆ ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಗಮನ ಸೆಳೆಯುತ್ತಾರೆ. ಅಂದರೆ ವಡುಗ ಕರುನಾಡವರಲ್ಲಿ ಕನ್ನಡ, ತುಳು, ಕೊಡವ ಭಾಷೆಗಳು ಪ್ರಚಲಿತವಾಗಿದ್ದುದರ ಸೂಚನೆ ಇಲ್ಲಿ ದೊರಕುತ್ತದೆ. ಈಗಾಗಲೇ ಹೇಳಿದಂತೆ ಕೊಡಗಿನ ಶೇ.೯೯.೯ರಷ್ಟು ಭಾಗದ ಶಾಸನಗಳು ಕನ್ನಡದಲ್ಲಿದ್ದು, ಕದಂಬ, ಗಂಗ, ಹಾನುಗಲ್ಲು ಕದಂಬ, ಹೊಯ್ಸಳ, ಕೊಂಗಾಳ್ವ, ಚೆಂಗಾಳ್ವ, ವಿಜಯನಗರ, ಹಾಲೇರಿ, ಆಂಗ್ಲರ ಕಾಲದಲ್ಲಿಯೂ ಕನ್ನಡ ಭಾಷಿಕ ಶಾಸನಗಳು, ಆಡಳಿತ ಭಾಷೆ ಕನ್ನಡವಾಗಿದ್ದುದರ ಸಾಕ್ಷ್ಯವನ್ನು ತೋರುತ್ತವೆ. ಕೊಡವ ಭಾಷೆ ಜನಪದ ಸಾಹಿತ್ಯದಲ್ಲಿ ತುಂಬಿ ತುಳುಕಿರುವುದು ಕಾಣುತ್ತದೆ. ಕನ್ನಡ ಭಾಷೆಯಲ್ಲಿ ಕಾವ್ಯ, ಛಂದಸ್ಸು, ಶಾಸ್ತ್ರ, ಕತೆಗಳು, ಶಾಸನೋಕ್ತಗಳು, ಜಾನಪದ ಗೀತೆಗಳು ಕೊಡಗಿನಲ್ಲಿ ಮೂಡಿಬಂದಿರುವುದೂ ಕಾಣುತ್ತದೆ.

ಇಂದು ಕೇರಳದ ವೈನಾಡಿನಲ್ಲಿರುವ 'ಎಡಕಲ್ಲುಗುಡ್ಡ'ಕ್ಕೆ ಇನ್ನೊಂದು ಜನಬಳಕೆಯ ಹೆಸರು 'ಮುನಿಕಲ್ಲಗವಿ' ಎಂದಾಗಿ, ಕನ್ನಡ ಭಾಷಿಕ ಸೊಗಡನ್ನು ಉಭಯಶಬ್ದಗಳೂ ಸೂಚಿಸುತ್ತವೆ. ಆ ಗುಡ್ಡದ ಮೇಲಿನ ಕಂಬಗಳ ಬಳಿ 'ಮದಿಯ ಪಿಳ್ಳ' ದೇವತೆಗೆ ಚೆಟ್ಟಿಜನಾಂಗದವರು ವಾರ್ಷಿಕಪೂಜೆಯನ್ನು ಸಲ್ಲಿಸುತ್ತಾರೆ. (ಕೊಡಗಿನ ದಲಿತ ಕೆಂಬಟ್ಟಿಗಳಲ್ಲಿ **ಪಳ್ಳಿ** ಎಂದರೆ **ದೈವದ ಸ್ಥಾನ** ಎಂಬ ರೂಢಿ ಇದೆ. ಬಹುಶಃ 'ಮದಿಯಪಿಳ್ಳಿ' ಎಂಬುದು 'ಮಾದೇವಿಯಪಳ್ಳಿ=ಅಮ್ಮಾಳೆಗುಡಿ' (ಪಾರ್ವತಿ ಗುಡಿ) ಎಂಬುದಕ್ಕೆ ಸಂವಾದಿಯಾಗಿದೆ. ಈ ಚೆಟ್ಟಿಗಳು ವೈನಾಡಿನ 'ತಿರುನೆಲ್ಲಿ ಪೆಮ್ಮಯ್ಯ' ದೇವತೆಗೆ ತುಲಾಮಾಸದ ಶ್ರಾವಣನಕ್ಷತ್ರದಲ್ಲಿ ಹುತ್ತರಿ ಕದಿರಿನ ಹಕ್ಕುದಾರರಾಗಿ ನಿರ್ವಹಣೆಯಲ್ಲಿದ್ದಾರೆ. ಕನ್ನಡದ ಈ ವೈನಾಡು ಶೆಟ್ಟರು ತಿರುನೆಲ್ಲಿಯ ಮೂಲಜನಾಂಗದವರಾಗಿದ್ದಾರೆ. ಪ್ರಾದೇಶಿಕ ಬಳಕೆಯ ಶಬ್ದದಲ್ಲಿ 'ಚೆಟ್ಟಿ'ಗಳೆನಿಸಿಕೊಂಡಿದ್ದಾರೆ. ಮೊದಲಿಗೆ ವೈನಾಡು ಪ್ರದೇಶವು ಕೊಡಗಿಗೆ ಸೇರಿತ್ತೆನ್ನುವುದಕ್ಕೆ ಈ ಸಾಂಸ್ಕೃತಿಕ ಆಚಾರಗಳು ಸಂಕೇತವಾಗಿವೆ ಎನ್ನಬೇಕು.

'ಉರವಿಯ್ಯಮ್ಮರಸ ಬಯ್ಲನಾಡರಾಜ್ಯಂಗೆಯ್ವನ್ದು' **[ಎ.ಕ. ಸಂ.೪, (ಹೊಸತು) ಚಾ.ನ.೩೪೭, ಕುಲಗಾಣ]** ಎಂಬ ಸಾಲು ಈ ಮಾತಿಗೆ ಪೋಷಕವಾಗಿ ಕೇರಳದ ಬೇಂದ್ರುಕೋಲಪ್ಪನ ದೇಗುಲದಲ್ಲಿ **ಓಣಂ** ಸಮಯದಲ್ಲಿ ಕದಿರನ್ನು ಪೂಜಿಸಿ ನಂತರ ಜನರಿಗೆ ಹಂಚುವಲ್ಲಿ ಕದಿರಿನ ಹಕ್ಕುದಾರರು 'ಕನ್ನಡದ ಶೆಟ್ಟರು' ಎಂಬುದು ಗಮನಾರ್ಹ. ಇದು ವೈನಾಡಿನ ಕನ್ನಡ ಭಾಷಿಕರ ಪ್ರಭಾವ ಕೇರಳದ ಸಾಂಸ್ಕೃತಿಕ ನೆಲೆಯಲ್ಲಿ ಬೀಡುಬಿಟ್ಟಿದ್ದ ಬಗೆಯನ್ನು ಸೂಚಿಸುತ್ತದೆ. ಇದಲ್ಲದೆ ಈ ಉದಾಹರಣೆಯಿಂದ ಕೊಡಗಿನತ್ತ ಇಗ್ಗುತಪ್ಪ ಸಹಿತವಾಗಿ ಆರು ಸೋದರರು ಹಾಗೂ ಒಬ್ಬ ಸೋದರಿ ಬರುವಲ್ಲಿ ಇವರ ಪೈಕಿಯ ಬೇಂದ್ರುಕೋಲಪ್ಪ, ಕೇರಳದಲ್ಲಿ ನಂತರೂ, ಕನ್ನಡಿಗ ಭಾಷಿಕರ ಸಂಬಂಧದಿಂದ ದೂರವಾಗಲಿಲ್ಲ ಎಂಬುದು ತಿಳಿಯುತ್ತದೆ. ವೈಯನಾಡಿನ ತಿರುನಲ್ಲಿಯಲ್ಲಿ ಆರು ಸೋದರರ ಪೈಕಿ ಪೆಮ್ಮಯ್ಯ 'ತಿರುನೆಲ್ಲಿ ಪೆಮ್ಮಯ್ಯ' ಎನಿಸಿ ನಿಂತಾಗ ಕನ್ನಡದ ಶೆಟ್ಟರ ಸಂಬಂಧವೂ ಅವನಿಗೆ ನಡೆದೇ ಬಂದಿತು. ಉಳಿದವರು ಕೊಡಗಿಗೆ ಬಂದರು. ಈ ಬಗೆಗಿನ ಎಲ್ಲ ಕತೆಯನ್ನು, ಕೊಡಗಿನ ಕೊಡವ ಭಾಷೆಯ ಜನಪದ ಸಾಹಿತ್ಯದ ಪ್ರಧಾನ ಕೃತಿ 'ಪಟ್ಟೋಲೆ ಪಳಮೆ'ಯಲ್ಲಿ 'ಎವ್ವ ಮಕ್ಕಡದೇಬುವಡಪಾಟ್'ನಲ್ಲಿ ಹೇಳಲಾಗಿದೆ.

ವೈನಾಡಿನ ಮೂಲನವಾಸಿಗಳಲ್ಲಿ ಬಹುಸಂಖ್ಯಾತರಾದ ಪಣಿಯರು (ಇಂದಿನ ಕೊಡಗಿನ ಯರವರ ಒಂದು ಪಂಗಡ) ಹಾಗೂ ಉರಾಳ ಕುರುಬರ ಭಾಷೆ ಕನ್ನಡಕ್ಕೆ ನಿಕಟ ಸಂಬಂಧಗೊಂಡದ್ದಾಗಿದೆ. ಅವರು ಶೇ. ೭೦ರಷ್ಟು ಅಚ್ಚಗನ್ನಡ ನುಡಿಗಳ ಬಳಕೆ ಹಾಗೂ ಉಚ್ಚಾರವನ್ನು ಉಳಿಸಿಕೊಂಡಿದ್ದಾರೆ. ಅದು ಕನ್ನಡದ ಒಂದು ಗ್ರಾಮ್ಯಸ್ವರೂಪವಾಗಿದೆ ಎಂದು ಭಾಷಾ ಸಂಶೋಧಕ ವಿ. ಅಯ್ಯಪ್ಪನ್ ಹೇಳಿದ್ದಾರೆ.

ಬಾದಾಮಿ ಚಾಲುಕ್ಯರ ಮಂಗಲೀಸನ ಕ್ರಿ.ಶ. ಸು.೬ನೇ ಶತಮಾನದ ಶಾಸನದಲ್ಲಿ, ಹೌದು; ಆಗು ಎನ್ನುವ ಅರ್ಥದಲ್ಲಿ 'ಅಕುಂ[ಕ್ಕುಂ]' ಎಂಬ ಶಬ್ದ ಪ್ರಯೋಗವಿದೆ. ಕೊಡಗಿನಲ್ಲಿ ಕೊಡವ ಭಾಷೆಯಲ್ಲಿ 'ಅಕ್ಕು, ಅಕ್ಕುವ' ಎಂಬ ಮೇಲಿನ ಶಾಸನೋಕ್ತ ಶಬ್ದಗಳು ಇಂದಿಗೂ ಬಳಕೆಯಲ್ಲಿವೆ. ಅರ್ಥಾತ್ ಪೂರ್ವಹಳಗನ್ನಡ ಶಬ್ದವೊಂದು ಕೊಡವ ಭಾಷೆಯಲ್ಲಿ ಇಂದಿಗೂ ಬಳಕೆಯಲ್ಲಿರುವುದು ಗಮನಾರ್ಹ.

ಶಾಸನಗಳ ದೃಷ್ಟಿಯಿಂದ ಗಮನಿಸಿದರೆ, ಮಡಿಕೇರಿಯ ೧ನೇ ಸಂಖ್ಯೆಯ ತಾಮ್ರಶಾಸನ ಕ್ರಿ.ಶ. ೪೬೬ರದೆಂದರೂ ೯ನೇ ಶತಮಾನದಲ್ಲಿ ಬರೆದ ಮೂಲಪ್ರತಿಯ ನಕಲು ಎಂದು ಶಾಸನ ಸಂಪುಟದ ಮಾತು. ಅದನ್ನು ಗಂಗರ ಸಂಸ್ಕೃತ

ಭಾಷೆಯ ಕೃತಕ ಶಾಸನವೆಂದು ಹೇಳಲಾಗಿದ್ದರೂ, ಅದು ಕೆಲವಷ್ಟು ಐತಿಹಾಸಿಕ ಅಂಶಗಳಿಂದ ವಿರಹಿತವಾಗಿಲ್ಲ. ಸಾಂಸ್ಕೃತಿಕ ಪುಷ್ಟಿಯೊಡನೆ ಅದು ಕೂಡಿಕೊಂಡಿರುವುದಕ್ಕೆ ಶಾಸನದ ಶಬ್ದಾರ್ಥಗಳೇ ಸಾಕ್ಷಿಯಾಗಿ ಕಾಣಬರುತ್ತವೆ. ಕೊಡಗಿನ ವಿಸ್ತಾರವು (ಕೊಡಗೂರ್ವಿಷಯೇ....) ತೆರಕಣಾಂಬಿಯವರೆಗೆ ಇದ್ದುದನ್ನು ಗಮನಿಸಿ ಇದನ್ನು ಹೇಳಬೇಕು.

ಭಾಷೆಯ ದೃಷ್ಟಿಯಿಂದ ಶಾಸನದ ೩೯ ಸಾಲುಗಳ ಪೈಕಿ ಸುಮಾರು ೧೭ ಸಾಲುಗಳಲ್ಲಿ ಮಾತ್ರ ಕನ್ನಡ ಶಬ್ದಗಳು ಇವೆ. ಊರುಗಳ ಹೆಸರುಗಳು ಕನ್ನಡದ ಸೊಗಡಿನಿಂದ ಕೂಡಿವೆ. ಉಳಿದ ಭಾಗ ಸಂಸ್ಕೃತದಲ್ಲಿ ಇದೆ. ಜಿನಾಲಯಕ್ಕೆ, ಎಡೆನಾಡು ಸಪ್ತರಿಮಧ್ಯೆ, ಬದಣಗುಪ್ಪೆ, ಪಿರಿಕೆಱೆ, ಪನ್ನಿರ್ಕ್ಕಣ್ಡುಗಂ, ಕೊಟ್ಟಗರ ಬದಣಗುಪ್ಪೆ, ಮುಳ್ತಗಿ (ಮೊಳತೆ!), ತೊರೆವಳ್ಳಿ ಕಾಯ್ಗ ಮೊರಡಿ, ಗಂಜೆನಾಡ ನೀರ್ಗ್ಗುನ್ದ, ದೇಸಸಾಕ್ಷಿ ತಗಡೂರ ಕುಟುಗೋವರು' (ಗೇಣಿದಾರರು!), ತಗಡರು, ತೇನನ್ದಕರು (ಜೇನುಕುರುಬರು), ಬೆಳ್ಳುರರು, ಅಳಗೆಯರು (ಕಮ್ಮಾರರು!) ಮುಂತಾದ ಕನ್ನಡ ಶಬ್ದರೂಪಗಳು ಶಾಸನದಲ್ಲಿವೆ. ಗ್ರಾಮದ ಗಡಿ ಗುರುತಿಗೆ ನಾಲ್ದಿಸೆಗಳಲ್ಲಿ ವೃಕ್ಷಗಳು ಜಿನಾಲಯದ ಬಳಿ ಇದ್ದು, ಜಿನಕಾಡು (ದೇವರ ಕಾಡು) ಅರ್ಥಾತ್ ಪವಿತ್ರ ಜಿನಕಾಡು ಇದ್ದು ಸಾಂಸ್ಕೃತಿಕ ಕಟ್ಟಳೆಯನ್ನು ಸೂಚಿಸಿದೆ ಎನ್ನಬೇಕು. ಈ ಸಂಸ್ಕೃತ ಶಾಸನದ ೩೯ ಸಾಲುಗಳ ಪೈಕಿ ಕನ್ನಡ ಗದ್ಯದ ಗಂಭೀರ ಲಯವು ೧೭ ಸಾಲುಗಳಷ್ಟು ಹರಿದಿದೆ. ಕೊಡಗಿನ ಜನಾಂಗೀಯ ಸಾಂಸ್ಕೃತಿಕ ಬದುಕಿನ ಕಿರುಚಿತ್ರಣವನ್ನು ಅಂದಿನ ಕೊಡಗಿನ ಹರಡಿದ್ದ ವಿಸ್ತಾರದಲ್ಲಿ ಅದು ಅಡಕವಾಗಿದ್ದ ಬಗೆಯನ್ನು ಶಾಸನದಲ್ಲಿ ಸೂಚಿತವಾಗಿರುವ ಕನ್ನಡ ಶಬ್ದಗಳು ಕಟ್ಟಿಕೊಡುತ್ತವೆ. ಈ ಶಾಸನದ ನಂತರ ಹುದಿಕೇರಿಯ ಬಳಿಯ ಹೈಸೊಡ್ಲೂರಿನ ದೇವರಕೆರೆಯ ಬಳಿ ನನಗೆ ದೊರಕಿದ ಅಪ್ರಕಟಿತ ಕ್ರಿ.ಶ. ಸು. ೮ನೇ ಶತಮಾನದ ಆರಂಭಕಾಲದ ಲಿಪಿಲಕ್ಷಣದ ಆರುಸಾಲಿನ ಅಪೂರ್ಣ ತ್ರುಟಿತ ಶಾಸನದಲ್ಲಿ (ನೋಡಿ: **ಇತಿಹಾಸ ದರ್ಶನ ಸಂಪುಟ ೧೪/೧೯೯೯**) 'ಧರ್ಮ'ವನ್ನು 'ಅಟ್ಟಿತ್ತಡೆ' ಇತ್ಯಾದಿ ಅಂದಿನ ಭಾಷಿಕ ಪ್ರಯೋಗದಲ್ಲಿ ಶಬ್ದಗಳಿದ್ದು, ಬಸದಿಗೆ ದಾನ ಕೊಟ್ಟ ಸಂಗತಿಯನ್ನು ತಿಳಿಸುವಂತಿವೆ. ಆ ಶಾಸನದಲ್ಲಿ ಬರುವ 'ಪುದುಕ್ಕೆರಿ' ಎಂಬ ಸ್ಥಳನಾಮ (ಇಂದು 'ಹುದಿಕೇರಿ')ದಲ್ಲಿ 'ಪುದು' ಎಂದರೆ 'ಕೂಡಿಸು' ಎಂಬ ಅರ್ಥದಲ್ಲಿದೆ. ಅದಾಗಿ ಗ್ರಾಮಗಳನ್ನು ಕೂಡಿಸುವ ಕೇಂದ್ರಪ್ರದೇಶವಾಗಿಯೂ ಅಥವಾ ಹೊಸ ಊರಿನ 'ನೆಲೆಬೀಡು' (ರಾಜವಾಸ್ತವ್ಯ!) ಆಗಿದ್ದ ಸೂಚನೆ ನೀಡುತ್ತದೆ. ಅಲ್ಲದೆ ಗಂಗ ಶ್ರೀಪುರುಷನಿಗೂ (ಕ್ರಿ.ಶ. ೭೫೫–೭೮೮) ಮುನ್ನಿನ ಶಾಸನವಾಗಿ, ಕೊಡಗಿನ ಮೊದಲ ಕನ್ನಡ ಶಾಸನವಾಗಿ ಕಾಣಬರುತ್ತದೆ.

ಕ್ರಿ.ಶ. ೯೭೮ರ ಪೆಗ್ಗೂರು ಶಾಸನದಲ್ಲಿ೨ ಬರುವ 'ಅಣ್ಣನ ಬಣ್ಟ ಬಡವರ ನಣ್ಟ'ನಾದ ರಕ್ಕಸಗಂಗ **ಬೆದ್ದೊಱೆಗೆರೆ** ಆಳುತ್ತಿದ್ದ ಸಂಗತಿ ಇದೆ. ಕೊಡಗಿನ ಜನರ ಕಷ್ಟನಿಷ್ಠುರಗಳಿಗೆ ಸ್ಪಂದಿಸುತ್ತಿದ್ದ. ಆ ದೊರೆ ಲಕ್ಷ್ಮಣತೀರ್ಥ ನದಿ ಬಳಿಯ ಅಂದಿನ ಹೆಸರುಟ್ಟ ಪ್ರದೇಶವನ್ನು ಆಳುತ್ತಿದ್ದ ಬಗೆ ತಿಳಿಯುತ್ತದೆ. ಲಕ್ಷ್ಮಣತೀರ್ಥ ನದಿಯನ್ನು **ಪೆರ್ದೊಱೆ** ಎಂಬ ಅರ್ಥದಲ್ಲಿ ಬಳಸಲಾಗಿದೆ. ಅಂಥದ್ದರಲ್ಲಿ ಶಾಸನದ ದೇಸೀ ಕನ್ನಡದ ಶೈಲಿಯ ವೈಭವ ನಮಗೆ ಎದ್ದು ಕಾಣುತ್ತದೆ.

ಕ್ರಿ.ಶ. ೮೮೮ರ ಬಿಳಿಯೂರು ಶಾಸನದಲ್ಲಿ ೩ **ಪೆಣ್ಣೆಗಡಙ್ಗ**ದ ಜಿನಾಲಯಕ್ಕೆ 'ಎಣ್ಬುನೂರು ಬತ್ತಮುಂ ತೆಱುವೊಂ', 'ಎಣ್ಬೊಕ್ಕಲುಂ ಇದಕ್ಕೆ ಸಾಕ್ಷಿ', 'ಮಯ್ದಾಮರಿಗರುಂ ಇದಕ್ಕೆ ಕಾಪು' ಎಂದಿದೆ. ೯ನೇ ಶತಮಾನದ ಇಮ್ಮಡಿ ರಾಚಮಲ್ಲನ ಕಾಲದ ಕೋತೂರು ಶಾಸನದಲ್ಲಿ೪ 'ಜಡಲ ಎಱೆಯಂಗ ಗಾವುಣ್ಡ', 'ಪೆರ್ಮಡಿವಟ್ಟಂಗಟ್ಟಿ', 'ಬೆಟ್ತಿಯ ಭತ್ತದೊಳ್' 'ನೂಱುಭತ್ತಮುಮಂ', 'ಕಲ್ನಾಡು' ಎಂಬ ಶಬ್ದಗಳಿವೆ. ಇದರಿಂದ ಈ ಉಭಯ ಶಾಸನಗಳ ಭಾಷಾ ವೈಶಿಷ್ಟ್ಯಗಳಲ್ಲಿ, ನಿತ್ಯ ಬಳಕೆಯ ಆ ಕಾಲದ ಕನ್ನಡ ಶಬ್ದಗಳ ಪರಿಚಯವಾಗುತ್ತದೆ. ದ್ವಿತ್ವ ಶಬ್ದಗಳು, ಶಕಟರೇಫೆ ಮತ್ತು ಱಳ ರೂಪಗಳು, ವರ್ಗೀಯ ವ್ಯಂಜನ, ಅನುನಾಸಿಕ ಬಳಕೆಯ ಪದಗಳು ಕಂಡುಬರುತ್ತವೆ. ಪೂರ್ವಹಳಗನ್ನಡ ಮತ್ತು ಹಳಗನ್ನಡದ ಸಂಧಿಕಾಲದ ಅವಸ್ಥೆಯನ್ನು ಅವು ತೋರುವಂತಿವೆ. 'ನೂಱು ಭತ್ತಮುಮಂ' ಎಂಬ ಶಾಸನೋಕ್ತ ಶಬ್ದ, 'ನೂರುಬಟ್ಟಿ' ಎಂದು ಹಾಲೇರಿ ಅರಸರ ಕಾಲದಲ್ಲಿ ಹಾಗೂ ಇಂದೂ ಗ್ರಾಮೀಣ ಜನಬಳಕೆಯಲ್ಲಿರುವುದು ಪರಿಮಾಣವಾಚಿಯ ಪರ್ಯಾಯ ಶಬ್ದದ ಒಂದು ರೂಪವಾಗಿ ಕಂಡುಬಂದಿರುವುದರಲ್ಲಿ ಆ ಕನ್ನಡ ಶಬ್ದದ ದೇಸೀಶಕ್ತಿಯ ಗಟ್ಟಿತನವನ್ನು ತೋರುವಂತಿದೆ. 'ಜಡಲ ಎಱೆಯಂಗ ಗಾವುಣ್ಡ' ಎಂಬ ಶಬ್ದದ ಮೂಲಕ ಕೊಡಗಿನ ಮನೆಪೆದ (ಮನೆತನಗಳ ಹೆಸರು)ಗಳ ಪ್ರಾಚೀನತೆಗೆ ಸಾಕ್ಷಿ ತೋರಿರುವುದಾಗಿದೆ. 'ಬೆಟ್ತಿಯ ಭತ್ತ=ಬಿಳಿಯ ಭತ್ತ. ಉತ್ತರ ಕೊಡಗಿನಲ್ಲಿ ಬೆಳೆಯುವಂಥ (ಗಾದೆಯ ಮಾತು: ಪಾಬೊಳಿಯ ಮೇಂದಲೆ–ನಾಪೋಕ್ಲು ಬಳಿಯ ಕಾವೇರಿ ಹೊಳೆಯಾಚೆಗಿನ ಪ್ರದೇಶ, ಉತ್ತರ ಕೊಡಗು) ಆ ಬೆಳೆ, ದಕ್ಷಿಣ ಕೊಡಗಿನಲ್ಲಿಯೂ ೯–೧೦ನೇ ಶತಮಾನದಲ್ಲಿಯೂ ಬೆಳೆಯುತ್ತಿತ್ತು ಎಂಬ ಸಾಂಸ್ಕೃತಿಕ ಮಾಹಿತಿಯನ್ನು ಆ ಶಬ್ದ ನೀಡುತ್ತದೆ ಎಂಬುದು ಗಮನಾರ್ಹ. ಬೆಂಗಳೂರು ಜಿಲ್ಲೆಯ ಬೇಗೂರಿನ ಗಂಗರ

ಕ್ರಿ.ಶ. ೮೯೦ರ ಶಾಸನದಲ್ಲಿ, 'ಇರುಗಜ್ಗೆ ನಾಗತ್ತರ ಪಟ್ಟಂಗಟ್ಟಿ' ಎಂದು ಅನುಗುಣ ಸಂವಾದಿರೂಪವನ್ನು ಗಮನಿಸಿದರೆ, ಕರ್ನಾಟಕದ ಇತರ ಭಾಗಗಳಲ್ಲಿನ ಭಾಷಾಶೈಲಿಯ ಅನೇಕ ಅಂಶಗಳು ೯ನೇ ಶತಮಾನದ ಕೊಡಗಿನ ಕನ್ನಡ ಭಾಷೆಯಲ್ಲಿಯೂ ಇತ್ತು ಎಂದಾಗುತ್ತದೆ. ಕೇರಳಕ್ಕೆ ದಕ್ಷಿಣ ಕೊಡಗಿನ ಈ ಕೊತೂರು ಹತ್ತಿರ ಇದ್ದರೂ ಗ್ರಾಮೀಣ ಪ್ರದೇಶದಲ್ಲಿಯೂ ಆ ಕಾಲಕ್ಕೂ ಮಲೆಯಾಳ ಭಾಷೆಗಿಂತ ಕನ್ನಡದ ಭಾಷಾ ಪ್ರಭಾವವೇ ಇತ್ತು ಎಂದು ಸದ್ಯದ ಶಾಸನ ತೋರಿದೆ.

ನಾಗವರ್ಮನಿಗೆ ಮುನ್ನ, ಕೊಡಗಿನ ಶಾಸನಗಳನ್ನು ಕವಿಚರಿತೆಯ ರೀತ್ಯಾ (**ಕವಿಚರಿತೆ, ಪ್ರಥಮ ಸಂಪುಟ, ೧೯೭೨ರ ಆವೃತ್ತಿ**) [೫] ಗಂಗರ ಆಸ್ಥಾನಕವಿ ಮುಳ್ಳೂರಿನವ ಎನ್ನಲಾದ ಕ್ರಿ.ಶ. ೯೦೦ರ ಒಂದನೆಯ ಗುಣವರ್ಮ, ನೊಳಂಬ ಮಹೇಂದ್ರನನ್ನು ವರ್ಣಿಸುವಲ್ಲಿ ಮಹೇಂದ್ರಾಂತಕ, ಗಂಗಚಕ್ರಾಯುಧ ಇತ್ಯಾದಿ ಬಿರುದುಗಳನ್ನು ತನ್ನ 'ಶೂದ್ರಕ' ಕಾವ್ಯದ ನಾಯಕ (ರಾಜ)ನಿಗೆ ಆರೋಪಿಸಿದ್ದಾನೆ. ಇವೆಲ್ಲ ಕ್ರಿ.ಶ. ೯೦೯-೯೪೫ರ ಗಂಗರಸ ಎರೆಯಪ್ಪನಿಗೆ ಅನ್ವಯವಾಗುವ ಕಾರಣ ಆ ರಾಜನ ಆಶ್ರಿತಕವಿ ಎಂದು ಅವನ ಬಗೆಗೆ ತಿಳಿಯಲಾಗಿದೆ. ನಾನು ಕಂಡುಹಿಡಿದ ಬೇಳೂರು ಬಸವನಹಳ್ಳಿ ಬಳಿಯ ಗುಡಗೂರಿನ ಕ್ರಿ.ಶ. ೯೧೧ರ ಗಂಗರ ಎರೆಯಮ್ಮನ ಶಾಸನ [**ನೋಡಿ ಹರತಿಸಿರಿ, ೧೯೮೯, (ಸಂ) ಲಕ್ಷ್ಮಣ ತೆಲಗಾವಿ**]ವಿರುವಲ್ಲಿ[೬], ಒಂದನೆಯ ಗುಣವರ್ಮನು ಈ ಶಾಸನವಿರುವ ಪ್ರದೇಶಕ್ಕೆ ಸನಹ ದೂರವಿರುವ ಮುಳ್ಳೂರಿನವನೆನ್ನಬಹುದು. ನಯಸೇನ ಈ ಕವಿಯ ಜಾಣ್ಮೆಯನ್ನು, ರುದ್ರಭಟ್ಟ ಇವನ ಕಾವ್ಯಬಂಧ ಗೌರವವನ್ನು ಗುಣಾಂಕಗಳಾಗಿ ಹೇಳಿದ್ದಾರೆ. 'ಶೂದ್ರಕ' ಕಾವ್ಯದಲ್ಲಿ ಕಾಡು, ಸೂಕರ(ಹಂದಿ), ಬೇಟೆ, ಸೌಂದರ್ಯ, ಇತ್ಯಾದಿಗಳ ಕುರಿತ ವರ್ಣನೆಗಳು ಕೊಡಗಿನ ವಾತಾವರಣಕ್ಕೆ ಬಹುಸೂಕ್ತವಾಗಿ ಬೆಡಗಿನ ನುಡಿಗಳಲ್ಲಿ ಮಿಡಿದು ಬಂದಿವೆ.

*'ಮಿಱುಗುವ ದಾಡೆಯಿಂದಣೆದು ಪೆರ್ದರಿಯಿಂ ತರದಿಂದ*
*ಮೆತ್ತುತಂ । ...*
*ಪಜಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು*
*ಸೂಕರಂ'*

ಹೆಣ್ಣಿನ ಸೌಂದರ್ಯ ವರ್ಣನೆಯೂ ಇಂತಿದೆ:

*ಸಣ್ಣ ನಡು ತಿಣ್ಣಂ ಮೊಲೆ ... ಬಣ್ಣಿಸಲದಿಯದಬ್ಜ*
*ಜಂಗಮಾಕೆಯ ರೂಪಂ'*

ಗುಣವರ್ಮನ ಕಾವ್ಯದ ಈ ಸಾಲುಗಳು ಕೊಡಗಿನ ಪರಿಸರವನ್ನು ಸೌಂದರ್ಯವನ್ನು ಪ್ರತಿಮಾರೂಪದಲ್ಲಿ ಬಿಂಬಿಸಿವೆ.

ಕ್ರಿ.ಶ. ೯೭೮ರ ರಕ್ಕಸಗಂಗನು (೪ನೇ ರಾಚಮಲ್ಲ) ಕೊಡಗನ್ನು ಆಳುತ್ತಿದ್ದ ಸಮಯ. ಕನ್ನಡ 'ಛಂದೋಂಬುಧಿ'ಯ ಕರ್ತೃ ನಾಗವರ್ಮ. ಗೋವಿಂದಪೈ ಅವರ ರೀತ್ಯಾ ನಾಗವರ್ಮನು ರಕ್ಕಸಗಂಗನ ಆಶ್ರಿತ ಕವಿ ಹಾಗೂ ಯೋಧನೂ ಆಗಿದ್ದ[೭] ಪೆಗ್ಗೂರು, ಕೊತೂರು ಗ್ರಾಮಗಳಿಗೆ ಸಮೀಪವಿರುವ ಪಾಲ್ಬರೆ (ಪಾಲುಪುರ) ಗ್ರಾಮದ ಸೋಮೇಶ್ವರ ದೇಗುಲದ ಶ್ರೀಗೋಲದ (ಗರ್ಭಗೃಹ) ಹೊರಭಿತ್ತಿಯಲ್ಲಿ ಕನ್ನಡ 'ಏಳೆಛಂದಸ್ಸಿನ' ನಾಲ್ಕು ಸಾಲಿನ ಪದ್ಯವು 'ಪಡುಬರ ಜೋಗಿ ಸಿಲಾಗೋಲಾ .... ನಮಃ' ಎಂದು ಕಂಡರಿಸಲ್ಪಟ್ಟಿದೆ. ಈ ಸಾಲುಗಳು ನಾಗವರ್ಮನ 'ಛಂದೋಂಬುಧಿ'ಯಲ್ಲಿರುವ 'ಏಳೆ'ಯ ಅನುಗುಣಬಂಧದ ತದ್ವತ್ ಪ್ರತೀಕದ ಛಂದಸ್ಸಿನ ರಚನೆಯಾಗಿದೆ[೮]. ('ನಮಃ' *ಎಂಬ ಶಬ್ದವನ್ನು ಬಿಟ್ಟರೆ, ಹೊಂದಾಣಿಕೆ ಆಗುತ್ತದೆ ಎಂದು ಪ್ರೊ॥ ಎಸ್. ಶಂಕರನಾರಾಯಣಭಟ್ಟರು ಪ್ರತಿಪಾದಿಸಿದ್ದಾರೆ*) ಛಂದೋಂಬುಧಿಯ 'ಐ' ಓಲೆಪ್ರತಿ, ಮಾದಾಪುರ ಮಠದಲ್ಲಿ, 'ಔ' ಓಲೆಪ್ರತಿ ಮಡಿಕೇರಿ ದಾಖಲೆಗಳಲ್ಲಿ ಲಭ್ಯವಾಗಿದೆ. ಈ ಅಂಶಗಳಿಂದ ಒಂದನೆಯ ನಾಗವರ್ಮ ಬಹುಶಃ ಕೊಡಗಿನಲ್ಲಿದ್ದಾಗ 'ಛಂದೋಂಬುಧಿ'ಯನ್ನು ರಚಿಸಿರುವಂತಿದೆ. ಅದನ್ನು ಪ್ರತಿಮಾಡಿಕೊಂಡ ಪರಂಪರೆ ಹಾಗೂ ಅದರ ಏಳೆ ಛಂದಸ್ಸನ್ನು ಕೊಡಗಿನ ಶಾಸನಕವಿಗಳು ಪಾರಂಪರಿಕವಾಗಿ ಬಳಸಿಕೊಂಡು ಬಂದರೆನ್ನುವುದಕ್ಕೆ, ಪಾಲ್ಬರೆಯ ಶಾಸನೋಕ್ತ 'ಏಳೆ'ಯ ರಚನೆಯ ಪ್ರಧಾನ ಚಹರೆಗಳ ಸಾಲು ಸಾಕ್ಷಿಯಾಗಬಹುದು. ಜೊತೆಗೆ ನಾಗವರ್ಮನಲ್ಲಿ ಕಾಣುವ:

**'ಕರೆದುವು' ಬಿರುದಿನ 'ಕಹಳೆಗಳಾಗಳ್' । ಪರೆದುದು**
**ಪಳಹದರರದ ಮಣ್ಡೆಸೆಯೊಳ್ ।**
**ಗಿರಿ ಬಂಧುರ ಸಿಂಧುರ ತತಿ ನಡೆದರೆ । ಚರವೃಂದದ**
**ಕುಂದದ ಕಳಕಳಮಿರೆ ।**

ಎಂಬ ಮಾತ್ರಾಗಣದ ಸಾಲುಗಳು, ಕೊಡಗಿನಲ್ಲಿ 'ಕೊಂಬು' ಕೂಗಿನ ಪ್ರದೇಶದ ವಿಸ್ತಾರವನ್ನು ಸೂಚಿಸಲು ಬಳಸುತ್ತಿದ್ದ ವೀರಶಬ್ದ ಪರಂಪರೆಯನ್ನು, ಎತ್ತಿ ತೋರಿವೆ ಎನಿಸುತ್ತದೆ. ಕನ್ನಡ ಶಬ್ದಗಳ ಶಕ್ತಿಯು ಹೆಪ್ಪುಗಟ್ಟಿದಂತಿರುವ ಈ ಸಾಲುಗಳಲ್ಲಿ ಕವಿಯು ಕಾವ್ಯವೈಭವ, ಶೌರ್ಯವೈಭವದ ವರ್ಣನೆಯ ಮೂಲಕ ಕೊಡಗನ್ನು ಬಿಂಬಿಸಿದ್ದಾನೆ ಎನ್ನಬೇಕು.

ಮುಳ್ಳೂರಿನವನಾದ ಜೈನ ಯತೀಂದ್ರ ಗುಣಸೇನ ಪಣ್ಡಿತನು ಕ್ರಿ.ಶ. ೧೦೫೯ರಿಂದ ಕೊಡಗಿನ ಒಟ್ಟು ಏಳು ಶಾಸನಗಳಲ್ಲಿ ಉಕ್ತನಾಗಿದ್ದಾನೆ. ಕ್ರಿ.ಶ. ೧೦೬೪ರ ಮುಳ್ಳೂರು ಶಾಸನ ಈತನನ್ನು 'ಪರಮಾರ್ಹನ್ನಾದಿ ರತ್ನತ್ರಯ ಸಕಳ ಮಹಾಶಬ್ದ ಶಾಸ್ತ್ರಾಗಮಾದಿ ಸ್ಥಿರಷಟ್ತರ್ಕ ಪ್ರವೀಣರ್' ಅಂದರೆ ವೇದಾಂತ, ಮೀಮಾಂಸ, ವೈಶೇಷಿಕ, ಭಾಟ್ಟ, ಪ್ರಾಭಾಕರ

ಇತ್ಯಾದಿ ಆರು ಶಾಸ್ತ್ರಗಳಲ್ಲಿ ಪಂಡಿತನಾಗಿದ್ದ ಬಗ್ಗೆ ಹೇಳಿರ್ದೆ. ಈತನಿಗೆ ಸಂಬಂಧಿಸಿದ ಶಾಸನಗಳ ಭಾಷೆ ಸಂಸ್ಕೃತ ಭೂಯಿಷ್ಠವಾಗಿವೆ. ಕೆಲವೇ ಕನ್ನಡ ಶಬ್ದಗಳನ್ನು ಹೊಂದಿವೆ. ಕ್ರಿ.ಶ. ೧೧೭೯ರ ಶ್ರವಣಬೆಳಗೊಳದ ಶಾಸನವೊಂದು ೧೦ ಜೈನಯತಿ ಮಲ್ಲಿಷೇಣನಿಗೆ ಪೂರ್ವದಲ್ಲಿ ಕಂಗೊಳಿಸಿದ ಜೈನಗುರುಗಳ ಪಟ್ಟಿಯಲ್ಲಿ ಗುಣಸೇನಪಂಡಿತನನ್ನು ಹೆಸರಿಸಿ, 'ಶ್ರೀ ಮುಳ್ಳೂರ ವಿಡೂರಸಾರ ವಸುಧಾರತ್ನಂ' ಎಂದು ಹೊಗಳಿದೆ. ಕೊಡಗಿನ ಶಾಸನಗಳಲ್ಲಿ ಗುಣಸೇನಪಣ್ಡಿತನ ವಿದ್ವತ್ತಿನ ಬಗ್ಗೆ ವರ್ಣಿಸಿರುವಲ್ಲಿ, ಶ್ರವಣಬೆಳಗೊಳ ಶಾಸನೋಕ್ತ 'ಮುಳ್ಳೂರು' 'ವೈಡೂರ್ಯಸಾರ ವಸುಧಾರತ್ನ' ಕೊಡಗಿನ **ಮುಳ್ಳೂರಿನ** ಗುಣಸೇನ ಪಂಡಿತನಿಗೇ ಅನ್ವಯವೆಂದು ಬಗೆಯಬೇಕು. ಹೀಗಾಗಿ ಇವನು ನಾಗವರ್ಮನ ನಂತರ ಬಂದ ಕೊಡಗಿನ, ಶಾಸ್ತ್ರವಿಷಯಕ ವಿದ್ವಾಂಸನಾಗಿದ್ದಾನೆ.

ಹಾನುಗಲ್ಲು ಕದಂಬ(!) ವಂಶದವನೆನ್ನಲಾದ ೧೧ನೇ ಶತಮಾನ **ದಯಾಸಿಂಹ** ಕೊಡಗಿನ ಏಳುಸಾವಿರ ಸೀಮೆಯವ, ಕವಿ, ವಿಮರ್ಶಕ, ಚಿತ್ರಕಾರ, ಸಂಗೀತಜ್ಞನೆನ್ನಲಾಗಿದೆ. ಹಾನುಗಲ್ಲು ಕದಂಬವಂಶದ ದುದ್ದರಸನು ಕ್ರಿ.ಶ. ೧೮೬೫ರ ಯಡೂರಿನ ಶಾಸನದ ಸಾಹಿತ್ಯಿಕ ಶಬ್ದ ಸೌಷ್ಠವವನ್ನು ನೋಡಿದರೆ ಈ ದಯಾಸಿಂಹನೆ ಆ ಶಾಸನದ ಕವಿಯಾಗಿರ ಬಹುದೆ? ಎನಿಸುತ್ತದೆ. ಕಾರಣ ಶಾಸನದಲ್ಲಿ ಆ ವೀರಶಾಸನ ವನ್ನೂ (ದೊರೆ ದುದ್ದರಸ ಶಿವಲೋಕಕ್ಕೆ ಪ್ರಾಪ್ತನಾದಾಗ) ಬರೆದವನು ಸೇನಬೋವನ ಮಗ ಬಮ್ಮದೇವ ಎಂದಿದೆ; ಈ ಬಮ್ಮದೇವ ಶಾಸನ ರಚಿಸಿದವನೆ? ಅಥವಾ ಶಿಲಾಶಾಸನದ ಮೇಲೆ ಬರೆದವನೆ? ಎಂಬುದು ಸ್ಪಷ್ಟವಿಲ್ಲ. ಇದರಿಂದ ಶಾಸನದ ರಚಯಿತೃ 'ದಯಾಸಿಂಹ'ನತ್ತ ಬೆರಳು ತೋರುವಂತಿದೆ.

ಕ್ರಿ.ಶ. ೧೮೬೫ರ ಮೇಲ್ಸೂಚಿತ ಯಡೂರು ಶಾಸನದಲ್ಲಿ[೧೧] ಸಂಸ್ಕೃತ ಶಬ್ದಗಳ ಅಪಭ್ರಂಶ ಕೆಲಮಟ್ಟಿಗೆ ಇದ್ದರೂ ಹಳಗನ್ನಡದ ಶಕ್ತಿಯುತ ವೀರಶೈಲಿ ಘನೀಕರಿಸಿದಂತೆ ಕನ್ನಡದ ಸಾಲುಗಳಿವೆ. 'ಬೆಂಕೊಣ್ಡು ಕೋಟೆಗಳಂ' 'ರಿಪುಪ್ರಿದೆಯ ಕರ್ಕಸಂ', 'ಅಯ್ವತ್ತು ಲೆಂಕರುಂ', 'ತೊರೆಗಳ್ದೆ ಯಲ್ಲಿ ಯಮನೆತ್ತಿಸಿ', 'ನಾಲವತ್ತಯ್ದು ಕುಳಪುಟ್ಟಿಗೆ ಗಾಯದಾಳುಮನೇಕ ...' 'ವೈರಿಗಜಕೇಸರಿ ಬಲಿಯರ ಭೀಮ ಸಂಗ್ರಾಮರಾಮ, ಪರಮಣ್ಡಳ ಸೂಜೆಕಾಱಂ, ಕಲಿಯು ಗಾಂತಕಂ', ಇತ್ಯಾದಿ ಶಾಸನದ ಶಬ್ದಸಮುಚ್ಚಯಗಳು ಕನ್ನಡ ಭಾಷೆಯ ಗತ್ತು, ಗದ್ಯದ ಗಂಭೀರಲಯ ಹಾಗೂ ದೇಸಿಯ ವೀರ್ಯವತ್ತಾದ ಆವರಣವನ್ನು ಸೃಜಿಸಿಕೊಟ್ಟಿವೆ. ರಾಜಶಾಸನ ವಾಗಿ ಫಲಶ್ರುತಿ ಕನ್ನಡದಲ್ಲಿದೆ. ಶಾಸನದ ಸಂಗತಿಯು ಉತ್ತರ ಕೊಡಗಿನ ಜನರ ಬದುಕಿನ ಪ್ರತೀಕವೂ ಆಗಿದೆ.

ಕ್ರಿ.ಶ. ೧೧೨೦ರ ವೀರಕೊಂಗಾಳ್ವದೇವನ ಆಶ್ರಯ ದಲ್ಲಿದ್ದ **ವಿಮೌಕ್ತಿಕ ಕವಿ** ಏಳುಸಾವಿರಸೀಮೆಯವನು; 'ಚಂದ್ರನಾಥಾಷ್ಟಕ' ಎಂಬ ಒಂಬತ್ತು ವೃತ್ತಗಳುಳ್ಳ ಕಾವ್ಯ ಬರೆದಿದ್ದಾರೆ[೧೨]. ಈ ಕಾವ್ಯದಲ್ಲಿ ಕವಿ ಬಳಸಿರುವ ಪದ 'ಪೆಣ್ಣೆಂಗಡಲು' ಪಾರಿಭಾಷಿಕ ಶಬ್ದವಾಗಿದೆ. 'ಬನದ ಸಮುದ್ರ' –'ಪೆಣ್ಣೆ' ಎಂಬುದು ಕೊಡಗಿನಲ್ಲಿ ಬಹಳ ವಿಶಾಲವಾದ ಫಲವತ್ತಾದ ಖಾಸಗಿ ಕೃಷಿ ಜಮೀನಿಗೆ ಬಳಸುವ 'ಪನ್ಯ' ಎಂಬ ಶಬ್ದದ ಪ್ರಾಚೀನ ರೂಪ. ಇಂಥ ಪನ್ಯಗಳ ವಿಶಾಲವಾದ ಬನಗಳಾಗಿ ಸುತ್ತ ವೃಕ್ಷಗಳ ಸಂದಣಿಯನ್ನು ಹೊಂದಿರು ವಂಥವು. ಅಂತಾಗಿ 'ಬನಸಮುದ್ರ' ಎಂಬ ಪಾರಿಭಾಷಿಕ ಅರ್ಥದಲ್ಲಿ ಅದನ್ನು ಗ್ರಹಿಸಬೇಕಾಗಿದೆ. 'ಪೆಣ್ಣೆಂಗಡಲ ಪುರವರಾಧೀಶ್ವರ ಚಂದ್ರನಾಥಾ' ಎಂಬ ಸ್ತುತಿಯೂ 'ಪೆಣ್ಣೆಂಗಡಲು'ವಿನ ಅರಸ ವೀರಕೊಂಗಾಳ್ವದೇವನನ್ನು ಕುರಿತದ್ದಾಗಿದೆ. ವೀರಕೊಂಗಾಳ್ವದೇವನ ವಿಶಾಲವಾದ ಖಾಸಗಿ ಕೃಷಿ ಜಮೀನುಗಳನ್ನು ಕಾವ್ಯಮಯವಾಗಿ ಧ್ವನಿಗೊಳಿಸಿದ್ದಾನೆ ಕವಿ. ಅಂತಾಗಿ ಈ ಶಾಸನೋಕ್ತ ಶಬ್ದ, ಪಾರಿಭಾಷಿಕವಾಗಿ, ಧ್ವನಿಪೂರ್ಣವಾಗಿ, ಸಾಂಸ್ಕೃತಿಕ ಆಯಾಮಗಳನ್ನು ಬಿತ್ತರಿಸಿದೆ. ಕ್ರಿ.ಶ. (೧೦೬೭–೧೧೦೦)ರ ರಾಜೇಂದ್ರ ಕೊಂಗಾಳ್ವನಲ್ಲಿ ಸೇನಾಪತಿ ಆಗಿದ್ದ **ನಕುಲಾರ್ಯ**, ಬಹುಭಾಷಾವಿದನಾಗಿ ಕೆಲವು ಕೃತಿಗಳನ್ನು ರಚಿಸಿದ್ದ. ಕೊಂಗಾಳ್ವ ಚೋಳ ಪಂಚವನ್ ಮಹಾರಾಯನಿಂದ (ರಾಜೇಂದ್ರ ಚೋಳ) ಮಾಲವ್ವಿಯಲ್ಲಿ ಪಟ್ಟಪ್ರತಿಷ್ಠಾಪಿತನಾದ ಕೊಂಗಾಳ್ವ **ಮನಿಜನ** ವಂಶಿಕರ ಸಮಕಾಲೀನರಾದ ಚಂಗಾಳ್ವ ಅರಸರ ಸಚಿವ ವಂಶದಲ್ಲಿ ಬಂದವರಲ್ಲಿ ಕ್ರಿ.ಶ. ೧೪೫೮ರ ಎರಡನೇ ಮಂಗರಸ ಕವಿಯೂ ಒಬ್ಬ. ಇವನು ಶಶಿಪುರಾಧಿಪತಿ (ದಕ್ಷಿಣ ಕೊಡಗಿನ ಪಾಲ್ಪರೆ= ಪಾಲುಪುರ) ಸೋಮೇಶ್ವರನ ವರಪ್ರಸಾದದಿಂದ 'ಮಂಗರಾಜ ನಿಘಂಟು'ವನ್ನು ರಚಿಸಿ ಅಭಿನವ ಮಂಗರಸನೆನಿಸಿದ. ತನ್ನ ನಿಘಂಟಿನಲ್ಲಿ ಜಾತಿವರ್ಗದ ಪದ್ಯ ೪ರಲ್ಲಿ 'ಮ್ಲೇಚ್ಛರೆನೆ ಕೊಡವ ಕೊಡಗರು ಮೃಗಲುಬ್ದಕಂ ವ್ಯಾಧನಕ್ಕುಂ' ಎಂದೆಲ್ಲ ಹೇಳಿ ಕೊಡಗಿನ ಸ್ಥಳಗಳು ಹಾಗೂ ಜುವರನ್ನು ಕುರಿತು ಶಾಸ್ತ್ರಸಾಹಿತ್ಯ ಶಾಸ್ತ್ರ ಕೃತಿಯಲ್ಲಿ ಬರೆದ. ಇಲ್ಲಿ ಉಕ್ತವಿರುವ 'ಶಶಿಪುರ' ಕೊಡಗಿನ ಪಾಲುಪುರ ಅರ್ಥಾತ್ 'ಪಾಲ್ಪರೆ'ಗೆ ಅನ್ವಯ. ಅಲ್ಲಿ ಸೋಮೇಶ್ವರ ದೇಗುಲವಿದ್ದು, ಅದೇ ಶಶಿಪುರಾಧೀಶ್ವರನ ನೆಲೆ ಆಗಿದೆ.

ಈ ಸಂದರ್ಭದಲ್ಲಿ 'ಮ್ಲೇಚ್ಛರೆನೆ ಕೊಡವ ಕೊಡಗರು ...' ಎನ್ನುವಲ್ಲಿ ಕೊಡವ ಹಾಗೂ ಕೊಡಗರು; ಎಂಬ ಪ್ರತ್ಯೇಕ ಶಬ್ದಗಳಿವೆ. ಅದು ಕಾರಣ ಯಾವುದೇ ಜನಾಂಗ ತಲೆತಲೆಮಾರುಗಳಿಂದ ಹುಟ್ಟಿನಿಂದ ಕೊಡಗಿನಲ್ಲಿರುವವರು

ಕೊಡಗರು ಎನ್ನುವುದಾಗುತ್ತದೆ; ಅವರಲ್ಲಿ ಕೊಡವರು ಇದ್ದು ಕೊಡಗಿಗೇ ಸಂಬಂಧಪಟ್ಟವರಾಗಿದ್ದಾರೆ. ಮ್ಲೇಚ್ಛರೆಂದರೆ ವಿದೇಶದಿಂದ ಬಂದವರೆಂದು ಒಂದು ಅರ್ಥದಲ್ಲಿ ಆರೋಪಿಸಲಾಗಿದೆ. ಆದರೆ "ಮ್ಲೇಚ್ಛ" ಎಂದರೆ ಬುಡಕಟ್ಟು ಎಂಬ ಅರ್ಥದಲ್ಲಿ ಕ್ರಿ.ಶ. ೪-೫ನೇ ಶತಮಾನದವನೆನ್ನಲಾದ ಅಮರಸಿಂಹನ 'ಅಮರಕೋಶ'ದ ಅರ್ಥದಿಂದ[೧೩] ವಿವೇಚಿಸ ಬೇಕು. ಕೊಡಗಿಗೆ ಸಂಬಂಧಿಸಿದಂತೆ ಅರ್ಥ ಸೂಕ್ತವಾಗುತ್ತದೆ. ಅದರಲ್ಲಿ 'ಪುಳಿಂದ, ಶಬರ ....' ಇತ್ಯಾದಿ ಬುಡಕಟ್ಟಿನವರನ್ನು 'ಮ್ಲೇಚ್ಛಜಾತಯ' ಎಂದಿದೆ. ಅದಾಗಿ ಕೊಡವರು ಶಬ್ದವನ್ನು ಬುಡಕಟ್ಟಿನಂತೆ ಪ್ರಾಚೀನತೆ ಹೊಂದಿದವರು ಎಂದು ಕೊಡಗಿನಲ್ಲಿಯ ಸ್ವದೇಶಿ ಮೂಲದಿಂದ ಗಮನಿಸಬೇಕು. ಮಂಗರಸನ ನಿಘಂಟಿನ ಶಬ್ದ ಪ್ರಯೋಗವನ್ನು ಆ ನಿಟ್ಟಿನಿಂದ ನೋಡಿದರೆ 'ಕೊಡವ ಕೊಡಗರು' ಶಬ್ದವು ಅರ್ಥಪೂರ್ಣ ವಾಗುತ್ತದೆ. ಆ ಜನಾಂಗದ ಅಸ್ಮಿತೆಯ ಅರಿವಾಗುತ್ತದೆ. ಹೀಗೆ ಒಂದು ಶಾಸ್ತ್ರಸಾಹಿತ್ಯ ಮೂಲವು ಜನಾಂಗೀಯ ಸ್ವದೇಶಿತನವನ್ನು ಗುರುತಿಸಿರುವುದು ಗಮನಾರ್ಹ. ಅಲ್ಲದೆ ಒಂದು ಶಬ್ದದ ಪರ್ಯಾಯ ಅರ್ಥಗಳು ಪ್ರಾದೇಶಿಕ ಸಾಂಸ್ಕೃತಿಕ ನೆಲೆಯಲ್ಲಿ ಅಸ್ಮಿತೆಯನ್ನು ಹೇಗೆ ಜತನಗೊಳಿಸು ತ್ತವೆ ಎಂಬುದಕ್ಕೆ 'ಮ್ಲೇಚ್ಛ' ಶಬ್ದವು ಇಂಬುಗೊಟ್ಟಿರುವುದು ಕಾಣುತ್ತದೆ.

ಈ ಸಂದರ್ಭದಲ್ಲಿ ಕೊಡಗಿನ ೧೩-೧೪ನೆಯ ಶತಮಾನದ ಶಾಸನಗಳ ಭಾಷೆಯನ್ನು ಗಮನಿಸಿದರೆ, ಹಳಗನ್ನಡವು ನಡುಗನ್ನಡಕ್ಕೆ ತಿರುಗಿ ಲಲಿತಶೈಲಿಯು ಕಂಡುಬರುತ್ತದೆ. ದೇಸಿಯ ಸೊಬಗು ಹೆಚ್ಚು ಕಾಣಿಸುತ್ತದೆ. ಸಂಯುಕ್ತ ವ್ಯಂಜನಗಳ ವಿರಳತೆ, 'ಱ, 'ೞ'ಕಾರದ ವರ್ಜ್ಯ. ಶಕಟರೇಫದ ವ್ಯತ್ಯಯ, ವ್ಯಂಜನಾಂತಗಳು ಸ್ವರಾಂತ ಗಳಾಗುವಿಕೆ, 'ಪ'ಕಾರ 'ಹ'ಕಾರವಾಗುವಿಕೆ, ತಪ್ಪು ಪ್ರಯೋಗ ಗಳಿಗೆ ಅನವಕಾಶ – ಇವು ಕಂಡುಬರುತ್ತವೆ. ಇವು ಸಾಹಿತ್ಯ ಕೃತಿಗಳಲ್ಲಿಯೂ ವ್ಯಕ್ತವಾಗಿರುವುದುಂಟು. ಆದರೆ ಕ್ವಚಿತ್ತಾಗಿ 'ಹ'ಕಾರದ ಪದ 'ಹಡಿಯರ', 'ಪ'ಕಾರ ಪದ 'ಪಡಿಎರ' ಎಂದಾಗಿರುವುದು ಈ ಮುನ್ನಿನ ಕ್ರಿ.ಶ. ೧೧೭೫ರ ನಂದಿಗುಂದ ಶಾಸನ[೧೪], ಹಾಗೂ ನಂತರದ ೧೩ನೇ ಶತಮಾನದ ಗಣಗೂರು ಶಾಸನದಲ್ಲಿದೆ[೧೫]. ೧೩ನೇ ಶತಮಾನದ ಹೆರೂರು ಶಾಸನದ[೧೬] 'ಆಲಪೆಯಿದಂ ಚೆಂಗಾಳುವ ಅಲಂಕರಿಸಿದ ಮುನವರಾದಿತ್ಯಂ ....' ಇಂಥ ಸಾಲುಗಳಲ್ಲಿ ಒಂದು ರೀತಿ ಲಯುವಂತಿಕೆಯು ಶಬ್ದಪುಂಜಗಳಿದ್ದರೆ, ಉಲುಗುಲಿ ಶಾಸನದ[೧೭] 'ಚವುಟ ವಿಭಾಡ ಛಲದಂಕರಾಮ .... ಮರೆವಕ್ಕನ ಕಾವಂ ... ಯಳಘಳೆಯ ತುರು ಇಡಿಸಿದಲ್ಲಿ ....' ಎಂಬ ಸಾಲುಗಳಲ್ಲಿನ ಕನ್ನಡದ ವೀರಶೈಲಿಯು ಮನತಟ್ಟುತ್ತದೆ.

ಇದಲ್ಲದೆ ಕೊಡಗಿನ ಸಾಂಸ್ಕೃತಿಕ ಜೀವನದ ಬಳಕೆಯ ಕನ್ನಡ ಶಬ್ದಗಳಾಗಿ ದೇವಿಕೆರೆ, ಕೆಳಗೆಗದೆ, ಮಾವಿನಮಕ್ಕಿ, ವಡವರ ತ್ರಿನಮೇರ (ಮನೆತನದ ಹೆಸರು), ಕಂಡುಬರುತ್ತದೆ. ಚೌಡ್ಲು[೧೮] ಮತ್ತು ಗಣಗೂರು ಶಾಸನಗಳು (ಹೆಣ್ಣಿಂಗೆ ಹೆಣ್ಣುಮಕ್ಕಳಿಂಗೆ ತೊತ್ತಿನ ಮಕ್ಕಳಿಂಗೆ) ಎಂದು ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕು ಗಳು ಇದ್ದ ಬಗ್ಗೆ ಅರ್ಥಪೂರ್ಣ ನಿಸ್ಸಂಧಿಗ್ಧ ಕನ್ನಡ ಶಬ್ದ ಗಳಲ್ಲಿ ತಿಳಿಸುತ್ತವೆ. ಕ್ರಿ.ಶ. ೧೩೭೧ರ ಪಾಲೂರು ಭಾಗಮಂಡಲ ಶಾಸನಗಳಲ್ಲಿ[೧೯] ಸಂಸ್ಕೃತ, ತಮಿಳು, ಮಲೆಯಾಳ, ವಟ್ಟೆಳೆತ್ತುವಿನ ಸಂಯುಕ್ತ ಲಿಪಿಭಾಷಾ ಶಾಸನಗಳಿದ್ದರೂ, 'ನೋಡು', 'ಪೂವಿಸ್ಥಾನ', 'ಮ(ಮು)ಯ್ಯಾಳಿ' ಎಂಬ ಕನ್ನಡ ಶಬ್ದಗಳಲ್ಲದೆ, 'ಅಯಾರಿ' (ಬಡಗಿ), 'ಎಳುತ್ತು' ಎಂಬ ಕೊಡವ ಭಾಷಾ ಶಬ್ದಗಳನ್ನು ಹೊಂದಿವೆ.

ಇನ್ನು ಚಂಗಾಳ್ವ ಅರಸರ ಸಚಿವವಂಶದ ಕ್ರಿ.ಶ. ೧೫೦೮ರ ಸುಮಾರಿಗೆ ಮೂರನೆಯ ಮಂಗರಸ ಚಂಗಾಳ್ವ ನೃಪನಲ್ಲಿ ಆಶ್ರಿತನಾಗಿದ್ದು, ಜಯನೃಪಕಾವ್ಯ, ಪ್ರಬಂಜನ ಚರಿತ್ರೆ, ನೇಮಿಜಿನೇಶನ ಸಂಗತಿ, ಹರಿವಂಶಪುರಾಣ, ಸೂಪಶಾಸ್ತ್ರ, ಶ್ರೀಪಾಲಚರಿತ್ರೆ ಇತ್ಯಾದಿ (೫ ಕಾವ್ಯ, ೧ ಶಾಸ್ತ್ರಕೃತಿ) ಆರು ಕೃತಿಗಳನ್ನು[೨೦] (ಜಯನೃಪಕಾವ್ಯಸಂಗ್ರಹ, ಹಂಪನಾ, ಪೀಠಿಕೆ) ರಚಿಸಿದವನಾಗಿದ್ದಾನೆ. ತನ್ನ ಶ್ರೀಪಾಲಚರಿತ್ರೆಯಲ್ಲಿ ಕೊಡಗಿನ ಬಲ್ಲಾಡುಗಳ ಬಗ್ಗೆ ವಿವರಿಸಿದ್ದಾನೆ.

ನಂಜುಂಡಕವಿ ಮೂರನೇ ಮಂಗರಸನ ಮೊದಲ ಸೋದರನ ಮಗ. ಕ್ರಿ.ಶ. ೧೫೨೫ರ ನಂಜರಾಯಪಟ್ಟಣದ ಚಂಗಾಳ್ವ ದೊರೆ ನಂಜರಾಜನ ಆಶ್ರಿತನಾದ ವೀರಶೈವ ಕವಿ. ಈ ನಂಜುಂಡ ಕವಿ 'ಕುಮಾರರಾಮ ಸಾಂಗತ್ಯ'ವನ್ನು ರಚಿಸಿದ್ದಾನೆ. ಅದರಲ್ಲಿ ಕೊಡಗಿನ ಭಟರ ಶೌರ್ಯವನ್ನು ವರ್ಣಿಸುತ್ತ '...ಕೊಂಗು, ಕೊಡಗು ಮಲೆಯಾಳ ತಿಗುಳ ... ದೇಶಗಳ ಕೂರಾಳುಗಳು' ಎಂದಿದ್ದಾನೆ. ಕ್ರಿ.ಶ. ೧೫೪೦ರ ಸುಮಾರಿನ ಚಂಗಾಳ್ವ ದೊರೆ ನಂಜುಂಡರಾಜನ ಮಂತ್ರಿ ಯಾಗಿದ್ದ ದೇವಪ್ಪಕವಿಯು ತನ್ನ 'ರಾಮವಿಜಯ ಕಾವ್ಯ'ದಲ್ಲಿ ಕೊಡಗಿನ ವರ್ಣನೆ ಮಾಡಿದ್ದಾನೆ. ಕಾವೇರಿಯನ್ನು 'ಬಳಸಿ ಪರಿವ ಪನಿನೀರ ಕಾಲುವೆ ಬಲ್ಗೆಱೆ' ಎಂದು ವರ್ಣಿಸಿ ಅದರ ಬಳುಕನ್ನು ಮನದುಂಬಿಸಿದ್ದಾನೆ. ಕೊಡಗಿನ ಕಾಡಿನ ವೃಕ್ಷಗಳು, ಪ್ರಾಣಿಗಳ ವರ್ಣನೆಗಳು ನೈಸರ್ಗಿಕ ಚೆಲುವಿನಿಂದ ಕೂಡಿದೆ. ಕೊಡಗಿನಾಚೆಯ ಕವಿ ಕ್ರಿ.ಶ. ೧೬೪೮ರ ಗೋವಿಂದ ವೈದ್ಯನ ಕಂಠೀರವನರಸರಾಜ ವಿಜಯದಲ್ಲಿ ಕೊಡಗಿನ ಪಾಲ್ಪರೆ ಕೋಟೆ ಹಾಗೂ ಕೊಡಗಿನ ಜನರ ಜೀವನ ಚಿತ್ರವನ್ನು ಕಾವ್ಯಾನುಭೂತಿಯಿಂದ ವರ್ಣಿಸಿದ್ದಾನೆ.

ಹೀಗೆ ಪೂರ್ವಹಳಗನ್ನಡ, ಹಳಗನ್ನಡ, ನಡುಗನ್ನಡ ಭಾಷಾ ಬಳಕೆಯ ಪರಂಪರೆ ಇದ್ದ ಕೊಡಗಿನಲ್ಲಿ, ಮನೆ

ಮತ್ತು ಮಠಗಳನ್ನು ಹಸ್ತಪ್ರತಿ ಸಂಗ್ರಹಗಳಿರುವಲ್ಲಿ ಜನರಲ್ಲಿ ಸಾಹಿತ್ಯಿಕ ಅಭಿರುಚಿ ಇದ್ದ ಬಗ್ಗೆಯೂ ಕಲ್ಪನೆ ಒದಗಿಸುತ್ತದೆ. ಇದು ಗಂಗ, ಕೊಂಗಾಳ್ವರ ಕಾಲದ ಸಾಹಿತ್ಯಿಕ ಪ್ರಯತ್ನಗಳಲ್ಲಿ ಕಾಣಬರುತ್ತದೆ. ಹಾಲೇರಿ ಅರಸರು ಈ ಹಿನ್ನೆಲೆಗಳನ್ನು ಬಳಸಿ ಶಾಸನಗಳ, ಓಲೆಗರಿ ಹಸ್ತಪ್ರತಿಗಳು, ಗ್ರಂಥಗಳು ನಿರೂಪಗಳು ಹಾಗೂ ಚರಿತ್ರೆಯನ್ನು ಬಳಸಿ, ಸಾಹಿತ್ಯ ಸಂಗ್ರಹ–ಪೋಷಣಾ ಕಾರ್ಯವನ್ನು ಮಾಡಿದರು. ಅವರಲ್ಲಿಯ ಒಬ್ಬ ದೊರೆ ಕೃತಿಕಾರನೂ ಆಗಿದ್ದ. ಇದಲ್ಲದೆ ಆಡಳಿತ ದಾಖಲೆ–ಶಿಸ್ತು–ಹುಕುಂನಾಮ, ವೃತ್ತಾಂತ, ಕೈಬರೆಹ ಪ್ರತಿಗಳು, ವಂಶಚರಿತ್ರೆ, ನಿರೂಪ ಸನ್ನದುಗಳ ಮೂಲಕ ಆಡಳಿತ ಭಾಷೆಯ ಗತ್ತು, ಸೊಗಡು ಪ್ರದರ್ಶಿತವಾಗಿವೆ. ಜನಪದಗೀತೆಗಳ ವಿಪುಲತೆಯು ಕೊಡವರು, ಕೆಂಬಟ್ಟಿಗಳು, ಗೌಡ, ವೀರಶೈವರಲ್ಲಿ ಒಗಟು, ಒಡಗತೆ, ಗಾದೆ, ಕತೆಗಳು ಕಾಣಬರುತ್ತವೆ. ಜನಪದೀಯವಾಗಿ, ಕುಡಿಯರು, ಎರವರು, ಜೇನು ಕುರುಬರು ಮುಂತಾದ ಜನಾಂಗಗಳಲ್ಲಿ ಕಾಣ ಬರುತ್ತವೆ.

ಕ್ರಿ.ಶ. ೧೮೦೯ರವರೆಗಿದ್ದ ಕೊಡಗಿನ ಹಾಲೇರಿ ವಂಶದರಸ, ದೊಡ್ಡವೀರರಾಜೇಂದ್ರ ಒಡೆಯನು ಖಾಸಾರ ಹಸ್ಯದ ಶಂಖೈಯ್ಯನಿಂದ ಬರೆಸಿದ 'ರಾಜೇಂದ್ರನಾಮೆ'ಯು ಹಾಲೇರಿವಂಶದ ಚರಿತ್ರೆಯನ್ನು, ಆವರೆಗಿನ ಓಲೆಹಸ್ತಪ್ರತಿಗಳು, ಗ್ರಂಥಗಳು ಇತ್ಯಾದಿ ಲಭ್ಯವಿದ್ದ ದಾಖಲೆಗಳನ್ನು ಅನುಸರಿಸಿ ರಚಿತವಾದ ಕೃತಿಯಾಗಿದೆ.

ಕ್ರಿ.ಶ. ೧೮೦೯ರ ಈ ವಂಶದರಸ ೨ನೇ ಲಿಂಗ ರಾಜೇಂದ್ರ ಒಡೆಯನು ತನ್ನ ಕಾವ್ಯಪ್ರಿಯ ಪತ್ನಿ 'ಚಿತ್ರಾ'ಳನ್ನು ಕುರಿತು ಕವಿತೆಗಳನ್ನು ಬರೆದು ಕಾವ್ಯರಸಿಕನಾಗಿದ್ದ; ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ'ಯನ್ನು ಸಂಸ್ಕೃತಕ್ಕೆ ಭಾಷಾಂತರ ಮಾಡಿದನೆನ್ನಲಾಗಿದೆ. ಅದು ಕನ್ನಡ ಕೃತಿಗಿಂತಲೂ ಶ್ರೇಷ್ಠವಾಗಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿದೆ. 'ವಿವೇಕ ಚಿಂತಾಮಣಿ'ಯಾದರೋ ವಿದ್ಯಾರಣ್ಯರ ಸರ್ವದರ್ಶನ ಸಂಗ್ರಹದಂತೆ ದಾರ್ಶನಿಕ ಮಾತ್ರವಲ್ಲ, ಮತಾತೀತವಾದ ಸಕಲ ಜ್ಞಾನಕೋಶವೆನಿಸಿ ಕನ್ನಡ ವಾಙ್ಮಯದಲ್ಲಿ ಅದ್ವಿತೀಯ ಗ್ರಂಥವೆಂದಿದ್ದಾರೆ, ಡಾ. ರಂ.ಶ್ರೀ. ಮುಗಳಿಯವರು. ಈ ೨ನೆಯ ಲಿಂಗರಾಜೇಂದ್ರ ಒಡೆಯನು 'ಬಸವರಾಜವಿಜಯ' ಎಂಬ ಕೃತಿಯನ್ನೂ ರಚಿಸಿದ್ದನೆನ್ನಲಾಗಿದೆ.

ಇನ್ನು ವೀರಶೈವಮಠಗಳಲ್ಲಿ ಓಲೆಗರಿ ಗ್ರಂಥಗಳ ಸಂಗ್ರಹ ಹಾಗೂ ನಕಲು ಪ್ರತಿ ಮಾಡುವುದರ ಜೊತೆಗೆ ಕೃತಿರಚನೆಯೂ ನಡೆಯುತ್ತಿತ್ತು. ಅಬ್ಬಿಮಠದ ಸೋಮಶೇಖರ ಶಿವಯೋಗಿಗಳು ತೋಂಟದ ಸಿದ್ಧಲಿಂಗಯತಿಗಳು 'ಷಟ್‌ಸ್ಥಲಜ್ಞಾನಸಾರಾಮೃತ'ದ ಬೆಡಗಿನ ವಚನಗಳಿಗೆ ಟೀಕೆ ಬರೆದವರಾಗಿದ್ದಾರೆ. ಕ್ರಿ.ಶ. ೧೬೩೩ರ ಹಾಲೇರಿ ವಂಶದರಸರ ಮುದ್ದರಾಜನ ಕಾಲದಲ್ಲಿ ವೀರಶೈವ ಮಠಗಳಲ್ಲಿ ಓಲೆಪ್ರತಿಗಳ ತಯಾರಿಕೆ, ಸಂಗ್ರಹ ಹಾಗೂ ಸಾಹಿತ್ಯಿಕ ಪ್ರಯತ್ನಗಳಿಗೆ ಪ್ರೋತ್ಸಾಹ ದೊರಕಿತ್ತು. ಘಟ್ಟಿವಾಳಯ್ಯನ ೧೬೩೩ರ 'ಕಾಲಜ್ಞಾನ'ದ ಓಲೆಪ್ರತಿಯ ಮರುಪ್ರತಿಯನ್ನು ೧೮ನೇ ಶತಮಾನದಲ್ಲಿ ಮಾಡಲಾಗಿದೆ. ಹುಲಸೇ ಗ್ರಾಮದ ಜಂಗಮ ಈಶ್ವರಯ್ಯ, 'ನಂಜರಾಜ' ಪಟ್ಟಣದಲ್ಲಿದ್ದ ದೊರೆಗಳ ವೃತ್ತಾಂತ 'ಅಬ್ಬಿಮಠದ ವೃತ್ತಾಂತ' 'ಉತ್ತರ ದಿಕ್ಕಿನ ಯಡವನಾಡಿನ ಕುಮಾರೇಶ್ವರ ಲಿಂಗಪ್ರತಿಷ್ಠೆಯ ವೃತ್ತಾಂತ'ಗಳನ್ನು ಬರೆದಿರುವಲ್ಲಿ ಕತೆಯ ಸೊಗಸುಗಾರಿಕೆ, ಮಾಹಿತಿಯು ಸೂಚ್ಯತೆ ಇದೆ.

ವೀರಶೈವ ಮಠಗಳಲ್ಲಿ ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳ ಪ್ರತಿ ಮಾಡಿಟ್ಟುಕೊಳ್ಳುವ ರೂಢಿ ಇದ್ದ ಕಾರಣ, **ಸೋಮವಾರಪೇಟೆ ಮಠ**ದಲ್ಲಿ ಬಸವಲಿಂಗ ನಾಮಾವಳಿ, ಅಭವಸ್ತೋತ್ರದ ಪದ್ಯಗಳ, ನುಲಿಯ ಚಂದಯ್ಯನ ವಚನಗಳು, ಪಾದಪೂಜೆ ಲಾವಣಿ, ಗಣಪತಿ–ಈಶ್ವರ ಸ್ತುತಿಗಳು, ವೀರಭದ್ರಾಷ್ಟಕ ('ಕಿಶೋರ ಹಂಸಕೋಟಿ ತೇಜ ವಜ್ರಕಾಯ ತಾಂಡವಾ । ಅನಂತಸಿಂಹನಾದ ಕೋಲಹಾಲ ಕಾಲಭೈರವಾ') ಮೈದುನ ರಾಮಯ್ಯನ ಸುವ್ವಿ, ಸ್ತೋತ್ರವೃತ್ತ ಇತ್ಯಾದಿಗಳು ಕಂಡುಬರುತ್ತವೆ. **ಅರಮೇರಿ ಮಠ**ದಲ್ಲಿ ಸಂಗ್ರಹದಲ್ಲಿ ಗುರುರಾಯರ ಚರಿತ್ರೆ, 'ಗಣಭಾಷಿತ ರತ್ನಮಾಲಾ'ದ ಪ್ರತಿಗಳು ಕಂಡುಬಂದಿವೆ.

ಜನಪದ ಸಾಹಿತ್ಯದ ದೃಷ್ಟಿಯಿಂದ ಹೇಳಿದರೆ ದೇಸೀ ಚೆಲುವಿನ ಹಾಡು, ಪದ್ಯ, ಗೀತೆಗಳಲ್ಲಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಹಿನ್ನೆಲೆಯ ಕೃಷಿ, ಹುತ್ತರಿ, ಹೊನ್ನಾರು ಹಾಡು ಗಳು, ಬೇಡುಹಬ್ಬದ ಹಾಡುಗಳು ವಿಪುಲವಾಗಿ ಕಂಡು ಬರುತ್ತವೆ.

ಕೊಡವ ಭಾಷೆಯ ಅಂದೋಳತ್ ಪಾಟ್ ಹಾಡು ಗಳಲ್ಲಿ, ಗಾದೆಗಳಲ್ಲಿ, ಕೊಡಗಿನ ತಕ್ಕಾಮೆ (ಕುಟುಂಬ, ಊರು, ನಾಡು ಇತ್ಯಾದಿಗಳಲ್ಲಿಯ ಮುಖ್ಯಸ್ಥವಂತಿಕೆ) ಹಬ್ಬ, ಜನಪದ ನೃತ್ಯ, ಹಾಡುಗಳಲ್ಲಿ ಹಾಲೇರಿ ಅರಸರು, ದೇವತೆಗಳು, ವೀರರ ಕುರಿತ ಪಾಟ್‌ಗಳು ಕಂಡುಬರುತ್ತವೆ. 'ಮನೆಮನೆ ಹಾಡುವ' ಹಾಡುಗಳು ಸಾಮಾಜಿಕ ಸಾಮರಸ್ಯದ ಸಾಂಸ್ಕೃತಿಕ ನೋಟವನ್ನು ನೀಡುತ್ತವೆ.

ಉತ್ತರ ಕೊಡಗಿನಲ್ಲಿ ಕಾಣಬರುವ ಹರಿಸೇವೆ ಹಬ್ಬದಲ್ಲಿ ತಿರುಪತಿ ತಿಮ್ಮಪ್ಪನಿಗೆ ಹಾಡುವ 'ಜಯಮಂಗಳ'ದ ಹಾಡು ಪವಿತ್ರ ಪರಿಸರದ ಗೀತೆಯಂತಿದೆ. ಸುಗ್ಗಿಕಟ್ಟೆ ಹಬ್ಬದ **ಹೊನ್ನಾರು ಹಾಡು** ರೈತರ ಮುದದ ಹಾಡಾಗಿದೆ; ಹಾಲೇರಿ ಅರಸರನ್ನು ಗೌರವದಿಂದ ನೆನೆದ ಹಾಡಾಗಿದೆ. ಕೊಡವ ಭಾಷೆಯ ಜನಪದ

**ಹುತ್ತರಿ ಹಾಡು**, ಕೊಡಗಿನ ಬೇಸಾಯದ ಫಲವಂತಿಕೆಯ ಸಂಭ್ರಮದ ದಟ್ಟ ದೇಸಿ ಭಾಷೆಯ ಹಾಡಾಗಿದೆ (ಬಪ್ಪಕ ಪುತ್ತರಿ ಬಣ್ಣತೆ ಬಾತ್ । ಪೋಷಕ ಪುತ್ತರಿ ಎಣ್ಣತೆ ಪೋಚಿ ...), 'ಒಯ್ಯ ಕಾಕುವ' ಹಾಡುಗಳು ನಾಟಿಗಾರಿಕೆಯ ರೋಚಕ ಸಾಲುಗಳ ಸದ್ ಆಕಾಂಕ್ಷೆಗಳ ಹಾಡುಗಳಾಗಿವೆ. ದಲಿತ ಕೆಂಬಟ್ಟಿಗಳ ಕೊಡವ ಮತ್ತು ಕನ್ನಡ ಭಾಷೆಗಳ ಹಾಡುಗಳು ಅವರ ಇಡೀ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುತ್ತವೆ.

ಉತ್ತರ ಕೊಡಗಿನ ವೀರಶೈವರಲ್ಲಿಯ ಹುಲು ಕೋಡಯ್ಯನ ಪ್ರೇಮಪ್ರಸಂಗದ ಹಾಡು (ಅವರದಾಳು ಜಾತ್ರೆಯ ದೈವಿಕ ವೀರನ ಮೇಲಿನ ಹಾಡು), ಉತ್ತರದೇವಿಯ ಹಾಡು, ಗೌಡಜನಾಂಗದ ಅರೆಭಾಷೆಯ ಸಾಹಿತ್ಯದಲ್ಲಿ ಕನ್ನಡದ ಜಾನಪದೀಯ ಸತ್ವವು ಪ್ರಕಟವಾಗಿದೆ. ಯರವರ ಜನಪದ ಹಾಡುಗಳು ಪುರಾಣಸ್ವರೂಪದಲ್ಲಿದ್ದು 'ಬಾಯಿಪತ್ರೆ' ಎಂದು ಕರೆಸಿಕೊಂಡಿವೆ.

ಜನಾಂಗಗಳ ಆಡುಮಾತಿನ ದೃಷ್ಟಿಯಿಂದ, ಕೆಂಬಟ್ಟಿ, ಕಾಪಳ, ಜೇನುಕುರುಬ, ಎರವ, ಕುಡಿಯ, ಕುಕ್ಕ ಮಾರಂಗಿ ಇತ್ಯಾದಿ ದಲಿತವರ್ಗ, ಬುಡಕಟ್ಟು ಮೂಲದವರಲ್ಲಿ ಕನ್ನಡ ಶಬ್ದಗಳನ್ನು ರೂಪಾಂತರ ಮಾಡಿಕೊಂಡು ಆಡುವುದನ್ನು ಗಮನಿಸಬಹುದು. ಅವುಗಳಲ್ಲಿ ಕೊಡವ ಭಾಷಿಕ ಉಚ್ಚಾರದ ಶೈಲಿ ಅಡಕಗೊಂಡಿದೆ.

ಆಧುನಿಕ ಸಾಹಿತ್ಯ, ಭಾಷಾ ಬಳಕೆ ದೃಷ್ಟಿಯಿಂದ ಕನ್ನಡ, ಕೊಡವ ಭಾಷೆಗಳಲ್ಲಿ ಬರಹದ ಕೃಷಿಯನ್ನು ಸಾಕಷ್ಟು ಸಾಹಿತಿಗಳು ಮಾಡಿದ್ದಾರೆ. ಕ್ರಿ.ಶ. ೧೮೯೪ರ ವೆಂಕಟಾದ್ರಿ ಅವರಿಂದ ನಾಟಕ, ಕತೆಗಳು ಪ್ರಕಟವಾಗಿವೆ. ಕೊಡವ ಭಾಷೆಯಲ್ಲಿ ಪ್ರಸಿದ್ಧ ನಾಟಕಕಾರ ಹರದಾಸ ಅಪ್ಪಚ್ಚಕವಿ ಅವರು ನಾಟಕಗಳನ್ನು ಬರೆದಿದ್ದಾರೆ. ಪಾಂಡಂಡ ಮುತ್ತಣ್ಣ 'ಕೊಡವರ ಅರಬೇರ ಪುರಾಣ' ಹಾಗೂ ಸಾಮಾಜಿಕ ನೆಲೆಯ ಕೃತಿಗಳನ್ನು ಬರೆದರು. ಅಪಾಡಂಡ ಗಣಪತಿ ಭಕ್ತಿಪ್ರಾಧ್ಯಾನ್ಯ ಕೃತಿಗಳನ್ನು ಬರೆದರು. ಬಿ.ಎಸ್. ಕುಶಾಲಪ್ಪ ಅವರು ವಿಜ್ಞಾನ, ಭೂಗೋಳ, ಜಾನಪದ ಹಾಗೂ ಚರಿತ್ರೆ ಸಂಬಂಧೀ ಕೃತಿಗಳನ್ನು ಪ್ರಕಟಿಸಿದ್ದಾರೆ. ಜಿ.ಎಸ್. ಕೇಶವಾಚಾರ್ಯರು, ಕೊಡಗಿನ ರಾಜರು, ವೀರಯೋಧರ ಕುರಿತು ಬರೆದರು. ಕನ್ನಡದ ಪ್ರಸಿದ್ಧ ಕಾದಂಬರಿಕಾರರಾದ ಎಸ್.ಆರ್. ನಾರಾಯಣರಾವ್ ಅವರು 'ಭಾರತೀಸುತ' ಎಂಬ ಕಾವ್ಯನಾಮದಲ್ಲಿ ಕತೆ, ಕಾದಂಬರಿಗಳ ಮೂಲಕ ಕೊಡಗಿನ ಸಾಂಸ್ಕೃತಿಕ, ಸಾಮಾಜಿಕ ಬದುಕನ್ನು ಚಿತ್ರಿಸಿದ್ದಾರೆ. ಡಿ.ಎನ್. ಕೃಷ್ಣಯ್ಯ ಅವರ 'ಕೊಡಗಿನ ಇತಿಹಾಸ', ಬಾಚಿಮಾಡ ಡಿ. ಗಣಪತಿ ಅವರ ಜಾನಾಂಗಿಕ ಇತಿಹಾಸದ ಕೃತಿ 'ಕೊಡಗು ಮತ್ತು ಕೊಡವರು', 'ಕನ್ನಿಕಾವೇರಿ ಕಾದಂಬರಿ' ಕೃತಿಗಳು ಖ್ಯಾತಿಗೊಂಡಿವೆ. ಕೆ.ಪಿ. ಮುತ್ತಣ್ಣನವರ 'ಜಗತ್ತಿಗೊಂದೇ ಕೊಡಗು', ಎದುರ್ಕುಳ ಶಂಕರನಾರಾಯಣಭಟ್ಟರ 'ಕಾವೇರಿ ವೈಭವ', ಕೆ.ಕೆ. ಸುಬ್ಬಯ್ಯ ಅವರ 'ಆರ್ಕಿಯಾಲಜಿ ಆಫ್ ಕೂರ್ಗ್', ಡಾ. ಪಿ.ಎನ್. ಹರೀಶ್ ಅವರ 'ಎರವರ ಸಂಸ್ಕೃತಿ', ಡಾ. ಡಿ.ಬಿ. ರಾಮಚಂದ್ರಾಚಾರ್ ಅವರ 'ಕುಡಿಯರ ಸಂಸ್ಕೃತಿ', ಡಾ. ಎಂ.ಜಿ. ನಾಗರಾಜ್ ಅವರ 'ಕೆಂಬಟ್ಟಿ ಸಂಸ್ಕೃತಿ' ಹಾಗೂ 'ಕೊಡಗಿನ ಹಾಲೇರಿ ರಾಜವಂಶವು', ಇತ್ಯಾದಿ ಕೃತಿಗಳು, ಕೊಡಗಿನ ಇತಿಹಾಸ, ಸಂಸ್ಕೃತಿ, ಭಾಷೆ, ಪ್ರಾಗಿತಿಹಾಸ ಕುರಿತಂತೆ ಬಹುಮುಖಿ ಅಧ್ಯಯನದ ಕೃತಿಗಳಾಗಿ ಪ್ರಕಟಗೊಂಡಿವೆ.

ಕ್ರಿ.ಶ. ೧೯೦೨ರಲ್ಲಿಯೆ ಕೊರವಂಡ ಅಪ್ಪಯನವರಿಂದ 'ಕೊಡವ ಕುಲಾಚಾರ ತತ್ತ್ವೋಜ್ಜೀವಿನಿ' ಎಂಬ ಜಾನಪದ ಹಾಗೂ ಚಾರಿತ್ರಿಕ ಜನಾಂಗೀಯ ಅಧ್ಯಯನದ ಕೃತಿ ಹೊರ ಬಂದಿದೆ. ಕ್ರಿ.ಶ. ೧೯೨೪ರಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರು ಕೊಡವ ಭಾಷಿಕ ಜಾನಪದ ಹಾಡುಗಳ ಹಾಗೂ ಕನ್ನಡದಲ್ಲಿ ಕೊಡಗಿನ ಚಾರಿತ್ರಿಕ ಅಂಶಗಳನ್ನು ಒಳಗೊಂಡ ಪ್ರಸಿದ್ಧ ಕೃತಿ 'ಪಟ್ಟೋಲೆ ಪಳಮೆ'ಯನ್ನು ಪ್ರಕಟಿಸಿದರು. ದೇವತೆಯಡ ಪಾಟ್‌ಗಳು, ಜನಪದ ಗಾದೆ, ಒಗಟುಗಳ ಸಂಗ್ರಹವೂ ಅದರಲ್ಲಿದೆ. ಪಂಜೆ ಮಂಗೇಶ ರಾಯರ 'ಹುತ್ತರಿ ಹಾಡು', ಕೊಡಗಿನ ಗೌರಮ್ಮ ಅವರ ಸಣ್ಣಕಥೆಗಳ ಸಂಕಲನ, ನಿರಂಜನ ಅವರ ಸ್ವಾಮಿ ಅಪರಂಪರ, ಮಾಸ್ತಿ ಅವರ ಚಿಕ್ಕವೀರರಾಜೇಂದ್ರ ಕಾದಂಬರಿಗಳು ಕೊಡಗಿನ ಸಂಬಂಧವಾಗಿ ಬಂದಿವೆ.

ವಿ.ಎಸ್. ರಾಮಕೃಷ್ಣ ಅವರು ಕೊಡವ ಭಾಷೆಯಲ್ಲಿ 'ಕಾವೇರಿ ಮಹಾತ್ಮ್ಯೆ'ಯನ್ನು ಭಾಮಿನಿ ಷಟ್ಪದಿಯಲ್ಲಿ ಪ್ರಕಟಿಸಿದ್ದಾರೆ. ಅವರ 'ಶ್ರೀರಾಮಚರಿತಾಮೃತಂ' ಎಂಬ ಮಹಾ ಕಾವ್ಯ ಹಾಗೂ 'ಮಧುರ ಸಂಗಮ' ಎಂಬ ಕವನಸಂಕಲನವೂ ಪ್ರಕಟವಾಗಿದೆ. ಎಸ್. ಶಂಕರನಾರಾಯ ಭಟ್ಟರು 'ಕೊಡವ ಭಾಷಾವ್ಯಾಕರಣ' ರಚಿಸಿದ್ದಾರೆ. ಪೇರಿಯಂಡ ಚಂಗಪ್ಪನವರ 'ಕೊಡವರ ಆಂದೋಳತ್ ಪಾಟ್', ಮೊಗ್ಗೆರ ಬಿದ್ದಪ್ಪ ಅವರ ಜಾನಪದ ಹಾಡುಗಳ ಸಂಗ್ರಹವಾದ 'ನೆಲ್ಲಕ್ಕಿ ನಡುಬಾಡೆ', ಕುಪ್ಪಚ್ಚಿ ಮೊಣ್ಣಪ್ಪನವರ 'ಪೊಮ್ಮಾಲೆ ಕೊಡಗ್' ಐ.ಮಾ. ಮುತ್ತಣ್ಣ ಅವರ 'ಕೊಡವ–ನಿಘಂಟು' ಹಾಗೂ ಇತರ ಕೃತಿಗಳು, ಬೆಸೂರು ನಂಜಣ್ಣನವರ ಜಾನಪದ ಸಾಹಿತ್ಯ ಹಾಗೂ ಸಂಗ್ರಹಗಳು ಇತ್ಯಾದಿಗಳು ಕೊಡಗಿನ ಸಾಹಿತ್ಯಕ ಹಾಗೂ ಭಾಷಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿವೆ. ಈಚೆಗೆ ದಿ॥ ಮಂಡೀರ ಜಯಾ ಅಪ್ಪಣ್ಣ ಅವರ ಕೊಡವಭಾಷಿಕ 'ಜಯಾ ಮಹಾಭಾರತ' ಕಾವ್ಯವೂ ಪ್ರಕಟ ವಾಗಿದೆ. ಡಾ. ಕವಿತಾ ರೈ ಅವರ 'ಕೊಡಗಿನ ಶತಮಾನದ ಕಾವ್ಯ' ಎಂಬ ಪಂಜೆ ಮಂಗೇಶರಾಯರಿಂದ ಹಿಡಿದು ಈವರೆಗಿನ ಸುಮಾರು ೨೪೨ ಕವಿಗಳ ಕವಿತೆಗಳನ್ನು

ಸಂಪಾದಿಸಿ ಪ್ರಕಟಿಸಿದ್ದಾರೆ. ಡಾ. ಎನ್.ಪಿ. ಕಾವೇರಿ ಅವರು 'ಕೊಡಗಿನ ಹಬ್ಬಗಳು ಹಾಗೂ ಕೊಡವ ಸಂಸ್ಕಾರಗಳು' ಕುರಿತು ಕೃತಿಯನ್ನು ಹೊರತಂದಿದ್ದಾರೆ. ಡಾ. ಕೋಡಿರ ಎಂ. ಲೋಕೇಶ್ ಅವರು 'ಕೊಡಗಿನ ಬುಡಕಟ್ಟು'ಗಳ ಬಗ್ಗೆ ಕೃತಿ ಪ್ರಕಟಿಸಿದ್ದಾರೆ.

ಸದ್ಯ ಕೊಡಗಿನ ಬದುಕು, ಸಂಸ್ಕೃತಿ, ಜನಾಂಗೀಯ ವೈಶಿಷ್ಟ್ಯಗಳು, ಕತೆ, ಕಾದಂಬರಿ, ಕಾವ್ಯ, ನಾಟಕ, ಶಾಸ್ತ್ರ, ಮಾಧ್ಯಮ, ಸೈನಿಕ ಪರಂಪರೆ, ಪರಿಸರ, ಇತಿಹಾಸ ವಲಯದಲ್ಲಿ ಕೃತಿ ಹಾಗೂ ಸಂಶೋಧನ ಪ್ರಬಂಧಗಳನ್ನು ಪ್ರಕಟಿಸಿರುವವರು ಕೊಡಗಿನಲ್ಲಿ ವಿಪುಲವಾಗಿದ್ದಾರೆ. ಶ್ರೀ ಅಬ್ದುಲ್ ರಶೀದ್, ಶ್ರೀಮತಿ ನೀಲಮ್ಮ ಮುತ್ತಣ್ಣ, ಡಾ. ಪುರುಷೋತ್ತಮ ಬಿಳಿಮಲೆ, ಪ್ರೊ. ಲಕ್ಷ್ಮಣ ತೆಲಗಾವಿ, ಶ್ರೀ ಪರದಂಡ ಜಿ. ಚಂಗಪ್ಪ, ದಿ॥ ಜಿ. ಯದುಮಣಿ, ದಿ॥ ಬಿ.ಎಸ್. ಗೋಪಾಲಕೃಷ್ಣ, ಶ್ರೀ ಅಡ್ಡಂಡ ಸಿ. ಕಾರ್ಯಪ್ಪ, ಡಾ. ಎಂ.ಪಿ. ರೇಖಾ, ಶ್ರೀಮತಿ ಬೈತಡ್ಕ ಜಾನಕಿ, ಡಾ. ಕೋರನ ಸರಸ್ವತಿ, ದಿ॥ ಡಿ.ಜೆ. ಪದ್ಮನಾಭ, ಶ್ರೀಮತಿ ಉಳ್ಳಿಯಡ ಡಾಟಿ ಪೂವಯ್ಯ, ಶ್ರೀಮತಿ ಗೋವಿಂದಮ್ಮಯ್ಯ, ಬಾಚರಣಿಯಂಡ ಪಿ.ಅಪ್ಪಣ್ಣ ದಂಪತಿಗಳು, ಶ್ರೀಮತಿ ಮಂಡೇಪಂಡ ಗೀತಾ, ಶ್ರೀ ಟಿ.ಸಿ. ತಮ್ಮಯ್ಯ, ಶ್ರೀ ಬಿ.ಸಿ. ದಿನೇಶ್, ಶ್ರೀ ಕೆ.ಪಿ. ಬಾಲಸುಬ್ರಮಣ್ಯ, ಶ್ರೀ ಶ್ರೀಧರ ಆರಾಧ್ಯ, ಶ್ರೀ ಷಂಶುದ್ದೀನ್, ಶ್ರೀ ಶ್ರೀಧರ ಹೆಗ್ಗಡೆ, ಶ್ರೀ ಕಾಜೂರು ಸತೀಶ್, ಡಾ. ಸುಭಾಷ್ ನಾಣಯ್ಯ, ಶ್ರೀ ಕಿಗ್ಗಾಲು ಎಸ್. ಗಿರೀಶ್, ಶ್ರೀ ಟಿ.ಎಸ್. ಗೋಪಾಲ್ ಶ್ರೀಧರ ಹೆಗ್ಗಡೆ, ಡಾ. ಎಸ್.ವಿ. ನರಸಿಂಹನ್, ಮುಂತಾದವರಿದ್ದಾರೆ. ಇನ್ನು ಸಾಕಷ್ಟು ಸಾಹಿತ್ಯ, ಶಾಸ್ತ್ರಕ್ಷೇತ್ರದಲ್ಲಿ ಸಾಧನೆ ಮಾಡಿದವರಿದ್ದರೂ ಎಲ್ಲರನ್ನೂ ಹೆಸರಿಸಲಾಗಿಲ್ಲ. ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದವರೂ ಇದ್ದಾರೆ. ಅಂತಾಗಿ ವರ್ತಮಾನದಲ್ಲಿ ಆಧುನಿಕ ಸಾಹಿತ್ಯದ ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿದ ಕೆಲವೇ ಕೆಲವಷ್ಟು ಹೆಸರುಗಳನ್ನು ಉದಾಹರಣೆಗಾಗಿ ಮಾತ್ರ ನೀಡಲಾಗಿದೆ.

ಪತ್ರಿಕಾಕ್ಷೇತ್ರದಲ್ಲಿ ಶನಿವಾರಸಂತೆಯಲ್ಲಿ ಮೈಸೂರು ರಂಗರಾಯರಿಂದ ಕ್ರಿ.ಶ. ೧೮೮೮ರಲ್ಲಿ ಆರಂಭವಾದ 'ಕೊಡಗು ಚಂದ್ರಿಕೆ' ಪತ್ರಿಕೆಯಿಂದ ಹಿಡಿದು ೪೪ ಸಂಖ್ಯೆಗಳಿಗೆ ಮೀರಿದಂತೆ ಮಾಧ್ಯಮ ಸಾಧನೆ ಇಂದು ಕೊಡಗಿನ ಕನ್ನಡ ಮತ್ತು ಕೊಡವ ಭಾಷಾ ಪತ್ರಿಕೆಗಳದಾಗಿದೆ. 'ಶಕ್ತಿ'ಯ ದಿ। ಬಿ.ಎಸ್. ಗೋಪಾಲಕೃಷ್ಣ, ಶ್ರೀ ಜಿ. ರಾಜೇಂದ್ರ, ಶ್ರೀ ಜಿ. ಅನಂತಶಯನ, ಶ್ರೀ ಎಚ್.ಟಿ. ಅನಿಲ್, 'ಗಡಿನಾಡ ಸಂಚಾರಿ'ಯ ಶ್ರೀ ಟಿ.ಪಿ. ರಮೇಶ್, 'ಬ್ರಹ್ಮಗಿರಿ'ಯ ಉಳ್ಳಿಯಡ ಎಂ.ಪೂವಯ್ಯ, 'ಕೊಡಗು ಸಮಾಚಾರ'ದ ಮನುಶೆಣೈ, ಕಾವೇರಿ ಟೈಮ್ಸ್, 'ಪ್ರಜಾಸತ್ಯ'ದ ರವಿಕುಮಾರ್, ಕೊಡವ ಭಾಷಿಕ ಪತ್ರಿಕೆಯ ಸಂಪಾದಕ ಶ್ರೀ ಮಹೇಶ್ ಪೂವಯ್ಯ, 'ಆಂದೋಲನ'ದ ಸಂಪಾದಕ ರಾಜಶೇಖರ ಕೋಟಿ, ಅಜ್ಜಮಾಡ ಕುಟ್ಟಪ್ಪ, ಶ್ರೀ ಐತಿಚಂಡ ರಮೇಶ್ ಮುಂತಾದವರು. ಕೊಡಗಿನ ಪತ್ರಿಕಾ ಸಾಹಿತ್ಯ ಸಾಂಸ್ಕೃತಿಕ ವಲಯದಲ್ಲಿ ಹೆಸರು ಮಾಡಿದ್ದಾರೆ. ಇವರಲ್ಲದೆ ರಾಜ್ಯಮಟ್ಟದ ಪತ್ರಿಕೆಗಳಿಗಾಗಿ ಸೇವೆ ಸಲ್ಲಿಸುತ್ತ ಕೊಡಗಿನ ಪತ್ರಕರ್ತರಾಗಿ ರಾಜ್ಯಪ್ರಶಸ್ತಿ ಪಡೆದು ಹೆಸರು ಮಾಡಿ, ಕೊಡಗಿನ ಸಾಹಿತ್ಯ ಹಾಗೂ ಭಾಷಿಕ ವಲಯವನ್ನು ಶ್ರೀಮಂತವಾಗಿಸಿದ್ದಾರೆ.



### ಆಧಾರಸೂಚಿ


೧. ಎ.ಕ. ಸಂ.೪ (ಹೊಸತು), ೧೯೭೫, ಚಾ.ನ. ೩೪೭, ಕುಲಗಾಣ, ಕ್ರಿ.ಶ. ೭-೮ನೇ ಶತಮಾನ, ಮೈ.ವಿ.ವಿ.

೨. ಎ.ಕ. ಸಂ.೧ (ಹೊಸತು), ೧೯೭೨, ಕೊಡಗು ಜಿಲ್ಲೆ, ಕೊಡಗು ೯೮ ಪೆಗ್ಗೂರು, ಕ್ರಿ.ಶ. ೯೭೮.

೩. ಅದೇ., ಕೊಡಗು ೯೬, ಬಿಳಿಯೂರು, ಕ್ರಿ.ಶ. ೮೮೮.

೪. ಅದೇ., ಕೊಡಗು ೯೭, ಕೋತೂತು, ಕ್ರಿ.ಶ. ೯ನೇ ಶತಮಾನ.

೫. ಆರ್. ನರಸಿಂಹಾಚಾರ್ಯ ವಿರಚಿತ **ಕರ್ನಾಟಕ ಕವಿಚರಿತೆ**, ಪ್ರಥಮ ಸಂ. ೧೯೭೨.

೬. ಎಂ.ಜಿ. ನಾಗರಾಜ್., ಕೊಡಗಿನ ಕೊಲೆಕಲ್ಲುಗಳು, **ಹರತಿಸಿರಿ**, ೧೯೮೭, (ಸಂ.) ಲಕ್ಷ್ಮಣ ತೆಲಗಾವಿ, ಹರ್ತಿಕೋಟೆ, ಪು. ೭೩೨.

೭. ಗೋವಿಂದಪೈ, 'ನಾಗವರ್ಮರು ಎಷ್ಟು ಮಂದಿ?!, **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**, ೧೯೩೫, ಸಂ. ೨೦, ಸಂ. ೧.

೮. ಎ.ಕ. ಸಂ.೧ (ಹೊಸತು), ಕೊಡಗು ೧೦೨, ಬಾಳೆಲೆ, ೧೭ನೇ ಶತಮಾನ, ಪು.೬೪ರ ಕೆಳಗಿನ ಅಡಿಟಿಪ್ಪಣಿ ನೋಡಿ, ೧೭ನೇ ಶತಮಾನದ ಈ ಶಾಸನಪದ್ಯ. ನಾಗವರ್ಮ 'ಛಂದೋಬುಧಿ'ಯಲ್ಲಿ 'ಏಳೆ' ಎಂಬ ಛಂದಸ್ಸಿಗೆ ಸರಿಹೋಗುತ್ತದೆ ಎಂದು ಶಾಸನ ಸಂಪುಟವು ಹೇಳುತ್ತ, ಎಸ್.ಎಸ್. ರಾಮಸ್ವಾಮಿ ಅಯ್ಯಂಗಾರ್ ಸಂಪಾದಿತ 'ಛಂದೋಂಬುಧಿ' ಪುಟ ೬೭ (೨ನೇ ಮುದ್ರಣ) ಅನ್ನು ನೋಡಿ ಎಂದಿದೆ.

೯. ಅದೇ., ಕೊಡಗು ೭೧, ಮುಳ್ಳೂರು, ಕ್ರಿ.ಶ. ೧೦೬೪.

೧೦. ಎ.ಕ. ಸಂ. ೨ (ಹೊಸತು), ಶ್ರವಣಬೆಳಗೊಳ ೭೭; ೧೫೨ನೇ ಸಾಲು, ಪು. ೪೭.

೧೧. ಎ.ಕ. ಸಂ. ೧ (ಹೊಸತು), ಕೊಡಗು ೬೨, ಯಡೂರು, ಕ್ರಿ.ಶ. ೧೦೯೫.

೧೨. ಆರ್. ನರಸಿಂಹಾಚಾರ್ಯ ವಿರಚಿತ **ಕರ್ಣಾಟಕ ಕವಿಚರಿತೆ**, ಪ್ರಥಮ ಸಂಪುಟ, ೨೦೦೫, ಪು. ೧೫೭.

೧೩. ಕ್ರಿ.ಶ.೬–೭ನೇ ಶತಮಾನದ ಅಮರಸಿಂಹನ **ಅಮರಕೋಶದ** ಜಾತಿ ಪ್ರಕರಣದಲ್ಲಿ ಬುಡಕಟ್ಟುಗಳಾದ '.... ಪುಳಿಂದ ಶಬರ ... ಮ್ಲೇಚ್ಛಜಾತಯಃ ...' ಎನ್ನುವಾಗ ಮಂಗರಸ 'ಮ್ಲೇಚ್ಛರೆನೆ ಕೊಡವ ಕೊಡಗರು' ಎನ್ನುವಲ್ಲಿ ಇವರು ಬುಡಕಟ್ಟಿನವರು ಎಂಬ ಅರ್ಥದಲ್ಲಿ ಬಳಸಿರುವನೆನ್ನಬೇಕು.

೧೪. ಎ.ಕ. ಸಂ. ೧ (ಹೊಸತು), ಕೊಡಗು ೮೭, ನಂದಿಗುಂದ, ಕ್ರಿ.ಶ. ೧೧೭೫.

೧೫. ಅದೇ., ಕೊಡಗು ೫೨, ಗಣಗೂರು, ಕ್ರಿ.ಶ. ೧೩ನೇ ಶತಮಾನ.

೧೬. ಅದೇ., ಕೊಡಗು ೩೬, ಹೆರೂರು, ಕ್ರಿ.ಶ. ೧೩ನೇ ಶತಮಾನ.

೧೭. ಅದೇ., ಕೊಡಗು ೯೫, ಉಲುಗುಲಿ, ಕ್ರಿ.ಶ. ೧೨೬೪.

೧೮. ಅದೇ., ಕೊಡಗು ೬೦, ಚೌಡ್ಲು, ಕ್ರಿ.ಶ. ೧೩ನೇ ಶತಮಾನ.

೧೯. ಅದೇ., ಕೊಡಗು ೨೦, ೨೧, ಪಾಲೂರು–ಭಾಗಮಂಡಲ, ಕ್ರಿ.ಶ. ೧೪ನೇ ಶತಮಾನ.

೨೦. **ಜಯನೃಪಕಾವ್ಯಸಂಗ್ರಹ**, ೧೯೬೭, (ಸಂ.) ಹಂ.ಪ.ನಾಗರಾಜಯ್ಯ, ಪೀಠಿಕೆ ಪು. viii, ix.

# 'ಕಂಠೀರವ ನರಸರಾಜ ವಿಜಯ' ಕಾವ್ಯದಲ್ಲಿ ಕೋಟೆಕಾಳಗ

ಡಾ. ನಳಿನಿ ವೆಂಕಟೇಶ್*

'ಕಂಠೀರವ ನರಸರಾಜ ವಿಜಯ' ಕಾವ್ಯವು ಗೋವಿಂದ ವೈದ್ಯನೆಂಬ ಕವಿಯಿಂದ ರಚಿತವಾಗಿದೆ. ಶಾಲಿವಾಹನ ಶಕ ೧೫೭೦ರ ಸರ್ವಧಾರಿ ಸಂವತ್ಸರ ಜೇಷ್ಠ ಶುದ್ಧ ಚಂದ್ರವಾರ ಅಂದರೆ ಕ್ರಿ.ಶ. ೧೬೪೮ರಲ್ಲಿ ಈ ಗ್ರಂಥವುಸಾಂಗತ್ಯದಲ್ಲಿ ರಚನೆಯಾಗಿದೆ.

"ಕವಿಯು ತಾನು ಯಾವ ಊರಿನವನೆಂದು ಹೇಳಿಕೊಂಡಿಲ್ಲ. ಆದರೆ ಗ್ರಂಥದ ಪ್ರಾರಂಭದಲ್ಲಿ ಹಾಗೂ ಕೊನೆಯಲ್ಲಿ ರಂಗನಾಥನನ್ನು ಸ್ತುತಿಸಿರುವುದರಿಂದ ಇವನ ಸ್ಥಳ ಅಥವಾ ದೇಶ ಶ್ರೀರಂಗಪಟ್ಟಣವಾಗಿರಬಹುದು ಎಂದು ಮಾಡಿರುವ ಊಹೆ ಸಮಂಜಸವಾಗಿ ತೋರುತ್ತದೆ. ಈತ ಬ್ರಾಹ್ಮಣ ಕವಿ. ಹೆಸರು ಗೋವಿಂದವೈದ್ಯ ಇವನ ತಂದೆ ಶ್ರೀನಿವಾಸ ಪಂಡಿತ ಗೋವಿಂದ ವೈದ್ಯ ಶಿವ, ವಿಷ್ಣು ಮೊದಲಾದ ದೇವತೆಗಳನ್ನು ಸಮನಾಗಿ ವರ್ಣಿಸಿರುವುದರಿಂದ ಸ್ಮಾರ್ತ ಬ್ರಾಹ್ಮಣನಾಗಿರಬಹುದೆಂದು ಅಭಿಪ್ರಾಯವಿದೆ".[೧]

"೧೭ನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದ 'ಕಂಠೀರವ ನರಸರಾಜವಿಜಯ' ಎಂಬ ಸಾಂಗತ್ಯಗ್ರಂಥ ಮಾತ್ರ ಮುಖ್ಯವಾಗಿ ಚಾರಿತ್ರಿಕ ಕಾವ್ಯ.... ಭೂವರಕಂಠೀರವನೆನಿಸಿದ ನರದೇವನ ಕೃತಿಯ ಹೇಳುವೆನು (೧-೨೪) ಎಂದು ತನ್ನ ಚಾರಿತ್ರಿಕ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾನೆ. ಈ ಕಾವ್ಯದಲ್ಲಿ ಕಥಾವಸ್ತುವಿಲ್ಲ. ಕಂಠೀರವ ನರಸರಾಜನ ರಾಜ್ಯ, ವಂಶ, ರಾಜಧಾನಿ ವರ್ಣನೆ, ಚರಿತ್ರವರ್ಣನೆ ವಿಸ್ತಾರವಾಗಿದೆ ..... ಈ ಕಾವ್ಯದಲ್ಲಿಯ ಪ್ರಮುಖ ಗುಣವು ಅದರಲ್ಲಿಯ ಜನಜೀವನ ಮತ್ತು ರಾಜಕೀಯ ಜೀವನದ ವಾಸ್ತವ ಚಿತ್ರದಲ್ಲಿದೆ. ವಿಶೇಷವಾಗಿ ಕರ್ನಾಟಕಕ್ಕೆ ರಣದುಲ್ಲಾಖಾನನು ಬಂದ, ಅವನನ್ನು ಕಂಠೀರವನರಸ ರಾಜನು ಹೇಗೆ ಹೋಲಿಸಿದನೆಂಬುದನ್ನು ಕಣ್ಣೆದಿರು ಕಟ್ಟುವಂತೆ ಬಣ್ಣಿಸಲಾಗಿದೆ. 'ರಣಧೂಳಿಖಾನನು' ಕರ್ನಾಟಕಕ್ಕೆ ಬರುವಾಗ ಮಾಡಿದ ಹಾವಳಿ ಹುಟ್ಟಿಸಿದ ಗಾಬರಿಯನ್ನು ಅದೇ ಕಾಲದಲ್ಲಿದ್ದ ಕವಿ ಯಥಾರ್ಥವಾಗಿ ಬಣ್ಣಿಸಿದ್ದಾನೆ."[೨]

ಈ ಕಾವ್ಯದ ನಾಯಕ ಅರಿಪಾಂಡ್ಯ ಭೂಭೃದ್ಗಿರಿ ವಜ್ರದಂಡ, ಬಿರುದೆಂತೆಂಬರ ಗಂಡ, ಧರ್ಮಶೀಲ ಪಾವನ ಚರಿತೋನ್ನತ, ಕೋಟೆಕೋಳಾಹಳ ಸಂಗರ ವಿಜಯ ವಧೂಟೀಶ ಇತ್ಯಾದಿ ಬಿರುದಾಂಕಿತನಾದ ಕಂಠೀರವ ನರಸರಾಜ. ಈತನು ಶ್ರೀರಂಗಪಟ್ಟಣವನ್ನು ಆಳುತ್ತಿದ್ದನು. ಈ ಕಾವ್ಯದಲ್ಲಿ ನರಸರಾಜನು ರಣಧೂಳಿಖಾನನೊಂದಿಗೆ ಆದ ಯುದ್ಧ ಕೋಟೆಕಾಳಗ' ವು ವಿಶೇಷವಾಗಿ ವರ್ಣಿತ ವಾಗಿದೆ.

**ಕೋಟೆಯ ಹೊರಭಾಗದಲ್ಲಿ ಶತ್ರುಗಳ ಯುದ್ಧ ಸನ್ನಾಹ**

ಬೇರೆ ಕಡೆಯಿಂದ ಶತ್ರು ಸೈನಿಕರು ಬಂದು ಬಲವಾದ ಕೋಟೆಗೆ ಲಗ್ಗೆ ಹಾಕುವಾಗ, ನೂರಾರು ಪ್ರಕಾರಗಳ ಯುದ್ಧ ತಯಾರಿ ಮಾಡಿಕೊಳ್ಳುತ್ತಿದ್ದರು.

೧. ಆನೆಗಳ ಮೇಲೆ ಯುದ್ಧೋಪಕರಣಗಳನ್ನು ಸಾಗಿಸುವುದು, ಕುದುರೆಗಳ ಮೇಲೆ ಹೇರಿತಂದ ಸಂಜೋಗ (ಸಾಧನ ಸಾಮಗ್ರಿಗಳು)

೨. ಬಂಡಿಗಳಲ್ಲಿ ಇಟ್ಟು ತಂದ ಫಿರಂಗಿಗಳು.

೩. ಹೇಸರಗತ್ತೆಗಳ ಮೇಲೆ ಸಾಗಿಸಿತಂದ ಭಂಗಿಯ ಹೇರು, ಸಾರಾಯಿಯ ಪೀಪಾಯಿಗಳು, ಗಂಗಸಾರಗಳ ಸೂಸುವ ಸಾರಾಯಿಯ ಪೀಪಾಯಿಗಳು.

೪. ಎತ್ತಿನ ಮೇಲೆ ಹೊರಿಸಿ ತಂದ ಕೊಡಲಿ, ಕೈಮಚ್ಚು, ಗುದ್ದಲಿ, ಚೂಪಾದ ಕುಡುಗೋಲುಗಳ, ಹಾರೆಗಳು, ತಡಿಕೆ, ಮಕ್ಕರಿ, ಕವಚಗಳು.

೫. ಬಾಣಗಳು ತುಂಬಿದ ಬಿತ್ತಳಿಕೆಗಳು ಕವಚಗಳು, ಬಿಲ್ಲು ಬಾಣಗಳನ್ನು ಸಾವಿರಾರು ಬಂಡಿಗಳಲ್ಲಿ ಸಾಗಿಸುತ್ತಿದ್ದರು.

೬. ರೊಟ್ಟಿ, ಸಕ್ಕರೆ, ತುಪ್ಪ, ಮೊಟ್ಟೆ ಇವುಗಳನ್ನು ಮಾರಾಟ ಮಾಡುವವರು.

೭. ಸೇನಾನಿಗಳ ಮಡದಿಯರು, ಸೂಳೆಯರು ದಂಡಿಗೆ, ಪಲ್ಲಕ್ಕಿಗಳಲ್ಲಿ ಬರುತ್ತಿದ್ದರು.

* # ೧೫, 'ಮನಸ್ವಿನಿ' ಸ್ನೇಹ ಕಾಲೋನಿ, ಚಿಕ್ಕಲ್ಲಸಂದ್ರ, ಬೆಂಗಳೂರು-೫೬೦೦೬೧.

೮. ಯುದ್ಧ ಭೂಮಿಗೆ ತೆಗೆದುಕೊಂಡು ಹೋಗುವ ಸರಕು ಸಾಮಗ್ರಿಗಳು (ಸಂಜೋಗ) ಕರಿಯ ಮದ್ದಿನತಿತ್ತಿ, ಬಾಣದ ಹೇರುಗಳು ಇತ್ಯಾದಿಗಳು.

ಅಸಂಬ್ಬ ಆನೆಗಳು, ಕುದುರೆಗಳು, ರಾವುತರು, ಒಂಟೆ ಪಾಳಯ

೯. ಭಂಗಿಯ ಈ ಹೇರಪಿನಿ (ಅಫೀಮು), ಮೊಟ್ಟೆ, ಸಾರಾಯಿ ಅಂಗಡಿಗಳು, ಸುರೆಯ ತಿತ್ತಿಗಳು ಇತ್ಯಾದಿ ಅಂಗಡಿಗಳು ಸಾಲುಸಾಲಾಗಿದ್ದವು.

ಅಂಗರಕ್ಷೆಯವರು ಮಾ॰ವುತರು ಇದ್ದರು.

**ಏಣಿಗಳು** : ಕೋಟೆಯನ್ನೇರಲು ಏಣಿಗಳನ್ನು ತಂದಿರುತ್ತಿದ್ದರು.

**ದೀವಟಿಕೆಗಳು** : ಇರುಳುಗಾಳಗದಲ್ಲಿ ಲಕ್ಷಸಂಖ್ಯೆಗಳಲ್ಲಿ ದೀವಟಿಕೆಗಳು ಇರುತ್ತಿದ್ದವು.

ಆನೆಗಳಿಗೆ ಎಂಟು, ಕುದುರೆಗಳಿಗೆ ನಾಲ್ಕು, ಕೊಲ್ಹಾರ ಬಂಡಿಗೆ ಹತ್ತು, (ಆಹಾರ ಸಾಮಗ್ರಿಗಳನ್ನು ಸಾಗಿಸುವ ಬಂಡಿಗಳು), ಕಾಲಾಳುಗಳಿಗೆ ಎರಡು ಎಂಬಂತೆ ದೀವಟಿಕೆಗಳು ಇರುತ್ತಿದ್ದವು. ಕೋಟೆಕಾಳಗವು ಮುಖ್ಯವಾಗಿ ನಡೆದದ್ದು ರಾತ್ರಿಯ ಹೊತ್ತಿನಲ್ಲಿ.

ವಾದ್ಯಗಳು : ಸನ್ನೆ, ಭೇರಿ, ದಮಾಮಿ, ಚುಂಬಕಡವುಡೆ, ನಪಿರಿ, ಬುರುಗು, ಕೊಂಬಿನ ಕಾಳೆ, ಮವುರಿ, ಬೊಂಬುಳಿಡೋಳು. ಕೋಟೆಯ ನಾಲ್ಕು ದಿಕ್ಕುಗಳಲ್ಲಿ ಪಾಳಯಗಳು ಇದ್ದುವು. ನಾಲ್ಕು ದಿಕ್ಕಿನಲ್ಲಿ ಸೈನ್ಯಗಳು ಬೀಡುಬಿಟ್ಟಿದ್ದವು. ಎಲ್ಲೆಲ್ಲಿಯೂ ಗುಡಿ, ಗುಡಾರಗಳು, ಅಶ್ವಶಾಲೆಗಳು ಆನೆಗಳ ಗೇಹವಿದ್ದಿತು. ಪೆಟಲುಗಳು, ಕೋಟೆಯ ಮೇಲಕ್ಕೆ ಬಾಣ ಬಿಡುವುದಕ್ಕೆ ಸಿದ್ಧವಾಗಿದ್ದ ಬಿಲ್ಲುಗಳು, ಕೋಟೆ ಕೊತ್ತಳಗಳನ್ನು ತಾಗಿ ಹಾರುವ ಶತಘ್ನಿಗಳು ಫಿರಂಗಿಯನ್ನು ಸರಿಯಾದ ಜಾಗದಲ್ಲಿ ನೆಲೆಗೊಳಿಸುವುದು, ಏಣಿಗಳನ್ನು ಒಂದಕ್ಕೊಂದನ್ನು ಕೂಡಿಸಿ ಕೋಟೆಯ ಗೋಡೆಗೆ ಆನಿಸಿ ಇಡುವುದು. ಹಾಗೆಯೇ ಅಗಳನ್ನು ಸೊಪ್ಪಿನ ಹೊರೆಗಳಲ್ಲಿ ಹೂಳಿ, ನೆಲವನ್ನು ಸಮಮಾಡಿ ಎತ್ತರವಾದ ಏಣಿಗಳನ್ನು ತಂದು ಕೋಟೆಯ ತೆನೆಗೆ ಆನಿಸುವುದು.

### ಶತ್ರುಗಳನ್ನು ಎದುರಿಸಲು ಕೋಟೆಯ ಒಳಗೆ ನಡೆದ ಏರ್ಪಾಡುಗಳು

ತೆನೆ ಎಂದರೆ ಕೋಟೆ ಗೋಡೆಯ ಒಳಭಾಗದಲ್ಲಿ ಸ್ವಲ್ಪ ಎತ್ತರವಾಗಿ ಕಟ್ಟಿರುವ ಗೋಡೆಗಳು ಮಧ್ಯದಲ್ಲಿ ಸಮ ಮಾಡಿರುವ ನೆಲ, ಅಲ್ಲಿ ಆಯುಧಗಳನ್ನು ಇಟ್ಟುಕೊಳ್ಳಲು ವ್ಯವಸ್ಥೆಯಿದ್ದಿತು.

ಅಲ್ಲಿಯ ಆಯುಧಗಳು ದಸಿ, ಚೂಪಾಗಿರುವ ಶೂಲ, ಪ್ರಕಾಶಮಾನವಾಗಿ ಕೆಂಪು ಕಿಡಿಗಳನ್ನು ಉಗುಳುವ ಹೇರಿಟ್ಟಿ (ಉದ್ದವಾದ ಶಲ್ಯಗಳು), ಭೀಕರವಾದ ವರಾಹದ ತಲೆ ಹಾವಿನ ಬುಟ್ಟಿಗಳು, ವಿಷದ ಜೀರ್ಕೊಳವೆ, ಕಲ್ಲುಗುಂಡುಗಳ ರಾಶಿ, ಮಾರಿ ಮುಖದ ಕಲ್ಲುಗುಂಡುಗಳನ್ನು ತೂರುವ ಯಂತ್ರಗಳು, ಚೆನ್ನಾಗಿ ಚೂಪು ಮಾಡಲ್ಪಟ್ಟ ಕತ್ತಿಗಳು, ರಾಟಳದ ಸೂತ್ರ, ಯಂತ್ರಗಳು, ಮಸೆದ ಅಲಗಿನ ಸಾಲಸಬಳ, ಕೀಲಾಯುಧಗಳು, ಕುಂತ, ತೋಮರ, ಖಡ್ಗ, ಸುರಗಿ, ಭಲ್ಲೆ, ತುಪಾಕಿಯ ಗುಂಡು, ಬಲ್ಲೆಹ, ನೇಜಯ, ತೆರಕಸ (ಬತ್ತಳಿಕೆ ಕರಿಯ ಮದ್ದಿನ ಪೊಟ್ಟಣ, ಹೊರೆ ಹೊರೆ ಬಾಣಗಳು, ಬತ್ತಳಿಕೆಗಳು, ಅಡ್ಡಾಯುಧ, ಗರಗಸ, ಸಿಂಗಾಡಿ (ಬಿಲ್ಲು) ಫಿರಂಗಿ, ಬಿಸಿ ಮರಳಿನ ರಾಶಿ, ಅರೆದ ಸಾಸಿವೆ ಇವೆಲ್ಲವೂ ಹರವಿಗಳಲ್ಲಿ ಶೇಖರವಾಗಿದ್ದವು. ಚೇಳು ಬಾಣಗಳು (=ಒಂದು ಬಗೆಯ ಮದ್ದಿನ ಬಾಣ), ರಾಟಳ, ಉಪ್ಪಿನ ಚರ್ಮದ ಚೀಲಗಳು (ತಿತ್ತಿ), ಕವೆಗೋಲುಗಳು, ಬೇಳುವೆ (ಮಂಕುಬೂದಿ)ಗಳ ಬೂದಿಯ ಕೊಪ್ಪರಿಗೆಗಳ ಸಾಲು ಸಾಲುಗಳಲ್ಲಿ ಜೋಡಿಸಿ ಇಡಲ್ಪಟ್ಟಿದ್ದವು.

ಮೇಲಿನಿಂದ ಶತ್ರುಗಳ ಮೇಲೆ ಕಲ್ಲುಗಳನ್ನು ತೂರಲು ಹಲವು ರೀತಿಯ ಕಲ್ಲುಗಳನ್ನು ಇಟ್ಟಿರುತ್ತಿದ್ದರು. ಎತ್ತುಗಲ್ಲು, ಏರುಗಲ್ಲು, ಕವಣೆಗಲ್ಲು, ಅರೆಗಲ್ಲುಗಳು, ಮೊತ್ತದಸಿಯ ಕಲ್ಲು ಮೊನೆಗಲ್ಲು, ಕೊರಳಿಗೆ ಬೀರುವ ಜೊತ್ತಿಗೆ (=ಕೊರಳಿಗೆ ಬೀಸುವ ಹಗ್ಗ) ಇವೆಲ್ಲವೂ ಕೋಟೆಯ ಕೊತ್ತಳದ ಸಮ ಮಾಡಿರುವ ನೆಲದ ಮೇಲೆ ಇಟ್ಟಿರುತ್ತಿದ್ದರು. ಮದ್ದು ಗುಂಡಿನ ಆಯುಧಗಳು, ಕೈಗುದಿಗೆ (ಮರದ ಆಯುಧಗಳು) ಇವೂ ತೆನೆಯ ಮೇಲೆ ಇರುತ್ತಿದ್ದವು. ಕೋಟೆಯ ತೆನೆಯಲ್ಲಿ ಹಾರಾಡುವ ಧ್ವಜ ಪಟಗಳು, ಶತಘ್ನಿಗಳು ಫಿರಂಗಿಗಳು, ಶೂಲ, ವರಾಹನ ತಲೆ, ನೂಕುವಡ್ಡವಲಗೆ, ಕವಣೆಗಳು ಅಡ್ಡಾಯುಧ, ಗರಗಸ, ಮೊನೆಗಲ್ಲು, ಚೇಳು ಬಾಣಗಳು, ರಾಟಳವುರಿ, ಪೊಟ್ಟಣವೇಳುವ ಜಂತ್ರದ್ರದಗಳು ತೂರುವ ಕಲ್ಲುಗುಂಡುಗಳ ರಾಶಿ, ಕೀಲಾಯುಧ ಇತ್ಯಾದಿಗಳು.

ಕರಡಿಯ ಮೈಜೋಡು, ಕಾರ್ಪಾಸ ಕುಪ್ಪಸ, ತೋಳ ಪಾವುಡೆಗಳನ್ನು ಧರಿಸಿದ ವೀರರು ಕೋಟೆಯ ಮೇಲೆ ಸಜ್ಜಾಗಿದ್ದರು, ಜವದಾಡೆ, ಸೊರಟಿ ಖಡ್ಗ, ಸುರಗಿ, ಕತ್ತಿ, ಜಾಡಿಯ ಹರಿಗೆ, ಸಿಂಗಾಡಿ, ಕರಾಚೂರಿ, ಬಾಳುಗತ್ತಿಗಳನ್ನು ಹಿಡಿದು ಸೈನಿಕರು ಸಜ್ಜಾಗಿದ್ದರು. ತಳಿ ಮುಳ್ಳುಬೇಲಿಗಳು, ಮೇರುವೆ ಫಿರಂಗಿಗಳು, ತವಗ ಸುರಂಗಗಳಿಂದ, ಕೋಟೆಯ ಹೊರಭಾಗ ಅಗಳುಗಳಿಂದ ಕೂಡಿತ್ತು. ಕೋಟೆಗೆ ನಾಲ್ಕು ಬಾಗಿಲುಗಳು. ಅದರ ಹತ್ತಿರದ ಚಾವಡಿಗಳಲ್ಲಿ ಆಯುಧಧಾರಿ ಸೈನಿಕರಿದ್ದರು. ಕುದುರೆ ಲಾಯದ, ಆನೆಗಳ ಲಾಯದ ಸಾಲು

ಸಾಲುಗಳು ಕೋಟೆಯೊಳಗಿದ್ದವು. ಪೂರ್ವದಿಕ್ಕಿನ ಬಾಗಿಲ ಬಳಿ ಕುದುರೆಗಳ ಲಾಯವೂ, ಮೈಸೂರ ಬಾಗಿಲ ಮುಂದು ಗಡೆ ಆನೆಗಳ ಲಾಯವೂ ಇದ್ದಿತು.

ಕೋಟೆಯ ಸುತ್ತ ಕೊತ್ತಳಗಳಿದ್ದವು. ಅದರ ಮೇಲೆ ಫಿರಂಗಿಗಳಿದ್ದವು. ಪಾತಾಳ ಗರಡಿಯಾಗಿರುವ ಅಗಳು, ಭೀತಿಗೊಳಿಸುವ ಕೊತ್ತಳಗಳು. ಸೈನ್ಯದ ಮುಬ್ಬರಾದ ಅಧಿಕಾರಿಗಳು ಒಂದೊಂದು ಕೊತ್ತಳದಲ್ಲಿ ನೇಮಿಸಲ್ಪಟ್ಟಿದ್ದರು ಸಮರ್ಥರಾದ ಮನ್ನೆಯರು ಮಾಂಡಳಿಕರು ಕೋಟೆಯ ರಕ್ಷಣೆಗೆ ಇರುತ್ತಿದ್ದರು. ಕೊತ್ತಳದ ಹುಲಿಮುಖದಲ್ಲಿ ಸುಭಟರನ್ನು ನಿಯೋಜಿಸುತ್ತಿದ್ದರು. 'ಹಗಲು ಪಂಜಿನ' ಗೌರವವನ್ನು ಪಡೆದಿದ್ದ. 'ರಾಜ ಛತ್ರಿಯನ್ನು' ಪಡೆದಿದ್ದ ವೀರರುಗಳು ದುರ್ಗವನ್ನು ಕಾಪಾಡುತ್ತಿದ್ದರು.

**ಕೋಟೆಯ ರಕ್ಷಣೆಯ ರಚನೆಗಳು**

ಚೋರಕಂಡಿ= ಕಳ್ಳದಾರಿ ಕೋಟೆಗಳಲ್ಲಿ ಗುಪ್ತವಾಗಿ ನುಸುಳಿ ಹೋಗಲು ಮಾಡಿರುವ ಗುಪ್ತದ್ವಾರಗಳು (ಕರ್ನಾಟಕ ಜನಜೀವನ ಪು.೫೬) ಇಂತಹ ಗುಪ್ತದ್ವರಗಳು ನೆಲದೊಳಗಿಂದ ಇದ್ದರೆ ಅವುಗಳನ್ನು 'ಸುರಂಗ' ಎಂದೋ 'ಬಿಲದ್ವಾರ' ಎಂದೋ ಕರೆಯುತ್ತಿದ್ದರು.

ಅಂಬುಗಂಡಿ = ಕೊತ್ತಳಗಳಿಗೂ, ಅಟ್ಟಣೆಗಳಿಗೂ, ತೆನೆಗಳ ಮಧ್ಯದಲ್ಲಿಯೂ ಅಂಬುಗಂಡಿಗಳು ಇರುತ್ತಿದ್ದವು. ಇವು ಬಾಣಗಳನ್ನು ಹೊಡೆಯಲು ಅನುಕೂಲವಾಗಿದ್ದಿತು.

ಹುಲಿ ಮೊಗ : ಕೋಟೆಯ ಪ್ರವೇಶದ್ವಾರ, ಹೆಬ್ಬಾಗಿಲಿನ ಮೇಲೆ ಹುಲಿಯ ಮೊಗದ ಆಕಾರದಲ್ಲಿರುವ ಶಿಲ್ಪದ ಮಾದರಿ. ಯುದ್ಧ ಪ್ರಾರಂಭವಾಗುವ ಮುನ್ನ ಸನ್ನೆ, ಭೇರಿ, ಡಮಾಮಿ, ಕೊಂಬು, ಕಹಳೆ, ಮೌರಿ, ಬೊಂಬುಳಿ, ಡೋಳು ಇತ್ಯಾದಿ ವಾದ್ಯಗಳು ಮೊರೆಯುತ್ತಿದ್ದವು.

ಈ ಕಾಳಗವ ಮುಖ್ಯವಾಗಿ ನಡೆದುದು ಇರುಳುಕಾಳಗ ಲಕ್ಷ ಸಂಖ್ಯೆಯಲ್ಲಿ ದೀವಟಿಕೆಗಳಿದ್ದವು. ಕೋಟೆ ಗೋಡೆಗಳಲ್ಲಿ ಆನಿಸಿಟ್ಟ ಏಣಿಗಳನ್ನೇರಿದ ಶತ್ರುಗಳಿಗೆ ಕಂಡದ್ದು ಮತ್ತೂ ಎರಡು ಸುತ್ತಿನ ಕೋಟೆಗಳು. ಹೀಗೆ ಏರಿದ ಶತ್ರುಗಳನ್ನು ಗತಿಕಾಣಿಸಲು ಕೋಟೆಯ ತೆನೆಯಲ್ಲಿ ಸೈನಿಕರು ಸನ್ನದ್ಧರಾಗಿರುತ್ತಿದ್ದರು. ಅವರು ಶತ್ರುಗಳ ನಾಶಕ್ಕೆಂದೇ ಶೂಲ, ವರಾಹದ ತಲೆ, ಗುಂಡುಕಲ್ಲುಗಳ ರಾಶಿ, ಚೇಳು ಬಾಣಗಳು ರಾಟಳಪುರಿ ನೂಕುವಡ್ಡವಲಗೆ, ಕವಣೆಗಳು, ಅಡ್ಡಾಯುಧ, ಗರಗಸ, ಶೂಲ ಒಂದೇ ಎರಡೇ? ಏನಿಯೇರಿದ ಶತ್ರುಗಳನ್ನು ಕವಲುಗೋಲುಗಳನ್ನು ಉಪಯೋಗಿಸಿ ಏನಿಗಳನ್ನೇ ಕೆಳಕ್ಕೆ ತಳ್ಳುತ್ತಿದ್ದರು. ಕವಣೆಗಳನ್ನು ಬೀಸುವುದು, ಕಲ್ಲುಗಳನ್ನು ಯಂತ್ರಗಳಿಂದ ಹಾರಿಸುವುದು. ಅಂಬುಗಂಡಗಳಿಂದ ಬಾಣಗಳನ್ನು ಬಿಟ್ಟು ಶತ್ರುಗಳನ್ನು ಸಾಯಿಸುವುದು. ಏಣಿಗಳಿಂದ ಬಿದ್ದು ಸತ್ತ ಸೈನಿಕರನ್ನು ತುಳಿದುಕೊಂಡೇ ಮತ್ತೆ ಮತ್ತೆ ಏಣಿಯೇರುತ್ತಿದ ಶತ್ರುಸೈನಿಕರು.

ಕೆಳಗಿನವರು ಆನೆಗಳಿಂದ ಕೋಟೆಯನ್ನು ಕೆಡಹಲು ಪ್ರಯತ್ನಿಸುತ್ತಿದ್ದರು. ಗೋಡೆಯ ಪಕ್ಕ ಅಗಳನ್ನು ತೋಡಿ, ಗೋಡೆಯನ್ನು ಬೀಳಿಸುವ ಪ್ರಯತ್ನ ನಡೆಯುತ್ತಿದ್ದಿತು. ತಳಮಟ್ಟ ಅಗೆಯುತ್ತಿದ್ದರು. ಕೋಟೆಯ ಗೋಡೆಗೆ ಆನಿಸಿಟ್ಟಿದ್ದ ಉಪ್ಪಿನತಿತ್ತಿಗಳಿಗೆ ಬೆಂಕಿಯನ್ನು ಹಚ್ಚಿ ಗೋಡೆಯನ್ನು ಕೆಡಹಲು ಹವಣಿಸುತ್ತಿದ್ದರು ಸುರಂಗಗಳಿಗೆ ಕರಿಯ ಮದ್ದನ್ನು ತುಂಬಿ ಬೆಂಕಿಯಿಡುತ್ತಿದ್ದರು! ಇದರಿಂದ ಕೋಟೆಯ ಆ ಭಾಗವು ಬಿದ್ದು, ಅದರ ಮೂಲಕ ಶತ್ರು ಸೈನಿಕರು ಒಳನುಗ್ಗುತ್ತಿದ್ದು ಒಳಕೋಟೆಗೆ ಪ್ರವೇಶಿಸುತ್ತಿದ್ದರು.

ಕೆಳಗಿನಿಂದ ಕೋಟೆಯ ಮೇಲ್ಭಾಗಕ್ಕೆ ಸಮರ್ಥರಾದ ಬಿಲ್ಲಿಗಾರರು ಗುರಿಯಿಟ್ಟು ಬಾಣಬಿಡುತ್ತಿದ್ದರು. ಕೋಟೆಯ ಮೇಲೆ ಅಂಬುಕಂಡಿಗಳಿಂದ ಬಾಣ ಬಿಡುತ್ತಿದ್ದ ಸೈನಿಕರಿಗೆ ಕೆಳಗಿನಿಂದ ಬಾಣ ಪ್ರಯೋಗ ಮಾಡಿ, ಕೊಲ್ಲಲು ಪ್ರಯತ್ನಿಸುತ್ತಿದ್ದರು.

ಏಣಿಯ ಮೇಲೇರಿ ಲಗ್ಗೆ ಹಾಕಿದ್ದ ಶತ್ರುಗಳನ್ನು ಕೋಟೆ ಗೋಡೆಯ ತುದಿಗೆ ಬಂದ ಶತ್ರುಗಳನ್ನು ಕರಾಚೂರಿಯಿಂದ ತಿವಿದು, ತಲೆಕೆಳಗಾಗಿ ಕೆಳಗೆ ಬೀಳಿಸುತ್ತಿದ್ದರು. ಶತ್ರುಗಳ ಮುಂದಲೆ ಹಿಡಿದು ಕತ್ತರಿಸುತ್ತಿದ್ದರು. ಕೋವಿಂದ ಗುಂಡು ಹಾರಿಸಿ ಕೊಂದರೆ, ಒಂದೇ ಬಾರಿಗೆ ಹಲವಾರು ವೀರರು ಬಾಣ ಸಂಧಾನ ಮಾಡಿ ಹಲವರನ್ನು ಕೊಲ್ಲುತ್ತಿದ್ದರು. ಏಣಿಗಳ ಮೇಲಿದ್ದವರಿಗೆ ಕವೆಗೋಲುಗಳಿಂದ ಏಣಿಗಳನ್ನೇ ನೂಕಿ ಪ್ರಾಣಗಳನ್ನು ತೆಗೆಯುತ್ತಿದ್ದರು.

ತೊಲೆಯೊಳಗೆ ದಸಿಗಳನ್ನು ಸೇರಿಸಿದ್ದು, ವೀರರನ್ನು ನೂಕಿದರೆ ತಲೆ ಕೈಕಾಲುಗಳಿಗೆ ಗೂಟಗಳು ಚುಚ್ಚಿ ಪ್ರಾಣ ಬಿಡುತ್ತಿದ್ದರು. ಕಾದ ಮರಳು, ತಿರುವಿದ ಸಾಸಿವೆ ಬಿಸಿಯಂಬಲಿಗಳನ್ನು ಮೇಲಿನಿಂದ ಸುರಿಯುತ್ತಿದ್ದರು. ಏರುಗಲ್ಲು, ಎತ್ತುಗಲ್ಲುಗಳೆಂಬ ಕವಣೆಯ ಕಲ್ಲುಗಳಿಂದಾದ ಗಾಯಗಳಿಂದ ಸಾಯುತ್ತಿದ್ದರು. ಮದ್ದಿನ ಪೊಟ್ಟಣಗಳಿಗೆ ಬೆಂಕಿ ತಾಕಿಸಿ ಮೇಲಿನಿಂದ ಹಾಕಿದರೆ ಬೆಂಕಿಯಿಂದ ಸೀದುಹೋಗಿ ಸಾಯುತ್ತಿದ್ದರು. ಫಿರಂಗಿಯನ್ನು ಹಾರಿಸಿ ಕುದುರೆಗಳನ್ನು ಉಪ್ಪಿನ ತಿತ್ತಿಗಳನ್ನು ಹೊತ್ತಿಸಿ ಆನೆಗಳ ಮೇಲೆ ಪ್ರಯೋಗಿಸಿ ಕೊಲ್ಲುತ್ತಿದ್ದರು. ತಳಿಗಳು ಮೇರುವೆಗಳನ್ನು ಸುಟ್ಟು, ಸುರಂಗದ ದ್ವಾರದಲ್ಲಿ ಮದ್ದನ್ನು ತುಂಬಿ ಸಿಡಿಸುತ್ತಿದ್ದರು. ಕೋಟೆಯ ಹೊರಭಾಗದಲ್ಲಿ, ಶ್ರೀರಂಗಪಟ್ಟಣದ ಯುದ್ಧವು ಮುಖ್ಯವಾಗಿ ಇರುಳುಗಾಳಗ, ಲಕ್ಷಾಂತರ ದೀವಟಿಗೆಗಳಿದ್ದವು. ಅವರ ಬೆಳಕಿನಲ್ಲಿ, ಆನೆಗಳ ಕೊಂಬುಗಳಿಗೆ ಕತ್ತಿಗಳನ್ನು ಕಟ್ಟಿ

ಓಡಿಸುತ್ತಿದ್ದರು, ಸಾಗಿಸಿತಂದ ಫಿರಂಗಿಯನ್ನು ಸರಿಯಾದ ಕಡೆಯಲ್ಲಿ ಇಟ್ಟು, ಉಡಾಯಿಸುತ್ತಿದ್ದರು. ಸೊಪ್ಪಿನ ಹೊರೆಯಲ್ಲಿ ಅಗಳನ್ನು ಮುಚ್ಚುತ್ತಿದ್ದರು. ಉಪ್ಪಿನ ಪೊಟ್ಟಣಗಳನ್ನು ಕಟ್ಟಿದ ಬಾಣಗಳಿಗೆ ಉರಿ ಹಚ್ಚಿ ಬಿಡುತ್ತಿದ್ದರು.

ಹೀಗೆ ಯುದ್ಧದಲ್ಲಿ ಶತ್ರುಗಳ ಕಡೆ ಬಹಳ ಸಾವುನೋವುಗಳುಂಟಾಯಿತೆಂದೂ ನರಸರಾಜನಿಗೆ ಯುದ್ಧದಲ್ಲಿ ಗೆಲುವು ದೊರೆಯಿತೆಂದೂ ರಾಜನ ಮೇಲಿನ ಅಭಿಮಾನದಿಂದ ಕವಿ ವರ್ಣಿಸಿದ್ದಾನೆ. ಆದರೆ ಗೆಲವು ಅಷ್ಟು ಸುಲಭದಲ್ಲಿ ದೊರೆಯಲಿಲ್ಲವೆಂದೂ ಶತ್ರುವಾದ ರಣದುಲ್ಲಾಖಾನನ ಸೈನಿಕರೂ ಶೌರ್ಯದಿಂದ ಯುದ್ಧಮಾಡಿ, ಕೋಟೆಯ ಎರಡು ಭಾಗಗಳನ್ನು ಬೀಳಿಸಿ ಮುನ್ನುಗ್ಗಿದರೆಂದೂ 'ಶ್ರೀ ಮನ್ಮಹಾರಾಜರ ವಂಶಾವಳಿ'ಯಲ್ಲಿ ಹೇಳಿದೆ. ಇದು ಇರುಳ್ಗಾಳಗವಾಗಿರುವುದರಿಂದ " ಆ ದಿನದ ರಾತ್ರಿಯಲ್ಲಿ ಕೋಟೆಗೆ ಆಗ್ನೇಯ ಪಾರ್ಶ್ವದಲ್ಲಿಯೂ ಈಶಾನ್ಯ ಪಾರ್ಶ್ವದಲ್ಲಿಯೂ ಎರಡು ಸುರಂಗಗಳನ್ನು ತೋಡಿ, ಕೋಟೆಯ ಹಾರಿಗಹೋಗುವಂತೆ ಬಹಳ ಮದ್ದು ಗುಂಡುಗಳನ್ನು ತುಂಬಿ ಸರುಂಗಗಳನ್ನು ಹಾರಿಸಿದರು. ಆಗ ಎರಡು ಮೂಲೆಗಳಲ್ಲಿಯೂ ಕೋಟಟೆಯು ಬಿದ್ದುಹೋಗಲು ಕೋಟೆಯ ಮೇಲೆ ಕಾದುಕೊಂಡಿದ್ದ ಕೆಲವು ಜನರು ಹತರಾದರು. ಅದನ್ನು ನೋಡಿದ ರಣದುಲ್ಲಾಖಾನನ ಕಡೆಯ ಶೂರರು ಕೋಟೆಗೆ ಲಗ್ಗೆಯೇರಬೇಕೆಂಬ ಸಮಯದಲ್ಲಿ ಕಂಠೀರವ ನರಸರಾಜ ಒಡೆಯರವರು ನರಸಿಂಹಾಕಾರವನ್ನು ತಾಳಿ, ಎರಡು ಕಡೆಗಳಲ್ಲಿಯೂ ಲಗ್ಗೆಯೇರಿ ಬರುತಲಿರುವ ಆ ಶತ್ರುಜನಗಳು ಅಡಿಯಿಡದಂತೆ ಅವರ ಕಾಲುಗಳನ್ನು ಕಡಿದು, ಕಲೆಗಳನ್ನೊಡೆದು, ಕೋಟೆಯ ಹೊರಗಿರುವ ಕುದುರೆಗಳನ್ನು ತಂದು, ಬಂಡಿಗಳನ್ನು ಮುರಿದು, ಆನೆಗಳನ್ನಿರಿದು ಒಂಟೆಗಳನ್ನೋಡಿಸಿ, ಶೂರರುಗಳನ್ನು ಹೇಡಿಗಳನ್ನಾಗಿ ಮಾಡಿದರು (ಬಿ.ರಾಮಕೃಷ್ಣ ರಾವ್ ಶ್ರೀಮನ್ಮಹಾರಾಜರವರ ವಂಶಾವಳಿ, ಭಾ–೧ ಮೈಸೂರು ೧೯೧೬ ಪು ೭೩–೭೪) ಈ ವಿವರಗಳನ್ನು ಗಮನಿಸಿದರೆ ಕವಿ ಗೋವಿಂದ ವೈದ್ಯನು ಕೊಟ್ಟಿರುವ ಯುದ್ಧ ಸಾಮಗ್ರಿಗಳು, ತಯಾರಿಕೆಗಳು ಆನೆ ಕುದುರೆ ಒಂಟೆ ಇತ್ಯಾದಿ ವಿವರಗಳು ಸಾಮಾನು ಸಾಗಿಸುವ ಬಂಡಿಗಳು ಇತ್ಯಾದಿ ವಿವರಗಳು ಯತಾರ್ಥವಾಗಿದೆ ಎನ್ನಿಸುತ್ತದೆ. (ಕವಿಯು ಸುರಂಗಗಳೊಳಗೆ ಸೊಪ್ಪುಗಳನ್ನು ತುಂಬಿದರು ಎಂದು ಹೇಳಿದ್ದಾನೆ ಆದರೆ ಮದ್ದುಗುಂಡುಗಳನ್ನು ತುಂಬಿ ಉಡಾಯಿಸಿದರು ಎಂಬುದನ್ನು ಹೇಳಿಲ್ಲ)

"ಗೋವಿಂದ ವೈದ್ಯನು (೧೯೪೮) ಕಂಠೀರವ ನರಸರಾಜೇಂದ್ರ ವಿಜಯ ಕಾವ್ಯದಲ್ಲಿಯೂ ಕೋಟೆಯೊಳಗಿನವರ ಸನ್ನಾಹವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ ಹೇಳಿ ಹೇಳಿ ಐತಿಹಾಸಿಕ ಸಂಗತಿಗಳನ್ನು ಒಳಗೊಂಡ ಕಾವ್ಯವದು. ಅದರಲ್ಲಿನ ಕೋಟೆ ಕನ್ನಡಿಗರದು, ಕೋಟೆಯ ಸಂವರಣೆಯ ರೀತಿ ನೀತಿಗಳೆಲ್ಲ ಕನ್ನಡಿಗರವು. ಆದುದರಿಂದ ಅವನ ವರ್ಣನೆಯಲ್ಲಿ ಕೃತಕ ಕಲ್ಪನೆಯ ಅಂಶ ಕೊಂಚವೂ ಇರದೆ ಕೇವಲ ಕಣ್ಣಾರೆ ಕಂಡ ವಾಸ್ತವಾಂಶವೇ ಹೆಚ್ಚಾಗಿ ಇದೆ " (ಕರ್ನಾಟಕ ಜನಜೀವನ' ಬೇಟಗೇರಿ ಕೃಷ್ಣಶರ್ಮ ಪು ೩೨) ಎಂದು ಕೃಷ್ಣಶರ್ಮ ಅವರು ಅಭಿಪ್ರಾಯಪಡುತ್ತಾರೆ.

## ಆಧಾರ ಗ್ರಂಥಗಳು


೧. ಗೋವಿಂದ ವೈದ್ಯ ಕೃತ ಕಂಠೀರವ ನರಸರಾಜ ವಿಜಯ, ಸಂ. ಡಾ. ಆರ್. ಶಾಸ್ತ್ರಿ, ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು (೧೯೭೧).

೨. ಕರ್ನಾಟಕ ಜನಜೀವನ, ಲೇ. ಬೆಟಗೇರಿ ಕೃಷ್ಣಶರ್ಮ.

೩. ಶ್ರೀಮನ್ಮಹಾರಾಜರವರ ವಂಶಾವಳಿ, ಲೇ. ಬಿ. ರಾಮಕೃಷ್ಣರಾವ್, ಭಾಗ–೧, ಮೈಸೂರು, ೧೯೧೯.

೨೭

# ರಾಮನಗರ ಜಿಲ್ಲೆಯಲ್ಲಿ ತಮಿಳು ಭಾಷೆ ಮತ್ತು ಭಾಷಿಕರ ಪ್ರಾಚೀನತೆ

ಡಾ. ಕನ್ಯಾಕುಮಾರ್.ಪಿ.*

ಐತಿಹಾಸಿಕ ಮಹತ್ವವನ್ನು ಹೊಂದಿರುವ ರಾಮನಗರ ಜಿಲ್ಲೆ ಪ್ರಸ್ತುತ ರಾಮನಗರ, ಚನ್ನಪಟ್ಟಣ, ಕನಕಪುರ, ಮಾಗಡಿ ಎಂಬ ನಾಲ್ಕು ತಾಲ್ಲೂಕುಗಳನ್ನು ಹೊಂದಿದ್ದು, ಶಾಸನಗಳಲ್ಲಿ ಕೆಳ್ಗಲಿನಾಡು, ಕಿಳಲೆನಾಡು, ರಾಮದುರ್ಗ, ರಾಮಗಿರಿ ಹೆಸರುಗಳಿಂದ ಪ್ರಸಿದ್ಧಿ ಪಡೆದಿದೆ. ಬ್ರಿಟೀಷ್ ರೆಸಿಡೆಂಟ್‌ನ ಕಾಲದಲ್ಲಿ "ಕ್ಲೋಸ್‌ಪೇಟೆ" ಎಂದು ಹೆಸರು ಪಡೆದಿತ್ತು. ಈ ಜಿಲ್ಲೆಯ ಭಾಗಗಳಲ್ಲಿ ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು, ಶಾತವಾಹನರು ಸೇರಿದಂತೆ ಪಾಳೆಯಗಾರರುಗಳು ಆಳ್ವಿಕೆ ಮಾಡಿಹೋಗಿರುವುದು ಸಾಮಾನ್ಯವಾಗಿ ತಿಳಿದಿದೆ. ಆದರೂ ರಾಮನಗರ ಪ್ರದೇಶದ ಚಾರಿತ್ರಿಕ ಕುರುಹುಗಳು ಗಂಗರ ಕಾಲದಿಂದ ಆರಂಭಗೊಳ್ಳುತ್ತವೆ. ರಾಜ ಮನೆತನಗಳು ತಮ್ಮಾಡಳಿತದ ಅವಧಿಯಲ್ಲಿ ಪ್ರಜೆಗಳಿಗೆ, ಅಧಿಕಾರಿಗಳಿಗೆ, ದೇವಾಲಯಗಳಿಗೆ, ಧಾರ್ಮಿಕ ಸಂಸ್ಥೆಗಳಿಗೆ ಹಲವಾರು ದಾನದತ್ತಿ, ಕೊಡುಗೆಗಳನ್ನು ನೀಡಿದ್ದಾರೆ. ಇದರ ಬಗ್ಗೆ ಲಭ್ಯವಿರುವ ಹಲವಾರು ಶಾಸನಗಳು ಮಾಹಿತಿ ನೀಡುತ್ತವೆ.

ರಾಮನಗರ ಜಿಲ್ಲೆಯಲ್ಲಿ ಸುಮಾರು ೫೦೦ಕ್ಕಿಂತಲೂ ಅಧಿಕ ಶಾಸನಗಳು ಲಭ್ಯವಾಗಿದ್ದು ದಾಖಲಾಗಿವೆ. ಈ ಶಾಸನಗಳು ಬಹುತೇಕ ಸಂಸ್ಕೃತ ಮತ್ತು ಕನ್ನಡ ಶಾಸನಗಳಾಗಿವೆ. ಆದರೆ ಸುಮಾರು ೧೨೦ ಶಾಸನಗಳು ತಮಿಳು ಶಾಸನಗಳು. ಈ ಪ್ರಾಂತ್ಯದಲ್ಲಿ ಕ್ರಿ.ಶ. ೧೦೦೦ಕ್ಕಿಂತ ಹಿಂದೆ ತಮಿಳು ಶಾಸನಗಳು ಇರಲಿಲ್ಲ. ಗಂಗರ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ತಮಿಳುನಾಡಿನಿಂದ ಬಂದ ಚೋಳರು ಕರ್ನಾಟಕದ ಮೇಲೆ ದಾಳಿ ಮಾಡುವುದರ ಮೂಲಕ ತಮ್ಮ ಅಧಿಪತ್ಯವನ್ನು ಸ್ಥಾಪಿಸಲು ಯತ್ನಿಸಿ ಯಶಸ್ವಿಯಾದರು. ೧೦-೧೧ನೇ ಶತಮಾನದಲ್ಲಿ ತಮಿಳುಭಾಷಿಕ ಚೋಳರು ಗಂಗರ ಅರಸರುಗಳಾದ ಶಿವಮಾರ ಮತ್ತು ಶ್ರೀಪುರುಷ, ಗಂಗರಾಜನ ಕಾಲದ ಕೊನೆಯಲ್ಲಿ ಗಂಗರನ್ನು ಮೂಲೆಗೊತ್ತಿ ತಲಕಾಡು ಪ್ರದೇಶದಲ್ಲಿ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಆಗ ಅವರು ಹಾಕಿಸಿರುವ ಶಾಸನಗಳು ಪ್ರಾಚೀನ ಗಂಗವಾಡಿ ಪ್ರದೇಶಗಳಾದ ಮೈಸೂರು, ಬೆಂಗಳೂರು, ರಾಮನಗರ ಹಾಗು ಕೋಲಾರ ಜಿಲ್ಲೆಯ ಪ್ರದೇಶಗಳಲ್ಲಿ ಕಂಡುಬಂದಿವೆ.[1]

ಗಂಗ ಸಾಮ್ರಾಜ್ಯದ ಮೇಲೆ ಚೋಳರು ಆಕ್ರಮಣ ವೆಸಗಲು ಸೈನ್ಯಕ್ಕೆ ಅಲ್ಲಿ ತೋಟಗಾರಿಕೆ ವೃತ್ತಿಯನ್ನು ಅನುಸರಿತ್ತಿದ್ದ 'ತಿವುಳ-ತಮಿಳು' ಜನರನ್ನು ಕರೆತಂದರು. ತಮ್ಮ ಮೊದಲ ಆಕ್ರಮಣವನ್ನು ಕೋಲಾರದ ಕಡೆಯಿಂದ ಪ್ರಾರಂಭಿಸಿ ಕೋಲಾರಮ್ಮನ ದೇವಾಲಯವನ್ನು ವಶಪಡಿಸಿಕೊಂಡು ತಲಕಾಡನ್ನು ಮುತ್ತಿದರು. ನಂತರ ಇಂದಿನ ರಾಮನಗರ ಜಿಲ್ಲೆಯ ಪ್ರದೇಶಗಳಲ್ಲಿ ತಮ್ಮ ಪ್ರಭುತ್ವ ಸಾಧಿಸಿದರು. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ತಮ್ಮ ಸಾರ್ವಭೌಮತ್ವದ ಪ್ರಭುತ್ವ ಸ್ಥಾಪನೆಗೆ ನಿಜವಾದ ಚೋಳಸೈನ್ಯವನ್ನು ಕರೆದುಕೊಂಡು ಬಂದಿರಲಿಲ್ಲ. ಬದಲಾಗಿ ತಮ್ಮ ನಾಡಲ್ಲಿ ತೋಟಗಾರಿಕೆ ವೃತ್ತಿಯನ್ನು ಮಾಡುತ್ತಿದ್ದ ಜನರನ್ನು ಅವಶ್ಯಕತೆಯಿದ್ದ ಕಾರಣ ಕರೆತಂದಿದ್ದರು. ಹೀಗೆ ಅನಿರೀಕ್ಷಿತವಾಗಿ ಬಂದ ಚೋಳ ಕೃಷಿಕ ಜನರು ಪ್ರಾಚೀನ ಗಂಗವಾಡಿ ಪ್ರದೇಶದಲ್ಲಿನ ಕಾವೇರಿ ನದಿತೀರದ ಫಲವತ್ತಾದ ಭೂಮಿಯನ್ನು ಹಾಗು ನೀರಾವರಿಯನ್ನು ಕಂಡು ಇಲ್ಲಿಯೇ ಕೃಷಿಕ ಜೀವನವನ್ನು ಪ್ರಾರಂಭಿಸಿದರು. ಇಲ್ಲಿಂದ ಪುನಃ ಹಿಂದಿರುಗುವ ಪ್ರಯತ್ನವನ್ನು ಮಾಡಲಿಲ್ಲ. ತೆಂಗು, ಅಡಿಕೆ, ವೀಳ್ಯದೆಲೆ ಹೂ, ತೋಟಗಾರಿಕೆಯ ಮುಂತಾದ ಕೃಷಿ ಚಟುವಟಿಕೆಗಳನ್ನು ಮಾಡುತ್ತಾ ಇಲ್ಲಿಯೇ ಕನ್ನಡಿಗರ ಜೊತೆಯಲ್ಲಿಯೇ ಜೀವನ ನಡೆಸತೊಡಗಿದರು. ಕಾಲ ಕ್ರಮೇಣ ತಮ್ಮ ಮಾತೃಭಾಷೆಯಾದ ತಮಿಳನ್ನು ಮರೆತು ತಮ್ಮ ಪ್ರಮುಖ ವೃತ್ತಿಯಾದ ತೋಟಗಾರಿಕೆಯನ್ನು ಅನುಸರಿಸಿ ಇಲ್ಲಿಯೇ ನೆಲೆ ನಿಂತುಬಿಟ್ಟರು. ಚನ್ನಪಟ್ಟಣ ತಾಲ್ಲೂಕಿನ ಅಂಬಾಡಳ್ಳಿ, ಬಾಣಗನಹಳ್ಳಿ, ಸಾದಾರಹಳ್ಳಿ, ವಿರುಪಾಕ್ಷಿಪುರ, ಚಿಕ್ಕಮಳೂರು, ದೊಡ್ಡಮಳೂರು ಮಾತ್ರವಲ್ಲದೆ ಕಾವೇರಿ ನದಿ ತೀರದ ಉದ್ದಕ್ಕೂ ನೆಲೆ ನಿಂತಿರುವುದು ತಿಳಿಯುತ್ತದೆ.

* ಉಪನ್ಯಾಕರು, ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು, ರಾಮನಗರ.

ತಮಿಳು ಮಾತನಾಡುವವನು, 'ಅರವ' ಎಂಬರ್ಥವಿದ್ದು, ಮಂಗರಾಜ ಪುರಾಣದಲ್ಲಿ ತಿಗುಡ ದ್ರಾವಿಡನಕ್ಕು[೨], ಕರ್ನಾಟಕ ಶಬ್ದ-ರತ್ನಾಕರದಲ್ಲಿ ತಿಗುಳನೆನೆ ದ್ರವಿಡ[೩], ಎಪಿಗ್ರಫಿಯಾ ಕರ್ನಾಟಕಾದಲ್ಲಿ 'ತಳಕಾಡಂ ಕೊಂಡಗಂಡಂ ತಿಗಳರಪಡೆಯಂಕೊಡೆ ಬೆಂಕೊಂಡ-ಗಂಡಂ[೪]' ಎಂಬ ಉಲ್ಲೇಖಗಳಿವೆ. ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿ 'ಕಾವೇರಿಯ ಕಾಲನ ತಿಗುಳನೇಂ ಕಡಗೊಂಡನೋ ಬಡ್ಡಿಗೊಂನೋ'[೫] ಎಂಬ ಉಲ್ಲೇಖಗಳಿವೆ. ಸರ್ವಜ್ಞ ತನ್ನ ಬರವಣಿಗೆಯಲ್ಲಿ "ಕಾಳಕೂಟದ ವಿಷವು ಚೇಳು ನಂಬಿದ ಹಗೆಯು ಹಾಳೂರ ಚುವಿಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ"[೬] ಎಂಬ ಉಲ್ಲೇಖಗಳನ್ನು ಗಮನಿಸಿದರೆ ತಿಗಳರು ಕರ್ನಾಟಕದ ಮೂಲ ನಿವಾಸಿಗಳಲ್ಲ ಬದಲಾಗಿ ತಮಿಳು ನಾಡಿನಿಂದ ಬಂದವರೆಂದು ಗುರುತಿಸಬಹುದು. ಇದರ ಜೊತೆಗೆ ಇರಿವಬೆಡಂಗ ಸತ್ಯಾಶ್ರಯನಗೆ ತಿಗಳಮಾರಿ[೭], ಎಂಬ ಬಿರುದು ಇದ್ದುದ್ದರ ಬಗ್ಗೆ ಶಾಸನ ಉಲ್ಲೇಖವಿದೆ. ಚನ್ನಪಟ್ಟಣದ ಕೆಲವೊಂದು ಗ್ರಾಮಗಳ ಚೋಳನಿರ್ಮಿತ ದೇವಾಲಯಗಳಲ್ಲಿ ಇಂದಿಗೂ ಸಹ ತಮಿಳು ಭಾಷೆಯಲ್ಲಿ ಸ್ತೋತ್ರಗಳನ್ನು ಬಳಸಿ ಅರ್ಚನೆ ಮಾಡಲಾಗುತ್ತಿದೆ.*

ಚೋಳರು ಕರ್ನಾಟಕದಲ್ಲಿ ಕ್ರಿ.ಶ. ೧೦೦೦ದಿಂದ ಕ್ರಿ.ಶ. ೧೧೧೬ರವರೆಗೆ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಹೆಚ್ಚು ಅಧಿಕಾರದಲ್ಲಿದ್ದರು. ಗಂಗರಾಳ್ವಿಕೆಯ ಪ್ರದೇಶವನ್ನು ಆಕ್ರಮಿಸಿದರು. ಇದಕ್ಕೂ ಮೊದಲೇ ಅಂದರೆ ಕ್ರಿ.ಶ. ೯೪೯ರಲ್ಲಿ ಗಂಗರಾಜು ಬೂತುಗನು ರಾಷ್ಟ್ರಕೂಟ ಮತ್ತು ಚೋಳರ ನಡುವೆ 'ತೆಕ್ಕೋಳಂ' ಕದನದಲ್ಲಿ ಚೋಳರಾಜಾದಿತ್ಯನನ್ನು ಕೊಂದನು. ಈ ಮಾಹಿತಿಯನ್ನು ರಾಜೇಂದ್ರಚೋಳನ ಕಾಲದ ಕನ್ನಡ ಶಾಸನವೊಂದು ತಿಳಿಸುತ್ತದೆ[೮]. ಕ್ರಿ.ಶ. ೧೦೦೦ಕ್ಕೂ ಮೊದಲು ರಾಮನಗರ ಜಿಲ್ಲೆಯಲ್ಲಿ ತಮಿಳು ಶಾಸನಗಳು ಇರಲೇ ಇಲ್ಲ, ನಂತರದಿಂದ ಅಂದರೆ ಚೋಳರು ಗಂಗ ನಾಡುಗಳ ಮೇಲೆ ಆಕ್ರಮಣ ಮಾಡಿದ ನಂತರದಿಂದ "ಕ್ರಿ.ಶ. ೧೦೦೪ರಿಂದ ಕ್ರಿ.ಶ. ೧೩೮೪ರವರೆಗೆ ನಿರಂತರವಾಗಿ ಮುಂದುವರಿದುಕೊಂಡೇ ಬಂದಿವೆ". ಈಗ ಎಲ್ಲಿ ತಮಿಳು ಶಾಸನಗಳು ಹೆಚ್ಚಾಗಿ ದೊರೆಯುತ್ತಿವೆಯೋ ಅಲ್ಲೆಲ್ಲಾ ಈಗಿನಂತೆಯೇ ಹಿಂದೆಯೂ ಕನ್ನಡ ಭಾಷಿಕರ ಪ್ರಮಾಣ ಹೆಚ್ಚಿತ್ತು.

ಕ್ರಿ.ಶ. ೯೮೫ರಲ್ಲಿ ಪಟ್ಟಕ್ಕೆ ಬಂದ ರಾಜರಾಜಚೋಳ ಸುಮಾರು ಕ್ರಿ.ಶ. ೧೦೦೪ ವೇಳೆಗೆ ಕಾಡುಮಲ್ಯೆ ಮೇಲೆ ದಂಡೆತ್ತಿ ಹೋಗಿ ಆಕ್ರಮಿಸಿದನು. ಕೊಡಗಿನ ಮಾಲಂಬಿಯ ಸುತ್ತಲಿನ ಏಳು ಸಾವಿರ ಸೀಮೇಗೆ ಕೊಂಗಾಳ್ವರನ್ನು ಅಧಿಪತಿಯಾಗಿ ನೇಮಿಸಿದನು. ಹಾಗಾಗಿ ಕೊಂಗಾಳ್ವರು ಚೋಳ ಅರಸರ ಹೆಸರುಗಳನ್ನು ಸ್ವೀಕರಿಸಿದ್ದರು[೯].

ಈ ದಂಡಯಾತ್ರೆ ನಂತರ ಮುಂದಿನ ಹೆಜ್ಜೆದಡಿಗೈ ಪಾಡಿಯ ಮೇಲೆ ನಡೆಸಿದ ಪರಿಣಾಮ ನಾಗಮಂಗಲ, ಮಳವಳ್ಳಿ, ಶ್ರೀರಂಗಪಟ್ಟಣಗಳಲ್ಲಿ ಗಂಗರ ಪ್ರಭಾವ ಕುಗ್ಗಿ ಚೋಳರ ವಶವಾದವು. ನಂತರದಲ್ಲಿ ಕೋಲಾರ, ಬೆಂಗಳೂರು, ತುಮಕೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಒಳಗೊಂಡ ಪ್ರಾಂತ್ಯವಾದ ನೊಳಂಬವಾಡಿ ನಿಗಿರಿಲಿ-ಚೋಳಮಂಡಲದ ಒಂದು ಭಾಗವಾಗಿ ಮಾರ್ಪಟ್ಟಿತು. ಕೋಲಾರ, ಚಿಂತಾಮಣಿ ತಾಲ್ಲೂಕು, ಚಿಕ್ಕಬಳ್ಳಾಪುರ, ತುಮಕೂರು, ಬೆಂಗಳೂರು, ರಾಮನಗರ, ಮಂಡ್ಯ ಮತ್ತು ಮೈಸೂರು ಪ್ರದೇಶಗಳು ಚೋಳರ ವಶಕ್ಕೊಳಗಾದವು. ಗಂಗರಿಂದ ಅಧಿಕಾರ ಕಸಿದುಕೊಂಡ ಚೋಳರು ಪ್ರದೇಶಗಳಿಗೆ ಚೋಳ ಹೆಸರುಗಳನ್ನು ಇಡಲಾರಂಭಿಸಿದರು. ಉದಾಹರಣೆಗೆ: ರಾಜರಾಜಪುರ, ನಿಗರಿಲಿಚೋಳಪುರ, ಜನನಾಥಪುರ, ಚತುರ್ವೇದಿ ಮಂಗಲ, ಎಂಬ ಹೆಸರುಗಳನ್ನು ಉಲ್ಲೇಖಿಸಬಹುದು.

ಸುಮಾರು ನೂರು ವರ್ಷಗಳ ಕಾಲ ಚೋಳರ ಆಳ್ವಿಕೆಗೆ ಒಳಪಟ್ಟಿದ್ದ ಕರ್ನಾಟಕದ ಭಾಗಗಳಲ್ಲಿ ಚೋಳರು ತಮ್ಮ ಆಡಳಿತದ ವಿವಿಧಾಂಗಗಳ ಮೂಲಕ ತಮಿಳುನಾಡಿನ ಸಂಸ್ಕೃತಿಯನ್ನು ಹೆಚ್ಚಿಸಿ ರೂಢಿಗೆ ತಂದರು ಈ ಪ್ರದೇಶಗಳಲ್ಲಿ ತಮಿಳನ್ನ ಆಡಳಿತ ಭಾಷೆಯಾಗಿ ಮಾಡಿದರು. ಶಾಸನಗಳು ಗ್ರಾಮಾಡಳಿತ, ಆಡಳಿತದ ಬಗ್ಗೆ ಇದ್ದ ಹತೋಟಿಯನ್ನು ವಿವರವಾಗಿ ವಿವರಿಸುತ್ತವೆ. ಚೋಳರು ಕರ್ನಾಟಕದ ಮೇಲೆ ಎಷ್ಟರ ಮೆಟ್ಟಿಗೆ ಪ್ರಭಾವ ಬೀರಿದ್ದರು ಎಂದರೆ ಗಂಗವಾಡಿಯಿಂದ ಚೋಳರನ್ನು ಓಡಿಸಿದ ಹೊಯ್ಸಳರು ಅಲ್ಲಿ 'ತಮಿಳು' ಶಾಸನಗಳನ್ನೇ ಹಾಕಿಸಬೇಕಾಯಿತು. ಚೋಳರನ್ನೇ ಅನುಸರಿಸಿ ತಮ್ಮ ಹೆಸರುಗಳಲ್ಲಿ ಚತುರ್ವೇದಿ ಮಂಗಲಗಳನ್ನು ಸ್ಥಾಪಿಸಿದರು.

ರಾಮನಗರ ಜಿಲ್ಲೆಯಲ್ಲಿ ಕ್ರಿ.ಶ. ಸು. ೧೦೦೦ರ ಶಾಸನವು ಚನ್ನಪಟ್ಟಣ ತಾಲ್ಲೂಕಿನ ಮಳೂರಿನ ಕೈಲಾಸೇಶ್ವರ ದೇವಾಲಯಕ್ಕೆ ಸಂಬಂಧಿಸಿದ್ದಾಗಿದೆ.[೧೦] ಈ ಕೈಲಾಸೇಶ್ವರ ದೇವಾಲಯವು ಕ್ರಿ.ಶ. ೧೦ನೆಯ ಅಥವಾ ೧೧ನೆಯ ಶತಮಾನದ ಆರಂಭದ ಕಾಲಕ್ಕೆ ಅಸ್ತಿತ್ವದಲ್ಲಿದ್ದ ದೇವಾಲಯ, ಇಲ್ಲಿನ ಶಾಸನಗಳು ಬಹುತೇಕವಾಗಿ ಗ್ರಂಥಲಿಪಿ ಮತ್ತು ತಮಿಳು ಭಾಷೆಯಲ್ಲಿಯೇ ಇವೆ. ಮಳೂರು ಪಟ್ಟಣದ ನಾಲ್ಕು ಶಾಸನಗಳು[೧೧] ಕ್ರಿ.ಶ. ೧೦೦೭ರ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ಈ ಶಾಸನಗಳಲ್ಲಿ ರಾಜ-ರಾಜದೇವನ ಆಳ್ವಿಕೆಯನ್ನು ಪ್ರಸ್ತಾಪಿಸಲಾಗಿದೆ. ಹೆಚ್ಚಿನ ತಮಿಳು ಶಾಸನಗಳು ಚೋಳರ ಕಾಲದ ಶಾಸನಗಳೇ. ಇವುಗಳು ಹೊಯ್ಸಳರ ಶಾಸನಗಳೆಂದು ವಿದ್ವಾಂಸರಾದ ರೈಸ್‌ರವರು ಹೇಳಿದ್ದಾರೆ[೧೨]. ಕರ್ನಾಟಕದ

ಕೋಲಾರ, ಬೆಂಗಳೂರು, ರಾಮನಗರ, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿ ಚೋಳರ ಪ್ರಭಾವ ಅಧಿಕವಾಗಿತ್ತೆಂದು ಮತ್ತು ಈ ಎಲ್ಲಾ ಪ್ರದೇಶಗಳು ಚೋಳರ ನಾಡು ತಮಿಳು ನಾಡಿನ ಗಡಿಪ್ರದೇಶಗಳಾಗಿದ್ದು ಇಲ್ಲಿ ಗಂಗರು– ಹೊಯ್ಸಳರ ನಡುವೆ ಚೋಳರ ಸಾಮ್ರಾಟರುಗಳಿಂದ ಯುದ್ಧಗಳು ನಡೆದಿದ್ದು. ಸಾಂಸ್ಕೃತಿಕ ಪ್ರಭಾವ ಹೆಚ್ಚಾಗಿಯೇ ಇದ್ದಿರಬಹುದು.

ಗ್ರಂಥಲಿಪಿ ಮತ್ತು ತಮಿಳು ಭಾಷೆಯ ಶಾಸನಗಳು ಎಲ್ಲಾ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಕೆಲವೇ ಕೆಲವು ಆಯ್ದ ಪ್ರದೇಶಗಳಲ್ಲಿ ಮಾತ್ರ ಹೆಚ್ಚು ಸಂಖ್ಯೆಯ ತಮಿಳು ಶಾಸನಗಳು ಕಾಣಸಿಗುತ್ತವೆ. ಬೆಂಗಳೂರಿನ ದೊಮ್ಮಲೂರು, ಮಡಿವಾಳ, ಸಾದರಮಂಗಲ, ಬೇಲೂರು, ಮತ್ತು ಬೇಗೂರು, ಬೆಂಗಳೂರು ಉತ್ತರ ತಾಲ್ಲೂಕಿನ ಐಗಂಡಪುರ, ದೇವನಹಳ್ಳಿ ತಾಲ್ಲೂಕಿನ ಗಂಗವಾರಪಳ್ಳಿ, ಹೊಸಕೋಟೆ ತಾಲ್ಲೂಕಿನ ಮುಗಬಾಳ, ಕಾಡುಗೋಡಿ ಮತ್ತು ಚನ್ನಪಟ್ಟಣ ತಾಲ್ಲೂಕಿನ ಹೊಂಗನೂರು, ಮಳೂರು ಹಾಗೂ ಮಳೂರು ಪಟ್ಟಣಗಳಲ್ಲಿ ತಮಿಳು ಶಾಸನಗಳ ಸಂಖ್ಯೆ ಹೆಚ್ಚು. ಈ ಒಂದು ಪ್ರದೇಶಗಳಲ್ಲಿ ತಮಿಳುನಾಡಿನ ಚೋಳರ ಪ್ರಭಾವ ಹೆಚ್ಚಿತ್ತೆಂದು ಇಲ್ಲಿನ ಶಾಸನಗಳೇ ಕುರುಹುಗಳಾಗಿವೆ. ಕನಕಪುರ ತಾಲ್ಲೂಕಿನ ಲೇವರಹಳ್ಳಿ,[೧೩] ಎಂಚವಾಡಿ,[೧೪] ನಲ್ಲಹಳ್ಳಿ,[೧೫] ಶಾಸನಗಳು ತಮಿಳುಭಾಷೆ ಮತ್ತು ಲಿಪಿಯಲ್ಲಿವೆ. ಅಲ್ಲಿನ ವೀರರ ಹೆಸರುಗಳು ತಮಿಳು ಹೆಸರುಗಳು ಇವರು ಅಗ್ರಹಾರದಲ್ಲಿದ್ದ ಬ್ರಾಹ್ಮಣರೆಲ್ಲ ಚೋಳರು. ಹೊಯ್ಸಳರ ಮತ್ತು ಪೂರ್ವಾದಿರಾಯರ ಹಲವು ಶಾಸನಗಳಲ್ಲಿ ತಮಿಳು ಭಾಷೆಯಲ್ಲಿವೆ.

ದೊಮ್ಮಲೂರಿನ ಶಾಸನ[೧೬], ಗುಂಜನೂರಿನ ಶಾಸನ,[೧೭] ವೊಳಗೆರೆಹಳ್ಳಿ,[೧೮] ಐಗಂಡಪುರ,[೧೯] ಚಿಕ್ಕನಲ್ಲೂರಿನ,[೨೦] ಕಾಡುಗೋಡಿಯ,[೨೧] ಮಳೂರಿನ ನಾಲ್ಕು ಶಾಸನಗಳು,[೨೨] ಬೆಂಗಳೂರಿನ ಶಾಸನಗಳು,[೨೩] ತಮಿಳು ಭಾಷೆ ಮತ್ತು ಲಿಪಿ ಯಲ್ಲಿಯೇ ಇವೆ.

### ಕರಗ ಮಹೋತ್ಸವ

ನಮ್ಮ ಸಾಂಸ್ಕೃತಿಕ ಸಂದರ್ಭಗಳಲ್ಲಿ ಹಬ್ಬ, ಉತ್ಸವ, ಪರಿಷೆ ರಥಜಾತ್ರೆ ಮೊದಲಾದ ಆಚರಣೆಗಳು ನಿರ್ದಿಷ್ಟ ಒಕ್ಕಲಿನ ನಿರ್ದಿಷ್ಟ ಪ್ರದೇಶದ ಆಚರಣೆಗಳಾಗಿವೆ. ಇವು ಊರಿನ ಹತ್ತೂರಿನ ನೆಂಟರಿಷ್ಟರ ಹಬ್ಬಗಳು ಹಿಂದೆ ಸಣ್ಣ ಪ್ರಮಾಣದಲ್ಲಿ ನಡೆಯುತ್ತಿದ್ದವು. ಇಂದು ಜಾತ್ರೆಗಳಂತೆ ನಡೆಯುತ್ತಿವೆ. ತಿಗಳ ಜನಾಂಗದವರ ಮೂಲವನ್ನು ಗುರ್ತಿಸಲು ನಮಗೆ ಇರುವ ಮತ್ತೊಂದು ಐತಿಹಾಸಿಕ ಆಚರಣೆ ಎಂದರೆ 'ಕರಗ ಮಹೋತ್ಸವ' ಮಾತ್ರ.

ಕರಗ ಜನಪದ ಧಾರ್ಮಿಕ ಇದು ಲೋಕಪ್ರಸಿದ್ಧಿ ಯಾಗಿದೆ. ಇದು 'ದ್ರೌಪದಿಕರಗ'ವೆಂದೇ ಹೆಸರಾಗಿದೆ. ತಮಿಳು ನಾಡಿನಲ್ಲಿ ವಿಶೇಷವಾಗಿ ಪ್ರಾಚುರ್ಯದಲ್ಲಿರುವ ಈ ನೃತ್ಯ ಕರ್ನಾಟಕದ ಆಗ್ನೇಯ ಭಾಗದಲ್ಲಿ ಅದರಲ್ಲೂ ಕೋಲಾರ, ಬೆಂಗಳೂರು, ರಾಮನಗರ, ತುಮಕೂರು ಮತ್ತು ಮೈಸೂರ, ಚಾಮರಾಜನಗರ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಕರಗದ ಆಚರಣೆ ತಮಿಳುನಾಡಿನಲ್ಲಿದ್ದು,[೨೪] ಪ್ರಾಚೀನ ತಮಿಳರು ಕರ್ನಾಟಕಕ್ಕೆ ಬಂದ ನಂತರ ಅದೇ ಆಚರಣೆಯನ್ನು ಮುಂದು ವರಿಸಿಕೊಂಡು ಬಂದಿದ್ದಾರೆ. ಈ ಜನಾಂಗದ ದ್ರೌಪದಿ– ಆದಿಶಕ್ತಿ ಕರಗೋತ್ಸವ ಹೆಚ್ಚಾಗಿ ಇಂದು ಗಂಗವಾಡಿ ಪ್ರಾಚೀನ ಪ್ರದೇಶಗಳಾದ ಬೆಂಗಳೂರು, ಗ್ರಾಮಾಂತರ, ರಾಮನಗರ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆಗಳಲ್ಲಿಯೇ ನಡೆಯುತ್ತಿದೆ.

ನಾಡಪ್ರಭು ಕೆಂಪೇಗೌಡ ಬೆಂಗಳೂರು ನಗರ ನಿರ್ಮಾಣ ಮಾಡಿದಾಗ ಸುತ್ತಮುತ್ತ ಚದುರಿ ಹೋಗಿದ್ದ ತಿಗಳರನ್ನು ನಗರಕ್ಕೆ ಕರೆಸಿಕೊಂಡು ಕರಗೋತ್ಸವವನ್ನು ಆಚರಿಸಿದ ಎನ್ನುತ್ತಾರೆ. 'ದ್ರೌಪದಿ ಕರಗೋತ್ಸವವನ್ನು ಧರ್ಮರಾಯನ ಕರಗ' ಎಂದು ಹೇಳಲಾಗುತ್ತಿದ್ದು ಇದು ಮಾತೃಪೂಜೆಯಾಗಿದ್ದು ಪಿತೃಪೂಜೆಗೆ ವಾಲಿರುವ ಕುರುಹು ತಮಿಳರ ಮೂಲವನ್ನು ಅವರ ನಾಡಿನ ಕರಗ ಮಹೋತ್ಸವದ ಆಚರಣೆಯೆಂದು ಮಾತ್ರ ಗುರ್ತಿಸಬಹುದಾಗಿದೆ.

ಪ್ರಾಚೀನ ಗಂಗವಾಡಿ ಪ್ರದೇಶಗಳಲ್ಲಿ ಮಾತ್ರ ನಾವು ತಿಗಳರನ್ನು ನೋಡಬಹುದಾಗಿದೆ. ಕ್ರಿ.ಶ. ೧೦–೧೧ನೇ ಶತಮಾನದಲ್ಲಿಯೇ ತಮಿಳು ಭಾಷಿಕರು ರಾಮನಗರ ಪ್ರಾಂತ್ಯಕ್ಕೆ ಪಾದಾರ್ಪಣೆ ಮಾಡಿದರು ಎಂದು ಸಂಶೋಧನೆಯಿಂದ ತಿಳಿಯುತ್ತದೆ. ತೋಟಗಾರಿಕಾ ವೃತ್ತಿಯನ್ನು ಅನುಸರಿಸುತ್ತಿದ್ದ ತಮಿಳುನಾಡಿನ ಜನರು ಅಕಸ್ಮಾತಾಗಿ ಚೋಳ ಸೈನ್ಯದ ಜೊತೆಗೆ ಪ್ರಾಚೀನ ಗಂಗವಾಡಿ ಪ್ರದೇಶಗಳಿಗೆ ಬಂದು ಇಲ್ಲಿನ ನೈಸರ್ಗಿಕ ಪರಿಸರ ಮತ್ತು ಕಾವೇರಿಯ ಫಲವತ್ತಾದ ವ್ಯವಸಾಯದ ಪ್ರದೇಶವನ್ನು ಕಂಡು ಇಲ್ಲಿಯೇ ನೆಲೆನಿಂತರು. ತಮ್ಮ ಮೂಲ ಭಾಷೆಯನ್ನೇ ಮರೆತು ವೃತ್ತಿಕಸುಬುಗಳನ್ನು ಮತ್ತು ಸಂಪ್ರದಾಯ ಗಳನ್ನು ಮಾತ್ರ ಮುಂದುವರಿಸಿಕೊಂಡು ಕನ್ನಡಿಗರೇ ಆಗಿ ಹೋಗಿದ್ದಾರೆ. ಇವರು ಭಾಷಿಕವಾಗಿ ಮಾತ್ರ ತಿಗಳರು ಸಾಂಸ್ಕೃತಿಕವಾಗಿ ಕನ್ನಡಿಗರು. ಈಗ ಯಾವ ತಿಗಳರೂ ತಮಿಳರಲ್ಲ. ತಿಗಳ ಅನ್ನುವ ಪದ ಮಾತ್ರ ಉಳಿದಿದೆಯೇ ಹೊರತು ತಮಿಳು ಜನಾಂಗ ಎಂದಲ್ಲ. ಇಲ್ಲಿ ಭಾಷೆಗಿಂತ ವೃತ್ತಿ ಮುಖ್ಯವಾಗಿದೆ. ಭಾಷೆ ಬದಲಾಗಬಹುದೇ ವಿನಃ ವೃತ್ತಿ ಮಾತ್ರ ಉಳಿದಿದೆ ಒಂದು ಪ್ರದೇಶದ ನೆಲ, ಜಲ, ಸಾಂಸ್ಕೃತಿಕ ಪ್ರಭಾವಗಳು (ಜನರ ಮೇಲೆ) ವಲಸೆ ಜನರ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರುತ್ತದೆ ಎಂಬುದು

ಇಲ್ಲಿ ಮನದಟ್ಟಾಗುತ್ತದೆ. ಇವರನ್ನು ಕನ್ನಡಿಗರಿಂದ ಬೇರ್ಪಡಿಸಲು ಸಾಧ್ಯವೇ ಇಲ್ಲ. ಕನ್ನಡಿಗರಲ್ಲಿಯೇ ಅವರಂತೆಯೇ ಕರ್ನಾಟಕದ ಪ್ರಾಚೀನ ಗಂಗವಾಡಿ ಪ್ರದೇಶಗಳಲ್ಲಿ ಈಗಲೂ ಮುಂದು ವರಿಯುತ್ತಿದ್ದಾರೆ.

['ಸಂಪ್ರಬಂಧವನ್ನು ಸಿದ್ಧಪಡಿಸಲು ನೆರವಾದ ಡಾ. ಎಂ.ಜಿ ನಾಗರಾಜ್ ಮತ್ತು ಡಾ. ಎಚ್.ಎಸ್. ಗೋಪಾಲ್‌ರಾವ್ ಅರವರುಗಳಿಗೆ ತುಂಬು ಹೃದಯದ ಧನ್ಯವಾದಗಳು.']



## ಆಧಾರ ಗ್ರಂಥಗಳು


೧. ಡಾ. ಪಿ.ವಿ. ಕೃಷ್ಣಮೂರ್ತಿ, ತಮಿಳುನಾಡಿನ ಕನ್ನಡ ಶಾಸನಗಳು, ಪು. ೧೪, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೪.

೨. ಎಂ. ಮರಿಯಪ್ಪ ಭಟ್ಟ (ಸಂ), ಮಂಗರಾಜಪುರಾಣ, ಪು. ೧೧೨, ಮದ್ರಾಸ್ ವಿ.ವಿ., ೧೯೫೨.

೩. ನರಸಿಂಹ ಶಾಸ್ತ್ರಿ ಕೊಳನಾಡು, ಕರ್ನಾಟಕ ಶಬ್ದರತ್ನಾಕರ, ಪು. ೪೬, ಹಸ್ತಪ್ರತಿ, ಕನ್ನಡ ಸಾಹಿತ್ಯ ಪರಿಷತ್.

೪. ಎ.ಕ. XII–ಗುಬ್ಬಿ ೩೪, ೧೪, ಕ್ರಿ.ಶ. ೧೧೩೪.

೫. ಡಿ.ಎಲ್. ನರಸಿಂಹಾಚಾರ್ (ಸಂ), ಶಬ್ದಮಣಿದರ್ಪಣಂ, ಪು. ೧೩೯–೧೪೦, ಶಾರದ ಮಂದಿರ, ಮೈಸೂರು, ೧೯೫೯.

೬ ಸರ್ವಜ್ಞನ ವಚನಗಳು, ೧೩೮೫.

೭. ಎ.ಇ. XVII, ೭೪, ೦೪, ಕ್ರಿ.ಶ. ೧೦೦೭.

* ಚನ್ನಪಟ್ಟಣದ ಹೊಂಗನೂರು ವೇಣುಗೋಪಾಲ ದೇವಾಲಯದಲ್ಲಿ ಅರ್ಚಕರು ತಮಿಳು ಸ್ತೋತ್ರದ ಪಠಣೆಯಲ್ಲಿ ಪೂಜೆ ನಡೆಸುತ್ತಿದ್ದು ಇದನ್ನು 'ತಮಿಳುಪುರಿ' ಎಂದು ಕರೆಯಲಾಗುತ್ತಿತ್ತೆಂದು ವಂಶಪಾರಂಪರ್ಯವಾಗಿ ತಮಗೆ ಪೂಜಾಹಕ್ಕು ಬಂದಿರುವುದಾಗಿ ಹೇಳಿದ್ದಾರೆ.

೮. ARIE, ೧೯೬೯–೭೦, ೨೬೦,

೯. ಇತಿಹಾಸ ದರ್ಪಣ, ಸಂಚಿಕೆ, ೩, ಡಾ. ಎಚ್.ಎಸ್. ಗೋಪಾಲರಾವ್ ಕೊಂಗಾಳ್ವರ ಲೇಖನ, ಪು. ೧೦, ೨೦೦೯ .

೧೦. ಎ.ಕ. IX, ಚನ್ನಪಟ್ಟಣ, ೭೬ ಹಾಗೂ ಇತರೆ ಶಾಸನಗಳು.

೧೧. ಎ.ಕ. IX, ಚನ್ನಪಟ್ಟಣ, ೧೦೧, ೧೦೨, ೧೦೩ ಮತ್ತು ೧೦೪, ಕ್ರಿ.ಶ. ೧೧೦೦.

೧೨. ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ, ಇತಿಹಾಸ ದರ್ಶನ (ಸಂ. ೨೧) ಪು. ೯೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೬.

೧೩. ಎ.ಕ. IX, ಕನಕಪುರ, ೧೧, ಕ್ರಿ.ಶ. ೧೩೧೦.

೧೪. ಎ.ಕ. IX, ಕನಕಪುರ, ೧೨, ಕ್ರಿ.ಶ. ೧೧೧೮.

೧೫. ಎ.ಕ. IX, ಕನಕಪುರ, ೩೫, ಕ್ರಿ.ಶ. ೧೧೭೮.

೧೬. ಎ.ಕ. IX, ಬೆಂಗಳೂರು, ೧೨, ಕ್ರಿ.ಶ. ೧೩೦೦.

೧೭. ಎ.ಕ. IX, ಬೆಂಗಳೂರು, ೧೫, ಕ್ರಿ.ಶ. ೧೩೦೧.

೧೮. ಎ.ಕ. IX, ಬೆಂಗಳೂರು, ೧೦೮, ಕ್ರಿ.ಶ. ೧೦೬೦.

೧೯., ಎ.ಕ. IX, ನೆಲಮಂಗಲ, ೩೮, ಕ್ರಿ.ಶ. ೩೮, ಕ್ರಿ.ಶ. ೧೩೦೧.

೨೦. ಎ.ಕ. IX, ಹೊಸಕೋಟೆ, ೮೧, ಕ್ರಿ.ಶ. ೧೩೩೦.

೨೧. ಎ.ಕ. IX, ಹೊಸಕೋಟೆ, ೧೪೨.ಕ್ರಿ.ಶ. ೧೦೪೩.

೨೨. ಎ.ಕ. IX, ಚನ್ನಪಟ್ಟಣ, ೧೦೧, ೧೦೨, ೧೦೩ ಮತ್ತು ೧೦೪. ಕ್ರಿ.ಶ. ೧೧೦೦.

೨೩. ಎ.ಕ. IX, ಬೆಂಗಳೂರು, ೧೪, ಕ್ರಿ.ಶ. ೧೮೩೨.

೨೪. ಕೆ. ಲಕ್ಷಣ್, ತಿಗಳ ಜನಾಂಗದ ಇತಿಹಾಸ ಮತ್ತು ಕರಗ ಶಕೋತ್ಸವು ಪು. ೫೬, ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ೧೯೯೯.



# ಸಂಸ್ಕೃತಿಯ ವಿಶ್ವರೂಪ-ಕರ್ನಾಟಕ

ಡಾ.ಎಸ್.ಕೆ. ಜೋಶಿ*

**ಸಾ**ವಿರಾರು ವರ್ಷಗಳ ಚರಿತ್ರೆ, ಸಂಸ್ಕೃತಿ ಹಾಗೂ ಸಭ್ಯತೆಗಳು, (History Culture & civilization) ಈ ನಾಡಿಗೆ ಹಿನ್ನೆಲೆಗಳಾಗಿವೆ. ಹಿಂದಿನವರು ನಡೆದು -ನುಡಿದು ನಮಗೆಲ್ಲ ಬಳುವಳಿಯಾಗಿ ಬಿಟ್ಟು ಹೋಗಿರುವ **ಈ ಕರ್ನಾಟಕದ ಸಂಸ್ಕೃತಿಗೆ,** ನಾವೇ ವಾರಸುದಾರರು. ಇಡೀ ಭಾರತದ ಪರಂಪರೆಗೆ ತನಗಿರುವ ಸುಸಂಸ್ಕೃತ ಬದುಕಿನ, ಕಾಣಿಕೆಯನ್ನು ಈ ನಾಡು ನೀಡಿದೆ.

'ಈ ಸಂಸ್ಕೃತಿ ಕನ್ನಡ ಸಂಸ್ಕೃತಿ, ಅದು ವಿವಿಧ ಮುಖಗಳಲ್ಲಿ ವಿಸ್ತೃತಗೊಂಡು ವಿಶ್ವರೂಪವನ್ನೇ ತಾಳಿದೆ. ಮಾನವನಿಗೆ ಆತ್ಮವಿರುವಂತೆ, **ನಾಡಿಗೂ ಒಂದು ಆತ್ಮವಿದೆ** ಈ ಆತ್ಮವನ್ನೇ ನಾವು ಸಂಸ್ಕೃತಿ ಎಂದು ಕರೆಯಬಹುದು. ಆ ಬೃಹದಾಕಾರದ ಸಂಸ್ಕೃತಿಯ ವಿಶ್ವರೂಪವನ್ನು ನಾವು ವಿವಿಧ ಮುಖಗಳಲ್ಲಿ ಕಂಡು ಕೊಳ್ಳಬಹುದಾಗಿದೆ.

ನಮ್ಮ ಜೀವನಕ್ಕೆ ಮೂರ್ತರೂಪವನ್ನು ತರುವ ಸಾಧನವೆಂದರೆ ಈ ಸಂಸ್ಕೃತಿ ಅನೇಕರು ಅನೇಕ ರೀತಿಯಲ್ಲಿ, 'ಸಂಸ್ಕೃತಿ' ಶಬ್ಧವನ್ನು ಅರ್ಥೈಸಿದ್ದಾರೆ. ಸಂಸ್ಕಾರದ ಬಲದಿಂದ ಸಂಸ್ಕೃತಿಯ ಉದಯ. ಅದು ಸಮ್‌ಕ್+ಕರಣ = ಸಂಸ್ಕರಣ, ಸಂಸ್ಕಾರ. ಜೀವನದ ನಡುವಳಿಕೆಯನ್ನು ಚೆನ್ನಾಗಿ ಮಾಡುವಂಥ ಸತ್‌ಪಥವದು ಯತ್ರ ಸತ್‌ಪಥ: ತತ್ರ ಸಂಸ್ಕೃತಿ.

ಮಾನವನು ತನ್ನ ಬಾಳನ್ನು ಲೇಸಾಗಿರಿಸಿಕೊಳ್ಳಲು, ಇಲ್ಲಿ ಸತ್ಯವನ್ನೂ, ಶಿವನನ್ನೂ, ಸೌಂದರ್ಯವನ್ನೂ ಸಾಕ್ಷಾತ್ಕರಿಸಿಕೊಳ್ಳುವ **ಫಲವೇ** ಸಂಸ್ಕೃತಿಯಾಗಿ ಪರಿವರ್ತನೆಗೊಳ್ಳುತ್ತದೆ. "Culture is what we are, while civilization is what we have" (-Dr. S. Radhakrishnan) 'ಸಂಸ್ಕೃತಿ ಬೌದ್ಧಿಕ ನೆಲೆಯನ್ನು ಸಾರಿದರೆ, ನಾಗರಿಕತೆ ನಮ್ಮ ಐಹಿತ ಪರಿಕರಗಳ ಕ್ಷೇತ್ರವನ್ನು ಅಳೆಯುತ್ತದೆ.

'ಸಂಸ್ಕೃತಿಯು **ವ್ಯಷ್ಟಿ** ಪರಿಯಿಂದ **ಸಮಷ್ಟಿ** ಸ್ವರೂಪವಾಗಿ ಬೆಳೆದು ಪ್ರತ್ಯೇಕವಾದ ವಿಶ್ವಾಮಿತ್ರ' ಸಷ್ಟಿಯನ್ನು ನಿರ್ಮಾಣ ಮಾಡುತ್ತದೆ' (ಡಿ.ವ್ಹಿ.ಜಿ. ಸಂಸ್ಕೃತಿ) ಜನಾಂಗದ ವಿದ್ಯೆ ಆತ್ಮ ಪ್ರತಿಭೆ, ಚಾತುರ್ಯಗಳಿಗೆ ಅಲ್ಲಿ ಪ್ರಗಲ್ಭವಾದ ಅವಕಾಶಗಳಿವೆ. ಈ ಅವಕಾಶಗಳನ್ನು ಉಪಯೋಗಿಸಿ, ಒಂದು ಜನಾಂಗವು ನೂರಾರು ಪರಿಕರಗಳಲ್ಲಿ ತನ್ನ ಸ್ವಂತಿಕೆಯನ್ನು ಪ್ರಕಟಗೊಳಿಸುತ್ತದೆ. **ಆ ಸ್ವಂತಿಕೆಯೇ ಸಂಸ್ಕೃತಿ.**

'ಮಾನವನಲ್ಲಿ ಸುಪ್ತಮಯವಾದ ಚೈತನಾಮಯೀ ಸೃಜನಶೀಲತೆಯು ಬಹುಮುಖವಾಗಿ, **ವಿಶ್ವರೂಪಿಯಾಗಿ** ಪ್ರಕಟಗೊಂಡು, ಅದುವೇ ಒಂದು ಸಂಸ್ಕೃತಿಯಾಗಿ ಪರಿಣಮಿಸುತ್ತದೆ. ಅದು ಸಹಸ್ರಬಾಹು, ಸಹಸ್ರಮುಖಿ. ಸಾಹಿತ್ಯವೋ, ಕಾವ್ಯವೋ, ಸಂಗೀತವೋ, ನೃತ್ಯನಾಟಕ ಚಿತ್ರಕಲೆಯೋ, ಶಿಲ್ಪಕಲೆಯೋ, ತತ್ವಜ್ಞಾನವೋ, ಧರ್ಮನೀತಿ ಶಾಸ್ತ್ರವೋ, ರಾಜಸ್ವವೋ, ನ್ಯಾಯವೋ, ಹೀಗಾಗಿ, ಅದು ಅನೇಕ ಮೂಲ ಮೌಲ್ಯಗಳ ಹುಡುಕುವಿಕೆಗಾಗಿ, ಅನಂತ ಮುಖವಾಗಿ ಅಭಿವೃದ್ಧಿಗೊಳ್ಳುತ್ತದೆ. ಏಕೆಂದರೆ, ಮಾನವನ ವ್ಯಕ್ತಿತ್ವವು ಅನಂತ ಸ್ಪಷ್ಟಾತ್ಮಕ ಶಕ್ತಿಗಳ ಸಮಷ್ಟಿಯಾಗಿದೆ. ಇದೆಲ್ಲ ಒಟ್ಟಾಗಿ, **'ಸಂಸ್ಕೃತಿಯ ಸಂಪುಷ್ಟ ತಲ್ಪ'ವಾಗಿ** ಪರಿಣಮಿಸುತ್ತದೆ, ಹಾಗೂ **ಅದು ನಾಡಿನ ಸಮಗ್ರ** ಕೊಡುಗೆಯಾಗುತ್ತದೆ.

ನಾಡಿನ ಸಮಗ್ರ ಮೌಲ್ಯಾಧಾರಿತ ಬದುಕು 'ಸಂಸ್ಕೃತಿ' ಎಂದು ವ್ಯಾಖ್ಯಾನಿಸಿದಲ್ಲಿ, ಕರ್ನಾಟಕವಂತೂ ತನ್ನ ಸಾಂಸ್ಕೃತಿಕ ಬದುಕಿನಲ್ಲಿ ವಿಶ್ವಲೋಕವನ್ನೇ ನಿರ್ಮಿಸಿದೆ. ವೈಯಕ್ತಿಕವಾಗಿ ನನಗೆ, ಹಿರಿಯರ ಪುಣ್ಯದಿಂದ ಈ ನಾಡನ್ನು ಸಮಗ್ರವಾಗಿ ನೋಡುವ ಭಾಗಶ ಒದಗಿತು, ಅದರಂತೆ, ಈ ದೇಶ ಸುತ್ತುವ ಅವಕಾಶ ನನ್ನ ವೃತ್ತಿಯಿಂದ ದೊರಕಿತು.

'ಸಾವಿರಾರು ವರುಷಗಳಲ್ಲಿ ಹರಿಗತಿದಂತೆ, ಓತಪೋತವಾಗಿ ಹರಿದ ಈ ನಾಡಿನ ಸಂಸ್ಕೃತಿಯ ಜೀವನದಿಯ ಬಗ್ಗೆ ವಿವರಿಸುವುದೆಂದರೆ ಧಾರ್ಷ್ಯದ ಮಾತು (ಡಿ.ವಿ.ಜಿ. ಸಂಸ್ಕೃತಿ)

ಹಿಂದಿನವರು 'ನಡೆದು-ನುಡಿದು' ನಮಗೆಲ್ಲ ಬಳುವಳಿಯಾಗಿ ಬಿಟ್ಟು ಹೋಗಿರುವ **ಈ ಕರ್ನಾಟಕದ ಸಂಸ್ಕೃತಿಗೆ ನಾವೇವಾರಸುದಾರರು.** ಅವುಗಳಲ್ಲಿ ಇರುವ ಸತ್ವ ಹಾಗೂ ಧಾರ್ಷ್ಯಗಳನ್ನು ನಾವಿಂದು ನಮ್ಮ ಜೀವನಕ್ಕೆ ಹೊಂದಿಸಿಕೊಳ್ಳಬೇಕಾಗಿದೆ' ಆ ಚೇತನಾ ಶಕ್ತಿಗಳು-ವ್ಯಕ್ತಿಗಳು ಇಂಥ ಅಮೂಲ್ಯ 'ಸಾಧನೆಗಳಲ್ಲಿ' 'ಸಿದ್ಧಾಂತಗಳಲ್ಲಿ ತಮ್ಮನ್ನು ತೊಡಗಿಸಿದ್ದೇಕೆ?

* # ೩೦, ಸಿಲ್ವರ್ ಆರ್ಚರ್ಡ್, (ಕ್ಯಾಂಪ್ ಮಂಡ್ಯ), ಧಾರವಾಡ-೧.

'ಉದರನಿಮಿತಂ ಬಹುಕೃತವೇಷಂ? ಬದುಕು ನೂಕುವ ದಕ್ಕಾಗಿಯೋ? (ರಾಜಾಶ್ರಯ ಪಡೆದು), ಅಥವಾ ಸಂಸ್ಕೃತಿಯ ಕಲೆಗಾಗಿ ಬದುಕೋ? ಬದುಕಿಗಾಗಿ ಕಲೆಯೋ? ಧ್ಯಾನಸ್ಥ ರಾಗಿ ಕುಳಿತು, ನಾವೆಲ್ಲ ಗುಣಾರ್ಣವರು ಚಿಂತನೆ ಮಾಡ ಬೇಕಾಗಿದೆ.

'ನಿನ್ನೆಗಳ ಹುಡುಕುವಿಕೆಯಲ್ಲಿ, (In Search of yester years)

**ಭಾರತೀಯ ನಾವೆಲ್ಲ ಗಂಗೆ ತಟದವರು**
**ತುಂಗೆ ತಡಿಯವರು, ತ್ರಿಸಾಗರದ**
**ಅಂಚಿನವರು, ಹಿಮಾಲಯದವರು**
**ಸಹ್ಯಾದ್ರಿಯವರು, ನಾವೆಲ್ಲ ಎಚ್ಚರಗೊಳ್ಳಬೇಕಾಗಿದೆ'**

ಸಂಸ್ಕೃತಿಯ ಹುಡುಕುವಿಕೆಯಲ್ಲಿ ನಾವೆಲ್ಲ ಎಚ್ಚರ ಗೊಳ್ಳಬೇಕಾಗಿದೆ. ಹಾಗಾದರೆ ಕರ್ನಾಟಕದವರು ಯಾರು? ಅವರ ಸಂಸ್ಕೃತಿಯಾವುದು? ಅದು ವಿಶ್ವರೂಪಿ ಆದುದು ಹೇಗೆ?

**ಕರ್ನಾಟಕ ಸಂಸ್ಕೃತಿ :** ಇದು ವಿವಿಧ ಮುಖಗಳಲ್ಲಿ ವಿಸ್ತೃತಗೊಂಡು ಒಂದು ವಿಶ್ವರೂಪವನ್ನೇ ತಾಳಿದ. **ಮಾನವನಿಗೆ ಆತ್ಮವಿರುವಂತೆ, ನಾಡಿಗೂ ಒಂದು ಆತ್ಮವಿದೆ.** ಈ ಆತ್ಮವನ್ನೇ ನಾವು ಸಂಸ್ಕೃತಿ ಎಂದು ಕರೆಯಬಹುದು. ಆ ಬ್ರಹದಾಕಾರದ ಸಂಸ್ಕೃತಿಯ ವಿಶ್ವರೂಪವನ್ನು ನಾವು ವಿವಿಧ ಮುಖಗಳಲ್ಲಿ ಕಂಡುಕೊಳ್ಳಬಹುದಾಗಿದೆ.

ಈ ನಾಡಿನ 'ಕನ್ನಡದ' ಸುಪ್ತಚೇತನವೇ, ಬಹು ರೂಪಿ ಯಾಗಿ, ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪ, ವಾಸ್ತುಶಿಲ್ಪ, ನಾಟ್ಯ, ವಿಜ್ಞಾನ, ರಾಜಸ್ವ, ನ್ಯಾಯ, ಇತ್ಯಾದಿ ಸೃಜನಾತ್ಮಕ ರೂಪಗಳಲ್ಲಿ ರೂಪುಗೊಂಡು 'ಸಾಂಸ್ಕೃತಿಕ ಸಮ್ಯಕ್ ಸಂಪುಷ್ಟವಾಗಿವೆ.

ಶತಶತಮಾನಗಳು ಉರುಳಿದಂತೆ, ಇಲ್ಲಿಯ ದಾರ್ಶನಿಕರು, ಶೈವ, ವೈಷ್ಣವರು ಆಚಾರ್ಯರು, ಶರಣರು, ಸೂಫಿಗಳು, ಜೈನರು, ಬೌದ್ಧರು, ಮುಸಲ್ಮಾನರು, ಕ್ರೈಸ್ತರು, ಪಾರಸಿಕರು, ಇವರೆಲ್ಲರೂ ಕರ್ನಾಟಕದ ಸರ್ವಜನಾಂಗದ ತೋಟಿಗರು. ಇವರ ತೋಟವು ಪ್ರಾಚೀನದಲ್ಲಿ ಬಹು ವಿಸ್ತಾರ ವಾಗಿತ್ತು :

**'ಕಾವೇರಿಯಿಂದಮಾ ಗೋ-**
**ದಾವರಿವರಮಿರ್ದ ನಾಡದಾ ಕನ್ನಡದೋಳ್**
**ಭಾವಿಸಿದ ಜನಪದಂ ವಸ್ತು-**
**ಧಾವಲಯ ವಿಲೀನ ವಿಶದ ವಿಷಯ ವಿಶೇಷಂ'**

ಈ ಕನ್ನಡದ ಮೇರೆಯನ್ನು ಕುರಿತು ಉತ್ತಮ ವಿವರಣೆ ದೊರೆತುದು – ಕವಿತಾ ಗುಣಾರ್ಣವ, ಅಮೋಘವರ್ಷ (ಕ್ರಿ.ಶ. ೮ ಶತಕ) ನೃಪತುಂಗನ **ಕವಿರಾಜಮಾರ್ಗ** ದಿಂದ ಬಹು ಸಂಖ್ಯ ಐತಿಹಾಸಿಕ ತಜ್ಞರ ಅಭಿಪ್ರಾಯದಲ್ಲಿ ಕ್ರಿ.ಪೂ. ೩ನೇ ಶತಮಾನಕ್ಕಿಂತ ಬ್ರಹ್ಮಗಿರಿ ಸಮೀಪದ 'ಇಸಿಲಾ' ಪಟ್ಟಣ) ಪೂರ್ವದಲ್ಲಿ ಈ ನಾಡು ಕರ್ನಾಟಕವಾಗಿ ಇದ್ದಿಂತ್ತೆಂಬುದಕ್ಕೆ ಯಾವ ಸಂದೇಹಗಳಿಲ್ಲ. ಸುಮಾರು ೨೩೦೦ ಐತಿಹಾಸಿಕ ವರ್ಷಗಳ ದಾಖಲೆಯ ನಾಡೆಂದು ಲೆಕ್ಕಹಾಕಲಾಗಿದೆ.

ಕನ್ನಡ ನಾಡು ಸಕಲ ಧರ್ಮಗಳ ಬೀಡು. ಎಲ್ಲ ಧರ್ಮ ಮತಗಳು ಇಲ್ಲಿ ಸಮಾನತೆಯಿಂದ, ಸೌಹಾರ್ದತೆ ಯಿಂದ ಬಾಳಿ ಬೆಳಗಿವೆ. ಸರ್ವ ಧರ್ಮ ಸಮನ್ವಯ ಈ ನಾಡಿನಲ್ಲಿ ಬೆಳೆದಷ್ಟು ಮತ್ತೆಲ್ಲಿಯೂ ಬೆಳದಂತೆ ಕಾಣುವುದಿಲ್ಲ. (ಪ್ರೊ. ಫ್ಹಿ.ಜಿ. ಮಾರಿಹಾಳ್: ಕರ್ನಾಟಕ ಸಂಸ್ಕೃತಿಯ ವಿಶ್ವರೂಪ PP 41, 42).

ಕನ್ನಡ ನಾಡು ಅನೇಕ ಮತಸ್ಥಾಪನಾ ಚಾರ್ಯರಿಗೂ ಮತೋದ್ಧಾರಕರಿಗೂ ತವರು. ಅದ್ವೈತ ಮಂಟಪದ ಶಂಕರರು, ದ್ವೈತಮತದ ಮಧ್ವಾಚಾರ್ಯರು, ವಿಶಿಷ್ಟಾದ್ವೈತ ಮತದ ಶ್ರೀ ರಾಮಾನುಜಾಚಾರ್ಯರು ಇಲ್ಲಿ ಬಾಳಿ ಬದುಕಿ ನಾಡಿನ ಧಾರ್ಮಿಕ ಜೀವನವನ್ನು ಬದುಕಿಸಿದ್ದಾರೆ. ವೀರಶೈವ ಮತೋದ್ಧಾರಕ ಶ್ರೀ ಬಸವರು, ಚೆನ್ನಬಸವವರು, ಅಲ್ಲಮ ಪ್ರಭು, ಸಿದ್ಧರಾಮ, ಇಲ್ಲಿ ಮಾಡಿದ ಧಾರ್ಮಿಕ ಕ್ರಾಂತಿ ಸಾಮಾನ್ಯ ವಾದುದಲ್ಲ! ಮಹಿಳಾ ಶರಣೆಯರೂ, ಅಕ್ಕಮಹಾದೇವಿ, ನಿಲಾಂಬಿಕೆ, ಶಾರದಾಂಬಿಕೆ ಇಲ್ಲಿದ್ದಾರೆ.

ಕನ್ನಡ ನಾಡಿನಲ್ಲಿ, ಬೌದ್ಧ ಹಾಗೂ ಜೈನ ಧರ್ಮ ಜೀವನದ ಜೈತ್ರಯಾತ್ರೆಯಾಗಿ ಪಸರಿಸಿತು.

ಶ್ರವಣ ಬೆಳಗೊಳವು ಜೈನರ ಕಾಶಿ. ಇಲ್ಲಿ ಚಂದ್ರಗುಪ್ತ ಹಾಗೂ ಭದ್ರಬಾಹು ಮುನಿಗಳು ಸಲ್ಲೇಖನ ವೃತ ಕೈಕೊಂಡದ್ದು ಇತಿಹಾಸದ ದಾಖಲೆಯಾಗಿದೆ. ಕನ್ನಡ ನಾಡಿನಾದ್ಯಂತ ಇರುವ ಜೈನ ಬಸದಿಗಳು, ಜೈನ ದೇಗುಲ ಗಳು, ಶಾಸನಗಳು, ಕನ್ನಡ ಸಂಸ್ಕೃತಿಯಲ್ಲಿ ಜೈನರ ಕಾಣಿಕೆಯನ್ನು ಎತ್ತಿ ತೋರಿಸುತ್ತಿವೆ. ರಾಷ್ಟ್ರಕೂಟರ ಎಲ್ಲೋರಾ ಹಾಗೂ ಅಜಂತಾಗಳಲ್ಲಿಯ ಜೈನ ಸಂಪ್ರದಾಯದ ದೇವಾಗಾರಗಳು ಸಾಕ್ಷೀ ಬೂತವಾಗಿವೆ. ಇಲ್ಲಿ ಹೊಯ್ಸಳರ ಬೇಲೂರು, ಸೋಮನಾಥಪುರ ಹಳೇಬೀಡುಗಳು ಜೈನ ಪರಂಪರೆಯನ್ನೂ ಸಾರುತ್ತಿವೆ.

### ರಾಜಮನೆತನಗಳು ನೀಡಿದ ಸಂಸ್ಕೃತಿ ಸಂಪದ

ಕನ್ನಡ ನಾಡಿನ ಬ್ರಹದ್ ಸಂಸ್ಕೃತಿಯ ನಿರ್ಮಿಸಿ ಹಾಗೂ ವರ್ಧನೆಗಳಿಗೆ ಈ ನಾಡಿನಲ್ಲಿ ಆಳಿಹೋದ ರಾಜಮನೆತನಗಳು ಅನೇಕ–ಜ್ಞಾತರು, ಶಾತವಾಹನರು, ಮೌರ್ಯರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಬಾಣರು, ಕಲಚೂರ್ಯರು, ಸೇವುಣರು, ಯಾದವರು, ಪಲ್ಲವರು,

ನೊಳಂಬರು, ವಿಜಯನಗರದ ಅರಸರು ಪ್ರಮುಖರಾಗಿದ್ದು, ದಖ್ಖನದ ಸುಲ್ತಾನರೂ ಕೂಡ ಇಸ್ಲಾಂ ವಾಸ್ತುಶಿಲ್ಪಕ್ಕೆ, ಈ ನಾಡಿನ ರಾಜಸ್ವದ ವೃದ್ಧಿಗೆ ಶ್ರೇಷ್ಠ ಕಾಣಿಕೆ ನೀಡಿದ್ದಾರೆ.

'ಶೂರಭಟಾ: ಕರ್ನಾಟಾ:' ಎಂಬ ದುಂದುಭಿಯು ೫ನೇ ಶತಕದ ಮಿಥಿಲಾ ಸಾಹಿತ್ಯದಲ್ಲಿ ದಾಖಲಿಸಲಾಗಿದೆ! ಎರಡನೆಯ (ಬಾದಾಮಿ) ಪುಲಕೇಶಿ, ನರ್ಮದೆಯ ದಡದಲ್ಲಿ, ಹರ್ಷನಿಗೆ ಕನ್ನಡದ ಕೈ ತೋರಿಸಿದ ರಾಷ್ಟ್ರಕೂಟರ ಧ್ರುವ ಕೃಷ್ಣರ ಯುದ್ಧ ತುರಗಗಳು ಗಂಗೆ ಯಮುನೆಯರ ಸೀತಲ ನೀರನ್ನು ಕುಡಿದು ಬಂದಿವೆ. ವಿಜಯನಗರದ ಶ್ರೀ ಕೃಷ್ಣದೇವ ರಾಯನು ಓರಿಸಿದ ಸೀಮೆಯಲ್ಲಿ ದಿಗ್ವಿಜಯ ಸಾಧಿಸಿ, ದಕ್ಷಿಣ **ಸಮುದ್ರಾಧೀಶ್ವರನೆಂಬ** ಕೀರ್ತಿ ಪಡೆದಿದ್ದಾನೆ. ಇವರು ಬದುಕನ್ನು ಸಿರಿಯಾಗಿಸಿ, ಜೊತೆಗೆ, ಅನನ್ಯ ವಾಸ್ತು ಶಿಲ್ಪ, ವಾಸ್ತು ನೆಲೆ, ಕೋಟೆ ಕೊತ್ತಲಗಳು, ನಾಲೆಗಳು, ಪುಷ್ಕರಣಿ ಗಳು, ಮುಂತಾದವುಗಳನ್ನು ನಿರ್ಮಿಸಿ, ನೃತ್ಯ ಸಂಗೀತ, ವಾಙ್ಮಯ, ನ್ಯಾಯ, ಸಾಮಾಜಿಕ ಸಹಭಾವದ ವ್ಯವಸ್ಥೆ ಮುಂತಾದ ಗುಣ ಮೌಲ್ಯಗಳಿಗೂ ಮಹತಿ ನೀಡಿ, ಕನ್ನಡ ನಾಡಿಗ ಸಂಸ್ಕೃತಿ ಸಂಪದಕ್ಕೆ ಸಿರಿವಂತಿಕೆ ನೀಡಿದ್ದಾರೆ.

### ಶಿಲ್ಪಕಲೆ ಹಾಗೂ ವಾಸ್ತುನೆಲೆಗಳ ಬೀಡು ಸಾಂಸ್ಕೃತಿಕ ಈ ಕರುನಾಡು

ಭಾರತದ ಇನ್ನುಳಿದ ಭಾಗಗಳು ಇನ್ನೂ ಮಲಗಿರು ವಾಗ, ಸಾಂಸ್ಕೃತಿಕವಾಗಿ ಎಚ್ಚೆತ್ತಿತ್ತು. ಕರ್ನಾಟಕ **ನಾಗರ, ದ್ರಾವಿಡ ವೇಸರ** ಶಿಲ್ಪ ಪ್ರಕಾರಗಳು/ವಾಸ್ತುಗಳು ಇಲ್ಲಿ ಪ್ರಚುರ ಪಡೆದವು. ಮೊದಲ ಚಾಲುಕ್ಯರ ಸಾಂಸ್ಕೃತಿಕ ಹಾಗೂ ರಾಜಸ್ವ ಕೇಂದ್ರಗಳಾದ, ಐಹೊಳೆ, ಬಾದಾಮಿ, ಪಟ್ಟದಕಲ್ಲು, ಮಹಾಕೂಟ ಆಲಂಪೂರ (ಆಂಧ್ರ), ದೇವಾಲಯಗಳು ವಾಸ್ತುಶಿಲ್ಪಗಳು ಬೆಳೆದ ತೂಗುತೊಟ್ಟಿಲಗಳಾಗಿವೆ

**ರಾಷ್ಟ್ರಕೂಟರ** ಕೊಡುಗೆಯಂತೂ ಎಲ್ಲೋರ (Ellora) ದಲ್ಲಿ 'ಶಿಲ್ಪ ವಾಸ್ತು' ಶಾಸ್ತ್ರದ ರಾಶಿಯನ್ನೇ 'ಕೈಲಾಸನಾಥ' ದೇವಸ್ಥಾನದಲ್ಲಿ ಹರಡಿದೆ. **ಕಲ್ಯಾಣ ಚಾಲುಕ್ಯರ** ದೇವಾಗಾರಗಳ ಕೊಡುಗೆ, ಬಸವ ಕಲ್ಯಾಣದಲ್ಲಿ ಲಕ್ಕುಂಡಿ, ಡಂಬಳ, ಹಾವೇರಿ, ಚೋಡಯ್ಯದಾನಪುರ, ಗಳಗನಾಥ, ಗದಗ ಬಂಕಾಪುರ ಲಕ್ಷ್ಮೇಶ್ವರ, ಹೀಗೆ ಇನ್ನೂ ಹತ್ತು ಹಲವಾರು ತಾಣಗಳಲ್ಲಿ, ಬೀಡು ಬಿಟ್ಟದೆ.

ಹೊಯ್ಸಳ ಶಿಲ್ಪ ಕಲೆಯಂತೂ ಬೇಲೂರು, ಹಳೆಬೀಡು, ಸೋಮನಾಥಪುರಗಳಲ್ಲಿ ಅರಸೀಕೆರೆಯಲ್ಲಿ, ಬೆಳಗೊಳದಲ್ಲಿ '**ಕುವೆಂಪು ಕವಿತೆಸಿದಂತೆ** ಬಾಗಿಲೊಳು ಕೈ ಮುಗಿದು ಒಳಗೆ ಬಾ ಯಾತ್ರಿಕನೆ ಶಿಲೆಯಲ್ಲವೀ ಗುಡಿಯು ಕಲೆಯ ಬಲೆಯು...., ಮೂಕವಾಗಿದೆ. ಭೂಭಾರವಿಲ್ಲಿ..., ಕಂಬನಿಯ ಕುಸುಮಗಳ ಹೃದಯ ಬಟ್ಟಲೊಳಿಟ್ಟು..., ಇತ್ಯಾದಿ ಶಬ್ದ ಭಾಂಡಾರವನ್ನೇ ಸೂರೆಗೊಂಡಿದ್ದಾರೆ ಕವಿ ಕುವೆಂಪು. ಮೋಹಿನಿ **ಶಾಂತಳೆ ಯನ್ನು ಮರೆವುದೆಂತು**?

ವಿಜಯನಗರದ ವಾಸ್ತುಕಲೆ, ರಾಜಧಾನಿ ಹಂಪಿ ಯನೊಳಗೊಂಡು, ಇಡೀ ಕರ್ನಾಟಕ, ಆಂಧ್ರ, ತಮಿಳುನಾಡು, ಓಡಿಸಾ ಪ್ರಾಂತ್ಯಗಳಲ್ಲಿ ವೈಭವೋಪೇತವಾಗಿದೆ. ರಾಯ ಗೋಪುರಗಳು ದಕ್ಷಿಣ ಭಾರತದಲ್ಲಿ ವಿಶಿಷ್ಠ 'ಅಭಿದಾನ' ಪಡೆದಿವೆ. ಭವ್ಯ, ದಿವ್ಯ ಹಾಗೂ ವಿಸ್ತ್ರತ ದೇವಾಗಾರಗಳು ವಿಜಯನಗರದ ವಾಸ್ತುವೈಶಿಷ್ಟ್ಯ.

ದಕ್ಷಿಣದ ಸುಲ್ತಾನದಲ್ಲಿ ಶ್ರೇಷ್ಠರೆನ್ನಿಸಿದ ಬಿಜಾಪುರದ ಆದಿಲ್‌ಶಹರು, ಗೋಲಗುಂಬಝ್, ಇಬ್ರಾಹಿಮ್‌ರೋಝಾ, ಬಾರಾಕಮಾನ, ಸಾತ್‌ಮಂಝಿಲ್, ಆಸಾರ ಮಹಲ್ ಗಗನ ಮಹಲ್, ಸಂಗೀತ ಮಹಲ್ (ತೊರವಿ), ಗಳಲ್ಲಿ ಇಸ್ಲಾಂ ವಾಸ್ತು ಕಲೆಯ ಕಟ್ಟಡಗಳನು ನಿರ್ಮಿಸಿ, ಭಾರತದ ಮುಸ್ಲಿಂ ಆಡಳಿತ ರಾಜ್ಯಗಳಲ್ಲಿಯೇ ಶ್ರೇಷ್ಠರಲ್ಲೊಬ್ಬರು, ಎಂದು ಕೀರ್ತಿ – ಸಾಂಸ್ಕೃತಿಕ ಕೀರ್ತಿ– ತಂದಿದ್ದಾರೆ ಕರ್ನಾಟಕಕ್ಕೆ ಇಷ್ಟೊಂದು ಎತ್ತರಕ್ಕೆ ತಲುಪಲು ಕಾರಣವೇನು? ಎಂದು :

> **'ಇತನಾ ಬುಲಂದ ಇತನಾ ಬುಲಂದ!!**
> **ಹರ್ ತಹರೀಕ್ ಸೆ ಪಹಲೆ, ಖುದ್ ಖುದಾ**
> **ಆತೆ ಪೂಛೇ. ಬಂದೇ ಬತಾ, ಇಸಕೀ**
> **ವಜಹ ಕ್ಯಾ ಹೈ?", ಅಂತಾಗಿ ದೇವನೇ ಬಂದು ತನ್ನ**
> **ಶಿಷ್ಯನನ್ನು ಕೇಳಿದನಂತೆ.**

### ಭಾಷೆ, ಸಾಹಿತ್ಯ ಹಾಗೂ ಶಿಕ್ಷಣ

ಫಾದರ್ ಹೆರಾಸ್', (Ir. Heras) Karnataka Histori cal Review, vol. iv, p-12) ಮೊಹೆಂಜೊದಾರೋ ಉತ್ಖನ ನದಲ್ಲಿ ದೊರೆತ ಉಲ್ಲೇಖವಿದೆಯೆಂದು, ವರ್ಣಿಸುತ್ತಾರೆ.

> **"The People of karnataka**
> **are apparently referred to**
> **in one of the seal Inscriptions**
> **of mehegjdaro by one of the**
> **ancient tribes in the land"**

ಇಜಿಪ್ತಿನ 'ಆಕ್ಸಿರಿಂಕಸ್'ನ ಐತಿಹಾಸಿಕ ಶೋಧನೆಯಲ್ಲಿ ಕೆಲವು ದಾಖಲೆಗಳು ದೊರೆತು, ಅವುಗಳಲ್ಲಿ 'ಆಕ್ಸಿರಿಂಬಸ್ ಪೇಪರಿ' ಎಂದು ಪ್ರಸಿದ್ಧವಾದ ಕಡತಗಳಲ್ಲಿ ಒಂದು ಗೀರ್ ನಾಟಕವೂ ಸೇರಿದೆ. ಅದು ಎರಡನೆಯ ಶತಮಾನದಲ್ಲಿ ಬರೆಯಲ್ಪಟ್ಟುದುದೆಂದು ಎಂದು ಡಾ॥ ಹುಲ್ಸ್ ಅವರ ಅಭಿಪ್ರಾಯ. ಅಲ್ಲಿ ಬರುವ ಪದಗಳು ಕೆಲವು ಕನ್ನಡದವು ಗಳೆಂದು ಅವರು ಹೇಳುತ್ತಾರೆ.

"ಬೇರೆ ಕೊಂಚ ಮಧು ಪಾತ್ರಕ್ಕೆ ಹಾಕಿ, ಪಾನಂ ಬೆರೆತ್ತಿ ಕಟ್ಟಿ ಮಧುವರ ಬೆರೆತ್ತುವೆನ್..." ಈ ಪದಗಳು ಕನ್ನಡ ಪದಗಳೆಂಬುದಕ್ಕೆ ಮತ್ತಾವ ಸಾಕ್ಷಿ ಪುರಾವೆಗಳು ಬೇಕು? (ಪ್ರೊ. ವ್ಹಿ.ಜಿ. ಮಾರಿಹಾಳ್,)

ಕನ್ನಡ ಭಾಷೆ ಸಾಹಿತ್ಯಗಳ ಬಗ್ಗೆ ವಿಚಾರಿಸುವಾಗ, ಆದಿಕವಿ ಪಂಪನಿಂದ-ಕುವೆಂಪು ಬೇಂದ್ರೆಯವರವರೆಗೆ ನಾವು ಒಂದು ಓತಪ್ರೋತತೆಯನ್ನು ಕಾಣುತ್ತೇವೆ: ಅದೊಂದು ಸಾಹಿತ್ಯದ ಮಹಾನ್ ಸಾಗರವೇ ಆಗಿದೆ. ಜೈನ ಸಾಹಿತ್ಯ, ವೈಷ್ಣ ಸಾಹಿತ್ಯ, ಶರಣಸಾಹಿತ್ಯ, ದಾಸಸಾಹಿತ್ಯ, ಆಧುನಿಕ ಸಾಹಹಿತ್ಯ, ಬಂಡಾಯ ಸಾಹಿತ್ಯ, ಬಂಡಾಯೋತ್ತರ ಸಾಹಿತ್ಯ, ಹೀಗೆ ಕನ್ನಡದ ಕಾವ್ಯ ನದಿ ಮಹಾನದಿಯಾಗಿ ಹರಿದಿದೆ:

**'ನನ್ನದು ಈ ನುಡಿ, ನನ್ನದು ಈ ನಾಡು,**
**ಎನ್ನದ-ಮಾನವನೆದೆ-ಸುಡುಗಾಡು (ಕುವೆಂಪು). ಇದೇ ಭಾವದಲ್ಲಿ**
**"ಕನ್ನಡದ ಪುಲ್ಲೆನಗೆ ಪಾವನ ತುಳಸಿ,**

ಇಲ್ಲಿಯ ಕಲ್ಲೆನೆಗೆ ಶಿಲೆ ಪಾವನ ಸಾಲಿಗ್ರಾಮ..." (ಸಾಲಿ ರಾಯ ಚಂದ್ರರಾಯರು) ಇವು ಕೇವಲ ಸಾಹಿತ್ಯ ರುಚಿಗಾಗಿ ಇಲ್ಲಿ ಎತ್ತಿಕೊಳ್ಳಲಾಗಿದೆ.

ಕನ್ನಡದ ಗ್ರಂಥ ರಾಶಿ ರಾಶಿಯಾಗಿ ನಿರ್ಮಿಸಿದ ಅಮರ ರನ್ನು ಸ್ಮರಿಸೋಣ : ಪಂಪ, ಪೊನ್ನ, ರನ್ನ, ನಾಗವರ್ಮ, ನಾಗಚಂದ್ರ, ನೇಮಿಚಂದ್ರ, ಜನ್ನ, ಮಧುರ, ರತ್ನಾಕರ ವರ್ಣಿ, ಬಸವಾದಿ ವಚನಕಾರರು, ಹರೀಶ್ವರ, ರಾಘವಾಂಕ, ಸರ್ವಜ್ಞ, ಚಾಮರಸ, ಅಕ್ಕಮಹಾದೇವಿ, ವಿರೂಪಾಕ್ಷ, ಷಡಕ್ಷರಿ, ರುದ್ರಭಟ್ಟ, ಕುಮಾರವ್ಯಾಸ, ಪುರಂದರದಾಸ [* ಹೆಳವನ ಕಟ್ಟೆ ಗಿರಿಯಮ್ಮ ಕನಕದಾಸ, ಪೊನ್ನಮ್ಮ* ಮುಂತಾದವರು – ಸಾಹಿತ್ಯ ಪ್ರಭೆಗಳು ಕನ್ನಡ] ಕಾವ್ಯ ಸಂಸ್ಕೃತಿಯನ್ನು ಸಂಪದ್ ಭರಿಸಿದ್ದಾರೆ.

ಈ ಮೇಲಿ ನೇಯ್ದು ಸಾಹಿತ್ಯಕ ಸಾಂಸ್ಕೃತಿಕ ಪೀತಾಂಬರಕ್ಕೆ, ಸಂಗೀತ, (ಹಿಂದುಸ್ತಾನಿ + ಕರ್ನಾಟಕ) ಲಲಿತ ಕಲೆಗಳು, ಸಾಮಾಜಿಕ ಜೀವನದ ಶೈಲಿ, ಹಾಗೂ ಸಹಭಾಗಿತ್ವದ ಸರ್ವೋನ್ನತಿಯ ಆಶಯ, 'ಸರ್ವೇ ಜನಾ : ಸುಖಿನೋ ಭವಂತು' ಶಾಂತಿ-ಸೌಖ್ಯ-ಮಂಗಲ ಪ್ರಾರ್ಥನೆ, ಪೂಜನೆ, ಆರ್ಚಣೆ, ಹಬ್ಬಗಳು ಹರಿದಿನಗಳು, ಜಾನಪದ, ದೊಡ್ಡಾಟ, ಸಣ್ಣಾಟ, ಕೋಲಾಟ, ಯಕ್ಷಗಾನ, ಗೊರವರ ಕಾಲ ನಿರ್ಣಯಗಳು, ಗೀಗೀ ಪದಗಳು, ಹೀಗೆ ನಾನಾ ಜೀವನ ಮೌಲ್ಯದ ಎಳೆಗಳು ಕೊಡುಗೆಗಳು ಕನ್ನಡ ನಾಡಿನ ಸಾಂಸ್ಕೃತಿಕ ಸಂಪತ್ತಾಗಿವೆ. ॥ ಈ ಆಯಾಮಗಳಲ್ಲಿ ತಮ್ಮ ಬದುಕನ್ನು ತೊಡಗಿಸಿದ ಕನ್ನಡಿಗರು, ತಮ್ಮ ಶುದ್ಧ ಚರಿತೆಯ,

**ಪವಿತ್ರ ಮಂಗಲ ಮನಸ್ಸುಗಳಿಂದ**
**ವಿಶ್ವತೋಮುಖ ಸದ್ದರ್ಶನ ನೀಡಿದ್ದಾರೆ**
**ಈ ನಾಡಿನಲ್ಲಿ ಪ್ರಯೋಗಶೀಲ ಪ್ರಭೃತಿಗಳು**
**ಆಗಾಗ ಉದಯಿಸಿ, ಈ ಕರುನಾಡಿನ ಸಾಂಸ್ಕೃತಿಕ**
**ಸಂಪತ್ತನ್ನು ವರ್ಧಿಸಿ, ಅದನ್ನು ಸಾಂಸ್ಕೃತಿಕ**
**ವಿಶ್ವರೂಪ ದರ್ಶನವನ್ನಾಗಿ ರೂಪಿಸಿದ್ದಾರೆ**
**"ನಿನ್ನ ಬಾಂದಳದಂತೆ ನನ್ನ ಮನವಿರಲಿ**
ನಿನ್ನ ಸಾಗರದಂತೆ ನನ್ನ ಎದೆ ಎನಗಿರಲಿ"

ಎಂದು ಭಗವಂತನನ್ನು ಪ್ರಾರ್ಥಿಸಿ, ಪ್ರಗಲ್ಭ ಸಾಂಸ್ಕೃತಿಕ, ಪ್ರಚಂಡ ಇತಿಹಾಸ ನಿರ್ಮಿಸಿದ್ದಾರೆ ಕನ್ನಡಿಗರು.

## ಆಧಾರಗ್ರಂಥಗಳು


೧. ಡಾ. ವಿ.ಕೆ. ಗೋಕಾಕ, ಭಾರತ ಸಿಂಧು ರಶ್ಮಿ.
೨. ಪ್ರೊ. ರಂ.ಶ್ರೀ. ಮುಗಳಿ, ಕರ್ನಾಟಕ ಸಾಹಿತ್ಯ ಚರಿತ್ರೆ.
೩. ಕರ್ನಾಟಕ ಪರಂಪರೆ : ಮೈಸೂರು ರಾಜ್ಯ ಸರಕಾರ, ಬೆಂಗಳೂರು, (೧೯೭೦), ಭಾಷಾಂತರ ಯೋಜನಾ ಸಮಿತಿ.
೪. ಡಿ.ವಿ. ಗುಂಡಪ್ಪ : ಸಂಸ್ಕೃತಿ.
೫. ಡಾ. ಎಸ್. ರಾಧಾಕೃಷ್ಣನ್, ದಿ ಹಿಂದು ಮೇ ಆಫ್ ಲೈಫ್.
೬ ಪ್ರೊ. ವಿ.ಜಿ. ಮಾರಿಹಾಳ್, ಕರ್ನಾಟಕ ಸಂಸ್ಕೃತಿಯ ವಿಶ್ವರೂಪ, ಕವಿವಿ, ಧಾರವಾಡ, ೧೯೭೩'.
೭. ಪ್ರೊ. ಎಂ.ಬಿ. ಕೊಟ್ರಶೆಟ್ಟಿ, ಕರ್ನಾಟಕ ಭಾರತಿ, ಸಂ. ३, ಧಾರವಾಡ.
೮. ಪ್ರಗೋ. ಕುಲಕರ್ಣಿ, ಕನ್ನಡ ಭಾಷೆಯ ಚರಿತ್ರೆ, ಹಿಂದವಾಡಿ, ಬೆಳಗಾವಿ, ೧೯೬೭.
೯. ಫಾದರ್ ಹೆರಾಸ್, ಕರ್ನಾಟಕ ಹಿಸ್ಟಾರಿಕಲ್ ರೀವ್ಯೂ.
೧೦. ಸಾಲಿ ರಾಮಚಂದ್ರರಾಯ, ೧೯೩೭, ಚಿತ್ರಸೃಷ್ಟಿ, ಧಾರವಾಡ.
೧೧. ಬಿ.ಎಂ. ಶ್ರೀಕಂಠಯ್ಯ, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ.
೧೨. ಪಿ.ಬಿ. ದೇಸಾಯಿ, ಫೆಲಿಸಿಟೇಶನ್ ಕಮಿಟಿ, ಕ.ವಿ.ವಿ., ಧಾರವಾಡ, ೧೯೭೧.
೧೩. ಜಿ.ಎಸ್. ದೀಕ್ಷಿತ ಮತ್ತು ಎಂ.ಕೆ. ರಾಜಗೋಪಾಲ, " ಶಿಕ್ಷಣ ಮತ್ತು ವಿಜ್ಞಾನ" ಕರ್ನಾಟಕ ಪರಂಪರೆ, ಮೈಸೂರು, ೧೯೭೦.
೧೪. ಆರ್. ನೃಸಿಂಹಾಚಾರ, ಕರ್ನಾಟಕ ಕವಿ ಜಾತ್ರೆ.



# ನೆಲಪಟ್ನ-'ಮರೆಯಾದ ಮಾಗಡಿ ಕೆಂಪೇಗೌಡ ಪ್ರಭುಗಳ ರಾಜಧಾನಿ'

**ವಿ.ಪಿ. ಗುರುಶಾಂತ್***

**'ನೆಲಪಟ್ನ'** ಕ್ರಿ.ಶ. ೧೬೩೮ರಲ್ಲಿ ಸಾವನದುರ್ಗ ಬೆಟ್ಟದ ಬುಡದಲ್ಲಿ ಯಲಹಂಕ ನಾಡಪ್ರಭುವಾಗಿದ್ದ ಇಮ್ಮಡಿ ಕೆಂಪೇಗೌಡನಿಂದ ಸ್ಥಾಪಿತವಾಯಿತು. ಇಮ್ಮಡಿ ಕೆಂಪೇಗೌಡ ಅದನ್ನು ತನ್ನ ನೂತನ ರಾಜಧಾನಿಯನ್ನಾಗಿ ಮಾಡಿಕೊಂಡನು. ಅವನು ಮಣ್ಣಿನ ಮತ್ತು ಕಲ್ಲಿನ ಬಲಿಷ್ಟವಾದ ಕೋಟೆ ಕಟ್ಟಿ ವ್ಯವಸ್ಥಿತವಾದ ಹತ್ತು ಕಿಲೋಮೀಟರ್ ವ್ಯಾಪ್ತಿಯ ದೊಡ್ಡಪಟ್ಟಣ ಕಟ್ಟಿ ಅರಮನೆ, ಸೇನಾನೆಲೆ, ವ್ಯಾಪಾರ ವಹಿವಾಟುಗಳಿಗೆ ಅನುಕೂಲಗಳನ್ನು ಕಲ್ಪಿಸಿ ಜನವಸತಿಗಳನ್ನು ನಿರ್ಮಿಸಿ ಸೂಕ್ತ ರಕ್ಷಣಾ ವ್ಯವಸ್ಥೆಯನ್ನು ಮಾಡಿದನು. (ಕ್ಯೂಜೆಎಂಎಸ್. ೧೩ ನಂ. ೦೪).

ಕ್ರಿ.ಶ. ೧೧೫೦ರ ಹೊಯ್ಸಳರ ಶಾಸನ ಎ.ಕ. ೯ ಮಾಗಡಿ ೧೪ರ ಪ್ರಕಾರ ಸಾವನದುರ್ಗಕ್ಕೆ ಸಾವಂತ ಕೇಸರಿ ಹೆಸರಿನ ಈರಯ್ಯನ ಊರಳವು ಎಂಬ ಉಲ್ಲೇಖವಿದೆ. ಕ್ರಿ.ಶ. ೧೩೪೦ರ ಇನ್ನೊಂದು ಶಾಸನ ಎ.ಕ. ೯ ಮಾಗಡಿ ಅನುಬಂಧದ ಪ್ರಕಾರ ಸಾವಂದಿ ಎಂಬ ಹೆಸರಿನ ಊರು ಸಾವನದುರ್ಗ ಬೆಟ್ಟದ ಬುಡದಲ್ಲಿದ್ದು ಶಾಸನೋಕ್ತ ಊರಾಗಿತ್ತು ಎಂಬುದು ಖಚಿತವಾಗುತ್ತದೆ. ಇಮ್ಮಡಿ ಕೆಂಪೇಗೌಡರ ಕಾಲ (ಕ್ರಿ.ಶ. ೧೫೮೫-೧೬೫೮)ಕ್ಕಿಂತ ಮುಂಚಿತವಾಗಿ ವಿಜಯ ನಗರದ ಪ್ರತಿನಿಧಿ ಸಾಮಂತರಾಯನು ಸಾವನದುರ್ಗವನ್ನು (ಕ್ರಿ.ಶ. ೧೫೪೩-೧೫೭೧) ಆಗಿನ ವಿಜಯನಗರದ ಸಾಮ್ರಾಟನಾಗಿದ್ದ ಅಚ್ಯುತರಾಯನಿಂದ ಜಹಗೀರಿಯಾಗಿ ಪಡೆದು, ಸಾವನದುರ್ಗದಿಂದಲೇ ತನ್ನ ಆಡಳಿತ ನಡೆಸುತ್ತಿದ್ದನು. ನಂತರ ಸಂಪಜರಾಯ ಮತ್ತು ಚಿಕ್ಕರಾಯ ಸಹ ಇಲ್ಲಿಂದಲೇ ಆಳುತ್ತಿದ್ದರು. ಚಿಕ್ಕರಾಯನ ಕಾಲದಲ್ಲಿ ಬೇಡರ ತಳಾರಿ ಗಂಗಪ್ಪನಾಯಕನೆಂಬ ಪಾಳೆಗಾರ ಗುಡೇಮಾರನಹಳ್ಳಿಯಿಂದ ಸ್ವತಂತ್ರವಾಗಿ ಆಡಳಿತ ನಡೆಸುತ್ತಿದ್ದನು. ಸಾಮಂತ ಚಿಕ್ಕರಾಯ ಸರಿಯಾಗಿ ಆಡಳಿತ ನಡೆಸದೆ, ದುರ್ಬಲ ವ್ಯಕ್ತಿಯಾಗಿದ್ದ ಮತ್ತು ಪುತ್ರ ಸಂತಾನ ಇರಲಿಲ್ಲ. ಇಂತಹ ಸಂದಿಗ್ದ ಪರಿಸ್ಥಿತಿಯ ಸಂದರ್ಭದಲ್ಲಿ ಗುಡೇಮಾನರಹಳ್ಳಿಯಿಂದ ಆಡಳಿತ ನಡೆಸುತ್ತಿದ್ದ ತಳಾರಿ ಗಂಗಪ್ಪನಾಯಕ, ಮಾಗಡಿ ಮತ್ತು ಸಾವನದುರ್ಗವನ್ನು ತನ್ನ ಆಡಳಿತಕ್ಕೆ ಸೇರಿಸಿಕೊಂಡನು. ಇದರಿಂದ ಕುಪಿತರಾದ ವಿಜಯನಗರದ ಅರಸರ ಆದೇಶದಂತೆ ಬೆಂಗಳೂರಿನಿಂದ ಮಾಗಡಿ ಪ್ರದೇಶವನ್ನು ಆಳುತ್ತಿದ್ದ, ಇಮ್ಮಡಿ ಕೆಂಪೇಗೌಡನು ತಳಾರಿ ಗಂಗಪ್ಪನ ಮೇಲೆ ದಾಳಿ ಮಾಡಿ ಅವನನ್ನು ಕೊಂದು ಮಾಗಡಿ ಮತ್ತು ಸಾವನದುರ್ಗಗಳನ್ನು ಕ್ರಿ.ಶ. ೧೬೭೩ರಲ್ಲಿ ತನ್ನ ಆಡಳಿತ ವ್ಯಾಪ್ತಿಗೆ ಸೇರಿಸಿಕೊಂಡನೆಂದು ಎಂ.ವಿ. ಕೃಷ್ಣರಾವ್ ಅಭಿಪ್ರಾಯ ಪಡುತ್ತಾರೆ. (ಕ್ಯೂಜೆಎಂಎಸ್- ಸಂಪುಟ XIII ನಂ. ೪ ಪುಟ ೭೩೧). ಮಾಗಡಿ ಸೈನಿಕ ನೆಲೆಯಾಗಿದ್ದು ಇಲ್ಲಿದ್ದ ಮಣ್ಣಿನ ಕೋಟೆಯನ್ನು ಬಲಪಡಿಸಿ ಇಮ್ಮಡಿ ಕೆಂಪೇಗೌಡನು ಕಲ್ಲಿನ ಕೋಟೆ ಕಟ್ಟಿಸಿ ಸುತ್ತ ಕಂದಕ ಗಳನ್ನು ನಿರ್ಮಿಸಿ ಕೋಟೆಯನ್ನು ಬಲಪಡಿಸಿದನು. ಜೊತೆಗೆ ಜನವಸತಿ, ವ್ಯಾಪಾರಕ್ಕೂ ಅನುಕೂಲ ಕಲ್ಪಿಸಿ ಮಾಗಡಿಯನ್ನು ಅಭಿವೃದ್ಧಿಪಡಿಸಿದನು. ಕ್ರಿ.ಶ. ೧೬೩೮ರಲ್ಲಿ ಇಮ್ಮಡಿ ಕೆಂಪೇಗೌಡನು ಬೆಂಗಳೂರಿನಿಂದ ಆಡಳಿತ ನಡೆಸುತ್ತಿದ್ದ ಕಾಲದಲ್ಲಿಯೂ ಸಾವನದುರ್ಗ ಪ್ರಮುಖವಾದ ಸೈನಿಕ ನೆಲೆಯಾಗಿತ್ತೆಂದು ಕಂಡು ಬರುತ್ತದೆ.

ನೆಲಪಟ್ನ ಪ್ರಮುಖ ರಾಜಕೀಯ ಮತ್ತು ಆಯಕಟ್ಟಿನ ಸೈನಿಕ ನೆಲೆಯೂ ಆಗಿದ್ದುದಕ್ಕೆ ಮುಖ್ಯ ಸಾಕ್ಷ್ಯವೆಂದರೆ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಕ್ರಿ.ಶ. ೧೭೯೧ ರಲ್ಲಿ ಸ್ವತಃ ಲಾರ್ಡ್‌ಕಾರ್ನ್‌ವಾಲಿಸ್, ನೆಲಪಟ್ನದ ಮೇಲೆ ದಾಳಿ ಮಾಡಿ ಆ ಕೋಟೆಯನ್ನು ಅಂದರೆ **"ಬಸವನದುರ್ಗ ಕೋಟೆ"** ಎಂದು ಕರೆಯಲಾಗುತ್ತಿದ್ದ ಕೋಟೆಯನ್ನು ವಶಪಡಿಸಿ ಕೊಳ್ಳಲು ಪ್ರಯತ್ನಿಸಿರುವುದು. ಹೈದರಾಲಿಯ ಆಡಳಿತಕ್ಕೆ ಒಳಪಟ್ಟಿದ್ದ ನೆಲಪಟ್ನದ ಮೇಲೆ ಬ್ರಿಟೀಷರು ಮಾಡಿದ ಯುದ್ಧ ಬಹಳ 'ರೋಮಾಂಚನಕಾರಿ ಮತ್ತು ಮೈಜುಮ್ಮೆನಿಸುವಂತೆ' ಇತ್ತು ಎಂದು ಆಗ ಕಾರ್ನ್‌ವಾಲೀಸ್‌ನ ಜೊತೆ ಯುದ್ಧದಲ್ಲಿ ಭಾಗವಹಿಸಿದ್ದ ಕರ್ನಲ್ ವಿಲ್ಕ್ಸ್ ಯುದ್ಧದ ಬಗ್ಗೆ ವರ್ಣಿಸಿದ್ದಾನೆ. ಸಾವನದುರ್ಗ ಬೆಟ್ಟದ ಬಗ್ಗೆ ವರ್ಣಿಸುತ್ತಾ ಆ ದುರ್ಗ ಸ್ವಲ್ಪ ಎಚ್ಚರ ತಪ್ಪಿದವರ ಪಾಲಿಗೆ **'ಸಾವಿನದುರ್ಗ'** ಎಂದಿದ್ದಾನೆ. ಬ್ರಿಟೀಷ್ ಸರಕಾರದ ವರದಿಗಾರ ಫ್ರಾನ್ಸಿಸ್ ಬುಖಾನನ್

* # ೩೦೭, ಜಿ. ಸ್ಕ್ವೇರ್ ಗೆಲಾಕ್ಸಿ, ಶ್ರೀನಿವಾಸಪುರ ಮುಖ್ಯರಸ್ತೆ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦೦೯೮.

ಸಾವನದುರ್ಗವನ್ನು **'ಸವರನ್ ದುರ್ಗ'** ವೆಂದು ಕರೆದಿದ್ದಾನೆ. ಸೈನಿಕ ನೆಲೆಯೂ ಆಗಿದ್ದ ಸಾವನದುರ್ಗ ನಾಲ್ಕು ದಿಕ್ಕುಗಳಲ್ಲಿ ಬಹಳ ಆಯಕಟ್ಟಿನ ರಕ್ಷಣಾತ್ಮಕ ಕೋಟೆಗಳು ಇದ್ದ ರಚನೆ ಆಗಿತ್ತೆಂದು ತಿಳಿಸಿದ್ದಾನೆ. ಈ ಬೆಟ್ಟದ ಎರಡು ಶಿಲಾಶಿಖರ ಗಳನ್ನು ಕರಿಬೆಟ್ಟ ಮತ್ತು ಬಿಳಿಬೆಟ್ಟ ಎಂಬ ಏಕಶಿಲಾ ಹೆಬ್ಬಂಡೆ ಗಳಾಗಿದ್ದು, ಉಳಿದ ಮೂರು ಕಡೆ, ಬಸವನದುರ್ಗ, ವೀರಭದ್ರ ದುರ್ಗ, ಹನುಮದುರ್ಗ, ಅಂದರೆ ಒಟ್ಟು ನಾಲ್ಕು ಕಡೆ ರಕ್ಷಣಾತ್ಮಕ ಮತ್ತು ಆಯಕಟ್ಟಿನ ಕೋಟೆಗಳಿದ್ದು, ಕಾವಲಿಗಾಗಿ 'ಕಾವಲು ಬುರುಜು' ಗಳು ಇದ್ದವು. ಕೋಟೆ ಗೋಡೆಗಳಿಗೆ ಆಯಕಟ್ಟಿನ ಜಾಗಗಳಲ್ಲಿ ಕಲ್ಲಿನ ಕಂಬಗಳ ಮೇಲೆ ಕಲ್ಲಿನ ತೊಲೆಗಳಿಂದ ಹೆಬ್ಬಾಗಿಲು ಮತ್ತು ಉಪ ಬಾಗಿಲುಗಳನ್ನು ನಿರ್ಮಿಸಲಾಗಿತ್ತು. ಇಂತಹ ಕಠಿಣವಾದ, ರಕ್ಷಣೆಯಿದ್ದ ಸಾವನದುರ್ಗ ಕೋಟೆ ಪ್ರದೇಶಕ್ಕೆ ಅದರ ಬುಡದಲ್ಲಿದ್ದ ಹತ್ತು ಕಿ.ಮೀ. ವ್ಯಾಸದಲ್ಲಿದ್ದ ನೆಲಪಟ್ಟಣಕ್ಕೆ ಕೇವಲ ಒಂದೇ ಒಂದು ರಹಸ್ಯ/ಗುಪ್ತ ಮಾರ್ಗ ಕಾಲುದಾರಿಯಾಗಿತ್ತು. ಅದು ಬಹಳ ಅಪಾಯಕಾರಿಯಾಗಿದ್ದು ಇಕ್ಕಟ್ಟಾಗಿದ್ದ ಕಾಲುದಾರಿಯಾಗಿತ್ತು. ಬೆಟ್ಟವನ್ನು ಏರುವುದು ಬಹಳ ಕಷ್ಟವಾಗಿದ್ದು, ಜಾರುವಂತೆ ಇದ್ದುದರಿಂದ ಸ್ವಲ್ಪ ಎಚ್ಚರ ತಪ್ಪಿದವರು ಕಾಲು ಜಾರಿ, ಬೆಟ್ಟದ ಬುಡದಲ್ಲಿದ್ದ ನಿಸರ್ಗ ನಿರ್ಮಿತವಾದ, ಬಹಳ ಆಳವಾದ ಕಂದಕಕ್ಕೆ ಬೀಳುತ್ತಿದ್ದರು ಮತ್ತು ಅವರ ಸಾವು ನಿಶ್ಚಿತವಾಗಿತ್ತು. ಇಂತಹ ಅಪಾಯಕಾರಿ ಕಂದಕ ದಾಟಲು ಮರದ ದಿಮ್ಮಿ ಅಥವಾ ಮರದ ತೊಲೆಗಳನ್ನು ಉಪಯೋಗಿಸ ಲಾಗುತ್ತಿದ್ದು, ವೈರಿ ಸೈನಿಕರು ಈ ಕಂದಕವನ್ನು ದಾಟಲು ಪ್ರಯತ್ನಿಸಿದಾಗ ಆ ತೊಲೆ ಮತ್ತು ದಿಮ್ಮಿಗಳನ್ನು ಕೆಡವಿ, ಶತ್ರು ಸೈನ್ಯ ಕಂದಕದಲ್ಲಿ ಬಿದ್ದು ಸಾಯುತ್ತಿದ್ದರು. ಆ ಕಂದಕಕ್ಕೆ ಬಿದ್ದವರು ಮತ್ತೆ ಏರಿ ಬರುವುದಕ್ಕೆ ಯಾವುದೇ ರೀತಿಯ ಅನುಕೂಲ ಇರಲಿಲ್ಲ. ಕಾರ್ನ್‌ವಾಲಿಸ್ ಕ್ರಿ.ಶ. ೧೭೯೧ರಲ್ಲಿ ಈ ಕೋಟೆ ಮೇಲೆ ದಾಳಿ ಮಾಡಿದ್ದನ್ನು ಮತ್ತು ಸೈನಿಕರು ಕಂದಕದಲ್ಲಿ ಬಿದ್ದವರು ಯಾರು ಮತ್ತೆ ಎದ್ದು ಬರದೇ ಇದ್ದುದನ್ನು ಮತ್ತು ಆ ಯುದ್ಧವನ್ನು ಕಣ್ಣಾರೆ ಕಂಡ ಕರ್ನಲ್ ವಿಲ್ಕ್ಸ್‌ನು ಸಾವನದುರ್ಗವನ್ನು **'ಸಾವಿನದುರ್ಗ'** ಎಂದಿರುವುದು ಅತಿಶಯೋಕ್ತಿಯಲ್ಲ. ಈ ಯುದ್ಧದಲ್ಲಿ ಕಾರ್ನ್‌ವಾಲಿಸ್ ಸೋತು ಹೋದನು.

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ನಡೆದ ಆಂಗ್ಲೋ-ಮೈಸೂರು ಯುದ್ಧದಲ್ಲಿ ಬಂಧಿಸಲ್ಪಟ್ಟಿದ್ದ ಇಪ್ಪತ್ತು ಜನ ಬ್ರಿಟೀಷ್ ಸೈನ್ಯಾಧಿಕಾರಿಗಳು ಹಾಗೂ ಮೂರು ಜನ ಸೈನಿಕರನ್ನು ಸೆರೆಯಾಳುಗಳಾಗಿ ನೆಲಪಟ್ನದಲ್ಲಿ ಕ್ರಿ.ಶ. ೧೭೮೪ರ ವರೆವಿಗೂ ಬಂಧಿಸಿಡಲಾಗಿತ್ತು. ಕ್ರಿ.ಶ. ೧೭೯೧ರಲ್ಲಿ ಹೈದರಾಲಿ ಖಾನನು ಒಂದನೇ ಆಂಗ್ಲೋ ಮೈಸೂರು ಯುದ್ಧದ ಸಮಯ ದಲ್ಲಿ ತನ್ನ ಸಂಸಾರ ಮತ್ತು ಬೊಕ್ಕಸವನ್ನು ನೆಲಪಟ್ಟಣಕ್ಕೆ ಸಾಗಿಸಿದನೆಂದು ಹೇಳಿದ್ದಾರೆ. ಹೈದರಾಲಿಯು ಮದ್ರಾಸ್ ಕಡೆಯಿಂದ ಬಂದು ಬ್ರಿಟೀಷರನ್ನು ಯುದ್ಧದಲ್ಲಿ ಸೋಲಿಸಿ ದ್ದಲ್ಲದೆ ಸತ್ಯಮಂಗಲ, ಕೊಯಮತ್ತೂರುಗಳನ್ನು ವಶಪಡಿಸಿ ಕೊಂಡನೆಂದು ವರದಿಯಾಗಿದೆ.

ಇಮ್ಮಡಿ ಕೆಂಪೇಗೌಡನು ಬೆಂಗಳೂರಿನಿಂದ ಉತ್ತಮ ಆಡಳಿತ ನೀಡಿ ತನ್ನ ರಾಜ್ಯವನ್ನು ಅಭಿವೃದ್ಧಿಪಡಿಸಿ, ಜನರಿಗೆ ಅನುಕೂಲಗಳನ್ನು ಕಲ್ಪಿಸಿದನು. ಇದರಿಂದ ಅವನ ವರ್ಚಸ್ಸು ಹೆಚ್ಚಾಯಿತು. ಇದರಿಂದ ಅವನ ಸುತ್ತಮುತ್ತ ಇದ್ದ ಪಾಳೆಗಾರರಿಗೆ ಅಸೂಯೆ ಮತ್ತು ದ್ವೇಷ ಉಂಟಾಯಿತು. ಇಮ್ಮಡಿ ಕೆಂಪೇಗೌಡನ ನಾಶಕ್ಕಾಗಿ ಪಿತೂರಿ ನಡೆಸಿದ ಸುಮತಿ ಬಾಗೂರಿನ ಪಾಳೆಗಾರ ಬಿಜಾಪುರ ಸುಲ್ತಾನರಿಗೆ ಕುಮ್ಮಕ್ಕು ನೀಡಿ ಇಮ್ಮಡಿ ಕೆಂಪೇಗೌಡನ ಮೇಲೆ ದಾಳಿ ಮಾಡಲು ಪ್ರೇರೇಪಿಸಿದನು. ಇದರಿಂದ ಉತ್ತೇಜಿತನಾದ ಬಿಜಾಪುರ ಸುಲ್ತಾನ ತನ್ನ ಸೇನೆಯನ್ನು ಯುದ್ಧ ಮಾಡಲು ಕಳುಹಿಸಿ ಕೊಟ್ಟನು. ೧೬೩೮ರಲ್ಲಿ ಬಿಜಾಪುರ ಸುಲ್ತಾನನ ಸೇನಾಧಿಪತಿ ಗಳಾದ ರಣದುಲ್ಲಾಖಾನ್ ಮತ್ತು ಶಿವಾಜಿಯ ತಂದೆ ಷಹಾಜಿ ಇವರುಗಳು ತಮ್ಮ ದಂಡಯಾತ್ರೆಯಲ್ಲಿ ಮೊದಲಿಗೆ ಸೀರ್ಯದ (ಇಂದಿನ ಶಿರಾ) ಮೇಲೆ ದಾಳಿ ಮಾಡಿ ಅದನ್ನು ವಶಪಡಿಸಿ ಕೊಂಡ ನಂತರ ಬೆಂಗಳೂರನ್ನು ವಶಪಡಿಸಿಕೊಳ್ಳಲು ದಾಳಿ ಮಾಡಿದಾಗ, ಬೆಂಗಳೂರಿನ ಪ್ರಭುವಾಗಿದ್ದ ಇಮ್ಮಡಿ ಕೆಂಪೇಗೌಡನು ಸಾವನದುರ್ಗದಿಂದ ಮಾಡಿದ ಯುದ್ಧದಲ್ಲಿ ಸೋತನು. ಆದರೆ ಇಮ್ಮಡಿ ಕೆಂಪೇಗೌಡನು ರಣದುಲ್ಲಾಖಾನನ ಜೊತೆ ಒಂದು ಒಪ್ಪಂದ ಮಾಡಿಕೊಂಡು ಬೆಂಗಳೂರನ್ನು ಅವರಿಗೆ ಒಪ್ಪಿಸಿ ವಾರ್ಷಿಕ ಪೊಗದಿ ಕೊಡಲು ಒಪ್ಪಿಕೊಂಡನು. ಅವನ ಇನ್ನೊಂದು ಸೈನಿಕ ನೆಲೆಯಾದ ರಾಮಗಿರಿದುರ್ಗವನ್ನು (ರಾಮನಗರದ ಬಳಿಯ ಇಂದಿನ ರಾಮಗಿರಿ ಬೆಟ್ಟ) ಬಿಟ್ಟು ಕೊಟ್ಟು ತನ್ನ ಮಗನನ್ನು ಒತ್ತೆಯಾಗಿ ನೀಡಿದನು.ಈ ಒಪ್ಪಂದ ದಂತೆ ರಣದುಲ್ಲಾಖಾನನು ಇಮ್ಮಡಿ ಕೆಂಪೇಗೌಡನ ಆಡಳಿತಕ್ಕೆ ಮಾಗಡಿ ಪ್ರದೇಶ ನೀಡಿದ್ದಲ್ಲದೆ ಸುತ್ತಮುತ್ತ ಇದ್ದ ಪಾಳೆಯ ಗಾರರಿಂದ ರಕ್ಷಣೆ ನೀಡುವ ಕರಾರನ್ನು ಮಾಡಿಕೊಂಡನು ಎಂದು ಚರಿತ್ರಾಕಾರರಾದ ಪಿ. ಸತ್ಯನಾರಾಯಣರವರು **'ಹಿಸ್ಟರಿ ಆಫ್ ಮೈಸೂರು ವಡೇಯರ್ಸ್'** ೧೬೧೧-೧೬೪೮ ಪುಟ ೪ರಲ್ಲಿ ವಿವರಿಸಿದ್ದಾರೆ.

ಕ್ರಿ.ಶ. ೧೬೩೮ನೇ ವರ್ಷ ಇಮ್ಮಡಿ ಕೆಂಪೇಗೌಡನ ಜೀವನದ ಪರ್ವಕಾಲ. ಅನೇಕ ವಿಷಯ, ಘಟನೆಗಳ ಸರಮಾಲೆಯಿಂದಾಗಿ ಅವನ ರಾಜಕೀಯ ಜೀವನವೇ ಬುಡಮೇಲಾಗುತ್ತದೆ. ಆದರೆ ಅವನ ಸಂಯಮ, ತಾಳ್ಮೆ, ಮುತ್ಸದ್ದಿತನದ, ಧೀಮಂತ ಮತ್ತು ಧೈರ್ಯಶಾಲಿ ಗುಣಗಳನ್ನು

ಹೊಂದಿದ್ದನು ಎಂಬುದನ್ನು ಖಚಿತಪಡಿಸುತ್ತದೆ. ಇವನ ಈ ಶ್ರೇಷ್ಟ ಗುಣಗಳೇ ಅವನ ರಾಜಕೀಯ ಏಳ್ಗೆಗೆ ಕಾರಣವಾಗುತ್ತದೆ. ಈಗಾಗಲೇ ಹೇಳಿರು ವಂತೆ ಅವನು ಮಾಗಡಿ ಕೋಟೆಯನ್ನು ಬಲಪಡಿಸಿ ಜೊತೆಗೆ ಸಾವನದುರ್ಗ ಬೆಟ್ಟದ ಬುಡದಲ್ಲಿ ೧೦ ಕಿ.ಮೀ. ವ್ಯಾಸದ ಹೊಸಪಟ್ಟಣವನ್ನು ಅಂದರೆ ನೆಲಪಟ್ನವನ್ನು ಕಟ್ಟಿ ಅದನ್ನು ತನ್ನ ಇನ್ನೊಂದು ರಾಜಧಾನಯಾಗಿ ಮಾಡಿಕೊಳ್ಳುತ್ತಾನೆ. ಜೊತೆಗೆ ತನ್ನ ಆಡಳಿತದ ವ್ಯಾಪ್ತಿಗೆ ಸಾವನದುರ್ಗದ ಸುತ್ತಮುತ್ತ ಪ್ರದೇಶಗಳ ಜೊತೆಗೆ ಹುತ್ತರುದುರ್ಗ, ಹುಲಿಯೂರುದುರ್ಗ, ಭೈರವನದುರ್ಗ, ಕುಣಿಗಲ್ ಪ್ರಾಂತಗಳನ್ನು ಸೇರಿಸಿಕೊಂಡು ತನ್ನ ರಾಜ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡನು.

ಇದೇ ಕ್ರಿ.ಶ. ೧೬೩೮ರಿಂದಲೇ ಇಮ್ಮಡಿ ಕೆಂಪೇಗೌಡನು ತನ್ನ ರಾಜ್ಯದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಜನರ ಹಿತಕ್ಕಾಗಿ ಅನೇಕ ಕೆರೆಗಳು, ಕುಂಟೆಗಳು, ಕಲ್ಯಾಣಿಗಳನ್ನು ಕಟ್ಟಿಸಿ, ಬಂಜರು ಭೂಮಿಯಾಗಿದ್ದ ಈ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಿ ರಾಜ್ಯವನ್ನು ಸಮೃದ್ದಗೊಳಿಸಿದನು. ಒಂದು ಐತಿಹ್ಯದಂತೆ ಈತನು ಬರ ಬಂದಾಗ ಗಂಗಾಧರೇಶ್ವರನನ್ನು ಭಕ್ತಿಯಿಂದ ಪೂಜಿಸಿದಾಗ ಉತ್ತಮ ಮಳೆ ಬಂದು ಬರ ಪರಿಹಾರವಾಯಿತೆಂದು, ಅದಕ್ಕಾಗಿ ಅವನನ್ನು **'ಮಳೆರಾಯ'** ನೆಂದು ಬಣ್ಣಿಸಿದ್ದಾರೆ. ಹಳೆ ಮೈಸೂರು ಪ್ರಾಂತದಲ್ಲಿ ಇಮ್ಮಡಿ ಕೆಂಪೇಗೌಡನ ಮೇಲೆ ಸಾವಿರಾರು ಲಾವಣಿಗಳನ್ನು ರಚಿಸಿ ಅವನನ್ನು ಅತಿಶಯವಾಗಿ ಹೊಗಳಿದ್ದಾರೆ. ಈ ಬಗ್ಗೆ ಡಾ. ಮುನಿರಾಜಪ್ಪನವರು ತಮ್ಮ ಪಿ.ಹೆಚ್.ಡಿ. ಗ್ರಂಥ **'ಮಾಗಡಿ ಸೀಮೆ ಇತಿಹಾಸ-ಸಂಸ್ಕೃತಿ'** ಗ್ರಂಥದಲ್ಲಿ ಹೆಚ್ಚಿನ ವಿವರಣೆಗಳನ್ನು ನೀಡಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕೆಂಪೇಗೌಡ ಪ್ರತಿಷ್ಠಾನದವರು ಲಾವಣಿಗಳನ್ನು ಒಳಗೊಂಡ **'ಜಾನಪದ ಸಂಪುಟ'** ಎಂಬ ಸಂಶೋಧನಾತ್ಮಕ ಗ್ರಂಥವನ್ನು ಪ್ರಕಟಿಸಿ ದ್ದಾರೆ.

ಡಾ. ಶಾಮಾಶಾಸ್ತ್ರಿಯವರು ಸಂಪಾದಿಸಿರುವ **"ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯಂ"** ಎಂಬ ಗ್ರಂಥ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ್ದು ಅದರಲ್ಲಿ ಸಂದಿ ೧೨ ಪದ್ಯ ೧೭ರಲ್ಲಿ ಕ್ರಿ.ಶ. ೧೬೩೮ರಲ್ಲಿ ಕಂಠೀರವ ನರಸರಾಜ ಇಮ್ಮಡಿ ಕೆಂಪೇಗೌಡನನ್ನು ಸೋಲಿಸಿ ದ್ದರಿಂದ ಮನನೊಂದು ಅವನು ಕುಣಿಗಲ್ ಕಡೆಗೆ ಹೋದ ನೆಂದು ಬರೆಯಲಾಗಿದೆ. ಆದರೆ ಆ ಕಾಲದ ಘಟನಾವಳಿ ಗಳನ್ನು ಪರಿಶೀಲಿಸಿದರೆ ಈ ಹೇಳಿಕೆಗೆ ಸೂಕ್ತ ಆಧಾರಗಳಿಲ್ಲ. ಕ್ರಿ.ಶ. ೧೬೪೮ರಲ್ಲಿ ಕಂಠೀರವ ನರಸರಾಜ ಮಾಗಡಿ ಮೇಲೆ ಮತ್ತೊಮ್ಮೆ ದಾಳಿ ಮಾಡಿದರೂ ಅವನು ಅದರಿಂದ ಏನು ಸಾಧಿಸಿದನು ಎಂಬುದಕ್ಕೂ ಚರಿತ್ರೆಯಲ್ಲಿ ಸಾಕ್ಷ್ಯಗಳು ಕಂಡುಬಂದಿಲ್ಲ.

ಬಿಜಾಪುರ ಸುಲ್ತಾನ ಇಮ್ಮಡಿ ಕೆಂಪೇಗೌಡನ ಮೇಲೆ ದಾಳಿ ಮಾಡಲು ಮುಖ್ಯ ಕಾರಣವೆಂದರೆ ಬಾಗೂರಿನ ಸುಮತಿ ಪಾಳೆಗಾರನಿಗೆ ಇಮ್ಮಡಿ ಕೆಂಪೇಗೌಡನ ಏಳ್ಗೆಯಿಂದ ಅಸೂಯೆಗೊಂಡು ಮತ್ತು ದ್ವೇಷ ಸಾದಿಸಿ ಪಿತೂರಿ ನಡೆಸಿ, ಅವರಿಗೆ ಕುಮ್ಮಕ್ಕು ನೀಡಿದ್ದರಿಂದ ಎಂದು ಹೇಳಲಾಗಿದೆ. ಇಮ್ಮಡಿ ಕೆಂಪೇಗೌಡನ ಈ ರಾಜಕೀಯ ಒಪ್ಪಂದ ಅವನ ಮುತ್ಸದ್ದಿತನಕ್ಕೆ ಗುರುತಾಗಿದೆ. ಒಪ್ಪಂದದ ಕರಾರಿನಂತೆ ಬಿಜಾಪುರದ ಸುಲ್ತಾನರು, ಇತರ ಸ್ಥಳೀಯ ಪಾಳೆಗಾರರು ಇವನ ಮೇಲೆ ದಾಳಿ ಮಾಡದಂತೆ ರಕ್ಷಣೆಯ ಕರಾರು ಮಾಡಿಕೊಂಡಿದ್ದನು. ಇದರಿಂದ ಇಮ್ಮಡಿ ಕೆಂಪೇಗೌಡ ಸುಲಲಿತ ಆಡಳಿತ ನಡೆಸಲು ಅನುಕೂಲವಾಯಿತು. ಬೆಂಗಳೂರನ್ನು ತಮ್ಮ ವಶಕ್ಕೆ ಪಡೆದುಕೊಂಡ ರಣದುಲ್ಲಾಖಾನನು; ಮಾಗಡಿ ಯನ್ನು (ಪ್ರದೇಶವನ್ನು) ಇಮ್ಮಡಿ ಕೆಂಪೇಗೌಡನ ವಶಕ್ಕೆ ನೀಡಿದನು. ಬಿಜಾಪುರದ ಸುಲ್ತಾನನು ಶಿವಾಜಿಯ ತಂದೆ ಷಹಜಿಗೆ ಬೆಂಗಳೂರು, ಹೊಸಕೋಟೆ, ಕೋಲಾರ, ಸೀರ್ಯ (ಶಿರಾ) ಪ್ರಾಂತಗಳನ್ನು ಜಹಗೀರನ್ನಾಗಿ ನೀಡಿದನು. ಈ ಪ್ರದೇಶವನ್ನು **'ಬಿಜಾಪುರದ ಸುಲ್ತಾನರು "ಕರ್ನಾಟಕ ಬಿಜಾಪುರ ಫಾಯಿನ್ ಘಾಟ್"** ಎಂದು ಹೆಸರಿಟ್ಟರು.

ಇಮ್ಮಡಿ ಕೆಂಪೇಗೌಡನು ಈ ಒಪ್ಪಂದದಂತೆ ಕ್ರಿ.ಶ. ೧೬೩೮ರಿಂದ ಮಾಗಡಿಯಿಂದ ಮತ್ತೆ ಆಳ್ವಿಕೆ ನಡೆಸಿ, ಸುತ್ತಲ ಪ್ರದೇಶಗಳಾದ, ಸಾವನದುರ್ಗ, ನೆಲಪಟ್ನವೂ ಸೇರಿದಂತೆ, ಹುಲಿಕಲ್ಲು, ಹುಲಿಯೂರುದುರ್ಗ, ಹುತ್ರಿದುರ್ಗ, ಭೈರವನದುರ್ಗ, ಕುಣಿಗಲ್ ಪ್ರಾಂತ್ಯಗಳ ಮೇಲೆ ತನ್ನ ಅಧಿಕಾರ ವಿಸ್ತರಿಸಿದನು. ರಾಜಕೀಯ ನೆಮ್ಮದಿ ದೊರೆತ ಕಾರಣ ಮುತ್ಸದ್ದಿಯಾದ ಇಮ್ಮಡಿ ಕೆಂಪೇಗೌಡ ಅಭಿವೃದ್ಧಿ ಕಾರ್ಯಗಳ ಕಡೆ ಗಮನಹರಿಸಲು ಸಾಧ್ಯವಾಗಿ ಕೆರೆಗಳು, ಕಲ್ಯಾಣಿಗಳು ಮತ್ತು ಕಟ್ಟೆಗಳನ್ನು ಕಟ್ಟಿಸಿ ವ್ಯವಸಾಯ ಅಭಿವೃದ್ಧಿಗೆ ಕಾರಣೀಭೂತನಾದನು ಮತ್ತು ಅನೇಕ ಜನವಸತಿಗಳನ್ನು ನಿರ್ಮಿಸಿ ಅಭಿವೃದ್ಧಿ ಪಡಿಸಿದನು. ಇದರಿಂದ ಯಲಹಂಕ ನಾಡಪ್ರಭುಗಳು ಮಾಗಡಿ ಪ್ರಭುಗಳೆಂದು ಹೆಸರು ವಾಸಿಯಾದರು. ಇವನ ಕಾಲದಲ್ಲಿ ಬ್ರಾಹ್ಮಣರಿಗೆ ಹೆಚ್ಚು ದಾನ ಗಳನ್ನು ನೀಡಿದ್ದು ಅನೇಕ ಗ್ರಾಮಗಳನ್ನು ಅವರ ವಶಕ್ಕೆ ನೀಡಿದ್ದಾನೆ.

ಕ್ರಿ.ಶ. ೧೬೫೦ರಲ್ಲಿ ಮತ್ತೆ ದಾಳಿ ಮಾಡಿದ ಬಿಜಾಪುರದ ಸುಲ್ತಾನನ ಸೈನ್ಯ ಉದ್ದಕ್ಕೂ ಲೂಟಿ ಮಾಡುತ್ತಾ ಬಂದು ರಾಮಗಿರಿಯಲ್ಲಿ (ಇಂದಿನ ರಾಮನಗರದ ಬಳಿಯ ರಾಮದೇವರ ಬೆಟ್ಟ) ದಳವಾಯಿ, ನಂಜರಾಜಯ್ಯನ ನೇತೃತ್ವದ ಮೈಸೂರು ಸೇನೆಯನ್ನು ಸೋಲಿಸಿತು, ಆದರೆ ಮಾಗಡಿಪ್ರಭು ಇಮ್ಮಡಿ ಕೆಂಪೇಗೌಡನ ಆಡಳಿತಕ್ಕೆ ಒಳಪಟ್ಟಿದ್ದ ಹುಲಿಯೂರು

ದುರ್ಗದಲ್ಲಿ ಮೈಸೂರು ಸೈನ್ಯ ಬಿಜಾಪುರದ ಸುಲ್ತಾನನ ಸೈನ್ಯವನ್ನು ಸೋಲಿಸಿತು. ಬಿಜಾಪುರ ಸುಲ್ತಾನರ ದಾಳಿಯು ಮಾಗಡಿ ಪ್ರದೇಶವನ್ನು ಬಿಟ್ಟು ಉಳಿದ ಕಡೆ ದಾಳಿ ಮಾಡಿದಂತೆ ಆಗಿನ ಕಾಲದ ಘಟನಾವಳಿಗಳು ಹಾಗೂ ದಾಳಿಯ ವಿವರ ಗಳಿಂದ ತಿಳಿದು ಬರುತ್ತದೆ. ಇದಕ್ಕೆ ಹಿಂದೆ ಇಮ್ಮಡಿ ಕೆಂಪೇಗೌಡನು ರಣದುಲ್ಲಾಖಾನನ ಜೊತೆ ಮಾಡಿಕೊಂಡಿದ್ದ ಒಪ್ಪಂದ ಕಾರಣವಾಗಿರಬೇಕು.

ಮೈಸೂರು ಸೇನೆ ಕ್ರಿ.ಶ. ೧೬೫೪ರಲ್ಲಿ ಕಂಠೀರವ ನರಸರಾಜ ಒಡೆಯರ ನೇತೃತ್ವದಲ್ಲಿ ಮಾಗಡಿ ಪ್ರದೇಶದ ಮೇಲೆ ಯುದ್ಧ ಮಾಡಿತು. ಮತ್ತೆ ಎರಡು ವರ್ಷಗಳ ನಂತರ ಇಮ್ಮಡಿ ಕೆಂಪೇಗೌಡನ ವಶದಲ್ಲಿದ್ದ ಕುಣಿಗಲ್ ಪ್ರಾಂತದ ಹೆಬ್ಬೂರನ್ನು ವಶಪಡಿಸಿಕೊಂಡಿತು. ಈ ಕಾಲದ ಕೆಲವು ಶಾಸನಗಳು ಮತ್ತು ವಿವರಗಳು ಗೊಂದಲ ಉಂಟು ಮಾಡುತ್ತವೆ. ಕಂಠೀರವ ನರಸರಾಜ ವಿಜಯದ ಪ್ರಕಾರ ಇಮ್ಮಡಿ ಕೆಂಪೇಗೌಡ ಯುದ್ಧದಲ್ಲಿ ಕಂಠೀರವ ನರಸರಾಜನ ಸೈನ್ಯಕ್ಕೆ ಸೋತನೆಂದು ಬರೆದಿದೆ. ಆದರೆ ಸಂಬಂಧಪಟ್ಟ ಘಟನಾವಳಿಗಳು ಮತ್ತು ಶಾಸನಗಳಲ್ಲಿ ಇಮ್ಮಡಿ ಕೆಂಪೇಗೌಡನ ಈ ಸೋಲಿನ ಬಗ್ಗೆ ಪೂರಕ ಸಾಕ್ಷ್ಯಾಧಾರಗಳಿಲ್ಲ. ಇಂತಹ ಶಾಸನೋಕ್ತ ವ್ಯತ್ಯಾಸಗಳನ್ನು ಬೆಂಗಳೂರು ಬಖೈರು ಗಳಿಂದಲೂ ತಿಳಿದು ಬರುತ್ತದೆ.

ಅಭಿವೃದ್ಧಿಯತ್ತ ಸಾಗಿದ್ದ ಇಮ್ಮಡಿ ಕೆಂಪೇಗೌಡನ ರಾಜ್ಯಾಡಳಿತದ ಕಾಲದಲ್ಲಿ ಅವನ ಮಕ್ಕಳಾದ ಹೊನ್ನಪ್ಪಗೌಡ ಮತ್ತು ಮುಮ್ಮಡಿ ಕೆಂಪೇಗೌಡರಿಗೆ ಮನಸ್ತಾಪ ಉಂಟಾಯಿತು. ಇದರ ಪರಿಹಾರಕ್ಕೆ ಇಮ್ಮಡಿ ಕೆಂಪೇಗೌಡನು ಹೊನ್ನಪ್ಪಗೌಡನಿಗೆ ಹುಲಿಕಲ್ಲು ಮತ್ತು ಭೈರವನದುರ್ಗಗಳ ಪ್ರದೇಶಗಳನ್ನು ನೀಡಿದ್ದು, ಆ ಕಾಲದಿಂದ ಹುಲಿಕಲ್ಲು ಸಂಸ್ಥಾನ ಎಂಬ ಪ್ರತ್ಯೇಕ ರಾಜ್ಯಾಡಳಿತ ಪ್ರದೇಶ ಅಸ್ತಿತ್ವಕ್ಕೆ ಬಂದಿತು ಎಂದು, ಕ್ಯೂಜೆಎಂಎಸ್, ಸಂಪುಟ XIII ನಂ. ೪ ಪುಟ ೭೫೯ರಲ್ಲಿ ಉಲ್ಲೇಖಗೊಂಡಿದೆ.

ಇಮ್ಮಡಿ ಕೆಂಪೇಗೌಡನನ್ನು ನಮ್ಮ ಜನಪದರು ಹೊಗಳಿರುವಷ್ಟು ಇನ್ಯಾರನ್ನು ಹೊಗಳಿಲ್ಲ. ಇವನ ರಾಜಕೀಯ, ಸಾಮಾಜಿಕ ನಡವಳಿಕೆಗಳು ಜನರ ಅಭಿವೃದ್ಧಿ ಪರವಾಗಿದ್ದು ಶೂರನೂ, ರಾಜಕೀಯ ಮತ್ಸದ್ದಿಯೂ ಆಗಿದ್ದು ಅವನ ಕಾಲದ ಘಟನಾವಳಿಗಳಿಂದ ತಿಳಿದುಬರುತ್ತದೆ. ಆದರೆ ಈ ಬಗ್ಗೆ ಶಾಸನಗಳಲ್ಲಿ ಅಷ್ಟಾಗಿ ದಾಖಲಾಗಿಲ್ಲ.

ಮೈಸೂರು ಅರಸರು ಮಾಗಡಿ ಕೆಂಪೇಗೌಡ ಪ್ರಭುಗಳ ಕೊನೆಯ ಪ್ರಭುವಾಗಿದ್ದ ಕೆಂಪವೀರಪ್ಪಗೌಡನ ಮೇಲೆ ತೀವ್ರ ದ್ವೇಷವುಳ್ಳವರಾಗಿದ್ದು ಅವನ ಸಹೋದರ ಸಂಬಂಧಿಯಾದ ಹುಲಿಕಲ್ಲು ಸಂಸ್ಥಾನದ ಮುದ್ದಪ್ಪಗೌಡನನ್ನು ತಮ್ಮ ಪರ ಮಾಡಿಕೊಂಡು ಪಿತೂರಿ ಮಾಡಿ ಅವನಗೆ ಮುದ್ದುಕೃಷ್ಣಗೌಡ ಎಂದು ಹೊಸ ಹೆಸರಿಟ್ಟ ಮೈಸೂರು ರಾಜ ಮಾನ್ಯತೆ ನೀಡಿದರು. ನೆಲಪಟ್ನಕ್ಕೆ ಕೃಷ್ಣನಗರ (ಕೃಷ್ಣ ರಾಜಗಿರಿ) ಎಂದು ಕರೆಯಲಾಯಿತು.

ಕ್ರಿ.ಶ. ೧೭೨೮ರಲ್ಲಿ ಕೆಂಪೇಗೌಡ ನಾಡ ಪ್ರಭುಗಳ ಕೊನೆಯ ಅರಸನಾಗಿದ್ದ ಕೆಂಪವೀರಪ್ಪಗೌಡನ ಕಾಲದಲ್ಲಿ ಅವನ ರಾಜಧಾನಿಯಾಗಿದ್ದ ನೆಲಪಟ್ನದ ಮೇಲೆ ಬಹು ದೀರ್ಘಕಾಲದ ಒಂಬತ್ತು ತಿಂಗಳು ಯುದ್ಧ ನಡೆಯಿತು. ಆಗ ಮೈಸೂರಿನ ದೊಡ್ಡಕೃಷ್ಣರಾಜ ಒಡೆಯರ್ ಸೇನೆಯ ಮುಂದಾಳತ್ವ ವಹಿಸಿದ್ದವನು ದಳವಾಯಿ ದೇವರಾಜಯ್ಯ. ಮೈಸೂರು ಸೇನೆಗೆ ನೆಲಪಟ್ನದ ಸಾವನದುರ್ಗದ ರಹಸ್ಯ ನೆಲಗಳು ಮತ್ತು ರಹಸ್ಯ ಮಾರ್ಗಗಳನ್ನು ಕೆಂಪವೀರಪ್ಪಗೌಡನ ಸೇನೆಯಲ್ಲಿದ್ದ ಅಸಂತೃಪ್ತ ಅಧಿಕಾರಿಗಳು ಹಾಗೂ ಅವನ ಆಪ್ತ ಮಂತ್ರಿಯೂ ಆಗಿದ್ದ **ಅಣ್ಣಾಜಿರಾಯ** ದ್ರೋಹ ಬಗೆದದ್ದರಿಂದ ಕೆಂಪವೀರಪ್ಪಗೌಡನ ನಿಷ್ಠಾವಂತ ಹಾಗೂ ದಕ್ಷ ಸೈನ್ಯಾಧಿಕಾರಿಯಾಗಿದ್ದ **'ವೀರಭದ್ರ ನಾಯಕ'**ನು ನೆಲಪಟ್ನದ **'ಚನ್ನಯ್ಯನ ಬಾಗಿಲು'** ಬಳಿ ಬಂಧಿಸಲ್ಪಟ್ಟನು. ಅದೇ ರೀತಿ ಕೆಂಪವೀರಪ್ಪಗೌಡನ ಬಗ್ಗೆ ಗುಪ್ತ ಮಾಹಿತಿಯನ್ನು ಮೈಸೂರು ಸೈನ್ಯಕ್ಕೆ ನೀಡಿದ್ದರಿಂದ ನೆಲಪಟ್ನದಲ್ಲಿಯೇ ಅವನ ಬಂಧನವೂ ಆಯಿತು. ಈ ರೀತಿ ಬಂಧನಕ್ಕೊಳಗಾದ ಕೊನೆಯ (ಯಲಹಂಕ/ಮಾಗಡಿ) ಕೆಂಪವೀರಪ್ಪಗೌಡ ಪ್ರಭುವಿನ ಬಂಧನದಿಂದ ಅವರ ವಂಶದ ಆಳ್ವಿಕೆಯೂ ಕೊನೆಗೊಂಡಿತು. ಬಂಧನದ ನಂತರದ ಅವನನ್ನು ಶ್ರೀರಂಗಪಟ್ಟಣದ ಬಳಿ ಸೆರೆಯಲ್ಲಿಟ್ಟರು. ಕೊನೆಗೆ ಅವನು ಸೆರೆಯಲ್ಲಿಯೇ ಮರಣ ಹೊಂದಿದನು. ಮೈಸೂರು ರಾಜರ ವಂಶಾವಳಿ ಸಂಪುಟ ೧ ಪುಟ ೧೬೦–ಮೈಸೂರು ದೊರೆಗಳ ಪೂರ್ವ ಇತಿಹಾಸ ಪುಟಗಳು–೩೫–೩೬ ರಲ್ಲಿ ವಿವರಗಳಿವೆ. ಕೆಂಪವೀರಪ್ಪ ಗೌಡನು ಮೊದಲಿಗೆ ಮೈಸೂರು ರಾಜ್ಯದ ಅಧೀನತೆಯನ್ನು ಕ್ರಿ.ಶ. ೧೭೧೪ರಲ್ಲಿ ಒಪ್ಪಿಕೊಂಡಿದ್ದು ನಂತರದಲ್ಲಿ ಕ್ರಿ.ಶ. ೧೭೧೫ರಲ್ಲಿ ತಿರುಗಿಬಿದ್ದು, ಸ್ವತಂತ್ರ ಆಡಳಿತ ಘೋಷಿಸಿ ಕೊಂಡದ್ದನೆಂದು ಹೇಳಲಾಗಿದೆ. ನಂತರದಲ್ಲಿ ಕೆಂಪವೀರಪ್ಪ ಗೌಡನು ಮೈಸೂರು ಅರಸರೊಂದಿಗೆ ನಡೆಸಿದ ಪತ್ರ ವ್ಯವಹಾರ ದಲ್ಲಿ ಒಂದು ಪತ್ರದ ಒಕ್ಕಣೆಯನ್ನು ಅವನ ಅತ್ಯಂತ ಆಪ್ತನಾಗಿದ್ದ, ಮಂತ್ರಿಯಾಗಿದ್ದ ಅಣ್ಣಾಜಿರಾಯನು ಮೋಸ ದಿಂದ ತಿದ್ದುಪಡಿ ಮಾಡಿದ್ದು 'ಮೈಸೂರು ಅರಸರು ಕುಂಬಾರರಿಗೆ ಸೇರಿದವರೆಂದು ಇದ್ದು;ಅವಮಾನ ಮಾಡು ವಂತಿದ್ದುದು ಮೈಸೂರು ಅರಸರ ಕೋಪಕ್ಕೆ ಕಾರಣವೆಂದು ಬೆಂಗಳೂರು ವಿಶ್ವವಿದ್ಯಾಲಯದವರು ಸಂಗ್ರಹಿಸಿ ಪ್ರಕಟಿಸಿರುವ ಜಾನಪದ ಸಂಪುಟದಲ್ಲಿ ತಿಳಿಸಲಾಗಿದೆ.

ಶ್ರೀರಂಗಪಟ್ಟಣದ ಸೆರೆಯಲ್ಲಿದ್ದಾಗ ಕೆಂಪವೀರಪ್ಪ ಗೌಡನು ಹುಲಿಕಲ್ಲು ಸಂಸ್ಥಾನದ ದೊರೆಯಾಗಿದ್ದ ಹಾಗೂ ಕೆಂಪವೀರಪ್ಪಗೌಡನ ಸಹೋದರ ಸಂಬಂಧಿಯೂ ಆದ ಮುದ್ದಪ್ಪಗೌಡನಿಗೆ ಬರೆದ ಪತ್ರದಲ್ಲಿ ಅವನನ್ನು ಮುದ್ದುಕೃಷ್ಣ ಗೌಡ ಎಂಬ ಹೊಸ ಹೆಸರು ಬರೆದಿರುವುದು ಅವನ ಸಹಿ ಕೆಂಪಯ್ಯ ಎಂದಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಕೆಂಪವೀರಪ್ಪಗೌಡನಿಗೆ ಎಂಟು ಪುಟಗಳ ತಾಳೆಗರಿ ಪತ್ರ ಬರೆಯುವಷ್ಟು ಸೆರೆಮನೆಯಲ್ಲಿ ಅವಕಾಶ ಇತ್ತೇ? ಎಂಬ ಪ್ರಶ್ನೆಯೂ ಇದ್ದು ಅದಕ್ಕೆ ತಾರ್ಕಿಕ ಉತ್ತರ ಸಿಗುವುದಿಲ್ಲ.

ಕ್ರಿ.ಶ. ೧೭೨೮ರಲ್ಲಿ ಕೆಂಪವೀರಪ್ಪಗೌಡನ ಕಾಲದಲ್ಲಿ ರಾಜಧಾನಿಯಾಗಿದ್ದ ನೆಲಪಟ್ನದಲ್ಲಿದ್ದ ಮದ್ದುಗುಂಡು ತಯಾರಿಕಾ ಕೇಂದ್ರ, ಅರಮನೆ, ಅಧಿಕಾರಿಗಳ ಮನೆ, ಮಠಗಳು, ಜನವಸತಿಗಳು ನಾಶವಾಗಿದ್ದು ಈಗ ಈ ಎಲ್ಲ ಅವಶೇಷಗಳು ಕೆಂಪೇಗೌಡ ಅರಣ್ಯ (ವನ್ಯ) ಧಾಮದಡಿಯಲ್ಲಿ ಹೂತು ಹೋಗಿವೆ. ಊರಿನ ಹೆಬ್ಬಾಗಿಲು, ಅರಮನೆಯ ದರ್ಬಾರ್ ಹಾಲಿನ ತಳಪಾಯ ನೆಲಪಟ್ನದ ಗತವೈಭವದ ಕುರುಹುಗಳಾಗಿದ್ದು, ಇಂದು ಅವೂ ಸಹ ನಾಶದ ಅಂಚಿನಲ್ಲಿದೆ.

ನೆಲಪಟ್ನ ಇಮ್ಮಡಿ ಕೆಂಪೇಗೌಡನ ನಂತರದ ಕಾಲಮಾನದಲ್ಲಿ ಹೆಚ್ಚು ಅಭಿವೃದ್ಧಿ ಹೊಂದಿತ್ತು. ಇಲ್ಲಿಯ ದುರ್ಗದ ನೈರುತ್ಯ ಭಾಗದಲ್ಲಿ ಇದ್ದ ದಿಡ್ಡಿಬಾಗಿಲು ಮೇಲೆ ಮುಖ್ಯ ಕೋಟೆಯೊಳಗೆ ಪ್ರವೇಶಿಸುವ ಗುಪ್ತ ಮಾರ್ಗ ಇತ್ತು. ಮತ್ತು ಅಪಾರ ಸಂಪತ್ತು ಸಂಗ್ರಹವಾಗಿತ್ತು ಎನ್ನಲಾಗಿದೆ. ಸಾವನದುರ್ಗ ಮತ್ತು ನೆಲಪಟ್ಟಣದ ಇತಿಹಾಸಗಳು ಒಂದಕ್ಕೊಂದು ಹಾಸು ಹೊಕ್ಕಾಗಿದೆ. ನೆಲಪಟ್ನವನ್ನು ವಶಪಡಿಸಿಕೊಂಡ ಮೈಸೂರು ಸೈನ್ಯ, ಅಲ್ಲಿದ್ದ ಸಂಪತ್ತು, ಬೊಕ್ಕಸ ವಶಪಡಿಸಿಕೊಂಡದ್ದಲ್ಲದೆ, ನೆಲಪಟ್ನ ಮತ್ತು ಮಾಗಡಿಗಳನ್ನು ಲೂಟಿ ಮಾಡಿ ಅಪಾರ ಸಂಪತ್ತನ್ನು ಮೈಸೂರಿಗೆ ಸಾಗಿಸಿ, ಬರಿದಾಗಿದ್ದ ತನ್ನ ಬೊಕ್ಕಸ ತುಂಬಿಸಿಕೊಂಡದ್ದು ತಿಳಿದು ಬರುತ್ತದೆ. ಇದನ್ನು ಮಾಗಡಿ ಪ್ರದೇಶದ ಜನಪದಗಳಲ್ಲಿಯೂ ಕೇಳಿಬರುತ್ತದೆ. ಆ ಕಾಲದ ಜನಪದದ ಒಂದು ಪದ ಈ ರೀತಿ ಇದೆ:

**"ಅಪ್ಪ ಮೈಸೂರು ಬೀಗ ತಂದು**
**ಮಾಗ್ಡಿಗಾಕಿದರು**
**ಮಾಗಡಿ ಪಟ್ನವೆಲ್ಲಾ ಮೈಸೂರು ಪಾಲಾಯಿತು"**

ವಿವರಗಳನ್ನು ಪರಿಶೀಲಿಸಿದರೆ ನೆಲಪಟ್ನ,ಕೆಂಪೇಗೌಡ ಪ್ರಭುಗಳ ಅರಸನಾದ ಇಮ್ಮಡಿ ಹಿರಿಯ ಕೆಂಪೇಗೌಡ (ಕ್ರಿ.ಶ. ೧೬೫೮–೧೬೬೭), ದೊಡ್ಡ ವೀರಪ್ಪಗೌಡ ಕ್ರಿ.ಶ. ೧೬೭೮–೧೬೯೭ ಮತ್ತು ಕೆಂಪವೀರಪ್ಪಗೌಡ ಕ್ರಿ.ಶ. ೧೬೯೭–೧೭೨೮ ಇವರುಗಳ ರಾಜಧಾನಿಯಾಗಿದ್ದ ನೆಲಪಟ್ನ ಮೈಸೂರು ಸೈನ್ಯಕ್ಕೆ ಒಂಬತ್ತು ತಿಂಗಳು ನಡೆದ ದೀರ್ಘಕಾಲದ ಯುದ್ಧದಲ್ಲಿ ಮೈಸೂರು ರಾಜರ ವಶವಾಯಿತು ಮತ್ತು ಅಪಾರ ಸಂಪತ್ತು ಲೂಟಿಯಾಯಿತು. ಯುದ್ಧದಲ್ಲಿ ಸೆರೆಸಿಕ್ಕ ಬ್ರಿಟೀಷ್ ಸೈನಾಧಿಕಾರಿಗಳನ್ನು ಮತ್ತು ಸೈನಿಕರನ್ನು ಸೆರೆಯಾಳಾಗಿ ನೆಲಪಟ್ನದ ಕೋಟೆಯೊಳಗೆ ಬಂಧನದಲ್ಲಿಡಲಾಗಿತ್ತೆಂದು ತಿಳಿದು ಬರುತ್ತದೆ.

ಹೈದರಾಲಿ ಕಾಲದಲ್ಲಿ ಅವನ ಸಂಸಾರ ಮತ್ತು ಬೊಕ್ಕಸ ನೆಲಪಟ್ನಕ್ಕೆ ಕ್ರಿ.ಶ. ೧೭೯೧ರಲ್ಲಿ ಸಾಗಿಸಲ್ಪಟ್ಟಿತು ಎಂದು ಹೇಳಲಾಗಿದೆ. ಆಂಗ್ಲೋ–ಮೈಸೂರು ಒಂದು ಮತ್ತು ಎರಡನೇ ಯುದ್ಧ ಕಾಲದಲ್ಲಿ ಹಾಗೂ ಕ್ರಿ.ಶ. ೧೭೯೪ರವರೆಗೆ ನೆಲಪಟ್ನ ಅಸ್ತಿತ್ವದಲ್ಲಿತ್ತು. ಇದರಿಂದ ನೆಲಪಟ್ನ ಒಂದು ಸುರಕ್ಷಿತ ಸೈನಿಕ ನೆಲೆ ಮತ್ತು ಪಟ್ಟಣವಾಗಿತ್ತು, ಎಂಬುದನ್ನು ರುಜುವಾತು ಪಡಿಸುತ್ತದೆ.

ಇತ್ತೀಚೆಗೆ ಸಾವನದುರ್ಗದ ಪ್ರದೇಶದ ಕೆಲವು ಭಾಗಗಳನ್ನು ಪ್ರವಾಸಿ ಸ್ಥಳವಾಗಿ ಮಾಡಲು ನಮ್ಮ ರಾಜ್ಯದ ಅರಣ್ಯ ಇಲಾಖೆಯು ಸರಕಾರದ ಒಪ್ಪಿಗೆಗಾಗಿ ಕೋರಿಕೆ ಸಲ್ಲಿಸಿದ್ದಾರೆಂದು ತಿಳಿದು ಬಂದಿದೆ. ಇದರಲ್ಲಿ ಸಾವನದುರ್ಗ ಬೆಟ್ಟದ ಬುಡದಲ್ಲಿದ್ದ ೨೧೧ ವರ್ಷಗಳ ಹಿಂದೆ ಅಸ್ತಿತ್ವದಲ್ಲಿದ್ದ ಹತ್ತು ಕಿ.ಮೀ. ವ್ಯಾಸದ ನೆಲಪಟ್ನವನ್ನು ಉತ್ಕನನ ಮಾಡಿ ಅಭಿವೃದ್ಧಿಪಡಿಸಬಹುದಾಗಿದೆ. ಕ್ರಿ.ಶ. ೧೭೯೪ರವರೆಗೂ ಇಲ್ಲಿ ಅರಮನೆ ಇತ್ತು ಹಾಗೂ ನಮ್ಮ ರಾಜ್ಯದ ರಾಜಧಾನಿಯೂ ಆದ ಬೆಂಗಳೂರನ್ನು ಸ್ಥಾಪಿಸಿದ ಕೆಂಪೇಗೌಡ ಪ್ರಭುಗಳ ಬಗ್ಗೆ ಪ್ರಮುಖಹಾಗೂ ಇತರ ಚಾರಿತ್ರಿಕ ಮಹತ್ವದ ನೆಲಪಟ್ನ ಕಾಣದಾಗಿದೆ.

ಕೆಂಪವೀರಪ್ಪಗೌಡನ ಆಸ್ಥಾನದಲ್ಲಿದ್ದ **'ಏಕಾಂಬರ ದೀಕ್ಷಿತ್'** ಎಂಬ ಕವಿಯು ರಚಿಸಿದ ಸಂಸ್ಕೃತ ಭಾಷೆಯ 'ವೀರಭದ್ರವಿಜಯಂ' ಎಂಬ ಕಾವ್ಯದಲ್ಲಿ ಸಾವನದುರ್ಗವನ್ನು ಅತಿಶಯವಾಗಿ ವರ್ಣಿಸಲಾಗಿದೆ. ಇವನಿಗೆ ಐದು ಗ್ರಾಮಗಳನ್ನು ದಾನವಾಗಿ ನೀಡಲಾಗಿತ್ತೆಂದು 'ಮಾಗಡಿ ಕೆಂಪೇಗೌಡ' ಎಂಬ ಎಸ್.ಕೆ. ನರಸಿಂಹಯ್ಯನವರ, ೧೯೨೪ರಲ್ಲಿ ಪ್ರಕಟವಾದ ಗ್ರಂಥದ ಪುಟ ೪೩ರಲ್ಲಿ ವರ್ಣನೆ ಇದೆ.

ಈ ಎಲ್ಲಾ ವಿಷಯಗಳನ್ನು ಪರಿಗಣಿಸಿ ನಮ್ಮ ರಾಜ್ಯ ಸರಕಾರ ಸಾವನದುರ್ಗಬೆಟ್ಟದ ಬುಡದಲ್ಲಿದ್ದ ನೆಲಪಟ್ನವನ್ನು ಉತ್ಕನನ ಮಾಡಿಸಿದರೆ ಚಾರಿತ್ರಿಕ ಮತ್ತು ಪ್ರೇಕ್ಷಣೀಯ ಪ್ರವಾಸಿ ತಾಣವನ್ನಾಗಿ ಮಾಡಬಹುದು. ಇಲ್ಲಿದ್ದ ಅರಮನೆಯ ವರ್ಣಚಿತ್ರ ಲಂಡನ್ ಮ್ಯೂಸಿಯಂನಲ್ಲಿದೆ ಎಂದು ಹೇಳಲಾಗಿದೆ. ಉತ್ಕನನದಿಂದ ಚರಿತ್ರೆಯಲ್ಲಿನ ಬಿಟ್ಟು ಹೋಗಿರುವ ಭಾಗಗಳನ್ನು ಹೊಂದಿಸಬಹುದಾಗಿದೆ.



## ಉಲ್ಲೇಖಗಳು ಮತ್ತು ಅಧ್ಯಯನದ ಗ್ರಂಥಗಳು


೧. ಎಪಿಗ್ರಾಫಿಕ ಕರ್ನಾಟಕ, ಎಕ ೯, ಮಾಗಡಿ ಅನುಬಂಧ.

೨. ಕರ್ನಾಟಕ ಸ್ಟೇಟ್ ಗೆಜೆಟಿಯರ್.

೩. ಕ್ಯೂಜೆಎಂಎಸ್, ಸಂಪುಟ XIII ನಂ. ೪, ಪುಟ ೭೩೧.

೪. ಕ್ಯೂಜೆಎಂಎಸ್, ೬, ಸಂಪುಟ XIII, ನಂ. ೪, ಪುಟ ೨೪೪.

೫. ಮೈಸೂರು ರಾಜರ ವಂಶಾವಳಿ, ಸಂಪುಟ ೧, ಪುಟ ೧೬೦, ಮೈಸೂರು ದೊರೆಗಳ ಪೂರ್ವ ಇತಿಹಾಸ, ಪುಟ ೩೫-೩೬.

೬ ಎ.ಕ. ೯, ಬೆಂಗಳೂರು ಅನುಬಂಧ, ಎಕ ೧೨, ಕುಣಿಗಲ್.

೭. ಹಿಸ್ಟರಿ ಆಫ್ ಮೈಸೂರು ಒಡೆಯರ್, ಪಿ. ಸತ್ಯನಾರಾಯಣ, ಪುಟ ೪೭.

೮. ಮೈಸೂರಿನ ಪ್ರತಿಭಟನೆ ಮರಾಠರ ಅತಿಕ್ರಮಣ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೧ ಡಾ. ಬಿ. ಮುದ್ದಾಚಾರಿ.

೯. ಕ್ಯೂಜೆಎಂಸ್, XIII, ನಂ. ೪, ಪುಟ ೭೫೯, ಕ್ಯೂಜೆಎಂಎಸ್, XIII, ಪುಟ ೭೨೫.

೧೦. ಡಾ. ಮುನಿರಾಜಪ್ಪನವರ ಪಿ.ಹೆಚ್.ಡಿ. ಪ್ರಬಂಧದ ಗ್ರಂಥ 'ಮಾಗಡಿ ಸೀಮೆ ಇತಿಹಾಸ-ಸಂಸ್ಕೃತಿ ಮತ್ತು ಅದರ ಉಲ್ಲೇಖಗಳು.

೧೧. ಕನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ೧೯೭೦, ಎಂ.ವಿ. ಕೃಷ್ಣರಾವ್, ಕೇಶವಭಟ್ಟ, ಪುಟ ೫೦೫-೫೦೬.

೧೨. ಕೆಂಪೇಗೌಡ ಜಯ ಪ್ರಶಸ್ತಿ, ಕರಲಮಂಗಳಂ, ಶ್ರೀಕಂಠಯ್ಯ.

೧೩. ಬೆಂಗಳೂರು ಜಿಲ್ಲೆಯ ಗೌಡ ಇತಿಹಾಸ, ಯಲಹಂಕ ವಂಶದ ಕೆಂಪೇಗೌಡ ದೊರೆಗಳ ಜೀವನ ಸಂಗತಿಗಳು, ಗ್ರಂಥದ ಭಾಗ-ಬೆಳ್ಳಿ ಬಾಗಿನ, ಒಕ್ಕಲಿಗರ ಸಂಘದ ರಜತ ಮಹೋತ್ಸವ ಸಂಚಿಕೆ, ಡಾ. ಎಂ.ಜಿ. ನಾಗರಾಜ್.

೧೪. ಶ್ರೀಮಾನ್ಮಹಾರಾಜರ ವಂಶಾವಳಿ, ಪುಟ ೧೦೬, ೧೧೦, ೧೧೧, ಮೈಸೂರು ದೊರೆಗಳ ಪೂರ್ವ ಇತಿಹಾಸ.

೧೫. 'ವೀರಭದ್ರ ವಿಜಯಂ' ಸಂಸ್ಕೃತ ಭಾಷೆಯ ಹಸ್ತ ಪ್ರತಿ (ಏಕಾಂಬರ ದೀಕ್ಷಿತ್) ಓರಿಯಂಟಲ್ ಲೈಬ್ರರಿ, ಮೈಸೂರು.

೧೬. 'ಕಟ್ಟಾಣೆ, ಸ್ಮರಣ ಸಂಚಿಕೆ, ರಾಮನಗರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, (ಕ್ರಿ.ಶ. ೨೦೧೦), ಡಾ. ಮುನಿರಾಜಕ್ಕ, ಡಾ. ಚಿಕ್ಕ ಪುಟ್ಟೇಗೌಡರಿಂದ ಸಂಪಾದಿತ.

೧೭. ಚಾರ್ಲ್ಸ್ ಬುಖಾನನ ವರದಿಗಳು, ಬ್ರಿಟೀಷ್ ಸರಕಾರದ ಆ ಕಾಲಕ್ಕೆ ಸಂಬಂಧಪಟ್ಟ ವರದಿಗಳು.

೧೮. ಅಧ್ಯಯನದ ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಮೈಸೂರು ಒಡೆಯರ/ರಾಜರ ವಂಶಾವಳಿ, ಹೈದರ್ ನಾಮ, ಪೇಶ್ವೆ (ಮರಾಠ) ದಪ್ತರ್ ವರದಿಗಳು, ಮೈಸೂರು ಚರಿತ್ರೆ ವಿ. ಶಾಮರಾವ್.

೧೯. ಬೆಂಗಳೂರು ಬಖೈರುಗಳು, ಬೆಂಗಳೂರು ವಿಶ್ವವಿದ್ಯಾನಿಲಯ ಪ್ರಕಟ.



# ದಾವಣಗೆರೆ ಪರಿಸರದಲ್ಲಿರುವ ಪಾಳೆಯಗಾರರ ನೆಲೆಗಳು

**ಭೋಜ್ಯನಾಯಕ ಎಲ್.ಎಚ್.***

**ಕ**ರ್ನಾಟಕದ ೩೦ ಜಿಲ್ಲೆಗಳಲ್ಲಿ ದಾವಣಗೆರೆಯು ಒಂದು. ಈ ಹಿಂದೆ ಮೈಸೂರು ಸಂಸ್ಥಾನದ ಭಾಗವಾಗಿದ್ದು ಫಲವತ್ತಾದ ಭೂಮಿ, ವಾಣಿಜ್ಯ, ಕೈಗಾರಿಕ, ಶೈಕ್ಷಣಿಕ ಮುಂತಾದ ಕ್ಷೇತ್ರಗಳಲ್ಲಿ ಪ್ರಸಿದ್ಧಿಯನ್ನು ಪಡದಿದೆ. ಈ ಜಿಲ್ಲೆಯು ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ ಸಂಘಟನೆಗಳಿಂದ ಪ್ರಸಿದ್ಧಿಯನ್ನು ಪಡೆದಿದೆ. ದಾವಣಗೆರೆ ಜಿಲ್ಲೆಗೆ ೮೦೦ ವರ್ಷಗಳ ಚರಿತ್ರೆ ಇದ್ದರೂ, ಕೇವಲ ಎರಡು ಶತಮಾನದಲ್ಲಿ ಅತ್ಯಂತ ಶೀಘ್ರವಾಗಿ ಅಭಿವೃದ್ಧಿ ಕಂಡಿದೆ.

ವಿಜಯನಗರ ಅವನತಿಯ ನಂತರ ಏಳಿಗೆಗೆ ಬಂದಂತಹ ಪಾಳೆಯಗಾರರು ಈ ಭಾಗದ ಸಂಸ್ಕೃತಿಯ ಜೊತೆಗೆ ರಾಜಕೀಯ ಐಕ್ಯತೆಯನ್ನು ತಂದುಕೊಟ್ಟ ಕೀರ್ತಿ ಇವರಿಗಿದೆ. ಇವರು ದೊಡ್ಡ ಸಾಮ್ರಾಜ್ಯವನ್ನು ನಿರ್ಮಿಸ ದಿದ್ದರೂ, ಸಾಮ್ರಾಜ್ಯವನ್ನು ರಕ್ಷಿಸುವಲ್ಲಿ ಇವರ ಹೋರಾಟದ ಶ್ರಮವಿದೆ. ಇವರಿಗೆ ಆದಾಯ ತರುವಂತಹ ಪ್ರದೇಶಗಳ ಕೊರತೆ ಇದ್ದರೂ ಸಹ ಇವರು ತಮ್ಮ ಪ್ರದೇಶದ ಭಾಗದಲ್ಲಿ ಸುಗಮವಾಗಿ ಆಡಳಿತವನ್ನು ನಡೆಸಿ ಸಂಸ್ಕೃತಿಯನ್ನು ರಕ್ಷಿಸಿದ ಕೀರ್ತಿಗೆ ಇವರು ಪಾತ್ರರಾಗಿದ್ದಾರೆ.

ಪ್ರಸ್ತುತ ದಾವಣಗೆರೆ ತಾಲ್ಲೂಕಿನಲ್ಲಿ ವಿವಿಧ ಭಾಗಗಳಲ್ಲಿ ಪಾಳೆಯಗಾರರು ತಮ್ಮ ನೆಲೆಗಳನ್ನು ಕಂಡುಕೊಂಡಿದ್ದರು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಕೊಡಗನೂರು, ಮುಕ್ತೇನಹಳ್ಳಿ, ದ್ಯಾಮವ್ವನಹಳ್ಳಿ, ಕಂದನಕೋವಿ, ಮತ್ತಿ, ನೀರ್ಥಡಿ, ಅಣಜಿ, ಮದಕರಿಪುರ, ಬೇತೂರು, ಮಾಯಕೊಂಡ ಮುಂತಾದವು.

**ಮತ್ತಿ:** ಈ ಗ್ರಾಮ ದಾವಣಗೆರೆಯಿಂದ ೩೦ ಕಿ.ಮೀ. ದೂರ ಇದ್ದು ಇಲ್ಲಿ ಮತ್ತಿ ತಿಮ್ಮಣ್ಣನಾಯಕ ಬಂದು ನೆಲೆಸಿದರು. ತಿರುಪತಿಯಿಂದ ಅಥವಾ ಜಡೆಕಲ್‌ನಿಂದ ೩ ಕುಟುಂಬಗಳು ಇಲ್ಲಿಗೆ ಬಂದು ನೆಲೆಸಿದರು. ಈ ಮೂರು ಕುಟುಂಬಗಳಲ್ಲಿ ಮತ್ತಿ ತಿಮ್ಮಣ್ಣನಾಯಕರ ಪೂರ್ವಜರು ಇಬ್ಬರು. ಹಿರಿಯ ಹನುಮಪ್ಪನಾಯಕರ ಮಗ ಮತ್ತಿ ತಿಮ್ಮಣ್ಣನಾಯಕ ಈ ಗ್ರಾಮದಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿದನು. ಇಲ್ಲಿ ಕೆರೆ ಹಾಗೂ ದೇವಾಲಯಗಳನ್ನು ಕಟ್ಟಿಸಿದ. ಚಿತ್ರದುರ್ಗ ಪಾಳೆಯಗಾರರ ಇತಿಹಾಸದಲ್ಲಿ ಮೊಟ್ಟಮೊದಲ ಪಾಳೆಯಗಾರ ಎಂಬ ಖ್ಯಾತಿಯನ್ನು ಪಡೆದ ವ್ಯಕ್ತಿಯಾಗಿದ್ದನು. ಇವರು ಚಿತ್ರದುರ್ಗವನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಚಿತ್ರದುರ್ಗ ಹಾಗೂ ದಾವಣಗೆರೆಯ ಪ್ರದೇಶದಲ್ಲಿ ತಮ್ಮ ಆಡಳಿತದಿಂದ ಪ್ರಭಾವಿತರಾಗಿದ್ದಾರೆ. ಈ ವಂಶದಲ್ಲಿ ಮತ್ತಿ ತಿಮ್ಮಣ್ಣನಾಯಕ ಕಸ್ತೂರಿರಂಗಪ್ಪನಾಯಕ, ಓಬಣ್ಣನಾಯಕ, ಇಮ್ಮಡಿ ಮದಕರಿನಾಯಕ, ಚಿಕ್ಕಣ್ಣನಾಯಕ, ಓಬಣ್ಣನಾಯಕ, ಮುಮ್ಮಡಿ ಲಿಂಗಣ್ಣನಾಯಕ ಇವರು ಚಿತ್ರದುರ್ಗದ ಪಾಳೆಯ ಗಾರರು ಎಂದು ಪ್ರಖ್ಯಾತಿಯನ್ನು ಪಡೆದಿದ್ದರೂ ಮೂಲತಃ ದಾವಣಗೆರೆ ತಾಲ್ಲೂಕಿನವರಾಗಿದ್ದಾರೆ. ಇವರ ಕಾಲದಲ್ಲಿ ಈ ಭಾಗಕ್ಕೆ ಹಲವಾರು ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ.

ಮತ್ತಿ ಗ್ರಾಮ ಪ್ರಾಂತ್ಯದ ಪಾಳೆಯಗಾರ ಮತ್ತಿ ತಿಮ್ಮಣ್ಣನಾಯಕರು ೧೪೪೮ರಲ್ಲಿ ಜನಿಸಿದರು. ೧೪೭೧ರಲ್ಲಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಸಾಳ್ವ ಇಮ್ಮಡಿ ನರಸಿಂಹರಾಯರ ಆಳ್ವಿಕೆ ಅವಧಿಯಲ್ಲಿ ಧೀರತನ, ಸಾಹಸ, ಸಮರ ಕೌಶಲ್ಯಗಳ ಬಗ್ಗೆ ಪರಿಶೀಲನೆ ಪರಿಗಣನೆಯೊಂದಿಗೆ ಹಲವು ಬಿರುದುಗಳು ಪಡೆದುಕೊಂಡಿದ್ದಾನೆ. ಕ್ರಿ.ಶ. ೧೫೧೨ರಲ್ಲಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಸಾಳ್ವ ನರಸಿಂಹರಾಯರು ದುರ್ಗಾಸೀಮೆಯ ಮತ್ತಿ ಪ್ರಾಂತ್ಯದ ಮೇಲೆ ತನ್ನ ಅಪಾರ ಸೈನ್ಯದೊಡನೆ ಮುತ್ತಿಗೆ ಹಾಕಲು ಚಿತ್ರದುರ್ಗದ ವ್ಯಾಪ್ತಿಯಲ್ಲಿ ಬಿಡಾರ ಹಾಕಿದ ಸಂದರ್ಭದಲ್ಲಿ ಮತ್ತಿ ತಿಮ್ಮಣ್ಣನಾಯಕ ಏಕಾಂಗಿಯಾಗಿ ವೀರವೇಷದಿಂದ ಹೋರಾಡಿದನು.

೧೫೩೩೧ರಲ್ಲಿ ವಿಜಯನಗರ ರಾಜರಿಗೆ ಗುಲ್ಬರ್ಗಾ ಪಾಳೆಯಗಾರರ ಕೋಟೆಯನ್ನ ಗೆದ್ದು ವಿಜಯನಗರ ಸಾಮ್ರಾಜ್ಯಕ್ಕೆ ಒಪ್ಪಿಸಿ ಹಗಲುಕಗ್ಗೊಲೆ ಬಿರುದು ಪಡೆದುದ್ದು ವೀರತೆಯ ಪ್ರತೀಕ, ತ್ಯಾಗದ ಪ್ರತೀಕ ಶೌರ್ಯ ಸಾಹಸದ ದ್ರುವತಾರ.

ಕ್ರಿ.ಶ. ೧೫೬೦೩ರಲ್ಲಿ ಹೊಳಲ್ಕೆರೆ ನಾಯಕತ್ವವನ್ನು ೧೫೬೧೪ರಲ್ಲಿ ಚಿತ್ರದುರ್ಗದ ನಾಯಕತ್ವವನ್ನು ಹಾಗೂ

* ಪಿಎಚ್.ಡಿ. ಸಂಶೋಧಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫೧೮ರಲ್ಲಿ ಹಿರಿಯೂರಿನ ನಾಯಕತ್ವವನ್ನು ಪಡೆದು ಆಳ್ವಿಕೆ ಮಾಡಲಾಯಿತು. ಕೋಟೆ ಕೊತ್ತಲಗಳನ್ನು ಬಲಪಡಿಸಿ ಕೆರೆ ಕಟ್ಟೆಗಳನ್ನು ಕಟ್ಟಿಸಿ ಪ್ರಜೋಪಕಾರಿ ಅನೇಕ ಕಾಮಗಾರಿಗಳನ್ನು ಮಾಡಿಸಿ ಜನಪ್ರಿಯ, ಬಲಿಷ್ಠ ಹಾಗೂ ದಕ್ಷ ಆಡಳಿತಗಾರ ನೆನಿಸಿದ. ಮತ್ತಿ ಗ್ರಾಮವು ವಿವಿಧ ಆಯಾಮಗಳಿಂದ ಪ್ರಾಮುಖ್ಯತೆಯನ್ನು ಪಡೆದಿದ್ದು ಕೆಲವೇ ದಿನಗಳಲ್ಲಿ ಈ ಗ್ರಾಮವು ಪಾಳೆಯಗಾರರಿಂದ ಅಸ್ತಿತ್ವವನ್ನು ಕಳೆದುಕೊಂಡಿತ್ತು.

**ನೀರ್ಥಡಿ:** ಚಿತ್ರದುರ್ಗದ ಪಾಳೆಯಪಟ್ಟಿನ ಮೂಲ ಪುರುಷನಾದ ಚಿತ್ರನಾಯಕನು ಆನೆಗೊಂದಿ ಕಡೆಯಿಂದ ಬಂದು ಉಚ್ಚಂಗಿದುರ್ಗದಲ್ಲಿ ಪಾಳೆಯಪಟ್ಟು ಸ್ಥಾಪಿಸಿ ಕೊಂಡರು. ಇವರು ಇಲ್ಲಿಂದಲೆ ಹಲವಾರು ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ. ಇವರು ಬಿಳಿಚೋಡನ್ನು ಗೆದ್ದು ಕೊಗುಂಡೆ, ಹೆಬ್ಬಾಳು ಮಾರ್ಗವಾಗಿ ನೀರ್ಥಡಿಗೆ ಬಂದು ಪಾಳೆಹಾಕಿದರು. ಚಿತ್ರನಾಯಕರಿಗೆ ಜಡವೀರನಾಯಕ, ಗಬ್ಬಗಡಿ ಓಬನಾಯಕ, ಓಬಳನಾಯಕ, ಚಿಕ್ಕ ಹನುಮಪ್ಪ ನಾಯಕ, ಚಿಕ್ಕ ಓಬಳನಾಯಕ, ಇವರೆಲ್ಲರೂ ಸೇರಿ ಒಂದು ಶತಮಾನಗಳ ಕಾಲ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದಾರೆ.

ಇಲ್ಲಿಗೆ ಬರುವಾಗ ಚಿತ್ರನಾಯಕರು ವಿರೂಪಾಕ್ಷ ಜೋಯಿಸರನ್ನು ಕರೆತಂದಿದ್ದರು, ಇವರಿಗೆ ಬಿಳಿಚೋಡನ್ನು ದಾನವನ್ನಾಗಿ ನೀಡಿರುವುದು ಕಂಡುಬರುತ್ತದೆ. ವಿರೂಪಾಕ್ಷ ಜೋಯಿಸರು ನಾಯಕರೊಂದಿಗೆ ಸೇರಿ ಅಹೋಬಲ ನರಸಿಂಹ ಸ್ವಾಮಿ ದೇವಾಲಯವನ್ನು ನಿರ್ಮಿಸಿದರು. ಈ ಗ್ರಾಮದಲ್ಲಿ ಕ್ರಿ.ಶ. ೧೫೧೯ರಲ್ಲಿ ಚಿತ್ರದುರ್ಗದ ಮೊದಲ ಪಾಳೆಯಗಾರ ಮತ್ತಿ ತಿಮ್ಮಣ್ಣನಾಯಕರು ಶ್ರೀರಂಗನಾಥಸ್ವಾಮಿ ದೇವಾಲಯ ಕಟ್ಟಿದರು. ಕ್ರಿ.ಶ. ೧೬ನೇ ಶತಮಾನದಲ್ಲಿ ಕಟ್ಟಿದ ದೇವಾಲಯ ಇಂದಿಗೂ ವಾಸ್ತುಶಿಲ್ಪಕ್ಕೆ ಮೆರಗು ತಂದುಕೊಡು ತ್ತದೆ. ೧೬೩೮ರಲ್ಲಿ ದಿಲವಾರ್ ಖಾನ್‌ನ ದಂಡು ಬಂದು ನೀರ್ಥಡಿ ಗ್ರಾಮ ಹಾಗೂ ಶ್ರೀರಂಗನಾಥಸ್ವಾಮಿ ದೇವಾಲಯ ವನ್ನು ಧ್ವಂಸ ಮಾಡಿದರು. ಚಿತ್ರದುರ್ಗದ ಪಾಳೆಯಗಾರ ಬಿಚ್ಚುಗತ್ತಿ ಭರಮಣ್ಣ ನಾಯಕರು ಅಧಿಕಾರಕ್ಕೆ ಬಂದ ನಂತರ ೧೬೯೮ರಲ್ಲಿ ಮುಸ್ಲಿಂರೊಂದಿಗೆ ಸಂಧಾನ ನಡೆಸಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದು ಕಂಡು ಬರುತ್ತದೆ. ಈ ದೇವಾಲಯಕ್ಕೆ ಎಮ್ಮೆಹಟ್ಟಿ ಗ್ರಾಮವನ್ನು ಉಂಬಳಿ ಹಾಕಿಸಿ ನೀಡಿರುವುದು ಶಾಸನಗಳಿಂದ ಕಂಡು ಬರುತ್ತದೆ. ಈ ಶಾಸನವನ್ನು ಶ್ರೀರಂಗನಾಥಸ್ವಾಮಿ ದೇವಾಲಯ ದಲ್ಲಿ ಈಗಲೂ ಕಾಣಬಹುದು. ಇಲ್ಲಿ ಪಾಳೆಯಗಾರರ ಕಾಲದ ೨ ಆಂಜನೇಯ ಮೂರ್ತಿಗಳಿವೆ.

**ಮದಕರಿಪುರ:** ಕೊಡಗನೂರು ಸೀಮೆಗೆ ಸೇರಿದ್ದ ಈ ಗ್ರಾಮವನ್ನು ಮಲ್ಲನಹಳ್ಳಿ ಎಂದು ಕರೆಯುತ್ತಾರೆ. ಕ್ರಿ.ಶ. ಸು. ೧೭೮ರಲ್ಲಿ ಮದಕರಿನಾಯಕನು ಈ ಹಳ್ಳಿಯನ್ನು ಪುನರ್ ನಿರ್ಮಿಸಿ ಮದಕರಿಪುರವೆಂದು ನಾಮಕರಣ ಮಾಡಿದರು. ನಂತರ ಶ್ರೀ ಶ್ಯಾಮಚಾರಿ ಎನ್ನುವವರಿಗೆ ಅಗ್ರಹಾರವನ್ನಾಗಿ ಉಂಬಳಿ ಹಾಕಿದ್ದನೆಂದು ತಿಳಿಯುತ್ತದೆ.

**ಬೇತೂರು:** ಪಾಂಡ್ಯರ ರಾಜಧಾನಿಯಾಗಿದ್ದ ಈ ಗ್ರಾಮ ಪಾಂಡ್ಯರ ಕಾಲದಲ್ಲಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಆದರೆ ಪಾಳೆಯಗಾರರ ಕಾಲದಲ್ಲಿ ಬೇತೂರು ಗ್ರಾಮ ತನ್ನ ವೈಭವವನ್ನು ಕಳೆದುಕೊಂಡಿತ್ತು. ಬಿಚ್ಚುಗತ್ತಿ ಭರಮಣ್ಣ ನಾಯಕರು ತಮ್ಮ ಬಾಲ್ಯದ ಸ್ನೇಹಿತನಾದ ಓಬಳಪ್ಪನವರನ್ನು ಈ ಭಾಗದ ಅಧಿಕಾರಿಯನ್ನಾಗಿ ನೇಮಿಸಿದ. ಮುಂದೆ ಓಬಳಪ್ಪ ನವರ ನೆರವಿನಿಂದ ವೆಂಕಣ್ಣ ಬೇತೂರು ಕೋಟೆಯನ್ನು ದುರಸ್ತಿಗೊಳಿಸಿದನೆಂದು ತಿಳಿಯುತ್ತದೆ.

**ಆಲೂರು:** ಹರಪನಹಳ್ಳಿ ಪಾಳೆಯಗಾರರಿಗೆ ಸದಾ ಅಣಜಿ, ಬಿಳಿಚೋಡು, ಆಲೂರುಗಳು ಸಮೀಪವಿದ್ದುದರಿಂದ ಪಾಳೆಯಗಾರರು ಇಲ್ಲಿಯ ಕೋಟೆಗಳ ಮೇಲೆ ಸದಾ ತೋಪುಗಳನ್ನು ಇಡುತ್ತಿದ್ದರು. ಚಿಕ್ಕಣ್ಣನಾಯಕರ ಕಾಲದಲ್ಲಿ ಕಣಕುಪ್ಪೆ ಅತ್ಯಂತ ವೈಭವದ ಸ್ಥಿತಿಯಲ್ಲಿದ್ದಾಗ ಆಲೂರು, ಕಣಕುಪ್ಪೆ ಚಿತ್ರನಾಯಕನ ಆಡಳಿತಕ್ಕೆ ಒಳಪಟ್ಟಿತ್ತು. ನಂತರ ಚಿತ್ರದುರ್ಗ ಹೈದರನ ಕೈ ವಶವಾದಾಗ ಕಣಕುಪ್ಪೆಯಲ್ಲಿ ಸೈಯದ್ ಹುಸೇನಿಯನ್ನು ಕಿಲ್ಲೇದಾರನನ್ನಾಗಿ ನೇಮಿಸಿದ್ದರು. ಈತನು ಆಲೂರಿನಲ್ಲಿರುವ ತೋಪುಗಳನ್ನು ಕಣಕುಪ್ಪೆಗೆ ತರಿಸಿಕೊಂಡಿದ್ದನು.

**ಪಾಮೇನಹಳ್ಳಿ:** ದಾವಣಗೆರೆ ತಾಲ್ಲೂಕಿನಲ್ಲಿ ಕಂಡು ಬರುವ ಈ ಹಳ್ಳಿಯಲ್ಲಿ ಪಾಳೆಯಗಾರರ ವಂಶಸ್ಥರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಅಲ್ಲಿರುವ ವೀರಗಲ್ಲುಗಳು ಮತ್ತು ಶಾಸನಗಳ ಪ್ರಕಾರ ಪಾಮೇನಾಯಕ, ವೀರನಾಯಕ, ತೊಂಬ್ಲಿನಾಯಕ, ರುದ್ರನಾಯಕ, ಹನುಮನಾಯಕ ಇವರ ವೀರಗಲ್ಲುಗಳೆಂದು ಕಂಡುಬರುತ್ತದೆ. ಆಲೂರು, ಕಾಡಜ್ಜಿ, ದೀಟೂರು, ಕುರುವತ್ತಿ, ಆನೆಗೊಂದಿ ಗ್ರಾಮಗಳು ಈ ಪಾಳೆಯಗಾರರ ಹೊಸ ಶಾಖೆ ಇದೆ ಎಂದು ತಿಳಿದು ಬರುತ್ತದೆ.

ಆಲೂರಿನಿಂದ ದೀರ್ಘಕಾಲ ಆಳ್ವಿಕೆ ಮಾಡಿದ ಇವರು ಆಲೂರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಹಲವಾರು ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ. ಆಲೂರಿನಲ್ಲಿ ಕೋಟೆ, ವೀರಗಲ್ಲುಗಳು, ಶಿಲಾಶಾಸನಗಳು, ಮಹಾಸತಿ ಶಿಲ್ಪಗಳು, ಕೋಟೆಯ ಮೇಲೆ ಸ್ತ್ರೀದೇವತೆಯ ಗುಡಿ ಮುಂತಾದ ಅನೇಕ ಪ್ರಾಚ್ಯಗಳು ಕಂಡುಬಂದಿವೆ. ಮೂರು ಶತಮಾನಗಳ ಕಾಲ ಯಶಸ್ವಿಯಾಗಿ ಆಳ್ವಿಕೆ ನಡೆಸಿ ಪ್ರಜಾಹಿತ ಕಾರ್ಯ ಮಾಡಿದರು. ಆಲೂರಿನಲ್ಲಿ ಅಭೇದ್ಯ ಕೋಟೆ

ನಿರ್ಮಿಸಿ ಅಕ್ಕಪಕ್ಕದ ನಾಡಪ್ರಭುಗಳಿಗೆ ಸಿಂಹಸ್ವಪ್ನರಾದರು. ಆಲೂರು ಕೋಟೆಯ ಅವಶೇಷಗಳು ಬುರುಜು, ಬತೇರಿ ಅನೇಕ ಕಾಲಘಟ್ಟದ ವೀರಗಲ್ಲು, ಶಾಸನಗಳು ಇವೆ. ಈ ನಾಯಕ ರಾಜವಂಶವು ಅಸ್ತಿತ್ವವನ್ನು ಕಳೆದುಕೊಂಡಿತು. ಬೇಸತ್ತ ೫ ಜನ ಅಣ್ಣ ತಮ್ಮಂದಿರು ಸೊಸೆಯಂದಿರು ಮಕ್ಕಳೊಂದಿಗೆ ಎಲ್ಲರೂ ಒಟ್ಟಿಗೆ ಅಗ್ನಿಕುಂಡಕ್ಕೆ ಹಾರಿ ಪ್ರಾಣತ್ಯಾಗ ಮಾಡಿ ಕೊಂಡಿದ್ದು ದುರಂತವಾಗಿದೆ.

**ಮಾಯಕೊಂಡ:** ಇಟ್ಟಿಗೆಪುರದ ರಾಜ ತನ್ನ ಮಗಳು ಮಾಯಮ್ಮನಿಗೆ ಬಳುವಳಿಯಾಗಿ ನೀಡಿದ ಗ್ರಾಮ ಮತ್ತು ಮಟ್ಟಿಯ ತೆಗ್ಗಿನಲ್ಲಿರುವ ಊರು ಎರಡು ಕಾರಣಗಳಿಂದ ಮಾಯಕೊಂಡವೆಂದು ಹೆಸರಾಗಿದೆ. ಈ ಹಿಂದೆ ಹಲವಾರು ರಾಜವಂಶಗಳ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ವಿಜಯನಗರ ಸಾಮ್ರಾಜ್ಯ ಆಡಳಿತಾವಧಿಯಲ್ಲಿ ಈ ಊರು ಉತ್ತಮ ಸ್ಥಿತಿಯಲ್ಲಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ. ಈ ಊರಿನಲ್ಲಿ ಕೆತ್ತನೆಗಳಿಲ್ಲದೆ ಕಲ್ಲಿನ ಬಸವೇಶ್ವರ ದೇವಾಲಯವಿದೆ. ಈ ದೇವಾಲಯ ಪಾಳೆಯಗಾರರ ಕಾಲದ ಗುಡಿ ಎಂದು ತಿಳಿದುಬರುತ್ತದೆ. ಜೊತೆಗೆ ಈ ದೇವಾಲಯದಲ್ಲಿ ವೀರಗಲ್ಲು, ಮಾಸ್ತಿಗಲ್ಲು, ವಿಗ್ರಹಗಳು ಕೂಡ ಕಂಡುಬರುತ್ತದೆ. ಸುಮಾರು ಕ್ರಿ.ಶ. ೧೭೪೮ರಲ್ಲಿ ಚಿತ್ರದುರ್ಗದ ಪಾಳೆಯಗಾರ ಹಿರೇ ಮದಕರಿನಾಯಕನಿಗೂ ಹಾಗೂ ಹರಪನಹಳ್ಳಿಯ ಪಾಳೆಯ ಗಾರ ಸೋಮಶೇಖರನಾಯಕನಗೂ ಮಾಯಕೊಂಡದ ಪ್ರದೇಶದಲ್ಲಿ ಯುದ್ಧ ನಡೆಯಿತು. ಆ ಕಾಳಗದಲ್ಲಿ ಹಿರೇಮದಕರಿ ನಾಯಕ ಮರಣವನ್ನಪ್ಪಿದ ಹಾಗೂ ಮಾಯಕೊಂಡದ ಪ್ರದೇಶದಲ್ಲಿ ಶವಸಂಸ್ಕಾರ ಮಾಡಿ ಅಲ್ಲಿಯೇ ಸಮಾಧಿಯನ್ನು ಕಟ್ಟಲಾಯಿತು. ಈ ಸಮಾಧಿಯನ್ನು ಇಂದಿಗೂ ನಾವು ನೋಡಬಹುದು. ಹೀಗೆ ಮದಕರಿ ನಾಯಕನ ಮರಣದ ಸುದ್ಧಿಯನ್ನು ತಿಳಿದ ಕೆಳದಿ ಬಸಪ್ಪನಾಯಕನು ಕೊಲ್ಲೂರು ಮೂಕಾಂಬಿಕೆಗೆ ಬೆಳ್ಳಿ ತಟ್ಟೆಯನ್ನು ಕಾಣಿಕೆಯಾಗಿ ಕೊಟ್ಟಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಮಲೆನಾಡಿನ ಸಂಸ್ಥಾನಿಕರು ಮಾಯಕೊಂಡದ ಕೋಟೆಯನ್ನು ಮುತ್ತಿಗೆ ಹಾಕುವ ಸಂದರ್ಭದಲ್ಲಿ ಹಾಗೂ ಈ ಗ್ರಾಮದ ಕಾಟನಾಯಕನ ಮಗ ಭರಮಣ್ಣ ಎನ್ನುವವನು, ಶತ್ರುಗಳು ಕೋಟೆಗೆ ಮುತ್ತಿಗೆ ಹಾಕಿದಾಗ ಚಿತ್ರದುರ್ಗ ಸಂಸ್ಥಾನ ದಿಂದ ಸ್ವತಃ ನಾಯಕರೆ ತಮ್ಮ ಪಡೆಯೊಂದಿಗೆ ಮಾಯ ಕೊಂಡಕ್ಕೆ ಬರುವವರೆಗೂ ಕೋಟೆ ಶತ್ರುಗಳ ವಶವಾಗದಂತೆ ಸತತವಾಗಿ ಒಂದು ತಿಂಗಳ ಕಾಲ ವೀರಾವೇಶದಿಂದ ಶತ್ರುಗಳೊಡನೆ ಹೋರಾಡಿ ರಕ್ಷಿಸಿದರು.

ಕೋಟೆಕಾವಲಿನ ನಾಗಜ್ಜನಾಯಕ ಭರಮಣ್ಣನಾಯಕ ದಳವಾಯಿಗಳು ಇವರ ನೆನಪಿಗಾಗಿ ಭರಮಣ್ಣನಾಯಕ ವೀರ ಹನುಮಂತ ದೇವರಿಗೆ ಘಂಟೆಯನ್ನು ದಾನವಾಗಿ ನೀಡಿರುವುದು ತಿಳಿದುಬರುತ್ತದೆ. ಕಾಳಗದಲ್ಲಿ ಕೋಟೆಯನ್ನು ರಕ್ಷಿಸಲು ಮಾಯಕೊಂಡದ ವೀರ ಮಹಿಳೆಯರು ಸಾಮೂಹಿಕವಾಗಿ ಸೈನಿಕರಿಗೆ ಆಹಾರವನ್ನು ಪೂರೈಸುತ್ತಿದ್ದರು. ಹಾಗೂ ಶತ್ರುಗಳ ಮೇಲೆ ಎಣ್ಣೆ ಬಿಸಿನೀರು ಸುರಿಯುತ್ತಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ಒಟ್ಟಾರೆ ದಾವಣಗೆರೆ ತಾಲ್ಲೂಕಿನಲ್ಲಿ ಪಾಳೆಯಗಾರರ ನೆಲೆಗಳು ಕಂಡುಬಂದಿದ್ದು ಇವರು ನಾನಾ ಬಗೆಯ ಸವಾಲು ಗಳನ್ನು ಎದುರಿಸಿ ದಾವಣಗೆರೆ ತಾಲ್ಲೂಕಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ, ಕಲೆ, ವಾಸ್ತುಶಿಲ್ಪ, ಶೈಕ್ಷಣಿಕ ಹಲವಾರು ಕ್ಷೇತ್ರಗಳಲ್ಲಿ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಕರ್ನಾಟಕದ ಬಹುತೇಕ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದದ್ದು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ. ಇಂತಹ ಮಾತು ದಾವಣಗೆರೆ ಪಾಳೆಪಟ್ಟುಗಳಿಗೆ ಅನ್ವಯಿಸುತ್ತದೆ. ದಾವಣಗೆರೆ ಪಾಳೆಯಗಾರರ ಚರಿತ್ರೆಯನ್ನು ಕುರಿತು ಆಳವಾಗಿ ಅಧ್ಯಯನ ನಡೆಸಿದಾಗ ಅಂದಿನ ಸಮಾಜದ ನಾನಾ ಮುಖಗಳು ಪರಿಚಯ ನಮಗೆ ಸಿಗುತ್ತದೆ. ವಿಜಯನಗರ ಸಾಮ್ರಾಜ್ಯದ ಪರಂಪರೆ ಧ್ಯೇಯ ಉದ್ದೇಶಗಳನ್ನು ಚಾಚೂತಪ್ಪದೆ ಪಾಲಿಸಿಕೊಂಡು ಬಂದಿರುತ್ತಾರೆ. ಆದ್ದರಿಂದ ಈ ತಾಲ್ಲೂಕಿನಲ್ಲಿ ಕಂಡುಬರುವ ಪಾಳೆಯಗಾರರ ನೆಲೆಗಳು ಕರ್ನಾಟಕದ ಕನ್ನಡ ಚರಿತ್ರೆಯಲ್ಲಿ ಶ್ರೀಮಂತವಾಗುತ್ತದೆ.



## ಆಧಾರಸೂಚಿಗಳು


೧. ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ ೨-೩ (ಸಂ. ಡಾ. ಸೂರ್ಯನಾಥ ಕಾಮತ್).

೨. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿ.ವಿ.

೩. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಟಿ. ಗಿರಿಜಾ.

೪. ದಾವಣಗೆರೆ: ಇದು ನಮ್ಮ ಜಿಲ್ಲೆ, ಟಿ.ಗಿರಿಜಾ.

೫. ದಾವಣಗೆರೆ ಜಿಲ್ಲೆ ಇತಿಹಾಸದ ಕೆಲವು ಹೆಜ್ಜೆಗಳು, ಸಂತೇಬೆನ್ನೂರು ಸುಮತೀಂದ್ರ ನಾಡಿಗ್.

೬ ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಡಾ. ವಿರೂಪಾಕ್ಷಿ ಪೂಜಾರಹಳ್ಳಿ.

೭. ಮೈಸೂರು ಗೆಜೆಟೀಯರ್, ಭಾಗ ೫, ಸಿ.ಹಯವದನರಾವ್.



# ವಿಜಯನಗರ ಸಾಮ್ರಾಜ್ಯದ ರಾಜಧಾನಿ ವಿಜಯನಗರ ಪಟ್ಟಣದ ಉಪನಗರ ಕಮಲಾಪುರ

ಶಶಿಕಲಾ ರಾ. ಇಂಜನಿ*

ದಕ್ಷಿಣ ಭಾರತದ ಮಧ್ಯಕಾಲಿನ ಇತಿಹಾಸದಲ್ಲಿ ಪ್ರಸಿದ್ಧಿಯನ್ನು ಪಡೆದ ಅರಸು ಮನೆತನಗಳಲ್ಲಿ ವಿಜಯನಗರ ಸಾಮ್ರಾಜ್ಯವು ಒಂದು. ವಿಜಯನಗರ ಸಾಮ್ರಾಜ್ಯದ ಅರಸರು ವಿಜಯನಗರಪಟ್ಟಣ ಅಥವಾ ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಈ ಪ್ರದೇಶವು ಇಂದಿನ ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ೧೪ ಕಿ.ಮೀ. ದೂರದಲ್ಲಿ ಕಂಪ್ಲಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಪ್ರಾಚೀನ ವಿಜಯನಗರಪಟ್ಟಣದ ಅವಶೇಷಗಳ ಅತ್ಯಂತ ಸಮೀಪದಲ್ಲಿ ಕಮಲಾಪುರ ಗ್ರಾಮವಿದೆ. ವಿಜಯನಗರ ಪಟ್ಟಣವನ್ನು ವಿದ್ಯಾನಗರ, ಹಂಪೆ, ಪಂಪಾಕ್ಷೇತ್ರ, ಪಂಪಾಪುರ ಎಂದು ಶಾಸನದಲ್ಲಿ ಕರೆದಿರುವರು.[೧]

ರಾಜಧಾನಿಯನ್ನು ಸುತ್ತುವರಿದು ಅನೇಕ ಉಪನಗರಗಳಿದ್ದು ವಿರೂಪಾಕ್ಷಪುರ, ವಿಠಲಾಪುರ, ಕೃಷ್ಣಾಪುರ, ಅಚ್ಯುತಾಪುರ, ಕಮಲಾಪುರ, ನಿಂಬಾಪುರ, ವರದರಾಜಮ್ಮನ ಪಟ್ಟಣ, ತಿರುಮಲಾರಾಯಪುರ, ನಾಗಲಾಪುರ, ಮುಂತಾದವುಗಳನ್ನು ಕಾಣುತ್ತೇವೆ. ನಗರವು ಮನೆ, ದೇವಾಲಯ ಮಾರುಕಟ್ಟೆ ಮತ್ತು ಕಿರು ಕೈಗಾರಿಕೆ ಪ್ರದೇಶಗಳಿಂದ ಬೆಳವಣಿಗೆ ಹೊಂದಿದೆ.

ಈ ನಗರೀಕರಣದ ಇತಿಹಾಸವನ್ನು ಗಮನಿಸುವುದಾದರೆ, ಪ್ರಾಚೀನ ಕಾಲದ ಸಾಹಿತ್ಯ ಮತ್ತು ಗ್ರಂಥಗಳಲ್ಲಿ ನಗರೀಕರಣ ಕುರಿತು ಉಲ್ಲೇಖಗಳಿವೆ. ಭಾರತದಲ್ಲಿ ನಡೆಸಲಾದ ಅನೇಕ ಉತ್ಖನನದಲ್ಲಿ ನಗರಗಳ ವಿನ್ಯಾಸದ ಕುರುಹುಗಳು ದೊರೆತಿವೆ. ವಾಲ್ಮೀಕಿಯು ಅಯೋಧ್ಯ ನಗರದ ಬಗೆಗೆ ವಿವರಿಸಿದ್ದಾರೆ. ಅಯೋಧ್ಯ ನಗರವು ಚೌಕವಾಗಿದ್ದು ೧೨ ಯೋಜನೆಯಷ್ಟು ಉದ್ದ ಮತ್ತು ಅಗಲ ೩, ರಾಜಬೀದಿಯು ನಗರದ ಮಧ್ಯದಿಂದ ಹಾದು ಹೋಗುತ್ತದೆ. ಅದು ಮುಂದೆ ನಗರವನ್ನು ಸುತ್ತುವರೆದು ನಂತರ ಕೋಟೆ ಬಾಗಿಲನ್ನು ಸೇರುತ್ತದೆ. ಈ ಪಟ್ಟಣವು ಚೌಕವಾಗಿದ್ದು ಅಲ್ಲಿ ೭ ಅಂತಸ್ತಿನ ಮನೆಗಳನ್ನು ಕಾಣುತ್ತೇವೆ.[೨] ಬೌದ್ಧ ಸಾಹಿತ್ಯದಲ್ಲಿ ಹೇಳಿದ ಹಾಗೆ ನಿಗಮಗಳು, ಪುರಗಳು ಮತ್ತು ನಗರಗಳು ಎನ್ನುವುದಕ್ಕೆ ಅನೇಕ ಅರ್ಥಗಳಿವೆ. 'ಪುರ' ಪ್ರಥಮವಾಗಿ ಇದು ಕೋಟೆಯನ್ನು ಹೊಂದಿರಬೇಕು. ಈ ವಿಷಯವು ವೈದಿಕ ಸಾಹಿತ್ಯದಲ್ಲಿಯೂ ಹೇಳುತ್ತದೆ. 'ಪಾಲಿ' (ಗ್ರಂಥಗಳಲ್ಲಿ) ಹೇಳುವ ಹಾಗೆ ನಗರವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗುವುದು ಇವೆಲ್ಲವು ರಾಜಧಾನಿಯ ಆಡಳಿತಕ್ಕೆ ಒಳಪಡುತ್ತಿದ್ದವು. ಮಹಾನಗರವು ಒಂದು ಮುಖ್ಯ ನಗರವಾಗಿತ್ತು ಅಥವಾ ಮಹತ್ವದ ನಗರವಾಗಿತ್ತು.[೩]

ಇನ್ನೊಂದು ಕಡೆ 'ಪಾಲಿ' (Text) ಹೇಳುವ ಹಾಗೆ ಪಟ್ಟಣ ಸಮೀಪದಲ್ಲಿಯೇ ಕಾಡು ಇರುತ್ತಿದ್ದವು.[೪] ಅಮರಕೋಶದಲ್ಲಿ ಪಟ್ಟಣ ಅಥವಾ ನಗರ ಇದಕ್ಕೆ ಪರ್ಯಾಯವಾದ ಪದಗಳೆಂದರೆ ಪುರ್, ಪುರಿ, ನಗರಿ, ಎಂದು ಹೆಸರು ಇದರ ಉಪ–ನಗರಗಳು ಅಥವಾ ಸಖ–ನಗರಗಳ ಹೆಸರು ಪಟ್ಟಣ, ಪುತಭೆಧನ, ಸ್ಥಾನಿಯಾ, ಮತ್ತು ನಿಗಮ ಹೆಸರು ಮೂಲನಗರಕ್ಕೆ 'ಪುರಿ' ಎಂದು ಹೆಸರು. ಪ್ರಾಚೀನ ಕಾಲದಲ್ಲಿ ದೊಡ್ಡ ನಗರಗಳ ಅಥವಾ ಪುರಗಳ ಇದರ ಸಣ್ಣ ನಗರಗಳಾದ ದ್ರೋಣ–ಮುಖ, ಖಾರ್ವತಿಕ, ಸಮಗ್ರಹನ ಎಂದು ಇವುಗಳು ಸಖ–ನಗರಗಳಾಗಿದ್ದವು.[೫] ಮಾನಸಾರ ಮತ್ತು ಮಯಮತ ಗ್ರಂಥಗಳು ೮ ಪ್ರಕಾರದ ಗ್ರಾಮಗಳನ್ನು ಹೇಳುಲಾಗಿದೆ. ದಂಡಕ, ಸ್ವಸ್ತಿಕ, ಪ್ರಸ್ತರ, ಪ್ರಕೀರ್ಣಕ, ನಂದ್ಯಾವರ್ತ, ಪರಗ, ಪದ್ಮ, ಮತ್ತು ಶ್ರೀಪ್ರತಿಷ್ಠಿತ, ಶ್ರೀವತ್ಸ ಎಂದು ವಿಂಗಡಿಸಲಾಗಿದೆ.[೬] ಒಂದು ಗ್ರಾಮವನ್ನು ನಿರ್ಮಾಣ ಮಾಡಬೇಕಾದರೆ ಅಲ್ಲಿಯ ಭೂಮಿಯು ಚತುರಶ್ರ, ಆಯತ, ತ್ರಿಕೋಣ, ವರ್ತಲಾಕಾರ ಅಥವಾ ಮರ್ದಲಾಕಾರವಾಗಿದ್ದರೆ ಪ್ರಶಸ್ತವಾದುದೆಂದು ವಿಶ್ವಕರ್ಮ ವಾಸ್ತುಶಾಸ್ತ್ರದಲ್ಲಿ ಹೇಳಲಾಗಿದೆ.[೭] ಮೆಗಸ್ತನಿಸ್ ಹೇಳುವ ಪ್ರಕಾರ ಪಾಟಲಿಪುತ್ರ ನಗರವು ಚೌಕವಾಗಿದ್ದು ೮೦ ಉದ್ದ ಮತ್ತು ಅಗಲವನ್ನು ಹೊಂದಿತ್ತು. ಈ ನಗರಕ್ಕೆ ಕಟ್ಟಿಗೆಯ ಗೋಡೆಯನ್ನು ಸುತ್ತಲೂ ಕಟ್ಟಲಾಗಿತ್ತು. ಈ ಗೋಡೆ ಮಧ್ಯದಲ್ಲಿ ಸಣ್ಣ ಕಿಂಡಿಯನ್ನು ಬಿಡುತ್ತಿದ್ದರು. ಈ ಗೋಡೆಗೆ ೫೭೦ ಬುರುಜುಗಳು ಹೊಂದಿದ್ದು ೬೪ ಬಾಗಿಲಿಗಳನ್ನು

* ಸಿಂಹಾಸನ ಪೇಟೆ, ಗಜೇಂದ್ರಗಡ, ಗದಗ ಜಿಲ್ಲೆ–೫೮೨೧೧೪.

ಕಟ್ಟಲಾಗಿದೆ. ನಗರವನ್ನು "ಅಜಾತಶತ್ರುವಿನ" ಕಾಲದಲ್ಲಿ ಕ್ರಿ.ಪೂ. ೪ನೇ ಶತಮಾನದಲ್ಲಿ ನಿರ್ಮಿಸಲಾಗಿದೆ.[೮] ಅರ್ಥಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ನಗರ ಎನ್ನುವುದಕ್ಕೆ ಕೋಟೆ ಇರುತ್ತದೆ. ಈ ಕೋಟೆಯ ಒಳಗಡೆ ಮಧ್ಯದಲ್ಲಿ ಜನಪದರು ನೆಲೆ ಇರುತ್ತದೆ. ಹೀಗೆ ನಗರಕ್ಕೆ ಹೊಂದಿಕೊಂಡು 'ನಿಗಮ' ಇರುತ್ತದೆ. ಇದು ನಗರಕ್ಕೆ ಬೇಕಾದ ವಸ್ತುಗಳನ್ನು ರವಾನಿಸುವ ಕಾರ್ಯವನ್ನು ಮಾಡುತ್ತದೆ.

ತಕ್ಷಶಿಲೆಯಲ್ಲಿ ಮೌರ್ಯರ ಕಾಲದ ರಸ್ತೆಗಳ ಉದ್ದ ಪಕ್ಕದಲ್ಲಿ ಮನೆಗಳ ಸಾಲುಗಳನ್ನು ನೋಡುತ್ತೇವೆ. ವ್ಹಿಲರ್ ಅವರ ಉತ್ಖನನದಲ್ಲಿ ಗುರುತಿಸಿದ ಮನೆಗಳನ್ನು ಇಟ್ಟಿಗೆ, ಸುಟ್ಟ ಇಟ್ಟಿಗೆ, ಕಲ್ಲುಗಳನ್ನು ಕೂಡ ಬಳಸಿ ಕಟ್ಟುತ್ತಿದ್ದರು. ಹೀಗೆ ನಾವು ಪ್ರಾಚೀನ ಕಾಲದಿಂದಲೂ ನಗರ ಬೆಳವಣಿಗೆಯನ್ನು ಕಾಣುತ್ತೇವೆ. ಅದೇ ರೀತಿಯಾಗಿ ಮಧ್ಯಕಾಲಿನ ಇತಿಹಾಸದ ಕರ್ನಾಟಕದಲ್ಲಿ ವಿಜಯನಗರಪಟ್ಟಣ ಕುರಿತು ಅನೇಕ ಪ್ರವಾಸಿ ಕಥನದಲ್ಲಿ ಹೇಳಿದ್ದಾರೆ. ವಿಜಯನಗರದ ಸುತ್ತಲೂ ಕೋಟೆಗಳಿಂದ ಸುತ್ತುವರೆದಿದ್ದು ನಗರ ಮಧ್ಯದಲ್ಲಿ ನದಿ ಹರಿಯುತ್ತದೆ. ಒಂದು ಕಡೆ ದಟ್ಟವಾದ ಕಾಡು ಇದೆ ಎಂದು ಅಥೆನೇಷಿಯಸ್ ನಿಕಿಟನ್ ಹೇಳುವನು. ಅದೇ ರೀತಿ ದು ಆರ್ತಿ ಬಾರ್ಬೊಸ್ ವಿಜಯನಗರವು ಒಂದು ಕಡೆ ಕೋಟೆ, ನದಿ, ಮತ್ತೊಂದು ಕಡೆ ಪರ್ವತ ಇದೆ. ಪ್ರವಾಸಿ ಡೊಮಿಂಗೊ ಪ್ಯಾಸ ಹೇಳುವ ಹಾಗೆ ಈ ನಗರದ ಗಾತ್ರದ ಬಗೆಗೆ ಹೇಳಲು ಆಗುವುದಿಲ್ಲ. ಏಕೆಂದರೆ ಯಾವ ಸ್ಥಳದಿಂದಲೂ ಸಂಪೂರ್ಣವಾಗಿ ನೋಡಲು ಸಾಧ್ಯವಿಲ್ಲ. ಅವನು ಗುಡ್ಡವನ್ನು ಏರಿ ಅಲ್ಲಿಂದ ಕೆಲವು ಭಾಗವನ್ನು ನೋಡಲು ಸಾಧ್ಯವಾಯಿತು ಎಂದು ಹೇಳದ. ಈ ನಗರವು ಹಲವು ಬೆಟ್ಟ ಸಾಲುಗಳ ಮಧ್ಯದಲ್ಲಿದೆ. ರೋಮ್ ನಗರದಷ್ಟು ವಿಶಾಲವಾಗಿದೆ. ನಗರದಲ್ಲಿ ಮನೆಗಳು, ತೋಟಗಳು, ಅನೇಕ ಸಂಪತ್ಭರಿತ ತೋಟ ಗಿಡಗಳಿಂದ ಕೂಡಿದ್ದು ಅದು ದಟ್ಟವಾದ ಅರಣ್ಯದಂತೆ ಬೆಳಸಲಾಗಿದೆ.[೯]

ಒಂದನೇ ಬುಕ್ಕನು ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುತ್ತಿದ್ದನು. ನಂತರದ ಕಾಲದಲ್ಲಿ ವಿಜಯನಗರಪಟ್ಟಣ ಅಥವಾ ಹಂಪೆಯನ್ನ ಆಳ್ವಿಕೆ ಮಾಡುತ್ತಿದ್ದನು. ಈ ಪಟ್ಟಣದ ಸುತ್ತ ಕೋಟೆಯನ್ನು ಕಟ್ಟಿಸಿದನು. ನಂತರ ಸಾಮ್ರಾಜ್ಯ ಬೆಳದಂತೆ ಪಟ್ಟಣದ ರಕ್ಷಣೆಗೆ ಎರಡನೇ ಸುತ್ತೀನ ಕೋಟೆಯನ್ನು ಕಟ್ಟಲಾಯಿತ್ತು. ವಿಜಯನಗರಪಟ್ಟಣವು ಎರಡನೇ ಸುತ್ತಿನ ಕೋಟೆಗಳಿಂದ ಸುತ್ತುವರೆದಿತ್ತು. ಅದರಲ್ಲಿ ಕಮಲಾಪುರವು ಎರಡನೇ ಸುತ್ತಿನ ಕೋಟೆಯೊಳಗಡೆ ಇದೆ.[೧೦]

ಕಮಲಾಪುರದಲ್ಲಿರುವ (೧೫೦ ೧೪’ ರಿಂದ ೧೫೦ ೧೭” N, ೭೬೦ ೩೧’ ರಿಂದ ೭೬೦ ೪೦’ E,) ಕೇಂದ್ರ ಪ್ರಾಚ್ಯ ವಸ್ತುಸಂಗ್ರಹಾಲಯದ ಎದುರು ಇರುವ ಗುಂಡಿನ ಮೇಲಿರುವ ಅಚ್ಯುತದೇವರಾಯನು ಹೊರಡಿಸಿರುವ ಕ್ರಿ.ಶ. ೧-೪-೧೫೩೧ ಶಾಸನದಲ್ಲಿ ಕಮಲಾಪುರ ಗ್ರಾಮದ ಹೆಸರನ್ನು 'ಕಾಮಲಾಪುರ' ಎಂದು ಉಲ್ಲೇಖಿಸಲಾಗಿದೆ.[೧೧] ವಿಜಯನಗರ ಕಾಲದಿಂದಲೂ ಅನೇಕ ಬಡಾವಣೆಗಳು ಬೆಳೆದುಕೊಂಡು ಬಂದಿರುವ ಪುರಾವೆಗಳು ದೊರೆಯುತ್ತವೆ. ಈ ಬಡವಣೆಗಳು ಪೂರ್ವ – ಪಶ್ಚಿಮವಾಗಿ ಬೆಳೆದುಕೊಂಡು ಬಂದಿವೆ. ಚೌಡಿಕೇರಿ, ಮನ್ಮತ್ಕೇರಿ, ಹೀರೆಕೇರಿ, ಬಂಡೆಕೇರಿ, ತಿನ್ಮತೇರಿ, ಗೌನಲ್‌ಕೇರಿ, ಪಾಮಳಕೇರಿ, ಇಲ್ಲಿ ನಾಯಕರ ಜನಾಂಗದವರು ವಾಸಿಸುವ ಪ್ರದೇಶಗಳು.[೧೨]

ಕಮಲಾಪುರದ ವಾಯವ್ಯಕ್ಕೆ ಅಂದರೆ ಇಂದಿನ ಆನಂದ್ ಸಿಂಗ್ ಅವರ ಮನೆಯ ಪ್ರದೇಶವನ್ನು ವಿಜಯನಗರ ಕಾಲದಲ್ಲಿ ಇದನ್ನು 'ಕುಂಬಾರಕುಂಟೆ' ಎಂದು ಕರೆಯಲಾಗಿದೆ. ಕ್ರಿ.ಶ. ೩೦-೧೦-೧೫೧೮ರ ಕೃಷ್ಣರಾಯನ ಶಾಸನದಲ್ಲಿ 'ಕುಮರಗುಂಟೆ' ಎಂದು ಉಲ್ಲೇಖಿಸಿದೆ.[೧೩] ಕಮಲಾಪುರವು ವಿಜಯನಗರ ಕಾಲದಲ್ಲಿ ತುಂಬಾ ಹತ್ತಿರದ ಉಪನಗರವಾಗಿರುವುದರಿಂದ ಇದು ರಾಜಧಾನಿಗೆ ಬೇಕಾದ ವಸ್ತುಗಳನ್ನು ಸಾಗಿಸುವ ಪ್ರಾತಿನಿಧಿತ್ವವನ್ನು ಹೊಂದಿರುವ ಕೇಂದ್ರವಾಗಿತ್ತು. ಪ್ರಾಚೀನ ಕಾಲದಿಂದ ನಗರ ಅಂದರೆ ಕೋಟೆ, ಕೋಟೆ ಅಂದರೆ ನಗರ ಎಂದು ಎರಡಕ್ಕೂ ಒಂದೇ ಶಬ್ದವನ್ನು ಬಳಸಿರುವರು. ಅದೇ ವೈದಿಕ ಸಾಹಿತ್ಯದಲ್ಲಿ 'ಪುರ' ಎನ್ನುವ ಶಬ್ದವನ್ನು ನಂತರ ಆಧುನಿಕ ಸಂಸ್ಕೃತದಲ್ಲಿ ನಗರ ಹಾಗೂ ಕೋಟೆ ಎನ್ನುವ ಪದವನ್ನು ಬಳಸಿದರು. ಶತಮಾನಗಳಿಂದಲೂ ನಗರಗಳು ಕೋಟೆಗಳಿಂದ ಸುತ್ತುವರೆದಿರುವುದನ್ನು ಕಾಣುತ್ತೇವೆ.

ವಿಜಯನಗರ ಆಳ್ವಿಕೆಯ ನಂತರ ಕ್ರಿ.ಶ. ೧೭೦೩ರಲ್ಲಿ ಕಮಲಾಪುರವು ಕುರುಗೋಡನ್ನು ಆಳುತ್ತಿದ್ದ ಚೆನ್ನರಾಯನ ಆಡಳಿತಕ್ಕೆ ಒಳಪಟ್ಟಿತ್ತು. ಆದ್ದರಿಂದ ಇವನು ಈ ಪ್ರದೇಶದಲ್ಲಿ ಕೋಟೆಯನ್ನು ಕಟ್ಟಿಸಿದನು. ಈ ಕೊಟೆಯ ಕೆಲವೊಂದು ಭಾಗದ ಕುರುಹುಗಳು ಮಾತ್ರ ಇಂದು ದೊರೆಯುತ್ತದೆ.[೧೪] ಕಮಲಾಪುರದಲ್ಲಿ ಒಟ್ಟು ಎರಡು ಕೋಟೆ (೧೫° 18'8'N, ೭೬° ೨೮'೨೬'E) ಬುರುಜುಗಳನ್ನು ಕಾಣುತ್ತೇವೆ. ಹಳೇ ಬಸ್ ನಿಲ್ದಾಣದ ಬಳಿಯ ಮಾರುಕಟ್ಟೆಯ ಆವರಣದಲ್ಲಿ ಒಂದು ಬುರುಜು ಇದೆ. ಈ ಬುರುಜಿನ ಸುತ್ತಲೂ ಆವರಿಸಿದಂತೆ ಭಾಗಗಳಲ್ಲಿ ಮನೆಗಳು, ಅಂಗಡಿಗಳು, ಬೆಳೆದುಕೊಂಡಿವೆ. ಸಂತೆ ಬಜಾರಕ್ಕೆ ಮುಖ ಮಾಡಿಕೊಂಡಿರುವ ಬುರುಜಿನ ಮೇಲೆ ಎರಡು ಗೂಡುಗಳನ್ನು ನೋಡುತ್ತೇವೆ. ಒಂದು ಗೂಡಿನಲ್ಲಿ ಆಂಜನೇಯನ ಶಿಲ್ಪವಿದೆ. ಮತ್ತೊಂದು ಗೂಡಿನಲ್ಲಿ ನಾಗರ ಕಲ್ಲುಗಳಿವೆ. ಈ ಬುರುಜಿಗೆ ಹೊಂದಿ



ಹಂಪಿ ನಕ್ಷೆ



ಕಮಲಾಪುರ ನಕ್ಷೆ

ಕೊಂಡು ಬಲ ಭಾಗದಲ್ಲಿ ಕೋಟೆಯ ಗೋಡೆಯನ್ನು ಕಾಣುತ್ತೇವೆ. ಆದರೆ ಈ ಬಲ ಭಾಗ ಬಿದ್ದ ಕೋಟೆ ಗೋಡೆಯ ಭಾಗದಲ್ಲಿ ಒಂದು ಕಿರುದಾರಿಯನ್ನು ಮಾಡಿಕೊಂಡು ಅದರ ಮೂಲಕ ಊರಿನ ಜನರು ಓಡಾಡುತ್ತಾರೆ. ಕೋಟೆ ಗೋಡೆಯ ಭಾಗಗಳು ಬಿದ್ದಿರುವುದರಿಂದ ಆ ಭಾಗವನ್ನು ಮೈದಾನವನ್ನಾಗಿ ಉಪಯೋಗಿಸುತ್ತಿದ್ದಾರೆ. ಅದೇ ರೀತಿ ಮುಂದೆ ಸಾಗಿದರೆ ನಗರೇಶ್ವರ ದೇವಾಲಯವು ಕೋಟೆ ಗೋಡೆಯ ಒಂದು ಭಾಗದಲ್ಲಿ ಕಂಡುಬರುತ್ತದೆ.

ಊರಿನ ಒಳಗಡೆ ಪೂರ್ವ ದಿಕ್ಕಿನಲ್ಲಿ ಮತ್ತೊಂದು ಕೋಟೆಯ ಬುರುಜನ್ನು ಕಾಣುತ್ತೇವೆ. ಈ ಬುರುಜಿನ ಮೇಲಿನ ತುದಿಯಲ್ಲಿ ಕೋವಿನ ರೀತಿಯ ಮೂರು ಕಲ್ಲುಗಳವೆ. ಅದೇ ಬುರುಜಿನ ಗೋಡೆಯ ಮಧ್ಯದಲ್ಲಿ ಒಂದು ಗೂಡಿನ ರೀತಿಯ ಚಿಕ್ಕ ದ್ವಾರವಿದೆ. ಈ ದ್ವಾರದ ಒಳಗಡೆ ಎಡ ಭಾಗದಲ್ಲಿ ಮೇಲೆ ಹತ್ತಲು ಮೆಟ್ಟಿಲುಗಳಿವೆ ಹಾಗೆಯೇ ಬುರುಜಿನ ಹಿಂಭಾಗದಲ್ಲಿ ಇಳಿಯಲು ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳನ್ನು ಮನೆಯ ಮಾಳಿಗೆಯ ಮೆಟ್ಟಿಲಾಗಿ ಬಳಸಿಕೊಂಡಿದ್ದಾರೆ. ಈ ಬುರುಜಿನ ಸುತ್ತಮುತ್ತಲೂ ಮನೆಗಳಿವೆ. ಈ ಎರಡು ಬುರುಜುಗಳು ವೃತ್ತಾಕಾರವಾಗಿದ್ದು ೬೦ ಅಡಿ ಎತ್ತರ, ೧೨೫ ಅಡಿ ಸುತ್ತಳತೆಯನ್ನು ಹೊದಿಂದೆ. ಒಟ್ಟು ಕಮಲಾಪುರ ಕೋಟೆಯು ಸುಮಾರು ೨೦-೨೫ ಎಕರೆ ಪ್ರದೇಶದ ವಿಸ್ತೀರ್ಣತೆಯನ್ನು ಹೊಂದಿದೆ. ಕಮಲಾಪುರವು ವಿಜಯನಗರ ಕಾಲದಲ್ಲಿ ಸಮೃದ್ಧವಾದ ಉಪನಗರವಾಗಿ ಬೆಳವಣಿಗೆಯನ್ನು ಹೊಂದಿತ್ತು. ಕಮಲಾಪುರ ಜನರಗೆ ಮುಖ್ಯವಾಗಿ ನೀರಿನ ವ್ಯವಸ್ಥೆಯನ್ನು ಹೊಂದಿದ ಗ್ರಾಮ. ಈ ಗ್ರಾಮದ ಪಶ್ಚಿಮಕ್ಕೆ ಒಂದು ಕೆರೆಯಿದೆ. ಇಲ್ಲಿಯ ನೀರಿನ್ನು ಗಾಮದ ಜನರು ವ್ಯವಸಾಯಕ್ಕೆ ಕುಡಿಯಲು ಮತ್ತು ಇತರೆ ಅವಶ್ಯ ಕೆಲಸಗಳಿಗೆ ಉಪಯೋಗಿಸುತ್ತಾರೆ.[೧೫]

ನಗರದ ಅಭ್ಯುದಯಕ್ಕೆ ಗ್ರಾಮ ವಿನಿಮಯ ಕೇಂದ್ರಗಳಾಗಿ ಕಾರ್ಯನಿರ್ವಹಿಸಿ ಪಟ್ಟಣದ ಅಭ್ಯುದಯಕ್ಕೆ ಸಹಾಯಕವಾಗಿತ್ತು. ಕಮಲಾಪುರವು ವಿಜಯನಗರಪಟ್ಟಣದ



ಕಮಲಾಪುರ ಕೋಟೆಯ ಬುರುಜಿನ ಮೆಟ್ಟಿಲು



ಕಮಲಾಪುರ ಕೋಟೆಯ ಬುರುಜು

ಬೆಳವಣಿಗೆಗಾಗಿ ವಾಣಿಜ್ಯ ಕಾರ್ಯದಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸುತ್ತಿತ್ತು. ಈ ಗ್ರಾಮವು ವಿಜಯನಗರಕ್ಕೆ ಅವಶ್ಯಕತೆ ಯಿರುವ ವಸ್ತುಗಳನ್ನು ಪೂರೈಸುವ ಕಾರ್ಯವನ್ನು ಮಾಡುತ್ತಿತ್ತು.

## ಆಧಾರಸೂಚಿ


೧. ವಾಸುದೇವನ್. ಸಿ. ಎಸ್, 'ವಿಜಯನಗರಪಟ್ಟಣ ಮತ್ತು ಅದರ ಉಪನಗರಗಳು', ದೇವರಕೊಂಡಾರೆಡ್ಡಿ (ಸಂ.) *ಹಂಪಿ ಸಂಪುಟ*, ಕಲೆ, ಕ್ರೀಡೆ ಮತ್ತು ಕೌಶಲ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬, ಪುಟ ೨೦೦.

೨. Pande. G. C, *Foundations of Indian Culture,* Vol. II,*(Dimensions of Ancient Indian Social History)* Motilal Banarsidass Publishers Private Limited Delhi, 1995, p.102.

೩. Allchin. F.R, *The Archaeology of Early Historic South Asia, The Emergence of Cities and States,* Cambridge University Press, 1995, p. 114.

೪. Indu Banga, *The City in Indian History,* Manohar Urban History Association of India 2005, p. 15.

೫. Ghosh A, *The City in Early Historical India*, Indian Institute of Advanced Study, Rashtrapati Nivas, Shimla 1990, pp. 41-45.

೬. ಅಪರ್ಣ. ಕೂ.ಸ, ಗ್ರಾಮಗಳ ವಿವಿಧ ಪ್ರಕಾರಗಳು, ಕೃಷ್ಣಮೂರ್ತಿ ಪಿ.ವಿ, ರಾಜೇಂದ್ರಪ್ಪ. ಎಸ್, *ಇತಿಹಾಸ ದರ್ಶನ*, ಸಂ. ೨೮, ಬೆಂಗಳೂರು, ೨೦೧೩, ಪು. ೨೩೨.

೭. ಅಪರ್ಣ. ಕೂ. ಸ, ಗ್ರಂಥೋಕ್ತ ಗ್ರಾಮ ವೈವಿಧ್ಯ, ಕೃಷ್ಣಮೂರ್ತಿ ಪಿ.ವಿ, ದೇವರಾಜಸ್ವಾಮಿ ಜಿ.ಕೆ, *ಇತಿಹಾಸ ದರ್ಶನ*, ಸಂ. ೨೭, ಬೆಂಗಳೂರು, ೨೦೧೨, ಪು. ೧೮೬.

೮. Pande. G. C, *Op.cit*, p.102.

೯. ವಿವೇಕ ರೈ. ಬಿ.ಎ, *ಪ್ರವಾಸಿ ಕಂಡ ವಿಜಯನಗರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫, ಪು. ೩೦.

೧೦. ಚನ್ನಬಸಪ್ಪ ಎಸ್. ಪಾಟೀಲ್, 'ವಿಜಯನಗರದ ಕೋಟೆ', ದೇವರಕೊಡರೆಡ್ಡಿ (ಸಂ.), *ಹಂಪಿ ಸಂಪುಟ*, ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ಪು. ೨೪೦.

೧೧. ಕನ್ನಡ ವಿಶ್ವವಿದ್ಯಾಲಯ *ಶಾಸನ ಸಂಪುಟ*.–೩, ಹಂಪಿ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ. ಹಂಪಿ, ೨೦೦೦, ಶಾಸನ ಸಂಖ್ಯೆ ೩೨೨.

೧೨. ವೀಣಾ ಎಂ.ಪಿ, ಮನೆ ಸಮಾಜ ಮತ್ತು ಸಂಸ್ಕೃತಿ (ಅಪ್ರಕಟಿತ ಎಂ.ಫಿಲ್. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೫, ಪು. ೩೪.

೧೩. ಕನ್ನಡ ವಿಶ್ವವಿದ್ಯಾಲಯ *ಶಾಸನ ಸಂಪುಟ*.–೩, ಪೂರ್ವೋಕ್ತ, ಸಂ. ೩೨೦.

೧೪. ಕೊಟ್ರೇಶ್. ಎಂ, 'ಕಮಲಾಪುರದ ಕೋಟೆ', *ದೇವರಕೊಂಡಾರೆಡ್ಡಿ (ಸಂ.), ಹಂಪಿ ಸಂಪುಟ*, ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧, ಪು. ೧೨೭.

೧೫. ವಾಸುದೇವನ್. ಸಿ.ಎಸ್, *ಹಂಪಿ ಪರಿಸರದ ಕೆರೆಗಳು*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧, ಪು. ೫೮.




# ಕಾವೇರಿ ನದಿ ತೀರ ಪ್ರದೇಶದ ಮೇಲೆ ಚೋಳರ ಧಾರ್ಮಿಕ ಜೀವನದ ಒಂದು ನೋಟ ವಿಶೇಷವಾಗಿ ಕಾಳಾಮುಖ ಪಂಥದ ಪಾತ್ರ

ಡಾ. ಆರ್. ಕವಿತಾ*

**ಸು**ಮಾರು ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಚೋಳರ ಯುಗವು ದಕ್ಷಿಣ ಭಾರತ ಇತಿಹಾಸದಲ್ಲಲ್ಲದೇ, ಕರ್ನಾಟಕ ಇತಿಹಾಸದ ಮೇಲೂ ಗಣನೀಯ ಪ್ರಭಾವ ಬೀರಿದೆ. ಕನ್ನಡ, ತಮಿಳು ಎರಡೂ ಭಾಷೆಗಳ ಬಳಕೆಯ ಕಾರಣದಿಂದ, ಅವರು ತಾವು ಗೆದ್ದ ಪ್ರದೇಶಗಳ ಸ್ಥಳೀಯರ ವಿಶ್ವಾಸವನ್ನು ಗಳಿಸುವಲ್ಲಿ ಸಫಲರಾದರು. ಅಲ್ಲದೇ, ಕನ್ನಡ ಹಾಗೂ ತಮಿಳು ಸಂಸ್ಕೃತಿಯನ್ನು ಬೆಸೆದು ಐಕ್ಯತೆಯನ್ನು ಮೂಡಿಸುವಲ್ಲಿ ಕಾರಣಕರ್ತರಾಗಿದ್ದಾರೆ. ಈಗಿನ ಮೈಸೂರು, ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಲಭ್ಯವಿರುವ ಸುಮಾರು ೭೪ ಶಿಲಾ ಶಾಸನಗಳು ನನ್ನ ಅಧ್ಯಯನದ ಮುಖ್ಯ ಆಧಾರವಾಗಿದೆ. ಶಾಸನಗಳು ತಮಿಳು, ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿವೆ. ಅಲ್ಲದೆ ಕನ್ನಡ ಮತ್ತು ತಮಿಳು ಮಿಶ್ರ ಭಾಷೆಗಳಲ್ಲೂ ಲಭ್ಯವಾಗಿವೆ. ಶಾಸನಗಳ ಸಹಾಯದಿಂದ ಈ ಪ್ರದೇಶಗಳ ಮೇಲೆ ಚೋಳರ ಆಳ್ವಿಕೆ ಕಾಲದ ಧಾರ್ಮಿಕ ಚಿತ್ರಣವನ್ನು ಅದರಲ್ಲೂ ವಿಶೇಷವಾಗಿ ಕಾಳಾಮುಖರ ಪಾತ್ರವನ್ನು ತಿಳಿಸುವ ಪ್ರಯತ್ನ ನನ್ನದಾಗಿದೆ.

ಶೈವ ಧರ್ಮವು ಈ ಪ್ರದೇಶದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಗಳಿಸಲು ಕಾರಣ ಈ ಭಾಗದ ಶ್ರೀಮಂತರು, ಸಾಮಂತರು, ಗಾವುಂಡರು ಸಣ್ಣ ಭೂ ಮಾಲಿಕರು, ಭೂ ಹಿಡುವಳಿದಾರರ ಒಕ್ಕೂಟ, ವ್ಯಾಪರ ಸಂಘಗಳು ಹಾಗೂ ಅಗ್ರಹಾರಗಳು ನೀಡಿದ ದೊಡ್ಡ ಮಟ್ಟದ ದಾನದತ್ತಿಗಳು. ದೇವಸ್ಥಾನದ ನಿರ್ಮಾಣ ಹಾಗೂ ಸಂರಕ್ಷಣೆಯ ಸಲುವಾಗಿ ಇಲ್ಲಿನ ಸುತ್ತೂರು[೧], ಎಣಗುಂಬ[೨] ಮಠಗಳು, ದೇವಸ್ಥಾನಗಳು ತೋರಿದ ಆಸಕ್ತಿ, ಶೈವ ಧರ್ಮವು ಇತರ ಧರ್ಮಗಳಿಗಿಂತ ಪ್ರಾಮುಖ್ಯತೆ ಹೊಂದಲು ಕಾರಣವಾಗಿದೆ.

ದೊಡ್ಡ ದೊಡ್ಡ ಮಾಂಡಲಿಕರು ತಮ್ಮ ಹೆಸರಿನಲ್ಲಿ ದೇವಸ್ಥಾನವನ್ನು ನಿರ್ಮಾಣ ಮಾಡುವುದು ಸರ್ವೆ ಸಾಮಾನ್ಯವಾಗಿ ಚೋಳರ ಕಾಲದಲ್ಲಿ ಕಾಣುತ್ತೇವೆ. ಆದರೆ, ಒಬ್ಬ ಸಾಮಾನ್ಯ ಭೂಮಾಲಿಕನು ತನ್ನ ಹೆಸರಿನಲ್ಲಿ ದೇವಸ್ಥಾನ ನಿರ್ಮಾಣ ಮಾಡಿದ. ಕ್ರಿ.ಶ. ೧೦೨೧ರ ನಂದಿಗುಂಡ ಶಾಸನವು[೩] ಮಲ್ಲಗಾವುಂಡನ ಹೆಸರಿನಲ್ಲಿ ನಿರ್ಮಾಣವಾಗಿರುವ ಮಲ್ಲೇಶರ ದೇವಾಲಯದ ಆಚಾರ್ಯರಿಗೆ ನೀಡಿದ ಭೂದಾನ, ಕೈಗಾಣ ಹಾಗೂ ನಿತ್ಯ ನೈವೇದ್ಯಕ್ಕೆ ನಂದಾದೀವಿಗೆಗೆ ಕೊಟ್ಟ ದಾನವನ್ನು ವಿವರಿಸುತ್ತದೆ. ಆದ್ದರಿಂದ ಗಾವುಂಡರು, ಆಚಾರ್ಯರು[೪], ಸಣ್ಣ ಭೂಮಾಲಿಕರು, ವ್ಯಾಪಾರಿಗಳು[೫] ನಗರತ್ತರುಗಳು[೬] ಮತ್ತು ದಂಡನಾಯಕರು ಶೈವ ಧರ್ಮವನ್ನು ಬೆಂಬಲಿಸಿ, ಶೈವ ಮುನಿಗಳ ಮಾರ್ಗದರ್ಶನದಲ್ಲಿ ಶೈವ ದೇವಾಲಯಗಳ ನಿರ್ಮಾಣಕ್ಕೆ ಎಲ್ಲರ ಬೆಂಬಲವನ್ನು ಒಟ್ಟುಗೂಡಿಸುವ ಪ್ರಯತ್ನ ನಡೆಯಿತು’.

**ಶಕ್ತಿದೇವತೆಗಳು :** ಸಾಮಾನ್ಯವಾಗಿ ಶೈವ ದೇವಾಲಯದ ಗರ್ಭಗುಡಿಯಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿರುತ್ತಾರೆ. ಆದರೆ ಮಾತೃ ದೇವತೆಯ ಪರಿಕಲ್ಪನೆಯು ಶಿವನ ಅರ್ಧಾಂಗಿಣಿಯಾಗಿ ಶೈವ ಧರ್ಮದಲ್ಲಿ ಶಿವನ ಪ್ರಭೆಯ ರೂಪದಲ್ಲಿ ಪ್ರಸರಿಸಿತು. ಸುತ್ತೂರಿನಲ್ಲಿನ ಸಪ್ತಮಾತ್ರಿಕ ದೇವಾಲಯವನ್ನು ಸುತ್ತೂರಮ್ಮ ದೇವಾಲಯವೆಂದು ಕ್ರಿ.ಶ. ೧೦೩೭ರ[೮] ಶಾಸನವು ತಿಳಿಸುತ್ತದೆ. ಈ ದೇವಸ್ಥಾನಕ್ಕೆ ಒಬ್ಬ ವ್ಯಾಪಾರಿಯ ಮಡದಿ ದತ್ತಿ ನೀಡಿದ್ದಲ್ಲದೆ ಎರಡು ಶೈವ ದೇವಾಲಯವನ್ನು ಸುತ್ತೂರಿನಲ್ಲಿ ನಿರ್ಮಾಣ ಮಾಡಿದ್ದಾಳೆ. ಇದೇ ಪ್ರದೇಶದ ಮತ್ತೊಂದು ಶಾಸನವು ಸುತ್ತೂರಿನ ದುರ್ಗಯಾರ್ ದೇವಿಯ ದೇವಾಲಯ[೯] ಕುರಿತು ತಿಳಿಸುತ್ತದೆ. ಅಲ್ಲದೇ ತಡಿಮಾಲಿಂಗಿ ಶಾಸನವು[೧೦] ಇರವಕುಲಮಾಣಿಕವಿನಗಾರ್ಆಳ್ವರ್ ದೇವರ ಬಗ್ಗೆ ತಿಳಿಸುವಾಗ ನಂಬಿರಟ್ಟಿ ದೇವಿಗೆ ಕೊಟ್ಟ ದಾನದ ಕುರಿತು ತಿಳಿಸುತ್ತದೆ. ಶಕ್ತಿದೇವತೆಯ ಆರಾಧನೆ ಹೆಚ್ಚಾಗಿ ಇತ್ತೆಂಬುದಕ್ಕೆ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುವ ಮಹಿಷಾಸುರ ಮರ್ದಿನಿ, ದುರ್ಗ ಹಾಗೂ ಸಪ್ತಮಾತ್ರಕೆ ಮೂರ್ತಿಗಳು ಸಾಕ್ಷಿಯಾಗಿವೆ. ಹಲವಾರು ದೇವಾಲಯಗಳಲ್ಲಿ

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು.

ಸಪ್ತಮಾತ್ರಿಕಾ ಹಾಗೂ ಮಹಿಷಾಸುರಮರ್ದಿನಿಯ ವಿಗ್ರಹವನ್ನು ಸುಕನಾಸಿ ಅಥವಾ ನವರಂಗ ಮಂಟಪದಲ್ಲಿ ಕಾಣುತ್ತೇವೆ.

ಶೈವ ಮಠಗಳಲ್ಲಿ ಅಸ್ತಿತ್ವದ ಬಗ್ಗೆ ಹಲವಾರು ಶಾಸನಗಳ ಉಲ್ಲೇಖಿತವಾಗಿದೆ. ನಗರಲೇ[೧೧] (ನಂಜನಗೂಡು ತಾಲ್ಲೂಕು) ಕಾಳಾಮುಖ ಪಂಥದ ಸಿಂಹಪರ್ಶೆಯ ಕೇಂದ್ರವಾಗಿತ್ತು. ೧೦೨೭-೨೮ರ ಶಾಸನವು ಸಿಂಹಪರ್ಶೆ ಮಠದ ಕುರಿತು ತಿಳಿಸುವುದಲ್ಲದೇ ಹತ್ತು ಕೊಳಗ ಭತ್ತವನ್ನು ವಾರ್ಷಿಕವಾಗಿ ನಿತ್ಯ ಪೂಜೆ ಮಾಡುವ ಬಟಾರನಿಗೆ ನೀಡಿದ ವಿಷಯವನ್ನು ತಿಳಿಸುತ್ತದೆ. ನಗರಲೇ ಮಠವಲ್ಲದೇ ನಂಜನಗೂಡು ತಾಲ್ಲೂಕಿನ ಸುತ್ತೂರು ಮಠವು ಪ್ರಮುಖ ಶೈವ ಕೇಂದ್ರವಾಗಿತ್ತು ಸುಮಾರು ಕ್ರಿ.ಶ. ೧೦೩೨ರ[೧೨] ಶಾಸನವು ಹೊಸದಾಗಿ ನಿರ್ಮಾಣಗೊಂಡ ದೇವಾಲಯಗಳಾದ ಈಶಾನ್ಯಈಶ್ವರಮ್ ಉಡಯಾರ್ ಮತ್ತು ಮೂಲಸ್ಥಾನಮುಡೈಯಾರನ ದತ್ತಿಯನ್ನು ದೇವಾಲಯದ ಸ್ಥಾನಪತಿಗಳಾದ ಬ್ರಮ್ಹಲಿಂಗ, ಬಟಾರ ಹಾಗೂ ಈಶಾನ್ಯ ಈಶ್ವರಮುಡಿಯಾರಿಗೆ ನೀಡಲಾಯಿತು. ಇಲ್ಲಿನ ಮೂಲಸ್ಥಾನ ದೇವಾಲಯ ಕ್ರಿ.ಶ. ೧೦೩೨ರ ಮೊದಲೇ ನಿರ್ಮಾಣ ಗೊಂಡಿದೆ. ಆದರೇ, ಈಶಾನ್ಯ ಈಶ್ವರ ದೇವಾಲಯ ಪ್ರಾಚೀನತೆ ಯನ್ನು ಇನ್ನೂ ಹಿಂದಕ್ಕೆ ಕೊಂಡಯ್ಯಬಹುದು ಕಾರಣ ಈಶಾನ್ಯ ಈಶ್ವರಮುಡೈಯಾರ್ ಸುತ್ತೂರು ಮಠದ ಎರಡನೇ ಸ್ಥಾನಪತಿಗಳಾಗಿದ್ದರು.

ದೇವಸ್ಥಾನದ ದಾನದತ್ತಿಗಳು ಸ್ಥಾನಪತಿಗಳ ಅಧೀನದಲ್ಲಿತ್ತೇ ಹೊರತು, ಸುತ್ತೂರಿನ ಬ್ರಹ್ಮದೇಯ ಅಥವಾ ಸಭಾದ ಆದೀನದಲ್ಲಲ್ಲ, ಅಲ್ಲದೇ ಶ್ರೀರಂಗಪಟ್ಟಣದ ಬಲಮುರಿ ಶಾಸನವು[೧೩] ಸಹ ಮೇಲಿನ ಶಾಸನದಂತೆ ನಿತ್ಯ ನೈವೇದ್ಯ ಹಾಗೂ ನಂದಾದೀವಿಗೆಗೆ ನೀಡಿದ ಭೂದಾನದ ಜವಾಬ್ದಾರಿಯನ್ನು ಮಹಾಜನರಿಗೆ ವಹಿಸಲಾಗಿತ್ತು ಹಾಗಾಗಿ ದೇವಾಲಯವು ಅಗ್ರಹಾರದಲ್ಲಿದ್ದರೂ ಎಲ್ಲಾ ಸಮಯದಲ್ಲಿ ದಾನದತ್ತಿಗಳು ಸಭಾದ ಅಧೀನದಲ್ಲಿ ಇರಲಿಲ್ಲ ಎಂಬುದಕ್ಕೆ ಸಾಕ್ಷಿಯಾಗಿದೆ. ಚಾಮರಾಜ ಜಿಲ್ಲೆಯ ಕೆಂಪನಪುರ ಶಾಸನವು[೧೪] ಕಾಳಾಮುಖಸಂತರ ಕರ್ತವ್ಯ ಮತ್ತು ಜವಾಬ್ದಾರಿ ಯನ್ನು ತಿಳಿಸುತ್ತದೆ. ಶಾಸನವು ಸನ್ಯಾಸಿಗಳ ಆಹಾರಕ್ಕೆ ವಿದ್ಯಾದಾನಕ್ಕೆ ದೇವಸ್ಥಾನದ ದುರಸ್ತಿ ಕಾರ್ಯಕ್ಕೆ ಅದರಲ್ಲೂ ಸುಣ್ಣ ಹಾಗೂ ಗಿಲಾವಿಗೆ ನೀಡಿದ ೧೦ ಕಂಡುಗ ಗದ್ದೆಯ ಜವಾಬ್ದಾರಿಯನ್ನು ಶೈವ ಸ್ಥಾನಪತಿಯಾದ ಈಶ್ವರ ಸಂತತಿಯ ಸೋಮರಾಶಿ ಬಾಟ್ಟಾರಕರಿಗೆ ವಹಿಸಲಾಗಿತ್ತು ಎಂದು ತಿಳಿಸುತ್ತದೆ. ಎಣುಗೊಂಬ ಶಾಸನವು[೧೫] ೨೦೦೦ ಕುಲಿ ಭೂಮಿಯನ್ನು ಎರುಮಯ್ಯೆ ಕುಂಬಾದ ತಿರುವೀರಮಾರಸ್ವ ಮುಡಯ್ಯೆ ಮಹದೇವರಿಗೆ ನೀಡಿದ ದಾನವನ್ನು ಮಠದ ಸ್ಥಾನಪತಿ ದೇವಶಿವ ಪಂಡಿತನ ಮಗನಾದ ಅಮ್ರತಕಟ್ಟರಾರ್ ಹಾಗೂ ಆತನ ನಾಲ್ಕು ಸಹೋದರರಿಗೆ ನೀಡಲಾಯಿತು ಎಂದು ತಿಳಿಸುತ್ತದೆ. ಈಚಗನಹಳ್ಳಿಯ ಶಾಸನದಲ್ಲಿ[೧೬] ಎಡೆದೊರೆನಾಡಿನ ಕರವೂರಿನ ಸ್ಥಾನಪತಿಗಳಾದ ಮಾರಜೀಯ ಹಾಗೂ ನಾಗಜೀಯ ಎಂಬುವರು ಭೂಮಿಯ ಸರಿಸಮಪಾಲನ್ನು ಅನುಭವಿಸುತ್ತಿದ್ದರು. ಆದರೆ ನಾಗಜೀಯ ತನ್ನ ಪಾಲಿನ ಭೂಮಿಯನ್ನು ಮಾರಜೀಯನಿಗೆ ಹಣಪಡೆದು ಹಲವಾರು ಜನಗಳ ಎದುರಿಗೆ ಮಾರುತ್ತಾನೆ ಇದರಿಂದ ಸ್ಥಾನಪತಿಗಳು ತಮ್ಮ ಪಾಲಿನ ಭೂಮಿಯನ್ನು ಮಾರುವ ಹಕ್ಕನ್ನು ಹೊಂದಿದ್ದರೆಂದು ತಿಳಿಯುತ್ತದೆ. ಕೊಳಗಲ ಶಾಸನವು[೧೭] ಉತ್ತಮ ಚೋಳಗಾವುಂಡನ ಮಗನಾದ ರಾಚಯ್ಯನು ಗಂಗೇಶ್ವರ ದೇವಾಲಯನ್ನು ಸ್ಥಾಪಿಸಿದನೆಂದು ಹಾಗೂ ದೇವಸ್ಥಾನದ ಸ್ಥಾನಪತಿಯಾದ ಸೋಮರಾಸಿ ಜೀಯನಿಗೆ ತವುದಹಳ್ಳಿ ಕೆರೆಯ ಕೆಳಗೆ ೫ ಕೊಳಗ ಒಣ ಭೂಮಿಯನ್ನು ನೀಡಿದನೆಂದು ತಿಳಿಸುತ್ತದೆ. ಅಲ್ಲದೇ ಕನ್ನಂಬಾಡಿ ಶಾಸನದಲ್ಲಿ[೧೮] ಮಾದಿಯಣ್ಣ ಹಾಗೂ ಲಕ್ಕಣ್ಣರಿಂದ ನಿರ್ಮಾಣಗೊಂಡ ದೇವಾಲಯಕ್ಕೆ ಕವರಬೊಮ್ಮಗಾವುಂಡ ಹಾಗೂ ಆತನ ಮಗ ಬೀಜಗಾವುಂಡ ನೀಡಿದ ಭೂದಾನವನ್ನು ಸ್ಥಾನಪತಿಯಾದ ಕೊಂಗಜೀಯನ ಪಾದ ತೊಳೆದು ನೀಡಲಾಯಿತೆಂದು ತಿಳಿಸುತ್ತದೆ.

ನನ್ನ ಅಧ್ಯಯನದ ಪ್ರದೇಶಗಳಲ್ಲಿ ಶೈವಧರ್ಮದ ಏಳಿಗೆಗೆ ಕಾಳಾಮುಖರು ಬಹು ಮುಖ್ಯ ಪಾತ್ರ ವಹಿಸಿದ್ದಾರೆ. ಶಕ್ತಿಪರ್ಶೆ ಹಾಗೂ ಸಿಂಹಪರ್ಶೆ ಕಾಳಾಮುಖದ ಉಪಪಂಥಗಳು ಶಕ್ತಿಪರ್ಶೆಯನ್ನು ಮತ್ತೂ ಎರಡು ಭಾಗಮಾಡಲಾಗಿದೆ. ಅವುಗಳೆಂದರೇ, ಪರ್ವತಾವಳಿ ಶ್ರೀಶೈಲದಲ್ಲಿ ಕಂಡುಬಂದರೆ ಭುಜಂಗಾವಳಿ ಭುಜಂಗನ ದಾರಿಯನ್ನು ಅನುಸರಿಸುತ್ತದೆ[೧೯] ಶಕ್ತಿಪರ್ಶೆ ಕರ್ನಾಟಕದ ಧಾರವಾಡ ಹಾಗೂ ಶಿವಮೊಗ್ಗ ಪ್ರದೇಶದಲ್ಲಿ ಹೆಚ್ಚಾಗಿ ಕಂಡರೆ ಸಿಂಹಪರ್ಶೆಯು ಕರ್ನಾಟಕದ ದಕ್ಷಿಣ ಭಾಗದಲ್ಲಿ ಕಾಣಸಿಗುತ್ತದೆ[೨೦]. ಈ ನಿಟ್ಟಿನಲ್ಲಿ ನಂಜನಗೂಡಿನ ನಗರಲೇ[೨೧] ಶಾಸನವು ಸಿಂಹಪರ್ಶೆ ಅಸ್ತಿತ್ವದಲ್ಲಿತ್ತೆಂದು ತಿಳಿಸುತ್ತದೆ. ದಕ್ಷಿಣ ಭಾರತದ ಧಾರ್ಮಿಕ ಜೀವನದ ಮೇಲೆ ಅದರಲ್ಲೂ ಕಾವೇರಿ ನದಿ ತೀರ ಪ್ರದೇಶವನ್ನು ಆಳಿದ ಚೋಳರ ಮೇಲೆ ಕಾಳಾಮುಖರ ಪ್ರಭಾವ ಸಾಕಷ್ಟು ಶೈವ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗಿದೆ ಉದಾ : ಮಲ್ಲೇಶ್ವರ[೨೨], ಈಶಾನ್ಯ ಈಶ್ವರಮುಡಿಯಾರ್[೨೩] ಮೂಲಸ್ಥಾನಮುಡೆಯಾರ್, ಮಹಾದೇವ ಏಕ್ಕಗೊಂಡದೇವ, ಚಂದ್ರಶೇಖರದೇವ[೨೪], ಗಂಗೇಶ್ವರ[೨೫], ಮಹಾದೇವ[೨೬] ಕವರ್ರೈ ಈಶ್ವರ ಮುದಿಯಾರ್[೨೭], ತಿರುಮೂಲಸ್ಥಾನಮ್[೨೮] ವುಡೇಯಾರ್,

ತಿರುವೀರಮೀಶ್ವರಮುಡಯ್ಯ ಮಹಾದೇವ[೨೯], ರಾಜರಾಜ ವಿತಂಕದೇವಮಹಾದೇವ[೩೦] ಹಾಗೂ ಸುದ್ದಮಲ್ಲೀಶ್ವರ ಉದಯಮಹಾದೇವ[೩೧]. ಮೇಲಿನ ದೇವರುಗಳ ಹೆಸರನ್ನು ಗಮಿನಿಸಿದರೆ, ಹೆಚ್ಚಾಗಿ ಮಹದೇವ ಎಂಬ ದೇವರ ಹೆಸರನ್ನು ಹೆಚ್ಚಾಗಿ ಬಳಸಿರುವುದಾಗಿ ತೋರುತ್ತದೆ.

ಕಾಳಮುಖ ಮುನಿಗಳ ಶಾಸನಗಳಲ್ಲಿ ಕಾಳಾಮುಖ ಶೈವಮುನಿಗಳ ಹೆಸರು ಜೀಯು[೩೨], ಪಂಡಿತ[೩೩], ಭಟ್ಟಾರಕ[೩೪] ಎಂದು ಕೊನೆಗೊಳ್ಳುವುದರಲ್ಲಿ ಕಾಣುತ್ತೇವೆ. ಪದ್ಮ ನಂದನ ಶೈವ ಸಿದ್ಧಾಂತವು ೧೮ ಶೈವ ಸಿದ್ಧಾಂತದ ಭೋದಕರ ಪಟ್ಟಿಯನ್ನು ಕೊಡುತ್ತದೆ, ಅದರಲ್ಲಿ ಈಶಾನ್ಯ ಶಿವನು ಒಬ್ಬನು. ಬಹುಶಃ ಸುತ್ತೂರಿನ ಈಶಾನ್ಯ ಈಶ್ವರಮುಡ್ಯೆಯಾರ್ ದೇವಸ್ಥಾನವು[೩೫] ಈಶಾನ್ಯಶಿವ ಗುರುಗಳಿಗೆ ಸೇರಿರಬಹುದು. ಕಾರಣ ಇವರು ಸುತ್ತೂರು ಮಠದ ಎರಡನೇ ಸ್ಥಾನಪತಿ ಗಳಾಗಿದ್ದರು ಇವರು ರಾಜೇಂದ್ರ ಚೋಳನ ಪೂಜ್ಯಗುರು ಗಳಾಗಿದ್ದರು ಹಾಗಾಗಿ ಅವರ ಮೇಲಿನ ಗೌರವವನ್ನು ಅವರ ಹೆಸರಿನಲ್ಲಿ ದೇವಾಲಯವನ್ನು ಅರ್ಪಿಸುವುದರ ಮೂಲಕ ತೋರಿಸಿದ್ದಾರೆ.

ಅಧ್ಯಯನಕ್ಕೆ ಒಳಪಟ್ಟ ಶಾಸನಗಳಲ್ಲಿ ಉಲ್ಲೇಖ ವಾಗಿರುವ ಕಾಳಾಮುಖ ಪಂಥದ ಸ್ಥಾನಪತಿಗೆಳೆಂದರೆ ಸೋಮರಾಸಿಜೀಯಾ ಮಾರಾಜೀಯಾ, ನಾಗಜೀಯ, ಕೊಂಗಜೀಯಾ, ಸೋಮರಾಸಿಭಟ್ಟಾರಕ, ದೇವಶಿವ ಪಂಡಿತ ಹಾಗೂ ಬಳಾರ. ಜೀಯಾ ಪದದಿಂದ ಕೊನೆಗೊಳ್ಳುವ ಹೆಸರುಗಳು ನಂಜನಗೂಡು, ಹೆಗ್ಗಡದೇವನಕೋಟೆ, ಮೈಸೂರು ಜಿಲ್ಲೆಯಲ್ಲಿ, ಹಾಗೂ ಪಾಂಡವಪುರ ತಾಲ್ಲೂಕು ಮಂಡ್ಯ ಜಿಲ್ಲೆಯಲ್ಲಿ ಕಂಡರೆ ರಾಶಿ, ಭಟ್ಟಾರಕ ಹಾಗೂ ಪಂಡಿತ ಎಂಬ ಹೆಸರು ಚಾಮರಾಜ ಜಿಲ್ಲೆಯಲ್ಲಿ ಕಾಣ ಸಿಗುತ್ತವೆ. ಕಾಳಾಮುಖ ಶೈವರು, ದೇವಸ್ಥಾನದ ಆಡಳಿತ ಜವಾಬ್ದಾರಿಯ ಹೊಂದಿದ್ದರೆಂದು ಈಗಾಗಲೇ ತಿಳಿಸಲಾಗಿದೆ. ಅವರ ಈ ಕೆಲಸಕ್ಕೆ ವೇತನವನ್ನು ಭೂಮಿ ಹಾಗೂ ಕೆಲವೊಮ್ಮೆ ತೆರಿಗೆ ಹಣವನ್ನು ಪಾದ ತೊಳೆದು ನೀಡಲಾಗುತ್ತಿತ್ತು. ಉದಾಹರಣೆಗೆ:– ಕೆಂಪನಪುರ ಶಾಸನವು[೩೬] ಸೋಮರಾಶಿ ಭಟ್ಟಾರಕನ ಪಾದ ತೊಳೆದು ಭೂಮಿಯನ್ನು ನೀಡಿದ ಮಾಹಿತಿ ನೀಡಿದರೆ, ಕನ್ನಂಬಾಡಿ ಶಾಸನವು[೩೭] ಕೊಂಗಜೀಯ ಪಾದ ತೊಳೆದು ಭೂಧಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ಹೆಗ್ಗಡದೇವನಕೋಟೆಯ ಬೆಳತೂರು ಶಾಸನವು[೩೮] ಕ್ರಿ.ಶ. ೧೦೨೦ರ ನುಗುನಾಡಿನ ನಾಯಕ ಬೆಳತೂರಿನಲ್ಲಿ ದೇವಸ್ಥಾನವನ್ನು ಪುನರ್ ಸ್ಥಾಪಿಸಿ ಲಿಂಗವನ್ನು ಪ್ರತಿಷ್ಟಾಪಿಸಿ ರುದ್ರ ಹೋಮವನ್ನು ನಡೆಸಿ ಬಲಿಕೊಟ್ಟು ೧೦೦೦ ಜನರಿಗೆ ಊಟ ಬಡಿಸಿದ ಮಾಹಿತಿ ನೀಡುತ್ತದೆ. ಇದು ಅಧಿಕಾರಿಯ ಶೈವ ಧರ್ಮದ ಮೇಲಿನ ಒಲವನ್ನು ನಿರೂಪಿಸುವುದರ ಜೊತೆಗೆ ಲಿಂಗಾರಾಧನೆಯು ಶೈವಧರ್ಮದ ಮುಖ್ಯ ಅಂಶವಾಗಿದೆ ಎಂದು ತಿಳಿಸುತ್ತದೆ. ಪೂರ್ವಿಕರ ನೆನಪಿಗಾಗಿ ದೇವಾಲಯಗಳ ನಿರ್ಮಾಣ ಮಾಡಿದ ವಿಷಯವು ಚಿಕ್ಕಕಾಟಿ ಶಾಸನದಲ್ಲಿ[೩೯] ಉಲ್ಲೇಖವಾಗಿದೆ. ಶಾಸನದಲ್ಲಿ ಆಚಾರ್ಯ ರಾಜಮ್ಮ ಹಾಗೂ ಬೆಲಬ್ಬೆಯ ಮಗನಾದ ಕೇಶವಭಟ್ಟ ತನ್ನ ಪೂರ್ವಿಕರ ನೆನಪಿಗಾಗಿ ದೇವಸ್ಥಾನ ನಿರ್ವಾಣ ಮಾಡಿದನೆಂದು ತಿಳಿಸುತ್ತದೆ.

ವ್ಯಾಪಾರದ ಬೆಳವಣಿಗೆಗೆ ಮಠದ ಪಾತ್ರ ಪ್ರಮುಖ ವಾಗಿದೆ ಹಾಗಾಗಿ ವ್ಯಾಪಾರಸ್ಥರು ಮಠದ ಅಬಿವೃದ್ದಿಗಾಗಿ ಹಣ ಅಥವಾ ಧಾನ್ಯದ ರೂಪದಲ್ಲಿ ವಿಶೇಷ ದಾನವನ್ನು ನೀಡಿ ಪ್ರೋತ್ಸಾಹ ನೀಡುತ್ತಿದ್ದರು. ಉದಾಹರಣೆಗೆ: ಅಯ್ಯಾವೊಳೆ–೫೦೦[೪೦] ಅಲ್ಲದೇ ಸ್ಥಳಿಯ ವ್ಯಾಪಾರ ಸಂಘ ಗಳಾದ ನಾನಾದೇಶಿ, ಸೆಟ್ಟಿಗುತ್ತ[೪೧] ನಾನಾದೇಶಿ ಪೇರ್‌ವಾರಿಯನ್[೪೨] ಮಹಾಪಟ್ಟವಿಯಬಾರಿ ಹಾಗೂ ವೀರಬಳಂಜ[೪೩]

ಒಟ್ಟಾರೆ ಶೈವ ಧರ್ಮದ ಪ್ರಮುಖ ಪಂಥವಾದ ಪಾಶುಪತ ಕಾಳಾಮುಖ ಶೈವವು ಈ ಪ್ರದೇಶದ ಜನಗಳ ಧಾರ್ಮಿಕ ನಂಬಿಕೆಯು ಮೇಲೆ ಮಹತ್ತರವಾದ ಪಾತ್ರವಹಿಸಿದೆ. ಧಾರ್ಮಿಕ ವಲಯದಲ್ಲಿ ಶೈವ ಪಂಥವು ಹೆಚ್ಚಿನ ಪ್ರಭಾವ ಬೀರಲು ಕಾರಣ ಅರಸರುಗಳು ಅಧಿಕಾರಿಗಳು ಶೈವಧರ್ಮ ವನ್ನು ಪ್ರೋತ್ಸಾಹಿಸಿದರಲ್ಲದೆ ಶೈವ ಧರ್ಮದ ಅನುಯಾಯಿ ಗಳಾಗಿದ್ದರು.

ಋಗ್ವೇದದಲ್ಲಿ ಕೆಲವೇ ಕೆಲವು ಮಂತ್ರಗಳು ವಿಷ್ಣುವಿಗೆ ಮೀಸಲಿಟ್ಟಿದ್ದರೂ ನಿಧಾನವಾಗಿ ವಿಷ್ಣುವು ಪ್ರಮುಖ ದೇವರ ಸ್ಥಾನ ಪಡೆದನು. ವೈಷ್ಣವ ಭಾಗವತರ ಭಕ್ತಿ ಪಂಥವು ವೈಷ್ಣವ ಧರ್ಮದ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಹೆಚ್ಚಿನ ಸಂಖ್ಯೆಯಲ್ಲಿ ಕೇಶವ ನಾರಾಯಣ ಮತ್ತು ಜನಾರ್ಧನ ಸ್ವರೂಪದ ದೇವಾಲಯಗಳನ್ನು ನಿರ್ಮಿಸಲಾಯಿತು. ಮೇಲಿನ ಈ ತೆರನಾದ ಕಲ್ಪನೆಯನ್ನು ನನ್ನ ಅಧ್ಯಯನದ ಪ್ರದೇಶದಲ್ಲಿ ಕಾಣುತ್ತೇವೆ.

ಶೈವ ಧರ್ಮದ ನಂತರ ಹೆಚ್ಚಿನ ರಾಜಮನ್ನಣೆಯನ್ನು ಪಡೆದ ಧರ್ಮ ವೈಷ್ಣವ ಧರ್ಮ. ತಡಿಮಾಲಿಂಗಿ ಪ್ರಸಿದ್ಧ ವೈಷ್ಣವ ಕೇಂದ್ರವಾಗಿತ್ತು ಈ ಪ್ರದೇಶದಲ್ಲಿ ದೊರೆತ ಚೋಳರ ಶಾಸನವು ವೈಷ್ಣವ ಧರ್ಮಕ್ಕೆ ಸೇರಿದವು ಉಳಿದ ಒಂದು ಶೈವ ಮತದ್ದು. ಚೋಳರ ಆಳ್ವಿಕೆ ಶುರುವಾದ ನಂತರ ಸಾಕಷ್ಟು ವಿಷ್ಣು ದೇವಾಲಯಗಳು ನಿರ್ಮಾಣಗೊಂಡವು. ಅವುಗಳಲ್ಲಿ ಮುಖ್ಯ ದೇವಾಲಯವೆಂದರೆ ಮೈಸೂರು ಜಿಲ್ಲೆಯ ತಡಿಮಾಲಿಂಗಿಯ ಇರವಿಕಲು ಮಾನಿಕಲ್ ವಿನ್ನಗರ್‌ಆಳ್ವರ್.

ದೊಡ್ಡ ಪ್ರಮಾಣದ ವಿವಿಧ ರೀತಿಯ ದಾನ ದತ್ತಿಯನ್ನು ಈ ದೇವಾಲಯಕ್ಕೆ ನೀಡಿದ ಮಾಹಿತಿಯು ಶಾಸನದ ಮುಖಾಂತರ ತಿಳಿದು ಬರುತ್ತದೆ. ರಾಜರಾಜನ ಹಿರಿಯ ಸಹೋದರಿಯು ಈ ದೇವಾಲಯಕ್ಕೆ ತನ್ನ ಬೊಕ್ಕಸದಿಂದ ಹಣದ ರೂಪದಲ್ಲಿ ನಿತ್ಯ ನೈವೈದ್ಯಕ್ಕೆ ದಾನ ಮಾಡಿದ ಸಂಗತಿಯು ತಡಿಮಾಲಿಂಗಿ ಶಾಸನವು ತಿಳಿಸುತ್ತದೆ[೪೪] ಬಹುಶಃ ಈ ದೇವಾಲಯವು ರಾಜರಾಜನಿಂದ ನಿರ್ಮಿಸಲ್ಪಟ್ಟಿರಬಹುದು ಹಾಗಾಗಿ ಆತನ ಸಹೋದರಿ ಈ ದೇವಾಲಯಕ್ಕೆ ತನ್ನ ಖಜಾನೆಯಿಂದ ದಾನ ನೀಡಲು ಆಸಕ್ತಿ ತೋರಿರಬಹುದು.

ರಾಜಕುಮಾರಿಯರು ಅಲ್ಲದೇ ದಂಡನಾಯಕ ಪಂಚವನ್‌ಮನುಕುನಕೇಸರಿ ಅಥವಾ ಪಂಚವನ್ ಮಾರ್ರೈಯನ್[೪೫] ಸೇನಾಪತಿಕುರವನ್ ಉಲುಗಲನಟನ್ ರಾಜೇಂದ್ರಚೋಳ ಜಯಮುಲನಾಡಲ್‌ವನ್[೪೬]ಹಾಗೂ ಉತ್ತಮಚೋಲೈಚಂದರಯನ್[೪೭] ವಿಷ್ಣುದೇವರ ಪೂಜೆ ವಿಧಿ ವಿಧಾನಕ್ಕೆ ನೀಡಿದ ದಾನದ ಕುರಿತು ತಿಳಿಸುತ್ತದೆ. ನಗರದ ಸ್ಥಳೀಯ ಸಂಸ್ಥೆಗಳು ಹಾಗೂ ಜನನಾಥ ಪುರಂನ ನಗರತ್ತ್‌ಇರುವಿಕುಲ ಮನಿಕ್ಕವಿನ್ನಗಾರ್‌ಆಳ್ವರ ದೇವಾಲಯದ ದಾನದತ್ತಿಗಳ ಮೇಲ್ವಿಚಾರಕರಾಗಿದ್ದರು. ಆದರೆ ಇವರು ಈ ದೇವಾಲಯಕ್ಕೆ ಯಾವುದೇ ದಾನ ಮಾಡದೇ ಇದೇ ಸ್ಥಳದ ಶೈವ ದೇವಾಲಯವಾದ ಸುದ್ದಮಲ್ಲೀಶ್ವರಮ್ ಉಡಯ್ ಮಹದೇವ[೪೮] ದೇವಾಲಯಕ್ಕೆ ದಾನ ಮಾಡಿದ್ದಾರೆ ಎಂಬ ವಿಷಯ ಗಮನಾರ್ಹವಾದದ್ದು. ಶಾಸನಗಳು ತಿರುವೊಳಕ್ಕು[೪೯] ಹಾಗೂ ಪಂಗುನಿ[೫೦] ಹಬ್ಬಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಹಾಗೆ ಇಲ್ಲಿನ ಸ್ಥಳಿಯ ಚೋಳ ಅಧಿಕಾರಿಗಳು ಮೂಲತ: ಸ್ಥಳಿಯರಲ್ಲ, ಬದಲಾಗಿ ತಮಿಳುನಾಡಿನಿಂದ ಕರೆತಂದವರು ಹಾಗಾಗಿ ವೈಷ್ಣವ ದೇವರಿಗೆ ನೀಡಿದ ದಾನದತ್ತಿಯ ವಿಷಯದಲ್ಲಿ ಪ್ರಮುಖ ಆಸಕ್ತವಹಿಸಿದವರು ಹಾಗೂ ಇಲ್ಲಿನ ತಮಿಳುನಾಡಿನ ಶ್ರೀವೈಷ್ಣವ ಗುಂಪಿಗೆ ಸೇರಿದವರು. ಶಾಸನಗಳಲ್ಲಿ ವಿಷ್ಣು ದೇವಸ್ಥಾನದ ಜೊತೆಗೆ ಶ್ರೀವೈಷ್ಣವ ಎಂಬ ಬಳಕೆ ಕರ್ನಾಟಕದಲ್ಲಿ ಅದರ ಇರುವಿಕೆಯನ್ನು ತಿಳಿಸುತ್ತದೆ. ಅಲ್ಲದೆ ರಾಮಾನುಜರ ಆಗಮನಕ್ಕಿಂತ ಮೊದಲು ಕರ್ನಾಟಕದಲ್ಲಿ ತಡಿಮಾಲಿಂಗಿ ಪ್ರದೇಶವು ಶ್ರೀ ವೈಷ್ಣವ ಧರ್ಮದ ಪ್ರಮುಖ ಕೇಂದ್ರವಾಗಿತ್ತು.

ದೇವಸ್ಥಾನಗಳಲ್ಲದೇ ಹಲವಾರು ವೈಷ್ಣವ ಮೂರ್ತಿಗಳನ್ನು ಗಮನಿಸಬಹುದು ಮೈಸೂರಿನ ಪ್ರಾಚ್ಯ ಇಲಾಖೆಯ ವರದಿಯ ಪ್ರಕಾರ ಈ ಮೂರ್ತಿಗಳ ಕಾಲ ಸುಮಾರು ೧೧ನೇ ಶತಮಾನಕ್ಕೆ ಸೇರಿರಬಹುದು ಅಗರದ ಯೋಗ ನರಸಿಂಹ ದೇವಸ್ಥಾನದಲ್ಲಿ ನಿರ್ಮಿಸಲಾದ ಯೋಗನರಸಿಂಹನ ಶಿಲ್ಪವು ಸುಂದರವಾಗಿದೆ. ಇದು ಯೋಗಮುದ್ರೆಯಲ್ಲಿದ್ದು ಕಾಲುಗಳನ್ನು ಯೋಗಪಟ್ಟದಿಂದ ಬಂದಿಸಲಾಗಿದೆ. ಮುಂದಿನ ಎರಡು ಕೈಗಳು ಮೊಣಕಾಲಿನ ಮೇಲೆ ಇಡಲಾಗಿದೆ ಹಿಂದಿನ ಎರಡು ಕೈಗಳಲ್ಲಿ ಚಕ್ರ ಮತ್ತು ಶಂಖಗಳನ್ನು ಕಾಣಬಹುದು. ಇದರ ತೆರೆದ ಬಾಯಿಯಿಂದ ನಾಲಿಗೆಯನ್ನು ಕಾಣಬಹುದು. ಆದರೇ ಶಾಂತ ಸ್ತಿತಿಯಲ್ಲಿದೆ[೫೧]. ಈ ಮೇಲಿನ ಮಾಹಿತಿಯಿಂದ ಯೋಗ ನರಸಿಂಹ ದೇವರ ಆರಾಧನೆಯು ಚೋಳರ ಕಾಲದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದು ಅದರ ಪ್ರಭಾವ ದಕ್ಷಿಣ ಕರ್ನಾಟಕದಲ್ಲು ಹರಡಿತೆಂದು ಉಹಿಸಬಹುದು.

ಜೈನ ಧರ್ಮವು ಹತ್ತನೇ ಶತಮಾನದಲ್ಲಿ ಉನ್ನತ ಸ್ಥಿತಿಯಲ್ಲಿದ್ದು ನಿಧಾನವಾಗಿ ಅದರ ಅವನತಿ ಹೊಂದಿತು. ಅಲ್ಲದೆ ಜೈನ ಮತದ ಗಣ ಹಾಗೂ ಗಚ್ಚಗಳ ಸಂಖ್ಯೆಗಳು ಕಡಿಮೆಯಾಗುತ್ತಾ ಬಂದವು. ಮೂಲ ಸಂಘವು ಒಡೆದು ಹೋಗಿ ಸಣ್ಣ ವಿಭಾಗಗಳಾದವು ಇದಕ್ಕೆಲ್ಲಾ ಪ್ರಮುಖ ಕಾರಣ ಗುರುಗಳ ಆಗಮನ ಹಾಗೂ ಅವರಿಗೆ ನೀಡಿದ ಪ್ರಾಮುಖ್ಯತೆ. ಇದು ಗುರುಗಳ ಹಾಗೂ ಭಕ್ತರ ನಡುವೆ ಒಂದು ಭಾಂದವ್ಯ ಗಟ್ಟಿಯಾಗಲು ಕಾರಣವಾಯಿತು.

ಜೈನ ಹಾಗು ಬೌದ್ಧರು ಪಟ್ಟಣಗಳಲ್ಲಿ ಪ್ರಭಾವ ಬೀರಿದ ಕಾರಣ ಬ್ರಾಹ್ಮಣರು ರೈತರ ಬೆಂಬಲ ಮತ್ತು ಒಪ್ಪಂದ ಮಾಡಿಕೊಂಡರು. ರಾಜರು ಹಾಗೂ ಮುಖ್ಯ ಸಾಮಂತರು ಜೈನ ಬಸದಿಗಳ ನಿರ್ಮಾಣ ಹಾಗೂ ದಾನ ನೀಡುವ ಕಾರ್ಯಗಳಲ್ಲಿ ನಿರತರಾಗಿದ್ದರು. ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಕೆಲಸೂರು ಶಾಸನವು[೫೨] ಕಂಡು ಗುರುನಾಡಿನ ಕಲ್ಲೂರು ಹಳ್ಳಿಯ ಕನ್ನಿಕ್ಕೈ ಎಂಬ ತೆರಿಗೆ, ಕೆಲ್ಲಪೂಸುರ್‌ಪುಲ್ಲಚ್‌ಚೇರಿಯ ಉಳುಮೆಗೆ ಯೋಗ್ಯವಾದ ೧೨ ಕಂಡುಗ ಭೂಮಿ, ಹಾಗೂ ಟೈನಕೊಟ್ಟೈನ ಭೂಮಿಯನ್ನು ಜೈನ ದೇವಾಲಯಕ್ಕೆ ಕೆಲಸೂರಿನ ವಿಕ್ರಮಚೋಳಪೆರುಮಾಡಿ ಗಾಮುಂಡನು ನೀಡಿದ ದಾನವನ್ನು ಕುರಿತು ಮಾಹಿತಿ ನೀಡುತ್ತದೆ.

ದೇವಾಲಯದ ನಿರ್ಮಾಣ ಕಾರ್ಯ ಅಥವಾ ದಾನದತ್ತಿಯನ್ನು ನೀಡುವ ಉದ್ದೇಶ ಧಾರ್ಮಿಕ ಲಾಭ ಪಡೆಯುವುದು. ಒಬ್ಬ ಮನುಷ್ಯ ಕೇವಲ ಹೆಚ್ಚಿನ ಆಸ್ತಿ ಅಥವಾ ಅಧಿಕಾರ ಹೊಂದಿದರೇ ಸಾಲದು ಬದಲಿಗೆ ತನ್ನ ಆಧಾಯದ ಒಂದಿಷ್ಟು ಭಾಗ ದಾನ ಧರ್ಮ ಕಾರ್ಯಗಳಲ್ಲಿ ಬಳಸುವುದರಿಂದ ಪುಣ್ಯ ಲಭಿಸುತ್ತದೆ ಎಂಬ ನಂಬಿಕೆ. ಇದರ ಹೆಚ್ಚಿನ ಲಾಭವನ್ನು ಪಡೆದವರು ಪುರೋಹಿತರು ಹಾಗೂ ಅವರ ಬಳಗ. ಪುರೋಹಿತರು ಸಮಾಜದಲ್ಲಿ ಅವರು ದೇವರ ಪ್ರತಿನಿಧಿಗಳಾಗಿದ್ದರು. ಇನ್ನು ಅರಸರುಗಳ ವಿಚಾರದಲ್ಲಿ ಧಾರ್ಮಿಕ ಲಾಭಕ್ಕಾಗಿ ಸಂಪತ್ತಿನ ಸ್ವಲ್ಪ ಬಾಗ ಪುರೋಹಿತ

ವರ್ಗಕ್ಕೆ ನೀಡಿ ಬದಲಿಗೆ ಪುರೋಹಿತ ವರ್ಗದವರು ತಮ್ಮ ಧಾರ್ಮಿಕ ಕಾರ್ಯವನ್ನು ನಡೆಸುವ ಸಲುವಾಗಿ ಹಾಗೂ ಅರಸರುಗಳು ನ್ಯಾಯಬದ್ಧವಾಗಿ ಈ ಭೂಮಿಯ ಮುಖಂಡರು ಎಂದು ಘೋಷಿಸಿ ಜನಗಳ ದೃಷ್ಟಿಯಲ್ಲಿ ಅರಸನ ಘನತೆ ಹೆಚ್ಚಿಸುತ್ತಿದ್ದರು.

## ಆಧಾರಸೂಚಿ


೧. ಎ.ಕ., ನಂಜನಗೂಡು, ೨೧೩.

೨. ಎ.ಕ., IV, ಚಾಮರಾಜನಗರ, ೩೦೩.

೩. ಅದೇ, III, ನಂಜನಗೂಡು, ೨೦೧.

೪. ಅದೇ, III, ಗುಂಡ್ಲುಪೇಟೆ, ೫೬.

೫. ಅದೇ, III, ಹೆಗ್ಗಡದೇವನಕೋಟೆ, ೫೮.

೬ ಅದೇ, v, ಟೀ. ನರಸೀಪುರ ತಾಲ್ಲೂಕು, ೨೨೯.

೭. ಅದೇ, III, ಗುಂಡ್ಲುಪೇಟೆ, ೫೬.

೮. ಅದೇ, III, ನಂಜನಗೂಡು, ೨೧೫.

೯. ಅದೇ, III, ನಂಜನಗೂಡು, ೨೧೩.

೧೦. ಅದೇ, v, ಟಿ. ನರಸೀಪುರ, ೨೩೨.

೧೧. ಅದೇ, III, ನಂಜನಗೂಡು, ೨೪೧.

೧೨. ಅದೇ, III, ನಂಜನಗೂಡು, ೨೧೫.

೧೩. ಅದೇ, VI, ಶ್ರೀರಂಗಪಟ್ಟಣ, ೭೮.

೧೪. ಅದೇ, IV, ಚಾಮರಾಜನಗರ, ೧೪೫.

೧೫. ಅದೇ, IV, ಚಾಮರಾಜನಗರ, ೩೦೩.

೧೬. ಅದೇ, III, ನಂಜನಗೂಡು, ೧೬೯.

೧೭. ಅದೇ, III, ಹೆಗ್ಗಡದೇವನಕೋಟೆ, ೩೨.

೧೮. ಅದೇ, VII, ಮಂಡ್ಯ, ೫೩.

೧೯. Ramachandrao Agamakosha Vol.No.2 Shaiva and Sakta Agamas. Kalpatharu Research Academy Post Box No. 1857.

೨೦. R. Champakalakshmi - Religion Tradition and Ideology Pre- Colonial South India Pg. 289.

೨೧. ಎ.ಕ., ನಂಜನಗೂಡು, ೨೪೧.

೨೨. ಇ.ಸಿ. III, ನಂಜನಗೂಡು, ೨೦೧.

೨೩. ಅದೇ, III, ನಂಜನಗೂಡು, ೩೪೮.

೨೪. ಅದೇ, III, ಗುಂಡ್ಲುಪೇಟೆ, ೫೬.

೨೫. ಅದೇ, III, ಹೆಗ್ಗಡದೇವನಕೋಟೆ, ೩೨.

೨೬. ಅದೇ, III, ಹೆಗ್ಗಡದೇವನಕೋಟೆ, ೬೦.

೨೭. ಅದೇ, IV, ಚಾಮರಾಜನಗರ ತಾಲ್ಲೂಕು, ೧೪೬.

೨೮. ಅದೇ, V, ಟಿ. ನರಸೀಪುರ, ೧೯೦.

೨೯. ಅದೇ, IV, ಚಾಮರಾಜನಗರ, ೩೦೩.

೩೦. ಅದೇ, VI, ಶ್ರೀರಂಗಪಟ್ಟಣ, ೭೮.

೩೧. ಅದೇ, V, ಟಿ. ನರಸೀಪುರ, ೨೩೯.

೩೨. ಅದೇ, III, ಹೆಗ್ಗಡದೇವನಕೋಟೆ, ೩೨.

೩೩. ಅದೇ IV, ಚಾಮರಾಜನಗರ, ೩೦೩.

೩೪. ಅದೇ V, ಟಿ. ನರಸೀಪುರ, ೧೪೨.

೩೫. ಅದೇ III, ನಂಜನಗೂಡು, ೨೧೫.

೩೬. ಅದೇ, VI, ಚಾಮರಾಜನಗರ, ೧೪೫.

೩೭. ಅದೇ, VI, ಪಾಂಡವಪುರ, ೪೪.

೩೮. ಅದೇ, III, ಹೆಗ್ಗಡದೇವನಕೋಟೆ, ೫೮.

೩೯. ಅದೇ, III, ಗುಂಡ್ಲುಪೇಟೆ, ೫೬.

೪೦. ಅದೇ, IV, ಚಾಮರಾಜನಗರ, ೧೪೬.

೪೧. ಅದೇ, III, ನಂಜನಗೂಡು, ೨೪೧.

೪೨. ಅದೇ, IV, ಚಾಮರಾಜನಗರ, ೧೪೬.

೪೩. ಅದೇ, III, ಹೆಗ್ಗಡದೇವನಕೋಟೆ, ೫೯.

೪೪. ಎ.ಕ., ಟಿ. ನರಸೀಪುರ, ೨೩೦.

೪೫. ಅದೇ, ೨೩೩.

೪೬ ಅದೇ, ೨೨೯.

೪೭. ಅದೇ, ೨೩೨.

೪೮. ಅದೇ, ೨೩೯.

೪೯. ಅದೇ, ೨೩೩.

೫೦. ಅದೇ, ೩೨೩.

೫೧. Malini Adiga the Making of Southren Karnataka Page No. 316.

೫೨. ಎ.ಕ., ೩, ಗುಂಡ್ಲುಪೇಟೆ. ೧೦೨.



# "ಮಧ್ಯಮಲೆನಾಡಿನಲ್ಲಿ ಜೈನಧರ್ಮದ ಬೆಳವಣಿಗೆ"

**ಡಾ. ಕೆ.ಪಿ. ಪ್ರಕಾಶ್***

**ಸು**ಮಾರು ಸಾವಿರಾರು ವರ್ಷಗಳ ಭವ್ಯ ಇತಿಹಾಸ ಹೊಂದಿರುವ ಮಧ್ಯಮಲೆನಾಡು ಸಹ್ಯಾದ್ರಿ ಪರ್ವತ ಶ್ರೇಣಿಯ ತಪ್ಪಲಿನಲ್ಲಿಯ ರಮಣೀಯ ಪ್ರದೇಶಗಳಿಂದ ಆವೃತವಾಗಿದ್ದು, ತಪೋಭೂಮಿ, ಕರ್ಮಭೂಮಿ ಮತ್ತು ಜ್ಞಾನ ಭೂಮಿಯಾಗಿದ್ದು ಸಾಕಷ್ಟು ವೈವಿಧ್ಯತೆಯನ್ನು ಹೊಂದಿದೆ. ಶ್ರೀಮಂತವಾದ ಸಂಸ್ಕೃತಿಯ ಪರಂಪರೆ ಹೊಂದಿದ್ದು ಪ್ರಾಗೈತಿಹಾಸಿಕ ನೆಲೆವೀಡಾಗಿಯೂ ಬೆಟ್ಟ, ಗುಡ್ಡ, ಹಳ್ಳ, ನದಿ, ತೊರೆ, ಜಲಪಾತಗಳಿಂದ ಕೂಡಿದ ದಟ್ಟ ಮಲೆನಾಡು ಭಾಗವಾಗಿದೆ.

ಈ ಹಿನ್ನೆಲೆಯ ಭೌಗೋಳಿಕ ದೃಷ್ಟಿಕೋನದಲ್ಲಿ ಅಧ್ಯಯನದ ಕ್ರಮಗಳನ್ನು ನಿರೂಪಿಸುವ ಸಂದರ್ಭದಲ್ಲಿ ಮಧ್ಯಮಲೆನಾಡು ಎನ್ನುವ ತೀರ್ಥಹಳ್ಳಿ, ಕೊಪ್ಪ, ಶೃಂಗೇರಿ ಮೂರು ತಾಲ್ಲೂಕು ಪ್ರದೇಶಗಳು ಭೌಗೋಳಿಕವಾಗಿ ಸಾಮ್ಯತೆಯನ್ನು ಹೊಂದಿದ್ದು ಇನ್ನಿತರ ಪ್ರದೇಶಗಳಿಂದ ಭಿನ್ನವಾಗಿದೆ. ಈ ಮೂರು ತಾಲ್ಲೂಕುಗಳು ತಾಲ್ಲೂಕು ಕೇಂದ್ರಗಳಿಂದ ಸುಮಾರು ೬೦ ಕಿ.ಮೀ. ದೂರದವರೆಗೂ ದಟ್ಟ ಮಲೆನಾಡಿನ ಭಾಗದಿಂದ ಆವೃತವಾಗಿ ಮಲೆನಾಡಿನ ಮಧ್ಯಭಾಗದಲ್ಲಿ ಪಶ್ಚಿಮ ಭಾಗದಲ್ಲಿ ಕರಾವಳಿಯ ಘಟ್ಟ ಪ್ರದೇಶಗಳು ಪೂರ್ವದಲ್ಲಿ ದೂರದ ಅರೆಮಲೆನಾಡಿನ ಪ್ರದೇಶಗಳು ಆವರಿಸಿಕೊಂಡಿರುವುದರಿಂದ ಮಧ್ಯಮಲೆನಾಡಿನ ಕೇಂದ್ರಭಾಗವೆಂದು ಕರೆಯಲಾಗುತ್ತದೆ. ಮಧ್ಯಮಲೆನಾಡು ಎಂಬ ಪದಕ್ಕೆ ನಿಖರವಾದ ಅರ್ಥವನ್ನು ಅಥವಾ ವ್ಯಾಪ್ತಿಯನ್ನು ನಿಗದಿಪಡಿಸುವ ಕೆಲಸ ಕೈಗೊಂಡಾಗ ಕರ್ನಾಟಕದ ಭೌಗೋಳಿಕ ನಕ್ಷೆಯಲ್ಲಿ ಮೂರು ತಾಲ್ಲೂಕುಗಳು ಮಲೆನಾಡಿನ ಕೇಂದ್ರಸ್ಥಾನವೆಂದು ಸಾದರಪಡಿಸಬಹುದಾಗಿದೆ.

ಮಧ್ಯಮಲೆನಾಡು ಅಂದಿನ ಕಾಲದಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪ್ರಧಾನ ಕೇಂದ್ರವಾಗಿತ್ತು ಎಂಬುದಕ್ಕೆ ಶಾಸನಗಳು ವಿಪುಲವಾದ ಮಾಹಿತಿಯನ್ನು ನೀಡುವುದರ ಮೂಲಕ ಇಲ್ಲಿನ ಭವ್ಯ ಇತಿಹಾಸಕ್ಕೆ ಮೆರಗನ್ನು ನೀಡುತ್ತವೆ. ಪ್ರಮುಖವಾಗಿ ಆಳ್ವಾರರು, ಸಾಂತರರು, ಹೊಯ್ಸಳರು, ಆರಗದ ಮಾಂಡಳಿಕರು, ಕಳಸ-ಕಾರ್ಕಳದ ಪ್ರಭುಗಳು, ದಾನಿವಾಸ ಒಡೆಯರು, ಕೆಳದಿ ನಾಯಕರು, ಮೈಸೂರು ಒಡೆಯರು ಈ ಪ್ರದೇಶಗಳಲ್ಲಿ ನೇರವಾಗಿ ಆಡಳಿತ ನಡೆಸಿದ್ದು, ಇಲ್ಲಿನ ಇತಿಹಾಸಕ್ಕೆ ಎಲ್ಲಾ ಕಾಲಘಟ್ಟದಲ್ಲಿ ವಿಪುಲವಾದ ಕೊಡುಗೆ ನೀಡಿದ್ದಾರೆ.

ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಬಹುತೇಕ ಕರ್ನಾಟಕ ಜೈನಧರ್ಮದ ಇತಿಹಾಸವೇ ಆಗಿದೆ. ಕರ್ನಾಟಕದಲ್ಲಿ ಅತಿಪ್ರಚಾರ ಪಡೆದು ಬಹುಜನರ ಪ್ರೀತಿಗೆ ಪಾತ್ರವಾದ ಧರ್ಮವೆಂದರೆ ಜೈನಧರ್ಮ. ಬೌದ್ಧರ ಹಾಗೆಯೇ ಜೈನರೂ ಕೂಡ ಕ್ರಿಸ್ತಪೂರ್ವದಲ್ಲೇ ಕರ್ನಾಟಕಕ್ಕೆ ಬಂದಿದ್ದರು ಎಂಬುದಕ್ಕೆ ಶ್ರವಣಬೆಳಗೊಳ ಶಾಸನ ಆಧಾರ ಒದಗಿಸುತ್ತದೆ. ಗುರುಭದ್ರಬಾಹುನೊಂದಿಗೆ ಚಂದ್ರಗುಪ್ತನು ಸಿಂಹಾಸನವನ್ನು ತ್ಯಜಿಸಿ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದನು ಎಂದು ತಿಳಿದುಬರುತ್ತದೆ. ಜೈನಧರ್ಮದ ಇತಿಹಾಸ ಮಹಾವೀರನಿಗಿಂತಲೂ ಬಹಳಷ್ಟು ಹಿಂದಕ್ಕೆ ಹೋಗುವುದರಿಂದ ಅದರ ಪ್ರತಿಪಾದಕ ಸುಧಾರಕ ಮತ್ತು ಜೈನಧರ್ಮದ ಪ್ರವರ್ತಕ ಭಗವಾನ್ ವೃಷಭನೆಂಬುದು ಈಗ ನಿರ್ವಿವಾದದ ವಿಷಯವಾಗಿದೆ.

ಕೆಲವೊಂದು ಐತಿಹಾಸಿಕ ಆಧಾರಗಳು ವೃಷಭನನ್ನು ಚಾರಿತ್ರಿಕ ಪುರುಷನನ್ನಾಗಿಸಿದೆ. ವೃಷಭದೇವನ ನಂತರದ ವರ್ಷಗಳಲ್ಲಿ ೨೩ ಜನ ತೀರ್ಥಂಕರರು ಜೈನಧರ್ಮದ ಪ್ರವರ್ತನೆಗೈದಿದ್ದಾರೆ. ಪಾರ್ಶ್ವನಾಥ ಹಾಗೂ ವರ್ಧಮಾನ ಮಹಾವೀರನನ್ನು ಈ ಧರ್ಮದ ಪ್ರವರ್ತಕರೆಂದು ಗುರುತಿಸಲಾಗಿದೆ. ಇವರು ಧರ್ಮದ ಮಹಾನ್ ತತ್ವಗಳನ್ನು ಉಪದೇಶಿಸಿದ್ದಾರೆ.

ಜೈನಧರ್ಮ ಕರ್ನಾಟಕದಲ್ಲಿ ವ್ಯಾಪಕವಾಗಿ ಬಾಳಿ ಬದುಕಿದ ಧರ್ಮಗಳಲ್ಲಿ ಒಂದು. ಕರ್ನಾಟಕದಲ್ಲಿ ಕ್ರಿ.ಪೂ. ೩ನೆಯ ಶತಮಾನದಿಂದ ಇದು ಅಸ್ತಿತ್ವದಲ್ಲಿದ್ದಿತೆಂದು ವಿದ್ವಾಂಸರು ಭಾವಿಸುತ್ತಾರೆ.

ಈ ಧರ್ಮದ ಮೂರು ಶಾಖೆಗಳಾದ ದಿಗಂಬರ, ಶ್ವೇತಾಂಬರ ಮತ್ತು ಯಾಪನೀಯಗಳು ಮಧ್ಯಮಲೆನಾಡಿನ

* ಸಹಾಯಕ ಪ್ರಾಧ್ಯಾಪಕರು, ಶ್ರೀ ಜೆಸಿಬಿಎಂ ಕಾಲೇಜು, ಶೃಂಗೇರಿ.

ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದವು. ಶೃಂಗೇರಿ, ಕೊಪ್ಪ, ಕಲ್ಲುಬಸ್ತಿ, ಕಣಿವೆ, ಮೇಗುಂದ, ಮೇಳಿಗೆ, ಹೊಂಬುಜ, ಕುಂದಾದ್ರಿ, ದಾನಸಾಲೆ ಮುಂತಾದ ಸ್ಥಳಗಳಲ್ಲಿ ಜಿನಮಂದಿರಗಳಿವೆ. ಶಾಸನಗಳಲ್ಲಿ ಉಲ್ಲೇಖವಾಗಿರುವ ಪ್ರಥಮ ಧರ್ಮ ಜೈನಧರ್ಮ. ಈ ಧರ್ಮಕ್ಕೆ ಸಂಬಂಧಿಸಿದ ಹಲವಾರು ಶಾಸನಗಳು ಪ್ರಾಪ್ತವಾಗಿವೆ.

ಈ ಭಾಗದಲ್ಲಿ ಶಾಸನೋಕ್ತವಾಗಿರುವ ಮೊದಲರಾಜ ವಂಶವೆಂದರೆ ದಕ್ಷಿಣ ಕನ್ನಡದ ಅಳುಪರು. ಇವರು ಕ್ರಿ.ಶ. ೪ನೇ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದವರೆಗೂ ಆಳ್ವಿಕೆ ನಡೆಸಿ ಮೊದಲಿಗೆ ಸ್ವತಂತ್ರರಾಗಿ ಆ ನಂತರ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರದ ಮಾಂಡಳಿಕರಾಗಿ ಬಹುದೀರ್ಘಕಾಲ ಆಳ್ವಿಕೆ ನಡೆಸಿದರು. ಮೊದಲಿಗೆ ಮಂಗಳೂರನ್ನು ಅನಂತರ ಬಾರಕೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು.

ಅಳುಪರು ಪ್ರಧಾನವಾಗಿ ಜೈನಮತಾವಲಂಬಿಗಳಾಗಿದ್ದರು. ಮೊದಲನೆಯ ಕುಲಶೇಖರನ ರಾಣಿಯಾದ ಮಹಾದೇವಿಯು ಜೈನಮತಾವಲಂಬಿಯಾಗಿದ್ದು, ಯಥೇಚ್ಛವಾಗಿ ದಾನದತ್ತಿಗಳನ್ನು ನೀಡಿ ಖ್ಯಾತಿ ಪಡೆದವಳಾಗಿದ್ದಾಳೆ.

ಸಾಂತರರು ಮೂಲತಃ ಜೈನಮತಾವಲಂಬಿಗಳಾಗಿದ್ದರು. ನಂತರದಲ್ಲಿ ಅಂದರೆ ಸುಮಾರು ಕ್ರಿ.ಶ. ೧೨ನೇ ಶತಮಾನದಲ್ಲಿ ಶೈವಧರ್ಮಕ್ಕೆ ಮತಾಂತರ ಹೊಂದಿದ್ದರೆಂದು ಕೆಲವೊಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದರೂ ಸಹ ಇದರ ಬಗ್ಗೆ ಇನ್ನೂ ಹೆಚ್ಚಿನ ಚರ್ಚೆಗಳಿಗೆ ಅವಕಾಶಗಳಿವೆ.

ಸಾಂತರರು ಯಾವುದೋ ಒಂದು ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ತಮ್ಮ ನೆಲೆವೀಡಾದ ಹೊಂಬುಜವನ್ನು ತ್ಯಜಿಸಿ, ಸೇತುವಿಗೆ (ಹೊಸನಗರ) ಅನಂತರ ಕಳಸಕ್ಕೆ ಬದಲಾವಣೆ ಮಾಡಿದಂತೆ ಶಾಸನಗಳಿಂದ ಕಂಡುಬರುತ್ತದೆ. ಇದಕ್ಕೆ ಸಾಕ್ಷಿ ಎನ್ನುವಂತೆ ಸೇತುವಿನ ಶಾಸನಗಳು ಜಿನಸ್ತುತಿಯನ್ನು ಹೊರತುಪಡಿಸಿ, ಶಿವಸ್ತುತಿಯಿಂದ ಪ್ರಾರಂಭವಾಗುತ್ತವೆ. ರಾಜರು ತಮ್ಮನ್ನೂ ಶಾಸನಗಳಲ್ಲಿ 'ಪೊಂಬುಜದ ಪುರವರಧೀಶ್ವರರು' ಎಂದು ಕರೆಯಿಸಿಕೊಂಡಿದ್ದಾರೆ. ಇದಕ್ಕೆ ಮೂಲಕಾರಣ ಜೈನಧರ್ಮದ ಅವನತಿ. ಮೂರು ಅಥವಾ ನಾಲ್ಕನೇ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಅತ್ಯಂತ ರಾಜವೈಭವದಿಂದ ಬಾಳಿ ಬೆಳಗಿ ರಾಜಧರ್ಮವಾಗಿ ಮೆರೆದು ನಂತರದ ಕಾಲಘಟ್ಟದಲ್ಲಿ ನಿಧಾನವಾಗಿ ಅವನತಿಯ ಹಾದಿ ಹಿಡಿದಿದೆ. ಇದಕ್ಕೆ ಪ್ರಧಾನ ಅಂಶವೆಂದರೆ ಬಿಟ್ಟಿದೇವ ರಾಮಾನುಜರ ಪ್ರೇರಣೆಯಿಂದ ವೈಷ್ಣವನಾದುದು ಬಹುದೊಡ್ಡ ಆಘಾತ. ಅಂದರೆ ಇದೇ ಸಮಯಕ್ಕೆ ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಾಜಧರ್ಮವಾಗಿದ್ದ ಜೈನಧರ್ಮಕ್ಕೆ ಕ್ರಮೇಣ ನೆಲೆ ಇಲ್ಲದಂತಾಯಿತು. ವೀರಶೈವ ಧರ್ಮದ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳು ಈ ಧರ್ಮಕ್ಕೆ ಕೊಡಲಿಪೆಟ್ಟುಗಳಾದವು. ಸಾಂತರರು, ಕಾರ್ಕಳದ ಬೈರರಸ ಒಡೆಯರು, ದಾನಿವಾಸ ಪ್ರಭುಗಳು ವೀರಶೈವ ಧರ್ಮದ ಪ್ರತಿಪಾದಕರಾಗಿದ್ದು ಆರಗದ ಒಡೆಯರು ಹಿಂದೂ ಧರ್ಮವನ್ನು ಎತ್ತಿಹಿಡಿದಿದ್ದು, ಜೈನವ್ಯಾಪಾರಿ ವರ್ಗಗಳು ವೀರಶೈವಕ್ಕೆ ಮತಾಂತರಗೊಂಡಿದ್ದು ಜೈನಧರ್ಮಕ್ಕೆ ಇನ್ನಿಲ್ಲದ ಹೊಡೆತ ನೀಡಿದ್ದವು. ಆಂತರಿಕ ಕಲಹಗಳು, ಕಠಿಣ ಆಚರಣೆಗಳ ಕಾರಣಗಳಿಂದಾಗಿ ಈ ಧರ್ಮ ಇತರ ಧರ್ಮಗಳ ಜೊತೆ ಸ್ಪರ್ಧಿಸಲಾರದೆ ಹೋದಂತಹ ಸಂದರ್ಭದಲ್ಲಿ ಶೈವಧರ್ಮ ಈ ಭಾಗದಲ್ಲಿ ಪ್ರಧಾನವಾಗಿ ತನ್ನ ಪ್ರಾಬಲ್ಯವನ್ನು ಕಂಡುಕೊಂಡಿತು.

ಸಾಂತರರು ತಮ್ಮನ್ನು ಪಾರ್ಶ್ವನಾಥ ತೀರ್ಥಂಕರನ ಉಗ್ರವಂಶದವರೆಂದು, ಉತ್ತರಮಥುರದಿಂದ ಬಂದವರೆಂದು, ಪದ್ಮಾವತೀಲಬ್ಧ ವರಪ್ರಸಾದರೆಂದು ಕರೆದುಕೊಂಡಿದ್ದಾರೆ. ಇಂದಿಗೂ ಸಹ ಹುಂಚದಲ್ಲಿ ಜೈನಮಠವಿದ್ದು, ಪದ್ಮಾವತಿದೇವಿ ಪೂಜಿಸಲ್ಪಡುತ್ತಿದ್ದು ಅನೇಕ ಪಾರ್ಶ್ವನಾಥ ಬಸದಿಗಳು ಇಲ್ಲಿವೆ.

ಸಾಂತರರ ಪ್ರಮುಖ ಅರಸಿಯಾದ ಚಾಗಲದೇವಿಯು ನೂಕಿಯಬ್ಬೆಯ ಬಸದಿಯ ಮುಂದೆ ಮಾಡಿಸಿರುವ ಮಕರತೋರಣದ ಉಲ್ಲೇಖ ಶಾಸನಗಳಿಂದ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಸಾಂತರರು ಜೈನ ಧರ್ಮಾವಲಂಬಿಯಾಗಿದ್ದು ಬೇರೆ ಧರ್ಮಗಳ ಬೆಳವಣಿಗೆಗೆ ಸಹಾಯಕರಾಗಿದ್ದರೆಂದು ಶಾಸನಗಳ ಮೂಲಕ ತಿಳಿಯಬಹುದಾಗಿದೆ. ಇನ್ನು ಈ ಭಾಗದಲ್ಲಿ ಆಳಿದ ಸೇನರು (ಸೇನಾವಾರ) ಸುಮಾರು ಕ್ರಿ.ಶ. ೭ನೆಯ ಶತಮಾನದಿಂದ ಕ್ರಿ.ಶ. ೧೧ನೆಯ ಶತಮಾನದವರೆಗೆ ರಾಜ್ಯಭಾರ ಮಾಡಿದ್ದು ೪ ತಲೆಮಾರಿನ ಸೇನಾವಾರರನ್ನು ಗುರುತಿಸಬಹುದು. ಧಾರ್ಮಿಕವಾಗಿ ಸರ್ವಧರ್ಮಸಮನ್ವಯಕಾರರಾಗಿದ್ದು ಶಿವದೇವಾಲಯಗಳನ್ನು ಮತ್ತು ಜಿನಾಲಯವನ್ನು ನಿರ್ಮಿಸಿದರು. ಶೈವ ದೇವಾಲಯಗಳಿಗಾಗಿ ಭೂದಾನವನ್ನು ನೀಡಿರುವುದು, ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವುದು ಶಾಸನಗಳಿಂದ ವೇದ್ಯವಾಗುತ್ತದೆ. ಇವರು ಜೈನಧರ್ಮಕ್ಕೆ ವಿಶೇಷ ಒಲವು ತೋರಿದ್ದರು. ಚಿಕ್ಕಮಗಳೂರು (೧೭೭) ಕಡವಂತಿ ಶಾಸನದಲ್ಲಿ ನಿರವದ್ಯಯ ಎನ್ನುವನು ನಿರವದ್ಯ ಜಿನಾಲಯವನ್ನು ನಿರ್ಮಿಸಿದನು. ದೊರೆಯಾದ ಖಚರಕುಂದರ್ಪನು ಅದನ್ನು ಮಾನ್ಯವನ್ನಾಗಿ ಮಾಡಿ ಜಿನಾಲಯಕ್ಕೆ ಅರ್ಪಿಸಿದನು. ಈ ನಿರವದ್ಯನು ದೇವಗಣ ಮತ್ತು ಪಾಷಾಣನ್ವಯದ ಅಂಕದೇವಭಟ್ಟಾರರ ಶಿಷ್ಯನೆಂದು ಹೇಳಲಾಗಿದೆ.

ಕಾಲಮಾನದ ದೃಷ್ಟಿಯಿಂದ ಮುಂದಿನ ಎರಡು ಶಾಸನಗಳು ಶೃಂಗೇರಿಯಲ್ಲಿ ದೊರೆತಿದೆ. ಶೃಂಗೇರಿಯ ೨೫(೧೧೬೧) ಮತ್ತು ೨೬(೧೧೫೦)ನೆಯ ಶಾಸನಗಳೂ ಪಾರ್ಶ್ವನಾಥ ಬಸದಿಯಲ್ಲಿ ದೊರಕಿವೆ. ಮೊದಲನೆಯದರಲ್ಲಿ ಕಾಣೂರುಗಣ, ಮೂಲಸಂಘ ಹಾಗೂ ಪುಸ್ತಕಗುಚ್ಛದ ಉಲ್ಲೇಖವಿದೆ. ಎರಡನೇ ಶಾಸನದಲ್ಲಿ ಬಸದಿಗಾಗಿ ಕೊಟ್ಟ ಭೂದಾನ ಹಾಗೂ ತೆರಿಗೆಗಳ ಉಲ್ಲೇಖವಿದೆ. ವಿಜಯ ನಾರಾಯಣ ಶಾಂತಿಸೆಟ್ಟಿಯ ಮೊಮ್ಮಗನೂ, ಹೆಮ್ಮಾಡಿಸೆಟ್ಟಿ ಹಾಗೂ ಸಿರಿಯಾಸೆಟ್ಟಿಯ ಮತನೂ ಆಗಿದ್ದ ಮಾರಿಸೆಟ್ಟಿಯ ಜ್ಞಾಪಕಾರ್ಥವಾಗಿ ಈ ಬಸದಿಯನ್ನು ನಿರ್ಮಿಸಲಾಯಿತು. ಈ ಬಸದಿಯು ಹೊಯ್ಸಳರ ಕಾಲಕ್ಕೆ ಸೇರಿದುದು. ಶೃಂಗೇರಿಯಲ್ಲಿ ಪುನಃ ಜೈನಶಾಸನ ಕಾಣಿಸಿಕೊಳ್ಳುವುದು ನಾಲ್ಕು ಶತಮಾನಗಳ ನಂತರ. ಶಾಸನ ಸಂಖ್ಯೆ ೨೭ನೆಯ ಮತ್ತು ೨೮ನೆಯ ಶಾಸನಗಳೆರಡೂ ಅನಂತನಾಥ ಹಾಗೂ ಚಂದ್ರನಾಥ ವಿಗ್ರಹಗಳ ಪೀಠದ ಮೇಲೆ ಕೆತ್ತಲ್ಪಟ್ಟಿವೆ. ಮೊದಲನೆಯದು ದೇವಣ್ಣಸೆಟ್ಟಿಯು ಇದನ್ನು ಸ್ಥಾಪಿಸಿದ ವಿಷಯವನ್ನು ತಿಳಿಸಿದರೆ, ಎರಡನೆಯದು ಬೊಮ್ಮರಸೆಟ್ಟಿಯು ಇದನ್ನು ಸ್ಥಾಪಿಸಿದ ವಿಷಯವನ್ನು ತಿಳಿಸುತ್ತದೆ.

ಈ ಮೇಲಿನ ಶಾಸನಗಳ ಸಮೀಕ್ಷೆಯಿಂದ ಕರ್ನಾಟಕ ದಲ್ಲಿ ಸುಮಾರು ಹನ್ನೆರಡನೆಯ ಶತಮಾನವರೆಗೂ ಜೈನಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಹೊಯ್ಸಳರ ಕಾಲದಲ್ಲಿ ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹ ದೊರಕಿತೆಂದೂ, ನಂತರ ಅದು ಕಡಿಮೆಯಾಯಿತೆಂದು ಗೊತ್ತಾಗುತ್ತದೆ. ವಿಜಯನಗರ ಕಾಲದಲ್ಲಿ ಈ ಧರ್ಮದ ಪುನರುಜ್ಜೀವನಕ್ಕೆ ಕೆಲವು ಪ್ರಯತ್ನಗಳನ್ನು ಮಾಡಿದರೂ, ಸಫಲವಾಗಲಿಲ್ಲ. ಮತ್ತೆ ಈ ಪ್ರದೇಶದಲ್ಲಿ ಜೈನಧರ್ಮವು ಪ್ರಾಚೀನ ಕಾಲದಲ್ಲಿ ಇದ್ದ ಉತ್ತುಂಗ ಸ್ಥಿತಿಯನ್ನು ತಲುಪಲೇ ಇಲ್ಲ.

ಆರಗದ ಅರಸರು ಜೈನಧರ್ಮಕ್ಕೂ ಉತ್ತೇಜನ ನೀಡಿದ್ದರು. ಅನೇಕ ಜೈನ ಮಂದಿರಗಳು, ಬಸದಿಗಳು ಇವರ ಕಾಲದಲ್ಲಿ ನಿರ್ಮಾಣವಾದವು. ಆರಗದಲ್ಲಿರುವ ಜೈನಬಸದಿಯು ಪಾಳು ಬಿದ್ದಿದೆ. ಗರ್ಭಗುಡಿಯಲ್ಲಿ ಮೂಲ ದೇವತೆಯ ವಿಗ್ರಹವಿಲ್ಲ, ರಂಗಮಂಟಪದಲ್ಲಿ ನಾಲ್ಕು ಸ್ತಂಭಗಳಿವೆ. ದ್ವಾರಪಟ್ಟಿಕೆಯ ಮೇಲೆ ತೀರ್ಥಂಕರರ ಮೂರ್ತಿಗಳಿವೆ. ಇಲ್ಲಿನ ವೀರಭದ್ರ ದೇವಾಲಯದ ಸಮುಚ್ಚಯದಲ್ಲಿರುವ ಜೈನತೀರ್ಥಂಕರರ ಮೂರ್ತಿಗಳು ಕ್ರಿ.ಶ. ೮ನೆಯ ಶತಮಾನದ ಚೈತ್ಯಾಲಯಕ್ಕೆ ಸಂಬಂಧಿಸಿದಂತೆ ಕಂಡುಬರುತ್ತವೆ.

ಜೈನಧರ್ಮ ಪ್ರಾಬಲ್ಯವಿದ್ದ ಕಾಲದಲ್ಲಿ ಮಲೆನಾಡಿನ ಜನರು ಅದರಲ್ಲೂ ವಿಶೇಷವಾಗಿ ಒಕ್ಕಲಿಗರು ಜೈನ ಭೂಮಾಲೀಕರ ಒಕ್ಕಲುಗಳಾಗಿದ್ದರೆಂದು ಊಹಿಸುವ ಸಾಧ್ಯತೆಗಳಿವೆ. ಜೈನಧರ್ಮದ ಪ್ರಾಬಲ್ಯ ಕುಗ್ಗಿ ವೈಷ್ಣವಮತ ಹೆಚ್ಚು ಪ್ರಚಾರಕ್ಕೆ ಬಂದ ದಿನಗಳಲ್ಲಿ ವ್ಯಾಪಾರ ಉದ್ಯಮದಲ್ಲಿ ನಿಪುಣರಾಗಿದ್ದ ಜೈನರು ತಮ್ಮ ಜಮೀನು ಮನೆಗಳನ್ನು ಇಲ್ಲಿಯವರಿಗೇ ಒಪ್ಪಿಸಿ ಹೋಗಿರುವ ಸಾಧ್ಯತೆಗಳಿವೆ. ಇಂದಿಗೂ ಜೈನವಂಶದವರ ಮನೆಗಳು ಉಳಿದುಬಂದಿವೆ. ತೀರ್ಥಹಳ್ಳಿ ತಾಲ್ಲೂಕಿನ ಗುಡ್ಡೇಕೇರಿ ಕಾಡಮ್ಮನವರ ಮನೆ ಜೈನರದ್ದು ಎಂದು ಹೇಳಲಾಗಿದೆ. ಈ ಮನೆಯ ರಚನಾವಿನ್ಯಾಸ, ಸುತ್ತಲಿನ ವಾತಾವರಣ ಜೈನ ನಿವಾಸಗಳ ನೆನಪನ್ನು ತಂದುಕೊಡುತ್ತದೆ. ತಪ್ಪು ಮಾಡಿದವರಿಗೆ ಪ್ರಾಯಶ್ಚಿತ್ತ ನೀಡುವ ಸಲುವಾಗಿ ಜೈನರು ನೆಟ್ಟಿದ್ದರೆಂದು ಹೇಳಲಾದ 'ಆಣೆಕಲ್ಲು' ಈ ಮನೆಯ ಆವರಣದಲ್ಲಿ ಈಗಲೂ ಇದೆ. ಈ ಕಲ್ಲನ್ನು ಸತ್ಯ ಪ್ರಮಾಣ ಮಾಡಲು ಈಗಲೂ ಬಳಸುತ್ತಾರೆ.

ತೀರ್ಥಹಳ್ಳಿ, ಕೊಪ್ಪ, ಶೃಂಗೇರಿಯಲ್ಲಿ ಬಹುಸಂಖ್ಯಾತ ಸಮುದಾಯವಾದ ಒಕ್ಕಲಿಗರು ಮೂಲತಃ ಜೈನರಾಗಿದ್ದು ನಂತರದ ಕಾಲಘಟ್ಟದಲ್ಲಿ ಪರಿವರ್ತನೆ ಹೊಂದಿದವರು ಎಂಬುವುದನ್ನು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪಿತೃಪಕ್ಷ ಮತ್ತಿತರ ಹಬ್ಬ ಆಚರಣೆಗಳಲ್ಲಿ ಹಸಿರು ಸೊಪ್ಪಿನಿಂದ ತಯಾರಿಸಿದ 'ಜೈನೆಡೆ' ಎಂಬ ಮೀಸಲು ಎಡೆಯನ್ನು ಮೊದಲಿಗೆ ಇಡುವುದು, ಸೂರ್ಯಾಸ್ತಕ್ಕೆ ಮೊದಲು ಊಟ ಮಾಡುವುದು, ಭಾನುವಾರ ಮಜ್ಜಿಗೆ ಕಡೆಯದಿರುವುದು, ಮನೆಗೆ ಅರವತ್ತು ತುಂಬಿದಾಗ 'ಅಣುವ್ರತ' ಆಚರಿಸುವುದು, ಜೈನಮನೆತನದ ಹೆಸರುಗಳನ್ನು ಉಳಿಸಿಕೊಂಡಿರುವುದು ಹಾಗೂ ಮೃದುಸ್ವಭಾವದವರಾಗಿರುವುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಜೈನಧರ್ಮದ ಅನುವಂಶೀಯತೆಯನ್ನು ಈ ಸಮುದಾಯದಲ್ಲಿ ಗುರುತಿಸಬಹುದು.





# ಕನಕದಾಸರ ಮಹದೇವಪುರದ ಭೇಟಿ–ನೈಜ ಐತಿಹಾಸಿಕ ಸಂಗತಿಯೇ?

**ಭೈರಪ್ಪ.ಎಂ.ಜಿ.* ಡಾ. ಶೆಲ್ವಪಿಳ್ಳೈ ಅಯ್ಯಂಗಾರ್**

ಹರಿದಾಸ ಸಾಹಿತ್ಯ ರಚನೆಯಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿ ದಾಸಶ್ರೇಷ್ಠ ಎಂಬ ಗೌರವವನ್ನು ಪಡೆದ ಕನಕದಾಸರು ಹಲವಾರು ತೀರ್ಥಕ್ಷೇತ್ರಗಳಿಗೆ ಭೇಟಿ ನೀಡುತ್ತಾ ಅಲ್ಲಿನ ದೇವತೆಗಳನ್ನು ಧನ್ಯತಾಭಾವದಿಂದ ಹಾಡಿ ಹೊಗಳಿರುವುದನ್ನು ಕಾಣಬಹುದು. ಇಂತಹ ಕನಕದಾಸರು ತಮ್ಮ ಯಾತ್ರೆಯ ಸಂದರ್ಭದಲ್ಲಿ ಮಹದೇವಪುರ ಗ್ರಾಮಕ್ಕೆ ಭೇಟಿ ನೀಡಿದ್ದು ನಿಜವೇ ಮತ್ತು ಇದು ಐತಿಹಾಸಿಕ ಸಂಗತಿಯೇ? ಎಂಬುದನ್ನು ವಿಮರ್ಶಿಸುವುದೇ ಈ ಲೇಖನದ ವಸ್ತು ವಿಷಯವಾಗಿದೆ.

ಭಕ್ತ ಕನಕದಾಸರು ಶ್ರೀಹರಿಯ ಪರಮಭಕ್ತರಾಗಿದ್ದು ಶ್ರೀ ರಾಮಾನುಜ ಮತಕ್ಕೆ ಪ್ರಮುಖವಾಗಿದ್ದ ಅನೇಕ ದಿವ್ಯ ಕ್ಷೇತ್ರಗಳಿಗೆ ಭೇಟಿ ನೀಡಿರುವುದು ಅವರ ಕೀರ್ತನೆಗಳಿಂದಲೇ ತಿಳಿದುಬರುವ ಸಂಗತಿಯಾಗಿದೆ. ಅವರ ಕೀರ್ತನೆಗಳಲ್ಲಿ ಬರುವಂತೆ ಅವರು ಈ ಕೆಳಗಿನ ಪ್ರದೇಶಗಳಿಗೆ ಭೇಟಿ ನೀಡಿದ್ದರು ಮತ್ತು ಅಲ್ಲಿನ ದೇವತೆಗಳ ಕುರಿತು ಸ್ತೋತ್ರ ರೂಪದಲ್ಲಿ ಕೀರ್ತನೆಗಳನ್ನು ಸಹ ರಚಿಸಿದ್ದಾರೆ.

೧. ಶ್ರೀರಂಗಂ–ತಮಿಳುನಾಡು (ದಿವ್ಯಕ್ಷೇತ್ರ)
೨. ತಿರುಕ್ಕೋವಿಲೂರು–ತಮಿಳುನಾಡು (ದಿವ್ಯಕ್ಷೇತ್ರ)
೩. ಕಂಚಿ–ತಮಿಳುನಾಡು (ದಿವ್ಯಕ್ಷೇತ್ರ)
೪. ತಿರುಪತಿ–ಆಂಧ್ರಪ್ರದೇಶ (ದಿವ್ಯಕ್ಷೇತ್ರ)
೫. ಅಹೋಬಲ–ಆಂಧ್ರಪ್ರದೇಶ (ದಿವ್ಯಕ್ಷೇತ್ರ)
೬. ಮೇಲುಕೋಟೆ–ಕರ್ನಾಟಕ (ದಿವ್ಯಕ್ಷೇತ್ರ) (ಅಭಿಮಾನ ಕ್ಷೇತ್ರ)
೭ ಬೇಲೂರು–ಕರ್ನಾಟಕ (ಅಭಿಮಾನ ಕ್ಷೇತ್ರ)
೮. ಮದ್ದೂರು–ಕರ್ನಾಟಕ
೯. ಶ್ರೀರಂಗಪಟ್ಟಣ–ಕರ್ನಾಟಕ
೧೦. ಮುತ್ತತ್ತಿ–ಕರ್ನಾಟಕ
೧೧. ಹಂಪಿ–ಕರ್ನಾಟಕ
೧೨. ಉಡುಪಿ–ಕರ್ನಾಟಕ
೧೩. ಗಯಾ–ಉತ್ತರ ಪ್ರದೇಶ
೧೪. ಮಥುರಾ–ಉತ್ತರ ಪ್ರದೇಶ (ದಿವ್ಯಕ್ಷೇತ್ರ)
೧೫. ಪಂಡರಾಪುರ–ಮಹಾರಾಷ್ಟ್ರ
೧೬. ಇಂಗಳಗೊಂದಿ–ಕರ್ನಾಟಕ
೧೭. ದಾನವಾಡ–ಕರ್ನಾಟಕ
೧೮. ಕಲುಬುರಿಗಿ–ಕರ್ನಾಟಕ

ಈ ಮೇಲ್ಕಂಡ ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿರುವುದನ್ನು ಸ್ವತಃ ಅವರೇ ತಮ್ಮ ಕೀರ್ತನೆಗಳಲ್ಲಿ ದಾಖಲಿಸಿದ್ದಾರೆ, ಆದರೆ ಕೆಲವು ಪ್ರದೇಶಗಳಿಗೆ ಅವರು ತಮ್ಮ ಯಾತ್ರೆಯ ಕಾಲದಲ್ಲಿ ಭೇಟಿ ಮಾಡಿದ್ದರೂ ಸಹ ಕೀರ್ತನೆಗಳಲ್ಲಿ ಅಥವಾ ಇನ್ನಿತರ ಸಾಹಿತ್ಯಕ ಹಾಗೂ ಶಾಸನಗಳಲ್ಲಿ ನಮಗೆ ದಾಖಲೆ ಕಂಡುಬರುವುದಿಲ್ಲವಾದ್ದರಿಂದ ಅಂತಹ ಭೇಟಿಗಳನ್ನು ನಾವು ಐತಿಹಾಸಿಕವಾಗಿ ಧೃಢಪಡಿಸುವುದು ಕಷ್ಟವಾಗಬಹುದು. ಆದರೆ ಸ್ಥಳೀಯ ಪರಂಪರೆ, ಮೌಖಿಕ ಇತಿಹಾಸ ಮತ್ತು ಇತರ ಸಮಕಾಲೀನ ಶಾಸನ ಹಾಗೂ ಸಾಹಿತ್ಯಕ ಆಧಾರಗಳಿಂದ ಪ್ರಮಾಣ ಪೂರ್ವಕವಾಗಿ ಇಂತಹ ಸಂಗತಿಗಳನ್ನು ಧೃಢಪಡಿಸಬಹುದು.

ದಾಸ ಶ್ರೇಷ್ಠ ಕನಕದಾಸರು ತಮ್ಮ ಯಾತ್ರೆಯ ಕಾಲಕ್ಕೆ ಅನೇಕ ಗ್ರಾಮಗಳಿಗೆ ಭೇಟಿ ಕೊಟ್ಟಿರಬಹುದಾದರೂ ಅವರ ಮಹದೇವಪುರದ ಗ್ರಾಮದ ಭೇಟಿ ಅತ್ಯಂತ ವಿಶಿಷ್ಟವೂ ರೋಚಕವೂ ಆಗಿದ್ದು, ಇಂದಿಗೂ ಕನಕರನ್ನು ಆರಾಧಿಸುವ ಅನೇಕ ಮನೆತನಗಳನ್ನು ನಾವು ಇಲ್ಲಿ ಕಾಣಬಹುದು. ಮತ್ತು ಕನಕರಿಗಾಗಿ ದೇವಾಲಯವೊಂದರ ನಿರ್ಮಾಣವನ್ನು ಸಹ ಇಲ್ಲಿ ಕಾಣಬಹುದು. ಬೇರೆ ಹಲವಾರು ಗ್ರಾಮಗಳನ್ನು ದಾಟಿ ಬಂದಿದ್ದರು ಅವುಗಳು ಅಷ್ಟು ಮಹತ್ವಗಳಿಸದೆ ಕೇವಲ

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸ ಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ.
** ಅಧ್ಯಕ್ಷರು, ಪ್ರವಾಸೋದ್ಯಮ ನಿರ್ವಹಣಾ ಶಾಸ್ತ್ರ & ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕನಾಟಕ ರಾಜ್ಯ ಮುಕ್ತ ವಿವಿ, ಮೈಸೂರು.

ಮಹದೇವಪುರ ಮಾತ್ರ ಪ್ರಸಿದ್ಧಿ ಗಳಿಸಲು ಕಾರಣ ಕನಕರಿಗೆ ಮತ್ತು ಈ ಊರಿಗೆ ಸಂಬಂಧಿಸಿದಂತೆ ಇರುವ ಕುತೂಹಲ ಕಾರಿ ಕತೆ.

**ಮೌಖಿಕ ಪರಂಪರೆಯ ಕಥೆ**

ಭಕ್ತ ಕನಕರು ತಮ್ಮ ಜೀವನದಲ್ಲಿ ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಕೈಗೊಂಡರು. ಬೇಲೂರಿನಿಂದ ಹೊರಟು ಮೇಲುಕೋಟೆ, ಶ್ರೀರಂಗಪಟ್ಟಣ ದರ್ಶನ ಮುಗಿಸಿ ಅವರು ಮಹದೇವಪುರಕ್ಕೆ ಭೇಟಿಕೊಟ್ಟರು. ಮಹದೇವಪುರ ಗ್ರಾಮಕ್ಕೆ ಬಂದಾಗ ಕಾವೇರಿ ನದಿ ಅಡ್ಡಲಾಗಿ ಹರಿಯುತ್ತಿದ್ದರಿಂದ ಅದನ್ನು ದಾಟಲು ಸ್ಥಳೀಯರು ಬಳಸುತ್ತಿದ್ದ ತೆಪ್ಪದ ಮೇಲೆ ಏರಿ ಆ ಬದಿಯ ದಡವನ್ನು ತಲುಪಲು ಚಿಂತಿಸಿದರು. ಕನಕರು ತಮ್ಮನ್ನು ನದಿ ದಾಟಿಸುವಂತೆ ತೆಪ್ಪ ನಡೆಸುವವರನ್ನು ಕೇಳಿಕೊಂಡಾಗ ತೆಪ್ಪದವರು ಕಜ್ಜಿರೋಗದಿಂದ ಬಳಲುತ್ತಿದ್ದ (ಒಂದು ವಿಧದ ಚರ್ಮರೋಗ) ಕನಕರನ್ನು ತೆಪ್ಪದಲ್ಲಿ ಕುಳ್ಳಿರಿಸಿಕೊಳ್ಳಲು ನಿರಾಕರಿಸುತ್ತಾರೆ. ಮತ್ತೊಂದು ಕಥೆಯ ಪ್ರಕಾರ ಅವರು ಶಿಷ್ಟರಲ್ಲ ಎಂದು ಸವರ್ಣೀಯ ಜನಾಂಗ ದವರು ಅವರನ್ನು ತೆಪ್ಪದಲ್ಲಿ ಏರಿಸಿಕೊಳ್ಳಲು ನಿರಾಕರಿಸುತ್ತಾರೆ.

ಆಗ ಕನಕರು ಈಜಿ ದಡ ಸೇರಲು ಸುಲಭವಲ್ಲದ ಪ್ರವಾಹಭರಿತ ಕಾವೇರಿ ನದಿಯಲ್ಲಿ ತಮ್ಮ ಪ್ರಯಾಣವನ್ನು ಮುಂದುವರೆಸಲು ಯೋಚಿಸಿ, ದಡದಲ್ಲಿ ಬೆಳೆದಿದ್ದ ಬಾಳೆ ಎಲೆ ಪಡೆದು, ಅದನ್ನೇ ತೆಪ್ಪವಾಗಿ ಉಪಯೋಗಿಸಿ ನದಿಯನ್ನು ದಾಟಲು ಆಲೋಚಿಸುತ್ತಾರೆ. ಅಲ್ಲಿನ ಸ್ಥಳೀಯರನ್ನು ಬಾಳೆ ಎಲೆ ಕೇಳಿದಾಗ ಕೆಲವು ರೈತರು ಇವರಿಗೆ ಬಾಳೆ ಎಲೆ ನೀಡಲು ನಿರಾಕರಿಸುತ್ತಾರೆ. ಆದರೆ ಮತ್ತೆ ಕೆಲವು ರೈತರು ಇವರಿಗೆ ಬಾಳೆ ಎಲೆಯನ್ನು ನೀಡಿ ನದಿ ದಾಟಲು ಸಹಾಯ ಮಾಡುತ್ತಾರೆ. ಎಲ್ಲರೂ ನೋಡುತ್ತಿದ್ದಂತೆ ಬಾಳೆ ಎಲೆಯನ್ನೇ ತೆಪ್ಪದಂತೆ ಬಳಸಿ, ಅದರ ಮೂಲಕ ನದಿಯನ್ನು ಪವಾಡಸದೃಶ ರೀತಿಯಲ್ಲಿ ದಾಟುತ್ತಾರೆ.

ಆಗ ಕನಕರು ತಮಗೆ ಬಾಳೆ ಎಲೆ ನೀಡಿದ ರೈತರ ಬಾಳೆ ಫಸಲು ಸಂವೃದ್ಧಿಯಾಗಿ ಬರಲಿ ಎಂದು ಹರಸಿ ನದಿ ದಾಟಲು ಮುಂದಾಗುತ್ತಾರೆ. ಈ ಕತೆಯು ನಿಜವೋ ಸುಳ್ಳೋ ಅದು ಮುಖ್ಯವಲ್ಲ. ಆದರೆ ಇಂದಿಗೂ ಶಾಪ ಪಡೆದ ವಂಶಸ್ಥರು ತಮ್ಮ ತೋಟದಲ್ಲಿ ಬಾಳೆಯನ್ನು ಬೆಳೆಯುವುದಿಲ್ಲ. ನಾವು ಕ್ಷೇತ್ರಕಾರ್ಯದಲ್ಲಿ ಅವರನ್ನು ಭೇಟಿ ಮಾಡಿದಾಗ ಅವರು ಹೇಳಿದ್ದು "ನಾವು ಬಾಳೆಯನ್ನ ಬೆಳೆದರೆ, ಬಾಳೆ ಗಿಡ ಚೆನ್ನಾಗಿ ಬರುತ್ತದೆ. ಆದರೆ ಬಾಳೆ ಗೊನೆ ಬರುವುದಿಲ್ಲ. ಆದ್ದರಿಂದ ನಾವು ತಲೆಮಾರಿನಿಂದಲೂ ಬಾಳೆಯನ್ನು ಬೆಳೆಯುತ್ತಿಲ್ಲ". ಅವರ ಪ್ರಕಾರ ಈಗಲೂ ಸಹ ಒಂದು ಭಾಗದ ಬಾಳೆ ಉತ್ತಮ ಫಲವನ್ನು ನೀಡಿದರೆ ಮತ್ತೊಂದು ಭಾಗದ ಬಾಳೆ ಉತ್ತಮವಾಗಿ ಬೆಳೆದರು ಫಲವನ್ನು ನೀಡುವುದಿಲ್ಲ. ಇದನ್ನು ಇಲ್ಲಿನ ಸ್ಥಳೀಯರು ಕನಕರ ಶಾಪ ಎಂದು ನಂಬುತ್ತಾರೆ.

ಮತ್ತೊಂದು ಪವಾಡ ಎಂದರೆ ಬಾಳೆ ಎಲೆಯ ಮೇಲೆ ಕುಳಿತು ನದಿಯನ್ನು ದಾಟಲು ಮುಂದಾದ ಕನಕರು ಮಧ್ಯದಲ್ಲಿ ಒಂದು ಬಂಡೆಯ ಮೇಲೆ ಕುಳಿತುಕೊಳ್ಳುತ್ತಾರೆ. ಆಗ ತಮ್ಮ ಹೊಟ್ಟೆಯನ್ನು ಬಗೆದು ಕರುಳನ್ನು ಹೊರತೆಗೆದು ಕಾವೇರಿ ನೀರಿನಲ್ಲಿ ತೊಳೆದು ಮತ್ತೆ ಅವನ್ನು ಹೊಟ್ಟೆಯೊಳಗೆ ತುಂಬಿಕೊಂಡು ಕಜ್ಜಿರೋಗದಿಂದ ಮುಕ್ತಿ ಪಡೆಯುತ್ತಾರೆ. ಇದನ್ನು ಅಲ್ಲಿನ ಎಲ್ಲ ಜನರೂ ಆಶ್ಚರ್ಯದಿಂದ ನೋಡುತ್ತಿರು ತ್ತಾರೆ. ಇಂದಿಗೂ ಮಹದೇವಪುರದ ನದಿಯ ಮಧ್ಯೇ ಬಂಡೆಯ ಮೇಲೆಯೇ ಕನಕದಾಸರದ್ದು ಎನ್ನಲಾದ ಕೈ ಊರಿದ ಮತ್ತು ಪಾದದ ಗುರುತುಗಳು ಇವೆ. ಮತ್ತು ಇದನ್ನು ವೀಕ್ಷಿಸಲು ಮತ್ತು ಪೂಜಿಸಲು ಹಲವಾರು ಭಕ್ತಾದಿಗಳು ಭೇಟಿ ನೀಡುತ್ತಾರೆ. ಕಾಶಿವಿಶ್ವನಾಥ ದೇವಸ್ಥಾನದ ತೆಪ್ಪೋತ್ಸವ ಸಂದರ್ಭದಲ್ಲಿ ಕನಕದಾಸರ ಬಂಡೆಯವರೆಗೆ ಹೋಗಿ ಪ್ರದಕ್ಷಿಣೆ ಹಾಕಿ ಬರುವ ಪದ್ಧತಿ ಇದೆ.

ಇವರ ಪವಾಡವನ್ನು ಕಂಡ ತೆಪ್ಪದವರು ಇವರನ್ನು ನದಿ ದಾಟಿಸುತ್ತಾರೆ. ಇಂದಿಗೂ ಸಹ ಕನಕರು ಪೂಜಿಸಿದ ಸ್ಥಳ ನದಿ ಮಧ್ಯದಲ್ಲಿದ್ದು ಬೇಸಿಗೆ ಸಂದರ್ಭ ಅಥವಾ ನದಿ ನೀರು ಕಡಿಮೆಯಾದಾಗ ಅದು ಗೋಚರಿಸುತ್ತದೆ. ಸ್ಥಳೀಯರು ಈ ವೇಳೆಯಲ್ಲಿ ಪೂಜೆ ಸಲ್ಲಿಸುತ್ತಾರೆ ಹಾಗೂ ಪ್ರತೀ ನಾಲ್ಕು ವರ್ಷಕ್ಕೊಮ್ಮೆ ಪ್ರಾಣಿಬಲಿ ನೀಡಿ ಸೇವೆ ಮಾಡುತ್ತಾರೆ.

ಇದು ಮಹದೇವಪುರವು ಕನಕದಾಸರೊಂದಿಗೆ ತಳುಕು ಹಾಕಿಕೊಂಡಿರುವ ಕತೆ. ಕರಳನ್ನು ಬಗೆದು ನೀರಿನಲ್ಲಿ ತೊಳೆದು ಮತ್ತೆ ಹಾಕಿಕೊಂಡರು ಎಂಬುದನ್ನು ವೈಜ್ಞಾನಿಕವಾಗಿ ನಂಬಲು ಸಾಧ್ಯವಿಲ್ಲದಿದ್ದರೂ ಸ್ಥಳೀಯರು ಇದನ್ನು ಒಂದು ಐತಿಹ್ಯದಂತೆ ನಂಬುತ್ತಾರೆ. ಹಾಗೆಯೇ ದಡದಲ್ಲಿ ಕಳೆದ ದಶಕದಲ್ಲಿ ಶ್ರೀವೈಷ್ಣವರು ಕನಕದಾಸರ ವಿಗ್ರಹವನ್ನು ಒಂದು ಚಿಕ್ಕಗುಡಿಯಲ್ಲಿ ಪ್ರತಿಷ್ಠಾಪಿಸಿದ್ದು ಊರಿನ ಒಂದು ಮನೆತನದವರು ಅದನ್ನು ಪೂಜಿಸುತ್ತಾರೆ. ಕನಕದಾಸರ ಭೇಟಿಯ ನಂತರ ಈ ಗ್ರಾಮದಲ್ಲಿ ತಿರುಪತಿಯ ವೆಂಕಟರಮಣ ಮತ್ತು ಮೇಲುಕೋಟೆಯ ಚಲುವನಾರಾಯಣ ಸ್ವಾಮಿಗೆ ನಡೆದುಕೊಳ್ಳುವ ದಾಸಯ್ಯಗಳು ಈ ಗ್ರಾಮದಲ್ಲಿ ಇದ್ದಾರೆ.

ಕನಕರು ಹಲವು ಪವಾಡಗಳನ್ನು ನದಿ ದಾಟಲು ಈ ಗ್ರಾಮದಲ್ಲಿ ಮಾಡಿದರು. ಕೆಲವೊಂದು ಅಂಶಗಳು ಪ್ರಸ್ತುತವು ನಡೆಯುತ್ತಿರುವುದು ಸತ್ಯವೋ ಅಥವಾ ಕಾಕತಾಳಿಯವೋ

ಎಂಬುದನ್ನು ತರ್ಕಿಸಬೇಕಾಗಿದೆ. ಉದಾಹರಣೆಗೆ ಬಾಳೆಯ ಫಸಲು. ಹಲವು ಪವಾಡಗಳನ್ನು ತೋರಿಸಿದ ಕನಕರು ಅಲ್ಲಿನ ಸ್ಥಳೀಯರಿಗೆ ಪವಾಡ ಪುರುಷರಾದರು.

**ಐತಿಹಾಸಿಕ ದಾಖಲೆಗಳ ಪ್ರಕಾರ ಮಹದೇವಪುರಕ್ಕೆ ಭೇಟಿ ನಿಜವೇ?**

ಮಹದೇವಪುರವು ಮಂಡ್ಯಜಿಲ್ಲೆಯ ಶ್ರೀರಂಗಪಟ್ಟಣ ತಾಲೂಕಿನಲ್ಲಿ ಬರುವ ಒಂದು ಗ್ರಾಮ. ಇದು ಶ್ರೀರಂಗಪಟ್ಟಣ ದಿಂದ ಸು. ೧೬ ಕಿ.ಮೀ. ದೂರದಲ್ಲಿದೆ. ಅತ್ಯಂತ ಸುಂದರವಾದ ನದಿಯ ಪರಿಸರದಲ್ಲಿ, ನದಿಯ ದಂಡೆಯಲ್ಲಿ ಸುಂದರವಾದ ಹಸಿರು ತೋಟಗಳ ನಡುವಿನ ಪ್ರಶಾಂತವಾದ ವಾತಾವರಣದಲ್ಲಿ ಈ ಗ್ರಾಮವಿದೆ. ಈ ಗ್ರಾಮಕ್ಕೆ ಕನಕದಾಸರು ಭೇಟಿ ನೀಡಿದ್ದು ಐತಿಹಾಸಿಕವಾಗಿ ನಿಜವೇ? ಎಂಬ ಪ್ರಶ್ನೆಗೆ ನಾವು ನಿಜ ಎಂದು ಉತ್ತರಿಸಬಹುದು. ಈ ಗ್ರಾಮಕ್ಕೆ ಕನಕ ದಾಸರ ಭೇಟಿಯನ್ನು ಅವರ ಕೀರ್ತನೆಗಳು ಸಮರ್ಥಿಸುವುದಿಲ್ಲ ವಾದರೂ, ಯಾವ ವರ್ಷದಲ್ಲಿ ಅಂದರೆ ಯಾವ ಕಾಲದಲ್ಲಿ ಭೇಟಿ ನೀಡಿರಬಹುದು ಎಂದು ತರ್ಕಿಸಬಹುದು.

ಮುಸ್ಲಿಂರಿಂದ ವೈದಿಕ ಧರ್ಮದ ರಕ್ಷಣೆಗೆ ಉದಯಿಸಿದ ವಿಜಯನಗರ ಸಾಮ್ರಾಜ್ಯದ ಅತ್ಯಂತ ಘನತೆವೆತ್ತ ದೊರೆ ಶ್ರೀಕೃಷ್ಣದೇವರಾಯನ ಆಳ್ವಿಕೆಯ ಸವಿಯನ್ನು ಸವಿದವರಲ್ಲಿ ದಾಸ ಶ್ರೇಷ್ಠ ಕನಕರು ಸಹ ಒಬ್ಬರು. ಆದರೆ ಕ್ರಿ.ಶ. ೧೫೨೯ರಲ್ಲಿ ರಾಯರು ಮರಣಹೊಂದಿದಾಗ ಮನನೊಂದು ದಕ್ಷಿಣದ ಪವಿತ್ರ ವೈಷ್ಣವ ಕ್ಷೇತ್ರಗಳ ದರ್ಶನ ಮಾಡ ಬಯಸಿದರು. ಕನಕರು ತಮ್ಮ ಮೂಲಸ್ಥಳದಿಂದ ಪ್ರಯಾಣವನ್ನು ಆರಂಭಿಸಿ ದರು. ಬೇಲೂರಿಗೆ ಬಂದು ಹಲವು ದಿನಗಳ ಕಾಲ ಚನ್ನಕೇಶವನ ಸನ್ನಿಧಿಯಲ್ಲಿ ನೆಲೆಸಿದರು.

ನಂತರ ಕನಕದಾಸರು ಬೇಲೂರಿನಿಂದ ಹೊರಟು, ಮೇಲುಕೋಟೆಗೆ ಬಂದರು. ಮೇಲುಕೋಟೆಗೆ ಅವರು ಬರಲು ಕಾರಣ ಎಂದರೆ ಅದು ಒಂದು ಶ್ರೀವೈಷ್ಣವ ಕ್ಷೇತ್ರ ಮತ್ತು ಕನಕದಾಸರ ಮೂಲ ಗುರುಗಳಾದ ಶ್ರೀರಾಮಾನುಜರ ತಪೋಭೂಮಿ. ಶ್ರೀವೈಷ್ಣವ ದೀಕ್ಷೆ ಪಡೆದಿದ್ದ ಕನಕದಾಸರು ಮೇಲುಕೋಟೆಗೆ ಕ್ರಿ.ಶ. ೧೫೩೦ರಲ್ಲಿ ಭೇಟಿ ನೀಡಿದ್ದರು[೧]. ಈ ಸಮಯದಲ್ಲಿ ಮೇಲುಕೋಟೆಯ ಚಲುವ ನಾರಾಯಣ ಸ್ವಾಮಿಯ ಬ್ರಹ್ಮರಥೋತ್ಸವ ನಡೆಯುತ್ತಿತ್ತು ಹಾಗೂ ಈ ವೈರಮುಡಿ ಬ್ರಹ್ಮೋತ್ಸವವನ್ನು ಕಣ್ತುಂಬಿಕೊಳ್ಳಲೆಂದೇ ಅವರು ಅಲ್ಲಿಗೆ ಆಗಮಿಸಿದ್ದರು. ಇದನ್ನು ಸ್ವತಃ ಕನಕದಾಸರು ತಮ್ಮ ಕೀರ್ತನೆಯಲ್ಲಿ ಹೇಳಿಕೊಂಡಿದ್ದಾರಲ್ಲದೇ, ವೈರಮುಡಿ ರಥೋತ್ಸವದ ವೈಭವವನ್ನು .ಹಾಡಿ ಹೊಗಳಿದ್ದಾರೆ. ಇಲ್ಲಿ ನಮೂದಿಸಿರುವ ತೇದಿ ಕ್ರಿ.ಶ. ೧೫೩೦[೨] ಮಾರ್ಚ್ ೨೬ಕ್ಕೆ ಸರಿಹೋಗುವುದಾಗಿ ಪ್ರೊ. ರಾಜಶೇಖರಪ್ಪರವರು ಬರೆಯುತ್ತಾರೆ. ಅವರ ಕೀರ್ತನೆಯೊಂದರಲ್ಲಿ ಈ ಕಾಲದ ಉಲ್ಲೇಖವಿದೆ.

**ಕೈಯತೋರಿದ ಬಗೆಯ ಅಮ್ಮಮ್ಮ ಯಾದವಗಿರಿಕಲ್ಯಾಣಿ ನೀನು**
**ಸಕಲ ಜನರುಕಾಣುತಿರಲು**
**ವಿಕೃತಿ ವತ್ಸರಚೈತ್ರ ದ್ವಿತೀಯೇಕಾದಶಿಯೊಳು**
**ಪ್ರಕಟಿತಾ ಶುಕ್ರವಾರದೊಳು ತನ್ನ**
**ಭಕುತರಿಗುತ್ಸಾಹ ಸಂಧ್ಯಾಕಾಲದೊಳು** ॥ ೧ ॥

ಮೇಲುಕೋಟೆಯಲ್ಲಿ ಹಲವು ದಿನಗಳ ವಾಸ್ತವ್ಯದ ನಂತರ ಅವರು ತಮ್ಮ ಪ್ರಯಾಣವನ್ನು ಮುಂದುವರೆಸಿ ಕಾವೇರಿ ನದಿ ತೀರದ ಆದಿ ರಂಗಕ್ಷೇತ್ರ ಎಂದೇ ಪ್ರಸಿದ್ಧವಾದ ಶ್ರೀರಂಗನಾಥ ಸ್ವಾಮಿಯ ಸನ್ನಿಧಿಯಾದ ಶ್ರೀರಂಗಪಟ್ಟಣಕ್ಕೆ ಬರುತ್ತಾರೆ. ೧೨ನೇ ಶತಮಾನದಲ್ಲಿ ರಾಮಾನುಜಾಚಾರ್ಯ ರನ್ನು ಕುಲೋತ್ತುಂಗ ಚೋಳನು ಕೊಲ್ಲಲು ಪ್ರಯತ್ನಿಸಿದಾಗ ತಪ್ಪಿಸಿಕೊಂಡು ರಾಮಾನುಜರು ಕರ್ನಾಟಕಕ್ಕೆ ಬರುತ್ತಾರೆ. ಕರ್ನಾಟಕದಲ್ಲಿ ಶ್ರೀವೈಷ್ಣವ ಸಿದ್ಧಾಂತವನ್ನು ಪ್ರಚಾರ ಮಾಡು ತ್ತಿದ್ದ ಕಾಲಕ್ಕೆ ರಾಮಾನುಜರಿಗೆ ಮತ್ತು ಅವರ ಅನುಯಾಯಿ ಗಳಿಗೆ ಹೊಯ್ಸಳ ಚಕ್ರವರ್ತಿಗಳು ಶ್ರೀರಂಗಪಟ್ಟಣವನ್ನು ಅಗ್ರಹಾರವಾಗಿ ಪರಿವರ್ತಿಸಿ ದಾನ ಮಾಡಿದರು. ಅಂದಿನಿಂದ ಶ್ರೀರಂಗಪಟ್ಟಣವು ಪ್ರಮುಖ ಶ್ರೀವೈಷ್ಣವ ಕ್ಷೇತ್ರವಾಗಿ ಪ್ರಸಿದ್ಧ ವಾಗಿದೆ. ಇಂತಹ ಪ್ರಮುಖ ಕ್ಷೇತ್ರಕ್ಕೆ ಭೇಟಿ ನೀಡಿದ ಕನಕರು ಶ್ರೀರಂಗನ ದರ್ಶನವನ್ನು ಪಡೆದು ಶ್ರೀರಂಗನ ಕುರಿತು ಈ ರೀತಿ ಹಾಡುತ್ತಾರೆ.

**ಏಕೆ ನೀನಿಲ್ಲಿ ಪವಡಿಸಿದೆ ಜಗ– ।**
**ದೇಕವಿಖ್ಯಾತ ಪಶ್ಚಿಮರಂಗಧಾಮ** ॥ ಪ ॥
**ಇನ್ನೆಷ್ಟು ಕಾಲದಲಿ ಮೈಮರೆದು ಮಲಗಿದರೆ ।**
**ನಿನ್ನ ನೆಬ್ಬಿಸುವರಾರನು ಕಾಣೆನೊ ॥**
**ಉನ್ನತದ ಕಾಗಿನೆಲೆಯಾದಿಕೇಶವರಾಯ ।**
**ಚೆನ್ನ ಶ್ರೀರಂಗಪಟ್ಟಣದ ರಂಗೇಶ** ॥೫॥[೩]

ನಂತರ ಅವರು ಮಂಡ್ಯ ಜಿಲ್ಲೆಯ ಮದ್ದೂರು ಹಾಗೂ ಮುತ್ತತ್ತಿ ಕ್ಷೇತ್ರಕ್ಕೆ ಭೇಟಿ ನೀಡಿದ್ದನ್ನು ಅವರ ಕೀರ್ತನೆಗಳಿಂದ ಧೃಢೀಕರಿಸಬಹುದು. ಅವರ ಒಂದು ಕೀರ್ತನೆಯಲ್ಲಿ

**ಬೀದಿಯೊಳ್ಯಾತರ ನಂಟು ಬ್ಯಾಡ ದಮ್ಮಯ್ಯ**
**ಭೇದಿಸಿ ನೋಡುವರುಂಟು ಬೆಂಬತ್ತಿ ಬಾರದಿರಯ್ಯ** ಎಂದು

ಎಂಬ ಕೀರ್ತನೆಯಲ್ಲಿ

**ನೋಡುವರ ಮುಂದೆ ಲಜ್ಜೆಗೆಡಿಸದಿರಯ್ಯ**
**ಜೋಡಿನ ಮ್ಯಾಲಣ ಕೈಯ ಜೋಕೆ ದಮ್ಮಯ್ಯ**
**ಮಾಡುವ ದೈನ್ಯವ ಬಲ್ಲೆ ಮದ್ದೂರ ನರಸಿಂಹ**
**ಕೂಡಿದ ಕನಕನೊಡೆಯ ಆದಿಕೇಶವ ನೀನಹುದಯ್ಯ**

ಎಂದು ಹಾಡಿದ್ದಾರೆ.



ಮಹದೇವಪುರದಲ್ಲಿ ಕಳೆದ ದಶಕದಲ್ಲಿ
ನಿರ್ಮಾಣವಾದ ಗುಡಿಯಲ್ಲಿರುವ ಕನಕದಾಸರ ವಿಗ್ರಹ

ಮದ್ದೂರಿನ ನರಸಿಂಹನ ದರ್ಶನ ಪಡೆದ ಕನಕರು ತಮ್ಮ ಯಾತ್ರೆಯನ್ನು ಮುಂದುವರೆಸುತ್ತಾ ಮುತ್ತತ್ತಿಯ ದೊರೆ ಆಂಜನೇಯನ ಸನ್ನಿಧಿಗೆ ಬಂದು

**ಎಷ್ಟು ಪೊಗಳಲಿ ನಾನು ಎನ್ನೊಡೆಯ ನಿಮ್ಮ ವಿಶಿಷ್ಟ ಮಹಿಮೆಗಳನು**
**ಸುಜನರಿಗೆ ಬಂದ ಕಷ್ಟವಳಿಯಲ್ಕೆ ನೀ ಸುರಕಾಮಧೇನು ॥ ಪ ॥**

ಎಂಬ ಕೀರ್ತನೆಯ ಕಡೆಯಲ್ಲಿ

**ಕರುಣಾವಾರಿಧಿ ಕಾಗಿನೆಲೆಯಾದಿಕೇಶವ ಮುತ್ತತ್ತಿದೊರೆಯೆ**[4]

ಎಂದಿದ್ದಾರೆ.

ಶ್ರೀರಂಗಪಟ್ಟಣದಿಂದ ಮದ್ದೂರು ಹಾಗೂ ಮುತ್ತತ್ತಿಗೆ, ಮಳೂರು, ನಂತರ ಧರ್ಮಪುರಿಯ ಮಾರ್ಗದಲ್ಲಿ ಸಾಗಿ ತಿರುಕ್ಕೋವಿಲೂರನ್ನು ಅವರು ತಲುಪಿರಬೇಕು. ಹೀಗೆ ತೆರಳುವ ಸಂದರ್ಭದಲ್ಲಿ ಹಲವಾರು ಗ್ರಾಮಗಳನ್ನು ಹಾದು ಹೋಗುವ ಸಂದರ್ಭದಲ್ಲಿ ಕಾವೇರಿ ತೀರದಲ್ಲಿಯೇ ಕಂಡುಬರುವ ಮಹದೇವಪುರಕ್ಕೆ ಬಂದಿರಲೇಬೇಕು. ಏಕೆಂದರೆ ಶ್ರೀರಂಗಪಟ್ಟಣಕ್ಕೆ ಕ್ರಿ.ಶ. ೧೫೩೦ರ ಕಾಲದಲ್ಲಿ ಈಗಿನ ರಸ್ತೆಗಳು ಇಲ್ಲದ್ದರಿಂದ ಅವರು ಮಹದೇವಪುರ ಗ್ರಾಮವನ್ನು ಹಾದು ಹೋಗಿರುವ ಸಾಧ್ಯತೆ ಇದೆ. ಅದೂ ಅಲ್ಲದೇ ಅಲ್ಲಿರುವ ಕಾಶಿ ವಿಶ್ವನಾಥ ದೇವಾಲಯವು ಪ್ರಾಚೀನವಾದ ದೇವಾಲಯ ವಾಗಿದ್ದು, ಗರ್ಭಗೃಹ, ಶುಕನಾಸಿ, ನವರಂಗ ಮತ್ತು ಪ್ರಾಕಾರಗಳನ್ನು ಹೊಂದಿದೆ. ಸುತ್ತಲೂ ಪ್ರಾಕಾರವಿದ್ದು ದೇವಿಗಾಗಿ ಪ್ರತ್ಯೇಕ ಗರ್ಭಗೃಹ ದೇವಾಲಯದ ಆವರಣದಲ್ಲಿಯೇ ಇದೆ. ಇಂತಹ ಪ್ರಸಿದ್ಧ ದೇವಾಲಯವನ್ನು ನೋಡಲು ಮತ್ತು ರಾತ್ರಿಯಲ್ಲಿ ತಂಗಲು ಅಲ್ಲಿಗೆ ದಾಸರು ಬಂದಿರುವುದು. ಜೊತೆಗೆ ಮೇಲಿನ ಕೀರ್ತನೆಗಳ ಆಧಾರದಲ್ಲಿ ಇದು ನಿಜವೆನಿಸುತ್ತದೆ.

ಕನಕದಾಸರು ಮಹದೇವಪುರಕ್ಕೆ ಭೇಟಿ ನೀಡಿದ್ದು ಜನಮಾನಸದಲ್ಲಿ ಕತೆಗಳ, ಪವಾಡಗಳ ಮೂಲಕ ಉಳಿದು ಬಂದಿದೆ. ಮೇಲಿನ ಕತೆಯನ್ನು ಸಾಬೀತುಪಡಿಸಲು ಯಾವುದೇ ಸೂಕ್ತ ಶಾಸನಾಧಾರಗಳು ಇಲ್ಲದೇ ಇದ್ದರೂ ಸಹ ತಮ್ಮ ಯಾತ್ರೆ ಸಂದರ್ಭದಲ್ಲಿ ಈ ಊರಿನ ಮೇಲೆ ಪ್ರಯಾಣಿಸಿರ ಬಹುದು. ಶ್ರೀರಂಗಪಟ್ಟಣದಿಂದ ಮುತ್ತತ್ತಿಗೆ ಪ್ರಯಾಣಿಸಲು ಅವರು ಮಹದೇವಪುರ ಮಾರ್ಗವನ್ನು ಆಯ್ದುಕೊಂಡಿದ್ದಿರ ಬಹುದು. ಈ ಹಿನ್ನೆಲೆಯಲ್ಲಿ ಅಲ್ಲಿ ನಡೆಯುತ್ತಿರುವ ಆಚರಣೆ ಗಳು ಇಂದಿಗೂ ಉಳಿದು ಬಂದಿವೆ. ಅಷ್ಟೇ ಅಲ್ಲ ಅಲ್ಲಿನ ಗಂಗಾಮತಸ್ಥರಲ್ಲಿ ಒಂದು ಮನೆತನ ದಾಸಪ್ಪ ದೀಕ್ಷೆಯನ್ನು ಸ್ವೀಕರಿಸಿ ಅಲ್ಲಿನ ಶ್ರೀ ಕನಕದಾಸರ ಆಲಯದಲ್ಲಿ ಇಂದಿಗೂ ನಿತ್ಯಪೂಜೆ ನಡೆಸಿಕೊಂಡು ಬರುತ್ತಿದೆ. ಈ ಮೇಲಿನ ಎಲ್ಲಾ ಆಧಾರಗಳೂ ಸಹ ಭಕ್ತ ಕನಕದಾಸರ ಮಹದೇವಪುರದ ಭೇಟಿಯನ್ನು ಧೃಡಪಡಿಸುತ್ತವೆ. ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ.



## ಆಧಾರಸೂಚಿ


೧. ೧೫೩೦ ಮಾರ್ಚ್ ೨೫ ಎಂದು ಕನಕ ಸಾಹಿತ್ಯ ದರ್ಶನದ ನಾಲ್ಕನೇ ಸಂಪುಟದಲ್ಲಿ ಉಲ್ಲೇಖಿಸಲಾಗಿದೆ. ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ ೧೫೮.

೨. ಕ್ರಿ.ಶ. ೧೫೦೮–೧೬೦೬ ಎಂದು ಕಟ್ಟಿ ಶೇಷಾಚಾರ್ಯರು, ೧೪೮೫–೧೫೭೫ ಎಂದು ಬೆಟಗೇರಿ ಕೃಷ್ಣಶರ್ಮ, ೧೪೮೦–೧೫೭೦ ಎಂದು ಡಾ. ಪಿ.ಬಿ. ದೇಸಾಯಿ ಅಭಿಪ್ರಾಯಪಡುತ್ತಾರೆ. ಅವರ ಕಾಲನಿರ್ಣಯಕ್ಕೂ ಸಹ ಈ ಮೇಲುಕೋಟೆಯ ಕೀರ್ತನೆ ಪ್ರಮುಖ ಆಧಾರವಾಗಿದೆ.

೩. ಕನಕದಾಸರ ಕೀರ್ತನೆಗಳು, ಸಂಪಾದಕರು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಡಾ. ಕೆ.ಎಂ. ಕೃಷ್ಣರಾವ್, ಪ್ರಕಾಶಕರು, ರಾಜ್ಯಸಮಿತಿ, ಶ್ರೀ ಕನಕದಾಸರ ನಾಲ್ಕನೆಯ ಶತಮಾನೋತ್ಸವ, ಮೈಸೂರು ಸರ್ಕಾರ, ಬೆಂಗಳೂರು, ೧೯೬೫.

೪. ಕನಕದಾಸರ ಜನಪ್ರಿಯ ಕೀರ್ತನೆಗಳು, ಸಂಪಾದಕರು: ಹೊ.ರಾ. ಸತ್ಯನಾರಾಯಣರಾವ್, ಅಂಕಿತ ಪುಸ್ತಕ, ಬೆಂಗಳೂರು, ೨೦೦೮.



# ಕರಾವಳಿ ಕರ್ನಾಟಕ ಮತ್ತು ಪೋರ್ತುಗೀಜ ಭೌಗೋಳಿಕ ತಜ್ಞರು ೧೪೯೮-೧೭೭೪

ಡಾ. ಕೆ.ಜಿ. ವಸಂತಮಾಧವ*

ಕರಾವಳಿ ಕರ್ನಾಟಕದ ಭೌಗೋಳಿಕ ಪರಿಸ್ಥಿತಿಯ ಅಧ್ಯಯನಿಸಿದ ಪಾಶ್ಚಿಮಾತ್ಯರಲ್ಲಿ ಪೋರ್ತುಗೀಜರು ಮೊದಲಿಗರು. ೧೪೯೮ರಲ್ಲಿ ಪೋರ್ತುಗೀಜರಿಗೆ ಕರಾವಳಿ ಕರ್ನಾಟಕದ ಸಮುದ್ರದ ಮಧ್ಯದಲ್ಲಿರುವ ಬಾಥಪುಡ್ (ಮಲ್ಪೆಯ ಸಮೀಪದಲ್ಲಿರುವ ಸೈಂಟ್ ಮರಿ ದ್ವೀಪ)ದ ಪರಿಚಯ ಮಾಡಿಕೊಂಡರು. ಇದರ ನೇತೃತ್ವವನ್ನು ವಹಿಸಿದವ ಪೋರ್ತುಗೀಜ ನಾವಿಕ ವಾಸ್ಕೋಡಿಗಾಮ. ಆದರೆ ಇವನು ಇಲ್ಲಿ ಬಂದದ್ದು ಅರಬ ನಾವಿಕರ ಸಹಾಯದಿಂದ. ಇದು ಮಹಾ ಭೌಗೋಳಿಕ ಸಂಶೋಧನೆ ಎಂದು ಕರೆದರೂ ಇದು ಹೇಳುವಂತ ಮಹತ್ವದ ಸಂಶೋಧನೆಯಲ್ಲ. ರಾಮನು ಬಂದ ನಂತರದ ಘಟನೆಗಳು ದಕ್ಷಿಣ ಭಾರತ ಕರಾವಳಿ ಇತಿಹಾಸ ಘಟನೆಗಳ ಮೇಲೆ ಪರಿಣಾಮವನ್ನುಂಟು ಮಾಡಿದೆ.[೧]

**ನಕಾಶೆಗಳ ರಚನೆ ಅಧ್ಯಯನ**

ಸಮುದ್ರ ದಡದಲ್ಲಿರುವ ಪೋರ್ತುಗೀಜರು ನೌಕಯಾನದಲ್ಲಿ ಆಸಕ್ತಿ ಹೊಂದಿದ್ದರು. ಇದರಿಂದಾಗಿ ನೌಕಾಯಾನ ಆರಂಭಿಸುವ ಮೊದಲು ತಾವು ನೋಡಲಿಚ್ಛಿಸುವ ಪ್ರದೇಶಗಳ ಭೌಗೋಳಿಕ ಜ್ಞಾನವನ್ನು ನಕಾಶೆಯ ಮುಖಾಂತರ ತಿಳಿದುಕೊಳ್ಳಲು ಪ್ರಯತ್ನಿಸಿದರು. ಇದರಿಂದಾಗಿ ನಕಾಶೆಗಳ ರಚನೆಯನ್ನು ಪೋರ್ತುಗೀಜ ನಕಾಶೆ ತಜ್ಞರು ತಯಾರಿಸಿದರು. ಇದು ಪೋರ್ತುಗೀಜರಿಗೆ ತಾವು ಕಂಡ ಪ್ರದೇಶಗಳ ಭೌಗೋಳಿಕ ಜ್ಞಾನ ತಿಳಿಯಲು ಹೊಸ ಆಯಾಮ ನೀಡಿತು ಈ ನಕಾಶೆಯ ತಜ್ಞರು ಭಾರತ–ಪೋರ್ತುಗೀಜರ ಸಂಪರ್ಕಕ್ಕೆ ಹೊಸ ಕಳೆಯನ್ನು ನೀಡಿದರು. ಇದರಿಂದಾಗಿ ಹಲವಾರು ನಕಾಶೆಗಳು ರಚಿತವಾಗಿ ಅವುಗಳು ಪೋರ್ಚುಗಲ್ ರಾಜಧಾನಿ ಲಿಸ್ಬನ ವಸ್ತು ಸಂಗ್ರಹಾಯಲದಲ್ಲಿ ಶೇಖರಿಸಲ್ಪಟ್ಟವು. ಆದರೆ ೧೭೭೫ರಲ್ಲಿ ಲಿಸ್ಬನನಲ್ಲಿ ನಡೆದ ಭೂಕಂಪನದಿಂದ ಹೆಚ್ಚಿನ ನಕಾಶೆಗಳು ನಾಶವಾದವು.[೨] ಅಳಿದುಳಿದ ನಕಾಶೆಗಳನ್ನು ಅಧ್ಯಯನಿಸಿ ಹೊಸ ವಿಚಾರಗಳನ್ನು ಜಾನ್ ಕೊರೆಯಾ ಆಫಾಸಸ್ಸೊ (John Corrsia) ೧೯೮೫ರಲ್ಲಿ ಬೆಳಕಿಗೆ ತಂದರು.[೪]

ಅತ್ಯಂತ ಮೊದಲು ಬೆಳಕಿಗೆ ಬಂದ ನಕಾಶೆ ೧೫೦೨ರಲ್ಲಿ ಇದನ್ನು ಆಲ್ಬರ್ಟ ಕೆಂಟಿನೊ ರಚಿಸಿದ (Alburt Contino) ಈ ನಕಾಶೆಯಲ್ಲಿ ಕರ್ನಾಟಕದ ರೇವುಗಳಿಗೂ ಮತ್ತು ಹಿಂದು ಸಾಗರದಲ್ಲಿರುವ ರೇವುಗಳ ಜಲಯಾನ ಸಂಪರ್ಕ ತಿಳಿಸಿತು. ಆ ಸ್ಥತಿ ಇದರಲ್ಲಿ ಕೆಲವು ಅಸ್ಟತೆ ಇದ್ದಿದ್ದವು. ಇದನ್ನು ಸರಿಪಡಿಸಿದ ನಕಾಶೆಯನ್ನು ೧೫೯ರಲ್ಲಿ ರಿಚರ್ಡ್ ಉಬನ (Richard Uban) ರಚಿಸಿದ ಈ ನಕಾಶೆಯಲ್ಲಿ ಕರಾವಳಿಯಲ್ಲಿರುವ ರೇವುಗಳ ಸ್ಥಾನಮಾನ ಮತ್ತು ಇವುಗಳು ಸಾಗರೋತ್ತರ ವ್ಯಾಪಾರದ ದಾರಿಗಳನ್ನು ಸ್ಪಷ್ಟತೆಯಲ್ಲಿ ಗುರುತಿಸಿದೆ. ಇನ್ನು ಕೆಲವು ನಕಾಶೆಗಳ ವಿಜಯನಗರ ಸಾಮ್ರಾಜ್ಯ ಗಡಿಯಲ್ಲಿರುವ ರಾಜ್ಯಗಳು ಮೇರೆಗಳನ್ನು ಗುರುತಿಸಿವೆ. ಈ ನಕಾಶೆಯಲ್ಲಿ ಕರಾವಳಿ ಕರ್ನಾಟಕದಲ್ಲಿ ವಿಜಯನಗರದ ಮೇರೆಯನ್ನು ತಿಳಿಸಿದೆ.[೫]

ಪೋರ್ತುಗೀಜ ನಕಾಶೆ ತಯಾರಿಸುವಲ್ಲಿ ಸ್ಥಳೀಯ ತಂತ್ರಜ್ಞರು ಸಹಕರಿಸಿದ್ದರು. ಇದಕ್ಕೆ ಉದಾಹರಣೆ ಡೊರಾಡೊ (Dorado) ಎಂಬ ಅರೆ ಭಾರತೀಯ. ಇವನ ತಾಯಿ ಕರಾವಳಿ ಕರ್ನಾಟಕದ ಗೋವಾ ಗಡಿಯಲ್ಲಿ ಹುಟ್ಟಿದ್ದು. ಗೋವಾದಲ್ಲಿ ಪೋರ್ತುಗೀಜರು ಭಾರತದಲ್ಲಿ ನಡೆಸಿದ ನೌಕಾಸಮರದಲ್ಲಿ ಭಾಗವಹಿಸಿದ್ದ ಇದರಿಂದಾಗಿ ಇಲ್ಲಿನ ಸ್ಥಳಗಳ ಪರಿಚಯ ಮತ್ತು ಅವುಗಳ ಸ್ಥಾನಮಾನ ಸರಿಯಾಗಿ ತಿಳಿಸಿದ ಇವನು ತಯಾರಿಸಿದ ಗೋವಾ ನಕಾಶೆ ಅತ್ಯುತ್ತಮವೆಂದು ಪರಿಗಣಿಸಲ್ಪಟ್ಟರೆ ಬ್ಯಾರೋಸನು[೬] ತಯಾರಿಸಿದ (೧೫೮೦) ನಕಾಶೆ ಕರಾವಳಿ ಕರ್ನಾಟಕ ನದಿಗಳನ್ನು ಸ್ಪಷ್ಟವಾಗಿ ತಿಳಿಸಿದ ಈ ನಕಾಶೆಯು ಈ ಕರಾವಳಿಯ ನದಿಗಳಾದ ಆಲಿಗಾ(ಕಾಳಿ), ಚಿಂತಕೊಂ (ಚಿತ್ತಾಕುಲ) ಮಹಾದಾನ, ಹೊನ್ನಾವರ, ಭಟ್ಕಳಗಳ ಸ್ಥಾನ ಮಾನಗಳನ್ನು ತೋರಿಸಿದ. ಕರಾವಳಿ ಕರ್ನಾಟಕದ ಭೌಗೋಳಿಕ ಅಧ್ಯಯನ ದೃಷ್ಟಿಯಲ್ಲಿ ಈ ನಕಾಶೆ

* 'ಆರಾಧನ', # ೪, ೧೧೯೩, ಶಿವಕೃಪ ಹಿಂಭಾಗ, ಹಳೆಯ ಅಂಗಡಿ, ಪಾವಂಜೆ, ಉಡುಪಿ-೫೭೪೧೪೩.

ಅತ್ಯಂತ ಪ್ರಮುಖವಾಗಿದೆಯಾದರೂ ಇವನು[೧೧] ಭಾರತವನ್ನು ಸಂದರ್ಶಿಸಿದ ಕಾರಣ ಕೆಲವು ಮುಖ್ಯವಾಗಿ ನದಿ ಹರಿಯುವಿಕೆಯ ದಾರಿ ತಪ್ಪಾಗಿದೆ. ಆದುದರಿಂದ ಇದು ಪರಿಪೂರ್ಣವಲ್ಲ ಎಂಬ ಅಭಿಪ್ರಾಯ ಡಾ. ಬಿ.ಎಸ್. ಶಾಸ್ತ್ರಿಯವರ ಅಭಿಪ್ರಾಯ ಈ ವರ್ಷದ ಹದಿನಾರು ವರ್ಷಕ್ಕಿಂತ ೧೫೬೪ರಲ್ಲಿ ಗಸ್ಯಲಾದಿ (Gasladi) ದಕ್ಷಿಣ ಭಾರತ ನಕಾಶೆ ರಚಿಸಿದ (ನೋಡಿ ನಕಾಶೆ).

**ಭೌಗೋಳಿಕ ತಜ್ಞರು**

ಕರಾವಳಿ ಕರ್ನಾಟಕದ ಭೌಗೋಳಿಕ ಲಕ್ಷಣಗಳು ಪೋರ್ತುಗೀಜ ವಿದ್ವಾಂಸರ ಗಮನ ಸೆಳೆಯಿತು ಈ ಭೌಗೋಳಿಕ ತಜ್ಞರು ಹಲವಾರು ದೃಷ್ಟಿ ಮತ್ತು ಹಿನ್ನೆಲೆಯಿಂದ ವಿವರಣೆ ನೀಡಿದ್ದಾರೆ. ಕರಾವಳಿ ಪೂರ್ವಕ್ಕೆ ಹಬ್ಬಿದ ಘಟ್ಟಗಳ ಸಾಲುಗಳು, ರಭಸದಿಂದ ಹರಿಯುವ ಪಶ್ಚಿಮ ವಾಹಿನಿ ನದಿಗಳು, ಅವುಗಳ ಮುಖಜ ಭೂಮಿಯಲ್ಲಿರುವ ರೇವುಗಳು ಸಮುದ್ರ ಮತ್ತು ಕರಾವಳಿ ಬಯಲಲ್ಲಿ ಬೆಳೆಯುವ ಬೆಳೆಗಳು ಭೌಗೋಳಿಕ ತಜ್ಞರ ವಿಷಯಗಳ ಸಂಗ್ರಹವಾಗಿವೆ.

ಈ ಪೋರ್ಚುಗೀಜ ತಜ್ಞರು ಇನ್ನಿತರ ದೇಶಗಳ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಮತ್ತು ಇಲ್ಲಿನ ರೇವುಗಳ ಮಹತ್ವವನ್ನು ತಿಳಿದಕೊಂಡರು. ೧೫೦೩ರಿಂದ ಇಟಲಿ ದೇಶದಿಂದ ಬಂದ ಪ್ರವಾಸಿ ವಾರ್ತೆ ಮಬು ಭಟ್ಕಳ ಮತ್ತು ಹೊನ್ನಾವರ ಮಹತ್ವಗಳನ್ನು ಇವರು ತಿಳಿದರು. ಇದರಿಂದಾಗಿ ಪೋರ್ತುಗೀಜರು ಆಗಿಂದಾಗ್ಗೆ ಭಟ್ಕಳದಲ್ಲಿ ತಮ್ಮ ವ್ಯಾಪಾರ ಕೊಠಡಿ ಸ್ಥಾಪಿಸುವ ಇರಾದೆಯನ್ನು ವಿಜಯನಗರ ಅರಸ ಅನುಮತಿ ಕೇಳಿದರು.

ಬ್ಯಾರೋಸ ಎಂಬ ವಿದ್ವಾಂಸ ಕರ್ನಾಟಕ ಕರಾವಳಿಯ ವೈಶಿಷ್ಟ್ಯತೆಯನ್ನು ಗಮನಿಸಿ ಇಲ್ಲಿ ಹರಿಯುವ ನದಿಗಳಾದ ಆಲಿಗಾ (ಕಾಳಿ) ಮತ್ತು ಚಂದ್ರಗಿರಿ ಮತ್ತು ಹೊರ ರಾಜ್ಯಗಳಾದ ಗೇರಸೊಪಾ ಬಯಿಂದೂರ ಮತ್ತು ಕಾರ್ನಾಟ ಗುರುತಿಸಿದ್ದಾರೆ.[೧೨] ನಂತರ ಬಂದವರು ಈ ರೇವುಗಳನ್ನು ತಿಳಿಸಿಲ್ಲ. ಇದು ತಿಳಿಸುವ ಮುಖ್ಯ ಸಂಗತಿಯೇನೆಂದರೆ ನದಿಗಳು ಆಗಿಂದಾಗ್ಗೆ ಹರಿಯುವ ದಿಕ್ಕನ್ನು ಬದಲಾಯಿಸುತ್ತಿದ್ದವು. ಬ್ಯಾರೋಸ ತಿಳಿಸಿದ ಇನ್ನೊಂದು ಸಂಗತಿಯೆಂದರೆ ಇಲ್ಲಿನ ರೇವುಗಳ ಅಂತರವನ್ನು ಟೀನು ಪ್ರಮಾಣದಲ್ಲಿ ತಿಳಿಸಿ ದಾಖಲಿಸಿದ್ದು.

೧೫೧೨ರಲಿ ಟಾಮ್ ಪಿರೇಸ್ (Toms Pins) ಎಂಬ ಪೋರ್ತುಗೀಜ ಔಷಧಿ ವ್ಯಾಪಾರಿ ಕರಾವಳಿ ಕರ್ನಾಟಕದ ಕೆಲವು ಅಪೂರ್ವ ಸಂಗತಿಗಳನ್ನು ಬೆಳಕಿಗೆ ತಂದನು. ಇವನು ಕರಾವಳಿ ಕರ್ನಾಟಕವನ್ನು ಔಷಧಿ ದೃಷ್ಟಿಯಲ್ಲಿ ವಿಶ್ಲೇಷಿಸಿದನು. ಇವನು ಬರೆದ ಸುಮಾ ಒರಿಯಂಟಲ್ (Suma Orintal[13] 1516) ಗ್ರಂಥದಲ್ಲಿ ಕರಾವಳಿ ಕರ್ನಾಟಕಕ್ಕೆ ಪ್ರತ್ಯೇಕತೆ ಇದೆ ಇದು ನರಸಿಂಹನ ರಾಜ್ಯ (ವಿಜಯನಗರ)ದ ಭಾಗವಾಗಿದೆ.

ಇಲ್ಲಿ ಹಲವಾರು ನದಿಗಳಿದ್ದು ಅವುಗಳು ಉತ್ತಮ ಬಂದರುಗಳನ್ನು ರಚಿಸಿವೆ ಇಂತಹ ರೇವುಗಳಲ್ಲಿ ಬಸ್ರೂರು ಭಟ್ಕಳ ಮತ್ತು ಹೊನ್ನಾವರ ಅತ್ಯುತ್ತಮವಾದವು ಮಂಗಳೂರು ಈ ಕರಾವಳಿಯ ದಕ್ಷಿಣ ಮೇರೆಯಲ್ಲಿದ್ದು ಸಾಗರೋತ್ತರ ಜಾರಿ ನಡೆಸಲು ಯೋಗ್ಯವಾಗಿದೆ ಇಲ್ಲಿ ಸಮುದ್ರ ರಚನೆಯಿಂದಾಗಿ ಇಲ್ಲಿನ ಜನರು ನೆಲ ಮತ್ತು ಜಲ ಯುದ್ಧಗಳಲ್ಲಿ ಪರಿಣಿತರಾಗಿದ್ದಾರೆ.

ಅನೇಕ ವಿದೇಶಿ ವರ್ತಕರು ಇಲ್ಲಿ ಬಂದು ವ್ಯಾಪಾರ ನಡೆಸುತ್ತಿದ್ದಾರೆ ಇಂತಹ ರೇವುಗಳಲ್ಲಿ ಭಟ್ಕಳ ಅಗ್ರಗಣ್ಯವಾದುದು ಇದು ವಿಜಯನಗರದ ಮುಖ್ಯ ಬಂದರು. ಹೊರಗಿನಿಂದ ಭಟ್ಕಳಕ್ಕೆ ಅರೇಬಿ ಕುದುರೆಗಳು ಬರುತ್ತಿದ್ದವು ಇಲ್ಲಿ ಕುದುರೆಗಳ ವ್ಯಾಪಾರದ ಮಧ್ಯವರ್ತಿಗಳು ಮಲಬಾರ್ ಮಾಪಿಳ್ಳೆಯವರು ಇವರು ವಿಜಯನಗರ ಸೇನೆಗೆ ಬೇಕಾಗಿದ್ದ ಕುದುರೆಗಳನ್ನು ನಿರ್ಣಯಿಸಿ ಇಲ್ಲಿ ಮಾರುತ್ತಿದ್ದರು ಇವರ ಹತ್ತಿರ ದೊಡ್ಡ ಮಟಿವೆಗಳು ಇವೆ. ಈ ಬಂದರಿನಲ್ಲಿ ಹಿಂದು ಮತ್ತು ಮುಸ್ಲಿಂ ವ್ಯಾಪಾರಸ್ಥರಿದ್ದರು. ಇಲ್ಲಿಯ ರಾಜ ಒಳಗಡೆ ಒಂದು ಊರಿನಲ್ಲಿ ವಾಸಿಸುತ್ತಿದ್ದನು (ಸಂಗೀತಪುರ) ಇವನ ಪರವಾಗಿ ರಾಮಚೆಟ್ಟಿ ಎನ್ನುವ ರಾಜಪಾಲನಿದ್ದನು. ಇವನು ಭಾರೀ ಶ್ರೀಮಂತ ವರ್ತಕ. ಇನ್ನೊಬ್ಬ ಶ್ರೀಮಂತ ವರ್ತಕ ಕೈಜಾರ ಇವನು ಮೂಲತಃ ಮುಣತಿನವನು ಈ ಬಂದರಿನಿಂದ ಉತ್ತಮ ಅಕ್ಕಿ ಸಿಗುತ್ತಿತ್ತು. 'ಒರಸಾಲ' ಎನ್ನುವ ಅಕ್ಕಿ ಬೆಳ್ಳಗೆ ಮತ್ತು ತೆಳ್ಳಗೆ ಇದ್ದು ಭಾರಿ ದುಬಾರಿಯಾಗಿ ಇಲ್ಲಿ ರಫ್ತಾಗುತ್ತದೆ.

ಇದಲ್ಲದೆ ಇನ್ನಿತರ ವರ್ಗದ ಅಕ್ಕಿ ಇಲ್ಲಿಂದ ರಫ್ತಾಗುತ್ತದೆ. ಕಬ್ಬಿಣ ಮತ್ತು ಸಕ್ಕರೆ ಭಟ್ಕಳದಿಂದ ವಿದೇಶಕ್ಕೆ ರಫ್ತಾಗುತ್ತದೆ. ಈ ಎಲ್ಲಾ ದೃಷ್ಟಿಯಿಂದ ಭಟ್ಕಳ ವಿಜಯನಗರದ ಅತಿ ಅಮೂಲ್ಯ ಆಸ್ತಿ. ಕೆನರಾವನ್ನು ತುಳುನಾಡು ಎಂದು ಹೆಸರಿಸಿರುವ ಟಾಮುರೇಸಾ ಕೃಷ್ಣದೇವರಾಯ ತುಳುನಾಡಿನವ. ಇವನ ಸಹಜ ಭಾಷೆ ಕನ್ನಡ ಆದರೆ ಆಸ್ಥಾನದಲ್ಲಿಯ ಕೆಲವು ಸಂದರ್ಭಗಳಲ್ಲಿ ತೆಲುಗಿನಲ್ಲಿ ಮಾತಾಡುತ್ತಿದ್ದನು[೧೪] ವೈದ್ಯಕೀಯ ದೃಷ್ಟಿಯಲ್ಲಿ ಪಿರೇಸಾ ಕರಾವಳಿ ಕರ್ನಾಟಕದ ಭೌಗೋಳಿಕ ಸ್ವರೂಪವನ್ನು ವೀಕ್ಷಿಸಿದ್ದು ಗಮನಾರ್ಹ ಸಂಗತಿ ಈ ಕರಾವಳಿಯಲ್ಲಿ ಮೂರು ರೀತಿಯ ಹವಮಾನವಿದ್ದು ಜನರ ಆರೋಗ್ಯ ಸ್ಥಿತಿಗತಿಗಳನ್ನು ನಿಯಂತ್ರಿಸುತ್ತಿವೆ. ಇದಲ್ಲದೆ ಇಲ್ಲಿ ರೋಗಗಳ ನಿವಾರಣೆಗೆ ಹಲವಾರು ಔಷಧಯುಕ್ತ ಸಸಿ, ಎಲೆ ತೊಗಟೆಗಳಿವೆ. ಇವುಗಳು

ಎಲ್ಲಿ ಬೆಳೆಯುತ್ತವೆ ಹೇಗೆ ಬೆಳೆಸುತ್ತಾರೆ ಮತ್ತು ರೋಗ ನಿವಾರಣೆಗೆ ಇವುಗಳನ್ನು ಹೇಗೆ ಉಪಯೋಗಿಸಿ ಸ್ಥಳೀಯರು ರೋಗಗಳನ್ನು ಗುಣಪಡಿಸಿಕೊಳ್ಳುತ್ತಾರೆ ಇತ್ಯಾದಿಗಳನ್ನು ತಿಳಿಸಿದ್ದು ಗಮನಿಸುವಂತಾದೆ. ಈ ಎಲ್ಲಾ ವಿವರಗಳು ಪಿರೇಸ ಬರೆದ ಪರ್ಯದಲ್ಲಿದೆ.[೧೫]

ಮಂಗಳೂರು ಬಂದರಿನಿಂದ ಸಸ್ಯೋತ್ಪತ್ತಿ ಔಷಧಿಗಳು ಮಾಲ್ದೀವ್ ಮಲಬಾರ್ ಮತ್ತು ಶ್ರೀಲಂಕಾಗೆ ರಫ್ತಾಗುತ್ತಿದೆ ಎಂದು ವರದಿಯಲ್ಲಿ ದಾಖಲಿಸಿದ ವೈದ್ಯಕೀಯ ಹಿನ್ನೆಲೆಯಲ್ಲಿ ಕೆನರಾದ ಭೌಗೋಳಿಕ ಸ್ವರೂಪಗಳನ್ನು ತಿಳಿಸಿದ.[೧೬]

ಹದಿನಾರನೆ ಶತಮಾನದಲ್ಲಿ ಕರ್ನಾಟಕ ಕರಾವಳಿಯ ಭೌಗೋಳಿಕ ಇತಿಹಾಸ ತಿಳಿಯುವಲ್ಲಿ ಸ್ಪೇನಿನ ಬಾಬೂಸಾ ಗ್ರಂಥ ಅತ್ಯಂತ ಪ್ರಮುಖವಾಗಿದೆ. ಏಕೆಂದರೆ ಇವನು ೧೫೦೦–೧೫೬೧ ಭಾರತದಲ್ಲಿದ್ದ ಇವನಿಗೆ ಮಲೆಯಾಳಿ ಭಾಷೆ ತಿಳಿದಿತ್ತು. ಕರಾವಳಿ ಕರ್ನಾಟಕ ಭೌಗೋಳಿಕ ಸ್ವರೂಪ ಜನಜೀವನ ಮತ್ತು ಇಲ್ಲಿನ ನೈಸರ್ಗಿಕ ಸಂಪತ್ತುಗಳನ್ನು ವಿವರವಾಗಿ ನಿಖರವಾಗಿ ತಿಳಿಸಿದ ಬಾರ್ಬೊಸನ ದೃಷ್ಟಿಯಲ್ಲಿ ಕರಾವಳಿ ಕರ್ನಾಟಕ ಸಮುದ್ರ ಹಿಂದೆ ಸರಿದು ಉಂಟಾದ ಸ್ಥಳವೆಂದು ಪ್ರಥಮವಾಗಿ ತಿಳಿಸಿದ್ದಾನೆ. ಈ ಕರಾವಳಿಯನ್ನು ತುಳುನಾಡು ಎಂದು ಕರೆದು ತುಳುಭಾಷೆ ಮಲೆಯಾಳಕ್ಕಿಂತ ಭಿನ್ನವಾಗಿದೆ. ಇದು ಚಂದ್ರಗಿರಿ ಹೊಳೆಯಿಂದ ಗಂಗಾವತಿವರೆಗೆ ಹಬ್ಬಿದೆ ಎಂದು ಇವನು ತಿಳಿಸಿದ್ದಾನೆ. ಇಲ್ಲಿನ ನದಿಗಳ ರಚನೆಗಳು ರೇವುಗಳನ್ನು ಕಟ್ಟಿಸಿ ಸಾಗರೋತ್ತ ವ್ಯಾಪಾರ ನಡೆಸಲು ಸಮರ್ಥವಾಗಿವೆ. ಈ ರೇವುಗಳಲ್ಲಿ ಭರದಿಂದ ಸಾಗರೋತ್ತ ವ್ಯಾಪಾರ ನಡೆಯುತ್ತಿವೆ.[೧೮] ಕೊನೆಯದಾಗಿ ಕರಾವಳಿಯ ಪೂರ್ವಕ್ಕೆ ಹಬ್ಬಿದ ಬೆಟ್ಟಗಳ ಸಾಲು ವನ ಮತ್ತು ಖನಿಜ ಸಂಪತ್ತಿನಿಂದ ಕೂಡಿದೆ.[೧೯] ಇಲ್ಲಿನ ಈ ಸಂಪತ್ತುಗಳ ಮಹತ್ವವನ್ನು ಜಗತ್ತಿಗೆ ತಿಳಿಸಿದ ಕೀರ್ತಿ ಬಾರ್ಬೊಸನಿಗೆ ಸಲ್ಲುತ್ತದೆ. ಇದರ ಪರಿಣಾಮವಾಗಿ ಕರಾವಳಿ ಕರ್ನಾಟಕದ ಪಾಶ್ಚಿಮಾತ್ಯ ರಾಷ್ಟ್ರಗಳ ವ್ಯಾಪಾರ ಸ್ಥಳವಾಯಿತು.

ಈ ಕರಾವಳಿಯ ಭೌಗೋಳಿಕ ಪ್ರಭಾವದ ವಿಚಾರ ೧೫೨೨ರಲ್ಲಿ ವಿಜಯನಗರಕ್ಕೆ ಬಂದ ಡೊಮಿಂಗೋಸ್ ಪಾಯಸ (Domingos Pais) ವರ್ಣಿಸಿದ್ದು ಗಮನಿಸು ವಂತದ್ದು. ಇದಕ್ಕೆ ಕಾರಣ ಇವನು ಕರಾವಳಿ ಮತ್ತು ಮೇಲಿನ ದೇಶಧ ಗಡಿಗಳಾಗಿದ್ದು ಕರಾವಳಿಗೆ ಸ್ವರೂಪಗಳನ್ನು ನೀಡಿವೆ. ಈ ಬೆಟ್ಟದ ಸಾಲುಗಳು ಕರಾವಳಿಯ ಎಡಕ್ಕೂ ಇವೆ. ಆದರೆ ಈ ಬೆಟ್ಟದ ಸಾಲುಗಳು ಕಣಿವೆಗಳನ್ನು ಸೃಷ್ಟಿಸಿ ಇದರ ಮೇಲಿನ ಮತ್ತು ಕೆಳಗಿನ ಜನರಿಗೆ ಸಂಪರ್ಕವಾಗಲು ಮಾರ್ಗಗಳನ್ನು ರಚಿಸಿದ್ದಾರೆ. ಉಳಿದ ಕಡೆ ಕಲ್ಲು ಬಂಡೆಗಳು ಇದ್ದು ದಟ್ಟ ಅರಣ್ಯವಿದೆ. ಕಡಲ ತಡಿಯಲ್ಲಿ ಬಂದರುಗಳು ಇವೆ. ಈ ಬಂದರುಗಳಾದ ಅಂಕೋಲಾ (ಮಿರ್ಜಾನ ಹೊನ್ನೋರೆ ಭಟ್ಕಳ ಮದಿಗಮೋದ ಬಾರಕಲೋಕ (ಬಾರಕೂರು, ಬತನೂರು ಬತ್ರೂರು, ಪೋರ್ತುಗೀಜರ ವ್ಯಾಪಾರ ಕೋರಿಗಳಿವೆ ಈ ಬೆಟ್ಟಗಳ ಮೇಲೆ ವಿಶಾಲವಾದ ಬಯಲುಸೀಮೆ ಇದೆ. ಗುಡ್ಡಸಾಲು ಮತ್ತು ಅಡವಿಗಳಿದ್ದರೂ ಸಾರಿಗೆ ವ್ಯವಸ್ಥೆ ತುಂಬಾ ಚೆನ್ನಾಗಿದೆ ಭಟ್ಕಳದಿಂದ ಜಂಬೂರ ನಗರದ (ವಿಜಯನಗರ) ಈಗಿನಷ್ಟು ದೂರವಿದೆ ಬೆಟ್ಟಗಳ ಸಾಲಿನಲ್ಲಿ ಅರಣ್ಯವಿದ್ದು ವಿರಳ ವನ್ಯ ಮತ್ತು ಪಕ್ಷಿ ಸಂಪತ್ತಿನಿಂದ ಒಳಗೊಂಡಿದೆ. ಈ ಕರಾವಳಿ ಮತ್ತು ಇದಕ್ಕೆ ಹೊಂದಿದ್ದ ಪುರ ಪ್ರದೇಶಗಳು ಫಲವತ್ತಾಗಿದೆ. ಪಟ್ಟಣ, ನಗರ ಮತ್ತು ಹಳ್ಳಿಗಳಲ್ಲಿ ತೋಟಗಳಿವೆ.

ಈ ಪ್ರದೇಶವನ್ನು ಪೋರ್ತುಗೀಜರು ತಮ್ಮ ಹಿತಕ್ಕಾಗಿ ಉಪಯೋಗಿಸಿಕೊಳ್ಳುವ ಅವಶ್ಯಕತೆಯನ್ನು ಸೂಚಿಸಿದೆ. ೧೫೪೧ರಂದು ಗೋವೆಯ ವೈಸರಾಯನಿಗೆ ಪೋರ್ತುಗೀಜ –ಸ್ಪೆನ್ ದೊರೆ ಬರೆದ ಪತ್ರದಲ್ಲಿ ಘಟ್ಟದ ಮೇಲೂ ಮತ್ತು ಕೆಳಗೆ ಹಬ್ಬಿಕೊಂಡಿರುವ ಹೊನ್ನೆಯ ಕಂಬಳಿ ರಾಜ್ಯದಲ್ಲಿ ಅದನ್ನು ಸಂಪತ್ತು ಮತ್ತು ಕಾಳುಮೆಣಸು ಬೆಳೆಯುವ ಪ್ರದೇಶವಾಗಿದೆ. ಇಲ್ಲಿಂದ ಈ ರಾಜ್ಯದ ಪಶ್ಚಿಮದಲ್ಲಿರುವ ಕಂಬೋಳಿಯಂ (ಗಂಗೊಳ್ಳಿ ಇವುಗಳು ರೇವುನಲ್ಲಿ ಹೇರಳ ರಫ್ತಾಗುತ್ತದೆ ಇದರ ಹಿಡಿತ ಪೋರ್ತುಗೀಜರು ಸಾಧಿಸಬೇಕು ಇವನ್ನು ಸಾಧಿಸಲು ನಾವು ಹೊನ್ನೆಯ ಕಂಬಳಿಯ ಅಧಿಕಾರಿ ಶಂಕರನಾರಾಯಣ ನೊಂದಿಗೆ ಮೈತ್ರಿ ವೃದ್ಧಿಗೊಳಿಸಬೇಕು ಎಂದು ಹೇಳಿದೆ.[೨೧]

ಕ್ರಿ.ಶ. ೧೬೩೦ ಪೋರ್ತುಗೀಜ ಸರ್ವಾಧಿಕಾರಿ ಮೆತೆಜಸಾ ಜನವರಿ ೧೬ರಂದು ಬರೆದ ಪತ್ರದಲ್ಲಿ ಗಂಗೊಳ್ಳಿಯ ಭೌಗೋಳಿಕ ಸ್ಥಿತಿಯನ್ನು ಅಲ್ಲಿಯ ಬೆಳೆಗಳನ್ನು ಮತ್ತು ಇಲ್ಲಿರುವ ನುರಿತ ನಾವಿಕರ ವಿಚಾರ ತಿಳಿಸುವುದನ್ನು ಇಲ್ಲಿ ಗಮನಿಸುವ ಅವಶ್ಯಕತೆ ಇದೆ ಇಲ್ಲಿನ ಭತ್ತ, ತೆಂಗು ಮತ್ತು ತಾಳೆಮರಗಳಿಂದ ಆವರಿಸಿದೆ. ಈ ಸ್ಥಳದಲ್ಲಿ ೨೦,೦೦೦ ಚೀಲ ಅಕ್ಕಿ ಉತ್ಪನ್ನವಾಗುತ್ತದೆ. ಈ ಸ್ಥಳವನ್ನು ನಾವು ವಶಪಡಿಸಿಕೊಂಡರೆ ೧೫೦೦ ಖಂಡಿ ಮೆಣಸು ಮತ್ತು ಇತರ ಹಣ ತರುವ ಬೆಳೆಗಳನ್ನು ಬೆಳೆಸಿ ಲಾಭ ಗಳಿಸಬಹುದು ಕಬ್ಬಿಣ ಮತ್ತು ಇನ್ನಿತರ ಖನಿಜ ಸಂಪತ್ತು ಇಲ್ಲಿನ ಒಳನಾಡಿನಲ್ಲಿ ಸಿಗುತ್ತವೆ. ಇಲ್ಲಿರುವ ನಾವಿಕರನ್ನು ಪೋರ್ತುಗೀಜ ನೌಕಾದಳದಲ್ಲಿ ಸೇರಿಸಿಕೊಂಡರೆ ಮಲಬಾರು ಸಮುದ್ರಗಳ್ಳರ ಉಪಟಳವನ್ನು ತಡೆಯಬಹುದು. ಇಲ್ಲಿನ ವ್ಯಾಪಾರವನ್ನು ನಾವು ಹಿಡಿತ ಸಾಧಿಸಿದರೆ ನಮಗೆ ಹತ್ತು ಸಾವಿರ ಕುಸ್ರಾರಕ್ಕೂ ಮಿಕ್ಕಿದ ಲಾಭ ಬರುತ್ತದೆ.[೨೨]



೧೫೬೪ರಲ್ಲಿ ಗೆಸ್ಟಬಾದಿ ರಚಿಸಿದ ಭಾರತದವರಿಗೆ ಕೃಪೆ Susmangoli mahnoy

೧೮ನೇ ಶತಮಾನದ ಮಧ್ಯಾವಧಿಯಲ್ಲಿ ಜೋಸೆಪ್ ಟಿಪಲ್ಲಿ ಎಂಬ ಪೋರ್ತುಗೀಜ ವಿದ್ವಾಂಸ[೨೩] ಕರಾವಳಿ ಕರ್ನಾಟಕವನ್ನು ಒಳಗೊಂಡ ಪುಸ್ತಕದಲ್ಲಿ ಇಲ್ಲಿನ ಭೌಗೋಳಿಕ ಲಕ್ಷಣ, ಇಲ್ಲಿನ ನಗರಗಳ ಸ್ಥಾನವನ್ನು ಅಕ್ಷಾಂಶ ಮತ್ತು ರೇಖಾಂಶಗಳಿಂದ ಗುರುತಿಸಿದ. ಇವುಗಳನ್ನು ನಕಾಶೇ ಮುಖಾಂತರ ತಿಳಿಸಿದೆ. ಇದಲ್ಲದೆ ಸಮುದ್ರದಲ್ಲಿ ಆಗಿಂದಾಗ್ಗೆ ಬರುವ ಗಾಳಿಗಳ ಸ್ವರೂಪ ನದಿಗಳಲ್ಲಿ ಬರುವ ನೀರಿನ ಭರತ ಮತ್ತು ಇಳಿತ ಮಣ್ಣಿನ ಗುಣ ಲಕ್ಷಣ ಮತ್ತು ಇವುಗಳಿಂದ ಜನಜೀವನದಲ್ಲಾಗುವ ಬದಲಾವಣೆಗಳನ್ನು ಒಳಗೊಂಡ ಮಾಹಿತಿಗಳನ್ನು ಸಂಗ್ರಹಿಸಿ ದಾಖಲಿಸಿದೆ. ಆದರೆ ಇವನ ಈ ಗ್ರಂಥವು ಅಧ್ಯಯನಿಸದೆ ಹೋದದ್ದು ಖೇದಕರ ಸಂಗತಿ.

**ಉಪಸಂಹಾರ**

ಪೋರ್ತುಗೀಜರ ಭೌಗೋಳಿಕ ಅಧ್ಯಯನವು ನಕಾಶೆಯಿಂದ ಕೂಡಿದ್ದು ವಿಷಯಗಳನ್ನು ತಿಳಿಯುವ ಪ್ರಯತ್ನ ಮಾಡಿದರು. ಇವರು ರಚಿಸಿದ ಕೆಲವು ನಕಾಶೆಗಳು ಪರಿಪೂರ್ಣವಾಗಿಲ್ಲ. ಇದಕ್ಕೆ ಕಾರಣ ಇವರು ಪೋರ್ಚುಗಲ್ಲಿನಲ್ಲಿ ಕುಳಿತು ದಾಖಲೆಯ ಸಹಾಯದಿಂದ ನಕಾಶೆ ಮಾಡಿದರು.

ಈ ಪೋರ್ತುಗೀಜ ಭೌಗೋಳಿಕ ತಜ್ಞರು ಕರ್ನಾಟಕ ಕರಾವಳಿ ಕರ್ಣಾಟಕ ರಚನೆ ಹೇಗೆ ಆಯಿತೆಂದು ತಿಳಿದರು. ಇದರೊಂದಿಗೆ ಈ ಕರಾವಳಿಯ ನದಿಗಳು ಆಗಿಂದಾಗ್ಗೆ ಹರಿಯುವ ದಿಕ್ಕನ್ನು ಬದಲಾಯಿಸುತ್ತದೆ. ಇದರ ಪರಿಣಾಮವಾಗಿ ಹಳೆಯ ರೇವುಗಳು ತನ್ನ ರೇವು ಸ್ಥಾನಗಳನ್ನು ಕಳೆದುಕೊಳ್ಳುತ್ತವೆ. ಇದಲ್ಲದೆ ಹೊಸ ರೇವುಗಳು ರಚನೆಯಾಗುತ್ತದೆ.

ಈ ಭೌಗೋಳಿಕ ತಜ್ಞರು ಕರಾವಳಿ ನೈಸರ್ಗಿಕ ಸಂಪತ್ತು ಮತ್ತು ಖನಿಜ ಸಂಪತ್ತುಗಳನ್ನು ಬೆಳಕಿಗೆ ತಂದು ಇವುಗಳ ಪ್ರಾವೀಣ್ಯತೆ ಆಗಿನ ಜಗತ್ತಿಗೆ ತಿಳಿಸಿದರು.

ಕೆಲವು ವಿದ್ವಾಂಸರು ವೈದ್ಯ ವೃತ್ತಿಯವರು ಕರ್ನಾಟಕ ಕರಾವಳಿಯ ಔಷಧ ಸಸ್ಯಗಳನ್ನು ಪತ್ತೆಹಚ್ಚಿ ಅವುಗಳು ರೋನಿವಾರಣೆಗೆ ಹೇಗೆ ಸಹಾಯವಾಗುತ್ತದೆ ಎಂದು ತಿಳಿಸಿದರು. ಇದು ಕರಾವಳಿ ಕರ್ನಾಟಕದಲ್ಲಿ ಪೋರ್ತುಗೀಜರು ನಡೆಸಿದ ಮುಖ್ಯ ಸಾಧನೆಗಳಲ್ಲಿ ಒಂದಾಗಿವೆ.

ಕರಾವಳಿ ಕರ್ನಾಟಕದ ಹವಮಾನ, ಮಣ್ಣಿನ ಗುಣ ಮತ್ತು ಇದರಿಂದಾಗುವ ಪರಿಣಾಮ ತಿಳಿಯುವ ಯತ್ನದಲ್ಲಿ ಹೆಚ್ಚಿಗೆ ಕೆಲಸ ಮಾಡಲಿಲ್ಲ. ಇದು ಪೋರ್ತುಗೀಜರ ಕರಾವಳಿ ಕರ್ನಾಟಕದ ಭೌಗೋಳಿಕ ಅಧ್ಯಯನದಲ್ಲಿ ಎದ್ದು ಕಾಣುವ ಕೊರತೆ ಈ ಲೇಖನ ಬರೆಯಲು ಸಹಕರಿಸಿದವರು ದಿ. ಡಾ. ಬಿ.ಎಸ್. ಶಾಸ್ತ್ರಿ ಮತ್ತು Re.V. In Late John Connia Ryonso ಇವರಿಗೆ ಲೇಖಕರು ಕೃತಜ್ಞತೆ ಅರ್ಪಿಸುತ್ತಾರೆ.



## ಆಧಾರಸೂಚಿ


೧. Panikar K.M. Mallovas and its Partyes ಪು. ೩೨-೩೩.

೨. Anmndo Constado - Contsitutions of the portuguso Scintific novigation and cantography (Oimhora 1974) P. 7.

೩. ಇದೇ, p. 26, 222 Indica Coorg an of the Hinas Institution of India an History and Culture (Mumbai Subtymlm 1985, P. 28.

೪. John Consia Ayonse 'Luso Indian Catography' Indica. 10 123-133.

೫. ಇದೇ ೧೩೦-೧೩೧.

೬. Susman Goal - Ecanymon India, Delhi 1976.

೭. Indica, P. 131.

೮. ಇವನು ಹೆಸರಾಂತ ನಕಾಶಕರ್ತ ಭೌಗೋಳಿಕ ತಜ್ಞ ಮತ್ತು ಇತಿಹಾಸಕಾರ, ಪೋರ್ತುಗೀಜರ ದಾಖಲೆ ಪತ್ರಗಳ್ನು ಖಾತೆಯಲ್ಲಿ ಇವನು ಇದ್ದ ಕಾರಣ ಪೋರ್ತುಗೀಜ ಚಟುವಟಿಕೆಗಳ ವಿಚಾರ ಮಾಹಿತಿಗಳ ಪರಿಚಯವಿದ್ದಿತು ನೋಡಿ ಶಾಸ್ತ್ರೀ ಬಿ.ಎಸ್., Kannada Partguse Relations, 1498-1763, (New Delhi 2000) ಪು. ೩೧೮.

೯. Disai M.A., Uttar Kannada-Karwar, A History (Bombay, 1969), P. 1.

೧೦. ಶಾಸ್ತ್ರಿ ಬಿ.ಎಸ್., ಅದೇ ಗ್ರಂಥ.

೧೧. Suryanath Kamath Utara Kannada District (Bombay 1985) P. 121.

೧೨. ಶಾಸ್ತ್ರಿ ಬಿ.ಎಸ್. ಅದೇ ಗ್ರಂಥ ನೋಡಿ ದೇಸಾಯಿ ಎಂ.ಎ., ಅದೇ ಗ್ರಂಥ, ಪುಟ ೧೦-೧೧.

೧೩. ಈ ಗ್ರಂಥವು ಪು. ೧೫೧೬ರಲ್ಲಿ ಬರೆದರೂ ಇದು ೧೯೩೦ರಲ್ಲಿ ಪತ್ತೆಯಾಯಿತು. ನೋಡಿ ದೊರೆತ ಪದರ ರಾಜನ್ (ಸಂ. Portuguz incounth (camidags) p. 91, ಇದನ್ನು Anmand orgtgo ಆಂಗ್ಲ ಭಾಷೆಗೆ ತರ್ಜುಮೆ ಮಾಡಿದ ಈ ಗ್ರಂಥವನ್ನು ಕರಾವಳಿ ಕರ್ನಾಟಕದ ಇತಿಹಾಸ ಅಧ್ಯಯನದಲ್ಲಿ ಪ್ರಥಮವಾಗಿ ಉಪಯೋಗಿಸಿದವರಲ್ಲಿ ಬಿ.ಎಸ್. ಶಾಸ್ತ್ರಿಯವರು ನಂತರ ೧೯೯೬ ದಿ. ಜಿ.ಎಸ್. ದೀಕ್ಷಿತರು ಈ ಗ್ರಂಥದಲ್ಲಿರುವ ಕೆಲವು ಪ್ರಮುಖ ಅಂಶಗಳನ್ನು ಕನ್ನಡ ಭಾಷೆಯಲ್ಲಿ ತಿಳಿಸಿದ ಇದು ಇವರ ಲೇಖನದಲ್ಲಿದೆ ಲೇಖನ ತಜ್ಞ ದೇವರಾಯನ ಇತಿಹಾಸಕ್ಕೆ ಒಂದು ಆಕರ ವಿಜಯನಗರ ಅಧ್ಯಯನ ಸಂಪುಟ ಇವು ೮೫-೮೭.

೧೪. Join Pius Suma orintal (Armand Coltsa (AES 1910) ಪು. ೬೨-೬೫, ವಿಜಯನಗರ ಇತಿಹಾಸ ಅಧ್ಯಯನ, ಪು. ೮೫-೮೭.

೧೫. Gaitonds Pntgus Pionles in India Socilist an Medicins (Bombay 1985) ಪು. ೧೫೬-೧೬೨.

೧೬. Loks India (ಸಂ) ಅದೇ ಗ್ರಂಥ, ಪು. ೯೭-೯೯.

೧೭. Dsarth Basva The Book of Dranth Bandoso And Accont of the Countries boarding on the Indian ocian and this in hadants in by Danso 1963) Vol. 198.

೧೮. ಅದೇ, ಪು. ೧೮೨-೧೯೭.

೧೯. ಅದೇ, ಪು. ೧೯೮-೯.

೨೦. A Bioglion Empier Vijayanagar (AES 1991) ಪು. ೨೩೬-೭.

೨೧. Hinsy hras Asavid Dynasy Vijayanagara (Madras 1927), ಪು. ೪೨೭) ಈ ಕಾಲದಲ್ಲಿ ಸ್ಪೆಸ್ ಪೋರ್ತುಗಲ್ ಒಂದಾಗಿತ್ತು ಹೊಸ್ಮಿಯ ಕಂಬಳ ರಾಜನಗರ ಮತ್ತು ಮುಂರಾಪುರ ತಾಲ್ಲೂಕು (ಶಿವಮೊಗ್ಗ, ಉಡುಪಿ ಜಿಲ್ಲೆಗಳವರೆಗೆ ಹಬ್ಬಿತು ಕಂಬೋಳಿಯ ಈ ರಾಜ್ಯದ ಪ್ರಮುಖದವು.

೨೨. ಹೆರಾಸ್ ಹೆನ್ರಿ "Exhansian of was of Vinyaka of Ik Indan History land Commision xii 1928, ಪು. ೧೧೨.




# ತೆಕ್ಕಲಕೋಟೆ ಹರಿವಿನ ಮಲ್ಲಯ್ಯ (ಮೈಲಾರ): ಒಂದು ಅವಲೋಕನ

**ನವೀನಕುಮಾರ್ ಪಿ.***

ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಹಲವಾರು ದೇವತೆಗಳಿವೆ. ಆದರೆ ಮೈಲಾರಲಿಂಗ ದೈವ ಕರ್ನಾಟಕದ ಎಲ್ಲಾ ಜನ ಸಮುದಾಯ ಆರಾಧಿಸುವ ಪ್ರಮುಖ ದೇವತೆ. ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಗೋವಗಳಲ್ಲಿ ಈತನ ಅಸ್ತಿತ್ವವನ್ನು ಕಾಣಬಹುದು. ಜನಪದ ದೈವವಾದ ಈತನು ಕರ್ನಾಟಕದಲ್ಲಿ ಮೈಲಾರನೆಂದು, ಮಹಾರಾಷ್ಟ್ರದಲ್ಲಿ ಖಂಡೋಬಾನೆಂದು ಹಾಗೂ ಆಂಧ್ರ ಪ್ರದೇಶಗಳಲ್ಲಿ ಮಲ್ಲಯ್ಯನೆಂದು ಗುರುತಿಸಿಕೊಂಡಿದ್ದಾನೆ. ಹಾಗೆಯೇ ಕರ್ನಾಟಕದಲ್ಲಿ ಈತನನ್ನು ಹಲವು ಹೆಸರುಗಳಿಂದ ಕರೆಯುತ್ತಾರೆ. ಅವುಗಳೆಂದರೆ ಮೈಲಾರ, ಮೈಳಾರ, ಲಿಂಗಣ್ಣ, ನೀಲಣ್ಣ, ಮಲ್ಲಯ್ಯ, ಮಲ್ಲಖಾನ, ಮಲ್ಲಿಕಾರ್ಜುನ, ಮಲ್ಲೇಶ್ವರ, ಮೇಲುದೇವ, ಮಲ್ಲರ, ಅಜಮತಖಾನ, ಕರಿಯಾಲ, ಏಳುಕೋಟಿ, ಮಾರ್ತಂಡಭೈರವ, ಮಲ್ಲಾರಿ, ಹುಲ್ಲಪ್ಪ, ಚಂದಪ್ಪ ಹಾಗೂ ಕನ್ನಡ ಜಂಗಮ ಹೀಗೆ ಹಲವು ಹೆಸರುಗಳಿಂದ ಕರೆಯುವ ದೈವ ಮೈಲಾರ. ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿರುವ ಮೈಲಾರ ನೆಲೆಗಳನ್ನು ಕಾಣಬಹುದು. ಈ ದೈವಕ್ಕೆ ಸಂಬಂಧಿಸಿದ ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು, ಐತಿಹ್ಯಗಳು, ಕಾವ್ಯಗಳು, ನಂಬಿಕೆ–ಆಚರಣೆಗಳು ಪ್ರಮುಖವಾಗಿ ಕಾಣಬಹುದು.

ಬಳ್ಳಾರಿ ಪರಿಸರವೂ ಫಲವತ್ತಾದ ಭೂಮಿ, ನೀರಿನ ಸರಬರಾಜು, ಕಾಡು, ಕಬ್ಬಿಣ, ತಾಮ್ರ, ಚಿನ್ನದ ಅದಿರು ಮತ್ತು ಗ್ರಾನೈಟ್ ಬಂಡೆಗಳಿಂದ ಕೂಡಿದ ಬೆಟ್ಟಗುಡ್ಡಗಳು ಮುಂತಾದ ಭೌಗೋಳಿಕ ಲಕ್ಷಣಗಳಿಂದ ಪ್ರಾಗೈತಿಹಾಸ ಹಾಗೂ ಇತಿಹಾಸ ಕಾಲದವರೆಗೆ ಸಮೃದ್ಧವಾಗಿ ಬೆಳೆದು ಬಂದಿದೆ. ತೆಕ್ಕಲಕೋಟೆ ಶಿರುಗುಪ್ಪ ತಾಲೂಕಿನ ಪ್ರಮುಖವಾದ ಗ್ರಾಮವಾಗಿದೆ. ಈ ಗ್ರಾಮದ ಪೂರ್ವದಿಕ್ಕಿನ ಕಡೆಗೆ ೨ ಕಿ.ಮೀ. ದೂರದಲ್ಲಿ ಬೆಟ್ಟಗುಡ್ಡಗಳ ಸಾಲುಗಳಿವೆ. ಬೆಟ್ಟಗುಡ್ಡದ ಮಧ್ಯಭಾಗದಲ್ಲಿರುವ ಸ್ಥಳವೇ ಮಲ್ಲಯ್ಯನಗುಡ್ಡ. ಈ ಗುಡ್ಡದ ಮೇಲೆ ವಿಶಾಲವಾದ ಪ್ರಾಗಂಣದಲ್ಲಿ ಶಿವ ಪಾರ್ವತಿ ಮತ್ತು ಹರಿವಿನ ಮಲ್ಲಯ್ಯ (ಮೈಲಾರ) ದೇವಾಲಯಗಳಿವೆ. ಶಾಸನೋಕ್ತವಾಗಿ ಕ್ರಿ.ಶ. ೧೦೧೭ರಲ್ಲಿ ಕಲ್ಯಾಣ ಚಾಲುಕ್ಯರ ಅರಸ ಜಗದೇಕಮಲ್ಲನ ಮಹಾಮಂಡಳೇಶ್ವರ ಇರಿವ ನೊಳಂಬನು ನೊಳಂಬವಾಡಿ ೩೨ ಸಾವಿರವನ್ನು ಆಳುತ್ತಿರುವಾಗ ಬಲ್ಲಕುಂದೆ ಮುನ್ನುರರೊಳಗಿನ ಹಗರೆಯ ತಡಿಯ ಸಿರಿಯಾನೂರನ್ನು ಶ್ರೀಮತ್ ಮೈಲಾರ ದೇವರಿಗೆ ದತ್ತಿ ಬಿಟ್ಟ ಉಲ್ಲೇಖವಿದೆ. ಹರಿವಿನ ಮಲ್ಲಯ್ಯ ದೇವಾಲಯವೂ ಕಲ್ಯಾಣ ಚಾಲುಕ್ಯರ ಕಾಲಾವಧಿಯಿಂದ ವಿಜಯನಗರ ಕಾಲದ ವರೆಗೆ ದೇವಾಲಯದ ವಿವಿಧ ಭಾಗಗಳು ಜೀರ್ಣೋದ್ಧಾರಗೊಂಡಿವೆ. ಗರ್ಭಗೃಹ, ಸಭಾಮಂಟಪ, ಪ್ರದಕ್ಷಿಣಾ ಪಥ ಹಾಗೂ ಮಹಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಮಲ್ಲಯ್ಯ(ಮೈಲಾರ)ನ ಶಿಲ್ಪವಿದೆ. ಈ ಶಿಲ್ಪದ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳಿವೆ. ಕೆಳಗಡೆ ಎಡಬದಿಯಲ್ಲಿ ಭೃಂಗಿಯ ಶಿಲ್ಪವಿದೆ. ಗರ್ಭಗೃಹದ ಮುಂದೆ ಎರಡು ಬದಿಯಲ್ಲಿ ಚಿಕ್ಕಗರ್ಭಗೃಹಗಳಿವೆ. ಇವುಗಳಲ್ಲಿ ಎಡಬದಿಯಲ್ಲಿ ಗಂಗಮಾಳಮ್ಮ ಬಲಬದಿಯಲ್ಲಿ ಲಕ್ಷ್ಮಿ(ತುಪ್ಪದ ಮಾಳಮ್ಮ) ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಗಂಗಮಾಳಮ್ಮ ಕೈಗಳಲ್ಲಿ ತ್ರಿಶೂಲ, ಡಮರುಗ, ಖಡ್ಗ, ಪಾನಪಾತ್ರೆಗಳಿವೆ. ವಿಜಯನಗರ ಕಾಲದಲ್ಲಿ ಕಟ್ಟಲಾದ ಸಭಾಮಂಟಪದ ಕಂಬಗಳಲ್ಲಿ ಅನೇಕ ಶಿಲ್ಪಗಳನ್ನು ಕಾಣಬಹುದು. ಭೈರವನ ಶಿಲ್ಪಗಳು, ಕುದುರೆಯ ಮೇಲೆ ಮೈಲಾರನು ಕುಳಿತಿರುವ ಕೈಗಳಲ್ಲಿ ತ್ರಿಶೂಲ, ಡಮರು ಹಿಡಿದಿರುವ ಶಿಲ್ಪ, ಶಿವನ ತೊಡೆಯ ಮೇಲೆ ಪಾರ್ವತಿ ಕುಳಿತಿರುವ ಶಿಲ್ಪಗಳು, ವೀರಭದ್ರನ ಶಿಲ್ಪಗಳು, ನಂದಿಶಿಲ್ಪಗಳು, ಪ್ರಮುಖವಾಗಿ ಕಾಣಬಹುದು.

ದಕ್ಷಿಣಾಭಿಮುಖವಾದ ಇನ್ನೊಂದು ದೇವಾಲಯದ ಗರ್ಭಗೃಹದಲ್ಲಿ ಸುಮಾರು ೧೭ನೇ ಶತಮಾನಕ್ಕೆ ಸೇರಿದ ಶಿವಪಾರ್ವತಿ ಮತ್ತು ಷಣ್ಮುಖ ಶಿಲ್ಪಗಳಿವೆ. ಈ ಶಿಲ್ಪಗಳ ಮುಂಭಾಗ ಮೂರು ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ. ಏಕಶಿಲಾ ಬಂಡೆಯಲ್ಲಿ ತಯಾರಿಸಿದ ಬೃಹತ್ ನಂದಿಶಿಲ್ಪವನ್ನು

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿ.ವಿ. ಹಂಪಿ, ವಿದ್ಯಾರಣ್ಯ.



ತೆಕ್ಕಲಕೋಟೆ ಹರವಿನ ಮಲ್ಲಯ್ಯ (ಮೈಲಾರ) ದೇವಾಲಯದ ಪಕ್ಷಿನೋಟ



ಸಭಾಮಂಟಪದ ಕಂಬದಲ್ಲಿನ ಮೈಲಾರನ ಶಿಲ್ಪ



ದೇವಾಲಯದ ಹೊರಭಾಗದಲ್ಲಿರುವ ನರಬಲಿ ಶಿಲ್ಪ



ದೇವಾಲಯದ ಹೊರಭಾಗದಲ್ಲಿರುವ ಮೈಲಾರನ ಶಿಲ್ಪ

ದೇವಾಲಯದ ಎದುರಿಗೆ ಕಾಣಬಹುದು. ದೇವಾಲಯದ ಆವರಣದಲ್ಲಿ ಚಾಲುಕ್ಯರ ಕಾಲದಿಂದ ವಿಜಯನಗರ ಕಾಲದ ವರೆಗೆ ಕೆಲವು ಶಿಲ್ಪಗಳಿವೆ. ಪ್ರಮುಖವಾಗಿ ನರಬಲಿ ಶಿಲ್ಪಗಳಿವೆ. ನಿಂತ ವ್ಯಕ್ತಿ ಖಡ್ಗದಿಂದ ತಮ್ಮ ಶಿರಗಳನ್ನು ಕಡಿದುಕೊಳ್ಳು ತ್ತಿದ್ದಾರೆ. ಈ ಶಿಲ್ಪಗಳನ್ನು ಗಮನಿಸಿದಾಗ ಮೈಲಾರನಿಗೆ ಅಥವಾ ಮಲ್ಲಯ್ಯನಿಗೆ ಉಗ್ರವಾದ ನರಬಲಿಯ ಆಚರಣೆ ನಡೆಯುತ್ತಿದ್ದು, ಕಾಲನಂತರದಲ್ಲಿ ಶಸ್ತ್ರ ಪವಾಡ, ಕೈಕಾಲು ಪವಾಡದ ಸ್ವರೂಪ ಪಡೆದುಕೊಂಡಿದೆ. ಇಂದಿಗೂ ಸಹ ಆಗಿಹುಣ್ಣಿಮೆಯ ಸಮಯದಲ್ಲಿ ಈ ಸ್ಥಳದಲ್ಲಿ ಜಾತ್ರೆಯಾಗು ತ್ತದೆ. ಈ ಜಾತ್ರೆಯ ಸಮಯದಲ್ಲಿ ಶಸ್ತ್ರ ಪವಾಡವನ್ನು ಒಳಗುಂದಿಯ ಬೇಡ ಜನಾಂಗದವರು ಆಚರಿಸುತ್ತಾ ಬಂದಿದ್ದಾರೆ.

ಮುಂದುವರೆದು ಮೈಲಾರ ಚಿತ್ರಣಗಳನ್ನು ಒಳಗೊಂಡಿ ರುವ ಶಿಲ್ಪದಲ್ಲಿ ಕುದುರೆಯ ಮೇಲೆ ಕುಳಿತು ಕೈಯಲ್ಲಿ ಭರ್ಜಿ ಹಿಡಿದು ಮೈಲಾರನು ಬರುತ್ತಿದ್ದಾನೆ. ತ್ರಿಶೂಲ, ಡಮರು ಹಿಡಿದ ಗೊರವ ದೀವಟಿಗೆ ಹಾಗೂ ಮೃದಂಗ ಬಾರಿಸು ತ್ತಿರುವ ವ್ಯಕ್ತಿಗಳು ದೇವರನ್ನು ಬರಮಾಡಿಕೊಳ್ಳುತ್ತಿದ್ದಾರೆ. ಈ ಶಿಲ್ಪವೂ ಮೈಲಾರನ ಅಪರೂಪ ಶಿಲ್ಪಗಳಲ್ಲಿ ಒಂದಾಗಿದೆ.

ಈ ರೀತಿಯಾಗಿ ಬಳ್ಳಾರಿ ಜಿಲ್ಲೆಯ ಶಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯ ಬಳಿಯ ಮಲ್ಲಯ್ಯನಗುಡ್ಡ ಸ್ಥಳವೂ ಹರಿವಿನ ಮಲ್ಲಯ್ಯ ಎಂಬ ಹೆಸರಿನಿಂದ ಆರಾಧನೆ ಗೊಳ್ಳುತ್ತಿದ್ದರೂ, ಶಾಸನೋಕ್ತವಾಗಿ ಮೈಲಾರ ದೇವಾಲಯ ವಾಗಿದೆ. ಈ ದೈವಕ್ಕೆ ಸಂಬಂಧಿಸಿದ ಹಲವು ಮೂರ್ತಿ ಶಿಲ್ಪಗಳು, ಶಾಸನಗಳು, ನಂಬಿಕೆ, ಆಚರಣೆಗಳು ಕಾಣಬಹುದು. ವಿಶೇಷವಾಗಿ ಕ್ರಿ.ಶ. ೧೦೧೭ರ ಮೈಲಾರ ದೇವಾಲಯಕ್ಕೆ ದತ್ತಿಬಿಟ್ಟ ಉಲ್ಲೇಖಿತವಾಗಿರುವ ಕರ್ನಾಟಕದ ಪ್ರಾಚೀನ ದೇವಾಲಯವಾಗಿದೆ. ಇದಕ್ಕೆ ಪುಷ್ಠಿ ನೀಡುವಂತೆ ಮಲ್ಲಯ್ಯ ದೇವಾಲಯದ ಭಾಗದಲ್ಲಿ ಬಿದ್ದಿರುವ ಭಗ್ನ ಮೈಲಾರ ಶಿಲ್ಪವೇ ಸಾಕ್ಷಿಯಾಗಿದೆ. ಈ ಶಿಲ್ಪವೂ ಮೊದಲಿಗೆ ಗರ್ಭಗೃಹದಲ್ಲಿದ್ದು ಕಾಲಾನಂತರದಲ್ಲಿ ಹೊರಗೆ ಬಿದ್ದಿರುವ ಸಾಧ್ಯತೆ ಇದೆ.



## ಆಧಾರ ಗ್ರಂಥಗಳು


೧. ಜಯಮ್ಮ ಕರಿಯಣ್ಣ ಎಚ್., ೨೦೦೮, ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೨. ನೇಗಿನಹಾಳ ಎಂ.ಬಿ., ೧೯೯೨, ಮೈಲಾರಲಿಂಗ-ಖಂಡೋಬಾ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩. ಮಹದೇವ ಸಿ., (ಸಂ), ೨೦೧೨, ಮೈಲಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ವಾಸುದೇವ ಬಡಿಗೇರ., ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ವಾಸುದೇವ ಬಡಿಗೇರ., ೨೦೧೧, ತುಂಗಭದ್ರ ಪರಿಸರದ ಮೈಲಾರ ಪರಂಪರೆ, ಗೋವಿಂದರಾಜು ಸಿ.ಆರ್, (ಸಂ), ಚರಿತ್ರೆ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬ *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೧, ಬಳ್ಳಾರಿ ಜಿಲ್ಲೆ, ೧೯೯೮, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.*

೮೭

# "ಸರೂರ ಸಂಪ್ರದಾಯದ ಕೆಲವು ದಾಖಲೆಗಳು"

ಸಣ್ಣಪಾಲಯ್ಯ.ಎಸ್.ಎಂ.*

ನಾಡಿನ ಇತಿಹಾಸವನ್ನು ಕಟ್ಟುವಲ್ಲಿ ಹಾಗೂ ಯಾವುದೇ ಜನಾಂಗದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವಲ್ಲಿ ಲಿಖಿತ ಮತ್ತು ಮೌಖಿಕ ಆಕರಗಳು ಪ್ರಮುಖ ಪಾತ್ರವಹಿಸುತ್ತವೆ. ಈ ದಾಖಲೆಗಳು ಕರ್ನಾಟಕದ ಜನಜೀವನ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಂಗತಿಗಳನ್ನು ಸಂಗ್ರಹಿಸಲು ಸಹಕಾರಿಯಾದವುಗಳು. ಪ್ರತಿಯೊಂದು ಸಮುದಾಯಕ್ಕೂ ಅದರದೇ ಆದ ಚರಿತ್ರೆ ಇರುವಂತೆ ಕುರುಬ ಸಮುದಾಯಕ್ಕೂ ತನ್ನದೇ ಆದ ಸಾಂಸ್ಕೃತಿಕ ಚಹರೆ ಇದೆ. ಇದಕ್ಕೆ ಈ ಸಮುದಾಯವೂ ಹೊರತಾಗಿಲ್ಲ. ಈ ಸಮುದಾಯದಲ್ಲಿ ಬರುವ ಗುರು ಒಡೆಯರ ಪಾತ್ರ ಬಹಳ ಕುತೂಹಲಕರವಾಗಿದೆ. ಈ ಗುರು ಪರಂಪರೆಗೆ ಮೂಲ ಕೇಂದ್ರ ಸರೂರಾಗಿದೆ. ಇದು ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಲ್ಲಿ ಬರುವ ಒಂದು ಗ್ರಾಮವಾಗಿದೆ. ಈ ಪರಂಪರೆಯವರು ಕುರುಬರ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಪುರೋಹಿತರಾಗಿ ಕಾರ್ಯನಿರ್ವಹಿಸಿಕೊಂಡು ಆಂಧ್ರ, ಮಹಾರಾಷ್ಟ್ರ, ತಮಿಳುನಾಡು ಹಾಗೂ ಕರ್ನಾಟಕದಾದ್ಯಂತ ನೆಲೆಸಿರುವುದು ತಿಳಿದುಬರುತ್ತದೆ. ಹೀಗಾಗಿ ಇವರ ಪ್ರಾಚೀನತೆ ಸುಮಾರು ೮, ೯ನೇ ಶತಮಾನಗಳಿಂದ ರೂಢಿಯಲ್ಲಿತ್ತು ಎಂಬುದಕ್ಕೆ ನಿದರ್ಶನವಾಗಿ ಕೆಲವು ದಾಖಲೆ ಪತ್ರಗಳು ದೊರಕಿವೆ. ಈ ಪತ್ರಗಳಲ್ಲಿ ವಿಶೇಷವಾಗಿ ಹಾಲುಮತ ಮುಖಂಡರು ಹಾಗೂ ಸರೂರ ಸಂಪ್ರದಾಯದ ಗುರು ಒಡೆಯರ ಅನುಯಾಯಿಗಳು ತಮ್ಮ ಸಮುದಾಯದೊಳಗೆ ರೂಪಿಸಿ ಕೊಂಡ ಮತಧರ್ಮದ ಚೌಕಟ್ಟುಗಳಾಗಿರಬಹುದು, ಹಾಗೂ ಅವುಗಳನ್ನು ಮೀರಿ ನಿಂತವರಿಗೆ ಕೆಲವು ದಂಡನೆಗಳಾಗಿರಬಹುದು. ಅದೇರೀತಿ ಬೇರೆ ಬೇರೆ ಶಾಖಾ ಮಠಗಳಲ್ಲಿ ತಮ್ಮ ಕುಲಸ್ಥರಿಗೆ ಶಿಕ್ಷಣ ಹಾಗೂ ತಿಳುವಳಿಕೆಯ ಬಗ್ಗೆ ನಡೆಸುವ ಸಭೆ ಮತ್ತು ತಿರ್ಮಾನಗಳನ್ನು ಕುರಿತು ಚರ್ಚಿಸಿರುವುದನ್ನು ನೋಡಬಹುದು. ಈ ಎಲ್ಲಾ ವಿಚಾರಗಳನ್ನು ಒಳಗೊಂಡ ಕೆಲವು ದಾಖಲೆ ಪತ್ರಗಳನ್ನು ನೋಡುವುದಾದರೆ, ಶ್ರೀಮನ್ ಮಹಾ ಆಸಂದಿ ಸಂಸ್ಥಾನದ ಗುರುಗಳು, ಶ್ರೀ ಸಣ್ಣಸಿದ್ಧಪ್ಪ ಒಡೆಯರು, ಸಿದ್ರಾಮಯ್ಯ ಒಡೆಯರು, ಬಸಪ್ಪ ಒಡೆಯರು ಮತ್ತು ಹನ್ನೆರಡು ಗಡಿಕಟ್ಟು, ಹದಿನೆಂಟು ಹರಿವಾಣ, ಎರಡು ಕಟ್ಟೆಮನೆ ಯಜಮಾನರುಗಳ ಅಧಿಕಾರ ಸ್ಥಾನದಿಂದ ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಯ ಕುರುಬ ಜನಾಂಗದ ಮಹಾಮಂಡಳಿಯವರಿಗೆ ಬರೆದ ದಾಖಲೆ ಪತ್ರವಾಗಿದೆ. ಈ ಪತ್ರದಲ್ಲಿ ಉಲ್ಲೇಖಿಸಿರುವಂತೆ,

"ಕಡೂರಿನ ಒಡೆಯರ ಮೇಲೆ ಆಸಂದಿ ಕೋಲುಕಾರ್ ಮರಳನ ಹೆಂಡತಿಯೊಬ್ಬಳು, ಚಿಕ್ಕಮಗಳೂರು ಕೋರ್ಟಿನಲ್ಲಿ ತಾರೀಖು ೦೭.೧೨.೯೧ಳ ಮರ್ಕುಂ ಕ್ರಿಮಿನಲ್ ಕೇಸು ನಂಬರು ೨೧ರಲ್ಲಿ ಅಕ್ರಮಸ್ತ್ರೀ ಸಂಬಂಧ ಮೊಕದ್ದಮೆ ನಡೆಸಿ ಸದರಿ ಒಡೆಯರು ಲಾಕಪ್‌ನ್ನು ಅನುಭವಿಸಿದ್ದರ ಮೇರೆಗೆ ಇವರನ್ನು ಮಠದ ಹಕ್ಕಿನಿಂದ 'ವಜಾ' ಮಾಡಿರುತ್ತೇವೆ" ಎಂಬ ವಿಚಾರಗಳನ್ನು ಒಳಗೊಂಡಿದೆ. ಈ ಸಂಗತಿಗಳಿಂದ ತಿಳಿಯುವುದೇನೆಂದರೆ, ಪ್ರತಿಯೊಂದು ಸಮುದಾಯಕ್ಕೂ ಸಾಮಾಜಿಕ ಮತ್ತು ಧಾರ್ಮಿಕ ವಿಧಿ ನಿಷೇಧಗಳು ಇದ್ದವು ಮತ್ತು ಕುರುಬರ ಗುರು ಒಡೆಯರು ಸಹ ತಮ್ಮ ಸಂಪ್ರದಾಯದ ಧಾರ್ಮಿಕ ಚೌಕಟ್ಟಿನ ಮಿತಿಯನ್ನು ಮೀರುವಂತಿಲ್ಲ.

ಅಂದರೆ ಈ ಮತದ ವಿರೋಧ ಕೃತ್ಯಗಳಾದ ಮದ್ಯಪಾನ, ಮಾಂಸ ಸೇವನೆ, ಕೊಲೆ, ಸುಲಿಗೆ, ಜೈಲುಸೇವೆ ಇತ್ಯಾದಿ ಮಾನವೀಯ ವಿರೋಧ ಆಚರಣೆಗಳಿಗೆ ಒಡೆಯರ ಸಂಪ್ರದಾಯದಲ್ಲಿ ಮಾನ್ಯತೆ ಇರುವುದಿಲ್ಲ. ಒಂದುವೇಳೆ ಮಾಡಿದ್ದೇಯಾದಲ್ಲಿ ಅಂತವರನ್ನು ತಮ್ಮ ಮಠದಿಂದ ಅಥವಾ ಸಂಸ್ಥಾನದಿಂದ ತೆಗೆದುಹಾಕುವ ಪದ್ಧತಿ ಇತ್ತು ಎಂಬುದಕ್ಕೆ ಈ ಪತ್ರ ಒಂದು ನಿದರ್ಶನವಾಗಿದೆ. ಈ ರೀತಿಯಾದ ಕಾಗದ ಪತ್ರಗಳ ಮೂಲಕ ಒಡೆಯರ ಸಂಪ್ರದಾಯದ ಸಾಂಸ್ಕೃತಿಕ ಬದುಕಿಗೆ ಮತ್ತೊಂದು ಪತ್ರ ದೊರೆತಿದೆ.

"ಮೈಸೂರು ಸೀಮೆಯ ಕುರುಬ ಮಹಾಮಂಡಳಿಯವರಿಗೆ ಚನ್ನರಾಯಪಟ್ಟಣ ತಾಲೂಕು ಹಾಗೂ

* ಸಂಶೋಧನಾ ವಿದ್ಯಾರ್ಥಿ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹೊಳೆನರಸೀಪುರ ತಾಲೂಕಿನ ಆಸುಪಾಸಿನ ಈ ಜನಾಂಗದ ಮುಖ್ಯಸ್ಥರು ಬರೆಸಿರುವ ಕಾಗದವಾಗಿದೆ. ಈ ಪತ್ರದಲ್ಲಿರುವ ಸಂಗತಿಯೇನೆಂದರೆ ಹಾಲುಮತ ಜನಾಂಗವು ದಿನೇ ದಿನೆ ಕೇವಲ ಹೀನಸ್ಥಿತಿಗೇರುತ್ತದೆ. ಈ ಮತಕ್ಕೆ ವಿರೋಧವಾದ ಕೆಲಸಗಳನ್ನು ಮಾಡುತ್ತಿದೆ. ಹಾಗೂ ಅವಿದ್ಯೆಯಿಂದ ಇರುವ ಕಾರಣ ವಿದ್ಯೆಯ ಅಭಿರುಚಿಯನ್ನು ಸೂಚಿಸುವ ಸಲುವಾಗಿ ಹಾಗೂ ಆಹಾರ ವ್ಯವಹಾರಗಳ ಮಾನ್ಯತೆಯನ್ನು ಸರಿಪಡಿಸಲು ಶುದ್ಧವಾದ ಸಾಂಸ್ಕೃತಿಕ ಆಚರಣೆಗಳನ್ನು ಮಾಡಬೇಕೆಂದು ಸಭೆ ಸೇರಿಸಿ ಸೂಚನೆ ನೀಡುವ ಸಲುವಾಗಿ ಈ ಪತ್ರ ಬರೆಯಲಾಗಿದೆ. ಈ ಪತ್ರದಲ್ಲಿ ಉಲ್ಲೇಖಿಸಿರುವಂತೆ" ಚನ್ನರಾಯಪಟ್ಟಣ ತಾಲೂಕು ದಂಡಿಗನಹಳ್ಳಿ ಹೋಬಳಿ ಬೆಟ್ಟದಸಮುದ್ರವಳ್ಳಿ ಗ್ರಾಮದಲ್ಲಿ ತಾರೀಖು ೯-೬-೧೯೨೯ನೇ ಭಾನುವಾರದ ಲಾಗಾಯಿತು, ಎರಡು-ಮೂರು ದಿವಸದವರೆಗೆ ಸಭೆ ಸೇರಬೇಕೆಂದು ಈ ಮತಕ್ಕೆ ಸಂಬಂಧಪಟ್ಟ ಸರವೂರುಶಾಖ್ಯ ಆಸಂದಿ ಸಿಂಹಾಸನದ ಗುರುಗಳು ಕಡೂರಿನಲ್ಲಿ ಬಿಜ ಮಾಡಿರುವ ಸಿದ್ಧರಾಮಪ್ಪ ಒಡೆಯರು ಅಣತಿ ಮಠದ ಗುರುಗಳು, ವಳಗೆರೆ ಹಳ್ಳಿಯಲ್ಲಿ ಬಿಜ ಮಾಡಿರುವ ಶಾಂತಪ್ಪ ಒಡೆಯರು ಈ ಸಭೆ ನಡಿಸಬೇಕೆಂದು ತಾವು ಬರುವುದಾಗಿ ಹಾಗೂ ಈ ಜನಾಂಗದ ಹಿರಿಯರು ಈ ಸಭೆಯನ್ನು ನಡೆಸಬೇಕೆಂದು ನಿಶ್ಚಯಿಸಿರುವ ಪ್ರಯುಕ್ತ ಅಭಿಮಾನ ಶ್ಯಾಲಿಗಳಾದ ತಾವೆಲ್ಲರು ಆ ಕಾಲಕ್ಕೆ ತಪ್ಪದೇ ದಯಮಾಡಿಸಬೇಕಾಗಿ ಬೇಡುತ್ತೇವೆ." ಹೀಗೆ ಅನೇಕ ಸಂಗತಿಗಳು ಈ ಪತ್ರದಲ್ಲಿ ಬರೆಯಲಾಗಿದೆ.

ಅದೇ ರೀತಿ ೧೯೩೧ರಲ್ಲಿ ಹಾಲುಮತ ಕುರುಬರ ಮಹಾನಾಡು ಸಭೆಯ ತೀರ್ಮಾನದ ಒಂದು ದಾಖಲೆಯ ಪ್ರತಿ ಸಿಕ್ಕಿದೆ. ಇದರಲ್ಲಿ ಉಲ್ಲೇಖಿಸಿರುವಂತೆ ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲೂಕಿನ ಬರಗೂರು ಶ್ರೀ ಬೀರೇಶ್ವರ ದೇವಸ್ಥಾನದ ಬಳಿ ತಾರೀಖು ೨೭ ಮತ್ತು ೨೮ನೇ ಫೆಬ್ರವರಿ ೧೯೩೧ರಲ್ಲಿ ನಡೆದ ಸಭೆಯಲ್ಲಿ ತೀರ್ಮಾನವಾದ ಕೆಲವು ಸಂಗತಿಗಳನ್ನು ಇದರಲ್ಲಿ ದಾಖಲಿಸಿದ್ದಾರೆ. ಅವುಗಳೆಂದರೆ ಪ್ರಮುಖವಾಗಿ ಅಂದಿನ ಕಾಲದಲ್ಲಿಯೇ ವಿದ್ಯಾಭ್ಯಾಸದ ಬಗ್ಗೆ ಕಾಳಜಿವಹಿಸಿ ತಮ್ಮ ಮತದವರಿಗೆ ಶಿಕ್ಷಣ ಕೊಡಿಸುವ ಸಲುವಾಗಿ, ವಿದ್ಯಾರ್ಥಿನಿಲಯಕ್ಕೆ ಬೇಕಾಗುವ, ಜಾಗಕ್ಕೋಸ್ಕರ ಸರ್ಕಾರಕ್ಕೆ ಮನವಿ ಮಾಡಿರುವಂತಹದ್ದು. ಅದೇರೀತಿ ಮದುವೆ-ಮುಂಜಿ ಮೊದಲಾದ ಕಾರ್ಯಗಳಲ್ಲಿ ಹೆಣ್ಣಿನ ಕಡೆಯವರು, ಗಂಡಿನ ಕಡೆಯವರಿಂದ ಹಣವನ್ನು ತೆಗೆದುಕೊಳ್ಳುವುದನ್ನು ನಿಲ್ಲಿಸಬೇಕು.

ಅಂದರೆ ಅಂದಿನ ಕಾಲದಲ್ಲಿಯೇ 'ವಧು ದಕ್ಷಿಣೆ' ಎಂಬ ಮೂಢ ಪದ್ಧತಿಯನ್ನು ಸಂಪೂರ್ಣ ವಿರೋಧಿಸಿ ರುವುದನ್ನು ತಿಳಿಯಬಹುದು. ಹಾಗೆಯೇ ತಮ್ಮ ಕುಲಸ್ಥರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ದಂಡ ಅಥವಾ ಕಾಣಿಕೆಯನ್ನು ಕೊಡುವಂತೆ ಹೇಳುತ್ತಿದ್ದರು. ಮತ್ತು ಲಗ್ನ ಕಾಲದಲ್ಲಿ ಹೆಣ್ಣಿನವರು ಎರಡು ರೂಪಾಯಿ, ಗಂಡಿನವರು ಮೂರು ರೂಪಾಯಿಗಳನ್ನು ವಿದ್ಯಾಭ್ಯಾಸದ ದೇಣಿಗೆ ಕೋಡಬೇಕಾಗಿತ್ತು. ಹಾಗೆಯೇ ವಿಶೇಷವಾಗಿ ನಮ್ಮ ಜನಗಳು, ನಮ್ಮ ಕುಲ ಗುರುಗಳಾದ ಸರೂರು ಶಾಖಾ ಗುರುಗಳಿಗೇ ಹೊರತು ಅನ್ಯ ಜಾತಿಯ ಗುರುಗಳಿಗೆ ನಡೆದುಕೊಳ್ಳಬಾರದು ಎಂದು ಹೇಳುತ್ತಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಕುರುಬರ ಗುರು ಪರಂಪರೆಗೆ ಮೂಲ ಕೇಂದ್ರ ಸರೂರಾಗಿರು ವುದರಿಂದ ಅಂದಿನ ಈ ಸಂಪ್ರದಾಯದ ಅನುಯಾಯಿಗಳ ಒಡೆಯರು ಈ ರೀತಿಯಾದ ತೀರ್ಮಾನವನ್ನು ತೆಗೆದು ಕೊಂಡಿರಬಹುದು. ಹೀಗೆ ಈ ಎಲ್ಲಾ ಕಟ್ಟುಪಾಡುಗಳನ್ನು ಮೀರಿ ನಡೆದವರಿಗೆ ಕುಲದ ಮುಖಂಡರಾದ ಗೌಡ, ಯಜಮಾನ, ಹೆಗ್ಗಡೆ, ಪೂಜಾರಿ, ನಾಡಗೌಡರು, ಗುರುಗಳು ಸೇರಿ ತಕ್ಕ ಬಂದೂಬಸ್ತನ್ನು ಮಾಡತಕ್ಕದೆಂಬ ಠರಾವು ಸರ್ವಾನುಮತದಿಂದ ಅಂಗೀಕೃತವಾಗಿರುತ್ತದೆ. ಹೀಗೆ ಅನೇಕ ವಿಚಾರಗಳನ್ನು ಈ ಕಾಗದ ಪತ್ರದಲ್ಲಿ ಗಮನಿಸಬಹುದು.

ಒಟ್ಟಾರೆ ಈ ರೀತಿಯಾದ ದಾಖಲೆ ಪತ್ರಗಳನ್ನು ಗಮನಿಸಿದಾಗ ನಮಗೆ ತಿಳಿಯುವುದೇನೆಂದರೆ ಪ್ರಮುಖವಾಗಿ ಕುರುಬರ ಗುರು ಒಡೆಯರ ಸಂಪ್ರದಾಯದ ಪರಂಪರೆಗೆ ಸರೂರ ಮೊದಲ ಸ್ಥಾನವನ್ನು ಪಡೆದುಕೊಳ್ಳುತ್ತದೆ.



## ಆಧಾರಸೂಚಿ


೧. ಹಳ್ಳಕೇರಿ ಎಫ್.ಟಿ., 'ಹಾಲುಮತ ಸಂಸ್ಕೃತಿ'-೧, ವಿಕಾಸ ಪ್ರಕಾಶನ, ಹೊಸಪೇಟೆ, ೨೦೧೧.

೨. ರವೀಂದ್ರನಾಥ ಕೆ., 'ಕನ್ನಡ ದಾಖಲು ಸಾಹಿತ್ಯ' ಮಂಗಳ ಪ್ರಕಾಶನ, ಹೊಸಪೇಟೆ, ೨೦೦೦.

೩. ಜಿರಾದಾರ ಬಿ.ಜಿ., 'ಕುರುಬರ ಗುರು ಒಡೆಯರ ಸಾಂಸ್ಕೃತಿಕ ಅಧ್ಯಯನ' ವಿಕಾಸ ಪ್ರಕಾಶನ, ಹೊಸಪೇಟೆ, ೨೦೧೦.

೪. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ದಾಖಲೆ ಪತ್ರಗಳು ಹಾಗೂ ಮಾರ್ಗದರ್ಶಕರ ಸಲಹೆ.



# ಹಂಪಿ ಪರಿಸರದಲ್ಲಿ ಮುಸ್ಲಿಂ ಸಂಸ್ಕೃತಿ

**ಅಕ್ತರ್ ಖಾನಂ ಹೆಚ್.ಎಸ್.***

ದಕ್ಷಿಣ ಭಾರತದ ರಾಜಕೀಯ ಚರಿತ್ರೆಯಲ್ಲಿ ಹಲವು ಧರ್ಮಗಳಿಂದ ಕೂಡಿದ ವಿಜಯನಗರ ಸಾಮ್ರಾಜ್ಯವು ವೈಶಿಷ್ಟ್ಯಪೂರ್ಣವಾಗಿತ್ತು. ವೈದಿಕ ಧರ್ಮದ ಜೊತೆಗೆ ಜೈನರು, ಕ್ರೈಸ್ತರು, ಬೌದ್ಧರು ಮತ್ತು ಮುಸ್ಲಿಮರು ಇಲ್ಲಿ ನೆಲೆಸಿದ್ದರು. ವಿಜಯನಗರ ಪಟ್ಟಣವು ವಿವಿಧ ಅರಸು ಮನೆತನಗಳ ಆಳ್ವಿಕೆಯಲ್ಲಿ ಬಹುಸಂಸ್ಕೃತಿಯಿಂದ ಕೂಡಿದ ಸಾಮ್ರಾಜ್ಯವಾಗಿತ್ತು. ವಿಜಯನಗರ ಅರಸರಿಂದ ಮುಸ್ಲಿಮರು ತಮ್ಮದೇ ಆದ ಪ್ರಾಮುಖ್ಯತೆ ಪಡೆದುಕೊಂಡಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ಮುಸ್ಲಿಮರು ಪ್ರಜೆಗಳಾಗಿ ನೆಲೆಸಿ ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿದ್ದರು. ಮುಸ್ಲಿಂ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಕುರುಹುಗಳು ವಿಜಯನಗರ ಪಟ್ಟಣದಲ್ಲಿ ಲಭ್ಯವಾಗಿವೆ. ಮುಖ್ಯವಾಗಿ ಮುಸ್ಲಿಂ ಜನರು ವಾಸವಾಗಿದ್ದ ನೆಲೆಗಳು, ಸಮಾಧಿಗಳು, ಧಾರ್ಮಿಕ ಕಟ್ಟಡಗಳು, ಸಮಕಾಲೀನ ಸಾಹಿತ್ಯಿಕ ಗ್ರಂಥಗಳು ಅವರ ಜನಜೀವನದ ಬಗ್ಗೆ ಮಾಹಿತಿ ನೀಡುವ ಪ್ರಮುಖ ಆಕರಗಳಾಗಿವೆ.

ವಿಜಯನಗರಕ್ಕೆ ಭೇಟಿ ನೀಡಿದ್ದ ಡೊಮಿಂಗೊ ಪಯಾಸ್ 'ಪಟ್ಟಣದ ಕೊನೆಯ ತೀರ ಭಾಗದಲ್ಲಿ ಮುಸ್ಲಿಮರು ವಾಸಿಸುತ್ತಿದ್ದರು' ಎಂದಿದ್ದಾನೆ.[೧] ಈ ಹಿನ್ನೆಲೆಯಲ್ಲಿ ಹಂಪಿ, ಕಮಲಾಪುರ, ಕಡ್ಡಿರಾಂಪುರ, ಹೊಸಪೇಟೆ, ವೆಂಕಟಾಪುರ ಪ್ರದೇಶಗಳಲ್ಲಿ ಮುಸ್ಲಿಮರ ನೆಲೆಗಳು ಕಂಡುಬಂದಿವೆ. ಈ ಪ್ರದೇಶಗಳಲ್ಲಿ ಸಂಶೋಧನೆ ಕೈಗೊಂಡಾಗ ಸುಮಾರು ೭೦೦ಕ್ಕಿಂತ ಅಧಿಕ ಸಮಾಧಿಗಳು ವಿವಿಧ ಶೈಲಿಯಲ್ಲಿ ಕಂಡುಬಂದಿದ್ದು, ಈ ಸಮಾಧಿಗಳ ಅಧ್ಯಯನದಿಂದ ಮುಸ್ಲಿಂ ಸಮಾಜವನ್ನು ತಿಳಿಯಬಹುದು. ಕಡ್ಡಿರಾಂಪುರದ ನೈರುತ್ಯ ಭಾಗದಲ್ಲಿನ ಮುಸ್ಲಿಂ ಸಮಾಧಿಗಳು, ಕಮಲಾಪುರದಿಂದ ತಳವಾರಘಟ್ಟಕ್ಕೆ ಹೋಗುವ ರಸ್ತೆಯ ಎಡಭಾಗ (ಅರಮನೆ ಪ್ರದೇಶದ ಈಶಾನ್ಯ ದಿಕ್ಕು) ಮುಸ್ಲಿಂ ನೆಲೆಯಲ್ಲಿ ಹಲವಾರು ಸಮಾಧಿಗಳು ಕಂಡುಬರುತ್ತವೆ. ಇಲ್ಲಿನ ಸಮಾಧಿಗಳನ್ನು ಅವಲೋಕಿಸಿದಾಗ ಮೂರು ರೀತಿಯ ಸಮಾಧಿಗಳು ಕಾಣಸಿಗುತ್ತವೆ. ಅವುಗಳಲ್ಲಿ ನೆಲಸಮಾಧಿಗಳು, ಸಮಾಧಿಕಲ್ಲುಗಳು ಹಾಗೂ ಗೋರಿಕಟ್ಟಡದ ಸಮಾಧಿಗಳು.

೧. **ನೆಲಸಮಾಧಿಗಳು:** ಶವವನ್ನು ಮಣ್ಣಿನಲ್ಲಿ ಉತ್ತರ–ದಕ್ಷಿಣವಾಗಿ ಹೂತು, ಆ ಸಮಾಧಿಯ ಎರಡು ಬದಿಯಲ್ಲಿ ಸಮಾಧಿಯ ಗುರುತಿಗೆ ಚಿಕ್ಕ ಎರಡು ಕಲ್ಲನ್ನು ನೆಟ್ಟಿರುವುದನ್ನು ನೆಲಸಮಾಧಿಗಳೆನ್ನುತ್ತೇವೆ.

೨. **ಸಮಾಧಿಕಲ್ಲುಗಳು:** ನೆಲ ಸಮಾಧಿಗಳ ಮೇಲೆ ವಿವಿಧ ಶೈಲಿಯಲ್ಲಿ ಕೆತ್ತಲಾದ ಸಮಾಧಿಕಲ್ಲುಗಳನ್ನು (ಮಜಾರ್) ತಯಾರಿಸಿ, ನೆಲ ಸಮಾಧಿಯ ಮೇಲೆ ಕಟ್ಟಲಾದ ಸಮಾಧಿ ಕಲ್ಲುಗಳು. ಏಕೆಂದರೆ ಪುರುಷರ ಸಮಾಧಿಗಳಲ್ಲಿ ಕಂಡುಬರುವ ಮಜಾರ್‌ಗಳ ಶೈಲಿಯ ತುದಿ ಅಥವ ಕೊನೆಯ ಭಾಗವು ವಿವಿಧ ಆಕಾರಗಳಲ್ಲಿ ಕೊನೆಗೊಳ್ಳುತ್ತದೆ. ಆದರೆ ಮಹಿಳೆಯರ ಮಜಾರಗಳು ಸಮಾಂತರವಾಗಿರುತ್ತವೆ. ಇನ್ನು ಚಿಕ್ಕ ಮಕ್ಕಳ ಸಮಾಧಿಗಳು ಚಿಕ್ಕ ಚಿಕ್ಕ ಮಜಾರ್‌ಗಳನ್ನು ಹೊಂದಿವೆ. ಈ ಸಮಾಧಿ ಕಲ್ಲುಗಳ ಮಾದರಿಗಳಿಂದ ಹಿರಿಯರ, ಪುರುಷರ, ಮಹಿಳೆಯರ ಹಾಗೂ ಮಕ್ಕಳ ಸಮಾಧಿಗಳನ್ನು ಸುಲಭವಾಗಿ ಗುರುತಿಸಬಹುದು.

೩. **ಗೋರಿಕಟ್ಟಡದ ಸಮಾಧಿಗಳು:** ಕಲ್ಲುಸಮಾಧಿಗಳ ಮೇಲೆ ಕಟ್ಟಡವನ್ನು ನಿರ್ಮಾಣ ಮಾಡುವುದು ಗೋರಿ ಕಟ್ಟಡದ ಸಮಾಧಿಗಳಾಗಿವೆ. ಈ ಕಟ್ಟಡದ ಮೇಲ್ಚಾವಣಿಯು ಗೋಳಾಕಾರವಾಗಿರುತ್ತದೆ. ಇಂತಹ ಸಮಾಧಿಗಳನ್ನು ಗೋರಿಕಟ್ಟಡದ ಸಮಾಧಿಗಳೆನ್ನುವರು.

ಈ ರೀತಿಯ ಮುಸ್ಲಿಮರ ಸಮಾಧಿಗಳನ್ನು ಮೂರು ರೀತಿಯಾಗಿ ವರ್ಗೀಕರಿಸಿದಾಗ, ಮುಸ್ಲಿಂ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಜೀವನದ ಸ್ಥಿತಿಗಳನ್ನು ಅರಿಯಬಹುದು. ಈ ಸಮಾಧಿಗಳು ಜನಸಾಮಾನ್ಯರ ವರ್ಗ, ಅಧಿಕಾರಿಗಳ ವರ್ಗ, ಸೂಫಿಸಂತರ ಸಮಾಧಿಗಳಾಗಿದ್ದವೆಂದು ಹಾಗೂ ಸಾಮಾಜಿಕವಾಗಿ ಇವು ಶ್ರೀಮಂತ ವರ್ಗ, ಮಧ್ಯಮ ವರ್ಗ, ಸಾಮಾನ್ಯ ವರ್ಗವಾಗಿತ್ತೆಂದು ಈ ಸಮಾಧಿಗಳ ಅಧ್ಯಯನದಿಂದ ತಿಳಿಯಬಹುದಾಗಿದೆ.

ವಿಜಯನಗರ ಪಟ್ಟಣದಲ್ಲಿ ಸಿಕ್ಕಿರುವ ಶಾಸನಗಳು, ಸ್ಮಾರಕಾವಶೇಷಗಳು ಮುಸ್ಲಿಂ ಸಮುದಾಯದ ಸಂಸ್ಕೃತಿಯನ್ನು

* ಸಂಶೋಧನಾ ವಿದ್ಯಾರ್ಥಿನಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಳಿಯಲು ಸಹಾಯಕವಾಗುತ್ತವೆ. ತಳವಾರಘಟ್ಟ ರಸ್ತೆಯ ಬಲಭಾಗದಲ್ಲಿ ವಿಜಯನಗರ ಆಳ್ವಿಕೆಯಲ್ಲಿ ನಿರ್ಮಿಸಿದ್ದ ಒಂದು ಧರ್ಮಶಾಲೆ ಕಂಡುಬಂದಿದ್ದು, ಇದು ಮುಸ್ಲಿಂಮರ ಪ್ರಾರ್ಥನ ಮಂದಿರವಾಗಿದೆ. ಈ ಧರ್ಮಶಾಲೆ ಮತ್ತು ಬಾವಿಯನ್ನು ಅಹಮ್ಮದ್‌ಖಾನ್ ಎಂಬುವವನು ರಾಯನಿಗೆ ಧರ್ಮವಾಗ ಬೇಕೆಂದು ಕಟ್ಟಿಸಿ, ಅದನ್ನು ದಾನ ಮಾಡಿದನೆಂದು ಕ್ರಿ.ಶ. ೧೪೩೯ರ ಹಂಪಿ ಶಾಸನ ವಿವರ ನೀಡುತ್ತದೆ[೨]. ಎರಡನೆ ದೇವರಾಯನ ಆಳ್ವಿಕೆಯಲ್ಲಿ ಅಹಮ್ಮದ್‌ಖಾನ್ ಒಬ್ಬ ಕಾವಲುಗಾರನಾಗಿದ್ದು, ತನ್ನ ಅರಸನ ಹೆಸರಿನಲ್ಲಿ ಕಟ್ಟಿಸಿದ್ದ ಈ ಧರ್ಮಶಾಲೆಯು ಅರಸನ ಮೇಲಿನ ನಿಷ್ಠೆ ಮತ್ತು ರಾಜ್ಯದ ಮೇಲಿನ ಅಭಿಮಾನವನ್ನು ಪ್ರತಿನಿಧಿಸುತ್ತಿರುವುದನ್ನು ಈ ದಾನಶಾಸನದಿಂದ ತಿಳಿಯಬಹುದು. ಇನ್ನು ರಾಜ್ಯದಲ್ಲಿ ವಾಸವಾಗಿದ್ದ ವಿವಿಧ ಧರ್ಮಗಳ ನಡುವಿನ ಸಂಬಂಧವನ್ನು ತಿಳಿಸುವ ಹಲವು ಶಾಸನಗಳು ಲಭ್ಯವಾಗಿವೆ. ಅದರಲ್ಲಿ ಹಿಂದೂ ಮತ್ತು ಮುಸ್ಲಿಮರ ನಡುವೆ ಸೌಹಾರ್ದ ಸಂಬಂಧ ವನ್ನು ತಿಳಿಸುವ ಕ್ರಿ.ಶ. ೧೪೨೦ರಿಂದ ೧೫೦೫ರ ನಡುವೆ ದೊರೆತ ಶಾಸನಗಳು ಹಂಪಿ ಪರಿಸರದಲ್ಲಿ ಲಭ್ಯವಾಗಿವೆ.

ಕ್ರಿ.ಶ. ೧೪೨೦ರ ಶಾಸನವು "ಮೀಯಾ ರಾಹುತನಿಗೆ ಪುಣ್ಯವಾಗಬೇಕೆಂದು 'ಬಸವ' ಎಂಬ ನಾಯಕನು 'ಗೋರಿ' ಮತ್ತು ಮಸೀದಿಯನ್ನು ಕಟ್ಟಿಸಿದ"ನೆಂದು ಶಾಸನದಲ್ಲಿ ಉಲ್ಲೇಖವಿದೆ[೩] ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ, ಅಲ್ಲಿ ನೆಲೆಸಿದಂತಹ ಹಿಂದೂ–ಮುಸ್ಲಿಮರ ನಡುವೆ ಉತ್ತಮ ಸಂಬಂಧವಿತ್ತೆಂದು ಮತ್ತು ಧಾರ್ಮಿಕ ತಾರತಮ್ಯವಿರಲಿಲ್ಲ ವೆಂದು ಈ ಶಾಸನದಿಂದ ತಿಳಿಯಬಹುದು. ವಿಜಯನಗರದ ಸ್ಥಾಪನೆಗೆ ಕಾರಣರಾದ ಸಂಗಮದ ಅರಸರು ಧಾರ್ಮಿಕ ಸಂಘರ್ಷಗಳಿಗೆ ಪ್ರೋತ್ಸಾಹಿಸಲಿಲ್ಲ. ಇದಕ್ಕೆ ಉದಾಹರಣೆ ಶ್ರವಣಬೆಳಗೋಳ ಶಾಸನ. ಈ ಶಾಸನದಲ್ಲಿನ ಉಲ್ಲೇಖದಂತೆ ಜೈನರು ಮತ್ತು ವೈಷ್ಣವರ ನಡುವೆ ಭಿನ್ನಾಭಿಪ್ರಾಯ ಉದ್ಭವಿಸಿತ್ತು. ಆಗ ಬುಕ್ಕರಾಯ ಇವರ ಸಮಸ್ಯೆಯನ್ನು ಯಾರ ಪರ ವಹಿಸದೆ ಇಬ್ಬರಿಗೂ ಅನುಕೂಲವಾಗುವಂತೆ ಪರಿಹಾರವನ್ನು ನೀಡಿದನು. ಸಂಗಮದ ಅರಸರಿಗೆ ಸಾಮ್ರಾಜ್ಯದ ಬಲಿಷ್ಠತೆಗೆ ಸಮಾಜದ ಎಲ್ಲಾ ವರ್ಗಗಳ, ಪಂಥಗಳ ಜನರ ಸಹಕಾರ ಅಗತ್ಯವಾಗಿತ್ತು ಮತ್ತು ಅವಶ್ಯಕವಾಗಿತ್ತು.[೪] ಏಕೆಂದರೆ ಇವರ ಮುಖ್ಯ ಉದ್ದೇಶ ಆಂತರಿಕವಾಗಿ ರಾಜ್ಯದ ರಾಜಕೀಯ ಏಕತೆಗೆ ಮತ್ತು ಭದ್ರತೆಗೆ ಸಮಾಜದಲ್ಲಿ ಸಹಬಾಳ್ವೆ ಮತ್ತು ಶಾಂತಿಯನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿದ್ದರು. ಹಾಗಾಗಿ ಇವರು ರಾಜ್ಯದಲ್ಲಿನ ಎಲ್ಲಾ ವರ್ಗದ ಜನರ ಬೆಂಬಲ ಮತ್ತು ಸ್ಥಿತಿಸ್ಥಾಪಕತ್ವವನ್ನು ಕಾಪಾಡುತ್ತಿದ್ದರು. ವಿಜಯನಗರದ ಅರಸರು ಸಾಮ್ರಾಜ್ಯದ ಭದ್ರತೆಗೆ ಅಗತ್ಯ ಕ್ರಮ ಕೈಗೊಂಡರು. ವಿಜಯನಗರ ಸೈನಿಕರ ಸಾಮರ್ಥ್ಯ ರಾಜ್ಯದ ಭದ್ರತೆಯನ್ನು ಅವಲಂಬಿಸಿತ್ತು. ಎರಡನೆಯ ದೇವರಾಯನ ಆಳ್ವಿಕೆಯ ಕಾಲದಲ್ಲಿ, ಉತ್ತರ ಭಾರತದ ಸುಲ್ತಾನರ ದಾಳಿಗಳಿಂದ ಎರಡನೆಯ ದೇವರಾಯ ಪದೇ ಪದೇ ಸೋಲನ್ನು ಅನುಭವಿಸುತ್ತಿದ್ದನು. ಸುಲ್ತಾನರ ಸೈನಿಕರ ಸಾಮರ್ಥ್ಯಕ್ಕೆ ಎದುರಿಸುವ ಸರಿಸಮಾನವಾದ, ಬಲಿಷ್ಠವಾದ ಸೈನಿಕರ ಅಗತ್ಯತೆ ಇತ್ತು. ಮುಸ್ಲಿಂ ಸೈನಿಕರು ಬಿಲ್ಲುವಿದ್ಯೆಯಲ್ಲಿ ನಿಪುಣರಾಗಿದ್ದರು. ಹಾಗಾಗಿ ಸುಮಾರು ೨೦೦೦ ಸಾವಿರ ಮುಸ್ಲಿಮ್ ಸೈನಿಕರನ್ನು ತನ್ನ ಸೈನ್ಯಕ್ಕೆ ನೇಮಿಸಿಕೊಂಡನು. ವಿಜಯನಗರದ ಅರಸರು ರಾಜ್ಯದಲ್ಲಿ ಧರ್ಮಕ್ಕೆ ಮಹತ್ವ ನೀಡದೇ ಸಾಮ್ರಾಜ್ಯದ ಭದ್ರತೆ ಮತ್ತು ವಿಸ್ತರಣೆಗೆ ಮಹತ್ವ ನೀಡಿದ್ದರು. ರಾಜ್ಯದ ಹಿತದೃಷ್ಟಿಯಿಂದ ದೇವರಾಯ ಮುಸ್ಲಿಂ ಸೈನಿಕರನ್ನು ನೇಮಿಸಿಕೊಂಡನು. ಇವರಿಗೆ ವಾಸಿಸಲು ಪ್ರತ್ಯೇಕ ನೆಲೆಯನ್ನು ಕೊಟ್ಟನು. ಇವರಿಗೆ ರಾಜ್ಯದಲ್ಲಿ ಎಲ್ಲಾ ಸಮಾನ ಅವಕಾಶವನ್ನು, ಸ್ವತಂತ್ರ ಜೀವನವನ್ನು ನಡೆಸುವ ಅವಕಾಶ ವನ್ನು ನೀಡಿದ್ದನು. ಹಿಂದೂ ಸಂಸ್ಕೃತಿ ಪ್ರಾಮುಖ್ಯತೆ ಪಡೆದಷ್ಟು ಈ ಕಾಲದಲ್ಲಿ ಮುಸ್ಲಿಂ ಸಂಸ್ಕೃತಿಯೂ ಕೂಡ ಪ್ರಾಮುಖ್ಯತೆ ಯನ್ನು ಪಡೆದುಕೊಂಡಿತ್ತು. ಮುಸ್ಲಿಂ ಸಂಸ್ಕೃತಿಗೆ ಸಂಬಂಧಿಸಿ ದಂತೆ ಹಂಪಿ ಪರಿಸರದಲ್ಲಿ ದೊರೆಕಿದ ಶಾಸನಗಳು ಹಿಂದೂ ಪಂಚಾಂಗದ ಮಾದರಿಯಲ್ಲೇ ರಚಿತವಾಗಿವೆ. ಹಿಂದೂ ಶಾಸನದಲ್ಲಿ ಕಂಡುಬರುವಂತೆ ಶಪಿಸಿರುವ ಉಲ್ಲೇಖಗಳು ಇವರ ಶಾಸನದಲ್ಲಿ ಗಮನಾರ್ಹವಾಗಿವೆ.

ಕ್ರಿ.ಶ. ೧೪೭೨ರ ಹಂಪಿ ಶಾಸನದಲ್ಲಿ 'ಸಖಲಾದಿ ರಾಹುತನು ಗುಮ್ಮಟ ಕಟ್ಟಿಸಿದ್ದು, ಅದರ ಒಳಕ್ಕೆ ಹೂಳು ತಂದರೆ ಮಕ್ಕಾ ತೀರ್ಥದಲ್ಲಿ ತಾಯಿಯನ್ನು ಕೊಂದ ಪಾಪ ಬರುವುದು ಎಂದು ಹೇಳಿ ಕಲಾಬಿನ ('ಕಲ್ಮ' ಇದು ಮುಸ್ಲಿಮರ ಪವಿತ್ರ ಶ್ಲೋಕ) ಮೇಲೆ ಆಣೆ ಇಟ್ಟಿರುತ್ತಾನೆ' ಎಂಬ ಉಲ್ಲೇಖ ವಿದೆ.[೫] ಈ ಉಲ್ಲೇಖವು ಮುಸ್ಲಿಂ ಜನರ ಧಾರ್ಮಿಕ ನಂಬಿಕೆ ಗಳು, ಮೆಕ್ಕ ಎಂಬ ಧಾರ್ಮಿಕ ಪವಿತ್ರ ಯಾತ್ರಾಸ್ಥಳ, ಇವರ ಸಮಾಜದಲ್ಲಿ ತಾಯಿಗೆ ಇದ್ದ ಉನ್ನತಸ್ಥಾನ, ಧರ್ಮದಲ್ಲಿ ಇದ್ದ ಭಯ–ಭಕ್ತಿಯನ್ನು ಈ ಶಾಸನದಿಂದ ತಿಳಿದುಬರುತ್ತದೆ. ಮುಸ್ಲಿಂ ಸಮಾಜದಲ್ಲಿನ ಕಟ್ಟುಪಾಡುಗಳ ಬಗ್ಗೆ ಇದು ಬೆಳಕು ಚೆಲ್ಲುತ್ತದೆ. ಇಲ್ಲಿ ಮುಖ್ಯವಾದುದು ಹಿಂದೂ ಮತ್ತು ಮುಸ್ಲಿಂರ ನಡುವೆ ಮತಭೇದವಿರಲಿಲ್ಲ ಎಂಬುದು ಗಮನಿಸಬೇಕು. ಏಕೆಂದರೆ ಹಿಂದೂ ಶಾಸನ ಕೆತ್ತನೆಯ ನಿಯಮವನ್ನು ಮುಸ್ಲಿಂರು ಪಾಲಿಸುತ್ತಿದ್ದರು ಎಂಬುದನ್ನು ಇಲ್ಲಿ ಅವಲೋಕಿಸ ಬೇಕು.

ವಿಜಯನಗರ ಪಟ್ಟಣದ ಪ್ರದೇಶದಲ್ಲಿ ಕಂಡುಬರುವ ಸ್ಮಾರಕಾವಶೇಷಗಳು ಸಹ ಮುಸ್ಲಿಂ ಸಮಾಜವನ್ನು ತಿಳಿಯಲು



ಮಹಿಳಾ ಸಮಾಧಿಕಲ್ಲು (ಕಡ್ಡಿರಾಂಪುರ)



ಪುರುಷ ಸಮಾಧಿಕಲ್ಲು (ಕಡ್ಡಿರಾಂಪುರ)

ಸಹಾಯಕವಾಗಿವೆ. ಹಿಂದೂ ಮತ್ತು ಮುಸ್ಲಿಂರ ನಡುವೆ ಯಾವುದೇ ಮತಭೇದವಿರಲಿಲ್ಲ ಎಂಬುದಕ್ಕೆ ಉದಾಹರಣೆ ಅಹಮ್ಮದ್‌ಖಾನ್ ಕಟ್ಟಿಸಿದ ಮಸೀದಿ. ಈ ಮಸೀದಿಯ ವಾಸ್ತುಶೈಲಿಯು ಹಿಂದೂ ದೇವಾಲಯದ ರಚನೆಯನ್ನು ಹೋಲುತ್ತದೆ. ಇದು ಇಸ್ಲಾಮೇತರ ಶೈಲಿಯಲ್ಲಿ ನಿರ್ಮಾಣ ವಾಗಿದೆ. ಅಲ್ಲದೆ ಇಂಡೊ–ಇಸ್ಲಾಮಿಕ್ ವಾಸ್ತುಶೈಲಿಯ ಅನೇಕ ಕಟ್ಟಡಗಳು ವಿಜಯನಗರ ಪಟ್ಟಣದಲ್ಲಿ ಕಂಡುಬರುತ್ತವೆ. ಕಮಲ್‌ಮಹಲ್, ಆನೆಲಾಯ, ದಾದಪೀರ್ ಛತ್ರ, ದಣ್ಣಾಯಕನ ಕೋಟೆ, ರಾಣಿಸ್ನಾನಗೃಹ ಹೀಗೆ ಹಲವು ಕಡೆ ಮುಸ್ಲಿಂ ಶೈಲಿಯುಳ್ಳ ವಾಸ್ತುಕಲೆಯ ಮಿಶ್ರಣವನ್ನು ಕಟ್ಟಡಗಳಲ್ಲಿ ಕಂಡುಬರುತ್ತವೆ. ಈ ಕಟ್ಟಡಗಳು ಪರೋಕ್ಷವಾಗಿ ಬಹುಸಂಸ್ಕೃತಿ ಯಿಂದ ಕೂಡಿದ ಸಾಮ್ರಾಜ್ಯವಿತ್ತೆಂದು ಎತ್ತಿತೋರಿಸುತ್ತದೆ. ಈ ಕಟ್ಟಡಗಳ ನಿರ್ಮಾಣದಲ್ಲಿ ಮುಸ್ಲಿಂ ಸಮುದಾಯಗಳ ಪಾತ್ರವು ಸಹವಿತ್ತೆಂದು ಗುರುತಿಸಬೇಕಾಗಿದೆ. ಆ ಮೂಲಕ ಇಲ್ಲಿ ಮುಸ್ಲಿಂ ಶಿಲ್ಪಿಗಳು ನೆಲೆಸಿದ್ದರು ಎಂಬುದನ್ನು ಸಹ ತಿಳಿಯಬೇಕಾಗಿದೆ. ಹಾಗಾಗಿ ವಿಜಯನಗರ ರಾಜ್ಯದಲ್ಲಿ ನಿರ್ಮಿಸಲಾಗಿದ್ದ ಇಂಡೋ–ಇಸ್ಲಾಮಿಕ್ ವಾಸ್ತುಶೈಲಿಯ ಕಟ್ಟಡಗಳ ನಿರ್ಮಾಪಕರ ಹಿಂದೆ ಮುಸ್ಲಿಂ ಶಿಲ್ಪಿಗಳ ಪಾತ್ರವನ್ನು ಗುರುತಿಸಬೇಕಾಗಿದ್ದು, ಮುಸ್ಲಿಂ ಕರಕುಶಲ ಸಮುದಾಯದ ಬಗೆಗೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಾಗಿದೆ.

ವಿಜಯನಗರ ಸಾಮ್ರಾಜ್ಯದಲ್ಲಿ ನಡೆಯುತ್ತಿದ್ದ ಉತ್ಸವ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿಯೂ ಸಹ ಮುಸ್ಲಿಮರು ಭಾಗವಹಿಸುತ್ತಿದ್ದರು. ಅರಸರು ನಡೆಸುತ್ತಿದ್ದ ಧಾರ್ಮಿಕ ಹಿನ್ನೆಲೆಯ ಉತ್ಸವಗಳಲ್ಲಿ ಹಲವಾರು ಕಾರ್ಯಕ್ರಮಗಳಲ್ಲಿ ಮುಸ್ಲಿಮರ ಪಾತ್ರ ಕಾಣಬಹುದು. ಅದರಲ್ಲಿ ಸೇನಾ ವೀಕ್ಷಣೆಯ ಕಾರ್ಯಕ್ರಮವೂ ಒಂದಾಗಿದೆ. ಇದರಲ್ಲಿ ಮುಸ್ಲಿಂ ಸೈನಿಕರು ಸಹ ಭಾಗವಹಿಸುತ್ತಿದ್ದರು. ಮುಸ್ಲಿಂ ದಂಡನಾಯಕರು ಈಟಿ, ಬಿಲ್ಲು, ಬಾಣ, ಭಲ್ಲೆ, ಆಕಾಶಬಾಣ ಬಳಸಿ ನವರಾತ್ರಿ ಉತ್ಸವ ದಲ್ಲಿ ತಮ್ಮ ಪ್ರದರ್ಶನ ಮಾಡುತ್ತಿದ್ದರು. ದಿಲಾವಾರಾಖಾನ್, ಅಂಬುರ್‌ಖಾನ್ ಮತ್ತು ಬಿಜಲಿಖಾನ್‌ರಂತಹ ಮುಸ್ಲಿಮ್ ವ್ಯಕ್ತಿಗಳು ಉನ್ನತ ಹುದ್ದೆಗಳನ್ನು ಪಡೆದಿದ್ದರು. ಮುಸ್ಲಿಮ್ ಕುಸ್ತಿಪಟುಗಳು ಸಹ ಇದ್ದರು ಎಂಬುದಕ್ಕೆ ಕ್ರಿ.ಶ. ೧೪೪೭ರ ಶಾಸನ ತಿಳಿಸುತ್ತದೆ.[೬]

ಹೀಗೆ ದಕ್ಷಿಣ ಭಾರತದ ಚರಿತ್ರೆಯು ವಿಜಯನಗರ ಸಾಮ್ರಾಜ್ಯದ ವೈಭವೀಕರಣದ ಆಳ್ವಿಕೆಯಲ್ಲಿ ಮುಸ್ಲಿಮ್ ಜನರ ಪಾತ್ರ ಬಹುಮುಖ್ಯವಾದುದಾಗಿದೆ. ಸಮಕಾಲೀನ ಬಹಮನಿ



ಅಹಮದ್‌ಖಾನ್ ಕಟ್ಟಿಸಿದ ಮಸೀದಿ



ಗೋರಿಕಟ್ಟಡ ಸಮಾಧಿ (ಕಡ್ಡಿರಾಂಪುರ)

ಸುಲ್ತಾನರ ದಾಳಿಗಳಿಂದ ವಿಜಯನಗರ ಸಾಮ್ರಾಜ್ಯ ನಾಶ ವಾಯಿತು ಎನ್ನುವ ವಾದಗಳನ್ನು ಮಂಡಿಸುವ ಇತಿಹಾಸ ಕಾರರು ಇಲ್ಲಿ ವಾಸವಾಗಿದ್ದ ಮುಸ್ಲಿಮರು ವಿಜಯನಗರ ಸಾಮ್ರಾಜ್ಯದ ಬೆಳವಣಿಗೆಯಲ್ಲಿ ಬಹುಮುಖ್ಯವಾದ ಪಾತ್ರವಹಿಸಿದ್ದರು ಎಂಬುವ ಕಡೆಗೆ ಹೊರಳಿ ನೋಡಲಾಗಿಲ್ಲ. ಹಾಗಾಗಿ ಸ್ಥಳೀಯ ಚರಿತ್ರೆ, ಜಾನಪದ ಸಾಹಿತ್ಯ, ವಚನಕಾರರ ವಚನಗಳು ಮತ್ತು ಹರಿದಾಸರ ಕೀರ್ತನೆಗಳನ್ನು ಹಾಗೂ ಕ್ಷೇತ್ರಕಾರ್ಯದ ಸಂಶೋಧನೆಯ ಆಳವಾದ ಅಧ್ಯಯನದಿಂದ ಮುಸ್ಲಿಂ ಸಂಸ್ಕೃತಿಯನ್ನು ಅರಿಯಬೇಕಾಗಿದೆ.

## ಆಧಾರಸೂಚಿ


೧. ರಾಬರ್ಟ್ ಸಿವೆಲ್ (ಮೂಲ), ಸದಾನಂದ ಕನವಳ್ಳಿ (ಅನು), **'ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦, ಪು.ಸಂ. ೨೪೭.

೨. ದೇವರಕೊಂಡಾರೆಡ್ಡಿ, **ಹಂಪಿ ಶಾಸನಗಳು**, ಸಂ–೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬, ಶಾಸನ ಸಂಖ್ಯೆ ೩೧೧, ಪು. ೨೨೪.

೩. ದೇವರಕೊಂಡಾರೆಡ್ಡಿ, **ಹಂಪಿ ಶಾಸನಗಳು**, ಸಂ–೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬.

೪. ದೀಕ್ಷಿತ್ ಜಿ.ಎಸ್., **ಸಂಗಮ ಕಾಲದ ವಿಜಯನಗರ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೮೭, ಪು. ೪೩.

೫. ದೇವರಕೊಂಡಾರೆಡ್ಡಿ, **ಹಂಪಿ ಶಾಸನಗಳು**, ಸಂ. ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬, ಶಾಸನ ಸಂಖ್ಯೆ ೩೧೫.

೬. ದೀಕ್ಷಿತ್ ಜಿ.ಎಸ್., ರಾಮಸ್ವಾಮಿ, ಭಾರ್ಗವಿ ಶಿವಯ್ಯ, **ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆಗಳು**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೮೭, ಪು. ೮೩–೮೪.



# ಮಾನ್ಯರಮಸಲವಾಡ: ಸ್ಥಳನಾಮ ವಿಶ್ಲೇಷಣೆ

ಡಾ. ಎನ್.ಎಸ್. ವೀರೇಶ ಉತ್ತಂಗಿ*

**'ಮಾನ್ಯರಮಸಲವಾಡವು'** ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನಲ್ಲಿದೆ. ಹರಪನಹಳ್ಳಿ ಹೂವಿನಹಡಗಲಿ ಮಧ್ಯದಲ್ಲಿರುವ ಕುಮಾರನಹಳ್ಳಿ ತಾಂಡದ ದಕ್ಷಿಣಕ್ಕೆ ಐದು ಕಿ.ಮೀ. ದೂರದಲ್ಲಿದೆ. ಅವಿಭಜಿತ ಬಳ್ಳಾರಿ ಜಿಲ್ಲೆಯಲ್ಲಿ ಎರಡು ಮಸಲವಾಡಗಳಿವೆ. ಒಂದು ಹೂವಿನಹಡಗಲಿ ತಾಲೂಕಿನಲ್ಲಿದ್ದರೆ, ಮತ್ತೊಂದು ಹರಪನಹಳ್ಳಿ ತಾಲೂಕಿನಲ್ಲಿದೆ. ಹೂವಿನ ಹಡಗಲಿ ಹರಪನಹಳ್ಳಿ ಅಕ್ಕ ಪಕ್ಕದ ತಾಲೂಕುಗಳಾಗಿದ್ದು, ಒಂದೇ ಪರಿಸರದಲ್ಲಿವೆ. ಹೀಗೆ ಒಂದೇ ಪರಿಸರದಲ್ಲಿರುವ ಮಸಲವಾಡಗಳನ್ನು ಗುರುತಿಸುವ ಸಲುವಾಗಿ ಇವುಗಳನ್ನು ಕ್ರಮವಾಗಿ ಮಾನ್ಯರ ಮಸಲವಾಡ ರಾಗಿಮಸಲವಾಡ ಎಂದು ಕರೆಯಲಾಗುತ್ತಿದೆ. ಈ ಎರಡೂ ಗ್ರಾಮಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ತಲಾ ಒಂದೊಂದು ಶಾಸನವಿದೆ. ಮಾನ್ಯರ ಮಸಲವಾಡ ಗ್ರಾಮದಲ್ಲಿ ಮಾತ್ರ ಕಲ್ಯಾಣಚಾಲುಕ್ಯರ ಶಾಸನವಲ್ಲದೆ ಕಲ್ಯಾಣದ ಕಲಚೂರಿ, ದೇವಗಿರಿ ಯಾದವರ ಕಾಲದ ಒಂದೊಂದು ಶಾಸನವೂ ದೊರಕುತ್ತದೆ. ಈ ಎಲ್ಲಾ ಶಾಸನಗಳಲ್ಲಿ ಮಲಸವಾಡವನ್ನು 'ಮೊಸಳೆಮಡು,' 'ಮೊಸಳೆವಾಡ' ಮೊಸಳವಾಡ' ಎಂದು ಉಲ್ಲೇಖಿಸಲಾಗಿದೆ. ಆದರೆ ಮಾನ್ಯರ ಮಸಲವಾಡದಲ್ಲಿರುವ ಕ್ರಿ.ಶ. ೧೨೯೭ರ ಯಾದವದೊರೆ ರಾಮಚಂದ್ರ ದೇವನ ಕಾಲದ ಒಂದೇ ಶಾಸನದಲ್ಲಿ 'ಮೊಸಳೆವಾಡ' ಮತ್ತು 'ಮೊಸಳವಾಡ' ಎಂದು ಭಿನ್ನವಾಗಿ ಆ ಗ್ರಾಮದ ಹೆಸರನ್ನು ದಾಖಲಿಸಿರುವುದನ್ನು ಕಾಣಬಹುದು.

ಮಸಲವಾಡವನ್ನು ಮೊದಲ ಬಾರಿಗೆ ದಾಖಲಿಸುವ ಪ್ರಾಚೀನ ದಾಖಲೆಯೆಂದರೆ ಮಾನ್ಯರಮಸಲವಾಡ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಕ್ರಿ.ಶ. ೧೦೩೬ರ ಕಲ್ಯಾಣ ಚಾಲುಕ್ಯರ ದೊರೆ ಜಗದೇಕಮಲ್ಲನ ಕಾಲದ ಶಾಸನವು "ಶ್ರೀಮತ್ಸುಗ್ಗುರುದೇವಕ್ಕೋರ್ಗಳಿಯಯ್ಯೂರರೊಳಗಣ ಮೊಸಳೆಮಡುವನಾಳುತ್ತಮಿರ್ದಲ್ಲಿಯ. . . . . ."[೧] ಎಂದು ದಾಖಲಿಸುತ್ತದೆ. ಇದೇ ಹೆಸರನ್ನು ರಾಗಿಮಸಲವಾಡದ ಕ್ರಿ.ಶ. ೧೧೨೭ರ ಕಲ್ಯಾಣ ಚಾಲುಕ್ಯರ ಅರಸ ಭೂಲೋಕಮಲ್ಲ ದೇವನ ಕಾಲದ ಶಾಸನವು "ಮೊಸಳೆಮಡುವಿನ ಠಾಣಾನ್ತರದಲು ವಡ್ಡರಾವುಳದ ಸುಂಕದೊಳಗೆ . . . ."[೨] ಎಂದು ದಾಖಲಿಸಿದೆ. ಅಂದರೆ ಈ ಎರಡೂ ಶಾಸನಗಳು ಮೊಸಳೆಮಡು ಎಂದು ಒಂದೇ ತೆರನಾಗಿ ಉಲ್ಲೇಖಿಸಿವೆ.

'ಮೊಸಳೆಮಡು' ಎಂಬ ಹೆಸರು ಸು. ೫೦-೬೦ ವರ್ಷಗಳ ನಂತರ ಬದಲಾವಣೆಗೆ ಒಳಗಾಗಿರುವುದನ್ನು ಮಾನ್ಯರ ಮಸಲವಾಡದಲ್ಲಿ ದೊರೆತಿರುವ ಎರಡು ಶಾಸನಗಳಿಂದ ತಿಳಿದು ಬರುತ್ತದೆ. ಇಲ್ಲಿ ಕಲ್ಲೇಶ್ವರ ದೇವಾಲಯದ ಒಳಗಿರುವ ಕ್ರಿ.ಶ. ೧೧೮೩ರ ಕಲ್ಯಾಣದ ಕಲಚೂರ್ಯ ದೊರೆ ರಾಯನಾರಾಯಣ ಅಹಮಲ್ಲದೇವನ ಕಾಲದ ಶಾಸನವು "ಶ್ರೀಮನ್ಮಹಾಮ(ಂ) ಣ್ಡಳೇಶ್ವರಂ ಮೊಸಳೆವಾಡ ಹನ್ನೆರಡುಮಂ ಮಂನೆಯ ವಿಕ್ರಮಾದಿತ್ಯರಸಂ. . . ."[೩] ಎಂದು ಉಲೇಖಿಸಿದೆ. ಈ ಶಾಸನವು ಮೊಸಳೆಮಡುವನ್ನು ಮೊಸಳೆವಾಡ ಎಂದು ಕರೆದಿದ್ದಲ್ಲದೆ, ಇದು ೧೨ ಹಳ್ಳಿಗಳ ಆಡಳಿತದ ಮುಖ್ಯಕೇಂದ್ರವಾಗಿದ್ದನ್ನು ತಿಳಿಸುತ್ತದೆ. ಇಲ್ಲಿ ಮಡು ಪದದ ಬದಲು ವಾಡ ಪದ ಬಳಸಲಾಗಿದೆ.

ಹಾಗೆಯೇ ಇದೇ ಗ್ರಾಮದ ಮಠದ ಪಾಳು ನಿವೇಶನದಲ್ಲಿರುವ ಯಾದವ ದೊರೆ ರಾಮಚಂದ್ರದೇವನ ಕಾಲದ ಕ್ರಿ.ಶ. ೧೨೯೭ರ ಶಾಸನವು "ಶ್ರೀಮನ್ಮಹಾ ಪ್ರಧಾನಂ ಸಾವಂತ ಪಂಡಿತರರ ಕಂನಾಯಿಗಳ ಸುಪುತ್ರ ಕೇಶಪಂಡಿತರು ಮೊಸಳೆವಾಡದಲು. . . ."[೪] ಎಂದೂ ಇದೇ ಶಾಸನವು "ಕಂನಾಯಿಗಳು ಮಾಡಿದ ಮೊಸಳೆವಾಡದ ಶ್ರೀಪಾರಿಸ್ವನಾಥಂಗೆ. . . ."[೫] ಎಂದು ಎರಡು ರೀತಿಯಲ್ಲಿ ದಾಖಲಿಸಿದೆ. ಇದು ಬಹುಶಃ ಲಿಪಿಕಾರನ ಅಥವಾ ಕಂಡರಣೆಕಾರನ ದೋಷವಿರಬಹುದು.

**ಮೊಸಳೆಮಡು :** ಕ.ಸಾ.ಪ.ನ **ಕನ್ನಡ-ಕನ್ನಡ ನಿಘಂಟು** 'ಮೊಸಳೆ ಎಂಬ ಪದದ ಮೂಲ ರೂಪ ಮೊದಳೆ; ಮೊದಳೆ ಎಂಬುದು ನಾಮ ಪದವಾಗಿದ್ದು, ಒಂದು ಬಗೆಯ ಜಲಚರ ಪ್ರಾಣಿ'[೬] ಎಂಬರ್ಥ ನೀಡಿದೆ. ದ್ರಾವಿಡ ಭಾಷೆಗಳಲ್ಲಿ ಮೊಸಳೆ ಪದವನ್ನು ವಿವಿಧ ರೀತಿಯಲ್ಲಿ ಹೆಸರಿಸಲಾಗಿದೆ. "ತಮಿಳು ಭಾಷೆಯಲ್ಲಿ ಮುತಲೈ, ಮುತಳೈ, ಮಲೆಯಾಳಂ ಭಾಷೆಯಲ್ಲಿ

* ಬೋಧನಾ ಸಹಾಯಕರು, ಕನ್ನಡ ಅಧ್ಯಯನ, ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ.

ಮುತಲ, ತುಳುವಿನಲ್ಲಿ ಮುದಲೆ, ಮುದಳೆ, ಮೊಸಳೆ, ಕೊಡವ ಭಾಷೆಯಲ್ಲಿ ಮೊಸಲೆ, ಎಂದೂ ತೆಲುಗಿನಲ್ಲಿ ಮೊದಲಿ, ಮೊಸಡಿ, ಮೊಸಲಿ, ಕೋತ ಭಾಷೆಯಲ್ಲಿ ಮೊಚಳ್ ಎಂದೂ ಕೊಲಾಮಿ ಭಾಷೆಯಲ್ಲಿಮೊಸೆಲಿ"[೭] ಎಂದು ಕರೆಯಲಾಗುತಿದೆ. ಈಗ ಕನ್ನಡದಲ್ಲಿ ಬಳಕೆಯಲ್ಲಿರುವ ಮೊಸಳೆ ಎಂಬ ಪದವು ಮೊದಳೆ ಎಂಬ ಪದದಿಂದ ನಿಷ್ಪನ್ನವಾಗಿದೆ ಎಂದು ದ್ರಾವಿಡ ಜ್ಞಾತಿ ಪದ ಬಳಕೆಯ ಹಿನ್ನಲೆಯಲ್ಲಿ ಗ್ರಹಿಸಬಹುದಾಗಿದೆ.

ಮೊದಳೆಂಬ ಪದವನ್ನು ಕ.ಸಾ.ಪದ **ಕನ್ನಡ-ಕನ್ನಡ ನಿಘಂಟುವಿನಲ್ಲಿ** ಮತ್ತೊಂದು ರೀತಿಯಲ್ಲಿ ಅರ್ಥೈಸಲಾಗಿದೆ. "ಮುದ್ದಲು, ಮುದಲ್, ಮೊದಲ ಮೊಸಳ ಮೊದಳ"[೮] ಎಂದು ನಿಷ್ಪನ್ನವಾಗಿದ್ದನ್ನು ಹೇಳಲಾಗಿದೆ. ಇದನ್ನು ಹೀಗೂ ನಿಷ್ಪನ್ನಗೊಳಿಸಬಹುದು 'ಮೊದಳ-ಮೊಸಳ-ಮುದ್ದಲು-ಮುದಲ್-ಮೊದಲ'. ಈ ಪದಗಳ ಅರ್ಥವನ್ನು "ಆರಂಭ, ಆದಿ, ಪ್ರಥಮ, ಬೇರು, ಮೂಲ, ಆಧಾರ, ಆಶ್ರಯ."[೯] ಎಂದು ವಿವರಿಸಲಾಗಿದೆ. "ತಮಿಳಿನಲ್ಲಿ ಮುತಲ್, ಮಲೆಯಾಳಂನಲ್ಲಿ ಮುದಲ್ ತುಳುವಿನಲಿ ಮುದಲು ತೆಲುಗಿನಲ್ಲಿ ಮೊದಲು"[೧೦] ಎಂಬ ಪದ ಬಳಕೆ ಮಾಡಲಾಗುತ್ತಿದೆ. ಬಹುಶಃ ತೆಲುಗು-ಕನ್ನಡ ಭಾಷೆಯಲ್ಲಿ ಒಂದೇ ತೆರನಾದ ಬಳಕೆಯಿರುವುದನ್ನು ಕಾಣಬಹುದು.

ಮೊಸಳೆ-ಮೊದಳೆ ಎಂಬ ಪದಗಳ ಅರ್ಥ ಮೂಲ, ಆಧಾರ, ಆಶ್ರಯ, ಎಂದು. ಅದು ನೀರಿನಲ್ಲಿ ಆಶ್ರಯ ಪಡೆಯುವ ಪ್ರಾಣಿ, ನೀರಿನಲ್ಲಿ ವಾಸಿಸುವ ಪ್ರಾಣಿ ಎಂದರ್ಥೈಸ ಬಹುದಾಗಿದೆ.

**ಮಡು** ಎಂಬ ಪದವನ್ನು ಕ್ರಿಯಾವಾಚಿಯಾಗಿ ಬಳಸಿದರೆ "ಹೊಂದಿಸು, ಜೋಡಿಸು"[೧೧] ಕೂಡಿಸು ಎಂಬರ್ಥ ಬರುತ್ತದೆ. ಇದನ್ನು ನಾಮವಾಚಿಯಾಗಿ ಬಳಿಸಿದರೆ (ಮಡು-ಮಡುಹು) "ನದಿ, ಹೊಳೆ ಮುಂತಾದವುಗಳಲ್ಲಿ ಆಳವಾದ ನೀರಿರುವ ಪ್ರದೇಶ, ಕೊಳ-ಸರೋವರ, ಹಳ್ಳ-ಕೊಳ್ಳ, ಆಶ್ರಯಸ್ಥಾನ"[೧೨] ನೀರಿನ ಸಂಗ್ರಹತಾಣ ನೀರಿನ ಕೊಳ ಎಂಬಿತ್ಯಾದಿ ಅರ್ಥಗಳು ಹೊರಹೊಮ್ಮುತ್ತವೆ. ಈ ಪದವು ತಮಿಳಿನಲ್ಲಿ "ಮಟು, ಮಳೆಯಾಳಂನಲ್ಲಿ ಮಡು, ತೆಲುಗಿನಲ್ಲಿ ಮಡುವು, ಮಡುಗು, ಮಡ್ಗು, ಮಡ್ವು,"[೧೩] ಎಂದು ಬಳಕೆಯಾಗುತ್ತಿದೆ. ಇಲ್ಲಿ ಮೊಸಳೆಮಡು ಎಂದರೆ ಮೊಸಳೆಗಳು ವಾಸ ಮಾಡುವ ನದಿ, ಹೊಳೆ ಮುಂತಾದವುಗಳ ಆಳವಾದ ಭಾಗ, ಮೊಸಳೆಗಳು ವಾಸಿಸಲು ಯೋಗ್ಯವಾದ ಆಳವಾದ ನೀರಿನತಾಣ, ದೊಡ್ಡಹಳ್ಳ, ದೊಡ್ಡನೀರಿನ ಕೊಳ ಎಂದರ್ಥೈಸ ಬಹುದು.

ವಾಡ-ಬಾಡ ಎಂಬ ಪದಗಳು ಒಂದೇ ಅರ್ಥವನ್ನು ಧ್ವನಿಸುತ್ತವೆ. ಇದೊಂದು ನಾಮ ಪದವಾಗಿದೆ. ಇದು "ಹಳ್ಳಿ, ಗ್ರಾಮ, ಮನೆ-ನಿವಾಸ, ಹಜಾರ, ನಡುಮನೆ ಎಂಬರ್ಥ ಗಳಲ್ಲದೆ ದನಗಳಹಟ್ಟಿ, ಕೊಟ್ಟಿಗೆ ಗೋವುಗಳಹಟ್ಟಿ, ಅರಸರು ಜಮೀನುದಾರರು ಮುಂತಾದವರು ವಾಸಿಸುವ ಭವ್ಯವಾದ ಗೃಹ, ಭವನ"[೧೪] ದೊಡ್ಡದಾದ ಮನೆ, ವಿಶಾಲವಾದ ಮನೆ, ವಿಸ್ತಾರವಾದ ವಾಸಸ್ಥಳ, ಎಂರ್ಬಗಳನ್ನು ಹೊಂದಿದೆ. ಬಹು ದೊಡ್ಡ ಕುಟುಂಬವು ವಾಸಿಸಲು ಕಟ್ಟಿಕೊಂಡಿರುವ ಮನೆಯನ್ನು ವಾಡ ಅಥವಾ ಬಾಡ ಎಂದು ಕರೆಯಲಾಗಿದೆ. ಇದನ್ನು "ತಮಿಳಿನಲ್ಲಿ ವಾಟ್ಟೈ, ಕೊಡವ ಭಾಷೆಯಲ್ಲಿ ಬಾಡೆ, ತೆಲುಗಿನಲ್ಲಿ ವಾಡ-ಮನೆಗಳ ಸಾಲು, ಮರಾಠಿಯಲ್ಲಿ ವಾಡ-ವಾಡಾ ಎಂದೂ ಸಂಸ್ಕೃತದಲ್ಲಿ ವಾಟ"[೧೫] ಎಂದು ಕರೆಲಾಗಿದೆ.

ಕನ್ನಡದಲ್ಲಿ ಬಳಕೆಯಲ್ಲಿರುವ ಮತ್ತೊಂದು ಪದ 'ವಾಟ'. ವಾಟ ಎಂದರೆ "ನೆಲ ಭಾವಣಿ ಮುಂತಾದವುಗಳ ಇಳಿಜಾರು, ಆವರಣವುಳ್ಳ ಪ್ರದೇಶ ಅಂಗಳ, ನೆಲೆ, ಆಗರ, ಗ್ರಾಮ, ಹಳ್ಳಿ"[೧೬] ಆಳವಾದ ನೀರಯ ಹೊಂದಿದ ಕೊಳ, ಹೆಚ್ಚು ನೀರು ಇರುವ ತಾಣ ಎಂಬಿತ್ಯಾದಿ ಅರ್ಥಹೊಂದಿ. ತಮಿಳಿನ ವಾಟ್ಟೈ ಪದವು ಸಂಸ್ಕೃತದಲ್ಲಿ ವಾಟ ಎಂದಾಗಿ ಕನ್ನಡದಲ್ಲಿ ವಾಡ-ಬಾಡ ಎಂದು ಬಳಕೆಯಾಗುತ್ತಾ ಬಂದಿದೆ. ಬಹುಶಃ ಇದು ಮರಾಠಿಯಿಂದ ಕನ್ನಡಕ್ಕೆ ಬಂದಂತೆ ತೋರುತ್ತದೆ.

ಮೊಸಳೆಮಡು, ಮೊಸಳೆವಾಡ, ಮೊಸಳವಾಡ ಎಂಬ ಪದಗಳು ಮೊಸಳೆಗಳು ವಾಸಿಸುವ ಸ್ಥಳ, ಮೊಸಳೆಗಳು ವಾಸಿಸುವಷ್ಟು ಆಳವಾದ ನೀರನ್ನು ಹೊಂದಿರುವ ಹಳ್ಳ, ಮೊಸಳೆಗಳಿರುವ ಆಳವಾದ ನೀರಿನ ಕೊಳ್ಳ, ಮೊಸಳೆಗಳು ವಾಸಿಸುತ್ತಿರುವ ನೀರಿನ ತೊರೆ, ಸದಾ ಮೊಸಳೆಗಳಿಗೆ ಆಶ್ರಯ ತಾಣವಾಗಿರುವ ಹಳ್ಳ ಇಂಥ ಹಳ್ಳ-ಕೊಳ್ಳ ನೀರಿನ ತೊರೆ ಹೊಂದಿರುವ ಹಳ್ಳಿ ಅಥವಾ ಗ್ರಾಮವೇ ಮೊಸಳೆಮಡು ಅಥವಾ ಮೊಸಳೆವಾಡ ಎಂದರೆ ತಪ್ಪಾಗಲಾರದು. ನಿಘಂಟಿನ ಅರ್ಥದ ನೆಲೆಯಲ್ಲಿ ಹೇಳುವುದಾದರೆ ಮುಖ್ಯವಾದ ಗ್ರಾಮ, ಹಳ್ಳಿ, ಅಗ್ರಮಾನ್ಯ ಗ್ರಾಮ ಎಂದು ಅರ್ಥೈಸಬಹುದು.

ಪ್ರಸ್ತುತದಲ್ಲಿ ಈ ಗ್ರಾಮವನ್ನು ಮಾನ್ಯರಮಸಲವಾಡ ಎಂದು ಕರೆಯಲಾಗುತ್ತಿದೆ. 'ಮಾನ್ಯ' ಎಂದರೆ "ಗೌರವ, ಮನ್ನಣೆ, ಮನ್ನಣೆಗೆ ಪಾತ್ರವಾದುದು, ಗೌರವಯುಕ್ತನಾದವನು, ಪೂಜ್ಯ, ದಾನವಾಗಿ ನೀಡಿದ ಭೂಮಿ, ಉಂಬಳಿ, ಮಾಂಡಳಿಕ, ಸಾಮಂತ"[೧೭] ಶ್ರೇಷ್ಠ, ಅಧಿಕಾರಿ ಇತ್ಯಾದಿಯಾಗಿ ಅರ್ಥೈಸ ಬಹುದು. 'ಮಸಲ' ಎಂದರೆ "ಒಂದು ವೇಳೆ, ಅಕಸ್ಮಾತ್"[೧೮] ಅನಿರೀಕ್ಷಿತ, ಆ ಕ್ಷಣ ಎಂಬಿತ್ಯಾದಿ ಅರ್ಥಗಳಿವೆ. ಅಂದರೆ ಅನಿರೀಕ್ಷಿತ ಗೌರವಕ್ಕೆ ಪಾತ್ರವಾದ ಗ್ರಾಮ, ಗೌರವ ಮನ್ನಣೆಗೆ ಪಾತ್ರವಾದ ಗ್ರಾಮ, ಗೌರವಾನ್ವಿತರ ಹಳ್ಳಿ, ಮೆಚ್ಚುಗೆ ಪಡೆದವರ ಹಳ್ಳಿ ಎಂದು ಮುಂತಾಗಿ ಅರ್ಥೈಸಬಹುದು.

ಗ್ರಾಮದ ಸ್ಥಳೀಯರಾದ ಲಕ್ಷಟ್ಟಿ ಚನವೀರಪ್ಪ ಮತ್ತು ನಾಗರಾಜ ಅವರು ತಮ್ಮ ಊರಿನ ಹೆಸರು ಹೇಗೆ ಬಂದಿತೆಂದು ವಿವರಿಸುತ್ತಾರೆ "ಈ ಗ್ರಾಮದ ಮೊದಲ ಹೆಸರು

ಮಲ್ಲಿಗೆಪುರ ಎಂದಿತ್ತು. ಏಕೆಂದರೆ ಸುತ್ತಲಿನ ಹಳ್ಳಿಗಳಲ್ಲಿ ಹೆಚ್ಚು ಮಲ್ಲಿಗೆ ಹೂವನ್ನು ಇಲ್ಲಿ ಬೆಳೆಯಲಾಗುತಿತ್ತು. ಆದ್ದರಿಂದ ಇದಕ್ಕೆ ಮಲ್ಲಿಗೆಪುರ ಎಂದು ಕರೆಯಲಾಗುತಿತ್ತು. ಮತ್ತೊಂದು ಊಹೆಯ ಪ್ರಕಾರ ಈ ಊರಿನ ಜನರು ಯಾರಿಗಾದರೂ ಮಾತು ಕೊಟ್ಟರೆ ತಮ್ಮಲ್ಲಿರುವ ಮಸಲತ್ತು ಬಿಟ್ಟು ಕೊಟ್ಟ ಮಾತಿನಂತೆ ನಡೆಯುತ್ತಿದ್ದರು. ಈ ಕಾರಣಕ್ಕಾಗಿ ಇವರು ಸುತ್ತಲಿನ ಹಳ್ಳಿಗರ ಮನ್ನಣೆಗೆ ಪಾತ್ರರಾಗಿದ್ದರು. ಇಂಥ ಜನರು ವಾಸಿಸುವ ಸ್ಥಳವೇ ಮಾನ್ಯರಮಸಲವಾಡ ಆಯಿತೆಂದು" ಹೇಳುತ್ತಾರೆ. ಗ್ರಾಮದ ಮತ್ತೆ ಕೆಲವರು ಹೇಳುವ ಪ್ರಕಾರ 'ಈ ಗ್ರಾಮದ ಪೂರ್ವಕ್ಕಿರುವ ಹಳ್ಳದಲ್ಲಿ ಸದಾ ನೀರಿರುತ್ತದೆ. ಅದರಲ್ಲಿ ಹಿಂದೆ ಮೊಸಳೆಗಳು ವಾಸಿಸುತ್ತಿದ್ದ ಕಾರಣ ಈ ಗ್ರಾಮಕ್ಕೆ ಮಸಲವಾಡ ಎಂದು ಬಂದಿದೆ' ಎನ್ನುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಕ್ರಿ.ಶ. ೧೦೩೬ರ ಶಾಸನದ 'ಮೊಸಳೆಮಡು' ಎಂಬ ಉಲ್ಲೇಖವನ್ನು ಕ್ರಿ.ಶ. ೧೧೨೭ರ ಶಾಸನವೂ ಸಹ ಅದೇ ಹೆಸರನ್ನು ಉಲ್ಲೇಖಿಸುತ್ತದೆ. ಮುಂದೆ ಕಾಲಾನಂತರ ಕ್ರಿ.ಶ. ೧೧೮೫ರ ಶಾಸನ ಮೊಸಳೆವಾಡ ಎಂದೂ ಕ್ರಿ.ಶ. ೧೨೯೭ರ ಶಾಸನವು ಮೊಸಳೆವಾಡ, ಮೊಸಳವಾಡ ಎಂದು ಎರಡು ತೆರನಾಗಿ ಉಲ್ಲೇಖಿಸಿರುವುದನ್ನು ಕಾಣಬಹುದು. ಇದಕ್ಕೆ ಕಾರಣ ತಿಳಿದು ಬಂದಿಲ್ಲ. ಮುಂದಿನ ಅರಸು ಮನೆತನಗಳ ಯಾವ ಶಾಸನಗಳೂ ಇಲ್ಲಿ ದೊರಕುವುದಿಲ್ಲ. ಅದರಲ್ಲೂ ವಿಜಯನಗರ ಕಾಲಕ್ಕೆ ಈ ಗ್ರಾಮ ನಾಮ ಏನಾದರೂ ರೂಪಾಂತರ ಹೊಂದಿತೋ ಇಲ್ಲವೋ ಎಂಬುದನ್ನು ತಿಳಿಯುವುದು ಕಷ್ಟಕರವಾಗಿದೆ.

ಕ್ರಿ.ಶ. ೧೨೯೭ರ ಯಾದವ ರಾಮಚಂದ್ರದೇವನ ಕಾಲದ ಶಾಸನವು ಉಲ್ಲೇಖಿಸುವ 'ಮೊಸಳವಾಡ' ಪದದ ಪರಿಷ್ಕೃತ ರೂಪವೇ. ಮಸಲವಾಡ ಆಗಿರಬೇಕು. ಜನರ ಆಡು ನುಡಿಯಲ್ಲಿ **ಮೊಸಳವಾಡವು** ಸವೆದು **ಮಸಲವಾಡ** ಆಗಿರಬೇಕೆನಿಸುತ್ತದೆ. ಈ ಗ್ರಾಮದ ಹೆಸರಿನ ಮೊದಲು ಬರುವ **ಮಾನ್ಯರ** ಎಂಬ ವಿಶೇಷಣವು ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಗ್ರಾಮದ ಗೌಡರು, ಪಂಡಿತರು, ಅರಸರ ಗೌರವಕ್ಕೆ ಪಾತ್ರರಾಗಿದ್ದರು. ಅಲ್ಲದೆ ಕಲಚೂರಿ ಅರಸರ ಕಾಲಕ್ಕೆ ಈ ಗ್ರಾಮ ಹನ್ನೆರಡು ಹಳ್ಳಿಗಳ ಮುಖ್ಯ ಆಡಳಿತ ಕೇಂದ್ರವಾಯಿತು, ಹಾಗೂ ಯಾದವರ ಕಾಲಕ್ಕೆ ಈ ಗ್ರಾಮದ ಜೈನ ಪಂಡಿತರಾದ ಸಾವಂತ ಪಂಡಿತ, ಕೇಶವ ಪಂಡಿತರು ಯಾದವ ದೊರೆಗಳಿಂದ ಪೂಜ್ಯನೀಯತೆ, ಗೌರವ ಆದರಗಳಿಗೆ ಭಾಜನರಾಗಿದ್ದು. ಇವರು ಗ್ರಾಮದ ಪ್ರತಿನಿಧಿಗಳಾಗಿದ್ದರಿಂದ ಆ ಊರಿನ ಜನರೆಲ್ಲರೂ ರಾಜರಿಂದ ಗೌರವಿಸಲ್ಪಟ್ಟು ಮಾನ್ಯರಾಗಿದ್ದರು. ಆದ್ದರಿಂದ ಈ ಗ್ರಾಮದ ಹೆಸರು ಮಾನ್ಯರಮಸಲವಾಡ ಆಯಿತೆಂದು ಒಂದರ್ಥದಲ್ಲಿ ಹೇಳಬಹುದು. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಮಸಲವಾಡ ಗ್ರಾಮಗಳು ಎರಡಿದ್ದರಿಂದ ಇವನ್ನು ಗುರುತಿಸಲು ರಾಜರ ಮನ್ನಣೆಗೆ ಪಾತ್ರವಾದ ಮಸಲವಾಡವನ್ನು ಮಾನ್ಯರ ಮಸಲವಾಡವೆಂದೂ, ರಾಗಿ ಹೆಚ್ಚಾಗಿ ಬೆಳೆಯುತ್ತಿದ್ದ ಮಸಲವಾಡವನ್ನು ರಾಗಿ ಮಸಲವಾಡವೆಂದು ಕರೆದಂತೆ ಕಂಡುಬರುತ್ತದೆ.



## ಅಡಿಟಿಪ್ಪಣಿ

೧. ದೇವರಕೊಂಡಾರೆಡ್ಡಿ (ಪ್ರ.ಸಂ.) ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೧, ಬಳ್ಳಾರಿ ಜಿಲ್ಲೆ, ಶಾ.ಸಂ. ೬೦, ಪು. ೩೭೮.
೨. ಅದೇ ಶಾ.ಸಂ. ೩೪, ಪು. ೪೯೧.
೩. ಅದೇ ಶಾ.ಸಂ. ೬೧, ಪು. ೩೭೯.
೪. ಅದೇ ಶಾ.ಸಂ. ೬೨, ಪು. ೩೮೧.
೫. ಅದೇ ಶಾ.ಸಂ. ೬೨, ಪು. ೩೮೨.
೬ ಎನ್. ಬಸವಾರಾಧ್ಯ (ಪ್ರ.ಸಂ.) ಕನ್ನಡ – ಕನ್ನಡ ನಿಘಂಟು, ಸಂ. ೭, ಪು. ೭೪೫೯.
೭. ಅದೇ ಸಂ. ೭, ಪು. ೭೪೫೯.
೮. ಅದೇ ಸಂ. ೭, ಪು. ೭೪೫೭.
೯. ಅದೇ ಸಂ. ೭, ಪು. ೭೪೫೯.
೧೦. ಅದೇ ಸಂ. ೭, ಪು. ೭೪೫೯.
೧೧. ಎನ್. ಬಸವಾರಾಧ್ಯ (ಪ್ರ.ಸಂ.) ಸಂಕ್ಷಿಪ್ತ–ಕನ್ನಡ ನಿಘಂಟು, ಪು. ೧೦೬೨.
೧೨. ಎನ್. ಬಸವಾರಾಧ್ಯ (ಪ್ರ.ಸಂ.) ಕನ್ನಡ – ಕನ್ನಡ ನಿಘಂಟು ಸಂ. ೭, ಪು. ೬೮೮೯.
೧೩. ಅದೇ.
೧೪. ಅದೇ.
೧೫. ಪ್ರೊ. ಜಿ. ವೆಂಕಟಸುಬ್ಬಯ್ಯ (ಪ್ರ.ಸಂ.) ಕನ್ನಡ – ಕನ್ನಡ ನಿಘಂಟು, ಸಂ. ೬, ಪು. ೬೨೬೧.
೧೬. ಅದೇ.
೧೭. ಎನ್. ಬಸವಾರಾಧ್ಯ (ಪ್ರ.ಸಂ.) ಸಂಕ್ಷಿಪ್ತ–ಕನ್ನಡ ನಿಘಂಟು, ಪು. ೧೧೪೦.
೧೮. ಅದೇ ಪು. ೯೯.



# ಬರಗೂರು - ಒಂದು ಸಾಂಸ್ಕೃತಿಕ ಅಧ್ಯಯನ

ಹೆಚ್. ಗುಜ್ಜಾರಪ್ಪ*

ಕರ್ನಾಟಕದಲ್ಲಿ ಹಲವಾರು ಬರಗೂರುಗಳಿವೆ. ಇಲ್ಲಿ ಪ್ರಸ್ತಾಪಿಸಿರುವುದು ಶಿರಾ ತಾಲ್ಲೂಕಿನ ಉತ್ತರಕ್ಕೆ ೨೫ ಕಿ.ಮೀ. ದೂರದಲ್ಲಿರುವ ಊರು. ಫ್ರಾನ್ಸಿಸ್ ಬುಖಾನನನು ಈ ಭಾಗದಲ್ಲಿ ಯಥೇಚ್ಛ ಬರಗು ತೃಣಧಾನ್ಯ ಬೆಳೆಯುತ್ತಿದ್ದುದನ್ನು ದಾಖಲಿಸಿದ್ದಾನೆ. ಇದು ಹಾರಕ, ಸಾಮೆ, ನವಣೆ ಮತ್ತು ಕೊರ್ಲೆ ಜಾತಿಗೆ ಸೇರಿದ ತುಂಬಾ ಪೌಷ್ಟಿಕ ಧಾನ್ಯವಾಗಿದೆ. ಇದರಿಂದಲೇ ಇದಕ್ಕೆ ಬರಗೂರೆಂಬ ಹೆಸರು ಬಂದಿರಬಹುದು.

ಬರಗೂರಿನ ಇತಿಹಾಸಕ್ಕೆ ಶಾಸನಗಳೇ ಪ್ರಮುಖ ಆಧಾರ. ನೊಳಂಬರ ಕಾಲದಿಂದ ಬ್ರಿಟೀಷರ ಕಾಲದವರೆಗೆ ಶಾಸನಗಳು ಲಭ್ಯವಿದೆ. ನೊಳಂಬರ ರಾಜಧಾನಿ ಹೆಂಜೇರು, ಹೇಮಾವತಿಯಿಂದ ನೈರುತ್ಯಕ್ಕೆ ೧೫ ಕಿ.ಮೀ. ದೂರದಲ್ಲಿದ್ದು, ನೊಳಂಬರ ಕಾಲದಲ್ಲಿ ಈ ಊರು ಉಚ್ಛ್ರಾಯ ಸ್ಥಿತಿಯಲ್ಲಿತ್ತು.

ಪಲ್ಲವ ನರಸಿಂಹ ವರ್ಮನು ಬಾದಾಮಿಯಲ್ಲಿ ಜಯಿಸಿದ ನಂತರ ಪಲ್ಲವ ಮತ್ತು ಚಾಲುಕ್ಯ ರಾಜ್ಯಗಳ ನಡುವೆ ನೊಳಂಬ ರಾಜ್ಯ ಸ್ಥಾಪಿಸಿದನೆಂಬ ಅಭಿಪ್ರಾಯವಿದೆ. ಕ್ರಿ.ಶ. ೭೩೫ರಿಂದ ೧೧೫೦ರವರೆಗೂ ನೊಳಂಬರಾಳ್ವಿಕೆ ಈ ಭಾಗದಲ್ಲಿದ್ದ ಇವರು ಪಲ್ಲವ ವಂಶದವರು. ಗಂಗ ಮಾರಸಿಂಹನು ನೊಳಂಬ ಕುಲಾಂತಕನೆಂದು ಬಿರುದು ಪಡೆದವನು. ನೊಳಂಬರನ್ನು ಈ ಭಾಗದಲ್ಲಿ ಸೋಲಿಸಲಾಗಿ ಬಳ್ಳಾರಿ ಜಿಲ್ಲೆಯ ಕಂಪ್ಲಿ, ಕುರಗೋಡು ಮತ್ತು ಉಚ್ಚಂಗಿಗಳಲ್ಲಿ ಸುಮಾರು ಕ್ರಿ.ಶ. ೧೧೫೦ ರವರೆಗೂ ಇವರಾಳ್ವಿಕೆ ನಡೆದಿತ್ತು. ಕಲ್ಯಾಣ ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನು, ನೊಳಂಬರು ತನ್ನ ವೈರಿ ಪಕ್ಷ ವಹಿಸಿದ್ದರಿಂದ ಬಲ್ಲಕುಂದೆಯನ್ನಾಳುತ್ತಿದ್ದ ಸಿಂಧ ವಂಶದವರನ್ನು ಕುರುಗೋಡಿನಲ್ಲಿ ಸ್ಥಾಪಿಸಿ ನೊಳಂಬರ ಆಳ್ವಿಕೆ ಅಂತ್ಯಗೊಳಿಸಿದ. ನಂತರ ರಾಜಕೀಯದಿಂದ ನೊಳಂಬರು ಕಣ್ಮರೆಯಾದರು ಹಾಗೂ ಊರ ಪ್ರಮುಖರಾಗಿ ಅಲ್ಲಲ್ಲಿ ಕ್ರಿ.ಶ. ೧೫೦೦ರವರೆಗೂ ಶಾಸನಗಳಲ್ಲಿ ಇವರ ಉಲ್ಲೇಖ ಬರುತ್ತದೆ.

ಈಶ್ವರ ಗೋತ್ರದ ತ್ರಿಣಯನ ಪಲ್ಲವ (೭೩೫-೮೫) ರಿಂದ ತ್ರೈಲೋಕ್ಯ ಮಲ್ಲ (೧೦೪೪-೫೪) ವರೆಗೆ ಆಳಿದ ನೊಳಂಬರಸರು ಬರಗೂರಿಗೆ ವಿಶಿಷ್ಟ ಕೊಡುಗೆ ಇತ್ತಿದ್ದಾರೆ.

### ಒಂದನೇ ಮಹೇಂದ್ರ (ನೊಳಂಬಾಧಿರಾಜ) ಕ್ರಿ.ಶ. ೮೭೫-೮೯೭

ನೊಳಂಬರಲ್ಲಿಯೇ ಅತ್ಯಂತ ಪ್ರಮುಖನಾದವನು. ಒಂದನೇ ಪೊಲಾಳ ಚೋರ ಹಾಗೂ ಗಂಗರಾಜ ಕುಮಾರಿ ಜಾಯಬ್ಬರಸಿಯರ ಮಗ, ಈತನ ಹೆಂಡತಿ ಸಹ ಗಂಗವಂಶದ ಗಾಮಬ್ಬೆ. ಕ್ರಿ.ಶ. ೮೭೮ರಲ್ಲಿ ಬರಗೂರಿನಲ್ಲಿ ಈಶ್ವರ ದೇವಸ್ಥಾನ ಕಟ್ಟಿಸಿದನೆಂದು ಶಿರಾ (೩೮)ನೇ ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ಈ ದೇವಾಲಯದ ಮೊದಲ ಇಟ್ಟಿಗೆಯನ್ನು ತಾನೇ ಇಟ್ಟನೆಂದೂ, ಬರಗೂರಲ್ಲಿ ಬೀಡು ಬಿಟ್ಟು ಈಶ್ವರ ದೇವಸ್ಥಾನ ಕಟ್ಟಿಸಿ ಮಹೇಂದ್ರಶ್ವರನೆಂದು ಇದಕ್ಕೆ ಹೆಸರಿಟ್ಟು ತನ್ನರಮನೆಯನ್ನೇ ಇದಕ್ಕೆ ನಿವೇದಿಸಿದ. ಸೀರೆ ನಾಡೊಳಗಣ ನಾಂದೂರನ್ನು ದೇವಾಲಯದ ಭೋಗಕ್ಕೆ ದಾನ ನೀಡಿದನೆಂದು ಈ ದೇವಾಲಯದ ಮೂಲೆಯಲ್ಲಿರುವ (೩೮)ನೇ ಶಾಸನ ಬಣ್ಣಿಸುತ್ತದೆ. ಈತನು ನಿಡುಗಲ್ಲು ಚೋಳರನ್ನು ಮತ್ತು ಅಟವಿಕರನ್ನು (ಕಿರಾತ ಜನ) ಸೋಲಿಸಿದ, ನೊಳಂಬಾಧಿರಾಜನೆಂಬ ಬಿರುದು ಪಡೆದ.

ಶಿರಾ (೨೪)ನೇ ಶಾಸನವು ತೈಲಂಗೆರೆ ಬಸದಿಗೆ ಈತನೂ ಮತ್ತು ಈತನ ರಾಣಿಯರಾದ ಬರಗೂರನ್ನಾಳುತ್ತಿದ್ದ ಬಿಜಮಹಾದೇವಿ ಅಕ್ಕಬ್ಬೆ, (ದೊಮ್ಮಬ್ಬೆ) ಮತ್ತು ಪರಮ ಮಹಾದೇವಿಯರೂ ಸಹಾ ತೈಲಂಗೆರೆ (ಅಮರಾಪುರ) ಬಸದಿಗೆ ಬರಗೂರ ಕೆರೆ ಕೆಳಗಿನ ಭೂದಾನ ಮಾಡಿದ ದಾಖಲೆ ಕ್ರಿ.ಶ. ೮೭೮ರಲ್ಲಿ ದಾಖಲಾಗಿದೆ.

### ಒಂದನೇ ಅಯ್ಯಪ್ಪದೇವ- ಕ್ರಿ.ಶ. ೮೭೩-೯೩೩

ಈತನಿಗೆ ನೊಳಂಬಾಧಿರಾಜ ನುಳಿಪಯ್ಯನೆಂಬ ಬಿರುದಿತ್ತು. ಇವನು ಒಂದನೇ ಮಹೇಂದ್ರವರ್ಮನ ಮಗ ಹಾಗೂ ಈತನು ಗಂಗವಂಶದ ಪೊಲ್ಲಬ್ಬರಸಿಯನ್ನು ವರಿಸಿದ್ದ. ಶಿರಾ (೩೯)ರ ಶಾಸನವು ಬರಗೂರು ಕೆರೆ ಏರಿ ಮೇಲಿನ ಬಸವೇಶ್ವರ ದೇವಾಲಯದಲ್ಲಿತ್ತು. ತನ್ನ ವಲ್ಲಭೆಯರಾದ ನಾಗಿಯಬ್ಬೆ. ಹೆಲೆಯಬ್ಬೆಯರು ಬರಗೂರ ಮೂಲ ಸ್ಥಾನದ ಎರಡು ದೇಗುಲಕ್ಕೆ ಮತ್ತು ನಾಗಿಯಬ್ಬೆಯ ತಾಯಿ

* # ೩೪೩, ೧೮ನೇ ಕ್ರಾಸ್, ೬ನೇ ಮುಖ್ಯರಸ್ತೆ, ಬಿಇಎಂಎಲ್ ಬಡಾವಣೆ, ಬಸವೇಶ್ವರನಗರ, ಬೆಂಗಳೂರು-೫೬೦೦೭೯.

ಅಯ್ಯಪದೇವನ ಅತ್ತೆ ನಾರಣಬ್ಬೆಯು ಕ್ರಿ.ಶ. ೮೭೮ರಲ್ಲಿ ಬರಗೂರಿನ ನೈರುತ್ಯ ದಿಕ್ಕಿನಲ್ಲಿ ಮುಳ್ತದ ಕೆರೆಯನ್ನು ಕಟ್ಟಿಸಿ ಎರಡು ಕೋಡಿ ಬಳಿ ೩೦ ಕೊಳಗ ಹಾಗೂ ಹಿರಿಯ ಕೆರೆಯ ದೇವಾಲಯದ ಕೆಳಗಣ ೩೦ ಕೊಳಗ ಗದ್ದೆಯನ್ನು ಮಹೇಂದ್ರೇಶ್ವರನಿಗೆ ದಾನ ನೀಡಿದರು.

ಸುಮಾರು ಕ್ರಿ.ಶ. ೧೦೪೫ರ ಹೊತ್ತಿಗೆ ಈ ಭಾಗದಲ್ಲಿ ನೊಳಂಬಾರಾಳ್ವಿಕೆ ಕೊನೆಗೊಂಡು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ನಿಡುಗಲ್ಲು ಚೋಳರಾಳ್ವಿಕೆ ನಡೆಯುತ್ತದೆ. ನಿಡುಗಲ್ಲ ಚೋಳರು ಕ್ರಿ.ಶ. ೭೫೦ರಿಂದ ವಿಜಯ ನಗರೋತ್ತರದಲ್ಲಿ ಸಹ ಸಣ್ಣ ಅಧಿಕಾರಿಗಳಾಗಿ ಶಾಸನಗಳಲ್ಲಿ ಕಂಡುಬರುತ್ತಾರೆ. ಮದ್ದಗಿರಿ ತಾಲ್ಲೂಕಿನ ಶಾಸನ ೯೨ರಿಂದ ೧೦೧ನೇ ಶಾಸನಗಳು ವೀರಗಲ್ಲುಗಳಾಗಿದ್ದು ಶ್ರವಣ ಗುಡಿಯಲ್ಲಿವೆ. ಇವುಗಳಲ್ಲಿ ಚೋಳ ಧನಂಜಯನ ಉಲ್ಲೇಖ ವಿದ್ದು, ನಿಡುಗಲ್ಲು ಚೋಳರು ತಂಜಾವೂರಿನ ಚೋಳರಿಗೂ ಮೊದಲಾಗಿ ಶಾಸನಗಳಲ್ಲಿ ಉಲ್ಲೇಖಿತರಾಗಿದ್ದಾರೆ. ಗಂಗ ಶ್ರೀ ಪುರುಷನಿಗೂ ರಾಷ್ಟ್ರಕೂಟ ಒಂದನೇ ಕೃಷ್ಣನಿಗೂ ನಡೆದ ಯುದ್ಧದಲ್ಲಿ ನಿಡುಗಲ್ಲು ಚೋಳರು ಭಾಗಿಯಾಗಿದ್ದರು.

**ಕಲ್ಯಾಣಿ ಚಾಲುಕ್ಯ ಜಗದೇಕ ಮಲ್ಲನ ಕ್ರಿ.ಶ. ೧೦೪೦ರ ಶಿರಾ ೪೦ನೇ ಶಾಸನ:** ಇದು ನಿಡುಗಲ್ಲು ಚೋಳಮಲ್ಲಿದೇವನು ಸೀರೆನಾಡೊಳಗಣ ಬರಗೂರ ಹಿರಿಯ ಕೆರೆಯ ಕೆಳಗೆ ೩೦ ಖಂಡುಗ ಮತ್ತು ಈತನ ಅಧಿಕಾರಿ ಚಾವುಂಡಮಯ್ಯನು ೨೦ ಖಂಡುಗ ಭೂಮಿಯನ್ನು ಬ್ರಾಹ್ಮಣರಿಗೆ ದಾನ ಮಾಡಿದ ದಾಖಲೆಯಾಗಿದೆ. ನಂತರ ಹೊಯ್ಸಳರ ಕಾಲದ ಯಾವ ದಾಖಲೆಯೂ ಬರಗೂರಿನಲ್ಲಿ ದೊರೆತಿಲ್ಲ. ವಿಜಯನಗರದ ಹಾಗೂ ವಿಜಯನಗರೋತ್ತರ ಕಾಲದ ದಾಖಲೆಗಳು ಲಭ್ಯವಿವೆ.

**ಬರಗೂರಿನ ಕೋಟೆ ಶಾಸನ ಕ್ರಿ.ಶ. ೧೪೦೦ ಶಿರಾ (೪೨)**

ಇದು ಕೋಟೆ ಬುರುಜಿನಲ್ಲಿತ್ತು. ಈಗ ಕೋಟೆ ಹಾಗೂ ಬುರುಜು ಎಲ್ಲವೂ ನಾಶವಾಗಿವೆ. ದಾನೇದವರ ಅಳುವನವರ ಕುಲದ ಬರಗೂರ ಹಾಲನಗೌಡ ರಾಮಾಳಿಗೌಡ ಶಾನಭಾಗ ಪೆರುಮಾಳ್ಳೆಯ ಕಟ್ಟಿಸಿದ ಕೋಟೆ ಹುಲಿಮುಖದ ಹೆಬ್ಬಾಗಿಲು ಎಂದು ಶಾಸನದಲ್ಲಿ ಉಲ್ಲೇಖವಿದೆ. ಕೋಟೆ ಬಾಗಿಲ ಪಕ್ಕದಲ್ಲಿಯೇ ವಿಷ್ಣು ದೇವಾಲಯವಿದ್ದು ಇದು ಬಹಳ ಹಿಂದೆಯೇ ಬಿದ್ದು ಹೋದ ಜಾಗದ ಮೇಲೆ ಆಂಜನೇಯನ ಗುಡಿಯನ್ನು ಸುಮಾರು ೪೦೦ ವರ್ಷದ ಹಿಂದೆ ಕಟ್ಟಿದ್ದು, ಈ ಆಂಜನೇಯ ದೇವಾಲಯ ಶಿಥಿಲವಾದ್ದರಿಂದ ಈಗ ೮–೧೦ ವರ್ಷಗಳ ಹಿಂದೆ ಇದನ್ನು ಜೀರ್ಣೋದ್ಧಾರ ಮಾಡುವಾಗ ಅದರ ತಳದಲ್ಲಿ ಸುಮಾರು ೮ ಅಡಿಯ ಅತ್ಯಂತ ಸುಂದರ ವಿಷ್ಣು ವಿಗ್ರಹ ದೊರೆತಿದೆ. ಶಂಖ, ಚಕ್ರಗದಾಧಾರಿಯೂ ಕಟಿ ಹಸ್ತನಾಗಿಯೂ ಕಿರೀಟಧಾರಿಯೂ ತುಳಸೀವನ ಮಾಲಧಾರಿಯಾದ ಪೀಠ ಸಹಿತ ವಿಷ್ಣುಮೂರ್ತಿ ದೊರೆತಿದ್ದು, ಪಾಣಿಪೀಠದಲ್ಲಿ ಗರುಡನಿದ್ದಾನೆ. ಇದನ್ನು ದೇವಾಲಯದ ಹೊರಭಾಗದ ದಕ್ಷಿಣ ಕೋಷ್ಠದಲ್ಲಿರಿಸಲಾಗಿದೆ. ಇದು ಸುಮಾರು ೯ನೇ ಶತಮಾನದ ಮೂರ್ತಿಯಾಗಿರ ಬಹುದು. ಇವೂ ಅಲ್ಲದೇ ಗಜಲಕ್ಷ್ಮೀ ಪಟ್ಟಿಕೆ, ಧ್ಯಾನಾಸಕ್ತ ಭಕ್ತ, ದೇವಿಯರ ವಿಗ್ರಹಗಳೂ ದೊರೆತಿವೆ.

**ಆಂಜನೇಯ ದೇವಸ್ಥಾನದ ದಕ್ಷಿಣದ ಸೇದೋಭಾವಿ ಕಲ್ಲಿನ ಮೇಲಿನ ಶಾಸನ:** ಈಗ ಈ ಬಾವಿಯನ್ನು ಮುಚ್ಚಿಹಾಕಿದ್ದಾರೆ. "ಕೊಂಗರ ರಾಮೈನಭಾವಿ"–ಎಂಬ ಅಪ್ರಕಟಿತ ಶಿಲಾಶಾಸನ ಭಾವಿಕಲ್ಲಿನ ಮೇಲಿತ್ತು. ಈಗ ನಾಶ ಮಾಡಿದ್ದಾರೆ.

**ವಿಜಯನಗರ ಸದಾಶಿವರಾಯನ ಶಾಸನ ಕ್ರಿ.ಶ. ೧೫೪೪ ಶಿರಾ (೪೧):** ಈ ಹಿಂದೆ ಈ ಊರಿನ ನಾಯಿದಂಗೆ ತೆರಿಗೆ, ಕಾಣಿಕೆ, ದಾನ ಮುಂತಾದ ೫ ರೀತಿಯ ಪ್ರಭುತ್ವಕ್ಕೆ ಸಲ್ಲಿಸುತ್ತಿದ್ದ ತೆರಿಗೆ ಮನ್ನಾ ಮಾಡಲಾಗಿತ್ತು. ಈಗ ೧೨ ಆಯಗಾರರ ಸಹಿತ ಬರಗೂರ ಕೆರೆಯ ಕೆಳಗಣ ಭೂಮಿ ಸ್ವಾಮ್ಯ ನೀಡಿದ್ದನ್ನು ದಾಖಲಿಸುತ್ತದೆ.

**ಬರಗೂರ ವೀರಮ್ಮ:** ಇದು ಸುಮಾರು ೪೦೦ ವರ್ಷದ ಹಿಂದೆ ನಡೆದ ಸತಿ ಸ್ಥಳವಾಗಿದೆ. ಈಗ ದೇವಸ್ಥಾನ ಕಟ್ಟಿದ್ದಾರೆ. ಸತಿಯಾದ ಸ್ಥಳ ಸುಮಾರು ೪–೫ ಎಕರೆ ವಿಶಾಲವಾಗಿದೆ. ಜನಪದರು ಬರಗೂರ ವೀರಮ್ಮನ ಕಾವ್ಯವನ್ನು ಹಾಡುವರು. ಈ ದೇವಸ್ಥಾನದಲ್ಲಿ ೧೨ ವೀರಗಲ್ಲುಗಳಿವೆ. ಜಲಧಿ ಬೊಪ್ಪರಾಯ, ಆವಿನಕಾಮ ರಾಯ ಮುಂತಾಗಿ ಹೇಳುವರು. ಇವು ವಿಜಯನಗರೋತ್ತರ ಕಾಲದ ಗೋಸಂರಕ್ಷಣೆಗಾಗಿ ಹೋರಾಡಿ ಗೋವುಗಳನ್ನು ಮರಳಿಸಿದ ಎರಡು ವೀರಗಲ್ಲುಗಳೂ ಮತ್ತು ಉಳಿದವು ಊರಳಿವಿನಲ್ಲಿ ಮೃತರಾದ ವೀರರ ಸ್ಮಾರಕಗಳಾಗಿವೆ.

**ಬರಗೂರ ಕೆರೆ ಏರಿ ಮೇಲಿರುವ ವಿಶಿಷ್ಟ ವೀರಸತಿ ಕಲ್ಲಗಳು:** ಒಂದನೇ ಸತಿ ಕಲ್ಲು ಸುಮಾರು ೧೨ ಅಡಿ ಎತ್ತರದ ೨ ಅಗಲದ ಕಲ್ಲು ಚಪ್ಪಡಿ ಮೇಲೆ ವೀರಸತಿ ಶಿಲ್ಪವಿದ್ದು, ಸೊಂಟ ಪಟ್ಟಿಯಿದ್ದು, ಸೊಂಟದಿಂದ ಕೆಳಗೆ ಉಡುಗೆ ತೊಟ್ಟಿದ್ದಾಳೆ ಬಲಗೈ ಮೇಲೆತ್ತಿ ಎಡಗೈ ಕೆಳಗೆ ಬಿಟ್ಟು ನಿಂಬೆಹಣ್ಣು ಹಿಡಿದಿದ್ದಾಳೆ, ತುರುಬು ಕಟ್ಟಿದ್ದಾಳೆ. ಈಕೆಯು ಸುಮಾರು ೫ ಅಡಿ ಎತ್ತರವಿದ್ದು, ಈಕೆಯ ಕಾಲಬುಡದಲ್ಲಿ ವೀರನು ಕುದುರೆ ಮೇಲೆ ಕುಳಿತು ಖಡ್ಗಧಾರಿಯಾಗಿ ಪೇಟ ಪೋಷಾಕು ತೊಟ್ಟು ಯುದ್ಧಕ್ಕೆ ಹೋಗುತ್ತಿದ್ದಾನೆ. ವೀರನ ಬೆನ್ನ ಹಿಂದೆ ಕುಬ್ಜಸ್ತ್ರೀಯೊಬ್ಬಳು

ಕುಳಿತಿದ್ದಾಳೆ. ವೀರಸತಿಯ ಮೇಲುಗಡೆ ಬಲಭಾಗದಲ್ಲಿ ಶಂಖವನ್ನು ಎಡಭಾಗದಲ್ಲಿ ಚಕ್ರವನ್ನೂ ಕೆತ್ತಿದ್ದಾರೆ. ಶಿಲ್ಪಗಳನ್ನು ಸುಂದರವಾಗಿ ಕೆತ್ತಿದ್ದರೂ ಬಂಡೆಗಲ್ಲನ್ನು ಇದ್ದ ಹಾಗೆಯೇ ನಯಗೊಳಿಸದೇ ನೆಡಲಾಗಿದೆ. ಇವು ವೈಷ್ಣವ ಪಂಥದ ವೀರಸತಿ ಕಲ್ಲಾಗಿವೆ.

ಎರಡನೇ ವೀರಸತಿ ಕಲ್ಲನ್ನು ಸುಮಾರು ೫ ಅಡಿ ಎತ್ತರದ ಹಾಗೂ ೪ ಅಡಿ ಅಗಲದ ಕಲ್ಲಿನ ಚಪ್ಪಡಿ ಮೇಲೆ ಕೆತ್ತಿದೆ. ಇದು ಮೂರು ಹಂತದ ವೀರಸತಿ ಕಲ್ಲಾಗಿದೆ. ಮೇಲಿನ ಪಟ್ಟಿಯಲ್ಲಿ ನಾಲ್ವರು ಸ್ತ್ರೀಯರಿದ್ದು ಇವರೆಲ್ಲರೂ ಕುಳಿತಿದ್ದು ಕುಬ್ಜೆಯರಾಗಿದ್ದಾರೆ ಹಾಗೂ ಇವರಲ್ಲಿ ಬಲಗಡೆಯ ಕೊನೆಯ ಮಧ್ಯದವಳು ಇನ್ನೂ ಕುಬ್ಜೆಯಾಗಿದ್ದಾಳೆ. ಎಲ್ಲರೂ ಪ್ರೌಢೆಯರು. ಇವರ ನಂತರ ಮೂವರು ಸುಮಾರು ೪ ಅಡಿ ಎತ್ತರದ ಸ್ತ್ರೀಯರಿದ್ದು ಇವರು ಸತಿಯಾಗಲು ಸಿದ್ಧರಾಗಿದ್ದಾರೆ. ತುರುಬು ಕಟ್ಟಿದ್ದು ಆಭರಣ ತೊಟ್ಟಿದ್ದಾರೆ. ಸೊಂಟ ಮಟ್ಟದ ಸೀರೆ ಉಟ್ಟಿದ್ದಾರೆ. ಕೆಳ ಹಂತದಲ್ಲಿ ಭೂ ಮಟ್ಟದಲ್ಲಿ ಅಶ್ವಾರೋಹಿ ವೀರನು ಯುದ್ಧಕ್ಕೆ ಹೋಗುತ್ತಿದ್ದು ಈತನು ಸ್ಪಷ್ಟವಾಗಿ ಕಾಣುತ್ತಿಲ್ಲ. ಈ ವೀರಸತಿ ಕಲ್ಲಿನ ಮೇಲೆ ಲಿಂಗ ಗೋವುಗಳು ಹಾಗೂ ಸೂರ್ಯ ಚಂದ್ರರ ಶಿಲ್ಪಗಳಿವೆ. ಈ ವೀರಸತಿ ಕಲ್ಲುಗಳನ್ನು ಊರ ಜನರು ಏಳು ಮಂದಕ್ಕ ಗಳೆನ್ನುತ್ತಾರೆ. ಇವುಗಳ ಸುತ್ತ ಹಲವಾರು ನಾಗರಕಲ್ಲುಗಳಿದ್ದು ವರ್ಷಕ್ಕೊಮ್ಮೆ ಒಕ್ಕಲಿಗರ ಒಂದು ಮನೆತನದವರು ಈ ವೀರಸತಿ ಕಲ್ಲು ಹಾಗೂ ನಾಗರಕಲ್ಲುಗಳನ್ನು ಮಹಾನವಮಿ ಯಂದು ಪೂಜಿಸುತ್ತಾರೆ.

## ಭೈರಂಗಿ ಮಠ

ಇದು ಊರಿನಿಂದ ಅರ್ಧ ಕಿ.ಮೀ. ದಕ್ಷಿಣಕ್ಕಿದ್ದು ಕೆರೆಯ ಅಂಗಳದಲ್ಲಿದೆ. ಇಲ್ಲಿ ಸಹ ವೀರಸತಿ ಕಲ್ಲು, ವಿಷ್ಣು ವಿಗ್ರಹ ದೊರೆತಿವೆ. ಹಿಂದೆ ಇದೊಂದು ನಾತ ಸಂಪ್ರದಾಯದ ಭೈರಾಗಿಗಳಿದ್ದ ಮಠವಾಗಿದೆ. ಇವರು ಹೊಯ್ಸಳ ಮತ್ತು ವಿಜಯನಗರ ಕಾಲದವರಾಗಿದ್ದು, ನೊಳಂಬರಾಳ್ವಿಕೆ ನಂತರದವರಾಗಿದ್ದಾರೆ. ಇಲ್ಲಿ ನೆಲಮಾಳಿಗೆಯೊಂದಿತ್ತೆಂದೂ ಅದರಲ್ಲಿ ಭೈರಾಗಿಗಳು ಧ್ಯಾನ, ಪೂಜೆ, ಪುನಸ್ಕಾರ ಮಾಡುತ್ತಿದ್ದರೆಂದೂ ಈ ಸನ್ಯಾಸಿಗಳು ಈ ಭಾಗವನ್ನು ಬಹಳ ಹಿಂದೆ ಬಿಟ್ಟು ಹೋಗಿದ್ದಾರೆಂದೂ ಸ್ಥಳೀಯರು ಹೇಳುತ್ತಾರೆ. ಈಗ ನೆಲಮಾಳಿಗೆಯನ್ನು ಮುಚ್ಚಿ ಹಾಕಿರುವುದಾಗಿ ಜನರು ನೆಲಮಾಳಿಗೆಯಿದ್ದ ಜಾಗ ತೋರಿಸುತ್ತಾರೆ. ಭೈರಂಗಿ ಮಠದ ಹತ್ತಿರ ಮರಿಮಲ್ಲೇಶ್ವರ ದೇವಾಲಯವಿದೆ. ಇದನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ಮಠದ ಭೈರಾಗಿಗಳಿಗೆ ನೀರಿನ ಉಪಯೋಗಕ್ಕೆ ದೊಡ್ಡ ನೀರಿನ ಬಾವಿಯೊಂದಿದೆ.

ಇಲ್ಲಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಪಟ್ಟನಾಯಕನಹಳ್ಳಿಯಲ್ಲಿಯೂ ಸಹಾ ಗುರುಗುಂಡ ಬ್ರಹ್ಮೇಶ್ವರ ಮಠವಿದೆ. ಇವುಗಳು ನಾಥ ಸಂಪ್ರದಾಯ ಮಠಗಳಾಗಿದ್ದು, ಸಿದ್ಧರಬೆಟ್ಟ, ಸಿದ್ದಗಂಗೆ, ಪಟ್ಟನಾಯಕನಹಳ್ಳಿ ಮತ್ತು ಚುಂಚನಗಿರಿಗಳಿಗೂ ಸಂಬಂಧವಿದ್ದಂತಿದೆ.

## ಆಂಗ್ಲ ಸಮಾಧಿ: ಅಪ್ರಕಟಿತ ಶಾಸನ

ಆಂಗ್ಲ ವೈದ್ಯನೊಬ್ಬ ಮರಣ ಹೊಂದಲಾಗಿ ಭೈರಂಗಿ ಮಠದ ಪಕ್ಕದಲ್ಲಿ ಸುಮಾರು ೧೫೦ ವರ್ಷದ ಹಿಂದೆ ಈತನನ್ನು ಸಮಾಧಿ ಮಾಡಲಾಗಿದ್ದು, ಇದರ ಮೇಲಿನ ಬರಹ ಕೆಳಕಂಡಂತಿದೆ:

TO THE MEMORY
OF
C.H. AUCHINLECK ESQ$^{RE}$ M.D.
OF THE MADRAS
MEDICAL ESTABLISHMENT
ERECTED BY
HIS BROTHER OFFICERS
OF THE 38$^{TH}$ REGIMENT MNI
AS A MARK OF THEIR ESTEEM
T. NELSON SCULPTOR BANGALORE

**ಬರಗೂರಿನ ಮಹೇಂದ್ರೇಶ್ವರ ದೇವಾಲಯ:** ಈ ದೇವಾಲಯವು ಗರ್ಭಗೃಹ, ಅರ್ಧ ಮಂಟಪ, ನವರಂಗ, ಮುಖಮಂಟಪ, ಜಾಲಂದ್ರ ಮಾಳಿಗೆ ನೀರಿನ ಹರಿ ನಳಿಗೆ, ವಿಷ್ಣು, ಮಹಿಷಮರ್ಧಿನಿ, ಭೈರವ, ವೀಣಾಧಾರಿ ದಕ್ಷಿಣಾ ಮೂರ್ತಿ ಗಣಪತಿ, ನಂದಿ ವಿಗ್ರಹಗಳು ಸುಂದರವಾಗಿವೆ. ಕಂಬಗಳು ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳ ಮಾದರಿ ಯಲ್ಲಿವೆ – ಬಾಗಿಲುವಾಡ ಸುಂದರವಾಗಿದೆ. ಇಟ್ಟಿಗೆ ಗಾರೆಯ ದ್ರಾವಿಡ ಶಿಖರವು ಬಿದ್ದು ಹೋಗಿದ್ದು ದೇವಸ್ಥಾನ ಅಳವಿನಂಚಿನಲ್ಲಿದೆ. ಗಾರೆ ಶಿಲ್ಪಗಳು ಸುಂದರವಾಗಿವೆ. ಮೂರು ವಿಧದ ಕಂಬಗಳಿದ್ದು ರಾಟೆ ತಿರುವಿದ, ಅಷ್ಟಮುಖದ ಮತ್ತು ಮೇಲು ಮತ್ತು ಕೆಳತುದಿ ರಾಟೆ ತಿರುವಿದ ಹಾಗೂ ಮಧ್ಯದಲ್ಲಿ ಚೌಕಾಕಾರವಿದ್ದು ಮೇಲೆ ಬೋದಿಗೆ ಚಕ್ರಗಳಿವೆ. ಇದೊಂದೇ ನೊಳಂಬರ ಶಾಸನೋಕ್ತ (೮೭೮) ದೇವಾಲಯವಾಗಿದ್ದು ಈ ದೇವಾಲಯದ ಪೂರ್ವ ಮತ್ತು ನಂತರ ನಿರ್ಮಾಣದ ಶೈಲಿಯ ಅಧ್ಯಯನಕ್ಕೆ ಸಹಕಾರಿ ಯಾಗಿದೆ.



# ಬಾಗಲಕೋಟ ಪ್ರದೇಶದ ಪ್ರವಾಸೋದ್ಯಮ ಧಾರ್ಮಿಕ ತಾಣಗಳು

ರಮೇಶ ಎಂ. ಮೊರಬ*

"ಪ್ರವಾಸೋದ್ಯಮವು ಕಿರಿಯರಿಗೆ ಶಿಕ್ಷಣದ ಭಾಗವಾದರೆ, ಹಿರಿಯರಿಗೆ ಅನುಭವದ ಭಾಗವಾಗುತ್ತದೆ."[೧] ಪ್ರಾಚೀನ ಕಾಲದಿಂದಲೂ ಮಾನವನು ನಿತ್ಯ ಜೀವನದಲ್ಲಿ ಹೊಸದನ್ನು ಕೇಳುವ, ನೋಡುವ, ಆಸ್ವಾದಿಸುವ, ಕುತೂಹಲ ಮೂಡಿಸುತ್ತ ನಮ್ಮ ಸಂಸ್ಕೃತಿಯ ಮೌಲ್ಯಗಳನ್ನು ಬೇರೊಂದು ಪ್ರದೇಶಕ್ಕೆ ಹರಡುತ್ತ ಸಾಗಿದವು. ಕರ್ನಾಟಕವು ೧,೯೧,೭೫೬ ಚ.ಕಿ.ಮೀ. ವಿಸ್ತೀರ್ಣದ ಭೂಪ್ರದೇಶ ಹೊಂದಿದ್ದು, ಅದರಲ್ಲಿ ಹಲವು ಜಿಲ್ಲೆಗಳು ಇಂದು ಪ್ರಮುಖ ಪ್ರವಾಸಿ ಕೇಂದ್ರಗಳಾಗಿವೆ. ಅವುಗಳಲ್ಲಿ ಬಾಗಲಕೋಟ ಜಿಲ್ಲೆಯು ಒಂದಾಗಿದೆ. ಪ್ರವಾಸೋದ್ಯಮ ಇಂದು ಬಹುಮುಖ ಆಯಾಮದೊಂದಿಗೆ ಉದ್ಯೋನ್ಮುಖವಾಗುತ್ತಿರುವ ಇತಿಹಾಸದ ಒಂದು ಶಾಖೆ, ಉದ್ದಿಮೆ, ಮನರಂಜನೆ, ಸಂಸ್ಕೃತಿಯ ಪ್ರತಿರೂಪ, ಸರ್ಕಾರಕ್ಕೆ ಆದಾಯ ತರುವ ಪ್ರಮುಖ ಕ್ಷೇತ್ರ ಇದಾಗಿದೆ.

ಬಿಜಾಪೂರ ಜಿಲ್ಲೆಯಿಂದ ಬೇರ್ಪಟ್ಟು "೧೯೯೭ ಅಗಸ್ಟ್ ೧೫ರಂದು ನೂತನ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದ ಬಾಗಲಕೋಟೆ ಜಿಲ್ಲೆಯು ೨೦೦೧ರ ಜನಗಣತಿಯಂತೆ ೧೬,೫೨,೨೩೨ ಜನಸಂಖ್ಯೆಯನ್ನು ಮತ್ತು ಭೂ ವಿಸ್ತೀರ್ಣದಲ್ಲಿ ೬,೫೯೪ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ೬ ತಾಲ್ಲೂಕು, ೧೮ ಹೋಬಳಿಗಳನ್ನು ಹೊಂದಿರುವ ಈ ಪ್ರದೇಶ ಉತ್ತರ ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗಿದೆ."[೨] ಐತಿಹಾಸಿಕ ಮತ್ತು ಧಾರ್ಮಿಕ ಪ್ರವಾಸೋದ್ಯಮ ಕೇಂದ್ರಗಳೆಂದೇ ಹೆಸರಾದ ಬದಾಮಿ, ಪಟ್ಟದಕಲ್ಲು, ಮಹಾಕೂಟ, ಐಹೊಳೆ, ಕೂಡಲಸಂಗಮ, ಶಿವಯೋಗಮಂದಿರ, ಬನಶಂಕರಿ, ಜಮಖಂಡಿಯ ಮಹಾತೀರ್ಥ, ರನ್ನನ ಮುಧೋಳ ಮುಂತಾದವು ಪ್ರಸಿದ್ಧಿಗೆ ಬಂದಿದ್ದು ಅಲ್ಲಿರುವ ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು, ಕೋಟೆ-ಕೊತ್ತಲಗಳು, ಮಸೀದಿ ಮಂದಿರಗಳು ಪ್ರವಾಸಿಗರಿಗೆ ಮನರಂಜನೆ ಮತ್ತು ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರವಾಸಿ ಕೇಂದ್ರಗಳಾಗಿ ನಿರ್ಮಾಣವಾಗಿವೆ.

ಹೀಗೆ ಧಾರ್ಮಿಕ ಮತ್ತು ಐತಿಹಾಸಿಕ ಹಿನ್ನೆಲೆಯುಳ್ಳ ಪಟ್ಟದಕಲ್ಲು, ಬದಾಮಿ, ಐಹೊಳೆ ಸ್ಥಳಗಳು ವಿಶ್ವಪಾರಂಪರಿಕ ಪ್ರವಾಸೋದ್ಯಮ ಪಟ್ಟಿಯಲ್ಲಿ ಸೇರ್ಪಡೆಗೊಂಡಿರುವುದು ಸಂತೋಷದ ಸಂಗತಿಯಾಗಿದೆ.

ಬಾಗಲಕೋಟ ಜಿಲ್ಲೆಯಲ್ಲಿ ಇತ್ತೀಚೆಗೆ ಪ್ರಸಿದ್ಧಿಗೆ ಬಂದ ಕೂಡಲಸಂಗಮ ಕ್ಷೇತ್ರ, ಬನಶಂಕರಿ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅಕ್ಕದೇವಿಯ ರಾಜಧಾನಿಯಾಗಿದ್ದ ಅರಸಿಬೀದಿ, ಮಂಗಳೇಶನ ಕಾಲದಲ್ಲಿ ನಿರ್ಮಾಣವಾದ ಮಹಾಕೂಟ ಮತ್ತು ಶಿವಯೋಗಮಂದಿರ, ಆಲಮಟ್ಟಿಯ ಆಣೆಕಟ್ಟು, ಜಮಖಂಡಿಯ ಪಟವರ್ಧನ ಸಂಸ್ಥಾನ, ರನ್ನನ ಮುಧೋಳ, ತೇರದಾಳದ ಕೋಟೆ, ಅಲ್ಲಿರುವ ಧಾರ್ಮಿಕ ದೇವಾಲಯಗಳು, ಹುನಗುಂದನಗರದ ಕೋಟೆ ಮತ್ತು ದೇವಸ್ಥಾನಗಳು, ಬೀಳಗಿಯ ಬಾವಿ ಮತ್ತು ದೇವಾಲಯಗಳು, ಸಿರೂರದ ದೇವಾಲಯಗಳು, ಸಿದ್ಧನಕೊಳ್ಳ ಬೆಳಗಲಿಯ ಅಮೃತೇಶ್ವರ ದೇವಾಲಯಗಳು ಕಂಡುಬರುತ್ತಿದ್ದು, ಅವುಗಳನ್ನು ನೋಡಲು ಬಂದು ಹೋಗುವ ಭಕ್ತರು ಮತ್ತು ಪ್ರವಾಸಿಗರ ಹಿನ್ನೆಲೆಯಾಗಿಟ್ಟುಕೊಂಡು ಅಭಿವೃದ್ಧಿಪಡಿಸಿ ಪ್ರವಾಸಿಗರಿಗೆ ಮೂಲ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಲ್ಲಿ ಈ ಜಿಲ್ಲೆಯ ಪಾರಂಪರಿಕ ತಾಣಗಳಿಗೆ ಇನ್ನೂ ಹೆಚ್ಚಿನ ಮಹತ್ವ ಸಿಕ್ಕಂತಾಗುತ್ತದೆ. ಧಾರ್ಮಿಕವಾಗಿ ಜನರನ್ನು ವರ್ಷಪೂರ್ತಿಯಾಗಿ ಆಕರ್ಷಿಸುವ ಅಥವಾ ಜನರನ್ನು ಬರಮಾಡಿಕೊಳ್ಳುವ ಪ್ರಮುಖ ಸ್ಥಳಗಳೆಂದರೆ, ಬದಾಮಿಯ ಹತ್ತಿರದ ಬನಶಂಕರಿ, ಮಹಾಕೂಟದ ಶಿವಯೋಗಮಂದಿರ, ಬಸವಣ್ಣನವರು ಐಕ್ಯವಾದ ಕೂಡಲಸಂಗಮ ಕ್ಷೇತ್ರಗಳನ್ನು ಮುಖ್ಯವಾಗಿಟ್ಟುಕೊಂಡು ಇಲ್ಲಿ ಗಮನಿಸಲಾಗಿದೆ.

---

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ಮತ್ತು ಪ್ರಾಚ್ಯವಸ್ತು ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

## ಬನಶಂಕರಿ ದೇವಾಲಯ

ಮನುಷ್ಯನ ತೀರ್ಥಯಾತ್ರೆಯ ಆಧ್ಯಾತ್ಮಿಕ ಜೀವಿಗಳ ಬದುಕಿನ ಬಹುಮುಖ್ಯ ಧಾರ್ಮಿಕ ಕೇಂದ್ರಗಳಲ್ಲಿ ಬದಾಮಿಯ ಬನಶಂಕರಿಯ ದೇವಸ್ಥಾನ ಒಂದಾಗಿದೆ. ಆ ಬನಶಂಕರಿಯ ದೇವಿಯ ಮಹಿಮೆ, ಆ ಪುಣ್ಯಕ್ಷೇತ್ರದ ಮಹತ್ವ ರಾಜ್ಯ ಮತ್ತು ರಾಷ್ಟ್ರದ ಭಕ್ತ ಸಮುದಾಯವನ್ನು ಆಕರ್ಷಿಸುವ ಶಕ್ತಿಯ ಕೇಂದ್ರವಾಗಿ ಹೊರಹೊಮ್ಮಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಹುಬ್ಬಳ್ಳಿ ಸೊಲ್ಲಾಪುರ ರೈಲು ಮಾರ್ಗದಲ್ಲಿ ಬದಾಮಿಗೆ ಹೋಗುವ ಚಿಕ್ಕ ನಿಲ್ದಾಣದಿಂದ ಬದಾಮಿಯಿಂದ ೪ ಕಿ.ಮೀ. ಹೋದರೆ ಈ ಬನಶಂಕರಿ ಮಂದಿರ ಸಿಗುತ್ತದೆ."[೩] ದಕ್ಷಿಣ ಭಾರತದ ಶಕ್ತಿಯ ಕೇಂದ್ರಗಳಲ್ಲಿ ಅತೀ ಪ್ರಸಿದ್ಧ ಅಗ್ರಗಣ್ಯ ಸ್ಥಳ ಇದಾಗಿದ್ದು ಇತಿಹಾಸದಲ್ಲಿ ತಿಲಕಾರಣ್ಯ ಎಂಬ ಹೆಸರಿನಿಂದ ಈ ಭೂಪ್ರದೇಶಕ್ಕೆ ಕರೆಯಲಾಗಿದೆ. ಬದಾಮಿ ಚಾಲುಕ್ಯರ ಅರಸರ ತಮ್ಮ ಕುಲದೇವತೆ ಬನಶಂಕರಿ ದೇವಿಗಾಗಿ ಈ ದೇವಾಲಯವನ್ನು ಕಟ್ಟಿಸಿರುತ್ತಾರೆ. ಇದು ದ್ರಾವಿಡ ಶೈಲಿಯ ವಿನ್ಯಾಸವನ್ನು ಹೊಂದಿದೆ. ಈ ದೇವಸ್ಥಾನದ ಒಳಗಿನ ಗರ್ಭಗುಡಿಯಲ್ಲಿ ಸಿಂಹವಾಹಿನಿಯಾಗಿ ಕಪ್ಪು ಶಿಲೆಯಲ್ಲಿ ನಿರ್ಮಿಸಿರುವ ಈ ದೇವಾಲಯದ ವಿಗ್ರಹವು ಸುಂದರವಾಗಿದೆ. ಅದರ ಹೊರಭಾಗ ಇತ್ತೀಚಿಗೆ ಭಕ್ತರು ಮತ್ತು ಸರಕಾರದ ನೆರವಿನಿಂದ ಅಭಿವೃದ್ಧಿಪಡಿಸಲಾಗಿದೆ.

ದೇವಾಲಯದ ಹೊರಭಾಗದಲ್ಲಿ ಹರಿದ್ರತೀರ್ಥ ಎಂಬ ಕಲ್ಯಾಣಿಯು ಇಲ್ಲಿನ ಆಕರ್ಷಣೀಯ ಸರೋವರವಾಗಿದೆ. ಈ ಕಲ್ಯಾಣಿಗೆ ೪ ಕಡೆಯಿಂದಲೂ ಸೋಪಾನ ಹೊಂದಿದ್ದು, ಪ್ರವಾಸಿಗರ ಮನಸೆಳೆಯುತ್ತದೆ. ಈ ದೇವಿಯ ಬಗ್ಗೆ ಜನರಲ್ಲಿ ಮೂಡಿರುವ ಭಕ್ತಿಯ ಭಾವನೆ, ಆರಾಧನೆ ಯಿಂದಾಗಿ ಈ ಸ್ಥಳ ಪ್ರಸಿದ್ಧಿಯಾಗಿ ಬೆಳೆದಿದೆ.

ಬನಶಂಕರಿ ಎನ್ನುವುದು ಈ ಊರಿನ ಹೆಸರು ಹೌದು, ದೇವಿಯ ಹೆಸರು ಹೌದು. ಈ ದೇವಿಯ ಧಾರ್ಮಿಕ ಶಕ್ತಿಯಿಂದಲೇ ಈ ಊರಿನ ಹೆಸರು ಪ್ರಸಿದ್ಧವಾಗಿದೆ. ಪೌರಾಣಿಕವಾಗಿ ಜನಕಂಟಕನಾಗಿದ್ದ ರಕ್ಕಸನನ್ನು ಸಂಹಾರ ಮಾಡಲು ಪಾರ್ವತಿಯು ಬನಶಂಕರಿಯ ರೂಪದಲ್ಲಿ ಬಂದು ಇಲ್ಲಿಯೇ ನೆಲೆಸಿದ್ದಳು ಎಂದು ಸ್ಕಂದ ಪುರಾಣದಲ್ಲಿ ಉಲ್ಲೇಖವಾಗಿದೆ. ಈ ದೇವಿಗೆ ಬಾದಾಮಿಯ ಚಾಲುಕ್ಯರ ಅರಸರೇ ಮನಸೋತು ಭಕ್ತಿಯಿಂದ ನಡೆದುಕೊಂಡು ಆ ದೇವಸ್ಥಾನದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಈ ಸ್ಥಳ ದಟ್ಟವಾದ ಕಾಡಿನಂದ ಆವರಿಸಿದ್ದರಿಂದ ಈ ಪರಿಸರದಲ್ಲಿಯೇ ದೇವಿ ನೆಲೆಸಿದ್ದರಿಂದ ವನಶಂಕರಿ ಅಥವಾ ಬನಶಂಕರಿ ದೇವಿ ಎಂದು ಈ ಸ್ಥಳ ಪೌರಾಣಿಕವಾಗಿ ಪ್ರಸಿದ್ಧವಾಗಿ ಭೆಳೆದುನಿಂತಿದೆ.

ಜನೇವರಿ – ಫೆಬ್ರುವರಿ ತಿಂಗಳಿನಲ್ಲಿ ಪ್ರತಿ ವರ್ಷ ಬೃಹತ್ ಪ್ರಮಾಣದಲ್ಲಿ ಬನಶಂಕರಿ ದೇವಿಯ ರಥೋತ್ಸವ ಪೌರ್ಣಿಮೆಯ ಬೆಳದಿಂಗಳಲ್ಲಿ ನೆರವೇರುವುದು. ಅಂದು ಸೇರುವ ಜಾತ್ರೆಯಲ್ಲಿ ಲಕ್ಷ ಲಕ್ಷ ಭಕ್ತರು ಬಂದು ಹೋಗುವರು. ಇದರಿಂದಾಗಿ ಹೆಚ್ಚು ಪ್ರಸಿದ್ಧಿಗೆ ಬಂದು ನಾಡಿನ ಜನರಿಗೆ ಈ ಜಾತ್ರೆ ಅಗತ್ಯವಾದ ವಸ್ತುಗಳನ್ನು ಮಾರುವ, ಭಕ್ತರನ್ನು ಧಾರ್ಮಿಕವಾಗಿ ಆಕರ್ಷಿಸುವ ಸ್ಥಳವಾಗಿ ರೂಪಗೊಂಡಿದೆ. ಹೀಗಾಗಿ ಬದಾಮಿ, ಐಹೊಳೆ, ಪಟ್ಟದಕಲ್ಲನ್ನು ನೋಡಲು ಬರುವ ವಿದೇಶಿಗರು ಮತ್ತು ದೇಶೀಯ ಪ್ರವಾಸಿಗರು ಈ ಸ್ಥಳಕ್ಕೆ ಬಂದು ದೇವಿಯ ದರ್ಶನ ಪಡೆಯುತ್ತಾರೆ.

ಜಾತ್ರೆಯ ಅಂಗವಾಗಿ ನಾಟಕಗಳು, ಕುಸ್ತಿ ಆಟಗಳು, ಕಬಡ್ಡಿ ಆಟಗಳು, ಕಣಿ ಹೇಳು ವುದು ಇತ್ಯಾದಿ ಮನರಂಜನೆಗಳು ನಡೆಯುತ್ತವೆ. ದನ–ಕರು–ಕುರಿ–ಎತ್ತುಗಳ ಮಾರಾಟದ ವಹಿವಾಟುಗಳು ಸಹ ನಡೆಯುವವು. ನಿರಂತರವಾಗಿ ಇಲ್ಲಿ ಬಂದು ಹೋಗುವ ಭಕ್ತರಿಂದ ಜರುಗುವ ಪೂಜೆ–ಪುನಸ್ಕಾರ, ಜಾತ್ರೆ, ಉತ್ಸವ, ನಾಟಕ, ಕ್ರೀಡೆಗಳು, ಕುಣಿತಗಳು ಇತ್ಯಾದಿ ಮನರಂಜನೆಗಳು ಸಾಂಸ್ಕೃತಿಕ ಪ್ರವಾಸೋದ್ಯಮದ ಅವಿಭಾಜ್ಯ ಅಂಗಗಳಾಗಲು ಸಾಧ್ಯವಾಗಿದೆ.

ಹೀಗೆ ಧಾರ್ಮಿಕವಾಗಿ ಪವಿತ್ರ ಪುಣ್ಯಕ್ಷೇತ್ರವಾದ ಬನಶಂಕರಿಯು ಇಂದು ಧಾರ್ಮಿಕ ಪ್ರವಾಸೋದ್ಯಮ ಸ್ಥಳವಾಗಿ ಪರಿಗಣಿಸುವ ಎಲ್ಲಾ ಅರ್ಹತೆಗಳನ್ನು ಹೊಂದಿದೆ.

## ಶ್ರೀ ಮಹಾಕೂಟ ಸುಕ್ಷೇತ್ರ

ಶಿವ–ಶಕ್ತಿ ಮೇಳೈಸಿರುವ, ದಕ್ಷಿಣ ಕಾಶಿ ಎಂದು ಹೆಸರಾದುದು ಶ್ರೀಮಹಾಕೂಟ ಸುಕ್ಷೇತ್ರ. ಬದಾಮಿ ಚಾಲುಕ್ಯರ ರಾಜಧಾನಿಯಾಗಿದ್ದ ಬದಾಮಿಯಿಂದ ಕೇವಲ ೧೨ ಕಿ.ಮೀ. ದೂರದಲ್ಲಿದೆ. ಬನಶಂಕರಿ ದೇವಿಯಿಂದ ೬ ಕಿ.ಮೀ. ದೂರದಲ್ಲಿರುವ ಪುಣ್ಯಕ್ಷೇತ್ರವೇ ಶ್ರೀ ಮಹಾಕೂಟ ಕ್ಷೇತ್ರ.

ಬಹು ಪುರಾತನ ಕಾಲದಿಂದಲೂ ಶಕ್ತಿಮಯವಾದ ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವ ಈ ಕ್ಷೇತ್ರದಲ್ಲಿ ವ್ಯಾಘ್ರಪಾದೇಶ್ವರ, ಮಹಾಕೂಟೇಶ್ವರನೆಂಬ ಹೆಸರುಗಳಿಂದ ಕರೆಯಲ್ಪಡುವ ಪರಶಿವನ ತಾಣ ಇದಾಗಿದೆ.

ಪುರಾಣ ಕಥೆಯಲ್ಲಿ ಉಲ್ಲೇಖವಾದಂತೆ ಲಜ್ಜಾ ಗೌರಿಯೆಂದೇ ಕರೆಯಲ್ಪಡುವ ಗೌರಿಮಾತೆಯ ಸುಂದರ ಮೂರ್ತಿ ಇಲ್ಲಿದ್ದು, ಈಗಲೂ ಭಿನ್ನವಾಗಿರುವ ದೇವಿಯ ಸುಂದರ ಮೂರ್ತಿ ಇದೆ. ಅಗಸ್ತ್ಯ ಮುನಿಗಳು ಸ್ಥಾಪಿಸಿದ ಕೋಟಿಲಿಂಗಗಳ ಛಾಯೆ ಇದೆ. ಅವುಗಳಲ್ಲಿ ಚತುರ್ಮುಖೇಶ್ವರ, ಸಂಗಮೇಶ್ವರ, ವಿರುಪಾಕ್ಷೇಶ್ವರ, ಕಾಲಕಾಲೇಶ್ವರ,

ಮಲ್ಲಿಕಾರ್ಜುನ, ಕಪಿಲೇಶ್ವರ, ಅಡಿಕೇಶ್ವರ ಹೀಗೆ ಹಲವು ಹೆಸರುಗಳಿಂದ ಕರೆಯಲ್ಪಡುವ ಪರಶಿವನ ಲಿಂಗಗಳನ್ನು ದೇಗುಲದ ಆವರಣದ ಸುತ್ತಲೂ ಇವೆ.

"ಶ್ರೀಕ್ಷೇತ್ರ ಮಹಾಕೂಟದಲ್ಲಿ ಶಿವಪುಷ್ಕರಣಿ, ಕಾಶಿತೀರ್ಥಗಳಲ್ಲಿ ಕಾಶಿಯ ಗಂಗೆಯಲ್ಲಿ ಮಿಂದಷ್ಟೇ ಪವಿತ್ರತೆಯನ್ನು ಹೊಂದುವುದಾಗಿಯೂ, ಸಕಲ ಪಾಪಗಳು ನಿವಾರಣೆಯಾಗುವುದೆಂದು ಇಲ್ಲಿನ ಜನರ ನಂಬಿಕೆ"[೪] ಹಾಗೂ ಪ್ರವಾಸಿಗರ ನಂಬಿಕೆಯಾಗಿದೆ. ಸಾಕ್ಷಾತ್ ಪರಶಿವನ ಜಡೆಯನ್ನಲಂಕರಿಸಿರುವ ಗಂಗೆಯೇ ಹರಿದು ಬಂದು ಈ ಪುಣ್ಯಕ್ಷೇತ್ರವನ್ನು ಪಾವನಗೊಳಿಸಿದ್ದಾಳೆ. ಪತಿಯೊಡನೆ ಇಲ್ಲಿಯೇ ನೆಲೆಸಿ ಭಕ್ತರ ಕೋರಿಕೆಯನ್ನು ಈಡೇರಿಸುವ ಆರಾಧ್ಯ ದೈವವಾಗಿದ್ದಾಳೆ ಎಂದು ಪುರಾಣಗಳಿಂದ ತಿಳಿದುಬರುವುದು. ವಾತಾಪಿ ಮತ್ತು ಇಲ್ವಲರೆಂಬ ರಾಕ್ಷಸರನ್ನು ಮಹಾಮುನಿ ಅಗಸ್ತ್ಯರು ಸಂಹರಿಸಿದ್ದು ಈ ಕ್ಷೇತ್ರದಲ್ಲಿಯೇ ಎನ್ನಲಾಗಿದೆ.

ಇತಿಹಾಸತಜ್ಞರ ಪ್ರಕಾರ ಕ್ರಿ.ಶ. ೫೫೦ ರಲ್ಲಿ ಬಾದಾಮಿ ಚಾಲುಕ್ಯರ ಪ್ರಥಮ ಅರಸ ಜಯಸಿಂಹನ ಕಾಲದಲ್ಲಿ ಈ ದೇವಾಲಯ ನಿರ್ಮಾಣವಾಯಿತು ಎಂದು ಪುರಾತತ್ವ ತಜ್ಞರ ಅಭಿಮತವಾಗಿದೆ. ಬಾದಾಮಿ ಚಾಲುಕ್ಯರ ಶೈವಮತಕ್ಕೆ ಆಶ್ರಯದಾತರಾಗಿದ್ದರಿಂದ ಬದಾಮಿ, ಮಹಾಕೂಟ, ಪಟ್ಟದಕಲ್ಲು, ಐಹೊಳೆ ಪ್ರದೇಶಗಳಲ್ಲಿ ನಿರ್ಮಿಸಿರುವ ಹಲವು ಶೈವ ಶಿವಾಲಯಗಳೇ ನಮಗೆ ಸಾಕ್ಷಿಯಾಗಿವೆ.

ನಿತ್ಯ ಅನ್ನದಾಸೋಹ ಇರುವ ಶ್ರೀಕ್ಷೇತ್ರ ಮಹಾಕೂಟದಲ್ಲಿ ಸಮರ್ಪಕ ನಿರ್ವಹಣೆಯ ಕೊರತೆ ಇದೆ. ನಿತ್ಯ ಪೂಜೆಯಿಲ್ಲದೇ ಧೂಳು ಹಿಡಿದು ಕುಳಿತಿರುವ ಅನೇಕ ಶಿವಲಿಂಗಗಳಿವೆ. ಅನೇಕ ದೇಗುಲಗಳು ಮೇಲ್ವಿಚಾರಣೆ ಇಲ್ಲದೆ ಹಾಳಾಗುತ್ತಿವೆ. ವಸತಿಗೃಹದ ಮತ್ತು ನೈರ್ಮಲ್ಯೀ ಕರಣದ ಬಗ್ಗೆ ಇತ್ತೀಚೆಗೆ ಆ ದೇವಸ್ಥಾನದ ವಿಶ್ವಸ್ಥ ಮಂಡಳಿ ಯವರು ಅಭಿವೃದ್ಧಿಪಡಿಸಿದ್ದಾರೆ. ಆದರೂ ಇನ್ನೂ ಹೆಚ್ಚಿನ ಬೆಳವಣಿಗೆ ಅವಶ್ಯಕವಾಗಿದೆ. ಬದಾಮಿ, ಬನಶಂಕರಿ, ಐಹೊಳೆ, ಪಟ್ಟದ ಕಲ್ಲುಗಳಿಗೆ ಭೇಟಿ ನೀಡುವ ಪ್ರವಾಸಿಗರಿಗೆ ಮಹಾಕೂಟಕ್ಕೆ ಹೋಗಿ ಬರಲು ಬಸ್ಸು ಸಾರಿಗೆ ವ್ಯವಸ್ಥೆ ಕೊರತೆ ಇದೆ.

**ಶಿವಯೋಗ ಮಂದಿರ**

ಮಲಪ್ರಭಾ ನದಿಯ ದಂಡೆಯ ಮೇಲಿರುವ ಶಿವಯೋಗ ಮಂದಿರವು ನಿಸರ್ಗ ರಮಣೀಯ ಸ್ಥಳದಲ್ಲಿದೆ. ಶ್ರೀಕ್ಷೇತ್ರ ಮಂದಿರವನ್ನು ಹಾನಗಲ್ಲು ಕುಮಾರಸ್ವಾಮಿಗಳು ೧೯೦೯ರಲ್ಲಿ ಸ್ಥಾಪಿಸಿದರು. "ಇದು ವೀರಶೈವ ಮಠಗಳಿಗೆ ಸ್ವಾಮಿಗಳಾಗಲು ಬಯಸುವ ಸಾಧಕರಿಗೆ, ಯೋಗ ಮತ್ತು ಧಾರ್ಮಿಕ ಶಿಕ್ಷಣ ಕೊಡುವ ಕೇಂದ್ರವಾಗಿದೆ."[೫] ಇಲ್ಲಿ ತಾಳೆ ಎಲೆ ಪತ್ರಗಳನ್ನೊಳಗೊಂಡ ಅಮೂಲ್ಯ ಗ್ರಂಥ ಭಂಡಾರವಿದೆ. ಅಪರೂಪದ ಗ್ರಂಥಗಳು ಧರ್ಮ ಮತ್ತು ಸಾಹಿತ್ಯಗಳಿಗೆ ಸಂಬಂಧಿಸಿದ ಕನ್ನಡ, ಹಿಂದಿ, ಸಂಸ್ಕೃತ, ಇಂಗ್ಲೀಷ್, ಮರಾಠಿ, ತೆಲುಗು ಮೊದಲಾದ ಭಾಷೆಗಳ ಗ್ರಂಥಗಳಿವೆ.

ಶಾಸ್ತ್ರೋಕ್ತ ವಿಭೂತಿ ನಿರ್ಮಾಣ ಕೇಂದ್ರ, ಗೋಶಾಲೆ, ದಾಸೋಹ ಇವುಗಳನ್ನು ಒಳಗೊಂಡಿದೆ. ಹಾನಗಲ್ಲು ಸ್ವಾಮಿಗಳ ಮತ್ತು ದಥಾಶಿವ ಸ್ವಾಮಿಗಳ ಕತೃ ಗದ್ದುಗೆಗಳು ಇಲ್ಲಿಯೇ ನಿರ್ಮಿತವಾಗಿವೆ. ಈ ಕ್ಷೇತ್ರ ತಪಸ್ವಿಗಳ ಪುಣ್ಯಭೂಮಿ, ಯೋಗಿಗಳ ನೆಲೆವೀಡು, ವಟು ಸಾಧಕರ ಶಿಕ್ಷಣ ಕೇಂದ್ರ, ಗಾನಯೋಗಿಗಳಿಗೆ ಆಶ್ರಯ ಸ್ಥಾನವಾಗಿದೆ. ಹೀಗೆ ಒಂಬತ್ತು ದಶಕಗಳ ಇತಿಹಾಸ ಹೊಂದಿರುವ ಶಿವಯೋಗ ಮಂದಿರವು ವಿಶಿಷ್ಟ ಧಾರ್ಮಿಕ ಸಂಸ್ಥೆಯಲ್ಲಿ ಅನೇಕ ಪೂಜ್ಯರು ತಪೋನಿಧಿಗಳಾಗಿ, ಯೋಗಿಗಳಾಗಿ, ಕವಿಗಳಾಗಿ, ಸಾಹಿತಿಗಳಾಗಿ, ಲಿಂಗಾಯತ ಮಠಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀಕ್ಷೇತ್ರ ಶಿವಯೋಗ ಮಂದಿರದಲ್ಲಿ ವಿಭೂತಿ ನಿರ್ಮಾಣವನ್ನು ಶಾಸ್ತ್ರೋಕ್ತವಾಗಿ ತಯಾರಿಸುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ಎರಡು ವಿಧಾನಗಳ ವಿಭೂತಿಯನ್ನು ಇಲ್ಲಿ ತಯಾರಿಸುತ್ತಾರೆ. ಒಂದು ಸಾದಗಟ್ಟಿ ಇನ್ನೊಂದು ಕ್ರಿಯಾಗಟ್ಟಿ. ಸಾಮಾನ್ಯರು ಬಳಸುವುದು ಸಾದಗಟ್ಟಿ ವಿಭೂತಿಯಾದರೆ, ವಿರಕ್ತರು ಮತ್ತು ಸನ್ಯಾಸಿಗಳು ಉಪಯೋಗಿಸುವುದು ಕ್ರಿಯಾಗಟ್ಟಿ ವಿಭೂತಿ.

ಹೀಗೆ ಶಿವಯೋಗ ಮಂದಿರವು ೧೯೦೯ರಲ್ಲಿ ಸ್ಥಾಪಿತವಾಗಿದ್ದು, ಇಲ್ಲಿ ನಿತ್ಯ ದಾಸೋಹವು ಇದೆ. ಪ್ರತಿದಿನ ಬೆಳಿಗ್ಗೆಯಿಂದ ರಾತ್ರಿ ಇಲ್ಲಿಗೆ ಬರುವ ಭಕ್ತರಿಗೆ ದಾಸೋಹ ಇದೆ. ಶಿವರಾತ್ರಿಯ ಸಂದರ್ಭದಲ್ಲಿ ದೊಡ್ಡ ಜಾತ್ರೆಯೇ ಆಗುತ್ತದೆ. ಜಾತ್ರೆಯ ಉತ್ಸವದಲ್ಲಿ ಪಾಲ್ಗೊಂಡು ಶಿವನ ಸ್ಮರಣೆಯನ್ನು ಮಾಡುವರು. ಇದು ಒಂದು ಧಾರ್ಮಿಕ ಪ್ರವಾಸೋದ್ಯಮದ ಕೇಂದ್ರವಾಗಿದೆ.

ಇಲ್ಲಿಗೆ ಬರುವ ಭಕ್ತರಿಗೆ ವಾಹನ ಸೌಲಭ್ಯದ ಕೊರತೆಯಿದೆ. ಇತ್ತೀಚೆಗೆ ಇದರ ಮುಂದುಗಡೆ ವಸತಿ ಗೃಹಗಳನ್ನು ನಿರ್ಮಿಸಿ ಪ್ರವಾಸಿಗರು ಮತ್ತು ಬಂದು ಹೋಗುವ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸಕ್ಕೆ ಅನುಕೂಲ ಕಲ್ಪಿಸಿದೆ.

**ಕೂಡಲಸಂಗಮ**

ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿರುವ ಈ ಪವಿತ್ರ ಕ್ಷೇತ್ರವೂ, ಜಿಲ್ಲಾ ಕೇಂದ್ರ ಬಾಗಲಕೋಟೆಯಿಂದ ೪೮ ಕಿ.ಮೀ. ದೂರದಲ್ಲಿದೆ. ಹುನಗುಂದದಿಂದ ೩೦ ಕಿ.ಮೀ. ದೂರದಲ್ಲಿದೆ. ಅಂತೆಯೇ ಬದಾಮಿಯಿಂದ ಸುಮಾರು ೮೦ ಕಿ.ಮೀ. ದೂರದಲ್ಲಿದೆ.

"ಕ್ರಿ.ಶ. ೧೧ನೇ ಶತಮಾನದಲ್ಲಿ ಕಲ್ಯಾಣ ಕಲಚೂರಿ ಅರಸರ ಕಾಲದಲ್ಲಿ ನಿರ್ಮಾಣವಾದ ಈ ದೇವಾಲಯದ ಗರ್ಭಗುಡಿಯಲ್ಲಿರುವ ಲಿಂಗವನ್ನು ಉದ್ಭವ ಲಿಂಗ"[೬] ಎನ್ನುವರು. ಈ ಉದ್ಭವ ಸಂಗಮೇಶ್ವರನೇ ಬಸವಣ್ಣನವರ ಆರಾಧ್ಯದೈವ. ನಾರಾಯಣಪುರದ ಬಸವ ಸಾಗರದ ಹಿನ್ನೀರಿನ ಕೃಷ್ಣ ಹಾಗೂ ಮಲಪ್ರಭೆಯರ ಸಂಗಮ ಸ್ಥಾನದಲ್ಲಿ ಬಸವಣ್ಣನವರ ಐಕ್ಯ ಮಂಟಪದ ಎದುರಿಗೆ ಪೂರ್ವಾಭಿಮುಖವಾಗಿರುವ ಸಂಗಮೇಶ್ವರ ದೇಗುಲದ ಹೊರ ಮೇಲ್ಮೈ ಬಹಳ ಆಕರ್ಷಕವಾಗಿದೆ. ಸುತ್ತಲೂ ಸಾಗರದಂತೆ ಹಬ್ಬಿರುವ ಕೃಷ್ಣ-ಘಟಪ್ರಭಾ, ಮಲಪ್ರಭೆ ಮಡಿಲಲ್ಲಿ ನೆಲೆ ನಿಂತಿರುವ ಸಂಗಮೇಶ್ವರ ದೇಗುಲವು ಇಡೀ ಕೂಡಲಸಂಗಮ ಪರಿಸರಕ್ಕೆ ಕಳಸವಿಟ್ಟಂತಿದೆ. ದೇಗುಲದ ಒಳಗಿನ ಕಂಬಗಳಲ್ಲಿನ ಶಿಲ್ಪಗಳು ಸುಂದರ ವಾಗಿವೆ. ಇನ್ನು ಗರ್ಭಗುಡಿಯ ಒಳಾಂಗಣದಲ್ಲಿನ ಗೋಡೆ ಗಳು, ಚಿಕ್ಕದಾಗಿದ್ದರೂ ಅಷ್ಟೇ ಸುಂದರವಾದ ಗಣಪತಿಯ ವಿಗ್ರಹ, ಸಂಗಮೇಶ್ವರನ ಎಡಬದಿಯ ಗೋಡೆಯ ಮೇಲೆ ವಚನ ರಚನೆಯಲ್ಲಿ ತೊಡಗಿರುವ ಬಹು ಆಕರ್ಷಕ ಬಸವಣ್ಣನವರ ಸುಂದರ ಮೂರ್ತಿಯಿದೆ. ಸಂಗಮೇಶ್ವರನ ದೇಗುಲ, ಬಸವಣ್ಣನವರ ಐಕ್ಯಮಂಟಪ ಅಲ್ಲದೇ ರಾಷ್ಟ್ರೀಯ ಹೆದ್ದಾರಿಯಿಂದ ಬರುವ ರಾಜಮಾರ್ಗದ ಆರಂಭದಲ್ಲಿ ಪೀಠವೊಂದರ ಮೇಲೆ 4 ಕಂಬಗಳಿಂದ ನಿರ್ಮಿತವಾದ ಮಂಟಪದಲ್ಲಿ ಆಸೀನರಾಗಿರುವ ಕಂಚಿನ ಬಸವಣ್ಣನವರ ಸುಂದರಮೂರ್ತಿ ಮನೋಹರವಾಗಿದೆ. ಏಷ್ಯಾದಲ್ಲಿಯೇ ಅತಿ ದೊಡ್ಡ ಗುಮ್ಮಟವಾದ ಚಾಲುಕ್ಯ ಶೈಲಿಯ ಗೋಪುರಗಳಿಂದ ಆವೃತವಾದ ಸಭಾಭವನ, ಶರಣ ಸಾಹಿತ್ಯ ಭಂಡಾರ ಮತ್ತು ಸಂಶೋಧನಾ ಕೇಂದ್ರಗಳು, ದಾಸೋಹ ಭವನ, ಬಸವಧರ್ಮ ಪೀಠ ಭಕ್ತರನ್ನು ಪ್ರವಾಸಿಗರಿಗೆ ಮಂತ್ರಮುಗ್ಧ ಮಾಡುವಂತೆ ಈ ಕ್ಷೇತ್ರ ಬಹಳ ಸುಂದರವಾಗಿ ನಿರ್ಮಾಣಗೊಂಡಿದೆ.

## ಬಾಗಲಕೋಟೆ ಜಿಲ್ಲೆಯ ಧಾರ್ಮಿಕ ಕೇಂದ್ರಗಳನ್ನು ಪ್ರವಾಸೋದ್ಯಮ ಮಾಡಲು ಇರುವ ಸಾಧ್ಯತೆಗಳು

* ಶಾಲಾ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಪುಣ್ಯಕ್ಷೇತ್ರ/ವಿಹಾರ ವೀಕ್ಷಿಸಲು ಪ್ರವಾಸಿ ಪ್ಯಾಕೇಜ್ ನೀಡುವುದು.
* ಪ್ರಮುಖ ಪ್ರವಾಸಿ ಕೇಂದ್ರಗಳಿಗೆ ಭೇಟಿ ನೀಡಿದಾಗ ಹತ್ತಿರದಲ್ಲಿರುವ ಪ್ರವಾಸ ಸ್ಥಳಕ್ಕೆ ಹೋಗಲು ಸಮರ್ಪಕ ರಸ್ತೆ ನಿರ್ಮಿಸುವುದು.
* ನಿಗದಿತ ವೇಳೆಗೆ ಪ್ರವಾಸ ಕೇಂದ್ರ ವಾಹನ ಸೌಕರ್ಯ ಕಲ್ಪಿಸುವುದು.
* ಪ್ರಮುಖ ಧಾರ್ಮಿಕ ಪ್ರವಾಸೋದ್ಯಮ ಕೇಂದ್ರ ಇರುವ ಕಡೆ ಗ್ರಂಥಾಲಯ ಕೇಂದ್ರಗಳನ್ನು ಸ್ಥಾಪಿಸುವುದು.
* ಜಿಲ್ಲೆಯ ಪ್ರತಿಯೊಂದು ದೇವಾಲಯಕ್ಕೆ ಬಂದು ಹೋಗುವ ಭಕ್ತರಿಗೆ ಕೂಡಲು, ನಿಲ್ಲಲು ದೇವಾಲಯದ ಆವರಣದ ಹತ್ತಿರ ಉದ್ಯಾನವನ್ನು ಅಭಿವೃದ್ಧಿ ಪಡಿಸುವುದು.
* ಪ್ರಸಿದ್ಧ ದೇವಾಲಯಗಳನ್ನು ನೈರ್ಮಲ್ಯೀಕರಣ ಗೊಳಿಸಬೇಕು.
* ಐತಿಹಾಸಿಕ ಧಾರ್ಮಿಕ ಕ್ಷೇತ್ರ ಚರಿತ್ರೆ ತಿಳಿಸಲು ವಿಶೇಷ ಗೈಡ್‌ಗಳನ್ನು ನೇಮಕ ಮಾಡಬೇಕು.
* ಪ್ರವಾಸಿಗರ ಜ್ಞಾನಕ್ಕಾಗಿ ಪ್ರಮುಖ ಧಾರ್ಮಿಕ ಪುಣ್ಯಕ್ಷೇತ್ರಗಳ ಜಾತ್ರೆ/ಉತ್ಸವಗಳನ್ನು ಪ್ರವಾಸೋದ್ಯಮ ಪಟ್ಟಿಕೆಗಳನ್ನು ಪ್ರಕಟಿಸಬೇಕು.
* ಧಾರ್ಮಿಕ ಪ್ರವಾಸೋದ್ಯಮ ಕೇಂದ್ರಗಳನ್ನು ಗುರುತಿಸಿ ರಾಜ್ಯ ನಕಾಶೆಯಲ್ಲಿ ಸೇರಿಸುವುದು.
* ಚಿತ್ರೀಕರಣದ ಸಂದರ್ಭದಲ್ಲಿ ಪ್ರಮುಖ ಮೂರ್ತಿ ಶಿಲ್ಪಗಳಿಗೆ ಧಕ್ಕೆಯಾಗದಂತೆ ಜೊತೆಗೆ ಹೆಚ್ಚಿನ ಶುಲ್ಕ ವಿಧಿಸಿ, ಅದರಿಂದ ಪ್ರದೇಶದ ಅಭಿವೃದ್ಧಿ ಮಾಡಬೇಕು.
* ಎಲ್ಲರನ್ನು ಒಳಗೊಂಡ ಅಭಿವೃದ್ಧಿ ಕಾರ್ಯಕ್ರಮವನ್ನು ಪ್ರವಾಸೋದ್ಯಮದಲ್ಲಿ ಅಳವಡಿಸಬೇಕು. ಉದಾ: ಅಂಗವಿಕಲರು, ವಯೋವೃದ್ಧರು.
* ದೇವಾಲಯದ ಆವರಣವು ಅಂದಗೆಡದಂತೆ ಅಲ್ಲಲ್ಲಿ ಸೂಚನಾ ಫಲಕಗಳನ್ನು ಅಳವಡಿಸುವುದು.

## ಉಪಸಂಹಾರ

ನಾಡಿನ ಪ್ರವಾಸೋದ್ಯಮದ ಚರಿತ್ರೆ ಪ್ರವಾಸಿಗರ ಮನರಂಜನೆಗೆ ಇಲ್ಲವೆ ತಮ್ಮ ನೋವುಗಳನ್ನು ಮರೆತು ತಮ್ಮ ಸಂತೋಷಕ್ಕಾಗಿ ಕೈಗೊಂಡ ಯಾತ್ರಾಸ್ಥಳವಾಗಿರದೆ ನಮ್ಮ ಮನಸ್ಸಿನ ಆಹ್ಲಾದಕರವನ್ನುಂಟು ಮಾಡುವ ಧಾರ್ಮಿಕ ಕೇಂದ್ರಗಳು ಐತಿಹಾಸಿಕವಾಗಿ, ನೈಸರ್ಗಿಕವಾದ ಸಂಗ್ರಹಾ ಲಯಗಳು, ಪ್ರಾಣಿ ಸಂಗ್ರಹಾಲಯಗಳು, ಪ್ರಾಚ್ಯ ವಸ್ತು ಸಂಗ್ರಹಾಲಯಗಳು, ದೇವಾಲಯಗಳು, ಶಾಸನಗಳು, ಕೋಟೆ-ಕೊತ್ತಲಗಳು, ವಾಡಗಳು, ಅರಮನೆಗಳು ಸಹ ಇಂದಿನ ಪ್ರವಾಸೋದ್ಯಮದ ಬೆಳವಣಿಗೆಯಲ್ಲಿ ಹೆಚ್ಚಿನ ಗುರಿಯನ್ನುಂಟು ಮಾಡಬಲ್ಲವುಗಳಾಗಿವೆ ಎಂಬುದನ್ನು ದೇಶದ ಗೋಳಗುಮ್ಮಟ, ತಾಜಮಹಲ್, ಅಲ್ಹಾಬಾದ್ ಶಾಸನ, ಹಲ್ಮಿಡಿ, ಕಪ್ಪೇಅರಭಟ್ಟನ

ಶಾಸನ, ಲುಂಬಿನಿವನದ ಶಾಸನಗಳು, ಕೊಲ್ಲಾಪುರ ಕೋಟೆ, ವಿಜಯಪುರದ ಕೋಟೆ, ತ್ರಿಕೋಟಾದ ವಾಡೆ, ಕೆರೆ–ಬಾವಿ, ಗುಡಿ–ಗುಂಡಾರದಂತಹ ಪೌರಾಣಿಕ ಮತ್ತು ಐತಿಹಾಸಿಕ ಪ್ರಾಚ್ಯವಸ್ತುಗಳು ಮತ್ತು ಧಾರ್ಮಿಕ ಕೇಂದ್ರಗಳು ಸಹ ಇಂದಿನ ಪ್ರವಾಸೋದ್ಯಮದ ಕೇಂದ್ರವಾಗಿ ಮಹತ್ವದ ಪಾತ್ರ ವಹಿಸಿವೆ ಎಂಬುದನ್ನು ಸಂಶೋಧನಾತ್ಮವಾಗಿ ಅಧ್ಯಯನದ ಮೂಲಕ ನಮ್ಮ ನಾಡಿಗೆ ಪರಿಚಯಿಸುವುದು ಅತ್ಯವಶ್ಯಕವಾಗಿದೆ.

## ಆಧಾರಸೂಚಿ


೧. ಎಸ್.ಎನ್. ಶಿವರುದ್ರಸ್ವಾಮಿ, ಭಾರತೀಯ ಪ್ರವಾಸೋದ್ಯಮ, ಪೌರಾಸ್ತ್ಯ ಪ್ರಕಾಶನ, ಬೆಂಗಳೂರು, ೨೦೦೫, ಪು.ಸಂ. ೧.

೨. ಸುರೇಶ ಭಿ. ಹೂಗಾರ, ಕರ್ನಾಟಕದ ಪ್ರಮುಖ ಐತಿಹಾಸಿಕ ಸ್ಥಳಗಳು, ವಾಸನ್ ಪಬ್ಲಿಕೇಷನ್, ೨೦೧೦, ಪು.ಸಂ. ೩೭.

೩. ವಸಂತಿ ಚಂದ್ರ, ಪುಣ್ಯಭೂಮಿ ಭಾಗ–೨. ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು, ಪು.ಸಂ. ೧೬೩.

೪. ವಿ.ಎಸ್. ಕುಮಾರ, ನೋಡೋಣ ಬನ್ನಿ ಕನ್ನಡ ನಾಡು, ಸುಧಾ ಎಂಟರಪ್ರೈಸಸ್, ಬೆಂಗಳೂರು, ೨೦೧೨, ಪು.ಸಂ. ೨೦೨.

೫. ಎ.ವಿ. ಶಂಕರನಾರಾಯಣರಾವ್, ಇದು ಕರ್ನಾಟಕ, ಸಮರ್ಥ ಪ್ರಕಾಶನ, ಬೆಂಗಳೂರು, ೨೦೧೦, ಪು.ಸಂ. ೭೯.

೬ ವಿ.ಎಸ್. ಕುಮಾರ, ನೋಡೋಣ ಬನ್ನಿ ಕನ್ನಡ ನಾಡು, ಸುಧಾ ಎಂಟರಪ್ರೈಜಿಸ್, ಬೆಂಗಳೂರು, ೨೦೧೨, ಪು.ಸಂ. ೧೮೮.

೬೨

# ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ಮೈಸೂರು ಒಡೆಯರ ಕೊಡುಗೆಗಳು (ಕ್ರಿ.ಶ. ೧೬೧೦ರಿಂದ ೧೮೮೧)

**ಆರ್.ಎನ್. ರಶ್ಮಿ***

ಶ್ರೀರಂಗಪಟ್ಟಣ ಇಂದಿನ ಮಂಡ್ಯ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದು, ಜಿಲ್ಲಾ ಕೇಂದ್ರ ಮಂಡ್ಯದಿಂದ ೨೬ ಕಿ.ಮೀ. ಇದ್ದು, ಕಾವೇರಿ ನದಿಯ ಎರಡು ಸೀಳುಗಳಿಂದ ರೂಪುಗೊಂಡಿರುವ ದ್ವೀಪಪಟ್ಟಣವಾಗಿದೆ. ಇದು ಶ್ರೀವೈಷ್ಣವರ ಪ್ರಮುಖ ಸ್ಥಳಗಳಲ್ಲಿ ಒಂದಾಗಿದ್ದು ಹಲವು ನಾಮಧೇಯಗಳನ್ನು ಪಡೆದುಕೊಂಡಿದೆ. ಆದಿರಂಗ, ಮಧ್ಯರಂಗ, ಅಂತ್ಯರಂಗಗಳೆಂಬ ರಂಗತ್ರಯಗಳಲ್ಲಿ ಮೊದಲಿನದೇ ಇದಾಗಿರುವುದರಿಂದ 'ಆದಿರಂಗ' ಎಂಬ ಹೆಸರು ಇದಕ್ಕಿದ್ದು, ಪ್ರಾಚೀನ ಶಾಸನಗಳಲ್ಲಿ 'ಶ್ರೀರಂಗಪುರ', 'ತಿರುವರಂಗ ನಾರಾಯಣ ಚತುರ್ವೇದಿ ಮಂಗಲ', 'ಗೌತಮಕ್ಷೇತ್ರ', 'ಉಭಯಕಾವೇರಿ ಮಧ್ಯವರ್ತಿ'[೧] ಎಂದೆಲ್ಲಾ ಉಲ್ಲೇಖಗೊಂಡಿದೆ. ಸಂಸ್ಕೃತ ಕವಿ ಅವಿನಾಶೀಶ್ವರನು ಇದನ್ನು 'ಕರಿವರದರಾಜಪುರ'[೨] ಎಂದು ಕರೆದಿದ್ದರೆ, ಬ್ರಿಟೀಷ್ ದಾಖಲೆಗಳಲ್ಲಿ ಇದು 'ಸೆರಿಂಗಪಟಮ್'[೩] ಎಂದಿದೆ. ಮಧ್ಯರಂಗ ಮತ್ತು ಅಂತ್ಯರಂಗಗಳಿಗೆ ಶ್ರೀರಂಗಪಟ್ಟಣವು ಪಶ್ಚಿಮಕ್ಕಿರುವುದರಿಂದ ಇದು ಪಶ್ಚಿಮರಂಗಕ್ಷೇತ್ರವೆಂದು ಸಹ ಪ್ರಸಿದ್ಧಿಯಾಗಿದೆ.[೪]

ಶ್ರೀರಂಗಪಟ್ಟಣವು ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರಾಜವಂಶಗಳ ಆಡಳಿತಕ್ಕೆ ಒಳಪಟ್ಟು, ದಟ್ಟವಾದ ಕಾಡಿನಂದ ಆವೃತವಾಗಿದ್ದು ಒಂದು ಸಣ್ಣ ಊರಾಗಿತ್ತು. ಇಲ್ಲಿನ ರಂಗನಾಥ ದೇವಾಲಯವು ನಿರ್ಮಾಣಗೊಂಡ ಅಥವಾ ಪ್ರತಿಷ್ಠೆಗೊಂಡ ಖಚಿತವಾದ ತೇದಿ ತಿಳಿದು ಬರುವುದಿಲ್ಲ. ಆದರೆ ಸಾಹಿತ್ಯಾಧಾರಗಳು ಕ್ರಿ.ಶ.೮೯೪ರಲ್ಲಿ ಗಂಗರ ದಂಡನಾಯಕ ತಿರುಮಲಯ್ಯ ಅದನ್ನು ಒಂದು ಪ್ರಾಂತ್ಯವನ್ನಾಗಿ ಮಾಡಿಕೊಂಡು ಶ್ರೀರಂಗನಾಥನ ನವರಂಗ ಮಂಟಪ ಮತ್ತು ತಿರುಮಲದೇವ ದೇವಸ್ಥಾನಗಳನ್ನು ಪುನರ್‌ರಚಿಸಿ ಗೌತಮಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದ್ದ ಶ್ರೀರಂಗಪಟ್ಟಣಕ್ಕೆ 'ಶ್ರೀರಂಗಪುರ' ಎಂದು ನಾಮಕರಣ ಮಾಡಿ ಆಳ್ವಿಕೆ ನಡೆಸತೊಡಗಿದನು.[೫] ಅದಕ್ಕೂ ಹಿಂದೆ ೮೧೭ರಲ್ಲೇ ಹಂಬಿಯೆಂಬ ನಾಟ್ಯರಾಣಿಯು ರಂಗನಾಥನ ಗರ್ಭಗೃಹವನ್ನು ಕಟ್ಟಿಸಿದ್ದಳೆಂಬ ವಿಚಾರವೂ ಇದೆ.[೬] ನಂತರ ಈ ದೇವಾಲಯವು ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಹೈದರ್ ಮತ್ತು ಟಿಪ್ಪುಸುಲ್ತಾನ್ ಹಾಗೂ ಬ್ರಿಟಿಷರನ್ನು ಒಳಗೊಂಡಂತೆ ಮೊದಲಾದವರ ಆಶ್ರಯ ಪಡೆದು ಜೀರ್ಣೋದ್ಧಾರಗೊಂಡಿದೆ.

ಇಲ್ಲಿನ ಸುಪ್ರಸಿದ್ಧವಾದ ರಂಗನಾಥಸ್ವಾಮಿ ದೇವಾಲಯದ ಗರ್ಭಗೃಹದಲ್ಲಿ ಅನಂತಶಯನ ಭಂಗಿಯಲ್ಲಿ ರಂಗನಾಥ ಸ್ವಾಮಿಯು ಏಳು ತಲೆಯ ಆದಿಶೇಷನ ಮೇಲೆ ಬಲಮಗ್ಗುಲಾಗಿ, ಬಲಗೈ ಮೇಲೆ ತಲೆಯೂರಿ, ದೇಹದ ಮೇಲೆ ಎಡಗೈಯನ್ನು ನೀಳವಾಗಿ ಪವಡಿಸಿರುವ ವಿಗ್ರಹವಿದೆ. ಪದತಲದಲ್ಲಿ ಆರಾಧನಾ ಭಂಗಿಯ ಕಾವೇರಿ ಹಾಗೂ ಗೌತಮ ಮುನಿಯ ಕಿರುಶಿಲ್ಪಗಳಿವೆ. ಗರ್ಭಗೃಹದ ದ್ವಾರ ಬಂಧ ಆಕರ್ಷಕವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ, ಇಕ್ಕೆಲಗಳಲ್ಲಿ ದ್ವಾರಪಾಲಕರಿದ್ದಾರೆ. ಈ ದೇವಾಲಯವು ನಾಗಮಂಗಲ ರಾಜ್ಯದ ಪ್ರಭು ಸಾಮಂತ ತಿಮ್ಮಣ್ಣ ದಂಡನಾಯಕನ ಕಾಲದಲ್ಲಿ (ಕ್ರಿ.ಶ. ೧೪೫೮) ನೂತನ ಸೇರ್ಪಡೆಗಳೊಂದಿಗೆ ವಿಸ್ತಾರಗೊಂಡು ಮತ್ತಷ್ಟು ಮಹತ್ವ ಪಡೆಯಿತು.[೭] ವಿಜಯನಗರದ ಅರಸರ ಕಾಲದಲ್ಲಿ ರಂಗನಾಯಕಿ ಅಮ್ಮನವರ ಗುಡಿ ಸೇರ್ಪಡೆಗೊಂಡು ಅದರ ಮೊದಲ ಉಲ್ಲೇಖ ಶ್ರೀರಂಗಪಟ್ಟಣದ ಕ್ರಿ.ಶ. ೧೫೨೮ರ ಶಾಸನದಲ್ಲಿ ಕಂಡು ಬರುತ್ತದೆ.[೮] ಈ ದೇವಾಲಯದ ಪ್ರಾಕಾರವು ಭವ್ಯವಾದ ೫ ಅಂತಸ್ತಿನ ರಾಯಗೋಪುರವನ್ನು ಹೊಂದಿದ್ದು ಸುಮಾರು ೧೭ನೆಯ ಶತಮಾನದ ರಚನೆಯಂತೆ ತೋರುತ್ತದೆ.[೯] ಗುಡಿಯ ಹೊರ ಪ್ರಾಕಾರದಲ್ಲಿ ಗರುಡ, ಸೂರ್ಯನಾರಾಯಣ, ಲಕ್ಷ್ಮೀನರಸಿಂಹ, ಕೋದಂಡರಾಮ, ಗಜೇಂದ್ರ ವರಪ್ರಸಾದ, ಪ್ರಸನ್ನ ವೆಂಕಟರಮಣ, ಹನುಮಂತಾದಿ ದೇವತೆಗಳ ಪ್ರತ್ಯೇಕ ಗುಡಿಗಳಿದ್ದು, ಒಳಗೆ ಭವ್ಯ ಮೂರ್ತಿಗಳಿವೆ. ಅಲ್ಲದೆ ಶ್ರೀವೈಷ್ಣವ ಆಚಾರ್ಯರ ಹಾಗೂ ಆಳ್ವಾರ ಶಿಲ್ಪಗಳೂ ಇವೆ.

* ಸಂಶೋಧನಾ ವಿದ್ಯಾರ್ಥಿ, ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ.

ವಿಜಯನಗರದ ನಂತರ ಕಾಲದಲ್ಲಿ ಮುಖಮಂಟಪ ನಿರ್ಮಾಣವಾಗಿದೆ. ಇಲ್ಲಿರುವ ಕಂಬಗಳ ರಚನೆಯು ಸುಂದರವಾಗಿದೆ. ಎತ್ತರದ ಕಂಬಗಳಿರುವ ಪಾತಾಳಾಂಕಣವು ಹೈದರಾಲಿಯ ಕಾಲದಲ್ಲಿ ನಿರ್ಮಾಣವಾಗಿದೆ. ಮಹಾದ್ವಾರದ ಗೋಪುರವು ವಿಜಯನಗರ ಶೈಲಿಯಲ್ಲಿರುವುದು ಕಂಡು ಬರುತ್ತದೆ. ಪ್ರಸ್ತುತ ಲೇಖನದಲ್ಲಿ ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ಮೈಸೂರಿನ ಒಡೆಯರು ಹಾಗೂ ಆಳುವ ವರ್ಗದವರು ನೀಡಿರುವ ದೇವದಾಯಗಳ ಬಗೆಗೆ ಗಮನ ಹರಿಸಲಾಗಿದೆ.

ದೇವತೆಗಳಿಗೂ ದೇವಾಲಯಗಳಿಗೂ ಧಾನವನ್ನು ಕೊಡುವ ಪ್ರಾಚೀನ ಪದ್ಧತಿಯನ್ನು ಮೈಸೂರಿನ ಒಡೆಯರು ಕ್ರಿ.ಶ. ೧೬೧೦ ರಿಂದ ೧೮೮೧ರ ವರೆಗಿನ ಈ ಅವಧಿಯಲ್ಲಿ ಮುಂದುವರಿಸಿದ್ದರು. ನಿರ್ದಿಷ್ಟ ದೇವಾಲಯಗಳಿಗೆ ದಾನ ನೀಡುವುದೆಂದರೆ ಅಲ್ಲಿನ ದೇವರಿಗೂ ದೇವಾಲಯಕ್ಕೂ ಭಕ್ತಿ-ಶ್ರದ್ಧೆ ತೋರುವುದು ಎಂದರ್ಥವಾಗುತ್ತಿತ್ತು. ಆದರೆ ಕೆಲವೊಮ್ಮೆ ಸಮಾಜದಲ್ಲಿ ಪ್ರಭಾವಶಾಲಿಯಾಗಿದುದ್ದರಿಂದ ಕೆಲವು ದೇವಾಲಯಗಳು ಪ್ರಾಮುಖ್ಯತೆ ಪಡೆದಿದ್ದವು. ಆದ್ದರಿಂದ ಆ ದೇವಾಲಯಗಳಿಗೆ ದಾನ ಕೊಡುವುದೆಂದರೆ, ಸಮಾಜದ ಜನರ ಮನಸ್ಸಿನಲ್ಲಿ ಆಳುವ ಗಣ್ಯರು ಒಂದು ಹಿತಕರವಾದ ಅಭಿಪ್ರಾಯವನ್ನು ಸೃಷ್ಟಿಸುವುದು ಎಂದಾಗಿತ್ತು. ಈ ದೃಷ್ಟಿಯಿಂದ ಈ ಲೇಖನದ ಅಧ್ಯಯನದ ಅವಧಿಯಲ್ಲಿ ದೇವದಾಯಗಳನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸ ಲಾಗಿದೆ.

ಒಡೆಯರ ವಂಶದ ಚರಿತ್ರೆ ಸ್ಪಷ್ಟವಾಗಿ ಪ್ರಾರಂಭ ವಾಗುವುದು ರಾಜ ಒಡೆಯರ ಕಾಲದಿಂದ ಕ್ರಿ.ಶ.೧೬೧೦ರಲ್ಲಿ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ವಶಪಡಿಸಿ ಕೊಳ್ಳುವುದರೊಂದಿಗೆ ವಿಜಯನಗರದ ಸಾರ್ವಭೌಮಾಧಿ ಕಾರವನ್ನು ಕಿತ್ತೊಗೆದು ಸ್ವತಂತ್ರರಾದರು. ನಂತರವೇ ಒಡೆಯರು ತಮ್ಮ ಸಂಸ್ಥಾನದ ದೇವಾಲಯಗಳ ಅಭಿವೃದ್ಧಿಯ ಕಡೆ ಗಮನಹರಿಸಿರುವುದು ಕಂಡುಬರುತ್ತದೆ.

ವಿಜಯನಗರದ ಶ್ರೀರಂಗನ ಅಳಿಯನಾದ ಜಗದೇವ ರಾಯ ಚೆನ್ನಪಟ್ಟಣವನ್ನು ಕೇಂದ್ರವಾಗಿ ಮಾಡಿಕೊಂಡು ಆಳುತ್ತಿದ್ದನು. ಈ ಜಗದೇವರಾಯನಿಗೆ ಸೇರಿದ ಹಲವಾರು ಸ್ಥಳಗಳನ್ನು ರಾಜಒಡೆಯರ್ ವಶಪಡಿಸಿಕೊಂಡಿದ್ದು, ಅಲ್ಲದೆ ಜಗದೇವನ ದಂಡನಾಯಕರಲ್ಲಿ ಮೊದಲಿಗನಾದ 'ಅದಟರಾಯ'ನ ಅರಕೆರೆಯನ್ನು ಕೊಳ್ಳೆ ಹೊಡೆದು ತಂದ ಆಭರಣಗಳನ್ನು ಶ್ರೀರಂಗಪಟ್ಟಣದ ರಂಗನಾಥನಿಗೆ ಅರ್ಪಿಸಿ ತಂದ ಹಣದಿಂದ ಕಲ್ಲುಪ್ರಾಕಾರವನ್ನು ಕಟ್ಟಿಸಿದ ಉಲ್ಲೇಖ ಚಿಕ್ಕದೇವರಾಜವಂಶಾವಳಿಯಲ್ಲಿದೆ. ಅಲ್ಲದೆ ರಾಜ ಒಡೆಯರು ವಿಸ್ತರಿಸಿದ ಕಳಸ್ತವಾಡಿ ಕೆರೆಯ ಕೆಳಗಿದ್ದ ೫೦ ಖಂಡುಗ ಭತ್ತವನ್ನು ಕೊಡುವ ಭೂಮಿಯನ್ನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯಕ್ಕೆ ನೀಡಿದರು.[೧೦]

ವಂಶರತ್ನಾಕರ ಹಾಗೂ ದಿ ಆನಲ್ಸ್ ಆಫ್ ಮೈಸೂರು ರಾಯಲ್ ಫ್ಯಾಮಿಲಿಗಳ ಪ್ರಕಾರ ಕಂಠೀರವ ನರಸರಾಜರು ಶ್ರೀರಂಗಪಟ್ಟಣದಲ್ಲಿ ರಂಗನಾಥಸ್ವಾಮಿಯ ಗಜೇಂದ್ರಮೋಕ್ಷ ಉತ್ಸವಕ್ಕಾಗಿ ಶುಕತೀರ್ಥವೆಂಬ ಕೊಳವನ್ನು ನಿರ್ಮಿಸಿದರು. ಅಲ್ಲಿಯ ಗೋಪುರಗಳನ್ನು, ಮಂಟಪಗಳನ್ನು, ಹೊರಗಿನ ಮತ್ತು ಒಳಗಿನ ಗೋಡೆಗಳನ್ನು ವಿಸ್ತರಿಸಿದರು; "ವೈಕುಂಠ ಮುಡಿ" ಎಂಬ ಹೆಸರಿನ ಒಂದು ರತ್ನ ಖಚಿತ ಕಿರೀಟವನ್ನು ರಂಗನಾಥಸ್ವಾಮಿಗೆ ಅರ್ಪಿಸಿದರೆಂದು ತಿಳಿದು ಬರುತ್ತದೆ. ಅಲ್ಲದೆ ನರಸರಾಜರು ಗೌತಮ ಕ್ಷೇತ್ರದಲ್ಲಿ ಕಾವೇರಿಗೆ ಅಡ್ಡಲಾಗಿ ಒಂದು ಅಣೆಕಟ್ಟು ನಿರ್ಮಿಸಿದರು. ಇದರ ಮೂಲಕ ನೀರಾವರಿ ಬೇಸಾಯದಿಂದ ಬಂದ ಬೆಳೆಗಳನ್ನು ಶ್ರೀರಂಗ ಪಟ್ಟಣದ ರಂಗನಾಥಸ್ವಾಮಿಯ ಸೇವೆಗೆಂದು ಮೀಸಲಾಗಿರಿ ಸಿದರು.[೧೧]

ಕಂಠೀರವ ನರಸರಾಜರ ಗಾಂಧರ್ವ ಪತ್ನಿಯವರಾದ ದೊಡ್ಡಾಜಮ್ಮನವರ ಹೆಸರಿನಲ್ಲಿ 'ಬಂಗಾರ ದೊಡ್ಡಿ ಕಾಲುವೆ' ನಿರ್ಮಿಸಿ, ಅದರ ಕೆಳಗೆ ಬೆಳೆದ ಭತ್ತ, ಕಬ್ಬು ಮುಂತಾದವು ಗಳನ್ನು ರಂಗನಾಥಸ್ವಾಮಿ ದೇವಸ್ಥಾನಕ್ಕೆ ಕೊಡುವಂತೆ ಕಟ್ಟಳೆಯನ್ನು ಮಾಡಿದರು.[೧೨] ದೊಡ್ಡದೇವರಾಜ ಒಡೆಯರ್ ರವರು ತಮ್ಮ ಪೂರ್ವದ ಸೀಮೆಗಳ ಮತ್ತು ತಾವು ಸಾಧಿಸಿದ ಸೀಮೆಗಳ ಆದಾಯ ವ್ಯಯಗಳನ್ನು ನೋಡಿಕೊಂಡು ಬೊಕ್ಕಸದಲ್ಲಿ ಸಲ್ಲಿಸತಕ್ಕ ದ್ರವ್ಯಗಳನ್ನು ನಿಲ್ಲಿಸಿ 'ಷೋಡಶ ಮಹಾದಾನ'ಗಳನ್ನು ಮಾಡಬೇಕೆಂದು ಸಂಕಲ್ಪಿಸಿ ಆಯಾ ಪುಣ್ಯ ಕಾಲದಲ್ಲಿ ವರ್ಷಕ್ಕೆ ಎರಡೂ ಮೂರರ ಮೇರೆಗೆ ರಂಗನಾಥಸ್ವಾಮಿ ಸನ್ನಿಧಿಯಲ್ಲಿ ಪ್ರತ್ಯೇಕವಾಗಿ

೧. ತುಲಾ ಪುರುಷದಾನ
೨. ಹಿರಣ್ಯಗರ್ಭದಾನ
೩. ಬ್ರಹ್ಮಾಂಡದಾನ
೪. ಕಲ್ಪವೃಕ್ಷದಾನ
೫. ಗೋಸಹಸ್ರದಾನ
೬. ಹಿರಣ್ಯ ಕಾಮಧೇನು ದಾನ
೭ ಹಿರಣ್ಯಾಶ್ವದಾನ
೮. ಹಿರಣ್ಯಾಶ್ವರ ದಾನ
೯. ಹೇಮಹಸ್ತಿರಥದಾನ
೧೦. ಪಂಚಲಾಂಗಲದಾನ

೧೧. ಧರದಾನ
೧೨. ವಿಶ್ವಚಕ್ರದಾನ
೧೩. ಕಲ್ಪಲತಾ ದಾನ
೧೪. ಸಪ್ತಸಾಗರ ದಾನ
೧೫. ರತ್ನಧೇನುದಾನ
೧೬. ಮಹಾಭೂತ ಘಟದಾನ

ಈ ಮೇರೆಗೆ ಷೋಡಶ ಮಹಾದಾನಗಳನ್ನು ಶಾಸ್ತ್ರಕ್ಕೆ ಸ್ವಲ್ಪವೂ ನ್ಯೂನತೆ ಇಲ್ಲದಂತೆ ಮಾಡಿ ಸತ್ಕೀರ್ತಿಯನ್ನು ಪಡೆದರು.[೧೨]

ನಂತರದ ಒಡೆಯರಾದ ದೇವರಾಜ ಒಡೆಯರು ಕಂಠೀರವರಂತೆಯೇ ನಿಷ್ಠಾವಂತ ವೈಷ್ಣವರಾಗಿದ್ದರು. ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯ ವಿಶೇಷ ಭಕ್ತರಾಗಿದ್ದರು. ದೇವರಾಜ ಒಡೆಯರು ವೈಷ್ಣವ ದೇವಾಲಯಗಳಿಗೆ ಅರ್ಪಿಸಿದ ದೇವದಾಯಗಳಲ್ಲಿ ಶ್ರೀರಂಗಪಟ್ಟಣದ ರಂಗನಾಥ ದೇವಾಲಯವು ಒಂದಾಗಿದ್ದು, ಕ್ರಿ.ಶ. ೧೬೬೭ ಜೂನ್ ೨೨ರಂದು ತಮ್ಮ ತುಗಳಾಣ್ಯ ವಿಜಯದ ಸಂದರ್ಭದಲ್ಲಿ, ಹನ್ನೊಂದು ಗ್ರಾಮಗಳನ್ನು ಅರ್ಪಿಸಿದರು.[೧೪]

ದೇವರಾಜ ಒಡೆಯರ ಕಾಲಕ್ಕೆ ಸೇರಿದ ಮತ್ತೊಂದು ಶಾಸನ ಶ್ರೀರಂಗಪಟ್ಟಣದಲ್ಲಿ ದೊರೆತಿದೆ. ಈ ದೇವರಾಜ ಒಡೆಯರು ಕಂಠೀರವ ನರಸರಾಜನ ಚಿಕ್ಕಪ್ಪನಾದ ಮುಪ್ಪಿನ ದೇವರಾಜನ ಮೂರನೆಯ ಮಗ. ಈತನನ್ನು ಕೆಂಪದೇವನೆಂದು ಕರೆಯಲಾಗುತ್ತಿತ್ತು. ಈ ರಾಜಕುಮಾರನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೂ ಮತ್ತು ರಂಗನಾಯಕಿ, ಶ್ರೀಪಾದದ ಅಮ್ಮ, ಉಭಯ ನಾಚಿಯರ್ ದೇವಿಗಳಿಗೂ ಪ್ರತಿದಿನ ಮಾಲೆಯ ಸೇವೆಯನ್ನು ನಡೆಸಲು ಶ್ರೀರಂಗದ ಮೊದಲಿ ಅಂಡಾನ್ ಸಂಬಂಧಿಗಳಾದ ಆರಜನ ಶ್ರೀವೈಷ್ಣವ ಕುಟುಂಬದವರಿಗೆ ವೀರಾಂಬುಧಿ ಸ್ಥಳದಲ್ಲಿರುವ ಅಲ್ಲಪ್ಪನಹಳ್ಳಿ ಎಂಬ ಗ್ರಾಮವನ್ನು ಶ್ರೀನಿವಾಸಯ್ಯಂಗಾರನಿಂದ ಕ್ರಯವಾಗಿ ಪಡೆದು ದಾನ ಮಾಡಿದನೆಂದು ಶಾಸನ ತಿಳಿಸುತ್ತದೆ.[೧೫]

ಚಿಕ್ಕದೇವ ಮಹಾರಾಜ ಒಡೆಯರ ಕಾಲಕ್ಕೆ ಸೇರಿದ ಶಾಸನವೊಂದು ೧೬೮೬ ನವೆಂಬರ್ ೧೯ರಂದು, ಚಿಕ್ಕದೇವರಾಜವೊಡೆಯರ ಮತ್ತು ರಾಣಿಗೆ ಚಿನ್ನದ ಬಟ್ಟಲು ಹಿಡಿಯುವ ಚಲುವಮ್ಮನ ಸೇವಕನಾದ ದೊಡ್ಡದೇವಯ್ಯನು, ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದ ಮಧ್ಯದ ಆವರಣದಲ್ಲಿ ದಕ್ಷಿಣ ಪಾರ್ಶ್ವದಲ್ಲಿ ಸೀತಾಲಕ್ಷ್ಮಣ ಸಮೇತನಾದ ಕೋದಂಡರಾಮ ವಿಗ್ರಹವನ್ನು ಸ್ಥಾಪಿಸಿದನು. ರಾಜರ ಅನುಮತಿ ಪಡೆದು ಈ ದೇವರಿಗೆ ಸೇವೆಗಳು, ನೈವೇದ್ಯ ಮತ್ತು ಶ್ರೀರಾಮನವಮಿಯಂದು ವಿಶೇಷ ಉತ್ಸವ ನಡೆಸುವುದು ಇವುಗಳಿಗಾಗಿ ಅವ್ವೇರಹಳ್ಳಿ ಗ್ರಾಮವನ್ನು ನೀಡಿದನು.[೧೬] ಇಮ್ಮಡಿ ಕೃಷ್ಣರಾಜ ಒಡೆಯರ ಅಧೀನ ಅಧಿಕಾರಿಯಾದ ದೇವರಾಜಯ್ಯನು ಕ್ರಿ.ಶ. ೧೭೪೭ ಏಪ್ರಿಲ್ ೬ ರಂದು ಶ್ರೀರಂಗಪಟ್ಟಣದ ರಂಗನಾಥ ದೇವಾಲಯದಲ್ಲಿ ಸೀತಾವಿಲಾಸ ಎಂಬ ಹೆಸರಿನ ಎರಡು ಮಹಡಿಯ ರಂಗಮಂಟಪವೊಂದನ್ನು ನಿರ್ಮಿಸಿದನು.[೧೭] ಚಿಕ್ಕದೇವರಾಜ ಒಡೆಯರ್ ತಮ್ಮ ಕುಲದೇವತೆಯಾದ ಶ್ರೀಚಾಮುಂಡೇಶ್ವರಿ ಅಮ್ಮನವರು, ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿ, ಮೇಲುಕೋಟೆ, ಶ್ರೀರಂಗಪಟ್ಟಣ, ಎಡತೊರೆ, ರಾಮನಾಥಪುರ, ಕರಿಯಘಟ್ಟ ಮುಂತಾದ ತಮ್ಮ ಸೀಮೆಯ ಪುಣ್ಯಕ್ಷೇತ್ರಗಳಲ್ಲಿರುವ ದೇವರುಗಳಿಗೆಲ್ಲಾ ಪೂರ್ವದ ಸೇವೆಗಿಂತಲೂ ಸ್ವನಾಮಾಂಕಿತವಾಗಿ ಅಧಿಕ ಸೇವೆಯು ನಡೆಯುವಂತೆಯೂ ಕಟ್ಟಳೆ ಮಾಡಿದರು.[೧೮]

ಒಡೆಯರುಗಳ ಜೊತೆಗೆ ಸಮಾಜದ ಇತರ ಸ್ತರದ ಜನರು ಸಹ ರಂಗನಾಥ ದೇವಾಲಯದ ಅಭಿವೃದ್ಧಿಗೆ ಸಹಕಾರಿಯಾಗಿದ್ದು, ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಪಾದಸೇವಕ ದೊಡ್ಡಯ್ಯನು ಅಲ್ಲಿನ ಶ್ರೀವೆಂಕಟರಮಣಸ್ವಾಮಿ ದೇಗುಲದಲ್ಲಿ ಧ್ವಜಸ್ತಂಭವನ್ನು ನೆಡಿಸಿದನು. ಶ್ರೀರಂಗಪಟ್ಟಣದ ಪಶ್ಚಿಮ ರಂಗನಾಥಸ್ವಾಮಿಯವರ ಸನ್ನಿಧಿಗೆ ಈಶಾನ್ಯ ಭಾಗದಲ್ಲಿ ಸ್ವಾಮಿಯವರ ನಿತ್ಯಕಟ್ಲೆ ತಿರುಮಂಜನ ಕೈಂಕರ್ಯಗಳಿಗೂ ಸಕಲ ಬ್ರಾಹ್ಮಣರುಗಳ ಸ್ನಾನಪಾನಾದಿಗಳಿಗೂ ಉಪಯುಕ್ತವಾಗಲೆಂದು ವೇದಪುಷ್ಕರಣಿ ಎಂಬ ಕೊಳವನ್ನು ಅಮರಂ ಬೋದು(ಬೇಡು) ಗ್ರಾಮದ ನಲ್ಲತಂಬಿ ಮೊದಲಿಯು ಕ್ರಿ.ಶ. ೧೮೦೦ರಲ್ಲಿ ಕಟ್ಟಿಸಿದನು.[೧೯]

ಮೈಸೂರು ಸಂಸ್ಥಾನವು ಬ್ರಿಟೀಷ್ ಕಮಿಷನರುಗಳ ಆಳ್ವಿಕೆಗೆ ಒಳಪಟ್ಟ ನಂತರ ಈ ದೇವಾಲಯಕ್ಕೆ ಒಡೆಯರ ಮನೆತನದಿಂದ ಲಭಿಸುತ್ತಿದ್ದ ದಾನ ಕಡಿಮೆಯಾಗುತ್ತಾ ಬಂದಿತು. ಆ ಸಂದರ್ಭದಲ್ಲಿ ದೇವಾಲಯಗಳನ್ನು ಮುಜರಾಯ್ ಇಲಾಖೆಗೆ ಸೇರಿಸಿದುದು ಸಹ ಕಾರಣವಾಗಿ ಮೇಲ್ನೋಟಕ್ಕೆ ಕಂಡುಬರುತ್ತದೆ. ಈ ಅಂಶಗಳಿಂದ ದೇವದಾನ ತನ್ನ ಮೊದಲಿನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳಲು ಕಾರಣಗಳಾಗಿದ್ದವೆಂಬುದರಲ್ಲಿ ಸಂಶಯವಿಲ್ಲ. ಒಟ್ಟಾರೆಯಾಗಿ ಒಡೆಯರ ಕಾಲದಲ್ಲಿ ಮೇಲುಕೋಟೆಯ ದೇವಾಲಯಗಳು ಅವರ ಉದಾರ ಆಶ್ರಯ ಪಡೆದು ಅಭಿವೃದ್ಧಿ ಹೊಂದಿದವು.

## ಆಧಾರಸೂಚಿ


೧. ಪಾರ್ಥಸಾರಥಿ ಟಿ.ಎ. (ಸಂ). 'ಮಂಡ್ಯ ಜಿಲ್ಲಾ ಗ್ಯಾಸೆಟಿಯರ್', ಪರಿಷ್ಕೃತ ಆವೃತಿ, ಕರ್ನಾಟಕ ಗೆಜೆಟಿಯರ್ ಇಲಾಖೆ ಬೆಂಗಳೂರು, ೨೦೦೩, ಪು. ೯೬೮.

೨. ಅನಂತರಾಮು ಕೆ., 'ಸಕ್ಕರೆ ಸೀಮೆ', ಅನಂತ ಪ್ರಕಾಶನ, ಮೈಸೂರು, ೧೯೮೨, ಪು. ೩೫೦.

೩. ಪಾರ್ಥಸಾರಥಿ ಟಿ.ಎ. (ಸಂ). ಮೇಲೆ ಉದ್ಧರಿಸಿದ ಗ್ರಂಥ, ಪು. ೯೬೮.

೪. ಅನಂತರಾಮು ಕೆ., ಮೇಲೆ ಉದ್ಧರಿಸಿದ ಗ್ರಂಥ, ಪು. ೩೫೦.

೫. ತಿಮ್ಮಕವಿ, ಎಂ.ಪಿ. ಮಂಜಪ್ಪಶೆಟ್ಟಿ (ಸಂ), 'ಪಶ್ಚಿಮರಂಗಮಹತ್ಮೆ ಮತ್ತು ಚಿಕ್ಕದೇವರಾಜ ವಂಶಾವಳಿ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೮೦.

೬. ಅನಂತರಾಮು ಕೆ., ಮೇಲೆ ಉದ್ಧರಿಸಿದ ಗ್ರಂಥ, ಪು. ೩೫೦.

೭. ಸ್ವಾಮಿ ಎಲ್.ಎನ್. ಹಿಸ್ಟರಿ ಆಫ್ ಶ್ರೀರಂಗಪಟ್ಟಣ, ಹರ್ಮನ್ ಪಬ್ಲಿಷಿಂಗ್ ಹೌಸ್, ನ್ಯೂ ಡೆಲ್ಲಿ, ೧೯೯೬.

೮. ಪಾರ್ಥಸಾರಥಿ ಟಿ.ಎ. (ಸಂ), ಮೇಲೆ ಉದ್ಧರಿಸಿದ ಗ್ರಂಥ, ಪು. ೯೬೭.

೯. ಅದೇ, ಪು. ೯೬೭.

೧೦. ಸಿ.ಎಚ್. ರಾವ್: 'ಹಿಸ್ಟರಿ ಆಫ್ ಮೈಸೂರು' ಸಂಪುಟ ೧, ಪು. ೭೦-೭೧.

೧೧. ರಾಮಕೃಷ್ಣರಾವ್ ಬಿ. : 'ಶ್ರೀಮನ್ಮಹಾರಾಜ ವಂಶಾವಳಿ', ಭಾಗ ೧, ಗವರ್ನಮೆಂಟ್ ಬ್ರಾಂಚ್ ಪ್ರೆಸ್ ಮೈಸೂರು, ೧೯೧೬, ಪು. ೮೫.

೧೨. ಅದೇ, ಭಾಗ ೧, ಪು. ೯೧.

೧೩. ಅದೇ, ಭಾಗ ೧, ಪು. ೧೦೧.

೧೪. ಸಿ.ಎಚ್. ರಾವ್, ಮೇಲೆ ಉದ್ಧರಿಸಿದ ಗ್ರಂಥ, ಪು. ೨೪೩.

೧೫. ಎ.ಕ. ೬ (ಎನ್.ಎಸ್.) ಪಾಂಪು ೧೪೯.

೧೬. ಎ.ಕ. ೬ (ಎನ್.ಎಸ್.) ಶ್ರೀ.ಪ. ೨೪.

೧೭. ಮೆಕೆಂಜಿ ಸಿರಿಸ್ ಎಮ್.ಎಸ್.ನಂ. ೧೮-೧೫-೨೦, ಪು. ೬೫.

೧೮. ರಾಮಕೃಷ್ಣರಾವ್ ಬಿ., ಮೇಲೆ ಉದ್ಧರಿಸಿದ ಗ್ರಂಥ, ಭಾಗ-೧, ಪು. ೧೪೨.

ಎ.ಕ. ೬ (ಎನ್.ಎಸ್.) ಶ್ರೀ.ಪ. ೧೯, ಕ್ರಿ.ಶ. ೧೮೦೦.



# ಸ್ವಾತಂತ್ರ್ಯಪೂರ್ವ ದಕ್ಷಿಣ ಕನ್ನಡ ಜಿಲ್ಲೆಯ ರಾಜಕೀಯ ಪತ್ರಿಕೆಗಳಲ್ಲಿ ಸಾಮಾಜಿಕ ನಿಲುವುಗಳು

ಸೀತಾರಾಮ.ಪಿ.*

**ಭಾ**ರತವು ೧೯ ಮತ್ತು ೨೦ನೆಯ ಶತಮಾನವು ದೇಶಾದ್ಯಾಂತ ಅನೇಕ ಸಾಮಾಜಿಕ, ಧಾರ್ಮಿಕ ಸುಧಾರಣೆಗಳನ್ನು ಕಾಣುವ ಸುಸಂದರ್ಭವು ಆಗಿದ್ದು ಸಾಮಾಜಿಕ ಅಭಿಪ್ರಾಯಗಳಲ್ಲಿ ಪರ ವಿರೋಧಗಳ ಸಂಘರ್ಷಗಳು ಆಗುವ ಸಂದರ್ಭವು ಆಗಿರುತ್ತದೆ. ರಾಜಾರಾಮ್ ಮೋಹನ್ ರಾಯ್‌ರವರು ಸತಿಸಹಗಮನ ಪದ್ಧತಿ ನಿಷೇಧಕ್ಕೆ ಕಾರಣರಾಗುತ್ತಾರೆ. ಇದು ಹಿಂದೂ ಧರ್ಮದಲ್ಲಿ ಸಮಾಜದಲ್ಲಿ ಸಂಚಲನವನ್ನುಂಟು ಮಾಡುತ್ತದೆ. ಇವರು ಸಾಮಾಜಿಕ, ಧಾರ್ಮಿಕ, ಭೌದ್ಧಿಕ ಮತ್ತು ರಾಜಕೀಯ ಪುನರುತ್ಥಾನಕ್ಕಾಗಿ ನಿರಂತರ ಶ್ರಮಿಸಿದರು.[೧] ಹಾಗೆಯೇ ಇವರು ೧೮೨೮ರಲ್ಲಿ ಸ್ಥಾಪಿಸಿದ ಬ್ರಹ್ಮ ಸಮಾಜವು ಜಾತಿ ಮತ್ತು ಲಿಂಗದ ನೆಲೆಯಲ್ಲಿ ಅಸಮಾನತೆ, ಶೋಷಣೆಗಳನ್ನು ಹೋಗಲಾಡಿಸಲು ಕಾರ್ಯನಿರತವಾಗುತ್ತದೆ. ಹಾಗೆಯೇ ಈ ಶತಮಾನದಲ್ಲಿ ಪ್ರಾರ್ಥನಾ ಸಮಾಜ, ಆರ್ಯ ಸಮಾಜ, ಥಿಯೊಸಾಫಿಕಲ್ ಸೊಸೈಟಿಯಂತಹ ಪ್ರಮುಖ ಸಂಘಟನೆಗಳು ಹುಟ್ಟಿಕೊಂಡು ಸಾಮಾಜಿಕ ಸುಧಾರಣೆಯಲ್ಲಿ ತೊಡಗಿಕೊಳ್ಳುತ್ತವೆ. ಇದರೊಂದಿಗೆ ರಾಷ್ಟ್ರೀಯ ಮಟ್ಟದಲ್ಲಿ ರಾಜಕೀಯ ಮತ್ತು ಸಾಮಾಜಿಕ ವಿಷಯಗಳನ್ನು ಪ್ರತಿಬಿಂಬಿಸಲು 'ಸಂಬಂಧ ಕೌಮುದಿ' ಯಂತಹ ಪತ್ರಿಕೆಗಳು ಹುಟ್ಟಿಕೊಳ್ಳುತ್ತವೆ.[೨] ಇದರಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲು ಸಾಮಾಜಿಕ ಸುಧಾರಕರು ಸಾಮಾಜಿಕ ಸುಧಾರಣೆಯಲ್ಲಿ ತೊಡಗಿಕೊಳ್ಳೋದರ ಜತೆಗೆ ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ವಿಚಾರಗಳನ್ನೊಳಗೊಂಡ ಅನೇಕ ಪತ್ರಿಕೆಗಳು ಕಾಣಿಸಿಕೊಳ್ಳುತ್ತವೆ. ಕರ್ನಾಟಕದ ಮೊಟ್ಟ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ'ವು ಮಂಗಳೂರಲ್ಲಿ ೧೮೪೩ರಲ್ಲಿ ಪ್ರಕಟಗೊಂಡಿದ್ದು, ನೈಜ ಸುದ್ದಿಗಳನ್ನು ಜನರಿಗೆ ತಲುಪಿಸುವ ಉದ್ದೇಶವನ್ನು ಹೊಂದಿತ್ತು. ೧೮೭೦ರಲ್ಲಿ ಇಲ್ಲಿ ಬ್ರಹ್ಮ ಸಮಾಜ ಸ್ಥಾಪನೆ ಆಗುತ್ತದೆ. ಕುದ್ಮಲ್ ರಂಗರಾವ್ ಇದರ ಅನುಯಾಯಿ ಆಗಿದ್ದು ಸಮಾಜಿಕ ಸುಧಾರಣೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

ಭಾರತೀಯರು ಆಂಗ್ಲ ಭಾಷೆಯ ವಿದ್ಯಾಭ್ಯಾಸದ ಸೌಲಭ್ಯವನ್ನು ಪಡೆದು ಪ್ರಥಮ ಬಾರಿಗೆ ಪಾಶ್ಚಿಮಾತ್ಯ ಸಾಹಿತ್ಯ, ತತ್ವ, ಹಾಗೂ ಪ್ರಗತಿಪರ ವಿಚಾರಗಳನ್ನು ಪಡಕೊಂಡು ದೇಶಾದ್ಯಂತ ಬೌದ್ಧಿಕ ಜಾಗೃತಿ ಉಂಟಾಗುತ್ತದೆ. ಈ ಸುಧಾರಣ ಗಾಳಿಯು ದಕ್ಷಿಣ ಕನ್ನಡಕ್ಕೂ ಹರಡಿತು.[೩] ಮಂಗಳೂರು ಸಮಾಚಾರ ಪತ್ರಿಕೆಯು ಹರ್ಮನ್ ಮೊಗ್ಲಿಂಗ್ ನೇತೃತ್ವದಲ್ಲಿ ಬರುತ್ತದೆ. ಈ ಪತ್ರಿಕೆಯು ರಾಜಕೀಯ ಸುದ್ದಿಗಳೊಂದಿಗೆ ಸಾಮಾಜಿಕ ಜವಾಬ್ದಾರಿಯನ್ನು ಅರಿತು ಸಮಾಜದಲ್ಲಿ ಕಲಹ ಉಂಟಾಗದ ರೀತಿಯಲ್ಲಿ ಸುದ್ದಿ ಪ್ರಕಟಣೆ ಮಾಡುತ್ತಿತ್ತು. ಪತ್ರಿಕೆಯ ಒಡೆತನ ಕ್ರೈಸ್ತ ಧರ್ಮದ ಬಾಸೆಲ್ ಮಿಷನರಿ ಸಂಸ್ಥೆಗೆ ಸೇರಿದ್ದು, ಮೊಗ್ಲಿಂಗ್ ಆ ಸಂಸ್ಥೆಯ ಹಿರಿಯ ಪ್ರತಿನಿಧಿಯಾಗಿದ್ದರೂ ಪತ್ರಿಕೆಯನ್ನು ಸ್ವಧರ್ಮ ಪ್ರಚಾರಕ್ಕಾಗಲಿ, ಪರಧರ್ಮ ನಿಂದನೆಗಾಗಲಿ ಬಳಸಿಕೊಂಡಿಲ್ಲ.[೪] ಕ್ರೈಸ್ತರಿಂದ ಭಾರತೀಯ ಮತಾಂತರ ಅಥವಾ ಹಿಂದೂಗಳು ಬೇರೆ ಬೇರೆ ಉದ್ದೇಶದಿಂದ ಇನ್ನೀತರ ಧರ್ಮಗಳಿಗೆ ಮತಾಂತರಗೊಳ್ಳುತ್ತಿದ್ದರು. ಅದರಂತೆ ಸಮಾಜದ ಮೇಲ್ವರ್ಗಕ್ಕೆ ಸೇರಿದ ಆನಂದ ರಾವ್ ಕೌಂಡಿಣ್ಯ ಹಾಗೂ ಕೌಶಿಕ ಬಂಧುಗಳ ಮತಾಂತರ ಕಾರ್ಯವು ಮೋಗ್ಲಿಂಗರ ನೇತೃತ್ವದಲ್ಲಿ ನಡೆಯುತ್ತದೆ. ಇದನ್ನು ವಿರೋಧಿಸಿ ಗಲಾಟೆಯಾಗಿ, ಹಿಂದೂ ಧರ್ಮಕ್ಕೆ ಮತ್ತೇ ಸೇರಿಸಿಕೊಳ್ಳುವ ಪ್ರಯತ್ನ ವಿಫಲವಾಗುತ್ತದೆ. 'ಆದರೆ ಅದಕ್ಕೆ ಯಶಸ್ಸು ಸಿಗಲಿಲ್ಲ' ಎಂಬುದಾಗಿ ಮಾತ್ರ ಸುದ್ದಿ ಪ್ರಕಟ ಆಗುತ್ತದೆ. ಅದನ್ನು ಅತೀ ರಂಜನೀಯವಾಗಿ ಪತ್ರಿಕೆ ವರ್ಣಿಸಲಿಲ್ಲ.[೫] ಅದರಂತೆ ಈ ಪತ್ರಿಕೆಯಲ್ಲಿ, ಗಲಾಟೆ ಎಬ್ಬಿಸೋ ಉದ್ದೇಶದಿಂದ ಯಾರೋ ಜುಮಾ ಮಹಜೀದಿಯ ಕರೆಯಲ್ಲಿ ಹಂದಿಯನ್ನು ರಾತ್ರಿ ಹೊತ್ತಿನಲ್ಲಿ ಕೊಂದು ಹಾಕಿದಾಗ, ಮೈಜಿಸ್ಟ್ರೇಟನು ಅಂತವರನ್ನು ಹಿಡಿದು ಶಿಕ್ಷಿಸುವ ಮತ್ತು ಮುಸಲ್ಮಾನರು ಯಾವುದೇ ಗಲಾಟೆ ಮಾಡದಂತೆ ವಿನಂತಿಸಿ ಪ್ರಕಟಣೆ ಮಾಡುತ್ತಾರೆ. ಅನಂತರ ಮೆಜಿಸ್ಟ್ರೇಟನು ಮುಸಲ್ಮಾನರ ಹಾಗೂ ಮಾಪಿಳ್ಳೆಯವರ ಮುಖಂಡರನ್ನು ಕರೆಯಿಸಿ ಆಶ್ವಾಸನ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳೂರು ವಿವಿ, ಕೊಣಾಜೆ.

ಇತ್ತು ಕರೆಯನ್ನು ಸರಕಾರದ ವತಿಯಿಂದ 'ಸಾಪು' ಮೂಡಿಸುವುದಾಗಿ ಹೇಳಿದನಂತೆ. ಸಂಪಾದಕನು ಮೇಲಣ ಘಟನೆಯ ವರದಿಯನ್ನು ಸಮಾರೋಪ ಮಾಡಿದ ಬಗೆ ಇಂತಿದೆ, 'ಆ ಮಾತುಗಳನ್ನು ಅವರು ಬುದ್ಧಿಯಾಗಿ ತಿಳುಕೊಂಡು ಅಂಗೀಕರಿಸಿ ವೊಡಂಬಟ್ಟರು. ಆ ಹಂದಿ ಕಡದು ಹಾಕಿದ ಮನುಷ್ಯನು ಯಾವಾಗ ಶಿಕ್ಕಿದ್ದಾನೆಂಬ ವರ್ತಮಾನ ಇರುತ್ತದೆ'.[೬] ಈ ಮುಖಾಂತರ ಎಲ್ಲಿಯೂ ಜನರನ್ನು ಪ್ರಚೋದಿಸುವ ಹೇಳಿಕೆಗಳನ್ನು ಕೊಡುವುದಿಲ್ಲ. ಇದರಂತೆ ಭಾರತದ ಅಸಹಾಕಾರದ ಚಳುವಳಿಯ ಸಂದರ್ಭದಲ್ಲಿ ಹಿಂದೂ ಮುಸಲ್ಮಾನರಲ್ಲಿ ಐಕ್ಯವನ್ನು ಬೆಳೆಸುವ ಉದ್ದೇಶದಿಂದ ಶೌಕತ್ ಆಲಿಯವರು ಮಾಡಿದ ಭಾಷಣವನ್ನು ಪ್ರಕಟ ಮಾಡುವುದರೊಂದಿಗೆ, ಮೈಸೂರು ಪಟ್ಟಣದಲ್ಲಿ ಮಹಮ್ಮದೀಯರು ಸಭೆ ಸೇರಿ ತಮ್ಮ ಸಹೋದರರಾದ ಹಿಂದೂಗಳಿಗೆ ಮನೋವ್ಯಥೆಯನ್ನುಂಟು ಮಾಡತಕ್ಕ ಗೋವಧೆಯನ್ನು ಇನ್ನು ಮುಂದೆ ತಮ್ಮ ಹಬ್ಬಗಳ ಕಾಲದಲ್ಲಿ ಮಾಡಕೊಡದೆಂದು ಶಪಥ ಮೂರ್ವಕವಾಗಿ ನಿರ್ಣಯ ಮಾಡಿಕೊಳ್ಳುವಂತ[೭] ಮಾಹಿತಿಯನ್ನು ಸ್ವದೇಶಾಭಿಮಾನ ಪತ್ರಿಕೆಯು ಸಂಗ್ರಹ ಮಾಡಿ ಪ್ರಕಟಿಸುವುದರೊಂದಿಗೆ ಹಿಂದೂ ಮುಸ್ಲಿಂರಲ್ಲಿ ಐಕ್ಯತೆಯನ್ನು ಬೆಳೆಸುವ ಪ್ರಯತ್ನವನ್ನು ಮಾಡುತ್ತದೆ.

ಈಗಾಗಲೇ ಸಾಮಾಜಿಕ ಧಾರ್ಮಿಕ ವಿಷಯಗಳಲ್ಲಿ ವಿವಿಧ ಸಂಘಗಳ ಮುಖಾಂತರ ಸುಧಾರಣೆಗಳ ಪ್ರಕ್ರಿಯೆ ಆರಂಭದಿಂದ, ಆಧುನಿಕ ಶಿಕ್ಷಣದ ಪ್ರಭಾವದಿಂದ ಸಮಾಜದಲ್ಲಿ ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಮುಕ್ತ ಚರ್ಚೆಗಳು ಆರಂಭವಾಗಿದ್ದು ಪತ್ರಿಕೆಗಳಲ್ಲೂ ಇದು ವ್ಯಕ್ತವಾಗಲಾರಂಭಿಸಿತು. ದಕ್ಷಿಣ ಕನ್ನಡ ಜಿಲ್ಲೆಯು ಸಾಮಾಜಿಕವಾಗಿ ಕೆಲವೊಂದು ನ್ಯೂನತೆಗಳನ್ನು ಹೊಂದಿದ್ದು, ಧಾರ್ಮಿಕವಾಗಿ ಅಂಧಶ್ರದ್ಧೆಗಳನ್ನು ಅನುಕರಿಸುತಿತ್ತು ಮತ್ತು ಅನಾವಶ್ಯಕ ವೆಚ್ಚಗಳನ್ನು ಮಾಡುತಿತ್ತು.[೮] ಇಂತಹ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಲೇಖನವು ಪ್ರಕಟಗೊಂಡಾಗ ಸಕಾರಾತ್ಮಕ ಚರ್ಚೆಯನ್ನು ಮಾಡುತ್ತಿದ್ದರು. ೧೨ ಜನವರಿ ೧೯೨೮ರ ನವಯುಗ ಸಂಚಿಕೆಯಲ್ಲಿ 'ಮೂರ್ತಿ ಪೂಜೆ' ಯನ್ನು ಖಂಡಿಸಿ ಒಂದು ಲೇಖನವು 'ಯಾತ್ರಿಕ' ಎಂಬೀ ಹೆಸರಿನಿಂದ ಪ್ರಕಟವಾಗುತ್ತದೆ. ಬರಹಗಾರ ತನ್ನ ಹೆಸರನ್ನು ನೇರವಾಗಿ ಉಲ್ಲೇಖ ಮಾಡದೆ ಮೂರ್ತಿ ಪೂಜೆಗಾಗಿ ವಿನಿಯೋಗಿಸುವ ದುಂದುವೆಚ್ಚದ ಬಗ್ಗೆ, ಮೂರ್ತಿ ನೈವೇದ್ಯ ಮತ್ತು ಅದನ್ನು ಅಲಂಕರಿಸಿ ಜನರನ್ನು ಮರುಳು ಮಾಡಿ ದುಡ್ಡು ವಸೂಲು ಮಾಡುವುದನ್ನೆಲ್ಲಾ ಉಲ್ಲೇಖಿಸಿ ಅದರ ಅಗತ್ಯತೆಯನ್ನು ಪ್ರಶ್ನಿಸುತ್ತಾರೆ. ಈ ಲೇಖನವನ್ನು ಓದಿ ಬಿ.ಕೊರಗನ್ನಾಯಕ ಅನ್ನೋರು ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ, ಮೂರ್ತಿ ಪೂಜೆಯನ್ನು ಖಂಡಿಸುವುದನ್ನು ಮತ್ತು ಆತನ ಹೆಸರನ್ನು ಉಲ್ಲೇಖ ಮಾಡದೇ ಇರುವುದನ್ನು 'ಅವನೋ? ಇವನೋ?'[೯] ಎಂಬ ಶೀರ್ಷಿಕೆಯಡಿಯಲ್ಲಿ, ತಾನು ದೇವಸ್ಥಾನದ ಮೂರ್ತಿ ಪೂಜೆಯ ಲಾಭವನ್ನು ಪಡೆದುಕೊಂಡು, ತನ್ನ ಜತೆಗೆ ಅದರ ಅಗತ್ಯತೆಯನ್ನು ತಾನು ಪಡೆದುಕೊಂಡು, ತನ್ನ ಜತೆಗೆ ಅದೇ ರೀತಿಯ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದವನೆ 'ಯಾತ್ರಿಕ' ಆಗಿರಬಹುದೇ? ಎಂಬ ಸಂಶಯವನ್ನು ವ್ಯಕ್ತಪಡಿಸಿ ಖಂಡಿಸುತ್ತಾರೆ. ಇವರ ಸಂಗಾತಿ ನವರಾತ್ರಿ ದಿವಸದಲ್ಲಿ ತಾನೆ ಮಾರಿ ಅಮ್ಮನ ಪತ ಒಂದನ್ನು ಬರೆದು ಪಾಪದ ಬಡ ಸಣ್ಣ ಶಾಲೆ ಮಕ್ಕಳಿಂದೆಲ್ಲಾ ೮ ಆಣೆ, ೧ ರೂಪಾಯಿ ವಂತಿಗೆ ಮಾಡಿ ರಾತ್ರಿ ಪೂರ್ತಿ ಪೂಜೆ ಮಾಡುತ್ತಿದ್ದ ಮತ್ತು ಜತೆಗೆ ದೈವ ದೇವರನ್ನು ಮತ್ತು ಅದಕ್ಕೆ ಸಂಬಂಧಿಸಿದ ಕ್ರಮಗಳನ್ನು ಟೀಕಿಸಿ ಮಾತಾಡುತ್ತಿದ್ದ. ಈ ರೀತಿ ಅನ್ಯಾಯದ ಲಾಭವನ್ನು ಪಡಕೊಂಡು ಅದನ್ನು ಖಂಡಿಸುವುದು ಎಷ್ಟು ಸರಿ ಎಂಬುದಾಗಿ ಪ್ರಶ್ನಿಸುವ ಕೊರಗನ್ನಾಯಕರ ಅಭಿಪ್ರಾಯವನ್ನು ಒಪ್ಪತಕ್ಕದ್ದೆ. ಆ ಕಾಲಘಟ್ಟ ದಲ್ಲಿ ಸಾಮಾಜಿಕ ಧಾರ್ಮಿಕ ಸುಧಾರಣೆಗಳು, ರಾಜಕೀಯ ಚಳುವಳಿಗಳು, ಪತ್ರಿಕೆಗಳ ಮುಖಾಂತರ ಹರಡಿದ ಜ್ಞಾನದಿಂದಾಗಿ ಸ್ವಚಿಂತನೆಯನ್ನು, ಧರ್ಮ ದೇವರ ಕುರಿತಂತೆ ಮುಕ್ತ ಅಭಿಪ್ರಾಯ ವ್ಯಕ್ತಪಡಿಸುವುದನ್ನು ಈ ಒಂದು ಘಟನೆಯಿಂದ ತಿಳಿಯಬಹುದು. ಅದರಲ್ಲೂ ನವಯುಗ ಪತ್ರಿಕೆಯು "ನಿರ್ದಾಕ್ಷಿಣ್ಯವಾದ ಧಾರ್ಮಿಕ ಟೀಕೆಯಲ್ಲಿ ನವಯುಗವು ಖ್ಯಾತಿಗೊಂಡಿದ್ದರೂ ಇನ್ನು ಮುಂದೆ ಸ್ವಲ್ಪ ದಯಾ ದಾಕ್ಷಿಣ್ಯವನ್ನು ವಹಿಸಿ ಸರ್ವಾದರಣೀಯವಾಗಿ ಬಾಳಲೆಂಬುದೇ ನಮ್ಮ ಸಂದೇಶ" ಎಂಬುದಾಗಿ ಶ್ರೀಕೃಷ್ಣ ಸಂದೇಶ ಪತ್ರಿಕೆಯ ಸಂಪಾದಕರಾದ ಮುದ್ರಾಡಿ ಜನಾರ್ದನಾಚಾರ್ಯರಿಂದ ಟೀಕೆಗೆ ಒಳಗಾಗುತ್ತದೆ.[೧೦] ಒಟ್ಟಿನಲ್ಲಿ ಈ ಒಂದು ಲೇಖನ, ಅದಕೆ ಕೊರಗನ್ನಾಯಕರು ಕೊಡೋ ಪ್ರತಿಕ್ರಿಯೆಯಿಂದ ಆ ಕಾಲಘಟ್ಟದಲ್ಲಿ ಧಾರ್ಮಿಕ ಹೆಸರಿನಲ್ಲಾಗುವ ಅನ್ಯಾಯದ ಕುರಿತಂತೆ ಪ್ರಶ್ನಿಸುವ ವಾತಾವರಣ ನಿರ್ಮಾಣ ಆಗಿತ್ತು. ಕೊರಗನ್ನಾಯಕರು ಉಲ್ಲೇಖಿಸುವಂತೆ, ಇವರ ಸಂಗಾತಿಯು ದೇವಸ್ಥಾನದಲ್ಲಿ ನೌಕರನಾಗಿದ್ದು ಈತನಿಂದ ದೇವರ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯದ ಕುರಿತು ಒಪ್ಪಿಕೊಳ್ಳುತ್ತಾರೆ. ಇವರು ಅದಕ್ಕೆ ಸಂಬಂಧಪಟ್ಟವರನ್ನು ಶಿಕ್ಷಿಸ ಬೇಕು, ಖಂಡಿಸಬೇಕು ಹೊರತು ಮೂರ್ತಿ ಪೂಜೆ ತಪ್ಪು ಅನ್ನೋದು ಸರಿಯಲ್ಲ ಅನ್ನೋದು ಇವರ ವಾದ ವಾಗಿದೆ. ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಮತ್ತು ಜಾತಿಯ ನೆಲೆಯಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸಿದ್ದ ಬ್ರಾಹ್ಮಣರನ್ನು ಬಿ.ಲಕ್ಷ್ಮಣ ದೇವ

ವಿದ್ಯಾರ್ಥಿ 'ಪ್ರಾಚೀನ ಕಾಲದ ಶೂದ್ರರು ಹೇಗಿದ್ದರು? ಅನ್ನೋ ಲೇಖನದಲ್ಲಿ ಬ್ರಾಹ್ಮಣರು ಸಮಾಜದ ಸರ್ವಾಧಿಕಾರಿಗಳು ಎಂಬುದನ್ನು ಖಂಡಿಸುತ್ತಾನೆ.[೧೧] ಈ ಲೇಖನವು ಆ ಲೇಖಕನ ಕಾಲಘಟ್ಟ ದಲ್ಲಿ ಬ್ರಾಹ್ಮಣರು ಶೂದ್ರರನ್ನು ಸ್ತ್ರೀಯರನ್ನು ಶಿಕ್ಷಣದಿಂದ ದೂರವಿಟ್ಟು ತಮ್ಮ ಪ್ರಭುತ್ವ ಸ್ಥಾಪಿಸುತ್ತಿದ್ದಾರೆ ಎಂದು ಆಪಾದಿಸುತ್ತಾ, ಪ್ರಾಚೀನ ಕಾಲದಲ್ಲಿ ಶೂದ್ರರು ಉನ್ನತ ಸ್ಥಾನದಲ್ಲಿದ್ದರು ಎಂಬುದನ್ನು ಪ್ರತಿಪಾದಿಸುತ್ತಾನೆ. ಹಾಗಾಗಿ ಯಾರೂ ತಾವು ಕೆಳಗಿನವರು ಅಂತಂದುಕೊಳ್ಳಬಾರದು ಎಂಬ ಸಂದೇಶವನ್ನು ಕೊಡುವುದರ ಜತೆಗೆ, ನೀವು ನಿಮ್ಮ ಅಭಿವೃದ್ಧಿಯನ್ನು ಮಾಡಿಕೊಳ್ಳಿ ಎಂಬ ಪರೋಕ್ಷ ಸಂದೇಶ ವನ್ನು ಕೊಡುತ್ತದೆ. ಈ ರೀತಿ ಜಾತಿಯ ನೆಲೆಯಿಂದ ಸ್ವಾಭಿಮಾನದಿಂದ ಗುರುತಿಸಿಕೊಳ್ಳುವ ಮತ್ತು ಸಮಾನ ಸ್ಥಾನಮಾನವನ್ನು ಪಡೆಯುವ ಒಂದು ಬದಲಾವಣೆಯು, ಆರೋಗ್ಯಕರ ಚಿಂತನೆ ಹುಟ್ಟಿಕೊಳ್ಳೋದು ಮತ್ತು ಪತ್ರಿಕೆಗಳು ಇವುಗಳಿಗೆ ವೇದಿಕೆಯಾಗುತ್ತದೆ.

ಸಮಾಜದ ಸುಧಾರಣೆಯಲ್ಲಿ ತೊಡಗಿಕೊಂಡವರು ಕಠಿಣ ತಮ ಪರಿಸ್ಥಿತಿಗಳನ್ನು, ಎದುರಿಸಬೇಕಾಗುತ್ತದೆ. ಅದರಂತೆ ದಕ್ಷಿಣ ಕನ್ನಡದಲ್ಲಿ ಕುದ್ಮುಲ್ ರಂಗರಾಯರಂತವರು ರಘುನಾಥಯ್ಯನರು ಸಮಾಜದಲ್ಲಿ ದಲಿತರ, ಮಹಿಳೆಯರ ಏಳ್ಗೆಗೆ ಶ್ರಮ ವಹಿಸಿದಾಗ ಅವರನ್ನು ವಿರೋಧಿಸಿ ಅಪಮಾನ ಮಾಡುವ ಪ್ರಕ್ರಿಯೆಯನ್ನು ಕಂಡು ಬರಲಾರಂಭಿಸುತ್ತದೆ.[೧೨] ನವಯುಗ ಪತ್ರಿಕೆಯಲ್ಲಿ ಸ್ತ್ರೀ ಕಟಪಾಡಿ ಶ್ರೀ ಶ್ರೀನಿವಾಸ ಶೆಣ್ಯೆರವರು 'ಸುಧಾರಕರು ಅಧರ್ಮಿಗಳೇ' ಎಂಬ ಲೇಖನದಡಿ ಸಾಮಾಜಿಕ ಧಾರ್ಮಿಕ ಸುಧಾರಕರು ಎದುರಿಸುತ್ತಿರುವ ಟೀಕೆಯ ಮಾತುಗಳನ್ನು ವಿಧವಾ ವಿವಾಹ, ಅಸ್ಪೃಶ್ಯತಾ ನಿವಾರಣೆ ನಾರಾಯಣ ನಾರಯಣ! ಇದೆಂತ ಕಲಿಕಾಲ ಬಂತಪ್ಪ ಅಂತ ಕೂಗೆಬ್ಬಿಸುವವರಿಗೆ ವೇದಗಳ ಮಾತನ್ನು ನಿಜ ಧರ್ಮದ ತಿರುಳನ್ನು ಹೇಳುವುದರ ಮುಖಾಂತರ 'ಯಾವ ಯಾವ ಆಚರಣೆಗಳಿಂದ ದೇಶ, ಜನಾಂಗ, ಸಮಾಜದ ಉನ್ನತಿಯು ಸಾಧ್ಯವೋ, ಯಾವ ಯಾವ ವ್ಯವಹಾರಗಳಿಂದ ಬಹುಜನರಿಗೆ ಸುಖ ಒದಗಿ ಬರುತ್ತದೋ ಅದೇ ನಿಜವಾದ ಧರ್ಮ' ಎಂಬ ಉಕ್ತಿಯನ್ನು ಉಲ್ಲೇಖಿಸುವುದರ ಜತೆಗೆ ಧರ್ಮ ಮತ್ತು ಸಮಾಜ ಸುಧಾರಣೆಯು ಅಗತ್ಯತೆಯ ಬಗ್ಗೆ ಬರೆಯುತ್ತಾರೆ. ಸುಧಾರಕರು ಅಧರ್ಮಿಗಳಲ್ಲ ನಿಜವಾದ ಧರ್ಮಿಗಳೆಂದು ಸಾರಿ ಹೇಳುತ್ತದೆ ಈ ಲೇಖನ.[೧೩] ಈ ಲೇಖನವು ಮದುವೆ ಮುಂಜಿ ಜಾತ್ರೆ ಉತ್ಸವ ಭೂರಿ ಭೋಜನ ದಾನದಕ್ಷಿಣೆಗಳಿಗೆ ಮಾಡುವ ವಿಪರೀತ ಖರ್ಚು ಅನಾವಶ್ಯಕ ಎಂಬುದಾಗಿ ಬರೆಯುವುದರ ಜತೆಗೆ ದೀನ ದರಿದ್ರರ ಅಭಿವೃದ್ಧಿಗೆ ಇವುಗಳನ್ನು ಉಪಯೋಗಿಸಲು ಸಲಹೆ ನೀಡುತ್ತದೆ.

ಮತಾಂತರವನ್ನು ತಪ್ಪಿಸಲು ಪ್ರಗತಿ ಕಾರ್ಯಗಳು ಸೂಕ್ತ ರೀತಿ ನಡೆಯುತ್ತಿಲ್ಲ ಎಂಬುದಾಗಿ ಸ್ವದೇಶಾಭಿಮಾನ ಪತ್ರಿಕೆಯು ಕಳವಳವನ್ನು ವ್ಯಕ್ತಪಡಿಸುತ್ತದೆ. "ಇಲ್ಲಿ ಚಳವಳಿಯ ಕಡಿಮೆಯಾದರೂ ಸಂಸ್ಥೆಗಳು ಅನೇಕ ಇವೆ... ಅನೇಕ ಸಂಸ್ಥೆಗಳಿದ್ದರೂ ಅತ್ಯುಪಯುಕ್ತವಾದ ಒಂದು ಸಂಸ್ಥೆಯ ನ್ಯೂನ್ಯತೆ ಉಂಟೆಂದು ನಮ ಸ್ನೇಹಿತರೊಬ್ಬರು ಬರೆದಿರು ವರು... ಅನ್ಯ ಧರ್ಮಗಳ ಬಲೆಯಲ್ಲಿ ಸಿಕ್ಕಿ ಬೀಳುವವರು... ಕೆಲವು ಕಾಲದ ನಂತರ ಪಶ್ಚಾತ್ತಾಪವಾಗಿ ಇಲ್ಲವೇ ತಪ್ಪು ತಿಳುವಳಿಕೆ ಇದ್ದದ್ದು ಹೋಗಿ ಪುನಃ ಸ್ವಧರ್ಮದಲ್ಲಿ ಬರಬೇಕೆಂಬ ಆಸೆಯು ಉಂಟಾಗುತ್ತದೆ... ಅವರನ್ನು ಪುನಃ ಸಂಗ್ರಹಿಸುವ ಉದ್ದೇಶದಿಂದಲೇ ಸ್ಥಾಪಿತವಾದ ಸಂಸ್ಥೆ ಇಲ್ಲಿ ಇಲ್ಲ... ಸಂಸ್ಥೆಯನ್ನು ಸ್ಥಾಪಿಸುವುದು ಅವಶ್ಯವಿದೆ..."[೧೪] ಎಂಬುದರ ಮುಖಾಂತರ ೧೯೧೭ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಪ್ರವೇಶ ಮಾಡಿದ[೧೫] ಆರ್ಯ ಸಮಾಜದ ಕಾರ್ಯ ವೈಖರಿಯನ್ನು ಪರೋಕ್ಷವಾಗಿ ಪಶ್ನೆ ಮಾಡುತ್ತದೆ. ಯಾಕೆಂದರೆ ಆರ್ಯ ಸಮಾಜವು ಮತಾಂತರ ಗೊಂಡವರನ್ನು ಮರಳಿ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳುವ ಉದ್ದೇಶದಿಂದಲೇ ಹುಟ್ಟಿಕೊಂಡ ಸಂಸ್ಥೆಯಾಗಿರುತ್ತದೆ. ತಪ್ಪು ತಿಳುವಳಿಕೆಯಿಂದ ಮತಾಂತರ ಆಗಿದೆ ಎಂಬುದನ್ನು ಒಪ್ಪಿಕೊಳ್ಳಬಹುದಾದರೂ, ಪತ್ರಿಕೆ ಆ ಕಾಲದ ಸಮಾಜಿಕ ಆರ್ಥಿಕ ಅಸಮಾನತೆಯು ಮತಾಂತರಕ್ಕೆ ಕಾರಣ ಎಂಬುದನ್ನು ಒಪ್ಪಿಕೊಳ್ಳದೇ ಅಥವಾ ಅದರ ಪರಿಹಾರದ ಬಗ್ಗೆ ಉಲ್ಲೇಖಿಸದೆ ಇರುವುದು ಇದರ ನ್ಯೂನತೆಯನ್ನು ಸೂಚಿಸುತ್ತದೆ.

ಕುದ್ಮುಲ್ ರಂಗರಾವ್‌ರವರು ಕೆಳಜಾತಿಗೆ ಸೇರಿದವರ ಬಗ್ಗೆ ಅಧ್ಯಯನ ನಡೆಸಿ, ಅವರ ಕಷ್ಟ ಕುಂದು ಕೊರತೆಗಳ ಸ್ಥಿತಿಗಳ ಬಗ್ಗೆ ಅಧ್ಯಯನ ನಡೆಸಿ ಪತ್ರಿಕೆಯಲ್ಲಿ ಆ ಕುರಿತು ಬರೆದು ಅದರ ಪರಿಹಾರದ ಕುರಿತು ಕಾರ್ಯನಿರತರಾಗುತ್ತಿದ್ದರು. ಪಂಚಮ ಜಾತಿಯವರ ಬಗ್ಗೆ ಅಧ್ಯಯನ ನಡೆಸಿ, ಅವರು ಜಾತಿ ಯಿಂದ ಅನುಭವಿಸಿದ ಅವಮಾನ, ನೋವು, ಶೋಷಣೆ ಯನ್ನರಿತು, ಅವರ ಶಿಕ್ಷಣದ ಅಗತ್ಯತೆಯನ್ನು ಮನದಟ್ಟು ಮಾಡಿಕೊಳ್ಳುತ್ತಾರೆ. ಪಂಚಮ ಜಾತಿಯವರಿಗೆ ಮೇಲ್ಜಾತಿ ಯವರ ಬಗ್ಗೆ ಇರುವ ಭಯದ ಸನ್ನಿವೇಶವನ್ನು ಅರಿತು ತಾವೇ ವೈಯುಕ್ತಿಕವಾಗಿ ಮಾತಾಡಿಸುತ್ತಾರೆ ಅಥವಾ ಆ ರೀತಿ ಮಾತಾಡಲು ಲಭ್ಯರಾಗುತ್ತಾರೆ. ಅಂತಹ ಒಂದು ಪ್ರಸಂಗ ಇಂತಿದೆ; ಉಳ್ಳಾಲ ಗ್ರಾಮದ ೨೦ ಮಂದಿ ಪಂಚಮರು ತಮ್ಮ ಮಕ್ಕಳ ಬಗ್ಗೆ ಶಾಲೆ ಸ್ಥಾಪಿಸಬೇಕಾಗಿ ೨-೩ ತಿಂಗಳ ಮೊದಲು ಮೇಜಿಸ್ಟ್ರೇಟರ್ ದೊರೆಗಳಿಗೆ ಮನವಿ ಮಾಡುತ್ತಾರೆ. ಆ ಗ್ರಾಮದಲ್ಲಿ ಶಾಲೆ ಅಗತ್ಯವುಂಟೋ ಎಂಬುದು ವಿಚಾರಿಸಿ ರಿಪೋರ್ಟ್ ಮಾಡಬೇಕಾಗಿ ಕುದ್ಮುಲ್

ರಂಗರಾವ್‌ರವರಿಗೆ ಅರ್ಜಿ ಬರುತ್ತದೆ. ಅದರಂತೆ ಅವರು ಉಳ್ಳಾಲದ ಗ್ರಾಮದ ಕೆಲವು ಪಂಚಮರನ್ನು ಕರೆ ತರಿಸಿ ವಿಚಾರಿಸಿದಾಗ 'ತಾವು ಅರ್ಜಿ ಮಾಡಿಲ್ಲ ದಸ್ಕತ್ತು ಹಾಕಲೇ ಇಲ್ಲ'ಅಂದರು. ಮತ್ತೆ ಒಂದು ತಾಸಿನ ನಂತರ ದಾರಿಯಲ್ಲಿ ರಂಗರಾವ್‌ರವರಿಗೆ ಆ ಪಂಚಮರು ನೋಡ ಸಿಕ್ಕಿ 'ಸ್ವಾಮೀ, ನಾವು ಅರ್ಜಿ ಮಾಡಲಿಲ್ಲವೆಂತ ಸುಳ್ಳು ಹೇಳಿದೆವು. ನಮ್ಮನ್ನು ಕ್ಷಮಿಸಬೇಕು. ಮೇಲು ಜಾತಿಗಳವರ ಮುಂದೆ ತಾವು ಕೇಳಿದ ಕಾರಣ ನಾವು ಹಾಗೆ ಹೇಳಿದೆವು' ಅಂದರು. ಶಾಲೆ ಮಾಡಿದರೆ ಮಕ್ಕಳನ್ನು ಶಾಲೆಗೆ ಕಳುಹಿಸಿವೆವೆಂದು ಭರವಸೆ ಕೊಟ್ಟರು.[೧೬] ಈ ಕುರಿತು ಕುದ್ಮುಲ್ ರಂಗರಾವ್‌ರವರು ನೋವನ್ನು ವ್ಯಕ್ತಪಡಿಸುತ್ತಾರೆ. ಆ ಒಂದು ಕಾಲಘಟ್ಟದಲ್ಲಿ ತಮ್ಮ ಮಕ್ಕಳನ್ನು ಓದಿಸಬೇಕೆಂಬ ಬಯಕೆ ಮತ್ತು ಮೇಲ್ಜಾತಿಯವರ ಕುರಿತು ಹೆದರಿಕೆಯ ಮಧ್ಯೆ ತೊಳಲಾಡುವ ಕೆಳಜಾತಿಯವರ ಚಿತ್ರಣವನ್ನು ಪತ್ರಿಕೆಯಲ್ಲಿ ಕೊಡುತ್ತಾರೆ. ಮಹಿಳೆಯರಿಗೆ ಸಂಬಂಧಪಟ್ಟಂತೆ, ಅವರಿಗೆ ಪ್ರಯೋಜನವಾಗುವ ಸಂಸ್ಥೆಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ಪ್ರಕಟಣೆಯನ್ನು ಕೊಡುತ್ತಿದ್ದರು. ಅದರಲ್ಲಿ ಒಂದು 'ಮುಂಬಯಿ ಪಟ್ಟಣದಲ್ಲಿರುವ ಸೇವಾಸದನ, ಪುಣೆ ಶಹರಿನಲ್ಲಿರುವ ಅನಾಥ ಬಾಲಿಕಾಶ್ರಮ (ವಿಧವಾ ಗ್ರಹ) ಮತ್ತು ಮಹಿಳಾ ವಿದ್ಯಾಲಯವೆಂಬ ಈ ಮೂರು ಸಂಸ್ಥೆಗಳ ಉದ್ದೇಶವನ್ನು ತಿಳಿಕೊಳ್ಳಲಪೇಕ್ಷಿಸುವವರೂ ಈ ಸಂಸ್ಥೆಗಳ ಪ್ರಯೋಜನವನ್ನು ತಮ್ಮ ಹೆಣ್ಣು ಮಕ್ಕಳಿಗೆ ಪ್ರಾಪ್ತವಾಗಬೇಕಂತ ಅಪೇಕ್ಷಿಸುವ ಹೆತ್ತವರು ಮತ್ತು ಬಡತನದ ಸಂಬಂಧ ಹೆಣ್ಣು ಮಕಳಿಗೆ ವಿವಾಹ ಮಾಡಲಿಕ್ಕೆ ಅನುಕೂಲವಿಲ್ಲದವರೂ ಸಹ ಕೆಳಗೆ ದಸ್ಕತು ಮಾಡಿದವರನ್ನೂ ಕಂಡು ಪ್ರಸ್ತಾಪಿಸಿದಲ್ಲಿ ಅಂತಹ ಮಕ್ಕಳ ಶ್ರೇಯಸ್ಕರ ಪರಿಣಾಮಾರ್ಥ ಅಗತ್ಯವಿರುವ ಅನುಭವವೂ ಸಹಾಯವೂ ಸಂಪಾದಿಸಿಕೊಳ್ಳುವ ಉಪಾಯವನ್ನು ತೋರಿಸಿಕೊಟ್ಟರು'[೧೭] ಎಂಬ ಪ್ರಕಟಣೆಯನ್ನು ಕೊಡುವುದರ ಮೂಲಕ ಸಮಾಜಕ್ಕೆ ಸಹಾಯವಾಗುವ ಮಾಹಿತಿಯನ್ನು ರವಾನಿಸುವ ಕೆಲಸವನ್ನು ಪತ್ರಿಕೆಯ ಮುಖಾಂತರ ರಂಗರಾವ್ ರವರು ಮಾಡುತ್ತಿದ್ದರು.

ಮಹಿಳೆಯ ಸ್ವಾತಂತ್ರ್ಯ ಅಭಿವೃದ್ಧಿಗಾಗಿ ೧೯ ಮತ್ತು ೨೦ನೇ ಶತಮಾನದಲ್ಲಿ ಹೋರಾಟವನ್ನು ರಾಜಾರಾಮ್ ಮೋಹನ್ ರಾಯ್‌ರವರಿಂದ ಹಿಡಿದು ಬೇರೆ ಬೇರೆ ಸಮಾಜ ಸುಧಾರಕರು ಬಾಲ್ಯ ವಿವಾಹ ನಿರ್ಮೂಲನ, ವರದಕ್ಷಿಣೆ ವಿರುದ್ಧ, ವಿಧವಾ ಸಮಸ್ಯೆ ವಿರುದ್ಧ, ಸ್ತ್ರೀಶಿಕ್ಷಣ, ಉದ್ಯೋಗ, ಸ್ವಾತಂತ್ರ್ಯ ಮುಂತಾದ ಸಮಸ್ಯೆಗಳ ಪರಿಹಾರ ಕ್ಕಾಗಿ ಹೋರಾಡಿದರು. ೧೮೭೦ರಲ್ಲಿ ಮಂಗಳೂರಿನಲ್ಲಿ ಬ್ರಹ್ಮಸಮಾಜದ ಸ್ಥಾಪನೆಯೊಂದಿಗೆ ಇಂಗ್ಲೀಷ್ ಶಿಕ್ಷಣದ ಪ್ರಭಾವದೊಂದಿಗೆ ಸಾಂಪ್ರದಾಯಿಕ ವ್ಯವಸ್ಥೆಯನ್ನು ವಿರೋಧಿಸುವ ಮತ್ತು ಪರವಹಿಸುವ ಎರಡು ಗುಂಪುಗಳ ಸಂಘರ್ಷಗಳು ಪತ್ರಿಕೆಗಳಲ್ಲಿ ವ್ಯಕ್ತವಾಗತೊಡಗಿತು. ಕೆ.ಜಿ ಲಕ್ಷ್ಮಿ ಕುಂಞಿ ಹಿತ್ಲುರವರು 'ಸ್ತ್ರೀ ಸ್ವಾತಂತ್ರ್ಯ' ಎಂಬ ಲೇಖನದಲ್ಲಿ 'ಈ ಭಾರತೀಯರಾದ ನಾವು ಸ್ವಾತಂತ್ರ್ಯಕ್ಕಾಗಿ ಹೊಡೆದಾಡುತ್ತೇವೆ. ಆದರೆ ಒಂದು ಮನೆಯೊಳಗೆ ಸರಿಯಾದ ಸ್ವತಂತ್ರವನ್ನು ಪಡೆಯದೆ ಇಡೀ ರಾಜ್ಯದ ಸ್ವಾನುಭವವನ್ನು ಹೇಗೆ ಪಡೆಯಬಹುದು?'[೧೮] ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ. ಮೊದಲು ನಮ್ಮೊಳಗೆ ನಮ್ಮ ಸ್ವಾತಂತ್ರ್ಯ ಆಗಲಿ, ನಮಗೆ ಸಮಾನ ಹಕ್ಕು ದೊರಕಲಿ. ಇದಕ್ಕೆ ಮೊದಲು ಹೋರಾಟ ಎಂಬ ಧೋರಣೆ ಇಲ್ಲಿ ಕಾಣುತ್ತದೆ. ಇದೇ ರೀತಿಯ ಪ್ರಶ್ನೆಯು ದಲಿತರಿಗೂ ಕೂಡ ಕಾಡೋದನ್ನು ನಾವು ಕಾಣುತ್ತೇವೆ. ಆಗಿದ್ದರೂ ಸ್ತ್ರೀಯರು ಮತ್ತು ದಲಿತರು ಇಬ್ಬರು ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವುದನ್ನು ನಾವು ಕಾಣುತ್ತೇವೆ. ದಕ್ಷಿಣ ಕನ್ನಡ ಜಿಲ್ಲೆಯವರಾದ ಕಮಲಾದೇವಿ ಚಟ್ಟೋಪಾಧ್ಯಾಯರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.[೧೯] ಇವರು ಸ್ತ್ರೀ ಸಮಾನತೆಯ ಕುರಿತಂತೆ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ 'ಶ್ರೀಮತಿ ಕಮಲಾದೇವಿಯವರು ಸುಧಾರಿತ ಸ್ತ್ರೀ ವರ್ಗದಲ್ಲೊಬ್ಬರು ಮತ್ತು ಸ್ತ್ರೀ ಸಮಸ್ಯೆಗಳ ಮೇಲೆ ಅವರು ಕೊಡಬಹುದಾದ ಅಭಿಪ್ರಾಯಗಳ ಸಮಸ್ಯೆಯು ತೀರ್ಮಾನಕ್ಕೆ ಆಧಾರವಾಗಿರತಕ್ಕವುಗಳಾಗಿವೆ. ಆದರೆ ಶ್ರೀಮತಿ ಯವರು ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸುವಾಗ ಸ್ತ್ರೀ ಪುರುಷ ಸೌಹಾರ್ದ ಸಂಬಂಧದ ಕಡೆಗೆ ಹೆಚ್ಚು ಲಕ್ಷ್ಯ ಕೊಟ್ಟಂತೆ ತೋರುವುದಿಲ್ಲ... ಆರ್ಥಿಕ ಸ್ವಾತಂತ್ರ್ಯವೆಂದರೆ ಸ್ತ್ರೀ ಸ್ವಾತಂತ್ರ್ಯಕ್ಕಿಂತ ಹೆಚ್ಚಿನ ಅರ್ಥ ಉಳ್ಳದ್ದಾಗಿದೆ.... ಅದು ಸ್ತ್ರೀ ಮತ್ತು ಪುರುಷರ ಪ್ರತ್ಯೇಕ ಸ್ವಾರ್ಥಗಳನ್ನು ರಚಿಸುತ್ತದೆ. ಹಿಂದೂ ಸಮಾಜವು ಇಂತಹ ಹಾನಿಕರ ತತ್ವಗಳನ್ನು ಗ್ರಹಣ ಮಾಡಲಾರದೆಂದು ನಾವು ಆಶಿಸುವೆವು'[೨೦] ಎಂಬುದಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸುವುದರ ಮೂಲಕ ಸ್ತ್ರೀಯ ಆರ್ಥಿಕ ಸ್ವಾತಂತ್ರ್ಯವನ್ನು ಪ್ರಶ್ನೆ ಮಾಡುತ್ತದೆ. ಹಿಂದೂ ಧರ್ಮದಲ್ಲಿ ಸ್ತ್ರೀಯರು ಪುರುಷರೊಂದಿಗೆ ಸ್ವಾರ್ಥರಹಿತವಾಗಿ ಬಾಳೋದರಿಂದ ಸಮಾಜದ ಸೌಹಾರ್ದತೆಯನ್ನು ಉಳಿಸಬೇಕು ಎಂದು ಹೇಳುತ್ತಾರೆ. ಹಾಗಿದ್ದರೂ ಆ ಕಾಲಘಟ್ಟದಲ್ಲಿ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ಸ್ತ್ರೀಯರು ಕುರಿತು ಹೆಚ್ಚಿನ ಲೇಖನಗಳು ಪ್ರಕಟ ಆಗುತ್ತದೆ. ನಾರಾಯಣ ಅಕ್ಕದಾಸರು ವಿಧವಾ ವಿವಾಹ ಪರವಾಗಿ ಬರೆದ ಪುಸ್ತಕಕ್ಕೆ ಜನರಿಂದ ಸಹಿಗಳನ್ನು ಪಡೆದು ಪ್ರಕಟಿಸಿದಾಗ ಪತ್ರಿಕೆಯು 'ಈ ಸಹಿಗಳು ಒತ್ತಾಯ ಪೂರ್ವಕವಾಗಿರದೇ, ಸ್ವ ಇಚ್ಛೆಯಿಂದ

ಕೂಡಿದುದಾಗಿದೆ. ಇದು ಒಳ್ಳೆಯ ಬೆಳವಣಿಗೆ ಇದರಿಂದಾಗಿ ದೇಶೋದ್ಧಾರವಾಗುವುದರಲ್ಲಿ ಸಂದೇಹವಿಲ್ಲ'[೨೧] ಎಂದು ಬರೆಯುವುದರ ಮುಖಾಂತರ ವಿಧವಾ ವಿವಾಹಕ್ಕೆ ಪ್ರೋತ್ಸಾಹವನ್ನು ಕೊಡುತ್ತದೆ. ಇದಕ್ಕೆ ಬೆಂಬಲವಾಗಿ 'ನಾನು' ಎಂಬ ಗುಪ್ತ ನಾಮದಲ್ಲಿ 'ವಿಧವಾ ವಿವಾಹ' ಶೀರ್ಷಿಕೆಯಡಿಯಲ್ಲಿ ವಿಧವಾ ವಿವಾಹಕ್ಕೆ ಬೆಂಬಲವನ್ನು ಕೊಟ್ಟು ಮನುಷ್ಯ ವರ್ಗಕ್ಕೆ ಸೇರಿದ ಸ್ತ್ರೀಪುರುಷರು ಲೋಕವ್ಯವಹಾರಕ್ಕೆ ಸರಿಸಮಾನತೆಯಿಂದ ಉಪಯೋಗಕ್ಕೆ ಬೀಳುತ್ತಾರಾದರೆ ಸಮಾಜವು ಆ ಸ್ತ್ರೀಯರನ್ನು ಏಕೆ ಕಟ್ಟುಳೆಗಳ ನಿರ್ಬಂಧದಲ್ಲಿಟ್ಟಿತು? ಅಂತ ಪ್ರಶ್ನಿಸಿ[೨೨], ಸ್ತ್ರೀ ಪುರುಷರಿಬ್ಬರಿಗೂ ಸಮಾನ ಹಕ್ಕು ದೊರಕಲಿ, ಪುರುಷರಿಗೆ ವಿಧುರ ವಿವಾಹ ಇದ್ದಂತೆ ಸ್ತ್ರೀಯರಿಗೂ ವಿಧವಾ ವಿವಾಹ ಆಗಲಿ ಎಂದು ಬಯಸುತ್ತಾರೆ. ಸ್ತ್ರೀಕುಲದ ಉದ್ಧಾರವು, ಸಮಾಜದ ಉದ್ಧಾರವು, ಕೌಟುಂಬಿಕ ಅಭಿವೃದ್ಧಿಯು ಶಿಕ್ಷಣವನ್ನೇ ಅವಲಂಬಿಸಿರುತ್ತದೆ. ಸಮಾಜದ ಸುಧಾರಕರಿಗೆ, ಸ್ತ್ರೀ ಚಳುವಳಿಗೆ 'ಮಹಿಳಾ ಶಿಕ್ಷಣ' ಪ್ರಾಮುಖ್ಯವಾದ ವಿಷಯವಾಯಿತು. ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ೧೯೦೭ ರಲ್ಲಿ ಪ್ರಕಟವಾದ 'ಬಾಲಿಕಾ ಶಿಕ್ಷಣ' ಎಂಬ ಲೇಖನವು[೨೩] ಸ್ತ್ರೀ ಸ್ವಾತಂತ್ರ್ಯಕ್ಕಿರುವ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಾ 'ಯಾವ ಮಾದರಿಯ ಶಿಕ್ಷಣವನ್ನು ಸ್ತ್ರೀಯರಿಗೆ ಕೊಡಬೇಕು' ಎಂಬುದರ ಕುರಿತು ಉಲ್ಲೇಖಿಸುತ್ತದೆ. ಲೇಖಕರ ಹೆಸರು ಉಲ್ಲೇಖವಾಗಿರದ ಕಾರಣ ಪತ್ರಿಕಾ ಸಂಪಾದಕರ ಸಂಪಾದಕತ್ವದ ಆಯ್ಕೆಯ ಲೇಖನವಾಗಿ ಗುರುತಿಸಿಕೊಳ್ಳಬಹುದು. ಸ್ತ್ರೀಯರಿಗೂ ಶಿಕ್ಷಣ ಅಗತ್ಯ. ಆದರೆ ಅದು "ಪತಿಗನುಕೂಲೆಯಾದ ಸತಿಯೂ ಮಕ್ಕಳಿಗೆ ತಕ್ಕ ತಾಯಿಯೂ ಮನೆಗೆ ಯೋಗ್ಯ ಯಜಮಾನಿಯೂ ಎನಿಸುವುದೇ ಸ್ತ್ರೀಯ ಸ್ವಾಭಾವಿಕ ಧರ್ಮ. ಗೃಹಕೃತ್ಯವನ್ನು ಯೋಗ್ಯವಾದ ರೀತಿಯಲ್ಲಿ ನಡೆಸಲಿಕ್ಕೆ ಅಗತ್ಯವಿರುವಷ್ಟು ಗಣಿತ, ಪಾಕಶಾಸ್ತ್ರ ಮುಂತಾದವುಗಳ ಮಾಹಿತಿಯು, ಮಕ್ಕಳ ದೇಹವನ್ನು ಒಳ್ಳೇ ರೀತಿಯಲ್ಲಿ ಪೋಷಿಸಿ, ಸ್ವಭಾವವನ್ನು ತಿದ್ದಿ, ಅವರು ಕುಲದೀಪಗಳಾಗಿ ಬೆಳೆಯುವಂತೆ ಪ್ರಯತ್ನಿಸಲೋಸುಗ ಬೇಕಾದ ಆರೋಗ್ಯ ಧರ್ಮಶಾಸ್ತ್ರಗಳ ಮೂಲತತ್ವಗಳ ಪರಿಚಯವು ಸ್ತ್ರೀಯರಿಗೆ ಅಗತ್ಯ. ಪತಿಯ ಸುಖದುಃಖಗಳನ್ನು ಆತನ ಲೋಕ ವ್ಯವಹಾರ ವೃತ್ತಿಗಳಲ್ಲಿ ಸಹಾನುಭವವುಳ್ಳವನಾಗಿ ಸಹಕಾರಿಗಳಾಗಿರುವ ಹಾಗೆ ಸ್ತ್ರೀಯರು ಬುದ್ಧಿ ವಿಕಸತೆಯನ್ನು ಹೊಂದಬೇಕು. ಬಾಲೆಯರ ಸ್ವಭಾವ ಗುಣಗಳಾಗಿರುವ ಭೂತದಯೆ, ನಯನುಡಿ, ಲೋಕಮೈತ್ರಿ, ಚಿತ್ತಶಾಂತಿ ಇವುಗಳನ್ನು ಅಭಿವೃದ್ಧಿಗೊಳಿಸುವುದೋ ಆ ವಿಧಗಳನ್ನು ಬಾಲಿಕಾ ಶಿಕ್ಷಣವು ಒದಗಿಸಬೇಕು". ಈ ಲೇಖನವನ್ನು ಗಮನಿಸಿದರೆ ಸ್ತ್ರೀಗೆ ಶಿಕ್ಷಣ ಕೊಡಲು ಉದ್ಧೇಶಿಸಿರುವುದು ಪುರುಷ ತನಗೆ ಅನುಕೂಲವಾಗುವ ಸ್ತ್ರೀಯನ್ನು ತನ್ನ ಸ್ವಾರ್ಥಕ್ಕೆ ರೂಪಿಸಲು ಹೊರಟಿರುವುದು.ಇದಕ್ಕೆ ವಿಭಿನ್ನವಾಗಿ ಕೆ.ನರಸಿಂಹ ಶಾಸ್ತ್ರೀಯವರು 'ಹಿಂದೂ ದೇಶದ ಏಳಿಗೆಗೆ ಸ್ತ್ರೀ ವಿದ್ಯಾಭ್ಯಾಸವು ಅತ್ಯವಶ್ಯಕವು'[೨೪] ಎಂಬ ಲೇಖನದಲ್ಲಿ ಶಿಕ್ಷಣವು ಸ್ತ್ರೀಯರಿಗೆ ಏಕೆ, ಹೇಗೆ ಅಗತ್ಯ ಎಂಬುದನ್ನು ವಿಚಾರಪರರಾಗಿ ಗ್ರಹಿಸಿದ್ದು, ಮತವಿಚಾರ, ದೇಶಾಂತರ ಸಂಚಾರ, ಕೈಗಾರಿಕೆಗಳ ಸ್ಥಿತಿ, ದೇಶದ ಬಡತನ, ಬಡವರ ಸ್ಥಿತಿ, ಪಂಚಮರೇ ಮೊದಲಾದ ಕೀಳು ಜಾತಿಯವರ ಸ್ಥಿತಿ, ಜಾತಿ, ಕುಲ, ದೇಶ, ಭಾಷೆ ಇವೆಲ್ಲವುಗಳ ಏಳಿಗೆಗೆ ಶಿಕ್ಷಣವಷ್ಟೇ ಅಲ್ಲ ಇಂಗ್ಲಿಷ್ ವಿದ್ಯಾಭ್ಯಾಸ ಸ್ತ್ರೀಯರಿಗೆ ಅಗತ್ಯವಿದೆ ಎಂದು ೧೯೧೫ರಲ್ಲಿ ಸಾರುತ್ತಾರೆ. ವರ್ಗ-ವರ್ಣಗಳ ಹಿನ್ನೆಲೆಯಲ್ಲಿ ಶಿಕ್ಷಣವನ್ನು ಸಾಮಾಜಿಕ ಏಳಿಗೆಯನ್ನು ಇಲ್ಲಿ ಚರ್ಚಿಸುತ್ತಾರೆ. ದೇವಸ್ಥಾನಗಳು, ಪುರಾಣಗಳು, ಮತಗಳು, ಸತ್ಯಸಂಪ್ರದಾಯಗಳು ಇವುಗಳಲ್ಲಿ ವೇಷ ಮಾತ್ರ ನಿಂತು ಒಳಗಿನ ಸಾರವು ನಶಿಸಿ ಹೋಗುತ್ತಿರುವ ಕುರಿತು ಭಯವನ್ನು ವ್ಯಕ್ತಪಡಿಸುವುದರೊಂದಿಗೆ ವಿಮರ್ಶಾತ್ಮಕ ಮನಸ್ಸನ್ನು ಬೆಳಸಲು ಶಿಕ್ಷಣದ ಅಗತ್ಯತೆಯ ಬಗ್ಗೆ ಹೇಳುತ್ತದೆ. ಹೆಚ್ಚಿನ ಸ್ತ್ರೀ ಪುರುಷವಾದಿಗಳು ಸ್ತ್ರೀಯರಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡಲು ಒಪ್ಪದಿದ್ದ ಸಂದರ್ಭದಲ್ಲಿ ಇವರು ಆಂಗ್ಲ ಶಿಕ್ಷಣವು ಈಗಿನ ಕಾಲಸ್ಥಿತಿಗೆ ಅತ್ಯಗತ್ಯವಾದುದೆಂದು ಬರೆದವರು. ಹೀಗೆ ಸ್ತ್ರೀ ಶಿಕ್ಷಣದಿಂದ ಸರ್ವಾಭಿವೃದ್ಧಿ ಎಂಬ ಪರಿಕಲ್ಪನೆಯೊಂದಿಗೆ ಆಧುನಿಕ ವಿಚಾರಗಳು ಈ ಲೇಖನದಲ್ಲಿ ಕಾಣಿಸುತ್ತದೆ.

ನವಯುಗ ಪತ್ರಿಕೆಯು 'ಹಿಂದೂ ಬಹುಪತ್ನಿ ವಿವಾಹ ನಿಷೇಧ ಮಸೂದೆ'ಯನ್ನು ಶ್ರೀಮತಿ ರಾಧಬಾಯಿ ಸುಬ್ಬರಾಯರು ಕೇಂದ್ರ ಎಸೆಂಬ್ಲಿ ಮೆಂಬರ್ ಆದೊಡನೆಯೇ ವ್ಯವಸ್ಥೆ ತಂದಾಗ ಅದನ್ನು ಹೊಗಳಿ 'ಶ್ರೀ ಹರವಿಲಾಸ ಶಾರದೆ, ದೇಶಮುಖರಂತಹ ಬೆರಳೆಣಿಕೆಯ ಕೆಲ ಮಂದಿ ಉಜ್ವಲ ಸುಧಾರಕರು ಹಿಂದೂ ಸಮಜದಲ್ಲಿ ಸ್ತ್ರೀಯರ ಹಕ್ಕುಬಾಧ್ಯತೆಗಳ ಕುರಿತಿರುವ ತೊಡಕುಗಳನ್ನು ನಿವಾರಿಸಲೆತ್ನಿಸಿರುವರಾದರೂ ಸರ್ವಸಾಮಾನ್ಯ ಹಿಂದೀ ರಾಜಕೀಯ ಮುಖಂಡರು ವಿಶೇಷವಾಗಿ ಶಾಸನಸಭಾಸದರು ಆ ಸಂಬಂಧವಾಗಿ ತುಂಬಾ ಮಾನಸಿಕ ಸಹಾನುಭೂತಿನ್ನಷ್ಟೇ ತೋರಿಸುವುದರಲ್ಲಿ ತೃಪ್ತರಾಗಿರುವರು... ಪತ್ರಿಕೆಗಳಲ್ಲಿ ಸಾರ್ವಜನಿಕ ಭಾಷಣದಲ್ಲಿ ಸಹಾನುಭೂತಿಯು ತೋರಿಬಂದರೂ ಕಾನೂನು ಮಾಡಲು ಪುರುಷ ಶಾಸನಕಾರರು ಬಹಳ ಸಂದೇಶಗೊಂಡಿರುವರು... ಆದುದರಿಂದ ಶಾಸನಸಭೆಗಳಲ್ಲಿ ಸಮರ್ಥ ಸ್ತ್ರೀ ಸದಸ್ಯರಿರುವುದು ಅತ್ಯವಶ್ಯಕವಿದೆ'[೨೫] ಎಂಬುದಾಗಿ ಅಸೆಂಬ್ಲಿಯಲ್ಲಿ ಮಹಿಳಾ ಪ್ರಾತಿನಿಧ್ಯವನ್ನು ಪತ್ರಿಕೆಯು ಪ್ರತಿಪಾದಿಸುತ್ತದೆ. ಮಹಿಳೆಯರಿಗೆ ರಾಜಕೀಯ

ಅಧಿಕಾರದ ಲಭ್ಯತೆಯ ಕುರಿತು ತನ್ನ ಒಲವನ್ನು ವ್ಯಕ್ತಪಡಿಸುತ್ತದೆ.

ಸ್ವಾತಂತ್ರ್ಯ ಪೂರ್ವದಕ್ಷಿಣ ಕನ್ನಡ ಜಿಲ್ಲೆಯ ಪತ್ರಿಕೆಗಳು ಹೆಚ್ಚಾಗಿ ಸಮಾಜದ ಮೇಲ್ವರ್ಗದಿಂದ ಸ್ಥಾಪನೆಯಾಗಿದ್ದು ಮೇಲ್ವರ್ಗದವರಿಗಾಗಿಯೇ ದುಡಿದಿರುವುದು ಕಾಣುತ್ತದೆ. ಹಾಗಾಗಿ ಇಲ್ಲಿ ದಾಖಲಾಗಿರುವ ಹೆಚ್ಚಿನ ಬರಹಗಳೆಲ್ಲಾ ಮೇಲ್ವರ್ಗದವರ ಬದುಕನ್ನು ಕಟ್ಟಿಕೊಡುತ್ತವೆ. ಮತ್ತು ಹಿಂದೂ ಧರ್ಮ ಕೇಂದ್ರಿತವಾಗಿರುತ್ತದೆ. ಕೆಳವರ್ಗದವರ, ಅಸ್ಪೃಶ್ಯ ಮಹಿಳೆಯರ ಸ್ಥಿತಿಯನ್ನು ಕುರಿತು, ಇನ್ನಿತರ ಧರ್ಮಗಳ ಕುರಿತು ಅಷ್ಟಾಗಿ ಎಲ್ಲಿಯೂ ದಾಖಲು ಮಾಡುವುದಿಲ್ಲ. ಯಾಕೆಂದರೆ ಇವರು ಮೇಲ್ವರ್ಗದವರಿಗಿಂತ ತಮ್ಮದೇ ಆದ ಶೋಚನೀಯ ಸಮಸ್ಯೆಗಳನ್ನು ಹೊಂದಿರುತಾರೆ. ಇಲ್ಲಿರುವ ಬರಹಗಳು ಕೂಡ ಮೇಲ್ವರ್ಗದವರಿಂದಲೇ ಬರೆಯಲ್ಪಟ್ಟಿದೆ. ಹಾಗಿದ್ದರೂ ಸ್ತ್ರೀಯರಿಗೆ ಕೆಳವರ್ಗಕ್ಕೆ ಒಟ್ಟು ಮಾನವ ಕುಲಕ್ಕೆ ಸಂಬಂಧಿಸಿದ ಸಮಸ್ಯೆಗಳು ಇವರಿಗು ಅನ್ವಯಿಸುವ ಕಾರಣ ಅವರ ಸುಧಾರಣೆ ಸಮಾನತೆ ಶಿಕ್ಷಣ ಉದ್ಯೋಗದಿಂದ ಆಗುವ ಕಾರಣ ಇದನ್ನು ಇವರಿಗು ಅನ್ವಯಿಸಿಕೊಳ್ಳಬಹುದು. ಸಾಮಾಜಿಕ ಸುಧಾರಣೆಗೆ ಪರ ವಿರೋಧ ಎರಡು ಅಭಿಪ್ರಾಯಗಳಿಗೂ ಸಂಮಿಶ್ರಣದಂತೆ ಪತ್ರಿಕೆಗಳು ಕಾಣುತ್ತವೆ. ಸಾಮಾಜಿಕ ಧಾರ್ಮಿಕ ನ್ಯೂನತೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಸಾಮಾಜಿಕ ಅಗತ್ಯತೆಗಳ ಕುರಿತು ಚರ್ಚಿಸುತ್ತದೆ. ಪತ್ರಿಕೆಗಳ ಮುಖಾಂತರ ಅಕ್ಷರಸ್ಥ ಜನರಿಗೆ ನಾನಾ ಮಾಹಿತಿಯನ್ನು ಒದಗಿಸುವಲ್ಲಿ ಮತ್ತು ವಿಶ್ಲೇಷಾಣಾತ್ಮಕ ದೃಷ್ಟಿಕೋನದಿಂದ ನೋಡುವ ಓದುಗ ವರ್ಗವನ್ನು ನಿರ್ಮಿಸುವಲ್ಲಿ ಯಶಸ್ವಿ ಆಗಿದೆ.



## ಅಡಿಟಿಪ್ಪಣಿಗಳು


೧. ಚಂದ್ರ ಬಿಪಿನ್,ಆಧುನಿಕ ಭಾರತದ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨, ೧೪೪.

೨. ಕೃಷ್ಣಮೂರ್ತಿ ನಾಡಿಗ, ಭಾರತೀಯ ಪತ್ರಿಕೋದ್ಯಮ, ಕರ್ನಾಟಕ ಮಾಧ್ಯಮ ಅಕಾಡೆಮಿ, ಬೆಂಗಳೂರು, ೨೦೦೬, ಪು. ೬೮.

೩. ಜಿಲಾನಿ ಎಸ್.ಎ.(ಸಂ.), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ದಕ್ಷಿಣ ಕನ್ನಡ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೨೦೦೭, ಪು. ೧೦೯.

೪. ಬಳ್ಳಾರಿ ಜೈನುಲ್ಲಾ, ಕನ್ನಡ ಪತ್ರಿಕೋದ್ಯಮಕ್ಕೆ ರೆ. ಹರ್ಮನ್ ಮೊಗ್ಲಿಂಗ್ ಕೊಡುಗೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು. ೬.

೫. ಬಳ್ಳಾರಿ ಜೈನುಲ್ಲಾ, ಕನ್ನಡ ಪತ್ರಿಕೋದ್ಯಮಕ್ಕೆ ರೆ.ಹರ್ಮನ್ ಮೋಗ್ಲಿಂಗ್ ಕೊಡುಗೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು. ೬.

೬ ಹಾವನೂರ ಶ್ರೀನಿವಾಸ, ಹೊಸಗನ್ನಡದ ಅರುಣೋದಯ, ಕನ್ನಡ ಅಧ್ಯಯನ ಕೇಂದ್ರ, ಮೈಸೂರು, ಪು. ೪೮೪.

೭. ಸ್ವದೇಶಾಭಿಮಾನಿ, ಪುಸ್ತಕ ೧೪, ಸಂಚಿಕೆ ೩೬, ಮಂಗಳೂರು ೩, ಸಪ್ಟೆಂಬರ್ ೧೯೨೦, ಪು. ೫.

೮. ಇಂಡಿಯಾ ಮತ್ತು ಅನ್ಯ ದೇಶದ ವಾರ್ತಿಕ, ಪುಸ್ತಕ ೧, ಅಂಕೆ ೫, ಮಂಗಳೂರು, ೧೩ ನವಂಬರ್, ೧೮೬೨, ಪು. ೧೮.

೯. ಸ್ವದೇಶಾಭಿಮಾನಿ, ಪುಸ್ತಕ ೨೦, ಸಂಚಿಕೆ ೩, ಮಂಗಳೂರು, ೨೦ ಜನವರಿ, ೧೯೨೮, ಪು. ೯.

೧೦. ನವಯುಗ, ಸಂಪುಟ ೧೫, ಸಂಚಿಕೆ ೧, ಉಡುಪಿ, ೧೯೩೬, ಪು. ೭.

೧೧. ನವಯುಗ, ಸಂಪುಟ ೧೬, ಸಂಚಿಕೆ ೨, ಉಡುಪಿ, ೧೯೩೬, ನವೆಂಬರ್ ೧೦, ಪು. ೯.

೧೨. ಕಮಲಾಕ್ಷಪಿ, ದಲಿತೋದ್ಧಾರಕ ಕುದ್ಮುಲ್ ರಂಗರಾವ್, ಸೂಟರ್‌ಪೇಟೆ, ಮಂಗಳೂರು, ೧೯೮೬, ಪು. ೪೭.

೧೩. ನವಯುಗ, ಸಂ. ೧೫, ಸಂಚಿಕೆ ೧, ೩ ಸಪ್ಟೆಂಬರ್ ೧೯೩೬, ಉಡುಪಿ, ಪು. ೧೫.

೧೪. ಸ್ವದೇಶಾಭಿಮಾನಿ, ಮಂಗಳೂರು, ಸಂ. ೨೯, ೧೬ ಜುಲೈ, ೧೯೨೦.

೧೫. ಸೂರ್ಯನಾಥ ಕಾಮತ್, ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ, ಸುದರ್ಶನ (ಸಂ.), ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ, ೧೯೭೭, ಪು. ೧೩೧.

೧೬. ಸ್ವದೇಶಾಭಿಮಾನಿ, ಮಂಗಳೂರು, ೨೨ ಮೇ ೧೯೧೪, ಪುಟ. ೬.

೧೭. ಸ್ವದೇಶಾಭಿಮಾನಿ, ಮಂಗಳೂರು, ೧೦ ಸಪ್ಟೆಂಬರ್ ೧೯೦೯, ಪು. ೩.

೧೮. ಸ್ವದೇಶಾಭಿಮಾನಿ, ಮಂಗಳೂರು, ಸಂ. ೩೦, ಸಂಚಿಕೆ ೨೫, ೧೯೩೬, ಪು. ೧೩.

೧೯. ಜೋತ್ಸ್ನಾ ಕೃಷ್ಣಾನಂದ ಕಾಮತ್, ಕಮಲಾದೇವಿ ಚಟ್ಟೋಪಾಧ್ಯಾಯ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨, ಪು. ೩.

೨೦. ಸ್ವದೇಶಾಭಿಮಾನಿ, ಮಂಗಳೂರು, ೩ ಫೆಬ್ರವರಿ, ೧೯೨೮, ಪು. ೫.

೨೧. ಸ್ವದೇಶಾಭಿಮಾನಿ, ಪುಸ್ತಕ ೨೬, ಸಂಚಿಕೆ ೭, ೧೨ ಫೆಬ್ರವರಿ ೧೯೩೨, ಪು. ೫.

೨೨. ಸ್ವದೇಶಾಭಿಮಾನಿ, ಪುಸ್ತಕ ೨೬, ಸಂಚಿಕೆ ೭, ೧೨ ಫೆಬ್ರವರಿ ೧೯೩೨, ಪು. ೫.

೨೩. ಸ್ವದೇಶಾಭಿಮಾನಿ, ಮಂಗಳೂರು, ಪುಸ್ತಕ ೧, ಸಂಚಿಕೆ೩, ೧ ಫೆಬ್ರವರಿ ೧೯೦೭, ಪು. ೧–೨.

೨೪. ಸ್ವದೇಶಾಭಿಮಾನಿ, ಮಂಗಳೂರು, ಪುಸ್ತಕ ೧೯, ಸಂಚಿಕೆ ೫, ೨೬ ಜನವರಿ ೧೯೧೫, ಪು. ೬.

೨೫. ನವಯುಗ, ಉಡುಪಿ, ೪ ಅಗೋಸ್ತು ೧೯೩೮, ಪು. ೮.




# ಸ್ವಾತಂತ್ರ್ಯ ಹೋರಾಟದಲ್ಲಿ ಇಂಗಳಗೊಂದಿ ಗ್ರಾಮದ ಪಾತ್ರ

**ಕೃಷ್ಣಮೂರ್ತಿ ಸಿ.ಎನ್.***

ಇಂಗಳಗೊಂದಿ ಹರಿಹರ ತಾಲ್ಲೂಕಿನ ನದಿ ಬಯಲಿನಲ್ಲಿರುವ ಒಂದು ಸಣ್ಣ ಗ್ರಾಮವಾಗಿದ್ದು, ಇದು ಬೇಡರ ಜನಾಂಗದ ಅಥವಾ ಬುಡಕಟ್ಟು ಜನಾಂಗದ ಗ್ರಾಮವಾಗಿದೆ. ಇವರ ಪ್ರಮುಖ ವೃತ್ತಿ ಬೇಟೆಯಾಡುವುದು ಮತ್ತು ಕೃಷಿ ಮಾಡುವುದಾಗಿತ್ತು. ಭೌಗೋಳಿಕವಾಗಿ ಈ ಗ್ರಾಮದ ಉತ್ತರಕ್ಕೆ ತುಂಗಭದ್ರ ನದಿ ಇದ್ದು, ಪೂರ್ವ ಮತ್ತು ಪಶ್ಚಿಮಗಳಲ್ಲಿಯು ನದಿ ಆವೃತವಾಗಿದ್ದು, ದಕ್ಷಿಣದಲ್ಲಿ ಕೃಷಿಗೆ ಯೋಗ್ಯತೆಯ ಫಲವತ್ತಾದ ಭೂಮಿಯನ್ನು ಒಳಗೊಂಡಿದೆ. ಆದರಿಂದ ಪ್ರಸ್ತುತ ಕೃಷಿ ಇವರ ಜೀವನಾಡಿಯಾಗಿದೆ. ಕ್ರಿ.ಶ. ೧೯೦೦ ರಲ್ಲಿ ಬ್ರಿಟಿಷರು ಹೆಚ್.ಬಿ. ಪಟೇಲ್ ಎಂಬುವರನ್ನು ಈ ಗ್ರಾಮದ ಮತ್ತು ಸುತ್ತಮುತ್ತಲಿನ ಗ್ರಾಮದ ಕಂದಾಯ ವಸೂಲಿ ಮಾಡಲು ಪಟೇಲರನ್ನಾಗಿ ನೇಮಿಸಿದರು. ೧೯೨೦ರ ನಂತರದಲ್ಲಿ ಭಾರತದಲ್ಲಿ ಗಾಂಧೀ ಯುಗದಿಂದ ಪ್ರಾರಂಭವಾದ ಚಳವಳಿಗಳು ಈ ಗ್ರಾಮದಲ್ಲಿ ಪ್ರಭಾವ ಬೀರಲು ಪ್ರಾರಂಭಿಸಿ ಈ ಗ್ರಾಮದ ಜನರಲ್ಲಿ ಜಾಗೃತಿಯನ್ನು ಉಂಟುಮಾಡಿ ಸಣ್ಣಪುಟ್ಟ ದಂಗೆಗಳು ಪ್ರಾರಂಭಿಸಿದರು. ೧೯೩೦ರ ಕಾನೂನು ಭಂಗ ಚಳವಳಿ ಅಥವಾ ಕರಾ ನಿರಾಕರಣೆ ಚಳವಳಿಗಳಿಂದ ಪ್ರಾರಂಭಿಸಿ, ೧೯೩೪ರಲ್ಲಿ ಗಾಂಧೀಜಿಯವರು ಹರಿಹರಕ್ಕೆ ಭೇಟಿ ಕೊಟ್ಟ ಸಂದರ್ಭದಲ್ಲಿ ಅವರ ಭಾಷಣಗಳಿಂದ ಪ್ರಭಾವಗೊಂಡು ಅವರ ತತ್ವಗಳನ್ನು ಪರಿಪಾಲಿಸಿದರು.[೧]

ಆದರೆ ದಿ: ೦೧-೦೨-೧೯೩೯ರಲ್ಲಿ ಸುಭಾಷ್ ಚಂದ್ರ ಬೋಸ್‌ರು ಹಾವೇರಿ ಜಿಲ್ಲೆಯ ಬ್ಯಾಡಗಿ,[೨] ರಾಣೆಬೆನ್ನೂರಿಗೆ ಆಗಮಿಸಿದಾಗ ಅವರ ಪ್ರೇರಣೆಯಿಂದ ಮೇಣಸಿನಹಾಳು ತೀಮ್ಮನಗೌಡ್ರು, ಕೆ.ಎಫ್. ಪಟೇಲರು, ಎನ್.ಎಂ. ಚಂದ್ರಶೇಖರಯ್ಯನವರು ಈ ಭಾಗದಲ್ಲಿ ಕ್ರಾಂತಿಕಾರಿ ಭಾಷಣಗಳನ್ನು ಮತ್ತು ಸುಭಾಷ್ ಚಂದ್ರ ಬೋಸ್‌ರ ಪರಮ ಗುರಿಯಾದ **"freedom is the song of my soul"** (ಸ್ವಾತಂತ್ರ್ಯವೇ ನನ್ನೆದೆಯ ಹಾಡು) **"give me blood I will regain your freedom back to you"** (ನನಗೆ ರಕ್ತ ಕೋಡಿ, ನಿಮಗೆ ನಾನು ಸ್ವಾತಂತ್ರ್ಯ ಕೋಡಿಸುತ್ತೇನೆ) ಎಂಬ ಘೋಷಣೆಗಳನ್ನು ಈ ಪ್ರದೇಶಗಳಲ್ಲಿ ಸಾರುತ್ತಾ ಎನ್.ಎಂ. ಚಂದ್ರಶೇಖರಯ್ಯನವರು ದಿ: ೦೪-೦೩-೧೯೩೯ರಲ್ಲಿ ೩೧ ಜನರ ಕಟ್ಟಾಳುಗಳಿಂದ ಸುಭಾಷ್ ಚಂದ್ರ ಬೋಸ್ ಸಂಘ ಸ್ಥಾಪಿಸಿ,[೩] ರಾಷ್ಟ್ರೀಯತೆಯ ಬಗ್ಗೆ ಜಾಗೃತಿ ಮೂಡಿಸಿದರು. ಆದ್ದರಿಂದ ರಾಷ್ಟ್ರ, ರಾಷ್ಟ್ರಾಭಿಮಾನ, ರಾಷ್ಟ್ರೀಯತೆಯಿಂದ ಈ ಗ್ರಾಮದಲ್ಲಿ ಗಾಂಧಿ ತತ್ವಗಳನ್ನು ಧಿಕ್ಕರಿಸಿದ ಈ ಗ್ರಾಮಸ್ಥರಾದ ಸಿದ್ದಪ್ಪ, ಕಾಳೇಗೌಡ, ಗುಂಡೇರ್ ಕರಿಯಪ್ಪ, ತಿರುಕಪ್ಪ ಇನ್ನು ಅನೇಕ ಜನರು ೨೪-೦೪-೧೯೩೯ರಲಿ[೪] ದಂಗೆ ಎದ್ದು, ಕಂದಾಯ ನೀಡುವುದನ್ನು ಬಹಿಷ್ಕಾರ ಮಾಡಲು ಪ್ರಾರಂಭಿಸಿ **"ಬ್ರಿಟಿಷ್ ಸರ್ಕಾರಕ್ಕೆ ಕಂದಾಯ ನೀಡುವುದಿಲ್ಲ, ಆದರೇ ಭಾರತಿಯರೇ ಸರ್ಕಾರವನ್ನು ಸ್ವಾತಂತ್ರ್ಯವಾಗಿ ನಡಸಿದರೆ ಮಾತ್ರ ಕಂದಾಯ ನೀಡುತ್ತೇವೆ"**[೫] ಎಂದು ಇಂಗಳಗೊಂದಿಯ ಜನರು ಕಂದಾಯ ನೀಡುವುದನ್ನು ಬಹಿಷ್ಕಾರ ಮಾಡಿದರು (ಅದರ ದಾಖಲೆಗಳಾದ ೧೯೩೮ರಿಂದ ೧೯೪೩ರ ಮೈಸೂರು ಸರ್ಕಾರದ ರೆವಿನ್ಯೂ ಇಲಾಖೆ ಜಮೀನು ಕಂದಾಯ ವಗೈರೆ ಪಾವತಿಯನ್ನು ಗಮನಸಬಹುದು) ಆದರೆ ಈ ದಂಗೆಯನ್ನು ಬ್ರಿಟಿಷರು ದಮನಗೊಳಿಸಿದ್ದರಿಂದ ಈ ದಂಗೆ ಬೆಳಕಿಗೆ ಬರಲಿಲ್ಲ, ಆದರೆ ಮೈಸೂರು ಸಂಸ್ಥಾನದ ಚಿತ್ರದುರ್ಗ ಜಿಲ್ಲೆಯ ತುರುವೆನೂರು ಎಂಬ ಗ್ರಾಮದಲ್ಲಿ ೧೮ ಸೆಪ್ಟಂಬರ್ ೧೯೩೯ರಂದು ಬಳ್ಳಾರಿ ಸಿದ್ದಮ್ಮ ಮತ್ತು ನಾಗರತ್ನಮ್ಮ ಹಿರೇಮಠ್, ಎಸ್. ನಿಜಲಿಂಗಪ್ಪ, ವಾಸುದೇವ ರಾವ್,[೬] ಚಿದಾನಂದಪ್ಪ, ಉಗ್ರಪ್ಪ, ಎನ್.ಎಂ. ಚಂದ್ರಶೇಖರಯ್ಯ ಮತ್ತು ಚಿತ್ರದುರ್ಗದ ಸ್ವಾತಂತ್ರ್ಯ ಹೋರಾಟದ ಸಂಘಟನೆಯ ಯೋಧರು ಭಾಗವಹಿಸಿದರು. ನಂತರ ಈ ಸತ್ಯಾಗ್ರಹ ಚಿತ್ರದುರ್ಗ ಜಿಲ್ಲೆಯ ಅನೇಕ ತಾಲ್ಲೂಕುಗಳಲ್ಲಿ ಪ್ರಮುಖವಾಗಿ ದಾವಣಗೆರೆ, ಜಗಳೂರು, ಹರಿಹರ ತಾಲ್ಲೂಕಿನಲ್ಲಿ ಮತ್ತು ತಾಲ್ಲೂಕಿನ ಗ್ರಾಮಗಳಲ್ಲಿ ಹರಡಲಾಯಿತ್ತು.

ನಂತರ ೧೯೪೧ರ ಜನವರಿ ೧೪ ಮತ್ತು ೧೫ರಂದು ಇಂಗಳಗೊಂದಿಯಲ್ಲಿ ಸಮಾವೇಶವನ್ನು ನಡೆಸಲಾಗಿದೆ ಸಮಾವೇಶದ ಅಧ್ಯಕ್ಷತೆಯನ್ನು ಎನ್.ಎಂ. ಚಂದ್ರಶೇಖರಯ್ಯನವರು ವಹಿಸಿಕೊಂಡಿದ್ದರು. (ಪ್ರಸ್ತುತ ಈ ಸಮಾವೇಶದ ಛಾಯಾಚಿತ್ರ ನಮಗೆ ದೊರತಿದೆ) ಕೆ.ಹೆಚ್. ಪಟೇಲರು ಈ

* ಸಂಶೋಧನಾ ವಿದ್ಯಾರ್ಥಿ, ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.

ಸಮಾವೇಶದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರು.[೭] ಆಗ ಸಭೆ ಸಮಾರಂಭ ಮಾಡಲು ಬ್ರಿಟಿಷರ ಅಥವಾ ಪೊಲೀಸರ ಅನುಮತಿ ಇಲ್ಲದೆ ಯಾವ ಸಮಾವೇಶಗಳನ್ನು ನಡೆಸಲು ಅನುಮತಿ ಇರಲ್ಲಿಲ. ಆ ಸಂದರ್ಭದಲ್ಲಿ ಮೇಣಸಿನಹಾಳು ತೀಮ್ಮನಗೌಡ್ರು, ಕೆ.ಎಫ್. ಪಟೇಲರ ಸಹಾಯದಿಂದ ಸಂಕ್ರಾತಿಯ ಹಬ್ಬದ ನೇಪದ ಮೇಲೆ ಈ ಸಮಾವೇಶ ನಡೆಸಿ ಸಮಾವೇಶದಲ್ಲಿ ಕೆಲವು ನಿರ್ಣಯಗಳನ್ನು ತಗೆದುಕೊಂಡು, ಬ್ರಿಟಿಷರ ವಿರುದ್ಧ ಕೆಲವು ಕಾರ್ಯಚಟವಟಿಕೆಗಳು ಪ್ರಾರಂಭಿಸಿದರು.

**ಅವುಗಳಲ್ಲಿ ಪ್ರಮುಖವಾಗಿ:**

೧. ಬ್ರಿಟಿಷ್‌ರಿಂದ ಸ್ವಾತಂತ್ರ್ಯಗೊಂಡ ಗ್ರಾಮ ಎಂಬ ಘೋಷಣೆ ಮಾಡಿಕೊಂಡರು.

೨. ಕಂದಾಯ ನಿರಾಕರಣೆ

೩. ಬೆಳದ ಬೆಳೆಯನ್ನು ರಾತ್ರೋರಾತ್ರಿ ಕಟಾವು ಮಾಡಿ ಪಕ್ಕದ ಬಾಂಬೆ ಪ್ರೆಸಿಡೆನ್ಸಿಯಲ್ಲಿ ಮಾರಾಟ ಮಾಡುವುದು.

೪. ಅಕ್ಕಪಕ್ಕದ ಗ್ರಾಮಗಳ ಧಾನ್ಯಗಳನ್ನು ತರಿಸಿ ಹಗೆವು ತೆಗೆದು ಧಾನ್ಯಗಳನ್ನು ಮುಚ್ಚುವುದು, ರಾತ್ರಿ ಸಮಯದಲ್ಲಿ ಮಣ್ಣಿನ ಗಡಿಗಿಯಲ್ಲಿ ತುಂಬಿ ತುಂಗಭದ್ರ ನದಿಯಲ್ಲಿ ಸಾಗಿಸಿ ಪಕ್ಕದ ಬಾಂಬೆ ಪ್ರೆಸಿಡೆನ್ಸಯ ರಾಣಿಬೆನ್ನೂರು ನಗರದಲ್ಲಿ ಮಾರಾಟ ಮಾಡುವುದು.

೫. ಸ್ವದೇಶಿ ವಸ್ತುಗಳ ಬಳಕೆಮಾಡುವುದು

೬. ಈಚಲು ಮರಗಳನ್ನು ಕಡಿದು ಹಾಕುವುದು

೭. ಅಪರಿಚಿತ ವ್ಯಕ್ತಿಗಳನ್ನು ಊರಿನ ಒಳಗೆ ಬಿಟ್ಟುಕೊಳ್ಳಬಾರದು

೮. ಮದ್ಯಪಾನವನ್ನು ನಿಷೆಧೀಸುವುದು

೯. ಬಂಗಿ, ಗಾಂಜಾ ಸೇದುವುದನ್ನು ನಿಷೇಧಿಸಲಾಗಿತ್ತು

೧೦. ಜಾನುವಾರುಗಳ ಸಾಕಾಣಿಕೆಗೆ ಪ್ರೋತ್ಸಾಹ ನೀಡುವುದು

ಈ ಎಲ್ಲಾ ಅಂಶಗಳ ಜೊತೆಯಲ್ಲಿ ಹುಬ್ಬಳ್ಳಿಯಿಂದ ತರಿಸಿದ ಸ್ಫೋಟಕ ವಸ್ತುಗಳ ಸಂಗ್ರಹದ ಸ್ಥಳ ಮಾಡಿಕೊಳ್ಳಲಾಗಿತ್ತು. (ಪ್ರಸ್ತುತ ಈ ಸ್ಥಳವು ಹಾಳಾಗಿದ್ದು ಈ ಸ್ಥಳವನ್ನು ಉದ್ದರದ ದಂಡೆ ಎಂದು ಕರೆಯಲಾಗಿದೆ, ಮಣ್ಣಿನಿಂದ ನಿರ್ಮಿಸಿದ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ) ಕ್ರಾಂತಿಕಾರಿ ಯೋಧರ ಗುಪ್ತ ಸ್ಥಳವಾಗಿತ್ತು. ಈ ಸಮಾವೇಶಕ್ಕೆ ನಿಟ್ಟುವಳ್ಳಿಯ ಬುಡಕಟ್ಟು ಕುಟುಂಬದ ಮಹಿಳೆ "ಹೊನ್ನಿನ ಹೊನ್ನಮ್ಮ" ಎಂಬವರು ಮೇಣಸಿನಹಾಳು ತೀಮ್ಮನಗೌಡರ ಮಾತಿಗೆ ಬೆಲೆಕೊಟ್ಟು ರಾಷ್ಟ್ರಭಕ್ತಿಯಿಂದ ಸಮಾವೇಶಕ್ಕೆ ಬೇಕಾದ ಊಟದ ವ್ಯವಸ್ಥೆಯ ಖರ್ಚನ್ನು ನೋಡಿಕೊಂಡಿದರು.[೮] ಎಂಬುದನ್ನು ಎನ್. ಎಂ. ಚಂದ್ರಶೇಖರಯ್ಯನವರು ಸ್ಮರಿಸುತ್ತಾರೆ. ಈ ಸಮಾವೇಶ ಸುದ್ದಿ ತಿಳಿದ ಮೇಲೆ ಈ ಗ್ರಾಮಕ್ಕೆ ಒಂದು ಪೋಲಿಸ್ ಪಡೆಯನ್ನು ಕಾರ್ಯನಿರ್ವಹಿಸಲು ಸೂಚಿಸಿದರು. (ದಿನಾಂಕ: ೨೬/೧೧/೧೯೪೧ರಲ್ಲಿ ಪೋಲಿಸ್ ತನಿಖಾ ವರದಿಯನ್ನು ಕಾಣಬಹುದು) ಆದ್ದರಿಂದ ಈ ಗ್ರಾಮದ ಎಲ್ಲಾ ಕಾರ್ಯಚಟುವಟಿಕಗಳು ರಾತ್ರೋರಾತ್ರಿ ನಡೆಯಲಾರಂಭಿಸಿದವು.[೯] "೧೯೪೨ರ ಭಾರತ ಬಿಟ್ಟು ತೊಲಗಿ" ಚಳವಳಿ ತೀವ್ರಗೊಂಡಾಗ ದಾವಣಗೆರೆಯ ಮತ್ತು ಪಕ್ಕದ ಬಾಂಬೆ ಪ್ರೆಸಿಡೆನ್ಸಿಯ ಕ್ರಾಂತಿಕಾರಿಗಳಿಗೆ ಆಶ್ರಯ ತಾಣವಾಗಿ ದಿನೇ ದಿನೇ ಬ್ರಿಟಿಷರ ವಿರುದ್ಧ ಅಸಮಾಧಾನ ಹೆಚ್ಚಾಗಿತ್ತು. ಈ ಸಮಯದಲ್ಲಿ (ದಿನಾಂಕ: ೧೬/೧೧/೧೯೪೨ರಲ್ಲಿ ಯು.ಆರ್. ಅಂಬರೀಷ್ ರಾಮ್) ತನಿಖಾ ವರದಿಯನ್ನು ಮಾಡಲು ಬಂದಿದ್ದ ಅಧಿಕಾರಿಗಳನ್ನು ಊರಿನ ಒಳಗೆ ಬರಮಾಡಿಕೊಳ್ಳದೆ ಅವರ ಮೇಲೆ ಹಲ್ಲೆ ಮಾಡಿ ಕಳುಹಿಸಿದ್ದಾರೆ. (ದಿನಾಂಕ: ೧೬/೧೧/೧೯೪೨ರಲ್ಲಿ ಪೋಲಿಸ್ ತನಿಖಾ ವರದಿಯನ್ನು ಕಾಣಬಹುದು ಮತ್ತು Mysore Government, Remarks on inspection Record, ಎಂಬ ದಾಖಲೆಯಲ್ಲಿ ದಾಖಲಿಸಲಾಗಿದೆ) ಆದ್ದರಿಂದ ತೀವ್ರಗೊಂಡ ಹೋರಾಟವನ್ನು ದಮನಗೊಳ್ಳಿಸಲು ಈ ಗ್ರಾಮದ ತುಂಬ ದಸ್ತಗಿರಿ ನಡಸಿದರು. ಆ ಸಂದರ್ಭದಲ್ಲಿ ಅನೇಕರ ಮೇಲೆ ಲಾಟಿ ಪ್ರಹಾರ ಮಾಡಿದರು. ಇದರಿಂದ ಈ ಬುಡಕಟ್ಟು ಜನಾಂಗದ ಜನರು ಸ್ವಾತಂತ್ರ್ಯವಾಗಿ ಜೀವಿಸುವ, ಬದುಕಿ ಬಾಳುವ ಗುರಿಯನ್ನು ಹೊಂದಿದ್ದರು. ಆದ್ದರಿಂದ ಗಂಗಮ್ಮ ಎಂಬ ಮುದುಕಿ ಆ ಗ್ರಾಮದ ಯುವಕರಿಗೆ ಉರುಪು ನೀಡಿದಳು

**"ಕಿಚ್ಚು ಕೇಡಿಸಿತ್ತು, ಕೇಚ್ಚು ಬದುಕಿಸಿತ್ತು"**
**"ಪರಂಗಿಯವರ ಆಳ್ವಿಕೆ ನಮಗೆ ಬೇಡ"**

ಎಂದು ಹೇಳಿದಳು. ಆದರೆ ಸಂಪೂರ್ಣವಾಗಿ ಕಂದಾಯದ ವಿರುದ್ಧ ದಂಗೆ ಎದ್ದ ಜನರು ಬ್ರಿಟಿಷ್‌ರ ವಿರುದ್ಧವಾಗಿ ಲಾವಣಿಗಳಿಂದ ಜನರಲ್ಲಿ ರಾಷ್ಟ್ರಾಭಿಮಾನವ ಬೆಳಸುವರು.

**"ಬೇಡರು ನಾವು ಬೇಡರು ನಾವು ಬೇಡುವೇವು**
**ಸ್ವಾತಂತ್ರ್ಯ, ಸಮಾನತೆಯ ಹಕ್ಕುಗಳನ್ನ ಬೇಡುವೇವು ನಾವು**
**ನೀಡದೆ ಇದ್ದರೇ ಕೆಚ್ಚೇದೆಯಿಂದ ಕಿಚ್ಚು ಹಚ್ಚಿ ಹೋರಾಡುವೇವು**
**ಕೆಂಪು ಮೂತಿ ಪರದೇಶಿಗಳ ವಿರುದ್ಧ ನಮ್ಮಯೇ ಹಕ್ಕಿಗಾಗಿ ಹೋರಾಡುವೇವು"**

ಹೀಗೆ ಬ್ರಿಟಿಷ್‌ರ ವಿರುದ್ಧವಾಗಿ ಧಿಕ್ಕರಿಸಿ ತಾವು ಬೆಳದ ಬೆಳಯನ್ನು ಪಕ್ಕದ ಬಾಂಬೆ ಪ್ರೆಸಿಡೆನ್ಸಿಯ ರಾಣೆಬೆನ್ನೂರು ನಗರದಲ್ಲಿ ಮಾರಾಟ ಮಾಡುತ್ತಿದರು. ಆದ್ದರಿಂದ (ದಿನಾಂಕ:

೨೨/೧೨/೧೯೪೩) ಈ ಗ್ರಾಮಕ್ಕೆ ಭೇಟಿ ನೀಡಿದ ವಿಶೇಷ ಪೋಲಿಸ್ ಇನ್‌ಸ್ಪೆಕ್ಟರ್ ಎಂ. ವೆಂಕಟಸ್ವಾಮಿ ತನ್ನ ತನಿಖಾ ವರದಿಯಲ್ಲಿ ಯಾರು ತಂಬಾಕು ಮತ್ತು ಇತರೆ ಬೇಳೆಗಳ ಕಂದಾಯವನ್ನು ಕಟ್ಟುವುದಿಲ್ಲವೋ ಅಂತಹ ವ್ಯಕ್ತಿಗಳ ಮೇಲೆ ಕಾನೂನು ಕ್ರಮ ಕೈಗೊಳ್ಳಲಾಗುವುದು ಎಂಬುವ ಅಂಶವನ್ನು ಲಿಖಿತ ರೂಪದಲ್ಲಿ ಬರದಿದ್ದಾನೆ.[೧೦] ಇದನ್ನು ಗಮನಿಸಿದ ಜನರು ಮರುದಿನ ರಾತ್ರೋರಾತ್ರಿ ಸಂಪೂರ್ಣವಾಗಿ ಆ ಗ್ರಾಮದ ಎಲ್ಲಾ ತಂಬಾಕು ಬೇಳೆದ ಜಮೀನಿಗೆ ಬೆಂಕಿಹಚ್ಚಿ ಬ್ರಿಟಿಷರ ವಿರುದ್ಧ ಧಿಕ್ಕಾರ ಹಾಕಿರುವುದು ಒಂದು ರೋಚಕ ಕಥೆಯಾಗಿದೆ. (ಈ ಗ್ರಾಮದ ಬುಡಕಟ್ಟು ಜನರ ರೋಧನೆಯ ರೋಚಕ ಕಥೆಯನ್ನು ಈ ಕೆಳಗಿನ ಲಾವಣಿಯಿಂದ ತಿಳಿದು ಬರುತ್ತದೆ)

**"ಬಂದರು ಬಂದರು ಪರದೇಶಿಗಳ ಗುಲಾಮರು, ಬಂದರು**
**ಕುದುರೆಯನೇರಿ ಬಂದರು ನಮ್ಮಯ ಕಂದಾಯವ ಕೇಳಲು ಬಂದರು,**
**ಕಂದಾಯವ ನೀಡದೇ ನಿರಾಕರಿಸಿ, ಕಿಚ್ಚುಹಚ್ಚಿ ನಮ್ಮಯ ಬೆಳೆಗಳಿಗೆ**
**ಬೆಂಕಿಯ ಹಚ್ಚಿ ಬೂದಿಯ ಮಾಡಿ, ಊಟಕ್ಕಾಗಿ**
**ಬೇಟೆಯನಾಡಿ ಹಸಿವು ನೀಗಿಸಿಕೊಂಡು**
**ಕಂದಾಯವ ನಿರಾಕರಿಸಿದ ಬೇಡರು ನಾವು**[೧೧]

ನಂತರ ಬ್ರಿಟಿಷರ ವಿರುದ್ಧ ಸಣ್ಣ-ಸಣ್ಣ ದಂಗೆಗಳನ್ನು ಮಾಡಿ ತದನಂತರ ನಡೆದ ಮೈಸೂರು ಚಲೋ ಚಳವಳಿಯಲ್ಲಿ ಭಾಗವಹಿಸಿ, ಮೈಸೂರು ಸಂಸ್ಥಾನ ಸ್ವಾತಂತ್ರ್ಯಗೊಂಡ ನಂತರ ಹರ್ಷವ್ಯಕ್ತಪಡಿಸಿದ್ದಾರೆ.

ಒಟ್ಟಾರೆಯಾಗಿ ಭಾರತ ದೇಶ ಗ್ರಾಮೀಣ ಪ್ರದೇಶಗಳ ರಾಷ್ಟ್ರ ಆದ್ದರಿಂದ ಭಾರತದಲ್ಲಿನ ಬಹುತೇಕ ಹಳ್ಳಿಗಳಿದಂಲೇ ಹೋರಾಟದ ಮನೋಭಾವನೆಗಳು ಹುಟ್ಟಿ ಬೆಳವಣಿಗೆ ಗೊಂಡಿರುವುದು ಗಮನಾರ್ಹವಾಗಿದೆ. ಅದೇ ರೀತಿಯಲ್ಲಿ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಇಂಗಳಗೊಂದಿ ಯಲ್ಲಿಯು ಸಹ ರಾಷ್ಟ್ರಾಭಿಮಾನದ ಕಿಚ್ಚು ಹತ್ತಿಕೊಂಡು ಬ್ರಿಟಿಷರ ವಿರುದ್ಧವಾಗಿ ಸಂಪೂರ್ಣ ಗ್ರಾಮವೇ ಹೋರಾಟ ನಡೆಸಿರುವುದು ಬಹಳ ಅದ್ಬುತವಾದ ರೋಚಕ ಕಥೆಯಾಗಿದೆ.



## ಆಧಾರ ಗ್ರಂಥಗಳು


೧. ಎನ್.ಎಂ. ಚಂದ್ರಶೇಖರಯ್ಯ, ಸಂದರ್ಶನ, ದಿನಾಂಕ: ೦೧.೧೨.೨೦೧೨.
೨. ರೇಣುಕಾ ಎಸ್. ಸಂಕನಗೌಡ್ರು, (ಅ.ಪ್ರ.) ಕೆ.ಎಫ್. ಪಾಟೀಲ್ ಬದುಕು-ಬರಹ, ಪು.ಸಂ. ೧೦೫.
೩. ಎನ್.ಎಂ. ಚಂದ್ರಶೇಖರಯ್ಯ, ಸಂದರ್ಶನ, ದಿನಾಂಕ: ೦೧.೧೨.೨೦೧೨.
೪. Mysore Government, Remarks on inspection Record, Date: 24.04.1939.
೫. ಎನ್.ಎಂ. ಚಂದ್ರಶೇಖರಯ್ಯ, ಸಂದರ್ಶನ, ದಿನಾಂಕ: ೦೧.೧೨.೨೦೧೨.
೬ ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ-೨, ಪು.ಸಂ. ೫೧೪, ೫೧೫.
೭. ಮಹೇಶ್ವರಪ್ಪ ಕೆ.ಜಿ. ಸಂದರ್ಶನ, ದಿನಾಂಕ: ೨೧.೦೯.೨೦೧೪.
೮. ಎನ್.ಎಂ. ಚಂದ್ರಶೇಖರಯ್ಯ, ಸಂದರ್ಶನ, ದಿನಾಂಕ: ೦೧.೧೨.೨೦೧೨.
೯. Mysore Government, Remarks on inspection Record, Date: 26.11/.941.
೧೦. Mysore Government, Remarks on inspection Record, Date: 22.12.1943.
೧೧. ಗೌಡ್ರಸಿದ್ದಪ್ಪ ಮಾಸ್ತರ್ ಸಂದರ್ಶನ, ದಿನಾಂಕ: ೦೮.೦೬.೨೦೧೪.



# ಚಿತ್ರದುರ್ಗದಲ್ಲಿ ನಡೆದ ನಗರ ದಂಗೆಯ ಪ್ರಭಾವ ೧೮೩೦-೧೮೩೧

**ಡಾ. ಎಚ್.ಇ. ಬಸವರಾಜಪ್ಪ***

೧೭೯೯ರಲ್ಲಿ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನನ್ನು ಅಂತ್ಯಗೊಳಿಸಿದ ಬ್ರಿಟಿಷ್ ಗೌರ್ನರ್ ಜನರಲ್ ವೆಲ್ಲಸ್ಲಿ ಒಡೆಯರ ಮನೆತನವನ್ನು ಪುನರ್ ಸ್ಥಾಪಿಸಿದನು. ಆಗ ಮುಮ್ಮಡಿ ಕೃಷ್ಣರಾಜ ಒಡೆಯರು ಬಾಲಕರಾಗಿದ್ದರಿಂದ ಆಡಳಿತವನ್ನು ನೋಡಿಕೊಳ್ಳಲು ರಾಜಪ್ರತಿನಿಧಿ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ರಾಜಮಾತೆ ಲಕ್ಷ್ಮಮ್ಮಣ್ಣಿ, ರೆಸಿಡೆಂಟ್ ಬ್ಯಾರಿಕ್ಲೋಸ್, ದಿವಾನ್ ಪೂರ್ಣಯ್ಯನವರು ೧೭೯೯ರಿಂದ ೧೮೧೧ರವರೆಗೆ ಆಡಳಿತ ನಡೆಸಿದರು. ನಂತರ ೧೮೧೧ರಿಂದ ೧೮೩೧ರವರೆಗೆ ನೇರವಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ಆಡಳಿತ ನಡೆಸಿದರು. ೧೮೧೬ ಮತ್ತು ೧೮೨೩ರಲ್ಲಿ ಸಂಭವಿಸಿದ ಕ್ಷಾಮದಿಂದಾಗಿ ರಾಜ್ಯದ ಬೊಕ್ಕಸದಿಂದ ಅಪಾರ ಹಣ ಜನರ ಪರಿಹಾರ ಕಾರ್ಯಗಳಿಗೆ ವಿನಿಯೋಗವಾಯಿತು. ಹಲವೆಡೆ ಬ್ರಿಟಿಷರ ಪರ ಮೈಸೂರು ಸೈನ್ಯ ಹೋರಾಡಿದುದರಿಂದಲೂ ಅಧಿಕ ಹಣ ವ್ಯಯವಾಯಿತು. ರಾಜ್ಯದಲ್ಲಿ ಆದಾಯಕ್ಕಿಂತ ಖರ್ಚೇ ಅಧಿಕವಾಯಿತು. ಇದರಿಂದ ಆರ್ಥಿಕವಾಗಿ ಸ್ವಲ್ಪ ಏರುಪೇರಾಯಿತು. ಇದರ ಕಾರಣಗಳನ್ನು ಪೂರ್ಣ ಪರಿಶೀಲಿಸದೆ ರೆಸಿಡೆಂಟನು ಗೌರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕ್‌ನಿಗೆ ರಾಜ್ಯದ ಆಡಳಿತ ಹದಗೆಡುತ್ತಿದೆ ಎಂಬುದಾಗಿ ವರದಿ ಮಾಡಿದನು. ಇದೇ ಸಮಯದಲ್ಲಿ ನಗರದಲ್ಲಿ ಅಂದರೆ ಬಿದನೂರಿನಲ್ಲಿ ರೈತರ ದಂಗೆ ಸಂಭವಿಸಿತು. ೧೮೩೦ರಲ್ಲಿ ಸಂಭವಿಸಿದ ನಗರ ದಂಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರ ಕಳೆದುಕೊಳ್ಳುವಲ್ಲಿ ಪ್ರಧಾನವಾಗಿ ಪರಿಣಮಿಸಿತು.

ನಗರ ದಂಗೆಯು ಬಿದನೂರು ಪ್ರದೇಶದಲ್ಲಿ ಆರಂಭವಾಗಿ ಮೈಸೂರು ಸಂಸ್ಥಾನದ ಎಲ್ಲ ಭಾಗಗಳಲ್ಲೂ ಪ್ರತಿಧ್ವನಿಸಿತು. ಬ್ರಿಟಿಷ್ ಸರಕಾರ ಮೈಸೂರಿನ ಆಡಳಿತವನ್ನು ವಹಿಸಿಕೊಳ್ಳಲು ನಗರ ದಂಗೆಯು ಮುಖ್ಯ ಕಾರಣವಾಗಿತ್ತು. ಟಿಪ್ಪುವಿನ ನಂತರ ಮೂರು ದಶಕಗಳ ಕಾಲ ಪರೋಕ್ಷ ಆಳ್ವಿಕೆಯನ್ನು ಮೈಸೂರು ಸಂಸ್ಥಾನದಲ್ಲಿ ನಡೆಸಿದುದರ ಪ್ರತಿಫಲವೇ ನಗರ ದಂಗೆ[1]. ಈ ದಂಗೆ ಆರಂಭವಾಗಲು ಮುಖ್ಯ ಕಾರಣ ದಿವಾನ್ ಪೂರ್ಣಯ್ಯನವರು ಜಾರಿಗೆ ತಂದ ಷರತ್ (ಗುತ್ತಿಗೆಪದ್ದತಿ) ಪದ್ದತಿಯೇ ಕಾರಣವಾಗಿತ್ತು[2]. ಈ ಷರತ್ ವ್ಯವಸ್ಥೆಯ ಪ್ರಕಾರ ಅಮೀಲ್ದಾರನು ಸರಕಾರಕ್ಕೆ ತಾನು ನಿಗದಿತ ಮೊತ್ತದ ತೆರಿಗೆಯನ್ನು ವಸೂಲಿ ಮಾಡಿ ಕೊಡುವ ಒಪ್ಪಂದವನ್ನು ಮಾಡಿಕೊಳ್ಳುತ್ತಿದ್ದನು. ಇದರಿಂದ ಅತಿ ಹೆಚ್ಚು ಹರಾಜು ಕೂಗಿದವರಿಗೆ ಭೂಮಿಯನ್ನು ಸಾಗುವಳಿ ಮಾಡಲು ಅವಕಾಶ ನೀಡಲಾಗುತ್ತಿತ್ತು. ಈ ವ್ಯವಸ್ಥೆಯಿಂದ ಹೆಚ್ಚು ತೆರಿಗೆಯನ್ನು ವಸೂಲಿ ಮಾಡಿಕೊಡುವ ಒಪ್ಪಂದವನ್ನು ಮಾಡಿಕೊಳ್ಳುತ್ತಿದ್ದನು. ಇದರಿಂದ ಅತಿ ಹೆಚ್ಚು ಹರಾಜು ಕೂಗಿದವರಿಗೆ ಭೂಮಿಯನ್ನು ಸಾಗುವಳಿ ಮಾಡಲು ಅವಕಾಶ ನೀಡಲಾಗುತ್ತಿತ್ತು. ಈ ವ್ಯವಸ್ಥೆಯಿಂದ ಹೆಚ್ಚು ತೆರಿಗೆ ವಸೂಲಿ ಮಾಡಲು ಅನುಕೂಲವಾಗಿತ್ತು. ಆದರೆ ತೆರಿಗೆ ವಸೂಲಿಯ ಸಂದರ್ಭದಲ್ಲಿ ಒಪ್ಪಂದಕ್ಕಿಂತ ಕಡಿಮೆಯಾದರೆ ಅಮೀಲ್ದಾರನೇ ಹೊಣೆಯಾಗುತ್ತಿದ್ದನು[3]. ಹೀಗಾಗಿ ಇದರಿಂದ ರೈತರು ಅತಿಯಾದ ಕಿರುಕುಳಕ್ಕೆ ಒಳಗಾಗಿದ್ದರು. ಒಪ್ಪಂದ ಮಾಡಿಕೊಂಡ ಅಮೀಲ್ದಾರರು ರೈತರನ್ನು ಸುಲಿಗೆ ಮಾಡಿದರು. ಪಾಳು ಭೂಮಿಗೂ ಕಂದಾಯವನ್ನು ಬಲವಂತವಾಗಿ ವಸೂಲಿ ಮಾಡುತ್ತಿದ್ದರು. ಚಿತ್ರದುರ್ಗ ಪ್ರದೇಶದಲ್ಲಿ ಭೂಹಿಡುವಳಿಗಳನ್ನು ಆನುವಂಶಿಕವಾಗಿ ಪಡೆದು ಅನುಭೋಗಿಸುವ ಹಕ್ಕು ದಿವಾನ್ ಪೂರ್ಣಯ್ಯನವರ ಕಾಲದಲ್ಲಿಯೂ ಮುಂದುವರೆಯಿತು. ಈ ಪ್ರದೇಶದಲ್ಲಿ ಭೂಹಿಡುವಾಳಿದಾರನು ಸ್ವತಂತ್ರವಾದ ಭೂಹಿಡುವಳಿಗಳನ್ನು ಹೊಂದಿದ್ದನು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಪಟೇಲರು ಮತ್ತು ದೊಡ್ಡ ಜಮೀನ್ದಾರರು ತಮ್ಮ ಹೆಸರುಗಳಲ್ಲಿ ನೂರಾರು ಎಕರೆ ಭೂಹಿಡುವಳಿಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಂಡಿರುವ ಬಗ್ಗೆ ವಿವರಗಳು ಸಿಗುತ್ತವೆ[4]. ಪೂರ್ಣಯ್ಯನವರ ಆಡಳಿತಾವಧಿಯಲ್ಲಿ ಕೃಷಿ ಕ್ಷೇತ್ರದಲ್ಲಿ ರೈತವಾರಿ ಪದ್ದತಿಯನ್ನು ಜಾರಿಗೆ ತಂದು ವಂಶಪಾರಂಪರ್ಯವಾಗಿ ಬಂದ ಭೂಹಿಡುವಳಿಗಳ ಹಕ್ಕನ್ನು ಸಕ್ರಮಗೊಳಿಸಿದನು. ಪೂರ್ಣಯ್ಯನವರ ಆಡಳಿತಾವಧಿಯಲ್ಲಿ

* ಇತಿಹಾಸವ ವಿಭಾಗ, ಕೆ.ಎಲ್.ಇ.ಎಸ್., ಬಿ.ಕೆ. ಮಹಾವಿದ್ಯಾಲಯ, ಚಿಕ್ಕೋಡಿ-೫೯೧೨೦೧.

ಸುಬೇದಾರ್ ಮತ್ತು ಅಮೀಲರು ಚಿತ್ರದುರ್ಗ ಪ್ರದೇಶದ ಸಂಪೂರ್ಣವಾದ ಕಂದಾಯದ ವಸೂಲಿ ಮತ್ತು ಮಿಲಿಟರಿ ಅಧಿಕಾರಿಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಈ ವೇಳೆಯಲ್ಲಿದ್ದ ಪ್ರಮುಖ ತಾಲೂಕುಗಳೆಂದರೆ ಚಿತ್ರದುರ್ಗ, ತಳಕು, ಮೊಳಕಾಲ್ಮೂರು, ಚಳ್ಳಕೆರೆ, ಬಿಳಿಚೋಡು, ಅಣಜಿ, ದೊಡ್ಡೇರಿ, ದಾವಣಗೆರೆ, ಹರಿಹರ, ಹೊಳಲ್ಕೆರೆ, ಹೊಸದುರ್ಗ, ಕಣಕುಪ್ಪ ಮತ್ತೋಡು ಈ ಪ್ರದೇಶದ ಆಡಳಿತ ಕೇಂದ್ರಗಳಾಗಿದ್ದು ಇವುಗಳ ಆಡಳಿತವನ್ನು ನೋಡಿಕೊಳ್ಳಲು ಸುಬೇದಾರ ಎಂಬ ಅಧಿಕಾರಿಗಳನ್ನು ನೇಮಕ ಮಾಡಲಾಗಿತ್ತು. ಜೊತೆಗೆ ಹೋಬಳಿಯಲ್ಲಿ ಶೇಕದಾರರು, ಗ್ರಾಮಗಳಲ್ಲಿನ ಶಾನುಭೋಗರು ಪಟೇಲರು ಸೇರಿ ವರ್ಷದ ಪ್ರಾರಂಭದಲ್ಲಿ ತಮ್ಮಲ್ಲಿರುವ ರೈತರನ್ನೆಲ್ಲ ಸೇರಿಸಿ ಅವರು ಹೊಂದಿದ್ದ ಭೂಹಿಡುವಳಿಗೆ ಅನುಸಾರವಾಗಿ ಇಷ್ಟು ಕಂದಾಯ ಅಥವಾ ವಾರ ಕೂಡಬೇಕು ಎಂದು ತೀರ್ಮಾನಿಸುತ್ತಿದ್ದರು. ಈ ಭಾಗದಲ್ಲಿ ಕಂದಾಯವು ಒಟ್ಟು ಹುಟ್ಟುವಳಿಯಲ್ಲಿ ಮೂರರಲ್ಲಿ ಒಂದು ಪಾಲು ಇತ್ತು. ಆದರೆ ಚಿತ್ರದುರ್ಗ ಪ್ರದೇಶದಲ್ಲಿ ಮೂರರಲ್ಲಿ ಒಂದು ಪಾಲಿಗಿಂತ ಕಂದಾಯವು ವಾರ್ಷಿಕವಾಗಿ ೧೮ಲಕ್ಷಕ್ಕಿಂತಲೂ ಹೆಚ್ಚಾಗಿತ್ತು. ಈ ಅಧಿಕ ಕಂದಾಯದಿಂದ ಅನೇಕ ಸಂದರ್ಭಗಳಲ್ಲಿ ಸರಕಾರದ ಮತ್ತು ಜಮೀನ್ದಾರರ ನಡುವೆ ವ್ಯಾಜ್ಯಗಳು ನಡೆದಿದ್ದವು. ಜೊತೆಗೆ ಕೃಷಿ ಕೂಲಿಕಾರರು ಅಧಿಕ ಸಂಖ್ಯೆಯಲ್ಲಿ ಸಿಗುತ್ತಿದ್ದರು. ಆದರೆ, ಅವರಿಗೆ ನಿರ್ದಿಷ್ಟ ವಾದ ವೇತನ ಇರಲಿಲ್ಲ. ಚಿತ್ರದುರ್ಗ ಪ್ರದೇಶದಲ್ಲಿ ಸಾಮಾನ್ಯ ವಾಗಿ ೧೦೦ ರೂ. ಹೆಚ್ಚು ಕಂದಾಯ ಸಲ್ಲಿಸುವ ದೊಡ್ಡ ಜಮೀನ್ದಾರರು ಇದ್ದರು. ಮಧ್ಯಮ ಭೂಹಿಡುವಳಿದಾರರು ೫೦ ರೂ. ಕಂದಾಯ ಸಲ್ಲಿಸುತ್ತಿದ್ದರು. ಅತಿ ಕಡಿಮೆ ಕಂದಾಯ ಸಲ್ಲಿಸುವುದೆಂದರೆ ಒಂದು ರೂ. ಆಗಿತ್ತು. ಭೂಹಿಡುವಳಿ ದಾರರು ತಮ್ಮ ಭೂಮಿಯನ್ನು ಮಾರುವುದಕ್ಕಾಗಲಿ ಭೋಗ್ಯಕ್ಕೆ ಕೊಡುವುದಕ್ಕಾಗಲೀ ಅಧಿಕಾರವಿತ್ತು. ಹಾಗೆ ಅನುಭವಿಸು ವವರು ಸರಕಾರಕ್ಕೆ ಕಂದಾಯ ಕೊಡುವಲ್ಲಿ ವಿಫಲವಾದರೆ ಅಂತಹವರು ತಮ್ಮ ಭೂಹಿಡುವಳಿಗಳನ್ನು ಇತರರಿಗೆ ಮಾರಿ ಹಣ ಕಟ್ಟುತ್ತಿದ್ದರು ಇದರಿಂದ ಭೂಹಿಡುವಳಿಗಳ ಹಕ್ಕುಗಳೆಲ್ಲವೂ ಕೊಂಡುಕೊಂಡವರಿಗೆ ಬರುತ್ತಿದ್ದವು. ಇದರಿಂದ ಸಾಗುವಳಿಯಾದ ಭೂಮಿಯಿಂದ ಸರಕಾರ ಹೆಚ್ಚು ಹೆಚ್ಚು ಕಂದಾಯ ವಸೂಲಿ ಮಾಡುವುದರಲ್ಲಿ ಗಮನ ಹರಿಸುತ್ತಿತೆ ಹೊರತು ರೈತರ ಹಿತವನ್ನು ಗಮನಿಸುತ್ತಿರಲ್ಲಿಲ್ಲ. ಇಂಥಹ ಆಡಳಿತ ಕ್ರಮವು ೧೮೩೦ರ ದಂಗೆ ಪ್ರಾರಂಭವಾಗಲು ಮುಖ್ಯ ಕಾರಣವಾಗಿತ್ತು.

೧೮೩೦ರ ವೇಳೆಗೆ ಆಹಾರ ಬೆಳೆಗಳ ಬೆಲೆಗಳು ಇಳಿದುದರಿಂದಾಗಿ ರೈತರಿಗೆ ಕಂದಾಯವನ್ನು ಸಲ್ಲಿಸಲು ಕಷ್ಟವಾಯಿತು. ಅಮೀಲ್ದಾರರು ಕಂದಾಯ ವಸೂಲಿಗೆ ಬಲವಂತ ಮಾಡಿದರು. ಇದೆಲ್ಲದರ ಪರಿಣಾಮ ಹೆಚ್ಚು ಭೂಕಂದಾಯ ಬಾಕಿಯಿತ್ತು. ಇದರಿಂದ ರೈತರ ಆರ್ಥಿಕ ಪರಿಸ್ಥಿತಿಯು ತುಂಬಾ ಹದಗೆಟ್ಟಿತ್ತು. ಇದೇ ಸಂದರ್ಭದಲ್ಲಿ ಸ್ಥಳೀಯ ನಾಯಕರಾದ ಬೂದಿಬಸವಪ್ಪನ ನಾಯಕತ್ವದಲ್ಲಿ ರೈತರು ಸಭೆ ಸೇರತೊಡಗಿದರು. ಅವನು ನಗರದ ರಾಜ ಬೂದಿಬಸವಪ್ಪ ಎಂಬ ಹೆಸರಿನಲ್ಲಿ ದಂಗೆಯೆದ್ದ ರೈತರನ್ನು ತನ್ನೆಡೆಗೆ ಸೆಳೆಯಲು ತನಗೆ ಬೆಂಬಲ ನೀಡಿದ ಪಕ್ಷದಲ್ಲಿ ರೈತರು ಕೊಡಬೇಕಾಗಿರುವ ಕಂದಾಯದ ಬಾಕಿಯನ್ನು ರದ್ದುಪಡಿಸುವುದಾಗಿ ರೈತರಿಗೆ ಮಾತುಕೊಟ್ಟನು. ಹಾಗೆಯೇ ತೆರಿಗೆಯನ್ನು ಇಳಿಸುವ ಘೋಷಣೆ ಹೊರಡಿಸಿದನು[೫]. ತರೀಕೆರೆಯ ಪಾಳೆಯಗಾರ ರಂಗಪ್ಪನಾಯಕನು ಸಹ ಮೈಸೂರಿನ ಬಗೆಗಿದ್ದ ದ್ವೇಷದಿಂದಾಗಿ ರೈತರಿಗೆ ಬೆಂಬಲ ನೀಡಿದನು. ರೈತರು ನಗರ, ಹೊನ್ನಾಳಿ, ಚನ್ನಗಿರಿ ಚಿತ್ರದುರ್ಗ ಮೊದಲಾದ ಕಡೆ ತೆರಿಗೆ ಕೊಡಲು ನಿರಾಕರಿಸಿದರು.

ಇದೇ ಸಂದರ್ಭದಲ್ಲಿ ಚಿತ್ರದುರ್ಗ ಪ್ರದೇಶದಲ್ಲಿಯೂ ದಂಗೆ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ರೈತರೊಂದಿಗೆ ಸಂಧಾನ ನಡೆಸಲು ದಿವಾನ್ ವೆಂಕಟರಾವ್ ಬಂದರೂ ಅವರ ಪ್ರಯತ್ನವು ಈಡೇರಲಿಲ್ಲ. ಇದೇ ಹಿನ್ನೆಲೆಯಲ್ಲಿ ೧೮೩೦, ಡಿಸೆಂಬರ್ ೧೬ರಂದು ದಿವಾನನು ಪಟೇಲರುಗಳಿಗೆ ಒಂದು ಮನವರಿಕೆ ಪತ್ರವನ್ನು ಕಳುಹಿಸುತ್ತಾನೆ. ಅದರಲ್ಲಿ ರೈತರ ಸಮಸ್ಯೆಗಳನ್ನು ಬಗೆಹರಿಸುವ ಬಗ್ಗೆಯಾಗಲಿ, ದೂರುಗಳ ವಿಚಾರಣೆ ಮಾಡುವ ಬಗೆಗಾಗಲಿ ಪ್ರಸ್ತಾಪವಿರಲಿಲ್ಲ. ಅದ್ದರಿಂದ ಎಲ್ಲಾ ಸಂಧಾನ ವಿಫಲವಾಗಿ ರೈತರು ದಂಗೆಯ ದಾರಿ ಹಿಡಿದರು. ಚಿತ್ರದುರ್ಗ, ಹೊಳಲ್ಕೆರೆ ಮತ್ತು ಹೊಸದುರ್ಗಗಳ ರೈತರು ದಂಗೆಯ ದಾರಿ ಹಿಡಿದರು. ಚಿತ್ರದುರ್ಗ, ಹೊಳಲ್ಕೆರೆ ಮತ್ತು ಹೊಸದುರ್ಗಗಳ ರೈತರು ಸಂಘಟಿತರಾಗಿ ಅಮೀಲ್ದಾರರು ಮತ್ತು ಶಿರಸ್ತೇದಾರರಿಗೆ ತಾವು ನೀಡಿದ್ದ ಕಂದಾಯ ಮತ್ತು ಲಂಚದ ಹಣವನ್ನು ಹಿಂತಿರುಗಿಸಬೇಕೆಂದು ಚಳುವಳಿ ಪ್ರಾರಂಭಿಸಿದರು. ಚಿತ್ರಹಳ್ಳಿಯ ರೈತರು ಒಟ್ಟಿಗೆ ಸೇರಿ ಅಮೀಲ್ದಾರರನ್ನು ಹಿಡಿದು ಥಳಿಸಿದರು. ರೈತರಿಂದ ಅವನು ವಸೂಲಿ ಮಾಡಿದ ತೆರಿಗೆಯನ್ನು, ಲಂಚವನ್ನು ಹಿಂದಿರುಗಿಸುವಂತೆ ಒತ್ತಾಯಿಸಿದರು. ಅವನ ವಸೂಲಾತಿ ಯಿಂದ ಸಂಗ್ರಹಿಸಿದ್ದ ಒಂದೂವರೆ ಸಾವಿರ ಪಗೋಡಗಳನ್ನು ಕಿತ್ತುಕೊಂಡರೆಂದು ತಿಳಿಯುತ್ತದೆ[೬]. ಚಿತ್ರದುರ್ಗದಲ್ಲಿ ರೈತರು ಫೌಜ್‌ದಾರರಾದ ಶೇಷಗಿರಿರಾವ್‌ನನ್ನು, ಅನೇಕ ಅಮೀಲ್ದಾರರನ್ನು, ಶಿರಸ್ತೇದಾರರನ್ನು ಸೆರೆಹಿಡಿದಿದ್ದರು. ಹಿಂದೆ ಅನ್ಯಾಯವಾಗಿ ತಮ್ಮಿಂದ ವಸೂಲಿ ಮಾಡಿದ್ದರೆಂದು ಹೇಳಲಾದ ಭಾರಿ ಮೊತ್ತದ ಹಣವನ್ನು ಅವರಿಂದ ಪಡೆದು ಕೊಂಡರು. ದೊಡ್ಡೇರಿ, ತಳಕು, ದಾವಣಗೆರೆ, ಮಾಯಕೊಂಡ ಗಳಲ್ಲೂ ಇಂಥಹ ದಂಗೆ ನಡೆದ ಬಗ್ಗೆ ವಿವರವಿದೆ. ಕ್ರಿ.ಶ.

೧೮೩೧ರ ಕೊನೆಯ ವೇಳೆಗೆ ಚಿತ್ರದುರ್ಗ ಫೌಜ್‌ದಾರಿಯ ಏಳು ತಾಲೂಕುಗಳಲ್ಲಿ ಕಂದಾಯ ವಸೂಲಾತಿಯೇ ನಿಂತಿತು. ಸಾವರ್ ಕಛೇರಿಗೆ ಸೇರಿದ ರೆಜಿಮೆಂಟ್‌ದಾರರಾದ ಚಂದ್ರರಾವ್ ರಾಣಿ ಮತ್ತು ಆಶ್ರಫ್ ಅಲಿ ಖಾನ್ ಇವರಿಗೆ ಕಳುಹಿಸಿಕೊಟ್ಟ ಒಂದು ರಾಜಾಜ್ಞೆಯಲ್ಲಿ ಈ ವಿವರ ತಿಳಿದುಬರುತ್ತದೆ[೬]. ಚಿತ್ರದುರ್ಗ ಪ್ರದೇಶದ ತಾಲೂಕುಗಳಿಗೆ ಸೇರಿದ ಅನೇಕ ರೈತರು, ಪಟೇಲರು ಮೊದಲಾದವರು ಹೆಚ್ಚಿನ ಸಂಖ್ಯೆಯಲ್ಲಿ ಬಂಡಾಯವೆದ್ದಿದ್ದಾರೆ. ಅವರ ಹೋರಾಟದ – ಮೊದಲನೆ ಹೆಜ್ಜೆ ಸರಕಾರಕ್ಕೆ ಕೊಡಬೇಕಾದ ತೆರಿಗೆಗಳನ್ನು ತಡೆಯುವುದು. ಅವರು ಗುಂಪಾಗಿ ಹೋಗಿ ಆಡಳಿತ ಹಾಗೂ ಕಂದಾಯ ವಸೂಲಿ ಎರಡೂ ಹೊಣೆಗಾರಿಕೆ ಹೊತ್ತಿದ್ದ ಚಿತ್ರದುರ್ಗದ ಫೌಜ್‌ದಾರನ ಮೇಲೆ ದಾಳಿ ಮಾಡಿದರು. ಆ ಮೇಲೆ ಅಮೀಲ್ದಾರ, ಶಿರಸ್ತೇದಾರ ಮೊದಲಾದ ಕಂದಾಯ ಆಡಳಿತದ ಕೆಳಹಂತದ ಅಧಿಕಾರಿಗಳ ಮೇಲೆ ಅಕ್ರಮಣ ಮಾಡಿದರು. ಈ ರೀತಿಯ ರೈತರ ದಂಗೆಯಿಂದ ರಾಜನಿಗೆ ದಿಕ್ಕು ತೋಚದಂತಾಯಿತು. ಆ ಪ್ರದೇಶದ ಪಟೇಲರು ಸರಕಾರಿ ಅಧಿಕಾರಿಗಳಿಗೆ ಎದುರಾಗಿ ಬಂಡಾಯಗಾರರನ್ನು ಸೇರಿಕೊಂಡಿರುವುದು ರಾಜನ ಆತಂಕ ಮತ್ತು ಕಳವಳಗಳಿಗೆ ಇನ್ನೂ ಒಂದು ಕಾರಣವಾಗಿತ್ತು.

ಚಿತ್ರದುರ್ಗ ಮತ್ತು ನಗರ ಫೌಜುದಾರಿಗಳಲ್ಲಿ ಪ್ರಾರಂಭ ಗೊಂಡ ರೈತರ ದಂಗೆಯು ಆಗ ಬೆಂಗಳೂರು ಫೌಜುದಾರಿಗೆ ಸೇರಿದ್ದ ಬೂದಿಹಾಳ್ ಗ್ರಾಮದ ರೈತರನ್ನು ಪ್ರಚೋದಿಸಿತು. ಬೂದಿಹಾಳ್ ರೈತರು ಅಲ್ಲಿನ ಫೌಜುದಾರನ ವಿರುದ್ದ ತಿರುಗಿ ಬಿದ್ದರು. ಈ ಗಲಭೆಗಳನ್ನು ಶಾಂತಗೊಳಿಸಲು ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಕೈಗೊಂಡರು. ಆದರೆ ಬೂದಿಹಾಳ್ ರೈತರು ಇದರಿಂದ ಸಮಾಧಾನಗೊಳ್ಳಲಿಲ್ಲ. ಅದೇ ಸಮಯಕ್ಕೆ ಬ್ರಿಟಿಷರು ದಂಗೆಕೋರರ ಮುಂದಾಳುಗಳನ್ನು ಶಿಕ್ಷಿಸಿದರು[೮]. ಆದರೂ ಪರಿಸ್ಥಿತಿಯನ್ನು ಹತೋಟಿಗೆ ತರಬೇಕಾದರೆ ಕೃಷ್ಣರಾಜ ಒಡೆಯರು ಬಹು ಪ್ರಯಾಸಪಡಬೇಕಾಯಿತು. ಸ್ವತಃ ಮಹಾರಾಜರೇ ಬಂದು ಚಿತ್ರದುರ್ಗ ಪ್ರದೇಶದ ರೈತರ ಕಷ್ಟಕಾರ್ಪಣ್ಯವನ್ನು ಪರಿಹರಿಸಲು ಪ್ರಯತ್ನಿಸಿದರು. ಚಿತ್ರದುರ್ಗ, ನಗರ ಮೊದಲಾದ ಕಡೆಯ ದಂಗೆಯನ್ನು ದಮನ ಮಾಡುವುದು ಸ್ವಲ್ಪ ಕಠಿಣವಾಗಿದ್ದುದರಿಂದ ಅದಕ್ಕಾಗಿ ಕಂಪನಿಯ ನೆರವನ್ನೂ ಪಡೆಯಲಾಯಿತು.

೧೮೩೧ರ ಮೇ ३೧ರಂದು ಸಶಸ್ತ್ರಪಡೆಯೊಂದಿಗೆ ಬಂದ ಕರ್ನಲ್ ಬ್ರಿಗ್ಸ್ ಮತ್ತು ಲೆಫ್ಟಿನೆಂಟ್ ರಾಚಫೋರ್ಟ್ ದಂಗೆಯನ್ನು ದಮನ ಮಾಡಿದರು. ಹನುಮಂತಪ್ಪನಾಯಕ ಶರಣಾಗತನಾಗಿ ಮರಣದಂಡನೆಗೀಡಾದನು. ಇತರರನ್ನು ಬಂಧಿಸಲಾಯಿತು. ತತ್ಪರಿಣಾಮವಾಗಿ ಹಾಗೂ ಘಟನೆಗಳಿಂದ ಬ್ರಿಟಿಷರ ದೃಷ್ಟಿಯಲ್ಲಿ ಮುಮ್ಮಡಿ ಕೃಷ್ಣರಾಜಒಡೆಯರು ಅಸಮರ್ಥರೆಂದು ಪರಿಗಣಿತರಾದರು. ಆಗ ಬ್ರಿಟಿಷ್ ಗವರ್ನರ್ ಜನರಲ್ ಆಗಿದ್ದ ವಿಲಿಯಂ ಬೆಂಟಿಂಕ್‌ನು ತನ್ನ ಸರಕಾರದ ಆಜ್ಞೆಯಂತೆ ಮುಮ್ಮಡಿ ಕೃಷ್ಣರಾಜಒಡೆಯರನ್ನು ಅಧಿಕಾರದಿಂದ ಇಳಿಸಿ ಮೈಸೂರಿನ ಆಡಳಿತವನ್ನು ತಾನೇ ವಹಿಸಿಕೊಂಡನು. ಹೀಗೆ ೧೮೩೧ರಿಂದ ೧೮೮೧ರವರೆಗೆ ಮೈಸೂರು ಸಂಸ್ಥಾನವನ್ನು ಬ್ರಿಟಿಷ್ ಕಮೀಷನರ್ ಆಳಿದರು. ನಂತರ ಚಿತ್ರದುರ್ಗ ಪ್ರದೇಶದ ಆಡಳಿತವನ್ನು ನೋಡಿಕೊಳ್ಳಲು ಒಬ್ಬ ಕಮೀಷನರನ್ನು ನೇಮಕ ಮಾಡಲಾಗಿತ್ತು. ಬ್ರಿಟಿಷ್ ಆಡಳಿತದಲ್ಲಿ ಚಿತ್ರದುರ್ಗ ಪ್ರದೇಶ ಪ್ರತ್ಯೇಕ ಆಡಳಿತ ವಿಭಾಗವಾಗಿ ಮಾರ್ಪಾಟು ಹೊಂದಿತ್ತು.



**ಆಧಾರಸೂಚಿ**


೧. ಎಂ. ಶಾಮರಾಯರು, ಮೈಸೂರು ಸಂಸ್ಥಾನದ ಚರಿತ್ರಾಸಾರ, ಮೈಸೂರು, ೧೮೮೩, ಪು. ೭೦.

೨. ಸಿ. ಹಯವದನ ರಾವ್, ಮೈಸೂರು ಗೆಜೆಟಿಯರ್, ಸಂಪುಟ. ೪, ಮೈಸೂರು ಸರಕಾರ, ಮೈಸೂರು, ೧೮೮೩, ಪು. ೬೫–೬೬.

೩. ಬಿ.ಎಲ್. ರೈಸ್, ಮೈಸೂರು ಗೆಜೆಟಿಯರ್, ಸಂಪುಟ ೧ ಪು. ೬೧೬.

೪. ಕೆ.ಕೆ. ಎನ್, ಕುರುಪ್, ಭೂಸ್ವಾಮ್ಯ ಮತ್ತು ಸಾಮಾಜಿಕ ಬದಲಾವಣೆ ವಸಾಹತುಶಾಹಿ ಸಂದರ್ಭದಲ್ಲಿ, ಸೆಬಾಸ್ಟಿಯನ್ ಜೋಸೆಫ್, ಸಂಪುಟ ಸಂಪಾದಕರು, ಕರ್ನಾಟಕ ಚರಿತ್ರೆ ಸಂಪುಟ ೬ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೩೨.

೫. ಎಚ್. ಸ್ಟೋಕ್ಸ್, ದಿ ರಿಪೋರ್ಟ್ ಆನ್ ದಿ ನಗರ ಡಿವಿಜನ್ ಆಫ್ ಮೈಸೂರು, ೧೮೩೧, ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ವಿಧಾನಸೌಧ, ಬೆಂಗಳೂರು, ಫ್ಯಾರ ೬.

೬ ಅದೇ, ಪು. ೨೩.

೭. ಸೆಬಾಸ್ಟಿಯನ್ ಜೋಸೆಫ್, ರೈತರಲ್ಲಿ ಒಗ್ಗಟ್ಟು ಮತ್ತು ಪ್ರತಿಭಟನೆ ಮೈಸೂರು (ಕ್ರಿ.ಶ. ೧೮೩೦–೧೮೩೧) ಸೆಬಾಸ್ಟಿಯನ್ ಜೋಸೆಫ್ ಸಂಪುಟ ಸಂಪಾದಕರು, ಸೆಬಾಸ್ಟಿಯನ್ ಜೋಸೆಫ್ ಸಂಪುಟ ಸಂಪಾದಕರು, ಕರ್ನಾಟಕ ಚರಿತ್ರೆ ಸಂಪುಟ ೬, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು–೯೭.

೮. ಕೆ.ಎನ್. ವೆಂಕಟ ಸುಬ್ಬಶಾಸ್ತ್ರೀ, ದಿ ಮನ್ರೋಸಿಸ್ಟಂ ಆಫ್ ಬ್ರಿಟಿಶ್ ಸ್ಟೇಟ್ಸ್‌ಮನ್‌ಶಿಫ್ ಇನ್ ಇಂಡಿಯಾ. ದಿ ಯೂನಿವರ್ಸಿಟಿ ಆಫ್ ಮೈಸೂರು, ಮೈಸೂರು, ೧೯೩೯. ಪು. ೧೦೭.

೯. ಕ್ಯಾಪ್ಟನ್ ಚಾರ್ಲ್ಸ್, ರಿಪೋರ್ಟ್ ಆನ್ ಚಿತ್ರದುರ್ಗ ಡಿವಿಜನ್ ಆಫ್ ಮೈಸೂರು, ೧೮೪೨ ಪು. ३೦. (ಕರ್ನಾಟಕ ಸ್ಟೇಟ್ ಆರ್ಕೈವ್ಸ್. ಬೆಂ).

೧೦. ಪೇಪರ್ಸ್ ರಿಲೇಟಿಂಗ್ ಟು ದಿ ಸರ್ವೇ ಆಯಂಡ್ ಸೆಟ್ಲಮೆಂಟ್ ಆಫ್ ಚಿತ್ರದುರ್ಗ ಡಿಸ್ಟ್ರಿಕ್ಟ್, ಪು. ೫೦. (ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂ).



# "ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ-ಅವರು ತಂದ ಆಡಳಿತ ಸುಧಾರಣೆಗಳು" (೧೮೯೪-೧೯೦೨)

ಡಾ. ಮಹಾದೇವಿ* ಸಂತೋಷ್ ಶೆಟ್ಟಿ**

**ಮೈ**ಸೂರು ಒಡೆಯರ ಇತಿಹಾಸದಲ್ಲಿ ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನರವರು ಮಹತ್ವದ ಸ್ಥಾನವನ್ನು ಗಳಿಸಿದ್ದಾರೆ. ಏಕೆಂದರೆ ಮೈಸೂರು ಸಂಸ್ಥಾನದಲ್ಲಿ ಒಡೆಯರ ಆಳ್ವಿಕೆಯು ನಿರಂತರವಾಗಿ ಮುಂದುವರಿದು ಕೊಂಡು ಹೋಗಲು ಆ ಮನೆತನದ ಅನೇಕ ರಾಣಿಯರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಆಹರ್ನಿಶಿ ದುಡಿದಿರುವರು[೧]. ಆದರೆ ಯಾವ ರಾಣಿಯರೂ ನೇರವಾಗಿ ರಾಜ್ಯಾಡಳಿತ ನಡೆಸಿದುದು ಒಡೆಯರ ಇತಿಹಾಸದಲ್ಲಿ ಕಂಡು ಬರುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಮಹಾರಾಣಿ ಕೆಂಪ ನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ ಅವರು ಅತ್ಯಂತ ಕಷ್ಟಕರವಾದ ಪರಿಸ್ಥಿತಿಯಲ್ಲಿ ಮೈಸೂರು ಸಂಸ್ಥಾನದ ರಾಜಪ್ರತಿನಿಧಿಯಾಗಿ ಅಧಿಕಾರ ವಹಿಸಿಕೊಂಡು ರಾಜ್ಯದಲ್ಲಿ ಉತ್ತಮವಾದ ಮತ್ತು ದಕ್ಷವಾದ ಆಡಳಿತವನ್ನು ಜಾರಿಗೆ ತಂದು, ಶಾಂತಿ ಮತ್ತು ಸುವ್ಯವಸ್ಥೆಯನ್ನು ನೆಲೆಗೊಳಿಸಿದರು.

ಶ್ರೀ ಹತ್ತನೇ ಚಾಮರಾಜೇಂದ್ರ ಒಡೆಯರು ಬ್ರಿಟೀಷರು ವಿಧಿಸಿದ್ಧ **ಇನ್‌ಸ್ಟ್ರುಮೆಂಟ್ ಆಫ್ ಟ್ರಾನ್ಸ್‌ಫರ್**‌ನಲ್ಲಿ ಸಿದ್ಧಗೊಂಡಿರುವ ತಹನಾಮೆಯ ಪ್ರಕಾರ[೨] ಕ್ರಿ.ಶ. ೧೮೮೧ ಮಾರ್ಚ್ ೨೫ ರಂದು ಮೈಸೂರು ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡಿದ್ದರು. ಇನ್‌ಸ್ಟ್ರುಮೆಂಟ್ ಆಫ್ ಟ್ರಾನ್ಸ್‌ಫರ್ ಪ್ರಕಾರ ವಿದೇಶಾಂಗ ನೀತಿ, ಶಸ್ತ್ರಾಸ್ತ್ರ ತಯಾರಿಕೆ ಇತ್ಯಾದಿ ವಿಷಯಗಳನ್ನು ಬ್ರಿಟೀಷ್ ಸರ್ಕಾರದ ನಿಯಂತ್ರಣದಲ್ಲಿಟ್ಟು, ಉಳಿದಂತೆ ದಿವಾನರ ಸಹಕಾರದೊಂದಿಗೆ ಚಾಮರಾಜೇಂದ್ರ ಒಡೆಯರು ಸಂಸ್ಥಾನದ ಆಡಳಿತವನ್ನು ನಡೆಸಬೇಕಿದ್ದಿತು.

ಸಿ.ರಂಗಾಚಾರ್ಲು ಅವರು ದಿವಾನರಾಗಿ ನೇಮಕಗೊಂಡಿದ್ದರಿಂದ ಶ್ರೀ ಚಾಮರಾಜೇಂದ್ರ ಒಡೆಯರ ಆಡಳಿತಕ್ಕೆ ಅವರ ಅನುಭವವು ರಾಜ್ಯದ ಅಭಿವೃದ್ಧಿಗೆ ದೊರೆತವು. ರಾಜ್ಯ ಮತ್ತು ಪ್ರಜೆಗಳ ಅಭಿವೃದ್ಧಿಯ ಬಗೆಗೆ ಸದಾ ಕಾಳಜಿ ಇರಿಸಿಕೊಂಡಿದ್ದ ಚಾಮರಾಜೇಂದ್ರ ಒಡೆಯರು ದಿನಾಂಕ ೨೮, ಡಿಸೆಂಬರ್ ೧೮೯೪ರಂದು ನಿಧನರಾದರು[೩] ಶ್ರೀ ಚಾಮರಾಜೇಂದ್ರ ಒಡೆಯರು ಅಕಾಲ ಮೃತ್ಯುವಿಗೆ ಒಳಗಾದುದು ರಾಜ್ಯದಲ್ಲಿ ಆಡಳಿತಾತ್ಮಕ ಬಿಕ್ಕಟು ಉಂಟಾಗಲು ಕಾರಣವಾಯಿತು. ಶ್ರೀ ಚಾಮರಾಜೇಂದ್ರ ಒಡೆಯರ ಮರಣದ ನಂತರ ಬ್ರಿಟೀಷರ ಇನ್‌ಸ್ಟ್ರುಮೆಂಟ್ ಆಫ್ ಟ್ರಾನ್ಸ್‌ಫರ್ ಕಾಯ್ದೆಯ ಪ್ರಕಾರ ರಾಜ್ಯಕ್ಕೆ ಮುಂದಿನ ರಾಜನ ಆಯ್ಕೆ ಮಾಡಬೇಕಾಗಿತ್ತು.[೪]

ಆದರೆ ಇವರ ಹಿರಿಯ ಪುತ್ರ ನಾಲ್ವಡಿ ಕೃಷ್ಣರಾಜ ಒಡೆಯರು ಹತ್ತು ವರ್ಷದ ಬಾಲಕನಾಗಿದ್ದು ರಾಜ್ಯದ ಅಧಿಕಾರವನ್ನು ನಡೆಸುವುದು ಕಷ್ಟಸಾಧ್ಯವಾಗಿದ್ದಿತು. ಇದರಿಂದ ಬಾಲಕ ರಾಜನು ಪ್ರಾಪ್ತ ವಯಸ್ಕನಾಗುವವರೆಗೆ ಅವನ ಹೆಸರಿನಲ್ಲಿ ರಾಜಪ್ರತಿನಿಧಿಯಾಗಿ ಯಾರನ್ನು ಆಯ್ಕೆ ಮಾಡಬೇಕು ಎಂಬ ವಿಷಯದಲ್ಲಿ ಬ್ರಿಟೀಷ್ ರೆಸಿಡೆಂಟರಿಗೂ, ದಿವಾನರಿಗೂ ಮತ್ತು ಸ್ಥಳೀಯರಲ್ಲೂ ಗೊಂದಲ ಏರ್ಪಟ್ಟಿದ್ದಿತು.[೫]

ಶ್ರೀ ಚಾಮರಾಜೇಂದ್ರ ಒಡೆಯರ ಆಳ್ವಿಕೆಯಲ್ಲಿ ದಿವಾನರಾಗಿದ್ದ ಶ್ರೀ ಕೆ. ಶೇಷಾದ್ರಿ ಅಯ್ಯರ್ ಅವರನ್ನು ಮೈಸೂರು ಸಂಸ್ಥಾನದ ಮುಂದಿನ ರಾಜಪ್ರತಿನಿಧಿಯಾಗಿ ನೇಮಕ ಮಾಡಬೇಕೆಂಬ ಮದ್ರಾಸ್ ಮೂಲದ ಒಂದು ಗುಂಪು ಬೆಂಬಲಿಸಿದರೆ; ಶ್ರೀ ಎಂ.ವೆಂಕಟಕೃಷ್ಣಯ್ಯ ಮತ್ತು ಪಿ.ಎನ್.ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ಮೈಸೂರಿನ ಸ್ಥಳೀಯರ ಗುಂಪು ಮಹಾರಾಣಿ ಕೆಂಪನಂಜಮ್ಮಣ್ಣಿಯವರನ್ನು ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಪ್ರಾಪ್ತವಯಸ್ಕರಾಗುವವರೆಗೂ, ಮೈಸೂರು ಸಂಸ್ಥಾನದ ರಾಜಪ್ರತಿನಿಧಿಯನ್ನಾಗಿ ನೇಮಕ ಮಾಡಬೇಕೆಂದು ಬ್ರಿಟೀಷರಲ್ಲಿ ಒತ್ತಾಯವನ್ನು ತಂದರು.[೬] ಬ್ರಿಟೀಷ್ ರೆಸಿಡೆಂಟನು ಮೈಸೂರಿಗರ ಬೇಡಿಕೆಯನ್ನು ಮನ್ನಿಸಿ, ಮತ್ತು ದಿವಾನರ ಪ್ರಭಾವವನ್ನು ತಡೆಗಟ್ಟುವ ಮನೋಧೋರಣೆಯಿಂದ ಮಹಾರಾಣಿ ಕೆಂಪನಂಜಮ್ಮಣ್ಣಿ

* ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಕರಾಮುವಿ, ಮೈಸೂರು.
** ಇತಿಹಾಸ ಸಂಶೋಧನಾ ವಿದ್ಯಾರ್ಥಿ, ಕರಾಮುವಿ, ಮೈಸೂರು.

ಯವರನ್ನು ರಾಜಪ್ರತಿನಿಧಿಯಾಗಿ ನೇಮಕ ಮಾಡಲು ಭಾರತ ಸರ್ಕಾರದ ಗವರ್ನಲ್ ಜನರಲ್‌ನಿಗೆ ಪತ್ರ ಬರೆದು ಶಿಫಾರಸ್ಸು ಮಾಡಿದನು.[೭]

ಭಾರತದ ಬ್ರಿಟೀಷ್ ಸರ್ಕಾರವು, ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿದ್ದ ಗೊಂದಲಮಯ ರಾಜಕೀಯ ಪರಿಸ್ಥಿತಿಯನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿ, ಅಲ್ಲಿಯ ಬ್ರಿಟೀಷ್ ರೆಸಿಡೆಂಟನ ಶಿಫಾರಸ್ಸು ಮೇರೆಗೆ ಮಹಾರಾಣಿ ಕೆಂಪನಂಜಮ್ಮಣ್ಣಿಯವರನ್ನು ಅವರ ಅಪ್ರಾಪ್ತ ವಯಸ್ಕ ಬಾಲಕನ ಹೆಸರಿನಲ್ಲಿ ರಾಜಪ್ರತಿನಿಧಿಯಾಗಿ ಆಡಳಿತ ನಡೆಸಲು ಫೆಬ್ರವರಿ ೧೮, ೧೮೯೫ರಂದು ಆದೇಶವನ್ನು ನೀಡಿತು.[೮] ಮೇಲಿನ ಆದೇಶದಂತೆ ಮೈಸೂರು ಸಂಸ್ಥಾನದ ಮುಂದಿನ ರಾಜಕುಮಾರನಾಗಿ ಅಧಿಕಾರ ವಹಿಸಿಕೊಳ್ಳುವಂತೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರನ್ನು ವೈಸ್‌ರಾಯ್ ಎಲ್ಗಿನನು ಆಹ್ವಾನಿಸಿದ.[೯]

ಮೈಸೂರು ನಗರದ ಪುರಜನರು ಕೂಡ ಕ್ರಿ.ಶ. ೧೮೯೫ ಜನವರಿ ೫ ರಂದು ಮಹಾರಾಣಿ ಕೆಂಪನಂಜಮ್ಮಣ್ಣಿಯವರಿಗೆ ಒಂದು ಮನವಿಯನ್ನು ಅರ್ಪಿಸಿ[೧೦], **"ಧೈವಾಧೀನರಾದ ಮಹಾರಾಜರ ಸ್ಥಾನದಲ್ಲಿ ತಾವು ನಿಂತು ರಾಜ್ಯಭಾರವನ್ನು ವಹಿಸಿಕೊಳ್ಳಬೇಕೆಂದು"** ಕೇಳಿಕೊಂಡರು. ಬ್ರಿಟೀಷ್ ಸರ್ಕಾರವೂ ಈ ಬಗ್ಗೆ ಮಹಾರಾಣಿಯವರಲ್ಲಿ ಇದೇ ರೀತಿ ವಿಜ್ಞಾಪನೆ ಮಾಡಿಕೊಂಡಿತು. ಆಗಿನ ವೈಸ್‌ರಾಯಿ ಅವರು ಮಹಾರಾಣಿ ಕೆಂಪನಂಜಮ್ಮಣ್ಣಿಯವರನ್ನು ಭೇಟಿ ಮಾಡಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಅಪ್ರಾಪ್ತ ವಯಸ್ಸಿನವರು ಆಗಿರುವುದರಿಂದ ರಾಜ್ಯಾಭಾರ ನಡೆಸುವುದು ಕಷ್ಟಸಾಧ್ಯವಾದ ಮಾತಾಗಿರುತ್ತದೆ. ಇಂತಹ ಸಂದರ್ಭದಲ್ಲಿ ತಾವು ರಾಜ್ಯದ ರಾಜಪ್ರತಿನಿಧಿಯಾಗಿ ಕೆಲಸ ಮಾಡುವಂತೆ ಕೋರಿಕೊಂಡಿದ್ದನು.

ಅದರಂತೆ ಕ್ರಿ.ಶ. ೧೮೯೫, ಫೆಬ್ರವರಿ ೧ ರಂದು ಹತ್ತು ವರ್ಷದ ಬಾಲಕ ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಬ್ರಿಟೀಷ್ ರೆಸಿಡೆಂಟ್ ಕರ್ನಲ್ ಹಂಡರ್‌ಸನ್‌ನು ಬ್ರಿಟೀಷ್ ಸರ್ಕಾರದ ಆದೇಶದಂತೆ ಮೈಸೂರು ಸಂಸ್ಥಾನದ ಮುಂದಿನ ದೊರೆಯಾಗಿ ನಿಯುಕ್ತಿಗೊಳಿಸಿದನು. ಬ್ರಿಟೀಷ್ ಸರ್ಕಾರವು ಮೊದಲೇ ನಿಗಧಿ ಮಾಡಿದಂತೆ ನಾಲ್ವಡಿ ಕೃಷ್ಣರಾಜ ಒಡೆಯರು ಅಪ್ರಾಪ್ತ ಬಾಲಕರಾಗಿದ್ದುದರಿಂದ, ಅವರ ತಾಯಿ ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸ್ನನ್ನಿಧಾನ ಅವರು ಮೈಸೂರು ಸಂಸ್ಥಾನದ ರೀಜೆಂಟರಾಗಿ (ರಾಜಪ್ರತಿನಿಧಿಯಾಗಿ) ಅದೇ ದಿನ ಅಧಿಕಾರ ವಹಿಸಿಕೊಂಡು ಸುಮಾರು ಎಂಟು ವರ್ಷಗಳ ಕಾಲ (೧೮೯೫–೧೯೦೨) ಯಶಸ್ವಿಯಾಗಿ ಆಡಳಿತ ನಡೆಸಿದರು.[೧೧]

ಮಹಾರಾಣಿಯವರು ಸುಗಮವಾಗಿ ರಾಜ್ಯದ ಆಡಳಿತವನ್ನು ನಿರ್ವಹಿಸಲು ಸಹಾಯಕ್ಕಾಗಿ ಶ್ರೀ ಕೆ.ಶೇಷಾದ್ರಿ ಐಯ್ಯರ್ ಅವರನ್ನು ದಿವಾನರನ್ನಾಗಿ ಮುಂದುವರಿಸಲಾಯಿತು. ಈ ಸಂದರ್ಭದಲ್ಲಿ ವೈಸ್‌ರಾಯ್ ಅವರು ದಿವಾನರಾದ ಶ್ರೀ ಕೆ.ಶೇಷಾದ್ರಿ ಅಯ್ಯರ್ ಅವರಿಗೆ ಒಂದು ಪತ್ರವನ್ನು ಬರೆದು, ದಿನನಿತ್ಯದ ಆಡಳಿತವನ್ನು ಬ್ರಿಟೀಷ್ ರೆಸಿಡೆಂಟಿನ ಸಲಹೆಯಂತೆ ಮತ್ತು ಆದಷ್ಟು ಮಟ್ಟಿಗೆ ಮಹಾರಾಣಿಯವರ ಸದಿಚ್ಛೆಯಂತೆ ನಡೆಸಬೇಕೆಂದು ತಿಳಿಸಿದನು.[೧೨]

ಮಹಾರಾಣಿಯವರು ರಾಜಪ್ರತಿನಿಧಿಯಾಗಿ ನೇಮಕಗೊಂಡಿದ್ದನ್ನು ಪ್ರಜೆಗಳು ಸ್ವಾಗತಿಸಿದಂತೆ, ಸಂಸ್ಥಾನದ ಪ್ರಜಾಪ್ರತಿನಿಧಿಗಳು, ಅಧಿಕಾರಿಗಳು ಸಂತೋಷದಿಂದ ಸ್ವಾಗತಿಸಿದರು.

ಮಹಾರಾಣಿ ವಾಣಿವಿಲಾಸ ಸನ್ನಿಧಾನದವರು ಮೈಸೂರು ಸಂಸ್ಥಾನದ ರಾಜಪ್ರತಿನಿಧಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಪರಿಣಾಮಕಾರಿಯಾದ ಸುಧಾರಣಾ ಕಾರ್ಯಗಳನ್ನು ಕೈಗೆತ್ತಿಕೊಂಡರು. ರೀಜೆಂಟರವರು ಮುಖ್ಯವಾಗಿ ಕೈಗೆತ್ತಿಗೊಂಡ ಸುಧಾರಣಾ ಕಾರ್ಯಗಳೆಂದರೆ ಆಗ ಜನರಿಗೆ ಪೀಡಕವೆನಿಸಿದ್ದ ಪ್ಲೇಗ್‌ರೋಗ ನಿವಾರಣ ಕಾರ್ಯಗಳು ಮತ್ತು ಶಿವನಸಮುದ್ರದಲ್ಲಿ ಸ್ಥಾಪಿಸಿದ ಹೈಡ್ರೊ–ಎಲೆಕ್ಟ್ರಿಕ್ ಪವರ್ ಉತ್ಪಾದನಾ ಘಟಕದ ಸ್ಥಾಪನೆ ಮುಖ್ಯವಾದುವು. ಇವು ರಾಜ್ಯವನ್ನು ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯಲು ಸಹಕಾರಿಯಾದವು. ರೀಜೆಂಟ್‌ರವರ ಪರಿಣಾಮಕಾರಿಯಾದ ಆಡಳಿತಕ್ಕೆ ಮೂಲ ಕಾರಣ ಅವರ ಪತಿ ಶ್ರೀ ಚಾಮರಾಜೇಂದ್ರ ಒಡೆಯರು ತಮ್ಮ ಆಳ್ವಿಕೆಯ ಕಾಲದಲ್ಲಿ ತಂದ ಸುಧಾರಣೆಗಳು ಮತ್ತು ನೀಡಿದ ಕೊಡುಗೆಗಳು ಮಹಾರಾಣಿಯವರಿಗೆ ಪ್ರೇರಕ ಶಕ್ತಿಯಾಗಿದ್ದವು. ಅತಿಮುಖ್ಯವಾಗಿ ರೀಜೆಂಟ್ ಮಹಾರಾಣಿ ಕೆಂಪನಂಜಮ್ಮಣ್ಣಿಯವರು ಒಬ್ಬ ಸ್ತ್ರೀಯಾದರೂ ಬ್ರಿಟೀಷ್ ಅಧಿಕಾರಿಗಳೊಂದಿಗೆ ಸ್ನೇಹಸೌಹಾರ್ಧಯುತವಾದ ಸಂಬಂಧಗಳನ್ನು ಮುಂದುವರಿಸಿಕೊಂಡು ಬಂದದ್ದರಿಂದ ಅವರ ಆಡಳಿತಕ್ಕೆ ಬ್ರಿಟೀಷರಿಂದ ಬೆಂಬಲ ಮತ್ತು ಸಹಕಾರ ದೊರೆಯಿತು. ಅದು ರಾಜ್ಯವನ್ನು ಹಳೆಯ ಸಂಪ್ರದಾಯದಿಂದ ಹೊಸ ಸಂಪ್ರದಾಯಕ್ಕೂ ಹಾಗೂ ಅಭಿವೃದ್ಧಿ ಪಥದತ್ತ ಕೊಂಡೊಯ್ದು, ರಾಜ್ಯವು ಪ್ರಗತಿ ಪಥದಲ್ಲಿ ಮುನ್ನಡೆಯಲು ಸಾಧ್ಯವಾಯಿತು. ಹಾಗಾಗಿ ಹಲವು ಸುಧಾರಣೆಗಳನ್ನು ಜಾರಿಗೆ ತಂದರು ಅಂತಹವುಗಳಲ್ಲಿ ಪ್ರಮುಖವಾದವುಗಳೆಂದರೆ,

### ವಾಣಿವಿಲಾಸ ಜಲಸಾಗರ ನಿರ್ಮಾಣ

ಕೆಂಪನಂಜಮ್ಮಣ್ಣಿಯವರ ಆಡಳಿತಾವಧಿಯ ಅತ್ಯಂತ ಮಹತ್ವಾಕಾಂಕ್ಷಿ ಹಾಗೂ ಮಹತ್ವಪೂರ್ಣ ಸಾಧನೆಯೆಂದರೆ

ಚಿತ್ರದುರ್ಗ ಜಿಲ್ಲೆಯ ವಾಣಿವಿಲಾಸ ಸಾಗರ ನಿರ್ಮಾಣ[೧೩]

ಈ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಮಾರಿಕಣಿವೆ ಬಳಿ ವೇದಾವತಿ ನದಿಗೆ ಅಡ್ಡವಾಗಿ ನಿರ್ಮಿಸಿದ ಈ ಜಲಾಶಯ ಅಂದು ಮೈಸೂರು ರಾಜ್ಯದಲ್ಲೇ ಅತ್ಯಂತ ದೊಡ್ಡ ನೀರಿನ ಜಲಸಾಗರವಾಗಿದ್ದಿತು. ಭಾರತದಲ್ಲಿಯೇ ಒಂದು ವೈಶಿಷ್ಟ್ಯಪೂರ್ಣ ಬೃಹತ್ ನಿರ್ಮಾಣವಾಗಿದ್ದಿತು.

ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆಯು ಕಡಿಮೆಯಾಗಿದ್ದು ಅಲ್ಲಿನ ವೇದಾವತಿಯ ನದಿಯ ನೀರು ವ್ಯವಸಾಯಕ್ಕೆ ಬಳಕೆಯಾಗದೆ ಆಂಧ್ರದ ಕಡೆಗೆ ಹರಿದು ಹೋಗುತ್ತಿತ್ತು. ಆದುದರಿಂದ ಈ ಜಿಲ್ಲೆಯಲ್ಲಿ ಆಗಾಗ್ಗೆ ಕ್ಷಾಮಗಳು ತಲೆದೋರಿ ಜನರು ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಿದ್ದರು. ಈ ಜನರ ಸಮಸ್ಯೆಗಳನ್ನು ನಿವಾರಿಸುವ ಸಲುವಾಗಿ ಇಲ್ಲಿನ ವ್ಯವಸಾಯ ಅಭಿವೃದ್ಧಿಗೆ ಅದೇ ನದಿಯಿಂದ ಅಗತ್ಯ ನೀರನ್ನು ಒದಗಿಸಿ ಜಿಲ್ಲೆಯ ರೂಪವನ್ನೇ ಬದಲಾಯಿಸಬಹುದೆಂದು ಭಾವಿಸಿ, ಈ ಯೋಜನೆಯನ್ನು ಕೈಕೊಳ್ಳಲಾಗಿದ್ದಿತು. ಮಹಾರಾಣಿಅವರ ಅನುಮತಿ ಪಡೆದು ಕ್ರಿ.ಶ. ೧೮೯೮ರಲ್ಲಿ ನಿರ್ಮಾಣ ಕಾರ್ಯವನ್ನು ಆರಂಭಿಸಿರು.[೧೪] ಈ ಕಟ್ಟಡದ ಕಾಮಗಾರಿ ಒಂಬತ್ತು ವರ್ಷಗಳ ಕಾಲ ನಡೆಯಿತು. ಕ್ರಿ.ಶ. ೧೯೦೭ರ ವೇಳೆಗೆ 'ಮಾರಿಕಣಿವೆ' ಅಥವಾ 'ವಾಣಿವಿಲಾಸ ಜಲಾಶಯ' ಕಾರ್ಯವು ಪೂರ್ಣಗೊಂಡಿತು.[೧೫] ಅದು ಪೂರ್ಣವಾಗುವ ವೇಳೆಗೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರು ಮೈಸೂರು ಸಂಸ್ಥಾನದ ಮಹಾರಾಜರಾಗಿ ನೇರ ಅಧಿಕಾರವನ್ನು ಸ್ವೀಕರಿಸಿದ್ದರು. ಈ ಜಲಾಶಯದ ನಿರ್ಮಾಣದಲ್ಲಿ ಆಸಕ್ತಿ ತೋರಿಸಿದ್ದ ದಿವಾನ್ ಕೆ.ಶೇಷಾದ್ರಿ ಅಯ್ಯರ್ ಅವರು ಕೂಡ ಬದುಕಿರಲಿಲ್ಲ, ವಾಣಿವಿಲಾಸ ಸಾಗರದ ಎತ್ತರ ೧೪೨ ಅಡಿಗಳು. ಉದ್ದ ೧೩೩೦ ಅಡಿಗಳು ಅಣೆಕಟ್ಟಿನ ಅಗಲ ೧೫೫೦ ಅಡಿಗಳು. ಈ ಅಣೆಕಟ್ಟಿನಿಂದ ಸುಮಾರು ೩೦,೦೦೦ ಸಾವಿರ ಎಕರೆ ಜಮೀನಿಗೆ ಬೇಕಾದ ನೀರು ಸಂಗ್ರಹವಾಗುತ್ತಿತ್ತು. ಇದರ ನಿರ್ಮಾಣಕ್ಕೆ ತಗುಲಿದ ವೆಚ್ಚ ಒಟ್ಟು ೪೫ ಲಕ್ಷ ರೂಗಳು.[೧೬]

## ಭೂಗರ್ಭ ಶೋಧನಾ ಇಲಾಖೆಯ ಸ್ಥಾಪನೆ

ಮಹಾರಾಣಿ ವಾಣಿವಿಲಾಸ ಸನ್ನಿಧಾನ ಅವರ ಆಡಳಿತದಲ್ಲಿ ಚಿನ್ನದ ಗಣಿಗಳ ಅದಿರು ನಿಕ್ಷೇಪದ ಶೋಧನ ಕಾರ್ಯವು ನಡೆದದ್ದು ಗಮನಾರ್ಹವಾದುದು. ಕರ್ನಾಟಕದಲ್ಲಿ ಹೇರಳವಾದ ಖನಿಜ ಸಂಪತ್ತು ಲಭ್ಯವಾಗಿದ್ದು ಪ್ರಾಚೀನ ಕಾಲದಿಂದಲೂ ಅನೇಕ ಲೋಹಗಳ ಗಣಿಗಾರಿಕೆ ನಡೆದಿತ್ತು.[೧೭] ಆದರೆ ಆಧುನಿಕ ಕಾಲದಲ್ಲಿ ವೈಜ್ಞಾನಿಕ ವಿಧಾನಗಳಿಂದ ಚಿನ್ನವನ್ನು ತೆಗೆಯುವ ಕಾರ್ಯ .ಆರಂಭವಾಗಿದ್ದು ರೀಜೆಂಟ್ ಅವರ ಆಡಳಿತದ ಕಾಲದಲ್ಲಿ ಕ್ರಿ.ಶ. ೧೮೯೪ರಲ್ಲಿ ವೈಜ್ಞಾನಿಕ ರೀತಿಯಲ್ಲಿ ಭೂ ವೈಜ್ಞಾನಿಕ ಪರಿವೀಕ್ಷಣೆಯನ್ನು ಕೈಗೊಂಡು ರಾಜ್ಯದ ಖನಿಜ ಸಂಪತ್ತಿನ ಶೋಧವನ್ನು ಕೈಗೊಳ್ಳಲು 'ಭೂವಿಜ್ಞಾನ ಇಲಾಖೆ'ಯನ್ನು ಪ್ರಾರಂಭಿಸಲಾಯಿತು.[೧೮] ರಾಜ್ಯದ ಗಣಿಗಳ ಮೇಲ್ವಿಚಾರಣೆ ಮತ್ತು ಪರಿಶೀಲನೆಯ ಕಾರ್ಯವನ್ನು ಈ ಇಲಾಖೆಗೆ ವಹಿಸಲಾಯಿತು. ಈ ಸಂದರ್ಭದಲ್ಲಿಯೇ ಕೆಲವು ಪಾಶ್ಚಿಮಾತ್ಯ ಕಂಪನಿಗಳು ಮೈಸೂರು ಸಂಸ್ಥಾನದ ಸರ್ಕಾರದೊಡನೆ ಒಪ್ಪಂದ ಮಾಡಿಕೊಂಡು ಕೋಲಾರದ ಚಿನ್ನದ ಗಣಿಗಳಲ್ಲಿ ಅದಿರು ತೆಗೆಯುವ ಕಾರ್ಯವನ್ನು ಆರಂಭಿಸಿದವು. ಈ ಕಂಪನಿಗಳು ಚಿನ್ನವನ್ನು ಹೊರತೆಗೆದು ಹೇರಳವಾಗಿ ಲಾಭ ಸಂಪಾದಿಸಿದ್ದಲ್ಲದೆ, ರೀಜೆಂಟ್ ಮಹಾರಾಣಿಯವರ ಆಳ್ವಿಕೆಯ ಕಾಲದಲ್ಲಿ ಸರ್ಕಾರಕ್ಕೆ ಸುಮಾರು ೯೧ ಲಕ್ಷಕ್ಕೂ ಹೆಚ್ಚು ರೂಪಾಯಿಗಳನ್ನು ದೇಣಿಗೆ ನೀಡಿದವು.[೧೯] ಈ ಅವಧಿಯಲ್ಲಿ ಹದಿನಾಲ್ಕು ಕಂಪನಿಗಳು ಚಿನ್ನವನ್ನು ತೆಗೆಯುವ ಕಾರ್ಯದಲ್ಲಿ ನಿರತವಾಗಿದ್ದವು ಎಂಬುದು ಮೈಸೂರು ದಾಖಲೆಗಳಿಂದ ತಿಳಿದು ಬರುತ್ತವೆ.[೨೦]

## ಕ್ಷಾಮನಿವಾರಣ ಕ್ರಮಗಳು

ಕ್ರಿ.ಶ. ೧೮೯೭ರಲ್ಲಿ ಮಳೆಯಾಗದೆ ಮೈಸೂರು ಸಂಸ್ಥಾನ ಮಾತ್ರವಲ್ಲದೆ ದೇಶದಾದ್ಯಂತ ಭೀಕರವಾದ ಕ್ಷಾಮವು ತಲೆದೋರಿತು. ಅಧಿಕ ಸಂಖ್ಯೆಯ ಪ್ರಜೆಗಳು ತೀವ್ರವಾದ ತೊಂದರೆಗೆ ಒಳಗಾದರು. ಸರ್ಕಾರವು ಕೂಡಲೇ ಕ್ಷಾಮ ನಿವಾರಣಾ ಕಾರ್ಯಗಳನ್ನು ಕೈಗೊಂಡಿತು. ಕೆಲವು ಕೆರೆಗಳ ಅಚ್ಚುಕಟ್ಟು ಪ್ರದೇಶಗಳ ಒಣ ಭೂಮಿಯಲ್ಲಿ ಬೇಸಾಯಕ್ಕೆ ಅವಕಾಶ ಮಾಡಿಕೊಡಲಾಯಿತು. ಅರಣ್ಯಗಳಲ್ಲಿ ದನಕರುಗಳು ಮೇಯಲು ಅನುಮತಿ ನೀಡಲಾಯಿತು. ಅನೇಕ ಹಳ್ಳಿಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ಸುಮಾರು ೨ ೧/೨ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಕೆರೆ, ಕಟ್ಟೆ, ಬಾವಿಗಳನ್ನು ತೋಡಿಸಲಾಯಿತು. ಆಹಾರ ಧಾನ್ಯಗಳ ಶೇಖರಣೆ ಮತ್ತು ಸಾಗಣೆಗೆ ವ್ಯವಸ್ಥೆ ಮಾಡಲಾಯಿತು.[೨೧] ರೈತರು ನೀರಾವರಿಗೆ ಬಾವಿ ಮತ್ತು ರಿಪೇರಿ ಮಾಡಲು ಸಾಲವನ್ನು ನೀಡಲು ವ್ಯವಸ್ಥೆ ಮಾಡಲಾಯಿತು. ಕೇಂದ್ರ ಸರ್ಕಾರದ ಕ್ಷಾಮನೀತಿಯನ್ನು ಅನುಲಕ್ಷಿಸಿ, ರಾಜ್ಯಕ್ಕೆ ಒಂದು ಕ್ಷಾಮ ನೀತಿಯನ್ನು ಅನುಸರಿಸಲಾಯಿತು. ಕಡೆಯದಾಗಿ ಹಳ್ಳಿಗಳಲ್ಲಿ ಅನೇಕ ಕಾಮಗಾರಿಗಳನ್ನು ಪ್ರಾರಂಭಿಸಿ ಗ್ರಾಮೀಣ ಜನರ ವೆಚ್ಚಕ್ಕೆ ಬೇಕಾದ ಹಣವನ್ನು ಸಂಪಾದಿಸಲು ಮಾರ್ಗವನ್ನು ಕಲ್ಪಿಸಿ ಕೊಡಲಾಯಿತು. ಈ ರೀತಿ ಕ್ಷಾಮ ಒದಗಿದಾಗ ಅನೇಕ ಉಪಯುಕ್ತ ಕ್ರಮಗಳನ್ನು ಕೈಗೊಂಡಿದ್ದು, ರಾಜಪ್ರತಿನಿಧಿ ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನದವರ ಒಂದು ಸಾಧನೆಯೆಂದು ಹೇಳಬಹುದು.

## ಪ್ಲೇಗ್‌ರೋಗ ನಿವಾರಣ ಕ್ರಮಗಳು

ವಿಷಯ ಬಹು ಗಂಭೀರವಾದದ್ದೆಂದು ಮನಗಂಡ ಸರ್ಕಾರವು ಪ್ಲೇಗ್ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬ ಪ್ಲೇಗ್ ರೋಗ ನಿಯಂತ್ರಣ ಕಮಿಷನರನ್ನು ನೇಮಿಸಲಾಯಿತು.[೨೨] ಪ್ಲೇಗ್ ಸಾಂಕ್ರಾಮಿಕ ರೋಗವನ್ನು ತಡೆಗಟ್ಟಲು ಸಮರೋಪಾದಿಯಲ್ಲಿ ರೋಗನಿರೋಧಕ ಕ್ರಮಗಳನ್ನು ಕೈಗೊಳ್ಳಲಾಯಿತು. ಪ್ಲೇಗ್ ಕಮಿಷನರ್ ಫೆಬ್ರವರಿ ೧೮೯೮ರಲ್ಲಿ ರೋಗಪೀಡಿತ ಪ್ರದೇಶಗಳಿಗೆ ಭೇಟಿ ನೀಡಿ ಅಲ್ಲಿಯ ಅಧಿಕಾರಿಗಳಿಗೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ಸೂಚನೆ ನೀಡಿದನು. ರಾಜ್ಯದ ವಿವಿಧ ರೈಲ್ವೆ ಸ್ಟೇಷನ್‌ಗಳಲ್ಲಿ ಇನ್ಸ್‌ಪೆಕ್ಟರ್‌ಗಳು ಹಾಜರಿದ್ದು ರೋಗ ಪೀಡಿತ ಜನರನ್ನು ತಪಾಸಣೆ ನಡೆಸುತ್ತಿದ್ದರು. ಈ ಸಂಬಂಧವಾಗಿ ಜಿಲ್ಲಾಧಿಕಾರಿಗಳು ಜಿಲ್ಲಾ ಆರೋಗ್ಯಧಿಕಾರಿಗಳಿಗೆ ಸಾಕಷ್ಟು ಹಣ ಬಿಡುಗಡೆ ಮಾಡಿ ಅವರು ಪ್ಲೇಗ್‌ರೋಗ ನಿರೋಧ ಕಾರ್ಯಗಳಿಗೆ ಬಳಸಲು ಆದೇಶ ನೀಡಿದರು.

ಕ್ರಿ.ಶ. ೧೮೯೮ ಮಾರ್ಚ್ ತಿಂಗಳಿನಲ್ಲಿ ದಿವಾನರು ಎಲ್ಲ ಇಲಾಖಾ ಮುಖ್ಯಸ್ಥರಿಗೆ ಒಂದು ಸಂದೇಶ ಹೊರಡಿಸಿ ಅವರು ಸದಾ ನಿರ್ಧಿಷ್ಟ ಪ್ರದೇಶಗಳಿಗೆ ಭೇಟಿ ನೀಡಿ ಪ್ಲೇಗ್ ರೋಗ ನಿಯಂತ್ರಣದ ಬಗ್ಗೆ ಕೈಗೊಂಡ ಕ್ರಮವನ್ನು ಸರ್ಕಾರಕ್ಕೆ ಆಗಾಗ್ಗೆ ತಿಳಿಸಬೇಕೆಂದು ಸೂಚಿಸಿದ್ದರು. ಇದೇ ರೀತಿಯಲ್ಲಿ ಪ್ಲೇಗ್ ಕಮಿಷನರ್‌ರವರು ಮತ್ತೊಂದು ಸಂದೇಶವನ್ನು ಜಿಲ್ಲಾಧಿಕಾರಿಗಳಿಗೆ ಕಳುಹಿಸಿ ಸಮಾಜದ ವಿವಿಧ ವರ್ಗಗಳ ಅಂತಸ್ತುಗಳ ಜನರನ್ನು ಒಟ್ಟುಗೂಡಿಸಿ ಅವರಿಗೆ ಪ್ಲೇಗ್ ರೋಗದ ಮತ್ತು ಅದರ ದುಷ್ಪರಿಣಾಮದ ಬಗ್ಗೆ ಅಗತ್ಯ ತಿಳಿವಳಿಕೆ ನೀಡಬೇಕೆಂದು ಆಜ್ಞೆ ಹೊರಡಿಸಿದರಲ್ಲದೆ, ಅದರ ನಿಯಂತ್ರಣಕ್ಕಾಗಿ ಜನರೆಲ್ಲರೂ ನೈರ್ಮಲ್ಯದ ಬಗೆಗೆ ಹೆಚ್ಚು ಕಾಳಜಿ ವಹಿಸುವಂತೆ ಕ್ರಮಗಳನ್ನು ಕೈಗೊಂಡರು. ಹಾಗಿದ್ದರೂ ಕೂಡ ಪ್ಲೇಗ್‌ರೋಗ ಬೆಂಗಳೂರಿನಲ್ಲಿ ಬಹುಬೇಗ ಹರಡಿತು. ಸಾವಿರಾರು ಜನ ಈ ರೋಗಕ್ಕೆ ತುತ್ತಾದರು. ಸರ್ಕಾರ ಹಲವಾರು ರೀತಿಯಿಂದ ಜನರನ್ನು ರೋಗದಿಂದ ರಕ್ಷಿಸಲು ಯತ್ನಿಸಿತು. ರಾಜ್ಯಾದ್ಯಂತ ಪ್ಲೇಗ್ ಕಾಯಿಲೆ ನಿರೋಧದ ಚುಚ್ಚುಮದ್ದನ್ನು ಉಚಿತವಾಗಿ ಹಾಕಲಾಯಿತು. ಸೋಂಕು ತಗುಲಿದ ಮನೆಗಳಿಂದ ಜನರನ್ನು ಖಾಲಿ ಮಾಡಿಸಿ ಆ ಮನೆಗಳನ್ನು ಕ್ರಿಮಿನಾಶಕಗಳಿಂದ ಶುದ್ಧೀಕರಿಸಲಾಯಿತು. ಹೀಗೆ ಮನೆಯಿಂದ ಹೊರಗೆ ಬಂದವರಿಗೆ ತಾತ್ಕಾಲಿಕ ಶೆಡ್ಡುಗಳನ್ನು ಹಾಕಿಸಿಕೊಡಲಾಯಿತು. ಪ್ಲೇಗ್‌ರೋಗದ ಜೊತೆಯಲ್ಲಿ ಅಲ್ಲಲ್ಲಿ ಕಾಲರಾ ರೋಗವು ಕೂಡ ಕಾಣಿಸಿಕೊಂಡಿತು.

ಪ್ಲೇಗ್‌ರೋಗ ನಿಯಂತ್ರಣ ಕಮಿಷನರ್ ಅವರು ದಿನಾಂಕ ೧೭ ಆಗಸ್ಟ್ ೧೮೯೮ರಂದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ಪ್ಲೇಗ್ ಮತ್ತು ಕಾಲರ ರೋಗಗಳ ವಿರುದ್ಧ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ತಿಳಿಸಿದರು. ಇಷ್ಟೆಲ್ಲಾ ಕ್ರಮಗಳನ್ನು ತೆಗೆದುಕೊಂಡರೂ, ಪ್ಲೇಗ್ ಮಾರಿಯು ಎಲ್ಲ ಕಡೆಗಳಲ್ಲಿಯೂ ಬಹುಬೇಗ ಹರಡುತ್ತಿದ್ದುದರಿಂದ ಜನರು ಭಯಭೀತರಾಗಿದ್ದರು.

ಕ್ರಿ.ಶ. ೧೮೯೮ ಆಗಸ್ಟ್ ನಲ್ಲಿ ಮೈಸೂರು ನಗರದ ಸುತ್ತಲೂ ಇರುವ ಹಳ್ಳಿಗಳ ಜನರು ಮಹಾರಾಜರಿಗೆ ಒಂದು ಮನವಿಯನ್ನು ಸಲ್ಲಿಸಿ, ಪ್ಲೇಗ್‌ನಿಂದ ನಿರಾಶ್ರಿತರಾದ ಜನರಿಗೆ ಅನುಕೂಲವಾದ ವಾಸಸ್ಥಳ ನೀಡಿ, ಪುನರ್ವಸತಿ ಕಲ್ಪಿಸಿಕೊಡಬೇಕೆಂದು ಮತ್ತೆ ಕೇಳಿಕೊಂಡರು. ಹೀಗೆ ಪ್ಲೇಗ್‌ರೋಗದಿಂದ ನರಳುತ್ತಿದ್ದ ಜನರಿಗೆ ಪುನರ್ವಸತಿ ಮತ್ತು ಪರಿಹಾರವನ್ನು ನೀಡುವ ಸಲುವಾಗಿ ಕ್ರಿ.ಶ. ೧೮೯೭ರಲ್ಲಿ ಬೆಂಗಳೂರಿನಲ್ಲಿ ಬ್ರಿಟೀಷ್ ಮಹಾರಾಣಿ ವಿಕ್ಟೋರಿಯರವರ ಜನನದ ರಜತ ಮಹೋತ್ಸವ ಆಚರಣೆಯ ಸಂದರ್ಭದಲ್ಲಿ ಮಹಾರಾಣಿ ಕೆಂಪನಂಜಮ್ಮಣ್ಣಿಯವರು ವಿಕ್ಟೋರಿಯ ಆಸ್ಪತ್ರೆಯ ನಿರ್ಮಾಣಕ್ಕೆ ತಳಹದಿ ಹಾಕಿದರು. ಅದೇ ಜಾಗದಲ್ಲಿ ಆಸ್ಪತ್ರೆಯನ್ನು ನಿರ್ಮಿಸಿ ರೋಗ ಪೀಡಿತರಿಗೆ ಶುಶ್ರೂಶೆ ನೀಡಲು ಕ್ರಮ ಕೈಗೊಂಡರು. ಈ ಆಸ್ಪತ್ರೆಯ ಕಾಮಗಾರಿ ೧೯೦೦ರಲ್ಲಿ ಪೂರ್ಣಗೊಂಡು ಜನರ ಸಂಪೂರ್ಣ ಸೇವೆಗೆ ಅದು ಸಿದ್ಧವಾಯಿತು.[೨೩]

ಪ್ಲೇಗ್‌ರೋಗ ನಿವಾರಣೆ ಮತ್ತು ನಿಯಂತ್ರಣಕ್ಕೆ ಸರ್ಕಾರದ ಅಧಿಕಾರಿಗಳು ಮಿತಿಮಿಾರಿ ಪ್ರಯತ್ನ ಪಟ್ಟಿದ್ದರೂ, ರಾಜ್ಯದ ಜನತೆ ಸರ್ಕಾರದ ಕಾರ್ಯಕ್ರಮಗಳನ್ನು ಅರ್ಥ ಮಾಡಿಕೊಳ್ಳಲಾರದೆ ತಮಗೂ ಸರ್ಕಾರಕ್ಕೂ ಬಹಳಷ್ಟು ತೊಂದರೆಯನ್ನುಂಟು ಮಾಡಿದರು. ರೋಗದ ಬಗ್ಗೆ ಅದರ ಸ್ವಭಾವ, ಲಕ್ಷಣ ತಿಳಿಯದೆ ಸರ್ಕಾರ ಕೈಗೊಂಡ ವೈಜ್ಞಾನಿಕ (ವೈದಕೀಯ) ಕ್ರಮಗಳನ್ನು ಉಗ್ರವಾಗಿ ವಿರೋಧಿಸಿದರು. ಖಾಯಿಲೆ ಬಂದಾಗ ತಾವು ವಾಸಿಸುತ್ತಿದ್ದ ಮನೆಗಳನ್ನು ಬಿಟ್ಟು ಹೊರಹೋಗಲು ಅವರು ಒಪ್ಪಲಿಲ್ಲ. ರೋಗ ನಿರೋಧಕ ಚುಚ್ಚುಮದ್ದನ್ನು ಹಾಕಿಸಿಕೊಳ್ಳುವುದಕ್ಕೂ, ಕ್ರಿಮಿನಾಶಕ ಸಿಂಪಡಿಸಿ ಸ್ವಚ್ಛತೆ ಕಾಪಾಡುವುದಕ್ಕೂ ಅವರು ಅಸಹಕಾರ ತೋರಿಸಿ ಸರ್ಕಾರದ ಉನ್ನತ ಅಧಿಕಾರಿಗಳಿಗೆ ದೂರು ನೀಡಿ ಅದಕ್ಕೆ ಪರಿಹಾರ ಸಿಗದಿದ್ದಾಗ ಮಹಾರಾಣಿ ರೀಜೆಂಟ್ ಕೆಂಪನಂಜಮ್ಮಣ್ಣಿಯವರೆಗೂ ತಮ್ಮ ಅಹವಾಲುಗಳನ್ನು ಕೊಂಡೊಯ್ದರು. ಆದರೆ ಮಹಾರಾಣಿ ರೀಜೆಂಟ್ ಅವರು ಸರ್ಕಾರದ ಅಧಿಕಾರಿಗಳ ಕ್ರಮವನ್ನು ಸಮರ್ಥಿಸಿಕೊಂಡು, ಅಧಿಕಾರಿಗಳಿಗೆ ಸಹಕಾರ ನೀಡುವಂತೆ ಪ್ರಜೆಗಳಿಗೆ ಸಲಹೆ ನೀಡಿದರು. ಸರ್ಕಾರದ ಉನ್ನತ ಅಧಿಕಾರಿಗಳು ಪ್ಲೇಗ್‌ರೋಗ ನಿವಾರಣೆ ಬಗ್ಗೆ ಹಲವಾರು ಕ್ರಮಗಳನ್ನು

ತೆಗೆದುಕೊಂಡಿದ್ದರು. ಬ್ರಿಟೀಷ್ ಸರ್ಕಾರವು ಕೂಡ ಈ ಬಗ್ಗೆ ಕೆಲವು ಯೋಜನೆಗಳನ್ನು ಹಾಕಿಕೊಂಡಿತು. ಮೈಸೂರಿನ ರೆಸಿಡೆಂಟನ ಪ್ರಥಮ ಸಹಾಯಕರಾಗಿದ್ದ ಡೊನಾಲ್ಡ್‌ಸನ್ ಎಂಬುವರು ಒಂದು ಆರೋಗ್ಯ ಸಂಸ್ಥೆಯನ್ನು ಸ್ಥಾಪಿಸ ಬೇಕೆಂಬ ಸಲಹೆಯನ್ನು ಮುಂದಿಟ್ಟರು. ಆದರೆ ಎಲ್ಲಕ್ಕೂ ಮಿಗಿಲಾಗಿ ಮಹಾರಾಣಿ ವಾಣಿವಿಲಾಸ ಸನ್ನಿಧಾನದವರೂ ರೆಸಿಡೆಂಟ್ ಮತ್ತು ದಿವಾನರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ದೋಲ್‌ಪುರದ ಮಹಾರಾಜ ರಾಣ ಅವರಿಗೆ ಪತ್ರ ಒಂದನ್ನು ಬರೆದು ಒಂದು ಆರೋಗ್ಯ ನಿವಾರಣಾ ವಿಧಾನವನ್ನು ಜನಪ್ರಿಯಗೊಳಿಸಬೇಕೆಂದು ಪ್ರಯತ್ನಿಸಿದರು.

## ನೀರು ಸರಬರಾಜು ಘಟಕಗಳ ಸ್ಥಾಪನೆ

ಮಹಾರಾಣಿ ರೀಜೆಂಟರವರ ಕಾಲದಲ್ಲಿ ಕೈಗೊಂಡ ಮತ್ತೊಂದು ದೊಡ್ಡ ಯೋಜನೆಯಂದರೆ ಬೆಂಗಳೂರಿನ ಸಿವಿಲ್ ಮತ್ತು ಮಿಲಿಟರಿ ಸ್ಟೇಷನ್ನಿಗೆ ನೀರು ಸರಬರಾಜು ಮಾಡುವ **'ಮುಳಿಗಲ್ ಯೋಜನೆ'**ಯನ್ನು ಜಾರಿಗೆ ತಂದುದು. ಕ್ರಿ.ಶ. ೧೮೯೭ರಲ್ಲಿ ಬ್ರಿಟೀಷ್‌ಸರ್ಕಾರವು ಮಹಾರಾಜರೊಡನೆ ಈ ಒಪ್ಪಂದ ಮಾಡಿಕೊಂಡಿತು.[೨೪] ಈ ಮೊದಲು ಬೆಂಗಳೂರಿನಲ್ಲಿದ್ದ ಸ್ಯಾಂಕಿ ಕೆರೆಯಿಂದ ನಗರಕ್ಕೆ ನೀರು ಸರಬರಾಜು ಮಾಡಲಾಗುತ್ತಿತ್ತು. ಆದರೆ ಕೆಲವು ಕಾಲದ ನಂತರ ಇದು ಬೆಂಗಳೂರಿನ ಮೂಲ ನಿವಾಸಿಗಳಿಗೂ ಸಾಕಾಗುತ್ತಿರಲಿಲ್ಲ. ಆದುದರಿಂದ ದಂಡು ಪ್ರದೇಶಕ್ಕೆ ಹೊಸ ಮೂಲವನ್ನು ಹುಡುಕಬೇಕಾಯಿತು. ಅದಕ್ಕಾಗಿ ಹೆಸರಘಟ್ಟ ದಲ್ಲಿರುವ ಶ್ರೀ ಚಾಮರಾಜೇಂದ್ರ ನೀರು ಸಂಗ್ರಹಾಲಯದಿಂದ ಸರಬರಾಜು ಮಾಡಲು ಮೈಸೂರು ಸರ್ಕಾರವು ಮುಂದೆ ಬಂದಿತು. ಈ ಯೋಜನೆಯ ವಿವರಗಳು ಹೀಗಿವೆ.

ಅಣೆಕಟ್ಟಿನ ನಿರ್ಮಾಣ ಮತ್ತು ದುರಸ್ತಿ ಕಾರ್ಯಗಳು ಮಹಾರಾಜರ ಜವಾಬ್ದಾರಿಯಾಗಿತ್ತು. ಚಾಮರಾಜೇಂದ್ರ ನೀರು ಸಂಗ್ರಹಾಲಯ ನಿರ್ವಹಣೆಯ ಅರ್ಧ ವೆಚ್ಚವನ್ನು ಬ್ರಿಟೀಷ್ ಸರ್ಕಾರವು ಬರಿಸಬೇಕಾಗಿತ್ತು. ಹೊಸ ನಿರ್ಮಾಣ, ದುರಸ್ತಿ ಬದಲಾವಣೆಗಳಾದಾಗ ಬ್ರಿಟೀಷ್ ಸರ್ಕಾರವು ಮತ್ತು ಮೈಸೂರು ಸರ್ಕಾರ ಇಬ್ಬರೂ ಕೂಡಿ ಮಹಾರಾಜರು ಸಮಾಲೋಚನೆ ನಡೆಸಿ ಮುಂದಿನ ಕ್ರಮ ಕೈಗೊಳ್ಳಬೇಕೆಂದು ನಿರ್ಧರಿಸಲಾಯಿತು. ಈ ನೀರು ಸಂಗ್ರಹಾಲಯದ ಕಾರ್ಯ ನಿರ್ವಹಣೆ, ದುರಸ್ತಿಯನ್ನು ಪರಿವೀಕ್ಷಿಸಲು ಬ್ರಿಟೀಷ್ ಸರ್ಕಾರಕ್ಕೆ ಅವಕಾಶವಿರುವಂತೆ ಈ ಒಪ್ಪಂದದಲ್ಲಿ ಮಾಡಲಾಯಿತು.

ಶ್ರೀ ಚಾಮರಾಜೇಂದ್ರ ಜಲಸಾಗರದಲ್ಲಿ ಪಂಪುಗಳನ್ನು ಕೊಳವೆಗಳನ್ನು ಅಳವಡಿಸಲು ಬ್ರಿಟೀಷ್ ಸರ್ಕಾರಕ್ಕೆ ಅವಕಾಶ ವನ್ನು ನೀಡಿತು. ಬ್ರಿಟೀಷ್ ಸರ್ಕಾರವು ತನ್ನ ಮಿಲಿಟರಿ ಸ್ಟೇಷನ್ನಿ ಗಾಗಿ ಸುಮಾರು ಒಂದು ಮಿಲಿಯನ್ ಲೀಟರ್ ನೀರನ್ನೂ ಬಳಸಿಕೊಳ್ಳಬಹುದೆಂದು ಅವಕಾಶ ಮಾಡಿಕೊಡಲಾಯಿತು. ಮೈಸೂರಿನ ಮಹಾರಾಜರೂ ಅಷ್ಟೇ ಪ್ರಮಾಣದ ನೀರನ್ನು ಬಳಸಿಕೊಳ್ಳಬಹುದಾಗಿತ್ತು. ಜಲಸಂಗ್ರಹಾಲಯದಲ್ಲಿ ನೀರು ಕಡಿಮೆಯಾದಾಗ ಉಭಯ ಪಕ್ಷಗಳು ಸೇರಿ ಲಭ್ಯವಿರುವ ನೀರನ್ನು ಉಭಯ ಪಕ್ಷಗಳೂ ಸಮನಾಗಿ ಹಂಚಿಕೊಳ್ಳಬೇಕು. ಈ ಬಗ್ಗೆ ಮಹಾರಾಜರ ಸರ್ಕಾರಕ್ಕೂ ಬ್ರಿಟೀಷ್ ಸರ್ಕಾರಕ್ಕೂ ಏನಾದರೂ ಭಿನ್ನಾಭಿಪ್ರಾಯ ಸಂಭವಿಸಿದರೆ, ಇಬ್ಬರು ಮಧ್ಯಸ್ಥರನ್ನು ನೇಮಿಸಿ ಅವರ ನಿರ್ಧಾರದಂತೆ ನಡೆಯತಕ್ಕದ್ದು ಎಂದು ನಿರ್ಧರಿಸಲಾಯಿತು. ಈ ಒಪ್ಪಂದಕ್ಕೆ ಬ್ರಿಟೀಷ್ ಸರ್ಕಾರದ ಕಾರ್ಯದರ್ಶಿ ಡಬ್ಲು.ಜೆ.ಕ್ಯಾನ್ನಿಂಗ್‌ಹ್ಯಾಮ್ ಮತ್ತು ಮೈಸೂರಿನ ದಿವಾನರಾದ ಕೆ.ಶೇಷಾದ್ರಿ ಐಯ್ಯರ್ ಅವರು ಸಹಿ ಹಾಕಿದರು.[೨೫] ಇದು ಮಹಾರಾಣಿ ಕೆಂಪನಂಜಮ್ಮಣ್ಣಿಯರ ರಾಜಪ್ರತಿನಿಧಿತ್ವ ಕಾಲಾವಧಿಯಲ್ಲಿ ನಡೆದ ಒಂದು ಬೃಹತ್ ಅಭಿವೃದ್ಧಿ ಕಾರ್ಯವಾಗಿದೆ.

## ನಗರಗಳ ಬೆಳವಣಿಗೆ

೧೯ನೆಯ ಶತಮಾನದ ಅಂತ್ಯದ ವರ್ಷಗಳಲ್ಲಿ ಮತ್ತು ೨೦ನೇಯ ಶತಮಾನದ ಪ್ರಥಮ ದಶಕಗಳಲ್ಲಿ ಮೈಸೂರಿನಲ್ಲಿ ನಗರೀಕರಣ ಬಿರುಸಿನಿಂದಲೇ ನಡೆಯಿತು. ಪಿ.ವಿ.ನಂಜರಾಜ ಅರಸು ಅವರು ಹೇಳಿದಂತೆ "ಮೈಸೂರು ನಗರದ ಬೆಳವಣಿಗೆ ಯನ್ನು ತಾಂತ್ರಿಕ ದೃಷ್ಟಿಯಲ್ಲಿ ೧೯ನೆಯ ಶತಮಾನದಿಂದಲೇ ಗುರುತಿಸಬಹುದು"[೨೬] ನಗರದ ಗಡಿ ಮುಖ್ಯವಾಗಿ ಅರಮನೆಯ ಸುತ್ತಲಿನ ಪ್ರವೇಶಕ್ಕೆ ಸೀಮಿತವಾಗಿತ್ತು. ಕೋಟಿ ಹಳೇ ಅಗ್ರಹಾರ ಮತ್ತು ದೊಡ್ಡಪೇಟೆ ಹಾಗೂ ಸ್ವಲ್ಪ ದೂರದಲ್ಲಿದ್ದ ಸೇನಾ ನೆಲೆಯಾಗಿದ್ದ ಲಷ್ಕರ್ ಮೊಹಲ್ಲಾ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಪೂರ್ವ, ಪಶ್ಚಿಮ ದಿಕ್ಕಿನಲ್ಲಿ ನಗರ ಬೆಳವಣಿಗೆ ಪ್ರಾರಂಭವಾಗಿತ್ತು. ಬ್ರಿಟೀಷ್ ಸರ್ಕಾರ ನಗರಾಭಿವೃದ್ಧಿ ದೃಷ್ಟಿಯಿಂದ ನಗರ ಸಭೆಗಳನ್ನು ಸ್ಥಾಪಿಸಬೇಕೆಂದು ಆಜ್ಞೆ ಮಾಡಿದ್ದರಿಂದ ಕ್ರಿ.ಶ. ೧೮೬೨ರಲ್ಲಿ ಮೈಸೂರಿನಲ್ಲಿ ಪ್ರಪ್ರಥಮ ಬಾರಿಗೆ 'ನಗರಸಭೆ'[೨೭] ಅಸ್ತಿತ್ವಕ್ಕೆ ಬಂದಿತು. ಕ್ರಿ.ಶ. ೧೮೯೨ರ ನಂತರ ನಗರಸಭಾ ಸದಸ್ಯರನ್ನು ನೇಮಕ ಮಾಡುವ ವ್ಯವಸ್ಥೆಯು ಜಾರಿಗೆ ಬಂದಿತು. ಈ ಸಂದರ್ಭದಲ್ಲಿ ಮೈಸೂರು ನಗರಕ್ಕೆ ಕುಡಿಯುವ ನೀರನ್ನು ಕುಕ್ಕರಹಳ್ಳಿಕೆರೆ ಮತ್ತು ಕಾರಂಜಿಕೆರೆಗಳಿಂದ ಸರಬರಾಜು ಮಾಡಲಾಗುತ್ತಿತ್ತು.[೨೮]

ಕ್ರಿ.ಶ. ೧೮೯೬ರಲ್ಲಿ ರೀಜೆಂಟ್‌ರಾಗಿದ್ದ ಮಹಾರಾಣಿ ಯವರು ಕಾವೇರಿ ನೀರನ್ನು ನಗರಕ್ಕೆ ಒದಗಿಸುವ ವ್ಯವಸ್ಥೆ

ಯನ್ನು ಮಾಡಿದರು. ಅದಕ್ಕಾಗಿ **"ವಾಣಿವಿಲಾಸ ನೀರು ಸರಬರಾಜು ಕೇಂದ್ರ"**ವನ್ನು ಸ್ಥಾಪಿಸಲಾಯಿತು.[೨೯] ಮುಂದೆ ವಿದ್ಯುಚ್ಛಕ್ತಿ ಬಂದ ನಂತರ ಕಾವೇರಿ ನೀರನ್ನು ನಗರಕ್ಕೆ ಪಂಪಿನ ಮೂಲಕ ಮೇಲೆತ್ತಿ ಮೈಸೂರು ನಗರದ ವಿವಿಧ ಭಾಗಗಳಿಗೆ ಹರಿಸುವ ವ್ಯವಸ್ಥೆಯನ್ನು ಮಾಡಲಾಯಿತು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಅರಮನೆಯ ಮುಂದೆ ಒಂದು ಕಾಲುವೆಯನ್ನು ನಿರ್ಮಿಸಲಾಗಿದ್ದಿತು. ಆದರೆ ಕಾಲಾನಂತರ ಅದರಿಂದ ನೀರು ಸರಬರಾಜು ಮಾಡಲು ಕಷ್ಟವಾದಾಗ ಅದನ್ನು ಮುಚ್ಚಿಸಿ, ಅದೇ ಜಾಗದಲ್ಲಿ ಈಗಿನ ಕರ್ಜನ್ ಪಾರ್ಕ್ ನಿರ್ಮಿಸಲಾಯಿತು. ಮೈಸೂರಿನಲ್ಲಿ ಶ್ರೀ ಚಾಮರಾಜೇಂದ್ರ ಮೃಗಾಲಯವನ್ನು ವಿಸ್ತರಿಸಿ ಅದಕ್ಕೆ ಹೆಚ್ಚಿನ ಪ್ರಾಣಿಗಳನ್ನು ಸೇರಿಸಲಾಯಿತು. ಈ ಅಭಿವೃದ್ಧಿ ಕಾರ್ಯಗಳು ಕೂಡ ಮಹಾರಾಣಿ ಕೆಂಪನಂಜಮ್ಮಣ್ಣಿಯುವರು ಆಡಳಿತಾವಧಿಯಲ್ಲಿ ನಡೆದವು.

## ನಗರಾಭಿವೃದ್ಧಿ ಪ್ರಾಧಿಕಾರ

ಕ್ರಿ.ಶ. ೧೯೦೨ರಲ್ಲಿ ಮೈಸೂರಿನಲ್ಲಿ ನಗರಾಭಿವೃದ್ಧಿ ಪ್ರಾಧಿಕಾರವನ್ನು ಪ್ರಾರಂಭಿಸಲಾಯಿತು.[೩೦] ಭಾರತದಲ್ಲಿಯೇ ಇಂತಹ ನಗರಾಭಿವೃದ್ಧಿ ಮಂಡಳಿಯನ್ನು ಪ್ರಪ್ರಥಮವಾಗಿ ರಚಿಸಿದ ಕೀರ್ತಿ ಮೈಸೂರಿನದು. ಇದು ನಗರದ ನಿರ್ಮಲೀಕರಣ ಮತ್ತು ವ್ಯವಸ್ಥಿತ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತು. ಈ ಮಂಡಳಿಯು ನಗರದಲ್ಲಿ ಉತ್ತಮ ಕಾರ್ಯವನ್ನು ಕೈಗೊಂಡು ಮೈಸೂರನ್ನು ಸುಂದರ ಮತ್ತು ಸ್ವಚ್ಛ ನಗರವನ್ನಾಗಿ ಮಾಡುವಲ್ಲಿ ಯಶಸ್ವಿಯಾಯಿತು. ಮೈಸೂರು ರಾಜ್ಯದಲ್ಲಿ ಮಾತ್ರವಲ್ಲದೆ ರಾಜ್ಯದ ಹೊರಗೂ ಕೆಲವು ಲೋಕೋಪಯೋಗಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಕಲ್ಕತ್ತದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಒಂದು ಧರ್ಮಶಾಲೆ ಮತ್ತು ಒಂದು ಶಿವಾಲಯ ಹಾಗೂ ಬೃಂದಾವನವನ್ನು ಕಟ್ಟಿಸಿದರು. ಕಲ್ಕತ್ತದ ಪಶ್ಚಿಮ ಭಾಗದಲ್ಲಿ ೨೪ ಮನೆಗಳುಳ್ಳ ಒಂದು ಅಗ್ರಹಾರವನ್ನು ವಿದ್ಯಾರ್ಥಿಗಳಿಗೋಸ್ಕರ, ವಿದ್ಯಾರ್ಥಿ ನಿಲಯವನ್ನೂ ಮಹಾರಾಣಿ ರೀಜೆಂಟ್‌ರು ಕಟ್ಟಿಸಿ ಕೊಟ್ಟಿರುತ್ತಾರೆ.[೩೧]

## ಶಿವನಸಮುದ್ರ ಜಲವಿದ್ಯುದ್ಗಾರ ಸ್ಥಾಪನೆ

ಮಹಾರಾಣಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನದವರ ಕಾಲದ ಮತ್ತೊಂದು ಮಹತ್ವದ ಕೊಡುಗೆಯೆಂದರೆ ಶಿವನಸಮುದ್ರ ಜಲವಿದ್ಯುದ್ಗಾರ. ಮೈಸೂರಿನಲ್ಲಿ ೧೯ನೆಯ ಶತಮಾನ ಮತ್ತು ೨೦ನೆಯ ಶತಮಾನದ ಪ್ರಾರಂಭದಲ್ಲಿ ಕೆಲವು ಕೈಗಾರಿಕೆಗಳು ತಲೆಯೆತ್ತಿದ್ದವು. ಆಧುನಿಕ ಕೈಗಾರಿಕೆಗಳಿಗೆ ಪಾಶ್ಚಿಮಾತ್ಯ ದೇಶಗಳಲ್ಲಿ ವಿದ್ಯುತ್ತಿನ ಬಳಕೆ ಪ್ರಾರಂಭವಾಗಿದ್ದಿತು. ಆ ವಿದ್ಯುಚ್ಛಕ್ತಿಯನ್ನು ಅಮೆರಿಕ, ಕೆನಡ, ಜರ್ಮನಿ ಮೊದಲಾದ ದೇಶಗಳು ಉತ್ಪಾದಿಸುತ್ತಿದ್ದವು. ಮೈಸೂರಿನ ಕಾವೇರಿ ನದಿ ಜಲಪಾತದ ನೀರನ್ನು ಬಳಸಿಕೊಂಡು ವಿದ್ಯುತ್ತನ್ನು ಉತ್ಪಾದಿಸಬಹುದೆಂದು ಎಡೆಮಂಡ್ ಕ್ಯಾರಿಗ್‌ಟನ್ ಎಂಬ ಆಗಿನ ಎಲೆಕ್ಟ್ರಿಕಲ್ ಇಂಜನಿಯರ್ ಕ್ರಿ.ಶ. ೧೮೯೪ರಲ್ಲಿ ಮಹಾರಾಣಿಯವರಿಗೆ ಸಲಹೆ ನೀಡಿದ್ದನು, ಮೈಸೂರಿನ ರೆಸಿಡೆಂಟ್ ಆಗಿದ್ದ ಹಂಡರ್‌ಸನ್ನನು ಈ ಯೋಜನೆಯನ್ನು ಸ್ವಾಗತಿಸಿದನು.

ಈ ಹಂತದಲ್ಲಿ ಬಾಲಕರಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಕೂಡ ಶಿವನಸಮುದ್ರ ಜಲವಿದ್ಯುತ್‌ದ್ಗಾರ ಯೋಜನೆಯ ಬಗ್ಗೆ ವಿದೇಶಗಳಲ್ಲಿ ಈ ವಿದ್ಯುತ್ತಿನ ಉತ್ಪಾದನೆಯ ಬಗ್ಗೆ ಮಾಹಿತಿ ಪಡೆದುಕೊಂಡು ತಮ್ಮ ತಾಯಿಯವರಾದ ರೀಜೆಂಟ್ ಮಹಾರಾಣಿಯವರ ಮನ ಒಲಿಸಿ ಅದಕ್ಕೆ ಅವರ ಅನುಮತಿಪಡೆದುಕೊಂಡರು. ಬಾಲಕ ಮಹಾರಾಜರೂ ರೀಜೆಂಟ್ ರಾಜಮಾತೆಯವರು ಈ ಯೋಜನೆಗೆ ಆಸಕ್ತಿ ತೋರಿ ಬೆಂಬಲ ನೀಡಿದುದರಿಂದ ಕ್ರಿ.ಶ. ೧೯೦೫ರಲ್ಲಿ ಅದು ಕಾರ್ಯ ರೂಪಕ್ಕೆ ಬರಲು ಸಾಧ್ಯವಾಯಿತು. ಮುಂದೆ ಇದರಿಂದ ಕೋಲಾರದ ಚಿನ್ನದ ಗಣಿ, ಮತ್ತಿತರ ಮತ್ತು ಇತರ ನಗರಗಳಿಗೆ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಲು ಸಾಧ್ಯವಾಯಿತು. ಏಷ್ಯದಲ್ಲೇ ಮೊಟ್ಟಮೊದಲಿಗೆ ಜಲವಿದ್ಯುತ್‌ದ್ಗಾರವನ್ನು ಸ್ಥಾಪಿಸಿದ ಕೀರ್ತಿ ಮೈಸೂರಿನದಾಯಿತು.

ಈ ರೀತಿಯಲ್ಲಿ ಮಹಾರಾಣಿ ಕೆಂಪನಂಜಮ್ಮಣ್ಣಿಯವರು ತಮ್ಮ ಆಳ್ವಿಕೆಯ ಸಂದರ್ಭದ ರಾಜ್ಯದಲ್ಲಿ ಅನೇಕ ಅಭಿವೃದ್ಧಿಯಾತ್ಮಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವ ಮೂಲಕ ರಾಜ್ಯವನ್ನು ಒಂದು 'ಮಾದರಿ ಸಂಸ್ಥಾನ'ವನ್ನಾಗಿ ರೂಪಿಸಲು ಸಾಧ್ಯವಾಯಿತು. ಬ್ರಿಟೀಷರೊಂದಿಗೆ ಘರ್ಷಣೆಗೆ ಇಳಿಯದೆ ಅವರೊಡನೆ ಸ್ನೇಹದಿಂದಿದ್ದು ಅವರ ಸಹಾಯ ಮತ್ತು ಸಹಕಾರವನ್ನು ಪಡೆದುಕೊಂಡು ಕೆ.ಶೇಷಾದ್ರಿ ಅಯ್ಯರ್‌ರಂತಹ ಅನುಭವಿ ದಿವಾನರ ಪ್ರಭಾವಗಳನ್ನು ನಿವಾರಿಸಿಕೊಂಡು ಆಡಳಿತದಲ್ಲಿ ಅನೇಕ ಬದಲಾವಣೆಗಳನ್ನು ತಂದರು.



## ಆಧಾರಸೂಚಿ


೧. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಬೆಂಗಳೂರು, ೧೯೪೧, ಪು. ೧೭.

೨. ಶಿಂಗ್ರಯ್ಯ, ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ, ಮೈಸೂರು, ೧೯೦೫, ಪು. ೯೯.

೩. ಆಳಿದ ಮಹಾಸ್ವಾಮಿಯವರು, ಪು. ೫೩.

೪. D.R. Made Gowda, Modern Mysore State, 1881-1902, 1997, Mysore, P. 31.

೫. ಅದೇ.,

೬. ಅದೇ.,

೭. ಮಾದೇಗೌಡ; ಪು. ೩೨.

೮. ಅದೇ.,

೯. ವೆಂಕಟರಾಮಯ್ಯ ಸಿ.ಕೆ., ಪು. ೬೨.

೧೦. Hayavadan Rao. C., (Ed), Mysore Gazatteer, Vol. II, Modern Period, Part IV, (Bangalore - 1930), P. 2998.

೧೧. ವೆಂಕಟರಾಮಯ್ಯ ಸಿ.ಕೆ., ಪುಟ

೧೨. Dr. K. Veerathappa, Administration of Mysore Under the Regency 1895-1902, an Assessment, PP. 129-132.

೧೩. ಅದೇ.,

೧೪. ಅದೇ.,

೧೬. ಹಯವದನರಾವ್ ಸಿ., ಅದೇ., ಪು. ೩೦೦೩.

೧೭. ಅದೇ.,

೧೮. ಅದೇ.,

೧೯. ಅದೇ.,

೨೦. ಹಯವದನರಾವ್.ಸಿ., ಅದೇ., ಪುಟ ೩೦೦೨.

೨೧. ಅದೇ., Dr. K. Veerappa, Co-opsit, P-131.

೨೨. ಅದೇ.,

೨೩. Hayavadana Rao. C., Mysore Gaszetteer, P. 3002-3015.

೨೪. ಅದೇ.,

೨೫. ದಿವಾಕರ. ಆರ್.ಆರ್., ಪು. ೩೪೬–೩೪೭.

೨೬ Mysore Representative Debates, 1898, P. 299.

೨೭. ಪ್ರೊ. ಪಿ.ವಿ. ನಂಜರಾಜ ಅರಸು, ಮೈಸೂರು ನೂರಿನ್ನೂರು ವರ್ಷಗಳ ಹಿಂದೆ, ಬೆಂಗಳೂರು, ೨೦೦೭, ಪು. ೨೦೭.

೨೮. Hayavadana Rao. C., Mysore Gaszetteer, P. 3006.

೨೯. ಅದೇ., ಪ್ರೊ. ಪಿ.ವಿ. ನಂಜರಾಜ ಅರಸು.

೩೦. ಪಿ.ವಿ. ನಂಜರಾಜ ಅರಸು, ನಾಲ್ವಡಿ ಕೃಷ್ಣರಾಜ ಒಡೆಯರ್–ಒಂದು ದರ್ಶನ, ಪು. ೬೪.

೩೧. Hayavadana Rao, opsit, P. 3010.

೬೭

# ಮೈಸೂರು ಸಂಸ್ಥಾನ-ದ್ವಿತೀಯ ಮಹಾಯುದ್ಧ ಕಾಲದ ಕಾರ್ಮಿಕ ಕಲ್ಯಾಣ ಚಟುವಟಿಕೆಗಳು

ಡಾ. ಲಿಂಗರಾಜು*

ಕಾರ್ಮಿಕರು ಕೈಗಾರಿಕೆಗಳ ಒಂದು ಗಾಲಿ. ಈ ಗಾಲಿ ಇನ್ನೊಂದು ಗಾಲಿಯೊಂದಿಗೆ ಸಹಕಾರ, ನೆಮ್ಮದಿಯಿಂದ ಚಲಿಸದಿದ್ದರೆ ಕೈಗಾರಿಕೆ ಹಾಗೂ ಕಾರ್ಮಿಕ ಪ್ರಗತಿ ಸಾಧಿಸಲು ಸಾಧ್ಯವಿಲ್ಲ. ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ಅಲ್ಪ ಪ್ರಮಾಣದಲ್ಲಾದರೂ ನೆಮ್ಮದಿಯ ಬದುಕನ್ನು ಸಾಗಿಸಬೇಕು. ಕಾರ್ಮಿಕರು ನೆಮ್ಮದಿಯಾಗಿರಲಿ ಎಂಬುದು ಪ್ರಾಚೀನ ಕಾಲದಂದಿನಿಂದಲೂ ನಂಬಿರುವ ವಿಷಯವಾದರೂ ಅಂತಹ ಆಲೋಚನೆಗಳು ದೃಡವಾಗಿ ಕಾರ್ಯ ಪ್ರವೃತ್ತವಾದದ್ದು ಮಹಾಯುದ್ಧಗಳ ಕಾಲದಿಂದ ಎನ್ನಲೇಬೇಕಾಗುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಕಾರ್ಮಿಕರಿಗೆ ಸವಲತ್ತುಗಳನ್ನು ನೀಡಬೇಕೆಂಬ ಉಲ್ಲೇಖವಿದೆ.[೧] ಆದರೂ ಅಂದಿನಿಂದ ಮೊದಲ್ಗೊಂಡು, ಐ.ಎಲ್.ಓ (೧೯೧೯) ಸ್ಥಾಪನೆಯಾಗುವ ವರೆಗೂ ಕಾರ್ಮಿಕರಿಗೆ ಸಿಗಬೇಕಾದ ಕಲ್ಯಾಣ ಕಾರ್ಯಗಳು ಅಗೋಚರವಾಗಿದ್ದವು.[೨] ಈ ಪರಿಸ್ಥಿತಿ ರಾಷ್ಟ್ರವ್ಯಾಪಿ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಅಂತೆಯೇ ಬ್ರಿಟೀಷ್‌ರ ಕಾಲದ ಭಾರತದ ರಾಜ್ಯದಲ್ಲೊಂದಾದ ಮೈಸೂರು ಸಂಸ್ಥಾನವು ಇದರಿಂದ ಹೊರತಾದಂತೆ ಕಂಡುಬರುವುದಿಲ್ಲ. ಮಹಾರಾಜರ ವಂಶಸ್ಥರು ಕೆಲವು ಕಲ್ಯಾಣ ಕಾರ್ಯಗಳನ್ನು ನೀಡಿದರೂ ಪರಿಪೂರ್ಣತೆ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಬ್ರಿಟೀಷ್ ಆಡಳಿತವು ಮೈಸೂರು ಸಂಸ್ಥಾನಕ್ಕೆ ಪತ್ರ ಬರೆದು ಕಾರ್ಮಿಕ ಕಲ್ಯಾಣ ಕಾರ್ಯಗಳನ್ನು ಅನುಷ್ಠಾನಗೊಳಿಸಲು ನಡೆಸಿದ ಪ್ರಯತ್ನಗಳನ್ನು ಗಮನಿಸಬಹುದಾಗಿದೆ. ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ದೊರೆತ ಪತ್ರಗಳನ್ನು ಆಧರಿಸಿ ಈ ಅಧ್ಯಯನವನ್ನು ಲೇಖನದ ಮೂಲಕ ಮಂಡಿಸುವ ಪ್ರಯತ್ನ ಮಾಡುತ್ತಿದ್ದೇನೆ. ಈ ಪತ್ರಗಳಲ್ಲಿ, ಕಾರ್ಮಿಕರು ಕೈಗಾರಿಕಾ ಆಡಳಿತದಲ್ಲಿ ಪಾಲ್ಗೊಳ್ಳುವುದು, ಕಾಯ್ದೆಗಳನ್ನು ಜಾರಿಗೊಳಿಸುವುದು, ಬೋನಸ್ ನೀಡುವಿಕೆ, ಮಹಾಯುದ್ಧದ ಸ್ಥಿತಿಯನ್ನು ಸಮರ್ಥವಾಗಿ ಎದುರಿಸುವುದು, ದೆಹಲಿಯ ಕಾರ್ಮಿಕ ಸಮ್ಮೇಳನದಲ್ಲಿ ಮೈಸೂರು ಪ್ರತಿನಿಧಿಯ ಭಾಗವಹಿಸುವುದು, ಕಾರ್ಮಿಕರಿಂದ ಮನವಿ ಪತ್ರ ಸಲ್ಲಿಸುವುದು ಮುಂತಾದ ಗಮನಾರ್ಹ ಪ್ರಯತ್ನಗಳಿವೆ. ಅವುಗಳನ್ನು ಕಾರ್ಮಿಕ ಚಳುವಳಿಗೆ ಪ್ರಸ್ತುತ ಕಾಲದಲ್ಲಿ ಚರ್ಚಿಸುವುದು ಸೂಕ್ತವೆನಿಸುತ್ತದೆ.

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ "ಶ್ರಮಕ್ಕೆ ಬದಲಾಗಿ ವೇತನ ಪಡೆಯುವವನೇ ಕಾರ್ಮಿಕ ಎನ್ನುತ್ತಾನೆ".[೩] ಆಕ್ಸ್‌ಫರ್ಡ್ ಇಂಗ್ಲೀಷ್ ಶಬ್ದಕೋಶದ ಪ್ರಕಾರ Labour ಎಂಬ ಪದವು ಲ್ಯಾಟಿನ್‌ನ Labour ಪದದಿಂದ ಬಂದಿದ್ದು, ಅದರಲ್ಲಿ Toil ಶ್ರಮ/ಕಷ್ಟ ಹಾಗೂ Trouble ಆಪತ್ತು ಕಷ್ಟ ಎಂಬ ಅರ್ಥವನ್ನು ನೀಡುತ್ತದೆ. Welfare ಎಂದರೆ ಕ್ಷೇಮಾಭಿವೃದ್ಧಿ (ಆರೋಗ್ಯ, ಭಾಗ್ಯ ಇತ್ಯಾದಿ) ಎಂಬ ಅರ್ಥ ಸಿಗುತ್ತದೆ. ಈ ಪದಗಳ ಮೂಲದಿಂದ ಕಾರ್ಮಿಕರ ಕ್ಷೇಮಾಭಿವೃದ್ಧೀ (ಯೋಗಕ್ಷೇಮ) ಎಂಬ ಚೌಕಟ್ಟಿನಲ್ಲಿ ಚರ್ಚಿಸಲಾಗಿದೆ.

ಕಾರ್ಮಿಕರ ಕಲ್ಯಾಣವು ನಕಾರಾತ್ಮಕ ಹಾಗೂ ಸಕಾರತ್ಮಕವೆಂಬ ಎರಡಂಶಗಳಿಂದ ಕೂಡಿರುತ್ತದೆ. ಕಾರ್ಮಿಕರ ಕಲ್ಯಾಣವು ಪುರಾತನ ಕಲ್ಪನೆ / ಆಲೋಚನೆಯಾಗಿದ್ದರೂ ಭಾರತದಲ್ಲಿ ೧೮೮೧ರ ಪ್ರಥಮ ಕಾರ್ಮಿಕ ಕಾಯ್ದೆಯಿಂದ ಆರಂಭವಾಗುತ್ತದೆ. ಈ ಕಾಯ್ದೆಯು ೧೮೯೧ರಲ್ಲಿ ತಿದ್ದುಪಡಿಯಾಗಿ ೫೦ ವ್ಯಕ್ತಿಗಳು ದುಡಿಯುವ ಕೈಗಾರಿಕೆಯಲ್ಲಿ ಅನುಸರಿಸಲು ಸೂಚಿಸಲಾಯಿತು. ಪ್ರಥಮ ಮಹಾಯುದ್ಧದ ನಂತರ ೧೯೧೯ರ ಐ.ಎಲ್.ಓ ಸ್ಥಾಪನೆ ಕಾರ್ಮಿಕರ ಕಲ್ಯಾಣಕ್ಕೆ ದೃಡತೆ ನೀಡಿತು. ೧೯೪೪ರ ಕಾರ್ಮಿಕ ಶೋಧನೆ ಸಮಿತಿಯ ಸ್ಥಾಪನೆಯು ಕಾರ್ಮಿಕರ ಸಮಸ್ಯೆಗಳನ್ನು ಶೋಧನೆಮಾಡಲು ಕ್ರಮಕೈಗೊಂಡಿತು. ಇಲ್ಲಿಂದ ವಿವಿಧ ಕಾಯ್ದೆಗಳು ಕಾರ್ಮಿಕರ ಕಲ್ಯಾಣಕ್ಕೆ ಒತ್ತು ನೀಡಲಾರಂಭಿಸಿದವು.

ಕಾರ್ಮಿಕರ ಕಲ್ಯಾಣವು ಅಂದಿನ ಕಾಲಮಾನದಲ್ಲಿ ಒಂದು ಅರ್ಥಪೂರ್ಣ ಕ್ರಮವಾಗಿತ್ತು. ಏಕೆಂದರೆ ಹಳ್ಳಿಗಳಲ್ಲಿ, ವ್ಯವಸಾಯದಲ್ಲಿ ನಿರತರಾಗಿದ್ದ ವರ್ಗವು, ನಗರಗಳತ್ತ ಚಲಿಸಿ

* ಪ್ರಿಯದರ್ಶಿನಿ ನಿಲಯ, ೩ನೇ ಅಡ್ಡರಸ್ತೆ, ಹರಿಪ್ರಿಯ ಹೋಟೆಲ್ ಹಿಂಭಾಗ, ಬಂದೀಗೌಡ ಬಡಾವಣೆ, ಮಂಡ್ಯ.

ಕೈಗಾರಿಕಾ ಸಮಾಜಕ್ಕೆ ಪ್ರವೇಶ ಪಡೆದಿತ್ತು. ಬಹಳಷ್ಟು ಕಾರ್ಮಿಕರು ನಗರಗಳ ಸ್ಲಮ್‌ಗಳಲ್ಲಿ ಜೀವನ ಆರಂಭಿಸಿದ್ದರು. ಇಂತಹ ಒಂದು ವರ್ಗದ ಆರೋಗ್ಯ ಸೌಲಭ್ಯಗಳು, ಸಾಮಾನ್ಯ ಕಲ್ಯಾಣ ಕಾರ್ಯಕ್ರಮಗಳು, ಆರ್ಥಿಕ ಕಲ್ಯಾಣ ಕಾರ್ಯಗಳು, ಉತ್ತಮ ದುಡಿಯುವ ಪರಿಸರ ಒದಗಿಸುವುದು ಅತ್ಯಂತ ಅವಶ್ಯ, ತುರ್ತು ಸಂದರ್ಭವಾಗಿತ್ತು. ಈ ಕಾಲಕ್ಕಾದ ಮಹಾಯುದ್ಧಗಳಿಂದ ಕೈಗಾರಿಕೆ ಮತ್ತು ಕಾರ್ಮಿಕರ ಮೇಲೆ ಅನೇಕ ಒತ್ತಡಗಳು ಉಂಟಾಗಿದ್ದವು. ಈ ಸಂದರ್ಭದಲ್ಲಿ ಕಾರ್ಮಿಕರ ಕಲ್ಯಾಣ ಕಾರ್ಯವೂ ಅತ್ಯಂತ ಅನಿವಾರ್ಯ ಎಂದೆನಿಸಿದಂತೆ ಗೋಚರಿಸುತ್ತದೆ. ಬ್ರಿಟೀಷ್ ಭಾರತದ ಸರ್ಕಾರವು ದ್ವಿತೀಯ ಮಹಾಯುದ್ಧದ ಸಂದರ್ಭದಲ್ಲಿ ಕಾರ್ಮಿಕರ ಕಲ್ಯಾಣದತ್ತ ಸಾಗಿತ್ತು. ಸಂಸ್ಥಾನಗಳೊಂದಿಗೆ ಹಲವು ಪತ್ರವ್ಯವಹಾರಗಳನ್ನು ನಡೆಸಿತ್ತು. ಆ ಮೂಲಕ ಕಾರ್ಮಿಕರ ಕಲ್ಯಾಣದತ್ತ ಹೆಜ್ಜೆಗಳನ್ನು ಹಾಕುತ್ತಿತ್ತು. [ರಾಜ್ಯ ಪತ್ರಾಗಾರ ಇಲಾಖೆಯ ದಾಖಲೆಗಳಿಂದ ತಿಳಿದುಕೊಳ್ಳ ಬಹುದು.] ದಿ. ೧೧ ಜೂನ್ ೧೯೪೨ರಲ್ಲಿ ಬ್ರಿಟೀಷ್ ಸರ್ಕಾರ ದಿಂದ ಮೈಸೂರು ಸಂಸ್ಥಾನಕ್ಕೆ ಪತ್ರವೊಂದು ಬಂದಿರುತ್ತದೆ. ಅದರಂತೆ ಕೈಗಾರಿಕೆಗಳಲ್ಲಿ ಸರ್ಕಾರ ಮತ್ತು ಕಾರ್ಮಿಕರ ಸಹಭಾಗಿತ್ವವಿರಬೇಕೆಂದು ಸೂಚಿಸುತ್ತದೆ. ರಾಷ್ಟ್ರ ಮಟ್ಟದ ಪ್ರಥಮ ತ್ರಿವರ್ಗ ಪ್ರತಿನಿಧಿಗಳ ಸಭೆಯು ೭-೮-೧೯೪೨ರಲ್ಲಿ ದೆಹಲಿಯಲ್ಲಿ ನಡೆಯುತ್ತದೆ. ಈ ಸಭೆಯ ಅಧ್ಯಕ್ಷತೆಯನ್ನು ಡಾ. ಬಿ.ಆರ್. ಅಂಬೇಡ್ಕರ್ (ಕಾರ್ಮಿಕ ಮಂತ್ರಿಗಳು)ರವರು ವಹಿಸಿಕೊಂಡಿದ್ದರು. ಅವರು ಸಭೆಯಲ್ಲಿ ಮಾತನಾಡುತ್ತಾ ಕಾಯ್ದೆಗಳಲ್ಲಿನ ಏಕರೂಪತೆ ಇಲ್ಲಿ ಮುಖ್ಯವಲ್ಲ, ಕಾರ್ಮಿಕರ ಸ್ಥಿತಿಗತಿ ಸುಧಾರಣೆ ಮುಖ್ಯವೆಂದರು. ನಾನು ಮದ್ರಾಸ್ ಸರ್ಕಾರದಲ್ಲಿ ಮಂತ್ರಿಯಾಗಿದ್ದಾಗಲೇ ತ್ರಿವರ್ಗ ಪ್ರತಿನಿಧಿಗಳ ಸಭೆ ವ್ಯವಸ್ಥೆ ಮಾಡಿದ್ದೆ ಎಂದು ತಿಳಿಸುತ್ತಾ ಎಚ್ಚರಿಕೆ ನೀಡುತ್ತಾರೆ. ೧೯೧೯ರ ಅಂತರ ರಾಷ್ಟ್ರೀಯ ಕಾರ್ಮಿಕ ಸಂಘಟನೆಯ ನಿಯಮಗಳನ್ನು ಅಳವಡಿಸಿಕೊಳ್ಳಲು ನಿರ್ದೇಶಿಸಿದರು.[೪]

## ಸಮ್ಮೇಳನದ ಗುರಿ ಮತ್ತು ಉದೇಶಗಳು

* ಕಾರ್ಮಿಕರ ಕಾಯ್ದೆಯಲ್ಲಿ ಏಕರೂಪತೆ ತರುವುದು.[೫]
* ಕೈಗಾರಿಕಾ ವಿವಾದಗಳನ್ನು ಪರಿಹರಿಸಲು ನಿಯಮಾವಳಿ ಗಳನ್ನು ರಚಿಸುವುದು.
* ಕಾರ್ಖಾನೆ ಒಡೆಯರು ಮತ್ತು ಕಾರ್ಮಿಕರ ನಡುವಿನ ಸಮಸ್ಯೆಗಳನ್ನು ಅಖಿಲಭಾರತ ಮಟ್ಟದಲ್ಲಿ ಗಮನಿಸಿ ಚರ್ಚಿಸುವುದು.

## ದೆಹಲಿ ಸಮ್ಮೇಳನದ ಚರ್ಚೆಗಳು

* ಕೇಂದ್ರ ಸಲಹಾ ಸಮಿತಿಯು ಸಮಸ್ಯೆಗಳೊಂದಿಗೆ ಸ್ಥಳೀಯ ಸಲಹಾ ಮಂಡಳಿಯೊಂದಿಗೆ ಕಾರ್ಯ ನಿರ್ವಹಿಸುವುದು.[೬]
* ಒಂದು ವಿಸ್ತಾರವಾದ ಕಾರ್ಮಿಕರ ಕೋಡ್ ತರುವುದು.
* ಕಾರ್ಖಾನೆ ಒಡೆಯರು, ಕಾರ್ಮಿಕರು ಮತ್ತು ಸರ್ಕಾರದೊಂದಿಗೆ ಹೆಚ್ಚು ಸಹಭಾಗಿತ್ವ ರೂಪಿಸುವುದು.

ಈ ಮೇಲ್ಕಂಡ ವಿಷಯಗಳಲ್ಲಿ ಸಮ್ಮೇಳನವು ಸ್ಪಷ್ಟೀಕರಣ ನೀಡಬೇಕು. ಇಲ್ಲಿ ವಿಶ್ವಯುದ್ಧಕ್ಕೆ ಒತ್ತುಕೊಡಬೇಕು. ಏಕೆಂದರೆ ಪ್ರಸ್ತುತ ಯುದ್ಧವು ಸರಬರಾಜನ್ನು ಅವಲಂಬಿಸಿದೆ. ಈ ಸರಬರಾಜು ಕೈಗಾರಿಕಾ ಶಾಂತಿಯ ಮೇಲೆ ನಿಂತಿದೆ ಎಂದು ತಿಳಿಸಲಾಗುತ್ತದೆ. ಅಂದರೆ ಇಲ್ಲೊಂದು ಒತ್ತಡದ ಸ್ಥಿತಿಯಲ್ಲಿ ಈ ಬಹುತೇಕ ಕ್ರಮಗಳನ್ನು ಜಾರಿಗೊಳಿಸಲು ಯತ್ನಿಸುತ್ತಿರು ವುದು ಕಂಡುಬರುತ್ತದೆ. ಅಲ್ಲದೆ ಕಾರ್ಮಿಕರ ಅವಶ್ಯಕತೆಯ ಅರಿವಾಗುತ್ತದೆ ಮತ್ತು ಇದೇ ಸಂದರ್ಭವು ಅವರು ಕೆಲ ಸೌಲಭ್ಯಗಳನ್ನು ಪಡೆದುಕೊಳ್ಳುವ ಅವಕಾಶ ಸಿಕ್ಕಿತು ಎನ್ನಬಹುದು. ಈ ಸಮ್ಮೇಳನವು ಲೀಗ್ ಆಫ್ ನೇಷನ್ಸ್ – ಐ.ಎಲ್.ಓ ನಿರ್ದೇಶನಗಳನ್ನು ಅಳವಡಿಸಿಕೊಳ್ಳುವ ಸಂದರ್ಭವಾಗಿತ್ತೆಂದು ಗಮನಿಸಬಹುದು.[೭]

ಸಮ್ಮೇಳನವು ಕೇಂದ್ರ, ಪ್ರಾಂತೀಯ ಸರ್ಕಾರ, ಛೇಂಬರ್ ಆಫ್ ಪ್ರಿನ್ಸ್‌ಸ್, ಕಾರ್ಮಿಕರ, ಮಾಲೀಕರುಗಳಿಂದ ಕೂಡಿದ್ದು ದಿಟ್ಟ ನಿಲುವುಗಳ, ಪ್ರಾತಿನಿಧ್ಯದ ಅವಕಾಶದ ಸಂದರ್ಭವಾಗಿದ್ದು ಹೊಸ ಕ್ರಮವಾಗಿತ್ತು.

ಕಾರ್ಮಿಕ ಸಮಿತಿಯನ್ನು ರಚಿಸಲು ಸಮ್ಮೇಳನವು ಸೂಚಿಸಿತ್ತು. ಈ ಸಮಿತಿಯಲ್ಲಿ ಈ ಕೆಳಕಂಡ ಸದಸ್ಯರಿರ ಬೇಕೆಂದು ಸಲಹೆ ನೀಡಿತ್ತು.[೮] ಅದರಂತೆ ಸಮಿತಿಯಲ್ಲಿ,

| | |
|---|---|
| ಕಾರ್ಖಾನೆ ಮಾಲೀಕರು | – ೦೫ |
| ಕಾರ್ಮಿಕರು | – ೦೫ |
| ಭಾರತೀಯ ರಾಜ್ಯಗಳಿಂದ | – ೦೩ |
| ಭಾರತ ಸರ್ಕಾರದಿಂದ | – ೦೧ |
| ಒಟ್ಟು | – ೧೪ |

ಸದಸ್ಯರಿರುವಂತೆ ಸೂಚಿಸಿತ್ತು.

ದಿನಾಂಕ: ೧೩-೧೧-೧೯೪೨ರಲ್ಲಿ ಸೆಕ್ರೇಟರಿಯು ಮೈಸೂರು ಸಂಸ್ಥಾನದ ರೆಸಿಡೆಂಟರಿಗೆ ಪತ್ರ ಬರೆದು ಕಾರ್ಮಿಕ ಸಮಿತಿಗೆ ಮೈಸೂರು ಸಂಸ್ಥಾನದಿಂದ ಪ್ರತಿನಿಧಿ ಕಳುಹಿಸಲು ಸೂಚನೆ ನೀಡುತ್ತಾರೆ, ಕಾರ್ಮಿಕ ಸಮಿತಿಯ ಸರ್ಕಾರಕ್ಕೆ

ಮನವಿ ಪತ್ರವೊಂದನ್ನು ಸಲ್ಲಿಸುತ್ತದೆ. ಆ ಪತ್ರದಲ್ಲಿ ಕಾರ್ಮಿಕರ ದುಡಿಯುವ ಸಮಯ (Working hours) ಹಾಗೂ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಕೇಳಿಕೊಳ್ಳಲಾಗಿತ್ತು. ಅಲ್ಲದೆ ಯುದ್ಧದಿಂದಾದ ಹಾನಿಯೋಜನೆಯು 'ಉಪಶಮನದ' ಕ್ರಮವೇ ಹೊರತು 'ಪರಿಹಾರ ಕ್ರಮವಲ್ಲ' ಎಂದು ಸ್ಪಷ್ಟೀಕರಣ ನೀಡಲಾಗಿತ್ತು.

ಇದೇ ಸಂದರ್ಭದಲ್ಲಿ ಕೈಗೋರಿಕೋತ್ಪನ್ನಗಳಲ್ಲಿ ಕೆಲವನ್ನು ಹಾನಿಗೊಳಗಾಗದಂತೆ (೫೨ ಉತ್ಪನ್ನಗಳು) ವಿಮೆ ವ್ಯಾಪ್ತಿಗೆ ತರುವ ಪ್ರಯತ್ನವೂ ನಡೆದಿತ್ತು.[೯] ಇದರಿಂದ ಕೈಗಾರಿಕೆಗಳನ್ನು ರಕ್ಷಿಸುವ ಯತ್ನವಾಗಿತ್ತು ಎಂಬುದು ತಿಳಿಯುತ್ತದೆ.

ಯುದ್ಧದ ಕಾಲವಾದ್ದರಿಂದ ಕಾರ್ಮಿಕರಿಗೆ ಬೋನಸ್ ನೀಡುವುದನ್ನು ಮುಂದೂಡುವ ಪ್ರಯತ್ನವೂ ನಡೆದಿತ್ತು. ಯುದ್ಧದಿಂದ ಸರಕುಗಳ ಮೇಲಿನ ಬೇಡಿಕೆ ಹೆಚ್ಚುತ್ತಿದೆ. ಇದರಿಂದ ಗಳಿಕೆಯೂ ಹೆಚ್ಚಾಗುತ್ತಿದೆ. ಆದರೂ ಬೋನಸ್ ನೀಡುವುದನ್ನು ಮುಂದೂಡುವುದು ಅನಿವಾರ್ಯ ಎಂಬ ನಿರ್ಧಾರಕ್ಕೆ ಬರಲಾಗಿತ್ತು. ಕಾರ್ಖಾನೆ ಮಾಲೀಕರು ೫೦% ಬೋನಸ್ ಅನ್ನು ನಗದಾಗಿ ನೀಡಿ, ಉಳಿದ ೫೦% ಅನ್ನು ಅಂಚೆ ಕಛೇರಿಯ ಉಳಿತಾಯ ಖಾತೆಯಲ್ಲಿಡಬೇಕು. ಆ ಮೊತ್ತವನ್ನು ಒಂದು ವರ್ಷದವರೆಗೂ ಬಿಡಿಸಿಕೊಳ್ಳುವಂತಿಲ್ಲವೆಂದು ಸೂಚಿಸಲಾಗಿತ್ತು. ಅಲ್ಲದೆ ಯುದ್ಧದಿಂದ ವಸ್ತುಗಳ ಬೆಲೆ ಏರಿಕೆಯಾಗಿ ಕಾರ್ಮಿಕರ ಜೀವನ, ಸ್ಥಿತಿಗತಿ ಸಂಕಷ್ಟದಲ್ಲಿದೆ. ಆದ್ದರಿಂದ ಅವರು ೫೦% ಬೋನಸ್ಸನ್ನು ಠೇವಣಿ ಇಡಲು ಒಪ್ಪಲಾರರು ಎಂದು ಮೈಸೂರು ಸಂಸ್ಥಾನ ಪತ್ರದ ಮೂಲಕ ಕೋರಿತ್ತು.

ಯುದ್ಧಗಳು ಹಲವಾರು ಅವಾಂತರಗಳನ್ನು ಸೃಷ್ಟಿ ಮಾಡುತ್ತವೆ. ಅಂತಹ ಸಂದರ್ಭದಲ್ಲಿ ಕಾರ್ಮಿಕರ ಕಲ್ಯಾಣ ಕ್ರಮಗಳನ್ನು ಬ್ರಿಟೀಷ್ ಸರ್ಕಾರ ತರಲು ಮುಂದಾಯಿತು. ಅಲ್ಲದೆ ಕಾಲಕ್ಕೆ ಸಮ್ಮೇಳನ ನಡೆಸಿ ಜಾಗೃತಿ ಮೂಡಿಸುವ ಹಾಗೂ ಮಾಹಿತಿ ನೀಡುವ ಪ್ರಯತ್ನಗಳು ನಡೆದವು. ಯಾವುದೇ ನಿಯಮಿತ ಚಟುವಟಿಕೆಗಳಿಲ್ಲದ ಸಂದರ್ಭದಲ್ಲಿ ಕಾರ್ಮಿಕ, ಮಾಲೀಕ ಹಾಗೂ ಸರ್ಕಾರದ ಪ್ರತಿನಿಧಿಗಳನ್ನು ಒಟ್ಟಿಗೆ ಸೇರಿಸಿ ಜವಾಬ್ದಾರಿ ಹೆಚ್ಚಿಸುವ ಪ್ರಯತ್ನವನ್ನು ಮೆಚ್ಚಲೇಬೇಕಾಗುತ್ತದೆ. ಕಾಯ್ದೆಗಳನ್ನು ಜಾರಿಗೊಳಿಸುವುದು, ಐ.ಎಲ್.ಓ. ನಿರ್ದೇಶನಗಳನ್ನು ಅಳವಡಿಸಿಕೊಳ್ಳುವುದು, ಕೈಗಾರಿಕಾ ವಿವಾದಗಳನ್ನು ಸೂಕ್ಷ್ಮವಾಗಿ ಪರಿಹರಿಸುವ ಪ್ರಯತ್ನಗಳನ್ನು ಹಮ್ಮಿಕೊಂಡಿದ್ದು ಉತ್ತಮ ಬೆಳವಣಿಗೆ ಎಂದರೆ ತಪ್ಪಾಗಲಾರದು. ಆದರೆ ಯುದ್ಧದಿಂದಾದ ಕೈಗಾರಿಕೋತ್ಪನ್ನಗಳ ಬೇಡಿಕೆಯಿಂದ ಕಾರ್ಮಿಕರ ಶ್ರಮಕ್ಕೆ ಹೆಚ್ಚಿನ ಬೋನಸ್ ದೊರೆಯಿತು. ಆದರೆ ಅದನ್ನು ತಕ್ಷಣ ಬಳಸಿಕೊಳ್ಳಲಾಗದಿದ್ದದ್ದು ವಿಪರ್ಯಾಸವೇ ಸರಿ. ಕಾರ್ಮಿಕರು ಹಳ್ಳಿಗಳಿಂದ, ಕೃಷಿಕ ವ್ಯವಸ್ಥೆಯಿಂದ ನಗರಗಳತ್ತ ಹೆಜ್ಜೆ ಹಾಕಿ, ಉತ್ತಮ ವಾತಾವರಣದಲ್ಲಿ ವಾಸಿಸುತ್ತಿರಲಿಲ್ಲ. ಹಾಗೆಯೇ ಕೈಗಾರಿಕಾ ವಾತಾವರಣವೂ ಉತ್ತಮವಾಗಿಲ್ಲದ ಸ್ಥಿತಿಯಲ್ಲಿತ್ತು. ಇವರ ಕಲ್ಯಾಣಕ್ಕೆ ನಡೆದ ಕೆಲ ಪ್ರಯತ್ನಗಳನ್ನು ಗೌರವಿಸುವುದು ಅಂದಿನ ಅನಿವಾರ್ಯತೆಯಾಗಿದೆ.



## ಆಧಾರಸೂಚಿ


೧. ಡಾ. ಬಿ.ಪಿ. ಕುಮಾರ್, ದಾವಣಗೆರೆ ಹತ್ತಿ ಗಿರಣಿ ಕಾರ್ಮಿಕರ ಚಳವಳಿಗಳು, ಪೂರ್ಣ ಪ್ರಕಾಶನ, ಶಿವಮೊಗ್ಗ, ೨೦೦೭, ಪು. ೧೪೯.

೨. Website: faceinterviewesier.blogspot.in

೩. ಚ.ನ. ಶಂಕರರಾವ್, ಸಾಮಾಜಿಕ ಮತ್ತು ಸಮಾಜ ಶಾಸ್ತ್ರೀಯ ಚಿಂತನೆ, ೧೯೯೫, ಪು. ೫೯.

೪. ರಾಜ್ಯಪತ್ರಾಗಾರ ಇಲಾಖೆ, Industries and Commerce, 1926-46, ಫೈಲ್ ನಂ. ೬೦-೪೨, ಕ್ರ.ಸಂ. ೧-೬.

೫. ಅದೇ .

೬ ಅದೇ.

೭. ಅದೇ.

೮. ಅದೇ.

೯. ರಾಜ್ಯಪತ್ರಾಗಾರ ಇಲಾಖೆ, War risks insurance, ಫೈಲ್ ನಂ. ೬೦, ೧೯೪೨, ಕ್ರ.ಸಂ. ೧-೮.



# ಅರಮನೆ ಸತ್ಯಾಗ್ರಹ ಸಂದರ್ಭದಲ್ಲಿ ಹೊರಡಿಸಲಾದ ಫ್ರೀ ಮೈಸೂರ್ ಗೆಜೆಟ್

ಪಿ. ನಾಗಭೂಷಣಗೌಡ*

**ಮೈಸೂರು** ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರ ರಚನೆಗಾಗಿ ಆಗ್ರಹಿಸಿ ಜನತೆ ನಡೆಸಿದ 'ಅರಮನೆ ಸತ್ಯಾಗ್ರಹ' (ಮೈಸೂರು ಚಲೋ) ಆಂದೋಲನವನ್ನು ಇಲ್ಲಿ ಕಾಣಿಸಿ ಕೊಂಡ ಕಡೆಯ ರಾಷ್ಟ್ರೀಯ ಆಂದೋಲನವೆಂದೇ ಗುರುತಿಸ ಲಾಗಿದೆ. ಸ್ವಾತಂತ್ರ್ಯವೀರರು ಈಗಲೂ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಬಳಸಿದ ಅಸ್ತ್ರಗಳನ್ನೆ ಬಳಸಿದರು. ಸಭೆ-ಸಮಾರಂಭ ಸಂಘಟಿಸುವುದು, ಮೆರವಣಿಗೆ ನಡೆಸು ವುದು, ಪ್ರತಿಬಂಧಕಾಜ್ಞೆಗಳನ್ನು ಉಲ್ಲಂಘಿಸುವುದು, ಟೆಲಿಫೋನ್ ತಂತಿ ಕತ್ತರಿಸುವುದು, ಸರ್ಕಾರಿ ಕಚೇರಿಗಳಿಗೆ ಬೆಂಕಿ ಹಚ್ಚುವುದು, ರೈಲುರೋಖೋಗಳನ್ನು ನಡೆಸಲಾಯಿತು. ಬೆಂಗಳೂರಿನಲ್ಲಿ ೧೯೪೬ರ ನವೆಂಬರ್ ೨ ಮತ್ತು ೩ರಂದು ಜರುಗಿದ ಮೈಸೂರು ಕಾಂಗ್ರೆಸ್ಸಿನ ಆರನೇ ಅಧಿವೇಶನದಲ್ಲಿ ಮಾತನಾಡಿದ ಕೆ.ಸಿ.ರೆಡ್ಡಿಯವರು ಜವಾಬ್ದಾರಿ ಸರಕಾರ ಪಡೆಯಲು ತಮ್ಮ ತಂತ್ರವನ್ನು ಬಳಸಿಕೊಳ್ಳಬೇಕೆಂದು ಸೂಚಿಸಿದ್ದರು. ಅದನ್ನು ಪಡೆಯಲು ಯಾವುದೇ ಮಾರ್ಗವನ್ನು ಅನುಸರಿಸಿದರೂ ಸರಿ ಎಂಬಂತೆ ಅವರಾಡಿದ ಮಾತು ಜನತೆಯಲ್ಲಿ ಹುರುಪು ತಂದಿತ್ತು. (MRACC ೧೮೮೧-೧೯೮೧ ಪು. ೨೩)

## ಸುಧಾರಣಾ ಸಮಿತಿ ಎಂಬ ಮರೀಚಿಕೆ

ಭಾರತದ ಸ್ವಾತಂತ್ರ್ಯ ಸನ್ನಿಹಿತವಾಗುತ್ತಿದ್ದಂತೆಯೇ ಮೈಸೂರಿನ ಮಹಾರಾಜರಾದ ಶ್ರೀಮನ್ಮಹಾರಾಜ ಜಯಚಾಮರಾಜೇಂದ್ರ ಒಡೆಯರ್ ಅವರು ಜನತೆಯು ನಡೆಸದಿರಲಿ ಎಂದು ೧೯೪೭ರ ಆಗಸ್ಟ್ ೮ರಂದು ಪ್ರಕಟಣೆ ಯೊಂದನ್ನು ಹೊರಡಿಸಿದರು. "ರಾಜ್ಯದಲ್ಲಿರುವ ವಿವಿಧ ರಾಜಕೀಯ ಪಕ್ಷಗಳ ಮುಖಂಡರನ್ನು ಸಂಪರ್ಕಿಸಿ ಸಂವಿಧಾನಾತ್ಮಕ ಸುಧಾರಣೆಗಾಗಿ ಮುಂದಿನ ಕ್ರಮ ಕೈಗೊಳ್ಳಲು ತಾವು ದಿವಾನರಿಗೆ ನಿರ್ದೇಶನ ನೀಡಿದ್ದೇವೆ" ಎಂಬುದಾಗಿ ಅವರು ಘೋಷಿಸಿದರು. ಅಧಿಕಾರಿಗಳು ಸಂವಿಧಾನ ಸುಧಾರಣ ಸಲಹಾ ಸಮಿತಿಯನ್ನು ರಚಿಸಿ, ಕಾಂಗ್ರೆಸ್ಸಿಗೆ ನಾಲ್ಕು ಸ್ಥಾನಗಳನ್ನು ನೀಡಿದರು. ಆದರೆ ಕಾಂಗ್ರೆಸ್ ಅದನ್ನು ತಿರಸ್ಕರಿಸಿತು. (ದಿ ಹಿಂದೂ ೧೨.೦೧.೧೯೪೭, ತಾಯಿನಾಡು ೧೦.೦೮.೧೯೪೭)

## ಕ್ಯಾಬಿನೆಟ್ ಮಿಷನ್ ಮತ್ತು ಸಂಸ್ಥಾನಗಳು

ಇದಕ್ಕೂ ಮುನ್ನ ಮೈಸೂರು ಕಾಂಗ್ರೆಸ್, ಸಂಸ್ಥಾನಗಳಿಗೆ ಸಂಬಂಧಿಸಿದ ಕ್ಯಾಬಿನೆಟ್ ಮಿಷನ್ನಿನ ಸಲಹೆಯನ್ನು ವಿರೋಧಿಸಿತ್ತು. ಸಲಹೆಗಳು ಹೀಗಿದ್ದವು:-

೧. ಹೊಸ ಸಂವಿಧಾನ ರಚನೆಯಾದ ನಂತರ ಬ್ರಿಟಿಷ್ ಪ್ರಭುತ್ವ ಕೊನೆಗೊಳ್ಳುವುದು.

೨. ರಾಜ್ಯಗಳು ಬ್ರಿಟಿಷ್ ಪ್ರಭುತ್ವಕ್ಕೆ ಒಪ್ಪಿಸಿದ್ದ ಎಲ್ಲ ಹಕ್ಕುಗಳೂ ರಾಜ್ಯಗಳಿಗೆ ಮರಳಿಸಲಾಗುತ್ತದೆ.

೩. ನಂತರ ಅವುಗಳು ಬ್ರಿಟಿಷ್ ಇಂಡಿಯಾದ ಸರಕಾರ ಅಥವಾ ಸರಕಾರಗಳೊಂದಿಗೆ ಸಂಸದೀಯ ಸಂಬಂಧ ಹೊಂದಬಹುದು ಇಲ್ಲವೇ ಒಂಟಿಯಾಗಿ ಇಲ್ಲವೇ ಹಲವು ರಾಜ್ಯಗಳು ತಮ್ಮಲ್ಲಿ ರಾಜಕೀಯ ವ್ಯವಸ್ಥೆ ಮಾಡಿಕೊಳ್ಳಬಹುದು.

ಇದಕ್ಕೆ ಪ್ರತಿಯಾಗಿ ಮೈಸೂರು ಕಾಂಗ್ರೆಸ್ ವಿಜ್ಞಾಪನ ಪತ್ರವೊಂದನ್ನು ಸಲ್ಲಿಸಿ ಸಂಸ್ಥಾನಗಳಿಗೆ ಸಂಬಂಧಪಟ್ಟಂತೆ ಕ್ಯಾಬಿನೆಟ್ ಮಿಷನ್ ಮಾಡಿರುವ ಸಲಹೆಗಳು ತೃಪ್ತಿಕರವಾಗಿಲ್ಲ. ರಾಷ್ಟ್ರದ ಐಕ್ಯತೆಗೆ ಈ ಸಲಹೆಗಳು ಭಂಗ ತರುತ್ತವೆ, ಭಾರತದ ಒಕ್ಕೂಟದಲ್ಲಿ ಸಂಸ್ಥಾನಗಳು ಸೇರಲೇಬೇಕು, ಅವು ರಾಜ್ಯಾಂಗ ಸಭೆಯಲ್ಲಿ ಭಾಗವಹಿಸಬೇಕು. ಈ ಪ್ರಾತಿನಿಧ್ಯವು ಸಂಸ್ಥಾನದ ಪ್ರಜೆಗಳೇ ಇರಬೇಕು. ಚುನಾಯಿತ ಸದಸ್ಯರೇ ರಾಜ್ಯಾಂಗ ಸಭೆಯ ಸದಸ್ಯರಾಗಬೇಕು. ಈ ರೀತಿ ಶಿಫಾರಸುಗಳ ತಿದ್ದುಪಡಿ ಯಾಗದೇ ಹೋದರೆ ಕ್ಯಾಬಿನೆಟ್ ಮಿಷನ್ನಿನ ವರದಿಗಳು ಸರ್ವತಾ ಅಂಗೀಕಾರಾರ್ಹವಲ್ಲ ಎಂದು ಕಾಂಗ್ರೆಸ್ ಸೂಚಿಸಿತು.

* ಉಪನ್ಯಾಸಕರು, ಇತಿಹಾಸ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ-೫೭೭೦೦೨.

## ದಿವಾನರ ಹೇಳಿಕೆ

೨೯.೦೪.೧೯೪೭ರಂದು ದಿವಾನರು ಹೇಳಿಕೆ ಯೊಂದನ್ನಿತ್ತರು. "ಮೇಲೆ ಹೇಳಿದ ವಿಚಾರಕ್ಕೆ ಈಗಾಗಲೇ ಗಮನ ಕೊಡಲಾಗಿದೆ. ಇದಕ್ಕೆ ಹೊಂದಾಣಿಕೆಯಾಗುವ ರೀತಿಯಲ್ಲಿ ಶ್ರೀಮನ್ಮಹಾರಾಜರ ಪರಮಾಧಿಕಾರಕ್ಕೆ ಧಕ್ಕೆ ಬರದಂತೆ ಒಂದು ಬಗೆಯ 'ಜವಾಬ್ದಾರಿ ಸರಕಾರ' ಪದ್ಧತಿ ಸಂಸ್ಥಾನದಲ್ಲಿ ರೂಪುಗೊಳ್ಳುತ್ತದೆ ಎಂದು ನಾನು ನಂಬಿದ್ದೇನೆ" ಎಂದರು. ಈ ಹೇಳಿಕೆಯಲ್ಲಿನ 'ಒಂದು ಬಗೆಯ ಜವಾಬ್ದಾರಿ ಸರಕಾರ' ಎಂಬ ಮಾತು ಜನತೆಯನ್ನು ನಿರಾಶೆಯತ್ತ ತಳ್ಳಿತು. ಕಾಂಗ್ರೆಸ್ ನಾಯಕರನ್ನು ಅಣಕಿಸಿತು. ಕೆಣಕಿತು. ೧೯೪೭ರ ಮೇ ೧ನೇ ತಾರೀಖಿನಿಂದಲೇ ಸತ್ಯಾಗ್ರಹವನ್ನು ಆಚರಿಸಲು ಮೈಸೂರು ಕಾಂಗ್ರೆಸ್ ತೀರ್ಮಾನಿಸಿತು. ಆದರೆ ದಿವಾನ್ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ದೆಹಲಿಗೆ ಹೋಗಿದ್ದರಿಂದ ಸತ್ಯಾಗ್ರಹದ ದಿನಾಂಕವನ್ನು ಮುಂದೆ ಹಾಕಬೇಕಾಯಿತು. ತಾತ್ಕಾಲಿಕ ಮಂತ್ರಿಮಂಡಲವನ್ನು ರಚನೆ ಮಾಡಬೇಕೆಂದು ಸರ್ಕಾರವನ್ನು ಒತ್ತಾಯಿಸಲಾಯಿತು. (ದೊರೆಸ್ವಾಮಿ.೨೦೦೬.೧೦೬-೧೦೭)

## ಸತ್ಯಾಗ್ರಹಕ್ಕೆ ನಾಂದಿ

ಈ ಮಧ್ಯೆ ದಿವಾನರು ಮೈಸೂರು ಭಾರತದ ರಾಜ್ಯಾಂಗ ರಚನಾ ಸಭೆಗೆ ಸೇರಲು ನಿಶ್ಚಯಿಸಿದೆ ಎಂದು ಪ್ರಕಟಪಡಿಸಿದರು. ಜುಲೈ ತಿಂಗಳಲ್ಲಿ ನ್ಯಾಯ ವಿಧಾಯಕ ಸಭೆ, ಪ್ರಜಾ ಪ್ರತಿನಿಧಿ ಸಭೆಗಳು ಸೇರಿ ನಾಲ್ಕು ಜನರನ್ನು ಭಾರತ ರಾಜ್ಯಾಂಗ ರಚನಾ ಸಭೆಗೆ ಸದಸ್ಯರನ್ನಾಗಿ ಚುನಾಯಿಸಿತು. ಮಾರನೇ ತಿಂಗಳು ಆಗಸ್ಟ್ ೯ ರಂದು ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಅಧಿವೇಶನ ಮೈಸೂರು ರಂಗಾಚಾರ್ಲು ಭವನದಲ್ಲಿ ಸಮಾವೇಶ ಗೊಂಡಿತು. ಅಧ್ಯಕ್ಷ ಪೀಠದಿಂದ ಮಾತನಾಡಿದ ಕೆ.ಸಿ. ರೆಡ್ಡಿಯವರು "ಕಾದು ನೋಡಿದುದು ಆಯಿತು, ಇನ್ನು ಉಳಿದಿರುವುದು ಒಂದೇ ಮಾರ್ಗ, ಅದು ಸತ್ಯಾಗ್ರಹ" ಎಂದು ಘೋಷಣೆ ಮಾಡಿದರು. ಮೈಸೂರು ರಾಜಕೀಯವನ್ನು ಪ್ರಜಾಪ್ರಭುತ್ವದತ್ತ ಒಯ್ದು ಮೈಸೂರಿನ ಇತಿಹಾಸವನ್ನು ಬದಲಿಸಿದ 'ಅರಮನೆ ಸತ್ಯಾಗ್ರಹ' ಅಥವಾ 'ಮೈಸೂರು ಚಲೊ' ಸತ್ಯಾಗ್ರಹಕ್ಕೆ ಇದು ನಾಂದಿಯಾಯಿತು.

## ಕೌನ್ಸಿಲ್ ಆಫ್ ಆ್ಯಕ್ಷನ್

ಮೈಸೂರು ಕಾಂಗ್ರೆಸ್ ಸಮಿತಿಯು ಆಗಸ್ಟ್ ೧೯೪೭ರಲ್ಲಿ ಸಭೆ ಸೇರಿ 'ಅರಮನೆ ಸತ್ಯಾಗ್ರಹ' ಅಥವಾ 'ಮೈಸೂರು ಚಲೋ' ಘೋಷಣೆ ಹೊರಡಿಸಿತು. ಹಲವಾರು ಬೇಡಿಕೆ ಗಳನ್ನು ಮಂಡಿಸಿತು. ಅದರಲ್ಲಿ ಕೂಡಲೇ ಜವಾಬ್ದಾರಿ ಸರಕಾರ, ಚುನಾಯಿತ ಪ್ರತಿನಿಧಿಗಳಿಂದ ಕೂಡಿದ ರಾಜ್ಯಾಂಗ ರಚನಾಸಭೆ ರಚಿಸಬೇಕೆಂದೂ ರಾಜ್ಯಾಂಗ ರಚನಾ ಸಭೆಯು ಸಂವಿಧಾನವನ್ನು ರಚಿಸುವತನಕ ತಾತ್ಕಾಲಿಕ ಸರಕಾರ ಏರ್ಪಡಬೇಕೆಂದೂ ಬಂಧನಕ್ಕೆ ಒಳಗಾದ ಎಲ್ಲ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಬೇಕೆಂದೂ ಆಗ್ರಹಿಸಿತು. ಬರುವ ಸೆಪ್ಟೆಂಬರ್ ಒಂದರಂದು ಅರಮನೆ ಜಾಥಾ ಹೊರಡಿಸಲು ಸಹ ತೀರ್ಮಾನಿಸಲಾಯಿತು. (ಪಿ.ಆರ್. ರಾಮಯ್ಯ ಮೈಸೂರ್ಸ ಪೊಲಿಟಿಕಲ್ ಪು. ೮೫-೮೬) ಭಾರತ ಸ್ವತಂತ್ರವಾದ ದಿನ ಅರಮನೆ ಮತ್ತು ಸರ್ಕಾರಿ ಭವನಗಳ ಮೇಲೆ ರಾಷ್ಟ್ರಧ್ವಜಕ್ಕೆ ಸ್ಥಾನವಿರಲಿಲ್ಲ. ಸರ್ಕಾರಿ ಕಚೇರಿಗಳ ಮೇಲೆ ಧ್ವಜ ಹಾರಿಸುವ ಪ್ರಯತ್ನಗಳು ಅಲ್ಲಲ್ಲಿ ನಡೆದವು. ಹೋರಾಟವನ್ನು ತೀವ್ರಗೊಳಿಸುವ ಸಲುವಾಗಿ ಸ್ವಾತಂತ್ರ್ಯಪ್ರೇಮಿಗಳು ಕೌನ್ಸಿಲ್ ಆಫ್ ಆ್ಯಕ್ಷನ್ ಸ್ಥಾಪಿಸಿಕೊಂಡು ಹೋರಾಟಗಾರರಲ್ಲಿ ಮಾಹಿತಿ ನೀಡುತ್ತ ಪ್ರೇರೇಪಿಸುತ್ತಿತ್ತು.

## ಫ್ರೀ ಮೈಸೂರು ಗೆಝೆಟ್

ಇದು ಕೌನ್ಸಿಲ್ ಆಫ್ ಆ್ಯಕ್ಷನ್‌ನ ಕರಪತ್ರವಾಗಿತ್ತು. (ವಾರ್ತಾ ಸಂಚಿಕೆ) ಜನರ ಅಗತ್ಯಗಳೇನು, ಚಳುವಳಿಯನ್ನು ಹೇಗೆ ಮುನ್ನಡೆಸಬೇಕು, ಯಾವ ಕಡೆಗೆ ಹೇಗೆ ಚಳುವಳಿ ನಡೆದಿದೆ ಎಂಬುದನ್ನು ಫ್ರೀ ಮೈಸೂರು ಗೆಝೆಟಿನಲ್ಲಿ ವರದಿ ಮಾಡಲಾಗುತಿತ್ತು. ದಿನಾಂಕ ೯.೯.೧೯೪೭ರಂದು ಕೌನ್ಸಿಲ್ ಆಫ್ ಆ್ಯಕ್ಷನ್ ಹೊರಡಿಸಿದ ಮೊದಲ ಗೆಝೆಟಿನಲ್ಲಿನ ಸಂಕ್ಷಿಪ್ತ ವಿವರ ಹೀಗಿದೆ-ಇಂಗ್ಲೀಷಿನಲ್ಲಿ ಮುದ್ರಿಸಲಾಗಿದ್ದ ಫ್ರೀ ಮೈಸೂರ್ ಗೆಝೆಟ್ಟಿನ ಯಥಾರೂಪ ಇಲ್ಲಿ ಕೊಡಲಾಗಿದೆ.

"ಮೈಸೂರಿನಲ್ಲಿ ಜವಾಬ್ದಾರಿ ಸರಕಾರದ ಸಲುವಾಗಿ ಹೋರಾಟ ೧೯೩೭ರಲ್ಲಿ ಆರಂಭವಾಯಿತು. ಹೋರಾಟವು ಹಲವು ಹಂತಗಳಲ್ಲಿ ನಡೆದರೂ ಗುರಿ ತಲುಪಿಲ್ಲ. ೧೯೩೮, ೩೯ ಮತ್ತು ೧೯೪೨ ರಲ್ಲಿ ಚಳುವಳಿಯ ನೇತೃತ್ವವನ್ನು ಕಾಂಗ್ರೆಸ್ ವಹಿಸಿತ್ತು. ಈಗ ಕಾಂಗ್ರೆಸ್ ಪ್ರಬಲ ಮತ್ತು ಕೊನೆಯ ಹೋರಾಟದಲ್ಲಿದೆ.....

.....ಸೆಪ್ಟೆಂಬರ್ ಒಂದರಂದು ಆರಂಭವಾಗಿರುವ ಹೋರಾಟ ಚಳುವಳಿಗೆ ಹೊಸ ಜೀವ ತುಂಬಿದೆ. ಕಾಂಗ್ರೆಸ್ ನಾಯಕರ ಬಂಧನವು ಸವಾಲಾಗಿದೆ ಮತ್ತು ರಣೋತ್ಸಾಹದ ಶಕ್ತಿ ತಂದಿದೆ. ಎಲ್ಲ ವರ್ಗದ ಜನರು ಹೋರಾಟಕ್ಕಿಳಿದಿದ್ದಾರೆ....

....ಹೋರಾಟಕ್ಕೆ ಅಸ್ತ್ರಗಳೇ ಬೇಕಿಲ್ಲ, ಅಂತಹ ಶಸ್ತ್ರಾಸ್ತ್ರಗಳು ಸರಕಾರದ ಬಳಕೆಗೆ ಮೀಸಲಿರಲಿ, ಅವುಗಳು ದಂಗೆಯೆದ್ದಾಗ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಅದಕ್ಕಾಗಿ ನಾವು ಸಿದ್ಧತೆ ಮಾಡಿಕೊಳ್ಳಬೇಕು. ಈ ಬದ್ಧತೆ ಕೇವಲ ಪ್ರಚಾರದಿಂದ ಆಗಬಾರದು. ಕಾರ್ಯದಿಂದ ಆಗಬೇಕು.

ಕೆಲಸದ ಒಂದು ಭಾಗ ಪ್ರಚಾರದ ಸಾವಿರ ಪುಟಗಳಿಗೆ ಸಮ.

ಈ ಸಲ ಎಲ್ಲೆಡೆಯಿಂದ ನಾವು ಹೋರಾಡುತ್ತೇವೆ. ಲಾಠಿಚಾರ್ಜ, ಟಿಯರಗ್ಯಾಸಗಳನ್ನು ಎಲ್ಲ ರೀತಿಯಲ್ಲಿ ಮೆಟ್ಟಿ ನಿಲ್ಲಬೇಕು.... ಮೈಸೂರು ಕಾಂಗ್ರೆಸ್ಸಿನ ಸಂದೇಶ ಎಲ್ಲ ಹಳ್ಳಿ ತಾಂಡಾಗಳಿಗೆ ತಲುಪಬೇಕು. ಬಹಿರಂಗ ದಂಗೆಗೆ ಗ್ರಾಮಾಂತರ ಮೈಸೂರು ಎದ್ದು ನಿಲ್ಲಬೇಕು.

....ನಮ್ಮ ಜನ ಎಲ್ಲ ರೀತಿಯ ಹಿಂಸೆಗಳನ್ನು ಎದುರಿಸಿ ದ್ದಾರೆ. ನೈಜ ಸ್ವತಂತ್ರ ಮೈಸೂರಿನ ಸೇನಾನಿಗಳಂತೆ ಲಾಠಿಚಾರ್ಜ ಮತ್ತು ಗುಂಡಿನ ಮಳೆಯನ್ನು ಸ್ವೀಕರಿಸಿದ್ದಾರೆ.... ಸ್ವತಂತ್ರ ಮೈಸೂರಿನ ಭವಿಷ್ಯ ಮತ್ತು ಸಂವಿಧಾನ ರಚಿಸುವ ಹಕ್ಕು ಜನತೆಯ ಕೈಲಿದೆ. ನಮ್ಮ ಗುರಿ ಈಡೇರಿಸುವವರೆಗೂ ಹೋರಾಟ ಮುಂದುವರಿಯಬೇಕು.... ನಾವು ಜೀವಿಸುವು ದಾದರೆ ನಮ್ಮ ಪ್ರಯತ್ನಗಳಲ್ಲಿ ಮಡಿಯುವವರೆಗೆ ಸ್ವತಂತ್ರ ಮೈಸೂರಿನಲ್ಲಿ ಸ್ವತಂತ್ರ ಜೀವಿಗಳಾಗಿ ಬದುಕುತ್ತೇವೆ."

## ಹತ್ತು ಅಂಶಗಳ ಕಾರ್ಯಕ್ರಮ

ಜನತೆಗೆ ಸಂದೇಶವನ್ನು ನೀಡಿದ್ದ ಕೌನ್ಸಿಲ್ ಆಫ್ ಆಕ್ಷನ್ ಜನತೆ ಏನು ಮಾಡಬೇಕೆಂದು ಕೆಲವು ಕಾರ್ಯಕ್ರಮಗಳನ್ನೂ ಕೊಟ್ಟಿತು.

೧. ಪ್ರತಿಯೊಂದು ಪಟ್ಟಣ ಮತ್ತು ಹಳ್ಳಿಗಳಿಂದ ಮೈಸೂರು ಅರಮನೆಗೆ ಜಾಥಾಗಳು ಬರಬೇಕು.

೨. ಮೆರವಣಿಗೆ ಮತ್ತು ಸಭೆಗಳು ಹೋರಾಟದ ದೈನಂದಿನ ಕಾರ್ಯಕ್ರಮವಾಗಬೇಕು.

೩. ಕಾರ್ಖಾನೆಗಳು ಮತ್ತು ಗಣಿಗಳು, ರೈಲ್ವೆ, ಕಾಲೇಜುಗಳು ಶಾಲೆಗಳೂ ಕಡ್ಡಾಯವಾಗಿ ಮುಷ್ಕರ ನಡೆಸಬೇಕು.

೪. ಕಡಿಮೆ ಮಟ್ಟದಲ್ಲಿ ಚಟುವಟಿಕೆ ಹೊಂದಿರುವ ಹಳ್ಳಿ-ಪಟ್ಟಣಗಳು ಉತ್ಕರ್ಷ ಕಂಡುಕೊಳ್ಳಬೇಕು.

೫. ಈಚಲು ಗಿಡ, ಗಂಧದ ಮರಗಳನ್ನು ಕಡಿಯಬೇಕು.

೬. ಗೆರಿಲ್ಲಾ ಕ್ರಮವನ್ನು ಅನುಸರಿಸಬೇಕು.

೭. ಪೊಲೀಸ್ ಮತ್ತು ಮಿಲಿಟರಿಯವರ ಪ್ರವೇಶವನ್ನು ತಡೆಯಬೇಕು.

೮. ಸಾಧ್ಯವಿದ್ದಲ್ಲೆಲ್ಲ ಸಿಪಾಯಿಗಳು ಮತ್ತು ಪೋಲಿಸರು ನಿಶಸ್ತ್ರಗೊಳ್ಳಬೇಕು.

೯. ಕಚೇರಿ, ಕೋರ್ಟು, ಮತ್ತು ಪೋಲಿಸ್ ಸ್ಟೇಶನ್‌ನಂತಹ ಎಲ್ಲ ಸರಕಾರಿ ಕೇಂದ್ರಗಳನ್ನು ವಶಪಡಿಸಿಕೊಳ್ಳಬೇಕು.

೧೦. ಜನತೆಯ ಶಕ್ತಿ, ಏಕತೆ ಇದ್ದ ಎಲ್ಲ ಹಳ್ಳಿ ಪಟ್ಟಣಗಳಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಹಳೆ ಆಡಳಿತ ಕೊನೆಗಾಣಿಸಬೇಕು.

(Please vide P.Nagabhushanagoud., *Princely States of Mysore and Hyderabad-Political Movements for the integration into the Union and the State* (1935-56), unpublished Ph.D thesis, Gulbarga University, Kalaburagi, 2000, P-305)

## ಮತ್ತೊಂದು ಫ್ರೀ ಮೈಸೂರ್ ಗೆಝೆಟ್

ಕೌನ್ಸಿಲ್ ಆಫ್ ಆ್ಯಕ್ಷನ್‌ನಲ್ಲಿ ಅನೇಕರಿದ್ದರಾದರೂ ಕೆಲವು ಹೆಸರುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಕೆ.ಪಿ.ಸಿ.ಸಿ. ಸದಸ್ಯರೂ ಬಿ.ಟಿ.ಸಿ. ಕಾರ್ಮಿಕ ಸಂಘ ಮತ್ತು ಮೈಸೂರು ರಾಜ್ಯ ಪತ್ರಕರ್ತರ ಸಂಘದ ಕಾರ್ಯದರ್ಶಿಗಳೂ ಆಗಿದ್ದ ಕೆ.ಬಿ. ಶ್ರೀನಿವಾಸನ್, ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಬಿ.ಶ್ರೀಕಂಠಪ್ಪ, ಬೆಂಗಳೂರು ಕಂಟೋನ್ಮೆಂಟಿನ ಯುವ ಕಾಂಗ್ರೆಸ್ ಅಧ್ಯಕ್ಷರೂ ಆಗಿದ್ದ ಕೆ.ಗೋವಿಂದರಾಜ್ ಮೊದಲಾದವರು ಕೌನ್ಸಿಲ್ ಆಫ್ ಆ್ಯಕ್ಷನ್ನನ್ನು ಸಮರ್ಪಕವಾಗಿ ಮುನ್ನಡೆಸಿದ್ದರು. ಕೌನ್ಸಿಲ್ ಆಫ್ ಆ್ಯಕ್ಷನ್ ೯.೯.೧೯೪೭ರಂದು ಮೊದಲ ಗೆಝೆಟ್ ಹೊರಡಿಸಿ ದ್ದನ್ನು ಈಗಾಗಲೇ ತಿಳಿದಿದ್ದೇವೆ. ಅಂತಹುದೇ ಎರಡನೇ ಗೆಝೆಟ್ಟನ್ನು ೨೪.೦೯.೧೯೪೭ರಂದು ಹೊರಡಿಸಿತು. ಇಂತಹುದೇ ಎರಡನೇ ಗೆಝೆಟನ್ನು ಕೌನ್ಸಿಲ್ ಆಫ್ ಆ್ಯಕ್ಷನ್ ೨೪.೯.೪೭ರಂದು ಹೊರಡಿಸಿತು. ಚಳುವಳಿ ನಡೆಯುತ್ತಿರುವ ವರದಿಯನ್ನು ಅದು ಪ್ರಕಟಿಸಿತ್ತು. ಗೆಝೆಟ್‌ನ ವರದಿಯನ್ನು ಇಲ್ಲಿ ಕೊಡಲಾಗಿದೆ. (ಫ್ರೀ ಮೈಸೂರ್ ಗೆಝೆಟ್ ೨೪.೯.೪೭)

[The council of action while feeling proud, for the lead it gave to the people at the right movement, congratulates all the fighters of freedom for their magnificent battle against the government's tyranny. The Council assures them of its help both men and material for carrying the struggle on.]

The people's freedom movement is spreading fast from district to district. The Government according to their past tradition are making use of all kinds of inhuman. vulgar and brutal methods to crush the brave resistance of the people, but instead of crushing the people the government atrocities have helped to draw the sympathisers of the entire people of the state and a powerful popular resistance is growing.

From the districts of Chitaldurga, Kolar and Shimoga comes the news of brave and fearless resistance by the people and the fast divindling authority of the goonda administration which is being openly challenged all over the State.

The accounts of the wonderful fight that the people and peasants of Kolar district have given to this administration during the last 3 weeks is now

available to us. The mass of the villages are marching from one village to the other with the freedom banner. Accounts of organised mass apprising come from Davangare and chitaldurga. The people's organistion has conscripted one adult from each family. These along with other volenteers from a guerilla band. They have brought the administration almost to a stand still. The police stations and other Government institutions have been destroyed.

Tremendous enthusiasm for the movement frevails in the other districts. The people have risen in a body and are hoisting the tricolor on all the institutions the District Offices, Taluk Officess, the Police Stations and Courts.

Shocking reports of police atrocities have come from all parts of the state. The police officers are indulging in unspeakable barbarities. Persons are subjected to torture, people in the lock up are taken to rooms and left with legs and hands tied, kicks and assaults on persons by shoes on them are common; young boys mercilessly beaten in the stations; food given to the Sathyaghrahis is poisoned, women with babies are taken to far off places and are left in the thich of the forests. The Government forces are trying their worst to crush out the people's resistances by all the brutal methods at their command.

The people still continue the struggle. The will to resist and to ultimately destroy the opponants is shard by the determined groups at every place. The masses are suffering but they are capable of resisting to the end. When full reports of the happenings are available, they will justify this and strengthen our faith in the common man's revolutionary potentialities. This faith and the faith in the righteousness of our cause should not desert us if we mean to overcome our enemies. Let them be relentlessly brutal. Rebel in reckless lawlessness. We must despire them. We must pursue them with our determination to free ourselves, to suffer and, sacrifice for our ideals and wait the judgment of history.

The reactionary forces are raising their heads against the movement. The rank communalists who have stood always in the way of progress are active in condemning the movement and defending the Dewan. The Maharaja is being praised and tributes are paid for his recent announcement and the proclamation. Tireless attempts are made to divert the people's attention. The council warns all these reactionaries for these acts of treachery. The common man is revolting today against the tyranny of one man's rule. Workers in both factories and field are rebelling against the authority of the reactionary administration. They are facing the bullets fearlessly. They did not do it for the cause of the Brahmins or the Non-Brahmins. No attempt on the part of the communalists to canvas for 'His Highnes' will yield fruit today. The people who were forced to believe accept by the ruling class the distinction between man and man highness and lowness can never to brak this in future. The cry of the communalists to save the Devine Right of the Royal Throne will never go to the ears of the common man. The bogey of communal issues will never present the masses from marching ahead.

The Mysore Congress launched the struggle to achieve Responsible Government, today the people have gone a step further. They wish to establish republic Government in Mysore which will occupy its rightful place in the Free Indian Republic. The slogans raised by the men in the streets are proofs to this. The Broken statue of His Late Highness in Bangalore speaks the truth of this. If the orgy of Repression let loose by the Government continues to sway in the same speed the movement will raise to a higher pitch and will sure end the monarchy. The lessons of the Great French and Russians Revolutions are there. Let not men waste their lungs in worthless praises for 'The Highness' of the man on the throne. Let not the communalists continue the treacherous part they are playing against the people. Let not a single dog bask against the people movement.

Press reports have come about the various committees and councils formed by the Mysore Congressmen outside the state to control and guide struggle. The council appreciates their efforts to strengthen the struggle but at the same time appeals to them to return to the State and join the people in their battle against the terrorist regime. It should be noted that the movement cannot be run by issuing statements from outside. Enlisting support for the movement from the neighboring provinces should be done by important few. All those who remain outside will be strengthening the movement if they join hands with other fighters who are active in the fight. Today the immediate tasks before all the fighters are (a) to strengthen the organisational structure for a prolonged struggle (b) to harden the revolutionary will of those patriots who are in the thick of the fight. The council hopes that all will come forward to fulfil the above tasks.

Many comrades have been pressing us to publish the names of those who constitute the council. Knowing fully well the consequences we dare publish here below the names of only a few to avoid confusion among the workers and to prevent the exploitation of the situation by some pseudo under grounders. Name of the other innumerous comrades will be published later as and when found necessary.

G.V Challam.President, B . T. C. Labour Assn, member, Karnataka Provincial Congress Committee

K.B Srinivasan, Secretary, Mysore State Journalists Assn, Secretary Binny Mills Labour Assn.

M.C.Perumal, President, K.G.F, Externed workers Committee Vice President, Govt.Electric F.L. Assn.

K.Govindraj, President, Youth Cregress Bangalore Contonment.

Basu Krishnamurthy , Secretary, Bangalore Students' Congress.

M.Palanivelu, Secretary, Press Workers Union.

K.Kaliah, Secretary, Mysore Silk Filature Labour Assn.

B.Srikantappa, General Secretary, All Karnataka Students Congress.

S. Nagabhushan, Secretary, Minerva Mill Labour Assn.

K.Kannan, Secretary, Socialist Party (India) Mysore State Unit, Secretary,—Mysore Congress Progressive Party (Convener).

(Please vide P.Nagabhushanagoud., *Princely states of Mysore and Hyderabad-Political Movements for the integration into the Union and the state* (1935-56), unpublished Ph.D thesis Gulbarga University, 2000 P-306)

ಕೌನ್ಸಿಲ್‌ಗೆ ಬರುತ್ತಿದ್ದ ವರದಿಗಳು ನಿಜವಾಗಿದ್ದವು. "ಪೊಲೀಸರ ಕ್ರೌರ್ಯ ಹೆಚ್ಚಿತ್ತು. ಮುಳಬಾಗಿಲು ಕಾರಾಗೃಹ ದಲ್ಲಿ ಪೊಲೀಸರು ಬಹಳ ಕ್ರೂರವಾಗಿ ವರ್ತಿಸುತ್ತಿದ್ದರು. ಕೆಲವು ಸತ್ಯಾಗ್ರಹಿಗಳನ್ನು ಪೊಲೀಸರು ಹಿಡಿದು ತಳ್ಳಿದಾಗ ಒಂದು ಗೋಡೆಯಿಂದ ಇನ್ನೊಂದು ಗೋಡೆಗೆ ಹೋಗಿ ಬೀಳುತ್ತಿದ್ದರು. 'ಮಗನೇ, ನಿನಗೆ ಸ್ವಾತಂತ್ರ್ಯ ಬೇಕೇನೋ?' ಎಂದು ಮೂದಲಿಸುತಿದ್ದ ಪೊಲೀಸರು, ಬೂಟಿನಿಂದ ಒದೆಯುತ್ತಿದ್ದರು. ಹೆಂಡದಂಗಡಿಗೆ ಬೆಂಕಿ ಇಡುತ್ತೀರೇನೋ? ಎಂದೆಲ್ಲ ಬಯ್ದು ನೂಕುತ್ತಿದ್ದರು" ಎಂದು ಈ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲು ಸೇರಿದ್ದ ಎಂ.ವಿ. ವೆಂಕಟಪ್ಪ ಅವರು ಬರೆಯುತ್ತಾರೆ. (ಎಂ.ವಿ. ವೆಂಕಟಪ್ಪ, ಪ್ರಜಾವಾಣಿ, ೨೭.೦೯.೧೯೯೭, ಪು. ೮).

**ಒಂದೆಡೆ ಸುಧಾರಣೆ ಘೋಷಣೆ–ಇನ್ನೊಂದೆಡೆ ಕರ್ಫ್ಯೂ**

ಸರಕಾರ ಏನೆಲ್ಲ ಪ್ರಯತ್ನ ನಡೆಸಿದರೂ ಚಳವಳಿ ನಿಲ್ಲದ ಸೂಚನೆ ಕಂಡು ಬಂತು. ಅದಕ್ಕಾಗಿಯೇ ಸೆಪ್ಟೆಂಬರ್ ೨೪ ರಂದು ಮಹಾರಾಜರ ಘೋಷಣೆ ಹೊರಬಿದ್ದದ್ದು: ರಾಜ್ಯಕ್ಕಾಗಿ ಸಂವಿಧಾನಾತ್ಮಕ ಬದಲಾವಣೆ ತರುವ ಹೇಳಿಕೆ ಕೊಟ್ಟಿದ್ದು. ಆದರೆ ಜನತೆಗೆ ಅಗತ್ಯವಿದ್ದ ಸಂಪೂರ್ಣ ಜವಾಬ್ದಾರಿ ಸರಕಾರದ ಬಗ್ಗೆ ಘೋಷಣೆ ಸ್ಪಷ್ಟವಾಗಿ ತಿಳಿಸಿರ ಲಿಲ್ಲ ಎಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ. ಶಾಸಕಾಂಗಕ್ಕೆ ಜವಾಬ್ದಾರಿಯಾಗಿರುವ ಮಂತ್ರಿಮಂಡಲ ವೊಂದು ಇರುತ್ತದೆ ಎಂಬ ಸೂಚನೆ ಅದರಲ್ಲಿತ್ತು. ಆದರೆ ಮಂತ್ರಿ ಮಂಡಲದ ಸ್ವರೂಪ, ಅದಕ್ಕಿರುವ ಅಧಿಕಾರದ ಸಂಪೂರ್ಣ ವಿವರವಿರಲಿಲ್ಲ. ಅಷ್ಟೇ ಅಲ್ಲ ಸುಧಾರಣೆ ಘೋಷಿಸಿದ ಅದೇ ದಿನವೇ (೨೪.೯.೪೭) ಬೆಂಗಳೂರಿನಲ್ಲಿ ಎಂಬತ್ತಾರು ಗಂಟೆಗಳ ಕರ್ಫ್ಯೂ ವಿಧಿಸಲಾಯಿತು. ದಿವಾನರು ಅದೇ ವೇಳೆ ಪತ್ರಿಕಾಗೋಷ್ಠಿಯೊಂದರಲ್ಲಿ ಮುಂಬರುವ ಸುಧಾರಣೆಗಳ ವಿವರ ನೀಡಿದ್ದಲ್ಲದೆ ಬಂಧನದಲ್ಲಿರುವ ಕಾಂಗ್ರೆಸ್ ನಾಯಕರು ಮತ್ತು ಇತರ ರಾಜಕೀಯ ನಾಯಕ ರನ್ನು ಬಿಡುಗಡೆಗೊಳಿಸುವ ಭರವಸೆ ನೀಡಿದರು. ಸರಕಾರವು ಸ್ಥಳೀಯ ಪತ್ರಿಕೆಗಳ ಮೇಲೆ ವಿಧಿಸಿದ್ದ ನಿರ್ಬಂಧವನ್ನು ಮತ್ತು ಹೊರರಾಜ್ಯದಿಂದ ರಾಜ್ಯಕ್ಕೆ ಬರುತ್ತಿದ್ದ ಕೆಲವು ಪತ್ರಿಕೆಗಳ ಮೇಲಿನ ನಿಷೇಧವನ್ನು ಹಿಂತೆಗೆದುಕೊಳ್ಳುವ ಪ್ರಕಟಣೆ ನೀಡಿತು. (ಪಿ.ಆರ್. ರಾಮಯ್ಯ, ಪು. ೮೮)

ಆದರೆ ಕಾಂಗ್ರೆಸ್‌ನ ಬೇಡಿಕೆಗಳು ಈಡೇರದೆ ಇದ್ದ ಸಲುವಾಗಿ ಈ ಘೋಷಣೆಯನ್ನು ಒಪ್ಪದಿರಲು ಸತ್ಯಾಗ್ರಹ ಸಮಿತಿಯು ನಿರ್ಣಯಿಸಿತು. ಜನತೆಯ ಬೆಂಬಲ ಪಡೆದ ಸರ್ಕಾರವನ್ನು ಸ್ಥಾಪಿಸಬೇಕೆಂದು ಅದು ಬಯಸಿತ್ತು. ವಿರೋಧಕ್ಕೆ ಕಾರಣವೂ ಇತ್ತು. ಯಾವ ಸರ್ ಆರ್ಕಾಟರಿಂದ ಮೈಸೂರು ಸಂಸ್ಥಾನ ರಣರಂಗವಾಗಿ ಪರಿಣಮಿಸಿದೆಯೋ ಅವರನ್ನು ದಿವಾನಗಿರಿಯಿಂದ ಪದಚ್ಯುತಗೊಳಿಸಬೇಕು, ಅಂದಾಗ ಮಾತ್ರ ರೈತರು ಸಮಾಧಾನ ಪಡುತ್ತಾರೆ. ಹೋರಾಟ ನಿಲ್ಲಬಹುದು ಎಂದು ಮೈಸೂರು ಜನತೆ ಹೇಳುತ್ತಿತ್ತು. ಆದರೆ ಮೈಸೂರು ಮಹಾರಾಜರು ಮತ್ತೆ ಅವರನ್ನೇ ಕರೆದು ರಾಜ್ಯಾಂಗ ಸಿದ್ಧಪಡಿಸಲು ಹೇಳಿದ್ದರು. ಹೀಗಾಗಿ ಜನತೆಗೆ ದಿವಾನರ ಮೇಲಿನ ಪ್ರಕಟಣೆಯನ್ನು ವಿರೋಧಿಸದೆ ಬೇರೆ ದಾರಿ ಕಾಣಲಿಲ್ಲ. ಒಪ್ಪಂದವೊಂದರ ನಂತರ ಸೆಪ್ಟೆಂಬರ್ ೨೯ರಂದು ಪತ್ರಿಕೆಗಳು ತಮ್ಮ ಪ್ರಕಟಣೆಯನ್ನು ಪುನಾರಂಭಿಸಿದವು. ಅಕ್ಟೋಬರ್ ೨ರಂದು ಆದೇಶ

ವೊಂದನ್ನು ಹೊರಡಿಸಿದ ಸರಕಾರ ಮೈಸೂರು ಧ್ವಜಕ್ಕೆ ಸಮಾನಾಂತರವಾಗಿ ರಾಷ್ಟ್ರಧ್ವಜ ಹಾರಿಸಲು ಅಭ್ಯಂತರವಿಲ್ಲ ವೆಂದು ಸೂಚಿಸಿತು. ಹೀಗೆ ಮೊದಲ ಬಾರಿಗೆ ರಾಜ್ಯದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಲು ಅಧಿಕಾರಿಗಳು ಅನುಮತಿ ನೀಡಿದರು.

## ಮಾತು ಮರೆತ ಮೊದಲಿಯಾರರು

ಇಲ್ಲಿ ಉಲ್ಲೇಖಿಸಬೇಕಾದ ಅಂಶವೊಂದಿದೆ. ಹಿಂದೆ ೧೯೨೯ರಲ್ಲಿ ಬ್ರಾಹ್ಮಣೇತರ ಅಧಿವೇಶನದ ಅಧ್ಯಕ್ಷತೆಯನ್ನು ಸ್ವತಃ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಅವರು ವಹಿಸಿದ್ದರು. ಅಂದು ಆರ್ಕಾಟರೂ ಮಾತನಾಡಿದ್ದರು. ಸಭೆಯಲ್ಲಿ ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಯ ಬೇಡಿಕೆಯನ್ನು ಪಾಸು ಮಾಡಿಲಾಗಿತ್ತು. ಈ ವಿಷಯವನ್ನು ಹಿಂದೂಪುರದ ತ್ರಿಪುರಾಂತಕರ ಬಸಪ್ಪನವರ ವಿದ್ಯಾರ್ಥಿನಿಲಯದಲ್ಲಿ ಎ.ಎಸ್. ರುದ್ರಪ್ಪನವರು ಹೊರಗೆಡವಿ ದ್ದರು. ಸತ್ಯಾಗ್ರಹದ ಹಿಂದಿನ ದಿನ ಅಲ್ಲಿ ಸೇರಿದ್ದ ಸಭೆಯಲ್ಲಿ ಎಂ.ಎನ್. ಜೋಯಿಸ್, ಎ.ಎಂ.ಲಿಂಗಣ್ಣ, ಅನ್ನಪೂರ್ಣಮ್ಮ ಮುಂತಾದ ನಾಯಕರಿದ್ದರು. ಕಲ್ಲೂರು ಸುಬ್ಬರಾಯರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಎ.ಎಸ್. ರುದ್ರಪ್ಪನವರು ಆರ್ಕಾಟರನ್ನು ಟೀಕಿಸಿದ್ದರು. ರಾಜಪ್ರಭುತ್ವದ ದಬ್ಬಾಳಿಕೆಯ ಮೇಲೆ ಅಂತಿಮ ವಿಜಯ ಸಾಧಿಸುವಂತೆ ಅವರು ಕರೆ ನೀಡಿದ್ದರು. ಈಗ ಯಶಸ್ಸಿನ ಕಾಲ ಸನ್ನಿಹಿತವಾಗಿತ್ತು. (ರೀಡಿಂಗ್ಸ್, ಪು. ೧೦೫)

ಮೈಸೂರು ರಾಜ್ಯದಲ್ಲಿ ತಲೆದೋರಿದ್ದ ರಾಜಕೀಯ ಅಸ್ಥಿರತೆಯನ್ನು ಕೊನೆಗೊಳಿಸುವುದು ಅತ್ಯವಶ್ಯವಾಗಿತ್ತು. ಕಾಂಗ್ರೆಸ್ ಜೊತೆ ಮಾತುಕತೆಯಿಂದ ಮಾತ್ರ ಸಾಧ್ಯ ಎಂಬುದನ್ನು ದಿವಾನರು ಅರಿತುಕೊಂಡಿದ್ದರು. ಅಕ್ಟೋಬರ್ ೯ರಂದು ಅದಕ್ಕಾಗಿ ಅವರು ಕಾಂಗ್ರೆಸ್ ಅಧ್ಯಕ್ಷ ಕೆ.ಸಿ. ರೆಡ್ಡಿಯವರನ್ನು ಮಾತುಕತೆಗೆ ಆಹ್ವಾನಿಸಿದರು. ಮಹಾರಾಜರ ಘೋಷಣೆಯನ್ನು ಜಾರಿಗೆ ತರುವ ವಿಷಯವಾಗಿ ಚರ್ಚಿಸುವಂತೆ ರೆಡ್ಡಿಯವರಿಗೆ ದಿವಾನರು ಕೇಳಿಕೊಂಡಿದ್ದರು. ಈ ವಿಷಯವನ್ನು ರೆಡ್ಡಿಯವರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಮುಂದಿಟ್ಟಾಗ ಎಲ್ಲ ನಿಟ್ಟಿನಲ್ಲಿ ವಿಚಾರ ಮಾಡಿದ ಸಮಿತಿ ದಿವಾನರನ್ನು ಭೇಟಿಯಾಗುವ ಹಾಗೂ ಮಾತನಾಡುವ ಅಧಿಕಾರವನ್ನು ಕಾಂಗ್ರೆಸ್ ಅಧ್ಯಕ್ಷರಿಗೇ ನೀಡಿತು. ಸಮಿತಿಗೆ ತಮ್ಮ ಬೇಡಿಕೆಗಳು ಈಡೇರಬೇಕೆಂಬ ಬಯಕೆ ಇತ್ತು. ದಿವಾನರು ಮತ್ತು ಕಾಂಗ್ರೆಸ್ ಅಧ್ಯಕ್ಷರ ನಡುವೆ ನಡೆದ ಮಾತುಕತೆಗಳ ಸರಣಿಯ ಫಲವಾಗಿ ಸರಕಾರ ಮತ್ತು ಅಧ್ಯಕ್ಷರ ಮಧ್ಯೆ ಅಕ್ಟೋಬರ್ ೧೧ರಂದು ಒಪ್ಪಂದವೇರ್ಪಟ್ಟಿತು. ಅದೇ ದಿನ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಯಿತು. ಅಕ್ಟೋಬರ್ ೧೧, ೧೨ ಮತ್ತು ೧೫ರ "ದಿ ಹಿಂದೂ" ಪತ್ರಿಕೆಯಲ್ಲಿ ಸುದೀರ್ಘ ವರದಿಗಳು ಪ್ರಕಟವಾದವು. ಮಾತುಕತೆಯಲ್ಲಿ ಹೊಸ ಮಂತ್ರಿಮಂಡಲದ ರಚನೆ ಮತ್ತು ರಚನೆಯ ವಿಧಾನಗಳ ಬಗ್ಗೆ ತೀರ್ಮಾನ ಕೈಗೊಳ್ಳಲಾಯಿತು. ಎರಡು ದಿನಗಳ ಮಾತುಕತೆಯಲ್ಲಿ ಪೂರ್ಣ ಜವಾಬ್ದಾರಿ ಸರಕಾರ ನೀಡುವ ರಾಜ್ಯಾಂಗ ಮಸೂದೆಯೊಂದನ್ನು ರೂಪಿಸುವ ಸಂವಿಧಾನ ರಚನ ಸಭೆಯೊಂದನ್ನು ರಚಿಸುವ ವಿಧಾನದ ಬಗ್ಗೆಯೂ ಒಮ್ಮತಕ್ಕೆ ಬರಲಾಯ್ತು.

ಮಹಾರಾಜರೂ ಇದಕ್ಕೆ ಒಪ್ಪಿದರು. ಸರಕಾರ ಎಲ್ಲ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿತು. ವೃತ್ತಪತ್ರಿಕೆಗಳ ಮೇಲಿನ ನಿರ್ಬಂಧವನ್ನು ತೆಗೆದು ಹಾಕಿತು. ಅದಕ್ಕಾಗಿ ರಾಜ್ಯಾಂಗ ರಚನಾಸಭೆಯ ತೀರ್ಮಾನಗಳು ಹೊರಬರುವ ವರೆಗೆ ಆರ್ಕಾಟರನ್ನು ಒಳಗೊಂಡ ಪ್ರಜಾಪ್ರತಿನಿಧಿಗಳ ತಾತ್ಕಾಲಿಕ ಸರ್ಕಾರವನ್ನು ಸ್ಥಾಪಿಸಲು ಮಹಾರಾಜರು ಒಪ್ಪಿದರು. ರಾಜ್ಯಾಂಗದಲ್ಲಿ ಪೂರ್ಣ ಜವಾಬ್ದಾರಿ ಸರಕಾರದ ಗುರಿಯನ್ನು ಅಳವಡಿಸಲು ಅವರ ಸರಕಾರ ಒಪ್ಪಿತು. ಸರಕಾರದ ಜೊತೆಗಿನ ಸಂಧಾನಕ್ಕೆ ಕಾಂಗ್ರೆಸ್ ಅಧ್ಯಕ್ಷ ಕೆ.ಸಿ. ರೆಡ್ಡಿಯವರು ಸಹಿ ಹಾಕಿದರು. (ಸರಕಾರದ ಆದೇಶ ೧೩.೧೦.೧೯೪೭) ಕರಾರಿನ ಪರಿಣಾಮವಾಗಿ, ೧೯೪೭ರ ಅಕ್ಟೋಬರ್ ೧೨ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ತನ್ನ ೪೧ ದಿನಗಳ ಮೈಸೂರು ಚಲೋ ಸತ್ಯಾಗ್ರಹವನ್ನು ಹಿಂದಕ್ಕೆ ತೆಗೆದುಕೊಂಡಿತು. ಮೈಸೂರಿನಲ್ಲಿ ಬಹಿರಂಗ ಸಭೆಯನ್ನು ಉದ್ದೇಶಿಸಿ ಮಾತನಾಡಿದ ಕೆ.ಸಿ. ರೆಡ್ಡಿಯವರು ಕಾಂಗ್ರೆಸ್ಸಿನ ಬೇಡಿಕೆಗಳು ಮತ್ತು ಜನತೆಯ ಆಶೋತ್ತರಗಳು ಮಹಾರಾಜರಿಂದ ಸಂಪೂರ್ಣವಾಗಿ ಈಡೇರಿರುವುದರಿಂದ ಅರಮನೆ ಸತ್ಯಾಗ್ರಹವನ್ನು ಹಿಂದಕ್ಕೆ ಪಡೆದಿರುವುದಾಗಿ ಘೋಷಿಸಿದರು. (ರೀಡಿಂಗ್ಸ್ ಪು. ೧೦೬) ೧೯೪೭ರ ಅಕ್ಟೋಬರ್ ೨೪ ವಿಜಯದಶಮಿ ವಿಜಯದ ಸಂಕೇತದ ಹಬ್ಬದ ದಿನ. ಅಂದು ಮೈಸೂರು ರಾಜ್ಯದ ಹೊಸ ಮಂತ್ರಿಮಂಡಳ ರಚನೆಯಾಯಿತು. (ಗೆಜೆಟ್ ಎಕ್ಸ್ಟ್ರಾರ್ಡಿನರಿ ೨೪.೧೦.೧೯೪೭) ಕಾಂಗ್ರೆಸ್ ಅಧ್ಯಕ್ಷ ಕೆ.ಸಿ. ರೆಡ್ಡಿಯವರನ್ನು ಮುಖ್ಯಮಂತ್ರಿಯನ್ನಾಗಿ ಆರಿಸಲಾಯಿತು. ಜಯಚಾಮರಾಜೇಂದ್ರ ಒಡೆಯರ್ ಅವರು ೧೯೭೪ರಲ್ಲಿ ನಿಧನ ಹೊಂದಿದರು.



# ಪರಾಮರ್ಶನ ಗ್ರಂಥಗಳು


**ಕನ್ನಡ**

೧. ದೊರೆಸ್ವಾಮಿ ಹೆಚ್.ಎಸ್., ಹೋರಾಟದ ದಿಟ್ಟ ಹೆಜ್ಜೆಗಳು, ಸಾಹಿತ್ಯ ಮಂದಿರ, ಬೆಂಗಳೂರು, ೨೦೦೬.

೨. ದೊರೆಸ್ವಾಮಿ ಹೆಚ್.ಎಸ್., ನೆನಪಿನ ಸುರುಳಿ ತೆರೆದಾಗ (ಜೀವನಚರಿತ್ರೆ), ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೮.

೩. ನರಸಿಂಹಯ್ಯ ಹೆಚ್., ಹೋರಾಟದ ಹಾದಿ (ಆತ್ಮಕತೆ), ನ್ಯಾಷನಲ್ ಕಾಲೇಜು, ಬೆಂಗಳೂರು, ೧೯೯೫.

೪. ಪ್ರಾಣೇಶರಾವ್ ಜಿ.ಆರ್., ಯಶೋಧರಾ ದಾಸಪ್ಪ ಮತ್ತು ಹೆಚ್.ಸಿ.ದಾಸಪ್ಪ ಜೀವನ ಮತ್ತು ಸಾಧನೆ, ಭಾರತೀ ಪ್ರಕಾಶನ, ಮೈಸೂರು, ೧೯೯೭.

೫. ಪ್ರೇಮಲತಾ ಸುಂದರೇಶನ್ ಮತ್ತು ಇತರರು (ಸಂ)., ಸ್ವಾತಂತ್ರ್ಯದೆಡೆಗೆ, ಎಂ.ಎಸ್.ಜೋಯಿಸ್ ಅಭಿನಂದನಾ ಗ್ರಂಥ. ಡಿ.ವಿ.ಕೆ ಮೂರ್ತಿ, ಮೈಸೂರು, ೧೯೯೧.

೬ ಸುಂದರರಾವ್ ಬಿ.ಎನ್., ಬೆಂಗಳೂರಿನ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, ೨೦೧೧.

೭. ಸೂರ್ಯನಾಥ ಕಾಮತ್ ಯು.(ಸಂ)., ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು– ಸಂಪುಟ ೧, ೨, ಮತ್ತು ೩, ಗೀತಾ ಬುಕ್ ಹೌಸ್, ಮೈಸೂರು, ೧೯೭೪, ೧೯೭೭, ೧೯೮೦.

೮. ವೀರಣ್ಣಗೌಡ.ಹೆಚ್.ಕೆ., ಬದುಕು–ಮೆಲುಕು, ಪ್ರಬುದ್ಧ ಪ್ರಕಾಶನ, ಮೈಸೂರು, ೧೯೭೪.

೯. ವಿಶಾಲ ಕರ್ನಾಟಕ, ಕನ್ನಡ ದೈನಿಕ, ೩೧.೧೦.೧೯೩೯.

೧೦. ಜನಪದ (ಕನ್ನಡ ಮಾಸಿಕ), ಆಗಸ್ಟ್ ೧೯೯೬, ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

೧೧. ಜನಪದ (ಕನ್ನಡ ಮಾಸಿಕ), ಆಗಸ್ಟ್ ೧೯೯೭, ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

೧೨. ಷೇಕ್ ಅಲಿ ಬಿ (ಸಂ)., ಕರ್ನಾಟಕ ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ನಾಯಕ ಹಾ.ಮಾ., ಡಿವಿಜಿ ಕೃತಿಶ್ರೇಣಿ ಸಂಪುಟ–೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೫.

೧೪. ಡಾ. ಹೆಚ್.ಎಸ್.ರಾಕೇಶ್., ಮೈಸೂರು ಚಲೋ ಚಳವಳಿ, ರೂಪ ಪ್ರಕಾಶನ, ಮೈಸೂರು, ೨೦೧೧.

೧೫. ಉಮಾಪತಿ ಎಸ್., ಮೈಸೂರು ಚಲೋ, ಅಂಕಿತ ಪುಸ್ತಕ, ಬೆಂಗಳೂರು, ೧೯೮೮.

**English**

1. M.A.Parashuram Collections, File No. 54, Karnataka State Archives, Bangalore.
2. T.Siddalingaiah Collections, File No.107, Karnataka State Archives, Bangalore.
3. Hettne Bjorn., *The Political Economy of Indirect Rule-Mysore 1881-1947,* Ambika Publications, New Delhi, 1978.
4. Chandrashekar S., *Dimensions of Socio-Political Change in Mysore State (1918-* 1940), Ashish Publishing House, New Delhi, 1985.
5. Doreswamy H S., *From Princely Autocracy to People's Movement,* Sahitya Mandira, Bangalore, 1993.
6. Halappa G S., *History of Freedom Movement in Karnataka* Vol.II., The Govt of Mysore, Bangalore, 1964.
7. Handa R L., *History of Freedom Struggle in Princely States,* Central News Agency, New Delhi, 1968.
8. Manor James., *Political Change in an Indian State –Mysore (1917-1955),* Manohar, Publications, New Delhi, 1977.
9. Nagabhushanagoud.P., *Princely States of Mysore and Hyderabad-Political Movements for Integration into the Union and the State* (1935-56), Un Published Ph.D Thesis, Gulbarga University, Gulbarga, 2000.
10. Nijalingappa S., *My Life and Politics*, Vision Books, New Delhi, 2000.
11. Ramaiah., P R., *Mysore political Evolution*, Jaygouri Publication, Bangalore, 1961.
12. Shantaveerappa S N., Biography of S.Nijalingappa, *The period of promise*, Shrishaila Publications, Mysore, 1969.
13. Viratappa K., *Readings in Modern History of Mysore*, S Chand and Co. Ltd. New Delhi, 1985.
14. *The Hindu*, English Daily, 16.07.1939 and 14.04.1940.
15. MRACC= Mysore Representative Assembly Centenary Celebrations Commemoration Volume, Govt of Karnataka, 1981.




# ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಶೋಷಿತ ವರ್ಗಗಳ ಪ್ರಗತಿ (೧೯೨೦-೧೯೪೭)

ಡಾ. ನಿರ್ಮಲ್ ರಾಜು*

ರಾಜರ್ಷಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ 'ಸಾಮಾಜಿಕ ನ್ಯಾಯ'ದ ಪರಿಕಲ್ಪನೆ ಹಾಗೂ ಸಾಮಾಜಿಕ ನ್ಯಾಯದ ವಿತರಣೆಯು ಆಧುನಿಕ ಭಾರತದ ಚರಿತ್ರೆಯಲ್ಲಿ ಒಂದು ವಿಶೇಷ ಅಧ್ಯಾಯವಾಗಿದೆ. ಗಾಂಧೀಜಿಯವರಿಂದ 'ರಾಜರ್ಷಿ' ಎಂದೇ ಗೌರವಿಸಲ್ಪಟ್ಟ ಮೈಸೂರು ಸಂಸ್ಥಾನದ ೨೪ನೆಯ ಅರಸರಾದ ನಾಲ್ವಡಿಯವರು ಆಧುನಿಕ, ಪ್ರಗತಿಪರ, ಮಾದರಿ, ಮಾನವೀಯ ಮೌಲ್ಯ ಹಾಗೂ ಉದಾತ್ತ ಪ್ರಭುತ್ವದ ಸಂಕೇತವಾಗಿದ್ದರು. ಮೈಸೂರು ಸಂಸ್ಥಾನದಲ್ಲಿ ಹತ್ತು ಹಲವು ಪ್ರಜಾಕಲ್ಯಾಣ ಮತ್ತು ಜನಮುಖಿ ಅಭಿವೃದ್ಧಿ ಕಾರ್ಯಕ್ರಮ ಗಳನ್ನು ಯಶಸ್ವಿಯಾಗಿ ಜಾರಿಗೆ ತರುವುದರ ಮೂಲಕ ಭಾರತೀಯ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿಹಿಡಿದ ಆದರ್ಶಪ್ರಾಯ ಅರಸರೆನಿಸಿದ್ದಾರೆ. ಬ್ರಿಟಿಷ್ ವಸಾಹತು ಪ್ರಭುತ್ವದ ಸಂದರ್ಭದಲ್ಲಿ ಭಾರತದಾದ್ಯಂತ ರಾಜಕೀಯ, ಆಡಳಿತ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಸಂಭವಿಸಿದ ಬದಲಾವಣೆಗಳು ಮತ್ತು ಸುಧಾರಣೆಗಳು ಅತ್ಯಂತ ಕುತೂಹಲ ಕಾರಿಯಾಗಿವೆ. ಮೈಸೂರು ಸಂಸ್ಥಾನವು ಸಹ ಬ್ರಿಟಿಷರ ಪ್ರತ್ಯಕ್ಷ ಹಾಗೂ ಪರೋಕ್ಷ ಎರಡೂ ಬಗೆಯ ಆಡಳಿತಕ್ಕೊಳ ಪಟ್ಟಿದ್ದರಿಂದ ವಸಾಹತುಶಾಹಿ ಪ್ರಭಾವದ ಹಿನ್ನೆಲೆಯಲ್ಲಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ 'ಸಾಮಾಜಿಕ ನ್ಯಾಯ ವಿತರಣೆ'ಯನ್ನು ಕುರಿತು ಆಧುನಿಕ ಸಮಾಜ ಸುಧಾರಣೆಯ ಐತಿಹಾಸಿಕ ಸಂದರ್ಭದ ಹಿನ್ನೆಲೆಯೊಂದಿಗೆ ಗುರುತಿಸಲಾಗಿದೆ.

೧೯೩೪ರ ಬ್ರಿಟ್ಯಾನಿಕ ಎನ್‌ಸೈಕ್ಲೋಪಿಡಿಯಾ ಸಂಪುಟ ದಲ್ಲಿ ಕಂಡುಬರುವಂತೆ "ವಸಾಹತು ಪ್ರಭುತ್ವದ ಸಾರ್ವಭೌಮತ್ವ ಕ್ಕೊಳಪಟ್ಟ ಭರತ ಖಂಡದಲ್ಲಿಯೇ ಅತಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿ ಮುಂದುವರಿಯುತ್ತಿರುವ ದೇಶೀಯ ಸಂಸ್ಥಾನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ ಮೈಸೂರು ಸಂಸ್ಥಾನವು ಮಾದರಿ ಸಂಸ್ಥಾನವಾಗಿದ್ದು ಇತರೆ ದೇಶಿಯ ಸಂಸ್ಥಾನಗಳಿಗೆ ಆದರ್ಶಪ್ರಾಯವಾಗಿದೆ" ಎಂಬ ಪ್ರಶಂಸೆಯು ಅಭಿನಂದ ನಾರ್ಹವಾಗಿದೆ. 'ಆಧುನಿಕ ಸಂಸ್ಥಾನ', 'ಮಾದರಿ ಸಂಸ್ಥಾನ' ಹಾಗೂ 'ಪ್ರಗತಿಪರ ರಾಜ್ಯ' ಎಂಬ ಅಭಿದಾನ ಪಡೆದಿದ್ದ ಮೈಸೂರು ಸಂಸ್ಥಾನದ ಕೀರ್ತಿಯನ್ನು ಪ್ರಪಂಚದಾದ್ಯಂತ ಪಸರಿಸಿದ ಕೀರ್ತಿ ರಾಜನೀತಿಜ್ಞ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ. ನಾಲ್ವಡಿಯವರ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನವು ಸರ್ವಾಂಗೀಣ ಪ್ರಗತಿಯನ್ನು ಸಾಧಿಸಿದ್ದು ಅವರ ಪ್ರಗತಿಪರ ವಿಶೇಷವಾಗಿ ಸಾಮಾಜಿಕ ಸೇವಾ ಮನೋಭಾವ ಹಾಗೂ ಉದಾರ ರಾಜನೀತಿಯ ಪ್ರಮುಖ ಗುಣಲಕ್ಷಣ ಗಳಾಗಿದ್ದವು. ಈ ಹಿನ್ನೆಲೆಯಲ್ಲಿ "ಸಾಮಾಜಿಕ ನ್ಯಾಯ ವಿತರಣೆ ಯಲ್ಲಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಪಾತ್ರ- ಒಂದು ಐತಿಹಾಸಿಕ ಅಧ್ಯಯನ" ಎಂಬ ವಿಷಯವನ್ನು ಆಯ್ದುಕೊಳ್ಳಲಾಗಿದೆ.

ಪ್ರಾರಂಭಿಕ ವರ್ಷಗಳಲ್ಲೇ ಬ್ರಾಹ್ಮಣೇತರ ಚಳುವಳಿಯಲ್ಲಿ ಒಡಕು ಕಂಡುಬಂದರೂ ಬ್ರಾಹ್ಮಣೇತರರು ಎಚ್ಚೆತ್ತ ಪ್ರಜೆಗಳಾಗಿದ್ದರು. ಬ್ರಾಹ್ಮಣೇತರರ ಜಾತಿಗಳಿಗೆ ಸೇರಿದ್ದ ಜನಪ್ರತಿನಿಧಿಗಳು ಹಾಗೂ ನಾಯಕರು ಸಂಘಟಿತರಾಗಿ ಇಲ್ಲವೇ ವ್ಯಕ್ತಿಗತವಾಗಿ ಬ್ರಾಹ್ಮಣೇತರ ಹಿತಾಸಕ್ತಿಯನ್ನು ರಕ್ಷಿಸಲು ಮುಂದಾದರು. ಈ ಚಳುವಳಿ ಉನ್ನತ ಹುದ್ದೆಗಳಲ್ಲಿ ಇದ್ದ ಬ್ರಾಹ್ಮಣೇತರರ ನೌಕರರ ಸಂಖ್ಯೆಯನ್ನು ಹೆಚ್ಚಿಸಿತು. ಮತ್ತೊಂದು ರೀತಿಯಲ್ಲಿ ಹೇಳುವುದಾದರೇ ಬ್ರಾಹ್ಮಣೇತರ ಚಳುವಳಿ ಒಂದು ಪ್ರಬಲ ಸಂಘಟನೆಯಾಗಿ ಬೆಳೆಯದಿದ್ದರೂ ಸಮಕಾಲೀನವಾಗಿ ಸರ್ಕಾರಿ ಹುದ್ದೆಗಳಲ್ಲಿ ಬ್ರಾಹ್ಮಣರ ಏಕಸ್ವಾಮ್ಯ ಕೊನೆಗೊಳ್ಳುವಂತೆ ಮಾಡುವಲ್ಲಿ ಯಶಸ್ವಿಯಾಗಿತ್ತು. ದಿವಾನ್ ಕಾಂತರಾಜೇಅರಸ್‌ರವರು ಇಂತಹ ಒಂದು ಪರ್ವಕಾಲದಲ್ಲಿ ಸಂಸ್ಥಾನದ ಅತ್ಯಂತ ಉನ್ನತ ಹುದ್ದೆಯನ್ನು ಅಲಂಕರಿಸಿದ್ದು ಬ್ರಾಹ್ಮಣೇತರ ವರ್ಗದವರಿಗೆ ವಿವಿಧ ರಂಗಗಳಲ್ಲಿ ಪ್ರಾಧಾನ್ಯತೆಯನ್ನು ನೀಡಿ ಮುಂದೆ ಬಂದಂತಹ ಯಶಸ್ಸು ಕಾಂತರಾಜೇಅರಸ್‌ರವರಿಗೆ ಸಲ್ಲುತ್ತದೆ.

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು.

ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ ನೀಡಬೇಕೆಂದು ಮಿಲ್ಲರ್ ಸಮಿತಿ ವರದಿಯ ಪ್ರತಿಫಲವಾಗಿ ೧೯೧೮–೧೯ರಲ್ಲಿ ನೇಮಕಗೊಂಡ ೧೨೬೬ ಹುದ್ದೆಗಳಲ್ಲಿ ೫೧೪ ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಕಾದಿರಿಸಲಾಯಿತು. ಕಾದಿರಿಸಿದ ಹುದ್ದೆಗಳ ನೇಮಕಾತಿಗೆ ಸರ್ಕಾರ ತೀವ್ರ ಕ್ರಮಗಳನ್ನು ಕೈಗೊಂಡಿತು. ಅಲ್ಲದೆ ಹಿಂದುಳಿದ ವರ್ಗಗಳಿಗೆ ಕನಿಷ್ಠ ಅರ್ಹತೆಯಲ್ಲೂ ರಿಯಾಯಿತಿ ಒದಗಿಸಿ ಆಜ್ಞೆ ಹೊರಡಿಸಿತು. ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ವಿಯಾಗದ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಗೆಜೆಟೆಡ್ ಹುದ್ದೆಗಳನ್ನು ನಾಮಕರಣದ ಮೂಲಕ ನೇಮಿಸಲು ತೀರ್ಮಾನ ಕೈಗೊಂಡಿತು. ಅದರಂತೆ ೧೯೨೨–೨೩ರಲ್ಲಿ ನೇಮಕಗೊಂಡ ೮ಜನ ಅಮಲ್ದಾರರಲ್ಲಿ ೬ ಹುದ್ದೆಗಳಿಗೆ ಹಿಂದುಳಿದ ವರ್ಗದವರನ್ನು ನೇಮಿಸಲಾಯಿತು.

ಮೈಸೂರಿನ ನಾಗರಿಕ ಹುದ್ದೆಗೆ ನಡೆಯುತ್ತಿದ್ದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಹೊರರಾಜ್ಯದವರ ಪೈಪೋಟಿ ತಪ್ಪಿಸಲು ಮೈಸೂರಿನವರಿಗೆ ಉದ್ಯೋಗದ ಅವಕಾಶಗಳು ಎಂಬ ತೀರ್ಮಾನ ಕೈಗೊಂಡಿತು. ಈ ಎಲ್ಲಾ ಕ್ರಮಗಳಿಂದ ಸರ್ಕಾರದ ಕೆಳದರ್ಜೆ ಮತ್ತು ಮಧ್ಯಮ ದರ್ಜೆಯ ಹುದ್ದೆಗಳಲ್ಲಿ ಹಿಂದುಳಿದ ವರ್ಗದವರು ೧೯೨೧ರಲ್ಲಿ ಶೇ. ೩೦ರಷ್ಟು ಭಾಗ ಹೊಂದಿದ್ದು ೧೯೨೬ರ ವೇಳೆಗೆ ಶೇ. ೪೨ಕ್ಕೇರಿದರು. ಅದೇ ಕಾಲಾವಧಿಯಲ್ಲಿ ಬ್ರಾಹ್ಮಣರ ಪ್ರಮಾಣ ಶೇ. ೬೯.೬ರಷ್ಟಿದ್ದು ಶೇ. ೫೧.೧ಕ್ಕೆ ಇಳಿಯಿತು. ಔದ್ಯೋಗಿಕ ಶಿಕ್ಷಣದಲ್ಲಿ ಹಿಂದುಳಿದವರಿಗೆ ಪ್ರೋತ್ಸಾಹ ನೀಡಲು ಶೇ. ೫೦ರಷ್ಟು ಸೀಟುಗಳನ್ನು ಮೀಸಲಿರಿಸಲಾಯಿತು. ಹಿಂದುಳಿದ ವರ್ಗದವರ ಆಕರ್ಷಣೆಯ ಹುದ್ದೆ ಅಮಲ್ದಾರ ಹುದ್ದೆ. ೧೯೨೧ರಿಂದ ೧೯೩೭ರ ಅವಧಿಯಲ್ಲಿ ಬಡ್ತಿ ಪಡೆದ ೭೦ ಜನ ಅಮಲ್ದಾರರಲ್ಲಿ ೩೨ ಮಂದಿ ಮತ್ತು ನೇರ ನೇಮಕಾತಿ ಗೊಂಡ ೪೦ ಮಂದಿಯಲ್ಲಿ ೩೧ ಜನ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದರು. ಹೀಗೆ ನಾಲ್ವಡಿಯವರ ಸರ್ಕಾರ ಹಿಂದುಳಿದ ವರ್ಗದವರಿಗೆ ವಿಶೇಷ ಸವಲತ್ತುಗಳನ್ನು ನೀಡುವ ಮೂಲಕ ಅವರನ್ನು ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳನ್ನು ಗಳಿಸುವಂತೆ ಮಾಡಿತು. ಆ ಮೂಲಕ ಬ್ರಾಹ್ಮಣ–ಬ್ರಾಹ್ಮಣೇತರ ನಡುವಿನ ಸಂಘರ್ಷವನ್ನು ತಪ್ಪಿಸಿ ಸಾಮಾಜಿಕ ನ್ಯಾಯ ಎಂಬ ಅಂಶಗಳ ಮೂಲಕ ಸಾಮಾಜಿಕ ಬದಲಾವಣೆಗೆ ದಾರಿ ಮಾಡಿಕೊಟ್ಟರು.

ಹಿಂದುಳಿದ ವರ್ಗದವರಂತೆ ಅಲ್ಪಸಂಖ್ಯಾತರ ಅಭಿವೃದ್ಧಿ ಗಾಗಿಯೂ ನಾಲ್ವಡಿಯವರು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅವುಗಳನ್ನು ಜಾರಿಗೊಳಿಸಿ ದರು. ಸರ್ವಧರ್ಮ ಸಹಿಷ್ಣುಗಳಾದ ಮಹಾರಾಜ ನಾಲ್ವಡಿಯವರು ನಿಷ್ಠ ಹಿಂದೂಧರ್ಮೀಯರಾಗಿದ್ದರೂ ಆಡಳಿತದಲ್ಲಿ ಜಾತಿಧರ್ಮ ಮುಂತಾದ ಭೇದ ಭಾವ ಮಾಡು ತ್ತಿರಲಿಲ್ಲ. ಎಲ್ಲಾ ಧರ್ಮೀಯರನ್ನು ಸಮಾನವಾಗಿ ಕಾಣು ತ್ತಿದ್ದರು. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬುದನ್ನು ತಿಳಿದಿದ್ದ ಮಹಾರಾಜ ನಾಲ್ವಡಿಯವರಿಗೆ ಪ್ರಜೆಗಳೆಲ್ಲರೂ ಅವರ ಮಕ್ಕಳೆಂಬ ಅರಿವಿತ್ತು. ನಾಲ್ವಡಿಯವರ ಸರ್ವಧರ್ಮ ಸಹಿಷ್ಣುತೆಯ ವಿಷಯದ ಬಗ್ಗೆ ಬರೆಯುತ್ತಾ ಸರ್ ಮಿರ್ಜಾ ಇಸ್ಮಾಯಿಲ್‌ರವರು ತಮ್ಮ ಆತ್ಮಕಥೆಯಲ್ಲಿ ಹೀಗೆ ಬರೆದಿದ್ದಾರೆ. "ನಾನೊಬ್ಬ ಇಸ್ಲಾಂ ಧರ್ಮೀಯನು, ಪ್ರಭುಗಳು ನಿಷ್ಠಾವಂತ ಹಿಂದುಗಳು. ಆದರೆ ಒಮ್ಮೆಯೂ ನಾನು ಅನ್ಯಧರ್ಮೀಯನೆಂಬ ಭಾವನೆ ನನಗೆ ಬರಲಿಲ್ಲ. ಮಹಾರಾಜ ನಾಲ್ವಡಿಯವರು ಸರ್ವ ಧರ್ಮಾನುರಾಗಿಗಳು. ಅವರ ಈ ಗುಣವನ್ನು ಗಾಂಧೀಜಿ, ಮಾಳವೀಯರು ಮೊದಲಾದವರು ಬಹಳವಾಗಿ ಕೊಂಡಾಡಿದ್ದಾರೆ."

ಅಲ್ಪಸಂಖ್ಯಾತ ವರ್ಗಗಳಾದ ಮುಸಲ್ಮಾನರಿಗೂ, ಕ್ರೈಸ್ತರಿಗೂ ಪೂಜಾಮಂದಿರ ಕಟ್ಟಲು ಸ್ಥಳದಾನ ಮಾಡಿದರು. ಉದಾಹರಣೆಗೆ ಮೈಸೂರಿನ ಸುಪ್ರಸಿದ್ಧ ಸೈಂಟ್ ಫಿಲೋಮಿನಾ ಚರ್ಚ್ ಕಟ್ಟಲು ಅನುಮತಿಕೊಟ್ಟು ಅದರ ಅಸ್ತಿಭಾರವನ್ನು ೧೯೩೩ರಲ್ಲಿ ಮಹಾರಾಜ ನಾಲ್ವಡಿಯವರೇ ಹಾಕಿದರು. ಹಿಂದೆ ಚಿಕ್ಕ ಮಸೀದಿ ಎಂದು ಕರೆಯಲ್ಪಟ್ಟು, ಈಗ ದೊಡ್ಡ ಮಸೀದಿ ಎಂದು ಕರೆಯಲ್ಪಡುವ ಮೈಸೂರಿನ ಇರ್ವಿನ್ ರಸ್ತೆಯ ಕೊನೆಯಲ್ಲಿರುವ ಮಸೀದಿಯ ಅಭಿವೃದ್ಧಿಗೆ ಸಹಾಯ ಮಾಡಿದ ನಾಲ್ವಡಿಯವರು ಕಚ್ಚಿಮೇಮನ್ ಮಸೀದಿಯನ್ನು ಕಟ್ಟಲು ಅನುಮತಿ ಕೊಟ್ಟು ಕುಚ್ ಸೇಟುಗಳಿಗೆ ಅನುಕೂಲ ಮಾಡಿಕೊಟ್ಟರು. ಆರ್ಯಸಮಾಜ, ಜೈನ ಬಸದಿ ಮತ್ತು ಅಭಿನವ ಶಂಕರಾಲಯಗಳನ್ನು ನಿರ್ಮಿಸಲು ಸಹಾಯ ಮಾಡಿದರು. ಮೈಸೂರಿನಲ್ಲಿ ರಾಮಕೃಷ್ಣ ಆಶ್ರಮ ಸ್ಥಾಪಿಸಲು ಸ್ಥಳದಾನ ಮಾಡಿ ಆ ಆಶ್ರಮ ಬೆಳೆಯಲು ಕಾರಣರಾದರು. ಮೈಸೂರು, ಬೆಂಗಳೂರು ನಗರಗಳಲ್ಲಿ ಮಾತ್ರವಲ್ಲದೆ ಸಂಸ್ಥಾನದ ಅನೇಕ ಕಡೆ ಪೂಜಾಮಂದಿರಗಳನ್ನು, ಪ್ರಾರ್ಥನಾ ಭವನಗಳನ್ನು ಕಟ್ಟಿಕೊಳ್ಳಲು ಎಲ್ಲಾ ಧರ್ಮ, ಜಾತಿ, ಜನಾಂಗ ದವರಿಗೆ ಅನುಮತಿ ಕೊಟ್ಟರು ಮತ್ತು ಅಗತ್ಯ ತೋರಿದಾಗ ಧನಸಹಾಯ ಇಲ್ಲವೆ ಭೂದಾನ ಮಾಡಿದರು. ಅಲ್ಲಿಯ ಕೆಲಸ ಕಾರ್ಯಗಳು ಸಾಂಗವಾಗಿ ನಡೆಯಲು ಮಹಾರಾಜ ನಾಲ್ವಡಿಯವರು ಮುಜರಾಯಿ ಇಲಾಖೆಯ ಮೂಲಕ ನಿಧಿ ಒದಗಿಸಿದರು ಹಾಗೂ ತಮ್ಮ ಸ್ವಂತ ಹಣವನ್ನು ಸಹ ವಿವಿಧ ಧರ್ಮ ಕಾರ್ಯಗಳಿಗೆ ಒದಗಿಸಿಕೊಡುತ್ತಿದ್ದರು.

ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಗಳನ್ನು ಚುನಾಯಿಸಿ ಕಳುಹಿಸುವ ಉದ್ದೇಶಕ್ಕಾಗಿ ಈ ಅಲ್ಪಸಂಖ್ಯಾತ ಪಂಗಡದ

ಸಂಘಗಳನ್ನು ಸರ್ಕಾರದವರು ಅಂಗೀಕರಿಸಿದರು. ಉದಾಹರಣೆಗೆ: ಮೈಸೂರು ಸಂಸ್ಥಾನದ ಸೆಂಟ್ರಲ್ ಮಹಮ್ಮದೀಯರ ಸಂಘ ಬೆಂಗಳೂರು, ಬೆಂಗಳೂರು ನಗರದ ಮಜಿಲಿಸ್-ಇ-ವಿಲ್ಲಿಯಾ ಇಸ್ಲಾಮಿಯಾ, ಚನ್ನಪಟ್ಟಣದ ಅಂಜುಮನ್-ಇ-ಮಹದೇವಿಯಾ ದೈರತುಲ್ ಇಲ್ಲಾಂ, ತರಿಕೆರೆಯ ಮುಸ್ಲಿಂ ಸಂಘ, ಚಿತ್ರದುರ್ಗದ ಅಂಜುಮನ್-ಇ-ಮುಫೀದುಲ್ ಇಲ್ಲಾಂ, ಬೆಂಗಳೂರಿನ ಕ್ಯಾಥೋಲಿಕರ ಸಂಘ, ಇಂಡಿಯನ್ ಕ್ರೈಸ್ತರ ಸಂಘ ಬೆಂಗಳೂರು, ಆದಿಜಾಂಬವ ಅಭಿವೃದ್ಧಿ ಸಂಘ ಬೆಂಗಳೂರು, ಉಜ್ಜಯಿನಿ ಮಹಾಕಾಳಿ ಗಂಗವರ್ಗ ವಲಿಭಸಂಘ, ಕೋಲಾರ (ಒಡ್ಡರು) ಕಣಿಯರ ಸಂಘ, ಜ್ಯೋತಿನಗರ ವೈಶ್ಯ ಮಹಾಜನ ಸಂಘ ಬೆಂಗಳೂರು, ವಹ್ನಿಕುಲ ಕ್ಷತ್ರಿಯ ಸಂಘ ಬೆಂಗಳೂರು, ಮಹಾರಾಷ್ಟ್ರ ಸಮಾಜ ಬೆಂಗಳೂರು, ಕುರುಹಿನಶೆಟ್ಟಿ ಸಂಘ ಬೆಂಗಳೂರು, ನಾಯಕರ ಸಂಘ ಚಿತ್ರದುರ್ಗ. ಮುಂತಾದವು ಪ್ರಮುಖ ಅಲ್ಪಸಂಖ್ಯಾತ ಪಂಗಡಗಳ ಸಂಘಗಳಾಗಿದ್ದವು. ಮುಂದೆ ೧೯೧೮ರಲ್ಲಿ ನೇಮಕಗೊಂಡ ಮಿಲ್ಲರ್ ಆಯೋಗದಲ್ಲಿ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನವಾಬ್ ಗುಲಾಂ ಅಹಮದ್ ಖಲಾಮಿ ಅವರನ್ನು ಸೇರ್ಪಡೆಗೊಳಿಸ ಲಾಯಿತಲ್ಲದೆ, ಮಿಲ್ಲರ್ ಆಯೋಗದ ಶಿಫಾರಸ್ಸಿಗನು ಗುಣವಾಗಿ ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಅಲ್ಪಸಂಖ್ಯಾತರಿಗೂ ಸಹ ಮೀಸಲಾತಿಯನ್ನು ಒದಗಿಸಿ ಅವರ ಪ್ರಗತಿಗೆ ಸೂಕ್ತ ರೀತಿಯಲ್ಲಿ ಮಹಾರಾಜ ನಾಲ್ವಡಿಯವರು ಸ್ಪಂದಿಸಿದ್ದು ಅವರ ಉದಾರತೆ ಹಾಗೂ ಪ್ರಗತಿಪರ ಧೋರಣೆಗಳಿಗೆ ವಿಶೇಷವಾಗಿ ಅವರ ಸಾಮಾಜಿಕ ನ್ಯಾಯ ವಿತರಣೆಗೆ ಕೈಗನ್ನಡಿಯಾಗಿದೆ.

'ಸರ್ವೇಜನಾಃ ಸುಖಿನೋ ಭವಂತು' ಎಂಬ ಭಾರತೀಯ ಸನಾತನ ಹಿತೋಪದೇಶದ ತಿರುಳನ್ನು ಅರ್ಥೈಸಿ ಕೊಂಡ ನಾಲ್ವಡಿ ಕೃಷ್ಣರಾಜ ಮಹಾನುಭಾವರು ತಮ್ಮ ಎಲ್ಲಾ ಪ್ರಜೆಗಳನ್ನು ಸಮಾನವಾಗಿ ಕಾಣುತ್ತಿದ್ದರು. ಎಲ್ಲಾ ಧರ್ಮಗಳಲ್ಲಿಯೂ ಅವರಿಗೆ ಸಮಾನ ಗೌರವವಿತ್ತು. ಬಡವ ಬಲ್ಲಿದ, ಪಂಡಿತ ಪಾಮರ, ಧನಿಕ ಸೇವಕ ಎಂಬ ಭೇದ ಭಾವವಾಗಲೀ, ಹಿಂದೂ ಮುಸ್ಲಿಂ ಎಂಬ ತಾರತಮ್ಯವಾಗಲಿ ಇರಲಿಲ್ಲ. ಇವರಷ್ಟು ಸಮ ಭಾವನೆಯಿಂದ ಇತರರನ್ನು ಕಾಣುವ ಮಹನೀಯರು ಅತಿ ವಿರಳವೆನ್ನಬಹುದು. ಅಲ್ಪಸಂಖ್ಯಾತ ಸಮುದಾಯದ ಅಭಿವೃದ್ಧಿಗಾಗಿ ಕೈಗೊಳ್ಳ ಲಾಗಿದ್ದ ಕಲ್ಯಾಣ ಕ್ರಮಗಳನ್ನು ನಾಲ್ವಡಿಯವರು ನಿಮ್ನವರ್ಗ ಗಳಿಗೂ ವಿಸ್ತರಿಸುವುದರ ಮೂಲಕ ಕ್ರಾಂತಿಕಾರಕ ವೆನ್ನಬಹುದಾದ ಸುಧಾರಣೆ ಕೈಗೊಂಡರೆಂದು ಇಲ್ಲಿ ಅಭಿಪ್ರಾಯಪಡಬಹದು. ಅಲ್ಪಸಮುದಾಯದ ಹಿತಾಶಕ್ತಿಗಳನ್ನು ಕಾಯ್ದುಕೊಂಡಂತೆ ನಿಮ್ನವರ್ಗಗಳು ಅಥವಾ ಅಸ್ಪೃಶ್ಯರ ಅಭಿವೃದ್ಧಿ, ಸ್ತ್ರೀಯರ ಸಬಲೀಕರಣ ಮುಂತಾದವುಗಳನ್ನು ಕಾಯ್ದುಕೊಂಡ ನಾಲ್ವಡಿಯವರ ಸಮಾಜ ಸುಧಾರಣೆಗಳನ್ನು ಕುರಿತು ಮುಂದೆ ಪರಿಶೀಲಿಸಲಾಗಿದೆ.

ಹಿಂದುಳಿದ ಜಾತಿಗಳಿಗೆ ಶಾಸನಬದ್ಧ ಮೀಸಲಾತಿ ನೀಡುವ ಮಹಾರಾಜ ನಾಲ್ವಡಿಯವರ ತೀರ್ಮಾನವು ಬ್ರಾಹ್ಮಣರ ಏಕಸ್ವಾಮ್ಯಕ್ಕೆ ಕಡಿವಾಣ ಹಾಕಿತು ಮತ್ತು ಹಿಂದುಳಿದ ಜಾತಿಗಳಿಗೆ ಆಶಾಕಿರಣವಾಗಿತ್ತು. ಮಹಾರಾಜ ನಾಲ್ವಡಿಯವರ ಅಂದಿನ ಈ ಕ್ರಮದಿಂದಾಗಿ ಕರ್ನಾಟಕದಲ್ಲಿ ಬ್ರಾಹ್ಮಣೇತರ ಜಾತಿಗಳು ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾವಂತರಾಗಿ ಸಂಸ್ಥಾನದ ಸೇವೆಯಲ್ಲಿ ಬ್ರಾಹ್ಮಣರಿಗೆ ಸರಿಸಮಾನವಾದ ಸ್ಥಾನಮಾನ ಗಳನ್ನು ಗಳಿಸಲು ಸಾಧ್ಯವಾಯಿತು. ಹೀಗೆ ನಾಲ್ವಡಿಯವರ ದೂರದೃಷ್ಟಿ ಮತ್ತು ಉದಾರನೀತಿಗಳ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಸೇವೆ ಸಲ್ಲಿಸುವ ಅವಕಾಶಗಳು ಹಿಂದುಳಿದ ವರಿಗೆ ದೊರಕಿದವಲ್ಲದೆ ದಲಿತರು, ನಿಮ್ನವರ್ಗ ಅಥವಾ ಅಸ್ಪೃಶ್ಯರಿಗೂ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಮಾನ ಅವಕಾಶಗಳು ಮತ್ತು ಸವಲತ್ತುಗಳು ಲಭ್ಯವಾಯಿತೆಂಬುದನ್ನು ಮುಂದೆ ವಿವರಿಸಲಾಗಿದೆ.

ಸಾಮಾಜಿಕವಾಗಿ ಅಸ್ಪೃಶ್ಯರು ಅಥವಾ ನಿಮ್ನವರ್ಗ ದವರು ಅಸ್ಪೃಶ್ಯ ಸಮಸ್ಯೆಯಿಂದ ಮುಕ್ತವಾಗಿರಲಿಲ್ಲ. ಸಾಮಾಜಿಕ ಹಾಗೂ ಧಾರ್ಮಿಕ ನೀತಿಗಳಿಂದಾಗಿ ನಿಷೇಧಕ್ಕೊಳಪಟ್ಟು ಶತಶತಮಾನಗಳಿಂದಲೂ ಎಲ್ಲಾ ರೀತಿಯಲ್ಲೂ ಶೋಷಣೆಗೆ ಒಳಗಾಗಿದ್ದ ಈ ವರ್ಗದವರ ವಿದ್ಯಾಭ್ಯಾಸಕ್ಕೂ ಅವರ ರಾಜಕೀಯ, ಆರ್ಥಿಕ, ಸಾಮಾಜಿಕ ಪರಿಸ್ಥಿತಿಗಳನ್ನು ಉತ್ತಮ ಪಡಿಸುವುದಕ್ಕಾಗಿ ನಾಲ್ವಡಿಯವರ ಸರ್ಕಾರವು ನೀಡಿದ ಪ್ರೋತ್ಸಾಹ, ಮಾಡಿದ ಸಹಾಯ, ಕೈಗೊಂಡ ಕಾರ್ಯಕ್ರಮ, ತೋರಿದ ಕಳಕಳಿ ಅದ್ವಿತೀಯವಾದುವು. ಪಂಚಮರಿಗಾಗಿ ಮೊದಲು ಹುಸ್ಕೂರು ಹಾಗೂ ನರಸಾಪುರದಲ್ಲಿ ಎರಡು ಸರ್ಕಾರಿ ಶಾಲೆಗಳನ್ನು ತೆರೆಯಲಾಯಿತು. ಅನಂತರ ಮೈಸೂರು, ಆನೇಕಲ್ಲು ಹಾಗೂ ಹಾಸನದಲ್ಲಿ ಅನುದಾನ ರಹಿತ ಶಾಲೆಗಳನ್ನು ಆರಂಭಿಸಲಾಯಿತು. ನಿಮ್ನವರ್ಗದ ಅಥವಾ ಅಸ್ಪೃಶ್ಯರ ಮಕ್ಕಳು ಸಾರ್ವಜನಿಕ ಶಾಲೆಗಳಲ್ಲಿ ಹೊರಗಿನ ಆವರಣದಲ್ಲಿ ಕುಳಿತು ಪಾಠ ಕಲಿಯಬೇಕಾಗಿದ್ದಿತು. ಕಾರಣ ಅಂದಿನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಜಾತಿಪದ್ಧತಿ ನೀತಿಗಳೇ ಕಾರಣವೆನ್ನಬಹುದು. ಆದರೆ ಕಾಲಕ್ರಮೇಣ ಅಸ್ಪೃಶ್ಯರು ಹಾಗೂ ವಂಚನೆಗೊಳಪಟ್ಟಿದ್ದವರ ಮಕ್ಕಳಿ ಗಾಗಿಯೇ ಹಲವಾರು ಶಾಲೆಗಳನ್ನು ಪ್ರಾರಂಭಿಸಲಾಯಿತು. ೧೯೧೪-೧೫ರ ವರದಿಯೊಂದರ ಪ್ರಕಾರ ಶಿಕ್ಷಣಾಧಿಕಾರಿ ಯೊಬ್ಬರು ಹಿಂದೂ ಸಮಾಜದ ಮೇಲ್ವವರ್ಗದವರಲ್ಲಿ

ನಿಮ್ನವರ್ಗದವರ ಬಗ್ಗೆ ಇದ್ದ ಮನೋಭಾವನೆಗಳಲ್ಲಿ ಬದಲಾವಣೆಯಾಗಿದ್ದುದನ್ನು ಗುರುತಿಸಿದ್ದು ಕಂಡುಬರುತ್ತದೆ.

ನಿಮ್ನವರ್ಗದವರಿಗೆ ಸಾಮಾನ್ಯ ವಿದ್ಯಾಭ್ಯಾಸ ಮಾತ್ರವಲ್ಲದೆ ವೃತಿಪರ ಶಿಕ್ಷಣವನ್ನೂ ಸಹ ನೀಡಲು ಸೂಕ್ತ ವ್ಯವಸ್ಥೆ ಮಾಡಲಾಗಿತ್ತು. ಅವರಿಗಾಗಿ ಮೈಸೂರು, ತುಮಕೂರು, ಚಿಕ್ಕಮಗಳೂರು, ಬೆಂಗಳೂರು ಮುಂತಾದ ಕಡೆಗಳಲ್ಲಿ ವಸತಿ ಶಾಲೆಗಳನ್ನು ತೆರೆದು ವೃತ್ತಿಪರ ತರಬೇತಿಗಳನ್ನು ನೀಡಲಾಯಿತು. ೧೯೧೮-೧೯ರ ವೇಳೆಗೆ ಅಸ್ಪೃಶ್ಯರನ್ನು ಸಾರ್ವಜನಿಕ ಶಾಲೆಗಳಿಗೆ ಸೇರಿಸಲು ಸರ್ಕಾರಿ ಆದೇಶದ ಮೂಲಕವೇ ಅವಕಾಶ ಮಾಡಿಕೊಡಲಾಯಿತು. ಅದಕ್ಕಾಗಿ ನಾಲ್ವಡಿಯವರ ಸರ್ಕಾರವು ತನ್ನ ಆದೇಶದಲ್ಲಿ 'ಜಾತಿಯ ಆಧಾರದ ಮೇಲೆ ವ್ಯಕ್ತಿಗಳಿಗೆ ಶಾಲಾ ಪ್ರವೇಶಾತಿಯನ್ನು ನಿರಾಕರಿಸುವುದನ್ನು ಒಪ್ಪಲಾಗುವುದಿಲ್ಲ. ಈ ಬಗೆಯ ಅಸಮಾನತೆಯು ಸಾಮಾಜಿಕ ಪೂರ್ವಾಗ್ರಹಗಳಿಂದ ಕೂಡಿದ್ದು ಸಮಾಜದ ಪ್ರಗತಿಯು ಕುಂಠಿತವಾಗುತ್ತದೆ' ಎಂಬುದನ್ನು ಸ್ಪಷ್ಟಪಡಿಸಿತು. ಈ ಧೋರಣೆಗಳಿಗೆ ಅನುಗುಣವಾಗಿ ನಿಮ್ನವರ್ಗದ ಅಥವಾ ಅಸ್ಪೃಶ್ಯರ ಮಕ್ಕಳಿಗೆ ವಿದ್ಯಾರ್ಥಿ ವೇತನ, ಉಚಿತ ಭೋಜನ, ವಸತಿ ಸೌಕರ್ಯ ಮುಂತಾದವುಗಳಲ್ಲದೇ, ಉಚಿತವಾಗಿ ಪುಸ್ತಕ, ಬಟ್ಟೆಗಳನ್ನು ಒದಗಿಸಿಕೊಡಲಾಗಿತ್ತು. ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಮನ ಒಲಿಸುವುದಕ್ಕಾಗಿ ಅವರ ತಂದೆ-ತಾಯಂದಿರಿಗೆ ಹಣದ ಸಹಾಯವನ್ನು ಸಹ ಮಾಡಲಾಗುತ್ತಿತ್ತು. ಈ ವರ್ಗದ ಮಕ್ಕಳಿಗೆ ಪ್ರವೇಶಾತಿ ಹಾಗೂ ಪರೀಕ್ಷಾ ಶುಲ್ಕವನ್ನು ಕೂಡ ಮನ್ನಾ ಮಾಡಲಾಗಿತ್ತು.

ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸಲು ತಕ್ಕ ವ್ಯವಸ್ಥೆ ಹಾಗೂ ಶಾಲೆ ಸೇರಲು ಉಚಿತ ಅವಕಾಶವನ್ನು ಮಾಡಿಕೊಡಲಾಗಿತ್ತು. ಮಾತ್ರವಲ್ಲದೆ ಅಸ್ಪೃಶ್ಯ ಕೃಷಿ ಕಾರ್ಮಿಕರಿಗೆ ವ್ಯವಸಾಯ ಮಾಡಲು ಜಮೀನು ನೀಡಲಾಯಿತ್ತಲ್ಲದೆ, ವಸತಿ ಸೌಕರ್ಯಕ್ಕಾಗಿ ಪ್ರತ್ಯೇಕ ಬಡಾವಣೆ ಹಾಗೂ ಇತರ ಅಭಿವೃದ್ಧಿಗಾಗಿ ಸಹಕಾರಿ ಸಂಘಗಳ ಮೂಲಕ ಅನೇಕ ಸೌಲಭ್ಯಗಳನ್ನು ದೊರಕಿಸಲಾಯಿತು. ಇದರೊಂದಿಗೆ ಸರ್ಕಾರಿ ಉದ್ಯೋಗಗಳಿಗೆ ವಿದ್ಯಾವಂತರಾಗಿದ್ದ ಅಸ್ಪೃಶ್ಯರನ್ನು ಆದ್ಯತೆಯ ಮೇರೆಗೆ ನೇಮಿಸಿಕೊಳ್ಳಲಾಗುತ್ತಿತ್ತು. ಪುರಸಭೆ, ಜಿಲ್ಲಾ ಮಂಡಳಿ, ಪ್ರಜಾಪ್ರತಿನಿಧಿ ಸಭೆ ಮುಂತಾದವುಗಳಲ್ಲಿ ಈ ಪಂಗಡದವರು ಸದಸ್ಯರಾಗಲು ವಿಶೇಷ ಸೌಕರ್ಯ ಹಾಗೂ ಮೀಸಲಾತಿಗಳನ್ನು ಕೊಡಲಾಯಿತು. ೧೯೨೩ರಲ್ಲಿ ಜಾರಿಗೆ ಬಂದ ಹೊಸ ಸಂವಿಧಾನಾತ್ಮಕ ಪ್ರಜಾಪ್ರತಿನಿಧಿ ಸಭೆಯಲ್ಲಿ ವಿಶೇಷ ಹಿತಾಸಕ್ತಿ ಜನರಿಗೆ ೧೫ ಸ್ಥಾನಗಳನ್ನು ಮೀಸಲಿಡಲಾಯಿತು. ಉದಾಹರಣೆಗೆ: ಅಸ್ಪೃಶ್ಯ ವರ್ಗಕ್ಕೆ ಸೇರಿದ ಚೆನ್ನಿಗರಾಮಯ್ಯ, ಚೆಲುವಯ್ಯ, ಮುರುಗೇಶನ್ ಪಿಳ್ಳೈ, ಡಿ. ಮಾಯಿಗಯ್ಯ ಮುಂತಾದವರಲ್ಲದೆ, ಅಸ್ಪೃಶ್ಯರ ಉದ್ಧಾರಕ್ಕಾಗಿ ತಮ್ಮನ್ನೇ ಸಮರ್ಪಿಸಿಕೊಂಡಿದ್ದ ಮೇಲ್ವರ್ಗದ ಗೋಪಾಲಸ್ವಾಮಿ ಅಯ್ಯರ್, ತಗಡೂರು ರಾಮಚಂದ್ರ ರಾಯರು ಮೊದಲಾದವರನ್ನು ಸಹ ಪ್ರಜಾಪ್ರತಿನಿಧಿ ಸಭೆಗೆ ನಾಮಕರಣಗೊಳಿಸಲಾಯಿತು. ಮಿಗಿಲಾಗಿ ನಿಮ್ನವರ್ಗ ಅಥವಾ ಅಸ್ಪೃಶ್ಯರು ಸಾರ್ವಜನಿಕ ಜಲಮೂಲಗಳಾದ ಬಾವಿ, ಕೆರೆಕಟ್ಟೆ ಮುಂತಾದವುಗಳ ನೀರನ್ನು ಬಳಸುವ ಹಕ್ಕನ್ನು ಪಡೆದುಕೊಂಡರು. ತನ್ಮೂಲಕ ಪಶುಗಳಿಗಿಂತಲೂ ಕೀಳಾಗಿ ಪರಿಗಣಿಸಲ್ಪಟ್ಟಿದ್ದ ಅಸ್ಪೃಶ್ಯರು ಸಾಮಾಜಿಕವಾಗಿ ಪ್ರಕೃತಿ ಸಹಜ ಸಮಾನತೆ, ಸ್ವಾತಂತ್ರ್ಯ ಮುಂತಾದವುಗಳನ್ನು ಪಡೆದುಕೊಳ್ಳಲು ಸಾಧ್ಯವಾಯಿತು.

ನಿಮ್ನವರ್ಗದವರ ಏಳ್ಗೆಗಾಗಿ ಹಲವು ಸುಧಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಆ ವರ್ಗದವರ ಬಗ್ಗೆ ಅಪಾರ ಕಾಳಜಿ ಇದ್ದಿತು. ಅವರ ಸಾಮಾಜಿಕ ಮನೋಭಾವ ತೀವ್ರ ಪ್ರಗತಿಪರವಾಗಿತ್ತೆಂಬುದಕ್ಕೆ ಉದಾಹರಣೆಯಾಗಿ ೧೯೩೬ರ ಅಕ್ಟೋಬರ್ ತಿಂಗಳಲ್ಲಿ ಪ್ರಪ್ರಥಮ ಬಾರಿಗೆ ಅಸ್ಪೃಶ್ಯರಿಗೆ ಅರಮನೆಯನ್ನು ಪ್ರವೇಶಿಸುವ ಅವಕಾಶವನ್ನು ನಾಲ್ವಡಿಯವರು ಕಲ್ಪಿಸಿಕೊಡುವುದರ ಮೂಲಕ ಪೂರ್ವಸಂಪ್ರದಾಯಗಳನ್ನು ಅನುಸರಿಸುತ್ತಿದ್ದ ಅರಮನೆಯ ವ್ಯವಸ್ಥೆಯಲ್ಲಿ ಅಭೂತಪೂರ್ವವೆನಿಸಿದ ಹಾಗೂ ಕ್ರಾಂತಿಕಾರಕವಾದ ಬದಲಾವಣೆಯನ್ನು ತಂದರು. 'ಪ್ರಾಚೀನ ಕಾಲದಿಂದಲೂ ಅನುಸರಿಸಿಕೊಂಡು ಬರಲಾಗಿದ್ದ ಜಾತಿ ಪದ್ಧತಿಗಳ ಕಟ್ಟುನಿಟ್ಟಾದ ರೂಢಿಯ ಕಪಿಮುಷ್ಠಿಯ ಹಿಡಿತವನ್ನು ಸಡಿಲಿಸುವ ವಿಷಯದಲ್ಲಿ ಇದೆಷ್ಟು ಅಮೋಘವಾದ ಮಾರ್ಪಾಡು ಎಂಬುದನ್ನು ಈ ಘಟನೆಯ ಪ್ರತ್ಯಕ್ಷದರ್ಶಿಯಾಗಿದ್ದವರು ಹಾಗು ಪೂರ್ವ ಆಚರಣೆಗಳ ಒತ್ತಡ ಎಷ್ಟು ಕಟ್ಟುನಿಟ್ಟಿನದು ಎಂಬುದನ್ನು ಅರಿತವರು ಮಾತ್ರ ಪೂರ್ಣವಾಗಿ ಗ್ರಹಿಸಿ, ನಿರ್ದಿಷ್ಟವಾಗಿ ಶ್ಲಾಘಿಸಬಲ್ಲರು'. ಇತರರಂತೆ ನಿಮ್ನವರ್ಗ ಅಥವಾ ಅಸ್ಪೃಶ್ಯರು ಸಹ ಅರಮನೆಯನ್ನು ಪ್ರವೇಶಿಸಬಹುದೆಂಬುದಾಗಿ ಹೇಳಿ, ಅದರಂತೆ ಅವಕಾಶ ಮಾಡಿಕೊಟ್ಟ ಭಾರತದ ಹಾಗೂ ಮೈಸೂರು ಸಂಸ್ಥಾನಾಧೀಶರುಗಳಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರೇ ಮೊಟ್ಟಮೊದಲನೆಯವರು ಎಂಬುದಾಗಿ ಬ್ರಿಟ್ಯಾನಿಕ ವಿಶ್ವಕೋಶದಲ್ಲಿರುವ ಹೊಗಳಿಕೆಯ ಮಾತುಗಳು ಸ್ಪಷ್ಟಪಡಿಸುತ್ತವೆ.

ಹಿಂದುಳಿದ, ಅಸ್ಪೃಶ್ಯ ಮೊದಲಾದವರ ಸಾಮಾಜಿಕ ಸಮಾನತೆಯನ್ನು ಎತ್ತಿಹಿಡಿದ ಮೈಸೂರು ಸರ್ಕಾರವು ಬುಡಕಟ್ಟು ಹಾಗೂ ಅರಣ್ಯ ನಿವಾಸಿಗಳಿಗೂ ಸಹ ಶಿಕ್ಷಣದ

ಮೂಲಸೌಲಭ್ಯಗಳನ್ನು ಒದಗಿಸಿ ಅವರನ್ನೂ ಸಹ ಸಮಾಜದ ಮುಖ್ಯವಾಹಿನಿಗೆ ಕರೆತರಲು ಪ್ರಾಮಾಣಿಕ ಪ್ರಯತ್ನಗಳನ್ನು ಹಮ್ಮಿಕೊಂಡಿತು. ಈ ಉದ್ದೇಶದ ಈಡೇರಿಕೆಗಾಗಿ ಬುಡಕಟ್ಟು ಜನಾಂಗಗಳಾದ ಕಾಡು ಕುರುಬ, ಕಾಡುಗೊಲ್ಲ, ಸೋಲಿಗ, ಯರವ, ಲಂಬಾಣಿ ಮುಂತಾದವರ ಅನುಕೂಲಕ್ಕಾಗಿ ಗಿರಿಜನ ವಸತಿ ಶಾಲೆಗಳನ್ನು ಆಯಾಯ ಗುಡ್ಡಗಾಡು ಪ್ರದೇಶದಲ್ಲಿ ತೆರೆಯಲಾಯಿತು. ಉದಾಹರಣೆಗೆ: ೧೯೨೧-೨೨ರ ಅಂಕಿಅಂಶಗಳ ಪ್ರಕಾರ ರಾಜ್ಯದಲ್ಲಿ ೩೨ ಲಂಬಾಣಿ ವಸತಿಶಾಲೆಗಳಿದ್ದು ೬೧೦ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯುತ್ತಿದ್ದರು. ಇಂದಿನ ಚಾಮರಾಜನ ನಗರ ಜಿಲೆ, ಬಿಳಿಗಿರಿರಂಗನ ಬೆಟ್ಟದ ಸಮೀಪವಿರುವ ಅನೇಕ ಬೆಟ್ಟಗುಡ್ಡ ಪ್ರದೇಶಗಳಲ್ಲಿ ೪ ಗಿರಿಜನ (ಸೋಲಿಗರ) ಶಾಲೆಗಳೂ ಕಾಕನಕೋಟೆ ಅರಣ್ಯ ಪ್ರದೇಶಗಳಲ್ಲಿ ಜೇನುಕುರುಬ ಮತ್ತು ಕುಣಬಿ ಜನರಿಗಾಗಿ ೫ ಶಾಲೆಗಳೂ ಕೋಲಾರ ಜಿಲ್ಲೆಯಲ್ಲಿ ವಡ್ಡರ (ಭೊವಿ) ಸಮುದಾಯದವರಿಗಾಗಿ ೩ ಶಾಲೆಗಳೂ ಒಟ್ಟು ೧೨ ಶಾಲೆಗಳು ಸ್ಥಾಪನೆಗೊಂಡು, ಈ ಶಾಲೆಗಳಲ್ಲಿ ೨೨೪ ವಿದ್ಯಾರ್ಥಿಗಳು ಶೀಕ್ಷಣ ಪಡೆಯುತ್ತಿದ್ದರು.

ಒಟ್ಟಾರೆ ನಾಲ್ವಡಿ ಕೃಷರಾಜ ಒಡೆಯರು ಐಷಾರಾಮಿ ಜೀವನದಿಂದ ದೂರವಿದ್ದು, ಪ್ರಜಾಕ್ಷೇಮವನ್ನೇ ಉಸಿರಾಗಿಸಿಕೊಂಡು, ಸ್ವದೇಶೀ ಸಂಪನ್ಮೂಲಗಳನ್ನು ವ್ಯವಸ್ಥಿತ ಯೋಜನೆ ಮತ್ತು ಬಳಕೆಯ ಮೂಲಕ ಸಂಸ್ಥಾನದ ಪ್ರಗತಿಯನ್ನು ಸಾಧಿಸಿದರು. ಅಸ್ಪೃಶ್ಯ ಮತ್ತು ಹಿಂದುಳಿದ ಜನಾಂಗದವರ ಹಿತರಕ್ಷಣೆಗಾಗಿ ಮಿಲ್ಲರ್ ಸಮಿತಿಯ ರಚನೆ, ಅರಮನೆ, ಸಾರ್ವಜನಿಕ ಶಾಲೆ, ದೇವಾಲಯಗಳಿಗೆ ಅಸ್ಪೃಶ್ಯರ ಪ್ರವೇಶಾವಕಾಶ, ದುರ್ಬಲರು ಮತ್ತು ಅಲ್ಪಸಂಖ್ಯಾತರಿಗೆ ಶಿಕ್ಷಣ, ಉದ್ಯೋಗ ಮತ್ತು ಆಡಳಿತ ರಂಗದಲ್ಲಿ ಪ್ರಾತಿನಿಧ್ಯ ಹೀಗೆ ಹಲವು ಹತ್ತು ಸುಧಾರಣೆಗಳನ್ನು ಕೈಗೊಂಡು ಅವುಗಳನ್ನು ಯಶಸ್ವಿಯಾಗಿ ಸಾಧಿಸಿದ ಕೀರ್ತಿಗೆ ನಾಲ್ವಡಿ ಕೃಷ್ಣರಾಜ ಒಡೆಯರು ಪಾತ್ರರಾಗಿದ್ದಾರೆ. ಸಾಮಾಜಿಕ ಅಸಮಾನತೆ, ಅನ್ಯಾಯ ಮೊದಲಾದ ಅಮಾನವೀಯ ಆಚರಣೆಗಳ ವಿರುದ್ಧ ತಾತ್ವಿಕವಾಗಿ ಹಾಗೂ ಶಾಶ್ವತ ಪರಿಹಾರಕ್ಕಾಗಿ ಹಲವು ದೃಢನಿರ್ಧಾರಗಳನ್ನು ಶಾಸನಬದ್ಧವಾಗಿ ಕೈಗೊಳ್ಳುವುದರ ಮೂಲಕ ನಾಲ್ವಡಿಯವರು ಹಿಂದುಳಿದ, ಅಲ್ಪಸಂಖ್ಯಾತ, ಕಾಯಸ್ಥ, ಸ್ತ್ರೀಯರು, ನಿಮ್ನವರ್ಗ, ಬುಡಕಟ್ಟು ಮುಂತಾದ ಶೋಷಿತ ಜನರ ಬದುಕಿಗೆ ಆಶಾಕಿರಣವಾಗಿದ್ದರು. ಅವರಲ್ಲಿದ್ದ ದೂರದೃಷ್ಟಿ, ಸರಳತನ, ಉದಾರ ಮನೋಭಾವ, ಪಾಶ್ಚಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ, ಹಿರಿಯರ ಮಾರ್ಗದರ್ಶನ, ಸಹವರ್ತಿಗಳ ಪ್ರೇರಣೆ, ಪರಂಪರೆಗಳ ಪಾಲನೆ ಮುತ್ಸದ್ಧಿ ದಿವಾನರ ಸಹಕಾರ ಮುಂತಾದ ಅಂಶಗಳಿಂದ ತಮ್ಮ ಯೋಜಿತ ಗುರಿಯನ್ನು ಸಾಧಿಸಲು ಸಾಧ್ಯವಾಯಿತು.



## ಗ್ರಂಥ ಋಣ


೧. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ೧೯೦೫, ಪು. ೫೫.

೨. ರಿಪೋರ್ಟ್ ಆಫ್ ದಿ ಕಮಿಟಿ ಟು ದಿ ಗವರ್ನಮೆಂಟ್ ಆನ್ ದಿ ಪ್ರಾಬ್ಲಮ್ಸ್ ಆಫ್ ಎಲಿಮೆಂಟರಿ ಎಜುಕೇಷನ್, ೧೯೧೧-೧೨, ಪು. ೬.

೩. ಸ್ಪೀಚಸ್ ಬೈ ಹಿಸ್ ಹೈನಸ್; ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹಾದೂರ್, ೧೯೦೨-೧೯೩೩, ಮೈಸೂರ್ ಗವರ್ನ್‌ಮೆಂಟ್, ಮೈಸೂರು, ೧೯೩೪, ಪು. ೧೦೭.

೪. ದಿ ಮೈಸೂರ್ ಬ್ಲೂಬುಕ್ ಜರ್ನಲ್ (೧೯೧೮-೧೯), ಸಂ.೩, ಸಂಖ್ಯೆ ೪, ಪು. ೫೯.

೫. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್, ೧೯೪೦. ಪು. ೪೪.

೬. ರಿಪೋರ್ಟ್ ಆನ್ ದಿ ಕಮಿಟಿ ಫಾರ್ ಎಜುಕೇಷನಲ್ ರಿಫಾರ್ಮ್ ಇನ್‌ಮೈಸೂರ್, ಪು. ೨೧-೨೨.



# ವಸಾಹತುಷಾಹಿ ಚಿಕ್ಕಮಗಳೂರು ಜಿಲ್ಲೆಯ ಸಾರಿಗೆ ಮತ್ತು ಸಂಪರ್ಕದ ಅಭಿವೃದ್ಧಿಯಲ್ಲಿ ಮೈಸೂರು ಒಡೆಯರು ಮತ್ತು ಬ್ರಿಟಿಷರ ಪಾತ್ರ

ರವಿರಾಜ್.ಬಿ.ವಿ.*

## ಪೀಠಿಕೆ

ಟಿಪ್ಪುವಿನ ಪತನದ ನಂತರ ಚಿಕ್ಕಮಗಳೂರು ಜಿಲ್ಲೆಯು ಬ್ರಿಟಿಷರ ಹಾಗೂ ಮೈಸೂರು ಒಡೆಯರುಗಳ ಆಳ್ವಿಕೆಗೆ ಒಳಪಟ್ಟ ಜಿಲ್ಲೆಯಾಗಿದೆ. ೧೯ನೇ ಶತಮಾನದ ಆರಂಭದಿಂದ ೧೯೪೭ರವರೆಗೂ ಜಿಲ್ಲೆಯು ನಾನಾ ರೀತಿಯಲ್ಲಿ ಬ್ರಿಟಿಷರು ಹಾಗೂ ಒಡೆಯರುಗಳ ಆಡಳಿತ ವ್ಯಾಪ್ತಿಗೆ ಒಳಪಟ್ಟು ನಾನಾ ಬದಲಾವಣೆಯನ್ನು ಕಂಡಿತು. ಅವುಗಳಲ್ಲಿ ಸಾರಿಗೆ ಮತ್ತು ಸಂಪರ್ಕವೂ ಒಂದು. ನಿಸರ್ಗದತ್ತವಾಗಿದ್ದ ಜಿಲ್ಲೆಯ ಸಂಪತ್ತು ಐರೋಪ್ಯ ಬಂಡವಾಳದಾರರನ್ನು ಆಕರ್ಷಿಸಿತು, ಅದಕ್ಕಾಗಿ ಅವರುಗಳು ಆಡಳಿತದಲ್ಲಿ ಮಾರ್ಪಾಡುಗಳನ್ನು ತಂದು ಜಿಲ್ಲೆಯ ಅಭಿವೃದ್ಧಿಗಾಗಿ ಕ್ರಮಗಳನ್ನು ಕೈಗೊಂಡರಲ್ಲದೆ, ಜಿಲ್ಲೆಯನ್ನು ಆಭಿವೃದ್ಧಿ ಪಥದತ್ತ ಸಾಗಿಸಲು ನೆರವಾಗಿ ತಮ್ಮ ವಾಣಿಜ್ಯ ಹಿತಾಸಕ್ತಿಯನ್ನು ಪೂರೈಸಿಕೊಂಡರು. ವಸಾಹತು ಷಾಹಿಗಳು ಆರಂಭದಲ್ಲಿ ಜಿಲ್ಲೆಯ ನಾನಾ ಭಾಗಗಳಿಗೆ ರಸ್ತೆ ಸಂಪರ್ಕ ಹಾಗೂ ಸೇತುವೆಗಳ ನಿರ್ಮಾಣ ಕಾರ್ಯಗಳನ್ನು ಒಡೆಯರುಗಳ ಸಹಕಾರದೊಂದಿಗೆ ಆರಂಭಿಸಿದರು. ಇದರಿಂದಾಗಿ ಜಿಲ್ಲೆಯಾದ್ಯಂತ ಸುವ್ಯವಸ್ಥಿತವಾದ ರಸ್ತೆ ಸಂಪರ್ಕಗಳು ಏರ್ಪಟ್ಟು ರಾಜ್ಯದ ವಿವಿಧ ಜಿಲ್ಲೆಗಳಿಗೂ ಸಂಪರ್ಕವನ್ನು ಕಲ್ಪಿಸುವ ರಸ್ತೆ ಹಾಗೂ ರೈಲ್ವೇ ಮಾರ್ಗಗಳು ನಿರ್ಮಾಣಗೊಂಡವು, ಇದರಿಂದಾಗಿ ಕ್ರಮೇಣ ಜಿಲ್ಲೆಯು ಬಾಹ್ಯ ಪ್ರಪಂಚಕ್ಕೆ ತೆರೆದುಕೊಳ್ಳಲು ಸಾಧ್ಯವಾಯಿತು.

ಚಿಕ್ಕಮಗಳೂರು ಜಿಲ್ಲೆಯು ಹೆಚ್ಚಾಗಿ ಬೆಟ್ಟಗುಡ್ಡಗಳಿಂದ ಆವೃತವಾಗಿದ್ದು, ಸಂಪದ್ಭರಿತವಾದ ಮಲೆನಾಡಿನ ಜಿಲ್ಲೆಯಾಗಿದೆ ವಸಾಹತುಷಾಹಿ ಆಡಳಿತಾವಧಿಯಲ್ಲಿ ಜಿಲ್ಲೆಯಿಂದ ರಾಜ್ಯದ ವಿವಿಧ ಜಿಲ್ಲೆಗಳಿಗೆ ಸಂಪರ್ಕವನ್ನು ಕಲ್ಪಿಸುವ ವ್ಯವಸ್ಥಿತವಾದ ಗುಣಮಟ್ಟದ ರಸ್ತೆ ಮಾರ್ಗಗಳಿರಲಿಲ್ಲ, ಹೆಚ್ಚಾಗಿ ಮಣ್ಣಿನ (ಕಚ್ಚಾ) ರಸ್ತೆಯ ಮೂಲಕವೇ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ಜಿಲ್ಲೆಯು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ನಂತರ ಹೆಚ್ಚು ಲಾಭವನ್ನು ಗಳಿಸುವುದಕ್ಕಾಗಿ ಜಿಲ್ಲೆಯಲ್ಲಿ ತೋಟಗಾರಿಕಾ ಬೆಳೆಗಳಾದ ಕಾಫಿ, ಚಹಾ ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಪ್ರಕ್ರಿಯೆಗಳನ್ನು ಆರಂಭಿಸಿದರು. ದಟ್ಟ ಅರಣ್ಯಗಳಿಂದ ಆವೃತವಾಗಿದ್ದ ಜಿಲ್ಲೆಯ ವಿವಿಧ ಭಾಗಗಳನ್ನು ತೆರವುಗೊಳಿಸಿ ವಾಣಿಜ್ಯ ಬೆಳೆಗಳಾದ ಕಾಫಿ, ಚಹಾ ಮುಂತಾದ ಬೆಳೆಗಳನ್ನು ಬೆಳೆಯುವ ಪ್ರದೇಶವನ್ನಾಗಿ ಮಾರ್ಪಡಿಸುವ ವೃತ್ತಿಯಲ್ಲಿ ಐರೋಪ್ಯ ಬಂಡವಾಳದಾರರು ತೊಡಗಿಕೊಂಡರು. ಇದರಿಂದಾಗಿ ಜಿಲ್ಲೆಯಲ್ಲಿ ನಿಸರ್ಗದತ್ತವಾಗಿದ್ದ ಸಾವಿರಾರು ಎಕರೆಗಳಷ್ಟು ಅರಣ್ಯ ಪ್ರದೇಶಗಳು ಕಾಫಿ, ಚಹಾ, ಸಿಂಕೋನಾ ಮುಂತಾದ ಬೆಳೆಯುವ ತೋಟಗಳಾದವು.

ಪಶ್ಚಿಮ ಘಟ್ಟದ ಪಶ್ಚಿಮ ಗಡಿಯಲ್ಲಿರುವ ಚಿಕ್ಕಮಗಳೂರು ಜಿಲ್ಲೆಯು ಮಲೆನಾಡಿನ ಜಿಲ್ಲೆಯಾಗಿದ್ದು ಕಡಿದಾದ ಬೆಟ್ಟಗುಡ್ಡಗಳು, ಏರುತಗ್ಗುಗಳಿಂದ ಕೂಡಿದ ಅಪಾರ ನೈಸರ್ಗಿಕ ಸಂಪತ್ತು, ಕಣಿವೆ, ನದಿ, ಮೈದಾನಗಳನ್ನು ಹೊಂದಿರುವ ಜಿಲ್ಲೆಯಾಗಿದೆ. ೧೮೩೪-೧೮೬೧ರವರೆಗೆ ರಾಜ್ಯದಲ್ಲಿ ಕಮಿಷನರನಾದ ಮಾರ್ಕ್ ಕಬ್ಬನ್‌ನ ಆಡಳಿತಾ ವಧಿಯಲ್ಲಿ ರಸ್ತೆಗಳನ್ನು ೩ ವಿಧಗಳಾಗಿ ವಿಂಗಡಿಸಲಾಗಿತ್ತು. ಇಂಪೀರಿಯಲ್ (ಚಕ್ರಾಧಿಪಥ್ಯದ) ರಸ್ತೆಗಳು, ಪ್ರಾಂತೀಯ ಮತ್ತು ಜಿಲ್ಲಾ ರಸ್ತೆಗಳೆಂದು. ಜಿಲ್ಲೆಯಲ್ಲಿ ಜಿಲ್ಲಾ ಬೋರ್ಡುಗಳು ಅಸ್ತಿತ್ವಕ್ಕೆ ಬಂದ ನಂತರ ಜಿಲ್ಲೆಯ ಉಸ್ತುವಾರಿ ಜವಾಬ್ದಾರಿಯು ಸ್ಥಳೀಯ ಸರ್ಕಾರದ ಹತೋಟಿಗೆ ಬಂದಿತು. ಜಿಲ್ಲೆಯ ಹಲವಾರು ರಸ್ತೆಗಳು ತೀರಾ ಕಡಿದಾದ ಸ್ಥಳಗಳಲ್ಲಿ ಹಾದು ತಾಲೂಕಿನ ಮುಖ್ಯ ಕಛೇರಿಯನ್ನು ಸಂಪರ್ಕಿಸುತ್ತಿದ್ದವು. ಇಂತಹ ರಸ್ತೆಗಳನ್ನು ಸುಧಾರಿಸಲು ತಾಲೂಕು ಬೋರ್ಡುಗಳು ಮತ್ತು ಮುನ್ಸಿಪಾಲಿಟಿಗಳು ಸಂಗ್ರಹಿಸಿದ ಹಣವನ್ನು ಬಳಸಿ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ-೫೭೪೧೯೯.

ಸಂವಹನಕ್ಕಾಗಿ ಸಾರಿಗೆ ಸಂಪರ್ಕವನ್ನು ಅಭಿವೃದ್ಧಿಗೊಳಿಸುವ ಯೋಜನೆಗಳನ್ನು ಜಾರಿಗೆ ತಂದಿತು. ಹೆಚ್ಚಾಗಿ ಘಟ್ಟರಸ್ತೆಗಳು ಸಾಮಾನ್ಯ ವಾಹನಗಳು ಓಡಾಡುವಷ್ಟು ವಿಸ್ತಾರ ವಿದ್ದು ಎಲ್ಲಾ ಹವಾಮಾನದಲ್ಲೂ ಸಂವಹನಕ್ಕಾಗಿ ಈ ರಸ್ತೆಗಳನ್ನೇ ಅವಲಂಬಿಸಬೇಕಿತ್ತು. ೧೮೮೧ರಲ್ಲಿ ರಾಜ್ಯದ ಅಧಿಕಾರವು ಒಡೆಯರ್ ವಂಶಕ್ಕೆ ಪುನರ್ ಹಸ್ತಾಂತರವಾದ ನಂತರ ಬಾಬಾಬುಡನ್ ಬೆಟ್ಟ ಪ್ರದೇಶಗಳವರೆಗೆ ಸುಮಾರು ೭೨ ಕಿ.ಮಿ.ಗಳಷ್ಟು ಉದ್ದದ ರಸ್ತೆ ನಿರ್ಮಾಣವಾಯಿತು. ಬಾಳೆಹೊನ್ನೂರಿನಿಂದ ಜಿಲ್ಲಾ ಕೇಂದ್ರಕ್ಕೆ ಸಂಪರ್ಕವನ್ನು ಕಲ್ಪಿಸುವ ಉದ್ದೇಶದಿಂದ ಭದ್ರಾನದಿಗೆ ಅಡ್ಡಲಾಗಿ ಸೇತುವೆಯ ನಿರ್ಮಾಣ ಮಾಡಲಾಯಿತು. ಹಾಗೆಯೇ ಹರಿಹರಪುರದಲ್ಲಿ ತುಂಗಾ ನದಿಗೆ ಅಡ್ಡಲಾಗಿ ಸೇತುವೆಯ ನಿರ್ಮಾಣವಾಯಿತು. ಇದರಿಂದಾಗಿ ಜಿಲ್ಲೆಯ ನಾನಾ ಭಾಗಗಳಿಗೆ ಸುಲಭವಾಗಿ ರಸ್ತೆ ಸಂಪರ್ಕಗಳು ಏರ್ಪಟ್ಟವು. ಇದರಿಂದಾಗಿ ವ್ಯಾಪಾರ ವಹಿವಾಟುಗಳಿಗೆ ಅನುಕೂಲವಾಯಿತಲ್ಲದೆ, ಜನರಿಗೆ ಮುಕ್ತವಾಗಿ ಜಿಲ್ಲೆಯ ನಾನಾ ಭಾಗಗಳಿಗೆ ಸಂಪರ್ಕಿಸಲು ಸಾಧ್ಯವಾಯಿತು. ಆನಂತರ, ೧೮೮೦–೧೯೦೧ರವರೆಗೆ ಸುಮಾರು ೬೮೩ ಕಿ.ಮಿ.ಗಳಷ್ಟು ಪ್ರಾಂತೀಯ ರಸ್ತೆಗಳ ನಿರ್ಮಾಣವಾದವು.[೧]

ಕಾಫಿ ಬೆಳೆಯುವ ಪ್ರದೇಶವಾದ ಜಿಲ್ಲೆಯ ರಸ್ತೆಗಳ ಗುಣಮಟ್ಟವು ಕಳಪೆ ಮಟ್ಟದಲ್ಲಿತ್ತೆಂದು ದಿಗ್ಬಿ ಬ್ರೆಟ್ (ಉತ್ತರ ಮೈಸೂರು ಪ್ಲಾಂಟರ್ಸ್ ಅಸೋಸಿಯೇಷನ್) ಅಭಿಪ್ರಾಯ ಪಡುತ್ತಾನೆ. ಈತನು ಜಿಲ್ಲೆಯಾದ್ಯಂತ ಸುಮಾರು ೨೫೦ ಕಿ.ಮಿ. ವರೆಗೆ ಸಂಚರಿಸಿ ಆಲ್ದೂರು ಘಟ್ಟ ರಸ್ತೆಯು ತಡೆಗೋಡೆ ರಹಿತವಾಗಿದ್ದು ಮಳೆಗಾಲದಲ್ಲಿ ನೀರು ರಸ್ತೆಯ ಮೇಲೆಯೇ ಹರಿಯುತ್ತಿತ್ತು, ಅಲ್ಲಲ್ಲಿ ರಸ್ತೆಗಳಲ್ಲಿ ಮರಳು ಮತ್ತು ಹೂಳು ಗಳಿಂದ ತುಂಬಿಕೊಳ್ಳುತ್ತಿತ್ತು, ಹಾಗೆಯೇ ಕೊಪ್ಪ–ತರೀಕೆರೆ ರಸ್ತೆಗಳಲ್ಲಿಯೂ ಸಂಚರಿಸಿ ಇಲ್ಲಿನ ಮುಖ್ಯರಸ್ತೆಗಳು ಸಂಚಾರ ಯೋಗ್ಯವಾಗಿದ್ದವು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಜಿಲ್ಲೆಯ ಕಾಫಿ ಪ್ಲಾಂಟರರಾದ ಶ್ರೀನಿವಾಸ ರಾವ್‌ರವರು ತಿಳಿಸುವಂತೆ ಜಿಲ್ಲೆಯ ರಸ್ತೆಗಳು ಉತ್ತಮ ರಸ್ತೆಗಳೇ ಆಗಿದ್ದವು ಆದರೆ ಇತ್ತೀಚಿನ ಕೆಲ ವರ್ಷಗಳಲ್ಲಿ ದುರ್ಬಲ ಸ್ಥಿತಿಗೆ ಬಂದಿವೆ ಎನ್ನುತ್ತಾರೆ.[೨] ಕಾಫಿ ಎಸ್ಟೇಟುಗಳಿಗೆ ಮಾರ್ಗಗಳನ್ನು ಕಲ್ಪಿಸುವ ಬೀರೂರು–ಲಿಂಗದಹಳ್ಳಿಯಿಂದ ಕತ್ತಲೆಖಾನ್‌ವರೆಗೆ ರಸ್ತೆಯು ತೀರಾ ಅವಶ್ಯಕತೆ ಇದ್ದುದರಿಂದ ಸಂಚಾರಕ್ಕೆ ಯೋಗ್ಯವಾಗಿರಲಿಲ್ಲ. ಆದುದರಿಂದ, ಈ ಭಾಗಗಳ ರಸ್ತೆಗಳನ್ನು ಸಂಚಾರ ಯೋಗ್ಯ ರಸ್ತೆಗಳನ್ನಾಗಿ ನಿರ್ಮಾಣ ಮಾಡುವಂತೆ ಆಗ್ರಹಿಸಲಾಗುತ್ತದೆ. ಅದಕ್ಕಾಗಿ ದಿವಾನರು ಸ್ಥಳೀಯ ನಿಧಿಯಿಂದ ರಸ್ತೆಗಳ ನಿರ್ಮಾಣ ಮಾಡುವುದರ ಕುರಿತು ತೀರ್ಮಾನಿಸಲಾಗುವುದೆಂದು ಒಪ್ಪಿಗೆಯನ್ನು ಸೂಚಿಸು ತ್ತಾರೆ.[೩]

೧೮೯೫ರಲ್ಲಿ ರಾಜ್ಯದ ಆದಾಯದಲ್ಲಿ ಏರಿಕೆಯಾದುದ ರಿಂದ ಸ್ಥಳೀಯ ನಿಧಿಯು ೬೭³/₄ ಲಕ್ಷದಷ್ಟು ಏರಿಕೆಯಾಗಿ ಸಾರಿಗೆ ಮತ್ತು ಸಂಪರ್ಕದ ಅಭಿವೃದ್ಧಿಗಾಗಿ ಆ ಹಣವನ್ನು ಬಳಸಲಾಯಿತು. ೪೯೩೦ ಮೈಲುಗಳಷ್ಟಿದ್ದ ರಸ್ತೆಗಳನ್ನು ೫,೧೦೭ ಮೈಲುಗಳಿಗೆ ವಿಸ್ತರಣೆ ಮಾಡುವ ಯೋಜನೆಗಳನ್ನು ಜಾರಿಗೆ ತರಲಾಯಿತು. ಅದರಲ್ಲೂ ಮಲೆನಾಡಿಗೆ ವಿಶೇಷ ನಿಧಿ ೬,೯೭,೦೦೦ ಲಕ್ಷದಷ್ಟು ಕಾಫಿ ಕೃಷಿಗಳು ನಡೆಯುತ್ತಿದ್ದ ಭಾಗಗಳಿಗೆ ಹಾಗೂ ೩,೭೨,೦೦೦ ಲಕ್ಷದಿಂದ ೬,೯೭,೦೦೦ ಲಕ್ಷದಷ್ಟು ಇತರೆ ಭಾಗಗಳಿಗೆ ಶೇಷಾದ್ರಿ ಐಯ್ಯರ್‌ರವರು ದಿವಾನರಾಗಿದ್ದ ಸಂದರ್ಭದಲ್ಲಿ ಮೀಸಲಿರಿಸಲಾಯಿತು.[೪] ಹಾಗೆಯೇ ಮೂಡಿಗೆರೆಯಿಂದ ಬೇಲೂರಿಗೆ ಹೋಗುವ ಮಾರ್ಗದ ಬೀಜನಹಳ್ಳಿ ಬಳಿ ಸೇತುವೆಯ ನಿರ್ಮಾಣ ಮಾಡಲಾಯಿತಲ್ಲದೆ, ಕಳಸದಿಂದ ಕೊಪ್ಪ ತಾಲೂಕಿನ ಮೇಗುಂದಾದವರೆಗೂ ರಸ್ತೆ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಲಾಯಿತು. ಅಲ್ಲದೆ, ಜಿಲ್ಲಾ ಹಣಕಾಸು ನಿಧಿಯಿಂದ ಇನ್ನೊಂದು ರಸ್ತೆಯನ್ನು ಕಳಸದಿಂದ ಬಂಗಾಡಿ ವರೆಗೆ ನಿರ್ಮಾಣ ಮಾಡಲಾಯಿತು. ಚಿಕ್ಕಮಗಳೂರು–ಎಡೆಹಳ್ಳಿ ಮತ್ತು ಕಳಸ–ಕೊಟ್ಟಿಗೆಹಾರದವರೆಗಿನ ರಸ್ತೆ ದುರಸ್ತಿಗಾಗಿ ಹಣಕಾಸನ್ನು ಬಿಡುಗಡೆಗೊಳಿಸಲಾಯಿತು.[೫] ತರೀಕೆರೆ–ದಳವಾಯಿಕೆರೆಯವರೆಗೆ ಅತ್ತಿಗಾನಲ್ ಶಾಮಣ್ಣ, ಶ್ರೀ. ನಂದಿ ಮತ್ತು ಅಬ್ದುಲ್ ಖಾದರ್ ಮುಂತಾದವರು ಕಾಫಿ ಎಸ್ಟೇಟುಗಳಿಗೆ ಸರ್ಕಾರಿ ಅರಣ್ಯ ಪ್ರದೇಶದಲ್ಲಿ ರಸ್ತೆ ನಿರ್ಮಾಣಕ್ಕಾಗಿ ರೂ. ೧೦೦೦ವನ್ನು ಮೀಸಲಿರಿಸಿದರು. ಇದರ ಪರಿಣಾಮವಾಗಿ ರಸ್ತೆ ನಿರ್ಮಾಣ ಕಾರ್ಯಗಳು ಪೂರ್ಣಗೊಂಡು ಈ ಭಾಗದ ಟಿಂಬರ್ ಮತ್ತು ಕಾಫಿಯನ್ನು ಈ ರಸ್ತೆಗಳ ಮೂಲಕ ಮಾರುಕಟ್ಟೆಗೆ ಸಾಗಿಸಲು ಅನುಕೂಲ ವಾಯಿತು.[೬]

೧೮೯೬ರ ಅವಧಿಯಲ್ಲಿ ಕಡೂರಿನಿಂದ ಚಿಕ್ಕಮಗಳೂರು ಮಾರ್ಗವಾಗಿ ಬೇಲೂರು, ಹಾಸನಕ್ಕೆ ರೈಲ್ವೇ ಹಳಿಯನ್ನು ಸೇರಿಸಬೇಕು ಇದರಿಂದ ಸಂಸ್ಥಾನದಲ್ಲಿ ಧಾನ್ಯ ಬೆಳೆಯುವ ವಿಸ್ತಾರವಾದ ಪ್ರದೇಶಗಳಿಗೆ ಆಮದು ರಫ್ತು ಸುಲಭವಾಗುತ್ತದೆ ಎಂಬ ಬೇಡಿಕೆಯನ್ನಿಡಲಾಯಿತು. ಏಕೆಂದರೆ ಕಡೂರು–ಚಿಕ್ಕಮಗಳೂರು ನಡುವೆ ವ್ಯಾಪಾರಕ್ಕೆ ವಾಹನಗಳ ಬಾಡಿಗೆ ವೆಚ್ಚವೇ ೧,೨೦,೦೦೦ ರೂ. ಗಳಾಗುತ್ತಿತ್ತು, ಆದುದರಿಂದ ರೈಲ್ವೇ ಹಳಿಯನ್ನು ವಿಸ್ತರಿಸುವುದರಿಂದ ಸುಲಭವಾಗಿ ಸಾಗಾಟ ನಡೆಸಲು ಸಾಧ್ಯವಾಗುತ್ತದೆ ಎಂಬ ಚರ್ಚೆಗಳು ನಡೆಯುತ್ತವೆ. ಆಗ ಸರ್ಕಾರವು ಪ್ಲಾಂಟರ್ಸ್ ಸಭೆಯ ವಿಲ್ಲಿಂಗ್‌ಟರ್ನ್ ಸಾಹೇಬರು

ಆಮದು ರಫ್ತುಗಳನ್ನು ಪರಿಶೀಲಿಸಿ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದಾಗಿ ಭರವಸೆಯನ್ನು ನೀಡಿದರು. ಈ ಅವಧಿಯಲ್ಲಿ ಮಲೆನಾಡಿನ ರಸ್ತೆಗಳು ಸೇತುವೆ ನಿರ್ಮಾಣ ಕಾರ್ಯಗಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ನಂತರ, ಶಿವಮೊಗ್ಗ ರೈಲ್ವೇಯನ್ನು ತರಿಕೆರೆ, ಬೀರೂರಿನವರೆಗೂ ವಿಸ್ತರಿಸಿ ಜಿಲ್ಲೆಗೆ ರೈಲು ಸಂಪರ್ಕವೇರ್ಪಡಲು ಸಾಧ್ಯವಾಯಿತು. ಇದರಿಂದಾಗಿ, ಶೃಂಗೇರಿ, ಕೊಪ್ಪ ತಾಲೂಕುಗಳಿಗೆ ಆಹಾರ ಪದಾರ್ಥಗಳ ಸರಬರಾಜಿಗೆ ಅನುಕೂಲವಾಗುವುದೆಂದು ತೀರ್ಮಾನಿಸಲಾಯಿತು.[೭] ಬೀರೂರು ಶಿವಮೊಗ್ಗ ರೈಲ್ವೇ ನಿರ್ಮಾಣ ಯೋಜನೆಗಳು ೧೮೮೮ರಲ್ಲಿ ಆರಂಭವಾಗುತ್ತದೆ, ೨೨,೯೪,೪೫೭ ರೂ. ವೆಚ್ಚದಲ್ಲಿ ಆರಂಭವಾಗಿ ೧೮೯೬ರ ಅವಧಿಗೆ ರೈಲ್ವೇ ಸಾರಿಗೆಯು ಜಿಲ್ಲೆಗೆ ಪ್ರಾಪ್ತವಾಯಿತು.[೮] ವ್ಯಾಪಾರ ವಹಿವಾಟಿನ ಉದ್ದೇಶದಿಂದ ೧೯೧೫ರಲ್ಲಿ ತರೀಕೆರೆ– ಲಕ್ಕವಳ್ಳಿವರೆಗೆ ರೈಲು ಹಳಿಯನ್ನು ಹಾಕಲಾಯಿತು. ನರಸಿಂಹ ರಾಜಪುರ (ಎಡೆಹಳ್ಳಿ)ಗೆ ೧೯೧೭ರಲ್ಲಿ ರೈಲ್ವೇ ನಿರ್ಮಾಣ ಕಾರ್ಯವಾಯಿತು. ಆದರೆ ೧೯೪೮ರಲ್ಲಿ ಲಕ್ಕವಳ್ಳಿ ಬಳಿ ಭದ್ರಾ ಜಲಾಶಯ ನಿರ್ಮಾಣವಾದುದರಿಂದ ನರಸಿಂಹ ರಾಜಪುರಕ್ಕೆ ಕಲ್ಪಿಸಿದ್ದ ರೈಲು ಸಾರಿಗೆಯನ್ನು ಸ್ಥಗಿತಗೊಳಿಸ ಲಾಯಿತು.[೯] ೧೯೨೬ರಲ್ಲಿ ಕಡೂರು–ಚಿಕ್ಕಮಗಳೂರು ರೈಲ್ವೇ ಲೈನನ್ನು ಉತ್ತಮಪಡಿಸಲಾಯಿತು ಇದರಿಂದಾಗಿ ವ್ಯಾಪಾರ ಚಟುವಟಿಕೆಗಳು ವೃದ್ಧಿಯಾದವು. ಹಾಗೆಯೇ ಜಿಲ್ಲೆಯಲ್ಲಿ ೧೯೦೭ರ ಅವಧಿಯಲ್ಲಿ ಶಿವಮೊಗ್ಗ–ಮಂಗಳೂರು ರಸ್ತೆಯನ್ನು ಅಭಿವೃದ್ಧಿಪಡಿಸಲಾಯಿತು. ಹಾಗೆಯೇ ಮಾಗುಂಡಿ ಬಳಿಯ ಭದ್ರಾ ನದಿಗೆ ಸೇತುವೆ ನಿರ್ಮಾಣವಾಯಿತು.[೧೦] ರೈಲ್ವೇ ಮಾತ್ರವಲ್ಲದೆ ಜಿಲ್ಲೆಗೆ ಅಗತ್ಯವಿದ್ದ ಅಂಚೆ ಸೌಲಭ್ಯವನ್ನು ೧೮೮೮ರಲ್ಲಿ ಉತ್ತಮಪಡಿಸುವ ಯೋಜನೆಗಳನ್ನು ಒಡೆಯರು ರೂಪಿಸಿದರು. ಅದರ ಫಲವಾಗಿ ೧೯೧೮ರಲ್ಲಿ ಜಿಲ್ಲೆಯಲ್ಲಿ ಅಂಚೆ ಕಛೇರಿಯು ಸ್ಥಾಪನೆಗೊಂಡು ಸಂವಹನಕ್ಕೆ ಅನುಕೂಲವಾಯಿತು.[೧೧]

ಜಿಲ್ಲೆಯ ಸಾರ್ವಜನಿಕ ವಲಯಗಳಲ್ಲಿದ್ದ ಚರಂಡಿ ವ್ಯವಸ್ಥೆಯ ಬಗ್ಗೆ ನೋಡುವುದಾದರೆ, ಅದು ವ್ಯವಸ್ಥಿತವಾಗಿರಲಿಲ್ಲ, ಆದುದರಿಂದ ಅದನ್ನು ದುರಸ್ತಿಗೊಳಿಸುವಂತೆ ಜಿಲ್ಲೆಯ ಪ್ಲಾಂಟರರಾದ ಶ್ರೀನಿವಾಸರಾವ್‌ರವರು ತಮ್ಮ ನಿಲುವನ್ನು ಪ್ರಜಾಪ್ರತಿನಿಧಿ ಸಭೆಯಲ್ಲಿ ಮಂಡಿಸುತ್ತಾರೆ, ಅಲ್ಲದೆ ಜಿಲ್ಲೆಯ ಅಭಿವೃದ್ಧಿಗೆ ಅಗತ್ಯವಿದ್ದ ನೀರಿನ ಸರಬರಾಜನ್ನೂ ಮಾಡಬೇಕೆಂದು ಜಿಲ್ಲೆಯ ಪರವಾಗಿ ಮನವಿಯನ್ನು ಮಾಡಿಕೊಳ್ಳುತ್ತಾರೆ. ಇದಕ್ಕಾಗಿ ಮೈಸೂರಿನ ದಿವಾನರು ಪರಿಶೀಲಿಸಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗುವುದೆಂಬ ಆಶ್ವಾಸನೆಯನ್ನು ನೀಡುತ್ತಾರೆ. ನಂತರ ಚರಂಡಿ ವ್ಯವಸ್ಥೆಯನ್ನು ಉತ್ತಮಪಡಿಸಲಾಯಿತು.[೧೨]

ಜಿಲ್ಲೆಯ ತರೀಕೆರೆ ತಾಲೂಕಿನ ಲಿಂಗದಹಳ್ಳಿ ಭಾಗದ ರಸ್ತೆಗಳು ತೀರಾ ಹದಗೆಟ್ಟಿದ್ದವು. ಇಂತಹ ರಸ್ತೆಗಳನ್ನು ದುರಸ್ತಿಗೊಳಿಸಬೇಕೆಂಬ ಬೇಡಿಕೆಗಳು ಬರುತ್ತವೆ. ಅಲ್ಲದೆ, ಲಿಂಗದಹಳ್ಳಿಯ ರಸ್ತೆಯನ್ನು ಬೇಲೂರಿನವರೆಗೂ ವಿಸ್ತರಿಸಿ ಬೇಲೂರು ಲಿಂಗದಹಳ್ಳಿ ಈ ನಡುವಿನ ಅರಣ್ಯ ಭಾಗಗಳಲ್ಲಿ ತೋಟಗಾರಿಕೆಯಂತಹ ಕೃಷಿಯನ್ನು ಅಭಿವೃದ್ಧಿಪಡಿಸಬಹುದೆಂದು ಮಹಾರಾಜರಿಗೆ ಮೈಸೂರು ದೇಶೀಯ ಪ್ಲಾಂಟರುಗಳ ಸಂಘದಿಂದ ಮನವಿ ಮಾಡಿದರು. ಈ ಬೇಡಿಕೆಯನ್ನು ಪರಿಶೀಲಿಸಿ ಕ್ರಮ ಕೈಗೊಳ್ಳುವುದಾಗಿ ಮಹಾರಾಜರು ಭರವಸೆಯನ್ನು ನೀಡಿದರು.[೧೩] ಜಿಲ್ಲೆಯ ನರಸಿಂಹರಾಜಪುರಕ್ಕೆ ೧೮೮೨ರವರೆಗೂ 'ಯೆಡೆಹಳ್ಳಿ' ಎಂಬ ಹೆಸರಿದ್ದಿತು, ೧೯೧೫ರಲ್ಲಿ ಯುವರಾಜ ಕಂಠೀರವ ನರಸಿಂಹರಾಜ ಒಡೆಯರು ಈ ಭಾಗದ ಅಭಿವೃದ್ಧಿ ಕೆಲಸಕಾರ್ಯಗಳನ್ನು ಪರಿಶೀಲಿಸಲು ಭೇಟಿಕೊಟ್ಟರು ಅವರ ಆಗಮನದ ನೆನೆಪಿಗೆ ನರಸಿಂಹರಾಜಪುರವೆಂದು ನಾಮಕರಣ ಮಾಡಲಾಯಿತು.[೧೪]

ಬಾಬಬುಡನ್ ಪ್ಲಾಂಟರ್ಸ್ ಅಸೋಸಿಯೇಷನ್‌ನ ೧೨ನೇ ವಾರ್ಷಿಕ ಸಾಮಾನ್ಯ ಸಭೆಯು ಚಿಕ್ಕಮಗಳೂರಿನ ಕಡೂರು ಕ್ಲಬ್‌ನಲ್ಲಿ ೧೯೨೨ ಸೆಪ್ಟೆಂಬರ್ ೨೬ರಂದು ನಡೆಯುತ್ತದೆ, ಅದರ ಅಧ್ಯಕ್ಷತೆಯನ್ನು ಜಿ.ಆರ್. ಒಲಿವರ್ ವಹಿಸಿದ್ದು ಹಿಂದಿನ ವರ್ಷದಲ್ಲಿ ಬೆಳೆಯಲಾಗುತ್ತಿದ್ದ ಕಾಫಿಯ ಪ್ರಮಾಣದಲ್ಲಿ ಹೆಚ್ಚಳವುಂಟಾಗಿ ೧೯೨೧ರ ಅಂತಿಮ ಹಂತದಲ್ಲಿ ಅಸೋಸಿಯೇಷನ್ ೫೧೯೯ ಎಕರೆಗಳಷ್ಟು ವ್ಯಾಪ್ತಿಯ ಹೊಸ ೨೨ ಎಸ್ಟೇಟುಗಳನ್ನು ಸೇರಿಸಿತ್ತು. ಇದೇ ಅವಧಿಯಲ್ಲಿ ಉಪಾಸಿಯ ಸಾಮಾನ್ಯ ಸಭೆಯು ಬೆಂಗಳೂರಿನಲ್ಲಿ ನಡೆಯಿತು ಈ ಸಭೆಯಲ್ಲಿ ಉಪಾಸಿಯ ಗೊಡ್‌ಫ್ರೇ ಕೆಳಕಂಡ ನಿಯಮಗಳನ್ನು ಜಿಲ್ಲೆಗೆ ಸಂಬಂಧಿಸಿದಂತೆ ಹೊರಡಿಸಿದನು; ಅವುಗಳೆಂದರೆ ಕಣಿವೆ, ಹಳ್ಳಗಳಿರುವ ವ್ಯಾಪ್ತಿಯಲ್ಲಿ ೫೦ ಯಾರ್ಡುಗಳಷ್ಟು ಪ್ರದೇಶವನ್ನು ಬಿಟ್ಟು ಉಳಿದ ಭಾಗಗಳನ್ನು ಕೃಷಿಗೆ ಒಳಪಡಿಸುವುದು, ಮಂಗಳೂರು ಮತ್ತು ಮೈಸೂರಿನ ಸುತ್ತಲಿನ ರಸ್ತೆ ಸಾರಿಗೆಯನ್ನು ಅಭಿವೃದ್ಧಿಪಡಿಸಿ ಮಲೆನಾಡಿನ ರಸ್ತೆ ವ್ಯವಸ್ಥೆಯನ್ನೂ ಸುಧಾರಿಸುವ ಯೋಜನೆಗಳನ್ನು ಹೊರಡಿಸಿದನು.[೧೫] ಮಹಾರಾಜ ಕೃಷ್ಣರಾಜ ಒಡೆಯರ್‌ರವರ ಸಲಹೆಯ ಮೇರೆಗೆ ಜಿಲ್ಲೆಯ ಮೂಡಿಗೆರೆ ತಾಲೂಕಿನ ಕೆಳಗೂರು ಎಂಬಲ್ಲಿರುವ ಚಹಾ ಎಸ್ಟೇಟು ೧೯೩೦ರಲ್ಲಿ ಅಸ್ತಿತ್ವಕ್ಕೆ ಬರುತ್ತದೆ. ಮೈಸೂರಿನ ಕೃಷ್ಣರಾಜೇಂದ್ರ ಒಡೆಯರ್‌ರವರಿಂದ "ದಿವಾನ್ ಬಹದ್ದೂರ್" ಪ್ರಶಸ್ತಿಯನ್ನು ಪಡೆದಿದ್ದ ಕೆಳಗೂರು ಮಥಾಯ್ಸ್ ಈ ತೋಟವನ್ನು ಮಾಡಿದ್ದರು. ಈ ತೋಟವನ್ನು ಅರಂಬಿಸಿ ಉತ್ತಮ ಬೆಳೆಗಳನ್ನು ಪಡೆಯಲಾಯಿತು. ೨೦೦೫ರಲ್ಲಿ ಈ

ತೋಟಕ್ಕೆ ಅಂತರಾಷ್ಟ್ರೀಯ ಪ್ರಶಸ್ತಿ ಬಂದಿದೆ.[೧೬] ಹೀಗೆ ಹಂತ ಹಂತವಾಗಿ ಮೈಸೂರು ಒಡೆಯರ ಹಾಗೂ ಬ್ರಿಟಿಷರ ಆಡಳಿತಕ್ಕೊಳಪಟ್ಟ ಚಿಕ್ಕಮಗಳೂರು ಜಿಲ್ಲೆಯು ಹಲವಾರು ಬದಲಾವಣೆಗಳನ್ನು ಕಂಡಿತು.

ಟಿಪ್ಪುವಿನ ಪತನದ ನಂತರ ಮೈಸೂರು ರಾಜ್ಯದ ವ್ಯಾಪ್ತಿಗೆ ಒಳಪಟ್ಟ ಚಿಕ್ಕಮಗಳೂರು ಜಿಲ್ಲೆಯು ಹಂತ ಹಂತವಾಗಿ ಮೈಸೂರು ಮಹಾರಾಜರ ಹಾಗೂ ಬ್ರಿಟಿಷರ ಆಡಳಿತ ವ್ಯಾಪ್ತಿಗೆ ಒಳಪಟ್ಟು ಹಲವಾರು ಬದಲಾವಣೆಗಳನ್ನು ಕಂಡಿತಲ್ಲದೆ, ೧೮೩೦ರ ನಂತರ ಯುರೋಪಿಯನ್ನರು ಒಡೆಯರ ಹಾಗೂ ಸ್ಥಳೀಯರ ಸಹಕಾರವನ್ನು ಪಡೆದು ವಾಣಿಜ್ಯ ಬೆಳೆಗಳನ್ನು ಬೆಳೆಯುವ ಚಟುವಟಿಕೆಗಳಲ್ಲಿ ತೊಡಗಿಕೊಂಡರಲ್ಲದೆ, ತಮ್ಮ ತೋಟದ ನಿರ್ವಹಣೆಗಾಗಿ, ವಾಣಿಜ್ಯ ಉದ್ದೇಶಗಳಿಗಾಗಿ, ರಸ್ತೆ ಸಾರಿಗೆಯನ್ನು ಸುಧಾರಿಸುವ ಕ್ರಮಗಳನ್ನೂ ಕೈಗೊಂಡರು. ಕ್ರಮೇಣ ಬೆಳೆದ ವಾಣಿಜ್ಯ ಬೆಳೆಗಳನ್ನು ಬಂದರುಗಳಿಗೆ, ಮಾರುಕಟ್ಟೆ ಕೇಂದ್ರಗಳಿಗೆ ಸಾಗಿಸಲು ಸುವ್ಯವಸ್ಥಿತ ರಸ್ತೆ ಹಾಗೂ ರೈಲ್ವೇ ಸಾರಿಗೆಯನ್ನು ಅಭಿವೃದ್ಧಿ ಪಡಿಸಿದರು. ಇದರ ಪರಿಣಾಮವಾಗಿ ಜನರಿಗೆ ಸಂಚರಿಸಲು ಅನುಕೂಲಕರವಾದ ರಸ್ತೆಗಳು, ಸೇತುವೆಗಳು ಹಾಗೂ ರೈಲ್ವೇ ವ್ಯವಸ್ಥೆಗಳು ಜಿಲ್ಲೆಗೆ ಪ್ರಾಪ್ತವಾಗಿ ಜಿಲ್ಲೆಯ ಸರ್ವಾಂಗೀಣ ಪ್ರಗತಿಗೆ ಅತ್ಯಮೂಲ್ಯ ಕೊಡುಗೆಯನ್ನು ನೀಡುತ್ತಾ ಬಂದಿದ್ದಾರೆ. ಇದರಿಂದಾಗಿ ಜಿಲ್ಲೆಯು ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕವಾಗಿ ಪ್ರಗತಿಯನ್ನು ಸಾಧಿಸಲು ಸಾಧ್ಯವಾಯಿತು.

## ಆಧಾರಸೂಚಿ


೧. Suryanath U Kamath, *Chikmagalur district Gazetteer*, Bangalore, p. 220.

೨. *Proceedings of the Assembly of Representative Raiyats and merchants from all taluks of the state of Mysore: October 1893*, Bangalore, 1894, 62.

೩. ibid, 64.

೪. *Proceedings of the Assembly of Representative Raiyats and merchants from all taluks of the state of Mysore: held at Mysore in October 1895*, Bangalore, 1896, p21.

೫. ibid, p. 43.

೬. *Proceedings of the Assembly of Representative Raiyats and merchants of the state of Mysore, 1897*, Bangalore, 1898, p.46.

೭. *ರೈತರು ಮತ್ತು ವರ್ತಕರು ಪ್ರತಿನಿಧಿಸಭೆಯ ಪ್ರೊಸೀಡಿಂಗ್ಸ್*, ೧೮೯೭, ಪು. ೪೬.

೮. ibid, p. 228.

೯. ibid, p.229.

೧೦. *ಮೈಸೂರು ಸೀಮೆಯ ಪ್ರಜಾಪ್ರತಿನಿಧಿಗಳಾದ ರೈತರು ಮತ್ತು ವರ್ತಕರು ಮೈಸೂರಿನಲ್ಲಿ ೧೯೦೭ನೇ ಇಸವಿಯ ಅಕ್ಟೋಬರ್ ತಿಂಗಳಲ್ಲಿ ಸಭೆ ಸೇರಿ ನಡೆಸಿದ ನಡವಳಿಕೆಗಳು*, ಬೆಂಗಳೂರು, ೧೯೦೮, ಪು.೧೪.

೧೧. ibid, p.230.

೧೨. ibid.p.92.

೧೩. ibid. p. 95.

೧೪. ಬಾ.ರಾ. ಗೋಪಾಲ್. *ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*, ಮೈಸೂರು, ೨೦೦೯, ಪು. ೨೭೯.

೧೫. *ಮೈಸೂರು ಸೀಮೆಯ ಪ್ರಜಾಪ್ರತಿನಿಧಿಗಳಾದ ರೈತರು ಮತ್ತು ವರ್ತಕರು ಮೈಸೂರಿನಲ್ಲಿ ೧೯೨೨ನೇ ಇಸವಿಯ ಅಕ್ಟೋಬರ್ ತಿಂಗಳಲ್ಲಿ ಸಭೆ ಸೇರಿ ನಡೆಸಿದ ನಡವಳಿಕೆಗಳು*, ಬೆಂಗಳೂರು, ೧೯೨೩, ಪು. ೨೨೯.

೧೬. ibid. p.394.




# ಸ್ವಾತಂತ್ರ್ಯ ಹೋರಾಟದಲ್ಲಿ ಕುರುಬರು

ಡಾ. ರಾಘವೇಂದ್ರನಾಯ್ಕ.ಎಸ್.ಡಿ.*

**ಜಾ**ಗತಿಕ ಚರಿತ್ರೆಯಲ್ಲಿ ಯಾವುದೇ ರಾಷ್ಟ್ರವು ಒಂದೇ ಬಾರಿಗೆ ಪ್ರವರ್ಧಮಾನಕ್ಕೆ ಬಂದಿಲ್ಲ. ಇದನ್ನು ಚರಿತ್ರೆ ಖಚಿತ ಪಡಿಸುತ್ತದೆ. ಅಲ್ಲಿನ ಭೌಗೋಳಿಕ ಪರಿಸ್ಥಿತಿ ಕೂಡ ರಾಷ್ಟ್ರದ ಮೇಲೆ ಪರಿಣಾಮ ಬೀರುತ್ತದೆ. ತನ್ನ ಮೂಲಭೂತ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದರ ಜೊತೆ ಆರ್ಥಿಕವಾಗಿ ಸದೃಢರಾಗಲು ಪ್ರಯತ್ನಿಸುತ್ತೇವೆ. ಕಾಲಕ್ರಮೇಣ ಪ್ರಬಲ ರಾಷ್ಟ್ರಗಳು ಬಲಹೀನ ರಾಷ್ಟ್ರಗಳ ಮೇಲೆ ಬಲ ಪ್ರಯೋಗ ಮತ್ತು ಹೆಜಿಮೋನಿ ಮುಖಾಂತರ ಒತ್ತಡ ತರುತ್ತವೆ. ಇಂತಹ ಪ್ರವೃತ್ತಿಗೆ ಯೂರೋಪಿನ ರಾಷ್ಟ್ರಗಳು ಮುಂಚೂಣಿಯಲ್ಲಿದ್ದವು. ಈ ಪ್ರಕ್ರಿಯೆಯು ರಾಷ್ಟ್ರ-ರಾಷ್ಟ್ರಗಳ ಮಧ್ಯೆ ನಡೆಯುತ್ತಿರುವ ಸಂದರ್ಭದಲ್ಲಿ ಹತೋಟಿ ಸಾಧಿಸಿದ ರಾಷ್ಟ್ರದ ವಿರುದ್ಧ ಹತೋಟಿಗೊಳಪಟ್ಟ ರಾಷ್ಟ್ರದ ಜನತೆ ಹೋರಾಟ ಮನೋಭಾವ ಬೆಳಸಿಕೊಳ್ಳುವುದು ಸಹಜ. ಭಾರತವು ಇದಕ್ಕೆ ಹೊರತಾಗಿರಲಿಲ್ಲ. ಬ್ರಿಟನ್ ಸೇರಿದಂತೆ ಯೂರೋಪಿನ ರಾಷ್ಟ್ರಗಳು ಭಾರತದ ಅರ್ಥಿಕ ಸಂಪನ್ಮೂಲವನ್ನು ತನ್ನ ಬೆಳವಣಿಗೆಗೆ ಉಪಯೋಗಿಸಿಕೊಳ್ಳುತ್ತಿದ್ದವು. ಜನತೆಯ ಆಶೋತ್ತರಗಳಿಗೆ ವಿರುದ್ಧವಾಗಿ, ಸ್ವತಂತ್ರ್ಯ ವಿಚಾರಗಳಿಗೆ ಅಡ್ಡಿಯಾಗಿದ್ದರು. ಇವೆಲ್ಲವುದರ ಪರಿಣಾಮವಾಗಿ ಭಾರತೀಯರು ಒಗ್ಗೂಡಿ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದರು. ಈ ಹಿನ್ನೆಲೆಯಲ್ಲಿ ಬ್ರಿಟಿಷರ ವಿರುದ್ಧ ಪ್ರತಿಭಟನೆ, ಹೋರಾಟ ಮಾಡಿ ಸ್ವಯಂ ಆಡಳಿತಕ್ಕಾಗಿ ಅನೇಕ ವರ್ಷಗಳ ಕಾಲ ಸಕ್ರಿಯವಾಗಿ ಸ್ವತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡರು. ಐರೋಪ್ಯರಲ್ಲಿ ಮುಖ್ಯವಾಗಿ ಬ್ರಿಟಿಷರು ಇಲ್ಲಿನ ವ್ಯವಸ್ಥೆಯೊಂದಿಗೆ ಬೆರತು ಹೋಗಿದ್ದರು. ೨೦ನೇ ಶತಮಾನದ ಮಧ್ಯಭಾಗದವರೆಗೂ ಕೂಡ ಭದ್ರವಾಗಿ ತಳವೂರಿದ್ದರು. ವಸಾಹತುಶಾಹಿ ನೀತಿಯ ಮುಂದುವರಿದ ಭಾಗಗಳಾದ ಉದಾರೀಕರಣ, ಜಾಗತಿಕರಣ ಮತ್ತು ಖಾಸಗಿಕರಣದ ಪರಿಣಾಮವಾಗಿ ೨೧ನೇ ಶತಮಾನದ ಈ ದಿನಗಳಲ್ಲಿ ಭಾರತದಂತಹ ರಾಷ್ಟ್ರಗಳನ್ನು ನಿಯಂತ್ರಿಸುವ, ಆಕ್ರಮಿಸುವ, ಹಿಡಿದಿಡುವ ಪರಿಸ್ಥಿತಿಗೆ ಬದಲಾಗಿದೆ. ಹೀಗಿರುವಾಗ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ಪ್ರಾಂತ್ಯಗಳು ಭಾಗವಹಿಸಿ ಹೋರಾಡಿವೆ. ಇದಕ್ಕೆ ಚರಿತ್ರೆಯಲ್ಲಿ ಸಾಕಷ್ಟು ವಿವರಗಳು ಸಿಗುತ್ತವೆ.

ಭಾರತವು ಸ್ವಾತಂತ್ರ್ಯ ಗಳಿಸುವಾಗ ಅನೇಕ ಸಮುದಾಯಗಳು ಹೋರಾಡಿವೆ, ಶ್ರಮಿಸಿವೆ, ಪ್ರಾಣತ್ಯಾಗವನ್ನು ಕೂಡ ಮಾಡಿವೆ. ಇದಕ್ಕೆ ಕುರುಬರ ಸಮುದಾಯಗಳು ಹೊರತಾಗಿರಲಿಲ್ಲ.

'ಸ್ವತಂತ್ರ್ಯ' ಎನ್ನುವ ಪದವನ್ನು ಗಮನಿಸಿದಾಗ ತನ್ನಿಚ್ಚೆಯಂತೆ ಇರುವುದು, ಬಂಧನದಿಂದ ವಿಮುಕ್ತಿ ಹೊಂದುವುದು, ಬಿಡುಗಡೆ ಹೊಂದುವುದು, ವಿಶೇಷ ಹಕ್ಕನ್ನು ಪಡೆಯುವುದು, ವ್ಯಕ್ತಿ ಸರಿಯೆನಿಸಿದ್ದನ್ನು ಮಾಡುವಂತಹ ಹಕ್ಕು ಎಂಬರ್ಥಗಳನ್ನು ಒಳಗೊಂಡಿದೆ. ದಂಗೆ, ಕಾಳಗ, ಕ್ರಾಂತಿ, ಯುದ್ದ, ಸಂಗ್ರಾಮ, ಚಳುವಳಿ, ಹೋರಾಟ, ಸತ್ಯಾಗ್ರಹ, ಪ್ರತಿಭಟನೆ ಮುಂತಾದ ಆಯಾಮಗಳ ಮುಖಾಂತರ ವ್ಯಕ್ತಿ ಅಥವಾ ರಾಷ್ಟ್ರ ಸ್ವತಂತ್ರ್ಯಗೊಳ್ಳಲು ಪ್ರಯತ್ನಿಸುತ್ತದೆ. "ರಾಷ್ಟ್ರೀಯ ನೆಲಗಟ್ಟಿನಲ್ಲಿ ಅವಲೋಕಿಸಿದಾಗ ಕೇವಲ ಪ್ರತಿಷ್ಠಿತರು ಮಾತ್ರವಲ್ಲದೆ ಜನಸಾಮಾನ್ಯರು ಕೂಡ ಮುಖ್ಯಪಾತ್ರ ವಹಿಸಬಲ್ಲರು ಎಂಬುದನ್ನು ಖಚಿತಪಡಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ರಾಷ್ಟ್ರ ನಿರ್ಮಾಣ ಕಾರ್ಯಕ್ಕೆ ಇವರ ಕೊಡುಗೆ ಅಮೂಲ್ಯವಾದುದು.

## ಕೊಪ್ಪಳ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳು

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಆರಂಭ ಗೊಂಡ 'ಸತ್ಯಾಗ್ರಹ ಶಿಬಿರಗಳು' ಚಳವಳಿ ಯಶಸ್ವಿಗೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಿದ ಇವು ಒಂದು ರೀತಿಯಲ್ಲಿ ಸತ್ಯಾಗ್ರಹಿ ಗಳು ಅಥವಾ ಹೋರಾಟಗಾರರನ್ನು ತಯಾರು ಮಾಡುವ ಕಾರ್ಖಾನೆಗಳಾಗಿದ್ದವು. ಅನೇಕ ವಿಚಾರಗಳನ್ನು ಸತ್ಯಾಗ್ರಹಿ ಗಳಿಗೆ ತಿಳಿಸಿಕೊಟ್ಟು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳು ವಂತೆ ಪ್ರೇರೇಪಿಸುವುದರ ಜೊತೆಗೆ ಇವು ಕಾರ್ಯಕ್ರಮಗಳನ್ನು ರೂಪಿಸುವ ಮುಖ್ಯಕೇಂದ್ರಗಳು ಕೂಡ. ಇಂತಹ ಶಿಬಿರಗಳು ರಾಷ್ಟ್ರದಾದ್ಯಂತ ಅನೇಕ ಸ್ಥಳಗಳಲ್ಲಿ ತೆರೆಯಲಾಗಿತ್ತು, ಕೊಪ್ಪಳ ಜಿಲ್ಲೆಯಲ್ಲಿ ಸತ್ಯಾಗ್ರಹ ಶಿಬಿರಗಳು ಇಲ್ಲದಿಲ್ಲ. ೧೯೨೪ರ

* ತಂದೆ ಡಕಣ ನಾಯ್ಕ ಎಸ್., ಚಿಕ್ಕಜೋಗಿಹಳ್ಳಿ ತಾಂಡ ಚಿಕ್ಕಜೋಗಿಹಳ್ಳಿ (ಅಂಚೆ), ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ.

ಬೆಳಗಾವಿ ಅಧಿವೇಶನ ಕಾಲಕ್ಕೆ ಅನೇಕ ಜಾತಿ ವರ್ಗಗಳು ಕಾಂಗ್ರೆಸ್‌ನ ಹತ್ತಿರ ಬಂದವು. ಹೀಗೆ ಪ್ರತಿಯೊಂದು ವರ್ಗದ ಜನರು ಈ ಚಳವಳಿಯಲ್ಲಿ ಭಾಗವಹಿಸತೊಡಗಿದರು. ಸಮಾಜದ ಎಲ್ಲಾ ವರ್ಗಗಳನ್ನು ೧೯೪೦ರ ಹೊತ್ತಿಗೆ ಚಳುವಳಿಯು ತನ್ನ ತಕ್ಕಗೆ ತೆಗೆದುಕೊಂಡಿತು. ಸಮಾಜದಲ್ಲಿದ್ದ ಕೆಳವರ್ಗ, ಕೆಳಜಾತಿ, ಹಿಂದೂಳಿದ ವರ್ಗ, ಮಹಿಳೆ, ಗ್ರಾಮೀಣ ರೈತರು, ಕಾರ್ಮಿಕರು ಮುಂತಾದವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳತೊಡಗಿದರು. ಈ ಹೋರಾಟದಲ್ಲಿ ಹಿಂದುಳಿದ ವರ್ಗದ ಕುರುಬ ಜನಾಂಗದ ಅನೇಕರು ಅಲ್ಲದೆ ೧೯೩೦ ಕಾಲಘಟ್ಟದಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಕುರುಬರು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸತೊಡಗಿದರು.

### ಸಂಗೊಳ್ಳಿ ರಾಯಣ್ಣ

ಬೆಳಗಾವಿ ಜಿಲ್ಲೆಯ ಸಂಪಗಾವಿ ತಾಲೂಕಿನ ಸಂಗೊಳ್ಳಿ ಎಂಬ ಗ್ರಾಮ ಭರಮಪ್ಪ ಮತ್ತು ಕಂಚವ್ವ ದಂಪತಿಗಳ ಪುತ್ರರಾಗಿ ಜನನವಾಯಿತು. ಅಜ್ಜ ರಾಗಪ್ಪರಾಗಿದ್ದರು. ರಾಯಣ್ಣನ ಮುತ್ತಜ್ಜ ರೋಗಿಗಳಿಗೆ ಆಯುರ್ವೇದ ವನಸ್ಪತಿಗಳನ್ನು ನೀಡಿ ರೋಗಗಳನ್ನು ಗುಣಪಡಿಸುತ್ತಿದ್ದನು. ಇದ್ದರಿಂದಾಗಿ ಜನರು ಇವರಿಗೆ ರೋಗಣ್ಣನವರ್ ಎಂದು ಕರೆಯುತ್ತಿದ್ದರು ಎಂಬ ಪ್ರತೀತಿಯಿದೆ.

ಕ್ರಿ.ಶ. ೧೮೨೪ರ ಪ್ರಥಮ ಹೋರಾಟದಲ್ಲಿ ರಾಯಣ್ಣ ಚನ್ನಮ್ಮಳ ವೀರಯೋಧನಾಗಿ ಹೋರಾಡಿದನು. ಆದರೆ ಕಿತ್ತೂರಿನ ಸಂಸ್ಥಾನ ಪತನವಾಗಿದ್ದರಿಂದ ಚನ್ನಮ್ಮ, ವೀರಮ್ಮ, ಜಾನಕಿಬಾಯಿರವರು ಬಂಧಿತರಾದರು. ಕುಟಿಲನೀತಿ ಮತ್ತು ಸಮಯುಪ್ರಜ್ಞಾ ಅನುಸರಿಸಿ ಕೊಂಡಿದ್ದ ಬ್ರಿಟಿಷರು ರಾಯಣ್ಣನನ್ನು ಕ್ಷಮಿಸಿ ಬಿಡುಗಡೆ ಮಾಡಿದರು.

ಆಂಗ್ಲರ ಸಹಾಯಕರು ಸ್ಥಳೀಯ ಜನರಿಗೆ ಕಿರುಕುಳ ನೀಡತೊಡಗಿದರು. ಇದನ್ನು ಸಹಿಸದ ರಾಯಣ್ಣ ಜನರನ್ನು ಸೇರಿಸಿಕೊಂಡು ಆಂಗ್ಲರ ವಿರುದ್ಧ ಹೋರಾಡಿದನು. ಕಿತ್ತೂರು ಸಂಸ್ಥಾನದವರಾದ ಹನುಮಂತಪ್ಪ, ಬಳಕುಂಡದ ಕಾಳಿಭೀಮ, ಜೇಡಿನಮನಿ ಪಕ್ಕೀರಪ್ಪ, ದೇವನಕೊಪ್ಪದ ಬಾಳಾನಾಯಕ, ಬೆಳವಡಿ ವಡ್ಡರ ಎಲ್ಲಣ್ಣ, ಬಿಚಗತ್ತಿ ಚನ್ನಬಸಮ್ಮ ಮುಂತಾದವರು ಜೊತೆ ಇದ್ದರು.

ಇವರು ಆಂಗ್ಲರ ದಿನನಿತ್ಯದ ಕೆಲಸಕ್ಕೆ ತಡೆಮಾಡುತ್ತಿದ್ದರು. ಇವರ ಮೂಲ ಉದ್ದೇಶ ಕಿತ್ತೂರು ಸಂಸ್ಥಾನದ ದತ್ತುಪುತ್ರ ಶಿವಲಿಂಗಪ್ಪನ ಸಾಮ್ರಾಜ್ಯವನ್ನು ಸ್ಥಾಪನೆ ಮಾಡುವುದು, ಗೆರಿಲ್ಲಾಯುದ್ಧ ತಂತ್ರವನ್ನು ಪ್ರಯೋಗಿಸಿ ಸರ್ಕಾರಿ ಕಛೇರಿ ಲೂಟಿ, ಕಾಗದಪತ್ರ ಸುಡುವುದು ಇತ್ಯಾದಿ ಕಾರ್ಯ ಮಾಡತೊಡಗಿದರು. ಸಂಪಗಾವಿ ಮೇಲೆ ಜನವರಿ ೦೨-೧೮೨೦ರಲ್ಲಿ ಮುತ್ತಿಗೆ ಹಾಕಿದರು ಚಿಕ್ಕನಾಯಕನ ಕೊಪಕ್ಕೆ ಮುತ್ತಿಗೆ ಹಾಕಿ ಕಛೇರಿಯ ಕಾಗದಪತ್ರಗಳನ್ನು ಸುಟ್ಟುಹಾಕಿದರು. ಸಂಪಗಾವಿಯ ಹತ್ತಿರದ ಹತ್ತಿರ ಹೊಂಡದ ಬಳಿ ರಾಯಣ್ಣನ ಕೆಲವು ಜನರಿಗೂ ಹಾಗೂ ಕೃಷ್ಣರಾಯ ನಡುವೆ ಯುದ್ಧ ನಡೆಯಿತು. ರಾಯಣ್ಣನ ಕಡೆ ೮ ಜನ ಕೊಲ್ಲಲ್ಪಟ್ಟು ೨೫ ಜನ ಗಾಯಗೊಂಡರು. ನಂತರದಲ್ಲಿ ಕೃಷ್ಣರಾಯ ರಾಯಣ್ಣನನ್ನು ಹಿಡಿಯಲು ಖಿದಾನಪುರ ಮತ್ತು ನೇಗಿನಹಾಳ ಗೌಡರನ್ನು ಜೊತೆಗೂಡಿಸಿಕೊಂಡು ಸಂಚು ಹೂಡಿದರು. ರಾಯಣ್ಣ ಸ್ನಾನದ ನಂತರ ಊಟಕ್ಕೆ ಮುಂದಾದಾಗ ನೇಗಿನಹಾಳ್ ಗೌಡ ಲಕ್ಕಪ್ಪರು ರಾಯಣ್ಣನಿಗೆ ಕಾವಲುಗಾರನಾಗಿರುವನೆಂದು ಖಡ್ಗವನ್ನು ತನ್ನಲ್ಲಿರಿಸಿಕೊಂಡನು. ರಾಯಣ್ಣ ಊಟಕ್ಕೆ ಕುಳಿತಾಗ ಗೌಡರ ಸೈನಿಕರು ಹಠಾತ್ತನೆ ಆಕ್ರಮಣ ಮಾಡಿ ರಾಯಣ್ಣನನ್ನು ಬಂಧಿಸಿ ಧಾರವಾಡಕ್ಕೆ ತಂದರು. ೧೮೨೦ ಏಪ್ರಿಲ್ ೮ರಂದು ರಾಯಣ್ಣನ ಜೊತೆ ೬ ಜನರಿಗೆ ಗಲ್ಲುಶಿಕ್ಷೆ ನೀಡಿದರು. ನಂದಗಡದಲ್ಲಿ ರಾಯಣ್ಣನ ಸಮಾಧಿ ಮಾಡಿದರು.

### ಕಂಬಳಿ ಶಿವಪ್ಪ

ಕುರುಬ ಜನಾಂಗದವರಾದ ಇವರು ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕಿನ ಚಿಕ್ಕೇನಕೊಪ್ಪದ ಗ್ರಾಮದವರು. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದಕ್ಕೆ ಅನೇಕ ದಾಖಲೆಗಳಿವೆ. ಕಂಬಳಿ ಶಿವಪ್ಪನವರು ರಜಾಕರ ವಿರುದ್ಧ ಹಾಗೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಹೋರಾಟಗಾರರಲ್ಲಿ ಪ್ರಮುಖರಾಗಿದ್ದಾರೆ. ೧೯೪೭ ಆಗಸ್ಟ್ ೧೫ರಂದು ಗದಗಿನಲ್ಲಿ ಸ್ವಾತಂತ್ರ್ಯೋತ್ಸವದ ಆಚರಣೆ ನೋಡಿದ ಕಂಬಳಿಯವರು ನಮ್ಮ ಭಾಗಕ್ಕೂ ಸ್ವಾತಂತ್ರ್ಯ ದೊರಕಿಸಬೇಕೆಂದು ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ. ಚಿಕ್ಕೇನಕೊಪ್ಪ ಗ್ರಾಮದ ಹಿರಿಯರಾದ ಶ್ರೀ ಸಂಗಪ್ಪ ಮುಟಗಿ, ಶ್ರೀ ಶಿವಸಂಗಪ್ಪ ಗುಳಗಣ್ಣನವರ, ಶ್ರೀ ಲಿಂಗಪ್ಪ ಬಡಗೇರೆ, ಶ್ರೀ ಮಲ್ಲಪ್ಪ ಕಳವಕೇರಿ, ಶ್ರೀ ಅಡಿವೆಪ್ಪ ಮಕ್ಕಳಾದ ಶ್ರೀ ಹುಚ್ಚಪ್ಪ ಗದಗ, ಚನ್ನಪ್ಪ ಹಕಾರಿ ಇತ್ಯಾದಿ ಪ್ರೇರಣೆಯಿಂದ ಸತ್ಯಾಗ್ರಹದಲ್ಲಿ ಭಾಗವಹಿಸಿದರು.

ಭಾರತ ಸ್ವಾತಂತ್ರ್ಯಗೊಂಡಿದ್ದರೂ ಹೈದರಬಾದ ನಿಜಾಮ್, ಹೈದರಾಬಾದ್ ಕರ್ನಾಟಕವನ್ನು ತನ್ನ ಕಪಿಮುಷ್ಟಿಯಲ್ಲಿಟ್ಟುಕೊಂಡಿದ್ದರು. ನಿಜಾಮನಿಂದ ಸ್ವಾತಂತ್ರ್ಯಗೊಳ್ಳಲು ಹೋರಾಡುತ್ತಿದ್ದವರ ಹೋರಾಟದಲ್ಲಿ ಪ್ರಮುಖ ಅಂಶಗಳು ಈ ರೀತಿಯಾಗಿದ್ದವು.

೧) ರಜಾಕರು, ನಿಜಾಮ, ಪಠಾಣರು, ಪೊಲೀಸರು ಕೊಡುವ ಕಿರುಕುಳ ಅತ್ಯಾಚಾರದ ವಿರುದ್ಧ ಹೋರಾಡುವುದು.

೨) ಹಿಂದೂಗಳು ನಿಜಾಮ ಸರಕಾರದಲ್ಲಿ ಅಧಿಕಾರಿಗಳಾಗಿದ್ದವರನ್ನು ರಾಜೀನಾಮೆ ಕೊಡುವಂತೆ ಮಾಡುವುದು.

೩) ನಿಜಾಮ ಸರ್ಕಾರದ ಎಲ್ಲಾ ರೀತಿಯ ಅಡಳಿತ ಕಾಯ್ದೆಗಳನ್ನು ಮುರಿಯುವುದು.

೪) ಹಪ್ತ ವಸೂಲಿಯನ್ನು ನಿಲ್ಲಿಸುವುದು.

೫) ಸರಕಾರದ ಕಾಗದ ಪತ್ರಗಳನ್ನು ಸುಡುವುದು.

ಕಂಬಳಿ ಶಿವಪ್ಪ ಹಾಗೂ ಇತರ ಸ್ನೇಹಿತರು. ಕುಕನೂರು ಪೊಲೀಸ್ ಠಾಣೆ ಹಿಂದುಗಡೆ ಹೋಗಿ ಅಲ್ಲಿದ್ದ ಮುಸಲ್ಮಾನರನ್ನು ಹೊರ ಬರದಂತೆ ಬಾಗಿಲು ಹಾಕಿದರು. ಒಳಗೆ ಸುಮಾರು ೨೦ ಜನ ಪೊಲೀಸರು ಮಲಗಿದ್ದರು. ಓಲೆಕಾರನ ಬಾಯಿಮುಚ್ಚಿ ಬಾಗಿಲನ್ನು ಒದ್ದು ತೆಗೆದರು. ಅಲ್ಲಿದ್ದ ಪೊಲೀಸರಿಗೆ ಹೊಡೆದು ಅಂಜಿ ೩೦ ರೈಫಲ್‌ಗಳು, ೨೫ ಬಂದೂಕುಗಳು, ೨ ಪಿಸ್ತೂಲ್‌ಗಳು ಸಾವಿರಾರು ಕಾಡತೊಸುಗಳು, ವಸ್ತ್ರ ಹಾಗೂ ತೆಗೆದುಕೊಂಡು ಚಿಕ್ಕೇನಕೊಪ್ಪದಡೆಗೆ ಹೊರಟರು. ಆದರೆ ಪೊಲೀಸರು ನಂತರ ಮುಂಡರಗಿ ಶಿಬಿರ ಸೇರಿಕೊಂಡರು.

ಸ್ವಾತಂತ್ರ್ಯಪ್ರಿಯರು ಮತ್ತು ಅಪ್ಪಟ ದೇಶಪ್ರೇಮಿಯಾದ ಗ್ರಾಮಸ್ಥರು ಹಪ್ತನಿರಾಕರಣೆ, ಲೆವಿನಿರಾಕರಣೆ ಸೇಂದಿ ಅಂಗಡಿಗಳನ್ನು ಬಂದ್ ಮಾಡಿ ಕಾಯ್ದ ಕಾನೂನುಗಳನ್ನು ಉಲ್ಲಂಘಿಸಿದ್ದರಿಂದ ರಜಾಕರ ಹಳ್ಳಿಗೆ ಬಂದು ಮನೆಗಳನ್ನು ಲೂಟಿಮಾಡಿದರು. ಹೋರಾಟಗಾರರ ಮೇಲೆ ಸಿಕ್ಕಲ್ಲಿ ಜೈಲಿಗೆ ಹಾಕಬೇಕೆಂದು ವಾರಂಟಿ ಜಾರಿಗೆ ಮಾಡಿತು. ರಜಾಕರ ಲೂಟಿ ಹತ್ಯಾಕಾಂಡದ ಬಗ್ಗೆ ತಿಳಿದ ಕಂಬಳಿ ಶಿವಪ್ಪ ಹಾಗು ಅವರ ತಂಡ ರೈಫಲ್‌ನೊಂದಿಗೆ ಬಂದರು. ಬೆಳಗಟ್ಟಿ ಗ್ರಾಮದಲ್ಲಿ ಗುಂಡಿನ ಚಕಮಕಿ ನಡೆಯಿತು. ಈರಪ್ಪ ಕರಮಡಿ ೩೦೩ ರೈಫಲ್‌ನಿಂದ ಪಠಾಣರವರನ್ನು ಕೊಂದು ಹಾಕಿದನು. ಉಳಿದ ಪಠಾಣರು ತಪ್ಪಿಸಿಕೊಂಡು ಹೋದರು. ಗ್ರಾಮದಲ್ಲಿ ರಾಷ್ಟ್ರದ್ವಜವನ್ನು ಹಾರಿಸಿ ಜನರಿಗೆ ಧೈರ್ಯ ತುಂಬಿ ಹೋದರು. ನಂತರದಲ್ಲಿ ಗೊಂಡಬಾಳದಲ್ಲಿ ಇಬ್ಬರು ಪಠಾಣರು ಇವರ ಕೈಗೆ ಸಿಕ್ಕು ಸಾವು ಅಪ್ಪಿದರು. ದಿನಾಂಕ ೦೭-೯-೧೯೪೮ರಂದು ಮುಖ್ಯಾಸೇನಾಧಿಕಾರಿ ಲಾಯಕ ಅಲಿಯು ಭಾರತೀಯ ಪೊಲೀಸ್ ಕಾರ್ಯಚರಣೆಗೆ ಶರಣಾದ್ದರಿಂದ ಹೈದ್ರಾಬಾದ್ ಕರ್ನಾಟಕ ಸ್ವಾತಂತ್ರ್ಯಗೊಂಡಿತು. ಶಿವಪ್ಪ ಕಂಬಳಿರವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸೇವೆ ಸಲ್ಲಿಸಿದ್ದಾರೆ.

**ಕಂಬಳಿ ಮಾಕಣ್ಣ**

ಕುರುಬ ಸಮುದಾಯ ಸ್ವಾತಂತ್ರ್ಯ ಹೋರಾಟಗಾರರಾದ ಇವರು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ನವಲಿ ಗ್ರಾಮದವರು. ನವಲಿಗ್ರಾಮದ ಜನರು ನಿಜಾಮ ಸರ್ಕಾರಕ್ಕೆ ಲೇವಿ ಕೊಡುವುದಿಲ್ಲ ಎಂದು ಬಂಡೆದ್ದರು. ಈ ಬಂಡಾಯದ ಮುಖಂಡತ್ವವನ್ನು ವಿರುಪಾಕ್ಷಗೌಡ ಚಳ್ಳೂರ, ರಾಘವೇಂದ್ರರಾವ್, ಪಂಚಾಕ್ಷರಯ್ಯ ಇತ್ಯಾದಿ ವಹಿಸಿದ್ದರು ಕ್ರಿ.ಶ. ೧೯೪೮ ಜುಲೈನಲ್ಲಿ ನಿಜಾಮ ಪೊಲೀಸರು ನವಲ ಗ್ರಾಮಕ್ಕೆ ಬಂದು ಲೇವಿ ಕೊಡಲು ಒತ್ತಾಯಿಸಿದರು. ರೈತರು ಮತ್ತು ಕಾರ್ಮಿಕರು ಅದನ್ನು ವಿರೋಧಿಸಿ ಮೆರವಣಿಗೆ ತೆಗೆದಾಗ ಪೊಲೀಸರು ಗೋಲಿಬಾರ್ ಮಾಡಿದರು. ಈ ಗೋಲಿಬಾರನಲ್ಲಿ ರೈತ ಮುಖಂಡ ಕಂಬಳಿ ಮಾಕಣ್ಣ ಗುಂಡು ಬಡಿದು ಮೃತಪಟ್ಟನು. ಹಲವಾರು ಈ ಗೋಲಿಬಾರನಲ್ಲಿ ಮರಣ ಹೊಂದಿದ್ದರು. ಕಂಬಳಿ ಮಾಕಣ್ಣನವರು ಮರಣ ಹೊಂದಿದ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿರುವುದಲ್ಲದೆ ಪ್ರತಿ ವರ್ಷ ಧ್ವಜಾರೋಹಣ ಮಾಡುತ್ತ ಬರುತ್ತಿದ್ದಾರೆ.

**ಮಲ್ಲಪ್ಪ ಗಟ್ಟಿ**

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಮತ್ತೊಬ್ಬರೆಂದರೆ ಗಟ್ಟಿ ಮಲ್ಲಪ್ಪ ಕುಷ್ಟಗಿ ತಾಲ್ಲೂಕಿನ ತುಗ್ಗಲದೋಣಿಯ ಗ್ರಾಮದವರು ಭೀಕರ ಬರಗಾಲವಿದ್ದರಿಂದ ಬ್ರಿಟಿಷರಿಗೆ ಸಲ್ಲಿಸಬೇಕಾಗಿದ್ದ ಹಪ್ತವನ್ನು ಕಟ್ಟಲು ಜನರಿಗೆ ಸಾಧ್ಯವಾಗಲಿಲ್ಲ. ಹಾಗಾಗಿ ಗಟ್ಟಿ ಮಲ್ಲಪ್ಪನವರು ತಮ್ಮ ಸುತ್ತಮುತ್ತಲಿನ ೨೮ ಗ್ರಾಮಗಳ ಹಪ್ತವನ್ನು ಸತತ ಮೂರು ವರ್ಷ ಕಟ್ಟಿದರು. ಜನರಿಗೆ ಜೋಳವನ್ನು ಹಂಚಿ ಆಹಾರದ ಸಮಸ್ಯೆಯನ್ನು ನೀಗಿಸಲು ಪ್ರಯತ್ನಿಸಿದರು. ಅಂದಿನಿಂದ ಇಂದಿನವರೆಗು ಗಟ್ಟಿಯವರು ಎಂದು ಪ್ರತೀತವಾಗಿ ಕರೆಯುತ್ತಾರೆ ೧೯೭೮ರಲ್ಲಿ ಮೃತಪಟ್ಟರು ಇದರಿಂದಾಗಿ ಗಟ್ಟಿಮಲ್ಲಪ್ಪನವರು ಒಬ್ಬ ಸ್ವತಂತ್ರ್ಯ ಹೋರಾಟಗಾರರಾಗಿದ್ದುದು ಸ್ಪಷ್ಟವಾಗುತ್ತದೆ.

**ಅಬ್ಬಿಗೇರಿ ನಾಗಪ್ಪ**

ಅಬ್ಬಿಗೇರಿ ನಾಗಪ್ಪನವರು ಕುಷ್ಟಗಿ ತಾಲೂಕಿನ ಅಬ್ಬಿಗೇರಿ ಗ್ರಾಮದವರು. ಸ್ವಾತಂತ್ರ್ಯ ಹೋರಾಟ ಭಾಗವಹಿಸಿದ್ದ ೧೯೩೬ ಮಾರ್ಚ್ ತಿಂಗಳಲ್ಲಿ ರೋಣ ತಾಲೂಕಿನ ಜಕ್ಕಲಿ, ಅಂಜಿಗೆ ಗ್ರಾಮಗಳಿಗೆ ಗಾಂಧಿಜಿಯವರು ಭೇಟಿ ನೀಡಿದ್ದರು. ಅವರಿಂದ ಪ್ರೇರಿತರಾಗಿ ಅಬ್ಬಿಗೇರಿಯವರು ಶಿಕ್ಷಣಕ್ಕೆ ಬಿಟ್ಟು ಸ್ವಾತಂತ್ರ್ಯ ಚಳವಳಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡರು. ೧೯೪೨ರಲ್ಲಿ ಶ್ರೀ ಕಂಬಳಿ ಮಹಾದೇವಪ್ಪ ಮತ್ತು ನಾಗಪ್ಪ ಹೂಂಬಾಳಿ

ಯವರ ಜೊತೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದನು. ಅಬ್ಬಿಗೇರಿ, ಜಕ್ಕಲಿಗಳಿಗೆ ಮಾತ್ರವಲ್ಲದ ಕೊಪ್ಪಳಕ್ಕೆ ಬಂದು ಸ್ವತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡಿದ್ದರು.

೧೯೪೮ರಲ್ಲಿ ಹೈದರಾಬಾದಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದವರು ಕೊಪ್ಪಳದಲ್ಲಿಯೇ ಉಸ್ಮಾನಿಯ ಹೈಸ್ಕೂಲನ್ನು ಬ್ರಿಟಿಷರ ಕಟ್ಟಡವೆಂದು ತಪ್ಪು ಭಾವಿಸಿ ಕಟ್ಟಡಕ್ಕೆ ಬೆಂಕಿಯಿಟ್ಟರು. ನಂತರ ಬೆಳಗಾವಿಗೆ ಹೋಗಿ ಹೋರಾಟ ಮಾಡಿದರು. ಅಧಿವೇಶನದಲ್ಲಿ ಭಾಗವಹಿಸಿದಾಗ ಅಲ್ಲಿ ಜೆ.ಪಿ. ಹಾಗೂ ರಂಗನಾಥ ದಿವಾಕರ ರವರ ಸಂಪರ್ಕ ಬೆಳೆಯಿತು. ಜೆ.ಪಿ. ಯೊಂದಿಗೆ ಬಂಧನಕ್ಕೊಳಗಾದರು. ಹೀಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಬ್ರಿಟಿಷರ ವಿರುದ್ಧ ಹೋರಾಡಿದರು.

ಸ್ವಾತಂತ್ರ್ಯ ಚಳವಳಿಯ ಚಟುವಟಿಕೆಗಳಲ್ಲವು ಮುಖ್ಯವಾಗಿ ರಾಷ್ಟ್ರೀಯ ಹೆದ್ದಾರಿ ಭಾಗ ಪ್ರದೇಶಗಳಲ್ಲಿ ಹೆಚ್ಚಾಗಿ ನಡೆದಿದೆ. ಉಳಿದಂತೆ ಇತರೆ ಭಾಗಗಳಲ್ಲಿ ಅದು ವಿಸ್ತರಿಸಿಕೊಂಡಿದ್ದರೂ ತೀವ್ರವಾಗಿರಲಿಲ್ಲ ಎನ್ನಬಹುದು. ಈ ರೀತಿ ಕೊಪ್ಪಳ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಕುರುಬರ ಸಮುದಾಯ ಅನೇಕ ಭಾಗವಹಿಸಿದ್ದರೂ. ಯಾವುದೇ ದಾಖಲೆಗಳು ಹೊಂದಿಲ್ಲದಿರುವುದರಿಂದ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಯಾವುದೇ ಪಿಂಚಣಿ ದೊರೆತಿರುವುದಿಲ್ಲ. ಈ ರೀತಿ ಚಳವಳಿಯಲ್ಲಿ ಕುರುಬರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವುದು ಗಮನಾರ್ಹ.



**ಆಧಾರಸೂಚಿ**


೧. ಸಂಗೊಳ್ಳಿ ರಾಯಣ್ಣ, ಸಂ. ಡಾ. ಸೂರ್ಯನಾಥ ಕಾಮತ್, ಲೇ. ಸವಿಮಠದ, ಪ್ರ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫.

೨. ವಿಮೋಚನೆ, ಸಂ. ಹೆಚ್. ಪಾಟೀಲ್, ಪ್ರ. ಜಿಲ್ಲಾಡಳಿತ ಕೊಪ್ಪಳ, ೧೯೯೯ .

೩. ಮೇಷ ವಿಜಯ, ಲೇ. ಎಂ. ಕರಿಯಪ್ಪ, ಪ್ರ. ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧.

೪. ಕವಲುದಾರಿಯಲ್ಲಿ ಕರ್ನಾಟಕದ ಕುರುಬ ಜನಾಂಗ, ಲೇ. ಪ್ರೊ. ಒಡೆಯರ್, ಡಿ. ಹೆಗ್ಗಡೆ, ಪ್ರ. ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು, ೨೦೦೩.

೫. ಹೈದರಾಬಾದ ಕರ್ನಾಟಕ ಕುರುಬರ ಚಾರಿತ್ರಿಕ ಅಧ್ಯಯನ ಸಂಶೋಧಕರು ಉಮೇಶ ಗುರಿಕಾರ್, ಕನ್ನಡ ವಿಶ್ವವಿದ್ಯಾಲಯ, ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭.

೧೦೨

# ಬೆಳಗಾವಿಯ ಹೆಮ್ಮೆಯ ಪಾರಂಪರಿಕ ಸ್ಮಾರಕ-ಸ್ವಾಮಿ ವಿವೇಕಾನಂದರು ತಂಗಿದ್ದ ಮನೆ

ಸ್ಮಿತಾ ಸುರೇಬಾನಕರ*

**ಮೌ**ನದ ಧ್ವನಿ ದೂರ ದೂರಕ್ಕೆ ತೆರಳಿ ವಿರಳವಾಗಿ ಬಹಳ ವಿರಳವಾಗಿ ಜ್ಞಾನಿಗಳು ಮತ್ತು ವೈರಾಗಿಗಳಿಂದ ಕೇಳಲ್ಪಡುತ್ತದೆ. ಇಂತಹ ಒಂದು ಧ್ವನಿ ಜೀವಿಗಳಿಗೆ ಶ್ರವ್ಯವಾಗಿ ಕಾಲಕಾರಣವನ್ನು ಮೀರಿ ದಿಗಂತವನ್ನು ವ್ಯಾಪಿಸುತ್ತದೆ. ಇದು ದೈವಿ ಧ್ವನಿಯಾಗಿ ಅಜ್ಞಾನದ ಮುಸುಕನ್ನು ಸರಿಸಿ, ದಿವ್ಯ ಶಕ್ತಿಯಾಗಿ ಮೆರೆದದ್ದು ಇತಿಹಾಸದ ಅಮೂಲ್ಯ ಅಮೋಘ ಕ್ಷಣ. ಇಂತಹ ದಿವ್ಯಚೇತನ ವಿವೇಕ ಮತ್ತು ಆನಂದದ ಸಮ್ಮಿಲನವಾಗಿ ಸ್ವಾಮಿತ್ವದ ಉತ್ತುಂಗ ಶಿಖರವನ್ನೇರಿದ್ದು ಭಾರತದ ಸುದೈವ. ನಾಡಿನ ಭವ್ಯ ಸಂಸ್ಕೃತಿಯನ್ನು ದೇಶದ ಉದ್ದಗಲಕ್ಕೂ ವ್ಯಾಪಿಸುವಂತೆ ಮಾಡಿ ದೇಶದ ಯುಶಕ್ತಿಯನ್ನು ಬಡಿದೆಬ್ಬಿಸುವುದಕ್ಕಾಗಿ ಎಚ್ಚರಿಕೆಯ ಕರೆಗಂಟೆಯನ್ನು ಒತ್ತಿ ದೇಶದಾದ್ಯಾಂತ ಸಂಚಾರ ಕೈಗೊಂಡವರು ಸ್ವಾಮಿ ವಿವೇಕಾನಂದರು, ಬೆಳಗಾವಿಯ ದಿವ್ಯಭೂಮಿ ವಿವೇಕರ ಚರಣ ಸ್ಪರ್ಶದಿಂದ ಪಾವನಗೊಂಡಿದ್ದಷ್ಟೆ ಅಲ್ಲದೆ ಅವರ ಅಮೂಲ್ಯ ತತ್ವಗಳನ್ನು ಪ್ರಸಾರ ಮಾಡುವ ನಿಟ್ಟಿನಲ್ಲಿ ವಿಶೇಷ ಪಾತ್ರವಹಿಸಿತು. ೧೫ ಅಕ್ಟೋಬರ ೧೮೯೨ರಂದು ಸ್ವಾಮಿ ವಿವೇಕರು ಅಡ್ವೋಕೇಟ್ ಸದಾಶಿವ ಭಾತೆಯವರ ನಿವಾಸದಲ್ಲಿ ತಂಗಿದ್ದು ಬೆಳಗಾವಿಯ ಪಾರಂಪರಿಕ ಇತಿಹಾಸದಲ್ಲಿ ಸುವರ್ಣಾಕ್ಷರದಿಂದ ಬರೆಯಲ್ಪಟ್ಟ ದಿನ.

ಪರಿವ್ರಾಜಕ ಸಂಚಾರಿಯಾಗಿ ಸ್ವಾಮೀಜಿ ಶಿಕಾಗೋಗೆ ತೆರಳುವ ಮೊದಲು ಬೆಳಗಾವಿಯಲ್ಲಿ ತಂಗಿದ್ದರು. ಬೆಳಗಾವಿಯಲ್ಲಿ ಅವರು ತಂಗಿದ್ದು ರಿಸಾಲ್‌ದಾರ ಗಲ್ಲಿಯ ಅಡ್ವೋಕೇಟ್ ಸದಾಶಿವ ಭಾತೆ ಮತ್ತು ಕೋಟೆ ಆವರಣದಲ್ಲಿರುವ ಸಬ್ ಡಿವಿಜನಲ್ ಅರಣ್ಯಾಧಿಕಾರಿಯಾದ ಹರಿಪಾದ ಮಿತ್ರ ಅವರ ಮನೆಯಲ್ಲಿ. ಭಾತೆಯವರ ನಿವಾಸದಲ್ಲಿ ೧೫ ರಿಂದ ೧೮ ಅಕ್ಟೋಬರ ೧೮೯೨ ಮತ್ತು ಮಿತ್ರರವರ ನಿವಾಸದಲ್ಲಿ ೧೮ರಿಂದ ೨೭ ಅಕ್ಟೋಬರ ೧೮೯೨ ವರೆಗೆ ತಂಗಿದ್ದರು. ಕೋಲ್ಹಾಪೂರದಿಂದ ಬೆಳಗಾವಿಗೆ ರೈಲಿನಿಂದ ಬಂದು ೧೩ ದಿನ ಇಲ್ಲಿ ತಂದಿದ್ದು ಮುಂದೆ ಗೋವಾಕ್ಕೆ ತೆರಳಿದರು.

ಸ್ವಾಮೀಜಿ ತಂಗಿದ್ದ ಭಾತೆಯವರ ಮನೆ ಸ್ಥಳೀಯ ರಾಮಕೃಷ್ಣ ಆಶ್ರಮದ ದಿವ್ಯಸಂಕಲ್ಪದಿಂದಾಗಿ ಇಂದು ಬೆಳಗಾವಿಯ ಹೆಮ್ಮೆಯ ಪಾರಂಪರಿಕ ಸ್ಥಾನವಾಗಿ ತಲೆ ಎತ್ತುತ್ತಿದೆ. ವಿವೇಕಾನಂದರು ತಂಗಿದ್ದ ಕೋಣೆ, ಅವರು ಉಪಯೋಗಿಸಿದ ವಸ್ತುಗಳು, ಅವರು ಸ್ನಾನ ಮಾಡಿದ ವಿಶಾಲ ಬಾವಿ, ಅವರ ಪ್ರವಚನದ ಮಾರ್ದನಿಯಿಂದ ಪಾವನಗೊಂಡ ಆ ಮನೆಯ ಮೂಲೆ ಮೂಲೆಗಳು, ಅವರು ಆ ಮನೆಯನ್ನು ಪ್ರವೇಶಿಸಿದ ಕಮಾನಿನ ಆಕಾರದ ಪ್ರವೇಶ ದ್ವಾರ ಇವೇ ಮುಂತಾದವುಗಳನ್ನು ಪರಿಚಯಿಸುವುದೇ ಈ ಪ್ರಬಂಧದ ಉದ್ದೇಶ. ಇದಲ್ಲದೆ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಇದ್ದ ವಾಸ್ತುಶಿಲ್ಪ ಶೈಲಿಯಲ್ಲಿ ನಿರ್ಮಾಣ ತಂತ್ರಜ್ಞಾನ ಕಾಷ್ಠ ವಾಸ್ತುಶಿಲ್ಪಕಲೆ, ಇವುಗಳ ಪಕ್ಷಿನೋಟವನ್ನು ಪ್ರಸ್ತುತ ಪ್ರಬಂಧ ಒಳಗೊಂಡಿದೆ. ಇದನ್ನೆಲ್ಲ ಶ್ರವ್ಯ-ದೃಶ್ಯ ಮಾಧ್ಯಮದಿಂದ ಪರಿಚಯಿಸುವ ಕಿರು ಪ್ರಯತ್ನ ಇಲ್ಲಿದೆ,

ಸ್ವಾಮಿ ವಿವೇಕಾನಂದರು ದೇಶದ ಹಲವು ಭಾಗಗಳಲ್ಲಿ ಸಂಚರಿಸಿ ತಮ್ಮ ವಿದ್ವತ್ ಪ್ರತಿಭೆ ಹರಿಸಿದ್ದಲ್ಲದೆ ತಮ್ಮ ಆಧ್ಯಾತ್ಮಿಕ ಚಿಂತನೆಗಳನ್ನು ಅವರಿದ್ದ ಕಾಲದಲ್ಲಿ ಹಲವಾರು ವ್ಯಕ್ತಿ, ಸಂಘ-ಸಂಸ್ಥೆಗಳೊಂದಿಗೆ ಹಂಚಿಕೊಂಡಿದ್ದರು. ಹಲವಾರು ವ್ಯಕ್ತಿಗಳನ್ನು ಕಂಡಿದ್ದರು, ಕೇಳಿದ್ದರು. ಅವರ ಬೇಟಿಯ ಅವಧಿಯಲ್ಲಿ ಹಲವಾರು ಪ್ರದೇಶಗಳಲ್ಲಿ ತಂಗಿದ್ದರು ಮತ್ತು ಆಯಾ ಪ್ರದೇಶಗಳ ವ್ಯಕ್ತಿಗಳ ಬಗ್ಗೆ ನಿಕಟ ಸಂಬಂಧವನ್ನು ಹೊಂದಿದ್ದರು. ವಿವೇಕಾನಂದರು ತಂಗಿದ್ದ ಕಟ್ಟಡಗಳು ಇಂದು ಪಾರಂಪರಿತ ತಾಣಗಳಾಗಿದ್ದು ಉಲ್ಲೇಖನೀಯ.

೧೮೯೨ರ ಅಕ್ಟೋಬರ ತಿಂಗಳಿನಲ್ಲಿ ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತವನ್ನು ಸಂಚರಿಸುತ್ತಿದ್ದ ಸಂದರ್ಭದಲ್ಲಿ ಬೆಳಗಾವಿ ನಗರಕ್ಕೆ ಭೇಟಿ ನೀಡಿದ್ದರು, ಅಕ್ಟೋಬರ ೧೫ರಿಂದ ೨೭ರವರೆಗಿನ ಹದಿಮೂರು ದಿನಗಳಲ್ಲಿ ಅವರು ಬೆಳಗಾವಿಯ ರಿಸಾಲದಾರ ಗಲ್ಲಿಯ (ಈಗ ವಿವೇಕಾನಂದ ಮಾರ್ಗ) ಅಡ್ವೋಕೇಟ್ ಸದಾಶಿವ

* ಪ್ರಾಚಾರ್ಯರು, ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.

ಭಾತೆ ಮತ್ತು ಬೆಳಗಾವಿಯ ಕೋಟೆ ಆವರಣದಲ್ಲಿರುವ ಅರಣ್ಯಾಧಿಕಾರಿಗಳಾದ ಶ್ರೀ ಹರಿಪಾ ಮಿತ್ರ ಅವರ ಮನೆಯಲ್ಲಿ ತಂಗಿದ್ದರು. ಮೊದಲ ನಾಲ್ಕು ದಿನಗಳು (ಅಂದರೆ ಅಕ್ಟೋಬರ ೧೫ರಿಂದ ೧೮ರ ತನಕ) ಸ್ವಾಮೀಜಿ ಬೆಳಗಾವಿ ನಗರದ ಪ್ರಖ್ಯಾತ ವಕೀಲರಾಗಿದ್ದ ಶ್ರೀ ಸದಾಶಿವ ಬಾಲಕೃಷ್ಣ ಭಾತೆಯವರ ಅತಿಥಿಯಾಗಿದ್ದರು. ಸ್ವಾಮೀಜಿ ತಮ್ಮ ಮನೆಯಲ್ಲಿ ತಂಗಿದ್ದಾಗಿನ ನೆನಪುಗಳನ್ನು ಸದಾಶಿವ ಭಾತೆಯವರ ಮಗ ಪ್ರೊ. ಜಿ.ಎಸ್. ಭಾತೆಯವರು ತಮ್ಮ ಸ್ಮೃತಿ ಲೇಖನದಲ್ಲಿ ಚಿತ್ರಿಸಿದ್ದಾರೆ.

ಸ್ವಾಮಿ ವಿವೇಕಾನಂದರ ಅಭಿಮಾನಿ ಮತ್ತು ಅನುಯಾಯಿ ವೃಂದದಲ್ಲಿ 'ಭಾತೆಯವರ ಮನೆ' ಎಂದೇ ಪ್ರಸಿದ್ಧಿಯಾಗಿರುವ ಮನೆಯನ್ನು ೧೯೧೦ನೇಯ ಇಸ್ವಿಯಲ್ಲಿ ಬೆಳಗಾವಿಯ ಇನ್ನೋರ್ವ ಪ್ರಖ್ಯಾತ ವಕೀಲರಾಗಿದ್ದ ಅಡ್ವೋಕೇಟ್ ದತ್ತಾತ್ರೇಯ ಬೆಳವಿ (ದತ್ತೋಪಂತ ಬೆಳವಿ) ಅವರಿಗೆ ಮಾರಲಾಯಿತು. ದತ್ತೋಪಂತ ಬೆಳವಿ ಅವರು ಲೋಕಮಾನ್ಯ ತಿಲಕರ ಅನುಯಾಯಿಯಾಗಿದ್ದರಲ್ಲದೇ ಕಾಂಗ್ರೇಸ್‌ನ ರಾಷ್ಟ್ರಮಟ್ಟದ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. 'ಹೋಮರೂಲ್ ಲೀಗ್'ನ ಕರ್ನಾಟಕ ಘಟಕದ ಅಧ್ಯಕ್ಷರಾಗಿದ್ದರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಆಯೋಜನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಆ ಸಮಯದ ಪ್ರಮುಖ ನಾಯಕರಾದ ಮಹಾತ್ಮಾ ಗಾಂಧೀಜಿ, ಮೋತಿಲಾಲ್ ನೆಹರು, ಜವಾಹರ ಲಾಲ್ ನೆಹರು, ರವೀಂದ್ರನಾಥ ಟಾಗೋರ್, ಲಾಲಾ ಲಜಪತ ರಾಯ, ಆನಿಬೆಸೆಂಟ್, ಜಿ.ಬಿ ಪಂತ, ಚಿತ್ತರಂಜನದಾಸ್, ಸರೋಜಿನಿ ನಾಯ್ಡು ಮುಂತಾದವರು ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ಅಥವಾ ಬೇರೆ ಸಂದರ್ಭಗಳಲ್ಲಿ ಈ ಮನೆಗೆ ಭೇಟಿ ಇತ್ತಿದ್ದರು. ೧೯೮೭ ದತ್ತೋಪಂತ ಬೆಳವಿಯವರ ಮಗ ಶ್ರೀ ಬಲವಂತೆ ಬೆಳವಿ ತಮ್ಮ ಪಾಲಿಗೆ ಬಂದಿದ್ದ ಮನೆಯ ಮೂರನೇಯ ಭಾಗವನ್ನು ಕಾರವಾರದ ರಾಮಕೃಷ್ಣ ಮಿಶನ್ ಆಶ್ರಮಕ್ಕೆ ದಾನವಾಗಿ ನೀಡಿದರು. ಈ ಭಾಗದ ಕಟ್ಟಡದಲ್ಲೇ ಸ್ವಾಮಿ ವಿವೇಕಾನಂದರು ಉಳಿದುಕೊಂಡ ಕೋಣೆಯು ಇತ್ತು. ೨೦೦೬ರಲ್ಲಿ ೧/೩ ಭಾಗವನ್ನು ರಾಮಕೃಷ್ಣ ಮಿಶನ್‌ಗೆ ಹತ್ತಾಂತರಿಸಲಾಯಿತು. ಮತ್ತು ರಾಮಕೃಷ್ಣ ಮಿಶನ್‌ನ ಉಪಕೇಂದ್ರ ಪ್ರಾರಂಭಿಸಲಾಯಿತು. ಸ್ವಾಮೀಜಿ ಉಳಿದುಕೊಂಡಿದ್ದ ಕೋಣೆಯನ್ನು ಅವರು ಉಪಯೋಗಿಸಿದ ಮಂಚ, ನಿಲವುಗನ್ನಡಿ ಮತ್ತು ದಂಡಗಳೊಂದಿಗೆ ಹಾಗೆಯೇ ಕಾಯ್ದುಕೊಳ್ಳಲಾಗಿದೆ. ೨೦೧೪ರಲ್ಲಿ ಮನೆಯ ಉಳಿದ ೨/೩ ಭಾಗವನ್ನು ಶ್ರೀ ದತ್ತೋಪಂತ ಬೆಳವಿಯವರ ಮೊಮ್ಮಗನಿಂದ ಬೆಳಗಾವಿಯ ರಾಮಕೃಷ್ಣ ಮಿಶನ್ ಆಶ್ರಮ ಕೊಂಡುಕೊಳ್ಳುವ ಮೂಲಕ ಇಡೀ ಮನೆಯ ಸ್ವಾಮ್ಯವನ್ನು ಪಡೆದು ಕೊಂಡಿತು. ತದನಂತರ ಈ ಮನೆಯನ್ನು ಪುನರುಜ್ಜೀವನಗೊಳಿಸಿ ಅದನ್ನು ಪಾರಂಪರಿಕ ಕಟ್ಟಡದ ರೂಪದಲ್ಲಿ ಬೆಳಗಾವಿಯ ಹೆಮ್ಮೆಯ ಸ್ಮಾರಕವಾಗಿ ಪರಿವರ್ತಿಸುವ ಯೋಜನೆ ರೂಪಿಸಿತು. ಬೆಳವಿಯವರ ಮನೆಯು ಅವರ ವಂಶಜರಲ್ಲಿಯೇ ವಿಭಾಗಿಸಲ್ಪಟ್ಟಿದ್ದು, ಹಲವಾರು ಮಧ್ಯ ಗೋಡೆಗಳು ನಿರ್ಮಿಸಲ್ಪಟ್ಟಿದ್ದವು. ಮನೆಯ ಒಳಗೆ ಮತ್ತು ಹೊರಗೆ ಮನೆಯಲ್ಲಿ ವಾಸಿಸುವರ ಅನುಕೂಲಕ್ಕೆ ತಕ್ಕಂತೆ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಳ್ಳಲಾಗಿತ್ತು. ಅದಲ್ಲದೇ ೧೫೦ ವರ್ಷಗಳ ಹಿಂದಿನ ಈ ಕಟ್ಟಡದಲ್ಲಿ ಬಿರುಕುಗಳು ಸಹ ಕಾಣಿಸಿಕೊಂಡಿದ್ದವು. ೨೦೧೩ರಲ್ಲಿ ಬೆಂಕಿಯ ಅಪಘಾತವೊಂದರಲ್ಲಿ ಮನೆಯ ಮೇಲ್ಮಹಡಿಯು ಸುಟ್ಟುಹೋಗಿದ್ದು ಅದನ್ನು ದುರಸ್ತಿಗೊಳಿಸುವುದು ಅನಿವಾರ್ಯವಾಯಿತು. ಕಟ್ಟಡವು ಇನ್ನಷ್ಟು ದುರ್ಬಲವಾಗುವುದನ್ನು ತಪ್ಪಿಸಲು ಮತ್ತು ವಿವೇಕಾನಂದರು ತಂಗಿದಾಗಿನ ಸಮಯದಲ್ಲಿ ಯಾವ ವಿನ್ಯಾಸದಲ್ಲಿ ಮನೆಯು ಇತ್ತೊ ಅದೇ ಪೂರ್ವಸ್ಥಿತಿಗೆ ಕಟ್ಟಡವನ್ನು ಇರಿಸಲು ಜೀರ್ಣೋದ್ಧಾರ ಕಾರ್ಯವನ್ನು ತುರ್ತಾಗಿ ಕೈಗೊಳ್ಳಲಾಯಿತು.

೨೦೧೪ರ ಅಕ್ಟೋಬರನಲ್ಲಿ ಮನೆಯು ಬೆಳಗಾವಿಯ ರಾಮಕೃಷ್ಣ ಮಿಶನ್ ಆಶ್ರಮದ ಆಧೀನಕ್ಕೆ ಬಂದಕೂಡಲೇ ಜೀರ್ಣೋದ್ಧಾರ ಕಾರ್ಯವನ್ನು ಪ್ರಾರಂಭಿಸಲಾಯಿತು. ೧೫೦ ವರ್ಷಗಳ ಕಟ್ಟಡ ನಿರ್ಮಾಣದ ತಾಂತ್ರಿಕ ಕಾರ್ಯ ವಿಧಾನದಲ್ಲೇ ಜೀರ್ಣೋದ್ಧಾರ ಕಾರ್ಯ ಭರದಿಂದ ನಡೆಯುತ್ತಿದ್ದು ಪೂರ್ಣಗೊಳ್ಳುವ ಹಂತದಲ್ಲಿದೆ. ಈ ಕಟ್ಟಡಕ್ಕೆ ಲೋಹ ಮತ್ತು ಸಿಮೆಂಟ ಬಳಕೆ ಇಲ್ಲದಿರುವುದು ಇದರ ವೈಶಿಷ್ಟ್ಯ. ಕಟ್ಟಡ ನಿರ್ಮಾಣಕ್ಕೆ ಆ ದಿನಗಳಲ್ಲಿದ್ದ ಹಾಗೆ ಸುಣ್ಣ, ಜಂಬೂರಿ ಇಟ್ಟಿಗೆ ಮತ್ತು ಕೇರಳದ ಮರಮಟ್ಟುಗಳನ್ನು ಮಾತ್ರ ಬಳಸಲಾಗುತ್ತಿದೆ. ಜೀರ್ಣೋದ್ಧಾರದ ಕಾರ್ಯವನ್ನು ಸುಮಾರು ೪ ದಶಕಗಳ ಅನುಭವವುಳ್ಳ ಮೈಸೂರಿನ ತಾಂತ್ರಿಕ ಸಲಹೆಗಾರರಾದ (chief conservation consultant) ಶ್ರೀಯುತ ಗುಂಡುರಾವ ಅವರ ನೇತೃತ್ವದಲ್ಲಿ ಅವರ ನಿರ್ದೇಶನಾನುಸಾರ ನಡೆಸಲಾಗುತ್ತಿದೆ.

ಮನೆಯ ನವೀಕರಣ ಮುಕ್ತಾಯದ ಹಂತದಲ್ಲಿದ್ದು ಮನೆಯನ್ನು ಸ್ವಾಮಿ ವಿವೇಕಾನಂದರು ತಂಗಿದ್ದ ಸ್ಮರಣಾರ್ಥ ಪಾರಂಪರಿಕ ಸ್ಮಾರಕವಾಗಿ ಘೋಷಿಸಲಾಗಿದೆ. ಸ್ವಾಮಿ ವಿವೇಕಾನಂದರ ಜೀವನ ಸಂದೇಶಗಳ ಚಿತ್ರಣಗಳನ್ನೊಳಗೊಂಡ ಪ್ರದರ್ಶನಾಲಯವು ಸ್ಮಾರಕದ ಭಾಗವಾಗಿದೆ. ವಿವೇಕಾನಂದರು ತಂಗಿದ್ದ ಕೊಠಡಿ ಪ್ರದರ್ಶನಾಲಯ ಕೇಂದ್ರ

ಬಿಂದು. ಭಾರತದ ಐತಿಹಾಸಿಕ ಸಾಂಸ್ಕೃತಿಕ ಸಂಪತ್ತನ್ನು, ಸ್ವಾತಂತ್ರ್ಯ ಹೋರಾಟ ಅಧಿವೇಶನ ಮುಂತಾದ ಬೆಳಗಾವಿಯ ಇತಿಹಾಸದ ಪ್ರಮುಖ ಘಟ್ಟಗಳನ್ನು ಪಾರಂಪರಿಕ ಮನೆಯ ಪ್ರದರ್ಶನಾಲಯದಲ್ಲಿ ಬಿಂಬಿಸಲಾಗುವುದು. ಮನೆಯ ನೆಲಮಹಡಿಯಲ್ಲಿ ವಿವೇಕಾನಂದರು ನೆಲೆಸಿದ್ದ ಕೋಣೆ ಪಕ್ಕದಲ್ಲಿಯೇ ಒಂದು ಪೂಜಾಗೃಹ ಮತ್ತು ಧ್ಯಾನಮಂದಿರ ಹೊಂದಿದೆ.

ರಾಮಕೃಷ್ಣ ಮಿಶನ್ ಆಶ್ರಮದ ಬೆಳಗಾವಿ ಘಟಕ ವಿವೇಕಾನಂದರು ಬೆಳಗಾವಿಯ ಭೇಟಿಯ ಸಂದರ್ಭದಲ್ಲಿ ತಂಗಿದ್ದ ಮನೆಯನ್ನು ಸ್ಮಾರಕವಾಗಿ ಕಾಯ್ದಿರಿಸುವ ನಿಟ್ಟಿನಲ್ಲಿ ಮನೆಯ ನಿರ್ಮಾಣ, ನಿರ್ವಹಣೆಯಲ್ಲಿ ಹಾಗೂ ವಿವೇಕಾನಂದರ ಜೀವನ ಸಂದೇಶಗಳನ್ನು ಪ್ರಚುರಪಡಿಸುವ ನಿಟ್ಟಿನಲ್ಲಿ ಕೈಗೊಂಡ ಕಾರ್ಯ ಶ್ಲಾಘನೀಯ. ಇಂದು ಈ ಪಾರಂಪರಿಕ ಕಟ್ಟಡ ವಿವೇಕಾನಂದರ ಬೆಳಗಾವಿ ಭೇಟಿಯ ಹಮ್ಮೆಯ ಸ್ಮಾರಕವಾಗಿ ತಲೆ ಎತ್ತಿ ನಿಂತಿದೆ.



## ಆಧಾರ ಗ್ರಂಥಗಳು


೧. Reminiscences of Swami Vivekanada – G.S.Bhate.

೨. The Life Of Swami Vivekanada, His Eastern & Western disciples, Vol-II, Kolkata, 1986(6th Edition).

೩. ಸ್ವಾಮಿ ತದ್ಯುಕ್ತಾನಂದ, ರಾಮಕೃಷ್ಣ ಆಶ್ರಮ, ಬೆಳಗಾವಿ ಇವರೊಡನೆ ನಡೆಸಿದ ದೀರ್ಘ ಸಂದರ್ಶನ.

೪. ಪಾರಂಪರಿಕ ತಾಣವಾದ ಭಾತೆಯವರ ನಿವಾಸದಲ್ಲಿ ಕೈಗೊಂಡ ಕ್ಷೇತ್ರ ಕಾರ್ಯ.

೫. ಕಾಮತ ಎಸ್.ಯು (ಸಂ) ಬೆಳಗಾವಿ ಜಿಲ್ಲಾ ಗೆಝೆಟಿಯರ, ಬೆಂಗಳೂರು, ೧೯೮೬.

೬. ಸ್ವಾಮಿ ನಿತ್ಯಾನಂದ (ಸಂಗ್ರಹಾನುವಾದ) "ಸ್ವಾಮಿ ವಿವೇಕಾನಂದರ ದಿವ್ಯ ಸ್ಮೃತಿ" ಮೈಸೂರು, ೨೦೧೩

೭. ವಿವೇಕಾನಂದರು ತಂಗಿದ್ದ ಪಾರಂಪರಿಕ ಕಟ್ಟಡ ಮತ್ತು ಮತ್ತಿತರ ಭಾಗಗಳಲ್ಲಿ ಕೈಗೊಂಡ ಕ್ಷೇತ್ರ ಕಾರ್ಯ.



# ಕರಿಭಂಟನಾಳದ ಶ್ರೀಗುರುಗಂಗಾಧರೇಶ್ವರರ ಸ್ವಾಮಿಗಳು ಮತ್ತು ಕಂಪನಿ ಸರ್ಕಾರದ ವಿರುದ್ಧ ಸ್ವತಂತ್ರ ಸಂಗ್ರಾಮದ ಹೋರಾಟ

ಪ್ರೊ. ಎಸ್.ಸಿ. ಪಾಟೀಲ*

ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನಿಂದ ಸುಮಾರು ೧೨ ಕಿ.ಮೀ. ದೂರದಲ್ಲಿರುವ ಕರಿಭಂಟನಾಳ ಗ್ರಾಮ. ಸು. ೩೫೦೦ ಜನಸಂಖ್ಯೆಯನ್ನು ಹೊಂದಿರುವ ಈ ಊರಿನಲ್ಲಿ ಶ್ರೀ ಗುರುಗಂಗಾಧರೇಶ್ವರರ ಮಠ ಮತ್ತು ಅವರ ಕರ್ತೃ ಗದ್ದುಗೆಯ ದೇವಸ್ಥಾನವಿದೆ. ೧೮೫೭ರ ಪೂರ್ವದಲ್ಲಿ ಬ್ರಿಟೀಷರ ವಿರುದ್ಧ ದಂಗೆಯೆದ್ದು, ತಮ್ಮದೇ ಆದ ಖಾಸಗಿ ಸೈನ್ಯವನ್ನು ಕಟ್ಟಿ, ಸುರಪುರ ಸಂಸ್ಥಾನದಲ್ಲಿ ಅವರ ಸಹಕಾರದೊಂದಿಗೆ ಬ್ರಿಟೀಷರ ವಿರುದ್ಧ ಹೋರಾಡುವ ಮೂಲಕ ಸ್ವತಂತ್ರ ಸಂಗ್ರಾಮದ ಕಿಡಿಯನ್ನು ಹಚ್ಚಿದ ವೀರಸೇನಾನಿ ಈ ಶ್ರೀಗುರುಗಂಗಾಧರೇಶ್ವರರಾಗಿದ್ದಾರೆ. ಒಬ್ಬ ಮಠಾಧಿಪತಿಯಾಗಿ ಧಾರ್ಮಿಕ ಕಾರ್ಯದೊಂದಿಗೆ ಸಮಾಜದ ಸುಧಾರಣೆಗೆ ಕಂಕಣಬದ್ಧರಾಗಿ ನಿಂತು ಹೋರಾಡಿದ ವ್ಯಕ್ತಿತ್ವ ಇವರದು.

ಕರ್ನಾಟಕ ರಾಜ್ಯದ ಹಿಂದಿನ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಎಸ್. ನಿಜಲಿಂಗಪ್ಪನವರ ಅಪೇಕ್ಷೆಯ ಮೇರೆಗೆ ದಿ। ತಿರುಮಲ ತಾತಾಚಾರ್ಯ ಶರ್ಮಾ ಅವರನ್ನು '೧೮೫೭ರ ಭಾರತದ ಚರಿತ್ರೆಯಲ್ಲಿ ಕರ್ನಾಟಕದ ಪಾತ್ರ', ಈ ವಿಷಯದ ಕುರಿತು ಬರೆಯುವಂತೆ ಕೋರಲು, ಶರ್ಮಾರವರು ಪ್ರಕಟಿಸಿದ' ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ' (೧೮೦೦ ರಿಂದ ೧೮೫೭ರ ವರೆಗೆ ಪ್ರಕಟನೆ ೧೯೫೭) ಕೃತಿಯಲ್ಲಿ ಅವರು ವಿಶೇಷವಾಗಿ ನಾಲ್ವಡಿ ವೆಂಕಟಪ್ಪ ನಾಯಕರನ್ನು ಕುರಿತು "ಸುರಪುರದ ನಾಲ್ವಡಿ ವೆಂಕಟಪ್ಪ ನಾಯಕರು ಎಂದೂ ಮರೆಯದ ಹೆಸರು" ಎಂದಿದ್ದಾರೆ.

'The Freedom Struggle in Hyderabad Volume-2, Page 99' ಹೈದರಾಬಾದದ ಇತಿಹಾಸದಲ್ಲಿ, ಮೆಡೋಸ್ ಟೇಲರ್‌ನ ಕೃತಿ ಮತ್ತು ಸಾವರಕರರು ಬರೆದ ೧೮೫೭ರ ಕೃತಿಯಲ್ಲಿಯೂ ಸಹ ನಾಲ್ವಡಿ ವೆಂಕಟಪ್ಪ ನಾಯಕರ ಕುರಿತು ಇದೇ ರೀತಿಯ ಅಭಿಪ್ರಾಯಗಳಿವೆ. ಎಲ್ಲಾ ಕೃತಿಗಳಲ್ಲಿಯೂ ರಾಜಾ ನಾಲ್ವಡಿ ವೆಂಕಟಪ್ಪ ನಾಯಕರನ್ನು 'ದಿಟ್ಟ ಸ್ವಾತಂತ್ರ್ಯ ಯೋಧ' ಎಂದು ಬಣ್ಣಿಸಲಾಗಿದೆ ಮತ್ತು ಈ ಹೋರಾಟಕ್ಕೆ ಮೂಲಸೂತ್ರದಾರರು ಕರಿಭಂಟನಾಳದ "ಶ್ರೀ ಗುರು ಗಂಗಾಧರೇಶ್ವರರು" ಎಂಬುದನ್ನು ಯಾರೂ ಕಡೆಗಣಿಸುವಂತಿಲ್ಲ ಎಂದು ಹೇಳುತ್ತ ಮತ್ತೊಂದು ಕಡೆಗೆ ಇಂತಹ ಧೀರೋದಾತ್ತ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಎಲೆ ಮರೆಯ ಕಾಯಿಯಂತೆ ಸಹಾಯ ಮಾಡಿದ ಶ್ರೀಗಳಾದ ಶ್ರೀಗುರುಗಂಗಾಧರೇಶ್ವರ ಸ್ವಾಮಿಗಳವರ ವಿಷಯವು ಹಾಗೂ ೫೦೦ಕ್ಕೂ ಹೆಚ್ಚು ಜನ ವೀರಶೈವ ಹಂಡೆವಜೀರ ಜನಾಂಗದ ವೀರಯೋಧರು ಈ ಹೋರಾಟದಲ್ಲಿ ಹುತಾತ್ಮರಾಗಿರುವುದನ್ನು ಎಲ್ಲಿಯೂ ದಾಖಲಿಸದೇ ಇರುವುದು ವಿಷಾದನೀಯ. ಈ ಯೋಧರ ಹೆಸರನ್ನು ನೆನಪಿಸುವ ಕುರುಹಾಗಿ ಸುರಪುರದಲ್ಲಿ ಇಂದಿಗೂ ಹಂಡೇವಜೀರ ಎಂಬ ಬೀದಿಯೂ ಇರುವುದನ್ನು ಗಮನಿಸಬಹುದಾಗಿದೆ ಎಂದು ರಾಜಾ ವೆಂಕಟಪ್ಪನಾಯಕ (ತಾತಾ)[1] ಬಲವಂತ ಬಹರಿ ಬಹದ್ದೂರ, ಸುರಪುರ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಗಮನಾರ್ಹವಾಗಿವೆ.

ಈ ವೀರಯೋಧರ ಕುರಿತು ಶ್ರೀ ಹುಲಕಂಟೆಪ್ಪ ನಿಂಗಪ್ಪ ಹೆರೂರ ಸಾ। ಇಂಗಳೇಶ್ವರ ಇವರು "ಧರ್ಮಸೇನಾನಿ" ಎಂಬ ಸ್ವಾತಂತ್ರ್ಯ ಸಂಗ್ರಾಮದ ರಣಸಾಹಸವನ್ನು ಸಾರುವ ಐತಿಹಾಸಿಕ ನಾಟಕವನ್ನು ರಚಿಸಿದ್ದಾರೆ. ಈ ಯೋಧರ ಜೀವನಸಾಧನೆಯನ್ನು ಕುರಿತು ವೇದಮೂರ್ತಿ ಶ್ರೀ ಶಿವಲಿಂಗಯ್ಯ ಘೋಷಯ್ಯ ಹಿರೇಮಠ ಸಾ। ಬೂದಿಹಾಳ ಇವರು ಆಂಗ್ಲ ಭಾಷೆಯಲ್ಲಿ ೧೮೫೭ರ ಸ್ವತಂತ್ರ ಸಂಗ್ರಾಮಕ್ಕೆ ಸುರಪುರದಲ್ಲಿ ಏಕಕಾಲಕ್ಕೆ ಬ್ರಿಟೀಷರೊಂದಿಗೆ ಹೋರಾಡಿ ವೀರಮರಣವನ್ನು ಹೊಂದಿದ ಈ ಹಂಡೇವಜೀರ ಜನಾಂಗದ ಚರಿತ್ರೆಯನ್ನು ಬರೆದಿದ್ದಾರೆ. ಈ ಗ್ರಂಥ ರಚನೆಯ ಸಂದರ್ಭದಲ್ಲಿ ಶ್ರೀ ಚನ್ನಬಸಪ್ಪಗೌಡ ಭೀಮನಗೌಡ ಪಾಟೀಲ ಸಾ। ಕರಿಭಂಟನಾಳ, ಶ್ರೀ ಬಸನಗೌಡ ರಾಮನಗೌಡ ಪಾಟೀಲ ಸಾ। ನಾಗೂರ, ಶ್ರೀ ಬಸನಗೌಡ ರಾಮನಗೌಡ ಪಾಟೀಲ

* ವಿಶೇಷಾಧಿಕಾರಿಗಳು, ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ, ಪ್ರಾದೇಶಿಕ ಕಚೇರಿ, ಶೇಷಾದ್ರಿಪುರಂ, ಬೆಂಗಳೂರು-೫೬೦೦೨೦.

ಸಾ। ತಂಗಡಗಿ, ಶ್ರೀ ವೇದಮೂರ್ತಿ ಶಿವಲಿಂಗಯ್ಯ ಪ್ರಭಯ್ಯ ಹಿರೇಮಠ ಸಾ। ನವಲಿ ಮತ್ತು ಶ್ರೀ ರಾಜಾ ಪಿಡ್ನಾಯಕ, ಸುರಪುರ ಸಂಸ್ಥಾನ, ಶ್ರೀ ತಾತಾ ವೆಂಕಟಾಚಾರ್ಯ ಬೋಜರಾವ್ ಕುಲಕರ್ಣಿ ಮುಂತಾದವರು ಹಾಗೂ ಈ ಗ್ರಂಥವನ್ನು ವೀರಸಾವರ್ಕರ್ ಪ್ರತಿಷ್ಠಾನ, ಬಾಂಬೆ ಇವರಿಗೆ ಕಳುಹಿಸಿಕೊಟ್ಟ ಸನ್ಮಾನ್ಯ ಶ್ರೀ ಜಿ.ಎಲ್. ಪಾಟೀಲ, ಕುದರೀ ಸಾಲೋಡಗಿ ಅವರ ವಿವರಗಳು ಕರಿಭಂಟನಾಳ ಮಠದ ದಾಖಲೆಯಲ್ಲಿರುವುದನ್ನು ಈಗಲೂ ಕಾಣಬಹುದಾಗಿದೆ[೨] ಎಂಬ ಜಿ.ಎನ್. ಪಾಟೀಲ ಅವರ ಅಭಿಪ್ರಾಯಗಳು 'ಕ್ರಾಂತಿ ಕೇಸರಿ' ಗ್ರಂಥದಲ್ಲಿ ಉಲ್ಲೇಖಗೊಂಡಿವೆ. ಈ ಮಠದ ಬಗ್ಗೆ ಇಲ್ಲಿಯವರೆಗೆ ಗುರುಗಂಗಾಧರೇಶ್ವರರ ಕುರಿತು ಬಂದ ಕೆಲವು ಅಧ್ಯಯನಗಳಾಗಿವೆ.

೧೮೫೭ ನಮ್ಮ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ನಾವು ಪರಿಗಣಿಸಿದರೂ ಪ್ಲಾಸೀ ಕದನದ ನಂತರ ೧೭೬೩ರಿಂದ ೧೮೫೭ರ ವರೆಗಿನ ಈ ಮಧ್ಯದ ಅವಧಿಯಲ್ಲಿ ಉತ್ತರ ಭಾರತದಲ್ಲಿ ೨೫, ಮುಂಬೈ ಮತ್ತು ಪಶ್ಚಿಮ ಭಾರತದಲ್ಲಿ ೨೫ ಮತ್ತು ದಕ್ಷಿಣ ಭಾಗದಲ್ಲಿ ೧೯ ದಂಗೆಗಳಲ್ಲದೇ ಇನ್ನೂ ಗಣನೆಗೆ ತೆಗೆದುಕೊಳ್ಳುವ ನೂರಾರು ಪ್ರತಿರೋಧಗಳು ನಡೆದು ಹೋಗಿವೆ ಎಂದು ಇತಿಹಾಸಕಾರ ತಿ. ತಾ. ಶರ್ಮಾ ತಮ್ಮ ಪುಸ್ತಕ 'ವಿಕ್ರಾಂತ ಭಾರತ'ದಲ್ಲಿ ಪಟ್ಟಿ ಮಾಡಿ ಹೇಳಿದ್ದಾರೆ. ಕಿತ್ತೂರು ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ಸುರಪುರದ ವೆಂಕಟಪ್ಪ, ಸಂತಾಲರು, ಕೊಟ್ಟಾಯಂನ ಕೇರಳವರ್ಮ, ಉತ್ತರ ಆರ್ಕಾಟಿನ ಪಾಳೆಯಗಾರರು, ರಾಯಲ್ ಸೀಮೆಯ ಪಾಳೆಗಾರರು ಇವರೆಲ್ಲ ೧೮೫೭ರ ಪೂರ್ವದ ಪಟ್ಟಿಯಲ್ಲಿ ಸೇರುತ್ತಾರೆ. ಇವೆಲ್ಲವನ್ನು ಕೇವಲ ದೊಂಬಿ, ದಂಗೆ, ಗೆರಿಲ್ಲಾ ಸಮರಗಳೆಂದು ಗುರುತಿಸಿದ್ದರು ಕೂಡಾ ಎಲ್ಲ ದಂಗೆಗಳ ಸ್ವರೂಪ ಒಂದೇ ಬಗೆಯದು. ಅದು ಬಿಳಿಯರಿಗೆ ಆಧೀನ ರಾಗಿರಲು ಒಲ್ಲದವರು ತಮ್ಮ ಸ್ವಾತಂತ್ರ್ಯ ಉಳಿಸಿಕೊಳ್ಳಲು ನಡೆಸಿದ ಹಣಾಹಣಿ ಹೋರಾಟಗಳು ಎಂಬುದನ್ನು ಮರೆಯಲಾಗದು.[೩] ಈ ಪರಂಪರೆಯಲ್ಲಿಯೇ ನಡೆದ ಹೋರಾಟ ಈ ಶ್ರೀ ಗುರುಗಂಗಾಧರೇಶ್ವರರದ್ದಾಗಿದೆ.

ಕರಿಭಂಟನಾಳದಲ್ಲಿ ಶ್ರೀಶೈಲ ಪೀಠದ ಶಾಖಾ ಮಠ ವೊಂದರಲ್ಲಿ ೧೮೨೪ರಲ್ಲಿ ಜನಿಸಿದ ಶ್ರೀಗುರು ಗಂಗಾಧರೇ ಶ್ವರರು ಮಠಾಧೀಶರಾಗಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಧ್ಯಾನ, ಯೋಗ ಮತ್ತು ಗಾಂವಟಿ ಔಷಧಿಗಳನ್ನು ಜನಸಾಮಾನ್ಯರಿಗೆ ನೀಡುತ್ತ, ಜನರ ಆರೋಗ್ಯ ವನ್ನು ಮತ್ತು ಜನರಲ್ಲಿ ಆಧಾತ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತ ಮಠದ ಕಾರ್ಯದಲ್ಲಿ ತೊಡಗಿಸಿಕೊಂಡವರು. ಆದರೆ ಇವರಿಗೆ ಆ ಕಾಲದಲ್ಲಿ ನಡೆದ ಈ ಕೆಳಗಿನ ಕೆಲವು ಪ್ರಮುಖ ಘಟನೆಗಳು ಖಾಸಗಿ ಸೈನ್ಯವನ್ನು ಕಟ್ಟಿ ಬ್ರಿಟಿಷ ರೊಂದಿಗೆ ಹೋರಾಡಲು ಪ್ರೇರಣೆಯನ್ನು ನೀಡಿರುವಂತಿದೆ.

### ಕರಿಭಂಟನಾಳದಲ್ಲಿ ಬ್ರಿಟಿಷಾಧಿಕಾರಿಯಿಂದ ನಡೆದ ಅತ್ಯಾಚಾರ ಪ್ರಕರಣ

ಕರಿಭಂಟನಾಳದ ಸಮೀಪದಲ್ಲಿರುವ ರೆಬಿನಾಳ ಗ್ರಾಮದ, ಕೋಲಕಾರ (ಗಂಗಮತ) ಸಮುದಾಯಕ್ಕೆ ಸೇರಿದ ನಿಂಗವ್ವ ಎಂಬ ಹೆಣ್ಣು ಮಗಳು ತುಂಬಾ ಸ್ಪುರದ್ರೂಪಿ ಯಾಗಿದ್ದಳು. ಅವಳ ಮೇಲೆ ಬ್ರಿಟೀಷಾಧಿಕಾರಿ ನ್ಯೂಮಾಸನ್‌ನ ವಕ್ರದೃಷ್ಟಿ ಬಿದ್ದಿತು. ನಿಂಗವ್ವಳನ್ನು ತನ್ನವಳನ್ನಾಗಿ ಮಾಡಿಕೊಳ್ಳ ಬೇಕೆಂದು ಆ ಬ್ರಿಟಿಷ ಅಧಿಕಾರಿ ಹೊಂಚು ಹಾಕಿ ಅವಳನ್ನು ಅಪಹರಿಸಿ, ಧಾರವಾಡಕ್ಕೆ ತಂದಿಟ್ಟುಕೊಳ್ಳುತ್ತಾನೆ. ನ್ಯೂ ಮಾಸನ್ ಅವಳಿಗೆ ಯಾವ ಸ್ವಾತಂತ್ರ್ಯವನ್ನು ಕೊಡಲಿಲ್ಲ. ಒಂದು ಬೆಳಗಿನ ಜಾವ ನಿಂಗವ್ವ ತನ್ನೆರಡು ಮಕ್ಕಳೊಂದಿಗೆ ಕರಿಭಂಟನಾಳ ಗ್ರಾಮಕ್ಕೆ ಧಾರವಾಡದಿಂದ ತಪ್ಪಿಸಿಕೊಂಡು ಬರುತ್ತಾಳೆ. ಅಂದು ರಾತ್ರಿ ತನ್ನ ಎರಡೂ ಮಕ್ಕಳಿಗೆ ವಿಷ ಕೊಟ್ಟು ತಾನೂ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಂದಿಗೂ ಈ ಮಠದ ಪಕ್ಕದಲ್ಲಿ ನಿಂಗವ್ವ ಮತ್ತು ಅವಳ ಇಬ್ಬರು ಮಕ್ಕಳ ಸಮಾಧಿಗಳಿವೆ.

ಹೃದಯ ಬಿರಿಯುವಂತಹ ಈ ಘಟನೆಯನ್ನು ನೋಡಿ ಗಂಗಾಧರೇಶ್ವರರು, ಒಬ್ಬ ಹೆಣ್ಣು ಮಗಳಿಗೆ ಇಂತಹ ಅನ್ಯಾಯ ಮಾಡಿದ ಬ್ರಿಟಿಷ ಅಧಿಕಾರಿಯ ವಿರುದ್ಧ ಸಹಜವಾಗಿಯೇ ಸಿಡಿದೆದ್ದರು. ಅತ್ಯಾಚಾರದಂತಹ ಕೆಟ್ಟ ಸಂಸ್ಕೃತಿಯ ಈ ಬ್ರಿಟಿಷರನ್ನು ದೇಶಬಿಟ್ಟು ಓಡಿಸಬೇಕೆಂದು ಗಂಗಾಧರೇಶ್ವರರು ಅಂದೇ ಪಣತೊಟ್ಟರು. ಆ ನಿಟ್ಟಿನಲ್ಲಿ ಹೆಜ್ಜೆಹಾಕಿ, ತಮ್ಮ ಶಿಷ್ಯರೊಂದಿಗೆ ಇಂಗ್ಲೀಷ ಸರಕಾರದ ವಿರುದ್ಧ ಬಂಡಾಯ ವೇಳುವ ನಿರ್ಧಾರವನ್ನು ಕೈಗೊಳ್ಳುತ್ತಾರೆ.

### ಲಿಂಗಸಗೂರು ತಾಲೂಕಿನ ನವಲಿಯಲ್ಲಿ ನಡೆದ ಕುಶಲ ಕರ್ಮಿಗಳ ಮೇಲಿನ ದಬ್ಬಾಳಿಕೆ

ಶ್ರೀಗುರುಗಂಗಾಧರೇಶ್ವರರ ಶಾಖಾ ಮಠವಾದ ನವಲಿಯಲ್ಲಿ ನೇಕಾರ ಜನಾಂಗವು ನೇಯ್ಗೆಯಲ್ಲಿ ಉಡುಪು ಗಳನ್ನು ಸಿದ್ಧಪಡಿಸುತ್ತಿದ್ದರು. ಇವರು ಈ ಮಠದ ನಿಷ್ಠಾವಂತ ಭಕ್ತರಾಗಿದ್ದರು. ಅವರು ದೇಶ ವಿರೋಧಿ ಕೆಲಸ ಮಾಡುತ್ತಿದ್ದರೆಂದು ಆರೋಪಿಸಿದ ಬ್ರಿಟೀಷರು ಅವರಿಗೆ ಹಿಂಸೆ ಮಾಡುತ್ತಿದ್ದರಂತೆ. ಕೆಲವರ ಕೈಗಳನ್ನು ಕತ್ತರಿಸಿರುವ ಘಟನೆಗಳು ನಡೆಯುತ್ತವೆ. ಅಲ್ಲಿಯ ಜನ ಗುರು ಗಂಗಾಧರೇಶ್ವರರಲ್ಲಿ ರಕ್ಷಣೆಗಾಗಿ ಹೋದಾಗ ಅವರು ಈ ಅನ್ಯಾಯವಾದ ನೇಕಾರರನ್ನು ಕರಿಭಂಟನಾಳಕ್ಕೆ ಕರೆದುಕೊಂಡು ಬಂದು ಮಠದಲ್ಲಿ ಆಶ್ರಯ ನೀಡಿ, ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಿದ

ಕುರಿತು ಹೇರಳವಾದ ಮೌಖಿಕ ದಾಖಲೆಗಳಿವೆ. ಈ ಘಟನೆಯೂ ಕೂಡಾ ಶ್ರೀಗುರು ಗಂಗಾಧರೇಶ್ವರ ಸ್ವಾಮಿಗಳಲ್ಲಿ ಬ್ರಿಟೀಷರ ವಿರುದ್ಧ ಅತೃಪ್ತಿ ಹೆಚ್ಚಾಗಲು ಕಾರಣವಾಗುತ್ತದೆ.

## ಬ್ರಿಟೀಷರ ನಿಶ್ಯಸ್ತ್ರೀಕರಣ ಕಾಯ್ದೆ

೧೮೫೭ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಜಾರಿಗೆ ತಂದ ನಿಶ್ಯಸ್ತ್ರೀಕರಣ ಕಾಯ್ದೆ ಅಥವಾ ಶಸ್ತ್ರಾಸ್ತ್ರ ನಿಯಂತ್ರಣ ಕಾನೂನಿನ ಪ್ರಕಾರ ಇಂಗ್ಲೀಷರಲ್ಲದ, ಭಾರತದಲ್ಲಿ ವಾಸಿಸುವ ಎಲ್ಲರೂ ತಮ್ಮಲ್ಲಿರುವ ಶಸ್ತ್ರಾಸ್ತ್ರಗಳನ್ನು ಕಂಪನಿ ಸರ್ಕಾರಕ್ಕೆ ಒಪ್ಪಿಸಬೇಕು ಅಥವಾ ಹೊಸದಾಗಿ ಶಸ್ತ್ರಾಸ್ತ್ರಗಳನ್ನು ಖರೀದಿಸಬೇಕಾಗಿದ್ದಲ್ಲಿ ಕಂಪನಿ ಸರಕಾರದ ಪರವಾನಿಗೆ (ಲೈಸೆನ್ಸ್) ಪಡೆದುಕೊಳ್ಳಬೇಕು. ಅನುಮತಿ ಇಲ್ಲದೆ ಆಯುಧ ಹೊಂದುವುದು ಮಹಾಪರಾಧ. ಈ ಕಾನೂನು ಉಲ್ಲಂಘನೆಗೆ ಉಗ್ರ ಶಿಕ್ಷೆ ಹಾಗೂ ಭಾರೀ ಮೊತ್ತದ ದಂಡ ಕಟ್ಟಬೇಕಾಗುತ್ತಿತ್ತು. ಭಾರತೀಯರನ್ನು ಮಾನಸಿಕವಾಗಿ ಕಂಗೆಡಿಸುವಂತಹ ಕರಾಳ ಶಾಸನವಾಗಿತ್ತು.' ಬಸವನ ಬಾಗೇವಾಡಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇವರ ಅನೇಕ ಶಿಷ್ಯರ ಬಳಿಯಿದ್ದ ಶಸ್ತ್ರಾಸ್ತ್ರಗಳನ್ನು ಜಪ್ತುಮಾಡಿ, ಉಗ್ರ ಶಿಕ್ಷೆ, ದಂಡ ವಿಧಿಸುತ್ತಿರುವುದು ಗಂಗಾಧರೇಶ್ವರರಲ್ಲಿ ಬ್ರಿಟೀಷರ ವಿರುದ್ಧ ಸಿಡಿದೇಳಲು ಪ್ರಮುಖ ಕಾರಣವಾಗಿದೆ.

ಶ್ರೀಗಳು ಸ್ಥಾಪಿಸಿದ ಎಂಟು ಶಾಖಾಮಠಗಳಿದ್ದವು. ಅಫಜಲಪೂರ ತಾಲೂಕಿನ ಘತ್ತರಗಿ, ಲಿಂಗಸೂಗೂರ ತಾಲೂಕಿನ ನವಲಿ, ಹುನಗುಂದ ತಾಲೂಕಿನ ಮರೋಳ, ಮುದ್ದೇಬಿಹಾಳ ತಾಲೂಕಿನ ತಂಗಡಗಿ, ಗರಸಂಗಿ, ಬಸವನ ಬಾಗೇವಾಡಿ ತಾಲೂಕಿನಲ್ಲಿ ನಾಗೂರ, ಸಂಕನಾಳ ಈ ಎಲ್ಲ ಮಠಗಳು ಸಾವಿರಾರು ಸದ್ಭಕ್ತರನ್ನು ಹಾಗೂ ಅಪಾರ ಸಂಪತ್ತನ್ನು ಹೊಂದಿದ್ದವು.

ಶ್ರೀಮಠದ ಪರಮಶಿಷ್ಯರಾದ ವೀರಶೈವ ಹಂಡೇವಜೀರ ಜನಾಂಗದ ಮೊದಲ ಸಭೆಯನ್ನು ಕರಿಭಂಟನಾಳದ ಮಠದಲ್ಲಿ ಕರೆದರು. ಈ ಸಭೆಗೆ ನೂರಾರು ಶಿಷ್ಯಂದಿರು ಆಗಮಿಸಿದರು. ರಾತ್ರಿಯುದ್ದಕ್ಕೂ ಚರ್ಚೆಗಳು ನಡೆದವು. ಶ್ರೀಗುರುಗಂಗಾಧರ ಸ್ವಾಮಿಗಳು ಈ ಸಮುದಾಯವನ್ನು ಉದ್ದೇಶಿಸಿ, ನೀವು ಪೂರ್ವಕಾಲದಿಂದಲೂ ನಮ್ಮ ಮಠದ ಹಾಗೂ ನಮ್ಮ ಶಾಖಾ ಮಠಗಳ ಖಾಸಾಶಿಷ್ಯರು. ನೀವು ವೀರಪರಂಪರೆಯನ್ನು ಹೊಂದಿದ ಅರಸುಮನೆತನದವರು.

ಅಪಾರವಾದ ಭಕ್ತಿಯುನ್ನು ಹೊಂದಿದ ಈ ಜನಾಂಗದವರು ಗುರುಗಳ ಮಾತಿಗೆ ನಿಷ್ಠೆಯಿಂದ ದೇಶದ ಸ್ವಾತಂತ್ರಕ್ಕಾಗಿ ಬ್ರಿಟೀಷರ ವಿರುದ್ಧ ಹೋರಾಡಲು ತಮ್ಮ ಮಕ್ಕಳನ್ನು ಕಳುಹಿಸಲು ನಿರ್ಣಯಿಸಿ ಬೆಂಬಲ ಸೂಚಿಸುತ್ತಾರೆ. ಕರಿಭಂಟನಾಳದಲ್ಲಿ ಗಂಗಾಧರೇಶ್ವರ ಮಹಾಸ್ವಾಮಿಗಳು ಸಂಗಮನಾಥ ದೇವಾಲಯದ ಪ್ರಾಂಗಣದಲ್ಲಿ ತರಬೇತಿ ಕೇಂದ್ರವನ್ನು ಆರಂಭಿಸಿದರು. ಈ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪೂಜ್ಯರ ಪ್ರಭಾವಕ್ಕೊಳಗಾಗಿ ಹಂಡೆವಜೀರ ಜನಾಂಗದ ಸಾವಿರಾರು ಯುವಕರು ಸೈನ್ಯತರಬೇತಿಗಾಗಿ ಮುನ್ನುಗ್ಗಿ ಬಂದರು.

## ಶ್ರೀಗುರುಗಂಗಾಧರೇಶ್ವರರ ಬಂಧನ–ಬಸವನ ಬಾಗೇವಾಡಿಯಲ್ಲಿ ಜೈಲುವಾಸ

'ಆಂಗ್ಲ ಸತ್ತೆಯ ಹುಟ್ಟನ್ನಡಗಿಸಲು ಶ್ರೀಗಳವರು ಹೊಂಚುಹಾಕುತ್ತಿದ್ದಾರೆ. ತಮ್ಮದೇ ಆದ ಯುವ ಪಡೆಯನ್ನು ಕಟ್ಟುತ್ತಿದ್ದಾರೆ' ಎಂದು ಆರೋಪ ಹೊರಿಸಿ ಬ್ರಿಟಿಷ ಅಧಿಕಾರಿಗಳಿಗೆ ಅದೇ ಊರಿನ ಗೋಲಪ್ಪಗೌಡ ಹಾಗೂ ರಾಮನಗೌಡ ಶ್ರೀಗಳವರ ಮೇಲೆ ಇಲ್ಲಸಲ್ಲದ ಆರೋಪ ಹೊರಿಸಿ, ಅವರ ವಿರುದ್ಧವಾಗಿ ಬ್ರಿಟಿಷ ಅಧಿಕಾರಿಗಳಿಗೆ ಚಾಡಿಹೇಳುತ್ತಾರೆ.

ಗಂಗಾಧರೇಶ್ವರರಿಗೆ ಶಿಕ್ಷೆ ಕೊಡಿಸಲು ಇದುವೇ ಯೋಗ್ಯವಾದ ಅವಕಾಶ' ಎಂದು ಪೊಲೀಸ ಠಾಣೆಯಲ್ಲಿ ಗುರುಗಳ ವಿರುದ್ಧ ಫಿರ್ಯಾದೆ ಸಲ್ಲಿಸಿದರು. ಬ್ರಿಟೀಷ ಅಧಿಕಾರಿಗಳಿಗೆ ಗಂಗಾಧರ ಸ್ವಾಮಿಗಳು ಗುಪ್ತವಾಗಿ ಸೈನ್ಯದ ತರಬೇತಿ ಕೊಡುವ ವಿಷಯ ಮತ್ತು ಬ್ರಿಟೀಷ ಸರಕಾರದ ವಿರುದ್ಧ ಬಂಡೇಳುವ ಸಿದ್ಧತೆ ಮಾಡುತ್ತಿದ್ದಾರೆಂಬ ದೂರುಗಳು ಸಹ ಮೇಲಿಂದ ಮೇಲೆ ತಲುಪಿದ್ದರಿಂದ ಅವರನ್ನು ಬಂಧಿಸಿ ಬಸವನ ಬಾಗೇವಾಡಿಯ ಜೈಲಿನಲ್ಲಿರಿಸುತ್ತಾರೆ.

ಮರುದಿವಸ ಈ ಸುದ್ದಿ ಎಲ್ಲ ಕಡೆಗೂ ಹಬ್ಬಿತು. ಸಾವಿರಾರು ಜನ ಭಕ್ತರು ಬ್ರಿಟೀಷ ಸರಕಾರದ ವಿರುದ್ಧ ಘೋಷಣೆ ಮಾಡುತ್ತ ಜೈಲಿಗೆ ಮುತ್ತಿಗೆ ಹಾಕುತ್ತಾರೆ. ಇದರಿಂದ ಕಂಗಾಲಾದ ಬ್ರಿಟೀಷ್ ಅಧಿಕಾರಿಗಳು ಅಪಾರವಾಗಿ ಹರಿದುಬರುತ್ತಿರುವ ಜನಬೆಂಬಲವನ್ನು ನೋಡಿ ಸ್ವಾಮೀಜಿಯವರ ಬಂಧನದಿಂದ ಇನ್ನಷ್ಟು ದೊಡ್ಡಪ್ರಮಾಣದ ಅಶಾಂತಿ, ದಂಗೆ ಏಳುವ ಮನವರಿಕೆಯಾಗಿ ಮೇಲಾಧಿಕಾರಿಯೊಂದಿಗೆ ಚರ್ಚಿಸುತ್ತಾರೆ. ಈ ಸೂಕ್ಷ್ಮತೆಯನ್ನು ಪರಿಗಣಿಸದ ಬ್ರಿಟೀಷ್ ಅಧಿಕಾರಿಗಳು ಶ್ರೀ ಗುರುಗಂಗಾಧರೇಶ್ವರರನ್ನು ತಕ್ಷಣ ಬಿಡುಗಡೆ ಮಾಡುತ್ತಾರೆ.

## ಸುರಪುರ ಸಂಸ್ಥಾನದ ಸ್ಥಿತಿಗತಿ

ಇದೇ ಸಂದರ್ಭದಲ್ಲಿ ಹೈದ್ರಾಬಾದ ನಿಜಾಮನು ಬ್ರಿಟಿಷ ಅಧಿಕಾರಿಗಳ ಮಧ್ಯಸ್ಥಿಕೆಯಲ್ಲಿ ಸುರಪುರದ ರಾಜಾ ಕೃಷ್ಣಪ್ಪ ನಾಯಕನನ್ನು ಸುರಪುರ ಸಂಸ್ಥಾನದ ರಾಜನನ್ನಾಗಿ ಮಾಡಿಸಿದನು. ಇದು ಕ್ರಿ.ಶ. ೧೮೦೦ರ ಒಪ್ಪಂದ ೧೭ನೆಯ ವಿಧಿಯ

ಪ್ರಕಾರ ನಡೆಯಿತು. ಈ ಒಪ್ಪಂದದ ಪ್ರಕಾರ ಸರಕಾರ ಕೃಷ್ಣಪ್ಪ ನಾಯಕನ ಮೇಲೆ ಕೆಲವು ನಿಬಂಧನೆಗಳನ್ನು ಹೇರಿತು. ಪಟ್ಟದ ನಜರಾಣೆಯನ್ನು ಸರಕಾರವು ಹದಿನೈದು ಲಕ್ಷ ರೂಪಾಯಿಗಳಿಗೆ ಏರಿಸಿತು. ಅಲ್ಲದೆ ವಾರ್ಷಿಕ ಕಂದಾಯ ವೆಂದು ಕೃಷ್ಣಪ್ಪನಾಯಕನು ರೂ. ೩೦೬೦೦/- ಕೊಡ ಬೇಕೆಂದು ನಿರ್ಧರಿಸಲಾಯಿತು. ನಜರಾಣೆ ಮೊತ್ತದಲ್ಲಿ ಸಿಂಹಾಸನಾರೂಢ ಸಮಯದಲ್ಲಿ ನಾಲ್ಕೂವರೆ ಲಕ್ಷ ಕೊಡಬೇಕು. ಅದರಂತೆ ಮಿಕ್ಕಿದ್ದು ಪ್ರತಿವರ್ಷ ೧೨೫೦೦೦/ - ರೂ. ಕಂತುಗಳಲ್ಲಿ ಕೊಡಬೇಕೆಂದು ನಿರ್ಣಯಿಸಲಾಯಿತು.[೫] ಕೃಷ್ಣಪ್ಪ ನಾಯಕನು ಈ ಎಲ್ಲ ಕರಾರುಗಳಿಗೆ ಒಪ್ಪಿಕೊಂಡು ಅಧಿಕಾರ ವಹಿಸಿಕೊಂಡನು.

ಆ ಸಮಯದಲ್ಲಿ ಸಂಸ್ಥಾನದ ಆರ್ಥಿಕ ಸ್ಥಿತಿಯು ಚೆನ್ನಾಗಿರಲಿಲ್ಲ. ರೈತರಿಂದ ಬರಬೇಕಾಗಿದ್ದ ಕಂದಾಯ ಹಣವೂ ಸಂದಾಯವಾಗಿರಲಿಲ್ಲ. ಜನಕಲ್ಯಾಣದ ಯೋಜನೆಗಳಿಗಾಗಿ ಅವಶ್ಯವಿದ್ದ ಹಣವೂ ಕಡಿಮೆ ಬೀಳತೊಡಗಿತು. ಸುರಪುರ ಸಂಸ್ಥಾನವು ಆರ್ಥಿಕ ಮುಗ್ಗಟ್ಟಿಗೆ ಒಳಗಾಗಿ ಬಿಟ್ಟಿತ್ತು. ಇದರಿಂದ ಆಂಗ್ಲ ಅಧಿಕಾರಿಗಳ ಜೊತೆ ಮಾಡಿಕೊಂಡಿದ್ದ ಒಪ್ಪಂದದ ಪ್ರಕಾರ ಸರಕಾರಕ್ಕೆ ಕೊಡಬೇಕಾಗಿದ್ದ ಪಟ್ಟದ ನಜರಾಣೆ ಹಾಗೂ ವಾರ್ಷಿಕ ಕಂದಾಯ ಕೊಡುವುದು ರಾಜಾ ಕೃಷ್ಣಪ್ಪ ನಾಯಕನಿಂದ ಕೊಡಲು ಸಾಧ್ಯವಾಗಲಿಲ್ಲ. ಕೃಷ್ಣಪ್ಪನಾಯಕನ ಮಗ ವೆಂಕಟಪ್ಪ ನಾಯಕನು ಇನ್ನೂ ಬಾಲಕ ನಿದ್ದನು. ಆದರೂ ರಾಜನಿಯಮದ ಪ್ರಕಾರ ಅಧಿಕಾರಿಗಳ, ಪ್ರಮುಖ ಮಂತ್ರಿಗಳ, ರಾಜಪುರೋಹಿತರ ಸಲಹೆಯನ್ನು ಪಡೆದು ಕೊಂಡು ಮಹಾರಾಣಿ ಈಶ್ವರಮ್ಮಳ ಇಚ್ಛೆಯಂತೆ ರಾಜಾ ವೆಂಕಟಪ್ಪ ನಾಯಕನಿಗೆ ಜೂನ್ ೧೨, ೧೮೪೨ರಂದು ಸುರಪುರ ಸಂಸ್ಥಾನದ ರಾಜನನ್ನಾಗಿ ಪಟ್ಟಾಭಿಷೇಕ ಮಾಡ ಲಾಯಿತು. ವೆಂಕಟಪ್ಪ ನಾಯಕನಿಗೆ ರಾಜ್ಯಾಡಳಿತದ ಹೆಚ್ಚಿನ ಅನುಭವವಿರಲಿಲ್ಲ. ವಯಸ್ಸು ಕೂಡ ಚಿಕ್ಕದಾಗಿತ್ತು. ಇವೆಲ್ಲ ಕಾರಣಗಳಿಂದ ರಾಣಿ ಈಶ್ವರಮ್ಮಳು ತಮ್ಮ ವಿಶ್ವಾಸಿ ಸಲಹೆ ಗಾರರ ಅಭಿಪ್ರಾಯಕ್ಕನುಸರಿಸಿ ವೆಂಕಟಪ್ಪ ನಾಯಕನ ಪ್ರತಿನಿಧಿ ಯಾಗಿ ತಾನೇ ರಾಜ್ಯಕಾರಭಾರದ ಸೂತ್ರವನ್ನು ತನ್ನ ಕೈಗೆತ್ತಿ ಕೊಂಡಳು. ಈ ವಿಷಯ ಹಲವಾರು ಆಂಗ್ಲ ಅಧಿಕಾರಿಗಳಿಗೆ ಸರಿಯೆನಿಸಲಿಲ್ಲ.

ಮಹಾರಾಣಿ ಈಶ್ವರಮ್ಮ ಮುತ್ಸದ್ದಿ ಹಾಗೂ ಚಾಣಾಕ್ಷ ರಾಜಕಾರಿಣಿಯಾಗಿದ್ದಳು. ಅವಳದು ದೂರದೃಷ್ಟಿ ಹಾಗೂ ಮುಂದಾಲೋಚನೆ ಇರುತ್ತಿತ್ತು. ಕೃಷ್ಣಪ್ಪ ನಾಯಕನು ಮಡಿದ ನಂತರ ಸಂಸ್ಥಾನದಲ್ಲಿ ಅವ್ಯವಸ್ಥೆ, ಅರಾಜಕತೆ ಕಂಡುಬಂದಿತ್ತು. ಅಧಿಕಾರಿಗಳಿಗೆ ನಿಯಂತ್ರಣವೇ ಇರಲಿಲ್ಲ. ತಮ್ಮನ್ನು ವಿರೋಧಿಸು ವವರ ಸಂಖ್ಯೆಯೂ ದಿನೇ ದಿನೇ ಬೆಳೆಯತೊಡಗಿತ್ತು. ರಾಜ್ಯ ಕಾರಭಾರವನ್ನು ಕೈಗೆತ್ತಿಕೊಂಡ ರಾಣಿ ಈಶ್ವರಮ್ಮ ಅಧಿಕಾರಿಗಳ ಮೇಲೆ ಯೋಗ್ಯ ನಿಯಂತ್ರಣವನ್ನು ತಂದಳು. ಜನೋಪ ಯೋಗಿ ಕಾಯ್ದೆಗಳನ್ನು ಮಾಡಿ ಜನಪ್ರಿಯಳಾಗುತ್ತಾಳೆ. ರಾಣಿಯ ರಾಜ್ಯಾಡಳಿತದಲ್ಲಿ ಮೆಡೋಜ್ ಟೇಲರ್‌ನು ಅವರಿಗೆ ಸಹಕಾರ ನೀಡುತ್ತಿದ್ದ ಉಲ್ಲೇಖಗಳಿವೆ. ಹೈದರಾಬಾದದ ರೆಸಿಡೆಂಟ್ ಫ್ರೆಜರ್‌ನು ರಾಣಿ ಈಶ್ವರಮ್ಮ ಮತ್ತು ಮೆಡೋಜ್ ಟೇಲರ್ ಇವರ ಮಧ್ಯದಲ್ಲಿ ವಿಷ ಹಿಂಡಲು ಯತ್ನಿಸ ಲಾರಂಭಿಸಿದನು. 'ಮೆಡೋಜ್ ಟೇಲರ್‌ನ ವಿರುದ್ಧ ರಾಣಿ ಈಶ್ವರಮ್ಮ ಬೇಡರನ್ನು ಎತ್ತಿಕಟ್ಟುವ ಕೆಲಸ ಮಾಡುತ್ತಿದ್ದಾಳೆ. ಅವರನ್ನು ಟೇಲರ್‌ನ ಎದುರಾಗಿ ಬಂಡೇಳುವಂತೆ ಪ್ರೇರೇಪಿ ಸುತ್ತಿದ್ದಾಳೆ' ಎಂದು ಸುಳ್ಳು ವಂದತಿಯನ್ನು ಹಬ್ಬಿಸಿದನು. ಈ ಸುದ್ದಿಯಿಂದ ಅವರಿಬ್ಬರ ನಡುವೆ ಅಸಮಾಧಾನದ ಹೊಗೆಯು ಹೊತ್ತಿಕೊಂಡಿತು. ಹೇಗಾದರೂ ಮಾಡಿ ರಾಣಿ ಈಶ್ವರಮ್ಮಳನ್ನು ಸುರಪುರ ಸಂಸ್ಥಾನದಿಂದ ಕೆಳಗಿಳಿಸುವ ಯೋಜನೆಯನ್ನು ಫ್ರೆಜರ್ ಹಾಕುತ್ತಿದ್ದನು. ಈ ಸಂದರ್ಭದಲ್ಲಿ ರಾಣಿ ಈಶ್ವರಮ್ಮಳಿಗೆ ಹಿಂದೆ ಕೃಷ್ಣಪ್ಪ ನಾಯಕರು ಮಾಡಿಕೊಂಡಿದ್ದ ಒಪ್ಪಂದದ ಪ್ರಕಾರ ಸರಕಾರಕ್ಕೆ ಸಲ್ಲಿಸಬೇಕಾಗಿದ್ದ ನಜರಾಣೆ ಮೊತ್ತ ಹಾಗೂ ವಾರ್ಷಿಕ ಕಂದಾಯ ಸಕಾಲಕ್ಕೆ ತುಂಬುವುದಾಗಲಿಲ್ಲ. ಇದರಿಂದ ಅಸಮಾಧಾನಗೊಂಡಿದ್ದ ಫ್ರೆಜರ್ ರಾಣಿ ಈಶ್ವರಮ್ಮಳನ್ನು ಅಧಿಕಾರದಿಂದ ಕಿತ್ತಿ ಹಾಕುವ ಸಂಚು ಹೂಡಿದನು. ಸ್ವತಃ ರೆಸಿಡೆಂಟ್ ಫ್ರೆಜರ್‌ನೇ ಸುರಪುರಕ್ಕೆ ಬಂದು ಬಾಲಕ ರಾಜಾ ವೆಂಕಟಪ್ಪ ನಾಯಕನಿಗೆ ಕೆಲವು ಹೆಚ್ಚಿನ ಅಧಿಕಾರಗಳನ್ನು ನೀಡಿದಂತೆ ಮಾಡಿ ರಾಣಿ ಈಶ್ವರಮ್ಮಳನ್ನು ಸ್ಥಾನಪಲ್ಲಟ ಮಾಡುವ ಉದ್ದೇಶ ಹೊಂದಿದನು.

ಫ್ರೆಜರ್‌ನು ಹೀಗೆ ರಾಣಿ ಈಶ್ವರಮ್ಮಳನ್ನು ಬಂಧಿಸಲು ಅಧಿಕಾರಿಗಳಿಗೆ ಆಜ್ಞೆಮಾಡಿದನು. ಅಷ್ಟೇ ಅಲ್ಲ ಅವಳನ್ನು ಗಡಿಪಾರು ಮಾಡಿ, ಲಿಂಗಸುಗೂರಿನ ರೆಜಿಮೆಂಟಲ್ ಆರ್ಮಿ ಹೆಡ್ ಆಫೀಸಿನಲ್ಲಿ ಕೈದಿಯನ್ನಾಗಿ ಮಾಡುತ್ತಾನೆ. ರಾಣಿ ಈಶ್ವರಮ್ಮಳನ್ನು ಗಡಿಪಾರು ಮಾಡಿದ ನಂತರ ರಾಜಾವೆಂಕಟಪ್ಪ ನಾಯಕನಿಗೆ ಆಡಳಿತದ ಅನುಭವ ವಿಲ್ಲ' ಎನ್ನುವ ನೆಪಹೂಡಿ ರಾಜನಿಗೆ ರಾಜ್ಯಾಡಳಿತ ದಲ್ಲಿ ಆಡಳಿತಾಧಿಕಾರಿಯಾಗಿ ಮೆಡೋಜ್ ಟೇಲರ್‌ನೇ ಕಾರ್ಯ ನಿರ್ವಹಿಸುತ್ತಾನೆ.

**ಸುರಪುರದ ರಾಣಿ ಈಶ್ವರಮ್ಮಳೊಂದಿಗೆ ಶ್ರೀಗಳ ಭೇಟಿ**

ನವಲಿಯಲ್ಲಿದ್ದ ಗಂಗಾಧರಮಹಾಸ್ವಾಮಿಗಳವರಿಗೆ ಈಶ್ವರಮ್ಮಳ ಸ್ಥಿತಿಗತಿ, ಬಾಲವೆಂಕಟಪ್ಪನ ಇಕ್ಕಟ್ಟಿನ ಪರಿಸ್ಥಿತಿ, ಕಿತ್ತೂರ ಸಂಸ್ಥಾನದಲ್ಲಿ ಯುದ್ಧ ನಡೆದಾಗ ಸಂಗೊಳ್ಳಿ ರಾಯಣ್ಣನು ಸುರಪುರ ಸಂಸ್ಥಾನದ ಮುನ್ನೂರು ಜನ ಸೈನಿಕರನ್ನು ಪಡೆದುಕೊಂಡು ಯುದ್ಧ ಮಾಡಿದ್ದು ಗಂಗಾಧರ

ಶ್ರೀಗಳಿಗೆ ತಿಳಿದಿತ್ತು. ಮುಂದಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸುರಪುರದ ಮಹಾರಾಣಿ ಈಶ್ವರಮ್ಮ ತಮಗೆ ಸಹಾಯ ಮಾಡಬಹುದು ಎಂದು ಶ್ರೀಗಳು ಲಿಂಗಸುಗೂರಿಗೆ ಬಂದು ಜೈಲಿನಲ್ಲಿ ರಾಣಿ ಈಶ್ವರಮ್ಮಳನ್ನು ಭೇಟಿಯಾದರು. ಬ್ರಿಟಿಷರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಧೋರಣೆಗಳ ಕುರಿತು ಅವರಿಬ್ಬರು ಸವಿಸ್ತಾರವಾಗಿ ಚರ್ಚಿಸಿದರು. ಈ ಭೇಟಿಯಲ್ಲಿ ಗಂಗಾಧರೇಶ್ವರರು ಮಹಾರಾಣಿ ಈಶ್ವರಮ್ಮಳ ಸ್ವಾತಂತ್ರ್ಯ ಪ್ರೇಮ ಹಾಗೂ ತಮ್ಮ ಸಂಸ್ಥಾನದ ಬಗೆಗಿದ್ದ ಅವಳ ಅಭಿಮಾನವನ್ನು ಕಂಡು ಸಂತೋಷಗೊಳ್ಳುತ್ತಾರೆ.

ನವಲಿಯ ಆನಂದ ಮಠದಲ್ಲಿ ನಾಲ್ವಡಿ ವೆಂಕಟಪ್ಪ ನಾಯಕ ಹಾಗೂ ಗುರು ಗಂಗಾಧರೇಶ್ವರ ಮಹಾಸ್ವಾಮಿಗಳವರ ಮಧ್ಯದಲ್ಲಿ ನಡೆದ ಗುಪ್ತಸಭೆಯಲ್ಲಿ ಮೊದಲನೆಯ ಯೋಜನೆಯಂತೆ ಕೊಲ್ಹಾಪುರ, ಧಾರವಾಡ, ಬೆಳಗಾವಿ ಈ ವಿಭಾಗಗಳಲ್ಲಿರುವ ಸೈನಿಕರನ್ನು ಸ್ವಾತಂತ್ರ್ಯದ ಧ್ವಜದ ಅಡಿಯಲ್ಲಿ ತರಲು ಪ್ರಯತ್ನಿಸುವುದು. ಅಂದರೆ ೨೭, ೨೮ ಹಾಗೂ ೨೯ನೆಯ ಬ್ರಿಟಿಷ ವಾಹಿನಿಗಳಲ್ಲಿ ಭಾರತೀಯರೇ ಸಿಂಹಪಾಲು ಹೊಂದಿದ್ದರು. ಬ್ರಿಟಿಷರ ವಿರುದ್ಧ ತಿರುಗಿ ಬೀಳುವಂತೆ ಅವರನ್ನು ಪ್ರೇರೇಪಿಸುವುದು, ಈ ಯೋಜನೆಯ ಪ್ರಮುಖ ಅಂಶವಾಗಿತ್ತು. ಈ ಕೆಲಸಕ್ಕಾಗಿಯೇ ಸುರಪುರದಿಂದ ಮಹಿಪಾಲಸಿಂಗ ಎಂಬುವನನ್ನು ಅಲ್ಲಿಗೆ ಕಳುಹಿಸಿ ಕೊಡಲಾಗಿತ್ತು. ಯೋಜನೆ ೨ರ ಪ್ರಕಾರ, ರಾಜಾ ನಾಲ್ವಡಿ ವೆಂಕಟಪ್ಪ ನಾಯಕರಿಗೆ ಸ್ವಾತಂತ್ರ್ಯದ ಬಗ್ಗೆ ಹೆಚ್ಚಿನ ಅರಿವನ್ನು ಮಾಡಿ ಕೊಡುವುದಾಗಿತ್ತು. ಈ ಕಾರಣಕ್ಕಾಗಿಯೇ ಶ್ರೀಗಳವರು ವೆಂಕಟಪ್ಪನಾಯಕರನ್ನು ಕರಿಭಂಟನಾಳಕ್ಕೆ ಬರಲು ಹೇಳಿದ್ದರು.

**ಸುರಪುರ ಸೈನಿಕರು ಮತ್ತು ಗುರುಗಂಗಾಧರೇಶ್ವರರ ಖಾಸಗಿ ಸೈನ್ಯದ ಯುದ್ಧ ಮತ್ತು ಬ್ರಿಟೀಷ ಸೈನ್ಯರೊಂದಿಗೆ ಜಯ**

ಶ್ರೀಗುರುಗಂಗಾಧರೇಶ್ವರರು ಖಾಸಗಿಯಾಗಿ ಸೈನ್ಯವನ್ನು ಕಟ್ಟಿರುವ ಕುರಿತು ಮಾಹಿತಿ ಪಡೆದುಕೊಂಡ ಬ್ರಿಟೀಷ ಅಧಿಕಾರಿ ವಾರ್ನ್‌ಹಿಲ್‌ನು ಕ್ಯಾಪ್ಟನ್ ಕ್ಯಾಂಪ್‌ಬೆಲ್‌ನಿಗೆ ಪತ್ರವೊಂದನ್ನು ಬರೆದು ಸಂಚಿನ ಮಾಹಿತಿ ಪಡೆಯಲು ಕ್ಷಿಪ್ರಕಾರ್ಯ ಕೈಕೊಳ್ಳಲು ತಿಳಿಸಿದನು. ಕ್ಯಾಪ್ಟನ್ ಕ್ಯಾಂಪ್‌ಬೆಲ್ ಎಲ್ಲ ಕಡೆಗೂ ಮಿಂಚಿನಂತೆ ಸಂಚರಿಸಿದನು. ಆದರೆ ಗಂಗಾಧರೇಶ್ವರರು ಆರಂಭಿಸಿದ್ದ ಸೇನಾಪಡೆಯ ಬಗ್ಗೆಯಾಗಲೀ, ಸೇನಾ ತರಬೇತಿಯ ಬಗ್ಗೆಯಾಗಲೀ ಮಾಹಿತಿಯೇ ಸಿಗಲಿಲ್ಲ. ಈ ವಿಷಯವನ್ನು ಗ್ರಹಿಸಿದ ಶ್ರೀಗಳು ಕರಿಭಂಟನಾಳದ ಸೈನಿಕರನ್ನು ಸುರಪುರಕ್ಕೆ ಬೇರೆ ಬೇರೆ ಮಠಗಳಿಗೆ ಗುಪ್ತವಾಗಿ ಕಳುಹಿಸಿದ್ದರು. ಶ್ರೀಗಳವರ ಚಾಣಾಕ್ಷತನ ಹಾಗೂ ಬುದ್ಧಿವಂತಿಕೆಗಳೇ ಇದಕ್ಕೆ ಕಾರಣಗಳಾಗಿದ್ದವು. ಬ್ರಿಟೀಷರಿಗೆ ಯಾವ ಮಾಹಿತಿಯೂ ಸಿಗದಂತೆ ಎಚ್ಚರವಹಿಸಿದ್ದು, ಶ್ರೀಗಳ ಮುತ್ಸದ್ಧಿತನಕ್ಕೆ ನಿದರ್ಶನವಾಗಿದೆ.

ಈ ಸಂದರ್ಭದಲ್ಲಿ ರಾಜಾವೆಂಕಟಪ್ಪ ನಾಯಕರ ಆಸ್ಥಾನದಲ್ಲಿ ಮಂತ್ರಿ ಪದವಿಯಿಂದ ವಂಚಿತನಾಗಿದ್ದ ಭೀಮರಾಯನೆಂಬವನು ಗೌಪ್ಯವಾಗಿದ್ದ ಸರಕಾರೀ ವಿರೋಧಿ ಚಳುವಳಿಯ ಮಾಹಿತಿಯನ್ನು ಬ್ರಿಟೀಷ ಅಧಿಕಾರಿಗಳಿಗೆ ತಿಳಿಸಿಬಿಟ್ಟನು. 'ಬ್ರಿಟೀಷರು ಪರಕೀಯರು. ಅವರ ಆಡಳಿತವು ದಬ್ಬಾಳಿಕೆ-ದೌರ್ಜನ್ಯಗಳಿಂದ ಕೂಡಿದ್ದು', ಎನ್ನುವುದನ್ನು ಗಮನಿಸದೆ ತಾನು ಭಾರತೀಯನಾಗಿದ್ದರೂ ಕೇವಲ ಮಂತ್ರಿಪದವಿ ಸಿಗಲಿಲ್ಲವೆಂಬ ಸಿಟ್ಟಿನಿಂದ, ಸ್ವಾರ್ಥದಿಂದ ಎಲ್ಲ ವಿಷಯವನ್ನು ಬ್ರಿಟೀಷಾಧಿಕಾರಿಗಳಿಗೆ ತಿಳಿಸುತ್ತಾನೆ.[೬]

ಬ್ರಿಟೀಷ್ ಅಧಿಕಾರಿಗಳು ಆಗಸ್ಟ್ ೮, ೧೮೫೮ರಲ್ಲಿ ಬ್ರಿಟೀಷ್ ಸರಕಾರಕ್ಕೆ ಸಲ್ಲಿಸಿದ ತಮ್ಮ ವರದಿಯಲ್ಲಿ ಬ್ರಿಟೀಷರ ವಿರುದ್ಧ ಕೊಲ್ಲಾಪುರದಲ್ಲಿ ೨೭ನೆಯದು, ಧಾರವಾಡದಲ್ಲಿ ೨೮ನೆಯದು ಮತ್ತು ಬೆಳಗಾವಿಯಲ್ಲಿ ೨೯ನೇ ದಂಗೆ ಯಾಯಿತು. ಇವುಗಳೆಲ್ಲವುಗಳಿಗೂ ಸುರಪುರದ ರಾಜಾ ವೆಂಕಟಪ್ಪನಾಯಕನೇ ಪ್ರೋತ್ಸಾಹಿಸಿದ್ದನು ಎಂದು ಉಲ್ಲೇಖಿಸಿಲಾಗಿದೆ. ಫೆಬ್ರವರಿ ೨, ೧೮೫೮ರಲ್ಲಿ ಬೆಳಗಾವಿ ಸೈನ್ಯದಲ್ಲಿ ವಿಷ ಬೀಜ ಬಿತ್ತಲು ಇಬ್ಬರು ಪ್ರತಿನಿಧಿಗಳು ರಾಜಾ ವೆಂಕಟಪ್ಪನಾಯಕ ಮತ್ತು ಜಮಖಂಡಿಯ ದೊರೆಯಿಂದ ನೇಮಕವಾಗಿದ್ದರು. ಇದನ್ನು ಮನಗಂಡ ಬ್ರಿಟೀಷರು ರಾಜಕೀಯ ಕುತಂತ್ರದ ಆರೋಪವನ್ನು ಹೊರಿಸಿ ಸುರಪುರದ ಮೇಲೆ ಯುದ್ಧವನ್ನು ಆರಂಭಿಸಿದರು.[೭]

ರಾಜಾವೆಂಕಟಪ್ಪ ನಾಯಕರ ಸುರಪುರದ ಸಂಸ್ಥಾನದ ಮೇಲೆ ವಕ್ರದೃಷ್ಟಿಯಿಟ್ಟಿದ್ದ ಅಧಿಕಾರಿಗಳಿಗೆ ಈಗ ದಾರಿಯು ಸುಲಭವಾಯಿತು. ಭೀಮರಾಯನು 'ಸೈನ್ಯದಲ್ಲಿ ರೋಹಿಲರನ್ನು ತುಂಬಿರುವಂತೆ ಕೋರಿಕೆ ಪತ್ರವನ್ನು ತೋರಿಸಿ, ಮೋಸದಿಂದ ರಾಜರ ಅಂಕಿತಪಡೆದು ಅದಕ್ಕೆ ರಾಜಮುದ್ರೆ ಹಾಕಿಸಿ ಕ್ಯಾಂಪಬೆಲ್‌ನಿಗೆ ನೀಡಿದನು. ಈ ಪತ್ರದ ಆಧಾರ ವಿಟ್ಟುಕೊಂಡು ಅಧಿಕಾರಿಗಳು ಶೋಧಕಾರ್ಯವನ್ನು ತೀವ್ರಗೊಳಿಸಿದರು. ಕೊನೆಗೆ ೧೫೦ ರೋಹಿಲರು ಮಸೂದೆಯಲ್ಲಿರುವುದು ಕ್ಯಾಂಪಬೆಲ್‌ನಿಗೆ ತಿಳಿದು ಬಂದಿತು. ಕೂಡಲೇ ಅವನು ಸಂಪೂರ್ಣ ವರದಿಯನ್ನು ಬೇವಿನ್‌ಸನ್‌ಗೆ ಒಪ್ಪಿಸಿದನು. ಬೇವಿನ್‌ಸನ್ ಅದನ್ನು ಓದಿದ ನಂತರ. ಬ್ರಿಟೀಷ ಸೈನ್ಯ ಸುರಪುರ ಸಂಸ್ಥಾನದ ಮೇಲೆ ಆಕ್ರಮಣ ಮಾಡುವಂತೆ ಆದೇಶ ನೀಡಿದನು. ರೆಸಿಡೆಂಟ್‌ನ ಆದೇಶದ ಮೇರೆಗೆ ಲಿಂಗಸುಗೂರಿನಿಂದಲೂ ಹಾಗೂ ಮುಂಬೈ, ಮದ್ರಾಸ ಮುಂತಾದ ಕಡೆಗಳಿಂದ ಸೇನಾತುಕಡಿಗಳು ಯುಗನ್‌ನ ಮುಖಂಡತ್ವದಲ್ಲಿ ಸುರಪುರದತ್ತ ಬಂದವು. ಬ್ರಿಟೀಷ

ಸೈನಿಕರಿಂದ ಕಾಲ್ ಹ್ಯೂಸನ್ ನೇತೃತ್ವದಲ್ಲಿ ಸುರಪುರದಲ್ಲಿ ಭೀಕರವಾದ ಯುದ್ಧ ಜರುಗಿತು.

ಈ ಯುದ್ಧದಲ್ಲಿ ಬ್ರಿಟೀಷ ಸೈನ್ಯಕ್ಕೆ ಸೋಲಾಯಿತು. ಸು. ೫೦೦ಕ್ಕೂ ಹೆಚ್ಚು ಬ್ರಿಟೀಷ ಸೈನಿಕರು ಸಾವನ್ನಪ್ಪುತ್ತಾರೆ. ಇದರಿಂದ ಸುರಪುರ ಸಂಸ್ಥಾನಕ್ಕೆ ಆನೆ ಬಲಬಂದಂತಾಯಿತು, ಇದರಿಂದ ಗುರು ಗಂಗಾಧರೇಶ್ವರರ ಖಾಸಗಿ ಸೈನ್ಯಕ್ಕೂ ಮತ್ತಷ್ಟು ಅನ್ಯೋನ್ಯ ವಾದ ಸಂಬಂಧವೇರ್ಪಟ್ಟಿತು. ಇದು ಸುರಪುರ ಅರಸರು ಬ್ರಿಟೀಷರ ಜೊತೆಗೆ ಹೋರಾಡಿ ಗೆದ್ದ ಮೊದಲ ವಿಜಯ ವೆನ್ನಬಹುದು.

## ಬ್ರಿಟೀಷರಿಂದ ಎರಡನೆಯ ಬಾರಿ ಸುರಪುರ ಮೇಲೆ ಯುದ್ಧ

ಸುರಪುರ ಸಂಸ್ಥಾನದಿಂದ ಬ್ರಿಟೀಷರಿಗೆ ಸೋಲಾಗಿ, ಸರಕಾರಕ್ಕೆ ಮುಖಭಂಗವಾಗಿ ಅಧಿಕಾರಿಗಳು ಮತ್ತೆ ಯುದ್ಧ ಮಾಡಲು ರಣತಂತ್ರವನ್ನು ಹೆಣೆಯುತ್ತಾರೆ. ಅವರು ಬೇರೆ ಬೇರೆ ರೆಜಿಮೆಂಟ್‌ಗಳಿಂದ ಹೆಚ್ಚಿನ ಸೈನ್ಯವನ್ನು ತರಿಸಿಕೊಂಡು ಕ್ಯಾಪ್ಟನ್ ವೈಂಡ್ ಹ್ಯಾಮ್‌ನ ನೇತೃತ್ವದಲ್ಲಿ ಯುದ್ಧಮಾಡುವ ಸಂಚಿನ ವಿಷಯವು ಸುರಪುರ ಸಂಸ್ಥಾನದವರೆಗೂ ತಿಳಿಯುತ್ತದೆ. ಅವರೂ ಸಹ ಇನ್ನಷ್ಟು ಸೈನ್ಯವನ್ನು ಹೆಚ್ಚಿಸಿ ಕೊಳ್ಳುತ್ತಾರೆ. ಶ್ರೀಗುರುಗಂಗಾಧರೇಶ್ವರರು ಬೇರೆ ಬೇರೆ ಊರುಗಳಲ್ಲಿರುವ ಶಾಖಾಮಠಗಳಲ್ಲಿ ತರಬೇತಿ ನೀಡಿ ಸಿದ್ಧಗೊಳಿಸಿದ ಖಾಸಗಿ ಯುವಕರ ಪಡೆಯ ಸೈನ್ಯವನ್ನು ಎಲ್ಲ ಭಾಗಗಳಿಂದಲೂ ತರಿಸಿಕೊಳ್ಳುತ್ತಾರೆ. ಕೇವಲ ಹಂಡೇವ ಜೀರ ಸಮುದಾಯ-ದವರು ಮಾತ್ರವಿದ್ದ ಈ ಸೈನ್ಯದಲ್ಲಿ ಈಗ ಬೇರೆ ಬೇರೆ ಸಮುದಾಯದ ಸಾವಿರಾರು ಯುವಕರ ದೊಡ್ಡ ದಂಡು ಸುರಪುರದಲ್ಲಿ ಸಂಗ್ರಹಗೊಳ್ಳುತ್ತದೆ. ಈ ಸಂದರ್ಭದಲ್ಲಿ ಮತ್ತೆ ಬ್ರಿಟೀಷರಿಂದ ಯುದ್ಧದ ರಣಕಹಳೆ ಮೊಳಗುತ್ತದೆ.[೮]

ಸುರಪುರ ಕೋಟೆಯ ನಾಲ್ಕು ದಿಕ್ಕುಗಳಿಗೂ ಅಲ್ಲಿ ಸೈನ್ಯ ಸುತ್ತುವರೆಯಿತು. ಬಿಟ್ಟೂಬಿಡದೆ ಮದ್ದುಗುಂಡಿನ ದಾಳಿ ಆರಂಭ ವಾಯಿತು. ಅಪಾರ ಸಂಖ್ಯೆಯಲ್ಲಿದ್ದ ಬ್ರಿಟೀಷ ಸೈನ್ಯ ವನ್ನು ಸುರಪುರದ ಸೈನಿಕರು ಮತ್ತು ಗುರುಗಂಗಾಧರೇಶ್ವರರ ಖಾಸಗಿ ಸೈನ್ಯದ ಯುವಪಡೆ ಶಕ್ತಿಮೀರಿ ಹೋರಾಡಿದರು. ಆದರೆ, ದೊಡ್ಡಪ್ರಮಾಣದ ಸೈನ್ಯ ಹಾಗೂ ಆಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದಿದ ಬ್ರಿಟೀಷರು ಈ ಸೈನ್ಯವನ್ನು ಸೋಲಿಸುತ್ತಾರೆ. ಈ ರಣರಂಗದಲ್ಲಿ ಸಾವಿರಾರು ಜನರು ವೀರಸ್ವರ್ಗವನ್ನ ಪ್ಪುತ್ತಾರೆ. ಅದರಲ್ಲಿ ಶ್ರೀ ಗುರುಗಂಗಾಧರೇಶ್ವರರ ಖಾಸಗಿ ಸೈನ್ಯದ ಸಾವಿರಾರು ಯೋಧರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹಂಡೇ ವಜೀರ ಜನಾಂಗದ ಯುವ ಸೈನಿಕರು ಸಾವನ್ನಪ್ಪುತ್ತಾರೆ.

ಹೀಗೆ ಸೋಲಿನ ಅಂಚಿನಲ್ಲಿರುವಾಗ ಹೇಗಾದರೂ ಮಾಡಿ ಸಂಸ್ಥಾನವನ್ನು ಉಳಿಸಿಕೊಳ್ಳಬೇಕೆಂಬ ಹಂಬಲದಿಂದ ರಾಜಾ ವೆಂಕಟಪ್ಪನಾಯಕನು ಹೆಚ್ಚಿನ ಸೈನ್ಯ ತರಲೋಸುಗ ಅವರು ಗುಪ್ತವಾಗಿ ಹೈದರಾಬಾದಿಗೆ ಪ್ರಯಾಣ ಬೆಳೆಸುತ್ತಾರೆ. ಆದರೆ ಹೈದರಾಬಾದಿನಲ್ಲಿ ವನಪರ್ತಿ ರಾಜನಿಂದ ವೆಂಕಟಪ್ಪ ನಾಯಕರಿರುವ ಸುದ್ದಿ ಹೈದರಾಬಾದದ ನಿಜಾಮ ಸಾಲಾರ ಜಂಗ್‌ನಿಗೆ ತಲುಪಿತು. ನಿಜಾಮರು ಮೊದಲಿನಿಂದಲೂ ಬ್ರಿಟೀಷ ಸರಕಾರದ ಪರವಾಗಿದ್ದನು. ಕೂಡಲೇ ಅವನು ರಾಜಾವೆಂಕಟಪ್ಪ ನಾಯಕರನ್ನು ಬಂಧಿಸಿದರು. ಅವರನ್ನು ಮುಂದೆ ಬ್ರಿಟೀಷರಿಗೆ ಒಪ್ಪಿಸಿದನು. ಮಾರನೆಯ ದಿನ ವಾಗಣಗೇರಿ ಭೀಮರಾಯ ಸುರಪುರದ ಕೋಟೆಯ ಬಾಗಿಲನ್ನು ತೆರೆದನು. ಬ್ರಿಟೀಷರಿಂದ ಆಗ ಸುರಪುರ ಸಂಸ್ಥಾನವು ಸಂಪೂರ್ಣವಾಗಿ ಆಂಗ್ಲರ ವಶವಾಯಿತು. ಮಾರ್ಚ್ ೪, ೧೮೬೧ರಲ್ಲಿ ಸುರಪುರವನ್ನು ಹೈದರಾಬಾದಿನ ನಿಜಾಮನ ರಾಜ್ಯಕ್ಕೆ ಸೇರ್ಪಡೆ ಮಾಡಿ, ಬ್ರಿಟೀಷ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಲಾಯಿತು.

ಸಿಕಿಂದರಾಬಾದ ಜೈಲಿನಲ್ಲಿ ನಾಲ್ವಡಿ ವೆಂಕಟಪ್ಪ ನಾಯಕರ ವಿಚಾರಣೆ ನಡೆದು ನ್ಯಾಯಾಲಯವು ಅವರು 'ರಾಜದ್ರೋಹಿ' ಎಂದು ತೀರ್ಪು ನೀಡಿ, ಮರಣದಂಡನೆಯ ಶಿಕ್ಷೆ ನೀಡಿತು. ಚಿಕ್ಕ ವಯಸ್ಸಿನ ರಾಜನಿಗೆ ಮರಣದಂಡನೆ ಕೊಡಲು ಕಾಯ್ದೆಯಲ್ಲಿ ಅವಕಾಶವಿರುವುದಿಲ್ಲ. ಮೆಡೋಜ್ ಟೇಲರ್‌ಗೆ ಇದು ಗೊತ್ತಿತ್ತು. ಹೀಗಾಗಿ ಮೆಡೋಜ ಟೇಲರ್‌ನ ಮಧ್ಯಸ್ಥಿಕೆಯಲ್ಲಿ ರಾಜರಿಗಾಗಿದ್ದ ಮರಣದಂಡನೆಯ ಶಿಕ್ಷೆಯನ್ನು ಆಮರಣಾಂತಿಕ ಗಡಿಪಾರು ಶಿಕ್ಷೆಯಾಗಿ ಪರಿವರ್ತಿಸಲು ಪ್ರಯತ್ನಿಸುತ್ತಾನೆ. ಮತ್ತು ಯಶಸ್ವಿಯಾಗುತ್ತಾನೆ. ಇದರಿಂದ ಗಂಗಾಧರೇಶ್ವರರೂ, ಸಂಸ್ಥಾನದ ಪ್ರಜೆಗಳೂ ಸಮಾಧಾನದ ನಿಟ್ಟುಸಿರನ್ನು ಬಿಟ್ಟರು. ನಂತರ ಸರಕಾರ ರಾಜರನ್ನು ಜಂಗಲಪೇಟ್ ಜೈಲಿಗೆ ತೆಗೆದುಕೊಂಡು ಹೋಗುವಂತೆ ತಿಳಿಸಿತು. ಅವನ ಇಬ್ಬರು ರಾಣಿಯರಾದ ರಂಗಮ್ಮ ಮತ್ತು ವೆಂಕಟಮ್ಮಳನ್ನು ಬಂಧನದಲ್ಲಿ ಇಡಲು ಆದೇಶಿಸಲಾಗಿತ್ತು. ಹಾದಿಯಲ್ಲಿ ಹೋಗುವಾಗ ಬ್ರಿಟೀಷ ಅಧಿಕಾರಿಗಳು ರಾಜಾವೆಂಕಟಪ್ಪ ನಾಯಕರನ್ನು ಹತ್ಯೆಗೈದು 'ರಾಜರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ' ಎಂದು ಸುಳ್ಳುವದಂತಿಯನ್ನು ಹಬ್ಬಿಸಿದರೆಂದು ಹೇಳಲಾಗುತ್ತದೆ.

ಶ್ರೀ ಗುರುಗಂಗಾಧರೇಶ್ವರರು ಎರಡು ರೀತಿಯ ಆಘಾತವನ್ನು ಅನುಭವಿಸುತ್ತಾರೆ. ಒಂದು ಸುರಪುರದ ಯುವರಾಜನ ಸಾವು. ಮತ್ತು ತಮ್ಮ ಖಾಸಗಿ ಸೈನ್ಯದ ಬಹುಪಾಲು ಯೋಧರು ವೀರಮರಣವನ್ನಪ್ಪಿದುದು, ತಾವು ಕಂಡ ಕನಸು ನನಸಾಗಲಿಲ್ಲವೆಂಬ ಕೊರಗಿನಿಂದ ಮತ್ತೆ



ಶ್ರೀಗುರುಗಂಗಾಧರೇಶ್ವರರ ಗದ್ದುಗೆ, ಕರಭಂಟನಾಳ ಬಸವನ ಬಾಗೇವಾಡಿ ತಾಲ್ಲೂಕು, ವಿಜಯಪುರ ಜಿಲ್ಲೆ.

ಕರಿಭಂಟನಾಳಕ್ಕೆ ಬರುತ್ತಾರೆ. ಹಲವು ದಿನಗಳ ಅಜ್ಞಾತವಾಸದ ನಂತರ ಜನರ ಅಜ್ಞಾನ, ಮೂಢನಂಬಿಕೆ ಹೋಗಲಾಡಿಸಲು ಯುವಕರಿಗೆ ಶಿಕ್ಷಣದ ಅವಶ್ಯಕತೆಯಿದೆಯೆಂದು ಮನಗಂಡು ಕನ್ನಡ ಶಾಲೆಗಳನ್ನು ತಮ್ಮ ಮಠಗಳಲ್ಲಿ ಪ್ರಾರಂಭಿಸಲು ನಿರ್ಧರಿಸುತ್ತಾರೆ.

## ಕನ್ನಡ ಶಾಲೆಗಳ ಸ್ಥಾಪನೆ

ಧರ್ಮ ಜಾಗೃತಿಗೆ, ಸಮಾಜ ಜಾಗೃತಿಗೆ, ರಾಷ್ಟ್ರೀಯತೆಯ ಜಾಗೃತಿಗೆ ಶಿಕ್ಷಣವು ಮೂಲಾಧಾರವಾಗಿದ್ದು, ಕಂಪನಿ ಸಾಮ್ರಾಜ್ಯಶಾಹಿಗಳ ಶೋಷಣೆಗೆ, ಅನ್ಯಾಯ, ಅತ್ಯಾಚಾರ, ದಬ್ಬಾಳಿಕೆಯ ಕಾರಭಾರಕ್ಕೆ ಭಾರತೀಯರ ಅಜ್ಞಾನವೇ ಕಾರಣವಾಗಿತ್ತು. ಅಜ್ಞಾನದಿಂದ ಅನೇಕ ಸಮಸ್ಯೆಗಳು ಹುಟ್ಟಿಕೊಂಡು ನಮ್ಮ ರಾಷ್ಟ್ರವನ್ನು ಅಧೋಗತಿಗೆ ಅಟ್ಟುತ್ತಿರುವುದನ್ನು ಮನಗಂಡು ಗಂಗಾಧರೇಶ್ವರ ಸ್ವಾಮಿಗಳವರು ಧರ್ಮ ಬೋಧನೆ ಮತ್ತು ರಾಜಕೀಯ ಜಾಗೃತಿ ಮಾಡುವುದರೊಂದಿಗೆ ಶಿಕ್ಷಣಕ್ಕೆ ಅವರು ಆದ್ಯತೆ ನೀಡಿ, ಗುರುಕುಲದಲ್ಲಿ ಶಾಲೆಗಳನ್ನು ಸ್ಥಾಪಿಸುತ್ತಾರೆ.



ಶ್ರೀ ಗುರುಗಂಗಾಧರೇಶ್ವರ ದೇವಸ್ಥಾನ ಕರಭಂಟನಾಳ, ಬಸವನ ಬಾಗೇವಾಡಿ ತಾಲ್ಲೂಕು, ವಿಜಯಪುರ ಜಿಲ್ಲೆ.

೧೮೫೮ರಲ್ಲಿ ಬಸವನ ಬಾಗೇವಾಡಿ ತಾಲೂಕಿನ ನಾಗೂರ ಗ್ರಾಮದ ತಮ್ಮ ಹಿರೇಮಠದಲ್ಲಿ ಮೊದಲನೆಯ ಗುರುಕುಲ ಕನ್ನಡ ಶಾಲೆಯನ್ನು ಮತ್ತು ಇದೇ ತಾಲೂಕಿನ ಕರಿಭಂಟನಾಳ, ಸಂಕನಾಳ ಗ್ರಾಮಗಳಲ್ಲಿ ಸ್ಥಾಪಿಸಿದ್ದಾರೆ. ಮುಂದೆ ೧೮೬೦ರಲ್ಲಿ ಮುದ್ದೇಬಿಹಾಳ ತಾಲೂಕಿನ ತಂಗಡಗಿ, ಗರಸಂಗಿ ಮತ್ತು ಅಫ್ಜಲಪುರ ತಾಲೂಕಿನ ಘತ್ತರಗಿ, ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ನವಲಿ, ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕಿನ ಮರೋಳ ಒಟ್ಟು ೬ ಕನ್ನಡ ಶಾಲೆಗಳನ್ನು ಸ್ಥಾಪಿಸಿದ ಕೀರ್ತಿ ಗುರು ಗಂಗಾಧರೇಶ್ವರರಿಗೆ ಸಲ್ಲುತ್ತದೆ. ಹೀಗೆ ನೂರಾರು ಮಕ್ಕಳಿಗೆ ಜ್ಞಾನನೀಡುತ್ತಿದ್ದ ಕುರಿತು ಕರಿಭಂಟನಾಳ ಮಟದಲ್ಲಿ ಈಗಲೂ ದಾಖಲೆಗಳಿವೆ. ಈ ಗುರುಕುಲಗಳು ಹೆಚ್ಚಾಗಿ ಧಾರ್ಮಿಕ ಕೇಂದ್ರಗಳೆನಿಸಿದ್ದ ಮಠ, ಮಂದಿರಗಳಂತಹ ಪವಿತ್ರ ಸ್ಥಳಗಳಲ್ಲಿಯೇ ಸ್ಥಾಪಿಸಿದ್ದುದು ಗಮನಾರ್ಹವಾಗಿದೆ.



ರುಕ್ಮಾಪುರ ಹತ್ತಿರದ ಗುಡ್ಡದಲ್ಲಿನ ಕ್ಯಾಪ್ಟನ್ ನ್ಯೂಬೆರ್ರಿ ಸಮಾಧಿ ಸುರಪುರ, ಯಾದಗಿರಿ ಜಿಲ್ಲೆ

ಈ ಪರಂಪರೆಯನ್ನು ಗಂಗಾಧರೇಶ್ವರ ಮಠದ ಮುಂದಿನ ಸ್ವಾಮಿಗಳು ಸಂಕನಾಳ (೧೯೩೨), ದೇಗಿನಾಳ (೧೯೩೮), ೧೯೩೯ರಲ್ಲಿ ಅಗಸಬಾಳ, ಬ್ಯಾಲಾಳ, ಬೂದಿಹಾಳ, ಕಾನ್ನಾಳ, ಕೊಡಗಾನೂರ, ನೇಗಿನಾಳ, ಸಿದ್ಧನಾಥ, ಕೂಡಗಿ ತಾಂಡಾ, ಉತ್ತನಾಳ ತಾಂಡಾ, ಕೌಲಗಿ, ನಾಗರಾಳಹುಲಿ, ಬೀರಲದಿನ್ನಿ, ೧೯೪೦ರಲ್ಲಿ ಮುಕರ್ತಿಹಾಳ, ಜಯವಾಡಗಿ, ಕರಿಭಂಟನಾಳ, ಕಾಮನಕೇರಿ, ೧೯೪೧ರಲ್ಲಿ ದೇವಲಾಪುರ, ಆಲಮಟ್ಟಿ, ಅಂಬಳನೂರು, ಗುಡುದಿನ್ನಿ, ಗೋನಾಳ, ಹಾಲಿಹಾಳ, ಹುಣಶ್ಯಾಳ, ಹಿರೇಗರಸಂಗಿ, ಕಿರಿಶ್ಯಾಳ, ಕುಬಕಡ್ಡಿ, ಡೋಣಿ ನಾಗರಾಳ, ಸುಳಕೋಡ, ಸೋಮನಾಳ, ಉಪ್ಪಲದಿನ್ನಿ, ಉತ್ತನಾಳ, ಬಳ್ಳಾವೂರ, ಜೀರಲ ಭಾವಿ, ಕಡಕೋಳ, ನಾಗವಾಡ, ಚಬನೂರು, ಸಿಂದಗೇರಿ, ನಂದ್ಯಾಳ, ಬಸವಂತಪುರಹಟ್ಟಿ, ಜೈನಾಪುರ, ಅಳ್ಳಿಚಂಡಿ, ಅಂಗಡಗೇರಿ, ನರಸಲಗಿ ತಾಂಡಾ, ಬಳೂತಿ, ಅರಷಣಗಿ, ರಾಮನಹಟ್ಟಿ, ಉಣ್ಣಿಭಾವಿ, ಹಳೆರೊಳ್ಳಿ, ಹುಲಿಬೆಂಚಿ, ಸಾಲವಾಡಗಿ, ನಿಡಗುಂದಿ, ಸಾಲವಾಡಗಿ, ೧೯೪೨ರಲ್ಲಿ ಇವಣಗಿ, ಅಬ್ಬಿಹಾಳ, ನಾಗೂರ, ತಡಲಗಿ, ಆರೇಶಂಕರ, ಹಳ್ಳದ, ಗೆಣ್ಣೂರ, ಮಸಬಿನಾಳ, ತೆಲಗಿ ಸ್ಟೇಶನ, ಆಕಳವಾಡಿ +ಶೀಕಳವಾಡಿ, ೧೯೪೩ರಲ್ಲಿ ಮಟ್ಟಿಹಾಳ, ಹಂಚಿನಾಳ ಮತ್ತು ಗುಳಬಾಳ, ೧೯೪೪ರಲ್ಲಿ ಹುಣಶ್ಯಾಳ ಪ। ಚಿಮ್ಮಲಗಿ ಹಾಗೂ ಅರಷಣಗಿ ಸುಳಖೋಡ ಈ ಮೇಲಿನ ಒಟ್ಟು ೬೮ ಶಾಲೆಗಳು ಬಸವನ ಬಾಗೇವಾಡಿ, ಮುದ್ದೇಬಿಹಾಳ ಮತ್ತು ಇಂಡಿ ತಾಲೂಕಿನಲ್ಲಿ ಶಾಲೆಗಳನ್ನು ತೆರೆಯುತ್ತಾರೆ.

ಸ್ವತಂತ್ರ ಪೂರ್ವದ ಕರ್ನಾಟಕದಲ್ಲಿ ಕರಿಭಂಟನಾಳ ಮಠವೊಂದು ಶಿಕ್ಷಣಕ್ಕೆ ಅಧಿಕ ಪ್ರಮಾಣದಲ್ಲಿ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದ್ದುದು ಕರ್ನಾಟಕದ ಇತಿಹಾಸದಲ್ಲಿ ಇನ್ನೂ ದಾಖಲಾಗದೇ ಇರುವುದು ವಿಷಾದದ ಸಂಗತಿಯಾಗಿದೆ. ಇದಲ್ಲದೆ ೧೯೦೬ರಲ್ಲಿ ಬಾಗೇವಾಡಿ ತಾಲೂಕ ಸಾಕ್ಷರತಾ ಸಮಿತಿಯನ್ನು ಹುಟ್ಟುಹಾಕಿ, ವಿಜಯಪುರ ಜಿಲ್ಲೆ ಮರಾಠಿ ಮತ್ತು ಇಂಗ್ಲೀಷರ ಪ್ರಭಾವದಿಂದ ರಕ್ಷಣೆ ಯಾಗುವುದಕ್ಕಾಗಿ ಉತ್ತರ ಕರ್ನಾಟಕದ ಕನ್ನಡವನ್ನು ರಕ್ಷಿಸಿದ ಮತ್ತು ಕನ್ನಡ ಶಾಲೆಗಳನ್ನು ಪ್ರಾರಂಭಿಸುವುದರ ಮೂಲಕ ಕರ್ನಾಟಕಕ್ಕೆ ಅಮೂಲ್ಯವಾದ ಕೊಡುಗೆಯನ್ನು ಕರಿಭಂಟನಾಳ ಮಠ ನೀಡಿದ್ದು ಗಮನಾರ್ಹ ಅಂಶವಾಗಿದೆ.

ಇವರು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳೇ ಮುಂದೆ ೧೯೦೬–೧೯೨೬ರವರೆಗೆ ಗುರುಕುಲ ಶಿಕ್ಷಣ ಸಂಸ್ಥೆ, ೧೯೨೬–೧೯೩೬ರವರೆಗೆ ಗಾಂವಟಿ ಸ್ಕೂಲ್‌ಗಳಾಗಿ, ೧೯೩೬–೧೯೫೭ರವರೆಗೆ ಬಾಗೇವಾಡಿ ತಾಲೂಕ ಸಾಕ್ಷರತಾ ಸಂಘದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತವೆ. ೧೯೫೭–೧೯೬೪ರವರೆಗೆ ಹೀಗೆ ೬೦ಕ್ಕೂ ಹೆಚ್ಚು ಶಾಲೆಗಳು ಪ್ರಾರಂಭಗೊಂಡಿವೆ. ಆ ಕಾಲದಲ್ಲಿಯೇ ಶಿಕ್ಷಕರಿಗೆ ತಿಂಗಳಿಗೆ ರೂ. ೨ರಂತೆ ವೇತನ ನೀಡಿರುವ ದಾಖಲೆಗಳು ಮಠದಲ್ಲಿವೆ. ಇದಕ್ಕಾಗಿ ಅವರು ಭಕ್ತರಿಂದ ದವಸಧಾನ್ಯ, ಹಣ ಮುಂತಾದವು ಗಳನ್ನು ಸಂಗ್ರಹಿಸುತ್ತಾರೆ.

ಗುರು ಗಂಗಾಧರೇಶ್ವರರ ಪುತ್ರ ಚನ್ನಸಂಗಯ್ಯನವರು ತಮ್ಮ ತಂದೆ ನಡೆದ ಶೈಕ್ಷಣಿಕ ಮಾರ್ಗದಲ್ಲಿ ತಾವೂ ಧಾಪುಗಾಲು ಹಾಕಿ ನಡೆಯುತ್ತ ಶೈಕ್ಷಣಿಕ ಕಾರ್ಯಗಳನ್ನು ಮುನ್ನಡೆಸಿದರು. ಅವರು ಕುದುರಿ ಸಾಲವಾಡಗಿ ಗ್ರಾಮದ ಪ್ರತಿಷ್ಠಿತ ನಾಗರಿಕ ರಾಗಿದ್ದ ಜಿ.ಎಲ್. ಪಾಟೀಲರ ಮುಂದಾಳತ್ವದಲ್ಲಿ ೧೯೨೬ರಿಂದ ೧೯೬೪ರ ಅವಧಿಯ ವರೆಗೆ ವಿಜಯಪುರ ಜಿಲ್ಲೆಯಾದ್ಯಂತ ಸುಮಾರು ಅರವತ್ತು ಕಡೆಗಳಲ್ಲಿ ಕನ್ನಡ ಶಾಲೆಗಳನ್ನು ಆರಂಭಿಸಿ ಸಾವಿರಾರು ಮಕ್ಕಳಿಗೆ ಕನ್ನಡ ಶಿಕ್ಷಣವನ್ನು ನೀಡಿದರು. ನೂರಾರು ಶಿಕ್ಷಕರಿಗೆ ಉಪಜೀವನದ ಮಾರ್ಗವನ್ನು ತೋರಿಸಿ ಕೊಟ್ಟು, ಅವರ ಬಾಳು ಉಜ್ವಲವಾಗುವಂತೆ ಮಾಡಿದರು. ಮಕ್ಕಳ ಹಾಜರಾತಿ, ಶಿಕ್ಷಕರ ಸಂಬಳ ವಿತರಣೆ, ಶಾಲೆಯಲ್ಲಿ ಮಕ್ಕಳ ದಾಖಲಾತಿ ಇತ್ಯಾದಿಗಳ ಕುರಿತಾದ ರಿಜಿಸ್ಟರ್‌ಗಳನ್ನು, ಕರಡು ಪತ್ರಗಳನ್ನು ನಾವು ಇಂದಿಗೂ ಕರಿಭಂಟನಾಳದ ಶ್ರೀಮಠದಲ್ಲಿ ಕಾಣಬಹುದಾಗಿದೆ. ೧೮೬೪ರಲ್ಲಿ ಶ್ರೀಗಳು ಐಕ್ಯರಾಗುತ್ತಾರೆ. ಇಂದು ಈ ಪರಂಪರೆಯನ್ನು ಶ್ರೀಮಠದ ಗುರುಗಳಾದ ಶ್ರೀ ಶಿವಕುಮಾರ ಸ್ವಾಮಿಗಳು ಮುಂದುವರಿಸಿ ಕೊಂಡು ಹೋಗುತ್ತಿದ್ದಾರೆ.

**ಆಧಾರಸೂಚಿ**


೧. ಎಸ್. ಆರ್. ಕುಲಕರ್ಣಿ : 'ಕ್ರಾಂತಿ ಕೇಸರಿ' ಪುಸ್ತಕದ ಮುನ್ನುಡಿ (ರಾಜಾ ವೆಂಕಟಪ್ಪ ನಾಯಕ ತಾತಾ ಬಲವಂತ ಬಹರಿ ಬಹದ್ದೂರ, ಸುರಪುರ), ಪುಟ xxvi-xxvii.

೨. ಎಸ್. ಆರ್. ಕುಲಕರ್ಣಿ : 'ಕ್ರಾಂತಿ ಕೇಸರಿ' ಪುಸ್ತಕದ ಪ್ರಸ್ತಾವನೆ ನುಡಿ, ಪುಟ xxxii-xxxiii.

೩. ಡಾ. ಮಂಜುನಾಥ ಬೇವಿನಕಟ್ಟಿ (ಸಂ.) : ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ, ಪು. ೧೬.

೪. ಡಾ. ಮಂಜುನಾಥ ಬೇವಿನಕಟ್ಟಿ (ಸಂ.) : ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ, ಪು. ೨೪.

೫. ಎನ್.ಆರ್. ಕುಲಕರ್ಣಿ : ಕ್ರಾಂತಿಕೇಸರಿ (ಹೆಚ್ಚಿನ ವಿವರಗಳಿಗೆ).

೬. ಎನ್.ಆರ್. ಕುಲಕರ್ಣಿ : ಕ್ರಾಂತಿಕೇಸರಿ, ಪುಟ ೫೮, ೫೯.

೭. ಡಾ. ತಾರೀಹಳ್ಳಿ ಹನುಮಂತಪ್ಪ (ಸಂ.) : ನಾಯಕರ ಮಹಾಸಂಸ್ಥಾನ, ಸುರಪುರ, ಪು. ೬೩ .

೮. ಎನ್.ಆರ್. ಕುಲಕರ್ಣಿ : ಕ್ರಾಂತಿಕೇಸರಿ, ಪುಟ ೬೦–೬೨.

೯. ವಿವರಗಳಿಗೆ ನೋಡಿ : ಎನ್.ಆರ್. ಕುಲಕರ್ಣಿ : ಕ್ರಾಂತಿ ಕೇಸರಿ, ಪ್ರ: ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಕಲಬುರ್ಗಿ, ೨೦೧೫.

## ಆಕರ ಗ್ರಂಥಗಳು


೧. ಡಾ. ತಾರೀಹಳ್ಳಿ ಹನುಮಂತಪ್ಪ (ಸಂ.): ***ನಾಯಕರ ಮಹಾಸಂಸ್ಥಾನ ಸುರಪುರ,*** ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೨.

೨. ಪ್ರೊ. ಮಂಜುನಾಥ ಬೇವಿನಕಟ್ಟಿ (ಸಂ.) : ***ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ,*** ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೩. ಎನ್.ಆರ್. ಕುಲಕರ್ಣಿ : ***ಕ್ರಾಂತಿಕೇಸರಿ,*** ಪ್ರ: ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಕಲಬುರ್ಗಿ. ೨೦೧೫.

೪. ಕರಭಂಟನಾಳ ಮಠದ ಇಂದಿನ ಮಠಾಧೀಶರಾದ ಶ್ರೀ ಶಿವಕುಮಾರ ಸ್ವಾಮಿಗಳು ಸಂದರ್ಶನದ ಮಾಹಿತಿಗಳು.

೫. ಕ್ಷೇತ್ರಕಾರ್ಯದ ವಿವಿಧ ಊರುಗಳಲ್ಲಿನ ಸ್ಥಳೀಯರ ಮಾಹಿತಿಗಳು.



# "ಸಹಕಾರಿ ರಂಗದ ಭೀಷ್ಮ: ಶ್ರೀ ಕೆ.ಎಚ್. ಪಾಟೀಲರ ಸಾಧನೆಯ ಒಂದು ನೋಟ"

ಪ್ರೊ. ಕೆ.ಎಂ. ಗರಗ*

ಶ್ರೀ ಕೆ.ಎಚ್. ಪಾಟೀಲರ ಸ್ವಗ್ರಾಮ ಹುಲಕೋಟಿ ಕಾರವಾರ ಬಳ್ಳಾರಿ ಹೆದ್ದಾರಿ ಮೇಲೆ ಗದಗ ಪಟ್ಟಣದಿಂದ ೮ ಕಿ.ಮೀ. ದೂರದಲ್ಲಿರುವ ಪುಟ್ಟ ಹಳ್ಳಿ ಹುಲಕೋಟಿ. ನಾಡಿನ ಖ್ಯಾತ ಆಡಳಿತಗಾರ ರಾಜ್ಯದ ಮಾಜಿ ರಾಜ್ಯಪಾಲ ಶ್ರೀ ಗೋವಿಂದ ನಾರಾಣರ ದೃಷ್ಟಿಯಲ್ಲಿ "ವಂಡರ್‌ಲ್ಯಾಂಡ್" ರಾಜ್ಯದ ಹಿಂದಿನ ಸಹಕಾರ ಮಂತ್ರಿ ಶ್ರೀ ಆರ್.ಎಲ್. ಜಾಲಪ್ಪ ಅವರ ದೃಷ್ಟಿಯಲ್ಲಿ ಹುಲಕೋಟಿ "ಸಹಕಾರಿ ರಂಗದ ಓಯಸಿಸ್" ಹಿರಿಯ ಸಹಕಾರಿಗಳಿಗೆ ಹುಲಕೋಟಿ ಸಹಕಾರಿ ಕಾಶಿ, ಕವಿಗಳ ದೃಷ್ಟಿಯಲ್ಲಿ ಹುಲಕೋಟಿ ಸಹಕಾರಿ ರಂಗದ ಭದ್ರಕೋಟೆ. ದಿ. ಕೆ.ಎಚ್. ಪಾಟೀಲರು ೧೯೨೫ ಮಾರ್ಚ್ ೧೪ರಂದು ಶ್ರೀ ರಂಗನಗೌಡ ಶ್ರೀಮತಿ ನಿಂಗಮ್ಮ ದಂಪತಿಗಳಿಗೆ ಜನಿಸಿದರು.

ಶ್ರೀ ಕೆ.ಎಚ್. ಪಾಟೀಲ ಕನ್ನಡನಾಡು ಕಂಡ ಶ್ರೇಷ್ಠ ಪುಣ್ಯಪುರುಷರಲ್ಲಿ ಗಣ್ಯರು. ಕಲಿತದ್ದು ಕಡಿಮೆ ಸಾಧಿಸಿದ್ದು ಅಪಾರ. ಪ್ರತಿಭೆಯಲ್ಲಿ ಪಾಂಡಿತ್ಯದಲ್ಲಿ, ಸಂಘಟನಾ ಚಾತುರ್ಯದಲ್ಲಿ, ಆಡಳಿತ ಕೌಶಲ್ಯದಲ್ಲಿ, ಲೋಕಾನುಭವದಲ್ಲಿ, ಪ್ರಗತಿಪರ ಮನೋಧರ್ಮದಲ್ಲಿ, ಸ್ನೇಹಗಾರಿಕೆಯಲ್ಲಿ, ಪರೋಪಕಾರ ಬುದ್ಧಿಯಲ್ಲಿ, ಬಡವರ ಸೇವೆಯಲ್ಲಿ, ವಾಗ್ಮೀಯತೆಯಲ್ಲಿ, ಕರ್ತವ್ಯನಿಷ್ಠೆಯಲ್ಲಿ, ಆತಿಥ್ಯದಲ್ಲಿ ಎಲ್ಲಕ್ಕೂ ಮಿಗಿಲಾಗಿ ಸಹಕಾರಿ ತತ್ವದಲ್ಲಿ.

ಶ್ರೀ ಕೆ.ಎಚ್. ಪಾಟೀಲರು ಕನ್ನಡ ನಾಡು ಕಂಡ ಅಪರೂಪದ ವ್ಯಕ್ತಿ. ಹಳ್ಳಿಯ ಸರಪಂಚ ಅಂತರಾಷ್ಟ್ರೀಯ ಮಟ್ಟದ ಸಹಕಾರಿಯಾಗಿದ್ದುದು ಪವಾಡ ಸದೃಶ. ಶ್ರೀ ಕೆ.ಎಚ್. ಪಾಟೀಲ ಉಸಿರೇ ಸಹಕಾರ, ಅವರ ಎರಡು ಶ್ವಾಸಕೋಶಗಳೆಂದರೆ ಗ್ರಾಮ ಹಾಗೂ ಕೃಷಿ. ಅವರ ಹೃದಯವೆಂದರೆ ರೈತ. ಕೈಗಾರಿಕೆ ಹಾಗೂ ಶಿಕ್ಷಣ ಅವರ ಎರಡು ಕಣ್ಣುಗಳು. ಅವಿರತ ಶ್ರಮ ಅವರ ಬಾಹುಗಳಾದರೆ ರಚನಾತ್ಮಕ ಕೆಲಸಗಳೇ ಅವರ ಕಾಲುಗಳು. ಇವರ ನಿಲುವು ಛಲದ್ದು ಇವರ ಬದುಕು ಸಂಘರ್ಷದ್ದು ಶೋಷಣೆ ಮುಕ್ತ ಗ್ರಾಮೀಣ ಸಮಾಜದ ಸುಂದರ ಕನಸು ಕಂಡ ಕನಸುಗಾರ. ಇವರ ಜೀವನದ ಗುರಿ ಶೋಷಣೆ ರಹಿತ ಗ್ರಾಮೀಣ ಬದುಕು. ಅದಕ್ಕೆ ರಾಜಕೀಯ ಒಂದು ಸಾಧನವೇ ಹೊರತು ಅದೇ ಸಾಧ್ಯವಲ್ಲ.

ಭಾರತದಲ್ಲಿ ಸಹಕಾರಿ ಆಂದೋಲನದ ಭಾಗೀರಥಿಗೆ ಗದಗ ಗಂಗೋತ್ರಿ, ಗದಗನ್ನು ಸಹಕಾರ ರಂಗದ ಕಾಶಿಯನ್ನಾಗಿ ಮಾಡಿದ ಸೃಷ್ಟಿ ಬ್ರಹ್ಮ ಶ್ರೀ ಕೆ.ಎಚ್. ಪಾಟೀಲರು.

ರೈತ ಮನೆತನದಲ್ಲಿ ಹುಟ್ಟಿ, ತಮ್ಮ ವ್ಯಕ್ತಿತ್ವ ರೂಪಿಸಿಕೊಂಡ ಶ್ರೀ ಕೆ. ಎಚ್. ಪಾಟೀಲರವರಿಗೆ ರೈತ ಸಮಸ್ಯೆಗಳನ್ನು ಪರಿಹರಿಸಲು. ಹೋರಾಡುವುದೆಂದರೆ ಅವರಿಗೆ ಎಲ್ಲಿಲ್ಲದ ಸಂತಸ.

ರೈತ ಶೋಷಣೆಗೆ ಒಳಗಾಗುವುದು ಪ್ರಮುಖವಾಗಿ ಎರಡು ಪ್ರಸಂಗಗಳಲ್ಲಿ. ತನ್ನ ಉತ್ಪಾದನೆಯನ್ನು ಮಾರುಕಟ್ಟೆಯಲ್ಲಿ ಮಾರುವಾಗ ಹಾಗೂ ತನ್ನ ಅವಶ್ಯಕತೆಗಳನ್ನು ಮಾರುಕಟ್ಟೆಯಲ್ಲಿ ಖರೀದಿಸುವಾಗ. ರೈತನನ್ನು ದೃಢವಾಗಿ ಮುಕ್ತಗೊಳಿಸಿದರೆ ಸಾಕು ರೈತ ತಲೆ ಎತ್ತಿ ಸ್ವಾಭಿಮಾನದಿಂದ ಬಾಳಬಲ್ಲನೆಂಬುದರಲ್ಲಿ ಶ್ರೀ ಕೆ.ಎಚ್. ಪಾಟೀಲರಿಗೆ ಬಲವಾದ ವಿಶ್ವಾಸ. ಈ ಬಲವಾದ ವಿಶ್ವಾಸವನ್ನೇ ಹಠದಿಂದ ಗದಗ ಪರಿಸರದಲ್ಲಿ ಯಶಸ್ವಿಯಾಗಿ ಕಾರ್ಯಗತೊಳಿಸಿದ್ದೇ ನಾಡಿಗೆ ನೀಡಿದ ದೊಡ್ಡ ಕೊಡುಗೆ.

ರೈತ ಶೋಷಣೆಯಿಂದ ಮುಕ್ತನಾದರೆ ಸಾಲದು. ಆತನ ಪರಿವಾರ ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಬಲ ಪಡೆಯಬೇಕು. ರೈತನ ಜ್ಞಾನದ ಕ್ಷಿತಿಜ ವಿಸ್ತರಿಸಲ್ಪಡಬೇಕು. ಆತನ ಆರೋಗ್ಯ ರಕ್ಷಣೆಗೆ ಅತ್ಯಾಧುನಿಕ ಸೌಲಭ್ಯ ರೂಪಗೊಳ್ಳಬೇಕು. ದೈಹಿಕವಾಗಿ ಮಾನಸಿಕವಾಗಿ ಸಬಲನಾದ ಎಲ್ಲ ಬಗೆಯ ಶೋಷಣೆಗಳಿಂದ ಸಂಪೂರ್ಣ ಮುಕ್ತನಾದ ಆರೋಗ್ಯವಂತ ಪ್ರಜ್ಞಾವಂತ ರೈತನನ್ನು ರೂಪಿಸುವುದೇ ಶ್ರೀ ಕೆ.ಎಚ್. ಪಾಟೀಲರ ಗುರಿಯಾಗಿತ್ತು.

ಶ್ರೀ ಕೆ.ಎಚ್. ಪಾಟೀಲರು ಸಹಕಾರಿ ಜಾಲದ ಕೇಂದ್ರ ಬಿಂದು ದಿ. ಗದಗ ಸಹಕಾರಿ ಹತ್ತಿ ಮಾರಾಟ ಕೇಂದ್ರ ಈ ಸಂಸ್ಥೆಯ ಪರಿಸರದಲ್ಲಿಯೇ ಶ್ರೀ ಕೆ.ಎಚ್. ಪಾಟೀಲರ ಎಲ್ಲ ಹೋರಾಟಗಳು ರೂಪುಗೊಂಡವು.

* ಇತಿಹಾಸ ಉಪನ್ಯಾಸಕರು, ಜೆ.ಸಿ.ಬಿ.ಎಂ. ಪಿ.ಯು. ಕಾಲೇಜು, ಹುಲುಕೋಟಿ, ಗದಗ–೫೮೨೨೦೫.

ರೈತನ ಅಗತ್ಯಗಳಾದ ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ, ಡೀಸೆಲ್, ಪೆಟ್ರೋಲ್, ಸೀಮೆಎಣ್ಣೆ, ಕೃಷಿ ಉಪಕರಣಗಳು, ಯಂತ್ರೋಪಕರಣಗಳು ಮೊದಲಾದವು ಗಳನ್ನು ದಿ. ಗದಗ ಕೋ-ಆಪ್, ಕಾಟನ್ ಸೇಲ್ ಸೊಸಾಯಿಟಿ ಪೂರೈಸುತ್ತದೆ. ರೈತರನ್ನು ನಕಲಿ ಬೀಜ ಖೊಟ್ಟಿ ಸಾಧನ ಸಲಕರಣೆಗಳಿಂದ ರಕ್ಷಿಸುವುದರ ಜೊತೆಗೆ ಕಳ್ಳಪೇಟೆಯ ಕರಾಳ ಛಾಯೆಯಿಂದ ರಕ್ಷಿಸುತ್ತಿದೆ. ಉತ್ತಮ ಗುಣಮಟ್ಟದ ಬಿತ್ತನೆ ಬೀಜ ಪಡೆದು ಸಂಸ್ಥೆ ಪೂರೈಸುವುದಲ್ಲದೆ ರೈತನಿಗೆ ನ್ಯಾಯವಾದ ಬೆಲೆಯಲ್ಲಿ ಅವರ ಇತರ ಕೃಷಿ ಅಗತ್ಯಗಳನ್ನು ಪೂರೈಸುತ್ತಿದೆ.

ಪ್ರಪಂಚದಲ್ಲಿ ಕೃಷಿ ಕ್ಷೇತ್ರವೊಂದನ್ನು ಬಿಟ್ಟರೆ ಉಳಿದಂತೆ ಎಲ್ಲರ ಕ್ಷೇತ್ರಗಳಲ್ಲಿ ಉತ್ಪಾದಕ ತನ್ನ ಮಾಲಿನ ಮೇಲೆ ಬೆಲೆ ನಿರ್ಧರಿಸುತ್ತಾನೆ. ಆದರೆ ರೈತರ ಉತ್ಪಾದನೆಗಳ ಬೆಲೆ ನಿರ್ಧರಿಸುವವರು ವ್ಯಾಪಾರಿಗಳು. ವಿಚಿತ್ರ ಸತ್ಯ ಮಳೆ ಗಾಳಿ, ಬಿಸಿಲು ಚಳಿಗೆ ಮೈಯೊಡ್ಡಿ ಮಣ್ಣಿನೊಂದಿಗೆ ಮಣ್ಣಾಗಿ ದುಡಿಯುವ ರೈತ ಕಂಗಾಲು ದರಿದ್ರ. ಬಡತನ ಇವರ ಜೀವನ ಸಂಗಾತಿ. ಅದೇ ರೈತನ ಮಾಲು ಖರೀದಿಸಿ ಮಾರುವ ಮಧ್ಯವರ್ತಿ ವರ್ಗಕ್ಕೆ ಬಡತನದ ಸೋಂಕಿಲ್ಲ. ಅವರದು ಸಮೃದ್ಧ ಶ್ರೀಮಂತ ಜೀವನ. ಇದು ಬದಲಾಗಬೇಕು. ರೈತ ತಾನು ಬೆಳೆದ ಮಾಲಿಗೆ ನ್ಯಾಯವಾದ ಬೆಲೆ ಪಡೆಯಬೇಕು. ಗ್ರಾಹಕ ಹಾಗೂ ಉತ್ಪಾದಕ ಇಬ್ಬರ ಹಿತ ರಕ್ಷಿಸಲ್ಪಡಬೇಕು. ಅದಕ್ಕಾಗಿ ರೈತ ತನ್ನ ಮಾಲಿನ ಬೆಲೆ ತಾನೆ ಕಟ್ಟುವಂತಾಗಬೇಕು. ಈ ನಂಬಿಕೆಯನ್ನು ಅವರು ಕಾರ್ಯರೂಪಕ್ಕಿಳಿಸಿ ಯಶಸ್ವಿಯಾದರು.

ರೈತರ ಉತ್ಪಾದನೆ ಪೇಟೆಗೆ ಬಂದಾಗ ಪೇಟೆಯಲ್ಲಿ ಬೆಲೆ ದಿಢೀರಾಗಿ ಕುಸಿಯುತ್ತದೆ. ಇದು ಅತ್ಯಂತ ಸಾಮಾನ್ಯ ಎಂದು ಹೇಳುತ್ತೇವೆ. ಅದೇ ರೈತ ಬಿತ್ತನೆ ಕಾಲಕ್ಕೆ ಬೀಜ ಖರೀದಿಸಲು ಹೋದಾಗ ಬೆಲೆಗಳು ಗಗನಕ್ಕೇರಿರುತ್ತದೆ. ಅದೇ ಸುಗ್ಗಿ ಮುಗಿದ ತಕ್ಷಣ ಮತ್ತೆ ಬೆಲೆಗಳು ಏರುತ್ತವೆ. ಇವೆಲ್ಲ ಸಾಮಾನ್ಯ ಎಂದು ಭಾವಿಸಲಾಗುತ್ತದೆ. ರೈತ ತನ್ನ ಉತ್ಪಾದನೆಯನ್ನು ಸಂಗ್ರಹಿಸಿ ಇಟ್ಟು ಅನಂತರ ಮಾರುವ ಸ್ಥಿತಿ ತಲುಪಿದರೆ ಈ ಅನ್ಯಾಯದಿಂದ ಪಾರಾಗಬಲ್ಲ ಅದಕ್ಕಾಗಿ ಶ್ರೀ ಕೆ.ಎಚ್. ಪಾಟೀಲರು ದಿ. ಗದಗ ಕೋ-ಆ. ಕಾಟನ್ ಸೇಲ ಸೊಸಾಯಿಟಿ ಹಾಗೂ ಎ.ಪಿ.ಎಂ.ಸಿ. ಮೂಲಕ ಗ್ರಾಮೀಣ ಉಗ್ರಾಣಗಳನ್ನು ನಿರ್ಮಿಸಿದರು. ಈ ದೇಶದ ಮೊಟ್ಟ ಮೊದಲ ಸಹಕಾರಿ ಕ್ಷೇತ್ರದ ಉಗ್ರಾಣ ಗದಗದಲ್ಲಿದೆ.

ಗದಗ ಭಾಗದಲ್ಲಿ ಬೆಳೆಯುವ ಲಕ್ಷ್ಮಿ ಹತ್ತಿಗೆ ಒಂದು ಕಾಲದಲ್ಲಿ ಬಿಳಿ ಬಂಗಾರ ಎಂದು ಹೇಳುತ್ತಿದ್ದರು. ಈ ಬಿಳಿ ಬಂಗಾರ ಬೆಳೆಯುವ ರೈತನ 'ಪಟಗಾ' ಸದಾ ಹರಿದು ಚಿಂದಿಯಾಗಿರುತ್ತಿದ್ದರೆ ಅದನ್ನು ಖರೀದಿಸುವ ಶೇಡಜಿಗಳ 'ಪೇಠಾ' ಗರಿಗರಿಯಾಗಿರುತ್ತಿದ್ದಿತು. ರೈತ ಪೇಟೆಗೆ ಹತ್ತಿ ತಂದಾಗ ಕೊಳ್ಳುವವರು ಹೇಳಿದ್ದೆ ವೇದ. ಸ್ಮಶಾನಕ್ಕೆ ಒಯ್ದ ಶವದಂತೆ ಪೇಟೆಗೆ ತಂದ ರೈತನ ಮಾಲು ಮರಳಿ ಒಯ್ಯುವುದಕ್ಕಾಗುವು ದಿಲ್ಲ. ಖರೀದಿದಾರ ಕೊಟ್ಟ ಬೆಲೆಗೆ ಮಾಲು ಮಾರಿ ದೈವವನ್ನು ಹಳಿಯುತ್ತ ತನ್ನ ಹಣೆಬರಹ ಶಪಿಸುತ್ತ ರೈತ ಹೋಗುವುದು ವಾಡಿಕೆಯಾಗಿತ್ತು. ಇದನ್ನು ಕಂಡ ಶ್ರೀ ಕೆ.ಎಚ್. ಪಾಟೀಲರ ಮನಸ್ಸು ಕುದಿಯಿತು. ಪರಿಸ್ಥಿತಿ ಬದಲಾಯಿಸಬೇಕೆಂದರು ರೈತರ ಹತ್ತಿ ಕೊಂಡು ಅದನ್ನೇ ಸಂಸ್ಕೃತಿಸಿ ರೂಪಾಂತರಿಸಿ ಮಾರುವವರು ಅಪಾರ ಹಣ ಗಳಿಸುವುದನ್ನು ನೋಡಿದ ಅವರು ಅದನ್ನೇ ರೈತರೇಕೆ ಮಾಡಬಾರದೆಂದು ಕನಸು ಕಂಡರು.

ರೈತರ ಕೃಷಿ ಉತ್ಪಾದನೆಗಳನ್ನು ಸಂಸ್ಕರಿಸಿ, ಪರಿವರ್ತಿಸಿ, ರೂಪಾಂತರಿಸಿ ಗ್ರಾಹಕರಿಗೆ ಮಾರಾಟ ಮಾಡುವ ಉದ್ಯಮಿಗಳು ಅಪಾರ ಲಾಭ ಮಾಡುವುದನ್ನು ಕಂಡ ಶ್ರೀ ಕೆ.ಎಚ್. ಪಾಟೀಲರು ರೈತರ ಉತ್ಪಾದನೆಗಳನ್ನು ರೈತರೇ ಸಂಘಟಿಸಿದ ಸಹಕಾರ ಸಂಸ್ಥೆಗಳ ಮೂಲಕ ಸಂಸ್ಕರಿಸಿ ಮಾರಿದರೆ ರೈತರ ಉತ್ಪಾದನೆಗಳಿಗೆ ಉತ್ತಮ ಬೆಲೆ ನೀಡುವುದು ಸುಲಭ ಸಾಧ್ಯವೆಂದು ಮನಗಂಡರು. ರೈತರ ಉತ್ಪಾದನೆಗಳನ್ನು ಸಂಸ್ಕರಿಸಿ ಮಾರುವ ಘಟಕಗಳು ಗಳಿಸುವ ಲಾಭ ರೈತರಿಗೆ ಹರಿದುಹೋಗಬೇಕು ಜೊತೆಗೆ ಈ ಕೈಗಾರಿಕಾ ಘಟಕಗಳು ರೈತರ ಮಕ್ಕಳ ಶಿಕ್ಷಣಕ್ಕಾಗಿ ರೂಪಗೊಳ್ಳುವ ಶೈಕ್ಷಣಿಕ ಸಂಸ್ಥೆಗಳಿಗೆ ನೆರವಾಗಬೇಕು. ಇದರಿಂದ ರೈತರ ಆರ್ಥಿಕ ಪರಿಸ್ಥಿತಿ ಸುಧಾರಣೆಯೊಂದಿಗೆ ಅವರ ಶೈಕ್ಷಣಿಕ ಸ್ಥಿತಿ ಸುಧಾರಿಸುವುದು. ಸಾಮಾಜಿಕ ಸ್ಥಾನಮಾನ ಹಾಗೂ ಜೀವನಮಟ್ಟ ಉತ್ತಮಗೊಳ್ಳಲು ಇದರಿಂದ ಅನುಕೂಲ ವಾಗುವುದೆಂದು ನಿರ್ಧಾರಕ್ಕೆ ಬಂದ ಅವರು ಗದಗ ಪರಿಸರದಲ್ಲಿ ಕೃಷಿ ಆಧಾರಿತ ಕೈಗಾರಿಕೆಗಳ ಸ್ಥಾಪನೆಗೆ ಚಿಂತನೆ ಮಾಡಿದರು.

ರೈತರೇ ನಿರ್ವಹಿಸುವ ಕಾರ್ಖಾನೆಗಳಲ್ಲಿ ಸಂಸ್ಕರಣ ಗೊಂಡು ಗ್ರಾಹಕರಿಗೆ ತಲುಪಬೇಕು. ಗ್ರಾಹಕನಿಗೆ ನ್ಯಾಯ ಬೆಲೆಗೆ ಉತ್ತಮ ಗುಣಮಟ್ಟದ ಮಾಲು ಸಿಗಬೇಕು. ರೈತನಿಗೆ ಸಂಸ್ಕರಣದ ರೂಪಾಂತರದ ಲಾಭ ದೊರೆಯಬೇಕು.

ದಿ. ಗದಗ ಕೋ-ಆಪ್. ಕಾಟನ್ ಸೇಲ್ ಸೊಸಾಯಿಟಿಯ ಜಿನ್ನಿಂಗ ಘಟಕದಲ್ಲಿ ರೂಪಾಂತರಗೊಂಡ ಅರಳೆ ಅದೇ ಸಂಸ್ಥೆಯ ಪ್ರೆಸ್ಸಿಂಗ್ ಘಟಕದಲ್ಲಿ ಬೇಲ್‌ಗಳಾಗಿ ಹೊರ ಬಂದರೆ ಸಾಲದು. ಅದು ಸ್ಪಿನಿಂಗ ಮಿಲ್ಲಿಗೆ ಸಾಗಬೇಕೆಂದು ಶ್ರೀ ಪಾಟೀಲರು ದಿ. ಗದಗ ಕೋ-ಆಪ್, ಟೆಕ್ಸಟೈಲ್ ಮಿಲ್ ಹುಲಕೋಟಿಯಲ್ಲಿ ಕಟ್ಟಿದರು. ಈ ಮಿಲ್ಲು

ಭಾಗದ ಹತ್ತಿಯನ್ನು ಪೂರ್ಣ ಬಳಸಿಕೊಳ್ಳಲು ಸಾಧ್ಯವಿಲ್ಲವೆಂದು ಅವರು ದಿ. ಫಾರ್ಮರ್ಸ ಕೋ–ಆಪ್. ಸ್ಪಿನ್ನಿಂಗ್ ಮಿಲ್ ಹುಲಕೋಟಿಯಲ್ಲಿ ಕಟ್ಟಿದರು. ಈ ಮಿಲ್ಲುಗಳಲ್ಲಿ ಉತ್ಪಾದಿಸಲ್ಪಡುವ ನೂಲು ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮದ ನೇಕಾರರಿಗೆ ತಲುಪುತ್ತದೆ. ಹತ್ತಿ ಬೆಳೆಯುವ ರೈತ ನೂಲನ್ನು ಗ್ರಾಹಕರಿಗೆ ನೀಡುವಂತಾಗಿದೆ.

ಈ ನೂಲಿನ ಗಿರಣಿಗಳಲ್ಲಿ ಉಳಿಯುವ ಶೇಷ ನಿರುಪಯುಕ್ತ ವಸ್ತು ಸರ್ಜಿಕಲ್ ಕಾಟನ್ ತಯಾರಿಸುವ ಘಟಕಕ್ಕೆ ಹೋಗಿ ಅಲ್ಲಿ ಅದು ಆಸ್ಪತ್ರೆಗಳಲ್ಲಿ ಬಳಸುವ ಅರಳಿಯಾಗಿ ಪರಿವರ್ತನೆಗೊಂಡು ಅಲ್ಲಿಯೂ ಉಳಿಯುವ ನಿರುಪಯುಕ್ತ ಶೇಷ ವಸ್ತು ಖಾದಿ ಗ್ರಾಮೋದ್ಯೋಗದ ಕಾಗದ ಕಾರ್ಖಾನೆ ತಲುಪಿ ರಟ್ಟಿನ ರೂಪ ಧರಿಸುತ್ತದೆ.

ಗದಗ ಭಾಗದ ಮುಖ್ಯ ಬೆಳೆ ಹತ್ತಿ ಮಾತ್ರ ಅಲ್ಲ. ಎಣ್ಣೆ ಬೀಜಗಳು ಪ್ರಮುಖ ಕೃಷಿ ಉತ್ಪಾದನೆಗಳಾದ ಹತ್ತಿ ಕಾಳಿನಿಂದ ಎಣ್ಣೆ ತಯಾರಿಸುವ ಘಟಕ ಸ್ಥಾಪಿಸಿದ್ದ ಶ್ರೀ ಪಾಟೀಲರು ರೈತರ ಶೇಂಗಾ ಹಾಗೂ ಸೂರ್ಯಕಾಂತಿ ಬೀಜದಿಂದ ಎಣ್ಣೆ ತಯಾರಿಸಲು ಬಿಂಕದಕಟ್ಟೆಯಲ್ಲಿ ದಿ. ಫಾರ್ಮರ್ಸ ಕೋ–ಆಪ್. ಆಯಿಲ್ಸ್ ಲಿ., ಸಂಸ್ಥೆ ಕಟ್ಟಿದರು. ರೈತರು ದಿ. ಗದಗ ಕೋ–ಆಫ್ ಕಾಟನ್ ಸೇಲ್ ಸೊಸಾಯಿಟಿಗೆ ತಮ್ಮ ಉತ್ಪಾದನೆಗಳಾದ ಎಣ್ಣೆ ಬೀಜ ತರುತ್ತಾರೆ. ಅಲ್ಲಿ ವ್ಯವಸ್ಥಿತ ಟೆಂಡರ್ ಪದ್ಧತಿ ಮೇಲೆ ಮಾರಾಟ ನಡೆಯುವುದು. ಸೇಲ್ ಸೊಸಾಯಿಟಿಯೇ ಎಣ್ಣೆ ಘಟಕದ ಪ್ರತಿನಿಧಿಯಾಗಿ ಖರೀದಿ ಕೆಲಸವನ್ನು ಸಹ ಮಾಡುವುದು. ಅಲ್ಲಿಂದ ಎಣ್ಣೆಬೀಜ ಬಿಂಕದಕಟ್ಟಿ ಮಿಲ್ಲಿನ ಎಣ್ಣಿ. ಜನತಾ ಬಜಾರ ಹಾಗೂ ತನ್ನದೆ ಆದ ಮಾರಾಟ ಘಟಕಗಳಿಂದ ಗ್ರಾಹಕನಿಗೆ ತಲುಪುತ್ತದೆ. ಕಲಬೆರಕೆ ರಹಿತ ಎಣ್ಣೆ ನ್ಯಾಯ ಬೆಲೆಯ ಎಣ್ಣೆ ಗ್ರಾಹಕನಿಗೆ ದೊರೆಯುವುದು.

ಈ ಎಣ್ಣೆ ಮಿಲ್ಲುಗಳಲ್ಲಿ ಉಳಿಯುವ ಎಣ್ಣೆ ರಹಿತ ಹಿಂಡಿ ಹುಲಕೋಟಿ ಕೋ–ಆಪ್ ಕ್ಯಾಟಲ್ ಫೀಡ್ಸ್ ಸಂಸ್ಥೆಗೆ ವರ್ಗಾಯಿಸಲ್ಪಡುವುದು. ಅಲ್ಲಿ ರೈತರ ದನಕರುಗಳಿಗೆ ಬೇಕಾಗುವ ಆಹಾರವಾಗಿ ಪರಿವರ್ತನೆಗೊಂಡು ರೈತರಿಗೆ ಮತ್ತೆ ಕಾಟನ್ ಸೇಲ್ ಸೊಸಾಯಿಟಿ ಮುಖಾಂತರವೇ ಮಾರಾಟವಾಗುವುದು.

ಗದಗ ಕೋ–ಆಪ್ ಟೆಕ್ಸ್‌ಟೈಲ್ ಮಿಲ್ ಸಂಸ್ಥೆ ತನ್ನ ಸದಸ್ಯ ರೈತರಿಂದ ನೇರವಾಗಿ ಹತ್ತಿ ಖರೀದಿಸುವುದರ ಬದಲು ಅವರ ಹತ್ತಿಯನ್ನು ಸಂಸ್ಕರಿಸಿ ನೂಲನ್ನು ತಯಾರಿಸುವುದು. ರೈತರಿಂದ ಮಿಲ್ ಕೇವಲ ಪರಿವರ್ತನೆ ಶುಲ್ಕ ಪಡೆದು ನೂಲಿನ ಬೆಲೆಯನ್ನು ನೇರವಾಗಿ ರೈತರಿಗೆ ತಲುಪಿಸುವುದು. ಈ ಪ್ರಾಯೋಗಿಕ ಯೋಜನೆ ರೈತರಿಗೆ ಹೆಚ್ಚು ಲಾಭದಾಯಕವಾಗಿ ಪರಿಣಮಿಸಿದೆ.

ಬಿಂಕದಕಟ್ಟೆಯಲ್ಲಿರುವ ದಿ. ಫಾರ್ಮರ್ಸ್ ಕೋ–ಆಪ್ ಆಯಿಲ್ಸ್ ಲಿ. ಸಂಸ್ಥೆ ಎಣ್ಣೆ ಬೀಜ ಬೆಳೆಯುವ ರೈತರ ಹಿತ ರಕ್ಷಿಸುತ್ತದೆ. ಶೇಂಗಾ, ಸೂರ್ಯಕಾಂತಿ ಬೆಳೆಯುವ ರೈತರಿಗೆ ಉತ್ತಮ ಬೆಲೆ ನೀಡಲಾಗುತ್ತಿದೆ. ಈ ಸಂಸ್ಥೆ ಪೇಟೆಯಲ್ಲಿ ಖರೀದಿಗೆ ಇಳಿದರೆ ಸಾಕು. ಶೇಂಗಾ ಹಾಗೂ ಸೂರ್ಯಕಾಂತಿ ಬೀಜದ ಬೆಲೆಗಳು ತಾವಾಗಿಯೇ ಹೆಚ್ಚುತ್ತದೆ. ಎಣ್ಣೆ ಬಳಕೆದಾರನ ಆರೋಗ್ಯ ಹಾಳಾಗದಂತೆ ಕಲಬೆರಕೆ ರಹಿತ ಎಣ್ಣೆ ನೀಡುವ ಈ ಘಟಕ ಎಣ್ಣೆ ಬೀಜ ಉತ್ಪಾದಿಸುವ ರೈತನಿಗೆ ಅಧಿಕ ಬೆಲೆ ನೀಡಿ ಅವನಿಗೆ ಆರ್ಥಿಕ ಚೈತನ್ಯ ನೀಡುವುದು.

ರೈತರನ್ನು ಆರ್ಥಿಕ ಶೋಷಣೆಯಿಂದ ಮುಕ್ತಗೊಳಿಸಿದರೆ ಸಾಲದು. ಆತನನ್ನು ಅಜ್ಞಾನದಿಂದಲೂ ಮುಕ್ತಗೊಳಿಸಬೇಕು. ಆಧುನಿಕ ವಿಜ್ಞಾನ ಹಾಗೂ ತಂತ್ರಜ್ಞಾನದ ಲಾಭ ಆತನಿಗೆ ಹರಿದು ಬರಬೇಕು. ಅದಕ್ಕಾಗಿ ಶ್ರೀ ಕೆ.ಎಚ್. ಪಾಟೀಲರು ಕೃಷಿ ವಿಜ್ಞಾನ ಕೇಂದ್ರದ ಜೊತೆ ಕಡಿಮೆ ಹಣ ಹೂಡಿ ಅಧಿಕಾರ ಇಳುವರಿ ತೆಗೆಯುವಲ್ಲಿ ತರಬೇತಿ ನೀಡಲು ಹುಲಕೋಟಿಯಲ್ಲಿ 'ಕೃಷ್ಣ ಕೃಷಿ' ಸಂಸ್ಥೆ ಮತ್ತು ಕಟ್ಟಿದ್ದಾರೆ. ರೈತರು ಆರೋಗ್ಯಶಾಲಿಗಳಾಗಬೇಕು. ಅವರು ದೂರ ದೂರದ ಪಟ್ಟಣಗಳಿಗೆ ಚಿಕಿತ್ಸೆಗಾಗಿ ಅಲೆಯಬಾರದು. ಅದಕ್ಕಾಗಿ ಹುಲಕೋಟಿಯಲ್ಲಿ ರೂರಲ್ ಮೆಡಿಕಲ್ ಸೊಸಾಯಿಟಿ ಸ್ಥಾಪಿಸಿರುವ ೬೦ ಹಾಸಿಗೆಗಳ ಈ ಆಸ್ಪತ್ರೆ ಅತ್ಯಾಧುನಿಕ ಸೌಲಭ್ಯಗಳನ್ನು ಹೊಂದುವಂತೆ ಸಜ್ಜುಗೊಳಿಸಿದ್ದಾರೆ.

ಶ್ರೀ ಕೆ.ಎಚ್. ಪಾಟೀಲರು ಹುಲಕೋಟಿ ಕೋ–ಆಪ್ ಎಜುಕೇಶನ್ ಸೊಸಾಯಿಟಿ, ಶ್ರೀ ರಾಮಕೃಷ್ಣ ಆಶ್ರಮ ಶಿಕ್ಷಣ ಸಂಸ್ಥೆ, ಶ್ರೀ ರಾಜರಾಜೇಶ್ವರಿ ವಿದ್ಯಾನಿಕೇತನ, ರೂರಲ್ ಟೆಕ್ನಿಕ್ ಎಜ್ಯುಕೇಷನ್ ಸೊಸಾಯಿಟಿಗಳನ್ನು ಸ್ಥಾಪಿಸಿ ಅವುಗಳ ಮೂಲಕ ಪೂರ್ವ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು, ಇಂಗ್ಲಿಷ್ ಮಾಧ್ಯಮ ವಸತಿ ಶಾಲೆಯನ್ನು, ಪದವಿಪೂರ್ವ ಕಾಲೇಜು, ಪೂರ್ಣ ಪ್ರಮಾಣದ ಕಲಾವಿಜ್ಞಾನ ವಾಣಿಜ್ಯ ಕಾಲೇಜುಗಳನ್ನು, ಪಾಲಿಟೆಕ್ನಿಕ್ ಹಾಗೂ ಇಂಜನಿಯರಿಂಗ್ ಕಾಲೇಜುಗಳನ್ನು ಕಟ್ಟಿ ಬೆಳೆಸಿದ್ದಾರೆ.

ತಮ್ಮ ಪ್ರದೇಶದ ಜನರ ವಸತಿ ಸಮಸ್ಯೆ ಬಗೆಹರಿಸಲು ಪಾಟೀಲರು ಹುಲಕೋಟಿ ಕೋ–ಆಪ್ ಹೌಸಿಂಗ ಸೊಸಾಯಿಟಿ, ಎಚ್.ಸಿ.ಇ.ಎಸ್. ಹೌಸಿಂಗ ಕೋ–ಆಪ್ ಸೊಸಾಯಿಟಿ, ರಾಧಾಕೃಷ್ಣ ಹೌಸಿಂಗ್ ಕೋ–ಆಪ್ ಸೊಸಾಯಿಟಿಗಳನ್ನು ಸ್ಥಾಪಿಸಿದರು. ಅವರ ಎಲ್ಲ



ಸಹಕಾರಿ ರಂಗದ ಭೀಷ್ಮ ದಿ. ಶ್ರೀ ಕೆ.ಎಚ್. ಪಾಟೀಲ



ದಿವಂಗತ ಶ್ರೀ ಕೆ.ಎಚ್. ಪಾಟೀಲರು ಸ್ಥಾಪಿಸಿದ ಕೃಷಿ ವಿಜ್ಞಾನ ಕೇಂದ್ರ ಹುಲಕೋಟಿ



ರೂರಲ್ ಇಂಜಿನಿಯರಿಂಗ್ ಕಾಲೇಜು, ಹುಲಕೋಟಿ

ಚಟುವಟಿಕೆಗಳು ಪ್ರದಕ್ಷಿಣೆ ಹಾಕುತ್ತವೆ. ಎಲ್ಲ ಸಂಸ್ಥೆಗಳ ಚಟುವಟಿಕೆಗಳ ಲಾಭ ರೈತರಿಗೆ ನೇರವಾಗಿ ಪರೋಕ್ಷವಾಗಿ ವರ್ಗಾಯಿಸಲ್ಪಡುತ್ತವೆ.

[ಈ ಪ್ರಬಂಧವನ್ನು ರಚಿಸಲು ಸಹಕಾರ ಕೊಟ್ಟಂತಹ ಸನ್ಮಾನ್ಯ ಶ್ರೀ ಡಾ. ಎಸ್.ಆರ್. ನಾಗನೂರು ಚೇರ್ಮನ್ನರು ರೂರಲ್ ಮೆಡಿಕಲ್ ಸರ್ವೀಸ್ ಸೊಸಾಯಿಟಿ, ಹುಲಕೋಟಿ ಹಾಗೂ ಪ್ರೊ. ಡಿ. ಜಿ. ಜೋಗಣ್ಣವರ ಹುಲಕೋಟಿ ಇವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.]



## ಗ್ರಂಥ ಋಣ

೧. ಜಿ.ಕೆ. ಜಮಾದರ–ಶ್ರೀ ಕೆ.ಚ್. ಪಾಟೀಲರ ದೃಷ್ಟಿ – ಸೃಷ್ಟಿ.

೨. ಸದನದಲ್ಲಿ ಕೆ.ಎಚ್. ಪಾಟೀಲರ ದೃಷ್ಟಿ ಸಮಷ್ಟಿಗಾಗಿ ಸೃಷ್ಟಿ. ತೃತೀಯ ಸಂಪುಟ ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.




# ಮೈಸೂರು ಸಂಸ್ಥಾನದ ನೀರಾವರಿ ಮೇಜರ್ ಸ್ಯಾಂಕೆಯ ಕೊಡುಗೆಗಳು

ಡಾ. ಟಿ.ವಿ. ನಾಗರಾಜು*

**ಮೇ**ಜರ್ ಸ್ಯಾಂಕೆ ಒಬ್ಬ ವಾಸ್ತವವಾದಿ ಮಾತ್ರವಲ್ಲದೆ ಮೈಸೂರು ಸಂಸ್ಥಾನದ ಜನರ ಬದುಕಿಗೆ ಆಧಾರಸ್ಥಂಬವಾಗಿದ್ದ ನೀರಾವರಿ ಕ್ಷೇತ್ರದ ಪ್ರಾಮುಖ್ಯತೆಯನ್ನು ಮನಗೊಂಡು ಸ್ಪಂದಿಸಿದ ಸೂಕ್ಷ್ಮಗ್ರಾಹಿ. ಸಾಮ್ರಾಜ್ಯಷಾಹಿ ಹಾಗೂ ವಸಾಹತು ಚೌಕಟ್ಟಿನಲ್ಲಿ ಮತ್ತು ಕೇಂದ್ರಿಕೃತ ಅಧಿಕಾರಷಾಹಿ ವ್ಯವಸ್ಥೆಯಲ್ಲಿ ಸ್ಯಾಂಕೆ ನಮ್ಮ ಗಮನಸೆಳೆಯುವುದು ಒಬ್ಬ ಜನಪರ ಆಡಳಿತಗಾರನಾಗಿ. ಪರಂಪರಾನುಗತ ಕೆರೆ ನೀರಾವರಿ ಚೌಕಟ್ಟನ್ನು ಗ್ರಹಿಸಿ, ವಸ್ತುನಿಷ್ಠ ವರದಿ ನೀಡಿದ್ದು ಮಾತ್ರವಲ್ಲದೆ, ಭವಿಷ್ಯದ ಯೋಜನೆಗಳಿಗೆ ಅಡಿಪಾಯ ರೂಪಿಸಿದ ಕನಸುಗಾರ ಮೇಜರ್ ಸ್ಯಾಂಕೆ. ನೀರಾವರಿ ಕ್ಷೇತ್ರದಲ್ಲಿ ಮಾಡಿಸಿದ ಹಲವು ದಿಟ್ಟ ಹೆಜ್ಜೆಗಳನ್ನು ಗುರುತಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

೧೮೩೧–೧೮೮೧ ರವರೆಗಿನ (ಮೈಸೂರಿನಲ್ಲಿ) ಬ್ರಿಟಿಷ್ ನೇರ ಆಳ್ವಿಕೆ ಸಂಸ್ಥಾನದ ಇತಿಹಾಸದಲ್ಲಿ ಪ್ರಮುಖ ಘಟ್ಟ. ಮೈಸೂರು ಸಂಸ್ಥಾನಕ್ಕೆ ಕಮೀಷನರುಗಳನ್ನು ನೇಮಕ ಮಾಡುವ ಮೂಲಕ ನೇರ ಆಳ್ವಿಕೆ ನಡೆಸಿತು. ಈ ಅವಧಿಯಲ್ಲಿ ಅನುಭವಿ ದಕ್ಷ, ಹಾಗೂ ಉದಾರವಾದಿ ಕಮೀಷನರುಗಳ ಸೇವೆ ಸಂಸ್ಥಾನದ ಇತಿಹಾಸದಲ್ಲಿ ಗಮನಸೆಳೆಯಿತು. ಮೈಸೂರು ಸಂಸ್ಥಾನದಲ್ಲಿ ಕಮೀಷನರುಗಳ ಆಡಳಿತ ವ್ಯವಸ್ಥೆಯು ಪ್ರಿನಲ್ ಸಂಘಟನೆಯ ಮೂಲಕ ಆಡಳಿತಾತ್ಮಕ ಚೌಕಟ್ಟನ್ನು ಆಧುನೀಕರಣಗೊಳಿಸಿದರು. ಕೇಂದ್ರಿಕೃತ ಸರ್ಕಾರ ಕಂದಾಯ ಪರಿಷ್ಕರಣೆ, ಸಾರಿಗೆ ಸಂಪರ್ಕ ಕಾನೂನು ವ್ಯವಸ್ಥೆ ಇಲಾಖೆಗಳ ವಿಕಸನ ಮುಂತಾದ ಸ್ವಾಗತಾರ್ಹ ಬೆಳವಣಿಗೆಗಳು ಕಂಡು ಬಂದವು. ಇದರಿಂದಾಗಿ ರಾಜ್ಯದಲ್ಲಿ ಒಂದು ಬದಲಾವಣೆಗೆ ಬೇಕಾದ ನೆಲೆಗಟ್ಟಿನ ನಿರ್ಮಾಣ ಸಾಧ್ಯವಾಯಿತೆನ್ನಬಹುದು. ಆಧುನಿಕತೆಯ ವಲಯಗಳಲ್ಲಿ ದಾಪುಗಾಲು ಹಾಕಿತಾದರೂ ನೀರಾವರಿಯಂತಹ ಕ್ಷೇತ್ರ ನಿರೀಕ್ಷಿತ ಮಟ್ಟದಲ್ಲಿ ಗಮನ ಸೆಳೆಯಲಿಲ್ಲ.

ಮಾರ್ಚ್ ೨೨.೧೮೬೬ರಲ್ಲಿ ದೇಶದಾದ್ಯಂತ ಆವರಿಸಿದ ಭೀಕರ ಬರಗಾಲದ ಹಿನ್ನೆಲೆಯಲ್ಲಿ ಕೇಂದ್ರದಿಂದ ಬಂದ ಒಂದು ಪತ್ರ ನೀರಾವರಿ ಕುರಿತಂತೆ ಅನುಸರಿಸಬೇಕಾದ ನೀತಿ ನಿರೂಪಣೆಗೆ ಮಾರ್ಗಸೂಚಿ ರೂಪದಲ್ಲಿದ್ದಿತು. ಇದರಂತೆ ಕಾಮಗಾರಿ ಬರ ಅಥವಾ ಕ್ಷಾಮ ಪರಿಸ್ಥಿತಿ ತಡೆಯುವ ಅಥವಾ ಪರಿಣಾಮಕಾರಿಯಾಗಿ ಶಮನಗೊಳಿಸುವುದೂ ಅಂತಹ ಕಾಮಗಾರಿಗಳಿಗೆ ಪ್ರಥಮ ಆಧ್ಯತೆ ಹಾಗೂ ಪ್ರತಿಫಲದಾಯಕ (Remunerative) ಗಳಿಗೆ ಎರಡನೆ ಆಧ್ಯತೆ ನೀಡಲು ಸೂಚಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಆರಂಭಗೊಂಡ ಪತ್ರವ್ಯವಹಾರ ಸಂಸ್ಥಾನದ ಕೆರೆ ಪದ್ಧತಿ ವ್ಯಾಪ್ತಿ ಆಗಾಧತೆ ಮತ್ತು ಪರಂಪರಾನುಗತವಾಗಿ ಬಳಕೆಯಲ್ಲಿದ್ದ ಸ್ಥಳಿಯ ಕೌಶಲ್ಯಗಳು ಬೆಳಕಿಗೆ ಬರಲು ಸಹಾಯಕವಾಯಿತು.

ಇಲ್ಲಿನ ನೀರಾವರಿ ಕಾಮಗಾರಿಗಳಲ್ಲಿ ಕೆರೆಗಳ ನಿರ್ಮಾಣ ಉಪಯುಕ್ತ ಮತ್ತು ವಿಶ್ವಾಸಾರ್ಹವಾದ, ಪ್ರಮಾಣಬದ್ಧ ಅಂಶಗಳಿಂದ ಕೂಡಿದ್ದು, ಅದರಲ್ಲೂ ಕೋಡಿಗಳು, ಕೆಲವೊಮ್ಮೆ ಅಗತ್ಯಕ್ಕಿಂತ ದೊಡ್ಡದಾಗಿ ವೈಜ್ಞಾನಿಕ ಸಂರಚನೆಗೆ ಒಪ್ಪಲಾಗದಿದ್ದರೂ ಬಹುತೇಕ ಬಹುಕಾಲ ಬಾಳಿಕೆ ಬರುವ ಹಾಗೂ ಕಾರ್ಯಕ್ಷಮತೆಯ ಅಂಶಗಳನ್ನು ಹೊಂದಿದ್ದವು ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೆ ಕೆರೆ ಪದ್ಧತಿಯಲ್ಲಿನ ಸಮಸ್ಯೆಗಳನ್ನು ಸಹ ತಮ್ಮ ಇಂಜಿನಿಯರಿಂಗ್ ಕೌಶಲ್ಯದ ಹಿನ್ನೆಲೆಯಲ್ಲಿ ಚರ್ಚಿಸುತ್ತಾ ಸಂಸ್ಥಾನದಲ್ಲಿದ್ದಂತಹ ನೀರಾವರಿ ಚೌಕಟ್ಟಿನ ವಸ್ತುಸ್ಥಿತಿ ಕುರಿತಂತೆ "ಈ ನಿಟ್ಟಿನಲ್ಲಿ ಆಗಿದ್ದಂತಹ ಪುರೋಭಿವೃದ್ಧಿ ಚಟುವಟಿಕೆಗಳು ಸಮಾದಾನಕರವಾಗಿದ್ದವು. ಇವುಗಳಲ್ಲಿ ವ್ಯಯಕ್ತಿಕವಾಗಿ ವ್ಯಕ್ತಿಗಳಿಂದ ಆದಂತಹ ದುರಸ್ತಿಗಳು ಉತ್ಸಾಹಭರಿತ ಹಗೂ ಪರಿಣಾಮಕಾರಿಯಾಗಿದ್ದವು. ಆದರೆ ವೈಜ್ಞಾನಿಕ (ತಾಂತ್ರಿಕವಾಗಿ) ಒಂದು ಸಾಮಾನ್ಯ, ಸ್ಪಷ್ಟವಾದ ಕ್ರಿಯಾ ಯೋಜನೆ ಅಗತ್ಯವಾಗಿದೆ" ಎಂದು ಪ್ರತಿಪಾದಿಸುತ್ತಾರೆ. ಕೆರೆ – ಕಾಲುವೆಗಳು ಒಡೆದಾಗ ಅತ್ಯಂತ ಹುರುಪಿನಿಂದ

*

ಕೈಗೆತ್ತಿಕೊಳ್ಳಲಾಗಿದೆ. ಆದರೆ ಈ ಬಗೆಯ ಕಾಮಗಾರಿಗಳಲ್ಲಿ ಸಾಮಾನ್ಯ ತಾಂತ್ರಿಕ ಕೌಶಲ್ಯಗಳು ಮತ್ತು ಕಾಮಗಾರಿಗಳ ವೈಫಲ್ಯಕ್ಕೆ ಬದಲಾಗುವ ಕಾರಣ – ಸನ್ನಿವೇಷಗಳ ಹಿನ್ನೆಲೆಯಲ್ಲಿ ಸ್ಫೂತಿದಾಯಕ ಸ್ಪಂದನೆ ಅಗತ್ಯವಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ.

ಸಂಸ್ಥಾನದಾದ್ಯಂತ ಇರುವ ಕೆರೆಗಳ ದುರಸ್ತಿ ಮತ್ತು ನಿರ್ವಹಣೆಗೆ ಅಂದಾಜು ವೆಚ್ಚ ಕುರಿತಂತೆ ಚರ್ಚಿಸುತ್ತಾ ೯೦.೦೦.೦೦೦ರೂಗಳು ಆಗಬಹುದೆಂದು (ದೊಡ್ಡಕೆರೆಗಳಿಗೆ ರೂ ೩೦೦೦ ರಂತೆ ಸಣ್ಣ ಕೆರೆಗಳಿಗೆ ೧೫೦೦ ರೂ ರಂತೆ) ಬೌರಿಂಗ್ ಆಡಳಿತ ವರದಿಯಲ್ಲಿ ವಾರ್ಷಿಕ ಅನುದಾನ ೪.೦೦.೦೦೦ರೂಗಳು ಶಿಫಾರಸು ಆಗಿದ್ದು, ಅದರಂತೆ ಕಾರ್ಯಕೈಗೊಂಡಲ್ಲಿ ಸಂಸ್ಥಾನದಲ್ಲಿನ ಎಲ್ಲಾ ಕೆರೆಗಳ ಪೂರ್ಣ ದುರಸ್ತಿಗೆ ೩೩ ವರ್ಷಗಳು ಬೇಕಾಗಬಹುದು. ಒಂದು ವೇಳೆ ರೈತರನ್ನು ೧/೩ ಭಾಗದ ವೆಚ್ಚ ಮತ್ತು ಹೊಣೆಗಾರಿಕೆ ನಿರ್ವಹಿಸಲು ಮನವಲಿಸಿದಲ್ಲಿ ೧೫ ವರ್ಷಗಳಲ್ಲಿ ಪೂರ್ಣಗೊಳಿಸಬಹುದು ಎಂಬ ಲೆಕ್ಕಚಾರ ಮುಂದಿಡುತ್ತಾರೆ. ಈಗ ಕಂಡುಬರುತ್ತಿರುವ ಕೆರೆನೀರಾವರಿ ವ್ಯವಸ್ಥೆಯನ್ನು ಒಂದು ನಿರ್ದಿಷ್ಟ ಗುಣಮಟ್ಟಕ್ಕೆ ತರುವ ಪ್ರಕ್ರಿಯ ಅಗಾದವಾದುದು, ಹೀಗಾಗಿ ಕಾಮಗಾರಿಗಳ ದುರಸ್ತಿ ಮುತ್ತು ನಿರ್ವಹಣೆಗಾಗಿ ಇಂಜಿನಿಯರಿಂಗ್ ಕೌಶಲ್ಯ ಗುರುತಿಸುವಿಕೆ ಜೊತೆಗೆ ಶಾಸನ ಬದ್ಧ ನಿರ್ಧಾರಗಳನ್ನು ಕೈಗೊಳ್ಳುವುದು ಅತ್ಯವಶ್ಯಕವಾಗಿದೆ. ಎಂದು ಭಾವಿಸುತ್ತಾರೆ. ಇದೇ ಸಂದರ್ಭದಲ್ಲಿ ರೈತಾಪಿ ಜನರು ಕೆರೆಕಟ್ಟೆ ಕಾಲುವೆಗಳಿಗೆ ಮಾರಕವಾಗಬಹುದಾದ ಚಟುವಟಿಕೆಗಳಲ್ಲಿ ತೊಡಗಿ ಕೆರೆ ಚೌಕಟ್ಟಿನ ನಿರ್ಲಕ್ಷ್ಯಕ್ಕೆ ಈಡು ಮಾಡಿರುವುದನ್ನು ಉಲ್ಲೇಖಿಸುತ್ತಾರೆ.

ಪ್ರಸ್ತುತ ಸಂಸ್ಥಾನದಲ್ಲಿನ ಕೆರೆ ನೀರಾವರಿ ವ್ಯವಸ್ಥೆಯನ್ನು ವಿಶ್ಲೇಸಿಸುತ್ತಾ "ಸಾಮಾನ್ಯ ಕ್ರಿಯಾ ಯೋಜನೆ"ಯೊಂದನ್ನು ಪ್ರತಿಪಾದಿಸುತ್ತಾರೆ.

ಕೆರೆ ಚೌಕಟ್ಟಿನಲ್ಲಿನ ಒಂದು ಸಾಮಾನ್ಯ ಹರಿವು ಮೇಲಣ ಭಾಗಗಳಲ್ಲಿ ಜನರು ಸಣ್ಣ ಕೆರೆಗಳನ್ನು ನಿರ್ಮಿಸಿದ್ದಾರೆ (A, A, A...) ಇಲ್ಲಿನ ಕೆರೆಗಳಿಂದ ಕೋಡಿ ಹೋದ ನೀರನ್ನು ಸಂಗ್ರಹಿಸಲು ಕೆಳಗಿನ ಪ್ರದೇಶಗಳಲ್ಲಿ ಸ್ವಲ್ಪ ದೊಡ್ಡಕೆರೆಗಳನ್ನು ನಿರ್ಮಿಸಿದ್ದಾರೆ. ಹಾಗೆ ಮುಂದೆ ಹರಿದಂತೆಲ್ಲಾ ದೊಡ್ಡ ದೊಡ್ಡ ಕೆರೆಗಳನ್ನು ನಿರ್ಮಿಸಿದ್ದಾರೆ. ಸಣ್ಣಕೆರೆಗಳು (A, A, A...) ಹಾಗೂ ಸ್ವಲ್ಪ ದೊಡ್ಡಕೆರೆಗಳು (B, B, B...) ಅಷ್ಟನೂ ಮಹತ್ವಹೊಂದಿಲ್ಲ. ಈ ಕೆರೆಗಳಿಗೆ ಹೊಂದಿಕೊಂಡು ಇರುವಂತ ಹಳ್ಳಿ–ಜನ ಸಮುದಾಯಗಳ ಸಹ ಸಣ್ಣ ಪ್ರಮಾಣದವೇ ಆಗಿದ್ದವು. ಅತಿ ಹೆಚ್ಚಾದ ನೀರು ಇವುಗಳು ಒಡೆದು ಹೋಗಿ ಸರಣಿಯ ಕೊನೆಯ ಕೆರೆಗಳಿಗೆ ತುಂಬುತ್ತದೆ. ಇವು ಆದಾಯದ




ಹಿನ್ನೆಲೆಯಲ್ಲಿ ಹಾಗೂ ಅವು ಹೊಂದಿರುವ ದೊಡ್ಡ ಗ್ರಾಮ ಮತ್ತು ಜನ ಸಮುದಾಯ ಗಳಿಂದಾಗಿ ಮಹತ್ವ ಪಡೆದಿವೆ. ಆದರೆ ಮೇಲಿನ ಸರಣಿಯು A, A, A. ಮತ್ತು B, B, B. ಕೆರೆಗಳು ದುಸ್ತಿತಿಂಯಲ್ಲಿ ಉಳಿಯುತ್ತವೆ.

ಈ ಹಿನ್ನೆಲೆಯಲ್ಲಿ ವ್ಯವಸ್ಥಿತ ನಿರ್ವಹಣೆಗೆ ಕ್ರಮವಾಗಿದೆ. C, C, C. ಕೆರೆಗಳ ಸುರಕ್ಷತೆ C, C, C. ಕೆರೆಗಳನ್ನು ಅವಲಂಬಿಸಿವೆ. ಹೀಗಾಗಿ ಅವುಗಳ ದುರಸ್ತಿ ಮತ್ತು ನಿರ್ವಹಣೆಗೆ ಆದ್ಯತೆ ನೀಡಬೇಕಾದ ಅಗತ್ಯತೆಯನ್ನು ಮನಗಾಣುತ್ತಾರೆ. ಅಷ್ಟೇ ಅಲ್ಲ, ಇಲ್ಲಿನ ಆಗಾದ ಸಂಖ್ಯೆಯ ಕೆರೆಗಳ ಪ್ರಮಾಣಕ್ಕೆ ಅನುಗುಣವಾಗಿ ಇಲಾಖಾ ಚೌಕಟ್ಟು ಸಹ ಸಾಕಷ್ಟಿದೆ ಎಂದು ಅಭಿಪ್ರಾಯ ಪಡುತ್ತಾರೆ.

ತಮ್ಮ ವರದಿಯಲ್ಲಿ ಕಾಲುವೆಗಳ ಅಣೆಕಟ್ಟುಗಳ ಮತ್ತು ಇತರೆ ಕಾಮಗಾರಿಗಳ ಬಗ್ಗೆ ಪ್ರಸ್ತಾಪಿಸುತ್ತಾ ಹಲವು ನದಿಗಳ ಗರಿಷ್ಟ ಮತ್ತು ಕನಿಷ್ಟ ಹರಿವುಗಳನ್ನು ಹಾಗೂ ಅವುಗಳ ಪೂರ್ಣ ಪ್ರಮಾಣದ ಬಳಕೆಯ ಕುರಿತಂತೆ ಗಮನ ಸೆಳೆಯುತ್ತಾರೆ. ಮೊಜಿನ ತಮ್ಮ ನಿರೀಕ್ಷೆಗಿಂತೆ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯ ಕುರಿತಂತೆ ಹೆಚ್ಚಿನ ಪ್ರಮಾಣದಲ್ಲಿ ನದಿ ಕಾಮಗಾರಿಗಳು ಕಂಡುಬಂದಿವೆ. ಕಾವೇರಿ, ಲಕ್ಷ್ಮಣ ತೀರ್ಥ ಯಗಚಿ ಮತ್ತು ಹೇಮಾವತಿಗಳಲ್ಲಿದೆ. ಇನ್ನು ಅನೇಕ ಹಳ್ಳ–ಕೊಳ್ಳಗಳಿಗೂ ಅಣೆಕಟ್ಟುಗಳನ್ನು ನಿರ್ಮಿಸಿ ನೀರಾವರಿಗಾಗಿ ಬಳಸಿಕೊಡಿರುವುದನ್ನು ಉಲ್ಲೇಖಿಸುತ್ತಾರೆ.

ಸಂಸ್ಥಾನದಲ್ಲಿ ೧೭.೮೪೫ ನೀರಾವರಿ ಕೆರೆಗಳಿದ್ದು ೧೨೦೩ ಮೈಲಿ ಉದ್ದದ ನಾಲೆಗಳು ದಿನೇ ದಿನೇ ಅವನತಿಯ ಹಾದಿ ಹಿಡಿದಿವೆ ಎಂದು ಗ್ರಹಿಸಿದ ಮೇಜರ್ ಸಾಂಕ್ಯೆ ಅವುಗಳ ದುರಸ್ತಿ ಮತ್ತು ನಿರ್ವಹಣೆಗೆ ಕಾಳಜಿ ತೋರಿದ ಪರಿಗಮನಾರ್ಹ! ಯಾವುದೇ ಸರ್ಕಾರಿ ಯಂತ್ರವಾಗಲಿ ಅಥವಾ ಇದಕ್ಕಾಗಿ ಯಾರೇ ವೆಚ್ಚಮಾಡಿದ ಮೊತ್ತ, ಹೇಗೆ ಮಾಡಲಿ, ಅದು ಅತ್ಯುತಮ ವಿನಿಯೋಜನೆ ಸರಿ ಎಂದ ಸ್ಯಾಂಕೆ ಅದು ಇಲ್ಲಿನ ಜನರ ಬದುಕು ಬಹುತೇಕ ಇಂತಹ ಕಾಮಗಾರಿಗಳನ್ನು ಅವಲಂಬಿಸಿವೆ ಎಂದು ಅಭಿಪ್ರಾಯ ಪಡುತ್ತಾರೆ. ಈ ಕಾರ್ಯದಲ್ಲಿ ಜನಸಮುದಾಯಗಳನ್ನು ಉತ್ಸಾಹಶೀಲರಾಗಿ ನೇರವಾಗಿ ಪಾಲ್ಗೊಳ್ಳುವಂತೆ ಪ್ರೇರೆಪಿಸಿದ ಹೊರತು, ಜನರೇ ತಮ್ಮ ಶ್ರಮವನ್ನ ಧಾರೆಯೆರೆಯರ ಹೊರತು, ಸರ್ಕಾರದ ಪ್ರಯತ್ನಗಳನ್ನು ನಿರೀಕ್ಷಿಸುವುದು ಒಂದು ರೀತಿಯ ಅರೆಮನಸ್ಸಿನ ಪ್ರಯತ್ನವಾದೀತು ಎಂದು

ಎಚ್ಚರಿಸುತ್ತಾ ಜನ ಸಮುದಾಯ ಪಾಲ್ಗೊಳ್ಳುವಿಕೆಗೆ ಒತ್ತು ನೀಡುತ್ತಾರೆ.

ಮೈಸೂರು ವಿಭಾಗದ ನಾಲೆಗಳಲ್ಲಿನ ನೀರಿನ ಹರಿವು ಸಾಮರ್ಥವನ್ನು ೧.೦೭.೧೦೦ ಎಕರೆಗೂ ಪ್ರತಿ ಎಕರೆಗೆ ೭½ ರೂಗಳು ಅಸೇಸ್‌ಮೆಂಟ್ ಇದ್ದರೂ ಸಹ ೧೮೦೪-೦೫ ರಲ್ಲಿ ೨.೪೦.೨೫೦ ರೂಗಳ ಆದಾಯ ಮಾತ್ರ ಆಗಿದ್ದು, ಪ್ರತಿ ವರ್ಷ ೫.೬೯.೦೦೦ರೂಗಳ ಹೆಚ್ಚುವರಿ ಆದಾಯವನ್ನು ನಾಲೆಗಳ ಪೂರ್ಣಸಾಮರ್ಥ ಬಳಸಿಕೊಂಡಲ್ಲಿ ಸಾಧ್ಯವಿದೆ. ಎಂಬ ಅಂಕಿ-ಅಂಶಗಳ ಸಹಾಯದಿಂದ ಮಂಡಿಸುತ್ತಾರೆ. ನದಿ ನಾಲಾಗಳನ್ನು ಸುಸ್ಥಿತಿಯಲ್ಲಿ ಇರಿಸಿಕೊಳ್ಳಲು ೩೦ ಲಕ್ಷರೂಗಳ ಅಂದಾಜು ವೆಚ್ಚವನ್ನು ಕೆರೆ ನೀರಾವರಿಗಾಗಿ ೯೦ ಲಕ್ಷರೂಗಳ ಒಟ್ಟು ೧.೨೦.೦೦೦ ಲಕ್ಷರೂಗಳ ಅಂದಾಜು ಸೂಚಿಸುತ್ತಾರೆ. ಈ ಕಾಮಗಾರಿಗಳನ್ನು ೧೦ ವರ್ಷಗಳ ಕಾಲಾವಧಿಯಲ್ಲಿ ಅನುಷ್ಠಾನಗೊಳಿಸುವ ಪ್ರಕ್ರಿಯೆಗೆ ವಾರ್ಷಿಕ ೧೦ ಲಕ್ಷರೂಗಳನ್ನು ಹೆಚ್ಚುವರಿ ನಿಧಿಯಿಂದ ಅಥವಾ ಸಂದರ್ಭಕ್ಕೆ ತಕ್ಕಂತೆ ಇತರೆ ಮೂಲಗಳಿಂದ ಸಾಳದೆ ರೂಪದಲ್ಲಿ ಆದರೂ ಪಡೆಯಬಹುದು ಎಂದು ಸಂಪನ್ಮೂಲ ಕ್ರೊಡೀಕರಣಕ್ಕೆ ಸೂಚಿಸುತ್ತಾರೆ.

ಕ್ಷಾಮ ಹಾಗೂ ಬರಗಾಲದ ಬವಣೆಯಿಂದ ಬಿಡುಗಡೆಗಾಗಿ ಸದ್ಯದ ನೀರಾವರಿ ಕಾಮಗಾರಿಗಳ ದುರಸ್ತಿ ಮತ್ತು ಅಭಿವೃದ್ಧಿ ಕೈಗೊಳ್ಳುವುದು, ಮಾನವೀಯ ದೃಷ್ಟಿಯಕೋನದಿಂದ ಇಲ್ಲಿ ವಿನಿಯೋಗಿಸುವುದು ಬಂಡವಾಳ ಪ್ರತಿ ಫಲದಾಯಕವೂ ಆಗಿರುತ್ತದೆ ಎಂದು ಮನವರಿಕೆ ಮಾಡಿಕೊಡುತ್ತಾರೆ.

**ಸ್ಯಾಂಕೆ ಯೋಜನೆ:** ೧೮೬೬ರಲ್ಲಿ ರಾಜ್ಯದಲ್ಲಿ ತಲೆದೋರಿದ ಕ್ಷಾಮ - ಬರಗಾಲದ ಹಿನ್ನೆಲೆಯಲ್ಲಿ ಭಾರತ ಸರ್ಕಾರ ಸಂಸ್ಥಾನದ ನೀರಾವರಿ ಕಾಮಗಾರಿಗಳ ಕುರಿತಂತೆ ವಸ್ತುನಿಷ್ಟ ಸಮೀಕ್ಷೆ ನಡೆಸಿ ವರದಿ ನೀಡಲು ಸೂಚಿಸಿತು. ಈ ವಿಸ್ತಾರವಾದ ಮೈಸೂರು ಸಂಸ್ಥಾನದಲ್ಲಿ ಹಾಲಿ ಇರುವ ಕೆರೆ-ಕಾಲುವೆಗಳ ದುರಸ್ತಿ ಪುನರ್ ಜೀವನ, ಅಭಿವೃದ್ಧಿಗೆ ಪ್ರಧಾನ ಆಧ್ಯತೆ ನೀಡಲು ಸ್ಯಾಂಕ್ಯೆ ಅಭಿಪ್ರಾಯ ಪಡುತ್ತಾರ. ಹೀಗಾಗಿ ಕೆರೆಗಳ ನಿರ್ಮಾಣ ಹಾಗೂ ದುರಸ್ತಿ ಕುರಿತಂತೆ ಸೃಷ್ಟ ಹಾಗೂ ನಿರ್ದಿಷ್ಟ ನೀತಿ ರೂಪು ಪಡೆಯಿತು. ಈ ಹಿನ್ನಲೆಯಲ್ಲಿ ಸ್ಯಾಂಕ್ಯೆ ಪ್ರತಿಪಾದಿತ "ಸರಜಿ" ಪದ್ಧತಿ ೧೮೭೧ರಲ್ಲಿ ಜಾರಿಗೊಳಿಸಲಾಯಿತು. ಇಲ್ಲಿನ ಕೆರೆಗೋಳನ್ನು ಒಂದೊಂದೇ ಕೆರೆಯನ್ನು ನಿರ್ಮಿಸಿ, ಅವು ಒಂದರ ನಂತರ ಒಂದರಂತೆ (ಕೆಳಗಿನ ಪ್ರದೇಶ) ಸರಣೆಯೊಪಾದಿಯಲ್ಲಿ, ಮೇಲಣ ಕೆರೆ, ತನ್ನ ಕೆಳಗಿನ ಕೆರೆಗೆ ಹೆಚ್ಚಾದ ನೀರು ತುಂಬಿಸುವಂತೆ ನಿರ್ಮಿಸಲಾಗಿದೆ. ಈ ಹಿನ್ನೆಲಯಲ್ಲಿ ಸ್ಯಾಂಖೆ ಪ್ರತಿಪಾದಿಸಿದ ನೀತಿಯೆಂದರೆ, ಪ್ರತಿ ಸಂರಣೆಯನ್ನು ಒಂದು ಯೋಜನೆಯಂತೆ ಪರಿಗಣಿಸಿ ನಿಖರವಾಗಿ ಗುರುತಿಸಲು ಸಮೀಕ್ಷೆ ನಡೆಸಿ, ಎಚ್ಚರಿಕೆಯಿಂದ ಕಾರ್ಯಯೋಜನೆ ರೂಪಿಸಿ ಅನುಮೋದನೆ ನೀಡಿ, ಸಮರ್ಥ ಮೇಲ್ವಿಚಾರಣೆಯಲ್ಲಿ ಅನುಷ್ಠಾನಗೊಳಿಸಿ ನಂತರ ಅವುಗಳ ನಿರ್ವಹಣೆಯನ್ನು ಸ್ಥಳಿಯ ಜನಸಮುದಾಯಗಳಿಗೆ ವಹಿಸುವುದಾಗಿದ್ದಿತು.

ಪ್ರಾಯೋಗಿಕವಾಗಿ ಮೈಸೂರು ಜಿಲ್ಲೆಯ ಸೂಳೆಕೆರೆ ಮತ್ತು ಅರೆಕೆರೆ ಉಪಸರಜಿ, ಬೆಂಗಳೂರು ಜಿಲ್ಲೆಯ ಹೆಸರುಘಟ್ಟ ಉಪಸರಣೆ ಕೋಲಾರ ಜಿಲ್ಲೆಯ ರಾಮಸಾಗರ, ಬೇತಮಂಗಲ ಉಪಸರಣೆ ಮತ್ತು ಚಿತ್ರದುರ್ಗ ಜಿಲ್ಲೆಯ ಭರಮಸಾಗರ ಉಪಸರಣೆಗಳನ್ನು ಜಾರಿಗೊಳಿಸಲಾಯಿತು. ರಾಜ್ಯದಲ್ಲಿ ತಲೆದೋರಿದ ಕ್ಷಾಮ ಬರಗಾಲ ಪರರಿಸ್ಥಿತಿ ಹಾಗೂ ಹಣಕಾಸಿನ ತೊಡಕುಗಳ ಪರಿಣಾಮವಾಗಿ ಮೇಲ್ಕಂಡ ಸರಣೆ ಪದ್ಧತಿ ಜಾರಿಗೊಳ್ಳಲೇ ಇಲ್ಲ.

## ಗ್ರಂಥಋಣ


೧. Records Connected with the taluk system is mysore. Karnataka State Archives.
೨. Administrative reports of mysore state 1862-63 to 1873-74.
೩. Wilks, Major report 5-12-1804 pages 160.
೪. Captain stokes, supdt of Nagar division No. 294, 19-5-1838.
೫. Mask cubbon's letters to government of India No 14 of 2-3-1855.
೬ Major puckles memo of 8-4-1868.
೭. Col. Stratchey letter No 4991 of 18-12-1863.
೮. Letter from Commisssioner No 6889 27-05-1868.
೯. Col. Sankey letter No 67-1 4-03-1871.
೧೦. Letter from Major. Sankey Chief Engineer No 661/63 4-2-1868.



# ರಾಜನೀತಿ ಕುಶಲ ಮತ್ತು ಸಮರ್ಥ ಬ್ಯಾಂಕರ ಬೆನೆಗಲ್ ರಾಮರಾವ್

ಡಾ. ಸುಷಮಾ ಆರೂರ್*

**ಕ**ರ್ನಾಟಕದ ಮಂಗಳೂರಿನಲ್ಲಿ ಹುಟ್ಟಿ, ಅಲ್ಲಿಯೇ ಪ್ರಾಥಮಿಕ ಹಾಗೂ ಹಾಯಸ್ಕೂಲು ವಿದ್ಯಾಭ್ಯಾಸವನ್ನು ಮುಗಿಸಿ ಮುಂದೆ ಮದ್ರಾಸ ವಿಶ್ವವಿದ್ಯಾಲಯದಿಂದ ಪದವೀಧರರಾಗಿ ಇಂಗ್ಲೆಂಡಿನಲ್ಲಿ ಆಯ ಸಿ ಯೆಸ್ಸನ್ನು ಮಾಡಿದ ಶ್ರೇಯ ಬೆನೆಗಲ್ ರಾಮರಾವ ಅವರದು. ತಮ್ಮ ಕಾರ್ಯಕ್ಷೇತ್ರವನ್ನು ಬರೀ ಕರ್ನಾಟಕಕ್ಕೆ ಮಾತ್ರ ಸಿಮೀತಗೊಳಿಸದೇ ದೇಶದ ಆಡಳಿತ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮಾಡಿದ ಸೇವೆಯನ್ನು ಅಷ್ಟೇ ಅಲ್ಲ ಅಂತರಾಷ್ಟ್ರೀಯ ಕ್ಷೇತ್ರದಲ್ಲಿ ಕೂಡ ಅವರು ಭಾರತದ ಜಾಯಭಾರಿಯಾಗಿ ಸೇವೆ ಸಲ್ಲಿಸಿದ್ದದ್ದನ್ನು ನಾವು ಇಲ್ಲಿ ಸ್ಮರಿಸಬೇಕು. ಅವರ ಪ್ರತಿಭೆಯನ್ನು ಗುರುತಿಸಿ ಭಾರತ ಸರಕಾರ ರಿಸರ್ವ ಬ್ಯಾಂಕಿನ ನಾಲ್ಕನೆಯ ಗವರನರ್ ಎಂದು ೧೯೪೯ ರಿಂದ ೧೯೫೭ರ ದೀರ್ಘ ಕಾಲಾವಧಿಯವರೆಗೆ ನೇಮಿಸಿತು. ಆರ್.ಬಿ.ಆಯ.ದ ಇತಿಹಾಸದಲ್ಲಿ ಇಷ್ಟು ವರ್ಷ ಸೇವೆ ಸಲ್ಲಿಸಿದ್ದುದು ಇವರೊಬ್ಬರೇ.

ಬೆನೆಗಲ್ ರಾಘವೇಂದ್ರರಾವ್ ಮತ್ತು ರಾಧಾಬಾಯಿ ಯವರ ಮೂರನೆಯ ಮಗನಾದ ರಾಮರಾಯರು ಜುಲಾಯಿ ೧, ೧೮೮೯ರಲ್ಲಿ ಮಂಗಳೂರಿನಲ್ಲಿ ಹುಟ್ಟಿದರು. ಮಂಗಳೂರಿ ನಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ, ರಾಮರಾಯರು ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ಅತ್ಯುತ್ತಮ ಗುಣಗಳನ್ನು ಪಡೆದು ಪಧವೀಧರರಾದರು. ಶಿಕ್ಷಣದ ವಾತಾವರಣ ಮನೆಯಲ್ಲಿ ಇದ್ದುದರಿಂದ, ತಮ್ಮ ಇಬ್ಬರು ಅಣ್ಣಂದಿರಂತೆ ಇವರು ಕೂಡ ಕೇಂಬ್ರಿಜಿನ ಕಿಂಗ್ಸ್ ಕಾಲೇಜಿನಲ್ಲಿ ಉಚ್ಚ ಶಿಕ್ಷಣಕ್ಕೋಸ್ಕರ ವಿದ್ಯಾರ್ಥಿವೇತನ ಪಡೆದು ಇಂಗ್ಲೆಂಡಿಗೆ ಹೊರಟು ಹೋದರು. ಮುಂದೆ ಆಯ್.ಸಿ.ಎಸ್ಸ್. ಕೂಡ ಯಶಸ್ವಿಯಾಗಿ ಮಾಡಿದರು.

ಭಾರತಕ್ಕೆ ಮರಳಿದ ಕೂಡಲೇ, ಆಂಧ್ರಪದೇಶದ ಮಚಲಿಪಟಣಮ್ ಎಂಬಲ್ಲಿ ಜಿಲ್ಲಾಧಿಕಾರಿಗಳೆಂದು ನಂತರ ಮದ್ರಾಸ ಸರಕಾರದ ಹಣಕಾಸು ವಿಭಾಗದಲ್ಲಿ ಉಪ ಕಾರ್ಯದರ್ಶಿಗಳಾಗಿ ಅವರ ನೇಮಕಾತಿ ಆಯಿತು. ಮುಂದೆ, ಕೇಂದ್ರ ಸರಕಾರದ ಸಚಿವ ಸಂಪುಟದಲ್ಲಿ ಅವರ ಪದೋನ್ನತಿ ಆಯಿತು.

**ಸೈಮನ್ ಕಮಿಶನಗೆ ಆರ್ಥಿಕ ಸಲಹೆಗಾರರಾಗಿ**

ಭಾರತ ಸರಕಾರದ ೧೯೧೯ರ ಕಾಯದೆಯ ಪ್ರಕಾರ ದ್ವಿಪ್ರಭುತ್ವವನ್ನು ಆಚರಣೆಯಲ್ಲಿ ತರುವದು ಮತ್ತು ೧೦ ವರ್ಷಗಳ ಅವಧಿಯಲ್ಲಿ ಆಡಳಿತದಲ್ಲಿ ಮಾಡಿದ ಬೆಳವಣಿಗೆ ಯನ್ನು ಪರಿಶೀಲಿಸಲು ಹಾಗೂ ಸುಧಾರಣೆಗಳನ್ನು ತರಲು ೧೯೨೮ರಲ್ಲಿ, ೭ ಸದಸ್ಯರನ್ನು ಒಳಗೊಂಡ ಸೈಮನ್ ಕಮಿಶನನ್ನು ಭಾರತಕ್ಕೆ ಕಳುಹಿಸಲಾಯಿತು.

ಆಗ ದೇಶದೊಳಗಿನ ರಾಜಕೀಯ ಪರಿಸ್ಥಿತಿ ಬಹಳ ನಾಜೂಕಾಗಿತ್ತು. ಟಿಳಕ ಮತ್ತು ಬೆಸೆಂಟರ ಬ್ರಿಟಿಶ ಸಾಮ್ರಾಜ್ಯದ ಚೌಕಟ್ಟಿನಲ್ಲಿಯ ಸ್ವರಾಜ್ಯದ ಬೇಡಿಕೆ ಹಾಗೂ ಗಾಂಧೀಜಿಯವರ ನೇತೃತ್ವದಲ್ಲಿ ರಾಜಕೀಯ ಆಂದೋಲನ ಹೆಚ್ಚುತ್ತ ಹೋಗಿ, ಈಗ ಪೂರ್ಣ ಸ್ವರಾಜ್ಯಕ್ಕೆ ದೇಶವು ಹಾತೊರೆಯುವ ಕ್ಷಣ ಬಂದಿತ್ತು. ಕಾಂಗ್ರೆಸ್ಸು ಮುಖಂಡರು ೧೯೩೦ ಜನೆವರಿ ೨೬ರಂದು 'ಸ್ವಾತಂತ್ರ್ಯ ದಿನ'ವೆಂದು ಘೋಷಿಸಿದರು.

ರಾಮರಾವರ ಹಣಕಾಸಿನ ಕ್ಷೇತ್ರದಲ್ಲಿಯ ನೈಪುಣ್ಯವನ್ನು ಅರಿತ ಆಂಗ್ಲ ಸರಕಾರವು ಇಂಗ್ಲಂಡಿನಿಂದ ಬಂದ ಸೈಮನ್ ಕಮಿಶನಗೆ ಅವರನ್ನು ಆರ್ಥಿಕ ಸಲಹೆಗಾರರಾಗಿ ನೇಮಕಾತಿ ಮಾಡಿತು. ರಾಮರಾವರು ಈ ಕಮಿಶನ್ನಿನ ಹಣಕಾಸಿನ ಸಲಹಾಗಾರರಾಗಿದ್ದರಿಂದ ಭಾರತದಾದ್ಯಂತ ಅವರೊಡನೆ ಸಂಚಾರ ಮಾಡಿದರು. ಸ್ವತಃ ಭಾರತೀಯರಾಗಿದ್ದರಿಂದ ತಮ್ಮ ರಾಷ್ಟ್ರೀಯ ಚಳುವಳಿಗೆ ಅವರ ಸಹಾನುಭೂತಿಯಿದ್ದರೂ ಸರಕಾರದ ಕರ್ತವ್ಯನಿಷ್ಠರಾಗಿದ್ದರವರು. ಹೋದ ಕಡೆಗೆಲ್ಲ ಇವರನ್ನು ಕಪ್ಪು ಬಾವುಟ ತೋರಿಸಿ, 'ಸೈಮನ್ ಹೊರಟು ಹೋಗಿ' ಎಂಬ ಘೋಷಣೆ ತೀವ್ರವಾಗಿತ್ತು. ಇವರನ್ನು ರಕ್ಷಿಸಲು ಲಾಠಿಯಿಂದ ಹೊಡೆದಾಟವಾಗಿ ಅನೇಕರು ಗಾಯಗೊಂಡರು

* # ೩೦೩, ಹೆರಿಟೇಜ್ ರೋಯಾಲ್ ಲಾ ಓಶಿಯಾನಾ, ಫೇಜ್ ೨, ಇಂಟರನ್ಯಾಶನಲ್ ಸೆಂಟರ್ ಪಕ್ಕ, ಡೊನಾಪಾವ್ಲಾ, ಗೋವಾ-೪೦೦೦೦೩.

ಮತ್ತು ಸತ್ತರು. ಅತಿಯಾಗಿ ಗಾಯಗೊಂಡ ಲಾಲಾ ಲಾಜಪತರಾಯರು ಮೃತ್ಯುವಶರಾದರು. ರಾಮರಾವರದು ಲಾಜಪತ ರಾಯರ ಜೊತೆಗೆ ನಿಕಟವಾದ ಸಂಬಂಧವಿತ್ತು. ಅವರ ನಿಧನದಿಂದ ರಾಮರಾವರ ಪರಿವಾರವು ದುಃಖತಪ್ತ ವಾಯಿತು. ಧನವಂತಿಯವರು ತಮ್ಮ ವೃತ್ತಾಂತದಲ್ಲಿ ಈ ಪರಿಸ್ಥಿತಿಯಲ್ಲಿಯ ತಮ್ಮ ಭೂಮಿಕೆಯನ್ನು ಹೇಳಿಕೊಳ್ಳುತ್ತಾರೆ. ತಮ್ಮ ಮಕ್ಕಳನ್ನು ತಾಯಿಯ ಮನೆಗೆ ಕಳುಹಿಸಿ ಅವರೂ ಕೂಡ ಪತಿಯ ಜೊತೆಗೆ ಪ್ರವಾಸ ಕೈಗೊಂಡಿದ್ದರು. ಹೋದಲ್ಲೆಲ್ಲ ತಮ್ಮ ಸರಕಾರಿ ಹುದ್ದೆಯ ಕಾರ್ಯ ಕಲಾಪ ಗಳನ್ನು ನಿಷ್ಠೆಯಿಂದಲೇ ಮಾಡುತ್ತಿದ್ದರೂ, ತಮ್ಮ ಸಹಾನು ಭೂತಿ ದೇಶಬಂಧುಗಳೊಂದಿಗೆ ಇತ್ತು ಮತ್ತು ತಮ್ಮ ವಿರಾಮದ ವೇಳೆಯಲ್ಲಿ ರಾಷ್ಟ್ರವಾದಿಗಳೊಂದಿಗೆ ಸಂಪರ್ಕದಲ್ಲಿ ಇದ್ದುದನ್ನು ಸ್ಪಷ್ಟೀಕರಿಸುತ್ತಾರೆ. ಸರಕಾರಿ ನೌಕರಿಯಲ್ಲಿ ಇದ್ದದ್ದರಿಂದ, ತನ್ನ ಪತಿಗೆ ಬಹಿರಂಗವಾಗಿ ತಮ್ಮ ಮತಗಳನ್ನು ಹೇಳಲು ಆಗುತ್ತಿರಲಿಲ್ಲ. ಮನಸ್ಸಿಗೆ ಒಪ್ಪದ ಆ ಕಾಲವು ಬಹಳ ಬಿಕ್ಕಟ್ಟಿನದಾಗಿತ್ತು ಎಂದು ಅವರು ಬರೆಯುತ್ತಾರೆ. ರಾಮರಾವರು ಸೈಮನ್ ಕಮಿಶನ್ ಜೊತೆಗೆ ಇಂಗ್ಲಂಡಿಗೆ ಹೋಗಿ ತಮ್ಮ ವರದಿಯನ್ನು ಒಪ್ಪಿಸಿದರು.

### ಅಂತರಾಷ್ಟ್ರೀಯ ಕ್ಷೇತ್ರದಲ್ಲಿ

ಇದರ ನಂತರ ಲಂಡನ್ನಿನಲ್ಲಿ ೧೯೩೦ರಲ್ಲಿ ಜರುಗುವ ಮೊದಲ ದುಂಡುಮೇಜಿನ ಪರಿಷತ್ತಿಗೆ ಕಾರ್ಯದರ್ಶಿಗಳಾಗಿ ಅವರ ನೇಮಕಾತಿ ಆಯಿತು ಮತ್ತು ಮುಂದಿನ ಎಲ್ಲ ಪರಿಷತ್ತಿನಲ್ಲೂ ಅವರು ಭಾಗವಹಿಸಿದರು. ೧೯೩೪ರಲ್ಲಿ ಇಂಗ್ಲೆಂಡಿನಲ್ಲಿ ಭಾರತದ ಉಪ ರಾಯಭಾರಿಯಾಗಿ ಅವರು ಮೂರು ವರ್ಷ ಸೇವೆ ಸಲ್ಲಿಸಿದರು. ೧೯೩೮ರಲ್ಲಿ ಅವರು ದಕ್ಷಿಣ ಆಫ್ರಿಕಾದಲ್ಲಿ ಭಾರತದ ರಾಯಭಾರಿಯಾಗಿ ಕೂಡ ಕಾರ್ಯ ನಿರ್ವಹಿಸಿದರು.

### ಭಾರತೀಯ ರಿಸರ್ವ ಬ್ಯಾಂಕಿನ ಗವರ್ನರರಾಗಿ ೧೯೪೯–೧೯೫೭

೧೯ನೆಯ ಶತಮಾನದಲ್ಲಿ ಐರೋಪ್ಯ ಮಾದರಿಯಲ್ಲಿ ಬ್ಯಾಂಕ ವ್ಯವಹಾರಗಳು ಭಾರತದಲ್ಲಿ ಪ್ರಾರಂಭವಾದವು ಎನ್ನಬಹುದು. ೧೯೩೫ರಲ್ಲಿ ಶೇರುದಾರರ ಸಂಸ್ಥೆಯಾಗಿ ಭಾರತದ ರಿಸರ್ವ ಬ್ಯಾಂಕಿನ ಸ್ಥಾಪನೆಯಾಯಿತು. ಇದು ಭಾರತದ ಕೇಂದ್ರೀಯ ಬ್ಯಾಂಕು, ಇದು ಅನೇಕ ಸಹಾಯಕ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು, ವಿದೇಶ–ವಿನಿಮಯ ಬ್ಯಾಂಕುಗಳು, ಕೃಷಿ ಮತ್ತು ಕೈಗಾರಿಕಾ ಹಣಕಾಸು ಸಂಸ್ಥೆಗಳು ಮತ್ತು ಅಂಚೆ ಕಚೇರಿ ಉಳಿತಾಯ ವ್ಯವಸ್ಥೆ ಮುಂತಾದವು ಗಳಿಂದ ಸಮಾವೇಶಗೊಂಡ ಒಂದು ವಿಶಾಲ ಜಾಲವೇ ಆಗಿದೆ.

ಈಸ್ಟ ಇಂಡಿಯಾ ಕಂಪನಿಯು ತನ್ನ ಅಧಿಕಾರದ ವಲಯದಲ್ಲಿದ್ದ ಬಾಂಬೆ (೧೮೪೦), ಕಲಕತ್ತಾ (೧೮೦೯) ಮತ್ತು ಮದ್ರಾಸಿನಲ್ಲಿ (೧೮೪೩) ಬ್ಯಾಂಕುಗಳನ್ನು ಸ್ಥಾಪಿಸಿತ್ತು. ಇವು ಸ್ವತಂತ್ರ ಘಟಕಗಳಾಗಿದ್ದು, ಪ್ರೆಸಿಡೆನ್ಸಿ ಬ್ಯಾಂಕುಗಳೆಂದು ಕರೆಯಲ್ಪಡುತಿದ್ದವು. ಈ ಮೂರು ಬ್ಯಾಂಕುಗಳನ್ನು ಸಮಾವೇಶ ಗೊಂಡು ೧೯೨೧ರಲ್ಲಿ ಇಂಪೀರಿಯಲ್ ಬ್ಯಾಂಕ ಆಫ್ ಇಂಡಿಯ" ಎಂಬ ಬ್ಯಾಂಕ್ ಸ್ಥಾಪಿಸಲಾಯಿತು. ಕೊನೆಗೆ ೧೯೩೪ರಲ್ಲಿ ರಿಸರ್ವ ಬ್ಯಾಂಕ್ ಕಾಯದೆಯ ಪ್ರಕಾರ ಇಂಪೀರಿಯಲ್ ಬ್ಯಾಂಕ್‌ನ್ನು 'ರಿಸರ್ವ ಬ್ಯಾಂಕ' ಆಗಿ ಪರಿವರ್ತಿಸಲ್ಪಟ್ಟಿತು. ಇದು ಭಾರತ ಸರಕಾರದ ಕೇಂದ್ರ ಬ್ಯಾಂಕ ಆಗಿ, ಭಾರತದಲ್ಲಿಯ ಅನೇಕ ಬ್ಯಾಂಕುಗಳ 'ಬ್ಯಾಂಕರ್ಸ ಬ್ಯಾಂಕ್' ಮತ್ತು ವಾಣಿಜ್ಯ ಬ್ಯಾಂಕೆಂದೂ ಪರಿಗಣಿಸಲಾಗಿದೆ.

ಆರ್.ಬಿ.ಐ.ದ ಉಚ್ಚ ಅಧಿಕಾರಿ ಸರಕಾರದಿಂದ ನೇಮಕಗೊಂಡ ಗವರ್ನರ್, ಕೇಂದ್ರ ನಿರ್ದೇಶಕರ ಮಂಡಳಿಯ ಅಧ್ಯಕ್ಷರು ಮತ್ತು ಪ್ರಧಾನ ಕಾರ್ಯನಿರ್ವಾಹಕರು ಆಗಿರುತ್ತಾರೆ. ೧೯೪೯ರಿಂದ ೧೯೫೭ರವರೆಗಿನ ಸುದೀರ್ಘ ಅವಧಿಯ ವರೆಗೆ ಅಧಿಕಾರದಲ್ಲಿದ್ದ ರಾಮರಾವರು ರಿಸರ್ವ ಬ್ಯಾಂಕಿನ ಇತಿಹಾಸದಲ್ಲಿ ಮೊಟ್ಟಮೊದಲಿಗರು. ರಿಸರ್ವ ಬ್ಯಾಂಕಿನ ಇತಿಹಾಸದಲ್ಲಿಯ ಕೆಲ ಮಹತ್ವದ ಬೆಳವಣಿಗೆಗಳು ರಾಮರಾವರ ಕಾಲದಲ್ಲಿಯೇ ಆದವು.

ಈ ಕಾಲದಲ್ಲಿಯೇ ಆರ್.ಬಿ.ಐ. ಇತಿಹಾಸದಲ್ಲಿ ಮಹತ್ವದ ಸುಧಾರಣೆಗಳು ಆದವು. ೧೯೪೮ರ ಸುಮಾರಿಗೆ ೧೧೦೦ ಸಣ್ಣ ಪುಟ್ಟ ವಾಣಿಜ್ಯ ಬ್ಯಾಂಕುಗಳು ಭಾರತದಲ್ಲಿ ಇದ್ದವು. ಇವುಗಳನ್ನು ಒಗ್ಗೂಡಿಸಿ, ಏಕರೂಪತೆ ಮತ್ತು ಆಂತರಿಕ ಹೊಂದಾಣಿಕೆ ತರಲು ೧೯೪೯ರಲ್ಲಿ The Banking Companies Act ನ್ನು ಹೊರಡಿಸಲಾಯಿತು. ಎಲ್ಲ ಬ್ಯಾಂಕು ಗಳ ಮೇಲ್ವಿಚಾರಣೆ ಮಾಡಲು ರಿಸರ್ವ ಬ್ಯಾಂಕಿನ ಅಧಿಕಾರ ಗಳನ್ನು ವಿಸ್ತೃತಗೊಳಿಸಿದ ಕಾರಣ ಅದು ಭಾರತದ ಸರ್ವೋಚ್ಚ ಮತ್ತು ಅಧಿಕೃತ ಬ್ಯಾಂಕೆಂದು ಪರಿಣಮಿಸಿತು. ಇದರಿಂದ ಠೇವಣಿಗಳ ಸಂಗ್ರಹಣೆಗೂ, ಉದ್ದರಿ ವಿತರಣೆಗಳಿಗೂ ಲಕ್ಷಪೂರ್ಣ ನಿರ್ದೇಶನ ದೊರಕಿತು. ಭಾರತದ ಹಣಕಾಸಿನ ವ್ಯವಸ್ಥೆ ಬದಲಾದ ಹಾಗೆ ಬ್ಯಾಂಕಿನ ಪಾತ್ರ ಮತ್ತು ಕಾರ್ಯಗಳು ಬದಲಾಗುತ್ತ ಬಂದಿವೆ.

ರಾಮರಾವರ ಕಾಲದಲ್ಲಿ ಅನೇಕ ಮಹತ್ವದ ದೇಶದ ಆರ್ಥಿಕ ಮತ್ತು ರಾಷ್ಟ್ರೀಯ ಧೋರಣೆಗಳನ್ನು ಅಳವಡಿಸಿ ಕೊಳ್ಳಲಾಯಿತು. ೧೯೪೯ರಲ್ಲಿ ರಿಸರ್ವ ಬ್ಯಾಂಕಿನ ರಾಷ್ಟ್ರೀಕರಣವಾಯಿತು. ಶೇರುಗಾರರ ಬ್ಯಾಂಕಿನಿಂದ ಭಾರತ ಸರಕಾರದ ಬ್ಯಾಂಕ ಆಗಿ ಪರಿಣಮಿಸಿತು. ೧೯೫೦ರಲ್ಲಿ ಭಾರತವು ಗಣತಂತ್ರ ರಾಷ್ಟ್ರವೆಂದು ಘೋಷಿಸಲ್ಪಟ್ಟಿತು. ಬ್ರಿಟಿಶರ

ಕಾಲದಿಂದ ಚಲಾವಣೆಯಲ್ಲಿದ್ದ ನೋಟುಗಳ ಮೇಲೆ ಬ್ರಿಟಿಶ ಸಾರ್ವಭೌಮನ ಚಿತ್ರದ ಬದಲಾಗಿ ಅಶೋಕ ಚಕ್ರವನ್ನು ಅಳವಡಿಸಿಕೊಳ್ಳಲಾಯಿತು. ಅದೇ ವರ್ಷ ನೆಹರೂರವರ ನೇತೃತ್ವದಲ್ಲಿ ಕೇಂದ್ರ ನಯೋಜಿತ ಆರ್ಥಿಕ ಧೋರಣೆಯ ಪ್ರಕಾರ (Centrally Planned Economic Policy) ಕೃಷಿಗೆ ಪ್ರಾಧಾನ್ಯ ಕೊಡಲಾರಂಭಿಸಿತು. ರಿಸರ್ವ ಬ್ಯಾಂಕಿನ ಮೊದಲ ಪ್ರಯತ್ನಗಳಾದ ಲೋಕಕಲ್ಯಾಣ ನೀತಿ ಮತ್ತು ಸಾಂಸ್ಥಿಕ ಹಣಕಾಸಿನ ನೆರವು ಕೊಡುವ ಯೋಜನೆ ಇವು ರಾಮರಾಯರ ಕಾಲದಲ್ಲಿಯೇ ಪ್ರಾರಂಭವಾದವು ಎಂದು ಹೇಳಬಹುದು. ಸ್ವಾತಂತ್ರ್ಯ ದೊರಕಿದ ಮೇಲೆ ಕೃಷಿ ಉತ್ಪಾದನೆಯನ್ನು ವೃದ್ಧಿಗೊಳಿಸುವದಕ್ಕಾಗಿ ರೈತರಿಗೆ ಹಣಕಾಸಿನ ನೆರವು ನೀಡಲು ಸೂಚ್ಯ ಯೋಜನೆಯ ಅಗತ್ಯವಿತ್ತು. ಇದೇ ಸಂದರ್ಭದಲ್ಲಿ ಅಖಿಲ ಭಾರತ್ ಗ್ರಾಮೀಣ ಉದ್ದರಿ ಸರ್ವೇಕ್ಷಣ (೧೯೫೨). ಈ ಸಂಸ್ಥೆ ಅಧಿಕ ಬಂಡವಾಳ ಇರುವ ಇಂಪೀರಿಯಲ್ ಬ್ಯಾಂಕನ್ನು ರಾಷ್ಟ್ರೀಕರಿಸುವದರಿಂದ ಕೃಶಿ ಕ್ಷೇತ್ರದಲ್ಲಿ ಸರ್ವತೋಮುಖ ಪ್ರಗತಿ ಆಗಬಹುದೆಂದು ಇಂಪೀರಿಯಲ್ ಬ್ಯಾಂಕನ್ನು ರಾಷ್ಟ್ರೀಕರಿಸಿ ಅದಕ್ಕೆ ಭಾರತೀಯ ಸ್ಟೇಟ ಬ್ಯಾಂಕೆಂದು ಹೆಸರಿಸಲಾಯಿತು.

ರಿಸರ್ವ ಬ್ಯಾಂಕು ಪ್ರಬಲ ಮತ್ತು ಗಟ್ಟಿಯಾದ ನಾಲ್ಕು ಸ್ತಂಭಗಳ ಅಡಿಪಾಯದ ಮೇಲೆ ಭದ್ರವಾಗಿ ನಿಂತಿದೆ ಎಂದು ಹೇಳಲಾಗಿದೆ. ಅದರ ಮೂರು ಕಂಭಗಳ ತಳಹದಿಯನ್ನು ರಾಮರಾಯರ ಸೇವಾವಧಿಯಲ್ಲಿಯೇ ಕಟ್ಟಲ್ಪಟ್ಟಿತು ಎಂದರೆ ಅತಿಶಯೋಕ್ತಿ ಆಗುವದಿಲ್ಲ. ಮೊದಲನೆಯದು ವಿತ್ತ ನೀತಿ – ಸರಕಾರದ ಹಣಕಾಸಿನ ಅಗತ್ಯಗಳನ್ನು ಕಂಡುಹಿಡಿದು ದೇಶದ ಅರ್ಥವ್ಯವಸ್ಥೆಯನ್ನು ಬಲಪಡಿಸುವದು ಮೂಲ ಉದ್ದೇಶವಾಗಿತ್ತು. ಖೋತಾ ಬಜೆಟ್ (Deficit Budget)ಗಳಿಗೆ ಹಣವನ್ನು ಪೂರೈಸಲು ತತ್ಪೂರ್ತ ಟ್ರೇಜರಿ ಬಿಲ್ಲುಗಳನ್ನು ಹೊರಡಿಸಿ ಸರಕಾರದ ಬಾಕಿಯನ್ನು ೫೦ ಕೋಟಿಗಿಂತ ಕೆಳಕ್ಕೆ ಹೋದಾಗ ತುಂಬಿ ಕೊಡುವ ಯೋಜನೆ ಈ ವರೆಗೂ ನಡೆದು ಬಂದಿದೆ.

ಎರಡನೆಯದು ವಾಣಿಜ್ಯ ಬ್ಯಾಂಕುಗಳ ನಿಯಂತ್ರಣೆ ಮತ್ತು ಅಭಿವೃದ್ಧಿ – ವಾಣಿಜ್ಯ ಬ್ಯಾಂಕುಗಳ ಮೇಲೆ ಸಾಮಾಜಿಕ ನಿಯಂತ್ರಣವು ಅಗತ್ಯವೆಂದು ಅನೇಕ ಯೋಜನೆಗಳನ್ನು ಆರ್.ಬಿ.ಐ. ಈ ಕಾಲದಲ್ಲಿ ಯೋಜಿಸಿತು. ೧೯೫೦ರಿಂದ ಕೃಷಿ ಕ್ಷೇತ್ರದಲ್ಲಿ ಗ್ರಾಮೀಣ ಭಾರತಕ್ಕೆ ಸಾಂಸ್ತಿಕ ಸಾಲದ ನೆರವು ಕೊಡುವದು ಮೂರನೆಯ ಕಂಬವೆಂದು ರಿಸರ್ವ ಬ್ಯಾಂಕಿನ ಇತಿಹಾಸ ದಾಖಲಿಸುತ್ತದೆ. ಇದರ ಫಲವೆಂದರೆ ಸಹಕಾರ ಚಳುವಳಿಯ ಪ್ರಾರಂಭ. (Co-operative movement) ಈ ಚಳುವಳಿಯನ್ನು ಬೆಳೆಸುವದರಲ್ಲಿ ರಿಸರ್ವ ಬ್ಯಾಂಕಿನ ನೆರವು ಬಹಳ ಮುಖ್ಯವಾದದ್ದು. ಈ ಮಹತ್ವದ ದಾಪುಗಾಲು ರಾಮರಾವರ ಕಾಲದಲ್ಲಿ ಹಾಕಿದ್ದುದು ಎಂದು ಹೇಳಬಹುದು.

೧೯೩೪ರಲ್ಲಿ, ಭಾರತ ಸರಕಾರದ ಬ್ಯಾಂಕ್ ಆಗಿ ಭಾರತೀಯ ರಿಸರ್ವ ಬ್ಯಾಂಕಿನ ಸ್ಥಾಪನೆಯಾಯಿತು. ಇದರ ಮೊದಲು ಬ್ರಿಟಿಷರ ಇಂಪೀರಿಯಲ್ ಬ್ಯಾಂಕು ಭಾರತದಲ್ಲಿ ಸ್ಥಾಪನೆಯಾಗಿತ್ತು. ಅದು ಅನೇಕ ಬ್ಯಾಂಕುಗಳ ಬ್ಯಾಂಕೆಂದು ಕರೆಯಲ್ಪಡುತ್ತಿತ್ತು. ನಮ್ಮ ರಾಷ್ಟ್ರೀಯ ಧೋರಣೆಗೆ ಅನುಸಾರ ವಾಗಿ ಇಂಪೀರಿಯಲ್ ಆಂಗ್ಲ ಬ್ಯಾಂಕನ್ನು ಭಾರತೀಯ ಸ್ಟೇಟ ಬ್ಯಾಂಕಿನಲ್ಲಿ ವಿಲೀನಗೊಳಿಸುವ ಈ ಪ್ರಕ್ರಿಯೆಯಲ್ಲಿ ರಾಮರಾಯರು ಸಕ್ರಿಯವಾಗಿ ದುಡಿದಿದ್ದಾರೆ. ಭಾರತದ ಹಣಕಾಸಿನ ವ್ಯವಸ್ಥೆ ಬದಲಾದ ಹಾಗೇ ಬ್ಯಾಂಕಿನ ಪಾತ್ರ ಮತ್ತು ಅಧಿಕಾರಗಳಲ್ಲಿ ಬದಲಾವಣೆಗಳು ಬಂದವು.

೧೯೫೦ರಿಂದ ಕೇಂದ್ರ ನಿಯೋಜಿತ ಆರ್ಥಿಕ ಧೋರಣೆಗಳ ಪ್ರಕಾರ, (Centally Planned Economic Policy) ಕೃಷಿಗೆ ಪ್ರಾಧಾನ್ಯ ಕೊಡಲಾರಂಬಿಸಿತು. ಲೋಕ ಕಲ್ಯಾಣ ಮತ್ತು ಸಂಸ್ಥೆಗಳನ್ನು ಕಟ್ಟುವ ಇಂತಹ ಆರ್ಥಿಕ ಅಭಿವೃದ್ಧಿ ಯೋಜನೆಗಳು ರಾಮರಾವರ ಕಾಲದಲ್ಲಿ ಕೈಗೊಂಡ ಬ್ಯಾಂಕಿನ ಮೊದಲ ಪ್ರಯತ್ನಗಳಾಗಿದ್ದವು. ಕೇಂದ್ರೀಯ ಬ್ಯಾಂಕಿನ ಪದ್ಧತಿ, ರೂಢಿಯಲ್ಲಿ ಬಂದಿತು. ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ ಇನ್ನೊಂದು ಮೈಲಿಗಲ್ಲು.

೧೯೩೫ರಲ್ಲಿ ಬ್ಯಾಂಕಿನ ನೋಟಿನ ಮೌಲ್ಯವನ್ನು ಇಂಗ್ಲಿಶ, ಉರ್ದು, ಹಿಂದಿ, ಬಂಗಾಲಿ, ತೆಲುಗು, ತಮಿಳು, ಕನ್ನಡ ಮತ್ತು ಬರ್ಮಿ ಭಾಷೆಯಲ್ಲಿ ಮುದ್ರಿಸಲಾಗುತ್ತಿತ್ತು. ೧೯೪೮ರಲ್ಲಿ ಬರ್ಮಿಯ ಬದಲು ಒರಿಯಾವನ್ನು ಸೇರಿಸಲಾಯಿತು. ೧೯೬೦ರಲ್ಲಿ ಬ್ಯಾಂಕ ನೋಟಿನ ಮೇಲೆ ೧೪ ಭಾಷೆಗಳ ಸೇರ್ಪಡೆಯಾಯಿತು. ಭಾರತವು ೧೯೫೦ರಲ್ಲಿ ಗಣರಾಜ್ಯವಾದ ಮೇಲೆ ಆಂಗ್ಲ ದೊರೆಯ ಚಿತ್ರವನ್ನು ತೆಗೆದು ಹಾಕಿ ಅಶೋಕ ಚಕ್ರವನ್ನು ಸೇರಿಸಲಾಯಿತು. ಈ ಮಹತ್ವದ ಯೋಜನೆಗಳು ಕಾರ್ಯರೂಪಕ್ಕೆ ಬಂದದ್ದು ರಾಮರಾವರ ಕಾಲದಲ್ಲಿಯೇ.

ಭಾರತದಲ್ಲಿ ಮೊದಲ ಬಾರಿಗೆ ಕೃಷಿ ಮತ್ತು ಉದ್ಯಮ ದಲ್ಲಿ ಸಹಕಾರಿ ಸಾಲ ಸಂಘೀಕರಣದ ಯೋಜನೆ ಯನ್ನು ಪ್ರಾರಂಭಿಸಿ ರಾಮರಾಯರು ರಿಸರ್ವ್ ಬ್ಯಾಂಕಿನ ಕಾರ್ಯ ಕ್ಷೇತ್ರದಲ್ಲಿ ಮಹತ್ವದ ಪರಿವರ್ತನೆಯನ್ನೇ ತಂದರು. ಕೇಂದ್ರೀಯ ಬ್ಯಾಂಕಿನ ಪರಂಪರೆಯಲ್ಲಿ ಇದು ಮೊದಲ ಬದಲಾವಣೆ ಅನ್ನಬಹುದು. ಇದರ ಮೊದಲು ಆರ್.ಬಿ.ಐ. ಬರೀ ಸಲಹೆಗಾರರಾಗಿ ಕೆಲಸ ಮಾಡುತ್ತಿತ್ತು. ಆದರೆ ೧೯೪೯ರ ನಂತರ ಅದರ ಧೋರಣೆಯಲ್ಲಿ ಹೊಸ ಬದಲಾವಣೆಯನ್ನು ರಾಮರಾಯರು ತಂದರು.

ಈ ಕಾಲವು ಸಹಕಾರಿ ಉದ್ದರಿ ಮತ್ತು ಔದ್ಯಮಿಕ ಹಣಕಾಸು ಈ ಕ್ಷೇತ್ರಗಳಲ್ಲಿ ಹೊಸ ಹೊಸ ಉಪಕ್ರಮಗಳನ್ನು ಮತ್ತು ಯೋಜನೆಗಳನ್ನು ಕಾರ್ಯರೂಪಕ್ಕೆ ತಂದದ್ದನ್ನು ಕಂಡಿದೆ. ಶೆಡ್ಯುಲ್ಡ ಬ್ಯಾಂಕುಗಳಿಗೆ ಪ್ರೊಮಿಸರಿ ನೋಟಿನ ಜಾಮೀನನ ಮೇಲೆ ಮುಂಗಡ ಸಂದಾಯ ಮಾಡುವ ಅಧಿಕಾರವನ್ನು ಆರ್.ಬಿ.ಐ. ಕಾಯದೆಯ ಮೂಲಕ ಮಂಜೂರು ಮಾಡಿತು. ಇದರಿಂದ ಉದ್ದರಿ ವ್ಯವಹಾರಕ್ಕೆ ಚಾಲನೆ ಸಿಕ್ಕಿತು. ಉದ್ಯಮ ಮತ್ತು ವ್ಯಾಪಾರ ಕ್ಷೇತ್ರದಲ್ಲಿ ಖಾಸಗಿ ವಲಯಕ್ಕೆ ಹೆಚ್ಚುವರಿ ಒತ್ತಾಸೆ ಕೊಡುವ ರಾಮರಾವರ ಯೋಜನೆ ಆಗಿನ ಹಣಕಾಸು ಸಚಿವರಾದ ಟಿ.ಟಿ ಕೃಷ್ಣಮಾಚಾರಿ ಯವರಿಗೆ ಸರಿಬರಲಿಲ್ಲ. ಬಡ್ಡಿಯ ದರದ ಮೇಲಿನ ನಿಯಂತ್ರಣದ ಮೇಲೆ ಯಾರ ಹಕ್ಕಿರಬೇಕೆಂಬುದರ ಮೇಲೆ ಮತಭೇದವಾಯಿತು. ಸರಕಾರವು ಸ್ಟಾಂಪ ಡ್ಯೂಟಿಯನ್ನು ೪೦ ಪಟ್ಟರಷ್ಟು ಏರಿಸಿದ ಕಾರಣ ವ್ಯಾಪಾರೋದ್ಯಮದ ಪ್ರಗತಿಗೆ ದೊಡ್ಡ ಧಕ್ಕೆಯಾಯಿತು. ಆರ್ಥಿಕ ಸಚಿವರ ಮತ್ತು ರಿಸರ್ವ ಬ್ಯಾಂಕ ಗವರನರ ಇಬ್ಬರಲ್ಲಿಯೂ ಮತಭೇದಗಳು ಬಂದವು ಮತ್ತು ಸಚಿವರ ಅಪಮಾನಕರ ವರ್ತನೆಯಿಂದ ಬೇಸತ್ತ ರಾಮರಾವರು ತಮ್ಮ ಅವಧಿ ಮುಗಿಯುವ ಮುಂಚೆಯೇ ಜನವರಿ ೧೯೫೭ರಲ್ಲಿ ರಾಜೀನಾಮೆ ಕೊಟ್ಟರು.

ನಿವೃತ್ತರಾದ ಮೇಲೆ ರಾಮರಾವರು ತಮ್ಮ ಆಯುಷ್ಯ ವನ್ನು ತಮ್ಮ ಹೆಂಡತಿ, ಮಕ್ಕಳು, ಮೊಮ್ಮಕ್ಕಳ ಜೊತೆಗೆ ಕಳೆದರು. ಬಿದ್ದು ಕಾಲು ಮುರಿದುಕೊಂಡ ಕಾರಣ ಅವರಿಗೆ ಕೊನೆಯ ಎರಡು ವರ್ಷಗಳನ್ನು ಅಂಗವಿಕಲರಾಗಿ ಜೀವನ ವನ್ನು ಕಳೆಯಬೇಕಾಯಿತು.

ಸ್ವಾತಂತ್ರ ಚಳುವಳಿಯ ಆ ಅಮೋಘ ಕಾಲದಲ್ಲಿ, ಕೆಲವರು ದೇಶಕ್ಕೆ ಸ್ವಾತಂತ್ರ ತರಲು ಹೆಣಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು, ಇನ್ನೂ ಕೆಲವರು, ಆಂಗ್ಲ ಸರಕಾರದ ಸುಧಾರಣೆಗಳ ಲಾಭ ಪಡೆದು ಹೆಚ್ಚಿನ ಶಿಕ್ಷಣಗಳಿಸಿ, ಸ್ವತಂತ್ರ ಭಾರತದಲ್ಲಿ ತಮ್ಮ ಬುದ್ಧಿಮತ್ತೆಯ ಮತ್ತು ಆಡಳಿತದ ಅನುಭವದ ಕಾರಣ ಆರ್ಥಿಕ ಕ್ಷೇತ್ರದಲ್ಲಿ, ದೇಶದ ಆಡಳಿತದಲ್ಲಿ ಹಾಗೂ ಅಂತರಾಷ್ಟ್ರೀಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿ, ದೇಶದ ಅಭ್ಯುದಯಕ್ಕೆ ಕಾರಣರಾಗಿದ್ದಾರೆ. ಹುಟ್ಟೂರಿನಿಂದ ತಮ್ಮ ಕಾರ್ಯಕ್ಷೇತ್ರವನ್ನು ದೇಶದಾದ್ಯಂತ ವಿಸ್ತರಿಸಿದರಷ್ಟೇ ಅಲ್ಲ ಅಂತರಾಷ್ಟ್ರೀಯ ಸ್ತರದಲ್ಲಿ ಕೂಡ ಹೆಸರು ಗಳಿಸಿದರು. ಆದರೆ ಅವರ ನಂತರದ ಕರ್ನಾಟಕದ ಪೀಳಿಗೆಗೆ ಅವರು ಅಜ್ಞಾತರಾಗಿರುವ ಕಾರಣ ಅವರ ಕಾರ್ಯವನ್ನು ಬೆಳಕಿಗೆ ತರುವುದೇ ಈ ಸಂಶೋಧಕರ ಲೇಖನದ ಉದ್ದೇಶ.

## ಗ್ರಂಥಸೂಚಿ


೧. Dhanavanti Ramarau-Gifts of Passage, Harper & Row, Newyork, 1957.

1. Home to India,- Harper & Row, Newyork,1961
2. An Inheritance- Harper & Row, Newyork, 1977

೨. Kanchan Karopady Bannerjee-The Benegal Brothers The story of a family and its times-1864-1975, Ameya Prakashan, Pune, 2009.

೩. Centenary Souvenir, Ganapati High School, Mangalore 1870-1970 (1972).

೪. Reserve Bank of India, a brief history https-rbiorg.in.

೫. ಡಾ. ಎಂ.ಜಿ. ಪಾಟೀಲ್, ಭಾರತೀಯ ಬ್ಯಾಂಕಿಂಗ ವ್ಯವಸ್ಥೆ ಮತ್ತು ಹಣಕಾಸು, ಕನ್ನಡ ವಿಶ್ವಕೋಶ, ಸಂಪುಟ ೧೨ (ಮೈಸೂರು ವಿ.ವಿ) ೧೯೮೬.



# ಬ್ರಜೇಂದ್ರನಾಥ್ ಸೀಲ್: ಒಂದು ಮರುಚಿಂತನೆ
## [೩ನೇ ಸೆಪ್ಟಂಬರ್ ೧೮೬೪ರಿಂದ ೩ನೇ ಡಿಸೆಂಬರ್ ೧೯೩೮ರವರೆಗೆ]

ಡಾ. ಲೀಲಾ.ಬಿ.*

೧೯-೨೦ನೇ ಶತಮಾನದ ಮೈಸೂರು ಚರಿತ್ರೆಯನ್ನು ಅಭ್ಯಾಸ ಮಾಡುವಾಗ ನಮಗೆ ಕಂಡುಬರುವುದು, ಆಂಗ್ಲವಿದ್ಯಾಭ್ಯಾಸ, ಸಾಮಾಜಿಕ ಸುಧಾರಣೆಗಾಗಿ ಶ್ರಮಪಟ್ಟ ಹಲವರು ಮಹನೀಯರು, ದೇಶದ ಸ್ವಾತಂತ್ರ್ಯಕ್ಕಾಗಿ ಹೊಡೆದಾಡಿದ ಹುತಾತ್ಮರು ಮತ್ತು ಸದ್ದಿಲ್ಲದೆ ತಮ್ಮ ವಿದ್ವತ್ತಿನಿಂದ ಬೆಳಗಿದ ಮತ್ತಿತರು.

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಂದು ಶತಮಾನದ ಇತಿಹಾಸವಿದೆ. ಇದರ ಪ್ರಗತಿಗೆ ಕಾರಣರಾದ ಹಲವಾರು ಮುತ್ಸದ್ಧಿಗಳು ಇದರ ಹಿಂದೆ ಇರುವದು ಎಲ್ಲರಿಗೂ ಗೊತ್ತಿರುವ ಸಂಗತಿ. ವಿಶ್ವವಿದ್ಯಾನಿಲಯದ ಈ ಶತಮಾನ ಸಂದರ್ಭದಲ್ಲಿ ತಮ್ಮ ಪ್ರಭಾವವನ್ನು ಸದ್ದಿಲ್ಲದೆ ಬೀರಿದ ಕುಲಪತಿಯಾಗಿದ್ದ ಬ್ರಜೇಂದ್ರನಾಥ್ ಸೀಲ್‌ರವರ ವಿದ್ವತ್ತನ್ನು ಸ್ಮರಿಸುವದು ಕರ್ತವ್ಯ. ೧೯೨೧-೩೦ರವರೆಗೆ ಏಳು ವರ್ಷ ವಿಶ್ವವಿದ್ಯಾನಿಲಯದ ಕರ್ತವ್ಯವನ್ನು ನಿರ್ವಹಿಸಿದರು ಮತ್ತು ೧೯೨೨-೩೧ ಬೆಂಗಳೂರು ಮಿಥಿಕ್ ಸೊಸೈಟಿಯ ವೈಸ್ ಪ್ರೆಸಿಡೆಂಟ್ ಆಗಿದ್ದರು. ಸ್ವತಃ ಗಣಕ ವಿಜ್ಞಾನಿಯಾದ ಸೀಲ್‌ರವರಿಗೆ ಹಲವಾರು ಭಾಷೆಗಳ ಪರಿಚಯವಿತ್ತು. ತತ್ವಶಾಸ್ತ್ರದ ಮೇಲೆ ಅಪಾರ ಅಭಿಮಾನ. ಮೈಸೂರಿನಲ್ಲಿ ಪುಸ್ತಕ ಬರೆದರು ಮತ್ತು ಮೈಸೂರನ್ನು ಅಪಾರವಾಗಿ ಪ್ರೀತಿಸಿದರು. ಸ್ವಾಮಿ ವಿವೇಕಾನಂದರ ಸಹಪಾಠಿಯಾಗಿದ್ದ ಬ್ರಜೇಂದ್ರನಾಥರು ಬಿಟ್ಟು ಹೋಗಿರುವ ಅಪಾರವಾದ ಕೃತಿಗಳನ್ನು ಮತ್ತೊಮ್ಮೆ ವಿಮರ್ಶಿಸಬೇಕಾಗಿದೆ. ಮತ್ತು ಮಾನವನ ಸಮನ್ವಯತೆಗೆ ಶ್ರಮಿಸಿದ ಬ್ರಜೇಂದ್ರನಾಥ್ ಸೀಲ್‌ರವರನ್ನು ಮತ್ತು ಕೃತಿಗಳನ್ನು ವಿಮರ್ಶಿಸುವದು ಸಮಯೋಚಿತವಾಗಿದೆ. ಈ ಪ್ರಬಂಧದಲ್ಲಿ ಅವರ ಮುಖ್ಯ ಕೃತಿಗಳನ್ನು ಪರಿಚಯಿಸಲಾಗಿದೆ.

ಬ್ರಜೇಂದ್ರನಾಥ್ ಸೀಲ್ ಮೈಸೂರು ವಿಶ್ವವಿದ್ಯಾನಿಲಯ ಕಂಡ ಅಪರೂಪ ಮುತ್ಸದ್ಧಿ. ತಂದೆ ಮಹೇಂದ್ರನಾಥ್ ಕಾನೂನು ಪರಿಣಿತ. ೧೮೬೪ರಲ್ಲಿ ಹುಟ್ಟಿದ ಸೀಲ್‌ರವರು ತಂದೆಯಂತೆ ತತ್ವಶಾಸ್ತ್ರದಲ್ಲಿ ಒಲವಿದ್ದರೂ, ಬೇರೆ ಬೇರೆ ವಿಷಯದಲ್ಲಿ ಆಸಕ್ತಿ ಹೊಂದಿದ್ದವರು. ವಿದ್ಯಾರ್ಥಿ ದೆಸೆಯಲ್ಲಿ ಬ್ರಹ್ಮಸಮಾಜಕ್ಕೆ ಒಲಿದಿದ್ದರೂ ಆಮೇಲೆ ಅದರ ಪ್ರಭಾವ ಕಂಡುಬರುವದಿಲ್ಲ. ಪಾಠಶಾಲೆಯಲ್ಲಿ ಮೊದಲ ಹಂತದ ಪರೀಕ್ಷೆಗಳನ್ನು ಮುಗಿಸಿ, Calcutta, General Assembly Institution ಸೇರಿದರು. ಚಿಕ್ಕ ವಯಸ್ಸಿನಲೇ ಗಣಿತದಲ್ಲಿ ಅಪಾರ ಆಸಕ್ತಿ. ಕಲ್ಕತ್ತಾ ವಿಶ್ವವಿದ್ಯಾನಿಲಯದ ಆ ಕಾಲದ Entrance ಪರೀಕ್ಷೆಯನ್ನು ೧೮೭೮ರಲ್ಲಿ ಮೊದಲನೆ ದರ್ಜೆ (1st class) ಪಾಸು ಮಾಡಿದರು. ೧೮೮೩ರಲ್ಲಿ Ist class Hons ಹೊಂದಿದ ಅವರು ತಾವು ಓದಿದ್ದ ಸಿಟಿ ಕಾಲೇಜಿನಲ್ಲಿ ಉಪಾಧ್ಯಾಯರಾಗಿ ನೇಮಿಸಲ್ಪಟ್ಟರು. ವಿವೇಕಾನಂದರ ಸಹಪಾಠಿಯಾದ ಸೀಲ್‌ರವರು, ಅವರ ಜೊತೆ ಹಲವಾರು ವಿಷಯಗಳನ್ನು ಚರ್ಚಿಸುತ್ತಿದ್ದರೆಂದು ತಿಳಿಯಬಂದಿದೆ. ೧೮೮೪ರಲ್ಲಿ M.A. ನಲ್ಲಿ 1st class (philosophy) ಪಡೆದ ಏಕೈಕ ವ್ಯಕ್ತಿ ಸೀಲ್‌ರವರು. ಅವರು ಓದಿದ್ದ ಕಾಲೇಜಿನಲ್ಲೇ Assistant Professor ಎಂದು ನೇಮಕವಾದರೂ ಆರ್ಥಿಕ ಪರಿಸ್ಥಿತಿ ಸುಧಾರಿಸಿರಲಿಲ್ಲ. ೧೮೮೪-೯೬ ಕೆಲಸದ ಹುಡುಕಾಟ ನಡೆದೇ ಇತ್ತು. ಮತ್ತು ಅವರೇ ರೂಪಿಸಿಕೊಂಡ ಹಲವಾರು ಯೋಜನೆಗಳು ಅವರ ಮನಸ್ಸನ್ನೂ ಆವರಿಸಿತ್ತು. ೧೮೯೭ರಲ್ಲಿ ಇವರ ವಿದ್ವತ್ತನ್ನು ಗುರುತಿಸಿ ಕುಚ್ ಬಿಹಾರ ಮಹಾರಾಜ (ಕೇಶಬ್‌ಸನ್ ಅಳಿಯ) ವಿಕ್ಟೋರಿಯಾ ಕಾಲೇಜಿನಲ್ಲಿ (ನಾಗಪುರ) ಪ್ರಿನ್ಸಿಪಾಲ್ ಹುದ್ದೆಯನ್ನು ಒಪ್ಪು ವಂತೆ ಆಹ್ವಾನಿಸಿದರು. ಇದರಿಂದ ಸೀಲ್‌ರವರಿಗೆ ನೆಮ್ಮದಿ ಮತ್ತು ತನ್ನ ಬೌದ್ಧಿಕ ಕೆಲಸವನ್ನು ಮುಂದುವರಿಸಲು ಸಹಾಯವಾಯ್ತು. ಅವರು ೧೯೦೭ರಲ್ಲಿ ಪ್ರಬುದ್ಧ ಭಾರತದಲ್ಲಿ ವಿವೇಕಾನಂದರ ಮೇಲೆ ಬರೆದ ಬರಹ ಲಭ್ಯವಿದೆ.[೧] ಈ ಪ್ರಬಂಧದಲ್ಲಿ ಸೀಲ್‌ರವರು ವಿವೇಕಾನಂದರ ಬೌದ್ಧಿಕ ಶಕ್ತಿಯನ್ನು ಎತ್ತಿ ತೋರಿಸಿರುತ್ತಾರೆ.

ಕುಚ್ ಬಿಹಾರದಲ್ಲಿದ್ದಾಗ ಪ್ರಾಚೀನ ಹಿಂದುಗಳ ಸಂಸ್ಕೃತಿಯನ್ನು ನಿರ್ದಿಷ್ಟವಾದ ವಿಜ್ಞಾನದ ಹಿನ್ನೆಲೆಯಲ್ಲಿ ಅರಿಯಲು ಯತ್ನಿಸಿದರು. ಹೀಗಾಗಿ ಪ್ರಫುಲ್ಲಚಂದ್ರ ರೇ

* ಫ್ಲಾಟ್ # ೩೬, ೧ನೇ ಮಹಡಿ, 'ಶ್ಯಾಮಲ' (ಡಾನ್‌ಬಾಸ್ಕೋ ಶಾಲೆ ಹತ್ತಿರ) ಮಾತಂಗ, ಮುಂಬೈ-೪೦೦೦೧೯.

ಅವರ ಪುಸ್ತಕದಲ್ಲಿ ಒಂದು ಅಧ್ಯಾಯಕ್ಕೆ (History of Chemistry in Ancient India) ಎಂಬುದನ್ನು ಬರೆಯಲು ಸಾಧ್ಯವಾಯಿತು. ಇದರಿಂದ ಪಾಶ್ಚಿಮಾತ್ಯ ವಲಯದಲ್ಲೂ ಪ್ರೊ. ಸೀಲ್‌ರವರನ್ನು ಗುರುತಿಸುವಂತಾಯ್ತು. ಸಂಶೋಧನೆ, ಬೋಧನೆ ಸೀಲ್‌ರವರು ಮುಂದುವರಿಸುವಾಗ, ಹೆಚ್ಚಿನ ಪ್ರೋತ್ಸಾಹವಿತ್ತವರು ಕುಚ್‌ಬಿಹಾರದ ಮಹಾರಾಜರು. ಮಹಾರಾಜರ ಸಹಾಯದಿಂದ ಮೂರು ಸಾರಿ, ಯುರೋಪ ಪ್ರವಾಸ ಕೈಗೊಂಡರು. (೧೮೯೯, ೧೯೦೬, ೧೯೧೧) ೧೯೦೬ರಲ್ಲಿ International Congress of Orientalists in Rome'ನಲ್ಲಿ ಭಾಗವಹಿಸಿ ಮೂರು ಪ್ರಬಂಧಗಳನ್ನು ಮಂಡಿಸಿದರು.

೧) Universal Culture (ಸಾರ್ವತ್ರಿಕ ಸಂಸ್ಕೃತಿ) ಪಾಶ್ಚಿಮಾತ್ಯ ವಿದ್ವಾಂಸರಿಗೆ ಈ ವಿಷಯ ಹೊಸದಾಗಿತ್ತು.

೨) ಎರಡನೇ ಭಾಷಣ Taste of Truth. (ಸತ್ಯದ ಸ್ವಾದ)

೩) ಭಾರತದಲ್ಲಿ ಧರ್ಮಗಳ ವಿಕಸನ

ಈ ಮೂರು ಉಪನ್ಯಾಸಗಳು ಅವರು ಅತ್ಯಂತ ಎಚ್ಚರಿಕೆಯಿಂದ ಸಂಸ್ಕೃತದ ಆಧಾರದ ಮೇಲೆ ಮಂಡಿಸಿದರು. ಬ್ರಜೇಂದ್ರನಾಥ್‌ರವರ ವಿದ್ವತ್ತಿಗೆ ಈ ಮೂರು ಭಾಷಣ ಸಾಕ್ಷಿಯಾಗಿದೆ. ಇದಲ್ಲದೆ ೧೯೧೧ರಲ್ಲಿ ಮೊಟ್ಟಮೊದಲ ಬಾರಿ ನಡೆದ 'Universal Race Congress' ನಲ್ಲಿ ಪ್ರಬಂಧವನ್ನು ಮಂಡಿಸಿದರು. ಇದಕ್ಕೆ ಕುಚ್ ಬಿಹಾರ ಮಹಾರಾಜರು ಖುದ್ದಾಗಿ ಹಾಜರಿದ್ದರು. ಮಹಾರಾಜರ ಅಕಾಲಿಕ ಮರಣ ಬ್ರಜೇಂದ್ರನಾಥರನ್ನು ಕಂಗೆಡಿಸಿತು. ಆರ್ಥಿಕ ಸ್ಥಿತಿ, ನೌಕರಿ ಎಲ್ಲಾ ನಿರಾಶೆಯಿಂದ ಕೂಡಿದ್ದು ೧೯೧೨ರಲ್ಲಿ ವಿಕ್ಟೋರಿಯಾ ಕಾಲೇಜಿಗೆ ರಾಜೀನಾಮೆ ಇತ್ತರು. ಇದಕ್ಕೆ ಕಾರಣ ಕೊಡುತ್ತಾ David Kopf ರವರು ತಮ್ಮ ಪುಸ್ತಕ, The Brahma Samaj and the Shaping of the Modern mind. P.60 ಈ ರೀತಿ ಉಲ್ಲೇಖಿಸಿರುತ್ತಾರೆ, "ಬ್ರಹ್ಮಸಮಾಜ ವನ್ನು ನಿರಾಕರಿಸಿ ದೈವಿಕ ಮಾನವತವಾದವನ್ನು ಅವರು ಸ್ವೀಕಾರ ಮಾಡಿದ ಕಾರಣ ಇರಬಹುದೆಂದು ಊಹೆ. ಆದರೆ ಈ ಉದ್ವೇಗ, ಪರಿಸ್ಥಿತಿ ಬಹುಕಾಲ ಇರಲಿಲ್ಲ. ೧೯೧೩ರಲ್ಲಿ ಬ್ರಜೇಂದ್ರನಾಥ್‌ರವರಿಗೆ ಕಲಿಕತ್ತಾ ವಿಶ್ವವಿದ್ಯಾನಿಲಯ King George V ಪ್ರೊಫೆಸರ್ ಪದವಿಯನ್ನು ಕೊಟ್ಟು ಗೌರವಿಸಿತು. ಮುಂದಿನ ಎಂಟು ವರುಷ ಪ್ರೊ ಸೀಲ್, ಸಂಚಾರ, ಬರವಣಿಗೆ ಸಂಶೋಧನೆ ವಿಚಾರಗಳಲ್ಲಿ ತೊಡಗಿಸಿಕೊಂಡರು. ಮೂಲ ಸಂಶೋಧನೆಗೆ ಹೆಚ್ಚು ಮಹತ್ವ ಕೊಟ್ಟರು. "ನಡೆದಾಡುವ ವಿಶ್ವಕೋಶ"ವೆಂದೇ ಜನರು ಗುರುತಿಸಿದರು.

**ಬ್ರಜೇಂದ್ರನಾಥ್ ಸೀಲ್‌ರವರ ಕೃತಿಗಳು:**
Ram Mohan Roy; Universal Man:

ಇದು ಬೆಂಗಳೂರಿನಲ್ಲಿ (27 Sept 1924) ಪ್ರಕಟವಾದ ರಾಮ್ ಮನೋಹರ ರಾಯರವರ ವಾರ್ಷಿಕ ಜಯಂತಿಯಲ್ಲಿ ಮಾಡಿದ ಭಾಷಣ. ರಾಯರವರ ಸಿದ್ಧಾಂತ ಅವರಿಗೆ ಅತ್ಯಂತ ಪ್ರಿಯವಾದದ್ದು. ಚರಿತ್ರೆಯಲ್ಲಿ ನಾನಾ ಜನಾಂಗದ, ಬೇರೆ ಬೇರೆ ಸಂಸ್ಕೃತಿಯ ಸಂಘರ್ಷವಿದ್ದು, ರಾಷ್ಟ್ರೀಯ, ದೇಶೀಯ ಆದರ್ಶದ ಉಪಯುಕ್ತತೆ ಇರುತ್ತೆ. ಇದೆಲ್ಲವನ್ನೂ, ಮಾನವತೆಯಿಂದ ಒಗ್ಗೂಡಿಸುವನು ಶೂರ, ಇದನ್ನು ಪ್ರತಿಪಾದಿಸಿದ "ರಾಮ್ ಮೋಹನ ರಾಯ್ ಶೂರನೇ ಹೌದು" ಎಂದು ಪ್ರತಿಪಾದಿಸಿದರು. ಸಮಾಜದ ಸರ್ವ ಅಂಗಗಳೂ ಸ್ಥಗಿತವಾಗಿ, ಎಲ್ಲೆಡೆ ಜಾತಿ, ಧರ್ಮದ ಸಂಘರ್ಷಣೆ ನಡೆದಿದ್ದಾಗ ಎಲ್ಲರನ್ನೂ ಒಟ್ಟುಗೂಡಿಸುವ ಶಕ್ತಿಯೊಂದು ಬೇಕಿತ್ತು. ರಾಜರಾಮ್ ಮೋಹನರಾಯ್ ಎಲ್ಲವನ್ನೂ ಒಟ್ಟುಗೂಡಿಸಿ ಸಮನ್ವಯತೆಯನ್ನು ಮತ್ತು ಜಾಗ್ರತೆ ಯನ್ನು ಆಧುನಿಕ ಭಾರತದಲ್ಲಿ ಉಂಟುಮಾಡಿದರು. ಹಲವಾರು ಭಾಷೆಗಳ ಪರಿಚಯ ಹೊಂದಿದ್ದ ರಾಯರವರಿಗೆ ಪರ್ಷಿಯನ್, ಅರೇಬಿಕ್, ಸಂಸ್ಕೃತ, ತರ್ಕಶಾಸ್ತ್ರ ಇವುಗಳಲ್ಲಿ ಅಪಾರ ಜ್ಞಾನವಿತ್ತು. ಎಲ್ಲಾ ಧರ್ಮಗ್ರಂಥಗಳ ಪರಿಚಯವಿತ್ತು. ಬಹುದೇವತಾರಾದನೆ, ವಿಗ್ರಹಾರಾಧನೆಯನ್ನು ಖಂಡಿಸಿದರು. ತರ್ಕಕ್ಕೆ ಒಲಿದ ಮನಸ್ಸು ಮೂಢನಂಬಿಕೆಯನ್ನು ಖಂಡಿಸುತ್ತಿತ್ತು. ಸರ್ವಧರ್ಮ ಸಮಾನತೆಯಲ್ಲಿ ರಾಯ್‌ರವರಿಗೆ ಅಪಾರ ಮಮತೆ.

ಮಾನವನು ಎಲ್ಲಾ ಧರ್ಮವನ್ನು ಪ್ರೀತಿಸಬೇಕು. ಎಲ್ಲಾ ಧರ್ಮದ ಸಮನ್ವತೆಗಾಗಿ ಬ್ರಹ್ಮಸಮಾಜವನ್ನು ಸ್ಥಾಪಿಸಿದರು. ಏಕತೆ ಮತ್ತು ಸರ್ವಮಾನ್ಯತೆ ಇದರ ಉದ್ದೇಶ. ಸುವ್ಯಸ್ತಿತ ಸಂಘಟನೆಗೆ ರಾಯರವರು ಹೆಚ್ಚು ಒತ್ತುಕೊಟ್ಟರು. ವ್ಯಕ್ತಿಗಿಂತ ಸಮಾಜ ಮುಖ್ಯ ಮತ್ತು ಪೂರ್ವ ಪಶ್ಚಿಮದ ಸಂಸ್ಕೃತಿಯ ಏಕೀಕರಣಕ್ಕೆ ಶ್ರಮಿಸಿದರು.

ವಿಜ್ಞಾನಕ್ಕೆ ಆದ್ಯತೆ, ವಿದ್ಯಾಭ್ಯಾಸಕ್ಕೆ ಹೆಚ್ಚಿನ ಒತ್ತು, ಉದ್ಯೋಗ ಯೋಜನೆ ರೂಪಿಸುವದು. ಪೂರ್ವ, ಪಶ್ಚಿಮದ ಸಮನ್ವಯತೆ ರಾಯರವರ ಕನಸಾಗಿತ್ತು. ಈ ತತ್ವವನ್ನು ಸೀಲ್‌ರವರು ಮೆಚ್ಚುತ್ತಿದ್ದರು.

ಸೀಲ್‌ರವರು ೧೯೧೨ರಲ್ಲಿ Radha Kumud Mukherjee ಬರೆದ "The Sea Borne trade and Mari time activity of the Indians from the earliest times", ಪುಸ್ತಕಕ್ಕೆ ಅತ್ಯಂತ ಗುಣಮಟ್ಟದ ಮುನ್ನುಡಿ ಬರೆದರು. ಈ

ಪುಸ್ತಕ ಈಗಲೂ ಬೇಡಿಕೆ ಪುಸ್ತಕ. ಇದು ಇತ್ತೀಚೆಗೆ ಮರು ಮುದ್ರಣ ಹೊಂದಿದೆ.

ಭಾರತೀಯ ನೌಕಾಚರಿತ್ರೆ ಮತ್ತು ಅದರ ವ್ಯವಹಾರ, ಮೊಗಲರ ಕಾಲದ ವ್ಯಾಪಾರ ಸಂಬಂಧ ವಿವರವಾಗಿ ಚಿತ್ರಿಸಿದೆ. ಭಾರತವು ನೌಕಾಯಾನದಲ್ಲಿ ಮುಖ್ಯ ಪಾತ್ರವನ್ನು ಹೊಂದಿತ್ತು. ಇದನ್ನು ಮೂಲ ದಾಖಲೆಗಳಿಂದ (source material) ಸ್ಪಷ್ಟೀಕರಿಸಿದೆ. ಬಂದರುಗಳು, ಕಡಲು ಸಂಬಂಧದ ನಿಯಮಗಳು, ಹಡಗು ಕಟ್ಟುವಿಕೆ, ಸ್ಥಳೀಯರ ನಯಮಗಳು, ಸಾವಿರಾರು ವರ್ಷಗಳ ಹಿಂದೆ ಕಡಲ ವ್ಯಾಪಾರ ಹೇಗಿತ್ತು ಮತ್ತು ಭಾರತದ ಕಡಲ ಸಂಬಂಧ ಬೇರೆ ದೇಶಗೊಳಡನೆ ಹೇಗಿತ್ತು, ಇದನ್ನೆಲ್ಲಾ ಹಲವಾರು ಚಾರಿತ್ರಿಕ ದಾಖಲೆಗಳಿಂದ ಮತ್ತು ಹಲವಾರು ಅಪ್ರಕಟಿತವಾದ ದಾಖಲೆಗಳನ್ನು ಈ ಪುಸ್ತಕ ಬೆಳಕಿಗೆ ತಂದಿತು. ಚರಿತ್ರೆಗೆ ಸಂಬಂಧಿಸಿದ ವಾಸ್ತವಾಂಶವನ್ನೂ ಕೂಡ ಕೊಟ್ಟಿರುವದು ಇದು ಒಂದು ನೌಕಾ ಚರಿತ್ರೆಯ ದಾಖಲೆ ಎನ್ನಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದರಲ್ಲಿ ಸಾಹಿತ್ಯ ಕೃತಿಗಳಾದ ಸಂಸ್ಕೃತ, ಪಾಲಿ, ಪರ್ಶಿಯನ್ ಹಲವಾರು ದಕ್ಷಿಣ, ಉತ್ತರ, ಭಾಷೆಗಳ ಮತ್ತು ಯಾತ್ರಿಕರ ಬರಹಗಳನ್ನು ಒಳಗೊಂಡ ದಾಖಲೆ ಇದೆ. ಮುನ್ನುಡಿ ಬರೆದ ಸೀಲ್‌ರವರ ವಿದ್ವತ್ ಎದ್ದು ಕಾಣುತ್ತದೆ.

೧೯೧೨ರಲ್ಲಿ "comparative studies in Vaishnavism and Christianity" ಎಂಬ ಪುಸ್ತಕವನ್ನು ಬರೆದರು. ಈ ಪುಸ್ತಕವನ್ನು ವೀಕ್ಷಿಸಿದಾಗ ಇದರ ಮೇಲೆ ಯಾವ ಪಾಶ್ಚಿಮಾತ್ಯ ವಿದ್ವತ್ತಿನ ಪರಿಣಾಮವಾಗಲಿ, ಅಥವಾ ಧರ್ಮಕ್ಕಂಟುಬಿದ್ದ ವಿಶ್ಲೇಷಣೆ ಮಾಡುವಂತ ಯಾವ ಧರ್ಮನಿಷ್ಟತೆ ಕಂಡುಬರುವದಿಲ್ಲ ಎರಡು ಧರ್ಮಗಳೂ ಚಾರಿತ್ರಿಕ ಅನ್ವೇಷಣಗಳ ನಡುವೆ ಬೆಳೆದಿದೆ. Christianity ಯಲ್ಲಿ ಸಾಕಷ್ಟು ಬದಲಾವಣೆ ಚಾರಿತ್ರಕವಾಗಿ ಮುಂದುವರಿದಿದೆ. Vaishnavism ಜಟಿಲವಾದ ತೋರಿಕೆ ಮತ್ತು ಇದರ ಚಾರಿತ್ರಿಕ ಅನ್ವೇಷಣೆ ಇನ್ನೂ ನಡೆಯಬೇಕಾಗಿದೆ ಎಂದು David Kopf: Brahma Samaj and the Shaping of the modern mind P.65 ರಲ್ಲಿ ತಿಳಿಸಿರುತ್ತಾರೆ. ವಿಜ್ಞಾನದಲ್ಲಿ ಅತ್ಯಂತ ವಿಶ್ವಾಸವಿದ್ದ ಸೀಲ್‌ರವರು ತಮ್ಮ ತುಲನಾತ್ಮಕ ಕೃತಿಯನ್ನು ವಿಜ್ಞಾನದ ನೆಲೆಯಲ್ಲಿ ನೋಡಲು ಬಯಸಿದರು. ಮಾನವತೆಯ ಉದ್ಧಾರಕ್ಕೆ ವಿಜ್ಞಾನದ ಸಹಾಯ ಅತ್ಯವಶ್ಯಕ ಎಂದು ನಂಬಿದ್ದರು.

ಮತ್ತೊಂದು ಸೀಲ್‌ರವರ ಕೃತಿ "Positive Sciences of Ancient Hindus".[೩] ಇದನ್ನು ಸೀಲ್‌ರವರು ಹಲವಾರು ವರುಷ ಶ್ರಮಪಟ್ಟು ತಯಾರಿಸಿದ ಪ್ರಬಂಧಗಳು. ಸೀಲ್‌ರವರು ಮುನ್ನುಡಿಯಲ್ಲಿ ಹಲವಾರು ವಿಷಯಗಳನ್ನು ಬರೆದಿದ್ದಾರೆ. ಇದನ್ನು ಬರೆದ ಮುಖ್ಯ ಉದ್ದೇಶ; ಚರಿತ್ರಕಾರನಿಗೆ ಹಲವು ಹೊಸ ಆಕಾರಗಳನ್ನು ಒದಗಿಸುವದು. ಹಿಂದುಗಳು ಗ್ರೀಕರಂತೆ ವೈಜ್ಞಾನಿಕ ಪರಿಕಲ್ಪನೆ, ಕ್ರಮಬದ್ಧ ವ್ಯವಸ್ಥೆ, ಶೋಧನೆಗಳಲ್ಲಿ ಅಡವಳಿಸಿರುತ್ತಾರೆ. ರಚನಾತ್ಮಕವದ ಜ್ಞಾನವನ್ನು ಕೈಗಾರಿಕೆಗಳಲ್ಲಿ ಆಗಲೇ ಅಡವಳಿಸಿದೆ. ಹಿಂದೂಗಳ ವೈಜ್ಞಾನಿಕ ತತ್ವಗಳ ಮತ್ತು ಕ್ರಮಾನುಕರಣೆ, ಏಶ್ಯ ಖಂಡದಲ್ಲೆಲ್ಲಾ ಪ್ರಚಲಿತವಾಗಿದೆ. ಪೂರ್ವ ಪಶ್ಚಿಮದಲ್ಲಿ ಚೈನಾ ದೇಶದಲ್ಲೂ ಪಸರಿಸಿದೆ. ಹಿಂದೂ ಖಚಿತ ವಿಜ್ಞಾನ ಬೇರೆ ಬೇರೆ ತತ್ವಶಾಸ್ತ್ರದ ತುಲನಾತ್ಮಕದ ಅಭಾಸದಲ್ಲಿ ನಿರತವಾಗಿದೆ ಮತ್ತು ರಚನಾತ್ಮಕವಾಗಿದೆ. ಅನುಭವ ಜ್ಞಾನದಿಂದ, ಜೀವಶಾಸ್ತ್ರ, ಭಾಷಾಶಾಸ್ತ್ರ ಕಲ್ಪನೆಯಿಂದ ಬೆಳೆದಿದೆ. ಹಾಗೆಯೇ ಗ್ರೀಕರ ತತ್ವಶಾಸ್ತ್ರದ ಮೇಲೆ ರೇಖಾ ಗಣಿತದ ಪ್ರಭಾವವಿದೆ ಮತ್ತು ಹಾಗೆ ತಾವು ದಾಖಲಿಸಿರುವ ಎಲ್ಲಕ್ಕೂ ಖಚಿತವಾದ ಆಧಾರವಿದೆ ಎಂದು ಪ್ರತಿಪಾದಿಸಿರುತ್ತಾರೆ ಮತ್ತು ನವೀನತೆ ಇದೆ ಎಂದು ತಿಳಿಸಿರುತ್ತಾರೆ. ಈ ಪುಸ್ತಕದಲ್ಲಿ ಏಳು ಅಧ್ಯಾಯಗಳಿದ್ದು ಹಿಂದೂಗಳ ವೈಜ್ಞಾನಿಕ ತತ್ವಶಾಸ್ತ್ರದ ಪರಿಕಲ್ಪನೆಯನ್ನೂ ಹಲವಾರು ಸಂಸ್ಕೃತದ ದಾಖಲೆಗಳಿಂದ ಖಚಿತಪಡಿಸಿದೆ.

ಬ್ರಜೇಂದ್ರ ಸೀಲ್‌ರವರ ಮೇರು ಕೃತಿ. Quest Eternal ಅಥವಾ ನಿರಂತರ ಶೋಧ. ಬಹಳಷ್ಟು ಹಿಂದೆ (೧೮೮೨) ಈ ಕಾವ್ಯವನ್ನು ಆರಂಭಿಸಿದ್ದರೂ ಇದು ಬೆಳಕು ಕಂಡಿದ್ದು ೧೯೩೬ರಲ್ಲಿ. ಅಷ್ಟು ಹೊತ್ತಿಗೆ ಅವರು ಅನಾರೋಗ್ಯದಿಂದ ಬಳಲಿದ್ದರು. Quest Eternal (ನಿರಂತರ ಶೋಧ) ಮಾನವನ ಅಸ್ತಿತ್ವದ ಹುಡುಕಾಟವನ್ನು ಭಾವಗೀತೆಯಂತೆ ತೋರಿಸುತ್ತದೆ. ನಿರಂತರ ಶೋಧದಲ್ಲಿ ಮೂರು ಭಾಗಗಳಿವೆ. ಪ್ರಾಚೀನ, ಮಧ್ಯಸ್ತ ಮತ್ತು ಆಧುನಿಕ. ಸಾಮಾನ್ಯ ತತ್ವಜ್ಞಾನವನ್ನು ಕಾವ್ಯ ಶೈಲಿಯಲ್ಲಿ ಅಡಗಿಸಿದೆ.

ಮುನ್ನುಡಿಯಲ್ಲಿ ಸೀಲ್‌ರವರು ಕಾವ್ಯದ ಬಗ್ಗೆ ಚಿಂತಿಸುತ್ತಾ 'ಕಾವ್ಯ ಮುಂದುವರಿಯಬೇಕಾದರೆ ಮತ್ತಿತರ ಕಲೆಗಳೊಂದಿಗೆ ಸ್ಪರ್ಧಿಸಬೇಕಾದರೆ ಹೊಸ ಪ್ರಯೋಗಗಳನ್ನು ಮಾಡಬೇಕಾಗುತ್ತೆ. ಇಲ್ಲಿ ಕವಿ ವಿಶ್ವವ್ಯಾಪ್ತಿಯ ಜೀವನದ ಅಂಕರ್ಯವನ್ನು ತೋರಿಸಬೇಕಾಗುತ್ತದೆ. ಇದರಲ್ಲಿ ಅಂತಃಭೂತಿಯಾದ ಜೀವನದ ಸಾರಾಂಶವನ್ನೂ ಮತ್ತು ಜಗತ್ತಿನ ಆಗು ಹೋಗುಗಳನ್ನು ಕಾಮನಬಿಲ್ಲಿನಂತೆ ಕವಿ ಪ್ರತಿಪಾದಿಸುವನು. ಇದರಲ್ಲಿ ಯಾವ ಕ್ರೋಧ ಭಾವನೆಗಳಿಲ್ಲ. ಆದರೆ ಸಮತೋಲನ, ಸಮಚಿತ್ತ ವಿವೇಕದಿಂದ ಭಾವನಾ ಶಕ್ತಿಯಿಂದ ಚಾರಿತ್ರಿಕ ದೃಷ್ಟಿಕೋನದಿಂದ ಬದುಕನ್ನು ಮತ್ತು ಜಗತ್ತನ್ನು ನೋಡಬೇಕು.

'ನಿರಂತರ ಶೋಧದಲ್ಲಿ' ಪೂರ್ವ ಪಶ್ಚಿಮದ ಸಂಸ್ಕೃತಿಯ ಮಿಶ್ರಣ ಮತ್ತು ಪ್ರಾಚೀನ ಮತ್ತು ಮಧ್ಯಕಾಲದ ಪರಿವರ್ತನೆಯನ್ನು ಮುಂದಿನ ಪೀಳಿಗೆಗೆ ತೋರಿಸಬಲ್ಲನು

ಕವಿ. ಕೃತಿಕಾರ ಪ್ರತಿಯೊಂದರಲ್ಲೂ ಕಾಲ ಬದಲಾವಣೆಯನ್ನು ಮತ್ತು ಆ ಕಾಲದ ಆದರ್ಶ ಧ್ಯೇಯವನ್ನು ಸ್ಮರಿಸಿ ಅದರ ಅಂತರಾತ್ಮವನ್ನು ಭೇದಿಸಿ ಮುಂದಿನ ಯುಗಕ್ಕೆ ತೆರಳುತ್ತಾನೆ. ಪ್ರತಿಯೊಂದು ಹಂತದ ಬದಲಾವಣೆಯಲ್ಲಿ ಸಮನ್ವತೆಯನ್ನು ಕಾಣಲು ಯತ್ನಿಸುತ್ತಾನೆ. ವರ್ಡ್ಸ್‌ವರ್ತ ಕವಿಯು ಪ್ರಕೃತಿಯಲ್ಲಿ ಮನುಷ್ಯನ ಲೀನತೆಯನ್ನು ಹೇಗೆ ಕಂಡನೋ ಹಾಗೆ ವಿಶ್ವಮಾನವನನ್ನು ಅರಿಯಲು ಯತ್ನಿಸುವನು.

ಇಲ್ಲಿ ಸೀಲ್‌ರವರ ನಾಯಕ ಗಾಯಟೆ ಅವರ 'Faust'[a] ಪಾತ್ರಕ್ಕಿಂತ ಹೆಚ್ಚಿನ ಸಾಹಸಗಾರ ಮತ್ತು ವಿಶ್ವಜಗತ್ತಿನಲ್ಲಿ ಏಕತೆಯನ್ನು ಕಾಣುವ ಸಮದರ್ಶಿ ಮಾನವ. ಹುಡುಕಾಟ ನೆಡೆಸಿದ್ದಾನೆ. ಮತ್ತು ಈ ಅಲೆಮಾರಿ ಮನುಷ್ಯ ಸಾವನ್ನೂ ಗೆಲ್ಲಲು ಹೊರಟಿರುವನು. ಸಾವೆಂದರೆ ದೈಹಿಕ ಸಾವು ಒಂದೇ ಅಲ್ಲ. ಜೀವನದ ಅಸಭ್ಯ ಮತ್ತು ಕುರುಡೂ ಅರಿವನ್ನು ಹೋಗಲಾಡಿಸುವದು ಮತ್ತು ಇದಕ್ಕೆ ತಕ್ಕ ಧಾರ್ಮಿಕ ಪರಿವರ್ತನೆ ಆಗಿದೆ. ಆದರೆ ಇದರಲ್ಲಿ ಅವನು ಸಫಲವಾಗಿಲ್ಲ.

ಸೀಲ್‌ರವರ ನಾಯಕ ಒಬ್ಬ ಕಾರ್ಮಿಕ ಅಥವಾ ಶ್ರಮಜೀವಿ ಕೂಡ ಅಲ್ಲ. ಯಾವ ವಿಚಾರವಾದಿಯೂ ಅಲ್ಲ ಮತ್ತು ಅವನು ಯಾವ ತತ್ವವಾದಕ್ಕೂ ಸೇರಿದವನಲ್ಲ. ಅವನ ಕೆಲಸ 'Promethus'[b] ನಂತೆ ಮಾನವನನ್ನೂ ದೇವರ ಸಂಕೋಲೆಯಿಂದ ಮುಕ್ತನನ್ನಾಗಿ ಮಾಡುವದು.

**"Oh. Come Prometheus come out of the shadow**
**of ages, out of the deep**
**The dark, dark deep**
**Arise and lead from darkness to light**
**Arise and lead from death to deathless ness**
**Arise and lead from untruth snares tot truth**
**Knowledge divine with freedom that annuls**
**The law of matter, blind necessity**
**Arise and lead Humanity Earths God**
**To Psyche etern vision of deathless love.[4]**

**(ಎದ್ದೇಳು ಕತ್ತಲಿಂದ ಬೆಳಕಿಗೆ ಮುನ್ನೆಡಸು**
**ಎದ್ದೇಳು ಸಾವಿನಿಂದ ಅಸಾವಿಗೆ ಮುನ್ನೆಡೆಸು**
**ಎದ್ದೇಳು ಅಸತ್ಯದಿಂದ ಸತ್ಯದೆಡೆಗೆ ಮುನ್ನೆಡೆಸು)**

ಯುದ್ಧ, ಕಲಹ, ದ್ವೇಷ ಅಸಮತೋಲನ ಎಲ್ಲವನ್ನೂ ನೋಡಿದ್ದ ಬ್ರಜೇಂದ್ರನಾಥ ಸೀಲ್‌ರವರು ೨೦ನೇ ಶತಮಾನದ ಏಕೈಕ ಮಂತ್ರವೆಂದರೆ ಮಾನವತಾವಾದ ಮತ್ತು ಒಗ್ಗಟ್ಟಿನಿಂದ ಸಮಾನತೆಯಲ್ಲಿ ಮಾನವನ ಒಳಿತನ್ನೂ ಕಾಣಲು ಯತ್ನಿಸ ಬೇಕೆಂದು ಪ್ರತಿಪಾದಿಸಿದರು. ಆದರೆ Prometheus ತರಹ ಮಾನವ ಸಂಕೋಲೆಯಿಂದ ಹೊರಬರಲು ಆಗುತ್ತಿಲ್ಲ.

**ಬ್ರಜೇಂದ್ರನಾಥ ಸೀಲ್‌ರವರ ಮೈಸೂರು ಸಂಬಂಧ:**

ಸೀಲ್‌ರವರು ಮೈಸೂರು ವಿಶ್ವವಿದ್ಯಾನಿಲಯವನ್ನು ಅಲಂಕರಿಸಿದ ಎರಡನೆ ಕುಲಪತಿ. ಆಗಿನ ಕಾಲದ ಹೆಸರುವಾಸಿಯಾದ ಇಂಗ್ಲೆಂಡಿನ ಲೀಡ್ಸ್ ವಿಶ್ವವಿದ್ಯಾನಿಲಯದ ಕುಲಪತಿಯನ್ನು ಕರೆತರಲು ಮೈಸೂರು ಸರ್ಕಾರ ಯೋಚಿಸಿತ್ತು. ಅವರು ಮತ್ತ್ಯಾರೂ ಅಲ್ಲದೆ Michael Sadler.[5] ವಿದ್ಯಾಭ್ಯಾಸ ವಿಷಯದಲ್ಲಿ ಪರಿಣಿತರು. ಅವರ Sadler Committee ವರದಿ ಎಲ್ಲರಿಗೂ ಪರಿಚಿತ. Micheal Sadler, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬ್ರಜೇಂದ್ರನಾಥ ಸೀಲ್‌ರವರ ಹೆಸರನ್ನೂ ಸೂಚಿಸಿದ್ದೇ ಅಲ್ಲದೆ "I know of no one in respect of the range and depth of Scholarship and originality of mind who can be equal to Dr. B.N. Seal either in the East or West"[6] ಸೀಲ್ ರವರಿಗೆ ಹಲವಾರು ಭಾಷೆಗಳ ಪರಿಚಯವಿತ್ತು. ತುಲನಾತ್ಮಕ ಸಾಹಿತ್ಯಗಳ ಅಭ್ಯಾಸ ಮತ್ತು ತತ್ವಚಿಂತನೆ, ಇದೆಲ್ಲವನ್ನೂ ಆಗಲೇ ತಿಳಿಸಿದೆ. ೧೯೨೪ರಲ್ಲಿ ಅವರು ಬರೆದ "Classical Syllabus of Indian Philosophy" ಒಂದು ಸಮಗ್ರ ಪ್ರಾಚೀನ ತತ್ವಶಾಸ್ತ್ರದ ಚಿತ್ರವನ್ನು ತೆಗೆದಿಡುತ್ತದೆ. ಇದರಲ್ಲಿ ಕೊಟ್ಟಿರುವ ಅಭ್ಯಾಸಕ್ರಮ, ರೂಪರೇಖೆ ಮೆಚ್ಚುವಂತಿದೆ. ಅವರಿಗೆ ತತ್ವಶಾಸ್ತ್ರ ಮತ್ತು ವಿಜ್ಞಾನ ಎರಡಲ್ಲೂ, ಸಮನ್ವಯತೆ ಮತ್ತು ಸಾಮ್ಯ ಗೊತ್ತಿತ್ತು. ಮತ್ತೊಂದು ಕೃತಿ Raja Ram Mohan Roy (1924) ಬೆಂಗಳೂರಿನಲ್ಲಿ ಬರೆದಿದ್ದು ಅತ್ಯಂತ ಮಾನ್ಯತೆಯನ್ನು ತಂದುಕೊಟ್ಟಿತು. ಇದರ ವಿಚಾರ ತಿಳಿಸಿದೆ.

ವಿಶ್ವವಿದ್ಯಾನಿಲಯದ ಅಭಿವೃದ್ಧಿಯಲ್ಲಿ ಸಾಕಷ್ಟು ಪ್ರಮುಖ ಪಾತ್ರ ವಹಿಸಿದ ಸೀಲ್‌ರವರು, ಅದರ ಆಡಳಿತ ಮತ್ತು ಬೌದ್ಧಿಕ ಚಟುವಟಿಕೆಯಲ್ಲಿ ವಿಶೇಷ ಪರಿಶ್ರಮ ವಹಿಸಿದ್ದರು. ತಮ್ಮ ಸುತ್ತಮುತ್ತ ಇದ್ದ ಪರಿಸರದ ವಿಷಯದಲ್ಲೂ ಕಾಳಜಿ ವಹಿಸಿದ್ದರು. ಮೈಸೂರಿನ ಸಂಸ್ಕೃತಿಯನ್ನು ಪ್ರೀತಿಸಿದರು. ಶಿಲ್ಪಕಲೆಯಲ್ಲಿ ವಿಶೇಷ ಆಸಕ್ತಿ ಮತ್ತು ಅಭಿಮಾನ ಹೊಂದಿದ್ದು ವ್ಯಕ್ತವಾಗಿದೆ. ೧೯೨೬ ಬ್ರಿಟಿಷ್ ಸರ್ಕಾರ ಅವರಿಗೆ Knighthood ಕೊಟ್ಟು ಗೌರವಿಸಿತು. ೧೯೩೦ರಲ್ಲಿ ರಾಜಮಂತ್ರ ಪ್ರವೀಣ ಎಂಬ ಬಿರುದನ್ನು ಪಡೆದರು.

ಕೊನೆಯ ದಿನಗಳಲ್ಲಿ ಸತತ ಕಣ್ಣಿನ ಬಾಧೆಯಿಂದ ಬಳಲಿದ ಬ್ರಜೇಂದ್ರನಾಥ ಸೀಲ್‌ರವರು ೧೯೩೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ರಾಜೀನಾಮೆ ಸಲ್ಲಿಸಿ, ೧೯೩೮ರಲ್ಲಿ ಕಲ್ಕತ್ತಾದಲ್ಲಿ ಕಾಲವಾದರು.



## ಆಧಾರಸೂಚಿ

೧. ಈ ಬರಹಕ್ಕೆ ಸಿಸ್ಟರ್ ನಿವೇದಿತಾರವರ ಪ್ರೋತ್ಸಾಹವಿತ್ತು ಎಂದು Sujata Gupta, Current science No.106 ರಲ್ಲಿ ಉಲ್ಲೇಖಿಸಿದ್ದಾರೆ.

೨. David Koft: Brahma Samaj and the Shaping of the modern mind P. 60.

೩. Brajendranath Seal; The Positive Sciences of Ancient Hindus, 1958, P. 3-4.

a. ಜರ್ಮನ ಸಾಹಿತ್ಯದಲ್ಲಿ ಗಾಯಟೆ ಅತ್ಯಂತ ಪ್ರಸಿದ್ಧರು. ಮತ್ತು 'Faust' ಜರ್ಮನ್ ಸಾಹಿತ್ಯ ವಿಶಿಷ್ಟ ಸ್ಥಾನ ಪಡೆದಿದೆ.

b. ಗ್ರೀಕರ ಪುರಾಣ ಸಾಹಿತ್ಯದಲ್ಲಿ 'Promethus' ನದು ಅತ್ಯಂತ ಮುಖ್ಯ ಪಾತ್ರ. ಅತ್ಯಂತ ಧೈರ್ಯಶಾಲಿ. ದೇವತೆಗಳಿಂದ ಬೆಂಕಿಯನ್ನೂ ಕದ್ದುತಂದು ಮಾನವನಿಗೆ ಹಂಚಿದ ಪ್ರಯುಕ್ತ ದೇವರ ಕೋಪಕ್ಕೆ ಒಳಗಾದ.

೪. Brajendranath Seal: The Quest Eternal P. 67-68.

೫. Michael Sadler commission Report on Education is a very famous document on education running into several volumes.

೬ Sujata Gupta, Current Science vol.10, 2014.

## References


1. David Kopf: The Brahma Samaj and the shaping of Modern mind. New Jersey, Princeton, University Press, 1979.
2. Seal, Brajendranath, The Positive Sciences of the Ancient Hindus. Delhi, Motilal Banarasi Dass, 1958.
3. Seal Brajendranath, The Quest Eternal, London, Oxford University Press 1936.
4. Seal Brajendranath, Ram Mohan Roy; the Universal Man, Calcutta, Sadharana Brahma Samaj 1924.
5. Sujata Gupta, Prabir K Gupta and Supratim Gupta; Current Science No.106, March 10, 2014.
6. Prabuddha Bharata April 1907.
7. Mookerji, Radha Kumud (introduction by Seal Brajendranath) Indian shipping: a history of Sea born trade and maritime activity of the Indians from the earliest times. Bombay, longmans green 1912.



# ಮಹಿಳೆಯರ ಸಬಲೀಕರಣದಲ್ಲಿ ಎಂ.ಆರ್. ಲಕ್ಷ್ಮಮ್ಮ ಅವರ ಪಾತ್ರ

ಮಂಜುಳ.ಎ.ಸಿ.*

ಸ್ವಾತಂತ್ರ್ಯ ಚಳುವಳಿಯಲ್ಲಿ ಮೈಸೂರು ಸಂಸ್ಥಾನ ತನ್ನದೇ ಆದ ಸ್ಥಾನಮಾನವನ್ನು ಹೊಂದಿದೆ ಅದರಲ್ಲೂ ಪುರುಷ ಪ್ರಧಾನ ಸಮಾಜದ ಹಲವು ನಿರ್ಬಂಧಗಳ ನಡುವೆಯೂ ಅನೇಕ ಮಹಿಳೆಯರು ಸ್ವಾತಂತ್ರ್ಯ ಹೋರಾಟ ದಲ್ಲಿ ಭಾಗವಹಿಸಿ ದೇಶ ಸೇವೆಗೆ ತಮ್ಮನ್ನು ಮುಡಿಪಾಗಿಟ್ಟರು. ಕೇವಲ ಸ್ವಾತಂತ್ರ್ಯ ಹೋರಾಟ ಮಾತ್ರವಲ್ಲ ಸ್ವಾತಂತ್ರ್ಯ ನಂತರ ದಲಿತರ, ಮಹಿಳೆಯರ, ಅಬಲೆಯರ ಬದುಕನ್ನು ಹಸನಾಗಿಸಲು ಹಗಲಿರುಳು ಶ್ರಮಿಸಿದ್ದಾರೆ. ಸಾವಿರಾರು ಸ್ವಾತಂತ್ರ್ಯ ಹೋರಾಟಗಾರರ ನಡುವೆ ವಿಭಿನ್ನ ವ್ಯಕ್ತಿತ್ವ ಹೊಂದಿರುವ ಕನ್ನಡ ನಾಡು ಕಂಡ ಅಪರೂಪದ ವ್ಯಕ್ತಿತ್ವಗಳಲ್ಲಿ ಎಂ.ಆರ್. ಲಕ್ಷಮ್ಮನವರು ಒಬ್ಬರು.

ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಹೋರಾಟಗಾರ್ತಿ, ಸಮಾಜ ಸೇವಕಿ, ಸ್ತ್ರಿ ಸುಧಾರಕಿ, ಪತ್ರಿಕೋದ್ಯಮಿ, ರಾಜಕಾರಣಿ. ಎಂ.ಆರ್. ಲಕ್ಷಮ್ಮ ೧೯೧೩ ಮಾರ್ಚ್ ೨೪ರಂದು ರಾಮರಾವ್ ಮತ್ತು ಪದ್ಮಾವತಮ್ಮ ಇವರ ಮಗಳಾಗಿ ಜನಿಸಿದರು. ಮೈಸೂರಿನಲ್ಲಿ ವಿದ್ಯಾಭ್ಯಾಸ ಪ್ರಾರಂಭಿಸಿದ ಇವರು ಹನ್ನೊಂದು ವರ್ಷ ವಯಸ್ಸಿನಲ್ಲಿಯೇ ವಿವಾಹವಾಗಿ ವಿವಾಹದ ನಂತರ ಪತಿಯ ಸಹಕಾರದಿಂದ ವಿದ್ಯಾಭ್ಯಾಸವನ್ನು ಮುಂದುವರಿಸಿ ಮೈಸೂರು ವಿಶ್ವವಿದ್ಯಾಲಯದಿಂದ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರದ ವಿಭಾಗದಿಂದ ಚಿನ್ನದ ಪದಕದೊಂದಿಗೆ ತಮ್ಮ ಸ್ನಾತಕೋತ್ತರ ಪದವಿಯನ್ನು ಪಡೆದರು. ಇತಿಹಾಸ ಮತ್ತು ಪುರಾತತ್ವ ವಿದ್ಯಾರ್ಥಿನಿಯಾಗಿದ್ದ, ಎಂ.ಆರ್.ಲಕ್ಷಮ್ಮ ಓದು ಮುಗಿದ ನಂತರ ವಿಶ್ವವಿದ್ಯಾಲಯ ಪುರಾತತ್ವ ವಿಭಾಗದಲ್ಲಿ ಕೆಲಸಕೆ ಸೇರುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ "ಮಹಿಳೆಯಾಗಿದ್ದರಿಂದ ಹಾಗೂ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ್ದರಿಂದ ವಿಶ್ವವಿದ್ಯಾಲಯದ ಬಾಗಿಲು ನಿಮಗೆ ಮುಚ್ಚಿದೆ" ಎಂಬ ಮಾತನ್ನು ಪ್ರೊಫೆಸರ್ ಆಗಿದ್ದ ವಿ.ಎಲ್. ಡಿಸೋಜಾರವರು ಹೇಳಿದಾಗ ಲಕ್ಷಮ್ಮನವರ ಆಸಕ್ತಿ ಸಾಹಿತ್ಯ ಮತ್ತು ಸಮಾಜ ಸೇವಾಕ್ಷೇತ್ರದತ್ತ ಹರಿಯಿತು. ಲಕ್ಷಮ್ಮ ಅವರ ತಂದೆಯವರು "ಕೆಲಸಕ್ಕೆ ಸೇರಿ ಹಣ ಸಂಪಾದಿಸುವುದಕ್ಕಿಂತ ನೀನೊಬ್ಬ ಸಮಾಜ ಸೇವಕಿಯಾಗಬೇಕೆಂಬುದು ನನ್ನಾಸೇ ಮಗಳೇ" ಎಂದು ಹೇಳಿ ಲಕ್ಷಮ್ಮ ಅವರ ಸಮಾಜ ಸೇವೆಗೆ ಅಡಿಪಾಯ ವನ್ನು ಹಾಕಿದರು. ಎಂ. ಆರ್. ಲಕ್ಷಮ್ಮ ಪದವಿ ವ್ಯಾಸಂಗ ಮಾಡುತ್ತಿದ್ದಾಗಲೇ ನಾ.ಕಸ್ತೂರಿ ಮತ್ತಿತರು ವಿದ್ಯಾವಂತ ರೊಂದಿಗೆ ಸೇರಿ ಪ್ರೊ॥ ಈಗಲ್ಟನ್‌ರವರ ನೇತೃತ್ವದಲ್ಲಿ ಮೈಸೂರಿನ ಕೂರ್ಗಳ್ಳಿಯಲ್ಲಿ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕಾರ್ಯಕ್ರಮದ ಮೂಲಕ ಶಿಕ್ಷಣದ ಅರಿವನ್ನು ಮೂಡಿಸಲು ಪ್ರಾರಂಭಿಸಿದರು.

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಎಂ.ಆರ್. ಲಕ್ಷಮ್ಮ ನಂತರ ವಯಸ್ಕರ ಶಿಕ್ಷಣ ಸಮಿತಿಯ "ಬೆಳಕು" ವಾರಪತ್ರಿಕೆಯ ಪ್ರಥಮ ಸಂಪಾದಕಿಯಾಗಿ ಮೂರು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು ವನಿತಾಸದನ, ಭಗಿನಿ ಸೇವಾ ಸಮಾಜ ಮುಂತಾದ ಮಹಿಳಾ ಸಮಾಜಗಳಲ್ಲಿ ಸದಸ್ಯೆಯಾಗಿ, ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಮೈಸೂರು ಸಂಸ್ಥಾನ ದಲ್ಲಿ ಕಸ್ತೂರಿ ಸಮಾಜದಲ್ಲಿ ಮಹಿಳೆಯರಿಗೆ ವೃತ್ತಿಶಿಕ್ಷಣ ತರಬೇತಿ ಸ್ಥಾಪಿಸಿದರು. ೧೯೪೬ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಮೇಲ್ಮನೆಯಾದ ನ್ಯಾಯವಿಧಾಯಕ ಸಭೆಗೆ ಮೈಸೂರು ಮಹಿಳಾ ಕ್ಷೇತ್ರದಿಂದ ಅವಿರೋಧವಾಗಿ ಆಯ್ಕೆಯಾಗಿ ರಾಜಕೀಯರಂಗವನ್ನು ಪ್ರವೇಶಿಸಿದರು. ರಾಜಕೀಯ ರಂಗದ ಪ್ರವೇಶದ ನಂತರ ದೇಶಸೇವೆಗೆ ತಮ್ಮನ್ನು ಮುಡಿಪಾಗಿಟ್ಟ ಎಂ.ಆರ್. ಲಕ್ಷಮ್ಮನವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ ಹೋರಾಟದಲ್ಲಿ ಮಹಿಳೆಯರ ಸಂಘಟನೆಯನ್ನು ಮಾಡಿದರು. ಮೈಸೂರು ಸಂಸ್ಥಾನದಲ್ಲಿ ನಡೆದ ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಭಾಗವಹಿಸಿ ೩೩ ದಿನಗಳ ಕಾಲ ಕಾರಾಗೃಹ ವಾಸವನ್ನು ಅನುಭವಿಸಿದರು. ತಮ್ಮ

* ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ.

ಸೆರೆಮನೆ ದಿನಚರಿಯಲ್ಲಿ ಸೆರೆಮನೆ ವಾಸದ ಬಗ್ಗೆ ದಾಖಲಿಸಿದ್ದು ಸೆರೆಮನೆಯಲ್ಲಿದ್ದಾಗಲೂ ತಮ್ಮ ಸಮಾಜಸೇವೆಯ ಕಾರ್ಯವನ್ನು ಕೈಬಿಡಲಿಲ್ಲ ಜೈಲಿನಲ್ಲಿದ್ದ ಅನಕ್ಷರಸ್ಥ ಮಹಿಳೆಯರಿಗೆ ಅಕ್ಷರಗಳನ್ನು ಕಲಿಸುವ ಹಾಗೂ ಸರಳ ವಿಧಾನದಲ್ಲಿ ಲೆಕ್ಕಾಚಾರಗಳನ್ನು ಕಲಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು. ಸೆರೆಮನೆಗೆ ಕರೆದೊಯ್ಯುವ ಸಂದರ್ಭದಲ್ಲಿ ಲಕ್ಷಮ್ಮನವರಿಗೆ ಪೊಲೀಸ್ ಅಧಿಕಾರಿಯೊಬ್ಬರು "ಚಳುವಳಿಯ ಪ್ರಮುಖ ಮುಂದಾಳುಗಳನ್ನು ಸೆರೆಮನೆಗೆ ಹಾಕಿದರೆ ನಿಮ್ಮ ಚಳುವಳಿ ಕೊನೆಗೊಳ್ಳುತ್ತದೆ". ಎಂದು ಹೇಳಿದಾಗ ಲಕ್ಷಮ್ಮನವರು "ಹೆಣ್ಣು ಮಕ್ಕಳು ಹೇಡಿಗಳೇನಲ್ಲ, ದೇಶಭಿಮಾನಿಗಳು ಸಾವಿರಾರು ಜನ ಇದ್ದಾರೆ. ಚಳುವಳಿ ನಡೆಯುತ್ತದೆ". ಎಂದು ಉತ್ತರಿಸಿದರು, ಶ್ರೀರಾಮಚಂದ್ರನ ಕಥೆಯ ಮೂಲಕ ಲೆಕ್ಕವನ್ನು ಕಥೆಯ ರೂಪದಲ್ಲಿ ಹೇಳಿಕೊಟ್ಟ ಎಂ.ಆರ್. ಲಕ್ಷಮ್ಮನವರು ಜೈಲಿನಲ್ಲಿ ಕಾವಲುಗಾರ್ತಿಯಾಗಿದ್ದ ದೇವಮ್ಮನಿಗೆ ಹೆಸರನ್ನು ಬರೆಯಲು ಕಲಿಸಿದರು. ಇಂದು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದರೆ ನಾಳೆ ಮೂಲಭೂತ ಹಕ್ಕುಗಳಿಗಾಗಿ ಹೋರಾಟ ನಡೆಯುತ್ತದೆ. ಹೋರಾಟ ನಿರಂತರವಾದುದು ಎಂದ ಎಂ.ಆರ್. ಲಕ್ಷಮ್ಮನವರು ಸೆರೆಮನೆಯಲ್ಲಿರುವ ಮಹಿಳೆಯರಿಗೆ "ನಾಳೆ ಮಹಿಳೆಯರು ತಮ್ಮ ಹಕ್ಕುಗಳಿಗೋಸ್ಕರ ಜಾಥಾ ಹೋರಾಟ ಮಾಡಬೇಕಾಗಬಹುದು. ಆಗ ನಿಮ್ಮ ಗಂಡಂದಿರೇ ನಿಮ್ಮನ್ನು ತಡೆಯಬಹುದು ಬರ್ತೀರಾ? ಎಂದು ಕೇಳಿದಾಗ ಮಹಿಳೆಯರು ಎಂ.ಆರ್. ಲಕ್ಷಮ್ಮ ನವರಿಗೆ ಬೆಂಬಲ ನೀಡಿದ ಬಗ್ಗೆ ತಮ್ಮ ಸೆರೆಮನೆ ದಿನಚರಿಯಲ್ಲಿ ಉಲ್ಲೇಖಿಸಿದ್ದಾರೆ.

ಸ್ವಾತಂತ್ರ್ಯ ನಂತರ ೧೯೫೨ರಿಂದ ೧೯೭೦ರವರೆಗೆ ೧೮ ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿದ ಎಂ.ಆರ್. ಲಕ್ಷಮ್ಮನವರು ಮಹಿಳೆಯರ ಅಭಿವೃದ್ಧಿಗಾಗಿ ಮತ್ತು ಮಹಿಳೆಯರಿಗೆ ಉತ್ತಮ ಸ್ಥಾನಮಾನ ಕಲ್ಪಿಸಲು ಇನ್ನೂ ಹೆಚ್ಚಿನ ಸದಾವಕಾಶ ದೊರೆಯಿತು. ವಿಧಾನಪರಿಷತ್ತಿನ ಚರ್ಚೆಗಳಲ್ಲಿ ಮಹಿಳೆಯರ ಬಗ್ಗೆ ಮಾತನಾಡುತ್ತ ಎಂ.ಆರ್. ಲಕ್ಷಮ್ಮನವರು ಮಹಿಳಾ ಕಾರ್ಮಿಕರಿಗೆ ದೊರೆಯಬೇಕಾದ ಸೌಲಭ್ಯಗಳ ಬಗ್ಗೆ ಮಾತನಾಡಿದರು. ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ. ವಿಶೇಷವಾದ ಆದ್ಯತೆಯನ್ನು ನೀಡಿದರು ತಾಯಿಯೇ ಮೊದಲ ಗುರುವಾಗಿದ್ದರಿಂದ ಮತ್ತು ಅಕ್ಷರ ಕಲಿತ ಹೆಣ್ಣು ಸಂಸಾರದ ಕಣ್ಣಿದ್ದಂತೆ. ಆದುದರಿಂದ ಸ್ತ್ರೀಯರಿಗೆ ವಿದ್ಯಾಭ್ಯಾಸ ಅತ್ಯಗತ್ಯ. ಒಬ್ಬ ಮಹಿಳೆ ವಿದ್ಯಾವಂತೆಯಾದರೇ ಮುಂದಿನ ಪೀಳಿಗೆಗೂ ಕೂಡ ಆಕೆ ವಿದ್ಯಾಭ್ಯಾಸ ನೀಡಬಲ್ಲಳು. ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳು ಅರ್ಧದಲ್ಲಿಯೇ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುತ್ತಾರೆ. ಅವರಿಗೆ ವಯಸ್ಕರ ಶಿಕ್ಷಣದ ಮೂಲಕ ಶಿಕ್ಷಣ ಮುಂದುವರೆಸಲು ಅವಕಾಶ ನೀಡಬೇಕು ಸ್ವಭಾವತ ಹೆಣ್ಣುಮಕ್ಕಳು ಬುದ್ಧಿವಂತರಾಗಿದ್ದು ಸೂಕ್ಷ್ಮ ಬುದ್ಧಿವುಳ್ಳವರಾಗಿರುತ್ತಾರೆ. ಅವರ ಬುದ್ಧಿ ಬಹುಬೇಗ ವಿಕಸಿತವಾಗುತ್ತದೆ ಆದರೆ ಹೆಣ್ಣುಮಕ್ಕಳಿಗೆ ಪ್ರಾತಿನಿಧ್ಯವನ್ನು ನೀಡದಿರವ ಕಾರಣ ಸಮಾಜದ ಮುಖ್ಯ ವಾಹಿನಗೆ ಹೆಣ್ಣು ಮಕ್ಕಳು ಮುಂದೆ ಬರುತ್ತಿಲ್ಲ. ಹೆಣ್ಣು ಮಕ್ಕಳ ಬಗ್ಗೆ ಗೌರವಯುತವಾಗಿ ನಡೆದುಕೊಳ್ಳಬೇಕು ಮತ್ತು ಹೆಣ್ಣು ಮಕ್ಕಳ ಬಗ್ಗೆ ಹಗರುವಾಗಿ ಮಾತನಾಡಬಾರದು ಎಂದು ಸ್ತ್ರೀ ಶೋಷಣೆಯ ವಿರುದ್ಧ ಅಂದಿನ ಕಾಲದಲ್ಲಿಯೇ ಧ್ವನಿ ಎತ್ತಿದವರು ಎಂ.ಆರ್. ಲಕ್ಷಮ್ಮನವರು. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಮಾಜವು ಉತ್ತೇಜನ ನೀಡಬೇಕು ಪೂರ್ವ ಪ್ರಾಥಮಿಕ ಶಾಲೆಗಳನ್ನು ಮಹಿಳಾ ಸಮಾಜದ ಮೇಲ್ವಿಚಾರಣೆ ನೀಡಿದರೆ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯ ಜೊತೆಗೆ ಸ್ತ್ರೀ ಸಮಾಜದ ಏಳಿಗೆಗೆ ಕಾರಣವಾಗುತ್ತದೆ. ಹೆಣ್ಣು ಮಕ್ಕಳಿಗೆ ಆರ್ಥಿಕ ಸಂಕಷ್ಟವಿದ್ದು ಶುಲ್ಕ ಕಟ್ಟಲು ತೊಂದರೆಯಿದ್ದು ಹೆಣ್ಣು ಮಕ್ಕಳಿಗೆ ಸರ್ಕಾರವು ಉಚಿತ ಶಿಕ್ಷಣ ನೀಡುವ ಬಗ್ಗೆ ಗಮನ ಕೊಡಬೇಕು. ಹೆಣ್ಣು ಮಕ್ಕಳಿಗೆ ಗೃಹ ವಿಜ್ಞಾನದಂತಹ ವಿಷಯದ ಬಗ್ಗೆ ಹೆಚ್ಚಿನ ಶಿಕ್ಷಣ ನೀಡಬೇಕು ಜೊತೆಗೆ ಕರಕುಶಲ ವಸ್ತುಗಳ ತಯಾರಿಕೆಯ ಬಗ್ಗೆ ಶಿಕ್ಷಣವನ್ನು ನೀಡಬೇಕು. ಶಾಲಾ ಪಠ್ಯ ಪುಸ್ತಕಗಳ ಜೊತೆಯಲ್ಲಿ ಸಾಮಾನ್ಯ ಜ್ಞಾನದ ಅರಿವನ್ನು ಮೂಡಿಸುವ ಶಿಕ್ಷಣಕ್ಕೆ ಆದ್ಯತೆ ನೀಡಬೇಕು ಪ್ರಾಥಮಿಕ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರು ಇರಬೇಕು ಜೊತೆಗೆ ಶಾಲಾ ತನಿಖಾ ಅಧಿಕಾರಿಗಳು ಕೂಡ ಮಹಿಳೆಯರೆ ಇರಬೇಕು. ಹೆಣ್ಣು ಮಕ್ಕಳು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದು ಅವರ ಸಾಮಾರ್ಥ್ಯಕ್ಕನುಸಾರವಾಗಿ ಕೆಲಸವನ್ನು ನೀಡಬೇಕು ಹೆಣ್ಣು ಮಕ್ಕಳು ಪುರುಷರಿಗಿಂತ ಯಾವ ವಿಧದಲ್ಲಿಯೂ ಹಿಂದುಳಿ ದಿಲ್ಲ ಎಂದು ಮಹಿಳೆಯರ ಬಗ್ಗೆ ತಮ್ಮ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ ಎಂಬತ್ತರ ದಶಕದಲ್ಲಿ ಸ್ತ್ರೀವಾದ ಭಾರತದಲ್ಲಿ ಪ್ರಾರಂಭವಾದರು ಸ್ವಾತಂತ್ರ್ಯ ಪೂರ್ವದಲ್ಲಿಯೇ. ಸ್ತ್ರೀವಾದವನ್ನು ಪ್ರತಿಪಾದಿಸಿದವರು ಎಂ.ಆರ್. ಲಕ್ಷಮ್ಮನವರು.

ಎಂ.ಆರ್. ಲಕ್ಷಮ್ಮನವರು ೧೯೫೦ರಲ್ಲಿ "ಸೋದರಿ" ಎಂಬ ಪತ್ರಿಕೆಯನ್ನು ಹೊರಡಿಸಿದರು ಕನ್ನಡಲ್ಲಿ ಮಹಿಳೆಯರಿಗಾಗಿಯೇ ಪತ್ರಿಕೆಗಳನ್ನು ಪ್ರಾರಂಭಿಸಿದ್ದು ಆರ್. ಕಲ್ಯಾಣಮ್ಮ ಎಂಬುವರು ಅವರು "ಸರಸ್ವತಿ" ಎಂಬ ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಕಾಲಾನಂತರದಲ್ಲಿ ಅದು ನಿಂತುಹೋಗಿತ್ತು. ಎಂ.ಆರ್. ಲಕ್ಷಮ್ಮನವರು "ಸೋದರಿ" ಪತ್ರಿಕೆಯನ್ನು ಸಂಪಾದಿಸುವ ಕಾರ್ಯವಲ್ಲದೆ ಮುದ್ರಿಸಿ ಪ್ರಕಾಶಿಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡು ಬೆಂಗಳೂರಿನ ನರಸಿಂಹರಾಜ

ಕಾಲೋನಿಯ ಅವರ ಬಾಡಿಗೆ ಮನೆಯಲ್ಲಿದ್ದ ಸೋದರಿ ಕಾರ್ಯಾಲಯದಿಂದ ಪತ್ರಿಕೆ ಹೊರಡುತ್ತಿದ್ದು ಕುಟುಂಬದ ಸದಸ್ಯರೆ ಪತ್ರಿಕೆಯ ಕೆಲಸಗಾರರಾಗಿ ಕಾರ್ಯನಿರ್ವಹಿಸುತ್ತಿದ್ದರು. "ಸೋದರಿ" ಪತ್ರಿಕೆಯ ಬಿಡಿ ಸಂಚಿಕೆಯ ಮುಖಬೆಲೆ ಎರಡು ಆಣೆಯಾಗಿತ್ತು. "ಸೋದರಿ" ಪತ್ರಿಕೆಯು ಅಂದಿನ ಕಾಲದಲ್ಲಿ ಮೂರರಿಂದ ನಾಲ್ಕು ಸಾವಿರ ಪತ್ರಿಕೆಗಳು ಮಾರಾಟವಾಗುತ್ತಿದ್ದು ಕರ್ನಾಟಕದ ಹೊರ ರಾಜ್ಯಗಳಿಗೂ ಪತ್ರಿಕೆ ರವಾನೆಯಾಗುತ್ತಿತ್ತು ಮೈಸೂರು ಸರ್ಕಾರದವರು ತಮ್ಮ ಆದೇಶ ಸಂಖ್ಯೆ TBC 9/49-50 ಪತ್ರದ ಪ್ರಕಾರ ಹೆಣ್ಣುಮಕ್ಕಳ ಎಲ್ಲಾ ಮಾಧ್ಯಮಿಕ ಮತ್ತು ಹೈಸ್ಕೂಲ್‌ಗಳಿಗೆ ಈ ಪತ್ರಿಕೆಯನ್ನು ಮಂಜೂರು ಮಾಡಿದ್ದರು. ಹಾಗೆಯೇ ಆದೇಶ ಸಂಖ್ಯೆ ಆರ್. ೭ ಸಿ ೯೯/೫೦-೫೧ ಪ್ರಕಾರ ಹಳ್ಳಿ ಪಂಚಾಯಿತಿಯವರು ಕೊಳ್ಳಬಹುದೆಂದು ಮಂಜೂರು ಮಾಡಿದ್ದರು ಸೋದರಿ ಪತ್ರಿಕೆಯ ಕಥೆ,ಕವನ, ವೈಚಾರಿಕ, ಲೇಖನ, ವಿಮರ್ಶೆ, ವಿನೋದ, ವ್ಯಕ್ತಿತ್ವ ಪರಿಚಯ, ಪ್ರಸಿದ್ಧ ವ್ಯಕ್ತಿಗಳ ಸಾಧನೆಗಳು ಮಹಿಳಾ ಸಮಾಜದ ಹಾಗೂ ಮಹಿಳಾ ಸಂಘಗಳ ಚಟುವಟಿಕೆಗಳ ವರದಿಗಳನ್ನು ಒಳಗೊಂಡಿತ್ತು.

ಎಂ.ಆರ್. ಲಕ್ಷಮ್ಮನವರು ತಮ್ಮ ಪ್ರಥಮ ಸಂಚಿಕೆಯಲ್ಲಿ ಸಮಾಜದ ನ್ಯೂನತೆಗಳು ಮತ್ತು ಕೊರತೆಗಳು ಇವುಗಳನ್ನು ನಿವಾರಿಸುವಲ್ಲಿ ಮಹಿಳಾ ಪತ್ರಿಕೆಗಳು ವಹಿಸಬೇಕಾದ ಪಾತ್ರ ಮುಂತಾದ ವಿಷಯಗಳ ವಿವರವನ್ನು ಬರೆದಿದ್ದಾರೆ. ದೇಶದ ನಾಡಿನ ಸಾಮಾಜಿಕ ರಾಜಕೀಯ ಪ್ರಸಕ್ತ ಪರಿಸ್ಥಿತಿಗಳ ಬಗ್ಗೆ ಅವುಗಳ ಸುಧಾರಣೆಗಳ ಬಗ್ಗೆ ಚಿಂತಿಸುತ್ತಿದ್ದ ಎಂ. ಆರ್. ಲಕ್ಷಮ್ಮನವರು ತಮ್ಮ ಲೇಖನಗಳಲ್ಲಿ ವ್ಯಕ್ತಪಡಿಸುತ್ತಿದ್ದರು. ಸೋದರಿ ಪತ್ರಿಕೆ ೬ ವರ್ಷಗಳ ಕಾಲ ವಾರಪತ್ರಿಕೆಯಾಗಿ ನಂತರ ಕಾರ್ಯಭಾರದ ಒತ್ತಡದಿಂದ ೧೯೫೬ರಲ್ಲಿ ಮಾಸ ಪತ್ರಿಕೆಯಾಗಿ ಬದಲಾಯಿತು. ೧೯೫೦ರಲ್ಲಿ ಪ್ರಾರಂಭವಾದ ಸೋದರಿ ಪತ್ರಿಕೆ ೧೯೫೭ರವರೆಗೆ ಒಟ್ಟು ೮ ವರ್ಷಗಳ ಕಾಲ ಪತ್ರಿಕೆ ಪ್ರಕಟವಾಯಿತು. ನಂತರ ನಿರ್ವಹಣೆ ಮತ್ತು ಕಾರ್ಯಭಾರದ ಒತ್ತಡದಿಂದ ಪತ್ರಿಕೆಯನ್ನು ನಿಲ್ಲಿಸಲಾಯಿತು. ಮಹಿಳೆಯರ ಸಮ್ಮೇಳನಗಳ ಬಗ್ಗೆ, ಮತ ಚಲಾಯಿಸುವ ಬಗ್ಗೆ, ಕರ್ನಾಟಕದ ಏಕೀಕರಣದ ಬಗ್ಗೆ ಇನ್ನೂ ಅನೇಕ ವಿಷಯಗಳ ಬಗ್ಗೆ ಮಾಹಿತಿಯನ್ನು ನೀಡುತ್ತಿದ್ದ ಪತ್ರಿಕೆಯನ್ನು ಅನಿವಾರ್ಯ ಕಾರಣಗಳಿಂದ ನಿಲ್ಲಿಸಿದರೂ ಎಂ.ಆರ್. ಲಕ್ಷಮ್ಮನವರ ಸಾಹಿತ್ಯಾಸಕ್ತಿ ಕಡಿಮೆಯಾಗಲಿಲ್ಲ ಆರುದಶಕಗಳ ಹಿಂದೆ ಪುರುಷ ಪ್ರಧಾನವಾಗಿದ್ದ ಸಮಾಜದಲ್ಲಿ ಪುರುಷರಿಗೂ ಕೂಡ ನಿರ್ವಹಿಸಲು ಕಷ್ಟಕರವಾದ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಕಾಲಿಟ್ಟು ಸೋದರಿಯನ್ನು ಯಶಸ್ವಿಯಾಗಿ ನಡೆಸಿದ ಎಂ.ಆರ್. ಲಕ್ಷಮ್ಮನವರ ಸಾಧನೆ ನಿಜಕ್ಕೂ ಆಚ್ಚರಿಯನ್ನು ಮೂಡಿಸುತ್ತದೆ.

ಎಂ.ಆರ್. ಲಕ್ಷಮ್ಮನವರು ಅನೇಕ ಮಹಿಳಾ ಮಂಡಳಿಗಳನ್ನು ಸ್ಥಾಪಿಸಿದರು. ಮೈಸೂರು ಸಂಸ್ಥಾನದಲ್ಲಿ ಮಹಿಳಾ ಸಮ್ಮೇಳನಗಳು ನಡೆಯುತ್ತಿದ್ದು ಅನೇಕ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದರು. ಮಹಿಳೆಯ ಕಲ್ಯಾಣನಿಧಿಗೆ ಅನೇಕರು ಧನಸಹಾಯ ಮಾಡುತ್ತಿದ್ದರು. ಮಹಿಳಾ ಸಮ್ಮೇಳನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಮಹಿಳೆಯನ್ನು ಸಂಘಟಿಸುವಲ್ಲಿ ಮತ್ತು ಸಮ್ಮೇಳನಗಳು ಯಶಸ್ವಿಯಾಗಿ ನಡೆಯುವಲ್ಲಿ ಎಂ.ಆರ್. ಲಕ್ಷಮ್ಮನವರ ಪಾತ್ರ ಮಹತ್ವವಾದದ್ದು. ಮಹಿಳೆಯರ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದ ಎಂ.ಆರ್. ಲಕ್ಷಮ್ಮನವರು ಮಹಿಳೆಯರ ಅಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದರು. ವಿಧಾನ ಪರಿಷತ್ತಿನ ಸದಸ್ಯರಾಗಿದ್ದಾಗ, ೧೯೫೪ರಲ್ಲಿ ಅಮೇರಿಕಕ್ಕೆ ಭೇಟಿ ನೀಡಿ, ಅಲ್ಲಿನ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡಿದರು. ಅಮೇರಿಕಾದಲ್ಲಿ ನಾಲ್ಕುವರೆ ತಿಂಗಳ ಕಾಲ ತಂಗಿದ್ದು, ಹಿಂತಿರುಗಿದ ಮೇಲೆ ಎಂ.ಆರ್. ಲಕ್ಷಮ್ಮನವರು ಮೈಸೂರು ರಾಜ್ಯದ ಸಮಾಜ ಕಲ್ಯಾಣ ಸಲಹಾ ಸಮಿತಿಯ ಪ್ರಥಮ ಅಧ್ಯಕ್ಷೆಯಾಗಿ ನೇಮಿಸಲ್ಪಟ್ಟರು.

ಭಾರತಾದ್ಯಂತ ಮಹಿಳೆಯರಿಗಾಗಿ ಮತ್ತು ಮಕ್ಕಳಿಗಾಗಿ ಶ್ರಮಿಸಲು ಶ್ರೀಮತಿ ದುರ್ಗಾಬಾಯಿ ದೇಶಮುಖರವರ ನೇತೃತ್ವದಲ್ಲಿ ಕೇಂದ್ರ ಸಮಾಜ ಕಲ್ಯಾಣ ಯೋಜನೆ ಸಂಸ್ಥೆ ಸ್ಥಾಪಿತವಾಯಿತು. ೧೯೫೪ರ ಮಾರ್ಚ್ ತಿಂಗಳಲ್ಲಿ ಪ್ರಾರಂಭವಾದ ಸಮಾಜ ಕಲ್ಯಾಣ ಯೋಜನ ಸಂಸ್ಥೆ ಭಾರತಾದ್ಯಂತ ೨೭ ಸಂಸ್ಥಾನಗಳಲ್ಲಿ ರಾಜ್ಯ ಸಮಾಜ ಕಲ್ಯಾಣ ಸಂಸ್ಥೆ ಪ್ರಾರಂಭಿಸಿತು. ಪ್ರಾಂತ್ಯದಲ್ಲಿರುವ ಸಮಾಜ ಕಲ್ಯಾಣ ಸಂಸ್ಥೆಯ ಖರ್ಚು ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಮನಾಗಿ ಭರಿಸಬೇಕು. ಮೈಸೂರು ರಾಜ್ಯವನ್ನು "ಬಿ" ಶ್ರೇಣಿಯ ಪ್ರಾಂತ್ಯವೆಂದು ನಿರ್ಧರಿಸಿದ್ದು, ೧೦ ಯೋಜನಾ ಕೇಂದ್ರಗಳನ್ನು ಇಲ್ಲಿ ಸ್ಥಾಪಿಸಲಾಯಿತು. ಮೈಸೂರು ರಾಜ್ಯದಲ್ಲಿ ೧೯೫೪ ಅಕ್ಟೋಬರ್ ೨೧ರಂದು ರಚನೆಯಾದ ರಾಜ್ಯ ಸಮಾಜ ಕಲ್ಯಾಣ ಸಲಹಾ ಸಮಿತಿಯು ಡಿಸೆಂಬರ್‌ನಲ್ಲಿ ತನ್ನ ಕಾರ್ಯಾರಂಭ ಮಾಡಿದ್ದು ಅದರ ಪ್ರಥಮ ಅಧ್ಯಕ್ಷೆಯಾಗಿ ಎಂ.ಆರ್. ಲಕ್ಷಮ್ಮನವರು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ಸಮಾಜ ಸೇವಾ ಕಾರ್ಯದಲ್ಲಿ ನಿರತವಾಗಿರುವ ಸ್ವಯಂಪ್ರೇರಿತ ಕಲ್ಯಾಣ ಸಂಸ್ಥೆಗಳನ್ನು ಗುರುತಿಸಿ ಅವುಗಳ ಕಾರ್ಯಕ್ರಮಗಳನ್ನು ರೂಪಿಸಿ ಅದನ್ನು ಸಕಾರಗೊಳಿಸುವ ಜವಾಬ್ದಾರಿಯನ್ನು ಲಕ್ಷಮ್ಮನವರು ತೆಗೆದುಕೊಂಡರು.

ಎಂ.ಆರ್. ಲಕ್ಷಮ್ಮನವರು ಕರ್ನಾಟಕ ಪಾನಸಂಯಮ ಮಂಡಳಿಯ ಪ್ರಥಮ ಅಧ್ಯಕ್ಷೆಯಾಗಿ ಪಾನ ವ್ಯಸನೆಗಳಿಂದ ಆಗುವ ಅನಾಹುತಗಳ ಬಗ್ಗೆ ಜನರಿಗೆ ಅರಿವು ಮೂಡಿಸಲು

ಶ್ರಮಿಸಿದರು. ಮೈಸೂರು ಸಂಸ್ಥಾನದ ಮಕ್ಕಳ ಅಭಿವೃದ್ಧಿ ಸಮಿತಿಯ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದ ಎಂ.ಆರ್. ಲಕ್ಷಮ್ಮ ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸಿದರು. ಕೇಂದ್ರ ಹೆಣ್ಣುಮಕ್ಕಳ ಶಿಕ್ಷಣ ಮಂಡಳಿಯಲ್ಲಿ ೨ ವರ್ಷಗಳ ಕಾಲ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ರಾಜ್ಯ ಹೆಣ್ಣು ಮಕ್ಕಳ ಗೈಡ್ ಸಂಸ್ಥೆಯ ರಾಜ್ಯ ಕಮಿಷನರ್ ಆಗಿ ೩ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದು, ಕೇಂದ್ರ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರೂ ತಮ್ಮ ಜೀವನದ ಉದ್ದಕ್ಕೂ ಸಮಾಜಮುಖಿ ಯಾಗಿ ಕ್ರಿಯಾಶೀಲರಾಗಿ ಚಿಂತನೆಯನ್ನು ಮಾಡಿದ ಎಂ.ಆರ್. ಲಕ್ಷಮ್ಮನವರು ಅನೇಕ ಜವಾಬ್ದಾರಿಗಳ ನಡುವೆಯೂ ಏಳು ಮಕ್ಕಳ ತಾಯಿಯಾಗಿ ಗೃಹಿಣಿಯಾಗಿ ಕೂಡ ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿದ್ದು, ೧೯೮೪ ಜೂನ್ ೭ರಂದು ಇಹಲೋಕವನ್ನು ತ್ಯಜಿಸಿದರು.

ಎಂ.ಆರ್. ಲಕ್ಷಮ್ಮನವರು ಬಹುಮುಖ ಪ್ರತಿಭಾ ವ್ಯಕ್ತಿತ್ವವನ್ನು ಹೊಂದಿದ್ದು ಅಪರೂಪದ ಮಹಿಳಾ ಸಮಾಜ ಸೇವಕಿಯಾಗಿ ಸ್ವಾತಂತ್ರ್ಯ ಹೋರಾಟಗಾರ್ತಿಯಾಗಿ ರಾಜಕಾರಣಿಯಾಗಿ ಪತ್ರಿಕೋದ್ಯಮಿಯಾಗಿ ಸಮಾಜ ಸುಧಾರಕಿಯಾಗಿ ಅವರು ನಿರ್ವಹಿಸಿದ ಪಾತ್ರ ವಿಭಿನ್ನವಾಗಿದೆ. ಮಹಿಳೆಯರು ಅಕ್ಷರಸ್ಥರಾಗಿ ವಿದ್ಯಾವಂತರಾಗಿ ದೇಶ ಸೇವೆಯಲ್ಲಿ ತೊಡಗಬೇಕೆಂಬುದು ಇವರ ಅಕಾಂಕ್ಷೆಯಾಗಿತ್ತು. ಮೈಸೂರು ಮತ್ತು ಬೆಂಗಳೂರಿನಲ್ಲಿ ಮಹಿಳಾ ಮಂಡಳಿಗಳನ್ನು ಸ್ಥಾಪನೆ ಮಾಡಿ ರಚನಾತ್ಮಕ ಕಾರ್ಯಗಳನ್ನು ಕೈಗೊಂಡು ಮಹಿಳೆಯರ ಏಳಿಗೆಗಾಗಿ ಶ್ರಮಿಸಿದರು. ಬೆಂಗಳೂರಿನ ಎನ್.ಆರ್. ಕಾಲೋನಿಯ ಮಹಿಳಾ ಮಂಡಳಿ ಶಿಕ್ಷಣ ಸಂಸ್ಥೆ ಮಹಿಳೆಯರಿಂದಲೇ ಪ್ರಾರಂಭವಾಗಿ ಇಂದಿಗೂ ಸಾವಿರಾರು ಮಕ್ಕಳಿಗೆ ಶಿಕ್ಷಣ ನೀಡಲು ಕಾರಣಕರ್ತರಾದವರು ಎಂ.ಆರ್. ಲಕ್ಷಮ್ಮನವರು. ೧೯೫೪ರಲ್ಲಿ ಅಮೇರಿಕಾಕ್ಕೆ ಭೇಟಿ ನೀಡಿದ್ದು ಮಾತ್ರವಲ್ಲ ಯೂರೋಪ್ ಖಂಡದ ಅನೇಕ ದೇಶಗಳನ್ನು ಸುತ್ತಿ ಬಂದು ಅಲ್ಲಿನ ಮಹಿಳೆಯರ ಸ್ಥಾನಮಾನ ಹಾಗೂ ಸ್ಥಿತಿಗತಿಗಳನ್ನು ಗಮನಿಸಿ, ಭಾರತದಲ್ಲಿ ಕೂಡ ಮಹಿಳೆಯರು ಉತ್ತಮ ಸ್ಥಾನಮಾನ ಗಳಿಸಬೇಕೆಂದು ಹಂಬಲ ಹೊಂದಿದ ಎಂ.ಆರ್. ಲಕ್ಷಮ್ಮನವರು ಅದಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು.

ಅಲಕ್ಷಿತ ಸಮುದಾಯವೆಂದೇ ಪರಿಗಣಿತವಾದ ಸ್ತ್ರೀಯರ ಬದುಕು ಹೋರಾಟಗಳ ಬಗ್ಗೆ ದೇಶಸೇವೆಗೋಸ್ಕರ ತಮ್ಮ ಬುದುಕನ್ನೇ ಮೀಸಲಾಗಿಟ್ಟ ಸ್ತ್ರೀವಾದಿ ಚಿಂತನೆಗಳನ್ನು ಅಂದಿನ ಕಾಲದಲ್ಲಿ ವ್ಯಕ್ತಪಡಿಸಿದ್ದ ಎಂ.ಆರ್. ಲಕ್ಷಮ್ಮನವರು ನಮಗೆಲ್ಲಾ ಅನುಕರಣೀಯರಾಗಿದ್ದಾರೆ.



## ಆಧಾರಸೂಚಿ


೧. ಎಂ.ಆರ್. ಲಕ್ಷಮ್ಮ, ಸ್ವವಿವರ ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು.

೨. ಎಂ.ಆರ್. ಲಕ್ಷಮ್ಮ, ಸೆರೆಮನೆ ದಿನಚರಿ (ಅಪ್ರಕಟಿತ), ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು.

೩. ಎಂ.ಆರ್. ಲಕ್ಷಮ್ಮ, ಸೋದರಿ ಪತ್ರಿಕೆಯ ಸಂಚಿಕೆಗಳು (೧೯೫೦ರಿಂದ ೧೯೫೭) ಸೋದರಿ, ಕಾರ್ಯಾಲಯ, ಬೆಂಗಳೂರು.

೪. ಎಂ.ಆರ್. ಲಕ್ಷಮ್ಮ (ಸಂ), ಬೆಳಕು ಪತ್ರಿಕೆಯ ಸಂಚಿಕೆಗಳು, ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ವಾರ ಪತ್ರಿಕೆ, ಮೈಸೂರು, ೧೯೪೫.

೫. ಎಂ.ಆರ್. ಲಕ್ಷಮ್ಮ, ಬಳಕೆದಾರ ಕರ್ನಾಟಕ ಗ್ರಾಹಕರ ವೇದಿಕೆ, ಬೆಂಗಳೂರು, ೧೯೭೪.

೬ ಸುರೇಶ್ ಮೂನ, ಬೆಂಗಳೂರು ನಗರ ನಿರ್ಮಾಪಕರು, ಭಾಗ–೨, ಸಮೃದ್ಧ ಸಾಹಿತ್ಯ, ಬೆಂಗಳೂರು, ೨೦೧೨.

೭. ನಂ. ನಾಗಲಕ್ಷ್ಮಿ, ಕನ್ನಡ ಪತ್ರಿಕಾ ಲೋಕದ ಧೀಮಂತರು, ೮, ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು, ೨೦೦೦.

೮. Proceeding of mysore representative assembly debates, 1945-48.

೯. Mysore legislative council debates 1952-1958, 1958-1964, 1964-1970.



# ಮಂಗಸೂಳಿ ಪವಾರ ದೇಸಾಯಿ (ಧೈರ್ಯಶೀಲರಾವ್)

ಡಾ. ಮಹಾನಂದ.ಎಂ.ಗೊಂದಿ*

ದೇಸಗತಿಗಳು ಹೆಚ್ಚಾಗಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ದೇಸಗತಿಗಳು ಸ್ಥಳಿಯ ಸರಕಾರದ ಪ್ರತಿನಿಧಿಗಳಾಗಿದ್ದರು. ಇವರ ಆಳ್ವಿಕೆಯು ಸಾಮಂತ, ಮಾಂಡಳಿಕ, ಪಾಳೆಗಾರರ ನಂತರ ಬರುವ ಅಧಿಕಾರಿ ವರ್ಗವಾಗಿದೆ. ಇವರು ಆಳಿದ ಪ್ರದೇಶವನ್ನು 'ಪರಗಣ' ಎನ್ನಲಾಗುತ್ತಿತ್ತು. ಪರಗಣವು ಆಡಳಿತ ಸಮುದಾಯದ ಕೇಂದ್ರವಾಗಿದ್ದು, ಇದರ ಆಡಳಿತ ನೋಡಿಕೊಳ್ಳುತ್ತಿದ್ದವನೇ ದೇಸಾಯಿ. ಪರಗಣದಲ್ಲೇ ದೇಸಾಯಿ ವಾಸಿಸುತ್ತಿದ್ದ ತನ್ನ ಹತೋಟಿಯಲ್ಲಿದ್ದ ಪ್ರದೇಶವನ್ನು ಅನೇಕ ಉಪವಿಭಾಗಗಳಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದರು.

ನಾಯಕ ಪಟ್ಟ ಧರಿಸಿದ್ದ ದೇಸಾಯರು ಸಮಾಜದ ಪ್ರಜಾ ಪಾಲಕರಾಗಿ, ದಂಡಿನ ನಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಕ್ರಮೇಣ ರಾಜಕೀಯ ಸ್ಥಿತ್ಯಂತರ ಮತ್ತು ವಿಕೇಂದ್ರಿಕರಣದಂತಹ ನೀತಿಯಿಂದ ಬಹುಸಂಖ್ಯಾತರು ಹುಟ್ಟಿಕೊಂಡರು. ಇವರ ಮುಖ್ಯ ಕರ್ತವ್ಯಗಳೆಂದರೆ ಕಂದಾಯ ವಸೂಲಿ, ಸ್ಥಾನಿಕ ಸಮಸ್ಯೆಗಳನ್ನು ಬಗೆಹರಿಸುವದಾಗಿತ್ತು ಸ್ಥಾನಿಕವಾಗಿ ದೇಸಾಯಿ, ದೇಶ ಮುಖ, ಶ್ರೀಮಂತ, ಸಾಯಕರು ಎಂಬ ಹೆಸರುಗಳಿಂದ ಇಂದಿಗೂ ಚಿರಪರಿಚಿತ ರಾಗಿದ್ದಾರೆ. ಮ್ಯಾಕ ಗ್ರಿಗೋರ ಬೆಳಗಾವಿ ಕಲೆಕ್ಟರ್ ಆಗಿದ್ದಾಗ ಸಿದ್ದಪಡಿಸಿದ ಯಾದಿಯ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿದ್ದ ಇನಾಂ ಹಳ್ಳಿಗಳೂ ಹಾಗೂ ಮನೆತನಗಳ ಸಂಖ್ಯೆ ನೂರಕ್ಕೂ ಮಿಕ್ಕಿತ್ತು. ದೇಸಗತಿಗಳಿಗೆ ಸೀಮಿತಗೊಳಿಸಿಕೊಂಡು ಹೇಳುವು ದಾದರೆ ಬೆಳಗಾವಿ ಜಿಲ್ಲೆಯ ವಿವಿಧ ದೇಸಗತಿಗಳ ಕುರಿತ ವಿವರಗಳು ಅಷ್ಟಿಷ್ಟು ಲಭ್ಯವಿದ್ದು ಅವುಗಳನ್ನು ಸಂಗ್ರಹಿಸಿ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಪ್ರಮುಖ ದೇಸಗತಿಗಳಾದ "ಮಂಗಸೂಳಿ, ಕೊಕಟನೂರ, ದೇಸಾಯಿಗಳ ಆಳ್ವಿಕೆ ಹಾಗೂ ಅವರ ಸಾಧನೆಗಳಿಗೆ ಬಗೆಗೆ ವಿವರಿಸುವ ಪ್ರಯತ್ನ ಮಾಡಲಾಗಿದೆ.

### ಮಂಗಸೂಳಿಯ ಪವಾರ ದೇಸಾಯಿಗಳು

ಈ ಮನೆತನವು ಅಥಣಿ ತಾಲೂಕಿನ ದೇಸಾಯಿಗಳಲ್ಲಿಯೇ ಅತ್ಯಂತ ಪ್ರಮುಖವಾದುದಾಗಿದೆ. ಈ ಮನೆತನದ ಮೂಲ ಪುರುಷ ಸಿದ್ದರಾಜ ಗೌಡ ಎಂದು ಹೇಳಲಾಗಿದ್ದರೂ ಆತನ ಕಾಲವನ್ನು ಗುರುತಿಸಲು ಅಗತ್ಯವಾದ ದಾಖಲೆಗಳು ಇಲ್ಲವಾದರೂ ಹಳವರ ದಾಖಲೆಯಂತೆ ಸಿದ್ದರಾಜ ಗೌಡನ ಮಗ ಕೇದಾರಗೌಡ, ಮೊಮ್ಮಗ ಭೂಪತರಾವ ದೇಸಾಯಿ ಇತನೆ ದೇಸಗತಿ ಸಂಪಾದಿಸಿ ಆಳ್ವಿಕೆ ಆರಂಭಿಸಿದ ಇತನ ತರುವಾಯ ಸುಮಾರು ಒಂಬತ್ತು ಜನ ಆಳ್ವಿಕೆ ನಡೆಸಿದ್ದರು ಎಂದು ಹೇಳಲಾಗಿದೆ. ಆದರೆ ಎಂಟನೆಯ ದೇಸಾಯಿಯವರಾದ ಭೋಜರಾಜ ದೇಸಾಯಿಯವರ ದತ್ತು ಪುತ್ರ ಅಪ್ಪಾಸಾಹೇಬರ ಪುತ್ರ ಸಿದ್ದರಾಜ ದೇಸಾಯಿಯವರ ಕಾಲದಿಂದಲೇ ಮಾಹಿತಿಗಳುಹೆಚ್ಚು ಲಭ್ಯವಾಗಿವೆ.

ಸಿದ್ದರಾಜ ದೇಸಾಯಿಯವರು ಕೃಷ್ಣಾಬಾಯಿ ಮತ್ತು ಹವಸಾಬಾಯಿ ಎಂಬ ಇರ್ವರು ಪತ್ನಿಯರನ್ನು ಹೊಂದಿದ್ದು ಅವರು ಕ್ರಮವಾಗಿ ಮದಭಾವಿಯ ಘೋರ್ಪಡೆ ಹಾಗೂ ಮಹಾರಾಷ್ಟ್ರದ ಸಿಮಧಿಯಾ ಮನೆತನಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ಬಾಬಾಸೋ ಎಂದೇ ಪ್ರಖ್ಯಾತರಾಗಿದ್ದ ಸಿದ್ದರಾಜ ದೇಸಾಯಿಯವರು ಸಾಮಾಜಿಕ ಕಳಕಳಿ ಉಳ್ಳವರಾಗಿದ್ದು ಸಾರ್ವಜನಿಕರ ನೀರಿನ ಬೇಗೆ ಹಿಂಗಿಸಲು ಮಂಗಸೂಳಿಯಲ್ಲಿ ಒಂದು ಬಾವಿಯನ್ನು ತೋಡಿಸಿದ್ದಲ್ಲದೆ. ಮನೆ ದೇವರಾದ ಮಂಗಸೂಳಿ ಮಲ್ಲಯ್ಯನಿಗೆ ಅಪಾರವಾದ ಕಾಣಿಕೆ ನೀಡಿದರೆಂದು ತಿಳಿದುಬರುತ್ತದೆ. ಬೇಟೆಯಾಡುವುದನ್ನೇ ತಮ್ಮ ಹವ್ಯಾಸವನ್ನಾಗಿ ಮಾಡಿಕೊಂಡ ಇವರು ಖಡ್ಗದ ಮೇಲೆ ತಮ್ಮ ಹೆಸರನ್ನು ಅಚ್ಚು ಹಾಕಿಸಿದ್ದರು. ಹೀಗೆ ಜನಾನುರಾಗಿಯಾಗಿ ಬೆಳೆದ ಇವರು ೧೯೪೪ರಲ್ಲಿ ಮಂಗಸೂಳಿಯಲ್ಲೇ ನಿಧನರಾದರು. ನಂತರ ಅಧಿಕಾರಕ್ಕೆ ಬಂಬ ಭೋಜರಾಜ ಪವಾರ ದೇಸಾಯಿಯವರು ಲೆಕ್ಕಪತ್ರ ಇಡುವಲ್ಲಿ ನಿಷ್ಣಾತರಾಗಿದ್ದರಂತೆ ಉದಾರವಾದ ದಾನ ಮತ್ತು ಪರೋಪಕಾರದ ಗುಣಗಳನ್ನಳವಡಿಸಿ ಕೊಂಡಿದ್ದರೆನ್ನುವುದಕ್ಕೆ ತಮ್ಮ ವತನದ ಭೂಮಿಯನ್ನು ಉಳಿಮೆ ಮಾಡಲು ಕೊಟ್ಟ ರೈತರಿಂದ ಹಾವುದೇ ತರಹದ ಗೆರಿಗೆ, ಬಾಡಿಗೆಯನ್ನಾಗಲಿ ತೆಗೆದುಕೊಳ್ಳದೆ ಕೊಟ್ಟಷ್ಟನ್ನೆ ಪಡೆಯುವ ಪ್ರವೃತ್ತಿ ಅದಕ್ಕೆ ಸಾಕ್ಷಿಯಾಗಿದೆ. ಹೀಗೆ ಜನಾನುರಾಗಿದ್ದ ಭೋಜರಾಜರು

* ಎಚ್‌ಒಡಿ, ಇತಿಹಾಸ ವಿಭಾಗ, ಎಸ್‌ಎಸ್‌ಎಂಎಸ್ ಕಾಲೇಜ್, ಅಥಣಿ, ಬೆಳಗಾವಿ ಜಿಲ್ಲೆ.

೧೯೫೦ ಅಕ್ಟೋಬರ ೮ರಂದು ಮಿರಜದ ಮಿಶನ್ ಹಾಸ್ಪಿಟಲ್‌ದೊಳಗೆ ಹೃದಯಾಘಾತದಿಂದ ಮರಣ ಹೊಂದಿದರು. ಮಂಗಸೂಳಿಯ ಪವಾರ ದೇಸಾಯಿಗಳಲ್ಲಿಯೇ ಪ್ರಭಾವಶಾಲಿಗಳಾದ ಸಿದ್ದರಾಜ (ಧೈರ್ಯಶೀಲರಾವ) ರವರು ಭೋಜರಾಜ ಮತ್ತು ಸುಶೀಲಾದೇವಿಯರ ಹಿರಿಯ ಮಗನಾಗಿ ಕ್ರಿ.ಶ. ೧೯೧೯ ಜೂನ್ ೨೦ರಂದು ಕೋಲ್ಲಾಪೂರದಲ್ಲಿ ಜನಿಸಿದರು. ಪ್ರಾಥಮಿಕ ಹಂತದಲ್ಲಿಯೇ ತೀಕ್ಷ್ಣಮತಿಗಳಾದ ಇವರು ವಾಡಿಯಾ ಕಾಲೇಜಿನಲ್ಲಿ ಅಮ್ಮ ಅಧ್ಯಯನವನ್ನು ಪೂರೈಸಿದ ನಂತರ ಪಂಚಗಣಿಯಲ್ಲಿ ಇಂಟರಮಿಡಿಯೆಟ್ ಪರೀಕ್ಷೆಯನ್ನು ಆಂಗ್ಲ ಮಾಧ್ಯಮದಲ್ಲಿ ೧೯೩೮ರಲ್ಲಿ ಉನ್ನತ ದರ್ಜೆಯಲ್ಲಿ ಪಾಸಾದರು. ಬಳಿಕ ಹೆಚ್ಚಿನ ವ್ಯಾಸಂಗಕ್ಕಾಗಿ ೧೯೩೮ರ ಅಗಷ್ಟ ತಿಂಗಳಲ್ಲಿ ಲಂಡನ್‌ಗೆ ತೆರಳಿ ಗೃಹ ವಿಜ್ಞಾನ ಪದವಿಯನ್ನು ಪಡೆಯಲು ಬಯಸಿದರು. ಆದರೆ ಕೌಟುಂಬಿಕ ಸಮಸ್ಯೆಗಳ ಹಿನ್ನಲೆಯಲ್ಲಿ ೧೯೩೯ರಲ್ಲಿ ತಾಯ್ನಾಡಿಗೆ ಮರಳಿದರು. ನಂತರ ತಂದೆಯ ವತನ ಆಡಳಿತದಲ್ಲಿ ನೇರವಾಗಿ ನಿಂತು ಹಲವು ಕಾರ್ಯಗಳನ್ನು ಸ್ವತಃ ತಾವೇ ನೇರವೇರಿಸುತ್ತಿದ್ದರು. ತಂದೆ ಭೋಜರಾಜರು ಘೋರ್ಪಡೆ ಮನೆತನದ ಆಶಾದೇವಿ ಎಂಬುವಳೊಂದಿಗೆ ಮಗನ ವಿವಾಹವನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿ ಅಥಣಿ ದೇವಾಲಯಗಳಿಗೆ ದಾನ ನೀಡಿದರು.

ತಂದೆಯ ಮರಣದ ನಂತರ ೧೯೫೨ರಿಂದ ತಮ್ಮನ್ನು ತಾವು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಕ್ರಿಯವಾಗಿ ತೊಡಗಿಸಿಕೊಂಡು ಅಭಿವೃದ್ದಿಪರ ಕಾರ್ಯಗಳನ್ನು ಕೈಗೊಳ್ಳುತ್ತಾ ನಜ ಮೆಚ್ಚುಗೆಯನ್ನು ಗಳಿಸಿದರು. ಪ್ರಾಮಾಣಿಕತೆ ಮತ್ತು ತತ್ವಶೀಲರಾದ ಇವರು ಅಥಣಿ ನಗರ ಪುರಭೆಯ ಸದಸ್ಯರಾಗಿ ತಾಲೂಕಾ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಮಾಡಿದ ಜನಾನುರಾಗಿ ಕಾರ್ಯಗಳಿಂದ ಜನ ಮನಃ ಗೆದ್ದರು. ಅಥಣಿ ನಗರ ಸಭೆಯ ಹತ್ತಿರ ದೊಡ್ಡದಾದ ಕುಂಬಾರ ಭಾವಿಯನ್ನು ತೋಡಿಸಿ ನೀರು ಸರಬರಾಜಿಗೆ ಅನಕೂಲ ಮಾಡಿದರು. ೧೯೬೨ರಲ್ಲಿ ಕಾಂಗ್ರೇಸ್ ಪಕ್ಷವನ್ನು ಪ್ರತಿನಧಿಸಿ ಅಥಣಿಯ ಶಾಸಕರಾದ ಇವರು ಕೈಕೊಂಡು ಕಾರ್ಯಗಳಿಂದ ಸತತ ಮೂರು ಬಾರಿಗೆ ಆಯ್ಕೆಯಾಗಿ ೧೯೬೮ರಿಂದ ೧೯೭೩ರವರೆಗೆ ಕರ್ನಾಟಕ ಸರಕಾರದ ಕೃಷಿ ಸಚಿವರಾಗಿ ಮಾಡಿದ ಸಾಧನೆಗಳು ಶ್ಲಾಘನೀಯ.

ಮಂಗಸೂಳಿಯಲ್ಲಿ ಬಸವಣ್ಣಕೆರೆ, ಮಲ್ಲಯ್ಯನ ಕೆರೆ ಮತ್ತು ಸಾರ್ವಜನಿಕ ಬಾವಿ ಅಥಣಿಯೊಳಗೆ ಕೃಷ್ಣಾನದಿಯಿಂದ ನೀರು ಸರಬರಾಜು ಮತ್ತು ಸಾರ್ವಜನಿಕ ಬಾವಿ ಹಾಗೂ ಕೆರೆಯ ನಿರ್ಮಾಣ, ಕೋಹಳ್ಳಿಯ ಕೆರೆ (ಬೆಳಗಾವಿಯಲ್ಲಿಯೇ ದೊಡ್ಡದು) ಕೊಕಟನೂರ, ಕಕಮರಿ, ಮೊದಲಾದ ಕೆರೆಗಳ ನಿರ್ಮಾಣ. ಹಲ್ಯಾಳ- ದರೂರ ಬ್ಯಾರೇಜ್, ಅನಂತಪೂರ-ಖೀಲೆಗಾಂವ ಸೇತುವೆ ನಿರ್ಮಿಸಿದ ಖ್ಯಾತಿ ಇವರದು.

## ಆರೋಗ್ಯ ಮತ್ತು ನೈರ್ಮಲ್ಯ

ಕಾಗಚವಾಡ, ಸತ್ತಿ, ಅನಂತಪೂರ, ಕಕಮರಿ, ಸಂಕ್ರಟ್ಟಿ, ಮದಭಾವಿಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆ, ಅಥಣಿ ತಾಲೂಕು ಆರೋಗ್ಯ ಕೇಂದ್ರ ಸ್ಥಾಪನೆ ಅಥಣಿ ಒಳಚರಂಡಿ ವ್ಯವಸ್ಥೆ ನಿರ್ಮಾಣ ಮಾಡುವಲ್ಲಿ ಇವರು ನಿರ್ವಹಿಸಿದ ಮಾಪತ್ರ ಹಿರಿಯದಾಗಿದೆ.

ಅದೇ ರೀತಿ ಶೈಕ್ಷಣಿಕ ಹಾಗೂ ಸಾಮಾಜಿಕ ಧಾರ್ಮಿಕ ರಂಗಗಳಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡುವುದರ ಜೊತೆಗೆ ಸರಕಾರದಿಂದ ಹಲವಾರು ಯೋಜನೆಗಳನ್ನು ಸಿದ್ದಪಡಿಸಿ ಕಾರ್ಯಗತಗೊಳಿಸುವಲ್ಲಿ ವಿಳಂಬವಾದರೆ ತಮ್ಮ ಸ್ವಂತ ಸಂಪನ್ಮೂಲವನ್ನು ಬಳಸಿಯಾದರೂ ಯಶಸ್ವಿಗೊಳಿಸುತ್ತಿದ್ದರು ಎಂಬುದು ಗಮನಾರ್ಹವಾಗಿದೆ. ಇವರ ನಿರಂತರ ಪರಿಶ್ರಮವು ಅಂದಿನ ರಾಜಗಿಯ ದಿಗ್ಗಜರಾದ ಎಸ್. ನಿಜಲಿಂಗಪ್ಪ, ಎಸ್.ಆರ್. ಕಂಠಿ, ಬಿ.ಡಿ. ಜತ್ತಿ, ದೇವರಾಜ ಅರಸ ಮೊದಲಾದವರ ಮೆಚ್ಚುಗೆಗೆ ಪಾತ್ರರಾಗಿದ್ದರು.

## ಪಟ್ಟಾಭಿಷೇಕ

ದೇಸಗತಿಯು ವಂಶಪಾರಂಪರಿಕವಾಗಿ ಮುಂದುವರೆಯುತ್ತಿತ್ತು. ಇವರ ಅಧಿಕಾರ ಗ್ರಹಣ ಸಮಾರಂಬವು ಸಹ ಪ್ರಾಚೀನ ಕಾಲದ ರಾಜಮನೆತನಗಳಂತೆ ವೈಭವದಿಂದ ಜರುಗುತ್ತಿದ್ದು, ಇದನ್ನು ಗದ್ದಿನಿಷನಿ ಎನ್ನುತ್ತಿದ್ದರು. ಪಟ್ಟಾಭಿಷೇಕ ಸಮಯದಲ್ಲಿ ಹಿರಿಯ ಮಗನಿಗೆ ದೇಸಾಯಿಯು ತನ್ನ ತಲೆಯಮೇಲಿನ ಪೇಟಾವನ್ನು ಹಾಕಿ, ಖಡ್ಗ ನೀಡಿ, ಕಡಗ ತೊಡಿಸಿ, ಬಂಗಾರದ ಒಡೆವೆಯನ್ನು ಹಾಕಿ, ಗಾದಿಯ ಮೇಲೆ ಕೂಡಿಸಿ, ಧಾರ್ಮಿಕ ವಿಧಿ ವಿಧಾನಗಳಿಗನುಗುಣವಾಗಿ ಮಂತ್ರ ಘೋಷದೊಂದಿಗೆ ದೇಸಗತಿ ಮುದ್ರೆಯನ್ನು ದಯಪಾಲಿಸುತ್ತಿದ್ದರು. ಈ ಸಂದರ್ಭದಲ್ಲಿ ಆಗಮಿಸಿದ ಕುಲಕರ್ಣಿ, ಗೌಡ, ಶಾನಭೋಗ, ಪಾಟೀಲ, ತಳವಾರ ಮುಂತಾದ ಅಧಿಕಾರಿ ಅವರ್ಗದವರು ಹಾಗೂ ಗ್ರಾಮಸ್ಥರು ಕಾಣಿಕೆ (ಆಹೇರ) ನೀಡುತ್ತಿದ್ದರು. ಹೀಗೆ ಅಧಿಕಾರಕ್ಕೆ ಬಂದ ದೇಸಾಯಿಗಳು ರಾಜರಂತೆ ರಾಜಪ್ರತಿನಿಧಿಗಳಾಗಿ ರಕ್ಷಣೆ, ಶಾಂತಿ, ಸುವ್ಯವಸ್ಥೆ, ನ್ಯಾಯದಾನ, ಕಂದಾಯ ವಸೂಲಿ ಹಾಗೂ ಪ್ರಜಾ ಕಲ್ಯಾಣ ಕಾರ್ಯಗಳನ್ನು ಕೈಗೊಳ್ಳಬೇಕಾಗಿತ್ತು.

## ಸಾಮಾಜಿಕ ಜೀವನ

ಭೋಜರಾಜ ದೇಸಾಯಿಯವರು ತಮ್ಮ ವತನದ ರೈತನ ಮಗಳ ವಿವಾಹವನ್ನು ತಮ್ಮ ಸ್ವಂತ ಖರ್ಚಿನಲ್ಲಿ





ನೆರವೇರಿಸಿದರು ಅದರಂತೆ ಧೈರ್ಯಶೀಲರಾವ್ ಪವಾರ ದೇಸಾಯಿಯವರು ೧೯೫೦ರಲ್ಲಿ ಅಥಣಿಯಲ್ಲಿ ಅನೇಕ ಬಡ ಕುಟುಂಬಗಳ ವಿವಾಹ ನೆರವೇರಿಸಿದರು ಜಾತ್ರೆ ಮತ್ತು ಉತ್ಸವಗಳಿಗೆ ಕಾಣಿಕೆ ಸಲ್ಲಿಸುವುದು ಮನರಂಜನೆ ಕ್ರೀಡೆ, ನಾಟಕಗಳಂತಹ ಚಟುವಟಿಕೆಗಳಿಗೆ ಪ್ರೋತ್ಸಾಹಧನ ನೀಡುತ್ತಿದ್ದರು. ಕಂದಾಯ ಮತ್ತು ಆರ್ಥಿಕ ವ್ಯವಹಾರಗಳ ನಿರ್ವಹಣೆಗಾಗಿ ಕೊತ್ವಾಲ ಮತ್ತು ಕುಲಕರ್ಣಿಗಳ ನೇಮಕ ಮಾಡುತ್ತಿದ್ದರು. ನೆರೆಯ ಮಹಾರಾಷ್ಟ್ರ ರಾಜ್ಯದ ಸಾಂಗ್ಲಿ ಮಿರಜ, ಸೊಲ್ಲಾಪೂರ ಮುಂತಾದ ನಗರಗಳೊಂದಿಗೆ ವ್ಯಾಪಾರ ಸಂಪರ್ಕವಿತ್ತು.

ಅಥಣಿ ತಾಲೂಕಿನ ಶೈಕ್ಷಣಿಕ ರಂಗದ ಪ್ರಗತಿಗೆ ಪವಾರ ದೇಸಾಯಿಯವರ ಕೊಡುಗೆ ಅಪಾರ. ಕೆ.ಎಲ್.ಇ. ಸಂಸ್ಥೆಯ ಎಸ್.ಎಮ್.ಎಸ್. ಮಹಾವಿದ್ಯಾಲಯ, ಸಿ.ಎಸ್.ಕೆ. ಪ್ರೌಢ ಶಾಲೆಗಳಿಗೆ ೧೦೦ ಎಕರೆ ಭೂಮಿ ಹಾಗೂ ಜಾಧವಜಿ ಆನಂದಜಿ ಸಂಸ್ಥೆಯ ಪ್ರೌಢಶಾ, ಭೋಜರಾಜ ಕ್ರೀಡಾಂಗಣ, ಉರ್ದು ಶಾಲೆಗಳಿಗೆ ಆರ್ಥಿ ನೇರವು ನೀಡಿದ್ದಾರೆ. ಇವರ ವ್ಯಾಪ್ತಿಗೊಳಪಟ್ಟ ಗ್ರಾಮಗಳಾದ ಮಂಗಸೂಳಿ, ಐಗಳಿ, ತೆಲಸಂಗ, ಕೋಕಟನೂರ, ಮದಭಾವಿ, ಅಡಹಳ್ಳಿ ಪ್ರೌಢಶಾಲೆಗಳು, ಕೋಹಳ್ಳಿ, ಬಳ್ಳಿಗೇರಿ, ಮಂಗಸೂಳಿ ಪ್ರಾಥಮಿಕ ಶಾಲೆಗಳ ನಿರ್ಮಾಣ ಕಾರ್ಯದಲ್ಲಿ ಇವರ ಪಾತ್ರ ಅವಿಸ್ಮರಣೀಯ. ನಿರ್ಗತಿಕರ ಬಡವರ ಶಿಕ್ಷಣಕ್ಕೆ ಶಾಲಾ ಶುಲ್ಕವನ್ನು ಭರಿಸುತ್ತಿದ್ದರು.

ಮೂಲತಃ ಮರಾಠಾ ಪಂಗಡದವರಾದ ಇವರು ಮಂಗಸೂಳಿಯ ಮಲ್ಲಯ್ಯ ದೇವರಿಗೆ ವರ್ಷದಲ್ಲಿ ಅಶ್ವಿಣಿ ಶುದ್ಧ ದಶಮಿ ಮತ್ತು ಚೈತ್ರ ಶುದ್ದ ದಶಮಿಯಂದು ತಾವೇ ಪೂಜೆ ಸಲ್ಲಿಸುತ್ತಾರೆ. ಶ್ರೀ ಸಿದ್ದೇಶ್ವರ ದೇವಸ್ಥಾನದ ಗದ್ದುಗೆವರೆಗೆ ಪ್ರತಿ ಸೋಮವಾರದಂದು ಅವರ ಮನೆಯವರೆಲ್ಲರೂ ಹಾಗೂ ಸೇವಕರು ವಾಡೆಯಿಂದ ದೇವಸ್ಥಾನದ ವರೆಗೆ ಸಿದ್ದೇಶ್ವರ ಮೂರ್ತಿ ಪಲ್ಲಕ್ಕಿಯೊಂದಿಗೆ ಸಾಗುತ್ತಾರೆ. ಸಿದ್ದೇಶ್ವರ ದೇವರ ಕುದುರೆಯನ್ನು ಪ್ರತಿ ಸೋಮವಾರ ದೇಸಾಯಿಯವರು ತಪ್ಪದೆ ಪೂಜಿಸುತ್ತಾರೆ ಈ ಪದ್ದತಿ ಈಗಲೂ ಇದೆ. ಮಂಗಸೂಳಿ ಮಲ್ಲಯ್ಯನ ಜಾತ್ರೆಯಲ್ಲಿ ಸರಪಳಿ ಹರಿಯುವ ಕಾರ್ಯಕ್ರಮವು ಇವರ ನೇತೃತ್ವದಲ್ಲಿಯೇ ನಡೆಯುತ್ತದೆ. ಕಾರಹುಣ್ಣಿಮೆಯಂದು ಸಾರ್ವಜನಿಕ ಸ್ಥಳದಲ್ಲಿ ಕರಿ ಹರಿಯುವದಕ್ಕಿಂತ ಮುಂಚೆ ಈ ದೇಸಾಯಿಗಳ ಎತ್ತು









ಗಳನ್ನು ಪೂಜಿಸಿ ಕರಿ ಹರಿಯುತ್ತಾರೆ. ಮಹಾನವಮಿಯಂದು ಬನ್ನಿ ಗಿಡವನ್ನು ಪೂಜಿಸಿ ಬನ್ನಿ ಮುಡಿಯುತ್ತಾರೆ. ಮೋಹರಂ ಸಂದರ್ಭದಲ್ಲಿ ಮುಸ್ಲಿಂ ದೈವವು ಇಂದು ಕೂಡ ದೇಸಾಯಿ ಮನೆಯ ದೇವರ ಮನೆಯಲ್ಲಿರುವ ಕಂಬಕ್ಕೆ ಪೂಜಿಸುವ ಪದ್ಧತಿ ಇದೆ. ಸಿದ್ದೇಶ್ವರನ ಬೆಳ್ಳಿಯ ಮೂರ್ತಿಯನ್ನು ಇವರೆ ಮಾಡಿಸಿಕೊಟ್ಟಿದ್ದು ಇಂದಿಗೂ ಅಥಣಿ ಸಿದ್ದೇಶ್ವರ ದೇವಾಲಯ ದಲ್ಲಿದೆ.

ಭೋಜರಾಜರಿಂದ ಪ್ರಾರಂಭಗೊಂಡ ಮಂಗಸೂಳಿ ಪವಾರ ದೇಸಗತಿ ಮನೆತನ ಸನಾತನ ಧರ್ಮ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದಿದೆ. ಧೈರ್ಯಶೀಲರಾವ್ ಅವರ ಎರಡನೆಯ ಸಹೋದರ ಜಯವಂತರಾವ್ ಕಿರಿಯ ಸಹೋದರ ಯಶವಂತರಾವ ಉರ್ಫ್ ಅಮರಸಿಂಹ ಇವರು ೧೯೬೦ರಿಂದ ೧೯೭೪ರವರೆಗೆ ಅಥಣಿ ತಾಲೂಕಾ ಅಭಿವೃದ್ಧಿ ಮಂಡಳಿ ಸದಸ್ಯರಾಗಿ ೧೪ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೭೦ರ ತೀವ್ರ ಬರಗಾಲವನ್ನು ನಿಯಂತ್ರಿಸಿ ದರು. ಅಥಣಿ ತಾಲೂಕಿನ ೧೩ ಹಳ್ಳಿಗಳಲ್ಲಿ ೩೨ ಕೊಳವೆ ಬಾವಿ, ೩೩ ಹಳ್ಳಿಗಳಲ್ಲಿ ಸಾರ್ವಜನಿಕ ಬಾವಿಗಳನ್ನು ತೋಡಿಸಿ ದರು. ದೇವರಾಜ ಅರಸು ಕಾಲದಲ್ಲಿ ಇವರು ಹಿಂದುಳಿದ ವರ್ಗ ಮತ್ತು ದುರ್ಬಲ ವರ್ಗದವರಿಗೆ ಉಚಿತ ವಸತಿ ವಸ್ತ್ರ ಜಮೀನುಗಳನ್ನು ನೀಡಿ ಬರಗಾಲ ಪರಿಗಾರಕ್ಕೆ ಹಣಕಾಸು ಬಿಡುಗಡೆ ಮಾಡಲು ದೇವರಾಜ ಅರಸರಿಗೆ ವಿನಂತಿಸಿ ಕೊಂಡರು. ದೇಸಾಯಿ ವಾಡೆ ವಾಸ್ತುಶಿಲ್ಪವನ್ನು ಇಂದಿಗೂ ನೋಡಬಹುದು ಮತ್ತು ಇದು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿದೆ.



## ಆಧಾರಸೂಚಿ


೧. ಆರ್.ಗೋಪಾಲ (ಸಂ), ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೧೦, ಪು. ೭೭೯.

೨. ಸಂಗಮೇಶ ಕಲ್ಯಾಣಿ, ಬಾಗಲಕೋಟೆ ಜಿಲ್ಲೆಯ ದೇಸಗತಿಗಳು, ಅಪ್ರಕಟಿತ ಮಹಾಪ್ರಬಂಧ, ೨೦೦೬, ಪು. ೧೮.

೩. ಎಸ್.ಎಸ್. ದೇವರಡ್ಡಿ, ಅಥಣಿ ತಾಲೂಕಿನ ದೇಸಗತಿಗಳು, ಪವಾರ ದೇಸಾಯಿಗಳ ಒಂದು ಅಧ್ಯಯನ, ಅಪಕ್ರಟಿತ ಪ್ರಬಂಧ, ೨೦೦೮ ಹಂಪಿ ಪು. ೦೨, ೧೩-೧೫, ೧೮-೨೫, ३೧-೬೨.

೪. ಸೀಗಿಹಳ್ಳಿ ಬಾಳಣ್ಣ, "ಬೆಳಗಾವಿ ಜಿಲ್ಲೆಯ ವೀರಶೈವದೇಸಗತಿಗಳು", ೧೯೮೯ ಗದಗ, ಪು. ೨೭.

೫. ಮಯೂರ ದೇಸಾಯಿ ಸಂದರ್ಶನ.



# ಡಬ್ಲ್ಯು.ಆರ್. ಕೂಂಬೇಸ್ ಅವರ ಜ್ಞಾಪಕಾರ್ಥ ಸ್ಮಾರಕ ಕ್ರಿಸ್ತರಾಜ ಸಭೆ-ಹೊಸಪೇಟೆ

**ಸಣ್ಣಪಾಲಯ್ಯ ಬಿ.ಪಿ.***

**ಹ**ತ್ತೊಂಬತ್ತನೆಯ ಶತಮಾನದ ಭಾರತೀಯ ಇತಿಹಾಸದಲ್ಲಿ ಬಹುಪಾಲು ಜನರು ಎಷ್ಟರ ಮಟ್ಟಿಗೆ ದಿವಾಳಿತನ ಹಾಗೂ ದಾರಿದ್ರ್ಯದಿಂದ ನರಳುತ್ತಿದ್ದರು ಎಂಬುದನ್ನು ಊಹಿಸಿಕೊಳ್ಳಲು ಕಷ್ಟಸಾಧ್ಯ. ಇದಕ್ಕೆ ಕಾರಣ ಕ್ಷಾಮ ಮತ್ತು ಬರಗಾಲ. ೧೮೩೭ರಲ್ಲಿ ಮಳೆಯೇ ಬರಲಿಲ್ಲ. ಇದರಿಂದ ಗಂಗಾ ಮತ್ತು ಜಮುನಾ ಮೇಲ್ದಂಡೆಗಳಲ್ಲಿ ತೀವ್ರ ಕ್ಷಾಮ ತಲೆದೋರಿತು. ಮುಂದೆ ೧೮೬೧ರಲ್ಲಿ ಮುಂಗಾರು ಮಳೆಯ ವೈಫಲ್ಯದಿಂದ ವಾಯುವ್ಯ ಪ್ರಾಂತ್ಯಗಳಲ್ಲಿ ಕ್ಷಾಮ ತಲೆದೋರಿತು. ೧೮೬೬-೬೭ರಲ್ಲಿ ತಲೆದೋರಿದ ಕ್ಷಾಮವನ್ನು 'ಒರಿಸ್ಸಾ ಕ್ಷಾಮ' ಎಂದೇ ಹೆಸರಾಯಿತು. ಈ ಕ್ಷಾಮದಿಂದ ಒರಿಸ್ಸಾದಲ್ಲಿ ಅತ್ಯಂತ ಭಯಂಕರ ಪರಿಣಾಮಗಳು ಉಂಟಾದವು, ಇದರ ಪ್ರಭಾವ ಕಲ್ಕತ್ತದಿಂದ ಹಿಡಿದು ಮದ್ರಾಸ್‌ವರೆಗಿನ ಪೂರ್ವಕರಾವಳಿ ಉದ್ದಕ್ಕೂ ನಾನಾ ಭಾಗಗಳಿಗೆ ವ್ಯಾಪಿಸಿತ್ತು. ಒರಿಸ್ಸಾ ಕ್ಷಾಮವನ್ನು "ಭಾರತದ ಕ್ಷಾಮಗಳ ಇತಿಹಾಸದಲ್ಲಿ ಒಂದು ಪರಿವರ್ತನಾ ಘಟ್ಟ" ಎಂದು ಪರಿಗಣಿಸಲಾಗಿದೆ. ಏಕೆಂದರೆ, ಈ ಕ್ಷಾಮದಿಂದಾಗಿ ವಿಚಾರಣಾ ಆಯೋಗವೊಂದನ್ನು ನೇಮಿಸಲಾಗಿತ್ತು.[೧] ೧೮೭೬-೭೮ರಲ್ಲಿ ಸಂಭವಿಸಿದ ಕ್ಷಾಮ ಮತ್ತು ಬರಗಾಲ ಮದ್ರಾಸ್ ಪ್ರಾಂತ್ಯ, ಮೈಸೂರು, ಹೈದರಾಬಾದ್, ಮಹರಾಷ್ಟ್ರ, ಉತ್ತರಪ್ರದೇಶ ಮತ್ತು ಪಂಜಾಬ್‌ಗಳಲ್ಲಿ ಸಂಭವಿಸಿತ್ತು.[೨] ೧೮೫೮ರಲ್ಲಿ ಆಡಳಿತವು ಈಸ್ಟ್ ಇಂಡಿಯಾ ಕಂಪನಿಯಿಂದ ಇಂಗ್ಲೆಂಡಿನ ಪ್ರಭುಗಳಿಗೆ ಹಸ್ತಾಂತರಗೊಂಡ ಬಳಿಕ, ಬ್ರಿಟಿಷ್ ಇಂಡಿಯಾದಲ್ಲಿ ೧೯ನೆಯ ಶತಮಾನದ ಕೊನೆಯವರೆಗೆ ೨೦ಕ್ಕೂ ಹೆಚ್ಚು ಬಾರಿ ಕ್ಷಾಮ ಮತ್ತು ಬರಗಾಲಗಳು ಉಂಟಾದವು. ಈ ಮಾರಕ ಕ್ಷಾಮಗಳ ಪರಿಣಾಮವಾಗಿ ಕಾಲರಾ, ಸಿಡುಬು ಮತ್ತು ವಿಷಮ ಜ್ವರದಂತಹ ಸಾಂಕ್ರಾಮಿಕ ರೋಗಗಳ ಹಾವಳಿಯಿಂದ ಬ್ರಿಟಿಷ್ ಅಧಿಕಾರಿಗಳು, ಸಾವಿರಾರು ಸ್ಥಳೀಯ ಜನರು ಮತ್ತು ಜಾನುವಾರುಗಳನ್ನು ಬಲಿ ತೆಗೆದುಕೊಂಡಿತು.

ಮದ್ರಾಸ್ ಪ್ರಾಂತ್ಯದ ನೇರ ಆಳ್ವಿಕೆಗೆ ಒಳಗಾಗಿದ್ದ ಬಳ್ಳಾರಿ ಜಿಲ್ಲೆಯಲ್ಲಿ ಉದ್ಭವಿಸಿದ ೧೮೭೬-೭೮ರ ಕ್ಷಾಮವು ಜಿಲ್ಲೆಯ ಎಲ್ಲಾ ಕ್ಷೇತ್ರಗಳಲ್ಲಿ ಸಾಕಷ್ಟು ಕಷ್ಟ-ನಷ್ಟ ಉಂಟಾಗಿ, ನೂರಕ್ಕೆ ಐದು ಜನ ಸುಖದಿಂದ ಇದ್ದರೆ, ತೊಂಬತ್ತೈದು ಜನ ರೋಗ ಹಾಗೂ ಬಡತನದಿಂದ ನರಳುವಂತಹ ಸ್ಥಿತಿ ನಿರ್ಮಾಣವಾಗಿತ್ತು.[೩] ಇಂತಹ ಸಂದಿಗ್ಧ ಪರಿಸ್ಥಿತಿಯನ್ನರಿತ ವಸಾಹತುಶಾಹಿ ಸರಕಾರವು ಕ್ಷಾಮ ಮತ್ತು ಮರಣ ಪ್ರಮಾಣವನ್ನು ಕಡಿಮೆ ಮಾಡುವಲ್ಲಿ ಯಶಸ್ವಿಯಾಗಲಿಲ್ಲ ಎಂದು ಜಾರ್ಜ್ ಕ್ಯಾಂಪ್‌ಬೆಲ್ ಹೇಳಿದನು.

ಪ್ರಾಂತಿಯ ಸರಕಾರಗಳು ಕ್ಷಾಮವನ್ನು ಪರಿಣಾಮಕಾರಿಯಾಗಿ ಎದುರಿಸುವಲ್ಲಿ ವಿಫಲತೆ ಹೊಂದಿದ ಕಾರಣ ಗವರ್ನರ್ ಜನರಲ್ ಆಗಿದ್ದ ಲಿಟ್ಟನ್‌ನು ಮದ್ರಾಸ್ ಪ್ರಾಂತ್ಯದಲ್ಲಿ ೧೮೭೮ ಫೆಬ್ರವರಿ ೧೩ರ ಬರಗಾಲ ಜನಗಣತಿಯನ್ನು ತೆಗೆದುಕೊಂಡು ಒಂದು ಆಯೋಗವನ್ನು ನೇಮಿಸಿದನು. ಸರ್.ರಿಚರ್ಡ್ ಸ್ಟ್ರ್ಯಾಚೆ ಈ ಆಯೋಗದ ಅಧ್ಯಕ್ಷನಾಗಿದ್ದನು. ಇವರ ಮಾರ್ಗದರ್ಶನದಲ್ಲಿ ಮದ್ರಾಸ್ ಸರಕಾರವು ೧೮೭೮ ಮಾರ್ಚ್ ೧೩ರಂದು "ಬರಗಾಲ ಸಮಿತಿ (ಫ್ಯಾಮಿನ್ ಕಮಿಷನ್ ಅಪಾಯಿಂಟ್‌ಮೆಂಟ್)ಯನ್ನು"[೪] ನೇಮಕ ಮಾಡಿ ಬಳ್ಳಾರಿ ಪ್ರದೇಶಕ್ಕೆ ಕಳುಹಿಸಿಕೊಟ್ಟಿತು. ಈ ಸಮಿತಿಯ ಉದ್ದೇಶ ಮದ್ರಾಸ್ ಪ್ರಾಂತ್ಯದಲ್ಲಿಯೇ ದೊಡ್ಡ ಜಿಲ್ಲೆಯಾದ ಬಳ್ಳಾರಿ ಪರಿಸರವನ್ನು ಕ್ಷೇತ್ರಕಾರ್ಯ ಮಾಡಿ, ಕ್ಷಾಮಕ್ಕೆ ಕಾರಣಗಳೇನು? ಈ ಕೇಡನ್ನು ಎದುರಿಸಲು ಸಕಾಲಿಕ ಕ್ರಮಗಳನ್ನು ತೆಗೆದುಕೊಳ್ಳಲಾಗಿತ್ತೆ? ಅಂತಹ ಕ್ರಮ ಕೈಗೊಂಡಿರದೇ ಇದ್ದರೆ, ಆ ಕ್ರಮಗಳನ್ನು ಏಕೆ ಕೈಗೊಳ್ಳಲಿಲ್ಲ ಎಂಬುದಕ್ಕೆ ಸಮಂಜಸ ಕಾರಣಗಳಿವೆಯೇ? ಇನ್ನು ಮುಂದೆ ಇಂತಹ ವಿಪತ್ತುಗಳನ್ನು ತಪ್ಪಿಸಲು ಅಥವಾ ಜನರ ಸಂಕಷ್ಟಗಳನ್ನು ಪರಿಹರಿಸಲು ಯಾವ ಯಾವ ವಿಧಾನಗಳನ್ನು ಅನುಸರಿಸಬೇಕಾಗಿತ್ತೆಂದು ಈ ವರದಿಯಲ್ಲಿ ಆದೇಶಿಸಿತ್ತು.

* ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕ.ವಿ.ವಿ. ಹಂಪಿ, ವಿದ್ಯಾರಣ್ಯ.



ಚರ್ಚ್ ಒಳಭಾಗದ ಗೋಡೆಯಲ್ಲಿರುವ ಶಿಲಾಫಲಕ



ಕ್ರಿಸ್ತರಾಜ ಸಭೆ–ಹೊಸಪೇಟೆ

**ಸಾರಾಂಶ :** ಬಳ್ಳಾರಿ ಜಿಲ್ಲೆಗೆ ಆಗಮಿಸಿದ ಫ್ಯಾಮಿನ್ ಕಮಿಷನ್‌ನ ಸದಸ್ಯರಲ್ಲೊಬ್ಬರಾದ ಡಬ್ಲ್ಯು. ಆರ್. ಕೂಂಬೇಸ್ ಅವರು ಬರಗಾಲ ಪೀಡಿತ ಬಳ್ಳಾರಿ ಪ್ರದೇಶದಲ್ಲಿ ಕರ್ತವ್ಯ ನಿರತರಾಗಿದ್ದಾಗ ಹೊಸಪೇಟೆಯಲ್ಲಿ ಪಕ್ಕೆ ಭಾವು ರೋಗಕ್ಕೆ ಪೀಡಿತರಾಗಿ ಮದ್ರಾಸ್‌ನಲ್ಲಿ ೨೩ಮೇ ೧೮೭೭ರಲ್ಲಿ ಮರಣ ಹೊಂದಿದರು. ಇವರ ಜೊತೆಗೂಡಿ ಬರಗಾಲ ಸಮಯದಲ್ಲಿ ಕಾರ್ಯ ನಿರ್ವಹಿಸಿದ ಅಧಿಕಾರಿಗಳು ಹೊಸಪೇಟೆಯಲ್ಲಿ ಡಬ್ಲ್ಯುಆರ್. ಕೂಂಬೇಸ್ ಅವರ ಸ್ಮರಣಾರ್ಥವಾಗಿ ಒಂದು ಕ್ರಿಸ್ತರಾಜ ಸಭೆಯನ್ನು ೧೮೭೯ರಲ್ಲಿ ಸ್ಥಾಪಿಸಿದರು.

ಹೊಸಪೇಟೆ ಪಟ್ಟಣದ ಗಾಂಧೀ ಸರ್ಕಲ್‌ನ ನೈರುತ್ಯ ದಿಕ್ಕಿನಲ್ಲಿ ದಕ್ಷಿಣಾಭಿಮುಖವಾಗಿರುವ 'ಕ್ರಿಸ್ತರಾಜ ಸಭೆ' ಎಂಬ ಪ್ರಾಟೆಸ್ಟೆಂಟ್ ಚರ್ಚ್‌ನ್ನು ೧೮೭೯ರಲ್ಲಿ ಸ್ಥಾಪಿಸಲಾಗಿದೆ. ಇದು ಆರಂಭದಲ್ಲಿ ಲಂಡನ್ ಮಿಷನ್ ಸಂಸ್ಥೆಯ ಅಧೀನದಲ್ಲಿತ್ತು, ಕೆಲವು ವರ್ಷಗಳ ನಂತರ ಚರ್ಚ್ ಆಫ್ ಸೌತ್ ಇಂಡಿಯಾ (ಸಿ.ಎಸ್.ಐ) ವ್ಯಾಪ್ತಿಗೆ ಒಳಪಟ್ಟಿತು. ಈ ದೇವಾಲಯವು ಗೋಥಿಕ್ ಶೈಲಿಯಲ್ಲಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ. ಕಟ್ಟಡವು ೨೩ ಅಡಿ ಅಗಲ, ೬೪ ಅಡಿ ಉದ್ದ, ೨೨ ಅಡಿ ಎತ್ತರ ಹೊಂದಿದ್ದು, ದೇವಾಲಯದ ಬಾಗಿಲು ಮತ್ತು ಕಿಟಕಿಗಳ ವಿನ್ಯಾಸವು ಕಮಾನು ಶೈಲಿಯಲ್ಲಿ ಎದ್ದು ಕಾಣುತ್ತವೆ. ದೇವಾಲಯ ಒಳ ಪ್ರವೇಶಿಸಿದರೆ ಸಭಾಂಗಣ ಮತ್ತು ಬಲಿಪೀಠವಿದೆ. ಬಲಿಪೀಠದ ಮೇಲ್ಛಾವಣಿಯು ದೀರ್ಘವೃತ್ತಾಕಾರದ ಗುಮ್ಮಟವು ಆಕಾಶಕ್ಕೆ ಮುಗಿಲು ಮುಟ್ಟುವ ಹಾಗೆ ಇದೆ. ಕಟ್ಟಡಕ್ಕೆ ಗಾರೆ, ಕಲ್ಲು, ಇಟ್ಟಿಗೆ, ಕಬ್ಬಿಣ, ಸಿಮೆಂಟ್, ಮಂಗಳೂರು ಹೆಂಚು ಮತ್ತು ಮರದ ತೀರುಗಳನ್ನು ಬಳಸಿ ಕಟ್ಟಲಾಗಿದೆ. ೧೯೫೩ರಲ್ಲಿ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರ್ಪಡೆ ಗೊಂಡ ನಂತರ ಇದು ೧೯೬೫ರಲ್ಲಿ ಮೈಸೂರಿನ ಕ್ರೈಸ್ತ ಬಿಷಪ್‌ರಾದ ರೆವರೆಂಡ್ ಎನ್.ಸಿ. ಸರ್ಜೆಂಟ್ ಹಾಗೂ ೧೯೭೯ರಲ್ಲಿ ರೆವರೆಂಡ್ ಡಬ್ಲ್ಯೂ.ವಿ. ಕಾರ್ಲ (ಕೆ.ನ್. ಡಿ) ಅವರಿಂದ ಜೀರ್ಣೋದ್ದಾರಗೊಂಡಿರುವುದು ಈ ದೇವಾಲಯದಲ್ಲಿನ ಶಿಲಾಫಲಕದಿಂದ ಸ್ಪಷ್ಟವಾಗುತ್ತದೆ.

[ಈ ದೇವಾಲಯದ ಮಾಹಿತಿಯನ್ನು ಫಾದರ್ ರೇವರೆಂಡ್ ರಾಜು ಹಾಗೂ ಸದಸ್ಯರಾದ ಶಾಮ್, ಆನಂದಪ್ಪ, ಜೇಮ್ಸ್ ಅವರಿಂದ ಸಂಗ್ರಹಿಸಲಾಗಿದೆ.]

## ಅಡಿಟಿಪ್ಪಣಿ

1. ಆರ್.ಸಿ. ಮಜುಂದಾರ್ (ಮೂಲ), ಎ.ವಿ. ನರಸಿಂಹಮೂರ್ತಿ (ಅನು) (ಸಂ.), ೨೦೦೫, **"ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ (೧)"**–(ಭಾಗ ಎರಡು), ಭಾರತೀಯ ವಿದ್ಯಾಭವನ ಬೆಂಗಳೂರು, ಪುಟ ೬೪೪.
2. ಬಿಪಿನ್ ಚಂದ್ರ (ಮೂಲ), ಎಚ್.ಎಸ್. ಗೋಪಾಲರಾವ್ (ಅನು), ೨೦೧೨, **"ಆಧುನಿಕ ಭಾರತದ ಇತಿಹಾಸ"**, ನವಕರ್ನಾಟಕ ಪ್ರಕಾಶನ ಬೆಂಗಳೂರು, ಪು –೨೧೫.
3. ಡಾ. ವಿರೂಪಾಕ್ಷಿ ಪೂಜಾರಹಳ್ಳಿ; ೨೦೦೯, **"ವಸಾಹತುಕಾಲೀನ ಬಳ್ಳಾರಿ ಜಿಲ್ಲೆ"**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೦೩.
4. ಸಿ.ಡಿ ಮೆಕಲನ್, ೧೮೮೫, **"ಮ್ಯಾನಿಯಲ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ"** (ಸಂಪುಟ –೦೨), ಪು. ೨೬೭.



# ಹಂಪೆ ಕೃಷ್ಣ ದೇವಾಲಯದಲ್ಲಿರುವ ಅಪರೂಪದ ನೃತ್ಯ ದುರ್ಗಾ ಶಿಲ್ಪ

**ಪದ್ಮಜಾ ದೇಸಾಯಿ***

## ಪ್ರಸ್ತಾವನೆ

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಭಾರತೀಯ ಇತಿಹಾಸದಲ್ಲಿ ಒಂದು ಪರಂಪರೆಯ ಮೈಲಿಗಲ್ಲು. ಈ ಮನೆತನದ ಅರಸರು ತಮ್ಮ ಕಾಲಾವಧಿಯಲ್ಲಿ ವಿವಿಧ ರಂಗಗಳಿಗೆ ಕೊಟ್ಟಷ್ಟೆ, ಪ್ರೋತ್ಸಾಹವನ್ನು ಸ್ಮಾರಕಗಳ ನಿರ್ಮಾಣಕ್ಕೂ ನೀಡಿದ್ದರು. ಇದರ ಪರಿಣಾಮವಾಗಿ ಅಸಂಖ್ಯಾತ ಸ್ಮಾರಕಗಳು ವಿವಿಧ ಕಡೆಗಳಲ್ಲಿ ನಿರ್ಮಾಣ ವಾದವು. ಕೇವಲ ರಾಜಮಹಾರಾಜರಲ್ಲದೆ, ರಾಣಿಯರು, ಮಂತ್ರಿಗಳು, ರಾಜ್ಯದ ಆಡಳಿತಾಧಿಕಾರಿಗಳು ಹಾಗೂ ಪ್ರಮುಖ ಜನರು ಸ್ಮಾರಕಗಳ ನಿರ್ಮಾಣದಲ್ಲಿ ಆಸಕ್ತಿ ವಹಿಸಿದ್ದರಿಂದಾಗಿ ವಿವಿಧೆಡೆ ಧಾರ್ಮಿಕ, ಲೌಕಿಕ, ಹಾಗೂ ಸೈನಿಕ ವಾಸ್ತುಶಿಲ್ಪದ ಸಂಕೇತಗಳಾದ ಹಲವಾರು ದೇವಾಲಯಗಳು ಮತ್ತು ಶಿಲ್ಪಗಳು ನಿರ್ಮಾಣವಾದವು.[೧]

ಇಂತಹ ಶಿಲ್ಪಗಳಲ್ಲಿ "ಹಂಪೆ ಕೃಷ್ಣ ದೇವಾಲಯದಲ್ಲಿರುವ ನೃತ್ಯ ದುರ್ಗಾ ಶಿಲ್ಪ", ಒಂದಾಗಿದ್ದು, ಈ ಶಿಲ್ಪವು ಆಗಮಗಳ ಹಿನ್ನೆಲೆಯಲ್ಲಿ ರಚನೆಯಾಗಿದೆಯೋ ಅಥವಾ ಆಗಮಗಳನ್ನು ಹೊರತುಪಡಿಸಿ ರಚನೆಯಾಗಿದೆಯೋ ಎಂಬುದನ್ನು ಈ ಶಿಲ್ಪದ ಪ್ರತಿಮಾ ಲಕ್ಷಣಗಳನ್ನು ಗುರುತಿಸುವುದು ಮತ್ತು ಭರತನ ನಾಟ್ಯಶಾಸ್ತ್ರದಲ್ಲಿರುವ ಯಾವ ಕರಣಗಳನ್ನು ಬಳಸಿ ಈ ಶಿಲ್ಪವನ್ನು ಕೆತ್ತಿದ್ದಾನೆ ಎಂಬುದನ್ನು ಚರ್ಚಿಸುವುದು ಈ ಲೇಖನದ ಉದ್ದೇಶವಾಗಿದೆ.

## ನೃತ್ಯ ದುರ್ಗಾ ಶಿಲ್ಪದ ಪ್ರತಿಮಾ ಲಕ್ಷಣಗಳು

ಈ ನೃತ್ಯ ದುರ್ಗಾ ಶಿಲ್ಪವು ಕೃಷ್ಣ ದೇವಾಲಯದಲ್ಲಿರುವ ಮುಖಮಂಟಪದಲ್ಲಿರುವ ೩೬ ಕಂಬಗಳಲ್ಲಿ ೧೬ನೇ ಕಂಬದ ಕೆಳಗಿನ ಭಾಗದಲ್ಲಿ ಪೂರ್ವಾಭಿಮುಖವಾಗಿದೆ. ಈ ಉಬ್ಬು ಶಿಲ್ಪವು ನೃತ್ಯ ಭಂಗಿಯಲ್ಲಿದೆ. ಶಿಲ್ಪದ ಪ್ರತಿಮಾ ಲಕ್ಷಣಗಳನ್ನು ಗಮನಿಸಿದಾಗ, ಈ ದುರ್ಗಾ ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು, ಆ ಕೈಗಳಲ್ಲಿರುವ ಆಯುಧಗಳು ಈ ಕೆಳಗಿನಂತಿವೆ.



ಬಲ ಭಾಗದ ಕೈಗಳು ಆಯುಧಗಳನ್ನು ಹೊಂದಿಲ್ಲ.

ಮೇಲಿನ ಬಲಕೈ–ವಿಸ್ಮಯ ಮುದ್ರೆಯನ್ನು ಹೊಂದಿದೆ (ನಾಟ್ಯ ಭಂಗಿಯಲ್ಲಿರು ಹಸ್ತಮುದ್ರೆ)

ಕೆಳಗಿನ ಬಲಕೈ–ಡೋಲಹಸ್ತವಾಗಿದೆ

ಮೇಲಿನ ಎಡಗೈಯಲ್ಲಿ–ಶಂಖವನ್ನು ಹಿಡಿದಿದೆ.

ಕೆಳಗಿನ ಎಡಕೈ–ಡೋಲಹಸ್ತವಾಗಿದೆ. (ನಾಟ್ಯ ಭಂಗಿಯಲ್ಲಿರುವ ಹಸ್ತ ಮುದ್ರೆ)

ಈ ದೇವಿಯು ನೃತ್ಯ ಭಂಗಿಯಲ್ಲಿದ್ದು, ನೃತ್ಯದ ಚಲನೆ ಯನ್ನು ಶಿಲ್ಪಿಯು ನೈಜವಾಗಿ ಕೆತ್ತಿದ್ದಾನೆ. ಈ ಶಿಲ್ಪವು ವಿಶೇಷ ವಾಗಿದೆ. ನಾಲ್ಕು ಕೈಗಳಲ್ಲಿ ಒಂದು ಕೈಯಲ್ಲಿ ಮಾತ್ರ ಶಂಖವನ್ನು ಹಿಡಿದಿದೆ. ವಿಷ್ಣುವಿನ ಆಯುಧವಾದ ಶಂಖವನ್ನು ಈ ದೇವಿಯು ಹಿಡಿದು ನೃತ್ಯ ಭಂಗಿಯಲ್ಲಿರುವ ಶಿಲ್ಪವಾಗಿದೆ. ದುರ್ಗೆಯು ವಿಷ್ಣುವಿನ ತಂಗಿಯಾಗಿದ್ದಾಳೆ. ದುರ್ಗಾ ಶಿಲ್ಪಗಳಲ್ಲಿ ಶಂಖ ಮತ್ತು ಚಕ್ರವಿರುವುದು ಸಾಮಾನ್ಯ. ಆದರೆ ಈ ನೃತ್ಯ ದುರ್ಗಾ ಶಿಲ್ಪವು ಎಡಭಾಗದ ಮೇಲಿನ ಕೈಯಲ್ಲಿ ಶಂಖವನ್ನು ಹಿಡಿದಿದೆ.[೨]

## ವಸ್ತ್ರ ಮತ್ತು ಆಭರಣಗಳು

ಈ ದುರ್ಗಾ ಶಿಲ್ಪವು ಧರಿಸಿರುವ ವಸ್ತ್ರ ಮತ್ತು ಆಭರಣಗಳು ವಿಶೇಷವಾಗಿವೆ. ದೇವಿಯ ತಲೆಯ ಮೇಲೆ

* W/o ಅಶ್ವಿನ್ ಕುಮಾರ್, ಗುಮಗೇರಾ ಪೋಸ್ಟ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ–೫೮೩೨೭೭.

ಕಿರೀಟವನ್ನು ಧರಿಸಿದ್ದಾಳೆ, ಆ ಕಿರೀಟದ ಸುತ್ತಲು ಜ್ವಾಲೆಯ ವೃತ್ತವಿದೆ. (ಅಗ್ನಿಕೇಶ), ಹಣೆಯ ಮೇಲೆ ಹಣೆಕಟ್ಟು ಇದೆ. ಕಿವಿಗಳಲ್ಲಿ ವೃತ್ತಕುಂಡಲಗಳಿವೆ. ಕೊರಳಲ್ಲಿ ಕಂಠಹಾರಗಳಿವೆ. ಯಜ್ಞೋಪವೀತವಿದೆ. ವನಮಾಲಾವಿದೆ. ಈ ಹಾರವು ದೇವಿಯ ಎಡಭುಜದಿಂದ ಹಾಯ್ದು ಮೊಣಕಾಲಿನ ವರೆಗೆ ಇದೆ. ದೇವಿಯ ನಾಲ್ಕು ಕೈಗಳಲ್ಲಿ ಕಡಗಗಳು, ಕಂಕಣಗಳಿವೆ. ತೆಳುವಾಗಿದ್ದು, ಕಟಿ ಭಾಗದಿಂದ ಸೀರೆಯು ಮೊಣಕಾಲಿನ ಕೆಳಭಾಗದ ವರೆಗೆ ಇದೆ. ಸೀರೆಯ ನೆರಿಗೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಶಿಲ್ಪದ ಮುಖವು ದುಂಡಗಿದ್ದು ಅಗಲವಾದ ಕಣ್ಣುಗಳನ್ನು ಹೊಂದಿದೆ. ಮುಖದಲ್ಲಿ ಅಟ್ಟಹಾಸದ ಭಾವವು ತುಂಬಿದೆ. ದೇವಿಯು ಪೀಠದ ಮೇಲೆ ನಿಂತು ನೃತ್ಯವನ್ನು ಮಾಡುತ್ತಿರುವಂತೆ ಶಿಲ್ಪಿಯು ಕೆತ್ತಿದ್ದಾನೆ. ದೇವಿಯು ಎರಡು ಕಾಲುಗಳನ್ನು ಅಗಲಿಸಿದ ರೀತಿಯಲ್ಲಿವೆ.[೪] ಈ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದಾಗ ದೇವಿಯ ಬಲಗಾಲು ಎತ್ತಿದ್ದು, ಎಡಗಾಲನ್ನು ಪೀಠದ ಮೇಲೆ ಇಟ್ಟಿದೆ. **ಭರತನ ನಾಟ್ಯ ಶಾಸ್ತ್ರದಲ್ಲಿರುವ ೧೦೮ ಕರಣಗಳಲ್ಲಿ ೯೯ ನೇ ಕರಣವಾದ ಮದಸ್ಖಲಿತ ಕರಣದಲ್ಲಿ ಕೆಳಗಿನ ಹಸ್ತಗಳು ಡೋಲಹಸ್ತ ಗಳಾಗಿರಬೇಕು. ೩ನೇ ಕರಣವಾದ ವಲಿತೋರುಕ ಕರಣದಂತೆ ಕಾಲುಗಳು ನೃತ್ಯ ಭಂಗಿಯಲ್ಲಿವೆ** ಶಿಲ್ಪಿಯು ಈ ಎರಡು ಕರಣಗಳನ್ನು ಬಳಸಿಕೊಂಡು ಈ ಉಬ್ಬು ಶಿಲ್ಪವನ್ನು ಕೆತ್ತಿದ್ದಾನೆ. ಆದರೆ ಮೇಲಿನ ಬಲ ಕೈಯು ವಿಸ್ಮಯ ಹಸ್ತವಾಗಿದೆ. ಈ ಹಸ್ತ ಮುದ್ರೆಯು ನೃತ್ಯ ಮೂರ್ತಿಗಳಲ್ಲಿ ಸಾಮಾನ್ಯವಾಗಿರುವ ಕಂಡುಬರುತ್ತದೆ. ಬಲ ಕೈಯಲ್ಲಿ ವಿಷ್ಣುವಿನ ಆಯುಧವಾದ ಶಂಖವಿದೆ. ಆದ್ದರಿಂದ ಈ ಶಿಲ್ಪವು ದುರ್ಗಾ ಶಿಲ್ಪವಾಗಿದೆ.

ಪಲ್ಲವರ ಕಾಲದ ದುರ್ಗಾ ಶಿಲ್ಪಗಳು ಸಮಭಂಗಿ ಯಲ್ಲಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಮೇಲಿನ ಕೈಗಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದು, ಕೆಳಗಿನ ಕೈಗಳು ಕಟ್ಯಾವಲಂಬಿತ ಮತ್ತು ಅಭಯ ಹಸ್ತಗಳಾಗಿರುತ್ತವೆ. ಆದರೆ ಈ ಶಿಲ್ಪವು ನೃತ್ಯ ಭಂಗಿಯಲ್ಲಿರುವುದು ಈ ಶಿಲ್ಪವು ವಿಶೇಷವಾಗಿದೆ.[೫]

ತಾಂತ್ರಿಕ ನೆಲೆಗಟ್ಟಿನಲ್ಲಿ ಶಕ್ತಿ ದೇವತೆಯರ ಆರಾಧನೆಯು ಪ್ರಾಚೀನ ಕಾಲದಿಂದಲೂ ಇತ್ತು, ಆದರೆ ವಿಜಯನಗರದ ಅರಸರ ಕಾಲದಲ್ಲಿ ಶಾಕ್ತ ಪಂಥಕ್ಕೆ ಹೆಚ್ಚಿನ ಪ್ರೋತ್ಸಾಹವಿತ್ತು.[೫]

ಒಟ್ಟಾರೆಯಾಗಿ ವಿಜಯನಗರದ ಅರಸರು ಶಕ್ತಿ ದೇವತೆ ಆರಾಧನೆಗೆ ಪ್ರಾಮುಖ್ಯತೆಯನ್ನು ನೀಡಿದ್ದರು ಎಂಬುದು ಅವರು ನಿರ್ಮಿಸಿರುವ ದೇವಾಲಗಳು ಮತ್ತು ಶಿಲ್ಪಗಳಿಂದ ತಿಳಿದು ಬರುತ್ತದೆ. ಸರ್ವಧರ್ಮಸಮನ್ವಕರಾದ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯದ ರಕ್ಷಣೆಯ ಜೊತೆಗೆ ಪ್ರಜೆಗಳನ್ನು ಭೀಕರ ಪರಿಸ್ಥಿತಿಗಳಿಂದ ರಕ್ಷಿಸಲು ಸಾಮ್ರಾಜ್ಯದಲ್ಲಿ ಶಕ್ತಿ ದೇವತೆಯರ ಆರಾಧನೆಯನ್ನು ಪ್ರಜೆಗಳಿಗೆ ಮೂಡಿಸಲು ದುರ್ಗೆ, ಕಾಳಿ ಮತು ಭೈರವಿ ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಕಂಬಗಳ ಮೇಲೆ ಬಂಡೆಗಳ ಮೇಲೆ ಉಬ್ಬು ಶಿಲ್ಪಗಳನ್ನು ಕೆತ್ತುತ್ತಿದ್ದರು. ಅಂದಿನ ಶಿಲ್ಪಿಗಳ ಕಲಾಚಾತುರ್ಯವು ಮೆಚ್ಚುವಂತಹದ್ದಾಗಿದೆ.



**ಆಧಾರಸೂಚಿ**


೧. ದೇಸಾಯಿ ಪಿ.ಬಿ., 'ಕರ್ನಾಟಕದ ಇತಿಹಾಸ' ಪು. ೨೭-೨೯.'

೨. ರಾಮಚಂದ್ರರಾವ್ ಎಸ್.ಕೆ. 'ಮೂರ್ತಿ ಶಿಲ್ಪದ ನೆಲೆ-ಹಿನ್ನೆಲೆ', ಪು. ೩೦-೩೫.

೩. ಅರುಂಧತಿ ಬ್ಯಾನರ್ಜಿ, 'ಇಮೇಜಸ್ಸ್ ಅಂಡ್ ಮೋಟಿಫಸ್ಸ್', ಪು. ೧೩೬-೧೩೮.

೪. ಗೋಪಿನಾಥರಾವ್ ಟಿ.ಎ. 'ಎಲಿಮೆಂಟ್ಸ ಆಫ್ ಹಿಂದೂ ಐಕನೋಗ್ರಫಿ' ಸಂ. ೧, ಭಾಗ ೨, ಪು. ೧೩೪-೧೩೬.

೫. ನಂದಗೋಪಾಲ ಚೂಡಾಮಣಿ, ಶಿಲೆ-ಕಲೆ, ಪು. ೭೬-೭೮.




# ಅಗ್ರಹಾರ ಬಾಚಹಳ್ಳಿಯ ಹುಣಿಸೇಶ್ವರ ದೇವಾಲಯದಲ್ಲಿರುವ ವೀರಗಲ್ಲು

**ಡಾ. ಎಚ್. ಜಯಮ್ಮ ಕರಿಯಣ್ಣ***

**ಕೃ**ಷ್ಣರಾಜಪೇಟೆ ತಾಲೂಕು ಅಗ್ರಹಾರ ಬಾಚಹಳ್ಳಿ ಹುಣಿಸೇಶ್ವರ ದೇವಾಲಯದ ಆವರಣದಲ್ಲಿ ಹಲವು ವೀರಗಲ್ಲುಗಳಿವೆ. ರಾಜಕೀಯ ಇತಿಹಾಸ ತಿಳಿಯಲು ವೀರಗಲ್ಲುಗಳು ಇತರ ಶಾಸನಗಳಿಗಿಂತ ಪ್ರಮುಖ ಸ್ಥಾನದಲ್ಲಿವೆ. ದಾನ ಶಾಸನಗಳು ದೇವಾಲಯಗಳಿಗೆ, ಅಗ್ರಹಾರಗಳಿಗೆ, ಬ್ರಾಹ್ಮಣರಿಗೆ ನೀಡಿದ ದಾನಗಳನ್ನು ಇವು ಹೇಳಿವೆ. ವೀರಗಲ್ಲುಗಳು ರಾಜಕೀಯ, ಯುದ್ಧ, ತುರುಗಾಳಗ, ಊರಳಿವು, ಪೆಣ್ಬುಯಲ್ ಕಳ್ಳರೊಡನೆ ಶೌರ್ಯದಿಂದ ಹೋರಾಡಿ ಸತ್ತ ವೀರರ ಚಿತ್ರಣ, ರಾಜರಾಜರ ನಡುವೆ ನಡೆದ ಯುದ್ಧಗಳ ಸಮಗ್ರ ಚಿತ್ರಣವನ್ನು ವೀರಗಲ್ಲುಗಳು ನೀಡುತ್ತವೆ. ಅಂತಹ ಕೆಲವು ವೀರಗಲ್ಲುಗಳು ಹೊಯ್ಸಳ ಅರಸರ ಕಾಲದಲ್ಲಿ ಅಗ್ರಹಾರ ಬಾಚಹಳ್ಳಿಯಲ್ಲಿರುವ ಹುಣಿಸೇಶ್ವರ ದೇವಾಲಯದ ದಕ್ಷಿಣ ದಿಕ್ಕಿನಲ್ಲಿವೆ.

ಹೊಯ್ಸಳರ ಕಾಲದಲ್ಲಿ ವೀರಗಲ್ಲುಗಳು ಹೇರಳವಾಗಿವೆ. ಗಂಗರ ಕಾಲದ ವೀರಗಲ್ಲುಗಳಿಗಿಂತ ಭಿನ್ನವಾಗಿ ಒಂದು ಗೊತ್ತಾದ ಆಕಾರ ಬಳಕೆಗೆ ಬಂದಿದೆ. ಇವರ ಕಾಲದಲ್ಲಿ ವಿಶಿಷ್ಟವಾದ ಕೆಲವು ಶಾಸನಗಳಲ್ಲಿ ಈ ಅರಸರಿಗೆ ನಿಷ್ಠರಾಗಿದ್ದ ಲೆಂಕರು ತಮ್ಮ ರಾಜರು ಕಾಲವಾದಾಗ ತಾವು ಪ್ರಾಣತ್ಯಾಗ ಮಾಡುವುದಾಗಿ ಪ್ರತಿಜ್ಞೆ ಮಾಡಿ ಸಾವನ್ನಪ್ಪಿರುತ್ತಾರೆ. ಈ ವೀರರ ಪತ್ನಿಯರು ತಮ್ಮ ಪತಿಯ ಜೊತೆಗೆ ತಾವೂ ಪ್ರಾಣ ತ್ಯಾಗ ಮಾಡುವುದಾಗಿ ಪ್ರತಿಜ್ಞೆ ಮಾಡಿ ಆತ್ಮಾರ್ಪಣೆ ಮಾಡಿಕೊಂಡಿದ್ದಾರೆ. ಇಂತಹವರನ್ನು ಗರುಡರೆಂದು, ಲೆಂಕ ಮತ್ತು ಲೆಂಕಿತಿಯರೆಂದು ಕರೆದಿವೆ. ಇವರ ನೆನಪಿಗಾಗಿ ಹಾಕಿಸಿದ ಶಾಸನಗಳನ್ನು ಅದಕ್ಕೆ ಮೀಸಲಾದ ಕಂಬಗಳ ಬುಡದಲ್ಲಿ ಕಂಡರಿಸಿ ದೇವಾಲಯಗಳ ಬಳಿ ನಿಲ್ಲಿಸಿರುತ್ತಾರೆ. ಈ ವೀರಗಲ್ಲು ಶಾಸನಗಳು ಮತ್ತು ಕಂಬದ ಮೇಲಿರುವ ಎರಡು ವೀರಗಲ್ಲು ಶಾಸನಗಳು ಗರುಡ ಅಥವಾ ಲೆಂಕರಿಗೆ ಸೇರಿವೆ. ಇವುಗಳನ್ನು ಹೊರತುಪಡಿಸಿ ಪಾಠವಿಲ್ಲದ ವೀರಗಲ್ಲುಗಳು ದೇವಾಲಯದ ಆವರಣದಲ್ಲಿ ದಕ್ಷಿಣದ ಗೋಡೆಗೆ ನಿಲ್ಲಿಸಿವೆ. ಇವುಗಳಲ್ಲಿ ಲಿಪಿ ಇಲ್ಲದ ಮೂರು ವೀರಗಲ್ಲುಗಳು 'ಪೆಣ್ಬುಯಲ್' ಮತ್ತು 'ತುರುಗೊಳ್' ಕಾಳಗಕ್ಕೆ ಸಂಬಂಧಿಸಿದ ವೀರಗಲ್ಲುಗಳೆಂದು ಗುರುತಿಸಲಾಗಿದೆ. ಇವುಗಳಲ್ಲಿ ಎರಡು ವೀರಗಲ್ಲುಗಳನ್ನು ನಾಲ್ಕು ಹಂತಗಳಲ್ಲಿ ಕಂಡರಿಸಲಾಗಿದೆ. ಒಂದು ವೀರಗಲ್ಲು ಮೊದಲ ಹಂತದ ಬಹುಭಾಗ ಭೂಮಿಯಲ್ಲಿ ಸೇರಿದ್ದು ಮೇಲೆ ಕಾಣುವ ಭಾಗದಲ್ಲಿ ಕುದುರೆ ಮೇಲೆ ಕುಳಿತಿರುವ ವೀರರು ಆಯುಧಗಳನ್ನು ಧರಿಸಿರುವ ಕಾಲಾಳುಗಳ ನಡುವಿನ ಹೋರಾಟವನ್ನು ಗುರುತಿಸಬಹುದು. ಎರಡನೇ ಹಂತದಲ್ಲಿ ಕಲ್ಲಿನ ಎಡಭಾಗದ ವೀರರು ಕುದುರೆಗಳ ಮೇಲೆ ಕುಳಿತು ಎಡಗಾಲನ್ನು ಕುದುರೆಯ ರಿಕಾಬಿನಲ್ಲಿ ಇರಿಸಿರುವಂತೆ ಹಾಗೂ ಎಡಗೈಲಿ ಕುದುರೆಯ ಜೀನನ್ನು ಹಿಡಿದು ಬಲದ ಕೈಲಿ ಉದ್ದವಾದ ಈಟಿ ಅಥವಾ ಬಲ್ಲೆಗಳನ್ನು ಹಿಡಿದು ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಕಲ್ಲಿನ ಬಲಭಾಗದಿಂದ ನುಗ್ಗುತ್ತಿರುವ ವೀರರು ಸಹ ಕುದುರೆಗಳ ಮೇಲೆ ಕುಳಿತು ಶತ್ರುಗಳ ಮೇಲೆ ವೀರಾವೇಶದಿಂದ ಹೋರಾಟದಲ್ಲಿ ತೊಡಗಿರುವಂತೆ ಬಿಡಿಸಿದೆ. ಬಲಭಾಗದ ಕಡೆಯ ವೀರ ಕುದುರೆಯ ಮುಂಭಾಗದಲ್ಲಿ ಕೆಳಗೆ ನಿಂತು ತನ್ನ ಬಲಗೈಲಿರುವ ಆಯುಧದಿಂದ ಶತ್ರುವಿನ ಕುದುರೆಯ ಎದೆಯ ಭಾಗಕ್ಕೆ ತಿವಿಯುತ್ತಿರುವಂತೆಯೂ ಎಡಗೈಲಿರುವ ಗುರಾಣಿಯಿಂದ ಶತ್ರುವಿನ ಬಲ್ಲೆಯ ಪೆಟ್ಟಿಗೆ ಸಿಕ್ಕದಂತೆ ಅಡ್ಡ ಹಿಡಿದು ರಕ್ಷಣೆ ಪಡೆದಿದ್ದಾನೆ. ಕೆಳಭಾಗದಲ್ಲಿ ಎರಡು ಕಡೆಯ ಕಾಲಾಳುಗಳು ಆಯುಧಪಾಣಿಗಳಾಗಿ ತೀವ್ರ ಹೋರಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಅದೇ ಹಂತದ ಮೇಲು ಭಾಗದಲ್ಲಿ ತುತ್ತೂರಿ ಊದುತ್ತಿರುವ, ಛತ್ರಿ, ಚಾಮರ, ಬಾವುಟಗಳಿಂದ ಕೂಡಿದ ಮಂಗಳ ವಾದ್ಯದ ವೀರರು ಮುಂದಕ್ಕೆ ಹೋಗುತ್ತಿರುವಂತೆಯೂ, ಅದರ ಹಿಂಭಾಗದಲ್ಲಿ ಸ್ತ್ರೀಯರನ್ನು ಕರೆದೊಯ್ಯುತ್ತಿರುವಂತೆ ಬಿಡಿಸಲಾಗಿದೆ. ಕಾಳಗ ತೀವ್ರ ಸ್ವರೂಪದಲ್ಲಿ ನಡೆದಿರುವಂತೆ ಬಿಡಿಸಲಾಗಿದೆ. ಸಾಮಾನ್ಯ

* ಆಶೀರ್ವಾದ, # ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೨ನೆಯ ಹಂತ, ಬೆಂಗಳೂರು-೫೬೦೦೪೦.



ಹುಣಿಸೇಶ್ವರ ದೇವಾಲಯದಲ್ಲಿರುವ ವೀರಗಲ್ಲು

ಕಾಲಾಳು ಸೈನಿಕರನ್ನು ಚಿಕ್ಕ ಚಿಕಣಿ ಶಿಲ್ಪಗಳಂತೆ ಬಿಡಿಸಿರುವುದು ಈ ವೀರಗಲ್ಲಿನ ವಿಶೇಷ. ಈ ಕಾಲಾಳು ಸೈನಿಕರು ವಿವಿಧ ಭಂಗಿಯಲ್ಲಿ ಹೋರಾಡುತ್ತಿರುವ ದೃಶ್ಯ ಬಿಡಿಸಲಾಗಿದೆ.

ಈ ವೀರಗಲ್ಲಿನಲ್ಲಿ ಯುದ್ಧಕ್ಕೆ ಕಾರಣವಾಗಿರಬಹುದಾದ ಗೋಗ್ರಹಣ ಮತ್ತು ಪೆಣ್ಬುಯಲ್‌ಗೆ ಸಂಬಂಧಿಸಿದ ಶಿಲ್ಪವನ್ನು ಕಾಣಬಹುದು. ಬಹುಶಃ ಯುದ್ಧ ವೀರನ ಹಿಂಬದಿಯಲ್ಲಿ ಹಿಂತಿರುಗುವ ಭಂಗಿಯಲ್ಲಿರುವ ಗೋವುಗಳನ್ನು ಹಾಗೂ ಸೆರೆ ಹಿಡಿದಿರುವ ಸ್ತ್ರೀಯರು ಮತ್ತು ಮಕ್ಕಳು ಚಿಕಣಿ ಶಿಲ್ಪಗಳಲ್ಲಿ ಬಿಡಿಸಲಾಗಿದೆ. ಈ ಸೆರೆಯನ್ನು ಮೆರವಣಿಗೆಯ ಮೂಲಕ ಕರೆದೊಯ್ಯುತ್ತಿರುವಂತೆ ಬಿಡಿಸಲಾಗಿದೆ.

ಮೂರನೇ ಹಂತದಲ್ಲಿ ಅಲಂಕೃತ ಅಪ್ಸರ ಸ್ತ್ರೀಯರು ಸುಂದರವಾದ ಪುಷ್ಪಕ ವಿಮಾನದಲ್ಲಿ ಪದ್ಮಾಸನದಲ್ಲಿ ಕುಳಿತು ಧ್ಯಾನಭಂಗಿಯಲ್ಲಿ ಕೈಮುಗಿದು ಕುಳಿತಿರುವ ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ, ಮಂಟಪದೊಳಗೆ ವೀರನ ಅಕ್ಕಪಕ್ಕದಲ್ಲಿ ಸ್ತ್ರೀಯರು ಸೇವೆಗಾಗಿ ನಿಂತಿರುವಂತೆ ಇದೆ. ಮಂಟಪದ ಹೊರಭಾಗದಲ್ಲಿ ಚಾಮರ ದಾರಿಯರು ಚಾಮರ ಬೀಸುತ್ತಿರುವಂತೆ ಶಿಲ್ಪಿ ಬಿಡಿಸಿದ್ದಾನೆ. ವೀರ ಕುಳಿತಿರುವ ವಿಮಾನದ ಮೇಲುಭಾಗ ಸುಂದರ ಕೆತ್ತನೆಗಳಿಂದ ಕೂಡಿ ಮೂರು ಹಂತಗಳಿದ್ದು, ತುದಿಯಲ್ಲಿ ಕಲಶವಿದೆ.

ಆಕಾಶದಲ್ಲಿ ವಿಮಾನ ಹೋಗುತ್ತಿರುವ ದೃಶ್ಯದ ಕಲ್ಪನೆ ಬರುವಂತೆ ಶಿಲ್ಪಿ ಮೋಡಗಳನ್ನು ಬಿಡಿಸಿದ್ದಾನೆ. ಈ ಅದ್ಭುತ ಕಲ್ಪನಾ ಸೃಷ್ಟಿ ಕರೆದೊಯ್ಯುತ್ತಿರುವ ವಿಶೇಷತೆಯನ್ನು ನೈಜತೆಯಲ್ಲಿ ಮೆರೆದಿದ್ದಾನೆ. ಸ್ವರ್ಗ ಪ್ರವೇಶದ ಕಲ್ಪನೆಯು ಬರುವಂತೆ ಛತ್ರಿ, ಚಾಮರ, ಕಲಶ, ಕೊಂಬು, ಕಹಳೆ ಮೊದಲಾದ ಮಂಗಳವಾದ್ಯಗಳ ಸಹಿತ ವೀರನನ್ನು ಸ್ವರ್ಗದಲ್ಲಿ ಸ್ವಾಗತಿಸುತ್ತಿರುವಂತೆ ಶಿಲ್ಪಿ ಕೆತ್ತಿದ್ದಾನೆ.

ನಾಲ್ಕನೆಯ ಹಂತದಲ್ಲಿ ಮೂರು ಹಂತದಲ್ಲಿರುವ ಪಾಣಿಪೀಠವಿರುವ ಶಿವಲಿಂಗವಿದೆ. ಶಿವಲಿಂಗದ ಶಿರೋಭಾಗದಲ್ಲಿ ರುದ್ರಾಕ್ಷಿ ಮಾಲೆಯನ್ನು ಸುತ್ತಿ ಶಿವಲಿಂಗವನ್ನು ಅಲಂಕರಿಸಿದೆ. ಶಿವಲಿಂಗದ ಮೇಲೆ ಧಾರಾಪಾತ್ರೆ ಇದೆ. ಶಿವಲಿಂಗದ ಹಿಂದೆ ಮತ್ತು ಮುಂದೆ ಇಬ್ಬರು ಯತಿಗಳು ಪೂಜೆ ಸಲ್ಲಿಸುತ್ತಿದ್ದಾರೆ. ಶಿವಲಿಂಗದ ಮುಂದಿರುವ ನಂದಿ ತನ್ನ ಎಡಭಾಗದ ಹಿಂದಿನ ಕಾಲನ್ನು ಮಡಿಚಿ ಮುಂದಿನ ಕಾಲನ್ನು ಮುಂದಕ್ಕೆ ಚಾಚಿ ಮೊಳಕಾಲನ್ನು ಮಡಿಚಿರುವಂತೆ ಮತ್ತು ತನ್ನ ತಲೆಯನ್ನು ಎಡಭಾಗಕ್ಕೆ ಸ್ವಲ್ಪ ಓರೆ ಮಾಡಿ ಕುಳಿತಿದೆ. ಎರಡು ಕೊಂಬುಗಳಿಗೆ ಹೂವಿನ ಮಾಲೆಯನ್ನು ಸುತ್ತಿದೆ. ಹಣೆಯಲ್ಲಿ ಗುಂಡು ನಾಮವಿದೆ. ಎಡಭಾಗದಲ್ಲಿ ಪೂಜೆ ಮಾಡುತ್ತಿರುವ ಯತಿಯ ಹಿಂದೆ ಕುಳಿತಿರುವ ಭಕ್ತ ತನ್ನ ಬಲಗಾಲನ್ನು ಮಡಿಚಿ ಎಡಗಾಲನ್ನು ಕತ್ತರಿ ಹಾಕಿ ಕೈಮುಗಿದು ಕುಳಿತಿದ್ದಾನೆ. ಕಿವಿಯಲ್ಲಿ ಕೈ, ತೋಳಿನಲ್ಲಿ ಎದೆಯ ಮೇಲೆ ಆಭರಣ ಧರಿಸಿರುವಂತಿದೆ. ಭಕ್ತ/ವೀರ ಕಾಲಿಗೆ ಗರುಡರು ಧರಿಸಿರುವಂತಹ ತೊಡರು ಇದೆ. ತಲೆಗೆ ಪೇಟ ಸುತ್ತಿದೆ. ವೀರನ ಹಿಂದೆ ಅವನಂತೆಯೆ ಅಲಂಕರಿಸಿಕೊಂಡು ಕುಳಿತಿರುವ ಸ್ತ್ರೀ ಶಿಲ್ಪವಿದ್ದು ವೀರನ ಪತ್ನಿ ಇರಬಹುದು. ಅವರಿಗೆ ಚಾಮರದಾರಿಯು ಚಾಮರ ಬೀಸುತ್ತಿರುವ ಇಬ್ಬರು ಸ್ತ್ರೀಯರಿದ್ದಾರೆ. ಶಿವಲಿಂಗಕ್ಕೆ ಚಾಮರ ಬೀಸುತ್ತಿರುವ ಸ್ತ್ರೀ ದೇವಾಲಯದ ಸೂಳೆ ಇದ್ದಿರಬಹುದು. ಆಕೆಯ ಹಿಂದೆ ಭಕ್ತನೊಬ್ಬ ಶಂಖವನ್ನು ಊದುತ್ತಿರುವಂತೆ ಬಿಡಿಸಿದೆ. ಸೂರ್ಯ ಮತ್ತು ಚಂದ್ರರ ರಚನೆ ಇದೆ. ಈ



**ಹುಣಿಸೇಶ್ವರ ದೇವಾಲಯದಲ್ಲಿರುವ ವೀರಗಲ್ಲು**

ವೀರನ ಕಾಲಿನಲ್ಲಿ ಗರುಡ/ಲೆಂಕರು ಧರಿಸುವ ತೊಡರು ಇರುವುದರಿಂದ ಈತ ರಾಜನ ಗರುಡನೆಂದು ವಿದ್ವಾಂಸರ ಅಭಿಪ್ರಾಯ.

ಈ ವೀರಗಲ್ಲಿನ ಪಕ್ಕದಲ್ಲಿರುವ ಮತ್ತೊಂದು ವೀರಗಲ್ಲು ಸಹ ನಾಲ್ಕು ಹಂತದಲ್ಲಿದ್ದು ಕುದುರೆ ಕಾಳಗದ ವಿವರವೆಂದು ಗುರುತಿಸಬಹುದು. ಬಹುಶಃ ಇದು ಸಹ ಪೆಣ್ಬುಯಲ್ ಮತ್ತು ಗೋಗ್ರಹಣ ಕಾಳಗಕ್ಕೆ ಸಂಬಂಧಿಸಿದಂತೆ ಕಾಣುತ್ತದೆ. ಇನ್ನುಳಿದ ನಾಲ್ಕು ವೀರಗಲ್ಲುಗಳು ಮೂರು ಹಂತದಲ್ಲಿದ್ದು ಹೋರಾಡುತ್ತಿರುವ ವೀರರು ಧರಿಸಿರುವ ವಸ್ತ್ರ ವಿನ್ಯಾಸ, ಆಭರಣಗಳು ಮತ್ತು ಆಯುಧಗಳು, ಕುದುರೆಗಳ ಮೇಲೆ ಕುಳಿತು ಹೋರಾಡುತ್ತಿರುವ ಭೀಕರತೆಯನ್ನು ಶಿಲ್ಪಿ ನೈಜವಾಗಿ ಬಿಡಿಸಿದ್ದಾನೆ. ವೀರನನ್ನು ಅಲಂಕೃತ ಮಂಟಪದಲ್ಲಿ ಕರೆದೊಯ್ಯುತ್ತಿರುವ ಅಪ್ಸರೆಯರು ದೇವಲೋಕದ ಕಲ್ಪನೆ ಕಣ್ಣಿಗೆ ಕಾಣುವಂತೆ ಶಿಲ್ಪಗಳಲ್ಲಿ ಸ್ಪಷ್ಟತೆ ಇದೆ. ಈ ನಾಲ್ಕು ವೀರಗಲ್ಲುಗಳು ಅಲ್ಪ ಸ್ವಲ್ಪ ವ್ಯತ್ಯಾಸದಿಂದ ಕೂಡಿವೆ. ಈ ಎಲ್ಲಾ ವೀರಗಲ್ಲುಗಳಲ್ಲಿ ಶಾಸನ ಪಾಠವಿಲ್ಲದಿರುವುದರಿಂದ ಅವುಗಳ ವಿವರ ತಿಳಿಯುವುದಿಲ್ಲ.



**ಆಧಾರಸೂಚಿ**


೧. ಕರ್ನಾಟಕ ಶಾಸನ ಸಂಪುಟ ೬.



೨. ಅಗ್ರಹಾರ ಬಾಚಹಳ್ಳಿಯ ಪ್ರವಾಸದಲ್ಲಿ ನೋಡಿದ ಶಿಲ್ಪಗಳನ್ನು ಗುರುತಿಸಲು ನೆರವು ನೀಡಿದ ಗುರುಗಳಾದ ಡಾ. ದೇವರಕೊಂಡಾರೆಡ್ಡಿಯವರಿಗೆ ಹಾಗೂ ಫೋಟೋ ಕೊಟ್ಟು ಸಹಕರಿಸಿದ ಸೋದರ ಶ್ರೀ ಎಂ.ಎನ್. ಪ್ರಭಾಕರ್ ಅವರಿಗೆ ನನ್ನ ಕೃತಜ್ಞತೆಗಳು.



# ಮೊಳಕಾಲ್ಮೂರು ತಾಲೂಕಿನ ಮಾಚೇನಹಳ್ಳಿ ಗ್ರಾಮದ ವೀರಗಲ್ಲು ಮತ್ತು ವೀರಮಾಸ್ತಿಗಲ್ಲುಗಳು

ಹೊನ್ನೂರುಸ್ವಾಮಿ ಹೆಚ್.*

ಚಿತ್ರದುರ್ಗವು ಕರ್ನಾಟಕದಲ್ಲಿರುವ ಒಂದು ಪ್ರಮುಖ ಜಿಲ್ಲೆಯಾಗಿದೆ. ಇದು ಆರು ತಾಲೂಕುಗಳನ್ನು ಒಳಗೊಂಡಿದ್ದು, ಅವುಗಳಲ್ಲಿ ಮೊಳಕಾಲ್ಮೂರು ಒಂದು. ಈ ತಾಲೂಕಿನ ದೇವಸಮುದ್ರ ಹೋಬಳಿಯಲ್ಲಿರುವ ಮಾಚೇನಹಳ್ಳಿ ಗ್ರಾಮವು, ಪ್ರಾಗೈತಿಹಾಸಕ್ಕೆ ಸಂಬಂಧಪಟ್ಟ ಪ್ರಮುಖ ಅವಶೇಷಗಳನ್ನು ಹೊಂದಿರುವ ಪರಿಸರವಾಗಿದೆ. ಈ ಗ್ರಾಮ ಮೊಳಕಾಲ್ಮೂರು ತಾಲೂಕಿನಿಂದ ಉತ್ತರಕ್ಕೆ ೧೮ ಕಿ.ಮೀ. ದೂರದಲ್ಲಿದೆ. ಮೌರ್ಯ ಸಾಮ್ರಾಜ್ಯದ ಅರಸ ಅಶೋಕ ಮಹಾಶಯನ ಹೆಸರಿನಿಂದಲೇ ಪ್ರಸಿದ್ಧಿ ಪಡೆದಿರುವ ಅಶೋಕ ಸಿದ್ಧಾಪುರ ಮತ್ತು ಬ್ರಹ್ಮಗಿರಿ ಪ್ರದೇಶಗಳಿಂದ ಪೂರ್ವಕ್ಕೆ ೩ ಕಿ.ಮೀ. ಅಂತರದಲ್ಲಿದೆ. ಬೆಟ್ಟಗುಡ್ಡಗಳಿಂದ ಕೂಡಿದ ಹಾಗೂ ಚಿನ್ನಹಗರಿ ನದಿಯ ಎಡದಂಡೆ ಮೇಲಿರುವ ಇತಿಹಾಸ ಪ್ರಸಿದ್ಧ ಗ್ರಾಮವಾಗಿದೆ.

ಈ ಗ್ರಾಮದ ಸ್ಥಳನಾಮದ ಉಲ್ಲೇಖವು ಕ್ರಿ.ಶ. ೧೫ನೇ ಶತಮಾನದ ಪ್ರೌಢದೇವರಾಯನ ತಾಮ್ರಶಾಸನದಲ್ಲಿ ಉಲ್ಲೇಖಗೊಂಡಿದೆ. ಜಟಂಗಿ ರಾಮೇಶ್ವರ ದೇವಾಲಯದಲ್ಲಿ ದೊರೆತಿರುವ ಅವನ ಶಾಸನದ ಸಾರಾಂಶ ಹೀಗಿದೆ. ಗಣಪತಿಯ ಸುತ್ತಿಯಿಂದ ಪ್ರಾರಂಭವಾಗುವ ಈ ತಾಮ್ರ ಶಾಸನದಲ್ಲಿ ಕಾಲವನ್ನು ಶಕವರ್ಷಂಗಳು ಸಾವಿರದ ಮುಂನೂರಐವತ್ತು ಆರನೆಯ ಆನಂದ ಸಂವತ್ಸರದ ಆಶ್ವಯುಜ ಬಹುಳ.....ಎಂದು ನೀಡಿದೆ. ಇದು ಕ್ರಿ. ಶ. ೧೪೩೪, ಸೆಪ್ಟೆಂಬರ್ ೨೭, ಸೋಮವಾರವಾಗುತ್ತದೆ. ದೇವರಾಯ ಮಹಾರಾಯರು ಭೇಟೆಯಾಡುವಸಲುವಾಗಿ ಮಾಚನಹಳ್ಳಿಗೆ ಬಂದಾಗ ಸಮೀಪದ ಜಟಂಗಿ ರಾಮಯ ದೇವರ ದರ್ಶನ ಪಡೆದು ಆ ದೇವರಿಗೆ ರಾಯದುರ್ಗಕ್ಕೆ ಸಲುವ ಅಮೃತಪಡಿ ಕಟ್ಟಳಯ ಇಪ್ಪತ್ತು ವರಹದ ಆದಾಯ ವಿರುವ ಗ್ರಾಮವನ್ನು ದಾನವಾಗಿ ಬಿಡುತ್ತಾನೆ. ಸ್ಥಳೀಯ ಅಧಿಕಾರಿ ಅರಸಪ್ಪಗಳ ಅಪ್ಪಣೆಯಂತೆ ವೀರಂಣ್ಣನು ಅನುಭೋಗಿಸುತ್ತಿದ್ದ ಭೂಮಿಯನ್ನು ದಾನವಾಗಿ ಬಿಡಲಾಗಿದೆ. ಶಾಸನ ಬರೆದ ವರದೋಜ ಎಂಬುವನಿಗೂ ಒಂದು ವೃತ್ತಿಯನ್ನು ದಾನವಾಗಿ ಬಿಟ್ಟಿದೆ.

ಮೊಳಕಾಲ್ಮೂರು ತಾಲೂಕು ಪರಿಸರದಲ್ಲಿ ಕೆಲವು ವಿಶಿಷ್ಟ ಹಾಗೂ ಮಹತ್ವ ವೀರಗಲ್ಲು, ಮಹಾಸತಿಗಲ್ಲು ಮತ್ತು ವೀರಮಾಸ್ತಿಗಲ್ಲುಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಮೌರ್ಯ, ನೊಳಂಬ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಹೊಯ್ಸಳ, ವಿಜಯನಗರ ಅರಸರ ಹಾಗೂ ಚಿತ್ರದುರ್ಗ ಪಾಳೆಗಾರರ ಕಾಲಕ್ಕೆ ಸೇರಿದವು. ಮಾಚೇನಹಳ್ಳಿಯಲ್ಲಿ ದೊರೆತಿರುವ ವೀರಮಾಸ್ತಿಗಲ್ಲು ಹಾಗೂ ವೀರಗಲ್ಲುಗಳು ಹೊಯ್ಸಳ, ವಿಜಯನಗರ ಹಾಗೂ ವಿಜಯನಗರೋತ್ತರ ಕಾಲಕ್ಕೆ ಸೇರಿದವುಗಳಾಗಿವೆ. ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಶ್ರೀಯುತ ಪೂಜಾರಿ ಮಾರಣ್ಣನ ಗದ್ದೆಯಲ್ಲಿ ಎರಡು, ದಕ್ಷಿಣ ದಿಕ್ಕಿನಲ್ಲಿರುವ ಶ್ರೀ ಯುತ ಸತ್ಯನಾರಾಯಣ ಗಾಯಕ್ವಾಡ್ ಅವರ ತೋಟದಲ್ಲಿ ನಾಲ್ಕು ವೀರಗಲ್ಲುಗಳು ಮತ್ತು ಒಂದು ವೀರಮಾಸ್ತಿಗಲ್ಲುನ್ನು ಶ್ರೀಯುತ ಮಾರಣ್ಣನ ಹೊಲದಲ್ಲಿ ಕಾಣುತ್ತೇವೆ.

## ವೀರಗಲ್ಲು

ವೀರನ ಸ್ಮಾರಕವಾಗಿ ನಿರ್ಮಿಸಿದ ಶಿಲ್ಪಗಳನ್ನು ವೀರಗಲ್ಲು ಎಂದು ಕರೆಯುಲಾಗುತ್ತದೆ. ಯುದ್ಧ, ಬೇಟೆ, ತುರುಗೋಳ್, ಪೆಣ್ಬುಯ್ಯಲ್ ಮತ್ತು ಗಡಿ ವ್ಯಾಜ್ಯಗಳು ಇತ್ಯಾದಿ ಯಾವುದೇ ಸಂದರ್ಭದಲ್ಲಾಗಲೀ ಹೋರಾಡಿ ಮಡಿದ ವೀರರ ಸ್ಮರಣೆಗಾಗಿ ನಿರ್ಮಿಸಿದ ಸ್ಮಾರಕಗಳನ್ನು ವೀರಗಲ್ಲು ಎಂದು ಕರೆಯಲಾಗುತ್ತದೆ. ವೀರಗಲ್ಲುಗಳಲ್ಲಿ ವೀರನ ಚಿತ್ರಣಕ್ಕೆ ಪ್ರಧಾನ ಪಾತ್ರ ದೊರೆಯುತ್ತದೆ, ವೀರ ಶಿಲ್ಪದ ನಾಯಕ ಆಗುತ್ತಾನೆ. ಆತನೊಂದಿಗೆ ಮಡಿದ ಆತನ ಹೆಂಡತಿ ನಾಯಕಿಯಾಗುತ್ತಾಳೆ. ಆಗ ಸಹಜವಾಗಿ ವೀರಗಲ್ಲಿನ ಶಿಲ್ಪದಲ್ಲಿ ನಾಯಕನ ಚಿತ್ರಣಕ್ಕೆ ಪ್ರಥಮ ಸ್ಥಾನ ದೊರೆಯುತ್ತದೆ. ವೀರಗಲ್ಲುಗಳಲ್ಲಿ ಶಾಸನ ರಹಿತವಾದ ಶಿಲ್ಪವು ಮಾತ್ರವೇ ಇರುವಂತಹ ವೀರಗಲ್ಲು, ಶಾಸನ ಸಹಿತವಾದ ವೀರಗಲ್ಲು, ಶಿಲ್ಪ ರಹಿತವಾದ ಶಾಸನ ಮಾತ್ರವೇ ಇರುವ ವೀರಗಲ್ಲುಗಳು ದೊರೆಯುತ್ತವೆ.

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩೨೭೬.

### ವೀರಮಾಸ್ತಿಗಲ್ಲು

ಯುದ್ಧದಲ್ಲಿ ಹೋರಾಡಿ ಮಡಿದ ವ್ಯಕ್ತಿಯ ಪತ್ನಿಯು ಸಹಗಮನ ಮಾಡಿದ್ದರೆ ಅಂತಹ ಸಂದರ್ಭಗಳಲ್ಲಿ ಹೋರಾಡಿ ಮಡಿದ ವೀರನಿಗೂ ಪ್ರಾಮುಖ್ಯತೆಯಿರುವುದರಿಂದ ಆ ವೀರನ ಶಿಲ್ಪವನ್ನು ಪ್ರಧಾನವಾಗಿ ಕಾಣುವಂತೆ ಕೆತ್ತಿರುತ್ತಾರೆ. ಆತನ ಪತ್ನಿಯು ಸಹಗಮನ ಮಾಡಿರುವುದರಿಂದ ಆ ಮಹಾಸತಿಗೂ ಪ್ರಾಮುಖ್ಯತೆಯಿರುತ್ತದೆ. ಆದ್ದರಿಂದ ಆ ವೀರ ಮತ್ತು ಆತನ ಪತ್ನಿ ಇಬ್ಬರ ಶಿಲ್ಪಗಳಿಗೂ ಪ್ರಾಮುಖ್ಯತೆ ಯಿರುವಂತೆ ಕೆತ್ತಿರುತ್ತಾರೆ. ವೀರನು ಆಯುಧಪಾಣಿಯಾಗಿ ಹೋರಾಟದ ಭಂಗಿಯಲ್ಲಿ ನಿಂತಿರುತ್ತಾನೆ. ಆತನ ಪತ್ನಿಯು ತನ್ನ ಬಲಗೈಯ್ಯನ್ನು ಮೇಲೆತ್ತಿ ಅಭಯ ಹಸ್ತವನ್ನು ತೋರುತ್ತಿರುವಂತೆ ನಿಂತಿರುತ್ತಾಳೆ. ಇಂತಹ ಮಾಸ್ತಿಕಲ್ಲುನ್ನು ವೀರಮಾಸ್ತಿಕಲ್ಲು ಎಂದು ಕರೆಯಲಾಗುತ್ತದೆ. ಅದು ವೀರನ ಮರಣದ ಸ್ಮಾರಕವಾಗಿರುವುದರಿಂದ ಅದು ವೀರಗಲ್ಲೂ ಹೌದು. ಮಹಾಸತಿಯೊಬ್ಬಳ ಮರಣಕ್ಕೆ ಸ್ಮಾರಕವಾಗಿರುವುದ ರಿಂದ ಅದು ಮಾಸ್ತಿಕಲ್ಲೂ ಹೌದು. ಅದು ವೀರಗಲ್ಲು ಮತ್ತು ಮಾಸ್ತಿಕಲ್ಲು ಎರಡೂ ಆಗಿರುವುದರಿಂದ ಇಂತಹ ಸ್ಮಾರಕಶಿಲೆಯನ್ನು ವೀರಮಾಸ್ತಿಕಲ್ಲು ಎಂದು ಕರೆಯಲಾಗುತ್ತದೆ.

### ವೀರಗಲ್ಲು : ಸಂಖ್ಯೆ-೦೧

ಈ ವೀರಗಲ್ಲುನ್ನು ಆರು ಅಡಿ ಉದ್ದ, ಮೂರು ಅಡಿ ಅಗಲವಾದ ಕಪ್ಪು-ಬಿಳಿಮಿಶ್ರಿತ ಶಿಲೆಯಲ್ಲಿ ಮೂರು ಹಂತಗಳಲ್ಲಿ ಕೆತ್ತಲಾಗಿದೆ. ಮೂರೂ ಹಂತಗಳಲ್ಲಿಯೂ ಶಿಲ್ಪ ಗಳನ್ನು ಬಿಡಿಸಲಾಗಿದೆ. ಒಂದನೆ ಹಂತದಲ್ಲಿ ನೆಗೆಯುತ್ತಿರುವ ಕುದುರೆಯ ಮೇಲೆ ಕುಳಿತಿರುವ ವೀರನು, ಎಡಗೈಯಲ್ಲಿ ಕುದುರೆಯ ಲಗಾಮನ್ನು, ಬಲಗೈಯಲ್ಲಿ ಉದ್ದನೆಯ ಈಟಿ ಆಯುಧವನ್ನು ಹಿಡಿದುಕೊಂಡಿದ್ದಾನೆ. ಕುದುರೆಯ ಹಿಂದೆ ಸ್ತ್ರೀಯೊಬ್ಬಳ ಕೆತ್ತನೆಯಿದ್ದು, ಆಕೆಯು ವೀರನಿಗೆ ಯುದ್ಧದಲ್ಲಿ ನೆರವಾಗುವಂತೆ ಕಂಡುಬರುವಳು. ಕೆಳಭಾಗದಲ್ಲಿರುವವರು ಶತ್ರುಗಳಾಗಿದ್ದು, ಅವರೆಲ್ಲಾ ತಮ್ಮ ಕೈಗಳಲ್ಲಿ ಬಿಲ್ಲು ಆಯುಧಗಳನ್ನು ಹಿಡಿದು ವೀರನೊಂದಿಗೆ ಹೋರಾಡಲು ಸನ್ನದ್ಧರಾಗಿರುವಂತೆ ಕಾಣುವರು. ಎರಡನೆ ಹಂತದಲ್ಲಿ ವೀರನು ಮಂಟಪದಲ್ಲಿ ಧ್ಯಾನಸಕ್ತನಾಗಿ ಕುಳಿತಿರುವನು. ಆತನ ಎಡಭಾಗದಲ್ಲಿರುವ ಅಪ್ಸರೆಯೊಬ್ಬಳು ಚಾಮರ ಸೇವೆ ಯೊಂದಿಗೆ ದೇವಲೋಕಕ್ಕೆ ಕರೆದೊಯ್ಯುತ್ತಿರುವಳು. ಮೂರನೆ ಹಂತದ ಮಧ್ಯದಲ್ಲಿ ಶಿವಲಿಂಗವಿದ್ದು, ಅದರ ಮುಂದೆ ನಂದಿ ಇದೆ. ವೀರನು ಶಿವಲಿಂಗ ಪೂಜೆಯಲ್ಲಿ ತಲ್ಲಿನವಾಗಿರುವ ದೃಶ್ಯ ಕಂಡುಬರುತ್ತದೆ. ಇದೇ ಹಂತದ ಎಡ-ಬಲಭಾಗದಲ್ಲಿ ಸೂರ್ಯ-ಚಂದ್ರರ ಕೆತ್ತನೆಯಿರುವುದು.

### ವೀರಗಲ್ಲು : ಸಂಖ್ಯೆ-೦೨

ಕಪ್ಪು ಮಿಶ್ರಣ ಬಿಳಿಕಣಶಿಲೆಯಲ್ಲಿರುವ ಈ ಸ್ಮಾರಕವನ್ನು ಮೂರು ಹಂತಗಳಲ್ಲಿ ಕೆತ್ತಲ್ಪಟ್ಟಿದೆ. ಇದು ಐದುವರೆ ಅಡಿ ಎತ್ತರ, ಐದು ಅಡಿ ಅಗಲವಾಗಿದೆ. ಸ್ಮಾರಕವು ಹುಲಿ ಕಾಳಗದ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಒಂದನೇ ಹಂತದಲ್ಲಿ ಅಲಂಕೃತಗೊಂಡ ನೆಗೆಯುತ್ತಿರುವ ಕುದುರೆ ಮೇಲೆ ವೀರನು ಕುಳಿತಿರುವನು. ಬಲಗೈಯಲ್ಲಿ ಈಟಿ ಆಯುಧವನ್ನು ಹಿಡಿದು ಘರ್ಜಿಸುತಿರುವ ಹುಲಿಯ ಬಾಯಿಗೆ ತಿವಿದಿರುವನು. ಕುದುರೆ ಹಿಂದೆ ಇರುವ ತನ್ನ ಪರಿವಾರದ ಯೋಧನೊಬ್ಬನು ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣವನ್ನು ಹಿಡಿದು ಒಡಯನಿಗೆ ಹೋರಾಟದಲ್ಲಿ ನೆರವಾಗುತ್ತಿರುವನು. ಈತನ ಹಿಂಭಾಗದಲ್ಲಿರುವ ಸ್ತ್ರೀಯೊಬ್ಬಳು ನೃತ್ಯ ಭಂಗಿಯಲ್ಲಿ ನಿಂತು ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತಿರುವಳು. ಎರಡನೆ ಹಂತದಲ್ಲಿ ರಾಜಪೋಷಾಕಿನಲ್ಲಿರುವ ವೀರನು ಸೊಂಟದಲ್ಲಿ ಬಿಲ್ಲುಗಳನ್ನು ಇಟ್ಟುಕೊಂಡಿರುವನು ಹಾಗೂ ಎರಡು ಕೈಗಳಿಂದ ಬಿಲ್ಲು ಆಯುಧವನ್ನು ಹಿಡಿದು ತನ್ನ ಎದುರು ಇರುವ ಮೊಲವೊಂದಕ್ಕೆ ಗುರಿಯಿಟ್ಟರುವನು. ಬಿಲ್ಲುಗುರಿ ಯಿಂದ ತಪ್ಪಿಸಿಕೊಳ್ಳಲು ಮೊಲವು ಮೇಲಕ್ಕೆ ನೆಗೆಯುವಂತಿದೆ. ಈ ಅಸಹಾಯಕ ಸ್ಥಿತಿಯನ್ನು ಮೊಲದ ಮರಿಗಳು ಭಯ ಗೊಂಡು ನೋಡುತ್ತಿವೆ. ವೀರನ ಇಬ್ಬಂದಿಯಲ್ಲಿರುವ ಸ್ತ್ರೀಯರು ಅವನ ರಾಣಿಯರಾಗಿದ್ದು. ಅವರು ಎಡಗೈಯಲ್ಲಿ ಹಿಡಿದಿರುವ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳು ತ್ತಿರುವರು. ಮೂರನೆ ಹಂತದ ಮಧ್ಯದಲ್ಲಿ ಮಂಟಪವಿದ್ದು, ಮಂಟಪದ ಒಳಗೆ ಶಿವಲಿಂಗವನ್ನು ಕೆತ್ತಲಾಗಿದೆ. ಶಿವಲಿಂಗದ ಬಲಭಾಗದಲ್ಲಿರುವ ವೀರನು ಕೈಮುಗಿದುಕೊಂಡು ಧ್ಯಾನಾಸಕ್ತನಾಗಿ ಕುಳಿತಿರುವನು. ಅಪ್ಸರೆಯು ಶಿವಲಿಂಗಕ್ಕೆ ಪೂಜೆಯನ್ನು ಸಲ್ಲಿಸುತ್ತಿರುವಳು. ಶಿವಲಿಂಗದ ಎಡಭಾಗದಲ್ಲಿ ನಂದಿ ಮತ್ತು ಸೂರ್ಯ-ಚಂದ್ರರ ಕೆತ್ತನೆಯಿದೆ. ಈ ಸ್ಮಾರಕ ಶಿಲ್ಪದಲ್ಲಿ ಶಿಲಾಕ್ಷರಗಳಿದ್ದು ಅಲ್ಪಮಟ್ಟಿಗೆ ಸವೆದು ಹೋಗಿರುವು ದರಿಂದ ಗ್ರಹಿಸಲು ಅಸಾಧ್ಯವಾಗಿದೆ.

### ವೀರಗಲ್ಲು : ಸಂಖ್ಯೆ-೦೩

ಎರಡು ಅಡಿ ಎತ್ತರ, ನಾಲ್ಕು ಅಡಿ ಅಗಲವಾಗಿರುವ ಈ ಸ್ಮಾರಕವನ್ನು ದಪ್ಪನೆಯ ಬಿಳಿಕಣಶಿಲೆಯಲ್ಲಿ ಕೆತ್ತಲಾಗಿದೆ. ಸ್ಮಾರಕವು ಒಂದು ಅಂಕಣದಲ್ಲಿದ್ದು ಮೂವರು ವೀರರನ್ನು ಬಿಡಿಸಲಾಗಿದೆ. ಪ್ರತಿಯೊಬ್ಬ ವೀರನು ಕಿವಿಗಳಲ್ಲಿ ಆಭರಣ ಗಳನ್ನು ಹಾಗೂ ಕೈಕಾಲುಗಳಲ್ಲಿ ದಪ್ಪನೆಯ ಕಡಗಗಳನ್ನು ಧರಿಸಿರುವರು. ತಲೆಯ ಕೂದಲನ್ನು ಎಡಕ್ಕೆ ಇರುವಾಗೆ ತುರುಬಿನಾಕಾರದಲ್ಲಿ ಕಟ್ಟಿಕೊಂಡಿರುವರು. ಸ್ಮಾರಕದ



ಚಿತ್ರ–೧



ಚಿತ್ರ–೨

ಮಧ್ಯದಲ್ಲಿರುವ ವೀರನೂ ಸಮಭಂಗಿಯಲ್ಲಿ ನಿಂತಿರುವನು. ಬಲಗೈಯಲ್ಲಿರುವ ಕತ್ತಿಯನ್ನು ಬಲಭುಜದ ಮೇಲೆ ಇಟ್ಟು ಕೊಂಡಿದ್ದಾನೆ ಹಾಗೂ ಎಡಗೈಯಲ್ಲಿ ಚಿಕ್ಕದಾದ ಚಾಕುವನ್ನು ಹಿಡಿದು ಕೆಳಗೆ ಇಳಿಬಿಟ್ಟಿರುವನು. ಈತನ ಎಡ–ಬಲಭಾಗ ದಲ್ಲಿರುವ ವೀರರಿಬ್ಬರು ಸಮಭಂಗಿಯಲ್ಲಿ ನಿಂತಿರುವರು. ಇಬ್ಬರು ಎಡಗೈಯಲ್ಲಿ ಕೋವಿಯನ್ನು ಹಿಡಿದಿರುವರು ಮತ್ತು ಬಲಗೈಯಲ್ಲಿ ಚಿಕ್ಕದಾದ ಚಾಕುವನ್ನು ಹಿಡಿದು ಕೆಳಗೆ ಇಳಿಬಿಟ್ಟಿರುವರು. ಸ್ಮಾರಕದಲ್ಲಿ ವೀರರು ಧರಿಸಿರುವ ಉಡುಪು ಗಳು ಗಮನಸೆಳೆಯುತ್ತವೆ. ಹೀಗಾಗಿ ವೀರರು ರಾಜಪರಿವಾರಕ್ಕೆ ಸೇರಿದವರೆಂದು ಗುರುತಿಸಬಹುದು.

## ವೀರಗಲ್ಲು : ಸಂಖ್ಯೆ–೦೪

ಈ ಸ್ಮಾರಕವು ಬಿಳಿಕಣಶಿಲೆಯಲ್ಲಿ ನಿರ್ಮಿತವಾಗಿದೆ. ಎರಡು ಅಡಿ ಎತ್ತರ, ಎರಡು ಅಡಿ ಅಗಲವಾಗಿದ್ದು, ಒಂದೇ ಅಂಕಣದಲ್ಲಿ ಕಂಡಿರಿಸಲಾಗಿದೆ. ದಷ್ಟಪುಷ್ಟವಾದ ಮೂವರು ವೀರರನ್ನು ಚಿತ್ರಿಸಲಾಗಿದೆ. ಪ್ರತಿಯೊಬ್ಬ ವೀರನೂ ಕಿವಿಯಲ್ಲಿ ಆಭರಣಗಳನ್ನು ಮತ್ತು ಕೈಕಾಲುಗಳಲ್ಲಿ ಕಡಗಗಳನ್ನು ಧರಿಸಿರು ವರು ಹಾಗೂ ತಮ್ಮ ತಲೆಯ ಕೂದಲನ್ನು ತುರುಭಿನಾಕಾರ ದಲ್ಲಿ ಎಡಕ್ಕೆ ಇರುವಾಗೆ ಕಟ್ಟಿಕೊಂಡಿರುವರು. ಮೂವರೂ ವೀರರು ಬಲಗೈಯಲ್ಲಿ ಕತ್ತಿಯಂತ ಉದ್ದನೆಯ ಆಯುಧವನ್ನು ಬಲಭುಜದ ಮೇಲೆ ಇಟ್ಟುಕೊಂಡಿದ್ದಾರೆ. ಎಡಗೈಯಲ್ಲಿ ಚಾಕು



ಚಿತ್ರ–೩



ಚಿತ್ರ–೪



ಚಿತ್ರ-೫



ಚಿತ್ರ-೬

ವನ್ನು ಹಿಡಿದು ಕೆಳಗೆ ಇಳಿಬಿಟ್ಟಿರುವರು. ಸ್ಮಾರಕದ ಎಡಭಾಗದಲ್ಲಿರುವ ವೀರನ ಎಡಗೈಭಾಗವು ಹಾಳಾಗಿರುವುದರಿಂದ ಆಯುಧ ಕಂಡುಬರುವುದಿಲ್ಲ. ಎಲ್ಲಾ ವೀರರೂ ತಮ್ಮ ಸೊಂಟದ ಬಳಿ ಚೂರಿಯಂತ ಆಯುಧವನ್ನು ಇಟ್ಟುಕೊಂಡಿದ್ದಾರೆ. ಸ್ಮಾರಕದಲ್ಲಿರುವ ವೀರರು ಧರಿಸಿರುವ ಉಡುಪುಗಳನ್ನು ಗಮನಿಸಿದರೆ ಸಾಮಾನ್ಯ ವರ್ಗದವರೆಂಬುದು ತಿಳಿದು ಬರುತ್ತದೆ.

**ವೀರಗಲ್ಲು : ಸಂಖ್ಯೆ-೦೫**

ಗ್ರಾಮದ ಶ್ರೀಯುತ ಪೂಜಾರಿ ಮಾರಣ್ಣನ ಗದ್ದೆಯೊಂದರಲ್ಲಿರುವ ಈ ಸ್ಮಾರಕನ್ನು ಬಿಳಿಕಣಶಿಲೆಯಲ್ಲಿ ಬಿಡಿಸಲಾಗಿದ್ದು. ಇದು ಮೂರು ಹಂತಗಳಿಂದ ಕೂಡಿದೆ. ಮೊದಲನೆ ಹಂತದಲ್ಲಿ ಕಿರೀಟಧಾರಿಣಿಯಾಗಿರುವ ವೀರನು ಎಡಗೈಯಲ್ಲಿ ಗುರಾಣಿಯನ್ನು, ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಮೇಲಕ್ಕೆತ್ತಿರುವನು. ಎರಡನೆ ಹಂತದಲ್ಲಿ ಮಡಿದ ವೀರನ ಎರಡು ಕೈಗಳನ್ನು ಹಿಡಿದು ಅಪ್ಸರೆಯರು ಚಾಮರ ಸೇವೆಯೊಂದಿಗೆ ಸ್ವರ್ಗಕ್ಕೆ ಕರೆದೊಯ್ಯುತ್ತಿರುವರು. ಮೂರನೆ ಹಂತದಲ್ಲಿ ಪೀಠದ ಮೇಲೆ ಕುಳಿತಿರುವ ವೀರನಗೆ ಅಪ್ಸರೆಯರಿಬ್ಬರು ಚಾಮರಸೇವೆಯನ್ನು ಮಾಡುತ್ತಿರುವರು. ಈ ಹಂತದ ಮೇಲ್ಭಾಗದಲ್ಲಿ ಶಿಲಾಕ್ಷರಗಳಿದ್ದು ಗ್ರಹಿಸಲು ಅಸ್ಪಷ್ಟವಾಗಿವೆ.

**ವೀರಗಲ್ಲು : ಸಂಖ್ಯೆ-೦೬**

ಈ ಸ್ಮಾರಕವು ಐದು ಅಡಿ ಎತ್ತರ, ಮೂರು ಅಡಿ ಅಗಲವಾಗಿದ್ದು. ಬಿಳಿಕಣಶಿಲೆಯಿಂದ ರಚಿಸಲಾಗಿದೆ. ಸ್ಮಾರಕವನ್ನು ಎರಡು ಅಂಕಣದಲ್ಲಿ ಕೆತ್ತನೆ ಮಾಡಲಾಗಿದೆ. ಮೊದಲನೇ ಹಂತದಲ್ಲಿ ಮೂವರ ಚಿತ್ರಗಳಿರುವುದು. ಬಲಭಾಗದಲ್ಲಿರುವ ವೀರನು ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಬಿಲ್ಲನ್ನೂ ಹಿಡಿದು ಶತ್ರುವಿನೊಂದಿಗೆ ಹೋರಾಡುತ್ತಿರುವನು. ವೀರನ ಹಿಂಭಾಗದಲ್ಲಿ ಚಿಕ್ಕದಾದ ಸ್ತ್ರೀಯ ಕೆತ್ತನೆಯಿರುವುದು. ಆಕೆಯು ಅಪಮಾನಿತಳಾದಂತೆ ಕಂಡುಬರುವಳು. ಎರಡನೇ ಹಂತದಲ್ಲಿ ಇಬ್ಬರು ಅಪ್ಸರೆಯರು ಮಡಿದ ವೀರನನ್ನು ಸ್ವರ್ಗಕ್ಕೆ ಕರೆದೊಯಿತ್ತಿರುವರು. ವೀರನ ಹಿಂಭಾಗದಲ್ಲಿರುವ ಅಸಹಾಯಕ ಸ್ತ್ರೀಯ ಚಿತ್ರವನ್ನು ಗಮನಿಸಿದರೆ ಇದು ಹೆಣ್ಣಿನಮಾನ ಸಂರಕ್ಷಣೆಗಾಗಿ ನಡೆದ 'ಪೆಣ್ಬುಯ್ಯಲ್' ಕಾಳಗದಲ್ಲಿ ಮಡಿದ ವೀರನ ಸ್ಮಾರಕ ಶಿಲ್ಪವೆಂದು ಗುರುತಿಸಬಹುದು.

**ವೀರಮಾಸ್ತಿಗಲ್ಲು : ಸಂಖ್ಯೆ-೦೭**

ಗ್ರಾಮದ ಶ್ರೀಯುತ ಮಾರಣ್ಣನ ಹೊಲದಲ್ಲಿ ಈ ಸ್ಮಾರಕ ಇರುವುದು. ಸ್ಥಳೀಯವಾಗಿ ದೊರೆಯುವ ಒರಟಾದ ಬಿಳಿಕಣಶಿಲೆಯಲ್ಲಿ ಕೆತ್ತಲಾಗಿದೆ. ಸ್ಮಾರಕದಲ್ಲಿ ವೀರ ಮತ್ತು ಮಾಸ್ತಿಯನ್ನು ಸಮನಾಂತರದಲ್ಲಿ ಚಿತ್ರಿಸಲಾಗಿದೆ. ಇಬ್ಬರೂ ತಲೆಕೂದಲನ್ನು ತುರುಬಿನಾಕಾರದಲ್ಲಿ ಕಟ್ಟಿಕೊಂಡಿರುವರು, ತೋಳುಗಳಲ್ಲಿ ತೋಳಬಂಧಿಯನ್ನು ಧರಿಸಿರುವರು. ವೀರನು ವಿವಿಧ ಆಭರಣಗಳನ್ನು ಧರಿಸಿದ್ದಾನೆ. ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುವನು. ಬಲಗೈಯಲ್ಲಿ ಕತ್ತಿಯಂತ ಆಯುಧವನ್ನು ಹಿಡಿದು ನೆಲಕ್ಕೆ ಊರಿನಿಂತಿರುವನು. ಸ್ಮಾರಕದ ಎಡಭಗದಲ್ಲಿರುವ ಮಾಸ್ತಿಯು ಕಿವಿ, ಕಾಲುಗಳಲ್ಲಿ ವಿವಿಧ ಆಭರಣಗಳನ್ನು ಧರಿಸಿರುವಳು ಮತ್ತು ತನ್ನ ಎರಡು ಕೈಗಳನ್ನು

ಮೇಲಕ್ಕೆತ್ತಿರುವಳು. ಇಬ್ಬರು ಧರಿಸಿರುವ ಉಡುಪುಗಳು ಗಮನಸೆಳೆಯುತ್ತವೆ.

ಈ ಮೇಲೆ ವಿವರಿಸಿರುವ ಎಲ್ಲಾ ಅಂಶಗಳನ್ನು ಗಮನಿಸಿದಾಗ ಮಾಚೇನಹಳ್ಳಿ ಗ್ರಾಮದಲ್ಲಿ ದೊರೆತಿರುವ ಸ್ಮಾರಕಗಳಿಗೆ ಅವುಗಳದೇ ಆದ ವೈಶಿಷ್ಟ್ಯತೆಯಿದ್ದು. ಶಿವಲಿಂಗ, ನಂದಿ ಹಾಗೂ ಸೂರ್ಯ-ಚಂದ್ರರ ಚಿತ್ರಗಳಿರುವುದನ್ನು ಸಾಮಾನ್ಯವಾಗಿ ಕಾಣುತ್ತೇವೆ. ಇವು ಈ ಪರಿಸರದಲ್ಲಿ ಅಂದಿನ ಶೈವ ಪಂಥದ ಪ್ರಭಾವವನ್ನು ತಿಳಿಸುತ್ತವೆ. ಒಟ್ಟಾರೆಯಾಗಿ ಇವುಗಳನ್ನು ನೋಡಿದಾಗ ಶೈವಧರ್ಮದ ಆಚರಣೆ ಅಂದು ಹೆಚ್ಚಾಗಿ ಪ್ರಚಲಿತದಲ್ಲಿದ್ದು. ಆ ಕಾಲಘಟ್ಟದ ಶೈವಪರಂಪರೆಯ ಸಂಸ್ಕತಿಯನ್ನು ಈ ಸ್ಮಾರಕಗಳು ಸಾರುತ್ತಿರುವುದನ್ನು ಗ್ರಹಿಸಬಹುದು.



**ಆಧಾರಸೂಚಿ**


೧. ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಸಪ್ನ ಬುಕ್ ಹೌಸ್, ಬೆಂಗಳೂರು.

೨. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಚೆನ್ನಕ್ಕ ಎಲಿಗಾರ., ೧೯೭೭, ಮಾಸ್ತಿ ಕಲ್ಲುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಢ.

೪. ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಪರಮಶಿವಮೂರ್ತಿ ಡಿ.ವಿ., (ಸಂ)., ೨೦೦೭, ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬ ಬಸವರಾಜ ಕಲ್ಗುಡಿ., ೧೯೮೫, ಮಹಾಸತಿ ಆಚರಣೆ: ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭. ಮಂಜುನಾಥ ಎಂ.ಜಿ., ೨೦೧೧, ಮಾಸ್ತಿಕಲ್ಲು ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

೮. ಶೇಷಶಾಸ್ತ್ರಿ ಆರ್., ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ ೧೧.

೧೦. ಕ್ಷೇತ್ರಾಧ್ಯಯನದ ವರದಿ.




# ಬಾಸವೂರು ಕಂಪಣದ ಜೈನ ಪ್ರಾಚ್ಯಾವಶೇಷಗಳು

ಶಿವಯೋಗಿ ಕೋರಿಶೆಟ್ಟರ*

'ಅಹಿಂಸೆಯೇ ಪರಮೋಧರ್ಮ' ಎಂದು ಸಾರಿದ ಜೈನ ಧರ್ಮವು, ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಪ್ರಭಾವಶಾಲಿಯಾದ ಧರ್ಮವಾಗಿತ್ತು. ಕರ್ನಾಟಕವನ್ನಾಳಿದ ಪ್ರಖ್ಯಾತ ಅರಸು ಮನೆತನಗಳಾದ ಗಂಗರು ಹಾಗೂ ಹೊಯ್ಸಳರು ಜೈನ ಧರ್ಮವನ್ನು ತಮ್ಮ ರಾಜ್ಯಧರ್ಮವೆಂಬಂತೆ ಬೆಳೆಸಿದರು. ಇನ್ನಿತರ ಅರಸು ಮನೆತನಗಳಾದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯ ಅರಸರೂ ಕೂಡಾ ಜೈನ ಧರ್ಮವನ್ನು ಪ್ರೋತ್ಸಾಹಿಸಿದರು. ಇದರಿಂದಾಗಿ ಜೈನಧರ್ಮ ಕರ್ನಾಟಕದಲ್ಲಿ ಪ್ರಬಲಗೊಂಡಿತು. ಜೈನರ ಪೂಜಾ ಕೇಂದ್ರಗಳಾದ ಬಸದಿಗಳು ಮತ್ತು ಅದಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳು ನಿರ್ಮಾಣಗೊಂಡವು. ಶ್ರವಣಬೆಳ್ಗೊಳ, ದೋರಸಮುದ್ರ, ಐಹೊಳೆ, ಪುಲಿಗೆರೆ, ಹಲಸಿ, ದೇವಗಿರಿ, ಲಕ್ಕುಂಡಿ, ಮೂಡಬಿದರೆಯಂತಹ ಜೈನ ಕೇಂದ್ರಗಳು ಬೆಳೆದು ಬಂದವು. ದಾನಚಿಂತಾಮಣಿ ಅತ್ತಿಮಬ್ಬೆ ಹಾಗೂ ಚಾವುಂಡರಾಯ ಜೈನಧರ್ಮದ ಉದಾತ್ತತೆಯ ಪ್ರತಿನಿಧಿಗಳು. ಅಂತೆಯೇ ಕುಂದಕುಂದಾಚಾರ್ಯ, ರವಿಕೀರ್ತಿ, ರನ್ನ, ಪೊನ್ನ, ಪಂಪ, ಹರಿಹರ, ರಾಘವಾಂಕರಂತಹ ಜೈನ ವಿದ್ವಾಂಸರ ಕೃತಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿವೆ.

ಕ್ರಿ.ಶ. ೩ನೇ ಶತಮಾನದಿಂದ ಕ್ರಿ.ಶ. ೧೧ನೇ ಶತಮಾನದ ವರೆಗೂ ಕರ್ನಾಟಕದಲ್ಲಿ ಅತ್ಯಂತ ಉಚ್ರಾಯ ಸ್ಥಿತಿಯಲ್ಲಿದ್ದ ಜೈನಧರ್ಮವು ಮುಂದೆ ಕ್ರಮೇಣವಾಗಿ ಅವಸಾನಗೊಳ್ಳ ಲಾರಂಭಿಸಿತು. ಕೇವಲ ಸಾತ್ವಿಕವಾದ ವೈರಾಗ್ಯವನ್ನೇ ಭೋದಿಸುವ ಜೈನಧರ್ಮಕ್ಕೆ ರಾಜಸಿಕ ಅಥವಾ ತಾಮಸಿಕವಾದ ತಾಂತ್ರಿಕ ಆಚರಣೆಗಳು ಒಗ್ಗದ ವಿಷಯಗಳು. (ಎಂ. ಚಿದಾನಂದ ಮೂರ್ತಿ. ಕ.ಶಾ.ಸಾಂ.ಅ. ಪು. ೧೦೪) ಯಕ್ಷಿಯ ಆರಾಧನೆ, ತಂತ್ರಮಂತ್ರಗಳನ್ನು ಅಳವಡಿಸಿಕೊಂಡಿದ್ದು, ಜೈನಧರ್ಮ ಇಳಿಮುಖವಾಗಲು ಕಾರಣವಾಯಿತು. ನಂತರದಲ್ಲಿ ವೀರಶೈವ ಹಾಗೂ ಶ್ರೀವೈಷ್ಣವ ಧರ್ಮಗಳೊಂದಿಗೆ ಜೈನಧರ್ಮವು ನರಂತರ ಸಂಘರ್ಷ ನಡೆಸಬೇಕಾಯಿತು. ಇದರ ಪರಿಣಾಮ ವಾಗಿ ಜೈನ ಧರ್ಮದ ಪ್ರಭಾವ ಇಳಿಮುಖವಾಗುತ್ತಾ ಸಾಗಿತು. ಹೀಗೆ ಜೈನ ಧರ್ಮ ನೆಲಕಚ್ಚಿದ್ದರ ಪರಿಣಾಮವಾಗಿ ಅದರ ಉತ್ಕರ್ಷದ ಕಾಲದಲ್ಲಿ ನಿರ್ಮಾಣಗೊಂಡ ಬಸದಿಗಳು, ವಿಗ್ರಹ ಗಳು, ಇತರೆ ಮೂರ್ತಿಶಿಲ್ಪಗಳು ಜನರ ಅನಾದರಕ್ಕೆ ಒಳಗಾದವು. ಇಂದು ಚದುರಿಹೋಗಿರುವ ಜೈನಾವಶೇಷಗಳು ಪ್ರಾಚೀನ ಜೈನಧರ್ಮದ ವೈಭವವನ್ನು ಸಾರಿಹೇಳುತ್ತವೆ. ಪ್ರಸ್ತುತ ಲೇಖನವು ಬಾಸವೂರು-೧೪೦ ಕಂಪಣದಲ್ಲಿ ಚದುರಿ ಹೋಗಿರುವ ಜೈನ ಪ್ರಾಚ್ಯಾವಶೇಷಗಳ ಮೇಲೆ ಬೆಳಕು ಚಲ್ಲುವುದಾಗಿದೆ.

### ಕಂಪಣ ಬಾಸವೂರು-೧೪೦

ಪ್ರಾಚೀನ ಕುಂತಳದೇಶದ ಬನವಾಸಿ-೧೨೦೦೦ದ ಆಧೀನಕ್ಕೆ ಒಳಪಟ್ಟಿದ್ದ ಹಲವಾರು ಆಡಳಿತ ಕಂಪಣಗಳಲ್ಲಿ ಬಾಸವೂರು-೧೪೦ ಒಂದಾಗಿದೆ. ಈ ಕಂಪಣವು ಹಾನಗಲ್ ತಾಲೂಕಿನ ಹಿರೇಬಾಸೂರನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಹೊಂದಿದ್ದು, ಸುತ್ತಲಿನ ೧೪೦ ಗ್ರಾಮಗಳಿಗೆ ಪ್ರಮುಖ ಕೇಂದ್ರವಾಗಿತ್ತು. ಕ್ರಿ.ಶ. ೮ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಬಾಸವೂರು ಕಂಪಣವು ಕ್ರಿ.ಶ. ೧೩ನೇ ಶತಮಾನದ ಅಂತ್ಯದ ವರೆಗೂ ಪ್ರಭಲವಾಗಿರುವುದು ಶಾಸನಗಳ ಆಧಾರದಿಂದ ತಿಳಿದು ಬರುತ್ತದೆ. ಇಂದಿನ ಹಾವೇರಿ, ಹಾನಗಲ್ ಹಾಗೂ ಬ್ಯಾಡಗಿ ತಾಲೂಕುಗಳ ಪ್ರದೇಶಗಳನ್ನು ಈ ಕಂಪಣವು ಒಳಗೊಂಡಿತ್ತು. ಆರಂಭದಲ್ಲಿ ಸೇನವಾರ ನಂತರದಲ್ಲಿ ಖಚರ ಮನೆತನದ ಅರಸರುಗಳಿಂದ ಈ ಕಂಪಣ ಆಳಲ್ಪಟ್ಟಿದೆ. ಇಲ್ಲಿನ ಅರಸರು ಬಾಸವೂರು ಕಂಪಣದ ನಾಳ್ಗಾವುಂಡರಾಗಿ, ಮನ್ನೇಯರಾಗಿ, ಮಹಾಸಾಮಂತರಾಗಿಯೂ ಅಧಿಕಾರವನ್ನು ನಿರ್ವಹಿಸಿದರು. ಸುವ್ಯವಸ್ಥಿತ ಆಡಳಿತ ಹಾಗೂ ಧಾರ್ಮಿಕ ಸಾಮ್ಯರಸ್ಯದ ಮೂಲಕ ಕಂಪಣದ ಅಭಿವೃದ್ದಿಗೆ ಶ್ರಮಿಸಿದರು. ಬಾಸವೂರನ್ನಾಳಿದ ಖಚರ ಮನೆತನದ ಅರಸರು ಆರಂಭದಲ್ಲಿ ಜೈನರಾಗಿದ್ದಂತೆ ತೋರುತ್ತದೆ. ಅವರು ಶಾಸನಗಳಲ್ಲಿ ತಮ್ಮನ್ನು ಪದ್ಮಾವತಿವರಲಬ್ದ ಪ್ರಸಾದರು ಎಂಬುದಾಗಿ ಹೇಳಿಕೊಂಡಿ ದ್ದಾರೆ. ಹೀಗಾಗಿ ಬಾಸವೂರು ಕಂಪಣದಲ್ಲಿ ಜೈನ ಧರ್ಮ ಪ್ರಾಬಲ್ಯ ಹೊಂದಿದ್ದಂತೆ ತೋರುತ್ತದೆ. ಜೈನ ಧರ್ಮದ ಪ್ರಭಾವ ಇಳಿಮುಖಗೊಳ್ಳುತ್ತಿರುವ ಸನ್ನಿವೇಶದಲ್ಲಿ ಇದೇ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಗುದ್ಲೆಪ್ಪ ಹಳ್ಳಿಕೇರಿ ಪದವಿ ಮಹಾವಿದ್ಯಾಲಯ, ಹಾವೇರಿ.

ಮನೆತನದ ಹೆರ್ಮಾಡಿಯರಸನು ಜೈನ ಧರ್ಮವನ್ನು ತೊರೆದು ಮಹೇಶ್ವರ ದೀಕ್ಷೆ ಕೈಗೊಂಡಿದ್ದು, ಜೈನಧರ್ಮದ ಇಳಿಮುಖದ ಸುಳಿವನ್ನು ನೀಡುತ್ತದೆ. (ಎ.ಇಂ. ಸಂ. ೧೯ ಪು. ೧೯೨. ಕ್ರಿ.ಶ. ೧೧೨೧)

### ಬಾಸವೂರು ಕಂಪಣದ ಜೈನ ಪ್ರಾಚ್ಯಾವಶೇಷಗಳು

ಬಾಸವೂರು ಕಂಪಣದಲ್ಲಿ ಜೈನ ಪ್ರಾಚ್ಯಾವಶೇಷಗಳನ್ನು ಪ್ರಮುಖವಾಗಿ ದೇವಗಿರಿ, ಕರ್ಜಗಿ, ಸಂಗೂರು, ಹೆರೂರು, ಕಲಕೇರಿ, ಕರೆಕ್ಯಾತನಹಳ್ಳಿ, ಕಾಗಿನೆಲೆ, ಅಣಜಿ ಹಾಗೂ ಹಾವೇರಿಗಳಲ್ಲಿ ಕಾಣಬಹುದು.

ಬಾಸವೂರು ಕಂಪಣದಲ್ಲಿ ಜೈನ ಧರ್ಮದ ಪ್ರಾಚೀನ ಉಲ್ಲೇಖ ಕಂಡು ಬರುವುದು ಕದಂಬರ ಕಾಲದ ತ್ರಿಪರ್ವತವೆಂದೇ ಪ್ರಶಿದ್ಧಿ ಪಡೆದಿದ್ದ ಇಂದಿನ ಹಾವೇರಿ ತಾಲೂಕಿನ ದೇವಗಿರಿಯಲ್ಲಿ. ಇದಕ್ಕೆ ಪೂರಕವಾಗಿ ಇಲ್ಲಿ ಕದಂಬರ ಕಾಲದ ಮೂರು ತಾಮ್ರಪಟಗಳು ದೊರೆತಿವೆ. ಇವುಗಳಲ್ಲಿ ಎರಡು ಮೃಗೇಶವರ್ಮನ ಕಾಲದವುಗಳಾಗಿದ್ದರೆ, ಇನ್ನೊಂದು ಒಂದನೇ ಕೃಷ್ಣವರ್ಮನ ಮಗನಾದ ದೇವವರ್ಮನ ಕಾಲದ್ದಾಗಿದೆ. ಮೃಗೇಶವರ್ಮನು ಬೃಹತ್ ಪೆರಲೂರು ಅರ್ಹತ್‌ನಿಗಾಗಿ ಭೂದಾನ ನೀಡಿದ್ದನ್ನು ಉಲ್ಲೇಖಿಸಿದರೆ, ಕಾಳವಂಗ ಗ್ರಾಮವನ್ನು ಮೂರು ಭಾಗಮಾಡಿ ಜಿನೇಂದ್ರ, ಶ್ವೇತಪಂಥ (ಶ್ವೇತಾಂಬರ) ಮತ್ತು ನಿಗ್ರಂಥಿ (ದಿಗಂಬರ)ಗಳಿಗೆ ದಾನಕೊಟ್ಟ ಅಂಶವನ್ನು ಇನ್ನೊಂದು ಶಾಸನ ತಿಳಿಸುತ್ತದೆ. ಮೂರನೇ 'ಶಾಸನವು ದೇವವರ್ಮನು ಪರ್ವತದ ಅರ್ಹತ್ ಭಗವತ ಚೈತ್ಯಾಲಯದ ಪೂಜೆ ದುರಸ್ತಿಗೆಂದು ಯುವರಾಜನು ಭೂಮಿ ನೀಡಿದ್ದನ್ನು ತಿಳಿಸುತ್ತದೆ'. (ಧಾ.ಜಿ. ಗ್ಯಾ. ಪು. ೯೪೯)

ದೇವಗಿರಿಗೆ ಹೊಂದಿಕೊಂಡಂತೆ ಪೂರ್ವ ಭಾಗದಲ್ಲಿ 'ಪುರ' ಎಂಬ ಊರು ಇದ್ದಿರಬಹುದಾದ ಬಗ್ಗೆ ಅಲ್ಲಿನ ಪರಿಸರವನ್ನು ಅವಲೋಕಿಸಿದರೆ ತಿಳಿಯುತ್ತದೆ. ಇದಕ್ಕೆ ಪೂರಕವಾಗಿ ಆ ಸ್ಥಳದಲ್ಲಿ ಪುರದಮ್ಮನ ಕಲ್ಲನ್ನು ಕಾಣಬಹುದು. ಇದೇ ಪರಿಸರದಲ್ಲಿ ಹಲವಾರು ಗೋಸಾಸಗಳು ಹರಡಿವೆ. ಇವುಗಳ ಸಮೀಪದಲ್ಲಿಯೇ ಪಾರ್ಶ್ವನಾಥನ ಮುಕ್ಕಾದ ಮೂರ್ತಿ ಇದೆ. ಕ್ರಿ.ಶ. ಒಂಬತ್ತನೇ ಶತಮಾನದ ರಾಷ್ಟ್ರಕೂಟರ ಶಾಸನವೊಂದು ದೇವಗಿರಿಯಲ್ಲಿ ದೊರೆತಿದ್ದು, ಇದು ಗೊವಿಂದಬ್ಬೆಯು ಪರಲೂರನ್ನು ಆಳುತ್ತಿದ್ದಳೆಂದು ತಿಳಿಸುತ್ತದೆ. ಕದಂಬ ಶಾಸನದ ಬೃಹತ್ ಪೆರಲೂರಿನೊಂದಿಗೆ ಇದನ್ನು ಹೋಲಿಸುವ ಅಗತ್ಯವಿದೆ. (ಅದೆ) ಇಲ್ಲಿನ ಕಲ್ಯಾಣ ಚಾಲುಕ್ಯ ಎರಡನೇ ಜಗದೇಕಮಲ್ಲನ ಕಾಲದ ಶಾಸನವು ಬಾಸವೂರು–೧೪೦ರ ಮಹಾಸಾಮಂತ ಕಲಿಯಮ್ಮರಸ ಹಾಗೂ ತಂತ್ರಪಾಳ ಬಾಚಣ್ಣಾಧಿಗಳಿಂದ ದೇವಗಿರಿಯ ಶಾಂತಿನಾಥ ಜಿನಾಲಯಕ್ಕೆ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. (ಧಾ.ಜಿ.ಶಾ.ಸೂ. ನಂ. ೮೬ ಕ್ರಿ.ಶ. ೧೧೩೯)

ಪ್ರಸ್ತುತ ಜೈನ ಬಸದಿಗಳಾವವೂ ದೇವಗೇರಿಯಲ್ಲಿ ಉಳಿದಿಲ್ಲವಾದರೂ, ಒಟ್ಟು ಐದು ಜೈನ ತೀರ್ಥಂಕರರ ವಿಗ್ರಹಗಳು ಇಲ್ಲಿವೆ. ಮೇಲೆ ಉಲ್ಲೇಖಗೊಂಡಿರುವ ಪಾರ್ಶ್ವನಾಥನ ಮುಕ್ಕಾದ ವಿಗ್ರಹ ಊರಿನ ಪೂರ್ವಭಾಗದ ಮಲ್ಲಪ್ಪ ಹಿರೆಹಳ್ಳಿಯವರ ಹೊಲದಲ್ಲಿ ಇದ್ದು, ಇದು ಎರಡುವರೆ ಅಡಿ ಎತ್ತರ ಹಾಗೂ ಒಂದು ಅಡಿ ಅಗಲವಾಗಿದೆ. ತೊಡೆಯ ಕೆಳಭಾಗ ಭಗ್ನಗೊಂಡಿದೆ. ನಿಂತ ಭಂಗಿಯಲ್ಲಿರುವ ಪಾರ್ಶ್ವನಾಥ ತೀರ್ಥಂಕರನ ತಲೆಯ ಮೇಲೆ ಸರ್ಪವು ಹೆಡೆಯತ್ತಿದೆ.

ಊರಿನ ಪಶ್ಚಿಮಕ್ಕೆ ಹೊಲವೊಂದರಲ್ಲಿ ಪದ್ಮಾಸನದಲ್ಲಿ ಕುಳಿತಿರುವ ತೀರ್ಥಂಕರನ ವಿಗ್ರಹವಿದೆ. ಸ್ಥಳೀಯವಾಗಿ ಜಿನಪ್ಪ ಎಂಬುದಾಗಿ ಕರೆಯಲಾಗುವ ಈ ವಿಗ್ರಹವು ಬೃಹದಾಕಾರವಾಗಿದ್ದು, ಕೆಳಭಾಗ ಭೂಮಿಯಲ್ಲಿ ಹೂಳಲ್ಪಟ್ಟದೆ. ನಾಲ್ಕುವರೆ ಅಡಿ ಅಗಲ ಹಾಗೂ ಐದುವರೆ ಅಡಿ ಎತ್ತರವಾಗಿರುವ ಈ ಪ್ರತಿಮೆಯು ಪ್ರಭಾವಳಿ ಹೊಂದಿದ್ದು, ಪ್ರಭಾವಳಿಯ ಎಡ ಹಾಗೂ ಬಲಗಳಲ್ಲಿ ಯಕ್ಷ ಯಕ್ಷಿರನ್ನು ಹೊಂದಿದೆ. ತೀರ್ಥಂಕರನ ಮೇಲ್ಭಾಗದಲ್ಲಿ ಮುಕ್ಕೊಡೆ ಇದೆ. ಮತ್ತೊಂದು ತೀರ್ಥಂಕರನ ವಿಗ್ರಹವು ಊರಿನ ಮಧ್ಯದಲ್ಲಿ ಹೊನ್ನಪ್ಪ ಬೂದಣ್ಣನವರ ಇವರ ಹಿತ್ತಲಲ್ಲಿದೆ. ಪದ್ಮಾಸನದಲ್ಲಿ ಕುಳಿತಿರುವ ಈ ಜಿನಬಿಂಬವು ಎತ್ತರದ ಪೀಠದ ಮೇಲಿದ್ದು, ಐದು ಅಡಿ ಎತ್ತರ ಮೂರು ಅಡಿ ಅಗಲವಾಗಿದ್ದು, ನೋಡಲು ಅತ್ಯಂತ ಆಕರ್ಷಕವಾಗಿದೆ.

ದೇವಗಿರಿಯಲ್ಲಿ ಹೊಸದಾಗಿ ೨ ಜೈನ ತೀರ್ಥಂಕರ ವಿಗ್ರಹಗಳು ಇತ್ತೀಚೆಗೆ ಪತ್ತೆಯಾಗಿವೆ. ಊರ ಮಧ್ಯದ ಬಸವಣ್ಣ ದೇವಾಲಯದ ಸಮೀಪದಲ್ಲಿರುವ ಶಂಬಣ್ಣ ಬಿ. ಸಂಗೂರ ಅವರು ತಮ್ಮ ಮನೆಯ ಮುಂಭಾಗದಲ್ಲಿನ ಕಟ್ಟೆಯನ್ನು ತೆಗೆದು ಅಲ್ಲಿ ಗುಂಡಿ ತೋಡುವ ಸಂದರ್ಭದಲ್ಲಿ ಈ ಜಿನಬಿಂಬಗಳು ದೊರೆತಿವೆ. ಕ್ರಿ.ಶ. ೧೨ನೇ ಶತಮಾನಕ್ಕೆ ಸೇರಿರಬಹುದಾದ ಈ ವಿಗ್ರಹಗಳು ಹಸಿರು ಮಿಶ್ರಿತ ಬಳಪದ ಶಿಲೆಯಲ್ಲಿ ಮಾಡಲ್ಪಟ್ಟಿವೆ. ಮೊದಲ ಜಿನಬಿಂಬವು ೮೫ ಸೆಂ.ಮೀ. ಎತ್ತರ ಹಾಗೂ ೪೧ ಸೆಂ.ಮೀ. ಅಗಲವಾಗಿದೆ. ಸಂಪೂರ್ಣ ಲತಾಪ್ರಭಾವಳಿಗಳನ್ನು ಒಳಗೊಂಡು ಸಮಭಂಗಿಯಲ್ಲಿ ನಿಂತ ಶೈಲಿಯಲ್ಲಿದೆ. ಪ್ರಭಾವಳಿಯ ಎರಡೂ ಬದಿಯಲ್ಲಿ ಆನೆಯ ಸೊಂಡಿಲಿನಿಂದ ಹೊರಟ ಲತಾಸುರುಳಿ ಮೆಲ್ಲಗೆ ಶಾರ್ದೂಲದಲ್ಲಿ ವಿಲೀನವಾಗಿದೆ. ಶಾರ್ದೂಲದ ಕೆಳಗೆ ಹಾಗೂ ತೀರ್ಥಂಕರನ ಮೆಲ್ಭಾಗದಲ್ಲಿ ಮುಕ್ಕೊಡೆಯನ್ನು ಕೊರೆಯಲಾಗಿದೆ. ಈ ತೀರ್ಥಂಕರನ ಎರಡೂ ಬದಿಯಲ್ಲಿ ಯಕ್ಷ ಯಕ್ಷಿಯರಿದ್ದು, ಇವರನ್ನು ತ್ರಿಭಂಗಿಯಲ್ಲಿ ನಿಂತಂತೆ

ಕೊರೆಯಲಾಗಿದೆ. ಎರಡನೇ ಜಿನಬಿಂಬವೂ ಕೂಡಾ ಸಮಭಂಗಿಯಲ್ಲಿದ್ದು, ಲತಾಪ್ರಭಾವಳಿಯ ಶಿರೋಭಾಗ ಒಂದು ಬದಿಯಲ್ಲಿ ಒಡೆದುಹೋಗಿದೆ. ಎಡ ಮತ್ತು ಬಲ ಬದಿಗಳಲ್ಲಿ ಯಕ್ಷ ಮತ್ತು ಯಕ್ಷಿಯರು ತ್ರಿಭಂಗಿಯಲ್ಲಿದ್ದು, ವಿಗ್ರಹ ೧೧೭ ಸೆಂ.ಮೀ. ಎತ್ತರ ಹಾಗೂ ೭೧ ಸೆಂ.ಮೀ. ಅಗಲ ವಾಗಿದೆ. ಈ ಎರಡೂ ವಿಗ್ರಹಗಳ ಪಾದಪೀಠದಲ್ಲಿ ಯಾಗಲಿ ಅಥವಾ ವಿಗ್ರಹದ ಯಾವುದೇ ಭಾಗದಲ್ಲಿ ಶಾಸನ ಲಿಪಿಯು ಕಂಡುಬಂದಿಲ್ಲ.

ಇತ್ತೀಚೆಗೆ ನಾನು ಹಾವೇರಿ ತಾಲೂಕಿನ ಕರಜಗಿಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಿದ ಜೈನ ಅಂಬಿಕಾ ಯಕ್ಷಿಯ ಶಿಲ್ಪವು ಈ ಪ್ರದೇಶದಲ್ಲಿ ಜೈನ ಧರ್ಮವು ಪ್ರಬಲವಾಗಿದ್ದರ ಕುರುಹಾಗಿದೆ. ವರದಾನದಿ ದಂಡೆಯಲ್ಲಿರುವ ಬಸವಣ್ಣನ ಗುಡಿಯ ಹತ್ತಿರದಲ್ಲಿ ಕಂಡುಬಂದಿರುವ ಈ ಶಿಲ್ಪವು ಹಸಿರು ಬೂದು ವರ್ಣದ ಬಳಪದ ಶಿಲೆಯಿಂದ ನಿರ್ಮಾಣಗೊಂಡಿದ್ದು, ಅರ್ಧ ಮೀಟರ್ ಎತ್ತರವಾಗಿದೆ. ಈ ಶಿಲ್ಪವು ಮಾವಿನ ಮರದ ಹತ್ತಿರ ದ್ವಿಭಂಗಿಯಲ್ಲಿ, ದ್ವಿಬುಜಳಾಗಿ ನಿಂತಿರುವ ಸ್ತ್ರೀದೇವತೆಯದಾಗಿದೆ. ಅವಳು ಛತ್ರಿಯ ಕೆಳಗೆ ನಿಂತಿದ್ದು, ಬಲಗೈಯಲ್ಲಿ ಮಾವಿನ ಗೊಂಚಲನ್ನು ಹಿಡಿದಿದ್ದಾಳೆ. ಇಳಿ ಬಿಟ್ಟಿರುವ ಎಡಗೈಯಿಂದ ನಿಂತಿರುವ ಬಾಲಕನನ್ನು ಸ್ಪರ್ಶಿಸುತ್ತಿದ್ದಾಳೆ. ಮೇಲ್ಗಡೆ ಎಲೆಗೊಂಚಲಿನ ಸುರುಳಿಯಲ್ಲಿ ಚಿಕ್ಕದಾದ ಕುಳಿತ ಭಂಗಿಯಲ್ಲಿರುವ ಜೈನಧರ್ಮದ ೨೨ನೇ ತೀರ್ಥಂಕರ ನೇಮಿನಾಥನ ಚಿತ್ರವಿದೆ. ದೇವಿಯ ಬಲಗಡೆ ಸಿಂಹಾರೂಢ ಳಾಗಿರುವ ಸ್ತ್ರೀಯ ಕೆತ್ತನೆ ಇದ್ದು, ಸಿಂಹವು ಯಕ್ಷಿ ಅಂಬಿಕೆಯ ವಾಹನವಾಗಿದೆ. ಇದನ್ನು ಪರಿಶೀಲಿಸಿದ ಡಾ. ಶ್ರೀನಿವಾಸ ಪಾಡಿಗಾರ "ಕರ್ನಾಟಕದಲ್ಲಿ ಅಂಬಿಕಾ ಯಕ್ಷಿಯ ಸ್ವತಂತ್ರ ವಿಗ್ರಹವನ್ನು ನಿಂತಿರುವ ರೀತಿಯಲ್ಲಿ ಚಿತ್ರಿಸಿರುವುದು ಅಪರೂಪ; ಕುಳಿತ ಚಿತ್ರಗಳೇ ಸಾಮಾನ್ಯ" ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ. (ಶ್ರೀನಿವಾಸ ಪಾಡಿಗಾರ ಶಿವಯೋಗಿ ಕೋರಿಶೆಟ್ಟರ, ಕರಜಗಿಯ ಜೈನ ಯಕ್ಷಿಯ *ಅಪೂರ್ವ ಶಿಲ್ಪ-ಶಾಸನ, ಶಾಸನ ಅಧ್ಯಯನ*, ಸಂ. ೯ ಸಂಚಿಕೆ. ೧, ೨ ಪು. ೪೦ ಪ್ರಸಾರಾಂಗ ಕವಿವಿ, ಹಂಪಿ, ೨೦೧೪) ಈ ಯಕ್ಷಿಯ ಶಿಲ್ಪದ ಕೆಳಭಾಗದಲ್ಲಿ ಇರುವ ನಾಗರೀ ಲಿಪಿಯ ಸಂಸ್ಕೃತ ಶಾಸನವು ಕ್ರಿ.ಶ. ೧೨೫೧ ಏಪ್ರಿಲ್ ೨೧ರಂದು ಈ ಅಂಬಿಕಾ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದರ ಬಗ್ಗೆ ವಿವರವನ್ನು ಒಳಗೊಂಡಿದೆ. ಈಗ ಇಲ್ಲಿ ಜೈನ ಬಸದಿ ಇಲ್ಲವಾದರೂ, ಈ ಕಾಲಕ್ಕೆ ಸಂಬಂಧಿಸಿದ ಕಲಾತ್ಮಕ ಕಂಭಗಳು ಹಾಗೂ ಇನ್ನಿತರ ಅವಶೇಷಗಳು ಈ ಪ್ರದೇಶದಲ್ಲಿ ಹರಡಿರುವುದು ಹಿಂದೆ ಇಲ್ಲಿ ಜೈನ ಬಸದಿ ಇದ್ದಿತೆಂಬುದನ್ನು ಊಹಿಸಬಹುದಾಗಿದೆ.

ಸಂಗೂರು ವರದಾನದಿಯ ದಡದಲ್ಲಿರುವ ಗ್ರಾಮ. ಬಾಸವೂರು ಕಂಪಣಕ್ಕೆ ಒಳಪಟ್ಟಿದ್ದ ಮತ್ತೊಂದು ಜೈನಕೇಂದ್ರ. ಶಾಸನಗಳಲ್ಲಿ ಸಂಗವೂರು, ಚಂಗೂರು, ಚಂಗಾಪುರ ಎಂಬುದಾಗಿ ಉಲ್ಲೇಖಗೊಂಡಿದೆ. (ಧಾ.ಜಿ.ಗ್ಯಾ.೧೯೫೫, ಪು. ೧೧೧೯) ಪ್ರಾಚೀನ ಹಾಗೂ ಮಧ್ಯಕಾಲೀನ ಅವಧಿಯಲ್ಲಿ ಇದೊಂದು ಪ್ರಮುಖ ಜೈನ ಕೇಂದ್ರವಾಗಿತ್ತು. ಇಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಅನೇಕ ಪುರಾವೆಗಳಿವೆ. ಬಸ್ತಿಮಟ್ಟಿ ಎಂದೆ ಕರೆಯಲಾಗುವ ಸಂಗೂರಿನ ಈ ಪ್ರದೇಶದಲ್ಲಿ ಯಾವುದೇ ಬಸದಿ ಇಲ್ಲ. ಯಾಧವ ಮಹದೇವನ ಕಾಲಕ್ಕೆ ಸೇರಿದ ತೃಟಿತ ನಿಷಧಿ ಶಾಸನ (ಸೌ.ಇಂ.ಇನ್ಸ ಸಂ. ೧೮ ಶಾ.ಸಂ. ೨೫೨, ಕ್ರಿ.ಶ. ೧೨೬೮-೬೯)ವು ಇದೇ ಪ್ರದೇಶದಲ್ಲಿದ್ದು, ಇದು ಚಿತ್ರಕೂಟಾನ್ವಯದ ಮುನಿಗಳ ಪರಂಪರೆಯನ್ನು ಹೀಗೆ ಉಲ್ಲೇಖಿಸಿದೆ. ಚಂದ್ರಭಟ್ಟಾರಕ > ನಂದಿ ಭಟ್ಟಾರಕ>ನಯಕೀರ್ತಿಭಟ್ಟಾರಕದೇವ. ನಂತರದಲ್ಲಿ ಚಂಗೂರಿನ ನಾಳ್ಪ್ರಭು ಗಂಗರ ಸಾವಂತ ಸೋವನು ಸನ್ಯಸನಾ (ಸಲ್ಲೇಖನ) ವಿಧಿಯಿಂದ ಮಡಿದು ಸ್ವರ್ಗಸ್ಥನಾದ ಸಂಗತಿಯನ್ನು ತಿಳಿಸುತ್ತದೆ.

ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಸಂಗೂರು ಗೋವಾ ಆಡಳಿತ ವಿಭಾಗಕ್ಕೆ ಸೇರಿದ ಗುತ್ತಿ ಉಪವಿಭಾಗಕ್ಕೆ ಒಳಪಟ್ಟಿತ್ತು. ಈ ಅವಧಿಯಲ್ಲಿಯೂ ಜೈನ ಧರ್ಮದ ಪ್ರಾಭಲ್ಯ ಈ ಊರಿನಲ್ಲಿ ಮುಂದುವರಿದಿರುವಂತೆ ತೋರುತ್ತದೆ. ಎರಡನೇ ಹರಿಹರನ ಕಾಲದ ಶಾಸನವು (ಸೌ.ಇಂ. ಇನ್ಸ ಸಂ. ೧೮ ಶಾ.ಸಂ. ೨೭೪, ಕ್ರಿ.ಶ. ೧೩೯೬) ಗೋವಾದ ಆಡಳಿತಾಧಿಕಾರಿಯಾದ ಮಾಧವನು ತನ್ನ ಸೇನಾಪತಿಯಾಗಿದ್ದ ಜೈನ ಮಲ್ಲಪನಿಗೆ ಚಂಗಪುರ (ಸಂಗೂರು)ವನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಮಲ್ಲಪನ ತಂದೆ ಸಂಕದೇವ, ಸಂಕದೇವನ ತಂದೆ ಮುದ್ದಣ ಅಲ್ಲದೇ ಮಲ್ಲಪನ ನಾಲ್ವರು ಮಡದಿಯರು, ಮೂವರು ಪುತ್ರರು ಜೈನ ಅನುಯಾಯಿಗಳಾಗಿದ್ದು, ಕಠಿಣ ಸಲ್ಲೇಖನ ವ್ರತದ ಮೂಲಕ ಮರಣೈಸಿದ್ದನ್ನು ಉಲ್ಲೇಖಿಸುತ್ತದೆ. ಇವರೆಲ್ಲರ ಸುಕೃತಾಭಿವೃದ್ಧಿ ಪರಿಪ್ರಾಪ್ತಿಯಾಗಲೆಂದು ನಿಷಧಿ ಸತ್ಕಾರ್ಯ ನಿಮಿತ್ಯ ನೇಮಣನೆಂಬವನು ಸಂಗೂರಿನ ಪಾರ್ಶ್ವನಾಥ ಸ್ವಾಮಿಗಳಮೃತಪಡಿಗೆ ಭೂಮಿದಾನ ನೀಡಿದ್ದನ್ನು ಈ ಶಾಸನ ದಾಖಲಿಸಿದೆ.

ಬಾಸವೂರು ಕಂಪಣದ ಮತ್ತೊಂದು ಪ್ರಮುಖ ಜೈನ ಕೇಂದ್ರ ಕಲಕೇರಿ (ಹಾನಗಲ್ ತಾಲೂಕು) ಇಲ್ಲಿ ಜೈನ ಧರ್ಮ ನೆಲೆಗೊಂಡಿತ್ತು ಅನ್ನುವುದಕ್ಕೆ ಕಲಕೇರಿಯಲ್ಲಿ ಚದುರಿ ಬಿದ್ದಿರುವ ಜೈನಾವಶೇಷಗಳಾದ ತೀರ್ಥಂಕರರ ಮೂರ್ತಿಗಳು, ಬಸದಿ, ನಿಷಧಿ ಶಾಸನಗಳು ಆಧಾರ ಒದಗಿಸುತ್ತವೆ. ಕಲಕೇರಿಗೆ

ಹೊಂದಿಕೊಂಡಿರುವ ದಕ್ಷಿಣ ಭಾಗದ ಹೊಲದಲ್ಲಿ ರುಂಡರಹಿತ ಪದ್ಮಾಸನದಲ್ಲಿ ಕುಳಿತ ತೀರ್ಥಂಕರನ ವಿಗ್ರಹವಿದೆ. ಇದು ಯಾವ ತೀರ್ಥಂಕರನ ವಿಗ್ರಹವೆಂದು ತಿಳಿಯುವುದಿಲ್ಲ. ಮತ್ತೊಂದು ಅಪೂರ್ಣಗೊಂಡ ಪಾರ್ಶ್ವನಾಥನ ವಿಗ್ರಹವನ್ನು ಇಲ್ಲಿನ ನೀಲಮ್ಮನ ಗುಡಿಯ ಕಟ್ಟೆಗೆ ಹಚ್ಚಿ ನಿಲ್ಲಿಸಲಾಗಿದೆ. ತಲೆಯ ಮೇಲೆ ಸರ್ಪದ ಹೆಡೆಯನ್ನು ಕೆತ್ತುವುದಕ್ಕೊಸ್ಕರ ಕಲ್ಲನ್ನು ಹಾಗೆಯೇ ಬಿಡಲಾಗಿದೆ. ರುಂಡರಹಿತ ತೀರ್ಥಂಕರನ ಅನತಿ ದೂರದಲ್ಲಿ ಕಲ್ಲಿನ ಸ್ಥಂಭಗಳಿಂದ ಮುಚ್ಚಿಹೋಗಿರುವ ಮಣ್ಣಿನ ದಿಬ್ಬವಿದೆ. ಊರಿನ ಜನರು ಇದನ್ನು ಬಸದಿ ಎಂದು ತೋರಿಸುತ್ತಾರೆ. ಇಲ್ಲಿ ಉತ್ಖನನವಾದರೆ ಇನ್ನೂ ಹೆಚ್ಚಿನ ಜೈನಾವಶೇಷಗಳು ದೊರೆಯಬಹುದು. ಈ ತೀರ್ಥಂಕರನ ಸಮೀಪ ಕಲ್ಲಿನಲ್ಲಿ ಎರಡು ಹಸ್ತಗಳನ್ನು ಜೊತೆಯಾಗಿ ಅದರಲ್ಲಿ ಪುಷ್ಪವನ್ನು ಕಲಾತ್ಮಕವಾಗಿ ಕೆತ್ತಲಾಗಿದೆ. ಜೈನಧರ್ಮದ ನಂಬುಗೆಯಂತೆ ಪಂಚಮಹಾಕಲ್ಯಾಣಗಳ ಸಂದರ್ಭದಲ್ಲಿ ಪಂಚಾಶ್ಚರ್ಯಗಳು ಉಂಟಾಗುತ್ತವೆ. ಕಲಕೇರಿಯಲ್ಲಿ ದೊರೆತ ಪುಷ್ಪವಿರುವ ಹಸ್ತಗಳು ಪಂಚಾಶ್ಚರ್ಯಗಳಲ್ಲಿ ಒಂದಾದ ಕುಸುಮವೃಷ್ಠಿಯನ್ನು ಸಂಕೇತಿಸುತ್ತವೆ. (ನಾಗಯ್ಯ.ಜಿ.ಎಂ ಕಲಕೇರಿ ಶ್ರೀ ಬ.ದೇ.ಹೆ.ಟ್ರ.ಕ, ಕಲಕೇರಿ, ೧೯೯೫)

ಇದೇ ಗ್ರಾಮದಲ್ಲಿ ಎರಡು ನಿಷಧಿ ಶಾಸನಗಳಿವೆ. ಇವುಗಳ ಮೇಲ್ಭಾಗದಲ್ಲಿ ಜಿನಸ್ತೋತ್ರವನ್ನು ಪಠಿಸುತ್ತಿರುವ ಗುರು, ಅವಣೆಕೋಲಿನ ಮೇಲೆ ಗ್ರಂಥ ಮತ್ತು ಜಿನಸ್ತೋತ್ರ ಕೇಳುತ್ತಿರುವ ವ್ರತದಾರಿಗಳನ್ನು ಕೆತ್ತಲಾಗಿದೆ. ಒಂದು ನಿಷಧಿ ಸಮಂತಭದ್ರ ದೇವರ ಶಿಷ್ಯನೂ, ಕಲಕೇರಿಯ ಮೂಲಸಂಘದ ಸಾಯಿಸೆಟ್ಟಿ ಮತ್ತು ಮಾದೌವ್ವೆಗೆ ಜನಿಸಿದ ಮಾದ್ಯೆಯ್ಯನು ವೃತ ಹಿಡಿದು ಸ್ವರ್ಗಸ್ಥನಾದ ವಿಷಯವಿದೆ. (ಸೌ.ಇಂ. ಇನ್ಸ ಸಂ. ೨೦, ಶಾ.ಸಂ. ೨೨೩, ಕ್ರಿ.ಶ. ೧೨೪೯) ಇನ್ನೊಂದು ನಿಷಧಿಯಲ್ಲಿಯೂ ಶಾಸನ ಇದೆಯಾದರೂ, ಸ್ಪಷ್ಟವಾಗಿರು ವುದಿಲ್ಲ.

ಜೈನ ಪುರಾವೆಗಳಿರುವ ಈ ಕಂಪಣದ ಇತರೆ ಪ್ರದೇಶ ಗಳೆಂದರೆ, ಹಾನಗಲ್ ತಾಲೂಕಿನ ಹೆರೂರಿನಲ್ಲಿ ಒಟ್ಟು ಆರು ನಿಷಧಿ ಶಾಸನಗಳು ಒಂದೇ ಸ್ಥಳದಲ್ಲಿವೆ. ಕರೆಕ್ಯಾತನಹಳ್ಳಿ ಯಲ್ಲಿಯೂ ಕೆಲವು ಜೈನಪುರಾವೆಗಳಿವೆ. ಬ್ಯಾಡಗಿ ತಾಲೂಕಿನ ಹಿರೇಅಣಜಿಯಲ್ಲಿ ಅಕ್ಕಸಾಲಿ ನೇಮೋಜನ ನಿಷಧಿ ಹಾಗೂ ಗುಡ್ಡಿಯೊಬ್ಬಳ ನಿಷಧಿ ಸೇರಿದಂತೆ ಆರು ನಿಷಧಿಗಳು ಇವೆ. ಇದೇ ಗ್ರಾಮದ ವೀರಭದ್ರ ದೇವಾಲಯದ ಹತ್ತಿರದಲ್ಲಿರುವ ಯಾದವ ರಾಮಚಂದ್ರನ ಕಾಲದ ಶಾಸನವು ನೇಮಿನಾಥನ ಬಸದಿಗೆ ಬಿಟ್ಟ ದಾನವನ್ನು ಉಲ್ಲೇಖಿಸಿದೆ. (ಧಾ. ಜಿ. ಶಾ.ಸೂ. ಶಾ.ಸಂ. ೧೦೭, ಹಿರೇಅಣಜಿ, ಕ್ರಿ.ಶ. ೧೨೯೩) ಹಾವೇರಿ ಯಲ್ಲಿಯೂ ಜೈನಬಸದಿ ಇದ್ದಿತೆಂದು ತೋರುತ್ತದೆ. ಈಗಿನ ವೀರಭದ್ರ ದೇವಾಲಯದ ತೊಲೆಯ ಮೇಲೆ ಕೆತ್ತಲಾಗಿರುವ ಶಾಸನವು ಮಾದರಸ ಎಂಬವನು ಬಸದಿಯ ಪಾವಟಿಗೆ ಗಳನ್ನು ಮಾಡಿಸಿದ ಉಲ್ಲೇಖವನ್ನು ಹೊಂದಿದೆ.

## ಉಪಸಂಹಾರ

ಕನ್ನಡದ ಜನತೆಗೆ ಶಾಸ್ತ್ರದ ಬೆಳಕನ್ನು ಕಾವ್ಯದ ತಂಪನ್ನು ಕರುಣಿಸಿದ ಜೈನಧರ್ಮವು, ತಾನು ಅಳವಡಿಸಿಕೊಂಡಿದ್ದ ಅಹಿಂಸೆ ಹಾಗೂ ಸಲ್ಲೇಖನದಂತಹ ಕಠಿಣ ಆಚರಣೆ ಗಳಿಂದಾಗಿಯೇ ಅವನತಿಯತ್ತ ಸಾಗಿತು. ಈ ಧರ್ಮವು ಪ್ರತಿಯೊಬ್ಬನೂ ಸ್ವಪ್ರಯತ್ನದಿಂದಲೇ ತನ್ನ ಕರ್ಮಕ್ಷಯ ಮಾಡಿಕೊಳ್ಳಲು, ಆ ಮೂಲಕವೇ ಮುಕ್ತಿ ಹೊಂದಲು ಪ್ರೇರೇಪಿಸಿತು. ಕ್ರಿ.ಶ. ೧೨ನೇ ಶತಮಾನ ಸುಮಾರಿಗೆ ಹೆಚ್ಚು ಪ್ರಭಲಗೊಂಡ ವೀರಶೈವ ಹಾಗೂ ಶ್ರೀವೈಷ್ಣವ ಧರ್ಮಗಳ ಪ್ರಾಭಲ್ಯವು ಈ ಧರ್ಮದೊಂದಿಗೆ ಸಂಘರ್ಷಕ್ಕೆ ಮತ್ತು ಜೈನಧರ್ಮದ ಅವಸಾನಕ್ಕೆ ಕಾರಣವಾದವು. ಈ ನಿಟ್ಟಿನಲ್ಲಿ ನಡೆದ ಘರ್ಷಣೆಯನ್ನೇ ಹೆರ್ಮಾಡಿಯರಸ, ಗೊಗ್ಗಿದೇವ, ಏಕಾಂತದ ರಾಮಯ್ಯ ಮುಂತಾದವರ ಶಾಸನಗಳು ಪ್ರತಿನಿಧಿ ಸುತ್ತವೆ. ಪ್ರಸ್ತುತ ಬಾಸವೂರು ಕಂಪಣದಲ್ಲಿಯೂ ಜೈನಧರ್ಮವು ತನ್ನ ಅಸ್ತಿತ್ವಕ್ಕಾಗಿ ಸೆಣಸಿದಂತೆ ಕಾಣುವ ಜೈನಾವಶೇಷಗಳು ಇದ್ದಾಗ್ಯೂ, ಈ ಕಂಪಣದ ಸಂಗೂರು ಪ್ರದೇಶದಲ್ಲಿ ೧೪ನೇ ಶತಮಾನದ ಅಂತ್ಯದವರೆಗೂ ಜೈನಧರ್ಮ ಅಸ್ತಿತ್ವದಲ್ಲಿದ್ದ ಬಗ್ಗೆ ಆಧಾರವಿರುವುದು ಗಮನಿಸಬೇಕಾದ ಅಂಶ.



## ಆಕರ ಗ್ರಂಥಗಳು


೧. *ಎಪಿಗ್ರಾಫಿಯಾ ಇಂಡಿಕಾ*, ಸಂ. XIX, (ಸಂ.) ಹರಿನಂದಶಾಸ್ತ್ರಿ, ಡೆಲ್ಲಿ, ೧೯೮೩.

೨. *ಧಾರವಾಡ ಜಿಲ್ಲೆಯ ಶಾಸನ ಸೂಚಿ*, (ಸಂ) ಎಂ.ಎಂ. ಕಲಬುರ್ಗಿ, ಕವಿವಿ ಧಾರವಾಡ, ೧೯೭೫.

೩. *ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್*, ಸಂ. XVIII, ಎಸ್. ಲಕ್ಷ್ಮಿನಾರಾಯಣರಾವ್ ಆರ್ಕಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾ, ಡೆಲ್ಲಿ, ೧೯೭೫. ಸಂ. XX, ಡಾ. ಜಿ.ಎಸ್.ಗಾಯ್, ಡೆಲ್ಲಿ, ೧೯೮೮.

೪. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಚಿದಾನಂದಮೂರ್ತಿ ಎಂ., ಮೈಸೂರು, ೧೯೭೯.

೫. *ಕಲಕೇರಿ*, ನಾಗಯ್ಯ ಜಿ ಎಂ, ಶ್ರೀ ಬಸವೇಶ್ವರ ಟ್ರಸ್ಟ ಕಮೀಟಿ, ಕಲಕೇರಿ, ೧೯೯೫

೬. *ಧಾರವಾಡ ಜಿಲ್ಲಾ ಗ್ಯಾಸೆಟಿಯರ್* (ಸಂ) ಸೂರ್ಯನಾಥ ಕಾಮತ, ಬೆಂಗಳೂರು, ೧೯೯೫.

೭. *ಶಾಸನ ಅಧ್ಯಯನ* (ಸಂ) ಭಟಸೂರಿ ಕೆ. ಜಿ. ಸಂಪುಟ ೯, ಸಂಚಿಕೆ ೧, ೨ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೪.

೮. *Jainism in South India and some Jaina Epigraphs*, Desai, P.B. Kolhapur, 1957.



# ಪಾಂಡವಪುರ (ಫ್ರೆಂಚ್‌ರಾಕ್ಸ್) ತಾಲೂಕಿನ ಭೌಗೋಳಿಕ ಪರಿಸರದ ಪುರಾತತ್ವ ಅವಶೇಷಗಳ ಒಂದು ಶೋಧ

**ಶಶಿಕುಮಾರ್.ಎಸ್.* ಡಾ. ಎಸ್.ಕೆ. ದೇವೇಗೌಡ****

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕು ವೈವಿಧ್ಯಮಯ ಪುರಾತತ್ವ ಮತ್ತು ಚಾರಿತ್ರಿಕ ಅಂಶಗಳನ್ನು ಹೊಂದಿರುವ ಮತ್ತು ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಪೂರ್ವ ಇತಿಹಾಸದ ಹಳೆಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಕಾಲದಿಂದ ಹಿಡಿದು ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರ್, ಹೈದರಾಲಿ ಮತ್ತು ಟಿಪ್ಪುವಿನ ಇತಿಹಾಸದ ಕಾಲದವರೆಗಿನ ಕುರುಹುಗಳು ದೊರೆತು ಈ ತಾಲ್ಲೂಕಿನ ಮಹತ್ವವನ್ನು ಹೆಚ್ಚಿಸಿವೆ. ಈಗಾಗಲೇ ಈ ಪರಿಸರದ ಕೆಲವು ನೆಲೆಗಳಲ್ಲಿ ಪುರಾತತ್ವ ಶಾಸ್ತ್ರಜ್ಞರು ಮತ್ತು ಇತಿಹಾಸಕಾರರು ಅಧ್ಯಯನ ಮಾಡಿದ್ದು ಅವರಲ್ಲಿ ರಾಬರ್ಟ್ ಬ್ರೂಸ್‌ಫೂಟ್‌ರವರು (೧೯೧೬) ನವಶಿಲಾಯುಗ ಮತ್ತು ಬೃಹತ್‌ಶಿಲಾಯುಗದ ಅವಶೇಷಗಳನ್ನು, ಎಂ.ಎಚ್. ಕೃಷ್ಣರವರು (೧೯೪೯) ಕುಂತಿಬೆಟ್ಟದಲ್ಲಿ ಇದೇ ಕಾಲದ ಕೆಲವು ಅವಶೇಷಗಳು ಹಾಗೂ ಇತಿಹಾಸ ಆರಂಭ ಕಾಲದ ಅವಶೇಷಗಳನ್ನು ಸಂಗ್ರಹಿಸಿದ್ದಾರೆ. ರಾಮದಾಸರೆಡ್ಡಿಯವರು ಲೋಕಪಾವನ ನದಿ ತೀರದಲ್ಲಿನ ಅವಶೇಷಗಳ ಸರ್ವೇಕ್ಷಣೆ ನಡೆಸಿ ಪುಸ್ತಕ ಪ್ರಕಟಿಸಿದ್ದಾರೆ. ಹಾಗೂ ಉದಯ ಆನಂದ್ ಶಾಸ್ತ್ರೀಯವರು (೧೯೯೯-೨೦೦೧ ಎಎಸ್‌ಐ) ಪಾಂಡವಪುರ ತಾಲ್ಲೂಕಿನ ಹಲವು ಮಹತ್ತರ ನೆಲೆಗಳನ್ನು ಶೋಧಿಸಿ ವರದಿ ಮಾಡಿದ್ದಾರೆ. ಪ್ರಸ್ತುತ ಲೇಖನವು ಪಾಂಡವಪುರ ತಾಲ್ಲೂಕಿನ ಕೆಲವು ಗ್ರಾಮಗಳ ಸರ್ವೇಕ್ಷಣೆಯಲ್ಲಿ ಕಂಡುಬಂದ ಹೊಸ ಪುರಾತತ್ವ ಕುರುಹುಗಳನ್ನು ಅಧ್ಯಯನ ಮಾಡುವುದಾಗಿದೆ. ಈ ರೀತಿಯಲ್ಲಿ ತಾಲ್ಲೂಕಿನ ನಳ್ಳೇನಹಳ್ಳಿ, ಇಳ್ಳೇನಹಳ್ಳಿ, ಕುರಹಟ್ಟಿ, ಬಳೆಹತ್ತಿಗುಪ್ಪೆ, ಬೇವಿನಕುಪ್ಪೆ, ಮಡಿಕೆಪಟ್ಟಣಗಳಲ್ಲಿ, ದೊರೆತ ಪುರಾತತ್ವ ಅವಶೇಷಗಳ ಕುರಿತು ಅಧ್ಯಯನವಾಗಿದೆ.

**ನಳ್ಳೇನಹಳ್ಳಿ:** ಈ ಗ್ರಾಮವು ಚಿನಕುರುಳಿಯಿಂದ ನಾರಾಯಣಪುರಕ್ಕೆ ಹೋಗುವ ಮುಖ್ಯದಾರಿಯ ಪಶ್ಚಿಮಕ್ಕೆ ಒಂದು ೧ ಕಿ.ಮೀ. ದೂರದಲ್ಲಿದೆ. ನಳ್ಳೇನಹಳ್ಳಿಯಲ್ಲಿ ಕಂಡುಬರುವ ಕರಿ ಅರೆಮಾಳ, ಅತ್ತಿಕಟ್ಟೆ, ಎತ್ತಕಟ್ಟೆಗುಡ್ಡ, ಗೊಬ್ಬರದ ಹಳ್ಳದ ಮುತ್ತರಾಯನಗುಡಿ ಭಾಗಗಳಲ್ಲಿ ಸುಮಾರು ೧೬ ಬೃಹತ್ ಶಿಲಾಯುಗ ಸಂಸ್ಕೃತಿಯನ್ನು ಹೋಲುವ ಕಲ್ಗುಪ್ಪೆ ಸಮಾಧಿ ಸಂಸ್ಕೃತಿಗಳು ಹೇರಳವಾಗಿ ದೊರೆತಿವೆ. ನಳ್ಳೇನಹಳ್ಳಿ ಗ್ರಾಮದ ಪಶ್ಚಿಮಕ್ಕಿರುವ ಕರಿ ಅರೆಮಾಳದ ಗುಡ್ಡದಲ್ಲಿ ಏಳು ಕಲ್ಗುಪ್ಪೆ ಸಮಾಧಿಗಳಿವೆ. ಇವುಗಳನ್ನು ಸ್ಥಳೀಯ ಬೆಟ್ಟದಲ್ಲಿ ದೊರೆಯುವ ಗ್ರಾನೈಟ್ ಕಲ್ಲಿನ ಚಪ್ಪಡಿ ಕಲ್ಲುಗಳನ್ನು ಚೌಕಾಕಾರವಾಗಿ ಇಟ್ಟು, ಅದರ ಮೇಲೆ ಬಿಡಿಯಾದ ೩ ಹಾಸುಕಲ್ಲುಗಳಿಂದ ಮುಚ್ಚಲಾಗಿದ್ದು, ಅನಂತರ ಅದರ ಮೇಲೆ ಸಂಪೂರ್ಣವಾಗಿ ಅಕಾರವಿಲ್ಲದ ಬಿಡಿ ಕಲ್ಲುಗಳಿಂದ ಆವರಿಸಲಾಗಿದೆ. ಈ ತರಹದ ಕಲ್ಗುಪ್ಪೆಗಳು ೨.೫ ಮೀ. ಉದ್ದ, ಒಂದು ಮೀ. ಅಗಲ ಹೊಂದಿದ್ದು, ಇದರ ಸರಾಸರಿ ಎತ್ತರ ಮೂರರಿಂದ ನಾಲ್ಕು ಅಡಿ ಎತ್ತರ ಕಾಣಬಹುದು. ಕರಿ ಅರೆಮಾಳದ ಎಡಕ್ಕೆ ಇರುವ ಎತ್ತಕಟ್ಟೆ ಎಂಬ ಗುಡ್ಡದಲ್ಲಿ ಆರು ಕಲ್ಗುಪ್ಪೆ ಗೋರಿಗಳನ್ನು ಕಾಣಬಹುದಾಗಿದೆ. ಇವುಗಳು ಸಹ ಮೇಲಿನ ವಿವರಣೆ ರೀತಿಯಲ್ಲಿಯೇ ಕಂಡುಬರುತ್ತದೆ. ಹಾಗೆಯೇ ಕರಿ ಅರೆಮಾಳದ ಸುಮಾರು ೨೦೦ ಮೀಟರ್ ದೂರದಲ್ಲಿ ಬೃಹತ್ ಶಿಲಾಯುಗ ಸಮಾಧಿ ರೀತಿಯಲ್ಲಿನ ಒಂದು ಮಂಟಪವನ್ನು ಕಾಣಬಹುದು. ಇದರ ಎತ್ತರ ೧.೨೦ ಮೀ. ಹಾಗೂ ಉದ್ದ ೧.೫೦ ಮೀ. ಅಗಲವಿದೆ. ಇದನ್ನು ಸಹ ಗ್ರಾನೈಟ್ ಚಪ್ಪಡಿಯ ಒಂದು ಅಡಿ ದಪ್ಪದ ಉದ್ದನೆಯ ಕಲ್ಲುಗಳನ್ನು ಚೌಕಾಕಾರವಾಗಿ ನಿಲ್ಲಿಸಿ ಅದರ ಮೇಲ್ಭಾಗವನ್ನು ಎರಡು ಚಪ್ಪಡಿಯ ಹಾಸುಕಲ್ಲುಗಳಿಂದ ಮುಚ್ಚಲಾಗಿದೆ. ಹಾಗೆಯೇ ಇದರ ಮುಂದೆ ಒಂದು ಸಾಂಕೇತಿಕ ಕಲ್ಲನ್ನು ನಿಲ್ಲಿಸಲಾಗಿದೆ. ಇದು ಮಂಟಪವೇ ಅಥವಾ ಸಮಾಧಿಯೇ ಎಂಬುದು ಚರ್ಚಿಸಬೇಕಾಗಿದೆ. ಕರಿ ಅರೆಮಾಳದ ಬಲಕ್ಕಿರುವ ಗುಡ್ಡದಲ್ಲಿ ಮುತ್ತರಾಯನ ಗುಡಿಯನ್ನು ನಿರ್ಮಿಸಲಾಗಿದೆ. ಈ ಗುಡಿಯ ಸುತ್ತ ಬಿಡಿ

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು.

** ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣ.

ಕೆಲವು ವರುಷಗಳ ಹಿಂದೆ ಸಮಾಧಿಯ ಚಪ್ಪಡಿಗಳನ್ನು ಇಳಿಸಿ ಈ ದೇವಾಯಲದ ಗೋಡೆ ನಿರ್ಮಿಸಲಾಯಿತೆಂದು ತಿಳಿಸುತ್ತಾರೆ. ಈ ಕಲ್ಲುಗ್ಗಪ್ಪೆ ಸಮಾಧಿಗಳು ಪ್ರಸ್ತುತವಾಗಿ ಪ್ರಾಕೃತಿಕ ವಿಕೋಪಕ್ಕೆ ತುತ್ತಾಗಿ ನಶಿಸುತ್ತಿದೆ. ಹಾಗೂ ಅರಣ್ಯ ರಕ್ಷಕರು. ಈ ಸಮಾಧಿಗಳ ಕಲ್ಲುಗಳನ್ನು ಉಪಯೋಗಿಸಿಕೊಂಡು ತಡೆ ಗೋಡೆಗಳನ್ನು ನಿರ್ಮಿಸುತ್ತಿರುವುದು ಸಹ ಕಂಡು ಬಂದಿದೆ.



ಚಪ್ಪಡಿ ಕಲ್ಲುಗಳಿಂದ ದೇವಾಲಯದ ಗೋಡೆಯನ್ನು ನಾಲ್ಕು ಅಡಿಗಳ ಎತ್ತರದಲ್ಲಿ ನಿರ್ಮಿಸಲಾಗಿದ್ದು, ಅದರ ಮಧ್ಯ ಭಾಗದಲ್ಲಿ ಸಣ್ಣ ಗುಡಿಯನ್ನು ನಿರ್ಮಿಸಲಾಗಿದೆ. ಈ ಗುಡಿಯಲ್ಲಿ ೩ ಕಲ್ಲುಗಳನ್ನು ಇಟ್ಟು ಮತ್ತುರಾಯರ ದೇವರೆಂದು ಪೂಜಿಸಲಾಗುತ್ತದೆ. ಇಲ್ಲಿನ ಸ್ಥಳೀಯರನ್ನು ವಿಚಾರಿಸಿದಾಗ ಇಲ್ಲಿಯು ಸಹ ಕಲ್ಲುಗ್ಗಪ್ಪೆ ಸಮಾಧಿಗಳಿದ್ದು,







**ಇಳ್ಳೇನಹಳ್ಳಿ:–** ಇದು ನಳ್ಳೇನಹಳ್ಳಿಯ ಪಕ್ಕದಲ್ಲಿರುವ ಮತ್ತೊಂದು ಗ್ರಾಮ. ಈ ಗ್ರಾಮದ ಎತ್ತರಕ್ಕೆ ಇರುವ ದಾರಿಯ ಎಡ ಭಾಗದ ಬಯಲಿನಲ್ಲಿ ಸುಮರು ೩೧ ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ಇವೆ. ಇವು ಒಂದೇ ಪಟ್ಟಿಕೆಯಲ್ಲಿ ಹೊಂದಿದ್ದು, ಇದನ್ನು ಬಳಪದ ಜಾತಿಯ ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಹಾಗೆಯೇ ಅದೇ ದಾರಿಯಲ್ಲಿ ಪಟ್ಟಲದಮ್ಮ ದೇವಾಲಯದ ಹಿಂಭಾಗದಲ್ಲೂ ಸಹ ೧೧ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ಒಂದು ಅಡಿ ಎತ್ತರವನ್ನು ಹೊಂದಿದ್ದು, ಈ ಸ್ಮಾರಕ ಶಿಲ್ಪಗಳ ಕೆತ್ತನೆಯು ಅಷ್ಟೊಂದು ಕುಶಲತೆಯಿಂದ ಕೂಡಿರುವುದಿಲ್ಲ. ಇದರಲ್ಲಿನ ಸೂರ್ಯಚಂದ್ರ, ವೀರನು ನಮಸ್ಕರಿಸುತ್ತಿರುವ, ಸತಿ ಮತ್ತು ಪತಿ ಇಬ್ಬರು ಕೈಯನ್ನು









ಹಿಡಿದಿರುವ ರೀತಿಯ ಕೆತ್ತನೆ ಕಾಣಬಹುದಾಗಿದೆ. ಹಾಗೂ ಕೊರೆದಿರುವ ಭೂತದ ರೀತಿಯ ಶಿಲ್ಪಗಳನ್ನು ಕಾಣಬಹುದು. ಈ ಸ್ಮಾರಕಗಳ ಲಕ್ಷಣಗಳ ಗಮನಿಸಿದಾಗ ಇವು ವಿಜಯ ನಗರದ ನಾಯಕರ ಅಂತ್ಯದ ಕಾಲವಾಗಿದ್ದು, ಮತ್ತು ಸ್ಮಾರಕ ಶಿಲ್ಪಗಳ ಅವಸಾನದ ಕಾಲಘಟ್ಟವಾಗಿದೆ ಎಂಬುದನ್ನು ತಿಳಿಯ ಬಹುದು. ಹಾಗೆಯೇ ಈ ಎರಡು ಕಡೆಯ ಸ್ಮಾರಕ ಶಿಲ್ಪಗಳನ್ನು ಗ್ರಾಮದ ಒಂದೊಂದು ಕುಟುಂಬಗಳು ತಮ್ಮ ಪೂರ್ವಿಕರೆಂದು ವರ್ಷಕ್ಕೊಂದು ಬಾರಿ ಪೂಜಿಸುತ್ತಾ ಬಂದಿದ್ದಾರೆ.

**ಕುರಹಟ್ಟಿ:** ಈ ಗ್ರಾಮವು ಪಾಂಡವಪುರದಿಂದ ಉತ್ತರಕ್ಕಿರುವ ಸುಂಕಾತೊಣ್ಣೂರು ಗ್ರಾಮದ ಮುಖ್ಯ ರಸ್ತೆಯಿಂದ ಮೂರು ಕಿ.ಮೀ. ದೂರದಲ್ಲಿದೆ. ಈ ಸ್ಮಾರಕ ಶಿಲ್ಪಗಳು ಗ್ರಾಮದ ಮಧ್ಯದಲ್ಲಿದ್ದು, ಅಸ್ತವ್ಯಸ್ತವಾಗಿದೆ. ಇಲ್ಲಿ ಸುಮಾರು ೧೬ ವೀರಗಲ್ಲುಗಳಿವೆ. ಬಹುಶಃ ಇವುಗಳನ್ನು ಬೇರೆ ಬೇರೆ ಸ್ಥಳಗಳಿಂದ ತಂದು ಹಾಕಿರಬಹುದು, ಇದರ ನಿರ್ವಹಣೆ ಸಹ ಸೂಕ್ತವಾಗಿ ನಿರ್ವಹಿಸಿಲ್ಲ. ಆದ್ದರಿಂದ ಮೇಲ್ನೋಟದ ಲಕ್ಷಣಗಳನ್ನು ಗಮನಿಸಿದಾಗ ಇಲ್ಲಿನ ಬಹುತೇಕ ವೀರಗಲ್ಲುಗಳಲ್ಲಿ ನಂದಿ, ಲಿಂಗ ಸಾಮಾನ್ಯವಾಗಿ ಕಂಡು ಬಂದಿರುವುದರಿಂದ ಈ ಪ್ರದೇಶದಲ್ಲಿ ಶೈವ ಮತದ ಪ್ರಭಾವ ವಿತ್ತೆಂದು ಹೇಳಬಹುದು. ಈ ಸ್ಮಾರಕಗಳ ಲಕ್ಷಣಗಳ ಆಧಾರದ ಮೇಲೆ ಹೊಯ್ಸಳರ ಕೊನೆಯ ಹಂತ ಮತ್ತು ವಿಜಯನಗರದ ಪ್ರಾರಂಭಿಕ ಹಂತದ ಸ್ಮಾರಕಗಳಾಗಿರಬಹುದು. ಈ ಸ್ಮಾರಕ ಗಳಲ್ಲಿ ವೀರಗಲ್ಲು ಮತ್ತು ಸತಿಗಲ್ಲು ಹೆಚ್ಚಾಗಿ ಕಂಡುಬಂದಿವೆ. ಹಾಗೂ ಸಾಮಾನ್ಯವಾಗಿ ಎಲ್ಲಾವು ಮೂರು ಪಟ್ಟಿಕೆಗಳಿದ್ದು, ಕೆಳಗಿನ ಪಟ್ಟಿಕೆಯಲ್ಲಿ ವೀರನು ಹೋರಾಡು ತ್ತಿರುವ ಅಥವಾ ಸತಿ ಹೋಗುತ್ತಿರುವ ಉಬ್ಬು ಶಿಲ್ಪಗಳಿದ್ದು, ಎರಡನೇ ಪಟ್ಟಿಕೆ ಯಲ್ಲಿ ಸತಿ ಅಥವಾ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೇವಕನ್ಯೆಯರ ಉಬ್ಬುಶಿಲ್ಪಗಳಿವೆ. ಮೂರನೇ ಪಟ್ಟಿಕೆಯಲ್ಲಿ ವೀರನು ಪ್ರಾರ್ಥಿಸುತ್ತಿರುವ ಮತ್ತು ಶಿವಲಿಂಗ, ಬಸವ, ಸೂರ್ಯಚಂದ್ರ ಉಬ್ಬುಶಿಲ್ಪಗಳ ದೃಶ್ಯ ಕಾಣಬಹುದಾಗಿದೆ.

**ಬಳಹತ್ತಿಗುಪ್ಪೆ:** ಪಾಂಡವಪುರದಿಂದ ಏಳು ಕಿ.ಮೀ. ಉತ್ತರಕ್ಕಿರುವ ಸುಂಕಾತೊಣ್ಣೂರು ಗ್ರಾಮಕ್ಕೆ ಹೋಗುವ ಮುಖ್ಯ ದಾರಿಯಲ್ಲಿರುವ ಗ್ರಾಮವಾಗಿದೆ. ಈ ಗ್ರಾಮದ ಬಸವ ದೇವಾಲಯದ ಎಡಭಾಗದಲ್ಲಿದೆ. ಇಲ್ಲಿ ಆರು ಸ್ಮಾರಕ



ಶಿಲ್ಪಗಳಿದ್ದು ಮತ್ತು ಒಂದು ಶಾಸನವಿದೆ. ಈ ಸ್ಮಾರಕ ಶಿಲ್ಪಗಳಲ್ಲಿನ ಒಂದರಲ್ಲಿ ಜೈನಯತಿ ಬಿಂಬವಿದ್ದು, ಅವರು ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಗ್ನರಾಗಿದ್ದಾರೆ. ಹಾಗೆಯೇ ಸೂರ್ಯ ಚಂದ್ರರ ಕೆತ್ತನೆಯಿದೆ. ಇದನ್ನು ಅವಲೋಕಿಸಿದಾಗ ಇದು ಗ್ರಾನೈಟ್ ಕಲ್ಲಿನಲ್ಲಿ ಒಂದೇ ಪಟ್ಟಿಕೆಯಲ್ಲಿ ನಿರ್ಮಿಸ ಲಾಗಿದ್ದು, ಇದು ವಿಜಯನಗರದ ಕಾಲದ್ದಾಗಿರಬಹುದು ಮತ್ತು ಈ ಸ್ಥಳದಲ್ಲಿ ಜೈನರ ಪ್ರಭಾವವನ್ನು ಸೂಚಿಸುತ್ತದೆ.

**ಒಕ್ಕೈಮಾಸ್ತಿಕಲ್ಲು:** ಇದು ನಾಲ್ಕು ಅಡಿ ಎತ್ತರ ಮತ್ತು ಮೂರು ಅಡಿ ಅಗಲವಿದ್ದು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇದೊಂದು ಅಲಂಕೃತವಾಗಿರುವ ಒಕ್ಕೈಮಾಸ್ತಿಕಲ್ಲಾಗಿದ್ದು, ಇದರಲ್ಲಿ ಸತಿಯು ಬಲಗೈಯನ್ನು ಮೇಲಕ್ಕೆ ಎತ್ತಿರುವುದು ಮತ್ತು ಸತಿಯು ಆಭರಣ ಧರಿಸಿರುವುದು ಕಾಣಬಹುದು. ಇದರಲ್ಲಿ ಮೂರು ಪುಷ್ಪಾಲಂಕಾರವನ್ನು ಮಾಡಿದ್ದು, ಎಡಭಾಗದಲ್ಲಿ ಯದ್ಧದಲ್ಲಿ ಮಡಿದ ವೀರನು ಮಂಟಪದಲ್ಲಿ ಕುಳಿತಿರುವುದು. ಮತ್ತು ಪಕ್ಕದಲ್ಲಿ ಸತಿಯ ಎಡಗೈಯಲ್ಲಿ ಕನ್ನಡಿಯನ್ನು, ಬಲಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿರುವುದು ಕಾಣಬಹುದು. ಹಾಗೂ ಮೇಲೆ ಸೂರ್ಯ ಚಂದ್ರರ ಉಬ್ಬು ಕೆತ್ತನೆಗಳಿವೆ.

**ಎರಡು ವೀರಗಲ್ಲುಗಳು:–** ಈ ಎರಡು ವೀರಗಲ್ಲುಗಳಲ್ಲಿ ಒಂದನೆ ಪಟ್ಟಿಕೆಯ ಮಣ್ಣಿನಲ್ಲಿ ಹೂತಿದ್ದು ಅಸ್ಪಷ್ಟವಾಗಿದೆ. ಇವು ಸುಮಾರು ಮೂರು ಅಡಿ ಎತ್ತರ ಮತ್ತು ಎರಡೂವರೆ ಅಡಿ ಅಗಲವಿದ್ದು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇದರ ಬಲಭಾಗದ ವೀರಗಲ್ಲಿನಲ್ಲಿ ಕೆಳಹಂತದ ಪಟ್ಟಿಯಲ್ಲಿ ಆರು ಜನ ವೀರರ ಶಿಲ್ಪಗಳಿವೆ. ಮಧ್ಯದ ಪಟ್ಟಿಕೆಯಲ್ಲಿ ಮರಣ ಹೊಂದಿದ ವೀರರನ್ನು ಮಂಟಪದಲ್ಲಿ ಕುಳ್ಳಿರಿಸಿ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯುತ್ತಿರುವ ದೃಶ್ಯವನ್ನು ಕಾಣಬಹುದು. ೩ನೇ ಪಟ್ಟಿಕೆಯಲ್ಲಿ ಶಿವಲಿಂಗದ ಎಡಭಾಗದಲ್ಲಿ ವೀರನು ಕುಳಿತಿರುವ ಮತ್ತು ಬಲಭಾಗದಲ್ಲಿ ಬಸವನನ್ನು ಕಾಣಬಹು ದಾಗಿದೆ.

**ವೀರಗಲ್ಲು:** ಇದು ಸುಮಾರು ನಾಲ್ಕು ಅಡಿ ಎತ್ತರ ಎರಡು ಅಡಿ ಅಗಲವಿದ್ದು ಗ್ರಾನೈಟ್ ಕಲ್ಲಿನಲ್ಲಿ ೩ ಪಟ್ಟಿಕೆಗಳಿಂದ ಕೂಡಿದೆ. ಮೊದಲನೇ ಪಟ್ಟಿಕೆಯಲ್ಲಿ ಮೂರು ಜನ ವೀರರಿದ್ದು ಮಧ್ಯದಲ್ಲಿನ ವೀರನು ಈಟಿಯನ್ನು ಹಿಡಿದು ಹೋರಾಡು ತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ. ಎರಡನೇ ಪಟ್ಟಿಕೆಯಲ್ಲಿ ಸತ್ತ ವೀರನನ್ನು ಮಂಟಪದಲ್ಲಿ ಕುಳ್ಳಿರಿಸಿ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಮತ್ತು ಎರಡನೇ ಪಟ್ಟಿಕೆಯಲ್ಲಿ ಮಧ್ಯದಲ್ಲಿ ಶಿವಲಿಂಗ ಮತ್ತು ಬಲಭಾಗದಲ್ಲಿ ನಂದಿ, ಎಡಭಾಗದಲ್ಲಿ ವೀರನಿರುವ ದೃಶ್ಯ ಅಸ್ಪಷ್ಟವಾಗಿ ಕಾಣುತ್ತದೆ.

**ಬೇವಿನಕುಪ್ಪೆ:** ಈ ಗ್ರಾಮವು ಸಹ ಪಾಂಡವಪುರದಿಂದ ಉತ್ತರಕ್ಕೆ ೫ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ರಾಮ ದೇವರ ಗುಡಿ ಬಳಿಯಿರುವ ಸುಮಾರು ೪ ಅಡಿ ಎತ್ತರ ಮತ್ತು ೨.೫ ಅಡಿ ಅಗಲವಿರುವ ಈ ವೀರಗಲ್ಲು ೩ ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ೧ನೇ ಪಟ್ಟಿಕೆಯಲ್ಲಿ ೭ ಜನ ವೀರರು ಹೋರಾಡುತ್ತಿರುವ ದೃಶ್ಯವಿದೆ. ವೀರರು



ಈಟಿ, ಕತ್ತಿಗುರಾಣಿ, ಖಡ್ಗ, ಕತ್ತಿಯನ್ನು ಎದುರಾಳಿಗಳು ಬಿಲ್ಲು ಬಾಣ ಮತ್ತು ಕತ್ತಿಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ೨ನೇ ಪಟ್ಟಿಕೆಯಲ್ಲಿ ಅಪ್ಸರೆಯರು ನಾಲ್ಕು ಜನ ಸತ್ತ ವೀರರನ್ನು ಮಂಟಪ ದಲ್ಲಿ ಕುಳ್ಳಿರಿಸಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಕಾಣಬಹುದು. ೩ನೇ ಪಟ್ಟಿಕೆಯಲ್ಲಿ ಎಡಭಾಗದಲ್ಲೂ ಸ್ವರ್ಗಸ್ಥರಾದ ವೀರರು ನಮಸ್ಕರಿಸುತ್ತಿರುವುದು, ಮಧ್ಯದ ಮಂಟಪದಲ್ಲಿ ಯತಿಯು ಶಿವಲಿಂಗಕ್ಕೆ ಪೂಜಿಸುತ್ತಿರುವುದು ಹಾಗೂ ಬಲಭಾಗದಲ್ಲಿ ನಂದಿಯು ಕುಳಿತಿರುವುದು, ಮೇಲೆ ಸೂರ್ಯ ಚಂದ್ರ ದೃಶ್ಯ ಕಾಣಬಹು ದಾಗಿದೆ. ಈ ವೀರಗಲ್ಲನ್ನು ಗಮನಿಸಿದಾಗ ಇದು ಬಳಪದ ಕಲ್ಲಿನ ಜಾತಿಯ ಕಲ್ಲಿನಿಂದ ನಿರ್ಮಿತವಾಗಿದ್ದು, ಈ ವೀರಗಲ್ಲಿನ ಕೆಳಗಡೆ ದೊಡ್ಡ ರಂಧ್ರ ಮಾಡಿರುವುದು ವಿಶೇಷದ ಸಂಗತಿಯಾಗಿದೆ. ಇದು ಹೊಯ್ಸಳರ ಕಾಲದ್ದು ಇರಬಹು ದೆಂದು ಅಂದಾಜಿಸಬಹುದಾಗಿದೆ.

**ಮಡಿಕೆ ಪಟ್ಟಣ:** ಪಾಂಡವಪುರದಿಂದ ಮಂಡ್ಯಕ್ಕೆ ಹೋಗುವ ಮುಖ್ಯ ರಸ್ತೆಯಲ್ಲಿ ಚಿಕ್ಕಮರಳಿ ಮಾರ್ಗದ ತಿರುವಿನಲ್ಲಿರುವ ವೀರಭದ್ರೇಶ್ವರ ದೇವಾಲಯ ಬಳಿ ನಾಲ್ಕು ಸ್ಮಾರಕ ಶಿಲ್ಪಗಳನ್ನು ಕಾಣಬಹುದಾಗಿದೆ. ಈ ಸ್ಮಾರಕಗಳಿಗೆ ಸುಣ್ಣಬಣ್ಣದಿಂದ ಅಲಂಕರಿಸಲಾಗಿದೆ.

**ಒಕ್ಕೈಮಾಸ್ತಿಕಲ್ಲು:** ಇದು ಸುಮಾರು ಮೂರು ಅಡಿ ಎತ್ತರ ಮತ್ತು ಎರಡು ಅಡಿ ಅಗಲ ಹೊಂದಿದ್ದು, ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇದರಲ್ಲಿ ಸತಿಯು ಆಭರಣ ಗಳಿಂದ ಅಲಂಕೃತಳಾಗಿ ಬಲಗೈಯನ್ನು ಮೇಲಕ್ಕೆತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ. ಹಾಗೆಯೇ ಕೆಳಗಡೆ ಸತ್ತ



ವೀರನು ಪೀಠದ ಮೇಲೆ ಕುಳಿತಿದ್ದು, ಪಕ್ಕದಲ್ಲಿ ಸತಿಯು ಬಲಗೈಯಲ್ಲಿ ನಿಂಬೆಹಣ್ಣು ಮತ್ತು ಎಡಗೈಯಲ್ಲಿ ಕನ್ನಡಿಯನ್ನು ಹಿಡಿದು ನಿಂತಿರುವ ದೃಶ್ಯವಿದೆ. ಮೇಲಿನ ಭಾಗದಲ್ಲಿ ಸೂರ್ಯ ಚಂದ್ರರ ದೃಶ್ಯಗಳಿವೆ.

**ವೀರಗಲ್ಲು ೧:** ಇದು ಸುಮಾರು ೪ ಅಡಿ ಎತ್ತರ ಮತ್ತು ೩ ಅಡಿ ಅಗಲ ಹೊಂದಿದ್ದು, ಗ್ರಾನೈಟ್ ಶಿಲೆಯಿಂದಾಗಿದೆ. ಇದು ೩ ಪಟ್ಟಿಕೆಯಿಂದ ಕೂಡಿದ್ದು, ಕೆಳಹಂತದ ಮೊದಲ ಪಟ್ಟಿಕೆಯಲ್ಲಿ ಮಣ್ಣಿನಿಂದ ಹೂತಿದ್ದು, ಅದರಲ್ಲಿ ಇಬ್ಬರು ವೀರರು ಕಾದಾಡಿದ ದೃಶ್ಯವಿದೆ. ಕತ್ತಿ ಗುರಾಣಿಗಳನ್ನು ಬಳಸಲಾಗಿದೆ. ೨ನೇ ಪಟ್ಟಿಕೆಯಲ್ಲಿ ಸತ್ತ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯುತ್ತಿರುವ ದೃಶ್ಯವಿದೆ. ೧ನೇ ಪಟ್ಟಿಕೆಯ ಮಧ್ಯದಲ್ಲಿ ಶಿವಲಿಂಗಕ್ಕೆ ಯತಿಯು ಪೂಜೆ ಸಲ್ಲಿಸುತ್ತಿದ್ದು, ಎಡಭಾಗದಲ್ಲಿ ಸ್ವರ್ಗಸ್ಥನಾದ ವೀರನು ಪ್ರಾರ್ಥಿಸುತ್ತಿರುವುದು, ಬಲಭಾಗದಲ್ಲಿ ನಂದಿಯು ಕುಳಿತಿರುವ ದೃಶ್ಯವನ್ನು ಕಾಣಬಹುದಾಗಿದೆ. ಹಾಗೆಯೇ ಈ ಪಟ್ಟಿಕೆಗಳ ಹೊರಭಾಗದಲ್ಲಿ ಸೂರ್ಯ ಚಂದ್ರರ ದೃಶ್ಯಗಳಿವೆ.



**ವೀರಗಲ್ಲು ಸಂಖ್ಯೆ ೨:** ಇದು ಸುಮಾರು ೪ ಅಡಿಎತ್ತರ ೩ ಅಡಿ ಅಗಲವಿದ್ದು, ಗ್ರಾನೈಟ್ ಶಿಲೆಯದ್ದಾಗಿದೆ. ಇದು ೩ ಪಟ್ಟಿಕೆಗಳನ್ನು ಒಳಗೊಂಡಿದ್ದು, ಕೆಳಗಿನಂದ ೧ನೇ ಪಟ್ಟಿಕೆಯಲ್ಲಿ ಇಬ್ಬರು ಯೋಧರು ವೀರಾವೇಶದಿಂದ ಕತ್ತಿ ಗುರಾಣಿಯಲ್ಲಿ ಹೋರಾಡುತ್ತಿರುವ ದೃಶ್ಯವಿದೆ. ೨ನೇ ಪಟ್ಟಿಕೆಯಲ್ಲಿ ಸತ್ತ ವೀರನನ್ನು ಅಪ್ಸರೆಯರು ಮಂಟಪದಲ್ಲಿ ಕುಳ್ಳಿರಿಸಿ ಚಾಮರದೊಂದಿಗೆ ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ೩ನೇ ಪಟ್ಟಿಕೆಯ ಮಧ್ಯದಲ್ಲಿ ಮಂಟಪದಲ್ಲಿ ಶಿವಲಿಂಗಕ್ಕೆ ಯತಿಯು ಪೂಜಿಸುತ್ತಿರುವುದು, ಎಡಭಾಗದಲ್ಲಿ ಸ್ವರ್ಗಸ್ಥನಾದ ವೀರನು ನಮಸ್ಕರಿಸುವ ಬಲಭಾಗದಲ್ಲಿ ಕುಳಿತಿರುವ ನಂದಿ & ಪಕ್ಕದಲ್ಲಿ ಇನ್ನೊಬ್ಬ ವ್ಯಕ್ತಿಯ ದೃಶ್ಯವಿದ್ದು, ಜೊತೆಗೆ ಸೂರ್ಯ ಚಂದ್ರರ ದೃಶ್ಯವನ್ನು ಕಾಣಬಹುದಾಗಿದೆ.

**ವೀರಗಲ್ಲು ೩:** ಇದು ವೀರಭದ್ರೇಶ್ವರ ದೇವಾಲಯ ಒಳಗಡೆಯಿದ್ದು ಸುಮಾರು ೪ ಅಡಿ ಎತ್ತರ ಮತ್ತು ೩.೫ ಅಡಿ, ಅಗಲದ ಗ್ರಾನೈಟ್ ಶಿಲೆಯಿದ್ದಾಗಿದೆ. ಇದರ ಮುಂದೆ ಕಂಚಿನ ವೀರಭದ್ರ ಮತ್ತು ಕಾಳಿಯ ವಿಗ್ರಹವನ್ನಿಟ್ಟು ಜೊತೆಗೆ ಕಲ್ಲಿನ ಶಿವಲಿಂಗವನ್ನಿಟ್ಟು ಪೂಜಿಸಲಾಗುತ್ತಿದೆ. ಈ ವೀರಗಲ್ಲು ಪೂರ್ಣ ರೀತಿಯಲ್ಲಿ ಕಪ್ಪಾಗಿದ್ದು ದೃಶ್ಯ ಅಸ್ಪಷ್ಟವಾಗಿದೆ. ಇದು ಮೂರು ಪಟ್ಟಿಕೆಗಳನ್ನು ಒಳಗೊಂಡಿದ್ದು, ೧ನೇ



ಪಟ್ಟಿಕೆಯಲ್ಲಿ ೩ ಜನ ವೀರರು ಎಡಭಾಗದಲ್ಲಿದ್ದು, ಮಧ್ಯದಲ್ಲಿ ಕುದುರೆಯ ಮೇಲೆ ಒಬ್ಬ ವೀರನಿದ್ದು ಬಲಭಾಗದಲ್ಲಿ ಇಬ್ಬರು ವೀರರನ್ನು ಗಮನಿಸಬಹುದು. ೨ನೇ ಪಟ್ಟಿಕೆಯಲ್ಲಿ ಯದ್ಧದಲ್ಲಿ ಮಡಿದ ಮೂವರು ವೀರರನ್ನು ಮಂಟಪದಲ್ಲಿ ಕುಳ್ಳಿರಿಸಿ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ೩ನೇ ಪಟ್ಟಿಕೆಯ ಮಧ್ಯದಲ್ಲಿ ಶಿವಲಿಂಗದ ಮುಂದೆ ವೀರರು ಕುಳಿತು ಪ್ರಾರ್ಥಿಸುತ್ತಿರುವುದು, ಬಲಭಾಗದಲ್ಲಿ ಕುಳಿತಿರುವ ನಂದಿಯಿದ್ದು, ಜೊತೆಗೆ ವಾಧ್ಯ, ಡೋಲು ನುಡಿಸುತ್ತಿರುವ ವ್ಯಕ್ತಿಗಳ ದೃಶ್ಯವಿದೆ. ಈ ಮೇಲಿನ ವೀರಗಲ್ಲು, ವೀರ ಮಾಸ್ತಿಗಲ್ಲುಗಳ ಲಕ್ಷಣಗಳನ್ನು ಗಮನಿಸಿದಾಗ ವಿಜಯನಗರ ಕಾಲದ್ದು ಇರಬೇಕೆಂದು ಊಹಿಸಬಹುದು. ಅಲ್ಲದೇ ವಿಶೇಷವಾಗಿ ಈ ದೇವಾಲಯ ವೀರಭದ್ರೇಶ್ವರನ ಶಿಲ್ಪವಿಲ್ಲದಿದ್ದರೂ ಇತ್ತೀಚಿನ ವರ್ಷಗಳಲ್ಲಿ ಕಂಚಿನ ವೀರಭದ್ರ, ಕಾಳಿ ಮತ್ತು ಕಲ್ಲಿನ ಶಿವಲಿಂಗವನ್ನು ವೀರಗಲ್ಲಿನ ಮುಂದೆ ಇಟ್ಟು ಪೂಜಿಸುತ್ತಿರುವುದು ಕಂಡುಬಂದಿದ್ದು ಅದ್ದರಿಂದ ಇದಕ್ಕೆ ವೀರಭದ್ರೇಶ್ವರ ದೇವಾಲಯವೆಂದು ಹೆಸರಿಟ್ಟಿರುವುದು ವಿಶೇಷವಾಗಿದೆ.

ಈ ರೀತಿಯಾಗಿ ಪಾಂಡವಪುರ ತಾಲ್ಲೂಕಿನಲ್ಲಿ ವೈವಿಧ್ಯಮಯ ಪುರಾತತ್ವ ಮತ್ತು ಚಾರಿತ್ರಿಕ ಕುರುಹುಗಳು ಕಂಡು ಬಂದಿದ್ದು, ಇವುಗಳು ಇತಿಹಾಸ ರಚನೆಗೆ ತಮ್ಮದೇ ಆದಂತಹ ಸಹಾಯಕವಾದ ದಾಖಲೆಗಳನ್ನು ಒದಗಿಸಿವೆ. ಇಂತಹ ಕುರುಹುಗಳ ಬಗ್ಗೆ ಇತ್ತೀಚಿನ ದಿನಗಳಲ್ಲಿ ಸ್ಥಳೀಯರಿಗೆ ಸರಿಯಾದ ಮಾಹಿತಿ ಮತ್ತು ಮಹತ್ವದ ಅರಿವಿಲ್ಲದೆ ನಿರ್ಲಕ್ಷ್ಯಕ್ಕೆ ಒಳಗಾಗಿ ನಶಿಸುತ್ತಿರುವುದನ್ನು ನಾವು ಕಾಣಬಹುದಾಗಿದೆ.

## ಆಕರ ಗ್ರಂಥಗಳು


೧. ಚಿದಾನಂದಮೂರ್ತಿ.ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ೨೦೧೧, ಸಪ್ನ ಬುಕ್ ಹೌಸ್, ಬೆಂಗಳೂರು.

೨. ಗೋಪಾಲ್. ಆರ್., ಮಂಡ್ಯ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ೨೦೦೮, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ.

೩. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನಶಿಲ್ಪ, ೧೯೯೯, ಹಂಪಿ.

೪. ಶೇಷಶಾಸ್ತ್ರಿ ಆರ್. ಕರ್ನಾಟಕದ ವೀರಗಲ್ಲುಗಳು, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು.

೫. ಕನ್ನಡ ವಿಷಯ ವಿಶ್ವಕೋಶ., ೨೦೦೫, ಪ್ರಸಾಂರಾಂಗ, ಮೈ.ವಿ.ವಿ. ಮೈಸೂರು.

೬. ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ ೨೦೦೩., ಕರ್ನಾಟಕ ಪುಸ್ತಕ ಮುದ್ರಣಾಲಯ, ಮೈಸೂರು.

೭. ಶಿವತಾರಕ್, ಕೆ.ಬಿ. ಕರ್ನಾಟಕ ಪುರಾತತ್ವ ನೆಲೆಗಳು.

೮. ಇತಿಹಾಸ ದರ್ಶನ, ಸಂಪುಟ ೧೪., ೧೯೯೯, ಪುಟ ೧ರಿಂದ ೪.

೯. ಎಪಿಗ್ರಾಫಿಯಾ ಕರ್ನಾಟಿಕ ಸಂ. ೬, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೦. ಗುರುರಾಜರಾವ್., ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ ೧೯೭೧, ಮೈ.ವಿ.ವಿ., ಮೈಸೂರು.



# ಗೌಡೂರು-ಮಾಚನೂರು ಹಾಗೂ ವಂದಲಿ ಬೂದಿ ದಿಬ್ಬಗಳು ಒಂದು ಅಧ್ಯಯನ

**ಡಾ. ಹೆಚ್. ಚಂದ್ರಶೇಖರ***

ರಾಯಚೂರು ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳು ವಿಪುಲವಾಗಿವೆ. ಕ್ಯಾಪ್ಟನ್ ಮನ್ (೧೯೩೪) ಲಿಂಗಸೂಗೂರು ಕೊಪ್ಪಳ ಮತ್ತು ಗಂಗಾವಿತಿ ತಾಲ್ಲೂಕಿನಲ್ಲಿರುವ ಪ್ರಾಗೈತಿಹಾಸಿಕಗಳನ್ನು ಸ್ಥೂಲವಾಗಿ ಮೊದಲ ಬಾರಿಗೆ ವಿವರಿಸಿದನು. ನಂತರ ಸುಂದರ ಅ. ಷಡಕ್ಷರಯ್ಯ, ಅಲ್ಚಿನ್ ಮತ್ತು ಚಂದ್ರಶೇಖರ (೨೦೧೦ Man and Environment) ಜಿಲ್ಲೆಯ ಪ್ರಾಗೈತಿಹಾಸಿಕ ಅಧ್ಯಯನ ಮಾಡಿದ್ದಾರೆ. ಅಲ್ಚಿನ್ (೧೯೬೩) ಅವರು Neolithie Cattlekeepers of southi India ಎಂಬ ಪುಸ್ತಕದಲ್ಲಿ ಪ್ರಸ್ತುತ ಸಂಪ್ರಬಂಧದ ದಿಬ್ಬಗಳ ಬಗ್ಗೆ ಸಂಕ್ಷಿಪ್ತವಾಗಿ ವಿವವರಿಸಿದ್ದಾರೆ. ನಾನೊಬ್ಬ ಭೂವಿಜ್ಞಾನಿಯಾಗಿ ಹಾಗೂ ಇತಿಹಾಸದಲ್ಲಿ ಆಸಕ್ತಿಯುಳ್ಳ ವ್ಯಕ್ತಿಯಾಗಿ ವಂದಲಿ ಮತ್ತು ಗೌಡೂರು ಬೂದಿ ದಿಬ್ಬಗಳನ್ನು ಅಧ್ಯಯನ ಮಾಡಲು ಎರಡು ಸಲ (೧೯೯೨ ಮತ್ತು ೧೯೯೩) ಭೇಟಿ ನೀಡಿದ್ದೇನೆ.

**ವಂದಲಿಯ ಬೂದಿದಿಬ್ಬ :** ವಂದಲಿಯು ಮಾನ್ವಿ ತಾಲ್ಲೂಕಿನ ಒಂದು ಚಿಕ್ಕ ಹಳ್ಳಿ ದೇವದುರ್ಗ ಮತ್ತು ಲಿಂಗಸೂಗೂರು ತಾಲ್ಲೂಕಿನ ಗಡಿಯಲ್ಲಿದೆ. ಇಲ್ಲಿಯ ಬೂದಿದಿಬ್ಬವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೂ ಯಾವ ಬಗೆಯ ಪ್ರಾಚ್ಯಾವಶೇಷಗಳು (Artifacts) ಸಿಗಲಿಲ್ಲ. ತುಂಬಾ ರಂದ್ರ ಮುಕ್ತವಾಗಿರುವ ತುಂಡುಗಳನ್ನು ನಾನು ಒಡೆದು ಪರೀಕ್ಷಿಸಿದೆ. ಹೈಡ್ರೋಕ್ಲೋರಿಕ್ ಆಮ್ಲದ (HCL) ಹನಿಗಳನ್ನು ಹಾಕಿದರೂ ಯಾವ ಬಗೆಯ ಕ್ರಿಯೆ ಕಾಣಲಿಲ್ಲ. ಅಂದರೆ ಇದು ಸುಣ್ಣಕಲ್ಲಿನ ದಿಬ್ಬವಲ್ಲ (CaCo3) ಎಂದಂತಾಯಿತು. ಬಹುಹಿಂದೆ ಈ ದಿಬ್ಬದ ತುಂಡುಗಳನ್ನು ಸ್ಮಿತ್ (smith 1916) ರಾಸಾಯನಿಕವಾಗಿ ವಿಶ್ಲೇಷಿಸಿ ಈ ಕೆಳಗಿನ ಆಕ್ಸೈಡ್ ಗಳನ್ನು ಕೊಟ್ಟಿದ್ದಾರೆ.

**(ಆಕರ Alliction)**

$sio_2$ - 53.1%, $H_2o$ - 0.20%, cao - 10.80%, $F_2O_3$-17.27%, $A_2O_3$ - 451%, $P_2O_5$ - 1.11%, K2 O - 1.11%, $Na_2O$-2.54%, Mg O - 3.88%, $Co_2$-5.3% ಒಟ್ಟು: ೯೯.೯೮

ಈ ಎಲ್ಲ ಭೌತಿಕ ಮತ್ತು ರಾಸಾಯನಿಕ ಅಂಶಗಳನ್ನು ಗಮನಿಸಿ ಇದೊಂದು ಆಕಳ / ಎತ್ತಿನ / ಹೋರಿಗಳನ್ನು ಪದೇ ಪದೇ ಸುಡುವದರಿಂದಾಗಿ ಗಟ್ಟಿ-ಯಾದ ದಿಬ್ಬವಾಗಿದೆ ಎಂಬುದು ಸಾಬೀತಾಗುತ್ತದೆ. ಈ ಅಂಶವು ಗೌಡೂರು ಬೂದಿ ದಿಬ್ಬದಲ್ಲಿ ಇನ್ನೂ ಹೆಚ್ಚು ಅಂಶಗಳೊಂದಿಗೆ ಸಾಬೀತಾಗುತ್ತದೆ. (ಚಿತ್ರ ೧)

**ಗೌಡೂರು – ಮಾಚನೂರು**

ಈ ಜೋಡುಗಳ್ಳಿಗಳು ಸ್ವತಂತ್ರಗಳಾಗಿದ್ದರೂ, ಗೌಡೂರು ಹಳ್ಳಿಗೆ ಸೇರಿದ ಸುಮಾರು ಹತ್ತು ಎಕರೆ ಭೂ ಪ್ರದೇಶದಲ್ಲಿದ್ದ (೧೯೩೮ ನಂತರ ಇಲ್ಲ) ಬೂದಿ ದಿಬ್ಬವು ಹೆಚ್ಚು ಕುತೂಹಲಕಾರಿಯಾಗಿದೆ. ವಂದಲಿ ಮತ್ತು ಗೌಡೂರು – ಮಾಚನೂರು ಬೂದಿ ದಿಬ್ಬಗಳ ಪ್ಲಾನ್ ಮತ್ತು ಪ್ರೊಫೈಲಗಳನ್ನು ಚಿತ್ರ ೨ರಲ್ಲಿ ಪ್ರಸ್ತುತ ಪಡಿಸಿದ್ದೇನೆ. ವಂದಲಿಯ ಬೂದಿ ದಿಬ್ಬವು ಸುಮಾರು ೫೦೦ ಘೂಟು ಪೂರ್ವ ಪಶ್ಚಿಮ ದಿಕ್ಕಿನಲ್ಲಿದೆ, ಸುಮಾರು ಅದೇ ಉದ್ದವನ್ನು ಉತ್ತರದ ದಕ್ಷಿಣ ದಿಕ್ಕಿನಲ್ಲಿದೆ. ಎತ್ತರ ಸುಮಾರು ೧೦ ಅಡಿಇದೆ. ಹೆಚ್ಚು ಕಡಿಮೆ ಈಗ ಸಮತಟ್ಟಾಗಿದೆ.

ಗೌಡೂರು ಬೂದಿದಿಬ್ಬ ೧೯೩೪ರಲ್ಲಿ (ಮನ್ ಚಿತ್ರಿಸಿದಂತೆ) ದಕ್ಷಿಣೋತ್ತರವಾಗಿ ಸುಮಾರು ೫೦೦ ಅಡಿ, ಮತ್ತು ಪೂರ್ವ-ಪಶ್ಚಿಮವಾಗಿ ಒಂದು ಸಾವಿರ ಅಡಿಅಳತೆಯಲ್ಲಿತ್ತು. ಈ ದಿಬ್ಬದ ಎತ್ತರ ಕೇವಲ ೧೦ ಅಡಿ ಆದರೆ ನಾನು ೧೯೯೨ರಲ್ಲಿ ನೋಡಿದಾಗ ಕೇವಲ ೧ ಅಡಿಯಷ್ಟು ಬೂದಿಇತ್ತು. ಉದ್ದ-ಅಗಲ ಕೇಲ ೫-೬ ಅಡಿಗಳಷ್ಟು ಇತ್ತು.

೧೯೯೩ರಲ್ಲಿ ನಾನು ನೋಡಿದಾಗ ದಿಬ್ಬದ ಗುರ್ತು ಗಳಿದ್ದವು. ಕಾರಣವೆಂದರೆ ಈ ದಿಬ್ಬದ ಸುತ್ತು ಮುತ್ತಲಿನ,

* 'ಸಂಗಮ', ಎಮ್ಐಜಿ-೭೭, ೬ನೇ ಕ್ರಾಸ್, ೬ನೇ ಮೇನ್, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು-೭೯.



ವಂದಲಿಯ ಬೂದಿದಿಬ್ಬ ಯಾವುದೇ ಪ್ರಾಚ್ಯಾವಶೇಷಗಳಿಲ್ಲ



ಗೌಡೂರು ದಿಬ್ಬದ ಬೂದಿಯನ್ನು ತಮ್ಮ ಹೊಲಗಳಿಗೆ ಸಾಗಿಸುತ್ತಿರುವ ರೈತರು



ಗೋವಿ/ಎತ್ತಿನ ತಲೆಯ ಮುಂಭಾಗ



ಗೋವಿ/ಎತ್ತಿನ ಎರಡು ದವಡೆಗಳು



ಗೋವಿ/ಎತ್ತಿನ/ ಹೋರಿಯ ಪಾದದ ಎಲುವು



ಅದೇ ಪ್ರಾಣಿಯ ಮಂಡಿಯ ಎಲುವು



ಗೃಹೋಪಯೋಗಿ ಮಡಿಕೆಯ ಚೂರುಗಳು



ಗ್ಲಾಸಿ ವಸ್ತು

ರೈತರು ಇಲ್ಲಿಯ ಬೂದಿಯನ್ನು ಎಲುವುಗಳ ಸಮೇತ ಸಾಗಿಸಿ ತಮ್ಮ ಹೊಲಗಳಿಗೆ ಗೊಬ್ಬರವನ್ನಾಗಿ ಉಪಯೋಗಿಸಿದರು. (ಚಿತ್ರ ೩)

ಇಲ್ಲಿ ಸಿಕ್ಕ ಎಲುವುಗಳನ್ನು ಫೋಟೋಗಳನ್ನು ನೋಡಿ ಡಾ॥ಜೆ.ಜೆ. ಜೋಗಳೇಕರ್ ಅವರು ನನಗೆ ಅನಿಸಿದ್ದಂತೆ ಇವುಗಳು ಗೋವು ಅಥವಾ ಎತ್ತಿನ ದೇಹದ ತುಂಡುಗಳೆಂದು ಹೇಳಿದರು. ನನ್ನ ಗ್ರಹಿಕೆಯನ್ನು ಸಮರ್ಥಿಸಿದ್ದರು. ಚಿತ್ರ ೪ ರಲ್ಲಿ ಗೋವಿನ / ಎತ್ತಿನ/ ಹೋರಿಯ ಮುಖದ ಎಲವಿನ ಭಾಗವನ್ನು ಕಾಣಬಹುದು. ಇದರಂತೆಯೇ ಅದೇ ಪ್ರಾಣಿಯ ದವಡೆ, ಪಾದ, ಮಂಡಿಯ ಎಲುವುಗಳ ಚಿತ್ರಗಳನ್ನು ಅನುಕ್ರಮವಾಗಿ ಚಿ ೫,೬ ಮತ್ತು ೭ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ಈ ಬೂದಿದಿಬ್ಬದಲ್ಲಿ ಗೃಹೋಪಯೋಗಿ ಮಡಿಕೆಯ ಚೂರುಗಳು ಸಿಕ್ಕಿವೆ (ಚಿ.೮) ಈ ಸದರಿ ದಿಬ್ಬದಲ್ಲಿ ಹಿಂದಿನ ಕಾಲದಲ್ಲಿ ಪದೇ ಬೆಂಕಿಯನ್ನು ಉರಿಸಲಾಗುತ್ತಿತ್ತು. ಆದ್ದರಿಂದ ಅಲ್ಲಿಯ ಮರಳು ಕರಗಿ ಗಟ್ಟಿನಗೊಂಡು ಗ್ಲಾಸಿ (Glossy) ರೂಪವನ್ನು ತಳೆದಿದೆ ಎಂಬುದನ್ನು ಅಲ್ಲಿ ಸಿಕ್ಕ ಗ್ಲಾಸಿ ತುಂಡುಗಳು ಸಾಬೀತು ಪಡಿಸುತ್ತವೆ. (ಚಿ.೯)

**ತಾಮ್ರದಗಣಿ :** ಗೌಡೂರು ಬಳಿ ಕೇವಲ ೧-೨ ಕಿ.ಮೀ. ಅಂತರದಲ್ಲಿ ತಾಮ್ರದ ಪುರಾತನ ಗಣಿ ಇದೆ. ಶಿಲೆಯಲ್ಲಿ ತಾಮ್ರ ಖನಿಜಗಳಾದ ಚಾಲ್ಕೋಪೈರೆಟ್ ಮತ್ತು ಪೈರೇಟಗಳು ಮಳೆಗಾಳಿಗೆ ಸಿಕ್ಕು ಮೈಲು ತುತ್ತ್ಯದ (ನೀಲಿಬಣ್ಣ) ರೂಪವನ್ನು ತಳೆದಿರುವುದನ್ನು ನೋಡಬಹುದು. ರಾಜ್ಯದ ಗಣಿ ಮತ್ತು ಭೂವಿಜ್ಞಾನ ಇಲಾಖೆಯು ರಂಧ್ರಗಳನ್ನು ಕೊರೆದು (Diamond Drilling) ಪರೀಕ್ಷಿಸಿತ್ತು ಈ ಅನ್ವೇಷಣೆಯ ವರದಿಯನ್ನು "Grilogical Studies" No ೧೪೫೬ನ್ನು ೧೯೮೭ರಲ್ಲಿ ಪ್ರಕಟಿಸಲಾಗಿದೆ. ಈ ವರದಿಯ ಪ್ರಕಾರ ತಾಮ್ರದ ಅಂಶ (Cu) ಕೇವಲ ಸೈಕಡ ೧ಕ್ಕಿಂತ ಕಡಿಮೆ ಇದೆ. ಆದ್ದರಿಂದ ಗಣಿಗಾರಿಕೆಯು ಲಾಭದಾಯಕವಲ್ಲ ಎಂದು ನಿರ್ಧರಿಸಲಾಯಿತು.

ಆದರೆ, ಪ್ರಾಚೀನ ಕಾಲದ ವ್ಯಕ್ತಿಯು/ಗಳು ಈ ಅದಿರನ್ನು ಸಂಗ್ರಹಿಸಿ ಪುಡಿ ಮಾಡಿ ತಾಮ್ರವನ್ನು ಧಾತು ಮೂಲರೂಪದಲ್ಲಿ ಪಡೆಯುತ್ತಿದ್ದನೆಂಬುದನ್ನೆ ಅಲ್ಲಿ ಸಿಕ್ಕಿರುವ ಗುಂಡಿನ ಚೂರುಗಳು ಸಾಬೀತು ಪಡಿಸುತ್ತವೆ. (ಚಿ.೧೦) ಅಚ್ಚರಿಯ ವಿಷಯವೆಂದರೆ ಕ್ಯಾಪ್ಟನ್ ಮತ್ತಿತರ ಈ ಪ್ರಮುಖ ವಿಷಯವನ್ನು ಗಮನಿಸಿಲ್ಲ. ಈ ಪ್ರಮುಖ ಖನಿಜದ ಅಂಶ, ಸದರಿ ಬೂದಿ ದಿಬ್ಬದ ಕಾಲವನ್ನು ನಿರ್ಧರಿಸಲು ನೆರವಾಗುತ್ತದೆ.

**ತೀರ್ಮಾನಗಳು :** (i) ಮೇಲೆ ವಿವರಿಸಲಾದ ಎಲುವುಗಳು ಈ ಪ್ರದೇಶದ ಪ್ರಾಚೀನಕಾಲದ ಮನುಜರು, ಇಂದಿಗೂ ಸಂಕ್ರಾಂತಿಯ ಹಬ್ಬದಲ್ಲಿ ಎತ್ತುಗಳನ್ನು (ಹೋರಿಗಳನ್ನು) ಕೊಂಡ ಹಾಯಸುತ್ತಿದರೆಂಬುದನ್ನು ಸಾಬೀತು ಪಡಿಸುತ್ತವೆ. ಪದೇ ಕೊಂಡ ಹಾಯಸಿದಾಗ ಎತ್ತುಗಳ (ಹೋರಿಗಳ ಅಥವಾ ಆಕಳುಗಳ) ಕಾಲಿನ ಎಲುವುಗಳು ಹಾಗೂ ದೇಹದ ಇತರಭಾಗಗಳು ಬೆಂಕಿಯಲ್ಲಿ ಬಿದ್ದು ಹೋಗುತ್ತವೆ. ಮಾಂಸ ಮತ್ತು ಚರ್ಮದ ಭಾಗಸುಟ್ಟು ಹೋಗುತ್ತದೆ. ಕೇವಲ ಗಟ್ಟಿ ಎಲುವುಗಳು ಮಾತ್ರ ಬೂದಿಯಲ್ಲಿ ಉಳಿದು ಹೋಗಿವೆ.

(ii) ಸಮೀಪದಲ್ಲಿ ತಾಮ್ರದ ಅದಿರಿನಿಂದ ತಾಮ್ರವನ್ನು ಪಡೆಯಲಾಗುತ್ತಿತ್ತು. ಆದ್ದರಿಂದ ಈ ಕಾಲ ಘಟ್ಟವನ್ನು ತಾಮ್ರ - ಶಿಲಾಯುಗಕ್ಕೆ ಸೇರಿಸ ಬೇಕಾಗುತ್ತದೆ. ಅಲ್‌ಚಿನ್ ಮತ್ತು ಇತರರು ಈ ಕಾಲಘಟ್ಟವನ್ನು ನೂತನ ಶಿಲಾಯುಗವೆಂದು (Neotithic) ಎಂದು ನಿರ್ಧರಿಸಿದ್ದಾರೆ. ಅಂದರೆ ನೂತನ ಶಿಲಾಯುಗಕ್ಕಿಂತ ಈಚೆಗೂ ಬಹುಶಃ ಕ್ರಿ.ಪೂ. ೨೦,೦೦೦ ತಾಮ್ರ-ಶಿಲಾಯುಗಕ್ಕೆ ಈ ಬೂದಿದಿಬ್ಬ ಸೇರುತ್ತದೆ. ಆಗ ಅಲ್ಲಿ ಒಕ್ಕಲು ತನಕ್ಕಾಗಿ ಎತ್ತು ಆಕಳುಗಳನ್ನು ಸಾಕುತ್ತಿದ್ದರು.

(iii) ಹತ್ತಿರದಲ್ಲಿರುವ ಗೌಡೂರಿನಲ್ಲಿದ್ದ ತಾಮ್ರದ ಅದಿರನ್ನು ಕುಟ್ಟಿಪುಡಿ ತಾಮ್ರವನ್ನು ಪಡೆಯುತ್ತಿದ್ದರು ಆ ಪ್ರಾಚೀನ ಯುಗದ ಜನರು.



## ಆಕರ ಗ್ರಂಥಗಳು


೧. (1934)... Prehistoric and Protohitoric finds... jou of Hyderabad geological survey, VolI, Pt 1.

2. Sundar, A (1974)... Further Rook paintings & hirebenakal Raichur Dist. Mysore State jou of India History Vol 52 pt -1, university of kerala, Thiruvanathapuram.

3. Allchin, FR (1963)... Neoliths cattle keepers of south India Cambridge university press.

4. Chandrashekar 2010... Two Protohistoric sides of Devduraga Tq Raicheu Dist. Karnataka... man and Environment vol xxxv No. 2 Pune.

೫. ಚಂದ್ರಶೇಖರ ಹೆಚ್. (೨೦೧೫)... ದೇವ ದುರ್ಗಾ ತಾಲ್ಲುಕಿನ ಎರಡು ಪ್ರಾಗೈತಿಹಾಸಿಕ ನೆಲೆಗಳು... ಭೂವಿಜ್ಞಾನಿಯ ಕಣ್ಣಲ್ಲಿ ಇತಿಹಾಸ ಸಿ.ವಿ.ಜಿ. ಚಂದ್ರು, ಬೆಂಗಳೂರು.




# ಸೂಲವಾಡಿಯ ಬ್ರಹ್ಮೇಶ್ವರ ದೇವಾಲಯ: ಒಂದು ವಿಶ್ಲೇಷಣೆ

**ಕುಮಾರಸ್ವಾಮಿ.ಎಸ್.ಡಿ.***

**ಚಾ**ಮರಾಜನಗರ ಜಿಲ್ಲೆಯು ಐತಿಹಾಸಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಹೆಚ್ಚಿನ ಮಹತ್ವವನ್ನು ಹೊಂದಿದೆ. ಕೊಳ್ಳೇಗಾಲ ಪ್ರದೇಶವು ಈ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದ್ದು, ಇದು ಜಿಲ್ಲೆಯ ಪೂರ್ವ ಭಾಗಕ್ಕಿದ್ದು, ಇದು ಚಾಮರಾಜನಗರ ಜಿಲ್ಲೆಯ ತಾಲೂಕು ಗಳಲ್ಲೇ ಅತ್ಯಂತ ದೊಡ್ಡದಾಗಿದೆ. ಈ ತಾಲೂಕನ್ನು ಕರ್ನಾಟಕ ವನ್ನಾಳಿದ ಪ್ರಾಚೀನ ಅರಸು ಮನೆತನಗಳಾದ ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರು, ಹದಿನಾಡು ಪ್ರಭುಗಳು ಮತ್ತು ಉಮ್ಮತ್ತೂರು ಪಾಳೆಗಾರರು, ಆಳ್ವಿಕೆ ನಡೆಸಿದ್ದಾರೆ. ಈ ಎಲ್ಲಾ ರಾಜಮನೆತನಗಳು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ಶೈಕ್ಷಣಿಕವಾಗಿ ಹೆಚ್ಚಿನ ಪ್ರೋತ್ಸಾಹ ನೀಡಿದ್ದಾರೆ. ಪ್ರಮುಖವಾಗಿ ಸಾಂಸ್ಕೃತಿಕ ಮತ್ತು ಸಾಹಿತ್ಯದ ಪ್ರತಿಬಿಂಬವಾಗಿರುವ ಕಲೆ, ಶಿಲ್ಪಕಲೆ, ವಾಸ್ತುಶಿಲ್ಪ, ಶಾಸನಗಳು, ಮುಂತಾದವುಗಳನ್ನು ತಮ್ಮ ಆಳ್ವಿಕೆಯ ಕುರುಹುಗಳಾಗಿ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣಬಹುದು. ಅಂತಹ ಪ್ರದೇಶಗಳಲ್ಲಿ ಸೂಲವಾಡಿ ಗ್ರಾಮವು ಸಹ ಒಂದಾಗಿದೆ.

ಸೂಲವಾಡಿಯು ಕೊಳ್ಳೇಗಾಲ ತಾಲ್ಲೂಕಿನ ಪೂರ್ವ ಭಾಗಕ್ಕೆ ಮಲೆಮಹದೇಶ್ವರ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಸುಮಾರು ೫೦ ಕಿ.ಮೀ. ದೂರದಲ್ಲಿ ಬೆಟ್ಟಗಳ ಮಧ್ಯಭಾಗ ದಲ್ಲಿದೆ. ಈ ಗ್ರಾಮವು ಐತಿಹಾಸಿಕವಾಗಿ ಹಾಗೂ ಧಾರ್ಮಿಕ ವಾಗಿ ತನ್ನದೆಯಾದ ಮಹತ್ವವನ್ನು ಹೊಂದಿರುವ ಇಲ್ಲಿ 'ಬ್ರಹ್ಮೇಶ್ವರ' ಎಂಬ ದೇವಾಲಯವಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಗ್ರಾಮದ ಮಧ್ಯಭಾಗದಲ್ಲಿದ್ದು, ಇತಿಹಾಸ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಮಹತ್ವದ್ದಾಗಿದೆ. ಇದನ್ನು ಕ್ರಿ.ಶ. ೧೫೮೦ರಲ್ಲಿ ಬ್ರಹ್ಮದೇವರ ನಿರೂಪದಿಂದ ತಮ್ಮಡಿ ಮಾರಯ್ಯನ ಮಗ ಆಚ್ಚಯ್ಯನು ಮೊರಟಹಳ್ಳಿಯ (ಈಗಿನ ಮಾರ್ಟಹಳ್ಳಿ) ನಾಯಕರಾದ ಪಾಲೆನಾಯಕರಿಗೆ ಪುಣ್ಯವಾಗಬೇಕೆಂದು ಬ್ರಹ್ಮದೇವರ ಗುಡಿಯನ್ನು ಕಟ್ಟಿಸಿದ ನೆಂದು ಇಲ್ಲಿ ದೊರೆತಿರುವ ಶಾಸನವು ತಿಳಿಸುತ್ತದೆ. ಈ ನಾಯಕರು ವಿಜಯನಗರ ಅರಸರ ಸಾಮಾಂತರಾಗಿದ್ದರು. ಹಾಗಾಗಿ ಈ ದೇವಾಲಯದ ವಾಸ್ತುಲಕ್ಷಣವು ವಿಜಯನಗರದ ಅರಸರ ಕಾಲದ ವಾಸ್ತುಲಕ್ಷಣದಿಂದ ಕೂಡಿದೆ. ನಂತರ ಮೈಸೂರು ಒಡೆಯರ ಕಾಲದಲ್ಲಿ ಜೀರ್ಣೋದ್ಧಾರಗೊಂಡು ದೇವಾಲಯದ ಪ್ರಕಾರ ಮತ್ತು ಪ್ರಕಾರಮಂಟಪವನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಮತ್ತು ನಂದಿ ಮಂಟಪವನ್ನು ಹೊಂದಿದೆ. ಬ್ರಹ್ಮೇಶ್ವರ ದೇವರ ವೈಭವವನ್ನು ಕಂಡು ಕೊಳ್ಳೇಗಾಲ ಪ್ರಾಂತ್ಯದ ಮೀಣ್ಯದಲ್ಲಿ ವಾಸವಾಗಿದ್ದ ಗುರುಸಿದ್ಧಕವಿಯು ತಮ್ಮ ಸಾಂಗ್ಯತದಲ್ಲಿ ವರ್ಣನೆ ಮಾಡಿದ್ದಾರೆ.

ಈತನ ಸಾಂಗತ್ಯವನ್ನು ಗಮನಿಸಿದರೆ ಇಲ್ಲಿ ಲಿಂಗವನ್ನು ಪೂಜಿಸುತ್ತಿರಬೇಕು ಆದರೆ ಪ್ರಸ್ತುತ ಗರ್ಭಗೃಹದಲ್ಲಿ ಲಿಂಗವಿಲ್ಲದೆ ಲೋಹದಿಂದ ನಿರ್ಮಿಸಿರುವ ವಿಗ್ರಹಗಳನ್ನು ಇಡಲಾಗಿದೆ. ದೇವಾಲಯದ ಮುಂಭಾಗದಲ್ಲಿ ನಂದಿ ಕಂಬವಿದ್ದು ಇಲ್ಲಿ ನಾಲ್ಕು ಸಾಲು ತಮಿಳು ಶಾಸನವಿದೆ. ಎಪಿಗ್ರಾಫಿಯ ಕರ್ನಾಟಕ ಸಂಪುಟ ಸಂಖ್ಯೆ IV ರಲ್ಲಿ ಶಾಸನ ಸಂಖ್ಯೆ ೮೦ರಲ್ಲಿ ನಮೂದಿಸಲಾಗಿದೆ.

**ಗರ್ಭಗೃಹ :** ಗರ್ಭಗೃಹವು ಸುಮಾರು ೮ x ೮ ಅಡಿ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ಗರ್ಭಗೃಹದ ಹಿಂಭಾಗದಲ್ಲಿ ಹುಟ್ಟು ಬಂಡೆಯಿದ್ದು, ಈ ಬಂಡೆಗೆ ಸೇರಿಸಿ ಗರ್ಭಗೃಹವನ್ನು ನಿರ್ಮಿಸಲಾಗಿದೆ. ಕೇವಲ ಮೂರು ಮುಖ ಮಾತ್ರ ಭಿತ್ತಿಯನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಮೇಲ್ಭಾಗ ದಲ್ಲಿ ಭುವನೇಶ್ವರಿಯಿದ್ದು ಇದು ಚೌಕಕಾರವಾಗಿದೆ. ಇದರ ಮಧ್ಯಭಾಗದಲ್ಲಿ ಪದ್ಮವನ್ನು ಬಿಡಿಸಲಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಲೋಹದಿಂದ ನಿರ್ಮಿಸಿ ರುವ ವಿಗ್ರಹವಿದೆ. ಇದರ ಹಿಂಭಾಗದಲ್ಲಿ ಲೋಹದಿಂದ ನಿರ್ಮಿಸಿರುವ ಪ್ರಭಾವಳಿಯಿದ್ದು ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ.

ಗರ್ಭಗೃಹದ ಒಳಭಾಗದಲ್ಲಿ ಒಂದು ಭಕ್ತ ಶಿಲ್ಪವಿದೆ. ಬಹುಶಃ ಈ ಭಕ್ತ ಶಿಲ್ಪವು ದೇವಾಲಯವನ್ನು ನಿರ್ಮಿಸಿದ ಆ ಪ್ರಾಂತ್ಯದ ನಾಯಕನಾದ ಆಚಯ್ಯನ ಶಿಲ್ಪವಿರಬಹುದು.

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

ಈ ಶಿಲ್ಪವು ತ್ರಿಭಂಗಿಯಲ್ಲಿ ನಿಂತಿದ್ದು ಬಲಗೈಯಲ್ಲಿ ಗಧೆಯನ್ನು ಹಿಡಿದು ನಿಂತಿದ್ದಾನೆ. ತಲೆಯ ಮೇಲೆ ಪೇಟ, ಕುತ್ತಿಗೆಯಲ್ಲಿ ಮಣಿಹಾರ, ತೋಳಿನಲ್ಲಿ ತೋಳ್ಬಂದಿ, ಕೈಗಳಲ್ಲಿ ಕೈಕಡಗ ಮುಂತಾದ ಆಭರಣಗಳನ್ನು ಹಾಕಿಕೊಂಡಿದ್ದಾನೆ. ಈ ಶಿಲ್ಪದ ಎರಡು ಬದಿಯಲ್ಲಿ ಬಿಲ್ಲು, ಬಾಣದ ಉಬ್ಬು ಕೆತ್ತನೆಯಿದೆ. ಈ ಶಿಲ್ಪದ ಮುಖದ ಮೇಲೆ ದಪ್ಪಮೀಸೆಯನ್ನು ಬಿಡಿಸಲಾಗಿದೆ. ಈ ಎಲ್ಲಾ ಲಕ್ಷಣಗಳಿಂದ ಶಿಲ್ಪವು ಆ ಪ್ರಾಂತ್ಯದ ಆಚಯ್ಯನ ಶಿಲ್ಪವಿರಬಹುದೆಂದು ಊಹಿಸಲಾಗಿದೆ. ಗರ್ಭಗೃಹದ ದ್ವಾರವು ಸರಳವಾಗಿದ್ದು ಒಂದು ಪಟ್ಟಿಕೆಯಿಂದ ಕೂಡಿದೆ. ಇದರ ದ್ವಾರಬಂಧದ ಲಲಾಟಬಿಂಬದ ಮೇಲೆ ನಂದಿಯ ಉಬ್ಬುಶಿಲ್ಪವಿದೆ.

**ಸುಖನಾಸಿ:** ಸುಖನಾಸಿಯು ಗರ್ಭಗೃಹದಷ್ಟೆ ಉದ್ದ ಮತ್ತು ಅಗಲವಾಗಿದ್ದು ಸರಳವಾಗಿದೆ. ಇಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಸುಕನಾಸಿಯ ದ್ವಾರವು ಒಂದು ಪಟ್ಟಿಕೆಯಿಂದ ಕೂಡಿದ್ದು ಸಾಧಾರಣ ಶೈಲಿಯಲ್ಲಿದೆ. ಸುಕನಾಸಿಯ ಲಾಲಟಬಿಂಬದ ಮೇಲೆ ಲಿಂಗದ ಉಬ್ಬುಶಿಲ್ಪವಿದೆ.

**ನವರಂಗ:** ನವರಂಗವು ಸು. ೨೦x೨೦ ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಕಾರವಾಗಿದೆ. ಇಲ್ಲಿ ನಾಲ್ಕು ಕಂಬಗಳಿದ್ದು ಈ ಕಂಬಗಳು ಪೀಠ, ಪಾದ, ಬೋಧಿಗೆಯನ್ನು ಹೊಂದಿವೆ. ಕಂಬಗಳ ನಾಲ್ಕು ಮುಖಗಳಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಬಲಭಾಗದ ಎರಡು ಕಂಬಗಳಿಗೆ ಸಮನಾಗಿ ಭಿತ್ತಿಯನ್ನು ನಿರ್ಮಿಸಿ ಒಂದು ಚಿಕ್ಕ ಗುಡಿಯನ್ನು ನಿರ್ಮಿಸಲಾಗಿದೆ. ಎಡಭಾಗವನ್ನು ಹಾಗೆಯೇ ಉಳಿಸಿದ್ದು ವಿಶಾಲವಾಗಿದೆ. ನವರಂಗದ ಎಡಭಾಗದಲ್ಲಿ ಒಂದು ವೀರಭದ್ರನ ಶಿಲ್ಪ ಮತ್ತು ಬಲಭಾಗದಲ್ಲಿ ಗಣೇಶನ ಶಿಲ್ಪಗಳಿವೆ. ಗಣೇಶನ ಶಿಲ್ಪವು ವಿಶೇಷವಾಗಿದ್ದು ಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದೆ. ಈ ಶಿಲ್ಪವು ಶ್ರೀ ವೈಷ್ಣವ ಪ್ರಭಾವದಲ್ಲಿ ಬಂದಂತಿದೆ.

**ವೀರಭದ್ರನ ಶಿಲ್ಪ:** ಸುಮಾರು ೧೧/೨ ಅಡಿ ಪದ್ಮಪೀಠದ ಮೇಲೆ ತ್ರಿಭಂಗಿಯಲ್ಲಿ ನಿಂತಿರುವ ವೀರಭದ್ರನ ಶಿಲ್ಪವಿದೆ. ಈ ಶಿಲ್ಪವು ಎರಡು ಭುಜಗಳನ್ನು ಹೊಂದಿದ್ದು ಬಲಗೈಯಲ್ಲಿ ಖಡ್ಗ ಅಥವಾ ಕತ್ತಿ ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ನಿಂತಿದ್ದಾನೆ. ಗುರಾಣಿಯ ತಳಭಾಗದಲ್ಲಿ ಮನುಷ್ಯನ ರುಂಡವಿದೆ. ಶಿಲ್ಪದ ಬಲಭಾಗದಲ್ಲಿ ಬಾಣ ಮತ್ತು ಎಡಭಾಗದಲ್ಲಿ ಬಿಲ್ಲು ಆಯುಧಗಳಿವೆ. ತಲೆಯಲ್ಲಿ ಕಿರೀಟ, ತೋಳ್ಬಂದಿ, ಕೈಕಡಗ ಹಾಗೂ ಕುತ್ತಿಗೆಯಲ್ಲಿ ಮಣಿಹಾರಗಳನ್ನು ಮತ್ತು ಕಾಲ್ಕಡಗ, ಪಾದಕ್ಕೆ ಪಾದರಕ್ಷೆಗಳನ್ನು ಧರಿಸಿದ್ದಾನೆ. ಶಿಲ್ಪದ ಬಲಭಾಗದ ತಳಭಾಗದಲ್ಲಿ ದಕ್ಷಬ್ರಹ್ಮನು ತನ್ನ ಎರಡು ಕೈಗಳನ್ನು ಮುಗಿದು ಸಮಭಂಗಿಯಲ್ಲಿ ನಿಂತಿರುವ ಉಬ್ಬುಶಿಲ್ಪವಿದೆ. ವೀರಭದ್ರಶಿಲ್ಪದ ಹಿಂಬದಿಯಲ್ಲಿ ಪ್ರಭಾವಳಿಯಿದ್ದು ಈ ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದ್ದು ಕೀರ್ತಿ ಮುಖದ ಬಾಯಿಂದ ಹೊರಟಂತೆ ಹೂಬಳ್ಳಿ ಸುರುಳಿಗಳ ಚಿತ್ರವಿದೆ.

ನವರಂಗದ ದ್ವಾರವು ಒಂದು ಪಟ್ಟಿಕೆಯಿಂದ ಕೂಡಿದ್ದು ಸರಳವಾಗಿದೆ. ದ್ವಾರದ ಎರಡು ಬದಿಯಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಈ ಶಿಲ್ಪಗಳು ಕೈಯಲ್ಲಿ ಗಧೆ, ತ್ರಿಶೂಲ, ಢಮರುಗ, ಖಡ್ಗವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ.

**ಮುಖಮಂಟಪ:** ಮುಖಮಂಟಪವು ಸುಮಾರು ೨೫ x ೨೫ ಅಡಿ ಉದ್ದ ಮತ್ತು ಅಗಲವಾಗಿದ್ದು, ೩೬ ಕಂಬಗಳಿಂದ ಕೂಡಿದೆ. ಉತ್ತರ ಮತ್ತು ದಕ್ಷಿಣ ಹಾಗೂ ಪಶ್ಚಿಮ ದಿಕ್ಕುಗಳಿಗೆ ನವರಂಗದ ಭಿತ್ತಿಗೆ ಅನುಗುಣವಾಗಿ ೨೦ ಕಂಬವನ್ನು ಹೊಂದಿಕೊಂಡಂತೆ ಮೈಸೂರು ಒಡೆಯರ ಆಳ್ವಿಕೆಯ ಕಾಲದಲ್ಲಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಮುಖಮಂಟಪಕ್ಕೆ ಒಟ್ಟು ಮೂರು ದ್ವಾರಗಳಿದ್ದು ಸರಳವಾಗಿವೆ. ಒಳಭಾಗದಲ್ಲಿ ೧೬ ಕಂಬಗಳಿದ್ದು ಈ ಕಂಬಗಳು ಕ್ರಮವಾಗಿ ಪೀಠ, ಪಾದ ಮತ್ತು ಬೋಧಿಗೆಯನ್ನು ಹೊಂದಿವೆ. ಬೋಧಿಗೆಯ ಮೇಲ್ಭಾಗದಲ್ಲಿ ಪುಷ್ಪಬೋಧಿಗೆಯನ್ನು ನಿರ್ಮಿಸಲಾಗಿದೆ. ಕಂಬದ ನಾಲ್ಕು ಮುಖದಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳಿವೆ. ಇದರ ಛಾವಣಿಯ ಮೇಲ್ಭಾಗದಲ್ಲಿ ಆಮೆ, ಮತ್ಸ್ಯ, ಮೊಸಳೆಯ ಬಾಯಲ್ಲಿ ಹೆಣ್ಣಿನ ಚಿತ್ರವಿರುವ ಹಾಗೆ ಉಬ್ಬುಶಿಲ್ಪಗಳಿವೆ. ಮುಂಭಾಗದ ಗೋಡೆಯಲ್ಲಿ ತಮಿಳು ಮತ್ತು ಕನ್ನಡದಲ್ಲಿ ಬರೆದ ಇತ್ತೀಚಿನ ಲಿಪಿಗಳಿವೆ. ಮುಖ ಮಂಟಪ ಮೇಲ್ಛಾವಣಿಗಳಲ್ಲಿ ನಾಲ್ಕು ದಿಕ್ಕಿನಲ್ಲಿ ಇತ್ತೀಚಿನ ದಿನಗಳಲ್ಲಿ ಗಾರೆಯಿಂದ ನಿರ್ಮಿಸಿರುವ ನಂದಿಯ ಶಿಲ್ಪಗಳಿವೆ. ದ್ವಾರಕ್ಕೆ ಸಮನಾಗಿ ಮುಖಮಂಟಪದ ಮೇಲೆ ದೇವಕೋಷ್ಠಕ ವಿದೆ.

**ದೇವಾಲಯದ ಹೊರ ವಿನ್ಯಾಸ:** ದೇವಾಲಯದ ಹೊರ ವಿನ್ಯಾಸವು ಸರಳವಾಗಿದ್ದು ವಾಸ್ತುಲಕ್ಷಣದಿಂದ ಸರಳವಾಗಿದೆ. ಇಲ್ಲಿ ಕ್ರಮವಾಗಿ ಅದಿಷ್ಠಾನ, ಭಿತ್ತಿ, ಕಪೋತ ಹಾಗೂ ಶಿಖರವಿದೆ.

**ಅಧಿಷ್ಠಾನ:** ಅಧಿಷ್ಠಾನವು ಸರಳವಾಗಿದ್ದು ಜಗತಿ, ಕಂಠ, ಕಪೋತವನ್ನು ಹೊಂದಿದೆ. ಈ ೩ ಭಾಗಗಳು ಗರ್ಭಗೃಹದ ಭಾಗದಿಂದ ನವರಂಗದವರೆಗೂ ಕಾಣಬರುತ್ತದೆ. ಮುಖ ಮಂಟಪದಲ್ಲಿ ಜಗತಿ, ಕಂಠ, ತ್ರಿಪಟಕುಮುದ, ಮತ್ತು ಕಪೋತ ಗಳಿದ್ದು ಸರಳವಾಗಿದೆ.

**ಭಿತ್ತಿ:** ಭಿತ್ತಿಯು ಸರಳವಾಗಿದ್ದು ಯಾವುದೇ ಭಿತ್ತಿಕೋಷ್ಠಕ ಹಾಗೂ ಅರೆಕಂಬಗಳು ಕಾಣಬರುವುದಿಲ್ಲ ಭಿತ್ತಿಯ ಮೇಲ್ಭಾಗದಲ್ಲಿ ಕಪೋತವಿದ್ದು ಸರಳವಾಗಿವೆ.



ಬ್ರಹ್ಮೇಶ್ವರ ದೇವಾಲಯದ ಮುನ್ನೋಟ



ಬ್ರಹ್ಮೇಶ್ವರ ದೇವಾಲಯದ ಗರ್ಭಗುಡಿ



ಬ್ರಹ್ಮೇಶ್ವರ ದೇವಾಲಯದ
ಗರ್ಭಗುಡಿಯ ವೀರನ ಶಿಲ್ಪ



ಬ್ರಹ್ಮೇಶ್ವರ ದೇವಾಲಯದ ಸುಖನಾಸಿ



ಬ್ರಹ್ಮೇಶ್ವರ ದೇವಾಲಯದ ನವರಂಗ



ಬ್ರಹ್ಮೇಶ್ವರ ದೇವಾಲಯದ ನವರಂಗದ
ಕಂಬ



ಬ್ರಹ್ಮೇಶ್ವರ ದೇವಾಲಯದ
ನವರಂಗದಲ್ಲಿರುವ ವೀರಭದ್ರನ ಶಿಲ್ಪ



ಬ್ರಹ್ಮೇಶ್ವರ ದೇವಾಲಯದ ನವರಂಗದಲ್ಲಿರುವ
ಗಣೇಶನ ಶಿಲ್ಪ



ಬ್ರಹ್ಮೇಶ್ವರ ದೇವಾಲಯದ ಮುಖಮಂಟಪ



ಬ್ರಹ್ಮೇಶ್ವರ ದೇವಾಲಯದ ಮುಂದಿರುವ ನಂದಿಮಂಟಪ



ಬ್ರಹ್ಮೇಶ್ವರ ದೇವಾಲಯದ ಮುಂದಿರುವ ನಂದಿಕಂಬ



ಬ್ರಹ್ಮೇಶ್ವರ ದೇವಾಲಯದ ಹಿನ್ನೋಟ

**ಶಿಖರ:** ಶಿಖರದ ಭಾಗವು ಇತ್ತೀಚಿನ ದಿನದಲ್ಲಿ ನಿರ್ಮಾಣಗೊಂಡಿದ್ದು ಆಧುನಿಕ ಶೈಲಿಯ ವಾಸ್ತುಲಕ್ಷಣವನ್ನು ಹೊಂದಿ ಇದು ೩ ಹಂತಗಳಿಂದ ಕೂಡಿದೆ. ಶಿಖರದ ಮೊದಲು ಮತ್ತು ಎರಡನೇ ಭಾಗದ ಸುತ್ತಲೂ ಗಾರೆಯಿಂದ ನಿರ್ಮಿಸಿರುವ ಒಟ್ಟು ೮ ನಂದಿಯ ಶಿಲ್ಪಗಳಿವೆ. ಶಿಖರದ ಮೇಲ್ಭಾಗದಲ್ಲಿ ೪ ದಿಕ್ಕಿನಲ್ಲೂ ಕೀರ್ತಿ ಮುಖವಿದೆ ಹಾಗೂ ಶಿಖರದ ತುದಿಯಲ್ಲಿ ಸ್ತೂಪವಿದ್ದು ಸ್ತೂಪಿಯ ಮೇಲ್ಭಾಗದಲ್ಲಿ ಕಳಸವಿದೆ. ಶಿಖರದ ಹಿಂಭಾಗದಲ್ಲಿ ಬಂಡೆಗೆ ಹೊಂದಿ ಕೊಂಡಂತೆ ನಂದಿಯ ಗಾರೆಶಿಲ್ಪವಿದೆ.

**ನಂದಿ ಮಂಟಪ:** ನಂದಿ ಮಂಟಪವು ಕ್ರಮವಾಗಿ ಅದಿಷ್ಠಾನ, ಭಿತ್ತಿ, ಶಿಖರವನ್ನು ಹೊಂದಿದ್ದು ಗರ್ಭಗೃಹಕ್ಕೆ ಎದುರಾಗಿದ್ದು, ಮಂಟಪದ ಒಳಗಡೆ ನಂದಿಯ ಉಗ್ರಹವಿದೆ. ನಂದಿ ಮಂಟಪದ ಹಿಂದೆ ನಂದಿಕಂಬವಿದೆ.

**ಪ್ರಾಕಾರ:** ದೇವಾಲಯದ ಸುತ್ತಲೂ ಪ್ರಾಕಾರವಿದ್ದು ಈ ಪ್ರಾಕಾರವು ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣ ವಾಗಿದೆ. ದೇವಾಲಯದ ಉತ್ತರ ದಿಕ್ಕಿಗೆ ಪ್ರಕಾರ ಮಂಟಪವಿದ್ದು ಇದು ನಾಲ್ಕು ಕಂಬಗಳಿಂದ ಕೂಡಿದೆ.

ಈ ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ವಾಸ್ತುಶೈಲಿಯ ಲಕ್ಷಣವು ವಿಜಯನಗರ ಕಾಲದಲ್ಲಿ ನಿರ್ಮಾಣ ವಾಗಿ ಮೈಸೂರು ಒಡೆಯರ ಕಾಲದಲ್ಲಿ ಜೀರ್ಣೋದ್ಧಾರ ಗೊಂಡ ಈ ದೇವಾಲಯವು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕ ಪರಂಪರೆಯನ್ನು ಸಾರುವ ಪ್ರತೀಕ ಎಂಬಂತೆ ಸ್ಥಳೀಯ ಜನರ ನಂಬಿಕೆಗೆ ಪಾತ್ರವಾದಂತಹ ಹಬ್ಬ ಹರಿದಿನಗಳಲ್ಲಿ ಪೂಜಾ ಕೈಂಕರ್ಯಗಳನ್ನು ನೆರವೇರಿಸುವಂತಹ ಪರಿಪಾಠ ಸಾಮಾಜಿಕ ಸಂಕೋಲೆಯನ್ನು ಸಾರುವಂತಹದ್ದೇ ಈ ದೇವಾಲಯ ಎಂಬ ಆಶಯ ನನ್ನದಾಗಿದೆ.

## ಆಕರ ಗ್ರಂಥಗಳು


೧. ಸೂರ್ಯನಾಥ್ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು, ೧೯೮೬.

೨. ಹಾ.ಮಾ. ನಾಯಕ, ಎಪಿಗ್ರಾಫಿಯ ಕರ್ನಾಟಿಕ, ಸಂ. ಸಂಪುಟ IV, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫.

೩. ಮಲೆಯೂರು ಗುರುಸ್ವಾಮಿ, ಹೊನ್ನುಹೊಳೆ, ಸ್ಮರಣ ಸಂಪದ ೨೦೦೭, ಚಾಮರಾಜನಗರ ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.

೪. ರಾಜಶೇಖರ್ ಸಿಂದಿಗಿ, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ, ೧೯೯೫.

೫. ಕೂ.ಸ. ಅಪರ್ಣ, ದೇವಾಲಯದ ವಾಸ್ತು ಪರಿಚಯ, ಹಂಪಿ, ೧೯೯೯.

೬ ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

೭. ಕನ್ನಡ ವಿಷಯ ವಿಶ್ವಕೋಶ ಪರಿಷ್ಕೃತ ಸಂ. ೧, ೨. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೭.

೮. ಬಾ.ರಾ. ಗೋಪಾಲ, ಕರ್ನಾಟಕದ ಕಲೆಗಳು ವಾಸ್ತು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩.

೯. ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ವರದಿಯನ್ನಾಧರಿಸಿ ಬರೆಯಲಾಗಿದೆ.

೧೦. ೧–೧೨ವರೆಗಿನ ಫೋಟೋವನ್ನು ಗಮನಿಸುವುದು.



# ಹೊನ್ನೂರು ಗ್ರಾಮದ ಭಗ್ನಗೊಂಡ ವೀರಭದ್ರ ದೇವಾಲಯ ಒಂದು ವಿಶ್ಲೇಷಣೆ

ಅನಿಲ್.ಎಲ್.*

**ಅ**ರಿಕುತಾರ ಎಂಬ ಹೆಗ್ಗಳಿಕೆಗೆ ಹೆಸರಾದ ಚಾಮರಾಜ ನಗರ ಜಿಲ್ಲೆಯು ಐತಿಹಾಸಿಕವಾಗಿ ಹೆಚ್ಚಿನ ಮಹತ್ವದಿಂದ ಕೂಡಿದೆ. ಈ ಜಿಲ್ಲೆಯ ತಾಲೂಕುಗಳಲ್ಲೇ ಯಳಂದೂರು ಅತ್ಯಂತ ಚಿಕ್ಕ ತಾಲೂಕಾಗಿದೆ. ಇದು ಚಾಮರಾಜನಗರ ಜಿಲ್ಲೆಯ ಪೂರ್ವ ಭಾಗಕ್ಕಿದ್ದು, ಭೂಪಟದಲ್ಲಿ ಇದು ೧೨° ೧೩' ಉತ್ತರ ಅಕ್ಷಾಂಶದಿಂದ ೭೭° ೫' ಪೂರ್ವ ರೇಖಾಂಶದ ವರೆಗೆ ಹಬ್ಬಿದೆ. ಇಲ್ಲಿ ಸುವರ್ಣಾವತಿ ನದಿಯು ಹರಿಯುತ್ತಿದ್ದು ಫಲವತ್ತತೆಯಿಂದ ಕೂಡಿದೆ. ಈ ದೃಷ್ಟಿಯಿಂದ ಕರ್ನಾಟಕವನ್ನು ಆಳ್ವಿಕೆ ಮಾಡಿದ ಪ್ರಾಚೀನ ರಾಜಮನೆತನಗಳಾದ ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಹಾಗೂ ಪಾಳೆಯಗಾರರಾದ ಹದಿನಾಡ ಪ್ರಭುಗಳು ಮತ್ತು ಉಮ್ಮತ್ತೂರಿನ ಪ್ರಭುಗಳು ಆಳ್ವಿಕೆ ಮಾಡಿ ಈ ರಾಜಮನೆತನಗಳು ಸಾಂಸ್ಕೃತಿಕವಾಗಿ ಅಂದರೆ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕ ವಾಗಿ ಮತ್ತು ಶೈಕ್ಷಣಿಕವಾಗಿ ಹೆಚ್ಚಿನ ಪ್ರೋತ್ಸಾಹ ನೀಡಿದ್ದು, ತಮ್ಮ ಆಳ್ವಿಕೆಯ ಕುರುಹುಗಳಾಗಿ ದೇವಾಲಯಗಳನ್ನು ನಿರ್ಮಿಸಿರುವುದರ ಜೊತೆಗೆ ಶಾಸನಗಳನ್ನು ಹಾಕಿಸಿರುವುದನ್ನು ಕಾಣಬಹುದು. ಅಂತಹ ಪ್ರದೇಶಗಳಲ್ಲಿ ಹೊನ್ನೂರು ಗ್ರಾಮವು ಸಹ ಒಂದಾಗಿದೆ. ಹೊನ್ನೂರನ್ನು **'ತುಳುವಲ ಮಹಾದೇವಿ ಚತುರ್ವೇದಿ ಮಂಗಲ'** ಪೊನ್ನೂರು ಎಂಬುದಾಗಿ ಶಾಸನ ದಲ್ಲಿ ಉಲ್ಲೇಖಿಸಿದೆ. ಈ ಗ್ರಾಮವು ಯಳಂದೂರು ತಾಲ್ಲೂಕಿನ ಪಶ್ಚಿಮದ ಭಾಗದಲ್ಲಿದೆ. ಈ ಗ್ರಾಮದಲ್ಲಿ 'ವೀರಭದ್ರೇಶ್ವರ' ದೇವಾಲಯವಿದ್ದು ಪ್ರಸ್ತುತ ಸಂಪೂರ್ಣವಾಗಿ ಭಗ್ನಗೊಂಡಿದ್ದು ಇದರ ಸಂಪೂರ್ಣ ಮಾಹಿತಿಯನ್ನು ತಿಳಿಸುವುದು ಈ ಲೇಖನದ ಉದ್ದೇಶವಾಗಿದೆ.

ವೀರಭದ್ರೇಶ್ವರ ದೇವಾಲಯವು ಹೊನ್ನೂರು ಗ್ರಾಮದ ಉತ್ತರ ದಿಕ್ಕಿಗೆ ಗದ್ದೆ ಬಯಲಿನಲ್ಲಿದ್ದು ಈ ದೇವಾಲಯವು ಉತ್ತರಾಭಿಮುಖವಾಗಿದೆ. ಇದರ ವಾಸ್ತುಲಕ್ಷಣ ಸರಳವಾಗಿದ್ದು ದ್ವಿಕೂಟ ಮಾದರಿಯಲ್ಲಿದೆ. ಗರ್ಭಗುಡಿ, ಸುಖನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ಈ ದೇವಾಲಯವು ಯಾರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದು ನಿಖರವಾಗಿ ತಿಳಿಯುವುದಿಲ್ಲ. ಆದರೆ ಇದರ ಕಲೆ ಮತ್ತು ವಾಸ್ತುಶಿಲ್ಪದ ಲಕ್ಷಣಗಳ ಆಧಾರದಿಂದ ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದು. ದೇವಾಲಯದ ನಿರ್ಮಾಣ ಕಾರ್ಯಕ್ಕೆ ಇಟ್ಟಿಗೆ, ಗಾರೆ ಮತ್ತು ಗ್ರಾನೈಟ್ ಶಿಲೆಯನ್ನು ಬಳಸಿ ನಿರ್ಮಿಸಲಾಗಿದ್ದು ಈ ದೇವಾಲಯ ಮುಖಮಂಟಪಕ್ಕೆ ಹೊಂದಿಕೊಂಡಂತೆ ಪುಷ್ಕರಣಿ ಇದೆ.

**ಗರ್ಭಗೃಹ :** ಗರ್ಭಗೃಹವು ಸುಮಾರು ೮ x ೮ ಅಡಿ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಭುವನೇಶ್ವರಿಯಿದ್ದು ಸರಳವಾಗಿದೆ. ಗರ್ಭಗೃಹದ ಒಳಭಿತ್ತಿಯಲ್ಲಿ ಕಮಾನಿನಾಕಾರದಲ್ಲಿ ಸುತ್ತಲೂ ಕೂಡುಗಳಿವೆ. ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು ೧$^{೧}/_{೨}$ ಅಡಿ ಎತ್ತರದ ಪದ್ಮ ಪೀಠದ ಮೇಲೆ ತ್ರಿಭಂಗಿಯಲ್ಲಿ ನಿಂತಿರುವ ವೀರಭದ್ರನ ಶಿಲ್ಪವಿದೆ. ಈ ಶಿಲ್ಪವು ಸುಮಾರು ೩ ಅಡಿ ಎತ್ತರವಿದ್ದು ಸುಂದರವಾಗಿದೆ. ಈ ಶಿಲ್ಪದ ಹಿಂಭಾಗ ದಲ್ಲಿ ಪ್ರಭಾವಳಿಯಿದ್ದು ಪ್ರಭಾವಳಿಯ ಇಕ್ಕೆಲಗಳಲ್ಲಿ ಹೂಬಳ್ಳಿಯ ಕೆತ್ತನೆ ಇದೆ. ಹಾಗೂ ಪ್ರಭಾವಳಿಯ ಮೇಲ್ಭಾಗ ದಲ್ಲಿ ಕೀರ್ತಿಮುಖವಿದೆ. ವೀರಭದ್ರನು ತ್ರಿಭಂಗಿಯಲ್ಲಿ ನಿಂತಿದ್ದು ನಾಲ್ಕು ಭುಜಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಪಾಶ, ಖಡ್ಗ ಮತ್ತು ಬಾಣವನ್ನು ಹಿಡಿದು ಎಡಗೈಯಲ್ಲಿ ಬಿಲ್ಲು ಮತ್ತು ಗುರಾಣಿಯನ್ನು ಹಿಡಿದಿದ್ದಾನೆ. ಕಿರೀಟ ಮುಕುಟ ದಾರಿಯಾದ ವೀರಭದ್ರನು ಮೈಮೇಲೆ ವಸ್ತ್ರಭರಣಗಳನ್ನು ಧರಿಸಿದ್ದಾನೆ. ಹಾಗೂ ಕಾಲಿಗೆ ಕಾಲು ಕಡಗಗಳು ಮತ್ತು ಪಾದಗಳಿಗೆ ಪಾದರಕ್ಷೆಗಳನ್ನು ಧರಿಸಿ ನಿಂತಿದ್ದಾನೆ. ವೀರಭದ್ರನ ಬಲಭಾಗದ ಇಕ್ಕೆಲಗಳಲ್ಲಿ ದಕ್ಷಬ್ರಹ್ಮನು ತನ್ನ ಎರಡು ಕೈಗಳನ್ನು ಜೋಡಿಸಿ ಕೈ ಮುಗಿಯುತ್ತಿರುವ ರೀತಿಯಲ್ಲಿ ಉಬ್ಬು ಶಿಲ್ಪವಿದೆ. ವೀರಭದ್ರನ ಎಡಭಾಗದಲ್ಲಿ ಗುರಾಣಿಯ ತಳಭಾಗದಲ್ಲಿ ಮನುಷ್ಯನ ರುಂಡವಿದೆ.

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು.

ಗರ್ಭಗೃಹದ ದ್ವಾರವು ಸರಳವಾಗಿದ್ದು ಯಾವುದೇ ರೀತಿಯ ಲಾಲಾಟಬಿಂಬದಲ್ಲಿ ಯಾವುದೇ ಉಬ್ಬುಶಿಲ್ಪಗಳು ಕಾಣಬರುವುದಿಲ್ಲ. ಗರ್ಭಗೃಹದ ದ್ವಾರದ ಎರಡು ಬದಿಯಲ್ಲೂ ದ್ವಾರಪಾಲಕರು ಗದೆಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಗಾರೆಯಿಂದ ಮಾಡಲ್ಪಟ್ಟಿರುವ ಎರಡು ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಈ ದ್ವಾರಪಾಲಕರು ನಾಲ್ಕು ಭುಜಗಳನ್ನು ಹೊಂದಿದ್ದು ಗಧೆ, ತ್ರಿಶೂಲ, ಢಮರುಗ ಮತ್ತು ಖಡ್ಗವನ್ನು ಹಿಡಿದು ನಿಂತಿದ್ದಾರೆ.

**ಸುಖನಾಸಿ:** ಸುಖನಾಸಿಯು ಕೂಡ ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಸರಳವಾಗಿದೆ. ಇಲ್ಲಿ ಗಣೇಶನ ಶಿಲ್ಪವಿದೆ. ಸುಖನಾಸಿಯ ದ್ವಾರವು ಕೂಡ ಸರಳವಾಗಿದ್ದು ದ್ವಾರಬಂಧವು ಚೌಕಕಾರವಾಗಿದೆ ಸುಖನಾಸಿಯ ಎರಡು ಕಡೆ ಕೂಡುಗಳಿವೆ.

**ನವರಂಗ:** ನವರಂಗವು ಸುಮಾರು ೨೫ x ೧೦ ಅಡಿ ಉದ್ದ ಮತ್ತು ಅಗಲವಾಗಿದ್ದು ಆಯತಾಕಾರವಾಗಿದೆ. ನವರಂಗದಲ್ಲಿ ಒಟ್ಟು ೪ ಕಂಬಗಳಿದ್ದು ಆ ನಾಲ್ಕು ಕಂಬಗಳು ಸಾಲಾಗಿವೆ. ಈ ಕಂಬಗಳು ಪೀಠ, ಪಾದ, ಬೋಧಿಗೆಯನ್ನು ಹೊಂದಿದ್ದು ಸರಳವಾಗಿದೆ. ನವರಂಗದ ಎರಡು ಬದಿಯಲ್ಲಿ ಪಶ್ಚಿಮಾಭಿಮುಖವಾಗಿ ಮತ್ತು ಪೂರ್ವಾಭಿಮುಖವಾಗಿ ಚಿಕ್ಕ ಚಿಕ್ಕ ಗುಡಿಗಳಿವೆ. ಯಾವುದೇ ಮೂರ್ತಿಶಿಲ್ಪ ಅಥವಾ ಬಿಡಿಶಿಲ್ಪಗಳೂ ಇಲ್ಲದೇ ನಶಿಸಿವೆ. ಗರ್ಭಗೃಹದ ನೇರವಾಗಿ ಇರುವ ದ್ವಾರದ ನವರಂಗದ ಮಧ್ಯಭಾಗದಲ್ಲಿ ಭುವನೇಶ್ವರಿ ಇದ್ದು ಅಷ್ಟಕೋನಗಳನ್ನು ಹೊಂದಿದ್ದು ಸರಳವಾಗಿದೆ. ಭುವನೇಶ್ವರಿಯ ಮಧ್ಯಭಾಗದಲ್ಲಿ ಪದ್ಮದ ಚಿತ್ರವನ್ನು ಬಿಡಿಸಲಾಗಿದೆ. ನವರಂಗದಲ್ಲಿ ಒಟ್ಟು ಮೂರು ದ್ವಾರಗಳಿದ್ದು ಈ ಮೂರು ದ್ವಾರಗಳು ಸರಳವಾಗಿವೆ.

**ಮುಖಮಂಟಪ:** ಮುಖಮಂಟಪವು ಸಂಪೂರ್ಣವಾಗಿ ಭಗ್ನಗೊಂಡಿದ್ದು ಮುಖಮಂಟಪದ ಸ್ಥಳವು ಖಾಲಿಯಿದೆ. ಇಲ್ಲಿ ಕೇವಲ ಗಾರೆ, ಇಟ್ಟಿಗೆ ಅವಶೇಷಗಳು ಹಾಗೇ ಬಿದ್ದಿವೆ. ದೇವಾಲಯದ ಮುಂಭಾಗದಲ್ಲಿ ಮುಖಮಂಟಪದ ಸೋಪಾನಕ್ಕೆ ಅಂಟಿಕೊಂಡಂತೆ ಪುಷ್ಕರಣಿಯಿದೆ. ಈ ಪುಷ್ಕರಣಿಯು ಸಂಪೂರ್ಣವಾಗಿ ಭಗ್ನಗೊಂಡ ವ್ಯವಸ್ಥೆಯಲ್ಲಿದೆ ಪುಷ್ಕರಣಿಯು ದೇವಾಲಯಕ್ಕೆ ಹೋಗುವ ಹಂತಗಳಲ್ಲಿ ಮುಖಮಂಟಪಕ್ಕೆ ಹೊಂದಿಕೊಂಡಂತೆ ಎಡ ಮತ್ತು ಬಲ ಭಾಗದಲ್ಲಿ ಆನೆಯ ಚಿತ್ರವಿರುವ ಶಿಲ್ಪಗಳಿವೆ ಇವು ಸಹ ಭಗ್ನಗೊಂಡಿದ್ದು ಅವಸಾನದ ಹಂಚಿನಲ್ಲಿವೆ.

**ದೇವಾಲಯದ ಹೊರ ವಿನ್ಯಾಸ:** ದೇವಾಲಯದ ಹೊರ ಭಾಗವು ಕೂಡ ಸಂಪೂರ್ಣವಾಗಿ ಭಗ್ನಗೊಂಡಿದ್ದು ಇಲ್ಲಿ ಅಧಿಷ್ಠಾನ, ಭಿತ್ತಿ, ಕಪೋತ ಹಾಗೂ ಶಿಖರವನ್ನೊಳಗೊಂಡಿದೆ.

**ಅಧಿಷ್ಠಾನ:** ಅಧಿಷ್ಠಾನವು ಸರಳವಾಗಿದ್ದು ಉಪಾನ, ಜಗತಿ, ಪದ್ಮ, ಕಪೋತವನ್ನು ಹೊಂದಿದೆ. ಇಲ್ಲಿ ಯಾವುದೇ ತರಹದ ಕೆತ್ತನಗಳು ಇಲ್ಲದೇ ಸಾಧಾರಣ ಶೈಲಿಯಲ್ಲಿದೆ.

**ಭಿತ್ತಿ:** ಭಿತ್ತಿಯು ಸರಳವಾಗಿದ್ದು ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಲ್ಪಟ್ಟಿದೆ. ಇಲ್ಲಿ ಯಾವುದೇ ರೀತಿಯ ಅರೆಕಂಬಗಳಾಗಲಿ, ಭಿತ್ತಿ ಶಿಲ್ಪಗಳಾಗಲಿ, ದೇವ ಕೋಷ್ಠಕ ಗಳಾಗಲಿ ಇಲ್ಲದೇ ಸಾಧಾರಣವಾಗಿದೆ.

**ಕಪೋತ:** ಕಪೋತವೂ ಕೂಡ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟಿದ್ದು ಭಿತ್ತಿಯಿಂದ ಸುಮಾರು ೧ ಅಡಿ ಮುನ್‌ಚಾಚಿದ್ದು ದೇವಾಲಯದ ಸುತ್ತಲೂ ಇದೆ.

**ಶಿಖರ:** ಶಿಖರವು ಕೂಡ ಗಾರೆ ಮತ್ತು ಇಟ್ಟಿಗೆಯಿಂದಲೇ ನಿರ್ಮಿಸಲಾಗಿದ್ದು ದ್ರಾವಿಡ ಶೈಲಿಯನ್ನು ಹೋಲುತ್ತದೆ. ಒಟ್ಟು ನಾಲ್ಕು ಹಂತಗಳಿಂದ ಕೂಡಿದ್ದು ಈ ಭಾಗಗಳಲ್ಲಿ ಚಿಕ್ಕ ಚಿಕ್ಕದಾಗಿ ಕಂಬಗಳನ್ನು ಮತ್ತು ದೇವತಾ ಮೂರ್ತಿಶಿಲ್ಪಗಳನ್ನು ಕೂರಿಸಲಾಗಿದೆ. ಕಪೋತದ ಮೇಲ್ಭಾಗ ಮತ್ತು ಶಿಖರದ ತಳಭಾಗದಲ್ಲಿ ನಾಲ್ಕು ಮೂಲೆಯಲ್ಲಿ ಒಂದು ತಲೆ ಎರಡು ದೇಹವಿರುವ ನಂದಿಯ ಗಾರೆ ಶಿಲ್ಪಗಳನ್ನು ಕೆತ್ತಲಾಗಿದೆ. ಶಿಖರದ ಮೇಲ್ಭಾಗದಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ.

ಈ ದೇವಾಲಯದ ಸ್ತೂಪಿಯು ವೃತ್ತಾಕಾರವಾಗಿದ್ದು ಗಂಟೆಯಾಕಾರದಲ್ಲಿದೆ. ಮೇಲ್ಭಾಗದಲ್ಲಿ ಕಳಸವಿಲ್ಲ ಬಲಭಾಗ ಮತ್ತು ಎಡಭಾಗದ ಗರ್ಭಗೃಹಗಳ ಮೇಲ್ಭಾಗದಲ್ಲಿ ಶಿಖರವಿದ್ದು ಅವು ಕೂಡ ಸರಳವಾಗಿದ್ದು ನಾಲ್ಕು ಹಂತಗಳನ್ನು ಹೊಂದಿವೆ. ಈ ಶಿಖರಗಳಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ ಈ ಶಿಖರಗಳಲ್ಲಿ ಕಳಸಗಳು ಇಲ್ಲ. ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದ್ದು ಈ ಗೋಡೆಯು ಸಂಪೂರ್ಣವಾಗಿ ಭಗ್ನಗೊಂಡಿದೆ. ಒಟ್ಟಾರೆ ಯಾಗಿ ಈ ಮೇಲೆ ತಿಳಿಸಿದ ದೇವಾಲಯವು ಶೈವಧರ್ಮವನ್ನು ಹೊರ ಜಗತ್ತಿಗೆ ತಿಳಿಸುವ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳ ಪರಂಪರೆಯ ಕಟ್ಟಡವಾಗಿ ಕಲಾ ವಾಸ್ತುಶಿಲ್ಪ ಕ್ಷೇತ್ರವನ್ನು ಉತ್ತೇಜಿಸುವ ಸಲುವಾಗಿ ನನ್ನ ಸಂಶೋಧನಾ ಕ್ಷೇತ್ರದ ಫಲವಾಗಿ ಕಂಡು ಬಂದಿರುವುದೇ ಈ ವೀರಭದ್ರ ದೇವಾಲಯ.

ಹೀಗೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಕೀರ್ಣ ದಡಿಯಲ್ಲಿ ಬೆಳೆದು ಬಂದ ಈ ದೇವಾಲಯವು ಮುಜುರಾಯಿ ಇಲಾಖೆ ಮತ್ತು ಕರ್ನಾಟಕ ಪುರಾತತ್ವ ಇಲಾಖೆ ಹಾಗೂ ಜನಸಾಮಾನ್ಯರ ನಿರ್ಲಕ್ಷ್ಯಕ್ಕೆ ಒಳಗಾಗಿರುತ್ತದೆ. ಇಂತಹ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪ್ರತೀಕದಂತಿರುವ ದೇವಾಲಯದ ಪುನರ್ರಚನೆ ಪ್ರಸ್ತುತದ ದಿನಗಳಲ್ಲಿ


ವೀರಭದ್ರ ದೇವಾಲಯದ ಮುನ್ನೋಟ


ವೀರಭದ್ರ ದೇವಾಲಯದ ಪಾರ್ಶ್ವನೋಟ


ವೀರಭದ್ರ ದೇವಾಲಯದ ನವರಂಗ


ವೀರಭದ್ರ ದೇವಾಲಯದ ನವರಂಗದ ಭುವನೇಶ್ವರಿ


ವೀರಭದ್ರ ದೇವಾಲಯದ ಗರ್ಭಗುಡಿ


ವೀರಭದ್ರ ದೇವಾಲಯದ ಗರ್ಭಗುಡಿಯಲ್ಲಿರುವ ವೀರಭದ್ರ ಶಿಲ್ಪ



ವೀರಭದ್ರ ದೇವಾಲಯದ ದಕ್ಷಿಣ ಕಡೆಯ ಶಿಖರದ ಭಾಗ



ವೀರಭದ್ರ ದೇವಾಲಯದ ಪ್ರಾಕಾರದ ಗೋಡೆ

ಜೀರ್ಣೋದ್ಧಾರಗೊಳ್ಳುವ ತವಕದೊಂದಿಗೆ ಪುನರ್ ನಿರ್ಮಾಣ ಕಾರ್ಯ ಕೈಗೊಳ್ಳುವುದೇ ಎನ್ನುವ ಪ್ರಶ್ನೆಗೆ ಉತ್ತರ ಸಿಗುವುದೇ? ಇಂತಹ ವಿವಿಧ ಸಂಸ್ಕೃತಿಯ ಪ್ರತಿಬಿಂಬಗಳಾದ ದೇವಾಲಯಗಳು ವಿನಾಶದ ಅಂಚಿನಲ್ಲಿದ್ದು ಚರಿತ್ರೆಯ ಪುಟಗಳಿಂದ ಕಣ್ಮರೆಯಾಗುವ ಮುನ್ನ ಅವುಗಳನ್ನು ಸಂರಕ್ಷಿಸುವುದು ಮತ್ತು ದಾಖಲೀಕರಣ ಮಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯ ಹಾಗೂ ಈ ಲೇಖನದ ಆಶಯವು ಆಗಿದೆ.

### ಅಡಿಟಿಪ್ಪಣಿ


೧. ಎಪಿಗ್ರಾಫಿಯ ಕರ್ನಾಟಿಕ ಸಂಪುಟ-೪, ೧೯೭೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ಮಲಿಯೂರು ಗುರುಸ್ವಾಮಿ-ಹೊನ್ನುಹೊಳೆ ಸ್ಮರಣ (ಸಂ) ೨೦೦೭, ಚಾಮರಾಜನಗರ ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.

೩. ವೆಂಕೋಬರಾವ್, ಬಿ., ಮೈಸೂರು ದೇಶದ ವಾಸ್ತುಶಿಲ್ಪ, ಮೈಸೂರು ೧೯೫೯.

೪. ಕೂ.ಸ. ಅರ್ಪಣ, ದೇವಾಲಯದ ವಾಸ್ತು ಪರಿಚಯ, ೧೯೯೯, ಹಂಪಿ.

೫. ರಾಜಶೇಖರ್.ಎಸ್., ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ೧೯೮೫, ಧಾರವಾಡ.

೬ ಕನ್ನಡ ವಿಷಯ ವಿಶ್ವಕೋಶ ಪರಿಷ್ಕೃತ ಸಂ. ೧, ೨ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೨೦೦೭.

೭. ಬಾ.ರಾ. ಗೋಪಾಲ: ಕರ್ನಾಟಕದ ಕಲೆಗಳು ವಾಸ್ತು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೩.

೮. C.Hayavadanarao: Mysore Gazetteer,vol. 5, Bengalur, 1930.

೯. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ.

೧೦. ೧ರಿಂದ ೮ರವರೆಗಿನ ಫೋಟೋದಲ್ಲಿನ ಚಿತ್ರವನ್ನು ಗಮನಿಸುವುದು.



# ಆನೆಕೆರೆ ಗ್ರಾಮದ ಭಗ್ನಗೊಂಡ ಅಮೃತೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು: ಒಂದು ಅವಲೋಕನ

**ಡಾ. ಸಿ.ಇ. ಲೋಕೇಶ್***

**ಭಾ**ರತ ದೇಶವು ಕ್ರಿ.ಪೂ. ಶತಮಾನಗಳಿಂದಲೂ ಸಾಂಸ್ಕೃತಿಕವಾಗಿ ಶ್ರೀಮಂತಿಕೆಯಿಂದ ಕೂಡಿದ ನಾಡಾಗಿದ್ದು ಭವ್ಯ ಪರಂಪರೆಯ ದ್ಯೋತಕಗಳನ್ನೂ ತನ್ನೊಡಲೊಳಗೆ ಇಟ್ಟುಕೊಂಡು ತನ್ನ ಪರಂಪರೆಯ ಭವ್ಯತೆಯನ್ನು ತಿಳಿಯಲು ಪ್ರಯತ್ನಿಸುವ ಕುತೂಹಲ ಆಸಕ್ತರಿಗೆ ಸಾಕಷ್ಟು ಆಕರಗಳನ್ನು ಒದಗಿಸುತ್ತಿದೆ. ನಮ್ಮ ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಲಭ್ಯವಿರುವ ಪುರಾತತ್ವ ಆಕರಗಳು ಹಾಗು ಸಾಹಿತ್ಯಾಕರಗಳು ಕೂಡ ನಮಗೆ ಸಹಕಾರಿಯಾಗಿವೆ. ದೇಶದ ಉದ್ದಗಲಕ್ಕೂ ನಮ್ಮ ಸಾಂಸ್ಕೃತಿಕ ಪರಂಪರೆಯ ದ್ಯೋತಕಗಳಾದ ಸ್ಮಾರಕಗಳ ಅಭ್ಯಾಸವನ್ನು ಸ್ವಾತಂತ್ರ್ಯೋತ್ತರ ಹಾಗು ಸ್ವಾತಂತ್ರ್ಯ ನಂತರದ ಕಾಲಗಳಲ್ಲೂ ಸಾಕಷ್ಟು ಸಂಶೋಧನಾತ್ಮಕ ಕೆಲಸಗಳು ನಡೆಯುತ್ತಿವೆ. ಆದರೆ ಒಬ್ಬ ಸಂಶೋಧನಾಕಾರರಿಗೆ ಇರುವ ಒಂದು ಬೃಹತ್ ಸಮಸ್ಯೆ ಎಂದರೆ ಲಭ್ಯವಿರುವ ಆಕರಗಳನ್ನು ಕರಾರುವಕ್ಕಾಗಿ ಅಧ್ಯಯನ ಹಾಗು ಸಂರಕ್ಷಣೆಯೇ ದೊಡ್ಡ ತೊಡಕಾಗಿದೆ. ಇಂತಹ ಸಂರಕ್ಷಣಾತ್ಮಕ ಕೆಲಸಕ್ಕಾಗಿ ಸರ್ಕಾರ ಹಾಗು ಸರ್ಕಾರೇತರ ಸಂಸ್ಥೆಗಳ ಕಾರ್ಯ ತುಂಬಾ ಸೂಕ್ತರ್ಹವಾದುದು, ಆದರೂ ಸಾಮಾನ್ಯನಿಗೆ ನಮ್ಮ ಪರಂಪರೆಯ ಇತಿಹಾಸದ ಬಗೆಗೆ ಅರಿವಿರಲಿಲ್ಲವೆಂದರೆ ಏನೆಲ್ಲ ಅನಾಹುತಗಳಾಗುತ್ತವೆ ಎಂಬುದನ್ನು ತಿಳಿಸುವುದೇ ಈ ನನ್ನ ಸಂಪ್ರಬಂಧದ ಉದ್ದೇಶ.

ಮನುಷ್ಯ ತನ್ನ ಸ್ವಾರ್ಥ ಸಾಧನೆಗಾಗಿ ಇಂದಿನ ಆಧುನಕ ಯುಗದಲ್ಲಿ ತನ್ನ ವೈಯಕ್ತಿಕ ದಾಹಕ್ಕಾಗಿ ತನ್ನ ಪೂರ್ವಿಕರು ಸಮಾಜಕ್ಕೆ ಮಾದರಿಯಾಗಲು ಪಾರಮಾರ್ಥಿಕ ಹಾಗು ನೈತಿಕ ಶಿಕ್ಷಣವನ್ನು ಭೋದಿಸುವುದಕ್ಕಾಗಿ ನಿರ್ಮಿಸಿದ ದೇವಾಲಯಗಳ ಇಂದಿನ ಸ್ಥಿತಿಗಳನ್ನು ತಿಳಿಸಲು ಪ್ರಯತ್ನಿಸುತ್ತೇನೆ. ದಕ್ಷಿಣ ಭಾರತದ ಚರಿತ್ರೆಯಲ್ಲಿ ಅನೇಕ ರಾಜಮನೆತನಗಳು ಅನೇಕ ಶತಮಾನಗಳಿಂದಲೂ ಆಳ್ವಿಕೆ ನಡೆಸಿ ತಮ್ಮ ಚರಿತ್ರೆಯ ಹೆಜ್ಜೆ ಗುರುತುಗಳನ್ನು ಅಚ್ಚಳಿಯದ ಹಾಗೆ ಇತಿಹಾಸ ಪುಟಗಳಲ್ಲಿ ಸೇರಿಸಿವೆ. ಅದರಲ್ಲೂ ಕರ್ನಾಟಕ ಚರಿತ್ರೆಗೆ ಸಂಬಂಧಪಟ್ಟಂತೆ ಕ್ರಿ.ಶ. ೧೦ ಮತ್ತು ೧೨ನೇ ಶತಮಾನ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಪ್ರವರ್ಧಮಾನ ಯುಗ ಎಂದರೆ ತಪ್ಪಾಗಲಿಕ್ಕಿಲ್ಲ. ಅಂದರೆ ಹೊಯ್ಸಳರು ಕನ್ನಡನಾಡಿನ ಅಧಿಕಾರದ ಚುಕ್ಕಾಣಿ ಹಿಡಿದ ಮೇಲಂತೂ ಸಾಹಿತ್ಯ, ಕಲೆ, ವಾಸ್ತುಶಿಲ್ಪ ಹಾಗು ಧಾರ್ಮಿಕ ಕ್ಷೇತ್ರಗಳು ಅವಿಚ್ಛಿನ್ನವಾದ ಬದಲಾವಣೆಗಳಿಗೊಳಪಟ್ಟ ವಿಭಿನ್ನ ಮುಖಗಳನ್ನು ನಾವು ಕಾಣಬಹುದುದಾಗಿದೆ.

ಹೊಯ್ಸಳರು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ವಿಶಿಷ್ಟವಾದ ಪ್ರಯೋಗಗಳನ್ನು ಅಂದಿನ ಸ್ಥಪತಿಗಳು ಮಾಡಿದರು. ಇದರ ಫಲವಾಗಿ ಅವರುಗಳು ಶೈವ, ವೈಷ್ಣವ ಮತ್ತು ಜೈನ ಪಂಥಕ್ಕೆ ಸೇರಿದ ವಿವಿದ ಸ್ಮಾರಕಗಳನ್ನು ದೃಶ್ಯ ಮಾಧ್ಯಮದ ಮೂಲಕ ತೋರಿಸಲು ಪ್ರಯತ್ನಿಸಿದರು. ಇದೇ ಉದ್ದೇಶದಿಂದ ನಿರ್ಮಾಣಗೊಂಡ ಆನೆಕೆರೆಯ ಅವಳಿ ದೇವಾಲಯಗಳ ಸ್ಥಿತಿ. ಈ ಎರಡು ದೇವಾಲಯಗಳು ಆನೆಕೆರೆ ಗ್ರಾಮದ ಪೂರ್ವಭಾಗದಲ್ಲಿರುವ ಕೆರೆಯ ಏರಿಯ ಹಿಂಭಾಗದಲ್ಲಿ ಇವೆ. ಪ್ರಸ್ತುತ ಈಗ ಇವು ಯಾವುದೇ ಸ್ಪಷ್ಟವಾದ ಮಾಹಿತಿಯನ್ನು ನೀಡದಂತಹ ಸ್ಥಿತಿಯಲ್ಲಿವೆ. ಈ ಗ್ರಾಮದ ಜನರು ಈ ದೇವಾಲಯಗಳನ್ನು ಸಂಪೂರ್ಣವಾಗಿ ಹಾಳುಮಾಡಲು ಹೊರಟಿದ್ದಾರೆ. ಏಕೆಂದರೆ ಕೆರೆಯ ಹಿಂದೆ ತೆಂಗಿನ ತೋಟವನ್ನು ಮಾಡಲಿಕ್ಕಾಗಿ ಈ ಜಾಗವನ್ನು ಆಕ್ರಮಿಸಿಕೊಂಡಿರುವುದೇ, ಈ ದೇವಾಲಯದ ಶಿಥಿಲಾವಸ್ಥೆಗೆ ಕಾರಣವಾಗಿದೆ. ಇವುಗಳನ್ನು ಕೆರೆಯ ಕೋಡಿಯ ಪಕ್ಕದ ದಕ್ಷಿಣ ಭಾಗದಲ್ಲಿ ನಿರ್ಮಾಣ ಮಾಡಲಾಗಿದ್ದು ದೇವಾಲಯಗಳು ಸಂಪೂರ್ಣವಾಗಿ ಬಿದ್ದು ಹೋಗಿವೆ ಅದಕ್ಕೆ ಸಂಬಂಧಿಸಿದಂತಹ ಅವಶೇಷಗಳು ದೇವಾಲಯದ ಸ್ಥಳದಲ್ಲಿಯೇ ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ಈ ದೇವಾಲಯಗಳನ್ನು ಬಳಪದ ಕಲ್ಲನ್ನು ಉಪಯೋಗಿಸಿ ಹೊಯ್ಸಳರ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿತ್ತು. ಆದರೆ ಆ ದೇವಾಲಯಗಳ ಯಾವುದೇ ಭಾಗ ವಾಸ್ತವಸ್ಥಿತಿಯಲ್ಲಿ ಇಲ್ಲ,

* ಸಹಾಯಕ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಹಾರಾಜ ಕಾಲೇಜು, ಮೈಸೂರು.

## ಆನೆಕೆರೆಯ ಭಗ್ನಗೊಂಡ ಅಮೃತೇಶ್ವರ ಮತ್ತು ಸೋಮೇಶ್ವರ ದೇವಾಲಯದ ಛಾಯಾಚಿತ್ರಗಳು











ತಳಹದಿಯ ಮೇಲೆ ನಿರ್ಮಿಸಲಾಗಿದ್ದ ಅಧಿಷ್ಠಾನ ಮಾತ್ರ ಈಗ ಉಳಿದುಬಂದಿದೆ. ಈ ದೇವಾಲಯದ ಸುತ್ತ ತೆಂಗಿನ ಸಸಿಗಳನ್ನು ನೆಟ್ಟಿರುವುದರಿಂದ ಈ ದೇವಾಲಯಕ್ಕೆ ಹಾನಿಯಾದಂತೆ ಕಂಡುಬರುತ್ತದೆ. ಉತ್ತರದಲ್ಲಿ ನಿರ್ಮಿಸಲಾಗಿದ್ದ ಸೋಮೇಶ್ವರ ದೇವಾಲಯದ ಹೊರಗೋಡೆಗಳೆಲ್ಲವು ಬಿದ್ದುಹೋಗಿದ್ದು ನವರಂಗದ ಮುಖಮಂಟಪದ ಮೇಲ್ಛಾವಣಿ ಕುಸಿದು ಬಿದ್ದಿವೆ. ಗರ್ಭಗೃಹದ ಒಳಭಾಗದಲ್ಲಿ ಬಳ್ಳಿ ಗಿಡಗಳು ಬೆಳೆದುಕೊಂಡಿವೆ. ಇದೂ ಸಹ, ಹೊಯ್ಸಳ ಶೈಲಿಯಲ್ಲಿದ್ದು ಬಳಪದ ಕಲ್ಲಿನಲ್ಲಿ ನಿರ್ಮಾಣ ಮಾಡಲಾಗಿದೆ. ಗರ್ಭಗೃಹದ ಬಾಗಿಲಪಟ್ಟಿಕೆಗಳು ಬಳ್ಳಿ ಸುರುಳಿಗಳಿಂದ ಕೂಡಿದ್ದು ಸುಂದರವಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಇಲ್ಲ ಕೆಳಗೆ ಶೈವ ದ್ವಾರಪಾಲಕರು ಇಲ್ಲ. ತೋರಣದ ಭಾಗದಲ್ಲಿ ಕಮಲದ ಮೊಗ್ಗಿನ ಭಾಗ ಹಾಗೆ ಉಳಿದಿದೆ. ಗರ್ಭಗೃಹದಲ್ಲಿ ಪಾಣಿಪೀಠವಿದೆ ಲಿಂಗವಿಲ್ಲ. ಸುಖನಾಸಿ ಸಂಪೂರ್ಣವಾಗಿ ಬಿದ್ದುಹೋಗಿದೆ.

ನವರಂಗದ ಮಧ್ಯದಲ್ಲಿ ನಿಲ್ಲಿಸಲಾಗಿದ್ದ ನಾಲ್ಕು ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಇವು ಚೌಕ, ಬಳೆಗಳ, ಘಂಟೆ, ಘಟಕಾ ಮತ್ತು ಗಾಲಿ ಹೊಯ್ಸಳ ಶೈಲಿಯ ಬೋಧಿಗೆ

ಇದೆ. ಇದರ ಮೇಲ್ಛಾವಣಿ ಸಂಪೂರ್ಣವಾಗಿ ಬಿದ್ದುಹೋಗಿದೆ, ಇದರ ಮೇಲ್ಛಾವಣಿ ಅಂಕಣದಲ್ಲಿ ಬಿಡಿಸಲಾಗಿದ್ದ ಭುವನೇಶ್ವರಿಗಳ ಅವಶೇಷಗಳು ಕೆಳಗುರುಳಿ ಬಿದ್ದಿವೆ. ಮಧ್ಯದ ಭುವನೇಶ್ವರಿಯು ಸ್ವಲ್ಪಮಟ್ಟಿಗೆ ಬೀಳದೆ ನಿಂತಿದೆ. ಇದನ್ನು ಚೌಕ ಅಷ್ಟಮುಖ ವೃತ್ತಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಕಮಲದ ಪುಷ್ಪ ಬಿಡಿಸಲಾಗಿದೆ. ಆದರೆ ಮಧ್ಯದ ಮೊಗ್ಗು ಕಾಣೆಯಾಗಿದೆ. ಅಷ್ಟ ದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರಿದ್ದಾರೆ. ಕಮಲದ ಮೊಗ್ಗುಗಳು, ಕೀರ್ತಿಮುಖ ಬಿಡಿಸಲಾಗಿದೆ. ನವರಂಗದ ಉತ್ತರ ದಕ್ಷಿಣದ ಗೋಡೆ ಬಿದ್ದುಹೋಗಿದೆ. ನವರಂಗದ ದ್ವಾರವು ಸರಳವಾಗಿದೆ, ಇದರಲ್ಲಿಯ ಯಾವುದೇ ಅಲಂಕರಣ ಕಾಣಬರುವುದಿಲ್ಲ. ಆದರೆ ಜಾಲಾಂಧ್ರಗಳಿವೆ, ಲಲಾಟ ಬಿಂಬದಲ್ಲಿ ಯಾವುದೇ ಮೂರ್ತಿ ಇಲ್ಲ. ತೋರಣದ ಭಾಗದಲ್ಲಿ ಸಣ್ಣ ಶಿಖರಗಳ ಸಾಲು ಕಮಲದ ಮೊಗ್ಗುಗಳಿವೆ. ಮಧ್ಯದಲ್ಲಿ ಅರಳಿದ ಕಮಲ ಪುಷ್ಪಗಳಿವೆ.

**ಮುಖಮಂಟಪ:** ಮುಖಮಂಟಪದಲ್ಲಿ ಎರಡು ಹೊಯ್ಸಳ ಶೈಲಿಯ ಕಂಬಗಳಿವೆ. ಇದರ ಮೇಲ್ಛಾವಣಿ ಮಧ್ಯದಲ್ಲಿ ಚೌಕಾಕಾರ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ನಕ್ಷತ್ರಾಕಾರವಾಗಿ ಬಿಡಿಸಲಾಗಿರುವ ಕಮಲದ ಪುಷ್ಪವಿದೆ. ಗರ್ಭಗೃಹದ ಪಾಣಿಪೀಠ ನವರಂಗದಲ್ಲಿ ಬೋರಲಾಗಿ ಬಿದ್ದಿವೆ. ಭುವನೇಶ್ವರಿಯಲ್ಲಿದ್ದ ಕಮಲದ ಪುಷ್ಪಗಳ ಕೆತ್ತನೆ ಕಲ್ಲುಗಳು ನೆಲದಲ್ಲಿ ಬಿದ್ದು ಹೋಗಿವೆ. ಈ ದೇವಾಲಯದ ಅಧಿಷ್ಠಾನ ಶಿಥಿಲವಾಗಿದೆ ಉತ್ತರ ಪಶ್ಚಿಮದ ಭಿತ್ತಿಗಳು ಸಂಪೂರ್ಣವಾಗಿ ಬಿದ್ದು ಹೋಗಿವೆ. ತೋಟದ ಮಾಲಿಕ ದೇವಾಲಯ ಕಾಣದಂತೆ ಗರಿಗಳನ್ನು ಹಾಕಿ ಸಂಪೂರ್ಣವಾಗಿ ಮುಚ್ಚಿದ್ದಾನೆ. ಒಳಭಾಗ ಕಾಣದಂತೆ ದೇವಾಲಯದ ಒಳಭಾಗದಲ್ಲಿದ್ದ ನಾಗರಕಲ್ಲು ಅಡ್ಡಪಟ್ಟಿಕೆ ಭುವನೇಶ್ವರಿಯ ಕಲ್ಲುಗಳು ಇದೇ ಸ್ಥಳದಲ್ಲಿ ಹೊರಭಾಗದಲ್ಲಿ ಬಿದ್ದಿವೆ. ಈಗ ಈ ದೇವಾಲಯಗಳು ಗುರುತಿಸಲಾಗದಷ್ಟು ಹಾಳಾಗಿ ಹೋಗಿವೆ.

ಈ ದೇವಾಲಯಗಳಿಗೆ ಸಂಬಂದಿಸಿದಂತೆ ಆಧಾರಗಳು ಎಲ್ಲಿಯೂ ದೊರೆಯುವುದಿಲ್ಲ. ದೇವಾಲಯದ ವಾಸ್ತುಲಕ್ಷಣಗಳನ್ನು ಮತ್ತು ದೇವಾಲಯದ ಕಂಬಗಳನ್ನು ಸೂಕ್ಷ್ಮವಾಗಿ ನೋಡಿದಾಗ ಇವುಗಳೆರಡು ದೇವಾಲಯಗಳನ್ನು ಏಕಕಾಲದಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ. ಎಂದು ಘಂಟಾಘೋಷವಾಗಿ ಹೇಳಬಹುದು.

**ಅಡಿಟಿಪ್ಪಣಿ**


೧. ಹಾ.ಮಾ. ನಾಯಕ, ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ೨೦೦೫.

೨. ಎಪಿಗ್ರಾಫಿಯ ಕರ್ನಾಟಿಕ ಸಂ. ೧೦, ಪ್ರಸಾರಾಂಗ, ಮೈ.ವಿ.ವಿ., ಮೈಸೂರು.

೩. ಶ್ರೀಕಂಠಶಾಸ್ತ್ರಿ. ಎಸ್., ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ೧೯೬೫.

೪. ಅಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ-ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯.



# ಆನೆಕೆರೆ ಗ್ರಾಮದ ಜನಾರ್ಧನ ದೇವಾಲಯ: ಒಂದು ಅವಲೋಕನ

ಜಿ. ಕರಿಯಪ್ಪ*

ಆನೆಕೆರೆ ಗ್ರಾಮವು ಚನ್ನರಾಯಪಟ್ಟಣದ ಪಶ್ಚಿಮ ದಿಕ್ಕಿಗೆ ಸುಮಾರು ಮೂರು ಮೈಲಿ ದೂರದಲ್ಲಿ ಕಂಡು ಬರುತ್ತದೆ. ಹಿಂದೆ ಈ ಗ್ರಾಮಕ್ಕೆ ಆನೆಗಳಕೆರೆ 'ಕೇಶವಪುರ' ಎಂಬ ನಾಮಾಂಕಿತವಿದ್ದು ಪ್ರಸ್ತುತ ಆನೆಕೆರೆ ಎಂಬ ವಿಷಯವು ಇಲ್ಲಿ ದೊರೆತ ಕ್ರಿ.ಶ. ೧೧೯೧ರ ಶಾಸನದಿಂದ ತಿಳಿದುಬರುತ್ತದೆ. ಈ ದೇವಾಲಯವು ಹೊಯ್ಸಳರ ಕಾಲದ ನಿರ್ಮಾಣವಾಗಿದ್ದು ನಂತರದಲ್ಲಿ ಸಾಮಂತ ರಾಜರ ಆಳ್ವಿಕೆಯ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ ಎಂಬ ವಿಷಯವು ಕ್ರಿ.ಶ. ೧೪-೧೫ನೇ ಶತಮಾನದ ಶಾಸನದಲ್ಲಿ ಉಲ್ಲೇಖಿತವಾಗಿದೆ.

ಕೇಶವ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾದ ದೇವಾಲಯ ವಾಗಿದ್ದು, ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಾಣ ಮಾಡಲಾಗಿರುವಂತಹ ಏಕಕೂಟ ದೇವಾಲಯ ಇದಾಗಿದೆ. ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪ ಹಾಗೂ ಇದರ ಸುತ್ತಲೂ ಪ್ರಾಕಾರವಿದ್ದು ದೇವಾಲಯದ ಮುಂದೆ ಮಹಾದ್ವಾರವಿದೆ.

**ಗರ್ಭಗೃಹ:** ಗರ್ಭಗೃಹವು ಒಳಭಾಗದಲ್ಲಿ ೮ ಅಡಿ ಉದ್ದ ಮತ್ತು ೮ ಅಡಿ ಅಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಸು. ಎರಡು ಅಡಿಗಳ ಎತ್ತರವಿರುವ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಸು. ಐದು ಅಡಿಗಳಷ್ಟು ಎತ್ತರದ ಸಮಭಂಗಿಯಲ್ಲಿ ನಿಂತಿರುವ ಜನಾರ್ಧನಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿರುವಂತೆ ಬಿಡಿಸಿದೆ. ಸುಂದರವಾದ ಅಲಂಕರಣದ ಕೆತ್ತನೆಯಿಂದ ಕೂಡಿರುವ ಈ ಶಿಲ್ಪದ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ. ಈ ಶಿಲ್ಪದ ಎಡ ಮತ್ತು ಬಲಭಾಗದಲ್ಲಿ ಶ್ರೀದೇವಿ ಮತ್ತು ಭೂದೇವಿಯರು ಫಲವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಜನಾರ್ಧನನ ಹಿಂಭಾಗದಲ್ಲಿರುವ ಪ್ರಭಾವಳಿಯು ಸುಂದರವಾಗಿದ್ದು ಇದರಲ್ಲಿ ಬಳ್ಳಿ ಸುರಳಿ ಮತ್ತು ಕೀರ್ತಿಮುಖವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಮತ್ತು ಪಟ್ಟಿಕೆಗಳು ಸರಳವಾಗಿದೆ. ಆದರೆ ಬಾಗಿಲ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರು ಶಂಖ, ಚಕ್ರ, ಗದಾ, ಪದ್ಮವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಈ ಬಾಗಿಲ ಪಟ್ಟಿಕೆಗಳ ಮೇಲೆ ಸುತ್ತಲೂ ಬಳ್ಳಿ ಸುರಳಿಗಳ ಸೂಕ್ಷ್ಮಕೆತ್ತನೆ ಮಾಡಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಹಳ ಸುಂದರವಾಗಿ ಕೆತ್ತನೆ ಮಾಡಲಾಗಿದೆ. ತೋರಣದಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮತ್ತು ಬಾಗಿಲುವಾಡದಲ್ಲಿ ಚಿಕ್ಕ ಚಿಕ್ಕ ಪಿರಮಿಡ್ಡಿನಾಕಾರದ ಶಿಖರಗಳನ್ನು ಕೂರಿಸಿ ಅಲಂಕರಣಗೊಳಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯು ನಕ್ಷತ್ರಾಕಾರವಾಗಿದ್ದು ಮಧ್ಯದಲ್ಲಿ ಸುಂದರವಾಗಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ಸುಖನಾಸಿ:** ಸುಖನಾಸವು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿಗಳು ಕಾಣಬರುವುದಿಲ್ಲ. ಆದರೆ ಸುಖನಾಸಿಯ ಮೇಲ್ಛಾವಣಿಯು ನಕ್ಷತ್ರಾಕಾರವಾಗಿರುವ ಭುವನೇಶ್ವರಿಯನ್ನು ಹೊಂದಿದ್ದು ಇದರ ಮಧ್ಯದಲ್ಲಿ ವಿಶಾಲವಾದ ಅರಳಿರುವ ಪದ್ಮಪುಷ್ಪವನ್ನು ಬಹಳ ಸುಂದರ ವಾಗಿ ಎರಡು ಸುತ್ತು ಬರುವಂತೆ ರಚಿಸಲಾಗಿದೆ. ಮಧ್ಯದಲ್ಲಿ ರುವ ಕಮಲದ ಮೊಗ್ಗು ದೃಢಕಾಯವಾಗಿರುವಂತೆ ಬಿಡಿಸ ಲಾಗಿದೆ. ಭುವನೇಶ್ವರಿಯ ಮೂಲೆಗಳಲ್ಲಿ ಕಮಲದ ಮೊಗ್ಗು ಗಳು ಕೀರ್ತಿಮುಖಗಳನ್ನು ಬಿಡಿಸಲಾಗಿದ್ದು, ಸುಖನಾಸಿಯ ದ್ವಾರದ ಪಟ್ಟಿಕೆಗಳನ್ನು ಅಲಂಕರಣದ ಕೆತ್ತನೆ ಮಾಡದೇ ಹಾಗೇ ಉಳಿಸಲಾಗಿದೆ. ಇವುಗಳ ಮಧ್ಯದಲ್ಲಿ ನಕ್ಷತ್ರಾಕಾರವಾಗಿ ರಚಿಸಿ ಸೇರಿಸಲಾಗಿರುವ ಒಂದು ಅರೆಗಂಭಗಳಿವೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾರೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಸ್ತ್ರೀಯರು ಚಾಮರವನ್ನು ಹಿಡಿದು ನಿಂತಿದ್ದಾರೆ. ತೋರಣದ ಭಾಗದಲ್ಲಿ ಕಮಲದ ಮೊಗ್ಗುಗಳು ಮತ್ತು ಚಿಕ್ಕ ಚಿಕ್ಕ ಶಿಖರವನ್ನು ಕೆತ್ತನೆ ಮಾಡಿ ಅಲಂಕರಣ ಗೊಳಿಸಲಾಗಿದೆ.

* ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈ.ವಿವಿ, ಮಾನಸಗಂಗೋತ್ರಿ, ಮೈಸೂರು-೫೭೦೦೦೬.

**ನವರಂಗ:** ನವರಂಗವು ಸು. ೨೫ ಅಡಿ ಉದ್ದ ಮತ್ತು ೨೫ ಅಡಿ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. ಇವುಗಳು ಚೌಕ, ಬಳೆಗಳ ಗಾಲಿ ಗಂಟೆ, ಘಟ ವೃತ್ತಾಕಾರದ ಭೋದಿಗೆಯ ಮೇಲೆ ಚೌಕಾಕಾರದ ಫಲಕ ಅದರ ಮೇಲೆ ಕಪೋತವನ್ನು ಕೂರಿಸಲಾಗಿದೆ. ಬೋಧಿಗೆಯನ್ನು ಉರುಳೆಯಾಕಾರವಾಗಿ ರಚಿಸಲಾಗಿದೆ. ನವರಂಗದ ಮೇಲ್ಚಾವಣಿಯು ೯ ಅಂಕಣ ಗಳಿಂದ ಕೂಡಿದ್ದು ಮಧ್ಯದ ಭುವನೇಶ್ವರಿ ಸ್ವಲ್ಪ ವಿಶಾಲವಾಗಿದೆ. ಇವುಗಳನ್ನು ವಿವಿಧ ಆಕಾರದಲ್ಲಿ ರಚಿಸಲಾಗಿದೆ.

**ಭುವನೇಶ್ವರಿಗಳು**

**ಮಧ್ಯದ ಭುವನೇಶ್ವರಿ:** ಈ ಭುವನೇಶ್ವರಿಯು ೧೬ ಮೂಲೆಗಳಿಂದ ಕೂಡಿದ್ದು ವೃತ್ತಾಕಾರವಾಗಿದೆ. ಇದರ ಮಧ್ಯದಲ್ಲಿ ಮೂರು ಸುತ್ತಿನಲ್ಲಿ ಬಿಡಿಸಲಾಗಿರುವ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಇದರ ಒಳಭಾಗದಲ್ಲಿ ರುವ ಪಟ್ಟಿಕೆಗಳಲ್ಲಿ ಅಷ್ಟದಿಕ್ಪಾಲಕರು ತಮ್ಮ ತಮ್ಮ ವಾಹನ ವನ್ನೇರಿ ಸಂಚರಿಸುತ್ತಿರುವಂತೆ ಬಿಡಿಸಲಾಗಿದೆ. ಇನ್ನೊಂದು ಪಟ್ಟಿಕೆಯಲ್ಲಿ ಚಿಕ್ಕ ಚಿಕ್ಕ ಶಿಖರಗಳು, ಅವುಗಳ ಮಧ್ಯೆ ದೇವ ದೇವತೆಯರ ಶಿಲ್ಪಗಳಿವೆ. ನೃತ್ಯಗಾರರು, ವಾದ್ಯವೃಂದವರ ಶಿಲ್ಪಗಳನ್ನು ಕೂಡ ಬಿಡಿಸಲಾಗಿದೆ. ಹಾಗೇ ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದ್ದು, ಶಂಕುವಿನಾಕಾರದ ಕಮಲದ ಮೊಗ್ಗು ಹೊಂದಿದೆ.

**ಪೂರ್ವದ ಭುವನೇಶ್ವರಿ:** ಇದು ಚೌಕಾಕಾರವಾಗಿದ್ದು ಒಳಭಾಗವನ್ನು ನಕ್ಷತ್ರಾಕಾರವಾಗಿ ರಚಿಸಿ ಮಧ್ಯದಲ್ಲಿ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ನಯವಾದ ಕಮಲದ ಮೊಗ್ಗು ಮುಂಚಾಚಿದೆ. ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರಳಿಗಳನ್ನು ಬಹಳ ಸೊಗಸಾಗಿ ಕೆತ್ತನೆ ಮಾಡಲಾಗಿದೆ.

**ಅಗ್ನೇಯದ ಭುವನೇಶ್ವರಿ:** ಈ ಭುವನೇಶ್ವರಿಯು ನಕ್ಷತ್ರಾಕಾರವಾಗಿದೆ. ಇದರ ಮಧ್ಯದಲ್ಲಿ ಆಕರ್ಷಣೆಯಿಂದ ಕೂಡಿರುವ ಕಮಲದ ಪುಷ್ಪ ಮತ್ತು ಮೊಗ್ಗುಗಳನ್ನು ಬಿಡಿಸಿ ಸುಂದರಗೊಳಿಸಲಾಗಿದ್ದು ಮೂಲೆಯಲ್ಲಿ ಕೀರ್ತಿಮುಖಗಳಿವೆ.

**ದಕ್ಷಿಣದ ಭುವನೇಶ್ವರಿ:** ಇದನ್ನು ಅಷ್ಟ ಮತ್ತು ವೃತ್ತಾಕಾರವಾಗಿ ರಚಿಸಲಾಗಿದೆ. ವೃತ್ತದ ಒಳಗೆ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಸುತ್ತಲೂ ಕಮಲದ ದಳಗಳನ್ನು ಬಿಡಿಸಲಾಗಿದ್ದು ಕಮಲದ ಮೊಗ್ಗುಗಳು ನಾಲ್ಕು ದಿಕ್ಕಿನಲ್ಲೂ ಹಾಗೂ ಕೀರ್ತಿಮುಖದ ಬಾಯಿಂದ ಹೊರಟಂತಿರುವ ಬಳ್ಳಿ-ಸುರಳಿಗಳ ಕೆತ್ತನೆಯಿದೆ.

**ನೈರುತ್ಯದ ಭುವನೇಶ್ವರಿ:** ನೈರುತ್ಯ ಮೂಲೆಯಲ್ಲಿರುವ ಭುವನೇಶ್ವರಿಯು ವಿಶೇಷವಾಗಿದ್ದು ಇದನ್ನು ಅಷ್ಟ ಮೂಲೆ ಯಲ್ಲಿ ರಚಿಸಲಾಗಿದೆ. ಮಧ್ಯದಲ್ಲಿ ಕಮಲದ ಪುಷ್ಪ ಬಿಡಿಸ ಲಾಗಿದೆ. ಇದರ ಮೇಲೆ ದೇವಾಲಯದ ಆಭರಣ ಗಳನ್ನು, ಒಡವೆಗಳನ್ನು, ಸಂಪತ್ತನ್ನು ರಕ್ಷಿಸಿಡಲು ಗುಪ್ತ ದ್ವಾರವನ್ನು ಮಾಡಿ ಮೇಲಿನ ಭಾಗವನ್ನು ತೆಗೆದು ಮುಚ್ಚುವಂತೆ ಮಾಡಲಾಗಿದೆ. ಇದರ ನಾಲ್ಕು ಮೂಲೆಗಳಲ್ಲಿ ಕೀರ್ತಿಮುಖ ಗಳಿವೆ. ಸುತ್ತಲೂ ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಣ ಗೊಳಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ:** ಈ ಭುವನೇಶ್ವರಿಯನ್ನು ಚೌಕ, ಅಷ್ಟ ಮತ್ತು ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಕಮಲದ ಪುಷ್ಪ ಈಗ ಅರಳುತ್ತಿರುವಂತೆ ಹಂತಹಂತವಾಗಿ ಬಿಡಿಸಿ ಸುಂದರಗೊಳಿಸಲಾಗಿದೆ. ಸುತ್ತಲೂ ಇರುವ ಚೌಕಾಕಾರದ ಪಟ್ಟಿಕೆಯ ಅಂಚಿನಲ್ಲಿ ದೇವ ದೇವತೆಯರ ಶಿಲ್ಪಗಳನ್ನು ಕಂಡರಿಸಲಾಗಿದ್ದು ನಾಲ್ಕು ದಿಕ್ಕುಗಳಲ್ಲಿ ಕೀರ್ತಿ ಮುಖಗಳಿವೆ.

**ವಾಯುವ್ಯದಲ್ಲಿರುವ ಭುವನೇಶ್ವರಿ:** ಈ ಭುವನೇಶ್ವರಿಯು ಚೌಕ ಮತ್ತು ಅಷ್ಟಾಕಾರವಾಗಿದೆ. ಇದರಲ್ಲಿ ಮೂರು ಸುತ್ತು ಅರಳಿದ ಕಮಲದ ಪುಷ್ಪವಿದೆ. ದಳದಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಇದರಲ್ಲಿರುವ ಅಷ್ಟಮೂಲೆಯ ಪಟ್ಟಿಕೆಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದ್ದು ಮೂಲೆಗಳಲ್ಲಿ ಕೀರ್ತಿಮುಖಗಳಿವೆ.

**ಉತ್ತರದ ಭುವನೇಶ್ವರಿ:** ಇದನ್ನು ಚೌಕ ಮತ್ತು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವಿದೆ. ಕೀರ್ತಿಮುಖಗಳು, ಕಮಲದ ಮೊಗ್ಗುಗಳು, ಬಳ್ಳಿ ಸುರಳಿಗಳ ಅಲಂಕರಣೆಯ ಕೆತ್ತನೆಯಿರುವುದನ್ನು ಕಾಣಬಹುದು.

**ಈಶಾನ್ಯದ ಭುವನೇಶ್ವರಿ:** ಈ ಭುವನೇಶ್ವರಿಯು ಚೌಕಾಕಾರವಾಗಿದೆ. ಇದರಲ್ಲಿ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವಿದೆ. ಇದರ ಸುತ್ತಲೂ ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ನವರಂಗದ ಬಾಗಿಲು ಪಟ್ಟಿಕೆಗಳ ಮೇಲೆ ಯಾವುದೇ ರೀತಿಯ ಕೆತ್ತನೆಯನ್ನು ಮಾಡದೇ ಹಾಗೇ ಉಳಿಸಲಾಗಿದೆ. ಮಧ್ಯದಲ್ಲಿ ನಕ್ಷತ್ರಾಕಾರವಾಗಿರುವ ಅರೆಗಂಭ ವಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಲಾಗಿದೆ. ಬಾಗಿಲುವಾಡದಲ್ಲಿ ಚಿಕ್ಕ ಚಿಕ್ಕ ಪಿರಮಿಡ್ಡಿನಾಕಾರದ ಶಿಖರಗಳ ಜೋಡಣೆ ಮಾಡಲಾಗಿದೆ. ಕೆಳಭಾಗದಲ್ಲಿ ವಿಷ್ಣು, ದ್ವಾರಪಾಲಕರು ಶಂಖ, ಚಕ್ರ, ಗದಾ ಮತ್ತು ಪದ್ಮ ಹಿಡಿದು ನಿಂತಿದ್ದಾರೆ. ಪಕ್ಕದಲ್ಲಿ ಚಾಮರಧಾರಿಣಿಯರು ಫಲ ಮತ್ತು ಚಾಮರವನ್ನು ಹಿಡಿದು ನಿಂತಿದ್ದಾರೆ.

ಮುಖಮಂಟಪದಲ್ಲಿ ಹೊಯ್ಸಳ ಶೈಲಿಯ ಎರಡು ಕಂಬಗಳ ಆಸರೆಯ ಮೇಲೆ ನಿಂತಿರುವ ಮೇಲ್ಛಾವಣಿಯಲ್ಲಿ ವೃತ್ತಾಕಾರ ಮತ್ತು ಅಷ್ಟಕೋನಾಕಾರವಾಗಿ ರಚಿಸಲಾಗಿರುವ ಭುವನೇಶ್ವರಿ ಇದ್ದು ಮಧ್ಯದಲ್ಲಿ ಅರಳಿದ ಕಮಲದ ಪುಷ್ಪ ಮತ್ತು ಮೊಗ್ಗು ಇದೆ. ಇದರ ಒಳ ಅಂಚಿನಲ್ಲಿ ಅಷ್ಟದಿಕ್ಪಾಲಕರು, ಸಂಗೀತಗಾರರು, ನೃತ್ಯಗಾರರು, ಯುದ್ಧದ ಸನ್ನಿವೇಶ ಮತ್ತು ಕೀರ್ತಿಮುಖಗಳನ್ನು ಕೆತ್ತನೆ ಮಾಡಿ ಅಲಂಕರಣಗೊಳಿಸ ಲಾಗಿದೆ. ಮುಖಮಂಟಪದಲ್ಲಿ ಎರಡೂ ಕಡೆ ಕಕ್ಷಾಸನವನ್ನು ಮಾಡಲಾಗಿದೆ. ಮುಖಮಂಟಪದ ಮುಂದೆ ಇರುವ ಸೋಪಾನಗಳ ಇಕ್ಕೆಲಗಳಲ್ಲಿ ಆನೆಯ ಶಿಲ್ಪಗಳಿದ್ದಂತೆ ಕಂಡು ಬರುತ್ತದೆ. ಆದರೆ ಪ್ರಸ್ತುತ ಆನೆಗಳ ಶಿಲ್ಪಗಳು ಕಾಣ ಬರುವುದಿಲ್ಲ.

**ಅಧಿಷ್ಠಾನ:** ಅಧಿಷ್ಠಾನದಲ್ಲಿ ಐದು ಪಟ್ಟಿಕೆಗಳಿವೆ. ಇವುಗಳಲ್ಲಿ ಜಗತಿ, ಕುಮುದ, ತ್ರಿಪಟ್ಟ ಕುಮುದ, ಕಪೋತ ಮತ್ತು ದಂತಪಂಕ್ತಿಯನ್ನು ಕಾಣಬಹುದು. ಇವುಗಳನ್ನು ಕ್ರಮಬದ್ಧವಾಗಿ ಹಿನ್ನರಿತ-ಮುನ್ನರಿತಗಳಂತೆ ಜೋಡಿಸಿ ಅಲಂಕರಣಗೊಳಿಸಲಾಗಿದೆ.

ಭಿತ್ತಿಯನ್ನು ಯಾವುದೇ ಶಿಲ್ಪಗಳ ಅಲಂಕರಣದಿಂದ ಸುಂದರಗೊಳಿಸಿಲ್ಲ. ಆ ಜಾಗವನ್ನು ಹಾಗೇ ಬಿಡಲಾಗಿದೆ. ಭಿತ್ತಿಯಲ್ಲಿ ಸಣ್ಣ ಸಣ್ಣ ಅರೆಗಂಭಗಳು ನಕ್ಷತ್ರಾಕಾರದ ಅರೆಗಂಭಗಳನ್ನು ಅಲ್ಲಲ್ಲಿ ಜೋಡಿಸಿ ಅಲಂಕರಿಸಲಾಗಿದೆ.

ಕಪೋತವು ದೇವಾಲಯ ಭಿತ್ತಿಯಿಂದ ಎರಡು ಅಡಿ ಮುಂಚಾಚಿದೆ. ಇದನ್ನು ಇಂಗ್ಲೀಷಿನ ಅಕ್ಷರ S ಆಕಾರವಾಗಿ ಮಾಡಲಾಗಿದೆ. ಕಪೋತದ ಮೇಲಿರುವ ದಂತಪಂಕ್ತಿ ಹಾರದಲ್ಲಿ ಶಿಲ್ಪಗಳನ್ನು ಜೋಡಿಸಲು ನಿಲ್ಲಿಸಲಾಗಿರುವ ಕಲ್ಲುಗಳನ್ನು ಹಾಗೇ ಉಳಿಸಲಾಗಿದೆ. ಮೂಲೆಗಳ ಕಲ್ಲಿನಲ್ಲಿ ಮಾಡಲಾಗಿರುವ ಕಳಸಗಳನ್ನು ಇಡಲಾಗಿದೆ.

ಶಿಖರವು ಹೊಯ್ಸಳ ಮತ್ತು ದ್ರಾವಿಡ ಶೈಲಿಯಲ್ಲಿದೆ. ಇದರಲ್ಲಿ ಯಾವುದೇ ಶಿಲ್ಪಗಳನ್ನು ಬಿಡಿಸದೆ ಕಲ್ಲುಗಳನ್ನು ಹಾಗೇ ಉಳಿಸಲಾಗಿದೆ. ಸ್ತೂಪಿಯನ್ನು ಚೌಕಾಕಾರವಾಗಿ ಮಾಡಲಾಗಿದೆ. ಇದರ ಮೇಲೆ ಮೂಲ ಕಳಸವು ಸಹಜ ಸ್ಥಿತಿಯಲ್ಲಿ ಉಳಿದುಬಂದಿದ್ದು ಶಿಖರದ ಮುಂದೆ ಸುಖನಾಸ ವಿದೆ.

**ಪ್ರಾಕಾರ:** ಈ ದೇವಾಲಯದ ಸುತ್ತಲೂ ಪ್ರಾಕಾರವಿದೆ. ಪ್ರಾಕಾರದ ಒಳಭಾಗದಲ್ಲಿ ಸುತ್ತಲೂ ಒಂದು ಸಾಲಿನ ಕಂಬಗಳುಳ್ಳ ಕೈಸಾಲೆಯನ್ನು ಮಾಡಲಾಗಿದೆ. ಆದರೆ ಉತ್ತರ, ದಕ್ಷಿಣ ಮತ್ತು ಪೂರ್ವಭಾಗದ ಕೈಸಾಲೆ ಮೂಲಸ್ಥಿತಿಯಲ್ಲಿದ್ದು ಪಶ್ಚಿಮ ಮತ್ತು ವಾಯುವ್ಯ ಮೂಲೆಯ ಪ್ರಾಕಾರ ಗೋಡೆ ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಬಿದ್ದುಹೋಗಿದೆ. ಇತ್ತೀಚೆಗೆ ಕಲ್ಲಿನ ಚಪ್ಪಡಿಯನ್ನು ನಿಲ್ಲಿಸಿ ಗೋಡೆ ನಿರ್ಮಿಸಲಾಗಿದೆ. ಮತ್ತು ನೈರುತ್ಯ ಮೂಲೆಯ ಪ್ರಾಕಾರವು ಬಿದ್ದುಹೋಗಿದ್ದು ಮೂಲಸ್ಥಿತಿಯಲ್ಲಿ ಉಳಿದುಬಂದಿರುವ ಪೂರ್ವ, ಆಗ್ನೇಯ ಮತ್ತು ಈಶಾನ್ಯ ಮೂಲೆಯ ಕೈಸಾಲೆಯಲ್ಲಿ ಹೊಯ್ಸಳ ಶೈಲಿಯ ಕಂಬಗಳಿವೆ. ಇವುಗಳು ಪೀಠದಲ್ಲಿ ಚೌಕಾಕಾರವಾಗಿ ಮತ್ತು ಮಧ್ಯದ ದಿಂಡಿನಭಾಗ ಸಿಲಿಂಡರಿನಾಕಾರದಲ್ಲಿದ್ದು ಕಂಟದಲ್ಲಿ ಸ್ವಲ್ಪ ಸಣ್ಣ ಮಾಡಿ ಅದರ ಮೇಲೆ ಗಾಲಿಯಾಕಾರದ ಮತ್ತು ಕುಂಬಾಕಾರವಾಗಿರುವ ಬೋಧಿಗೆಯ ಮೇಲೆ ಓರೆಯಾಗಿ ಕತ್ತರಿಸಿದ ಕಪೋತವಿದೆ. ಕಂಬಗಳ ಮೇಲೆ ಅಡ್ಡಪಟ್ಟಿಯನ್ನು ಆಸರೆಯಾಗಿ ಮೇಲ್ಛಾವಣಿಗೆ ಆಧಾರವಾಗಿರು ವಂತೆ ಮಾಡಲಾಗಿದೆ. ಛಾವಣಿಯ ಮೇಲೆ ಮಾಡಲಾಗಿರುವ ಕಪೋತವನ್ನು ಕಲ್ಲಿನಲ್ಲಿ ಇಳಿಜಾರಾಗಿರುವಂತೆ ಜೋಡಿಸ ಲಾಗಿದೆ. ಅದರ ಮೇಲೆ ಮತ್ತೊಂದು ದಂತದ ಅಲಂಕರಣೆ ಯುಳ್ಳ ಕಪೋತವಿದೆ.

ಪ್ರಾಕಾರದ ಹೊರಭಾಗವು ವೇದಿಕೆಯ ಮೇಲೆ ನಿರ್ಮಿಸಲಾಗಿರುವ ಅಧಿಷ್ಠಾನ. ಈ ಅಧಿಷ್ಠಾನದ ಪಟ್ಟಿಕೆ ಗಳೆಂದರೆ ಉಪಾನ, ಜಗತಿ, ತ್ರಿಪಟ್ಟ ಕುಮುದ ಮತ್ತು ಕಪೋತವಿದೆ. ಕಪೋತದ ಮೇಲೆ ಕಲ್ಲಿನ ಗೋಡೆ ನಿರ್ಮಿಸಿ ಅದರ ಮೇಲೆ ದಿಂಡಿನಾಕಾರದ ಕಪೋತ ಇದರ ಮೇಲೆ ಇಳಿಜಾರಾಗಿರುವ ಮತ್ತೊಂದು ಕಪೋತವಿದೆ. ಇದರ ಹೊರ ಅಂಚಿನ ಭಾಗವನ್ನು ದಂತದ ರೀತಿ ಅಲಂಕರಣೆ ಮಾಡ ಲಾಗಿದೆ.

ಮಹಾದ್ವಾರದಲ್ಲಿ ಎರಡು ಕಲ್ಲಿನ ಕಂಬಗಳ ಮೇಲೆ ನಿರ್ಮಿಸಲಾಗಿರುವ ಮಂಟಪವಿದೆ. ಇಲ್ಲಿಯೂ ಸಹ ಮಂಟಪದ ಒಳಗೆ ಕಕ್ಷಾಸನವನ್ನು ಮಾಡಲಾಗಿದೆ. ಹೊಯ್ಸಳ ಶೈಲಿಯ ಕಂಬಗಳ ಮೇಲಿರುವ ಛಾವಣಿಯು ೨ ಅಡಿ ಮುಂಚಾಚಿಕೊಂಡಿದ್ದು ಇಂಗ್ಲೀಷಿನ S ಅಕ್ಷರಾಕಾರವಾಗಿ ಮಾಡಲಾಗಿದೆ. ಅದರ ಮೇಲೆ ದಂತದ ಅಲಂಕರಣದ ಕೆತ್ತನೆ ಇದೆ. ಹಾರದ ಭಾಗದಲ್ಲಿ ಶಿಲ್ಪಗಳನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲುಗಳು ಹಾಗೇ ಉಳಿದಿವೆ. ಇದರ ಮೇಲ್ಛಾವಣಿ ಅಷ್ಟ ಮತ್ತು ನಕ್ಷತ್ರಾಕಾರಾವಾಗಿ ಮಾಡಿ ಅದರ ಮಧ್ಯದಲ್ಲಿ ಅರಳಿದ ಪುಷ್ಪವನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖವಿದೆ. ಒಳಭಾಗದಲ್ಲಿ ಎಡ ಮತ್ತು ಬಲಭಾಗದಲ್ಲಿ ವಿಶ್ರಾಂತಿ ಪಡೆಯಲು ಎರಡು ಮಂಟಪಗಳನ್ನು ನಿರ್ಮಾಣ ಮಾಡಲಾಗಿದೆ. ಈ ಮಂಟಪದ ಮೇಲ್ಛಾವಣಿಯಲ್ಲಿ ಚೌಕಾಕಾರವಾಗಿ ಮತ್ತು ನಕ್ಷತ್ರಾಕಾರವಾಗಿ ಮಾಡಲಾಗಿರುವ ಭುವನೇಶ್ವರಿಗಳಿವೆ. ಇವುಗಳ ಮಧ್ಯದಲ್ಲಿರುವ ಕಮಲದ ಪುಷ್ಪದ ಮೊಗ್ಗು ಈಗ ಅರಳುತ್ತಿರುವಂತೆ ಮೊಗ್ಗಿನಲ್ಲಿ

# ಛಾಯಾಚಿತ್ರಗಳು



ಆನೆಕೆರೆ–ಜನಾರ್ಧನ ದೇವಾಲಯ



ಜನಾರ್ಧನ ಶಿಲ್ಪ



ನವರಂಗ



೧. ಭುವನೇಶ್ವರಿ



೨. ಭುವನೇಶ್ವರಿ



೩. ಭುವನೇಶ್ವರಿ



೪. ಭುವನೇಶ್ವರಿ



೫. ಭುವನೇಶ್ವರಿ



೬. ಭುವನೇಶ್ವರಿ



೭. ಭುವನೇಶ್ವರಿ



೮. ಭುವನೇಶ್ವರಿ

ದಳಗಳನ್ನು ಬಿಡಿಸಲಾಗಿದೆ. ಮಹಾದ್ವಾರ ಮಂಟಪದ ಮುಂದೆ ಆನೆಗಳು ಇದ್ದವೆಂದು ಹೇಳುತ್ತಾರೆ. ಈಗ ಆನೆಗಳು ಕಾಣಬರುವುದಿಲ್ಲ. ಆದರೆ ಸೋಪಾನದ ಮುಂದೆ ಎರಡು ಹೊಯ್ಸಳ ಶೈಲಿಯ ಕಂಬಗಳಿವೆ.



ಪಾರ್ಶ್ವನೋಟ



ಹಿಂಭಾಗ ಮತ್ತು ಅಧಿಷ್ಠಾನ

## ಆಕರ ಗ್ರಂಥಗಳು

೧. ಹಾ.ಮಾ. ನಾಯಕ, ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ೨೦೦೫.

೨. ಎಪಿಗ್ರಾಫಿಯ ಕರ್ನಾಟಿಕ ಸಂ. ೧೦, ಪ್ರಸಾರಾಂಗ, ಮೈ.ವಿ.ವಿ., ಮೈಸೂರು.

೩. ಶ್ರೀಕಂಠಶಾಸ್ತ್ರಿ, ಎಸ್., ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ೧೯೬೫.

೪. ಅಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ–ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯.




# ಶ್ರೀ ವೀರಭದ್ರಾಪುರ ಅಗ್ರಹಾರ, ಶ್ರೀ ವೀರಭದ್ರೇಶ್ವರ ದೇವಾಲಯ ಮತ್ತು ಸುತ್ತಮುತ್ತಲ ಪರಿಸರದ ಪ್ರಾಚ್ಯಾವಶೇಷಗಳು

**ಟಿ. ಸರಸ್ವತಿ* ಕೆಳದಿ ವೆಂಕಟೇಶ್ ಜೋಯಿಸ್****

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಬ್ರಹ್ಮಾವರ ಪಟಗುಪ್ಪೆ ಮಾರ್ಗದಲ್ಲಿ ವೀರಭದ್ರಾಪುರ ಅಗ್ರಹಾರವಿದೆ. ಇಲ್ಲಿ ಮಣ್ಣಿನ ಕೋಟೆಯ ಅವಶೇಷ, ವೀರಭದ್ರ ದೇವಾಲಯ, ಈಶ್ವರ ದೇವಾಲಯದ ಅವಶೇಷಗಳು, ಶ್ರೀ ಆಂಜನೇಯ ದೇವಾಲಯ ಇದ್ದ ಕುರುಹುಗಳು, ಶಿಲಾಶಾಸನ, ವೀರಗಲ್ಲು, ಮಹಾಸತಿ ಕಲ್ಲು ಇತ್ಯಾದಿ ಅವಶೇಷಗಳಿವೆ. ವೀರಭದ್ರೇಶ್ವರ ದೇವಾಲಯ ಬಸವಪುರ ಎಂಬ ಗ್ರಾಮದಲ್ಲಿದೆ. ಇಂದು ಇಲ್ಲಿ ದೀವರು ಮತ್ತು ವೀರಶೈವರ ಕುಟುಂಬಗಳು ಈ ಸುತ್ತಮುತ್ತಲಲ್ಲಿ ಕೆಲವಿದ್ದು ಇವರು ವೀರಭದ್ರದೇವರು ತಮ್ಮ ಮನೆ ದೇವರು ಎಂದು ಪೂಜಿಸಿಕೊಂಡು ಬರುತ್ತಿದ್ದಾರೆ. ದೇವಾಲಯದ ಅಕ್ಕ ಪಕ್ಕ ಜನವಸತಿ ಇಲ್ಲ. ಪಕ್ಕದಲ್ಲಿಯೇ ಹಿಂದೆ ವಸತಿ ಇದ್ದ ಕುರುಹುಗಳು ಅಲ್ಲಿವೆ. ಇಲ್ಲಿಗೆ ಸಾಗರ ಹೊಸನಗರ ಮಾರ್ಗದಲ್ಲಿ ಬ್ರಹ್ಮಾವರದಿಂದ ಸುಮಾರು ಹತ್ತು ಕಿ.ಮೀ. ಒಳರಸ್ತೆಯಲ್ಲಿ ಹೋದರೆ ಈ ದೇವಾಲಯ ಸಿಗುತ್ತದೆ. ಇದು ಇಂದು ಬಸವಪುರ ಕಸಬಾ ಹೋಬಳಿಗೆ ಸೇರಿದ್ದು ಜೇನಿ ಪಂಚಾಯತಿಯ ಕಿರುವರಿಗೆ ಸೀಮೆಯಲ್ಲಿ ಈ ದೇವಾಲವಿದೆ.

## ಸ್ಥಳನಾಮ

ವೀರಭದ್ರ ದೇವಾಲಯ ಇರುವ ಸ್ಥಳ ಇಂದು ಬಸವಾಪುರ ಎಂದು ಕರೆಯಲ್ಪಡುತ್ತದೆ. ಕೆಳದಿ ದೊರೆ ವೀರಭದ್ರನಾಯಕ ಭದ್ರಪ್ಪನಾಯಕನಿಂದ ಸ್ಥಾಪಿಸಲ್ಪಟ್ಟ ಅಗ್ರಹಾರಗಳಲ್ಲಿ ಒಂದಾದ ವೀರಭದ್ರಪುರ ಅಗ್ರಹಾರ ಪಟಗುಪ್ಪೆ ಸಮೀಪ ನಿರ್ಮಾಣವಾಗಿದ್ದನ್ನು ಶಾಸನವೊಂದು ಉಲ್ಲೇಖಿಸುತ್ತದೆಯಾದರೂ ಊರಿಗೆ ಬಸವಾಪುರ ಎಂದು ಕರೆಯಲು ಕಾರಣವೇನೆಂಬುದು ತಿಳಿದುಬರುವುದಿಲ್ಲ. ಈ ದೇವಾಲಯದಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿ ನಿಲ್ಸ್‌ಕಲ್ ಬಸವನ ಶಿಲ್ಪವೊಂದಿದ್ದು ಇದರಿಂದಲೂ ಇದಕ್ಕೆ ಈ ಹೆಸರು ಬಂದಿರಬಹುದು. ಈ ಕುರಿತು ಹೆಚ್ಚಿನ ಅಧ್ಯಯನ ಆಗಬೇಕಿದೆ.

ಇದರ ಜೊತೆಗೆ ಪ್ರಾಗೈತಿಹಾಸಿಕ ಸಂಸ್ಕೃತಿಗಳ ಅವಶೇಷಗಳಾಗಿ ಹಳೆನಗರ ಯಡಗುಡ್ಡೆಗಳಲ್ಲಿ ಇತಿಹಾಸ ಪ್ರಾರಂಭಕಾಲದ ನೆಲೆಗಳು, ನಗರ ಸಮೀಪದ ನಿಲ್ಸಕಲ್ ಮತ್ತು ಬೇಳೂರುಗಳಲ್ಲಿ ನೂತನ ಶಿಲಾಯುಗದ ಅವಶೇಷಗಳೂ ದೊರೆತಿವೆ. ಇವು ಈ ತಾಲ್ಲೂಕಿನ ಇತಿಹಾಸವನ್ನು ಸುಮಾರು ಏಳೆಂಟು ಸಾವಿರ ವರ್ಷಗಳ ಹಿಂದಕ್ಕೆ ತೆಗೆದುಕೊಂಡು ಹೋಗುತ್ತದೆ. ಈ ತಾಲ್ಲೂಕಿನಲ್ಲಿ ಹರಡಿರುವ ಪ್ರಾಚ್ಯವಸ್ತುಗಳು, ಪುರಾತತ್ವವಸ್ತುಗಳು, ನಾಣ್ಯಗಳು, ಹಸ್ತಪ್ರತಿಗಳು, ಚಾರಿತ್ರಿಕ ದಾಖಲೆಗಳು, ಕಡತಗಳು, ಜಾನಪದ ಲಾವಣಿ, ಒಗಟು, ಗಾದೆ ಮಾತುಗಳು ಇತ್ಯಾದಿಗಳು ಇತಿಹಾಸಪೂರ್ವ ಮತ್ತು ಇತಿಹಾಸ ನಂತರದ ಕಾಲದ ಮಾಹಿತಿಯನ್ನು ಒದಗಿಸುತ್ತದೆ.

ಕ್ರಿ.ಶ. ೧೪೯೯ರಿಂದ ೧೭೬೩ರವರೆಗೆ ಆಡಳಿತ ನಡೆಸಿದ ಕೆಳದಿ ಅರಸರು ಆರಂಭದಲ್ಲಿ ಕೆಳದಿಯನ್ನು ನಂತರ ಇಕ್ಕೇರಿಯನ್ನು ಅನಂತರದಲ್ಲಿ ಬಿದನೂರು (ನಗರ), ಕೊನೆಯದಾಗಿ ಭುವನಗಿರಿದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು. ವೀರಭದ್ರನಾಯಕನ ಕಾಲದಲ್ಲಿ ವಿಜಾಪುರದ ಅದಿಲ್‌ಷಾಹಿ ಸುಲ್ತಾನನ ದಂಡನಾಯಕ ರಣದುಲ್ಲಾಖಾನನ ದಾಳಿಗೀಡಾಗಿ ಕ್ರಿ. ಶ. ೧೬೩೮ರಲ್ಲಿ ಇಕ್ಕೇರಿ ಹಾಳಾಯಿತು. ಶಿವಪ್ಪನಾಯಕನ ಕಾಲಕ್ಕೆ ರಾಜಧಾನಿ ವೇಣುಪುರ ಅಥವಾ ಬಿದನೂರು ಎಂದು ಕರೆಯಲ್ಪಡುತ್ತಿದ್ದ ನಗರಕ್ಕೆ ಬದಲಾಯಿಸಲಾಯಿತು. ನಗರದಿಂದ ಸುಮಾರು ೬೫ ವರ್ಷ ಆಡಳಿತ ನಡೆಸಿದರು. ಚೌಡಪ್ಪನೂ ಸೇರಿ ೧೯ ಅರಸರು ಸುಮಾರು ೨೬೫ ವರ್ಷ ಕರ್ನಾಟಕದ ಈಗಿನ ೧೩ ಜಿಲ್ಲೆಗಳ ಆಡಳಿತ ನಡೆಸಿದರು. ಇದರಲ್ಲಿ ೨ನೇ ದೊರೆ ಸದಾಶಿವನಾಯಕ, ಹಿರಿಯ

* W/o ಚನ್ನಕೇಶವಸ್ವಾಮಿ.ಬಿ.ಆರ್., ಜಿನ್ನೇನಹಳ್ಳಿ ಪೋಸ್ಟ್, ಹಿರಿಸಾವೆ ಹೋಬಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ–೫೭೩೧೨೪.

ವೆಂಕಟಪ್ಪನಾಯಕ, ಸೋಮಶೇಖರನಾಯಕ ಪ್ರಮುಖರಾದವರು.

**ಬಸವಪುರದ ವೀರಭದ್ರೇಶ್ವರ ದೇವಸ್ಥಾನ**

ಸಾಗರ ಹೊಸನಗರ ಮುಖ್ಯ ರಸ್ತೆಯಿಂದ ಪೂರ್ವಕ್ಕೆ ಸುಮಾರು ಹತ್ತು ಕಿ.ಮೀ. ದೂರ ಕ್ರಮಿಸಿದರೆ ಬಸವಪುರ ವೀರಭದ್ರೇಶ್ವರ ದೇವಾಲಯ ಸಿಗುತ್ತದೆ. ಇದು ಸರ್ವೆ ನಂ. ೪೦, ೪೧ರಲ್ಲಿ ಈ ದೇವಸ್ಥಾನವಿದೆ. ಬಸವಪುರ ಕಸಬಾ ಹೋಬಳಿಗೆ ಸೇರಿದ್ದು ಜೇನಿ ಪಂಚಾಯತಿಯ ಕಿರುವರಿಗೆ ಸೀಮೆಯಲ್ಲಿ ಈ ದೇವಾಲಯ ಇದೆ. ದೇವಾಲಯದ ಮುಂಭಾಗದಲ್ಲಿ ಇಂದು ಲಿಂಗನಮಕ್ಕಿ ಜಲಾಶಯದ ಹಿನ್ನೀರು ಆವರಿಸಿದೆ. ಇದು ಒಂದು ಕಾಲದಲ್ಲಿ ಪಟ್ಟಗುಪ್ಪೆ ಚರ್ಮಾವರ್ತಿ ಹರಿದ್ರಾವತಿ ಸಂಗಮದ ಸ್ಥಳ. ಒಂದು ಕಾಲದಲ್ಲಿ ಕೆಳದಿ ಅರಸರಾಧಿಯಾಗಿ ನಗರ, ಕೊಲ್ಲೂರುಗಳಿಗೆ ಹೋಗಲು ಅನುಕೂಲವಾಗಿದ್ದ ಸ್ಥಳ. ಈ ಪಟಗುಪ್ಪೆ, ನದಿಯ ದಡದಲ್ಲಿ ಎತ್ತರದ ದಿಬ್ಬದ ಮೇಲೆ ದೇವಾಲಯ ಇದ್ದು ಗ್ರ್ಯಾನೈಟ್ ಶಿಲೆಯಿಂದ ದೇವಾಲಯ ಕಟ್ಟಲಾಗಿದೆ. ಹಿಂದಿನಿಂದಲು ಇಲ್ಲಿ ಸುತ್ತಮುತ್ತಲಲ್ಲಿ ಅವಶೇಷವಾಗಿ ಇರುವ ಈ ದೇವಾಲಯ, ಈಶ್ವರ ದೇವಾಲಯ, ನಿಲ್ಸ್‌ಕಲ್ ಬಸವ ಮೊದಲಾದ ಕಡೆಗಳಲ್ಲಿ ದೀಪಾವಳಿಯಲ್ಲಿ ವಿಶೇಷ ಪೂಜೆ ನಡೆಯುತ್ತದೆ ಎಂದು ತಿಳಿದುಬರುತ್ತದೆ. ದೇವಸ್ಥಾನವು ಎತ್ತರದಲ್ಲಿದ್ದು ಅವನತಿಯ ಹಂತದಲ್ಲಿದೆ.

ಇದರ ಗರ್ಭಗೃಹ ೯ x ೯ ಅಡಿ ಅಳತೆಯಲ್ಲಿದೆ. ಎತ್ತರ ೮ ಅಡಿ ಇದೆ. ಕೆಳಭಾಗಕ್ಕೆ ಚಪ್ಪಡಿ ಅಳವಡಿಸಲಾಗಿದೆ. ಇದು ೭ ಅಡಿ ಇದೆ. ಇಲ್ಲಿ ವೀರಭದ್ರನ ಮೂರ್ತಿ ಇದ್ದು ಇಂದು ಇಲ್ಲ. ಇಲ್ಲಿದ್ದ ವಿಗ್ರಹವನ್ನು ಬಾಣಿಗ ಮಾರುತಿಪುರದ ಹೊಸಕೆಸರೆ ಎಂಬಲ್ಲಿ ಹೊಸದಾಗಿ ಕಟ್ಟಿರುವ ದೇವಸ್ಥಾನದಲ್ಲಿ ಸ್ಥಾಪಿಸಲಾಗಿದೆ ಎಂದು ತಿಳಿದುಬರುತ್ತದೆ. ಗರ್ಭಗೃಹದ ಬಾಗಿಲವಾಡ ೨.೫ x ೫ ಅಡಿ ಅಳತೆಯಲ್ಲಿದೆ. ಮೇಲ್ಭಾಗದಲ್ಲಿ ಕಮಲ ಚಿತ್ರವಿದೆ. ಗೋಡೆಗಳು ಬಿರುಕುಬಿಟ್ಟಿದ್ದು ಅಳವಡಿಸಿರುವ ಚಪ್ಪಡಿಕಲ್ಲುಗಳೆಲ್ಲಾ ಬೀಳುತ್ತಿವೆ. ಬಾವಲಿಗೆ ಆವಾಸಸ್ಥಾನವಾಗಿದೆ. ವೀರಭದ್ರ ಮೂರ್ತಿ ಪ್ರತಿಷ್ಠಾಪನೆಗೂ ಪೂರ್ವದಲ್ಲಿ ಇಲ್ಲಿ ಲಿಂಗ ಇದ್ದಿರಬೇಕು. ದಾಳಿಯೊಂದರಲ್ಲಿ ನಾಶವಾಗಿ ಆ ಸ್ಥಳದಲ್ಲಿ ಕೆಳದಿ ವೀರಭದ್ರನಾಯಕ/ಭದ್ರಪ್ಪ ನಾಯಕರ ಕಾಲದಲ್ಲಿ ವೀರಭದ್ರ ಮೂರ್ತಿಯನ್ನು ಸ್ಥಾಪಿಸಿ ಭೂಮಿ ದಾನ ಬಿಟ್ಟಿರಬೇಕು. ಹಾಗಾಗಿ ಇದಕ್ಕೆ ವೀರಭದ್ರೇಶ್ವರ ಎಂದು ಕರೆದಿರಬೇಕು. ಇದರ ಮುಂಭಾಗದಲ್ಲಿರುವ ಅಂತರಾಳದಲ್ಲಿ ನಂದಿ ಇದ್ದಿತಂತೆ ಇದೂ ಸಹ ಇಂದು ಹೊಸಕೆಸರೆ ದೇವಾಲಯದಲ್ಲಿ ಇಟ್ಟಿರುವುದಾಗಿ ತಿಳಿದು ಬರುತ್ತದೆ. ಇಂದು ಈ ಭಾಗ ನಿಧಿ ಶೋಧರ ಕೃಪೆಗೆ ಒಳಗಾಗಿ ಇಲ್ಲಿನ ಚಪ್ಪಡಿಗಳು ಕೀಲಲ್ಪಟ್ಟಿದೆ. ಅಂತರಾಳವು ೯ x ೭.೫ ಅಡಿ ಅಳತೆ ಹೊಂದಿದೆ. ಇಲ್ಲಿಯೂ ಮೇಲ್ಭಾಗದಲ್ಲಿ ಕಮಲದ ಚಿತ್ರ ಕೆತ್ತಲಾಗಿದೆ. ಇದರ ಮುಂಭಾಗದಲ್ಲಿ ನವರಂಗವಿದೆ. ಇದು ೧೯ x ೧೭.೫ ಅಡಿ ಅಳತೆಯಲ್ಲಿದೆ. ಈ ನವರಂಗದ ಎಡ ಮತ್ತು ಬಲ ಭಾಗದಲ್ಲಿ ಗಣಪತಿ ಮತ್ತು ದುರ್ಗಿಗುಡಿ ಇದೆ. ಮೂರ್ತಿ ಇಲ್ಲ. ಗುಡಿಗಳು ३ x ೨ ಅಡಿ ಅಳತೆಯಲ್ಲಿದೆ. ಇದರ ಬಾಗಿಲು ೨.೫ x ೨.೫ ಅಡಿ ಅಳತೆಯಲ್ಲಿದೆ. ಅಂತರಾಳದಿಂದ ನವರಂಗಕ್ಕೆ ಬರುವ ಬಾಗಿಲವಾಡವು ೫.३ x ೨.೫ ಅಡಿ ಅಳತೆ ಹೊಂದಿದೆ. ಈ ಭಾಗದಲ್ಲಿ ೪ ಪೂರ್ಣ ಪ್ರಮಾಣದ ಮುಂಡಿಗೆ ಮತ್ತು ೨ ಅರ್ದ ಪ್ರಮಾಣದ ಮುಂಡಿಗೆ ಇದೆ. ಮೇಲ್ಭಾಗದಲ್ಲಿ ಕಮಲ ಚಿತ್ರ ಕೆತ್ತಲಾಗಿದೆ. ಇದು ಕಾವಿ ಬಣ್ಣದಿಂದ ಕೂಡಿದೆ. ಬಾಗಿಲವಾಡದ ಮೇಲ್ಭಾಗದಲ್ಲಿ ನಂದಿ ಉಬ್ಬು ಚಿತ್ರವಿದೆ. ಇದರ ಹೊರ ಭಾಗಕ್ಕೆ ಲತಾಮಂಟಪ, ಮೂಖಶಾಲೆ ಅಥವಾ ಪ್ರವೇಶದ್ವಾರ ಎಂದೆಲ್ಲ ಕರೆಯಲ್ಪಡುವ ಭಾಗವಿದೆ. ಇದರಲ್ಲಿ ೨ ಮುಂಡಿಗೆ ಮತ್ತು ಎರಡು ಅರ್ದ ಮುಂಡಿಗೆಗಳಿವೆ. ಇಲ್ಲಿ ಮಾತ್ರ ಕಕ್ಷಾಸನ ಅಥವಾ ಒರಗುದಿಣ್ಣೆ ಇದೆ. ಈ ಭಾಗ ೮ x ೬.೫ ಅಡಿ ಅಳತೆ ಹೊಂದಿದೆ. ಹೊರಭಾಗದಿಂದ ಗುಡಿಯು ೫ x ೯.೫ x ೫ ಅಡಿ ಅಳತೆ ಹೊಂದಿದೆ. ಬಾಗಿಲು ಮರದ್ದಿದ್ದಿಬಬಹುದೆನ್ನಲು ಕೂಲು ಇರುವುದನ್ನು ಗಮನಿಸಬಹುದು. ದೇವಾಲಯವು ಎತ್ತರದಲ್ಲಿದೆ. ಇಲ್ಲೆ ೭ ಮೆಟ್ಟಿಲುಗಳಿವೆ. ಎಡ, ಬಲಗಳಲ್ಲಿ ಆನೆ ಇದ್ದ ಕುರುಹಿದ್ದು ಇಂದು ಅವು ಬಿದ್ದುಹೋಗಿದೆ. ಕಟ್ಟಡದ ಹೊರಭಾಗ ಮರವೊಂದರಿಂದ ಪೂರ್ಣ ಬಿರುಕುಗೊಂಡಿದೆ.ದೇವಾಲಯದ ಒಟ್ಟು ವಿಸ್ತೀರ್ಣ ೫೧ x ೨೧ ಅಡಿ ಇದೆ. ಇದೇ ಪ್ರದೇಶದಲ್ಲಿ ವೀರಭದ್ರನ ಸಣ್ಣ ಶಿಲ್ಪವೊಂದು ಸಿಕ್ಕಿದ್ದು ಅದನ್ನು ಉತ್ಸವ ಮೂರ್ತಿ ಎಂದು ಕರೆದು ಪೂಜಿಸಲಾಗುತ್ತದೆ. ಇದು ೯ x ೬ ಇಂಚು ಅಳತೆಯಲ್ಲಿದೆ. ದೇವಾಲಯದ ಎದುರಿನಲ್ಲಿಯೇ ಶ್ರೀ ದೇವರಿಗೆ ಬಿಟ್ಟಿರುವ ಭೂಮಿ ಇದ್ದು ಇದು ಮುಳುಗಡೆಯಾಗಿದೆ. ಈ ದೇವಾಲಯ ಇರುವ ಸ್ಥಳ ಇಂದು ಕೆ.ಪಿ.ಸಿ.ರವರ ಜಾಗಕ್ಕೆ ಸೇರಿದೆ ಎಂದು ತಿಳಿದುಬರುತ್ತದೆ. ದೇವಾಲಯದ ಮುಂಭಾಗ ಮತ್ತು ಬಲಭಾಗದಲ್ಲಿ ಎರಡು ಶಾಸನಗಳಿವೆ. ಇವು ವಿಜಯನಗರ ಕಾಲವನ್ನು ಪ್ರತಿನಿಧಿಸುತ್ತದೆ. ಈ ವೀರಭದ್ರನನ್ನು ಮನೆದೇವ ರೆಂದು ಪೂಜಿಸುವ ಮನೆತನದವರು ಇಲ್ಲಿದ್ದಾರೆ. ಶಾಸನ ವೊಂದರ ಆಧಾರದಲ್ಲಿ ಇಲ್ಲಿ ಬ್ರಾಹ್ಮಣರ ಪೂಜೆ ನಡೆಯು ತ್ತಿದ್ದುದರ ಕುರುಹು ದೊರೆಯುತ್ತದೆ.

ಶಿವಮೊಗ್ಗದ ಮಂಡಲಿಗಿಂತ ಮುಂದೆ ಹರಕೆರೆ ಹತ್ತಿರ ಪಣಿ ವೀರಭದ್ರ ದೇವಸ್ಥಾನ ಎಂಬುದಾಗಿ ಒಂದು ದೇವಾಲಯ

ಇದೆ. ಇಲ್ಲಿಯೂ ಲಿಂಗಕ್ಕೆ ಪೂಜೆ ನಡೆಯುತ್ತಿರುವುದನ್ನು ಕಾಣಬಹುದಾದರೂ ಇದನ್ನು ವೀರಭದ್ರ ದೇವಾಲಯ ಎಂದೇ ಕರೆಯಲ್ಪಡುತ್ತಿದೆ. ಇದಕ್ಕೆ ಹಿಂದೆ ವೀರಭದ್ರನನ್ನು ಅಭಿನವರುದ್ರ ವೀರಭದ್ರ ಎಂದು ಕರೆಯಲ್ಪಡುತ್ತಿದ್ದುದೂ ಕಾರಣವಾಗಿರ ಬಹುದು. ಹೊಯ್ಸಳ ಕಾಲದ ನಂತರ ವೀರಭದ್ರ ಆರಾಧನೆ ಹೆಚ್ಚು ಪ್ರಚಲಿತಕ್ಕೆ ಬಂದುದು ಕಂಡುಬರುತ್ತದೆ.

ಈ ದೇವಾಲಯದ ಪಕ್ಕದಲ್ಲಿ ಅರ್ಚಕರ ಮನೆ ಇದ್ದ ಕುರುಹು ಇದೆ. ಅಂತೆಯೇ ಊರಿನ ವೀರಶೈವರ ಮನೆ ಅವಶೇಷಗಳೂ ಇಲ್ಲಿವೆ. ದೇವಾಲಯದಿಂದ ಸುಮಾರು ೨ ಕಿ.ಮೀ. ದೂರದಲ್ಲಿ ಒಂದು ಈಶ್ವರನ ಗುಡಿಯ ಅವಶೇಷವಿದ್ದು ಇಲ್ಲಿ ಲಿಂಗ, ಗಣಪತಿ, ಸಪ್ತಮಾತೃಕೆಯರು, ಬಸವನ ಶಿಲ್ಪವಿದ್ದುಎಲ್ಲವೂ ಭಿನ್ನವಾಗಿವೆ. ಇಲ್ಲಿಂದ ಸುಮಾರು ಅನತಿ ದೂರದಲ್ಲಿ ನಿಲ್ಸ್‌ಗಲ್ ಬಸವನ ಶಿಲ್ಪವಿದೆ. ಇದಕ್ಕೆ ದೀಪಾವಳಿ ಮೊದಲಾದ ಪರ್ವ ಕಾಲದಲ್ಲಿ ಪೂಜೆ ನಡೆಯುವುದಾಗಿ ತಿಳಿದುಬರುತ್ತದೆ. ಇಲ್ಲಿಂದ ಅನತಿ ದೂರ ಕ್ರಮಿಸಿದರೆ ಅಲ್ಲಿ ಸಾಂತರ ಕಾಲದಲ್ಲಿ ಹಾಕಿರಬಹುದಾದ ಒಂದು ವೀರಗಲ್ಲು ಮತ್ತು ಸಮಾಧಿ ಸ್ಥಳ ಇದೆ. ವೀರಗಲ್ಲು ಸುಂದರವಾಗಿದೆ. ಮುಂದೆ ಒಳದಾರಿಯಲ್ಲಿ ಹಾದು ಪಟಗುಪ್ಪೆಗೆ ಹೋಗುವ ಮಾರ್ಗದಲ್ಲಿಯೂ ಒಂದು ಈಶ್ವರ ದೇವಾಲಯದ ಅವಶೇಷ ವನ್ನು ಕಾಣಬಹುದು. ಇದು ಇಂದು ರಬ್ಬರ್ ಪ್ಲಾಂಟೇಷನ್ ಒಳಗಿದೆ. ಇಲ್ಲಿಯೇ ರಸ್ತೆ ಬದಿಯಲ್ಲಿ ಒಂದು ಒಕ್ಕೈ ಮಹಾಸತಿ ಕಲ್ಲಿದೆ. ಅಲ್ಲದೆ ಇದೇ ಕಾಡಿನಲ್ಲಿ ಸಾಂತರರ ಕಾಲದ ಒಂದು ಮಹಾಸತಿ ಕಲ್ಲು ಇಲ್ಲಿದೆ. ಇವುಗಳೆಲ್ಲವೂ ಈ ಪ್ರದೇಶ ಸಾಂತರರ ಕಾಲದಿಂದಲೂ ಐತಿಹಾಸಿಕವಾಗಿ ಪ್ರಮುಖ ವಾಗಿತ್ತೆಂಬುದನ್ನು ತಿಳಿಸುತ್ತದೆ.

ಪಟಗುಪ್ಪೆ ಅಣ್ಣಯ್ಯಶಾಸ್ತ್ರಿಯವರ ಮಕ್ಕಳ ಬಳಿಯಿರುವ ತಾಮ್ರಶಾಸನವೊಂದು ಈ ವೀರಭದ್ರೇಶ್ವರ ದೇವಾಲಯದ ಸ್ಥಾಪನೆಯ ಮೇಲೆ ಬೆಳಕುಚೆಲ್ಲುತ್ತದೆ. ಇದು ಶಾಲಿವಾಹನ ಶಕ ವರುಷ ೧೫೫೪ರದ್ದಾಗಿದೆ. ಅಂದರೆ ಕ್ರಿ.ಶ. ೧೬೩೨ಕ್ಕೆ ಸರಿ ಹೊಂದುತದೆ. ಇದು ಕೆಳದಿ ವೆಂಕಟಪ್ಪನಾಯಕರ ಪುತ್ರರು ಭದ್ರಪ್ಪನಾಯಕರ ಪವುತ್ರರು ವೀರಭದ್ರ್ರನಾಯಕರು ಪಟಗುಪೆ ಬಳಿಯ ಚರ್ಮಾವತಿ ಹರಿದ್ರಾವತಿ ನದೀ ತೀರದಲ್ಲಿ ಕಟ್ಟಿಸಿದ ವೀರಭದ್ರಾಪುರ ಎಂಬ ಸರ್ವಮಾನ್ಯ ಅಗ್ರಹಾರದ ನಾನಾ ಗೋತ್ರದ ನಾನಾ ಸೂತ್ರದ ನಾನಾ ಶಾಖೆಯ ಮಹಾಜನಗಳಿಗೆ ಸಂಧ್ಯಾ ಮಂಟಪ, ಬ್ರಹ್ಮಪುರಿ, ಚಂಚಗಾರಕ ಮುಂತಾದ ಗ್ರಾಮಧರ್ಮ ಗಳಿಗೆ ದೇವಸ್ಥಾನ ವೀರಭದ್ರೇಶ್ವರ ದೇವರು, ಹನುಮಂತ ದೇವರು ವಿನಾಯಕ ದೇವರುಗಳ ಅಮೃತಪಡಿ ನಂದಾದೀಪ್ತಿ ಮೊದಲಾದ ವೆಚ್ಚಗಳಿಗೆ ಶಿವರಾತ್ರಿ ಪುಣ್ಯ ಕಾಲದಲ್ಲಿ ವರದಾನದಿ ತೀರದಲ್ಲಿ ಈಶ್ವರ ಪೂಜೆ ಮಾಡುವಾಗ ಹಿರಣ್ಯೋದಕದಾನ ಧಾರಾಪೂರ್ವಕವಾಗಿ ಶಿವಾರ್ಪಿತವಾಗಿ ಕೊಟ್ಟ ಭೂದಾನವನ್ನು ತಿಳಿಸುತ್ತದೆ. ಇಲ್ಲಿ ಉಲ್ಲೇಖಿಸಿರುವ ವೀರಭದ್ರೇಶ್ವರ ದೇವರ ಗುಡಿ ಇದೇ ಆಗಿದ್ದು, ಇಲ್ಲಿಯೆ ಆಂಜನೇಯನ ಗುಡಿಯೂ ಇದ್ದಿತೆಂಬುದನ್ನು ಗ್ರಾಮಸ್ಥರು ಇಂದು ನೆನಪಿಸಿಕೊಳ್ಳುತ್ತಾರೆ. ಅಷ್ಟಮಂಗಲ ಪ್ರಶ್ನೆಯಲ್ಲಿಯೂ ಇದು ಕಂಡುಬಂದಿರುವುದಾಗಿ ತಿಳಿದುಬರುತ್ತದೆ. ಆದರೆ ಗಣಪತಿ ದೇವಸ್ಥಾನ ಯಾವುದೆಂದು ತಿಳಿಯುವುದಿಲ್ಲ. ಇಲ್ಲಿ ಉಲ್ಲೇಖಗೊಂಡಿರುವ ವರದಾನದಿ ತೀರದ ಶ್ರೀ ಈಶ್ವರ ದೇವಾಲಯ ಸಾಗರದ ಅಗ್ರಹಾರದಲ್ಲಿರುವ ಈಶ್ವರ ದೇವಾಲಯ ಆಗಿರಬೇಕು. ಕಾರಣ ಇಲ್ಲಿಯೇ ಹಿಂದೆ ಸದಾಶಿವನಾಯಕರು ಭಾರ್ಗವಚ್ಯವನ ಆಪ್ನುವಾನ ಔರವ ಜಾಮದಗ್ನಿ ಗೋತ್ರದ ಭೋಧಾಯನ ಸೂತ್ರದ ಯಜುಃ ಶಾಖೆಯ ವಿಜಯನಗರದ ವೆಂಕಟಾದ್ರಿ ದೈವಜ್ಞ ಯಜಮಾನರ ಪ್ರಪೌತ್ರರಾದ ಹೇಮಾದ್ರಿ ಯಜಮಾನರ ಪೌತ್ರರಾದ ನರಸಿಂಹ ಯಜಮಾನರ ಪುತ್ರರಾದ ನರಸಪ್ಪ ದೈವಜ್ಞಯಜಮಾನರಿಗೆ ಹಳ್ಳಿಗಳನ್ನು ಬಿಟ್ಟಿರುವ ಕ್ರಿ.ಶ. ೧೫೦೬ರ ಶಾಸನವೊಂದಿದೆ.

ಶಾಸನವು ಸುಮಾರು ೧೬೨ ಸಾಲಿದೆ. ಇದರಲ್ಲಿ ಸಾಲು ೧೨೩ರಿಂದ ಶ್ರೀ ವೀರಭದ್ರ ದೇವರಿಗೆ ಅಮೃತಾಡಿ, ಧನುರ್ಮಾಸ ಪೂಜೆ, ಹೆಸರು ತೊವೆ, ಸಂಜೆದೀಪ್ತಿ, ನಿತ್ಯತಾಂಬೂಲ, ಅಲಂಕಾರದೀಪ್ತಿ, ಹತಿದೂಪ, ಅಂಗವಸ್ತ್ರ, ಸೋಮವಾರ ಪಂಚಾಮೃತ, ಯಣ್ಣೆಮಜ್ಜನ ಸೋಮವಾರ ವಡೆ ಪರಮಾನ್ನವಡೆ, ಪರಮಾನ್ನಕೆ ಗೋಧಿ ಬೆಲ್ಲ ದೀವಳಿಗೆ, ಯುಗಾದಿ, ಮಹಾನವಮಿ, ಬೆನಕವಚವಟಿ, ನೂಲಹುಣ್ಣಿಮೆ, ಅಂಚುಪಂಚಪರ್ವ, ಕಾರ್ತಿಕಪೂಜೆ, ವಸಂತಪೂಜೆ, ಶಿವರಾತ್ರಿ ಸಂಬಂಧ ಅಯನಸಂಕ್ರಾಂತಿ, ಪ್ರದೋಷಪೂಜೆ, ಪಂಚಪರ್ವ, ಅಭಿಷೇಕ ಇತ್ಯಾದಿಗಳಿಗೆ ದಾನ ಕೊಟ್ಟಿರುವುದನ್ನು ಇದು ಹೇಳುತ್ತದೆ. ಇದರಿಂದ ಹಿಂದೆ ಇಲ್ಲಿ ವೀರಭದ್ರನ ಸ್ಥಾಪನೆ ಆಗುವುದಕ್ಕೂ ಪೂರ್ವದಲ್ಲಿ ಲಿಂಗ ಇದ್ದಿರಬೇಕು. ಇದನ್ನು ವೀರೇಶ್ವರ ದೇವಾಲಯ ಎಂದು ಕರೆಯುತ್ತಿದ್ದಿರಬೇಕು. ಇದಕ್ಕೆ ಸಾಕ್ಷಿಯಾಗಿ ಎಪಿಗ್ರಾಫೀಯ ಕರ್ನಾಟಕ, ಸಂಪುಟ ೮ ನಗರ ತಾಲ್ಲೂಕು ಇದರಲ್ಲಿ ಪುಟ ೩೫೧-೫೨ರಲ್ಲಿ ಪಟಗುಪ್ಪೆ ಹೋಬಳಿ ಪಟಗುಪ್ಪೆ ವೀರೇಶ್ವರ ದೇವಾಲಯದ ಎಂದು ಕರೆದಿರುವುದನ್ನು ಕಾಣಬಹುದು. ಅನಂತರದ ಕಾಲದಲ್ಲಿ ಇದು ದಾಳಿಗೊಳಗಾಗಿ ವೀರಭದ್ರನಾಯಕ/ಭದ್ರಪ್ಪನಾಯಕರ ಕಾಲದಲ್ಲಿ ಜೀರ್ಣೋದ್ಧಾರಗೊಂಡು ವೀರಭದ್ರನನ್ನು ಪ್ರತಿಷ್ಠಾಪಿಸಿರಬೇಕು. ಇದನ್ನು ವೀರಭದ್ರೇಶ್ವರ ಎಂದು ಕರೆದಿರ ಬಹುದೆಂದು ಊಹಿಸಲು ಅವಕಾಶವಿದೆ. ಕೆಳದಿ ಅರಸರ ಶಾಸನ ಸಂಪುಟ ಶಾಸನ ಸಂಖ್ಯೆ ೭೬, ಪುಟ ೧೧೬ರಿಂದ ೧೧೯ರವರೆಗೆ ಈ ಶಾಸನ ಗಮನಿಸಬಹುದು.

### ಕೋಟೆ ಅವಶೇಷಗಳು

ಈ ದೇವಾಲಯದ ಸುತ್ತಲೂ ಮಣ್ಣಿನ ಕೋಟೆ ಇದ್ದ ಅವಶೇಷಗಳು ಇರುವುದನ್ನು ಕಾಣಬಹುದು. ಆರಂಭದಲ್ಲಿ ಎಡ ಬಲಗಳಲ್ಲಿ ಮಣ್ಣಿನ ದಿಬ್ಬಗಳಿವೆ. ಇದು ಕಲ್ಲು ಮಣ್ಣುಗಳಿಂದ ನಿರ್ಮಿತವಾಗಿರುವುದು ಕಂಡುಬರುತ್ತದೆ. ಇದು ಕೋಟೆಯ ಪ್ರವೇಶವಿರಬೇಕು. ಪ್ರಾರಂಭದಲ್ಲಿ ಹೊರತುಪಡಿಸಿ ಬೇರೆಲ್ಲೂ ಈ ರೀತಿಯ ರಚನೆ ಅಥವಾ ಎಲ್ಲಾ ಕೋಟೆಗಳಲ್ಲಿ ಕಂಡುಬರುವಂತೆ ದ್ವಾರಬಂಧ ಇಲ್ಲಿ ಕಂಡುಬರುವುದಿಲ್ಲ. ಇಲ್ಲಿಂದ ಒಳಗೆ ಸುಮಾರು ಒಂದು ಫರ್ಲಾಂಗ್ ದೂರದ ವರೆಗೆ ಕ್ರಮಿಸಿದರೆ ಕೋಟೆ ಅವಶೇಷಗಳು ಕಂಡುಬರುತ್ತದೆ. ಕೋಟೆ ಮಧ್ಯದಲ್ಲಿ ಹಾಯ್ದು ಹೋಗಲು ರಸ್ತೆಯಿದೆ. ಇದನ್ನು ಉತ್ಖನನಕ್ಕೆ ಬಳಸಬಹುದಾಗಿದೆ.

ಆಂಜನೇಯ ದೇವಾಲಯವೂ ಇದ್ದದ್ದನ್ನು ಗ್ರಾಮಸ್ಥರು ನೆನಪಿಸಿಕೊಳ್ಳುವುದನ್ನು ನೋಡಿದರೆ ಏನೆಂಬುದನ್ನು ಸಂಶೋಧನೆಯಿಂದ ತಿಳಿಯಬಹುದು. ಬಸವಾಪುರದ ಶ್ರೀ ಬಿ.ಜಿ. ನಾಗರಾಜ, ಶ್ರೀ ಶಿವಕುಮಾರ, ಶ್ರೀ ರಾಘವೇಂದ್ರ, ಶ್ರೀ ಗಣೇಶ ಹಾಗೂ ಶ್ರೀ ರುದ್ರಮುನಿ, ಸತ್ಯನಾರಾಯಣ, ಲಕ್ಷ್ಮಣ, ಅಣ್ಣಪ್ಪ, ಯಲ್ಲಪ್ಪ, ಈಶ್ವರಪ್ಪ, ಓಂಕಾರಪ್ಪ, ವೀರಭದ್ರಪ್ಪ, ಚೆನ್ನಪ್ಪ, ಮಂಜಪ್ಪ, ಕೊಲ್ಲಪ್ಪ, ಹುಚ್ಚಪ್ಪ, ರವೀಂದ್ರ, ಮಂಜಪ್ಪ, ಉಮೇಶ, ನಾರಾಯಣಪ್ಪ ಈ ಮೊದಲಾದವರು ಮತ್ತು ಅಶೋಕ್ ಹೆಡ್ಲಿ ಸಹಕರಿಸಿದ್ದಾರೆ ಇವರುಗಳಿಗೆ ನಾನು ಅಭಾರಿಯಾಗಿದ್ದೇನೆ.)

### ಆಧಾರಸೂಚಿ


೧. ಮರೆಯಲಾಗದ ಕೆಳದಿ ಸಾಮ್ರಾಜ್ಯ, ೧೯೯೩. ಡಾ. ಕೆಳದಿ ವೆಂಕಟೇಶ್ ಜೋಯಿಸ್.

೨. ಕೆಳದಿ ಅರಸರ ಶಾಸನ ಸಂಪುಟ, ಮೈ.ವಿ.ವಿ. ಮೈಸೂರು. ಸಂ. ಡಾ. ಕೆಳದಿ ವೆಂಕಟೇಶ್ ಜೋಯಿಸ್.

೩. ಲಿಂಗಣ್ಣಕವಿ ಕೆಳದಿ ನೃಪ ವಿಜಯ,

೪. ಕರ್ನಾಟಕ ಗೆಝೆಟಿಯರ್, ಕನ್ನಡ ನಾಡಿನ ಚರಿತ್ರೆ – ಡಾ. ಎಸ್.ಸಿ. ನಂದೀಮಠ, ಕ.ಸಾ.ಪ. ೧೯೭೫.

೫. ಎಪಿಗ್ರಾಫಿಯ ಕರ್ನಾಟಕ, ಸಂಪುಟ ೮.



# ಬೆಟ್ಟಹಳ್ಳಿ ಪಾಳ್ಯದ ದೇವಸ್ಥಾನ - ದೇವಾಲಯ ವಿಸ್ತರಣೆಗೊಂದು ಉದಾಹರಣೆ

**ಮಮತಾ ರಾಣಿ***

**ರಾ**ಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಕುದೂರು ಹೋಬಳಿ ಕೇಂದ್ರಕ್ಕೆ ೬ ಕಿ.ಮೀ. ದೂರದಲ್ಲಿರುವ ಬೆಟ್ಟಹಳ್ಳಿ ಗ್ರಾಮದಲ್ಲಿ ಸು. ೧೦ನೇ ಶತಮಾನದಿಂದ ೧೩ನೇ ಶತಮಾನದ ವರೆಗೆ ವಿಸ್ತರಣೆಗೊಂಡಿರುವ ಪಂಚಲಿಂಗೇಶ್ವರ ದೇವಾಲಯ ವಿದ್ದು ಇದು ಈ ಭಾಗಕ್ಕೆ ಒಂದು ಅಪರೂಪದ ಪಂಚಕೂಟ ದೇವಾಲಯವೆನ್ನಬಹುದು. ಇದು ಗಂಗರ ಸಮಕಾಲೀನ ಅಥವಾ ನಂತರದ ಕಾಲದ ದೇವಾಲಯವೆನ್ನಬಹುದು. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನ, ಮತ್ತಿತರೆ ಸಾಕ್ಷ್ಯಾಧಾರಗಳಿಲ್ಲವಾದ್ದರಿಂದ ಇದರ ನಿಖರವಾದ ಕಾಲವನ್ನು ಹೇಳಲಾಗುವುದಿಲ್ಲ.

ಈ ದೇವಾಲಯದಲ್ಲಿ ಐದು ಲಿಂಗಗಳಿದ್ದೂ, ಇದು ಶಿವನ ಐದು ಮುಖಗಳನ್ನು ಪ್ರತಿನಿಧಿಸುವಂತಿದೆ, ಐದು ಗರ್ಭಗುಡಿಗೂ ಪ್ರತ್ಯೇಕವಾದ ಐದು ಗೋಪುರಗಳನ್ನು ಹೊಂದಿದೆ. ಈ ದೇವಾಲಯಕ್ಕೆ ೩ ದಿಕ್ಕುಗಳಿಂದಲೂ ದ್ವಾರ ಗಳಿದ್ದೂ, ಅವು ಉತ್ತರ; ದಕ್ಷಿಣ, ಮತ್ತು ಪೂರ್ವಾಭಿಮುಖ ವಾದ ದ್ವಾರಗಳಾಗಿವೆ. ಈ ದೇವಾಲಯ ಶೈವಾಗಮಗಳ ಪ್ರಕಾರ ಇದ್ದೂ, ಇಲ್ಲಿನ ಪ್ರಧಾನ ದೇವರು ಶ್ರೀ ಮಹಾಬಲೇಶ್ವರ ಲಿಂಗ. ಈ ಪ್ರಧಾನ ಗರ್ಭಗುಡಿಯ ಬಲಭಾಗಕ್ಕೆ ಪ್ರತ್ಯೇಕವಾದ ಸುಖನಾಸಿ ಮತ್ತು ಗರ್ಭಗೃಹವಿದ್ದೂ, ಅಲ್ಲಿ ಶ್ರೀ ವೈದ್ಯನಾಥೇಶ್ವರ ಲಿಂಗವಿದೆ. ಎಡಗಡೆಗೆ ಪ್ರತ್ಯೇಕವಾದ ಗರ್ಭಗೃಹದಲ್ಲಿ ಆರ್ಕೇಶ್ವರ ಲಿಂಗವಿದ್ದೂ, ಸುಖನಾಸಿಗಳಲ್ಲಿ ಏನು ಇಲ್ಲದ ಖಾಲಿ ವಿಸ್ತಾರಗಳಿವೆ. ಇವೂ ಪ್ರತ್ಯೇಕವಾದ ಗರ್ಭಗೃಹ ಮತ್ತು ಸುಖನಾಸಿಗಳನ್ನು ಹೊಂದಿದ್ದು ಇವು ಸುಮಾರು ೬.೧/೨ ಅಡಿ ಅಗಲ ೬.೧/೨ ಅಡಿ ಉದ್ದವಾದ ವಿಸ್ತರತೆಯನ್ನು ಹೊಂದಿದೆ. ಈ ಮೂರು ಲಿಂಗಗಳಿಗೂ ಸೇರಿ ಮುಂದಿನ ಮುಖಮಂಟಪದಲ್ಲಿ ಒಂದು ಬಸವನ ವಿಗ್ರಹವಿದೆ. ಮುಖಮಂಟಪದ ಮುಂದಿನ ಬಲ ಭಾಗದಲ್ಲಿ ಶ್ರೀ ಮಲ್ಲಿಕಾರ್ಜುನಲಿಂಗ ಎಡಭಾಗದಲ್ಲಿ ಪಾತಾಳೇಶ್ವರ ಲಿಂಗವಿದೆ, ಇದರ ಮುಂದಿನ ನವರಂಗವು ವೀರಶೈವ ಧರ್ಮ ಪ್ರಾಬಲ್ಯತೆಯ ಕಾಲದಲ್ಲಿ ವಿಸ್ತರಣೆಗೊಂಡಿರುವುದೆಂದು ಹೇಳಬಹುದು. ಮುಂದಿನ ಪ್ರಾಂಗಣದಲ್ಲಿ ೪ ಚೌಕಾಕಾರದ ಕಂಬಗಳಿವೆ. ಈ ನವರಂಗದ ಕಂಬಗಳ ಬಲಭಾಗದಲ್ಲಿ ವೀರಭದ್ರಸ್ವಾಮಿ ಗರ್ಭಗೃಹವಿದ್ದೂ. ಅದರ ಪಕ್ಕದಲ್ಲಿ ದಕ್ಷಿಣದ ಬಾಗಿಲಿದ್ದೂ ಅದರ ಪಕ್ಕದಲ್ಲಿ ನಂದಿ ಮೇಲೆ ಆಸೀನವಾಗಿರುವ ಉಮಾಮಹೇಶ್ವರರ ವಿಗ್ರಹವಿದೆ. ಇದು ಇಲ್ಲಿನ ವಿಶೇಷಗಳಲ್ಲಿ ಒಂದು. ಶಿವನ ತೊಡೆಯ ಮೇಲೆ ಕುಳಿತಿರುವ ವಿಗ್ರಹವನ್ನು ನಾವೂ ಹಳೇಬೀಡಿನ ಹೊಯ್ಸಳೇಶ್ವರ ಮತ್ತು ಶಾಂತಲೇಶ್ವರ ದ್ವಿಕೂಟ ದೇವಾಲಯದ ಹೊರ ಗೋಡೆಯ ಮೇಲೆ, ಶಿವನ ಪಂಚ ವಿಶಂತಿ ಲೀಲೆಗಳನ್ನು ಕೆತ್ತರುವಲ್ಲಿ, ಹಾಗೂ ಲಕ್ಷ್ಮೇಶ್ವರದಲ್ಲಿನ ಸೋಮನಾಥ ದೇವಾಲಯಗಳಲ್ಲಿ ಕಾಣಬಹುದು. ಈ ಭಾಗದಲ್ಲಿ ಇಂತಹ ಶಿಲ್ಪಗಳು ನಮಗೆ ತೀರಾ ವಿರಳವಾಗಿರು ವುದೇ ಇಲ್ಲಿನ ವಿಶೇಷವೆನ್ನಬಹುದು.

ಮುಖಮಂಟಪದ ಎಡಪಾರ್ಶ್ವದಲ್ಲಿ ಅಂದರೆ ವೀರಭದ್ರನ ವಿಗ್ರಹದ ಎದುರಿಗೆ ಭದ್ರಕಾಳಿಯ ಗರ್ಭಗೃಹ ಅದರ ಪಕ್ಕಕ್ಕೆ ಉತ್ತರದ ದ್ವಾರ, ಅದರ ಪಕ್ಕದಲ್ಲಿ ಚಾಮುಂಡೇಶ್ವರಿಯ ಗರ್ಭಗೃಹಗಳಿದ್ದು, ನವರಂಗ ಮತ್ತು ಸುಖನಾಸಿಗೆ ಹೋಗುವ ದ್ವಾರದ ಪಾರ್ಶ್ವಗಳಲ್ಲಿರುವ ಗಣಪತಿ ಮತ್ತು ಸುಬ್ರಮಣ್ಯ ವಿಗ್ರಹಗಳು ಮಾತ್ರ ಇತ್ತೀಚಿನದೆಂದು ಹೇಳಬಹುದು. ಈ ಮುಖ ಮಂಟಪದ ಮಧ್ಯಭಾಗದಲ್ಲಿ ಒಂದು ದೊಡ್ಡ ಬಸವನ ವಿಗ್ರಹವಿದೆ. ಇದರ ಇನ್ನೊಂದು ವೈಶಿಷ್ಯತೆಯೆಂದರೆ ಈ ಬಸವನ ಶಿಲ್ಪವೂ ಶೈಲಿಯಲ್ಲಿ ನೊಳಂಬರ ಕಾಲದ ಸರಳ ಕೆತ್ತನೆಯಿಂದ ಕೂಡಿದೆ. ದೇವಾಲಯದ ಮೂರು ದ್ವಾರಗಳು ಮತ್ತು ಮುಖಮಂಟಪ ದಿಂದ ಸುಖನಾಸಿಗೆ ಹೋಗುವ ದ್ವಾರಗಳಲ್ಲಿ ಶೈವ ದ್ವಾರಪಾಲಕರನ್ನು ಕೆತ್ತಿದ್ದಾರೆ.

ಬಹುತೇಕ ಮೊದಲಿನ ಐದು ಗರ್ಭಗೃಹಗಳ ಜೊತೆಗೆ ನಂತರದ ಕಾಲದಲ್ಲಿ ನಾಲ್ಕು ಪ್ರತ್ಯೇಕ ಗರ್ಭಗೃಹಗಳು ಸೇರ್ಪಡೆಯಾಗಿ ಈಗ ಇದು ಒಂಬತ್ತು ಗರ್ಭಗೃಹಗಳನ್ನು

* # ೧೧೮, ತವನಿಧಿ, ಜೂನಿಯರ್ ಕಾಲೇಜು ರಸ್ತೆ, ನೆಲಮಂಗಲ-೫೬೨೧೨೩.










ಹೊಂದಿದೆ. ಆದ್ದರಿಂದ ಇದನ್ನು "ದೇವಾಲಯ ಸಮುಚ್ಚಯ" ವೆಂದು ಹೇಳಬಹುದು. ಈ ಸಮುಚ್ಚಾಲಯವೂ ಹಿಂದೆ "ನ್ಯಾಯದ ಛಾವಡಿಯು" ಆಗಿದ್ದಂತೆ ತೋರುತ್ತದೆ.

ಈ ಪಂಚಲಿಂಗೇಶ್ವರನ ದೇವಾಲಯದ ಜೀರ್ಣೋದ್ಧಾರ ಕಾರ್ಯವು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋಥ್ಥಾನ ಟ್ರಸ್ಟ್ ಮತ್ತು ಕರ್ನಾಟಕ ಪ್ರಾಚ್ಯ ವಸ್ತು ಸಂಗ್ರಹಾಲಯ ಇಲಾಖೆ ಮತ್ತು ಭಕ್ತಾದಿಗಳ ಸಹಯೋಗದಿಂದ ೧೦-೧೨-೨೦೧೧ರಂದು ಪ್ರಾರಂಭವಾಗಿ ೨೯-೧೨-೨೦೧೪ರಲ್ಲಿ ಪೂರ್ಣಗೊಂಡಿದೆ. ಈ ದೇವಾಲಯದ ಮುಂದಿನ ಎಡಭಾಗದಲ್ಲಿ ಒಂದು ಪ್ರತ್ಯೇಕ ಆಂಜನೇಯನ ಗುಡಿಯೂ ಇದ್ದು, ಅದು ಸಹ ನವೀಕರಣಗೊಂಡಿದೆ.



# ಕೋಟಿ ಶಂಕರ ಮತ್ತು ಲಕ್ಷ್ಮೀನರಸಿಂಹ ದೇವಾಲಯ ಕೊಟ್ಟಿನಕಲ್

**ನೆಲ್ಕುದ್ರಿ ಸದಾನಂದಪ್ಪ***

ಕಲ್ಯಾಣ ಚಾಳುಕ್ಯರ ಆಡಳಿತ ಅವಧಿಯಲ್ಲಿ ನೊಳಂಬ ವಾಡಿ-೩೨೦೦೦ ಪ್ರದೇಶವನ್ನು ಕ್ರಿ.ಶ. ೧೦೭೬ರಿಂದ ಉಚ್ಚಂಗಿ ಪಾಂಡ್ಯರು, ಮಹಾಮಂಡಳೇಶ್ವರ, ಕಾಂಚಿಪುರ ವರಾಧೀಶ್ವರ, ಪರಿಚ್ಛೇದಿಗಂಡ, ಯದ್ವಂಶಾಂಬರಧ್ಯುಮಣಿ, ಸುಭ್ಯಟಚೂಡಾಮಣಿ ಮುಂತಾದ ಬಿರುದುಗಳನ್ನು ಧರಿಸಿಕೊಂಡು, ಉಚ್ಚಂಗಿ ದುರ್ಗದಿಂದ ಆಡಳಿತ ನಡೆಸಿದರು. ಈ ಮನೆತನದ ಕೆಲವು ಮಹಾ ಮಂಡಳೇಶ್ವರರು ಏಕಕಾಲದಲ್ಲಿ ಇಬ್ಬರೂ ಅಧಿಕಾರ ಮಾಡಿರುವಂತೆ ಶಾಸನಗಳು ನಿರೂಪಿಸುತ್ತವೆ. ಇಲ್ಲಿ ಒಬ್ಬನಿಗೇ ಬೇರೆ ಬೇರೆ ಹೆಸರುಗಳಿದ್ದವೆಂಬುದು ಸ್ಪಷ್ಟವಾಗುವುದಿಲ್ಲ. ಇವರು ನೊಳಂಬಳಿಗೆ ಅಥವಾ ನೊಳಂಬ ವಾಡಿ-೩೨೦೦೦ ಹಾಗೂ ಸಾಂತಳಿಗೆ-೧೦೦೦ ಮತ್ತು ಕೆಲವು ಸಂದರ್ಭಗಳಲ್ಲಿ ಗಂಗವಾಡಿ-೯೬೦೦೦ ವಿಭಾಗಗಳ ಮೇಲೆ ಅಧಿಕಾರ ಹೊಂದಿರುವುದು ಶಾಸನಗಳಿಂದ ತಿಳಿಯುತ್ತದೆ.

ಹಾಗಾಗಿ ಪ್ರಾರಂಭದಲ್ಲಿ ಪಾಂಡ್ಯರು ಈ ವಿಭಾಗಗಳಲ್ಲಿ ಪ್ರತ್ಯೇಕ ಮಂಡಳೇಶ್ವರರಾಗಿ ಆಡಳಿತ ನಡೆಸಿರುವುದರಿಂದ ಏಕಕಾಲದಲ್ಲಿ ಇಬ್ಬರ ಹೆಸರುಗಳು ಶಾಸನಗಳಲ್ಲಿ ದಾಖಲಾಗಿವೆ. ಈಗಿನ ಬಳ್ಳಾರಿ ಜಿಲ್ಲೆ ನೊಳಂಬವಾಡಿ-೩೨೦೦೦ ಆಡಳಿತ ವಿಭಾಗದಲ್ಲಿ ಸೇರಿತ್ತು. ಉಚ್ಚಂಗಿ ಪಾಂಡ್ಯರ ಆಡಳಿತ ಕಾಲದಲ್ಲಿ ನಿರ್ಮಾಣಗೊಂಡ ಅಂದಿನ ಸ್ಮಾರಕಗಳು ಅವರ ಸಾಂಸ್ಕೃತಿಕ ಚರಿತ್ರೆಯ ಬರವಣಿಗೆಗೆ ಪ್ರಮುಖ ಆಕರಗಳಾಗಿವೆ.

ಶಾಸನ ಉಲ್ಲೇಖಿತವದ ಹೂವಿನಹಡಗಲಿ ತಾಲ್ಲೂಕಿನ ಕೊಟ್ಟಿನಕಲ್ ಗ್ರಮದ ಸ್ಮಾರಕದ ಸಂಕ್ಷಿಪ್ತ ವಿವರಣೆಯನ್ನು ಈ ಲೇಖನದಲ್ಲಿ ಚರ್ಚಿಸಿದೆ.

### ಕೋಟಿಶಂಕರ ದೇವಾಲಯ

ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ತಾಲ್ಲೂಕಿನ ಕೊಟ್ಟಿನಕಲ್ ಕ್ಯಾಂಪಿನ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ ನದಿಯ ದಂಡೆಯ ಮೇಲೆ ಈ ದೇವಸ್ಥಾನವಿದೆ. ಕೆಲವು ವರ್ಷಗಳ ಹಿಂದೆ ಈ ಪ್ರದೇಶದಲ್ಲಿ ಕಾಗನೂರು ಎಂಬ ಗ್ರಾಮ ಇತ್ತು ಎಂದು ಸ್ಥಳೀಯರು ಹೇಳುತ್ತಾರೆ. ಪ್ರಸ್ತುತ ದೇವಸ್ಥಾನವು ಗ್ರಾಮದಿಂದ ಮತ್ತು ಜನತೆಯ ಸಂಪರ್ಕದಿಂದ ದೂರದಲ್ಲಿದೆ. ಈ ದೇವಸ್ಥಾನದ ನಿರ್ಮಾಣದ ಕುರಿತ ಸ್ಪಷ್ಟವಾದ ದಾಖಲೆಗಳು ಈವರೆಗೆ ದೊರೆತಿಲ್ಲ.

ಆದರೆ ಇಲ್ಲೇ ಇರುವ ಕ್ರಿ.ಶ. ೧೨ನೇ ಶತಮಾನದ ಶಿಲಾಶಾಸನವೊಂದು ಈ ಕುರಿತು ಪರೋಕ್ಷ ಮಾಹಿತಿ ನೀಡುತ್ತದೆ. ಈ ಶಾಸನದಲ್ಲಿ ಕೊಟ್ಟಿನಕಲ್ಲಿನ ವಿವರ ಹಾಗೂ ಈ ದೇವಸ್ಥಾನಕ್ಕೆ ದಾನ ನೀಡಿದ ವಿವರವನ್ನು ದಾಖಲಿಸುತ್ತದೆ. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೧೪೪ರ ಸುಮಾರಿನಲ್ಲಿ ಈ ದೇವಸ್ಥಾನ ನಿರ್ಮಾಣವಾಗಿದೆ ಎಂದು ಊಹಿಸಬಹುದಾಗಿದೆ.

ಉಚ್ಚಂಗಿ ಪಾಂಡ್ಯರ ಅರಸ ಜಗದೇಕಮಲ್ಲ ವೀರಪಾಂಡ್ಯನ ಕಾಲದ ಈ ಶಾಸನವು ಕೊಟ್ಟಿನಕಲ್‌ನ ಚರ್ತುಸೀಮೆಯ ವಿವರವನ್ನು ನೀಡುತ್ತದೆ. ವೀರಪಾಂಡ್ಯ ದೇವನ ಸಂಧಿವಿಗ್ರಹಿ ದುರಂಧರನೂ ಆದ ವಿಪ್ರವಂಶ ಚೂಡಾಮಣಿ ಎಂದು ಪ್ರಸಿದ್ಧನಾದ ಶಂಕರದೇವ ಈ ಶಾಸನವನ್ನು ಹಾಕಿಸಿದ್ದಾನೆ. ಈ ಶಾಸನದಲ್ಲಿ ಕೊಟ್ಟಿಗನೂರ ಚತುಸ್ಸೀಮೆಯ ವಿವರ ಈ ಕೆಳಗಿನಂತಿದೆ.

ಶ್ರೀ ತುಂಗಾಭದ್ರಾದೇವಿಯಂ ಮೂಡಲು ಪಡವ ಮುಖವಾಗಿ ಪರಿತಂದ ಜಲಪ್ರವಾಹ ಆ ಜಲಪ್ರವಾಹದ ತೆಂಕಲು ಮುತ್ತದಭಾಗು, ಅಲ್ಲಿಂ ಮೂಡಲು ಬಸುರಿಯ ಮರಂಗಳು, ಅಲ್ಲಿಂ ಮೂಡಲಾಲದ ಮರಂಗಳಲ್ಲಿಂ ಮೂಡಲುಕಡಲ ಸರಿವಲ್ಲಿಂ ಮೂಡಲು ಬಿಳಿಯಕಲ್ಲಳ್‌ಅಲ್ಲಿಂ ಮೂಡಲು ಅಡಗನಕೆರೆಯ ಮಧ್ಯದಲ್ಲಿ ಬಸುರಿಯ ಮರಅಲ್ಲಿಂ ಮೂಡಲು ಶ್ವೇತ ಪಾಷಣ ಪಂಕ್ತಿ ಅಲ್ಲಿಂ ಬಡಗಣ ಹೆರೆ ಈ ಶಾಸನದಲ್ಲಿ ಹಂಪನೆರೆ ಅದರ ತೆಂಕಯಿಣ ಹೊರೆಯಿಂ ಪಡುವ ಮಾಗಡೆ ಜಲಪ್ರವಾಹ ಪಡುವ ಸಂಕನ ಕೆರೆಯ ಕೆಳಗಣ ಹುಣಸೇ ಅಲ್ಲಿಂಒಡುವ ಮುಖದಿ ತುಂಗಾಭದ್ರ ದೇವಿಯಿಂ ಮುಟ್ಟೆಕುಡೆ ಜಲಪ್ರವಾಹ ಈ ಚತುಸ್ಸೀಮೆಯ ಮಧ್ಯದಲ್ಲಿ ಕೋಟೆಶಂಕರ ಮತ್ತು ಲಕ್ಷ್ಮೀನರಸಿಂಹ

* ಸಹಾಯಕ ಪತ್ರಾಪಾಲಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.





ದೇವಸ್ಥಾನಗಳು ನಿರ್ಮಾಣವಾಗಿವೆ. ಈ ಶಾಸನದಲ್ಲಿ ತಿಳಿಸಿದಂತೆ ೪ ವಿವಿಧ ಸಂದರ್ಭದಲ್ಲಿ ದಾನ ನೀಡಿದ ವಿವರವಿವೆ. (೧) ೧೧.೧.೧೧೪೪ರ ಮಂಗಳವಾರ ಮಹಾಜನಗಳು ದೇವರ ಅಂಗಭೋಗಕ್ಕಂ ಚೈತ್ರ ಪವಿತ್ರಕ್ಕಂ ಈಶ್ವರ ಭಟ್ಟನಕೆರೆಯ ದಕ್ಷಿಣ ದಿಶಾಭಾಗದಲ್ಲು ಎರೆಯ ಭೂಮಿಯ ೫ ಮತ್ತರನ್ನು ಶಿವಮಯ್ಯ ನಾಯಕನು ದೇವರ ನೈವೇದ್ಯಕ್ಕೆ ಕಟ್ಟೆಯಿದೊಳಗೆ ಹುಣಿಸಿಯ ಗದ್ದೆ ಕಂಬ ೭೧೪ ಮುಂ ಧಾರಾಪೂರ್ವಕಂ ಮಾಡಿ ಬಿಟ್ಟರು (೨) ೨೪-೧೨-೧೧೪೮ರ ಶುಕ್ರವಾರ ವೀರಪಾಂಡ್ಯನ ಮಾವ ವಿಕ್ರಮಾದಿತ್ಯ ಅರಸರಿಗೆ  ಪುಣ್ಯವಾಗ ಲೆಂದು ಕೊಟ್ಟನೂರಿನ ಸಮಸ್ತ ಆದಾಯವನ್ನು ಮೂರು ಭಾಗಮಾಡಿ ಒಂದು ಭಾಗದೇವರಿಗೆ, ಉಳಿದೆರಡು ಭಾಗ ಬ್ರಾಹ್ಮಣ ಭೋಜನಕ್ಕೆ ನೀಡಿದನು. (೩) ೪-೬-೧೧೬೯ರ ಬುಧವಾರ ವಿಕ್ರಮಾದಿತ್ಯ ದೇವರ ನೈವೇದಕ್ಕೆ ೪ ಮತ್ತಾರು ಎರೆಭೂಮಿ ೫ ಮತ್ತಾರು ಕೆಂಗಾಡು ಧಾರೆಯೆರೆದು ನೀಡಿದನು. (೪) ೨೭-೭-೧೧೭೮ರ ಗುರುವಾರ ವಿಜಯ ಪಾಂಡ್ಯ ದೇವರು ಹಡಗಲಿಯಲ್ಲಿರುವ ಮಾಳಿಗೆ ಮನೆ ಮತ್ತು ಒಂದು ತೋಟವನ್ನು ಧಾರೆಯೆರೆದು ಕೊಟ್ಟಂತೆ ಈ ಶಾಸನದಲ್ಲಿ ಉಲ್ಲೇಖವಿದೆ. ಈ ಶಾಸನದಲ್ಲಿ ತೀಳಿಸಿದಂತೆ ಚತುಸ್ಸೀಮೆಯ ವಿವರ ಇಂದಿಗು ಜೀವಂತವಾಗಿರುವುದು ಒಂದು ವೈಶಿಷ್ಟತೆಯಾಗಿದೆ.

ಕ್ರಿ.ಶ. ೧೨೬೨ರ ಇನ್ನೊಂದು ಯಾದವರ ಮಹಾದೇವ ರಾಯನ ಶಾಸನ, ದಕ್ಷಿಣಕಾಶಿಯೆಂದು ಪ್ರಸಿದ್ಧ ಪಡೆದಿದ್ದ ತುಂಗಾಭದ್ರಾ ನದಿಯ ದಕ್ಷಿಣದ ದಂಡೆಯಲ್ಲಿನ ಸ್ವಯಂಭೂಶ್ರೀ ಕೋಟೆ ಶಂಕರದೇವರಿಗೆ ಕೊಟ್ಟಿಗನೂರಿನ ಮಧುವಯ್ಯನು ಆ ೫೦೦ ಕೈಯಲ್ಲಿ ಪಡೆದು ೫ ಮತ್ತಾರು ಭೂಮಿದಾನ ಬಿಟ್ಟ ಉಲ್ಲೇಖವಿದೆ.

ಈ ಎರಡು ಶಾನಸಗಳು 'ಕೋಟೆ ಶಂಕರದೇವಸ್ಥಾನದ ಬಗ್ಗೆ ಮಾಹಿತಿ ನೀಡುತ್ತವೆ.

## ವಾಸ್ತುಶಿಲ್ಪ

ನಿರಂದಾರ ಮಾದರಿಯ ಈ ದೇವಸ್ಥಾನವು ತುಂಗಭದ್ರಾನದಿಯ ದಕ್ಷಿಣದಂಡೆಯಲ್ಲಿದೆ. ಗರ್ಭಗೃಹ, ಅಂತರಾಳ, ನವರಂಗ ಅಥವಾ ಸಭಾಮಂಟಪವನ್ನು ಹೊಂದಿದ್ದು, ಕ್ಲೋರೈಟಿಕ್‌ಶಿಷ್ಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ಈ ದೇವಾಲಯವನ್ನು ಸಂಪೂರ್ಣ ವಾಗಿ ಜೀರ್ಣೋದ್ಧಾರ ಮಾಡುವ ಮೂಲಕ ನವೀಕರಿಸ ಲಾಗಿದೆ. ದೇವಾಲಯದ ಭಿತ್ತಿ ಸಂಪೂರ್ಣವಾಗಿ ಆಧುನಿಕ ರೂಪವನ್ನು ನೀಡಲಾಗಿದೆ. ಒಳಭಾಗದಲ್ಲಿ ಗರ್ಭಗೃಹ, ಅಂತರಾಳ, ನವರಂಗದಲ್ಲಿ ಕಂಭಗಳು ಮತ್ತು ಮೇಲ್ಛಾವಣೆ ಗಳಲ್ಲಿ ಮಾತ್ರ ದೇವಾಲಯದ ವಾಸ್ತುಶಿಲ್ಪದ ಮೂಲ ಭಾಗಗಳನ್ನು ಗುರುತಿಸಬಹುದು. ನವರಂಗದ ದಕ್ಷಿಣ ಮತ್ತು ಪೂರ್ವದ ಬಾಗಿಲುಗಳು ಪೂರ್ಣ ಆಧುನಿಕ ಶೈಲಿಯಲ್ಲಿವೆ.

ಪೂರ್ವಾಭಿಮುಖವಾಗಿರುವ ಈ ದೇವಸ್ಥಾನದ ಗರ್ಭಗೃಹದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಮೇಲ್ಛಾವಣಿಯಲ್ಲಿ ಮಗುಚಿದ ಚೌಕಪಟ್ಟಿಕೆಗಳ ಪದ್ಮದಳದ ರಚನೆಯಿಂದ ಅಲಂಕರಿಸಲಾಗಿದೆ. ಪ್ರವೇಶದ್ವಾರದ ಬಾಗಿಲ ವಾಡವು ಸರಳವಾಗಿದ್ದು ಐದು ಶಾಖೆಗಳಿಂದ ಅಲಂಕೃತ ಗೊಂಡಿದೆ. ಇದರ ಮಧ್ಯದಲ್ಲಿ ಪಂಚಕೋನದ ಸ್ಥಂಭ ಶಾಖೆಯನ್ನು ಕಾಣಬಹುದು. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ತೋರಲಾಗಿದೆ.

ಅಂತರಂಗವು ಸರಳವಾಗಿದ್ದು, ಇದರ ಮೇಲ್ಛಾವಣಿ ಯಲ್ಲಿ ಮುಗುಚಿದ ಪದ್ಮದ ಅಲಂಕರಣೆಯಿದೆ. ಪ್ರವೇಶದ್ವಾರದ ಬಾಗಿಲವಾಡದಲ್ಲಿ ಐದು ಶಾಖೆಗಳಿದ್ದು, ಪಂಚಕೋನಗಳು ಲತೆಯಿಂದ ಅಲಂಕೃತಗೊಂಡ ಕಂಭ ಮತ್ತು ಎರಡು ಬದಿಗಳಲ್ಲಿ ಚೌಕ ಪಟ್ಟಿಕೆಗಳಿವೆ. ಇದರ ಪಕ್ಕದಲ್ಲಿ ಜಾಲಂಧರ ಮತ್ತು ಈ ಜಾಲಂಧರದ ಕೆಳಭಾಗದಲ್ಲಿ ಪೂರ್ಣ ಕುಂಬವಿದೆ. ಲಲಾಟ ಭಾಗದಲ್ಲಿ ಬ್ರಹ್ಮ, ವಿಷ್ಣು ಮತ್ತು ಶಿವನ ಶಿಲ್ಪಗಳನ್ನು

ಸ್ಥಾನಿಕ ಭಂಗಿಯಲ್ಲಿ ವಾಹನಗಳ ಸಹಿತ ಕಂಡರಿಸಲಾಗಿದೆ. ಶಿವನ ಶಿಲ್ಪದಲ್ಲಿ ನಂದಿ ಮತ್ತು ಗಣೇಶನ ಶಿಲ್ಪಗಳಿವೆ. ಈ ತ್ರಿಮೂರ್ತಿಗಳನ್ನು ಮಂಟಪದ ಮುಂಭಾಗದಲ್ಲಿ ಕೆತ್ತಲಾಗಿದೆ. ಈ ಸರಳ ಮಂಟಪಗಳ ಎರಡು ಬದಿಯಲ್ಲೊಂದು ಮೊಸಳೆಗಳು ತಮ್ಮ ಬಾಯಿಂದ ಹೊರಟ ಹೂಬಳ್ಳಿಗಳಿಂದ ಅಲಂಕರಿಸಲ್ಪಟ್ಟ ಸುಂದರ ಮಕರ ತೋರಣವನ್ನು ಕಾಣಬಹುದು.

ನವರಂಗ ಅಥವಾ ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಚೌಕ ಕಂಬಗಳು, ಈ ಕಂಭಗಳ ಮಧ್ಯೆ ರಂಗ ವೇದಿಕೆಯಿದೆ. ಕಂಭಗಳು ಪೀಠಭಾಗದಲ್ಲಿ ಚೌಕಾಕಾರವಾಗಿದ್ದು ಸರಳವಾಗಿವೆ. ಕಾಂಡಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು ಚೌಕ ಪಟ್ಟಿಯಿಂದ ಅಲಂಕರಿಸಿದಂತೆ ಕಂಡುಬರುತ್ತದೆ. ಮೇಲಿನ ಭಾಗದಲ್ಲಿ 'ಜಂತ್ರಿ' ಹಿಡಿದು ಮಾಡಿರುವಂತೆ ವೃತ್ತಾಕಾರದ ಕಂಭದ ಭಾಗಗಳು ಕಂಡುಬರುತ್ತವೆ. ಈ ಕಂಭಗಳ ರಚನೆಗೆ ಕ್ಲೋರೈಟಿಕ್‌ಶಿಷ್ಟ್ ಶಿಲೆಗಳನ್ನು ಬಳಸಲಾಗಿದೆ. ದೇವಸ್ಥಾನದ ಪುನರ್ ನಿರ್ಮಾಣದ ಕಾಲದಲ್ಲಿ ಕಣಶಿಲೆಯ ಕಲ್ಲುಗಳಿಂದ ತೊಲೆಗಳನ್ನು ಜೋಡಿಸಲಾಗಿದೆ. ನವರಂಗದ ಮಧ್ಯಭಾಗವನ್ನು ಮುಗುಚಿದ ಪದ್ಮದಿಂದ ಮೇಲ್ಛಾವಣಿಯನ್ನು ಅಲಂಕರಿಸಲಾಗಿದೆ. ಉಳಿದಂತೆ ಇಲ್ಲಿ ಅಲಂಕೃತಗೊಂಡ ೧೦ ಅರೆಕಂಭಗಳು, ನವರಂಗದ ಮಂಟಪವನ್ನು ಹೊತ್ತು ನಿಂತಿವೆ. ಪೂರ್ವ ಮತ್ತು ಉತ್ತರದ ಪ್ರವೇಶದ್ವಾರಗಳು ಆಧುನಿಕ ಶೈಲಿಯಲ್ಲಿದ್ದು, ಕಪ್ಪುಶಿಲೆಯಿಂದ ರಚಿಸಲಾಗಿದೆ. ಮುಖಮಂಟಪ, ಶಿಖರ, ದೀಪಸ್ತಂಭ, ಧ್ವಜಸ್ತಂಭದ ಯಾವ ಕುರುಹುಗಳು ಇಲ್ಲಿ ದೊರೆಯುವುದಿಲ್ಲ. ಈ ದೇವಸ್ಥಾನದ ಬಲಬದಿಗೆ ಸ್ವಲ್ಪ ಎತ್ತರದಲ್ಲಿ ಲಕ್ಷ್ಮೀನರಸಿಂಹ ದೇವಸ್ಥಾನವನ್ನು ಕಾಣಬಹುದು.

## ಲಕ್ಷ್ಮೀನರಸಿಂಹ ದೇವಸ್ಥಾನ

ಪೂರ್ವಾಭಿಮುಖವಾಗಿರುವ ಈ ದೇವಸ್ಥಾನವು ಕೋಟಿಶಂಕರ ದೇವಸ್ಥಾನದ ಬಲಬದಿಯಲ್ಲಿದೆ. ಲಕ್ಷ್ಮೀನರಸಿಂಹ ದೇವಸ್ಥಾನದ ಮತ್ತು ಶಂಕರದೇವಸ್ಥಾನದ ವಾಸ್ತುಶೈಲಿಯಲ್ಲಿ ಸಾಮ್ಯತೆಯನ್ನು ಕಾಣಬಹುದು. ಆದರೆ ಇದು ಬಳಪದ ಶಿಲೆಯಿಂದ ರಚನೆಗೊಂಡಿದೆ. ಗರ್ಭಗೃಹ, ಶುಕನಾಸಿಗಳು ಮಾತ್ರ ಇದ್ದು ಶಂಕರದೇವಸ್ಥಾನದ ಪ್ರವೇಶ ದ್ವಾರದ ಶೈಲಿಯಲ್ಲಿಯೇ ಇದರ ಪ್ರವೇಶದ್ವಾರವು ಕಂಡು ಬರುತ್ತವೆ. ನವರಂಗ ಸಭಾಮಂಟಪ ಸಂಪೂರ್ಣವಾಗಿ ಶಿಥಿಲಗೊಂಡಿದೆ. ರಂಗವೇದಿಕೆಯ ಕುರುಹುಗಳು ಲಭ್ಯವಿದ್ದು ಕಂಭಗಳು ಕಂಡು ಬರುವುದಿಲ್ಲ. ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರದ ಲಕ್ಷ್ಮೀನರಸಿಂಹ ಕಿರೀಟ ಮುಕುಟ, ಕರ್ಣ, ಕಂಠಭಾರಣಗಳಿಂದ ಅಲಂಕೃತವಾಗಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು, ಹಿಂದಿನ ಎರಡು ಕೈಗಳಲ್ಲಿ ಶಂಕ, ಚಕ್ರಗಳಿವೆ. ಮುಂದಿನ ಒಂದು ಕೈ ಭಗ್ನವಾಗಿದ್ದು, ಮತ್ತೊಂದು ಕೈಯಲ್ಲಿ ಲಕ್ಷ್ಮೀಯನ್ನು ಆವರಿಸಿದೆ. ಲಕ್ಷ್ಮೀಯು ನರಸಿಂಹನ ಎಡತೊಡೆಯ ಮೇಲೆ ಕುಳಿತಿದ್ದಾಳೆ. ಬಲಕೈಯಲ್ಲಿ ಪದ್ಮ, ಎಡಕೈಯಲ್ಲಿ ನರಸಿಂಹನನ್ನು ಹಿಡಿದಿದ್ದಾಳೆ. ಹಿಂಭಾಗದಲ್ಲಿ ಪ್ರಭಾವಳಿ, ಮೇಲ್ಭಾಗದಲ್ಲಿ ಕೀರ್ತಿ ಮುಖವಿದೆ. ಇದು ಇಡೀ ಶಿಲ್ಪವನ್ನು ಅಲಂಕರಿಸಿದೆ. ಕೆಳಭಾಗದಲ್ಲಿ ಒಂದು ಅಡಿ ಎತ್ತರದ ಪೀಠ ಭಾಗದಲ್ಲಿ ವಿಷ್ಣುವಿನ ವಾಹನ ಗರುಡನನ್ನು ಮನುಷ್ಯನ ರೂಪದಲ್ಲಿ ಕೈ ಮುಗಿದು ಕುಳಿತಂತೆ ಚಿತ್ರಿಸಲಾಗಿದೆ. ದೇವಸ್ಥಾನವು ಸಂಪೂರ್ಣವಾಗಿ ಶಿಥಿಲವಾಗಿದೆ. ಹೊರಭಾಗದ ಭಿತ್ತಿ ಭಾಗವು ಅಲ್ಲಲ್ಲಿ ಹಾಳಾಗಿದೆ. ಶಿಖರವು ಪೂರ್ಣ ಹಾಳಾಗಿದ್ದು, ಕದಂಬ ನಾಗರ ಶೈಲಿಯ ಒಂದು ಪಟ್ಟಿಕೆ ಮಾತ್ರ ಕಂಡುಬರುತ್ತದೆ.

## ಗ್ರಂಥಋಣ


೧. ಕೆ. ವಿರೂಪಾಕ್ಷಗೌಡ, ೨೦೧೧, "ಆರನೇ ವಿಕ್ರಮಾದಿತ್ಯನ ಕಾಲದ ಕ್ರಿ.ಶ. ೧೧೪೮ರ ಕೊಟ್ಟನಕಲ್ ಶಿಲಾಶಾಸನ (ಒಂದು ಅಧ್ಯಯನ)", ವಿಕ್ರಮಾದಿತ್ಯ ಪ್ರಕಾಶನ, ಹೂವಿನಹಡಗಲಿ

೨. ಕರಣಂ ವಿರೂಪಾಕ್ಷಗೌಡ, ೨೦೧೨, "ಹೂವಿನಹಡಗಲಿ ತಾಲ್ಲೂಕು ಸಮಗ್ರ ಶಾಸನಗಳ ಅಧ್ಯಯನ", ಮಮತಾ ಎಂಟರ್‌ಪ್ರೈಸಸ್, ಬೆಂಗಳೂರು.

೩. ದೇವರಕೊಂಡಾರೆಡ್ಡಿ (ಪ್ರಸಂ.), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ–೧, ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ನಾಗಯ್ಯ ಜೆ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ.

೫. ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ–೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ಸುಂಕಾತೊಣ್ಣೂರು ಗ್ರಾಮದ ಪ್ರಾಚ್ಯಾವಶೇಷಗಳು

ಎಂ.ವಿ. ಭಾಸ್ಕರ*

**ಮ**ಂಡ್ಯ ಜಿಲ್ಲೆಯು ಒಂದು ಕೃಷಿ ಪ್ರಧಾನವಾದ ಜಿಲ್ಲೆಯಾಗಿದ್ದು, ಕಾವೇರಿ ಜಲಾನಯನ ಪ್ರದೇಶವಾದ ಇದು ಪ್ರಾಕೃತಿಕ ಸಂಪದ್ಭರಿತವಾದ ಪ್ರದೇಶವಾಗಿ ಮಾರ್ಪಟ್ಟಿದೆ. ಇದರಿಂದ ಇಲ್ಲಿ ಒಂದು ಶ್ರೀಮಂತ ಸಾಂಸ್ಕೃತಿಕ ಜೀವನವು ಜನರಲ್ಲಿ ಮೂಡಿದೆ. ಈ ಲೇಖನವು ಜಾನಪದ ಐತಿಹ್ಯ ಪೂರ್ವೇತಿಹಾಸ ಇತಿಹಾಸ ಆಧಾರಗಳನ್ನು ಕ್ರೋಢಿಕರಿಸಿ ಸ್ಥಳೀಯ ಇತಿಹಾಸವನ್ನು ತಿಳಿಯುವ ಒಂದು ಪ್ರಯತ್ನವಾಗಿದೆ.

ಮಂಡ್ಯ ಜಿಲ್ಲಾ ಕೇಂದ್ರದಿಂದ ಪಶ್ಚಿಮ ದಿಕ್ಕಿನಲ್ಲಿರುವ ಪಾಂಡವಪುರ ತಾಲ್ಲೂಕು, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಇತಿಹಾಸಕ್ಕೆ ಕಾರಣವಾಗುವ ಹಲವಾರು ಐತಿಹ್ಯ ಹಾಗೂ ಕುರುಹುಗಳನ್ನು ಹೊಂದಿ ಅಧ್ಯಯನ ಯೋಗ್ಯವಾದ ಒಂದು ಕ್ಷೇತ್ರವಾಗಿದೆ. ಈ ತಾಲ್ಲೂಕಿನ ಕೇಂದ್ರ ಭಾಗದಿಂದ ೧೦ ಕಿ.ಮೀ. ಪೂರ್ವಕ್ಕೆ ಇರುವ ಸುಂಕಾತೊಣ್ಣೂರು ಗ್ರಾಮ ಜಾನಪದ, ವಾಸ್ತುಶಿಲ್ಪ, ವೀರಗಲ್ಲುಗಳನ್ನು ಹಾಗೂ ಪೂರ್ವಾತಿಹಾಸದ ಕುರುಹುಗಳನ್ನೊಳಗೊಂಡ ಒಂದು ಐತಿಹಾಸಿಕ ಗ್ರಾಮವಾಗಿದೆ. ಈ ಪ್ರದೇಶವು ಹೊಯ್ಸಳರ ಕಾಲದ ಪ್ರಮುಖ ಕೇಂದ್ರವಾಗಿದ್ದ ಕೆರೆತೊಣ್ಣೂರಿಗೆ ತೆರಳುವ ಜನರು ಇಲ್ಲಿ ಸುಂಕವನ್ನು ಪಾವತಿಸುತ್ತಿದ್ದುದರಿಂದ ಈ ಗ್ರಾಮಕ್ಕೆ ಸುಂಕಾತೊಣ್ಣೂರು ಎಂಬ ಹೆಸರು ಬಂದಿದೆ. ಸುಂಕಾತೊಣ್ಣೂರು ಗ್ರಾಮದ ಹೊರಭಾಗದಲ್ಲಿ ದಕ್ಷಿಣ ದಿಕ್ಕಿಗೆ ಹಳೆಯದಾದ ಒಂದು ಸಣ್ಣ ಆಶ್ರಯ ರೂಪದ ಶಿಲಾ ರಚನೆ ಇದ್ದು, ನಾಲ್ಕು ಕಲ್ಲು ಚಪ್ಪಡಿಗಳ ಆಧಾರದ ಮೇಲೆ ದೊಡ್ಡದಾದ ಚಪ್ಪಡಿಕಲ್ಲೊಂದನ್ನು ಮೇಲಿಟ್ಟಿದೆ. ಅಕ್ಕಪಕ್ಕದಲ್ಲಿ ಕಲ್ಲುಚಪ್ಪಡಿಗಳ ಸಾಲಿದ್ದರೂ, ಅದರ ಮೇಲೆ ಚಪ್ಪಡಿ ಕಲ್ಲುಗಳು ಇರುವ ಬಗ್ಗೆ ಯಾವುದೇ ಕುರುಹುಗಳಿಲ್ಲ. ಇದೊಂದು ಸಣ್ಣ ದಿಬ್ಬದ ಮೇಲಿದೆ. ಇದರ ಹಿಂಭಾಗಕ್ಕೂ ಸಹ ಚಪ್ಪಡಿಕಲ್ಲೊಂದನ್ನು ಆಧಾರವಾಗಿ ನಿಲ್ಲಿಸಲಾಗಿದೆ. ಇದರ ಪಕ್ಕದಲ್ಲಿ ಒಂದು ಸಣ್ಣಕಲ್ಲಿನ ಮೇಲೆ ಅಸ್ಪಷ್ಟವಾದ ಚಿತ್ರಗಳು ಕೆತ್ತಲ್ಪಟ್ಟಿದೆ. ಕೆಲವು ಆರಾಧನಾ ಕುರುಹುಗಳಿಂದ ಇದೊಂದು ಪೂರ್ವಿಕರ ಆರಾಧನಾ ಸ್ಥಳವಾಗಿತ್ತು ಎಂದು ಊಹಿಸಬಹುದು. ಅಕ್ಕಪಕ್ಕ ಹೆಚ್ಚು ಕೃಷಿ ಭೂಮಿ ಇದ್ದುದರಿಂದ ಹೆಚ್ಚಿನ ಕ್ಷೇತ್ರ ಕಾರ್ಯ ಕೈಗೊಳ್ಳಲು ಸಾಧ್ಯವಾಗಲಿಲ್ಲ.

ಈ ಗ್ರಾಮದ ಪ್ರಮುಖ ಆರಾಧನಾ ದೇವತೆ ರಾಕ್ಷಸಮ್ಮ ಈ ದೇವಿಗಾಗಿ ಸಣ್ಣ ಗುಡಿಯೊಂದನ್ನು ಕಟ್ಟಲಾಗಿದೆ. ಇದೊಂದು ನವೀಕೃತ ಗುಡಿಯಾಗಿದೆ. ಗುಡಿಯು ಗರ್ಭಗುಡಿ ಹಾಗೂ ಹೊರಾಂಗಣವನ್ನು ಹೊಂದಿದೆ. ಸಾಮಾನ್ಯವಾದ ಕಲ್ಲುಚಪ್ಪಡಿಗಳ ಆಧಾರದ ಮೇಲೆ ಇದ್ದು, ಕಟ್ಟಡವು ನಂತರ ನವೀಕೃತವಾಗಿದೆ. ಗರ್ಭಾಲಯದಲ್ಲಿ ರಾಕ್ಷಸಮ್ಮ ಎಂದು ಪೂಜಿಸುವ ದೇವತೆಯ ಶಿಲೆಯಿದೆ. ಇದರಲ್ಲಿ ಇಬ್ಬರು ಸ್ತ್ರೀಯರ ಚಿತ್ರವು ಕೆತ್ತಲ್ಪಟ್ಟಿದ್ದು, ತಾಯಿ ಮಗಳ ರೂಪದಂತೆ ಕಾಣುತ್ತದೆ. ಶಿಲೆಯ ಮೇಲ್ಭಾಗದಲ್ಲಿ ಲಿಂಗದ ಚಿತ್ರವನ್ನು ಸಹ ಕೆತ್ತಲಾಗಿದೆ. ದಂತಕಥೆಯ ಪ್ರಕಾರ ರಾಕ್ಷಸಮ್ಮ ಎಂಬ ಸ್ತ್ರೀಗೆ ಮಗಳೊಬ್ಬಳು ಇದ್ದಳು. ಆಕೆಯನ್ನು ಕುಮಾರಬಲ್ಲಾಳ ಎಂಬ ಯುವಕ ಮೋಹಿಸುತ್ತಿದ್ದನು. ಇದನ್ನು ವಿರೋಧಿಸಿದ ರಾಕ್ಷಸಮ್ಮ ಆತನನ್ನು ಬೆನ್ನಟ್ಟಿದಾಗ ಆತ ಈ ಪ್ರದೇಶದ ಮುಖಂಡರ ಬಳಿ ಆಶ್ರಯ ಪಡೆದನು. ಇಲ್ಲಿನ ಮುಖಂಡರು ಅವರಿಬ್ಬರ ಸಮಸ್ಯೆಯನ್ನು ಮರುದಿನ ಬಗೆಹರಿಸುವುದಾಗಿ ವಾಗ್ದಾನವಿತ್ತು ಅವರಿಗೆ ವಿಶ್ರಾಂತಿಯ ವ್ಯವಸ್ಥೆಯನ್ನು ಕಲ್ಪಿಸಿದರು. ಆದರೆ ರಾಕ್ಷಸಮ್ಮ ಇರುಳಿನಲ್ಲಿ ಕುಮಾರಬಲ್ಲಾಳನನ್ನು ಕೊಂದು ಹಾಕಿದಳು. ಇದರಿಂದ ಮುಖಂಡರು ತಾವು ಮಾತಿಗೆ ತಪ್ಪಿದೆವು ಎಂಬ ಅಪರಾಧ ಭಾವನೆಯಿಂದ ಅಗ್ನಿಪ್ರವೇಶಕ್ಕೆ ಮುಂದಾದರು. ಆದರೆ ಗ್ರಾಮಸ್ಥರು ಅವರನ್ನು ತಡೆದರು. ಅವರಲ್ಲಿ ಒಬ್ಬ ಮುಖಂಡ ಗ್ರಾಮದ ಹೊರಭಾಗದಲ್ಲಿ ಅಗ್ನಿಪ್ರವೇಶ ಮಾಡಿದನು. ನಂತರ ಶಿವಪಾರ್ವತಿಯರು ಪ್ರತ್ಯಕ್ಷರಾಗಿ ಆತನನ್ನು ರಕ್ಷಿಸಿದರು. ನಂತರದ ದಿನಗಳಲ್ಲಿ ರಾಕ್ಷಸಮ್ಮ ಈ ಗ್ರಾಮದ ಅಳಿಯಂದಿರನ್ನು ಕೊಲ್ಲಲು ಆರಂಭಿಸಿದಾಗ ಗ್ರಾಮಸ್ಥರು ಪ್ರಾಣಿಬಲಿಯನ್ನು ನೀಡಿ ಆಕೆಯನ್ನು ಶಾಂತಗೊಳಿಸಿದರು ಎಂಬುದನ್ನು ಈ ದಂತಕಥೆಯ ಸಾರವಾಗಿದೆ.

ರಾಕ್ಷಸಮ್ಮನ ಗುಡಿಯ ಸುತ್ತಮುತ್ತಲು ಹಲವಾರು ವೀರಗಲ್ಲುಗಳು ಕಂಡು ಬರುತ್ತದೆ. ಇವುಗಳ ಸಂಖ್ಯೆ ೩೦ಕ್ಕೂ ಹೆಚ್ಚಿದೆ. ಈ ವೀರಗಲ್ಲುಗಳು ಒಂದೇ ರೀತಿಯಲ್ಲಿದ್ದು, ಮೂರು ಭಾಗಗಳನ್ನು ಹೊಂದಿದೆ. ಕೆಳಹಂತದಲ್ಲಿ ಹೋರಾಟದ ದೃಶ್ಯ,

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಸುಂಕಾತೊಣ್ಣೂರು, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ.

ಮಧ್ಯದಲ್ಲಿ ಸ್ವರ್ಗಾರೋಹಣ ಹಾಗೂ ಮೇಲ್ಭಾಗದಲ್ಲಿ ಶಿವಲಿಂಗ ಆರಾಧನಾ ನಿರತ ವ್ಯಕ್ತಿಯ ಶಿಲ್ಪವಿದೆ. ಆದ್ದರಿಂದ ಇದೊಂದು ಶೈವ ಪಂಥೀಯರ ವೀರಗಲ್ಲುಗಳು ಎಂದು ನಿರ್ಧರಿಸಬಹುದು. ಕೆಲವು ವೀರಗಲ್ಲುಗಳ ಮೇಲೆ ಸೂರ್ಯ ಚಂದ್ರರ ಉಬ್ಬು ಶಿಲ್ಪವನ್ನು ಸಹ ಕಾಣಬಹುದು. ಈ ಗುಡಿಯ ಆವರಣದಲ್ಲಿ ಬೃಂದಾವನ ಆಕಾರದ ಶಿಲಾಸ್ಮಾರಕವಿದೆ. ಗ್ರಾಮಸ್ಥರು ತಿಳಿಸುವಂತೆ ಇಲ್ಲಿ ಹಿಂದೆ ನಾರಾಯಣಸ್ವಾಮಿ ದೇವಾಲಯವಿದ್ದು. ರಾಕ್ಷಸಮ್ಮನ ದೇವಾಲಯದ ಪೂಜಾ ಪದ್ಧತಿಯಿಂದ ಅದನ್ನು ಸಮೀಪದ ಚನ್ನಕೇಶವ ದೇವಾಲಯಕ್ಕೆ ಸ್ಥಳಾಂತರಿಸಲಾಯಿತು. ಆದರೆ ಈ ಬೃಂದಾವನ ಸ್ಮಾರಕ ಮಾತ್ರ ಇಲ್ಲೇ ಇದೆ.

ಈ ಗ್ರಾಮದಲ್ಲಿನ ಪ್ರಮುಖ ದೇವಾಲಯಗಳಲ್ಲಿ ಚೆನ್ನಕೇಶವ ದೇವಾಲಯ ಒಂದು ಪ್ರಮುಖವಾದ ವಾಸ್ತುಶಿಲ್ಪ ಲಕ್ಷಣಗಳನ್ನು ಹೊಂದಿರುವ ರಚನೆಯಾಗಿದೆ. ಇದು ಗರ್ಭಗೃಹ, ಶುಖನಾಸಿ, ನವರಂಗ ಮತ್ತು ಮುಖಮಂಟಪ ಗಳನ್ನು ಹೊಂದಿದೆ. ಇದು ಹೊಯ್ಸಳ ಒಂದನೇ ನರಸಿಂಹನ ಕಾಲದ ನಿರ್ಮಿತಿ ಎಂದು ಶಾಸನದಿಂದ ತಿಳಿದುಬಂದಿದೆ.[೧] ಒಂದನೇ ನರಸಿಂಹ ಕಮ್ಮೇ ಪಂಗಡಕ್ಕೆ ಸೇರಿದ ಕೌಶಿಕ ಗೋತ್ರದ ಕೊಮ್ಮರಾಜ ಎಂಬುವವನಿಗೆ ನೀಡಿದ ಭೂದಾನದ ಬಗ್ಗೆ ಇದು ತಿಳಿಸುತ್ತಾ, ಆತನ ಪತ್ನಿ ದೇಚಲೆ ಎಂದು, ಆಕೆ ಸೌಂದರ್ಯದಲ್ಲಿ ಗೋಮಿನಿ, ಭವ್ಯತೆಯಲ್ಲಿ ಗಿರಿಜೆ, ಪತಿಭಕ್ತಿ ಯಲ್ಲಿ ಸೀತೆ ಎಂದಿದೆ. ಇದರೊಂದಿಗೆ ವಿಷ್ಣುವರ್ಧನನ ದಂಡಯಾತ್ರೆಯ ಬಗ್ಗೆಯೂ ಸಹ ಇದು ಮಾಹಿತಿ ಒದಗಿಸು ತ್ತದೆ. ಇದೊಂದು ವೈಭವೋಪಿತವಾದ ದೇವಾಲಯವಾಗಿರದೇ ಸಾಮಾನ್ಯ ಅಲಂಕರಣಗಳನ್ನೊಳಗೊಂಡ ಹೊಯ್ಸಳ ದೇವಾಲಯವಾಗಿದೆ. ಇದರ ಪ್ರವೇಶ ದ್ವಾರದಲ್ಲಿ ಒಂದು ಚೌಕಾಕಾರದ ಮಂಟಪವಿದ್ದು, ಅದರ ಹಿಂಬದಿಯಲ್ಲಿ ಗರುಡ ಸ್ತಂಭವಿದೆ. ಪಶ್ಚಿಮಕ್ಕೆ ಗರುಡನ ಶಿಲ್ಪವಿದ್ದು, ಉಳಿದೆಡೆ ಯಾವುದೇ ಶಿಲ್ಪದ ಚಿತ್ರವಿಲ್ಲ. ಇದರ ಬಲಭಾಗಕ್ಕೆ ಬೃಂದಾವನ ವನ್ನು ಹೋಲುವ ಶಿಲಾರಚನೆಯಿದ್ದು, ೩.೫x೩.೫ ವಿಸ್ತೀರ್ಣ ದಲ್ಲಿದೆ. ಈ ಮಂಟಪದ ಮುಂಭಾಗದಲ್ಲಿ ಶಂಕ ಚಕ್ರಗಳನ್ನು ಕೆತ್ತಲ್ಪಟ್ಟಿದ್ದು, ಮಧ್ಯದಲ್ಲಿ ಕೃಷ್ಣ ಚಿತ್ರವನ್ನು ಕೆತ್ತಲಾಗಿದೆ. ದೇವಾಲಯದ ಎಡಭಾಗದಲ್ಲಿ ಶಿಲಾಫಲಕವೊಂದಿದ್ದು, ರಾಕ್ಷಸಮ್ಮನ ದೇವಾಲಯದ ಬಳಿ ಇದ್ದ ನಾರಾಯಣಸ್ವಾಮಿ ದೇವಾಲಯದ ಶಿಲಾಫಲಕ ಇದೆಂದು ಸ್ಥಳೀಯರು ಮಾಹಿತಿ ನೀಡಿದರು. ದೇವಾಲಯದ ಬಲಪಾರ್ಶ್ವದಲ್ಲಿ ಪೂರ್ವಾಭಿ ಮುಖವಾಗಿ ಗ್ರಾಮದ ಹಾಗೂ ದೇವಾಲಯದ ಬಗ್ಗೆ ತಿಳಿಸುವ ಒಂದನೇ ನರಸಿಂಹನ ಕಾಲದ ಶಾಸನವಿದೆ. ಶಾಸನದ ಮೇಲ್ಭಾಗದಲ್ಲಿ ಶಂಕ, ಚಕ್ರ, ಗದಾ, ಅಭಯಹಸ್ತ ಮುದ್ರೆಯಲ್ಲಿ ರುವ ಲಕ್ಷ್ಮೀನಾರಾಯಣನ ಶಿಲ್ಪ ಗರುಡ ವಾಹನ ರೂಪ ದಲ್ಲಿದೆ. ಲಕ್ಷ್ಮೀ ನಾರಾಯಣನ ಎಡತೊಡೆಯ ಮೇಲೆ ಆಸೀನ ಳಾಗಿದ್ದು, ಈ ಕೆತ್ತನೆಯ ಅಕ್ಕಪಕ್ಕದಲ್ಲಿ ಸೂರ್ಯಚಂದ್ರರ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಸೂರ್ಯನ ಕೆಳಭಾಗದಲ್ಲಿ ಹಸು ಸಹಿತ ಕರುವಿನ ಚಿತ್ರದ ಉಬ್ಬು ಶಿಲ್ಪವಿದೆ. ಚಂದ್ರನ ಕೆಳಭಾಗದಲ್ಲಿ ಸುದರ್ಶನಚಕ್ರದ ಉಬ್ಬು ಶಿಲ್ಪವಿದೆ. ಇದು ಏರು ವಿನ್ಯಾಸದ ದೇವಾಲಯವಾಗಿದ್ದು, ಪಾದಬಂದ, ಅಧಿಷ್ಠಾನ, ವೇದಿ, ಗರ್ಭ ಗೃಹಗಳನ್ನು ಹೊಂದಿದೆ. ದ್ರಾವಿಡ ಮಾದರಿಯ ಹೊಯ್ಸಳ ಶಿಖರವನ್ನು ಹೊಂದಿದ ಅಧಿಷ್ಠಾನ, ಉಪಾನ, ಜಗತಿ ಅರ್ಧ ಕುಮುದ, ಚಾಚುಕುಮುದ, ಕಂಠಿಕ, ದಂತಪಂಕ್ತಿ, ವೇಳಾ ಪಟ್ಟಿಕಗಳನ್ನು ಹೊಂದಿದೆ. ಭಿತ್ತಿಯಲ್ಲಿ ಅರೆಕಂಬಗಳನ್ನು ಹೊಂದಿದ್ದು, ಅದರಲ್ಲಿ ಸ್ತಂಭ ಪಂಜರ ಹಾಗೂ ಕೋಷ್ಠ ಪಂಜರಗಳಿವೆ. ಈ ರೀತಿಯ ಅಲಂಕರಣವು ದೇವಾಲಯದ ಮೂರು ಕಡೆ ಇದ್ದು, ದ್ರಾವಿಡ ಮಾದರಿಯ ಶಿಖರವನ್ನು ಕೆತ್ತಲಾಗಿದೆ. ಇಲ್ಲಿನ ಶಿಲ್ಪಗಳು ಹೆಚ್ಚಾಗಿ ಅಲಂಕೃತ ಗೊಂಡಿಲ್ಲ.

ದೇವಾಲಯದ ಒಳಭಾಗವು ನವರಂಗ ಹಾಗೂ ಗರ್ಭಗೃಹವನ್ನು ಹೊಂದಿದೆ. ನವರಂಗದಲ್ಲಿ ಹದಿನಾರು ಕಂಬಗಳ ಸಾಲಿದ್ದು, ಗರ್ಭಗೃಹದ ಮುಂಭಾಗದಲ್ಲಿ ಜಯ–ವಿಜಯರ ಶಿಲ್ಪವಿದೆ. ಗರ್ಭಗೃಹದಲ್ಲಿ ಶ್ರೀಚನ್ನಕೇಶ್ವರ ದೇವರ ವಿಗ್ರಹವು ಎರಡು ಅಡಿ ಪೀಠದ ಮೇಲಿದೆ. ಚನ್ನಕೇಶವನ ಬಲಭಾಗದಲ್ಲಿ ಭೂದೇವಿ, ಎಡಭಾಗದಲ್ಲಿ ಶ್ರೀದೇವಿಯ ವಿಗ್ರಹ ವಿದೆ. ಪೀಠದ ಮುಂಭಾಗದಲ್ಲಿ ಗರುಡನ ಶಿಲ್ಪವಿದೆ. ಚನ್ನಕೇಶವ ದೇವರ ವಿಗ್ರಹವು ಚರ್ತುಬಾಹುವಾಗಿದ್ದು, ಹಿಂಬದಿಯ ಬಾಹುಗಳು ಶಂಕ ಚಕ್ರಗಳನ್ನು ಹೊಂದಿದೆ. ಮುಂಬದಿಯ ಬಾಹುಗಳಲ್ಲಿ ಗದೆ ಹಾಗೂ ಅಭಯಮುದ್ರೆಗಳನ್ನು ತೋರುವ ರೀತಿಯಲ್ಲಿದೆ. ಭೂದೇವಿ ಹಾಗೂ ಶ್ರೀದೇವಿಯರ ವಿಗ್ರಹಗಳು ಸುಮಾರು ೧.೫ ಅಡಿ ಎತ್ತರವಿದೆ. ಈ ವಿಗ್ರಹಗಳು ಕಮಲಹಸ್ತ ಹಾಗೂ ಅಭಯಮುದ್ರೆಗಳನ್ನು ತೋರುತ್ತಿದೆ. ಗರ್ಭಗೃಹದ ದ್ವಾರದ ಮೇಲೆ ವೈಖಾಸನನ ಶಿಲ್ಪವಿದೆ.



## ಆಕರಗಳು


೧. ಎಫಿಗ್ರಾಫಿ ಕರ್ನಾಟಿಕಾ, ಸಂ. ೬, ೧೯೭೭, ಪಾಂಡವಪುರ. ಪು. ೨೩೭.

೨. ಪ್ರೊ. ಎಂ. ಕೃಷ್ಣೆಗೌಡ (ಸಂ.), ಲೋಕಪಾವನ, ಪು. ೨೦೧.

೩. ಡಾ. ಸಿ. ಮಹಾದೇವು (ಸಂ.), ತೊಣ್ಣೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩, ಪು. ೨೩, ೧೬೯, ೧೭೦.

೪. ಟಿ.ಎ. ಪಾರ್ಥಸಾರಥಿ (ಸಂ.), ಮಂಡ್ಯ ಜಿಲ್ಲಾ ಗಜೆಟಿಯರ್, ೨೦೦೩, ಪು. ೯೮೩.

೫. ಸುಂಕಾತೊಣ್ಣೂರು ಗ್ರಾಮದಲ್ಲಿ ನಡೆಸಿದ ಕ್ಷೇತ್ರಕಾರ್ಯ.



# ಶೆಳ್ಳಗಿ ಮಾರುತಿ ಮಂಟಪ

ಡಾ. ರಮೇಶ ನಾಯಕ*

**ಯಾ**ದಗಿರಿ ಜಿಲ್ಲೆಯ ಸರುಪುರ ತಾಲೂಕಿನ ಶೆಳ್ಳಗಿ ಗ್ರಾಮದಲ್ಲಿ ಈ ಪ್ರಾಚೀನ ಸ್ಮಾರಕವು ಕಂಡುಬರುತ್ತದೆ. ಕೃಷ್ಣಾನದಿ ದಂಡೆಯ ಮೇಲಿರುವ ಈ ದೇವಾಲಯವು ಪ್ರಸ್ತುತ ಗ್ರಾಮದಿಂದ ಸುಮಾರು ಒಂದು ಮೈಲಿ ಅಂತರದಲ್ಲಿದೆ. ಸ್ಥಳೀಯವಾಗಿ ಇದನ್ನು ಮಂಟಪ ಎಂತಲೂ ಕರೆಯುವುದುಂಟು. ನದಿ ದಂಡೆಯಲ್ಲಿಯೇ ಇರುವ ಈ ಸ್ಮಾರಕವು ಕಾಲಕಾಲಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಧಕ್ಕೆಗೆ ಒಳಗಾಗಿರುವುದನ್ನು ಕಾಣಬಹುದು. ಕೆಲವೊಮ್ಮೆ ನದಿಯು ತನ್ನ ಒಡಲು ಮೀರಿ ಪ್ರವಹಿಸುವುದರಿಂದ ನೀರಿನಲ್ಲಿ ಸಂಪೂರ್ಣವಾಗಿ ಈ ಸ್ಮಾರಕವು ಮುಳುಗಿರುವುದುಂಟು. ನಿರಂತರವಾಗಿ ನೈಸರ್ಗಿಕ ವಿಕೋಪಕ್ಕೆ ತುತ್ತಾಗಿರುವುದರಿಂದ ಪ್ರಸ್ತುತ ಸ್ಮಾರಕವು ಕಾಲಕಾಲಕ್ಕೆ ಪೂರ್ಣ ಪ್ರಮಾಣದ ಜೀರ್ಣೋದ್ಧಾರ ಕ್ರಿಯೆಗೂ ಒಳಗಾಗಿದ್ದರೂ, ನಿಸ್ಸಂಶಯವಾಗಿ ಸ್ಮಾರಕಕ್ಕೆ ಸಂಬಂಧಿಸಿದ ಪ್ರಾಚೀನ ಸಾಕ್ಷಿಗಳು ಹೆಚ್ಚಿನ ಪ್ರಮಾಣದಲ್ಲಿ ಇಂದಿಗೂ ಉಳಿದುಕೊಂಡಿರುವುದನ್ನು ಗಮನಿಸಬಹುದು.

ಈ ಸ್ಮಾರಕದ ಮೂಲ ಹೆಸರು ಏನಾಗಿತ್ತು ಎಂಬುದು ಖಚಿತವಾಗಿ ತಿಳಿಯುವುದಿಲ್ಲ. ಆದರೆ ರಾಷ್ಟ್ರಕೂಟ ಕಾಲಕ್ಕೆ ಸಂಬಂಧಿಸಿದ್ದೆನ್ನಬಹುದಾದ ಒಂದು ಶಾಸನವು ಇದೇ ಗ್ರಾಮದಲ್ಲಿ ದೊರಕಿರುವ ಮಾಹಿತಿ ಪ್ರಕಟವಾಗಿದೆ (ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂ. ೮೦, ಶೆಳ್ಳಗಿ, ಪು. ೧೬೭). ಆದರೆ ಈ ಶಾಸನವು ಪ್ರಸ್ತುತ ದೇವಾಲಯ ಕುರಿತು ಯಾವ ವಿವರಗಳನ್ನು ನೀಡುವುದಿಲ್ಲ. ಅದರಲ್ಲಿರುವ ಅಕ್ಷರಗಳು ಹೆಚ್ಚಿನ ಪ್ರಮಾಣದಲ್ಲಿ ತೃಟಿತಗೊಂಡಿದ್ದರಿಂದ ವಿವರಗಳಲ್ಲಿರುವ ಸ್ಪಷ್ಟತೆ ಕಂಡುಬರುವುದಿಲ್ಲ. ಆದರೂ ಶಾಸನದಲ್ಲಿ ದಾಖಲಾದ ಅಕ್ಷರ ಅಥವಾ ಲಿಪಿಗಳ ಸ್ವರೂಪದ ಹಿನ್ನೆಲೆಯಲ್ಲಿ ಇದು ರಾಷ್ಟ್ರಕೂಟರ ಕಾಲದ್ದು ಎಂಬುದರಲ್ಲಿ ಯಾವ ಅನುಮಾನಗಳಿಲ್ಲ ಎಂಬ ಅಭಿಪ್ರಾಯಗಳಿವೆ. ಆದರೆ ಈ ಶಾಸನವು ಗ್ರಾಮದ ಕುರಿತಾಗಲಿ ಅಥವಾ ಸ್ಮಾರಕ ಕುರಿತಾಗಲಿ ಯಾವುದೇ ಮಾಹಿತಿ ನೀಡುವುದಿಲ್ಲ.

ಕ್ರಿ.ಶ. ೧೧೮೪ರ ತೇದಿಯ ಕಲ್ಯಾಣದ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಆಳ್ವಿಕೆಗೆ ಸಂಬಂಧಿಸಿದ ಮಾಹಿತಿ ನೀಡುವ ಎಮ್ಮಡಗಿ ಅಥವಾ ಹೆಮ್ಮಡಗಿ ಶಾಸನವು (ಸುರಪುರ, ಕೃಷ್ಣ ಎ (ಪ್ರ.ಸಂ.) ಸಗರನಾಡ ದರ್ಶನ, ಪುಟ.೧೦೪-೧೨೧). ಪ್ರಸ್ತುತ ಗ್ರಾಮಕ್ಕೆ ಸಂಬಂಧಿಸಿದಂತೆ ಪ್ರಾಚೀನ ಸಂಗತಿಗಳನ್ನು ವಿವರಿಸುತ್ತದೆ. ಶೆಳ್ಳಗಿಯನ್ನು ಸೆಲದಹಳ್ಳಿ, ಸಲದಳ್ಳಿ, ಸೆಲೆಯಹಳ್ಳಿ ಮತ್ತು ಸಲದಳ್ಳಿ ಅಥವಾ ಶಾಡದಳ್ಳಿ ನೆಲೆವೀಡು ಎಂದು ಉಲ್ಲೇಖಿಸಲಾಗಿದೆ. ಈ ರಾಜಧಾನಿ ಪಟ್ಟಣದಲ್ಲಿಯೇ ನಾಲ್ಕನೆಯ ಸೋಮೇಶ್ವರ ತನ್ನ ಜೀವಿತಾವಧಿಯ ಕೊನೆಯ ದಿನಗಳನ್ನು ಸವೆಸಿದನೆಂದು ಅಭಿಪ್ರಾಪಟ್ಟಿದೆ. ಪ್ರಾಯಶಃ ಈ ಅಭಿಪ್ರಾಯವು ಸುಯುಕ್ತಿಯಿಂದ ಕೂಡಿದ್ದು ಎಂದು ಪರಿಭಾವಿಸಬಹುದು. ರಾಷ್ಟ್ರಕೂಟ ಕಾಲಕ್ಕಿಂತ ಪೂರ್ವದಲ್ಲಿಯೇ ಸ್ಮಾರಕ ನಿರ್ಮಾಣದಂತಹ ಚಟುವಟಿಕೆಗಳು ನಡೆದಿರಬಹುದು. ಪ್ರಸ್ತುತ ಮಾರುತಿ ಮಂಟಪ ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ಈ ದೇವಾಲಯವು ರಾಷ್ಟ್ರಕೂಟ ಕಾಲದಲ್ಲಿಯೇ ನಿರ್ಮಾಣವಾಗಿದ್ದಿರಬಹುದೆಂದು ಖಚಿತವಾಗಿ ಅಭಿಪ್ರಾಯಕ್ಕೆ ಬರಬಹುದು. ಕ್ರಿ.ಶ.೯-೧೦ನೆಯ ಶತಮಾನದಲ್ಲಿಯೇ ರಚಿಸಲ್ಪಟ್ಟಿರುವ ಈ ಕಟ್ಟಡವು ನದಿಯ ಪ್ರವಾಹ ಹಾಗೂ ನೈಸರ್ಗಿಕ ವಿಕೋಪದಿಂದಾಗಿ ಆ ಕಾಲದಿಂದಲೂ ಹೆಚ್ಚಿನ ಧಕ್ಕೆಗೆ ಒಳಗಾಗುತ್ತಾ ಬಂದಿರುವುದು, ಅದರ ಮಹತ್ವ ಅಥವಾ ಪ್ರಸ್ತುತತೆ ಅರಿತು ಆಯಾ ಕಾಲದಲ್ಲಿ ಆಡಳಿತ ನಿರ್ವಹಿಸಿದ ಆಡಳಿತ ವರ್ಗವು ಕಾಲಕಾಲಕ್ಕೆ ಈ ದೇವಾಲಯವನ್ನು ಜೀರ್ಣೋದ್ಧಾರ ಚಟುವಟಿಕೆಗಳಿಗೆ ಒಳಪಡಿಸುತ್ತಾ ಬಂದಿರುವುದು, ಈ ಸ್ಮಾರಕವು ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ ಹಾಗೂ ವಿಜಯನಗರ ಕಾಲದಲ್ಲಿ ದುರಸ್ತಿ ಕಾರ್ಯಗಳಿಗೆ ಒಳಗಾಗಿರುವುದನ್ನು ಗುರುತಿಸಬಹುದು. ಪ್ರಮುಖವಾಗಿ ವಿಜಯನಗರ ಅವಧಿಯಲ್ಲಿ ಈ ಸ್ಥಳವು ಇನ್ನೂ ಹೆಚ್ಚಿನ ಮಹತ್ವ ಪಡೆದು ವೈಷ್ಣವ ಅನುಯಾಯಿಗಳ ಶ್ರದ್ಧಾ ಕೇಂದ್ರವಾಗಿ ಮಾರ್ಪಟ್ಟಿತು.

## ದೇವಾಲಯದ ವಿವರ

ಮಾರುತಿ ಮಂಟಪ ಅಥವಾ ದೇವಾಲಯ ಎಂಬ ಹೆಸರಿನಿಂದ ಸಂಬೋಧಿಸಲ್ಪಡುತ್ತಿರುವ ಈ ಸ್ಮಾರಕವು ದಕ್ಷಿಣಾಭಿಮುಖವಾಗಿದೆ. ಆರಂಭದಲ್ಲಿ ಇದು ಪೂರ್ವಾಭಿಮುಖವಾಗಿದ್ದಿರಬಹುದು. ವಿಶಾಲ ಪ್ರಾಂಗಣ ಹಾಗೂ ಅದಕ್ಕೆ

* ಸಹ ಪ್ರಾಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬.

ಹೊಂದಿಕೊಂಡೇ ಹರಿಯುವ ನದಿಯ ಪರಿಸರವು ಈ ಸ್ಥಳದ ಸೊಬಗನ್ನು ಹೆಚ್ಚಿಸಿದಂತೆ ಭಾಸವಾಗುತ್ತದೆ. ಗರ್ಭಗೃಹ, ಆಯತಾಕಾರ ವಿನ್ಯಾಸ ಹೊಂದಿದೆ. ನವರಂಗ ಹಾಗೂ ವಿಶಾಲವಾದ ಪ್ರಾಂಗಣ ದೇವಾಲಯಕ್ಕಿರುವುದು. ವಿಶಾಲವಾದ ಪ್ರಾಂಗಣ ಮಂಟಪವೇ ಸ್ಮಾರಕದ ಪ್ರಮುಖ ಆಕರ್ಷಣೆ ಆಗಿದೆ. ಈ ಮಂಟಪವು ಕಲ್ಯಾಣದ ಚಾಲುಕ್ಯೋತ್ತರ ಅವಧಿಯಲ್ಲಿ ನಿರ್ಮಿಸಿದ್ದರೂ ಅದರಲ್ಲಿರುವ ಕಂಬಗಳು ಮಾತ್ರ ಪ್ರಾಚೀನವಾದವುಗಳು ಎಂಬುದರಲ್ಲಿ ಅನುಮಾಗಳಿಲ್ಲ. ಪ್ರಾಯಶಃ ಅವು ರಾಷ್ಟ್ರಕೂಟ ಮತ್ತು ಕಲ್ಯಾಣದ ಚಾಲುಕ್ಯರ ಕಾಲದ ನಿರ್ಮಿತಿಗಳು ಎಂದು ಖಚಿತವಾಗಿ ಅಭಿಪ್ರಾಯಪಡಬಹುದು.

ಮಂಟಪದಲ್ಲಿರುವ ಕಂಬಗಳು ಪೀಠ, ಪಾದ, ದಂಡಾಗ್ರ, ಕಲಶ, ಫಲಕ ಹಾಗೂ ಬೋದಿಗೆ ರಚನೆ ಹೊಂದಿವೆ. ಮಧ್ಯಭಾಗದಲ್ಲಿ ಹದಿನಾರು ಪಟ್ಟಿಕೆಗಳಿದ್ದು ಅವುಗಳನ್ನೆಲ್ಲ ಜೋಡಿಸಿ ಕಟ್ಟಿದಂತೆ ಕಾಣುವ ಅಡ್ಡಪಟ್ಟಿಕೆಯನ್ನು ಕಂಬಗಳಲ್ಲಿ ಕಂಡರಿಸಲಾಗಿದೆ. ಮಂಟಪದಲ್ಲಿರುವ ಕೆಲವು ಕಂಬಗಳಲ್ಲಿ ಮಾತ್ರ ಉಬ್ಬುಶಿಲ್ಪಗಳಿವೆ. ಅವುಗಳಲ್ಲಿ ಹೆಚ್ಚಿನವು ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ ಕಥನ ವಿವರಗಳನ್ನು ಒಳಗೊಂಡಿವೆ. ಕ್ರಿ.ಶ. ೧೫-೧೬ನೆಯ ಶತಮಾನದ ಕಾಲಾವಧಿಯಲ್ಲಿ ರಚನೆಯಾಗಿರುವ ಈ ಕಂಬಗಳು ಮಂಟಪದಲ್ಲಿರುವುದನ್ನು ಗಮನಿಸಬಹುದು.

ರಾಷ್ಟ್ರಕೂಟ ಮತ್ತು ಕಲ್ಯಾಣದ ಚಾಲುಕ್ಯರ ಆಡಳಿತಾವಧಿಯಲ್ಲಿ ನಿರ್ಮಾಣಗೊಂಡ ಕಂಬಗಳು ಸರಳ ರಚನೆಗಳಿಂದ ಕೂಡಿದವುಗಳಾಗಿದ್ದರೇ, ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿರುವ ಕಂಬಗಳಲ್ಲಿ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಅವುಗಳಲ್ಲಿಯೂ ವಿಷ್ಣವಿನ ಅವತಾರಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಇಂಥ ಲಕ್ಷಣಗಳಿಂದ ತಿಳಿಯಬಹುದಾದ ಅಂಶಗಳೆಂದರೆ ಕೃಷ್ಣಾ ಮತ್ತು ಭೀಮಾನದಿಗಳ ನಡುವಣ ವಿಸ್ತಾರ ಪ್ರದೇಶವಾಗಿರುವ ಸಗರನಾಡಿನಲ್ಲಿ ವೈಷ್ಣವ ಮತದ ಪ್ರಸರಣ ಮತ್ತು ಪ್ರಭಾವದ ಹೆಜ್ಜೆ ಗುರುತುಗಳನ್ನು ಸ್ಪಷ್ಟವಾಗಿ ಗುರುತಿಸಬಹುದು.

ಈ ದೇವಾಲಯಕ್ಕೆ ಸಂಬಂಧಿಸಿದಂತೆ ಚರ್ಚಿಸಬೇಕಾದ ಮಹತ್ವದ ಸಂಗತಿ ಏನೆಂದರೆ ಪದ್ಮಾಸೀನ ಸ್ಥಿತಿಯಲ್ಲಿರುವ ಋಷಿಶಿಲ್ಪ. ಇದನ್ನು ಮಂಟಪದಲ್ಲಿರುವ ಕಂಬ ಒಂದರಲ್ಲಿ ಕಂಡರಿಸಲಾಗಿದೆ. ಇದೇ ಕಂಬದಲ್ಲಿ ಕೈಮುಗಿದು ಕುಳಿತ ದಂಪತಿ ಯರ ಚಿಕ್ಕದಾಗಿರುವ ಉಬ್ಬುಶಿಲ್ಪಗಳಿವೆ. ಈ ಉಬ್ಬುಶಿಲ್ಪವು ಕಾಳಾಮುಖ ಯತಿಗೆ ಸಂಬಂಧಿಸಿದ್ದಿರಬಹುದು. ಪರಿಭಾವಿಸಿದರೆ ಅದು ಅಷ್ಟೊಂದು ಖಚಿತ ಅಭಿಪ್ರಾಯ ಆಗಲಾರದು. ಕಾರಣ ಈ ಕಂಬದ ರಚನಾ ಶೈಲಿಯನ್ನು ಗಮನಿಸಿದರೆ ಅದು ಕ್ರಿ.ಶ. ೧೬ನೆಯ ಶತಮಾನ ಎಂಬುದರಲ್ಲಿ ಯಾವ ಸಂಶಯಗಳಿಲ್ಲ. ಆ ಕಾಲಕ್ಕಾಗಲೇ ಅಂಥ ಪರಂಪರೆ ಪ್ರತಿಶತ ಕಣ್ಮರೆಯಾಗಿತ್ತು ಎಂಬುದು. ಇಂಥ ಅಭಿಪ್ರಾಯಗಳಿಗೆ ಪೂರಕ ಎಂಬಂತೆ ವ್ಯಕ್ತಪಡಿಸಬಹುದಾದ ಸಂಗತಿ ಎಂದರೆ ಈ ಮಂಟಪವನ್ನು ಶ್ರೀ ವ್ಯಾಸರಾಯರು ಅಥವಾ ವ್ಯಾಸರಾಜರು ಕಟ್ಟಿದರೆಂದು ಸ್ಥಳೀಯ ಐತಿಹ್ಯ ಒಂದಿದೆ. ಇಲ್ಲಿದ್ದ ಪ್ರಾಚೀನ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಅದಕ್ಕೊಂದು ವಿಶಾಲ ಮಂಟಪ ನಿರ್ಮಿಸಿ ಶ್ರೀಮಾರುತಿ ದೇವರನ್ನು ಪ್ರತಿಷ್ಠಾಪಿಸಿದರೆಂದು ನಂಬಲಾಗಿದೆ. ಅಲ್ಲದೇ ವಾಸ್ಯರಾಯರೇ ಈ ದೇವಾಲಯಕ್ಕೆ ಮಾರುತಿ ಮಂಟಪ ಎಂಬ ಹೆಸರಿನಿಂದ ಸಂಬೋಧಿಸಿದರೆಂಬ ಪ್ರತೀತವು ಇದೆ. ಪೂಜೆ ಪುನಸ್ಕಾರ ಕೈಂಕರ್ಯಗಳನ್ನು ಪುನರ್ ಪ್ರಾರಂಭಿಸಿದ ವ್ಯಾಸರಾಯ ಈ ಕ್ಷೇತ್ರಕ್ಕೊಂದು ಹೊಸ ಆಯಾಮ ಕಲ್ಪಿಸಿದರು.

ವೈಷ್ಣವ ಮತಪಂಥಕ್ಕೆ ಸಂಬಂಧಿಸಿದ ಪ್ರಮುಖ ಮೂರು ಕ್ಷೇತ್ರಗಳು ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿರುವುದನ್ನು ಗುರುತಿಸಬಹುದು. ಅವುಗಳಲ್ಲಿ ಮುಖ್ಯವಾಗಿ ಯರಗೋಳ (ಯಾದಗಿರಿ ತಾಲೂಕು) ಹಾಗೂ ಶೆಳ್ಳಗಿ ಅಥವಾ ಸೆಲದಹಳ್ಳಿ (ಸುರಪುರ ತಾಲೂಕು) ನೇರವಾಗಿ ದ್ವೈತ ಮತ ಪ್ರಸರಣ ಸಂಸ್ಥೆಯಾದ ಉತ್ತರಾಧಿಮಠಕ್ಕೆ ಸಂಬಂಧಿಸಿವೆ. ಸುರಪುರ ತಾಲೂಕಿನ ಹುಣಸಿಹೊಳೆಯಲ್ಲಿರುವ ಕಣ್ವಪೀಠ ಇದು ವೈಷ್ಣವ ಮತದಲ್ಲಿಯೇ ನಂಬಿಕೆ ಇಟ್ಟಿರುವ ಇನ್ನೊಂದು ಕವಲು ಮಾತ್ರ. ಆದರೆ ಇದಕ್ಕಿರುವ ಪರಂಪರೆ ಬೇರೆ ರೀತಿಯದ್ದು. ಈ ಮೂರು ಕ್ಷೇತ್ರಗಳಲ್ಲಿ ಸೆಲದಹಳ್ಳಿಯಾಗಿರುವ ಐತಿಹಾಸಿಕತೆ ತುಂಬಾ ಮುಖ್ಯವಾದುದು.

ಪ್ರಾಚೀನ ಸೆಲದಹಳ್ಳಿ(ಶೆಳ್ಳಗಿ)ಯಲ್ಲಿ ವ್ಯಾಸರಾಯರು ಪ್ರಾರಂಭಿಸಿದ ಮಾರುತಿ ಮಂಟಪ ದೇವಾಲಯದ ಹಿನ್ನೆಲೆಯಲ್ಲಿ ಅಥವಾ ಸ್ಥಳೀಯವಾಗಿ ಚಾಲ್ತಿಯಲ್ಲಿರುವ ಐತಿಹ್ಯದ ಅರಿವಿನ ವಿವರವನ್ನು ಇಟ್ಟುಕೊಂಡು ಈ ಪ್ರದೇಶದಲ್ಲಿ ದ್ವೈತ ಅಥವಾ ಮಧ್ವಮತ ಪ್ರಸರಣದ ಐತಿಹಾಸಿಕ ಭೂಗೋಳವನ್ನು ಸ್ಪಷ್ಟವಾಗಿ ಗುರುತಿಸಕೊಳ್ಳಬಹುದು. ಮುಖ್ಯವಾಗಿ ಹೈದ್ರಾಬಾದ್ ಕರ್ನಾಟಕ ಪರಿಸರದಲ್ಲಿ ದ್ವೈತ ಸಿದ್ಧಾಂತದ ವಿಸ್ತರಣೆ ಮತ್ತು ನೆಲೆಗೊಂಡಿರುವ ಸಂದರ್ಭಗಳನ್ನು ಖಚಿತವಾಗಿ ಕಟ್ಟಿಕೊಡಬಹುದು.

ಪ್ರಾಚೀನ ಸೆಲದಹಳ್ಳಿ ಅಥವಾ ಸೆಲೆಯಹಳ್ಳಿಯಲ್ಲಿ ಮಾರುತಿ ಮಂಟಪವನ್ನು ಶ್ರೀ ವ್ಯಾಸರಾಯರು ಪ್ರತಿಷ್ಠಾಪಿಸಿದರೆಂದು ಹೇಳಬಹುದು. ಆದರೆ ಇದೇ ಸ್ಥಳವನ್ನು ಅವರು ಅಂಥ ಕಾರ್ಯಕ್ಕಾಗಿ ಯಾಕೆ? ಆಯ್ಕೆ ಮಾಡಿಕೊಂಡರು ಎಂಬ ಜಿಜ್ಞಾಸೆಯು ಹುಟ್ಟಿಕೊಳ್ಳುತ್ತದೆ. ಪ್ರಾಯಶಃ ಈ ಸ್ಥಳವು ರಾಷ್ಟ್ರಕೂಟ ಕಾಲದಿಂದಲೂ ತುಂಬಾ ಪ್ರಸಿದ್ಧಿ ಪಡೆದಿತ್ತು. ಅಲ್ಲದೇ ಕಲ್ಯಾಣದ ಚಾಲುಕ್ಯರ ಕೊನೆಯ ಕುಡಿ ನಾಲ್ಕನೆಯ ಸೋಮೇಶ್ವರನಿಗೆ ಸುಭದ್ರತೆಯಿಂದ ಕೂಡಿದ ಕೊನೆಯ ರಕ್ಷಣಾ

ಸ್ಥಾನವಾಗಿಯೂ ಮಾರ್ಪಟ್ಟಿತ್ತು. ಆದರೆ ಚಾಲುಕ್ಯರ ಪತನಾನಂತರ ಈ ಸ್ಥಳವು ತನ್ನ ರಾಜಕೀಯ ಮಹತ್ವ ಕಳೆದುಕೊಂಡಿತ್ತು. ಆದರೂ ಆ ಪರಿಸರದಲ್ಲಿದ್ದ ಧಾರ್ಮಿಕ ಚಟುವಟಿಕೆಗಳು ಮಾತ್ರ ಅನುಚಾನವಾಗಿ ನಡೆದುಕೊಂಡು ಬಂದಿರಬಹುದು. ಈ ಹಿನ್ನೆಲೆಯನ್ನು ಗಮನಿಸಿದ ಶ್ರೀ ವ್ಯಾಸರಾಜರು ತಮ್ಮ ಕಾಲದಲ್ಲಿ ಮಾರುತಿ ದೇವರ ಪ್ರತಿಷ್ಠಾಪನೆಗೆ ಸೂಕ್ತವಾದ ತೀರ್ಥವೆಂದು ಪರಿಭಾವಿಸಿ ಇದೇ ಸ್ಥಳದಲ್ಲಿ ಇಂಥದೊಂದು ಕ್ಷೇತ್ರವನ್ನು ಪ್ರತಿಷ್ಠಾಪಿಸಿದರೆಂದು ಅಭಿಪ್ರಾಯ ಪಡಬಹುದು. ಇದು ಮುಂದಿನ ದಿನಗಳಲ್ಲಿ ಹೆಚ್ಚಿನ ಮಹತ್ವ ಪಡೆಯಿತು. ಇಂಥ ಕಾರ್ಯಕ್ಕೆ ಪ್ರಭುತ್ವದ ಬೆಂಬಲವು ಅವರಿಗೆ ಸಹಜವಾಗಿ ದೊರಕಿತ್ತು.

ವ್ಯಾಸರಾಯರು ಯಾವ ಕಾಲಘಟ್ಟದಲ್ಲಿ ಇಂಥದೊಂದು ಕೇಂದ್ರವನ್ನು ಸ್ಥಾಪಿಸಿದರು ಎಂಬ ವಿಚಾರವು ಚರ್ಚಾರ್ಹವೆನಿಸುತ್ತದೆ. ಇಂಥ ಸಂಗತಿಯನ್ನು ರಾಜಕೀಯ ಪರೀಕ್ಷೆಯಲ್ಲಿಯೇ ಬಿಡಿಸಿನೋಡುವುದು ಸೂಕ್ತ. ಮುಖ್ಯವಾಗಿ ಪರಿಗಣಿಸಬಹುದಾದ ವಿಚಾರ ಏನೆಂದರೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡು ಸುಮಾರು ಎರಡುನೂರು ವರ್ಷಗಳು ಗತಿಸಿದರೂ ಅದು ತನ್ನ ಬಾಹುಳ್ಯವನ್ನು ಕೃಷ್ಣ ನದಿಯವರೆಗೆ ವಿಸ್ತರಿಸುವ ಕಾರ್ಯದಲ್ಲಿ ಸಫಲವಾಗಿರಲಿಲ್ಲ. ಆದರೆ ಕ್ರಿ.ಶ. ೧೫೧೦–೧೫೨೯ರವರೆಗೆ ಆಳ್ವಿಕೆ ಮಾಡಿದ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಸಾಮ್ರಾಜ್ಯದ ಸಾಂಪ್ರದಾಯಿಕ ಎಲ್ಲೆಯು ಎಣೆಯಿಲ್ಲದೆ ಹಿಗ್ಗಿ ನಿಂತಿತು. ಬಹಮನಿ ರಾಜ್ಯದ ರಾಜಧಾನಿ ಕಲಬುರ್ಗಿಯೇ ಕೆಲವು ದಿನ ಅವನ ಅಂಕಿತಕ್ಕೊಳಗಾಯಿತು. ಇಂಥದ್ದೇ ಸುಸಂದರ್ಭ ದಲ್ಲಿ ವ್ಯಾಸರಾಯರಿಂದ ಧರ್ಮಕಾರಣವೂ ಸಹಜವಾಗಿ ಕೃಷ್ಣಾನದಿ ಗಡಿಯನ್ನು ದಾಟಿತು. ಪ್ರಭುತ್ವದ ಬೆಂಬಲ ಅವರಿಗಿದ್ದರಿಂದ ಸೆಲದಹಳ್ಳಿಯಲ್ಲಿ ಮಾರುತಿ ಮಂಟಪ ಪ್ರತಿಷ್ಠಾಪಿಸಲು ಅನುಕೂಲವಾಯಿತು. ಇಂಥ ಧಾರ್ಮಿಕ ಚಟುವಟಿಕೆ ಬಹುಶಃ ಕ್ರಿ.ಶ. ೧೫೨೫–೩೦ರ ಸಂದರ್ಭದಲ್ಲಿ ಕಾರ್ಯರೂಪಗೊಂಡಿದೆ ಎಂದು ತಿಳಿಯಬಹುದು. ದ್ವೈತ ಮತಾಚರಣೆಗೆ ಹೆಚ್ಚಿನ ಜನಮನ್ನಣೆ ಪಡೆಯಲು ವ್ಯಾಸರಾಯ ವಿಶೇಷ ಶ್ರಮ ಶ್ರದ್ಧೆಯ ಕಾರ್ಯಮಾಡಿದರೆಂದು ಹೇಳ ಬಹುದು. ಮಹತ್ವ ಪಡೆದ ಇಂಥ ಐತಿಹಾಸಿಕ ಸ್ಮಾರಕವು ದ್ವೈತಮತ ವಿಸ್ತರಣೆಯ ಐತಿಹಾಸಿಕ ಭೂಗೋಳವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಬಹುಮುಖ್ಯ ಸ್ಮಾರಕವೆಂದೆನಿಸಿದೆ.

ಪ್ರಾಚೀನ ಸೆಲದಹಳ್ಳಿ ಪರಿಸರವು ಅಥವಾ ಶೆಳ್ಳಗಿ ಕುರಿತು ಮತ್ತೊಂದು ಬಹುಮುಖ್ಯ ಸಂಗತಿ ದಾಖಲಾಗಿದೆ. ಕಲ್ಯಾಣ ಚಾಲುಕ್ಯರಲ್ಲಿ ಹುಟ್ಟಿಕೊಂಡ ಅಸ್ಥಿರತೆಯ ಲಾಭ ಪಡೆದ ಕಲಚೂರಿ ಬಿಜ್ಜಳನು ತಾನೇ ಅಧಿಕಾರದ ಗದ್ದುಗೆ ಏರಿದನು. ಆದರೆ ಅವನು ತುಂಬಾ ವರ್ಷಗಳ ಕಾಲ ಆಡಳಿತ ನಿರ್ವಹಿಸಲು ಸಾಧ್ಯವಾಗಲಿಲ್ಲ. ಚಾಲುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ಮಹಾಮಂಡಳೇಶ್ವರರ ಸಹಾಯ ಪಡೆದು ಮತ್ತೆ ತಾನೇ ಕಲ್ಯಾಣದ ಗದ್ದುಗೆ ಏರಿದ. ಆದರೂ ನಡೆದು ಹೋದ ಘಟನೆಗಳಿಂದ ಮನನೊಂದು ತನ್ನ ಆಡಳಿತದ ಮತ್ತು ವಾಸ್ತವ್ಯದ ಕೇಂದ್ರವನ್ನು ಸೆಲದಹಳ್ಳಿ ನೆಲವೀಡಿಗೆ ವರ್ಗಾಯಿಸಿದನೆಂದು ಕೆಲವು ವಿವರಗಳುಂಟು (ಕೃಷ್ಣ ಎ (ಸಂ), ಸಗರನಾಡ ದರ್ಶನ, ಎಮ್ಮಡಗಿಯ ಶಾಸನ, ಪುಟ. ೧೦೪–೧೨೦). ಈ ಪ್ರಾಚೀನ ಸೆಲದಹಳ್ಳಿ ಸಗರನಾಡಿನಲ್ಲಿತ್ತು ಎಂಬ ಅಭಿಪ್ರಾಯಗಳು ದಾಖಲಾಗಿವೆ. ಆದರೆ ಕೆಲವು ವಿದ್ವಾಂಸರು ಪ್ರಾಚೀನ ಸೆಲದಹಳ್ಳಿ ನೆಲೆಯನ್ನು ಚಿತ್ತಾಪುರ ತಾಲೂಕಿನಲ್ಲಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ಅಂಥ ವಿವರಣೆಗಳಿಗೆ ಪೂರಕ ಸಾಕ್ಷಿಗಳು ಇದ್ದಂತಿಲ್ಲ. ಹಾಗಾಗಿ ಸುರಪುರ ತಾಲೂಕಿನ ಇಂದಿನ ಶೆಳ್ಳಗಿ ಗ್ರಾಮವೇ ಪ್ರಾಚೀನ ಸೆಲದಹಳ್ಳಿ ಅಥವಾ ಸೆಲಯಹಳ್ಳಿ ಆಗಿತ್ತು ಎಂಬ ವಿವರಗಳು ಹೆಚ್ಚು ನಂಬಿಕೆಗೆ ಅರ್ಹವಾಗಿವೆ.

ಈ ಸ್ಥಳವು ಪ್ರಮುಖ ಉಪರಾಜಧಾನಿ ಪಟ್ಟಣಗಳಲ್ಲಿ ಒಂದಾಗಿದ್ದರಿಂದ ಸಹಜವಾಗಿ ಪ್ರಾಚ್ಯ ನಿರ್ಮಾಣಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣವಾಗಿವೆ. ಹಾಗಾಗಿ ವ್ಯಾಸರಾಯರು ಈ ಸ್ಥಳದ ಮಹತ್ವ ಅರಿತೆ ಪ್ರಾಯಶಃ ಇಲ್ಲೊಂದು ಮಾರುತಿ ಮಂಟಪವನ್ನು ನಿರ್ಮಿಸುವ ಕಾಯಕಲ್ಪ ಮಾಡಿದ್ದಿರಬಹುದು. ಹಳೆಯ ದೇವಸ್ಥಾನದ ಆವರಣ ಹಾಗೂ ಕೆಲವು ಭಾಗಗಳನ್ನು ಪುನರ್ ಉಪಯೋಗಿಸಿ ಮಾರುತಿ ದೇವರ ಮಂಟಪ ಪ್ರತಿಷ್ಠಾಪಿಸಿದ್ದಾರೆ ಎಂಬ ಅಭಿಪ್ರಾಯಕ್ಕೆ ಬರಬಹುದು. ಕಾಲಗತಿ ಯಲ್ಲಿ ಸಿಲುಕಿದ ಈ ಪ್ರಾಚೀನ ಸ್ಮಾರಕವು ನದಿಯ ನಿರಂತರ ಪ್ರವಾಹ ಹಾಗೂ ಜನರ ಅನಾಧಾರಕ್ಕೆ ಒಳಗಾಗಿ ತನ್ನ ಭೌತಿಕ ಮಹತ್ವ ಕಳೆದುಕೊಳ್ಳುತ್ತಾ ಸಾಗಿದೆ.

## ಆಧಾರಸೂಚಿ


೧. ಅನಸೂಯದೇವಿ, ವ್ಯಾಸಕೂಟ ಮತ್ತು ದಾಸಕೂಟ, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೦.

೨. ಕೃಷ್ಣ ಎ(ಸಂ), ಸಗರನಾಡ ದರ್ಶನ, ಮಹಾಕವಿ ಲಕ್ಷ್ಮೀಶ ವಚನ ಸಂಘ, ಸುರಪುರ, ೧೯೮೫.

೩. ಕೃಷ್ಣ ಕೊಲ್ಹಾರ ಕುಲಕರ್ಣಿ, ಮಾಧ್ವ ಮಠಗಳು, ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು, ೨೦೦೬

೪. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಮಹಿಳಾ ಸಾಹಿತ್ಯಿಕಾ, ನವನಗರ, ಹುಬ್ಬಳ್ಳಿ, ೧೯೯೫.

೫. ಪಂಚಮುಖಿ ಆರ್.ಎಸ್., ಕರ್ನಾಟಕದ ಹರಿದಾಸ ಸಾಹಿತ್ಯ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮.

೬ ರಮೇಶ ನಾಯಕ, ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕವಿವಿ, ಹಂಪಿ, ೨೦೧೫.



# ಬೇಲಿಮಲ್ಲೂರು ಪರಿಸರದ ಪ್ರಾಚ್ಯಾವಶೇಷಗಳು

ಡಾ. ಬಿ.ಸಿ. ರಾಕೇಶ್*

**ಬೇ**ಲಿ ಮಲ್ಲೂರು ಗ್ರಾಮವು ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಿಂದ ನಂದಿಗುಡಿ ಮಾರ್ಗದಲ್ಲಿ ಐದು ಕಿ.ಮೀ. ಸಾಗಿದರೆ ಸಿಗುತ್ತದೆ. ಉತ್ತರಕ್ಕೆ ಕೋಟೆಮಲ್ಲೂರು, ದಕ್ಷಿಣಕ್ಕೆ ಗೊಲ್ಲರಹಳ್ಳಿ, ಪೂರ್ವಕ್ಕೆ ಮಾಸಡಿ ಮತ್ತು ಅರಕೆರೆ, ಪಶ್ಚಿಮಕ್ಕೆ ತುಂಗಭದ್ರಾ ನದಿಗಳಿವೆ.

ಬೇಲಿಮಲ್ಲೂರಿನಲ್ಲಿ ದೊರೆತಿರುವ ಶಾಸನದಲ್ಲಿ ಮಲೆವೂರು ಎಂದು ಕರೆಯಲ್ಪಡುವ ಗ್ರಾಮವು ಹೊಯ್ಸಳರ ಕಾಲದಲ್ಲಿ ಅಭಿವೃದ್ಧಿಯನ್ನು ಹೊಂದಿದ ಅಂಶಗಳು ಕಂಡು ಬರುತ್ತವೆ. ಶಾಸನವು ಹೊಯ್ಸಳ ದೊರೆ ವೀರನರಸಿಂಹನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಅಲ್ಲಿಂದಲೇ ಗ್ರಾಮವು ಅಸ್ತಿತ್ವದಲ್ಲಿದ್ದ ಕುರುವುಗಳು ಸಿಗುತ್ತವೆ. ದೇವಾಲಯದ ಪರಿಸರದಲ್ಲಿ ಒಟ್ಟು ನಾಲ್ಕು ಶಾಸನಗಳಿದ್ದು, ಒಂದು ದಾನಶಾಸನ, ಎರಡು ವೀರಗಲ್ಲು ಶಾಸನಗಳಿದ್ದು ಇನ್ನೊಂದು ಶಾಸನ ದೇವಾಲಯದ ಶಿಲ್ಪಿಗಳ ಹೆಸರನ್ನು ಒಳಗೊಂಡ ಶಾಸನವಾಗಿದೆ.

ಬೆಳಗುತ್ತಿಯ ಸಿಂಧರು ಹೊಯ್ಸಳರ ಸಾಮಂತರಾಗಿದ್ದಕ್ಕೆ ಸಾಕ್ಷಿಯಾಗಿ ಬೇಲಿಮಲ್ಲೂರಿನ ಒಂದು ಶಾಸನದಲ್ಲಿ ವೀರ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಸಿಂಧರ ಈಶ್ವರ ದೇವರಸ ತನ್ನನ್ನು ತಾನು ಮಹಾಮಂಡಳೇಶ್ವರ ಎಂದು ಕರೆದು ಕೊಂಡಿರುವುದಕ್ಕೆ ಸಾಕ್ಷಿಯಾಗಿದೆ. ಊರಿನ ಇತಿಹಾಸವನ್ನು ನಾವು ಗಮನಿಸಿದಾಗ ಕ್ರಿ.ಶ. ೧೦೭೯ ಭ್ಯಯ ಸಂವತ್ಸರ ಭಾದ್ರಪದ ಬಹಳ ೧೨ ಗುರುವಾರದಂದು ಹಾಕಿಸಿದ ವೀರಗಲ್ಲು ಊರಿನ ಪ್ರಾಚೀನ ಶಾಸನವಾಗಿದೆ ಕ್ರಿ.ಶ. ೧೫೬೧ ರಲ್ಲಿ ರಣದುಲ್ಲಾಖಾನನು ಬಸವಪಟ್ಟಣದ ಹೀರೇಕೆಂಗಪ್ಪ ನಾಯಕನನ್ನು ಬಂಧಿಸಿದಾಗ ಕುಣಿಗಲುಗಟ್ಟದ ಕೋರಿಶೆಟ್ಟಿ ಹಾಗೂ ಬೇಲಿಮಲ್ಲೂರು ಕೊಂಡಿ ಶೆಟ್ಟಿಯವರು ತಮ್ಮ ಅಗ್ರಹಾರಗಳನ್ನು ನಡೆಸಿಕೊಂಡು ಹೋಗಲು ಖಾನರಿಂದ ಪರವಾನಗಿ ಬರೆಯಿಸಿಕೊಂಡು ಬಂದುದಾಗಿ ತಿಳಿದು ಬರುತ್ತದೆ. ಚಿಕ್ಕಕೆಂಗ ಹನುಮಪ್ಪನಾಯಕನ ಆಳ್ವಿಕೆಯ ಕಾಲದಲ್ಲಿ ಕೆಳದಿಯ ಅರಸ ಶಿವಪ್ಪನಾಯಕನು ಆಗ ಈ ಸೀಮೆಯ ಪಾರುಪತ್ಯವನ್ನು ಕರೆಭದ್ರಿ ಎಂಬುವವನಿಗೆ ವಹಿಸಲಾಗಿತ್ತು. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಹಾಗೂ ಸ್ವಾತಂತ್ರ್ಯ ನಂತರ ಕರ್ನಾಟಕ ಸರಕಾರದ ಅಡಿಯಲ್ಲಿ ಬರುವ ಐತಿಹಾಸಿಕ ಮಹತ್ವವುಳ್ಳ ಗ್ರಾಮವಾಗಿದೆ. ೧೯೨೨ರಲ್ಲಿ ಹೊನ್ನಾಳಿ ಬಳಿ ಸೇತುವೆ ನಿರ್ಮಾಣವಾದ ನಂತರ ನದಿಯಲ್ಲಿ ದಾಟುವ ಪರಂಪರೆ ನಿಂತು ಹೋಯಿತು.

ರಾಮೇಶ್ವರ ದೇವಾಲಯವು ಹಳೆಯ ಮಲ್ಲೂರು ಇದ್ದ ಸ್ಥಳದಲ್ಲಿದೆ. ೧೯೦೦-೧೯೨೦ರ ಸುಮಾರಿನಲ್ಲಿ ಮಾರು ಹೊಳೆ (ಪ್ರವಾಹ) ಬಂದಾಗ ಅನೇಕ ಹಳ್ಳಿಗಳು ಸ್ಥಳಾಂತರ ಗೊಂಡಿವೆ ಹೀಗೆ ಸ್ಥಳಾಂತರ ಗೊಂಡ ಮಲ್ಲರೂಗ್ರಾಮವು ಬೇಲಿಮಲ್ಲೂರು ಮತ್ತು ಕೋಟೆ ಮಲ್ಲೂರು ಗ್ರಾಮಗಳಾಗಿ ಇಬ್ಬಾಗವಾಯಿತು. ಮೂಲ ಊರಿನಿಂದ ಮಲ್ಲೂರು ಪ್ರಾಚೀನ ಊರಾಗಿದ್ದು ರಾಮೇಶ್ವರ ದೇವಾಲಯವಿದೆ. ದೇವಾಲಯ ಗರ್ಭಗೃಹ, ಸುಖನಾಸಿ, ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ರಾಮೇಶ್ವರ ಲಿಂಗವಿದ್ದು ೩x೩ ಅಳತೆಯ ಪಾಣಿ ಪೀಠದ ಮೇಲೆ ೧ ಅಡಿ ಸುತ್ತಳತೆಯ ಮತ್ತು ೧೧/೨ ಅಡಿ ಎತ್ತರದ ಲಿಂಗವನ್ನು ಪ್ರತಿಸ್ಥಾಪಿಸಲಾಗಿದೆ. ಭುವನೇಶ್ವರಿ ಸರಳ ಅಲಂಕಾರಗಳಿಂದ ಕೂಡಿದೆ. ಗರ್ಭಗುಡಿಯ ದ್ವಾರ ಬಾಗಿಲು ಅದ್ಭುತ ಅಲಂಕಾರಗಳಿಂದ ಕೂಡಿದೆ. ದ್ವಾರಬಾಗಿಲ ಮೇಲಿನ ಪಟ್ಟಿಕೆಯಲ್ಲಿ ಎರಡು ಪಕ್ಕದ ಕಳಸದ ರೀತಿಯ ರಚನೆ ಮಧ್ಯದಲ್ಲಿ ಮೇಲೆ ಹೂ ಬಳ್ಳಿಯ ತೋರಣ, ತೋರಣದ ಮೇಲೆ ಎರಡು ಪಕ್ಕದಲ್ಲಿ ಕುದುರೆಯ ಮೇಲೆ ಆನೆಯ ಮೇಲೆ ಕುಳಿತ ಚಿತ್ರಗಳಿವೆ. ಮಧ್ಯದಲ್ಲಿ ಕೀರ್ತಿಮುಖ ಇದ್ದು ಇದರ ಪಕ್ಕದಲ್ಲಿ ಕಮಲ ಹೂವಿನ ಚಿತ್ರಗಳಿವೆ. ಹೂ ಬಳ್ಳಿಯ ಕೆಳಗೆ ಹೊಯ್ಸಳರ ರಾಜ ಲಾಂಛನ ಸಳ ಮತ್ತು ಸಿಂಹದ ಚಿತ್ರಗಳಿವೆ. ಸಿಂಹ ಚಿತ್ರಗಳ ಪಕ್ಕದಲ್ಲಿ ಎರಡೂಕಡೆ ಸೂರ್ಯನ ಪರಿವಾರದ ಮೂರ್ತಿಗಳಿವೆ. ಸೂರ್ಯನ ಮೂರ್ತಿಗಳ ಮಧ್ಯದಲ್ಲಿ ದುರ್ಗಾದೇವಿಯ ಪರಿವಾರ ಲಲಾಟದ ಬಿಂಬದಲ್ಲಿದೆ. ಉಬ್ಬು ಶಿಲ್ಪಿಗಳು ನೋಡಲು ತುಂಬ ಅಲಂಕಾರಗಳಿಂದ ಕೂಡಿದೆ. ಲಲಾಟ ಬಿಂಬದ ಕೆಳಗಿನ ಪಟ್ಟಿಕೆಯಲ್ಲಿ ಶ್ರೀರಾಮೇಶ್ವರ ದೇವ ದಾರಸಜಿಯರ ನಟಕೇಶ್ವರ ದೇವರ ಪ್ರತಿಷ್ಠಾಪಿಸಿದ ಸೇನಭೋವ ಬೋಪ್ಪಣ್ಣಂಗಳ್॥ ಅಭಿನವ ಮಸ್ತೂರೂವಾರಿ ಬಾಬೋ ಜಜೀರ್ಣ ಎಂದಿದೆ. ರಾಮೇಶ್ವರ ನಟಕೇಶ್ವರ ದೇವರ ಮತ್ತು ದಾಸರಜಿಯವರ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಎ.ಆರ್.ಎಂ. ಪ್ರಥಮ ದರ್ಜೆ ಕಾಲೇಜು, ನಿಜಲಿಂಗಪ್ಪ ಬಡಾವಣೆ, ದಾವಣಗೆರೆ-೫೭೭೦೦೪.

ಪ್ರತಿಷ್ಠಾಪನೆ, ಸೇನಭೋವ, ಬೋಪ್ಪಣ್ಣ ಶಿಲ್ಪಿ ಬಾಚೋಜನರ ಉಲ್ಲೇಖವಿದೆ. ಬಾಗಿಲ ಎರಡು ಪಕ್ಕದ ತೋಳಿನ ಭಾಗ ಅದ್ಭುತ ಅಲಂಕಾರಗಳಿಂದ ಕೂಡಿದೆ. ತೋಳುಗಳನ್ನು ಎರಡು ಭಾಗ ಗಳಾಗಿ ವಿಭಾಗಿಸಿ. ಮಧ್ಯದಲ್ಲಿ ಕಂಬದ ರಚನೆ ಕಂಬದ ಬೋಧಿಗೆಯ ಮೇಲೆ ಸರಿಯಾಗಿ ಸಿಂಹ ಮತ್ತು ಸಳನ ಮೂರ್ತಿ ಬರುವಹಾಗೆ ಕೆತ್ತಲಾಗಿದೆ. ಕೆಳಗಡೆ ಎರಡು ಭಾಗಗಳಲ್ಲಿ ಕೀರ್ತಿಮುಖದ ರಚನೆ ಕೀರ್ತಿ ಮುಖದಿಂದ ಬಳ್ಳಿಯ ರಚನೆ, ಬಳ್ಳಿಯ ರಚನೆಯು ಸುರುಳಿ ಆಕಾರದಲ್ಲಿ ಜಾಲಂಧ್ರ ಗಳನ್ನು ಕೆತ್ತಲಾಗಿದೆ. ಸುರುಳಿಗಳಲ್ಲಿ ಅಲಂಕಾರಗೊಂಡ ಮದನಿಕ ಶಿಲ್ಪಗಳು, ಯಾಳಿ ಬಾಯಿಂದ ಹೊರಟ ಬಳ್ಳಿಯು ಸುರುಳಿ ಆಕಾರದಲ್ಲಿ ಆರು ಸುರುಳಿಗಳನ್ನು ಹೊಂದಿದೆ. ಈ ರೀತಿ ನಾಲ್ಕು ಸಾಲುಗಳ ಸುರುಳಿಯ ರಚನೆ ಎರಡುಕಡೆ ಇದೆ. ಎರಡು ಪಕ್ಕದ ಮಧ್ಯದ ಕಂಬದ ಕೆಳಗಡೆ ದ್ವಾರಪಾಲಕ ಸ್ಥಾನದಲ್ಲಿ ಮದನಿಕೆಯರ ಶಿಲ್ಪಿಗಳು ತ್ರಿಭಂಗಿಯಲ್ಲಿ ನಿಂತ ಸುಂದರ ಮೂರ್ತಿಗಳಿವೆ. ಕಂಬದ ರಚನೆಯ ಮೇಲೆ ಸರಳ ಅಲಂಕಾರ ರಚನೆ ಇದೆ. ಪಕ್ಕದಲ್ಲಿ ಹಗ್ಗದ ರಚನೆಯನ್ನು ಬಾಗಿಲ ಒಳಮುಖದ ಕೊನೆಯ ಭಾಗದಲ್ಲಿ ರಚನೆ ಮಾಡ ಲಾಗಿದೆ. ಬಾಗಿಲ ಕೆಳಭಾಗ ಸರಳ ಅಲಂಕಾರಗಳಿಂದ ಕೂಡಿದೆ. ಜಾಲಂಧ್ರಗಳು ನೋಡಲು ಸುಂದರವಾಗಿದ್ದು ಸುಂದರ ಅಲಂಕಾರಗಳಿಂದ ಕೂಡಿದ ಗರ್ಭಗೃಹದ ಬಾಗಿಲು ಹೊಯ್ಸಳ ಕಾಲದ ಶಿಲ್ಪ ಶೈಲಿಯ ರಚನೆಗಳಲ್ಲಿ ಒಂದು ಎಂಬುದು ಸಾಕ್ಷಿಯಾಗಿದೆ.

ಗರ್ಭಗೃಹದ ಮುಂದಿನ ಭಾಗದ ಮಂಟಪ ಎರಡು ಕಂಬಗಳಿಂದ ಕೂಡಿದೆ. ಮಂಟಪಕ್ಕೆ ಹೊಂದಿಕೊಂಡಂತೆ ಗೋಡೆಯನ್ನು ಕಟ್ಟಲಾಗಿದೆ. ಎರಡು ಕಂಬಗಳ ಮುಂದೆ ೪ ಕಂಬಗಳು ಇವೆ. ನಾಲ್ಕು ಕಂಬಗಳನ್ನು ಬಳಸಿಕೊಂಡು ಗೋಡೆಯನ್ನು ಕಟ್ಟಲಾಗಿದೆ. ನಾಲ್ಕು ಕಂಬಗಳ ಮಧ್ಯದಲ್ಲಿ ರಾಮೇಶ್ವರ ಲಿಂಗಕ್ಕೆ ಎದುರಾಗಿ ನಂದಿಯ ಮೂರ್ತಿಯನ್ನು ಇರಿಸಲಾಗಿದೆ. ನಂದಿಯ ಶಿಲ್ಪದ ಪಕ್ಕದ ಎಡ ಭಾಗದ ಗೋಡೆಯಲ್ಲಿ ಸಪ್ತ ಮಾತೃಕೆಯರು, ಬಲಭಾಗದಲ್ಲಿ ಒಂದು ಶಿಲ್ಪವಿದೆ. ಅದನ್ನು ಗೋಡೆಯಲ್ಲಿ ಇಟ್ಟು ಇತ್ತೀಚಿಗೆ ಕಟ್ಟಲಾಗಿದೆ. ಉತ್ತರದ ಗೋಡೆಯಲ್ಲಿ ಪೂರ್ವಕ್ಕೆ ಮುಖ ಮಾಡಿದ ಗಣೇಶನ ಶಿಲ್ಪವಿದೆ. ಮೂಲ ಶಿಲ್ಪ ಹಾಳಾಗಿದೆ. ಇನ್ನೊಂದು ಗಣೇಶನ ಶಿಲ್ಪವನ್ನು ಇಟ್ಟು ಪೂಜಿಸುತ್ತಾರೆ. ಉತ್ತರದ ಗೋಡೆಯಲ್ಲಿ ದಕ್ಷಿಣಕ್ಕೆ ಮುಖಮಾಡಿದ ದುರ್ಗ ದೇವಿಯ ಶಿಲ್ಪವನ್ನು ಇರಿಸಲಾಗಿದೆ. ಉತ್ತರ ಮತ್ತು ಪೂರ್ವದ ಗೋಡೆಯ ಎಡ ಪಕ್ಕದ ಗೋಡೆಗೆ ಬಾಗಿಲನ್ನು ಮಾಡಲಾಗಿದೆ. ಗರ್ಭಗುಡಿಯ ಬಲ ಪಕ್ಕದ ಗೋಡೆಯ ಪೂರ್ವಕ್ಕೆ ಮುಖ ಮಾಡಿದ ಕಿರೀಟ ಅಲಂಕೃತವಾದ ಶಿಲ್ಪವನ್ನು ಸಣ್ಣ ಗುಡಿಯ ರೀತಿಯಲ್ಲಿ ಗೋಡೆಯಲ್ಲಿರಿಸಲಾಗಿದೆ. ಮೂರ್ತಿಯನ್ನು ಗಮನಿಸಿದರೆ ದ್ವಾರಪಾಲಕರ ಶಿಲ್ಪದಂತೆ ಕಾಣುತ್ತದೆ. ಆದರೆ ಮೂರ್ತಿ ಸಂಪೂರ್ಣ ಭಗ್ನವಾಗಿದೆ. ದಕ್ಷಿಣದ ಗೋಡೆಯಲ್ಲಿ ಉತ್ತರಕ್ಕೆ ಮುಖ ಮಾಡಿದ ಕಾರ್ತಿಕೇಯನ ಮೂರ್ತಿ ಇದೆ. ನವಿಲಿನ ಮೇಲೆ ಕುಳಿತ ಶಿಲ್ಪ ಇದಾಗಿದೆ. ನೋಡಲು ಸುಂದರ ವಾಗಿದೆ. ಕೆಲವು ಭಾಗಗಳು ಭಗ್ನವಾಗಿದೆ.

ದೇವಾಲಯದ ಪ್ರಾಂಗಣದಲ್ಲಿ ಇರುವ ಇತರ ಶಿಲ್ಪ ಮತ್ತು ವೀರಗಲ್ಲುಗಳನ್ನು ನಾವು ಗಮನಿಸುವುದಾದರೆ ದೇವಾಲಯದ ಪೂರ್ವದ ಗೋಡೆಗೆ ತಾಗಿಸಿ ನಿಲ್ಲಿಸಿರುವ ಎರಡು ವೀರಗಲ್ಲುಗಳು ಹೊಯ್ಸಳರ ಕಾಲದಲ್ಲಿನ ರಚನೆಯಾದವುಗಳಾಗಿವೆ. ಒಂದರಲ್ಲಿ ವೀರನರಸಿಂಹನ ದೇವರ ಸೇನಾಳು ಅಕ್ಕಸಾಲಿಗರ ರಾಮೋಜನ ಮಗ ಕಾಮೋಜನು ಕಾದಾಡಿ ಮಡಿದ ದಾಖಲು ಇದಾಗಿದೆ. ಇನ್ನೊಂದರಲ್ಲಿ ಕಾರಬೋವಜನ ಮಗ ಮಾರನು ಬೊಮ್ಮನನ್ನು ಮುತ್ತಿ ಕೊಂದುದಕ್ಕೆ ಕಂಬ ೨೦ ಭೂಮಿಯನ್ನು ಕೊಡ ಮಾಡಿದ್ದಾಗಿದೆ. ರಾಮೋಜನು ಕಲ್ಲನ್ನು ಸ್ಥಾಪಿಸಿರ ಬೇಕು. ದೇವಾಲಯದ ಮುಂದೆ ಒಂದು ಅರಳಿಮರವಿದೆ. ಅರಳಿಕಟ್ಟೆಯ ಮೇಲೆ ಇರುವ ಶಾಸನವು ದಾನಶಾಸನವಾಗಿದೆ. ಇನ್ನೊಂದು ಶಾಸನ ಗರ್ಭಗೃಹದ ಬಾಗಿಲ ಮೇಲೆ ಇದೆ. ಅರಳಿಕಟ್ಟೆಯ ಮೇಲೆ ಶಾಸನದ ಅಕ್ಕಪಕ್ಕದಲ್ಲಿ ಎರಡು ಕಡೆ ಯುತಿಗಳ ಶಿಲ್ಪಗಳನ್ನು ನಾವು ಗಮನಿಸಬಹುದು ಇವುಗಳು ಸಮ ಕಲ್ಲಿನ ಮೇಲೆ ಗೆರೆಗಳಿಂದ ರಚನೆ ಮಾಡಿದ ಶಿಲ್ಪ ಗಳಾಗಿವೆ. ದೇವಾಲಯದ ಬಲ ಪ್ರಾಂಗಣದಲ್ಲಿ ದಕ್ಷಿಣಕ್ಕೆ ಮುಖಮಾಡಿದ ಕಟ್ಟಡದ ಮೇಲೆ ೫ ಅಡಿ ಎತ್ತರದ ಏಳು ಅಡಿಸರ್ಪದ ದಪ್ಪನೆಯ ಉಬ್ಬು ಶಿಲ್ಪವಿದೆ. ಬಲಪಕ್ಕದಲ್ಲಿ ಜೋಡಿ ನಾಗರ ಶಿಲ್ಪ ಎರಡು ಅಡಿ ಎತ್ತರವಿದೆ. ಎಡಕ್ಕೆ ಸೂರ್ಯನ ಶಿಲ್ಪ ಎರಡು ಅಡಿ ಇದೆ.

ರಾಮೇಶ್ವರ ದೇವಾಲಯವು ಹೊಯ್ಸಳರ ಕಾಲದ ದೇವಾಲಯವಾಗಿತ್ತು ಎಂಬುದರಲ್ಲಿ ಸಂಶಯವಿಲ್ಲ. ಆದರೆ ೨೦೦೨ರಲ್ಲಿ ದೇವಾಲಯವನ್ನು ಜೀರ್ಣೋದ್ಧಾರ ಮಾಡ ಲಾಗಿದೆ. ಗರ್ಭಗೃಹ, ಗರ್ಭಗೃಹ ಬಾಗಿಲು ದೇವಾಲಯ ದಲ್ಲಿರುವ ಇತರ ಶಿಲ್ಪಗಳು ಹೊಯ್ಸಳರ ಕಲೆಗೆ ಸೇರಿದವು ಗಳಾಗಿವೆ. ಆದರೆ ದೇವಾಲಯದಲ್ಲಿರುವ ಕಂಬಗಳು ಇತ್ತೀಚಿನವು ಗಳಾಗಿವೆ. ಆದರೆ ಮೂಲ ದೇವಾಲಯದ ಗರ್ಭಗೃಹ ಮತ್ತು ನಂದಿಯ ವಿಗ್ರಹಗಳು ಮಾತ್ರ ಮೂಲ ಸ್ಥಳಗಳಲ್ಲಿವೆ ಇತರ ಮುರ್ತಿಗಳು ಸ್ಥಳಾಂತರಗೊಂಡಿವೆ. ನಂದಿಯ ಭಾಗದಿಂದ ದೇವಾಲಯದ ಬಾಗಿಲನ್ನು ಕೊಡಬೇಕಾಗಿತ್ತು. ಆದರೆ ಬಲ ಪಕ್ಕದಲ್ಲಿ ಬಾಗಿಲು ಕೊಟ್ಟಿದ್ದಾರೆ. ಆದ್ದರಿಂದ ಮೂಲ ದೇವಾಲಯದ ಚಿತ್ರಣ ಸಂಪೂರ್ಣವಾಗಿ

ಬದಲಾಗಿದೆ. ಭುವನೇಶ್ವರಿಯು ಕೂಡಾ ಇತ್ತೀಚಿನದು. ಮೂಲ ಮೂರ್ತಿಗಳು ಅಂದರೆ ಶಿವಲಿಂಗ ಮತ್ತು ನಂದಿಯ ವಿಗ್ರಹಗಳು ಮಾತ್ರ ಮೂಲ ಸ್ಥಾನದಲ್ಲಿವೆ. ಆದರೆ ದೇವಾಲಯದ ಇತರ ಭಾಗಗಳು ಅಲ್ಲಿ ಕಾಣಸಿಗುವುದಿಲ್ಲ. ದೇವಾಲಯದ ಬಲ ಪಕ್ಕದಲ್ಲಿ ಲಿಂಗ ನಂದಿಯ ಶಿಲ್ಪಗಳು ಹಾಳಾಗಿವೆ. ಅವುಗಳನ್ನು ಹೊರಗಡೆ ಇರಿಸಿದ್ದಾರೆ.

ಮೇಲಿನ ಅಂಶಗಳನ್ನು ನಾವು ಗಮನಿಸಿದಾಗ ವೈಜ್ಞಾನಿಕವಾಗಿ ನಾವು ಕೌದಿ ಹೊಳೆಯನ್ನು ರಾಮೇಶ್ವರ ದೇವಾಲಯದ ಬಳಿ ಇರುವ ಜಾಗವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಕಾರಣ ನೇರವಾಗಿ ಇಲ್ಲಿಂದ ದಾಟಿದರೆ ಬಳ್ಳೇಶ್ವರ ಗ್ರಾಮಕ್ಕೆ ನಾವು ತಲುಪುತ್ತೇವೆ. ಮತ್ತು ರಾಮೇಶ್ವರ ದೇವಾಲಯದಲ್ಲಿ ಬಂದು ನದಿದಾಟಲು ಮಾರ್ಗ ಬಳಕೆಯಾಗುತ್ತಿದ್ದದು.

ಬೇಲಿಮಲ್ಲೂರ ಪರಿಸರದಲ್ಲಿನ ಪ್ರಾಚ್ಯಾವಶೇಷಗಳನ್ನು ನಾವು ಗಮನಿಸಿದಾಗ ಪ್ರಾಚೀನ ಕಾಲದಿಂದಲೂ ಜನವಸತಿ ಇರುವ ಮತ್ತು ಸಾಂಸ್ಕೃತಿಕವಾಗಿ ಅಭಿವೃದ್ಧಿಯ ಕೇಂದ್ರವಾಗಿದ್ದ ಬೇಲಿಮಲ್ಲೂರು ಗ್ರಾಮವು ಅನೇಕ ಸಣ್ಣಪುಟ್ಟ ಯುದ್ಧಗಳು ನಡೆದ ಸ್ಥಳವಾಗಿದ್ದಕ್ಕೆ ಇಲ್ಲಿ ದೊರೆತಿರುವ ವೀರಗಲ್ಲುಗಳು ನಮಗೆ ಮಾಹಿತಿಯನ್ನು ನೀಡುತ್ತವೆ. ದೇವಾಲಯದಲ್ಲಿರುವ ಶಿಲ್ಪಗಳನ್ನು ಗಮನಿಸಿದಾಗ ಹೊಯ್ಸಳರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೇಂದ್ರವಾಗಿ ಜೊತೆಗೆ ನದಿಯನ್ನು ದಾಟಿದರೆ ಹೊಯ್ಸಳರ ಕಾಲದಲ್ಲಿ ಅಭಿವೃದ್ಧಿ ಹೊಂದಿದ್ದ ಬಳ್ಳೇಶ್ವರ ಒಂದು ವ್ಯಾಪಾರ ಕೇಂದ್ರವಾಗಿದ್ದುದು ತಿಳಿದು ಬರುತ್ತದೆ. ಬಳ್ಳೇಶ್ವರದಿಂದ ದಕ್ಷಿಣಕ್ಕೆ ಬರಲಿಕ್ಕೆ ತುಂಗಭದ್ರಾ ನದಿಯನ್ನು ದಾಟಬೇಕಾಗಿತ್ತು. ದಾಟುವ ಜಾಗವನ್ನು ಕೌದಿ ಹೊಳೆಯೆಂದು ಕರೆದು ಆ ಮೂಲಕ ಸಂಪರ್ಕವನ್ನು ಕಲ್ಪಿಸಲಾಗಿತ್ತು. ಬೇಲಿಮಲ್ಲೂರು ಗ್ರಾಮವು ಹೊಯ್ಸಳರ ಕಾಲದಲ್ಲಿ ಸಂಪರ್ಕ ಕೊಂಡಿಯಂತೆ ಕಾರ್ಯವನ್ನು ನಿರ್ವಹಿಸುತ್ತಿತ್ತು. ಹೊನ್ನಾಳಿಯ ಸೇತುವೆ ನಿರ್ಮಾಣವಾದ ಮೇಲೆ ನದಿಯಲ್ಲಿನ ರಸ್ತೆಗಳು (ಜಲದಾರಿಗಳು) ಅಷ್ಟಾಗಿ ಬಳಕೆಯಾಗುತ್ತಿಲ್ಲ. ಕಾಲ ನಂತರದಲ್ಲಿ ಮರೆತು ಹೋಗಿವೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಟಿ.ಗಿರಿಜಾ, ದಾವಣಗೆರೆ ಇದು ನಮ್ಮ ಜಿಲ್ಲೆ, ನಿಹಾರಿಕಾ ಪ್ರಕಾಶನ, ದಾವಣಗೆರೆ, ೨೦೦೧.

೨. ಲೂಯಿಸ್ ರೈಸ್ ಬಿ. ಎಪಿಗ್ರಪಿಯ ಕರ್ನಾಟಕ, ಸಂ. ೭, ಸರ್ಕಾರಿ ಮುದ್ರಣಾಲಯ, ಬೆಂಗಳೂರು, ೧೯೦೨.

೩. ಕೊಟ್ರೇಶ ಉತ್ತಂಗಿ, ಎನ್. ಹೊನ್ನೆಲೆಗಳು ಸಹನಾದ್ರಿ ಪ್ರಕಾಶನ, ಹೊನ್ನಾಳಿ, ೨೦೦೪.



# ಉಣಕಲ್ಲಿನ ಪ್ರಾಚ್ಯಾವಶೇಷಗಳು, ಉಣಕಲ್ಲಿನ ಐತಿಹ್ಯಗಳು

**ಪ್ರೊ. ಕೆ.ಸಿ. ಮಲ್ಲಿಗವಾಡ***

**ಉಣಕಲ್ಲು** ಗ್ರಾಮ ಹುಬ್ಬಳ್ಳಿ-ಧಾರವಾಡ ರಸ್ತೆಯಲ್ಲಿ ಹುಬ್ಬಳ್ಳಿಯಿಂದ ೬ ಕಿ.ಮೀ. ಅಂತರದಲ್ಲಿದೆ. 'ಉಣಕಲ್ಲು' ಗ್ರಾಮ ಶಾಸನಗಳಲ್ಲಿ ಉಣುಕಲು, ಉಣಗಲು ೫೦, ಉಣುವಕಲ್ಲು ಎಂದು ಹೆಸರುಗೊಂಡಿದ್ದು, ಉಣಕಲು ಕಂಪಣ ೫೦ ಹಳ್ಳಿಗಳನ್ನೊಳಗೊಂಡ ಕೇಂದ್ರ ಸ್ಥಾನವಾಗಿತ್ತು. ಇಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಸವದತ್ತಿ ರಟ್ಟರು, ಯಾದವರು ತಮ್ಮ ಆಡಳಿತದ ಅವಧಿಯಲ್ಲಿ ವಿವಿಧ ಐತಿಹಾಸಿಕ ಕುರುಹುಗಳನ್ನು ಕಾಣಿಕೆಯಾಗಿ ನೀಡಿದ್ದಾರೆ.

ಯಾದವರ ಅರಸ ಮಹದೇವನು ಉಗುರೇಶ್ವರದ ಕೇಶವ ದೇವರ ಸ್ಥಾಪನೆ ಮಾಡಿದನೆಂದೂ ವಾಮದೇವ ಪಂಡಿತನು ಇಲ್ಲಿ ವಿಗ್ರಹ ಪ್ರತಿಷ್ಠಾಪಿಸಿದ ಮಾಹಿತಿ ಇದೆ.

ಗ್ರಾಮದಲ್ಲಿ ಒಟ್ಟು ನಾಲ್ಕು ಶಾಸನಗಳಿವೆ ಒಂದು ಅಪ್ರಕಟಿತ. ಮತ್ತೊಂದನ್ನು ಡಾ. ಎಸ್.ಎಸ್. ಶೆಟ್ಟರ ೧೯೭೪ರಲ್ಲಿ ಈ ಶಾಸನವನ್ನು ಸಂಶೋಧಿಸಿ ಕ್ರಿ.ಶ. ೧೨೭೬ರಲ್ಲಿ ಕಲ್ಯಾಣ ಚಾಲುಕ್ಯರ ಅರಸನ ಕಾಲದ ಸ್ಥಪತಿ ಶಿಲ್ಪಿ ಸಾವಿಮೋಜನು ಉಣಕಲ್ಲಿನ ಚಂದ್ರಮೌಳೇಶ್ವರ ದೇವಾಲಯ ನಿರ್ಮಿಸಿದನೆಂದು ಹೇಳಿದೆ.

'ಸಾವಿಮೋಜ ಸೂತ್ರಧಾರಿ ಮಾಡಿದ ಕಂಬ' ಎಂದು ಶಾಸನದಲ್ಲಿ ತಿಳಿಸಲಾಗಿದೆ.

ಶ್ರೀ ಹನುಮಂತ ದೇವರ ಪಾದಪೀಠದಲ್ಲಿದ್ದ ಮತ್ತೊಂದು ಅಪ್ರಕಟಿತ ಶಾಸನ (ಕ್ರಿ.ಶ. ೧೨ನೇ ಶತಮಾನ) ಸ್ವಸ್ತಿ ಶ್ರೀಮತು ಬೇಹಟ್ಟಿಯ ದೇವೇಶ್ವರದ ವಾದೇಶ್ವರ ಪಂಡಿತರ ಶಿಷ್ಯ ವಾಮದೇವ ಪಂಡಿತರು ಉಗರೇಶ್ವರ ಕೇಶಿದೇವರ ಪ್ರತಿಷ್ಠೆಯ ಮಾಡಿಸಿದರು. ಚಂದ್ರಾರ್ಕ ತಾರಾಂಬರಂ ಎಂದಿದೆ.

೩ನೇ ಶಾಸನ ಗ್ರಾಮದ ಊರ ಚಾವಡಿ ಹತ್ತಿರದ ತೃಟಿತ ಶಾಸನ. ೧೨ನೇ ಶತಮಾನಕ್ಕೆ ಸಂಬಂಧಿಸಿದ್ದು.

ಇಲ್ಲಿ ಮಲ್ಲಿದೇವ ೧೨೬೧-೭೦ ಅವಧಿಯಲ್ಲಿ ಯಾದವ ಚಕ್ರವರ್ತಿ ಮಹಾದೇವರಾಯನು ಆಳ್ವಿಕೆಯಲ್ಲಿದ್ದನೆಂದು ತಿಳಿಸುತ್ತದೆ.

### ೪ನೇ ಶಾಸನ ಅಮರಗೋಳದ ಶಾಸನ ದಾನಶಾಸನ

ಶ್ರೀ ಬನಶಂಕರಿ ದೇವಾಲಯದ ನವರಂಗದ ಕಂಬದ ಮೇಲಿದೆ. ಡಾ. ಗುರವ ಅವರು ಸಂಶೋಧಿಸಿದ್ದಾರೆ.

ಈ ಶಾಸನದ ಪ್ರಕಾರ ಉಣಕಲ್ಲು ಕಂಪಣವಾಗಿತ್ತು ಅಮರಗೊಟ್ಟ ಗ್ರಾಮ ಇದರ ಆಡಳಿತಕ್ಕೆ ಸೇರಿತ್ತೆಂದು ಸೌದೊರೆ ಇಲ್ಲೊಂದು ದೇಗುಲ ನಿರ್ಮಿಸಿದ್ದಲ್ಲದೆ ಅದಕ್ಕೆ ದಾನ ನೀಡಿದ ವಿಷಯ ತಿಳಿಸುತ್ತದೆ.

### ಶ್ರೀ ಹನುಮಂತ ದೇವರ ದೇವಸ್ಥಾನ

ದೇಗುಲ ದಕ್ಷಿಣಾಭಿಮುಖವಾಗಿದೆ. ಇದು ಹಳೇ ಶ್ರೀ ಸಿದ್ದಪ್ಪಾಜ್ಜನ ಗುಡಿಯ ಎದುರಿಗಿದೆ. ೧೯೮೫ರಲ್ಲಿ ಜೀರ್ಣೋದ್ಧಾರಗೊಂಡಿದೆ. ೩ ಅಂಕಣಗಳನ್ನೊಳಗೊಂಡಿದೆ. ವಿಶಾಲವಾದ ಹಜಾರ, ೧೨ ಶಿಲಾಸ್ಥಂಬ ತೊಲೆ ಬೋದುಗೆಗಳ ಮೇಲೆ ನಿಂತ ಶಿಲಾಮಂಟಪವಾಗಿದೆ. ಸುತ್ತಲೂ ಪ್ರದಕ್ಷಿಣಾ ಪಥವಿದೆ. ಹಾಗೂ ಕೆಳಗೆ ಪಾತಾಳ ಅಂಕಣವಿದೆ. ಗರ್ಭಗೃಹದ ಬಾಗಿಲು ಚೌಕಟ್ಟುಗಳು ಅಲಂಕೃತಗೊಂಡಿವೆ. ಸುರಳಿಗೆತ್ತನೆಯಿಂದ ಕೂಡಿವೆ. ಹಣೆಪಟ್ಟಿ ಮಧ್ಯದಲ್ಲಿ ಶ್ರೀ ವಿಘ್ನೇಶ್ವರ ವಿಗ್ರಹವಿದೆ. ಗರ್ಭಗೃಹದಲ್ಲಿ ಶ್ರೀ ಹನುಮಂತ ದೇವರ ವಿಗ್ರಹ ನಿಂತ ಭಂಗಿಯಲ್ಲಿದೆ. ಮೇಲ್ಭಾಗದಲ್ಲಿ ಗೋಪುರವಿದೆ. ವಿಗ್ರಹ ೮ ಅಡಿ ಎತ್ತರವಾಗಿದೆ. ೪ ಅಡಿ ಅಗಲ, ಕಪ್ಪು ಮಿಶ್ರಿತ ಬಳಪದ ಕಲ್ಲಿನಿಂದ ತಯಾರಿಸಲಾಗಿದೆ. ಬಾಗಿದ ನಡು ಅಭಯಹಸ್ತ ಎಡಗೈಯಲ್ಲಿ ಹೂಗುಚ್ಚ ಹಿಡಿದು ಮುಖದಲ್ಲಿ ಕೋರೆ ಮೀಸೆ, ನಡದಲ್ಲಿ ಖಠಾರಿ, ಕಾಲ್ಗಡಗ, ತೋಳಬಂದಿ, ಕೊರಳಲ್ಲಿ ಲಿಂಗಧಾರಣ ಮಾಡಲಾಗಿದೆ.

ದೇಗುಲದ ಎದುರಿಗೆ ಕಲ್ಯಾಣದ ಚಾಲುಕ್ಯರ ಕಾಲದ ೨ ಅಲಂಕೃತ ಗಜ್ಜರಿಗಂಬಗಳಿವೆ. ೪ ಅಡಿ ಎತ್ತರದ ವಿನ್ಯಾಸದಲ್ಲಿ ಒಂದರಂತೆ ಮತ್ತೊಂದಿಲ್ಲ. ಸುರಳಿಗೆತ್ತನೆ, ಲತಾ ಕುಂಜ ಗುಗ್ಗರಿಗಳನ್ನು ನಯನಮನೋಹರವಾಗಿ ನಿರ್ಮಿಸಲಾಗಿದೆ. ಇವು ಪ್ರಾಚೀನ ಕಾಲದ ಶ್ರೀ ಹನುಮಂತ ದೇವಾಲಯಕ್ಕೆ ಬಳಸಿದವುಗಳಾಗಿರುವ ಸಾಧ್ಯತೆಗಳಿವೆ. ಎದುರುಗಡೆ ದ್ವೀಪಸ್ಥಂಭವಿದೆ. ಕಾರ್ತಿಕ, ದೀಪಾವಳಿ

* ನಿವೃತ್ತ ಪ್ರಾಚಾರ್ಯರು, ಯಲವಧಾಳ ಸಾ. ತಾವರಗೇರಿ ಪೋಸ್ಟ್, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ.

ಮಾಸದಲ್ಲಿ ದೀಪಾರಾಧನೆಗೆ ಇವುಗಳನ್ನು ಬಳಸುತ್ತಿರುವರು. ೨ ೧/೨ ಅಗಲಳತೆಯ ದೇವರ ಪಾದುಕೆಗಳೂ ಇಲ್ಲಿವೆ.

**ವೀರಗಲ್ಲು:** ಶ್ರೀ ಹನುಮಂತ ದೇವರ ಬಲಭಾಗದಲ್ಲಿದೆ ೪ ಅಡಿ ಎತ್ತರ, ೨ ಅಡಿ ಅಗಲ, ೬ ಅಡಿ ದಪ್ಪ. ವೀರಗಲ್ಲು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ೩ ಪಟ್ಟಿಕೆಗಳನ್ನೊಳಗೊಂಡಿದೆ. ೧ನೇ ಪಟ್ಟಿಕೆಯಲ್ಲಿ ವೀರನು ಡಾಲು, ಖಡ್ಗ, ಎದೆಗವಚ, ನಡಪಟ್ಟಿಗಳನ್ನು ಧರಿಸಿ ವೀರಾವೇಶದಿಂದ ಹೋರಾಡುತ್ತಿದ್ದಾನೆ. ಎದುರಿಗೆ ೮ ಜನ ವೈರಿ ತಂಡವಿದೆ. ಅವರು ಡಾಲು, ಬಿಲ್ಲು, ಬಾಣ, ಖಡ್ಗ, ಖಠಾರಿ ಬಳಸಿ ಕಾದಾಡುತ್ತಿದ್ದ ದೃಶ್ಯವಿದೆ. ೨ನೇ ಪಟ್ಟಿಕೆಯಲ್ಲಿ ವೀರ ಸ್ವರ್ಗಾರೋಹಣ ಮಾಡುತ್ತಿರುವ ದೃಶ್ಯ. ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ದೇವಕನ್ನಿಕೆಯರು ಪಲ್ಲಕ್ಕಿ ಹೊತ್ತಿಕೊಂಡು ನೃತ್ಯ ಮಾಡುತ್ತ ವಾದ್ಯ ಮೇಳದೊಂದಿಗೆ ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಪಲ್ಲಕ್ಕಿ ನಾಲ್ಕು ಕಡೆ ಕಮಾನುಗಳನ್ನು ಹೊಂದಿದ್ದು ಅಲಂಕೃತವಾಗಿದೆ. ದೇವಕನ್ನಿಕೆಯರು, ಕೈಬಳೆ, ತೋಳ ಬಂದಿ ಕೇಶಾಲಂಕಾರಗೊಂಡಿದ್ದಾರೆ. ಕೈಬಳೆ ಇದ್ದು ತಾಳ, ಮದ್ದಳೆಗಳನ್ನು ನುಡಿಸುತ್ತಾ ಮೇಲೆ ಹೋಗುತ್ತಿದ್ದಾರೆ.

**೩ನೇ ಪಟ್ಟಿಕೆ:** ಮಧ್ಯದಲ್ಲಿ ಶಿವಲಿಂಗವಿದೆ. ಬ್ರಾಹ್ಮಣ ಪೂಜೆಗೈಯ್ಯುತ್ತಿದ್ದಾನೆ. ಬಲಗೈಯಲ್ಲಿ ಗಂಟೆ, ನಡದಲ್ಲಿ ಧೋತಿ, ತಲೆಯಲ್ಲಿ ಜುಟ್ಟು ಇದೆ. ಎಡಭಾಗದಲ್ಲಿ ನಂದಿ ವಿಗ್ರಹವಿದೆ.

**ಮಹಾಸತಿ ಕಲ್ಲು:** ಕ್ರಿ.ಶ. ೧೨ನೇ ಶತಮಾನ, ೪ ಅಡಿ ಎತ್ತರ, ೨ ಅಡಿ ಅಗಲ, ೫ ಅಡಿ ದಪ್ಪ ನಿಂತ ಭಂಗಿಯಲ್ಲಿದೆ. ಯುದ್ಧದಲ್ಲಿ ಮಡಿದ ವೀರನ (ಪತ್ನಿ) ಸ್ಮರಣಾರ್ಥ ಸ್ವರ್ಗಾರೋಹಣಕ್ಕೆ ಸಿದ್ಧವಾದಂತಿದೆ. ಮಹಾಸತಿ, ಪಾದದವರೆಗೆ ಸೀರೆ, ರವಿಕೆ, ಕೇಶಾಲಂಕಾರ, ಕೊರಳ ಹಾರ, ಕಿವಿಯೋಲೆ, ಕೈಕಡಗ, ಬಳೆ, ಕಾಲ್ಗಡಗ ಧರಿಸಿದ್ದಾಳೆ. ಎಡಗೈಯಲ್ಲಿ ಚಿಕ್ಕ ಶಿವಲಿಂಗವಿದ್ದು, ಬಲಗೈ ಮೊಳಕೈವರೆಗೆ ಮಡಿಚಿ ಸ್ವರ್ಗದತ್ತ ಕೈ ಮಾಡಿದೆ. ಇದೊಂದು ವ್ಯಾಸನ ತೋಳು, ಪಾದಗಳು ಅಳತೆಗನುಗುಣವಾಗಿ ಕೆತ್ತಲ್ಪಟ್ಟಿವೆ. ತಲೆಯ ಹಿಂದೆ ಕೇಶದಿಂದ ತುರುಬು ಕಟ್ಟಿ ಅದಕ್ಕೆ ಹೂವಿನಿಂದ ಅಲಂಕೃತಗೊಳಿಸಲಾಗಿದೆ.

## ಶ್ರೀ ಕಲ್ಮೇಶ್ವರ ದೇವಾಲಯ

ಗ್ರಾಮದ ಮಧ್ಯಭಾಗದಲ್ಲಿದೆ. ೧೧೦ ಅಡಿ ಉದ್ದ, ೪೦ ಅಡಿ ಅಗಲ, ೩೦ ಅಡಿ ಎತ್ತರವಾಗಿದೆ. ೧೨ನೇ ಶತಮಾನಕ್ಕೆ ಸಂಬಂಧಿಸಿದ್ದು. ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾಗಿರುವುದು. ಈಗ ಗರ್ಭಗೃಹ ನವರಂಗಗಳು ಮಾತ್ರ ಉಳಿದಿವೆ. ಇತ್ತೀಚಿನ ದಿನಗಳಲ್ಲಿ ಭಕ್ತರು ಜೀರ್ಣೋದ್ಧಾರಗೈದಿದ್ದಾರೆ. ಗೋಪುರ ನೂತನವಾಗಿ ನಿರ್ಮಾಣವಾಗಿದೆ. ಪೂರ್ವಾಭಿಮುಖವಾಗಿದೆ. ಪ್ರವೇಶದ್ವಾರ, ಹಜಾರ, ಸಭಾಮಂಟಪ, ನವರಂಗ, ಗರ್ಭಗೃಹಗಳನ್ನು ಹೊಂದಿದೆ. ಸಭಾಮಂಟಪ ೪ ಕಡೆ ತೊಲೆ, ಬೋದುಗೆಗಳೂ ಅಲಂಕೃತಗೊಂಡಿವೆ. ಮೇಲ್ಛತ್ತಿನಲ್ಲಿ ಮತ್ಸ್ಯಕನ್ನಿಕೆ, ನಾಗಕನ್ನಿಕೆಯರ ವಿಗ್ರಹಗಳನ್ನು ಬಿಡಿಸಲಾಗಿದೆ. ಅಷ್ಟ ಕೋನಾಕೃತಿಯಲ್ಲಿ ಕಲ್ಲು ಜೋಡಿಸಲಾಗಿದೆ. ಸಭಾಮಂಟಪದಲ್ಲಿ ನಂದಿ ವಿಗ್ರಹ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲ್ಛತ್ತು ಅಷ್ಟ ಕೋನಾಕೃತಿಯಲ್ಲಿದೆ. ಮಧ್ಯದಲ್ಲಿ ಕಮಲಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಮಧ್ಯದಲ್ಲಿ ಶ್ರೀ ಕಲ್ಮೇಶ್ವರ ದೇವರ ಶಿವಲಿಂಗ ಪ್ರತಿಷ್ಠಾಪಿಸಿದೆ.

ಗೋಪುರವು ಗಚ್ಚು ಗಾರೆಯಿಂದ ನಿರ್ಮಿಸಿದ್ದಾಗಿದೆ. ದೇಗುಲ ಮಧ್ಯದಲ್ಲಿ ಸಾಲಂಕೃತ ಸಪ್ತಮಾತೃಕೆಯರ ವಿಗ್ರಹಗಳಿವೆ. ವಿಗ್ರಹಗಳ ಕೆಳಗೆ ಅವರ ವಾಹನಗಳನ್ನು ಬಿಡಿಸಲಾಗಿದೆ. ದೇವಸ್ಥಾನವು ಗ್ರಾಮದ ಮಧ್ಯದಲ್ಲಿ ಆಯಕಟ್ಟಿನ ಸ್ಥಳದಲ್ಲಿದೆ. ಉಣಕಲ್ಲಿಗೆ ಈ ದೇಗುಲವು ಕಳಸಪ್ರಾಯವಾಗಿದೆ.

## ನಂದಿ ಮಂಟಪ

ಶ್ರೀ ಕಲ್ಮೇಶ್ವರ ದೇವಸ್ಥಾನದ ಎದುರಿಗೆ ಎತ್ತರವಾದ ಸ್ಥಳದಲ್ಲಿ ಪ್ರತ್ಯೇಕ ನಂದಿ ಮಂಟಪ ಅಚ್ಚುಕಟ್ಟಾಗಿ ನಿರ್ಮಾಣವಾಗಿದೆ. ಬೃಹದಾಕಾರವಾದ ನಂದಿ ವಿಗ್ರಹ ಸುಮಾರು ಆರು ಅಡಿ ಉದ್ದ, ೪ ಅಡಿ ಅಗಲ, ೫ ಅಡಿ ಎತ್ತರವಾಗಿದೆ. ಇದಕ್ಕೆ ಪ್ರತ್ಯೇಕವಾದ ಶಿಲಾಮಂಟಪ ಸುಮಾರು ೧೦ ಅಡಿ ಎತ್ತರವಾದ ಜಗಲಿಯ ಮೇಲೆ ಕಟ್ಟಲಾಗಿದೆ. ಇದೂ ಸಹ ಶ್ರೀ ಕಲ್ಮೇಶ್ವರ ದೇವರ ಸಮಕಾಲೀನ ದೇಗುಲವಾಗಿದೆ. ಕಪ್ಪು ಮಿಶ್ರಿತ ಬಳಪದ ಕಲ್ಲಿನಲ್ಲಿ ವಿಗ್ರಹ ತಯಾರಿಸಿದ್ದು ಎಡಗಾಲು ಮುಂದೆ ಮಾಡಿ ಮಲಗಿದ ಭಂಗಿಯಲ್ಲಿದೆ.

## ಚಂದ್ರಮೌಳೇಶ್ವರ ದೇವಸ್ಥಾನ ಚದರಲಿಂಗ ದೇಗುಲ

ಕ್ರಿ.ಶ. ೧೨ನೇ ಶತಮಾನ ಕಲ್ಯಾಣಿ ಚಾಲುಕ್ಯರ ಆಡಳಿತದ ಅವಧಿಯಲ್ಲಿ ನಿರ್ಮಾಣವಾಗಿದೆ. ಪೂರ್ವಾಭಿಮುಖವಾಗಿದೆ. ನಾಲ್ಕು ದಿಕ್ಕಿನಲ್ಲಿ ಪ್ರವೇಶದ್ವಾರಗಳಿವೆ. ದೇವಾಲಯದ ತುಂಬೆಲ್ಲ ಅತಿ ಸೂಕ್ಷ್ಮವಾದ ಕೆತ್ತನೆಗಳನ್ನು ರಚಿಸಲಾಗಿದೆ. ಸಾವಿವೋಜ ಎಂಬ ತಂತ್ರಜ್ಞನು ನಿರ್ಮಿಸಿದ್ದನೆಂದು ದೇವಾಲಯದ ಒಳಗಿರುವ ಕಂಬದ ಅಡ್ಡಕದಲ್ಲಿರುವ ಶಾಸನದಲ್ಲಿ ಕೆತ್ತಲಾಗಿದೆ. ಪೂರ್ವದ ಪ್ರವೇಶದ್ವಾರದ ಅಲಂಕೃತ ಚೌಕಟ್ಟುಗಳು ೨ ಪಟ್ಟಿಕೆಗಳಲ್ಲಿವೆ. ಲತಾ, ಕುಂಜ, ಹೂ, ಹಣೆಪಟ್ಟಿಯಲ್ಲಿ ಗಜಲಕ್ಷ್ಮಿ ವಿಗ್ರಹವಿದೆ. ಚೌಕಟ್ಟಿನ ಎಡಬಲಗಳಲ್ಲಿ ಅತಿ ಸೂಕ್ಷ್ಮ ಕೆತ್ತನೆ ಬಳಸಲಾಗಿದೆ. ದೇಗುಲದ ಎಡಬಲಗಳಲ್ಲಿ ಜಾಲಾಂದರಗಳನ್ನು ಅಳವಡಿಸಲಾಗಿದೆ. ಇಲ್ಲಿ ಹೂಬಳ್ಳಿ ಸ್ತ್ರೀವಾದ್ಯ ಮೇಳಗಳನ್ನು ಕೊರೆಯಲಾಗಿದೆ.

ದೇವಾಲಯದ ಸುತ್ತಲೂ ಬ್ರಹ್ಮ, ವಿಷ್ಣು, ನಟರಾಜ, ಮಹೇಶ್ವರರನ್ನು ಹೊರ ಗೋಡೆಯಲ್ಲಿ ಬಿಡಿಸಲಾಗಿದೆ. ಕೆಲ ಭಾಗದಲ್ಲಿ ಜಾಲಾಂದರಗಳ ಸುತ್ತಲೂ ಗಜನಾಲು, ವಾದ್ಯಮೇಳ, ಅಶ್ವಾರೂಢ ಸೈನ್ಯ ನಾಟ್ಯವಾಡುವ ಗಣಪತಿ, ಶಂಕರ, ಕಲಾಕೃತಿಯು ಅರಳಿ ನಿಂತಿದೆ. ದೇಗುಲದಲ್ಲಿ ನಾಲ್ಕು ಮುಖ್ಯ, ಹಾಗು ಒಳಗಡೆ ನಾಲ್ಕು ಒಟ್ಟು ೪ ಬೃಹತ್ ಪ್ರವೇಶದ್ವಾರಗಳಿವೆ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದೆ ದೇಗುಲ ೨ ಅವಧಿಯಲ್ಲಿ ನಿರ್ಮಾಣವಾದಂತೆ ಭಾಸವಾಗುತ್ತದೆ.

ಗರ್ಭಗೃಹದ ಎಡಬಲದ ಗೋಡೆಗಳಲ್ಲಿ ಸಿಂಹ, ಅಶ್ವದ ಜೊತೆ ಸೈನಿಕರ ಸಾಲು ಗೋಚರಿಸುತ್ತಿವೆ. ಕೆಲ ಕಡೆಗಳಲ್ಲಿ ಮದನಿಕೆಯರು ಶಿಲಾಬಾಲಿಕೆಯರು ಕಾಣಸಿಗುತ್ತಾರೆ. ಕೆಲವರು ನಾಟ್ಯಭಂಗಿಯಲ್ಲಿದ್ದಾರೆ. ದೇವಾನುದೇವತೆಯರಾದ ಲಕ್ಷ್ಮಿ, ಸರಸ್ವತಿ, ದ್ರಾಕ್ಷಾಯಣಿ, ಪಾರ್ವತಿ ಮೊದಲಾದವರ ವಿಗ್ರಹಗಳು, ನಾಟ್ಯಭಂಗಿಯಲ್ಲಿದ್ದ ನಟರಾಜ ಎಡಪಾದದಿಂದ ಶಿವನನ್ನು ನೆಲಕ್ಕುರುಳಿಸಿ ತುಳಿದಿದ್ದಾನೆ. ಕೈಯಲ್ಲಿ ತ್ರಿಶೂಲ, ಅಭಯಹಸ್ತ ಧರಿಸಿ ಸುತ್ತಲೂ ವೃತ್ತಾಕಾರವಾದ ಪ್ರಭಾವಳಿ ಮಧ್ಯದಲ್ಲಿದ್ದಾನೆ. ದೇಗುಲ ಅಷ್ಟಕೋನಾಕೃತಿಯಲ್ಲಿವೆ. ಬ್ರಹ್ಮದೇವ ತ್ರಿಮುಖಿಯಾಗಿದ್ದಾನೆ. ಚತುರ್ಭುಜ ವಿದ್ದು ಬಲಗೈಯಲ್ಲಿ ಬ್ರಹ್ಮಕಲಶ, ಪರಶು, ಕೆಳಗಡೆ ನವಿಲು ಮತ್ತೊಂದು ವಿಷ್ಣು ವಿಗ್ರಹ, ಶಂಖ, ಚಕ್ರ, ಗದೆ, ಬಲಗೈ ಅಭಯಹಸ್ತವಿದೆ, ದೇಗುಲ ಮೂಲೆಗೊಂದರಂತೆ ದೇವಕೋಷ್ಟ ಗಳನ್ನು ಪ್ರತಿಷ್ಠಾಪಿಸಿದ್ದಾರೆ.

## ಶ್ರೀ ಚನ್ನಬಸವಣ್ಣ ದೇವಸ್ಥಾನ

ಶ್ರೀ ಚನ್ನಬಸವಣ್ಣನವರು ಉಳಿವೆಗೆ ಹೋಗುವ ಸಂದರ್ಭದಲ್ಲಿ ಉಣಕಲ್ಲಿನ ಈ ಸ್ಥಳದಲ್ಲಿ ತಂಗಿ ಪೂಜೆ ಪ್ರಸಾದ ಸ್ವೀಕರಿಸಿದ ಸ್ಮರಣಾರ್ಥ ಇಲ್ಲೊಂದು ಶ್ರೀ ನಂದಿ ವಿಗ್ರಹವಿಟ್ಟು ಪೂಜಿಸುತ್ತಾ ಬಂದರು. ನಂತರ ೧೮ನೇ ಶತಮಾನದಲ್ಲಿ ಬ್ರಿಟೀಶ್ ಆಡಳಿತದಲ್ಲಿ ಇಲ್ಲೊಂದು ಬೃಹತ್ ಕೆರೆ ನಿರ್ಮಿಸಿದ್ದರು. ಆಗ ಶ್ರೀ ಚನ್ನಬಸವಣ್ಣನವರ ದೇಗುಲವನ್ನು ಎತ್ತರವಾದ ಜಗುಲಿ ಮೇಲೆ ನಿರ್ಮಿಸಿ ಭಕ್ತರ ದರ್ಶನಕ್ಕೆ ಅನುಕೂಲ ಮಾಡಲಾಗಿದೆ. ಈಗ ಪ್ರತಿ ಭಾರತ ಹುಣ್ಣಿಮೆಯಂದು ಇಲ್ಲಿ ಬೃಹತ್ ಜಾತ್ರೆ ರಥೋತ್ಸವ ಜರುಗುವುದು.

## ಶ್ರೀ ರಾಮಲಿಂಗೇಶ್ವರ ದೇವಸ್ಥಾನ

ಈ ದೇವಾಲಯವು ಗ್ರಾಮದ ಶ್ರೀ ಕಲ್ಮೇಶ್ವರ, ಚದರ ಲಿಂಗೇಶ್ವರ ದೇವಾಲಯದ ಸಮಕಾಲೀನವಾದದ್ದು. ಹುಬ್ಬಳ್ಳಿ-ಧಾರವಾಡ ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿದೆ. ಪ್ರಾಚೀನ ಕಾಲದಿಂದಲೂ ಇಲ್ಲೊಂದು ಶ್ರೀ ರಾಮಲಿಂಗೇಶ್ವರ ಸ್ಥಾವರ ಲಿಂಗ ಮಾತ್ರ ಇತ್ತು. ಆದರ ನಂತರ ಭಕ್ತರು ಇಲ್ಲೊಂದು ಬೃಹತ್ ದೇಗುಲ ನಿರ್ಮಿಸಿ ಸುಂದರವಾದ ಪೀಠ ಜೊತೆಗೆ ೨ ಶ್ರೀ ನಂದಿ ವಿಗ್ರಹಗಳನ್ನು ಒಂದು ಶ್ರೀ ಮಾರುತಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಭಕ್ತಕೋಟಿಗೆ ದರ್ಶನಕ್ಕೆ ಅವಕಾಶ ಕಲ್ಪಿಸಿದ್ದಾರೆ. ಶ್ರೀ ರಾಮಲಿಂಗ ವಿಗ್ರಹ ಅಷ್ಟಕೋನಾಕೃತಿ ಪೀಠದ ಮೇಲಿದೆ. ಮೇಲೆ ಬಾಣ, ಜಲಹರಿ ಇದೆ.

## ಶ್ರೀ ವೀರಭದ್ರ ದೇಗುಲ

ಗ್ರಾಮದ ಮಧ್ಯಭಾಗದಲ್ಲಿದೆ. ಪೂರ್ವಾಭಿಮುಖವಾಗಿದೆ. ಈಗ ದುರ್ಬಲವಾದ ಕಾರಣ ಭಕ್ತರು ಜೀರ್ಣೋದ್ಧಾರ ಕೈಗೊಂಡು ಗರ್ಭಗೃಹದ ಮೇಲೆ ಗೋಪುರ ನಿರ್ಮಿಸಿದ್ದಾರೆ. ವಿಗ್ರಹ ಅತ್ಯಾಕರ್ಷಕವಾಗಿ ಕೊರಳಲ್ಲಿ ರುಂಡಮಾಲೆ ಧರಿಸಿ ಬಲಗೈ ಅಭಯಹಸ್ತ, ತ್ರಿಶೂಲ, ಡಮರುಗ, ಬಾಣ, ಎಡಬಲಗಳಲ್ಲಿ ದಕ್ಷಬ್ರಹ್ಮ, ರುದ್ರಾಕ್ಷಿ ಮೂರ್ತಿ ಇದೆ. ಪ್ರಸೂತಾ ದೇವಿಯರನ್ನು ಬಿಡಿಸಲಾಗಿದೆ.

## ಶ್ರೀ ವೀರಾಂಜನೇಯ ಗುಡಿ

ಗ್ರಾಮದ ಪಶ್ಚಿಮದ ಭಾಗದಲ್ಲಿ ಶ್ರೀ ಸಿದ್ಧಾಪ್ಪಜ್ಜರ ಗುಡಿ ಮುಂಭಾಗದಲ್ಲಿರುವ ಶ್ರೀ ಹನುಮಂತ ದೇವಸ್ಥಾನವು ದಕ್ಷಿಣಾಭಿಮುಖವಾಗಿದೆ. ೪ ಅಡಿ ಎತ್ತರ, ೩ ಅಡಿ ಅಗಲವಾದ ಚಿಕ್ಕ ದೇಗುಲವಾಗಿದೆ. ವಿಜಯನಗರ ಶೈಲಿ ಹೋಲುವಂತಿದೆ.

## ವೀರಗಲ್ಲು

ಉಣಕಲ್ಲಿನ ಹೊಸ ಸಿದ್ದಪ್ಪಜ್ಜನ ಗುಡಿ ಆವರಣದಲ್ಲಿರುವ ಶ್ರೀ ಹನುಮಂತ ದೇವರ ಗುಡಿ ಎಡಬಲಗಳಲ್ಲಿ ನಿಲ್ಲಿಸಿದ ವೀರಗಲ್ಲು, ೩ ಪಟ್ಟಿಕೆ ಹೊಂದಿದೆ. ೪' x ೨' ಅಳತೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೊರಡಿಸಲಾಗಿದೆ. ೧ನೇ ಪಟ್ಟಿಕೆಯಲ್ಲಿ ಯುದ್ಧದ ಸನ್ನಿವೇಶ ವೀರ ಖಡ್ಗ, ಡಾಲು, ಕತ್ತಿ ಹಿಡಿದು ವೈರಿ ಸೈನ್ಯದ ಜೊತೆ ಹೋರಾಡುತ್ತಿದ್ದಾನೆ. ೨ನೇ ಪಟ್ಟಿಕೆಯಲ್ಲಿ ವೀರನನ್ನು ದೇವಕನ್ನಿಕೆಯರು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ವಾದ್ಯಮೇಳಗಳೊಂದಿಗೆ ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ೩ನೇ ಪಟ್ಟಿಕೆಯಲ್ಲಿ ಶಿವಲಿಂಗವಿದ್ದು ಪೂಜಾರಿ ಪೂಜಿಸುತ್ತಿದ್ದಾನೆ. ಬಲಗಡೆ ವೀರ ಕುಳಿತಿದ್ದಾನೆ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಬಿಡಿಸಲಾಗಿದೆ.

## ಮಹಾಸತಿ ಕಲ್ಲು

ಇದರಲ್ಲಿಯೂ ೩ ಪಟ್ಟಿಕೆಗಳಿವೆ. ೧ನೇ ಪಟ್ಟಿಕೆಯಲ್ಲಿ ಮಹಿಳೆ ಶವದ ಮುಂದೆ ಕುಳಿತು ರೋದನಗೈಯ್ಯುತ್ತಿದ್ದಾಳೆ. ೩ನೇ ಪಟ್ಟಿಕೆಯಲ್ಲಿ ದೇವಗನ್ನಿಕೆಯರು ವಾದ್ಯಮೇಳದೊಂದಿಗೆ



ಮಹಾಸತಿಯನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮಹಿಳೆ ತನ್ನ ಕೂದಲನ್ನು ಹರಡಿ, ಕೈಬಳೆ ತೆಗೆದು ದುಃಖಿಸುತ್ತಿರುವ ದೃಶ್ಯವಿದೆ. ೩ನೇ ಪಟ್ಟಿಕೆಯಲ್ಲಿ ಮಹಾಸತಿ ಕರ ಮುಗಿದು ಶಿವಲಿಂಗದ ಮುಂದೆ ಕುಳಿತಿದ್ದಾಳೆ. ಎಡಗಡೆ ಗೋವು ಕರುವಿನ ಚಿತ್ರ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರ ವಿಗ್ರಹ ತೃಟಿತವಾಗಿದೆ.



**ಶ್ರೀ ಸಿದ್ದಪ್ಪಜ್ಜನ ದೇವಸ್ಥಾನ**

ಉಣಕಲ್ಲಿನ ಮಹಾನ್ ಸಾಧಕ ಶ್ರೀ ಸಿದ್ದಪ್ಪಜ ೧೮ನೇ ಶತಮಾನದ ಆದಿಯಾಗಿ ಅಂತ್ಯದಲ್ಲಿ ತಮ್ಮ ಇರುವಿಕೆಯನ್ನು ಸ್ಪಷ್ಟಪಡಿಸಿದ ಹಠಯೋಗಿ ಕಾಯಕ ನಿಷ್ಠೂರರಾದವರೇ ಉಣಕಲ್ಲಿನ ಪೂಜ್ಯ ಶ್ರೀ ಸಿದ್ದಪ್ಪಜ್ಜನವರು ತಾವು ಐಕ್ಯವಾದ ಸ್ಥಳದಲ್ಲಿ ಭಕ್ತರು ಬೃಹತ್ ಪ್ರಮಾಣದ ದೇಗುಲ ನಿರ್ಮಿಸಿ ನಿತ್ಯವೂ ಶ್ರೀ ಸಿದ್ದಪ್ಪಜ್ಜನ ವಿಗ್ರಹಕ್ಕೆ ರುದ್ರಾಭಿಷೇಕ, ಬಿಲ್ವಾರ್ಚನೆ, ಯಜ್ಞ, ಹೋಮ, ಹವನಗಳನ್ನು ನಡೆಸುತ್ತಾರೆ.

**ಲೇಖನ ತಯಾರಿಸಲು ಸಹಕಾರ ನೀಡಿದ ಗಣ್ಯರು:** ಶ್ರೀಮತಿ ಹನುಮಾಕ್ಷಿ ಗೋಗಿ, ಶ್ರೀ ರಾಜೇಂದ್ರಪ್ಪ, ಶ್ರೀಮತಿ ಅಶ್ವಿನಿ ಕಡ್ಲಿ, ಸಾ. ಬೇಲೂರ, ಶ್ರೀ ಚನವೀರಪ್ಪ ಚ. ಮಲ್ಲಿಗವಾಡ, ಸಾ. ಯಲವಧಾಳ, ಶ್ರೀ ಎಸ್.ಎಂ. ಹಳೇಮನಿ, ವಕೀಲರು, ಉಣಕಲ್ಲ, ಹುಬ್ಬಳ್ಳಿ, ಶ್ರೀ ಪಕ್ಕೀರೇಶ, ನಂದಳ್ಳಿ, ಬೆಂಗಳೂರು, ಶ್ರೀ ಕಲ್ಲಪ್ಪಣ್ಣ ಮರೋಳ, ಶ್ರೀ ಬಸಪ್ಪ ಗುಡಿಹಾಳ, ಸಾ. ತಾವರಗೇರಿ, ಪೂಜ್ಯ ಶ್ರೀ ದಯಾನಂದ ಮಹಾಸ್ವಾಮಿಗಳ ಶ್ರೀ ಸಿದ್ಧಾರೂಢ ಬೃಹನ್ಮಠ ಬಮ್ಮಿಗಟ್ಟಿ.





# ಮೈಸೂರಿನ ಸ್ಮಾರಕ ಶಿಲ್ಪಗಳು

ಟಿ.ಎಲ್. ಜಗದೀಶ್*

ಮೈಸೂರು ಪ್ರಾಚೀನ ಸಂಸ್ಕೃತಿಯ ಸಲೆಯನ್ನು ಹೊಂದಿರುವ ಪ್ರದೇಶ. ಶಿಲಾಯುಗದ ಕಾಲದಿಂದಲೂ ಮಾನವತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಬಂದಿರುವುದು ಈ ಸ್ಮಾರಕಗಳಿಂದ ತಿಳಿದುಬರುತ್ತದೆ. ಮೈಸೂರಿನ ವ್ಯಾಪ್ತಿಗೆ ಒಳಪಡುವ ಈರನಗೆರೆ, ಹಳೇಕೆಸರೆ, ಶಕಹಳ್ಳಿ, ಕ್ಯಾತಮಾರನ ಹಳ್ಳಿ, ಮಾದಹಳ್ಳಿ, ಹೆಮ್ಮನಹಳ್ಳಿ, ಹಂಚ್ಯಾ, ಬೂತಗಹಳ್ಳಿ, ಕುಕ್ಕರಹಳ್ಳಿ, ಬೋಗಾದಿ, ಪಡುವಾರಳ್ಳಿ, ಮುಂತಾದ ಊರುಗಳಲ್ಲಿ ನಿಲ್ಲಿಸಲಾಗಿರುವ ಸ್ಮಾರಕ ಶಿಲ್ಪಗಳಾದ ವೀರ ಮಾಸ್ತಿಗಲ್ಲು, ತುರುಗೋಳ್ ವೀರಗಲ್ಲು, ಮಾಸ್ತಿಗಲ್ಲು, ಆತ್ಮಬಲಿ ಮಾಡಿಕೊಂಡಿರುವ ಸ್ಮಾರಕಗಳು ಕಣಶಿಲೆಯಿಂದ ಕೆತ್ತಿರುವ ಉಬ್ಬುಶಿಲೆಗಳಾಗಿವೆ. ಈ ಸ್ಮಾರಕಳಿಗೆ ಬಳಸಿರುವ ಶಿಲಾಪ್ರಕಾರಗಳನ್ನು ಪ್ರಸ್ತಾಪಿಸದೆ ಅವುಗಳ ವರ್ಣನೆ ಮತ್ತು ವಿಶ್ಲೇಷಣೆಗೆ ಒತ್ತು ನೀಡಲಾಗಿದೆ.

## ವೀರಗಲ್ಲುಗಳು

ಮೈಸೂರು ಸಾಂಸ್ಕೃತಿಕ ನಗರಿಯಾಗಿದ್ದೂ ಹಲವಾರು ವಿಶೇಷತೆಯನ್ನು ಒಳಗೊಂಡಿದೆ. ಅಲ್ಲದೆ ಸುತ್ತಮುತ್ತ ಲಿನ ಹಳ್ಳಿಗಳು ಸಾವಿರಾರು ವರ್ಷಗಳ ಇತಿಹಾಸವನ್ನು ಸ್ಮಾರಕ ರೂಪದಲ್ಲಿ ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ. ಅಂತಹ ವೀರಗಲ್ಲುಗಳು ಮೈಸೂರಿನಲ್ಲಿ ವಿಪುಲವಾಗಿ ಸಿಗುತ್ತವೆ. ಈ ವೀರಗಲ್ಲುಗಳಲ್ಲಿ ಶಾಸನ ಸಹಿತ ವೀರಗಲ್ಲುಗಳ ಸಂಖ್ಯೆಗಿಂತ ಶಾಸನ ರಹಿತ ವೀರಗಲ್ಲುಗಳ ಪ್ರಮಾಣವೇ ಅಧಿಕವಾಗಿದೆ.

ಮೈಸೂರಿನ ವಿವಿಧ ಹಳ್ಳಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಈ ವೀರಗಲ್ಲುಗಳು ಕಂಡುಬರುತ್ತವೆ. ಹಳೇಕೆಸರೆಯಲ್ಲಿ ಅಪ್ರಕಟಿತ ತುರುಗೋಳ್ ಶಿಲಾವೀರಗಲ್ಲು ಇರುವು ದನ್ನು ನೋಡಬಹುದು. ಶಿಲ್ಪವು ಒಂದು ಹಂತವನ್ನು ಒಳಗೊಂಡಿದೆ. ಒಬ್ಬ ತುರುಗಳ್ಳನು ಹಸುವನ್ನು ಹೊಡೆದುಕೊಂಡು ಹೋಗುತ್ತಿರುವ ಚಿತ್ರವಿದೆ. ಹಿಂದೆ ಇಬ್ಬರು ವೀರರು ಆಯುಧವನ್ನಿಡಿದು ಬೆನ್ನಟ್ಟುತ್ತಿರುವ ಸುಂದರ ಚಿತ್ರಣ ಈ ವೀರಗಲ್ಲಿನಲ್ಲಿ ಕಂಡರಿಸಲಾಗಿದೆ. ಈ ರೀತಿ ಒಂದು ಹಂತವನ್ನು ಒಳಗೊಂಡ ಈ ವೀರಗಲ್ಲಿನಲ್ಲಿ ತುರುಗೋಳ್ ಕದನದ ಚಿತ್ರಣವಿದೆ. ಇದು ವಿಜಯನಗರ ಕಾಲದ ತುರುಗಳ್ ಶಾಸನವಾಗಿದೆ.

**ತುರುಗೋಳ್ ವೀರಗಲ್ಲು:** ಮಾದಹಳ್ಳಿಯ ಮಲ್ಲಪ್ಪನ ದೇವಸ್ಥಾನದ ಹತ್ತಿರಇರುವ ತುರುಗೋಳ್ ವೀರಗಲ್ಲು ೫ ಅಡಿ ಉದ್ದವಾಗಿದ್ದು, ಮೂರು ಅಡಿ ಅಗಲವಾಗಿದೆ. ಮೂರು ಹಂತಗಳನ್ನು ಒಳಗೊಂಡಿರುವ ಈ ವೀರಗಲ್ಲನ್ನು ಕಣಶಿಲೆಯಿಂದ ಕೆತ್ತಿದ್ದು, ಮೊದಲನೆ ಹಂತದಲ್ಲಿ ತುರುಗಳನ್ನು ಕರೆದೊಯ್ಯುತ್ತಿದ್ದ ಕಳ್ಳರ ಜೊತೆ ಕಾದಾಟ ನಡೆಯುತ್ತಿರುವ ದೃಶ್ಯವನ್ನು ಕಡೆಯಲಾಗಿದೆ. ಶತ್ರುಗಳಿಂದ ತುರುಗಳನ್ನು ಬಿಡಿಸಿಕೊಳ್ಳಲು ವೀರನು ಹೋರಾಡುತ್ತಿದ್ದಾನೆ. ವೀರನು ಭರ್ಜಿಯಿಂದ ಕಳ್ಳರನ್ನು ಚುಚ್ಚುತ್ತಿರುವ ಚಿತ್ರಣವಿದೆ. ನಡುವಿನಲ್ಲಿ ವೀರನ ಹಿಂಬದಿಯಲ್ಲಿ ಕತ್ತಿ ತೂಗಾಡುತ್ತಿದೆ. ನಿಂತಿರುವ ಶತ್ರುವು ಕತ್ತಿಯಿಂದ ವೀರನಿಗೆ ಚುಚ್ಚಲು ಅಣಿಯಾಗುತ್ತಿರುವಂತೆ ತೋರುತ್ತದೆ. ಶತ್ರುಗಳನ್ನು ಭರ್ಜಿಯಿಂದ ಚುಚ್ಚಿ ತನ್ನ ಅಪ್ರತಿಮ ಶೌರ್ಯವನ್ನು ಪ್ರದರ್ಶಿಸುವಂತೆ ಶಿಲ್ಪಿಯು ಚಿತ್ರಿಸಿದ್ದಾನೆ. ಈ ಹೋರಾಟದಲ್ಲಿ ವೀರನು ಹೋರಾಡಿ ಮಡಿದಿದ್ದಾನೆ.

ಎರಡನೆಯ ಹಂತದಲ್ಲಿ ವೀರನು ಶ್ವೇತಛತ್ರಿಯ ಕೆಳಗೆ ಕೈಮುಗಿದು ಕುಳಿತಿದ್ದಾನೆ. ಚಾಮರಧಾರಿಣಿಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣವಿದೆ. ವೀರನನ್ನು ಕರೆದೊಯ್ಯಲು ದೇವತೆಗಳೇ ಬಂದಿರುವಂತೆ ಚಿತ್ರಿಸಲಾಗಿದೆ. ಈ ಚಿತ್ರಣವು ಸತ್ತ ವೀರನು ಅಪ್ರತಿಮ ವೀರನಾಗಿದ್ದು ಪ್ರಮುಖ ಸ್ಥಾನದಲ್ಲಿದ್ದಂತೆ ತೋರುತ್ತದೆ. ಮೂರನೇ ಹಂತದಲ್ಲಿ ವೀರನು ಕೈಮುಗಿದು ಪದ್ಮಾಸನದಲ್ಲಿ ಕುಳಿತ್ತಿದ್ದು ಯತಿಯೊಬ್ಬನು ಕೈಯಲ್ಲಿ ಗಂಟೆ ಬಾರಿಸುತ್ತ ಶಿವಲಿಂಗಕ್ಕೆ ಮತ್ತು ನಂದಿಗೆ ಪೂಜಿಸುತ್ತಿರುವ ಚಿತ್ರಣವಿದೆ. ಲಿಂಗದ ಪಕ್ಕದಲ್ಲಿ ತ್ರಿಶೂಲವಿದ್ದು ಶಿವಲಿಂಗದ ಹಿಂಬದಿಯಲ್ಲಿ ಸಹಸ್ರದಳದ ಕಮಲವನ್ನು ಚಿತ್ರಿಸಿದಂತಿದೆ.

**ವೀರ ಮಾಸ್ತಿಕಲ್ಲು:** ಮಾದಹಳ್ಳಿಯ ಮಲ್ಲಪ್ಪನ ದೇವಾಲಯದ ಹತ್ತಿರವಿರುವ ವೀರಮಾಸ್ತಿಗಲ್ಲು ಸುಮಾರು ೬ ಅಡಿ ಉದ್ದ ಮತ್ತು ಮೂರು ಅಡಿ ಅಗಲದ ವೀರಗಲ್ಲು

* ಕನ್ನಡ ಸಹಾಯಕ ಪ್ರಾಧ್ಯಾಪಕರು, ಮಹಾರಾಣಿ ಕಲಾ ಕಾಲೇಜು, ಮೈಸೂರು.

ಶಿಲ್ಪವಿದೆ. ಇದು ಮೂರು ಹಂತದ ಉಬ್ಬುಶಿಲ್ಪಗಳನ್ನು ಹೊಂದಿದೆ. ಮೊದಲ ಹಂತದಲ್ಲಿ ಆನೆಗಳ ಮೇಲೆ ಕುಳಿತ್ತಿರುವ ಶತ್ರುಗಳು ವೀರನ ಕಡೆಗೆ ಮುನ್ನುಗ್ಗುತ್ತಿರುವ ಚಿತ್ರವಿದೆ. ಆನೆಯ ಕಾಲ್ತುಳಿತಕ್ಕೆ ಹಲವು ಜನರು ಪ್ರಾಣ ಕಳೆದುಕೊಂಡಿದ್ದಾರೆ. ವೀರನ ಹಿಂಬದಿಯಲ್ಲಿ ಕುದುರೆಯೇರಿ ಕುಳಿತ ವೀರನು ಕತ್ತಿಯೆತ್ತಿ ಹೊಡೆಯುವ ಯತ್ನದಲ್ಲಿದ್ದಾನೆ. ಇನ್ನೊಬ್ಬ ಸೈನಿಕನು ಕತ್ತಿ ಮತ್ತು ಗುರಾಣಿಯನ್ನು ಹಿಡಿದು ವೀರನ ಹಿಂಬದಿಯಲ್ಲಿದ್ದಾನೆ. ವೀರನು ಕತ್ತಿಯಲ್ಲಿ ಶತ್ರು ವೀರರನ್ನು ತುಂಡರಿಸಿರುವುದು ಅವನ ಶೌರ್ಯದ ಸಂಕೇತದಂತಿದೆ. ನಡುವಿನಲ್ಲಿ ಬಾಕು ತೂಗಾಡುತ್ತಿದೆ. ಶತ್ರುಗಳ ವಿರುದ್ಧ ವೀರನು ವೀರಾವೇಶದಿಂದ ಹೋರಾಡುತ್ತಿದ್ದಾನೆ.

ಎರಡನೆ ಹಂತದಲ್ಲಿ ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಮಡಿದ ವೀರನು ಪಲ್ಲಕ್ಕಿಯ ಮೇಲೆ ಪದ್ಮಾಸನದ ಮೇಲೆ ಕೈಮುಗಿದು ಕುಳಿತ್ತಿದ್ದಾನೆ. ಈ ಪಲ್ಲಕ್ಕಿಯ ಸಮೇತ ವೀರನನ್ನು ಅಪ್ಸರೆಯರು ಹೊತ್ತೊಯ್ಯುತ್ತಿರುವ ಶಿಲ್ಪಗಳಿವೆ.

ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕೈಗಳನ್ನು ಮುಗಿದು ನಿಂತಿದ್ದಾನೆ. ಅವನ ಜೊತೆ ಅವನ ಪತ್ನಿಯೂ ಸಹ ಕೈಮುಗಿದು ಕುಳಿತ್ತಿದ್ದು ಗಂಡನ ಜೊತೆ ಆಕೆಯೂ ಸಹಗಮನ ಮಾಡಿರುವುದನ್ನು ಸೂಚಿಸುತ್ತದೆ. ಕಾಳಮುಖ ಯತಿಯೊಬ್ಬ ಶಿವನನ್ನು ಪೂಜಿಸುತ್ತಿದ್ದಾನೆ. ಪಕ್ಕದಲ್ಲಿ ನಂದಿಯ ಚಿತ್ರಣವಿದ್ದು ಅದರ ಬಲಭಾಗದಲ್ಲಿ ಮತ್ತೊಬ್ಬ ಕಾಳಾಮುಖ ಯತಿಯು ನಿಂತಿದ್ದಾನೆ. ವೀರಗಲ್ಲಿನ ಮೇಲ್ಭಾಗದಲ್ಲಿ ಸೂರ್ಯಚಂದ್ರರ ಶಿಲ್ಪಗಳಿವೆ. ವೀರಗಲ್ಲಿನ ಲಲಾಟದಲ್ಲಿ ಸಿಂಹಲಲಾಟವಿದೆ. ಇದು ಶಿಲ್ಪಿಯ ಕಲಾನೈಪುಣ್ಯತೆಗೆ ಹಿಡಿದ ಕನ್ನಡಿಯಂತಿದೆ.

ಇದೇ ಮಾದಹಳ್ಳಿಯ ಮಲ್ಲಪ್ಪನ ದೇವಾಲಯದ ಹತ್ತಿರ ವಿರುವ ವೀರಮಾಸ್ತಿಕಲ್ಲು ೫ ಅಡಿ ಉದ್ದ ३ ಅಡಿ ಅಗಲವಿದ್ದು ೧೫ನೇ ಶತಮಾನಕ್ಕೆ ಸೇರಿದುದಾಗಿದೆ. ಈ ವೀರಗಲ್ಲು ಮೂರು ಹಂತಗಳಲ್ಲಿ ಕಡೆಯಲಾಗಿದೆ. ಮೊದಲನೆ ಹಂತದಲ್ಲಿ ಊರಳಿ ವಿನ ಕಾಳಗದಲ್ಲಿ ಯುದ್ಧ ಮಾಡುತ್ತಿರುವ ವೀರನು ಎಡಗೈಯಲ್ಲಿ ಗುರಾಣಿ ಹಿಡಿದಿದ್ದು, ಬಲಗೈಯಲ್ಲಿ ಭರ್ಜಿ ಯಿಂದ ಶತ್ರುವೀರನ ಹೊಟ್ಟೆಗೆ ಚುಚ್ಚಿದ್ದಾನೆ. ವೀರನ ಹಿಂಬದಿಯಲ್ಲಿ ಇಬ್ಬರು ವೀರರು ಎಡಗೈಯಲ್ಲಿ ಗುರಾಣಿ ಹಿಡಿದಿದ್ದು ಬಲಗೈಯಲ್ಲಿ ಕತ್ತಿಯಿದೆ. ಶತ್ರುವಿನ ಹಿಂಬದಿಯಲ್ಲಿ ಬಿಲ್ಲುಬಾಣಗಳನ್ನು ಹಿಡಿದಿರುವಇನ್ನೊಬ್ಬ ಶತ್ರುವೀರನಿದ್ದಾನೆ.

ಎರಡನೆ ಹಂತದಲ್ಲಿ ದೇವಕನ್ನಿಕೆಯರು ನರ್ತನ ಮಾಡುತ್ತಾವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವ ಚಿತ್ರಣವನ್ನು ಆಕರ್ಷಕವಾಗಿ ಕಡೆಯಲಾಗಿದೆ. ಅವರ ಜೊತೆ ಇಬ್ಬರು ಚಾಮರಧಾರಣಿಯರು ಇದ್ದಾರೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕೈಮುಗಿದು ನಿಂತಿದ್ದು ಅವನ ಬಲಭಾಗದಲ್ಲಿ ಆತನ ಹೆಂಡತಿಯು ಪದ್ಮಾಸನ ಹಾಕಿ ಕೈಮುಗಿದು ಕುಳಿತಿದ್ದಾಳೆ. ಬಲಭಾಗದಲ್ಲಿ ನಂದಿಯನ್ನು ಕಡೆಯಲಾಗಿದ್ದು ಅದರ ಪಕ್ಕದಲ್ಲಿ ಉರಿಯುತ್ತಿರುವ ದೀಪವಿದೆ. ಈ ವೀರಗಲ್ಲಿನ ಪಟ್ಟಿಕೆಯಲ್ಲಿ ಶಾಸನವನ್ನು ಕೊರೆಯಲಾಗಿದೆ. ಶಾಸನ ಪಾಠ ಸವೆದಿದೆ.

**ಹೆಮ್ಮನಹಳ್ಳಿ ವೀರ ಮಾಸ್ತಿಕಲ್ಲು:** ಮೈಸೂರು ಸಮೀಪವಿರುವ ಹೆಮ್ಮನಹಳ್ಳಿಯ ಮಹಾಲಿಂಗೇಶ್ವರ ದೇವಾಲಯದ ಮುಂದೆ ಇರುವ ಈ ವೀರಮಾಸ್ತಿಕಲ್ಲು ಸುಮಾರು ೧೭ನೇ ಶತಮಾನದ್ದೆನ್ನಬಹುದು. ಇದು ಸುಮಾರು ಎರಡು ಅಡಿ ಉದ್ದವಿದ್ದು, ಎರಡು ಅಡಿ ಅಗಲವಿದೆ. ಇದು ಒಂದು ಪಟ್ಟಿಕೆಯನ್ನೊಂದಿದ್ದು ವೀರನು ಶತ್ರುವೀರನ ಜೊತೆಯಲ್ಲಿ ಹೋರಾಡುವುದರ ಮೂಲಕ ಅವರ ಭರ್ಜಿಯ ಇರಿತದಿಂದ ಸಾವನ್ನಪ್ಪಿರಬಹುದೆಂದು ತಿಳಿದು ಬರುತ್ತದೆ. ವೀರನು ಮಡಿದಿರುವುದರಿಂದ ಸತಿಯುತಾನು ಸಹ ಗಂಡನ ಜೊತೆ ಸಹಗಮನ ಮಾಡಿರುವಂತೆ ಕಲ್ಲನ್ನು ಕಡೆಯಲಾಗಿದೆ. ವೀರನು ಎಡಗೈಯನ್ನು ಮೇಲೆತ್ತಿದ್ದು, ಕೈನ ಬಳಿ ಮಾದಲದ ಹಣ್ಣನ್ನು ಕೊರೆಯಲಾಗಿದೆ. ಇದು ಅಮಂಗಳ ನಿವಾರಕವೆಂಬಂತೆ ಚಿತ್ರಿಸಲಾಗಿದೆ. ವೀರನ ಬಲಬದಿಯಲ್ಲಿ ಅವನ ಹೆಂಡತಿಯ ಚಿತ್ರವಿದ್ದು, ಬಲಗೈಯನ್ನು ಮೇಲೆತ್ತಿ ಗಂಡನನ್ನೆ ದೃಷ್ಟಿಸುತ್ತಿರುವಂತೆ ಬಿಡಿಸಲಾಗಿದೆ. ವಿವಿಧ ಆಭರಣ ಉಡುಗೆ–ತೊಡುಗೆಗಳಿಂದ ಅಲಂಕೃತಳಾದ ಮಹಿಳೆಯು ಲೋಕದ ಜನರನ್ನು ಆಶೀರ್ವದಿಸುತ್ತ ಸಹಗಮನಕ್ಕೆ ಸಿದ್ಧಳಾದಂತೆ ಶಿಲ್ಪಿಯು ಕಡೆದಿದ್ದಾನೆ.

ಇದೇ ಹೆಮ್ಮನಹಳ್ಳಿ ಗ್ರಾಮದ ಮಹಾಲಿಂಗೇಶ್ವರ ದೇವಸ್ಥಾನದ ಬಳಿ ಅಪರೂಪದ ಮಾಸ್ತಿಶಿಲ್ಪವಿದೆ. ಇದು ಸುಮಾರು ३ ಅಡಿ ಉದ್ದ ೨ ಅಡಿ ಅಗಲವಿರುವ ೭ನೇ ಶತಮಾನದಷ್ಟು ಹಳೆಯ ಸುಂದರ ವಿಗ್ರಹವಾಗಿದೆ. ಮಾಸ್ತಿಕಲ್ಲು ಸಿಕ್ಕಿದ್ದು ಅದು ವೈವಿಧ್ಯಮಯವೂ, ವಿನೂತನವೂ ಆಗಿದೆ. ಇದು ಕಂಬದಿಂದ ಮೂಡಿದಂತಿರುವ ಬಲಗೈ ಎತ್ತಿದ ಮಾಸ್ತಿಕಲ್ಲು ಗಳಿಗಿಂತ ವಿಭಿನ್ನವಾಗಿದೆ. ಸ್ತ್ರೀಯಳ ಪೂರ್ಣಚಿತ್ರವಿರುವ ಈ ಶಿಲ್ಪವು ಬಹಳ ಸುಂದರವಾಗಿದ್ದು, ನೋಡುಗರ ಮನ ಸೆಳೆಯುವಂತಿದೆ. ತಲೆಗೆತುರುಬು ಸಹಿತವಾದ ದಂಡೆ–ಬಾಸಿಂಗವನ್ನು ತೊಟ್ಟಿದ್ದು ತೋಳಬಂದಿ ಸಮೇತ ಕೈಬಳೆಯನ್ನು ಧರಿಸಿದ್ದಾಳೆ. ಕೊರಳಿನಲ್ಲಿ ಕೊರಳ ಪದಕವು ನಾಭಿಯವರೆಗೆ ತೂಗಾಡುವಂತಿದ್ದುಎಡಗೈಯನ್ನು ನಡುವಿನ ಎಡಭಾಗದಲ್ಲಿ ಇಟ್ಟಿದ್ದಾಳೆ. ಸೀರೆಯಲ್ಲಿಯೇ ಕಚ್ಚೆಯನ್ನು ಹೆಣೆದಿದ್ದು ಅಡ್ಡನೆರಿಗೆಗಳು ಮನಮೋಹಕವಾಗಿವೆ. ಬಲಗೈಯನ್ನು ಮೇಲೆ ಎತ್ತಿ ಜನರನ್ನು ಆಶೀರ್ವದಿಸುವಂತೆ



ವೀರಮಾಸ್ತಿಕಲ್ಲು ೧೩ನೇ ಶತಮಾನ (ಮಾದಹಳ್ಳಿ)



ತುರುಗೋಳ್ ವೀರಗಲ್ಲು ೧೪ನೇ ಶತಮಾನ (ಮಾದಹಳ್ಳಿ)



ವೀರಮಾಸ್ತಿಕಲ್ಲು ೧೫ನೇ ಶತಮಾನ (ಮಾದಹಳ್ಳಿ)

ಕಡೆಯಲಾಗಿದೆ. ಸತಿಯ ಹಿಂಬದಿಯಲ್ಲಿ ಆನೆಯ ಚಿತ್ರವಿದೆ.

## ಹುಲಿಬೇಟೆ ವೀರಮಾಸ್ತಿಕಲ್ಲು

ಹುಲಿಬೇಟೆ ವೀರಮಾಸ್ತಿಗಲ್ಲು ಹೆಮ್ಮನಹಳ್ಳಿಯ ಮಹಾಲಿಂಗೇಶ್ವರ ದೇವಾಲಯದ ಮುಂದೆ ಇದೆ. ಇದು ಎರಡು ಅಡಿ ಅಗಲ, ಎರಡು ಅಡಿ ಉದ್ದವಿದೆ. ಊರಿನ ಜನರಿಗೆ ಮತ್ತು ಜಾನುವಾರುಗಳಿಗೆ ಕಂಟಕವಾಗಿ ಪರಿಣಮಿ



ಮಾಸ್ತಿಕಲ್ಲು ೧೩ನೇ ಶತಮಾನ (ಹೆಮ್ಮನಹಳ್ಳಿ)



ಮಾಸ್ತಿಕಲ್ಲು ೧೫ನೇ ಶತಮಾನ (ವೀರನಗೆರೆ)



ಹುಲಿಬೇಟೆ ವೀರಮಾಸ್ತಿಗಲ್ಲು ೧೩ನೇ ಶತಮಾನ (ಹೆಮ್ಮನಹಳ್ಳಿ)



ಮಾಸ್ತಿಕಲ್ಲು ಪಡುವಾರಹಳ್ಳಿ ೧೬ನೇ ಶತಮಾನ



ಮಾಸ್ತಿಕಲ್ಲು ಹೆಮ್ಮನಹಳ್ಳಿ ೭ನೇ ಶತಮಾನ

ಸಿದ್ದ ಹುಲಿಯನ್ನು ಕೊಲ್ಲಲು ವೀರನು ಮುಂದಾಗಿ ಪ್ರಾಣ ಕಳೆದುಕೊಂಡಿರಬಹುದೆಂದು ತಿಳಿದು ಬರುತ್ತದೆ.

**ಮಾಸ್ತಿಕಲ್ಲು:** ಮೈಸೂರು ನಗರವನ್ನೊಳಗೊಂಡು ಅದಕ್ಕೆ ಹೊಂದಿಕೊಂಡತಿರುವ ಹಳ್ಳಿಗಳಲ್ಲಿ ನೂರಾರು ಸಂಖ್ಯೆಯಲ್ಲಿ ಮಾಸ್ತಿಗಲ್ಲುಗಳು ದೊರಕಿವೆ. ಗಂಡನು ಸತ್ತಾಗ ಹೆಂಡತಿಯರು ತಾವು ತಮ್ಮನ್ನು ಸಾವಿಗೆ ಒಡ್ಡಿಕೊಳ್ಳುವಂತೆ ಸಮಾಜ ಪ್ರೇರೇಪಿಸಿರಬಹುದು. ಹಾಗಾಗಿ ಇಂತಹ ಮಾಸ್ತಿಕಲ್ಲುಗಳು ಈ ಮೈಸೂರು ಪ್ರದೇಶದಲ್ಲಿ ವಿಪುಲವಾಗಿವೆ. ಈ ಮಾಸ್ತಿಕಲ್ಲುಗಳನ್ನು ಇನ್ನಿತರ ಪ್ರದೇಶಗಳಿಗಿಂತ ಭಿನ್ನ ಶೈಲಿಯಲ್ಲಿ ಇಲ್ಲಿ ಕಡೆಯಲಾಗಿದೆ. ಕಂಬದಾಕೃತಿಯಿಂದ ಒಡಮೂಡಿದ ಬಲಗೈ ಎತ್ತಿರುವ ಉಬ್ಬು ಶಿಲ್ಪಗಳು ಕಂಡು ಬರುವುದು ಸಾಮಾನ್ಯ. ಆದರೆ ಇಲ್ಲಿ ಇಡೀ ಮನುಷ್ಯಾಕೃತಿಯನ್ನೆ ಪೂರ್ಣಪ್ರಮಾಣದಲ್ಲಿ ಚಿತ್ರಿಸಿ ಆಭರಣಗಳಿಂದ ಅಲಂಕರಿಸಿ ಕೆತ್ತಿರುವುದು ವಿಶೇಷ. ವೀರನು ತನ್ನ ಶೌರ್ಯ ಪ್ರದರ್ಶಿಸಿ ಮಡಿದರೆ ಅವನ ಜೊತೆ ಅವನ ಸತಿಯರು ಸಹಗಮನ ಮಾಡುತ್ತಿದ್ದುದು ಶ್ರೇಷ್ಠ ಎಂಬಂತೆ ಚಿತ್ರಿಸಲಾಗಿದೆ.

## ಪಡುವಾರಳ್ಳಿಯ ಮಾಸ್ತಿಕಲ್ಲು

ಮೈಸೂರಿನ ಪಡುವಾರಳ್ಳಿಯ ಭೂದೇವಿ ಪಾರಂ ಹತ್ತಿರ ಮಾಸ್ತಿಕಲ್ಲು ಇದೆ. ಸುಮಾರು ನಾಲ್ಕು ಅಡಿ ಉದ್ದ ಮತ್ತು ಮೂರುವರೆ ಅಡಿ ಅಗಲವಿರುವ ೧೫ನೇ ಶತಮಾನಕ್ಕೆ ಸೇರಿದ್ದೆನ್ನಲಾದ ಉಬ್ಬು ಶಿಲ್ಪವಿದೆ. ಈ ಕಲ್ಲಿನಲ್ಲಿ ಸತಿಯ ಪೂರ್ಣಚಿತ್ರವನ್ನು ಸುಂದರವಾಗಿ ಕಡೆಯಲಾಗಿದೆ ಕೈಯಲ್ಲಿ ಕೈಕಡಗ ಧರಿಸಿದ್ದು, ಬಲಗೈಯನ್ನು ಎತ್ತಿ ಆಶೀರ್ವದಿಸುವಂತಿದೆ. ಬಲಗೈ ಪಕ್ಕದಲ್ಲಿ ಮಾದಲದ ಹಣ್ಣನ್ನು ಕೊರೆಯಲಾಗಿದ್ದು ಅದು ಅಮಂಗಳ ನಿವಾರಕ ಎಂಬ ಭಾವನೆ ಇದ್ದಂತಿದೆ. ಈ ಸತಿಯ ಕಿವಿಯಲ್ಲಿ ತೂಗಾಡುವ ಓಲೆಗಳನ್ನು ಧರಿಸಿದ್ದು ಹಣೆಯಲ್ಲಿ ದಂಡೆ-ಬಾಸಿಂಗವಿದೆ. ಮೇಲು ಕುಪ್ಪಸದೊಂದಿಗೆ ಉದ್ದನೆಯ ಲಂಗವನ್ನು ನೆರಿಗೆಯಿಂದ ಅಲಂಕರಿಸಲಾಗಿದೆ. ಅಲ್ಲದೆ ಕತ್ತಿನಲ್ಲಿ ತೂಗಾಡುವ ಪದಕವಿದೆ. ಸತಿಯ ತೋಳಿನ ತಳದಲ್ಲಿ ವೀರ ಮತ್ತು ಅವನ ಸತಿಯ ಚಿತ್ರಗಳಿವೆ. ಸತಿಯು ತನ್ನ ಎರಡು ಕೈಗಳನ್ನು ಮೇಲೆತ್ತಿದ್ದು ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಕಮಲವನ್ನು ಹಿಡಿದಿರುವಂತೆ ಬಿಡಿಸಲಾಗಿದೆ. ನೆತ್ತಿಯಲ್ಲಿ ಸೂರ್ಯಚಂದ್ರರ ಚಿತ್ರವನ್ನು ಕಡೆಯಲಾಗಿದೆ.

## ವೀರನಗೆರೆ ಮಾಸ್ತಿಕಲ್ಲು

ಮೈಸೂರು ನಗರದ ವೀರನಗೆರೆಯಲ್ಲಿ ಸಿಕ್ಕಿರುವ ಒಕ್ಕೈಮಾಸ್ತಿಗಲ್ಲು ಮೂರು ಅಡಿ ಅಗಲವಿದ್ದು ಮೂರು ಅಡಿ ಉದ್ದವಿದೆ. ಇದು ೧೪ನೇ ಶತಮಾನದ ಸ್ತ್ರೀಯಳ ಪೂರ್ಣಚಿತ್ರವಿರುವ ಅಪರೂಪದ ಆಕೃತಿಯಾಗಿದ್ದು ಇದನ್ನು ಸುಂದರವಾಗಿ ಕಡೆಯಲಾಗಿದೆ. ಈ ಚಿತ್ರದಲ್ಲಿ ಬಲಗೈಯನ್ನು ಮೇಲೆತ್ತಿದ್ದು ಹೆಬ್ಬೆರಳ ನಡುವೆ ನಿಂಬೆಹಣ್ಣು ಹಿಡಿದಿದ್ದಾಳೆ. ಬಲಗೈ ಹಸ್ತಗಳಲ್ಲಿನ ಬೆರಳುಗಳು ಉದ್ದವಾಗಿವೆ. ತೋಳುಬಂದಿ ಹಾಗೂ ದಪ್ಪ ಬಳೆಗಳನ್ನು ತೊಟ್ಟಿರುವಂತೆ ಚಿತ್ರಿಸಲಾಗಿದೆ. ತಲೆಯಲ್ಲಿ ದಂಡೆ-ಬಾಸಿಂಗ ಮತ್ತು ಕಿವಿಗೆ ದೊಡ್ಡ ಓಲೆಗಳು, ಕೊರಳ ಪದಕವನ್ನು ಎದೆಯ ಕುಪ್ಪಸದ ಮೇಲೆ ತೂಗಾಡುವ ರೀತಿಯಲ್ಲಿ ಕಡೆಯಲಾಗಿದೆ. ನಡುವಿನಲ್ಲಿ ನಡುಪಟ್ಟಿಯಿದ್ದು ಸೀರೆಯಿಂದ ಅಲಂಕರಿಸಲಾಗಿದೆ. ಸತಿಯ ಬಲಗೈಯ ಇಕ್ಕೆಲಗಳಲ್ಲಿ ಸೂರ್ಯಚಂದ್ರರಿದ್ದು, ಕೆಳಗೆ ಪತಿ-ಪತ್ನಿಯರ ಚಿತ್ರಗಳನ್ನು ಬಿಡಿಸಲಾಗಿದೆ.

ಒಟ್ಟಾರೆ ಸ್ಮಾರಕ ಶಿಲ್ಪಗಳು ಮೈಸೂರು ಸುತ್ತಮುತ್ತಲ ಕಡೆಗಳಲ್ಲಿ ಹೇರಳವಾಗಿ ದೊರಕುತ್ತವೆಯಾದರೂ ಹೆಮ್ಮನಹಳ್ಳಿಯಲ್ಲಿರುವ ಈ ಅಪರೂಪದ ಮಾಸ್ತಿ ಶಿಲ್ಪಾಕೃತಿ ವಿಶೇಷವೆನಿಸಿದೆ.






# ಚಿಕ್ಕಯಲ್ಲೂರು, ದೊಡ್ಡಯಲ್ಲೂರಿನ ಪ್ರಾಚೀನ ಸ್ಮಾರಕಗಳು

ಕೆ. ಪುಟ್ಟಕಾಮಯ್ಯ*

**ತು**ಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಹಲವಾರು ಪ್ರಾಚೀನ ಶಾಸನಗಳು, ವೀರಗಲ್ಲುಗಳು ಪತ್ತೆಯಾಗಿವೆ. ಇದೇ ತಾಲ್ಲೂಕಿನ ಇಟಕದಿಬ್ಬನಹಳ್ಳಿ ಹೋಬಳಿ, ಚಿಕ್ಕಯಲ್ಲೂರು ಗ್ರಾಮದಲ್ಲಿ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಕೆಲವು ಪ್ರಾಚೀನ ಸ್ಮಾರಕಗಳು ಕಂಡುಬಂದಿವೆ.

ಈ ಊರಿನಲ್ಲಿ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿರುವ ಜೀವಾಂಜನೇಯಸ್ವಾಮಿ ಗುಡಿ ಮುಂದೆ ಇರುವ ಬೂದಿದಿಬ್ಬವನ್ನು [ಪಾಡೂರು ಎಂದು ಕರೆಯುತ್ತಾರೆ] ಅಗೆದಾಗ ಪ್ರಾಗೈತಿಹಾಸಿಕ ಕಾಲದ ಬೃಹತ್ ಶಿಲಾಯುಗದ [ಕಾಲ ಕ್ರಿ.ಪೂ. ೮೦೦] ಅವಶೇಷಗಳಾದ ಎಲುಬುಗಳು, ಕಬ್ಬಿಣದ ಆಯುಧಗಳಾದ ಕೊಡಲಿ, ಮಚ್ಚು, ಉಳಿ, ಮುಂತಾದ ಉಪಕರಣಗಳಲ್ಲದೇ ಬೂದಿ ಇದ್ದಿಲು ತುಂಬಿದ ಮಣ್ಣಿನ ಮಡಕೆಗಳು ಪತ್ತೆಯಾಗಿವೆ. ಆಂಜನೇಯಸ್ವಾಮಿ ಗುಡಿಯ ಪಕ್ಕದಲ್ಲಿ ಪ್ರಾಚೀನವಾದ ನರಸಿಂಹಸ್ವಾಮಿ ದೇವಾಲಯವಿತ್ತು.

ಊರಿಗೆ ಹೊಂದಿಕೊಂಡಂತೆ ಗುಂಡುತೋಪು ಇದ್ದು, ಆ ಸ್ಥಳದಲ್ಲಿ ಒಂದು ಸುಂದರವಾದ ಪ್ರಾಚೀನ ವೀರಗಲ್ಲು ದೊರೆತಿದ್ದು ಇದು ಕರ್ನಾಟಕದಲ್ಲಿ ದೊರೆತಿರುವ ಅತಿ ವಿರಳ ವೈಷ್ಣವ ವೀರಗಲ್ಲುಗಳಲ್ಲಿ ಒಂದಾಗಿದೆ. ಈ ವೀರಗಲ್ಲು ೩ ೧/೨ ಅಡಿ ಎತ್ತರ ೨ ೧/೨ ಅಡಿ ಅಗಲಿವಿದೆ. ಸ್ಥಳೀಯ ಗ್ರಾನೈಟ್ ಕಲ್ಲಿನಲ್ಲಿ ಚಿತ್ರಿಸಿರುವ ಈ ವೀರಗಲ್ಲು ಎರಡು ಹಂತಗಳನ್ನು ಹೊಂದಿದ್ದು ಅತ್ಯಂತ ಕಲಾತ್ಮಕವಾಗಿದ್ದು ವೀರರು ಯುದ್ಧನಿರತರಾಗಿರುವ ಚಿತ್ರಣ ಮೂಡಿಬಂದಿದೆ. ಒಂದನೇ ಹಂತದಲ್ಲಿ ವೀರರಿಬ್ಬರು ಆಯುಧಗಳನ್ನು ಹಿಡಿದು ಯುದ್ಧ ಮಾಡುತ್ತಿರುವ ದೃಶ್ಯವಿದೆ. ಮುಂದೆ ಇರುವ ವೀರನು ತನ್ನ ಎಡಗೈನಲ್ಲಿ ಡಾಲನ್ನು ಹಿಡಿದಿದ್ದು, ಎತ್ತಿದ ಬಲಗೈನಲ್ಲಿ ಇಬ್ಭಾಗವಾಗಿರುವ ವಿಶಿಷ್ಟ ಚಂದ್ರಾಯುಧವನ್ನು ಹಿಡಿದು ಹೋರಾಡುತ್ತಿದ್ದಾನೆ. ಈತನ ಸಹಚರನಾದ ಮತ್ತೊಬ್ಬ ವೀರನು ಎಡಗೈನಲ್ಲಿ ಬಿಲ್ಲನ್ನು ಹಿಡಿದಿದ್ದು, ಬಲಗೈನಲ್ಲಿ ಬಾಣ ಹಿಡಿದಿದ್ದಾನೆ. ಇಬ್ಬರಿಗೂ ಅಲಂಕಾರಯುಕ್ತವಾದ ಉಡಿಗೆ ತೊಡಿಗೆಗಳಿದ್ದು, ಇವರು ಯಾವುದೋ ಕಾರಣಕ್ಕಾಗಿ ಶತ್ರುಗಳೊಡನೆ ಹೋರಾಡಿ ಮಡಿದಿದ್ದಾರೆ. ಇವರು ವೈಷ್ಣವ ಪಂಥಕ್ಕೆ ಸೇರಿದವರಾಗಿದ್ದರು ಎಂಬುದಕ್ಕೆ ವೀರಗಲ್ಲಿನ ಎರಡನೇ ಹಂತದಲ್ಲಿರುವ ಶಂಖ, ಚಕ್ರಗಳ ಚಿತ್ರಣಗಳು ಆಧಾರವಾಗಿವೆ. ಜೊತೆಗೆ ಸೂರ್ಯ ಚಂದ್ರರ ರೇಖಾಚಿತ್ರಗಳು ಇಲ್ಲಿವೆ. ಪ್ರಾಚೀನತೆಯ ದೃಷ್ಟಿಯಿಂದ ಕ್ರಿ.ಶ. ಸುಮಾರು ೧೦ನೇ ಶತಮಾನಕ್ಕೆ ಸೇರುವ ಈ ವೀರಗಲ್ಲು ನೊಳಂಬರಾಜರ ಕಾಲದ್ದಾಗಿದೆ.

ಈ ಊರಿಗೆ ಸುಮಾರು ಮುಕ್ಕಾಲು ಕಿಲೋಮೀಟರ್ ದೂರವಿರುವ ಹೂವಿನಹಳ್ಳಿ ಯಲ್ಲಪ್ಪನವರ ಜಮೀನಿನಲ್ಲಿರುವ ಮತ್ತೊಂದು ಪ್ರಾಚೀನ ವೀರಗಲ್ಲು ಒಂದು ಅತ್ಯಂತ ಪ್ರಮುಖವಾದ ವೀರಗಲ್ಲು, ಕಲ್ಲಿನ ಎರಡು ಪಾರ್ಶ್ವಗಳಲ್ಲಿ ತಲೆಕೆಳಗಾಗಿ ಬರುವಂತೆ ವಿಶಿಷ್ಟವಾಗಿ ಕೆತ್ತಲಾಗಿದೆ.

ವೀರನೊಬ್ಬನು ಡಾಲು ಖಡ್ಗ ಹಿಡಿದಿರುವಂತೆ ಚಿತ್ರಿಸಿರುವ ಈ ವೀರಗಲ್ಲಿನ ಹಿಂಭಾಗ ಬಹುತೇಕ ಭೂಮಿಯಲ್ಲಿ ಹುದಗಿಹೋಗಿದೆ. ಕ್ರಿ.ಶ. ಸುಮಾರು ೯ನೇ ಶತಮಾನಕ್ಕೆ ಸೇರಿರುವ ಈ ವೀರಗಲ್ಲು ಸಹ ಹೋರಾಟದಲ್ಲಿ ಹತನಾದ ವೀರನ ಸ್ಮಾರಕವಾಗಿದೆ.

ಈ ಊರಿಗೆ ಹೊಂದಿಕೊಂಡಂತೆ ಇರುವ ಯಲ್ಲೂರಿನ ವೀರ ಕ್ಯಾತಯ್ಯನವರ ಹೊಲದಲ್ಲಿ ಮಾಸ್ತಿಕಲ್ಲು ಒಂದು ಪತ್ತೆಯಾಗಿದ್ದು, ೪ ಅಡಿ ಎತ್ತರ ೨ ೧/೨ ಅಡಿ ಅಗಲದ ಗ್ರಾನೈಟ್ ಕಲ್ಲಿನಲ್ಲಿ ಕೆತ್ತಿದ ಸ್ಮಾರಕವಾಗಿದೆ. ಇದರಲ್ಲಿ ಮಾಸ್ತಿ ಹೋದ ಸತಿಯ ಚಿತ್ರಣ ನರ್ತನ ರೂಪದಲ್ಲಿದ್ದು ತನ್ನ ಕೈಗಳಲ್ಲಿ ನಿಂಬೆಹಣ್ಣು ಮತ್ತು ಕನ್ನಡಿ ಹಿಡಿದಿದ್ದು ಕ್ರಿ.ಶ. ಸುಮಾರು ೧೨ನೇ ಶತಮಾನಕ್ಕೆ ಸೇರಿದ್ದು, ಇದೊಂದು ತ್ಯಾಗದ ಪ್ರತೀಕವಾಗಿದೆ.

ಈ ಊರಿಗೆ ಅರ್ಧ ಕಿಲೋಮೀಟರ್ ದೂರದಲ್ಲಿ ಒಂದು ವಾಮನ ಮುದ್ರೆಕಲ್ಲು ಇದ್ದು ಇದರ ಮೇಲ್ಭಾಗದಲ್ಲಿ 'ಚಿಕ ಯಲಕೂರ ಫಲಿ ಮಾರು" ಎಂದು ಸ್ಪಷ್ಟ ಬರಹ ಇದೆ. ಚಿಕಯಲ್ಲೂರು ಭೀಮಗೌಡರ ಹೊಲದಲ್ಲಿದೆ.

* ನಿವೃತ್ತ ಶಿಕ್ಷಕರು, # ೭೭/೧೦, ೨ನೇ ಮುಖ್ಯರಸ್ತೆ, ಪದ್ಮನಾಭನಗರ, ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦೦೭೦.



ಚಿಕ್ಕಯಲ್ಲೂರು ಪಾಡೂರು ದಿಬ್ಬ



ಚಿಕ್ಕಯಲ್ಲೂರಿನ ಮುಂಭಾಗದಲ್ಲಿರುವ ಪ್ರಾಚೀನ ಒರಳಕಲ್ಲು



ಚಿಕ್ಕಯಲ್ಲೂರಿನ ಹೊರಭಾಗದ ಒಂದು ಹೊಲದಲ್ಲಿ ಸಿಕ್ಕಿರುವ ಮಾಸ್ತಿಕಲ್ಲು (ಕಾಲ ಕ್ರಿ.ಶ.ಸು. ೧೨ನೇ ಶತಮಾನ)



ಚಿಕ್ಕಯಲ್ಲೂರು, ಮಧುಗಿರಿ ತಾಲ್ಲೂಕು ಪ್ರಾಚೀನ ವೈಷ್ಣವ ವೀರಗಲ್ಲು ಕಾಲ ಕ್ರಿ.ಶ.ಸು. ೧೦ನೇ ಶತಮಾನ.



ಗಡಿ ರೇಖೆ ವಾಮನ ಮುದ್ರೆಕಲ್ಲು ಚಿಕ್ಕಯಲ್ಲೂರು



ಕಂಬದ ಮೇಲೆ ನಂದಿಮೂರ್ತಿ ಚಿಕ್ಕಯಲ್ಲೂರು



ಚಿಕ್ಕಯಲ್ಲೂರು ಹೂವಿನಹಳ್ಳಿ ಯಲ್ಲಪ್ಪನವರ ಜಮೀನಿನಲ್ಲಿರುವ ವೀರಗಲ್ಲು (ಮುಂಬದಿ)



ಚಿಕ್ಕಯಲ್ಲೂರು ಹೂವಿನಹಳ್ಳಿ ಯಲ್ಲಪ್ಪನವರ ಜಮೀನಿನಲ್ಲಿರುವ ವೀರಗಲ್ಲು (ಹಿಂಬದಿ)



ಮಲ್ಲೇಶ್ವರ ದೇವಸ್ಥಾನದ ಮುಂದೆ ಇರುವ ಸ್ಮಾರಕಗಳು,
ದೊಡ್ಡಯಲ್ಲೂರು



ರಾಗೇ ಮಲ್ಲೇಶ್ವರ ದೇವಸ್ಥಾನದ ಮುಂಭಾಗ, ದೊಡ್ಡಯಲ್ಲೂರು



ದೊಡ್ಡಯಲ್ಲೂರಿನ ಮಲ್ಲೇಶ್ವರನ ದೇವಸ್ಥಾನದ ಮುಂದೆ ಬಿದ್ದಿರುವ
ದ್ವಾರಪಾಲಕನ ವಿಗ್ರಹ



ದೊಡ್ಡಯಲ್ಲೂರಿನ ಮಲ್ಲೇಶ್ವರನ ದೇವಸ್ಥಾನದ ಬಲಭಾಗದಲ್ಲಿ
ನಿಲ್ಲಿಸಿರುವ ವೀರಗಲ್ಲು



ದೊಡ್ಡಯಲ್ಲೂರಿನ ಮಲ್ಲೇಶ್ವರನ ದೇವಸ್ಥಾನದ ಎಡಭಾಗದಲ್ಲಿ ನಿಲ್ಲಿಸಿರುವ ವೀರಗಲ್ಲು



ದೊಡ್ಡಯಲ್ಲೂರಿನ ಮಲ್ಲೇಶ್ವರನ ದೇವಸ್ಥಾನದ ಮುಂಭಾಗದಲ್ಲಿ ಬಿದ್ದಿರುವ ವೀರಗಲ್ಲು

ಇಲ್ಲಿನ ಊರಿಗೆ ಹೊಂದಿಕೊಂಡಿರುವ ನಿವೇಶನ ಕಟ್ಟೆಯೊಂದರ ಮೇಲೆ ೫೧/೨ ಅಡಿ ಎತ್ತರದ ಕಂಬದ ಮೇಲೆ ಸುಂದರವಾದ ಬಸವನ (ನಂದಿ) ಮೂರ್ತಿಯೊಂದಿದೆ. ಇದು ಸುಮಾರು ೧೦ನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ಬಗೆಯ ಎತ್ತರವಾದ ಬಸವನಮೂರ್ತಿ ಅತಿ ವಿರಳವಾಗಿ ದೊರೆಯುತ್ತದೆ.

ಈ ಪ್ರಾಚೀನ ಸ್ಮಾರಕಗಳ ಪತ್ತೆಯಿಂದಾಗಿ ಚಿಕ್ಕಯಲ್ಲೂರು ಪರಿಸರದಲ್ಲಿ ಪ್ರಾಚೀನ ಮಾನವನ ಚಟುವಟಿಕೆಯು ಕ್ರಿ.ಪೂ. ೮೦೦ರಿಂದ ಇಂದಿನವರೆಗೂ ನಿರಂತರವಾಗಿ ನಡೆದುಕೊಂಡು ಬಂದಿದೆ ಎಂಬುದಕ್ಕೆ ಸಾಕ್ಷ್ಯಾಧಾರಗಳು ಲಭಿಸಿದಂತಾಗಿವೆ.

**ದೊಡ್ಡಯಲ್ಲೂರು:** ಚಿಕ್ಕಯಲ್ಲೂರಿಗೆ ಒಂದು ಕಿಲೋಮೀಟರ್ ದೂರದಲ್ಲಿರುವ ದೊಡ್ಡಯಲ್ಲೂರು ಗ್ರಾಮದಲ್ಲಿಯೂ ಸಹ ಕೆಲವು ಅಪರೂಪದ ವೀರಗಲ್ಲುಗಳು ಹಾಗೂ ಒಂದು ಪ್ರಾಚೀನ ಶಿವ ದೇವಾಲಯವಿದೆ.

ಈ ಊರಿನ ಮುಖ್ಯರಸ್ತೆಗೆ ಹೊಂದಿಕೊಂಡಿರುವ ಸರ್ಕಾರಿ ಮಾಧ್ಯಮಿಕ ಶಾಲೆಯ ಆವರಣದಲ್ಲಿ ದೊರೆತಿರುವ ಒಂದು ವೀರಗಲ್ಲು ಗ್ರಾನೈಟ್ ಕಲ್ಲಿನದಾಗಿದ್ದು, ಮೂರು ಹಂತಗಳಲ್ಲಿದ್ದು ಮೊದಲನೆಯ ಹಂತದಲ್ಲಿ ಒಬ್ಬ ವೀರನು ಬಿಲ್ಲುಬಾಣಗಳ ಸಮೇತ ಯುದ್ಧ ಮಾಡುತ್ತಿರುವ ದೃಶ್ಯವಿದೆ. ಆತನು ಬಿಲ್ಲಿಗೆ ಒಟ್ಟಿಗೆ ಮೂರು ಬಾಣಗಳನ್ನು ಹೂಡಿರುವುದು ಮತ್ತು ಆತನ ಮುಂದೆ ಸತ್ತು ಬಿದ್ದಿರುವ ಸೈನಿಕನ ದೃಶ್ಯವಿದೆ. ಆತನ ಹಿಂದೆ ತಾನು ರಕ್ಷಣೆ ಮಾಡಿದ ಗೋವುಗಳ ಚಿತ್ರಣವಿದೆ. ಎರಡನೆಯ ಹಂತದಲ್ಲಿ, ಯುದ್ಧದಲ್ಲಿ ಮಡಿದ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ಆ ವೀರನಿಗೆ ಅಪ್ಸರೆಯರು ಚಾಮರ ಬೀಸುತ್ತ ಸೇವೆ ಮಾಡುತ್ತಿರುವ ದೃಶ್ಯವಿದೆ. ಈ ವೀರಗಲ್ಲು ತುರುಕಾಳಗದಲ್ಲಿ, ಗೋವುಗಳನ್ನು ಕಾಪಾಡಿದಂತಹ ವೀರನ ವೀರಗಲ್ಲು ಐದೂವರೆ ಅಡಿ ಎತ್ತರ, ಮೂರುವರೆ ಅಡಿ ಅಗಲವಿದೆ.

ಈ ಊರಿನ ಒಳಗಡೆ ಒಂದು ಪ್ರಾಚೀನವಾದ ನೊಳಂಬರ ಕಾಲದ ಈಶ್ವರನ ದೇವಸ್ಥಾನವಿದೆ. ಗ್ರಾನೈಟ್ ಕಲ್ಲು ಚಪ್ಪಡಿಗಳಿಂದ ಕಟ್ಟಲಾಗಿದ್ದು, ೨೪ ಕಂಬಗಳಿಂದ ಕೂಡಿದ್ದು, ಪ್ರತಿಯೊಂದು ಕಂಬದಲ್ಲಿ ಶಿವಗಣಗಳ ಕೆತ್ತನೆಯಿದ್ದು,



**ದೊಡ್ಡಯಲ್ಲೂರಿನ ಮಾಧ್ಯಮಿಕ ಶಾಲೆಯ ಮುಂದೆ ನಿಲ್ಲಿಸಿರುವ ವೀರಗಲ್ಲು.**

ಕಲಾತ್ಮಕವಾಗಿದೆ. ದೇವಸ್ಥಾನಕ್ಕೆ ಮೂರು ದ್ವಾರಗಳಿವೆ. ಪ್ರತಿಯೊಂದು ದ್ವಾರದಲ್ಲೂ ದ್ವಾರಪಾಲಕರನ್ನು ಕೆತ್ತಿದ್ದಾರೆ. ಇಲ್ಲಿ ಈಶ್ವರ ಲಿಂಗರೂಪದಲ್ಲಿದ್ದು, ರಾಗೇಮಲ್ಲೇಶ್ವರಸ್ವಾಮಿ ಎಂದು ಕರೆಸಿಕೊಳ್ಳುತ್ತಿದ್ದಾನೆ. ಈ ದೇವಸ್ಥಾನದ ಮುಂಭಾಗದಲ್ಲಿ ಭಿನ್ನವಾಗಿರುವ ದ್ವಾರಪಾಲಕರು, ಬಸವಣ್ಣನ ಮೂರ್ತಿಗಳು, ಒಂದು ದೊಡ್ಡ ಒರಳುಕಲ್ಲು ಸಿಕ್ಕಿವೆ.

ಇದೇ ದೇವಸ್ಥಾನದ ಬಲಭಾಗದಲ್ಲಿ ಇರುವ ವೀರಗಲ್ಲು ಮೂರು ಹಂತದಲ್ಲಿ ಕೆತ್ತಲಾಗಿದೆ.

ಮೊದಲನೆಯ ಹಂತದಲ್ಲಿ ವೀರನು ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದು, ಎಡ ಮತ್ತು ಬಲಗಡೆ ಕುದುರೆಯ ಮೇಲೆ ಕುಳಿತಿರುವ ಯೋಧರ ವಿರುದ್ಧ ಹೋರಾಡುವ ದೃಶ್ಯವಿದೆ. ಎರಡನೇ ಹಂತದಲ್ಲಿ ಹೋರಾಡಿ ಮಡಿದ ವೀರನನ್ನು ಇಬ್ಬರು ದೇವತೆಗಳು ಕೈಲಾಸಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಆ ವೀರನು ಶಿವಲಿಂಗದ ಎದುರು ಕುಳಿತು ಪ್ರಾರ್ಥನೆ ಮಾಡುತ್ತಿರುವ ಮತ್ತು ಕೈಲಾಸಕ್ಕೆ ಕರೆದೊಯ್ದ ವ್ಯಕ್ತಿ ಈ ದೃಶ್ಯವನ್ನು ವೀಕ್ಷಿಸುತ್ತಿರುವ ಚಿತ್ರವಿದೆ. ಮೇಲೆ ಸೂರ್ಯ ಚಂದ್ರರ ಶಿಲ್ಪವಿದೆ. ಇದರ ಎತ್ತರ ಐದೂವರೆ ಅಡಿ, ಮೂರುವರೆ ಅಡಿ ಅಗಲವಿದ್ದು, ಗ್ರಾನೈಟ್ ಕಲ್ಲಿನದಾಗಿರುತ್ತದೆ. ಇನ್ನೊಂದು ವೀರಗಲ್ಲಿದ್ದು ಅದರ ವಿವರಗಳು ಅಸ್ಪಷ್ಟವಾಗಿವೆ.

ಇದೇ ದೇವಸ್ಥಾನದ ಮುಂಭಾಗದಲ್ಲಿ ಸಿಕ್ಕಿರುವ ವೀರಗಲ್ಲು ಮೂರು ಹಂತದಲ್ಲಿದೆ. ಮೊದಲನೆಯ ಹಂತದಲ್ಲಿ ವೀರನು ಹೋರಾಡುತ್ತಿರುವ ದೃಶ್ಯವಿದೆ. ಎರಡನೆಯ ಹಂತದಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದ ವೀರನನ್ನು ಇಬ್ಬರು ಅಪ್ಸರೆಯರು ಕೈಹಿಡಿದು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯಗಳಿವೆ. ಮೂರನೆಯ ಹಂತದಲ್ಲಿ ಅಪ್ಸರೆಯರು ಚಾಮರ ಬೀಸುತ್ತಾ ಸೇವೆ ಮಾಡುತ್ತಿರುವ ದೃಶ್ಯವಿದೆ. ಇದು ೫ ಅಡಿ ಎತ್ತರ ೩೧/೨ ಅಡಿ ಅಗಲವಿದೆ.




# ಬೀರಲದಿನ್ನಿಯ ಪ್ರಾಚ್ಯಾವಶೇಷಗಳು

**ಶಿವಪ್ಪ ನ. ನೀರಲಗಿ***

ಇಂದಿನ ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ವಿಜಯಪುರಕ್ಕೆ ಹೋಗುವಾಗ ನಿಡಗುಂದಿಯಿಂದ ಉತ್ತರಕ್ಕೆ ಸುಮಾರು ೧೮ ಕಿ.ಮೀ ಅಂತರದಲ್ಲಿರುವ ಊರೇ ಬೀರಲದಿನ್ನಿ. ಊರಿನ ನಾಮನಿಷ್ಪತ್ತಿಯನ್ನು ಅವಲೋಕಿಸಿದಾಗ ಬೀರ+ ದಿನ್ನೆ > ಬೀರಲದಿನ್ನಿ ಎಂದಾಗುತ್ತದೆ (ಬೀರ=ವೀರ; ದಿನ್ನಿ ಸ್ವಲ್ಪ ಎತ್ತರದ ಪ್ರದೇಶ). ಅಂದ ಹಾಗೇಯೇ ಈ ಊರು ರಾ ಹೆ ೧೩ರ ಪಕ್ಕದಲ್ಲಿದ್ದು ಸ್ವಲ್ಪ ಎತ್ತರದ ಪ್ರದೇಶದಲ್ಲಿದೆ. ಊರಿನ ನಾಮ ನಿಷ್ಪತ್ತಿಯಲ್ಲಿರುವಂತೆ ಈ ಊರಿನ ಆಂಜನೇಯ ದೇವಾಲಯದಲ್ಲಿ ಯುಗಳ ವೀರರ ಸುಂದರವಾದ ತುರುಗೊಳ್ ವೀರಗಲ್ಲು ಇದ್ದು, ಅದು ಮೂರು ಹಂತಗಳನ್ನೊಳಗೊಡಿದೆ. ಆ ವೀರರು ಸ್ವಲ್ಪ ಎತ್ತರವಾದ ಪ್ರದೇಶದಲ್ಲಿ ತುರಗಳ್ಳರೊಡನೆ ಹೋರಾಡಿ ಮಡಿದಿದ್ದರಿಂದ ಈ ಊರಿಗೆ ಬೀರಲದಿನ್ನಿ ಎಂದು ಹೆಸರು ಬಂದಿದೆ. ವೀರಗಲ್ಲಿನ ಮೊದಲನೆ ಹಂತದಲ್ಲಿ ಇಬ್ಬರೂ ವೀರರು ತುರಗಳ್ಳರೊಡನೆ ಹೋರಾಡುತ್ತಿದ್ದು, ಅವರ ಕೈಯಲ್ಲಿ ಕತ್ತಿ ಮತ್ತು ಡಾಲುಗಳಿವೆ. ವೀರರು ವೀರಮುಡಿಯನ್ನು ಕಟ್ಟಿದ್ದಾರೆ ಹೋರಾಟವು ಬಹು ರಭಸದಿಂದ ನಡೆಯುತ್ತಿದ್ದು, ತುರುಗಳ್ಳರು ಕುದುರೆ ಮೇಲೆ ಕುಳಿತು ವೀರರತ್ತ ಭಲ್ಲೆಗಳನ್ನು ಎಸೆಯುತ್ತಿದ್ದಾರೆ. ವೀರಗಲ್ಲಿನ ಬಲ ಪಾರ್ಶ್ವದಲ್ಲಿ ಹಸುಗಳು ಪಶ್ಚಿಮಾಭಿಮುಖವಾಗಿರುವದರಿಂದ ವೀರರು ಅವುಗಳನ್ನು ತುರುಗಳ್ಳರಿಂದ ರಕ್ಷಿಸಿದ್ದಾರೆ. ಆದರೆ ಇಬ್ಬರು ವೀರರು ಈ ಹೋರಾಟದಲ್ಲಿ ರಣಾಂಗದಲ್ಲಿ ವೀರಮರಣವನ್ನಪ್ಪಿದಾರೆ. ಎರಡನೇ ಹಂತದಲ್ಲಿ ವೀರ ಸ್ವರ್ಗವನ್ನುಪ್ಪಿದ ಆ ಇಬ್ಬರು ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡುಯುತ್ತಿದ್ದಾರೆ. (ಒಬ್ಬೊಬ್ಬ ವೀರನಿಗೆ ಇಬ್ಬಿಬ್ಬ ಅಪ್ಸರೆಯರು) ಮೂರನೆ ಹಂತದಲ್ಲಿ ವೀರ ಸ್ವರ್ಗವನ್ನಪ್ಪಿದ ವೀರರು ಪದ್ಮಾಸನದಲ್ಲಿ ಶಿವಲಿಂಗದ ಮುಂದೆ ಕೈಮುಗಿದು ಕೊಂಡು ಕುಳಿತಿದ್ದು, ಈ ವೀರಗಲ್ಲು ಶೈವ ಸಂಪ್ರದಾಯಕ್ಕೆ ಸೇರಿದುದಾಗಿದೆ ಲಂಗೋಟಿ ಧರಿಸಿದ ಉದ್ದವಾದ ಜಡೆಯನ್ನು ನಿತಂಬವರೆಗೆ ಇಳಿಬಿಟ್ಟ ಕಾಳಮುಖ ಯೋಗಿಯೊಬ್ಬನು ಶಿವಲಿಂಗಕ್ಕೆ ಪೂಜೆಗೈಯುತ್ತಿದ್ದಾನೆ. ಈ ವೀರಗಲ್ಲಿನ ಮೂರು ಹಂತದಲ್ಲಿ ಮೂರು ಪಟ್ಟಿಕೆಗಳಿದ್ದು ಅವುಗಳಲ್ಲಿ ಯಾವುದೆ ಲಿಪಿಗಳಿಲ್ಲ. ಈ ವೀರಗಲ್ಲನ್ನು ಕಪ್ಪುಕಣಶಿಲೆಯಲ್ಲಿ ಕೆತ್ತಲಾಗಿದೆ ಇದೊಂದು ಅಪರೂಪದ ಯುಗಳ ವೀರಗಲ್ಲಾಗಿದ್ದು, ಶಿಲ್ಪಕಲಾ ಲಕ್ಷಣಗಳಿಂದ ಈ ವೀರಗಲ್ಲು ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸೇರಿದ್ದಾಗಿದೆ.

**ಹಂಚಿನಾಳ:** ಈ ಬೀರಲದಿನ್ನಿ ದಕ್ಷಿಣಕ್ಕೆ ಸ್ವಲ್ಪ ಅನತಿ ದೂರದಲ್ಲಿ ಹಂಚಿನಾಳವೆಂಬ ಪ್ರದೇಶವಿದ್ದು; ಸಂಪೂರ್ಣ ಹಾಳಾಗಿದೆ. ಈ ಹಂಚಿನಾಳದ ಸುಮಾರು ೫-೬ ಎಕರೆ ಪ್ರದೇಶದಲ್ಲಿ ದಪ್ಪ ಹಾಗೂ ತೆಳುವಾದ ನಯಗೊಳಿಸಿದ (Thick&thin) ಕೆಂಪು ವರ್ಣದ ಮಡಿಕೆ ತುಣುಕುಗಳು ಈ ಪ್ರದೇಶದ ತುಂಬಾ ಹರಡಿವೆ. ಈ ಅವಶೇಷಗಳನ್ನೂ ತುಲನೆಗೊಳಪಡಿಸಿದಾಗ ಇವು ಬೃಹತ್ ಶಿಲಾಯುಗ ಸಂಸ್ಕೃತಿಗೆ (Meghalithic Culture) ಸೇರಿದವುಗಳೆಂದು ತಿಳಿದುಬರುತ್ತದೆ.

**ಬುದ್ನಿ:** ಬೀರಲದಿನ್ನಿಯಿಂದ ವಾಯುವ್ಯಕ್ಕೆ (North West) ಹಿರಿ ಹಳ್ಳವೆಂದು ಕರೆಯುವ ದೊಡ್ಡ ಹಳ್ಳವಿದ್ದು; ಈ ಹಳ್ಳದ ಎರಡೂ ದಡದಲ್ಲಿ ದಪ್ಪವಾದ ಹಾಗೂ ನಯಗೊಳಿಸಿದ ಕೆಂಪು ವರ್ಣದ ಮಡಿಕೆಯ ತುಣುಕುಗಳು ಸಿಗುತ್ತಿದ್ದು ಇವು ಸಹ ಬೃಹತ್ ಶಿಲಾಯುಗದ ಸಂಸ್ಕೃತಿಗೆ (Meghalithic Culture) ಸೇರಿದವುಗಳಾಗಿವೆ. ಅಲ್ಲದೆ ಈ ಹಳ್ಳದ ದಡದಲ್ಲಿರುವ ಹೊಲಗಳಲ್ಲಿ ರೈತರು ಭೂಮಿಯನ್ನೂ ಉಳುಮೆ ಮಾಡುವಾಗ ಅನೇಕ ಘೋರಿ ಗಳು ಹಾಗೂ ಎಲುಬುಗಳು ಸಿಗುತ್ತವೆ.

**ಬ್ರಹ್ಮಜೆಟ್ಟಿಯ ದೇವಾಲಯ:** ಬುದ್ನಿಯಿಂದ ಪೂರ್ವಕ್ಕೆ ಸ್ವಲ್ಪ ದೂರದ ತೋಟವೊಂದರಲ್ಲಿ ಒಂದು ಬೃಹತ್ ಹುಣಸೆಮರದ ಕೆಳಗೆ ಚಿಕ್ಕದಾದ ಗುಡಿ ಇದ್ದು ಅದರಲ್ಲೊಂದು ಕಪ್ಪು ಕಣಶಿಲೆಯಲ್ಲಿ ನಿರ್ಮಿಸಿದ ಅಪರೂಪದ ದೊಡ್ಡ ಮೂರ್ತಿ ಇದೆ. ಈ ಮೂರ್ತಿಯು 'ಹಾಲುಮತ ಜನಾಂಗದ ದೈವತ ಬ್ರಹ್ಮಜೆಟ್ಟಿಯೆಂದು' ಕರೆಯುತ್ತಾರೆ. ಶ್ರಾವಣ ಮಾಸದಲ್ಲಿ ಮಳೆಬರದಿದ್ದಾಗ ಈ ದೇವರ ಜಾತ್ರೆಯನ್ನು ಮಾಡುತ್ತಾರೆ. ನೋಡಿದರೆ ಈ ಮೂರ್ತಿಯು ರಾಮರಾಯನ

* ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, # ೧೩೬೦, ಅನಿಕೇತನ ರಸ್ತೆ, 'ಜಿ' & 'ಹೆಚ್' ಬ್ಲಾಕ್, ಕುವೆಂಪುನಗರ, ಮೈಸೂರು-೨೩.

ತಲೆಬರುಡೆಯಂತೆ ಭಾಸವಾಗುತ್ತದೆ. ಈ ದೇವರ ಪೂಜಾರಿಗಳನ್ನು ವಿಚಾರಿಸಿದಾಗ ಇವರು ಹಿಂದೆ ವಿಜಯಪುರದ ಆದಿಲ್ ಷಾಹಿಗಳ 'ಹೊನ್ನ ಭಂಡಾರವನ್ನು' ಕಾಯುವ ಕಾವಲುಗಾರರಾಗಿದ್ದು, ಇವರನ್ನು 'ಹೊನ್ನ ಬನ್ನೆಲೆಯರೆಂದು' ಕರೆಯುತ್ತಾರೆ, ಹೀಗೆ ಬೀರಲದಿನ್ನಿಯ ಪ್ರದೇಶವು ಪ್ರಾಗೈತಿಹಾಸಿಕ ಹಾಗೂ ಮಧ್ಯಕಾಲಿನ ಅವಶೇಷಗಳನ್ನೂ ಹೊಂದಿದ ಐತಿಹಾಸಿಕ ಗ್ರಾಮವಾಗಿದೆ.

[ಸಲಹೆ ಸಹಾಕಾರವನ್ನು ನೀಡಿದ ಪ್ರೊ. ಮುರುಗೇಶ್ ಶಿರ್ವಾ (ಉಡುಪಿ) ಕ್ಷೇತ್ರಕಾರ್ಯದಲ್ಲಿ ನೆರವು ನೀಡಿ ಅಮೂಲ್ಯ ಮಾಹಿತಿಯನ್ನೊದಗಿಸಿದ ಶ್ರೀ ಶಿವಣ್ಣ ಪೂಜಾರಿ, ಶ್ರೀ ಅಶೋಕ ಪೂಜಾರಿ, ಶ್ರೀ ಶೈಲ ಪೂಜಾರಿ, ರಾಘವೇಂದ್ರ ಪೂಜಾರಿ ಹಾಗೂ ಶ್ರೀ ನಿಂಗರಾಜು ನೀರಲಗಿ ಇವರಿಗೆ ನನ್ನ ಕೃತಜ್ಞತೆಗಳು]



## ಆಧಾರ ಗ್ರಂಥಗಳು

೧. ಪ್ರಾಚ್ಯವಸ್ತು ಸಂಶೋಧನೆ, ಡಾ. ಅ.ಸುಂದರ

೨. ಪುರತತ್ವ ಶೋಧನೆ, ಡಾ. ಎಸ್. ಶ್ರೀಕಂಠಶಾಸ್ತ್ರಿ.



# "ಹೊನ್ನೂರು ಗ್ರಾಮದ ಭಗ್ನಗೊಂಡ ವೀರಭದ್ರ ದೇವಾಲಯ : ಒಂದು ವಿಶ್ಲೇಷಣೆ"

ಅನಿಲ್ ಎಲ್.*

ಅರಿಕುಠಾರ ಎಂಬ ಹೆಗ್ಗಳಿಕೆಗೆ ಹೆಸರಾದ ಚಾಮರಾಜ ನಗರ ಜಿಲ್ಲೆಯು ಐತಿಹಾಸಿಕವಾಗಿ ಹೆಚ್ಚಿನ ಮಹತ್ವದಿಂದ ಕೂಡಿದೆ. ಈ ಜಿಲ್ಲೆಯ ತಾಲೂಕುಗಳಲ್ಲೇ ಯಳಂದೂರು ಅತ್ಯಂತ ಚಿಕ್ಕ ತಾಲೂಕಾಗಿದೆ. ಇದು ಚಾಮರಾಜನಗರ ಜಿಲ್ಲೆಯ ಪೂರ್ವ ಭಾಗಕ್ಕಿದ್ದು, ಭೂಪಟದಲ್ಲಿ ಇದು ೧೨" ೧೩" ಉತ್ತರ ಅಕ್ಷಾಂಶದಿಂದ ೭೭° ೫' ಪೂರ್ವ ರೇಖಾಂಶದವರೆಗೆ ಹಬ್ಬಿದೆ. ಇಲ್ಲಿ ಸುವರ್ಣಾವತಿ ನದಿಯು ಹರಿಯುತ್ತಿದ್ದು ಫಲವತ್ತತೆಯಿಂದ ಕೂಡಿದೆ. ಈ ದೃಷ್ಟಿಯಿಂದ ಕರ್ನಾಟಕವನ್ನು ಆಳ್ವಿಕೆ ಮಾಡಿದ ಪ್ರಾಚೀನ ರಾಜಮನೆತನ ಗಳಾದ ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಹಾಗೂ ಪಾಳೆಯಗಾರ ರಾದ ಹದಿನಾಡ ಪ್ರಭುಗಳು ಮತ್ತು ಉಮ್ಮತ್ತೂರಿನ ಪ್ರಭುಗಳು ಆಳ್ವಿಕೆ ಮಾಡಿ ಈ ರಾಜಮನೆತನಗಳು ಸಾಂಸ್ಕೃತಿಕವಾಗಿ ಅಂದರೆ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ಶೈಕ್ಷಣಿಕವಾಗಿ ಹೆಚ್ಚಿನ ಪ್ರೋತ್ಸಾಹ ನೀಡಿದ್ದು, ತಮ್ಮ ಆಳ್ವಿಕೆಯ ಕುರುಹುಗಳಾಗಿ ದೇವಾಲಯಗಳನ್ನು ನಿರ್ಮಿಸಿರುವುದರ ಜೊತೆಗೆ ಶಾಸನಗಳನ್ನು ಹಾಕಿಸಿರುವುದನ್ನು ಕಾಣಬಹುದು. ಅಂತಹ ಪ್ರದೇಶಗಳಲ್ಲಿ ಹೊನ್ನೂರು ಗ್ರಾಮವು ಸಹ ಒಂದಾಗಿದೆ. ಹೊನ್ನೂರನ್ನು **'ತುಳುವಲ ಮಹಾದೇವಿ ಚತುರ್ವೇದಿ ಮಂಗಲ'** ಪೊನ್ನೂರು ಎಂಬುದಾಗಿ ಶಾಸನದಲ್ಲಿ ಉಲ್ಲೇಖಿಸಿದೆ. ಈ ಗ್ರಾಮವು ಯಳಂದೂರು ತಾಲ್ಲೂಕಿನ ಪಶ್ಚಿಮದ ಭಾಗದಲ್ಲಿದೆ. ಈ ಗ್ರಾಮದಲ್ಲಿ 'ವೀರಭದ್ರೇಶ್ವರ' ದೇವಾಲಯವಿದ್ದು ಪ್ರಸ್ತುತ ಸಂಪೂರ್ಣವಾಗಿ ಭಗ್ನಗೊಂಡಿದೆ.

ವೀರಭದ್ರೇಶ್ವರ ದೇವಾಲಯವು ಹೊನ್ನೂರು ಗ್ರಾಮದ ಉತ್ತರ ದಿಕ್ಕಿಗೆ ಗದ್ದೆ ಬಯಲಿನಲ್ಲಿದ್ದು ಈ ದೇವಾಲಯವು ಉತ್ತರಾಭಿಮುಖವಾಗಿದೆ. ಇದರ ವಾಸ್ತುಲಕ್ಷಣ ಸರಳವಾಗಿದ್ದು ದ್ವಿಕೂಟ ಮಾದರಿಯಲ್ಲಿದೆ. ಗರ್ಭಗುಡಿ, ಸುಖನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ಈ ದೇವಾಲಯವು ಯಾರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದು ನಿಖರವಾಗಿ ತಿಳಿಯುವುದಿಲ್ಲ. ಆದರೆ ಈ ಪ್ರಾಂತ್ಯದ ಸುತ್ತಮುತ್ತಲಿನ ಗ್ರಾಮಗಳ ಶಾಸನಗಳನ್ನು ಅವಲೋಕಿಸಿದಾಗ ಇದರ ಕಾಲಮಾನ ಸು. ೧೧–೧೨ನೇ ಶತಮಾನಕ್ಕೆ ಸೇರಿದೆ ಎಂಬ ನಿರ್ಣಯಕ್ಕೆ ಬರಬಹುದು ದೇವಾಲಯದ ನಿರ್ಮಾಣ ಕಾರ್ಯಕ್ಕೆ ಇಟ್ಟಿಗೆ, ಗಾರೆ ಮತ್ತು ಗ್ರಾನೈಟ್ ಶಿಲೆಯನ್ನು ಬಳಸಿ ನಿರ್ಮಿಸಲಾಗಿದ್ದು ಈ ದೇವಾಲಯ ಮುಖಮಂಟಪಕ್ಕೆ ಹೊಂದಿಕೊಂಡಂತೆ ಪುಷ್ಕರಣಿ ಇದೆ.

**ಗರ್ಭಗೃಹ :** ಗರ್ಭಗೃಹವು ಸುಮಾರು ೮ x ೮ ಅಡಿ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಭುವನೇಶ್ವರಿಯಿದ್ದು ಸರಳವಾಗಿದೆ. ಗರ್ಭಗೃಹದ ಒಳಭಿತ್ತಿಯಲ್ಲಿ ಕಮಾನಿನಾಕಾರದಲ್ಲಿ ಸುತ್ತಲೂ ಕೂಡುಗಳಿವೆ. ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು ೧½ ಅಡಿ ಎತ್ತರದ ಪದ್ಮ ಪೀಠದ ಮೇಲೆ ತ್ರಿಭಂಗಿಯಲ್ಲಿ ನಿಂತಿರುವ ವೀರಭದ್ರನ ಶಿಲ್ಪವಿದೆ. ಈ ಶಿಲ್ಪವು ಸುಮಾರು ೩ ಅಡಿ ಎತ್ತರವಿದ್ದು ಸುಂದರವಾಗಿದೆ. ಈ ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿಯಿದ್ದು ಪ್ರಭಾವಳಿಯ ಇಕ್ಕೆಲಗಳಲ್ಲಿ ಹೂಬಳ್ಳಿಯ ಕೆತ್ತನೆ ಇದೆ. ಹಾಗೂ ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ವೀರಭದ್ರನು ತ್ರಿಭಂಗಿಯಲ್ಲಿ ನಿಂತಿದ್ದು ನಾಲ್ಕು ಭುಜಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಪಾಶ, ಖಡ್ಗ ಮತ್ತು ಬಾಣವನ್ನು ಹಿಡಿದು ಎಡಗೈಯಲ್ಲಿ ಬಿಲ್ಲು ಮತ್ತು ಗುರಾಣಿಯನ್ನು ಹಿಡಿದಿದ್ದಾನೆ. ಕಿರೀಟ ಮುಕುಟದಾರಿಯಾದ ವೀರಭದ್ರನು ಮೈಮೇಲೆ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಹಾಗೂ ಕಾಲಿಗೆ ಕಾಲು ಕಡಗಗಳು ಮತ್ತು ಪಾದಗಳಿಗೆ ಪಾದರಕ್ಷೆಗಳನ್ನು ಧರಿಸಿ ನಿಂತಿದ್ದಾನೆ. ವೀರಭದ್ರನ ಬಲಭಾಗದ ಇಕ್ಕೆಲಗಳಲ್ಲಿ ದಕ್ಷಬ್ರಹ್ಮನು ತನ್ನ ಎರಡು ಕೈಗಳನ್ನು ಜೋಡಿಸಿ ಕೈ ಮುಗಿಯುತ್ತಿರುವ ರೀತಿಯಲ್ಲಿ ಉಬ್ಬು ಶಿಲ್ಪವಿದೆ. ವೀರಭದ್ರನ ಎಡಭಾಗದಲ್ಲಿ ಗುರಾಣಿಯ ತಳಭಾಗದಲ್ಲಿ ಮನುಷ್ಯನ ರುಂಡವಿದೆ.

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.



ವೀರಭದ್ರ ದೇವಾಲಯದ ಮುನ್ನೋಟ



ವೀರಭದ್ರ ದೇವಾಲಯದ ಪಾರ್ಶ್ವನೋಟ

ಗರ್ಭಗೃಹದ ದ್ವಾರವು ಸರಳವಾಗಿದ್ದು ಯಾವುದೇ ರೀತಿಯ ಲಾಲಾಟಬಿಂಬದಲ್ಲಿ ಯಾವುದೇ ಉಬ್ಬುಶಿಲ್ಪಗಳು ಕಾಣಬರುವುದಿಲ್ಲ. ಗರ್ಭಗೃಹದ ದ್ವಾರದ ಎರಡು ಬದಿಯಲ್ಲೂ ದ್ವಾರಪಾಲಕರು ಗದೆಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಗಾರೆಯಿಂದ ಮಾಡಲ್ಪಟ್ಟಿರುವ ಎರಡು ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಈ ದ್ವಾರಪಾಲಕರು ನಾಲ್ಕು ಭುಜಗಳನ್ನು ಹೊಂದಿದ್ದು ಗಧೆ, ತ್ರಿಶೂಲ, ಢಮರುಗ ಮತ್ತು ಖಡ್ಗವನ್ನು ಹಿಡಿದು ನಿಂತಿದ್ದಾರೆ.

**ಸುಖನಾಸಿ:** ಸುಖನಾಸಿಯು ಕೂಡ ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಸರಳವಾಗಿದೆ. ಇಲ್ಲಿ ಗಣೇಶನ ಶಿಲ್ಪವಿದೆ. ಸುಖನಾಸಿಯ ದ್ವಾರವು ಕೂಡ ಸರಳವಾಗಿದ್ದು ದ್ವಾರಬಂಧವು ಚೌಕಕಾರವಾಗಿದೆ ಸುಖನಾಸಿಯ ಎರಡು ಕಡೆ ಕೂಡುಗಳಿವೆ.

**ನವರಂಗ:** ನವರಂಗವು ಸುಮಾರು ೨೫ x ೧೦ ಅಡಿ ಉದ್ದ ಮತ್ತು ಅಗಲವಾಗಿದ್ದು ಆಯತಾಕಾರವಾಗಿದೆ. ನವರಂಗದಲ್ಲಿ ಒಟ್ಟು ೪ ಕಂಬಗಳಿದ್ದು ಆ ನಾಲ್ಕು ಕಂಬಗಳು ಸಾಲಾಗಿವೆ. ಈ ಕಂಬಗಳು ಪೀಠ, ಪಾದ, ಬೋಧಿಗೆಯನ್ನು ಹೊಂದಿದ್ದು ಸರಳವಾಗಿದೆ. ನವರಂಗದ ಎರಡು ಬದಿಯಲ್ಲಿ ಪಶ್ಚಿಮಾಭಿಮುಖವಾಗಿ ಮತ್ತು ಪೂರ್ವಾಭಿಮುಖವಾಗಿ ಚಿಕ್ಕ ಚಿಕ್ಕ ಗುಡಿಗಳಿವೆ. ಯಾವುದೇ ಮೂರ್ತಿಶಿಲ್ಪ ಅಥವಾ ಬಿಡಿಶಿಲ್ಪಗಳೂ ಇಲ್ಲದೇ ನಶಿಸಿವೆ. ಗರ್ಭಗೃಹದ ನೇರವಾಗಿ ಇರುವ ದ್ವಾರದ ನವರಂಗದ ಮಧ್ಯಭಾಗದಲ್ಲಿ ಭುವನೇಶ್ವರಿ



ವೀರಭದ್ರ ದೇವಾಲಯದ ಗರ್ಭಗುಡಿ



ವೀರಭದ್ರ ದೇವಾಲಯದ ದಕ್ಷಿಣ ಪ್ರಾಕಾರದ ಗೋಡೆ



ವೀರಭದ್ರ ದೇವಾಲಯದ ಕಡೆಯ ಶಿಖರದ ಭಾಗ

ಇದ್ದು ಅಷ್ಟಕೋನಗಳನ್ನು ಹೊಂದಿದ್ದು ಸರಳವಾಗಿದೆ. ಭುವನೇಶ್ವರಿಯ ಮಧ್ಯಭಾಗದಲ್ಲಿ ಪದ್ಮದ ಚಿತ್ರವನ್ನು ಬಿಡಿಸಲಾಗಿದೆ. ನವರಂಗದಲ್ಲಿ ಒಟ್ಟು ಮೂರು ದ್ವಾರಗಳಿದ್ದು ಈ ಮೂರು ದ್ವಾರಗಳು ಸರಳವಾಗಿವೆ.

**ಮುಖಮಂಟಪ:** ಮುಖಮಂಟಪವು ಸಂಪೂರ್ಣವಾಗಿ ಭಗ್ನಗೊಂಡಿದ್ದು ಮುಖಮಂಟಪದ ಸ್ಥಳವು ಖಾಲಿಯಿದೆ. ಇಲ್ಲಿ ಕೇವಲ ಗಾರೆ, ಇಟ್ಟಿಗೆ ಅವಶೇಷಗಳು ಹಾಗೇ ಬಿದ್ದಿವೆ. ದೇವಾಲಯದ ಮುಂಭಾಗದಲ್ಲಿ ಮುಖ ಮಂಟಪದ ಸೋಪಾನಕ್ಕೆ ಅಂಟಿಕೊಂಡಂತೆ ಪುಷ್ಕರಣಿಯಿದೆ. ಈ ಪುಷ್ಕರಣಿಯು ಸಂಪೂರ್ಣವಾಗಿ ಭಗ್ನಗೊಂಡ ವ್ಯವಸ್ಥೆಯಲ್ಲಿದೆ ಪುಷ್ಕರಣಿಯು ದೇವಾಲಯಕ್ಕೆ ಹೋಗುವ ಹಂತಗಳಲ್ಲಿ ಮುಖಮಂಟಪಕ್ಕೆ ಹೊಂದಿಕೊಂಡಂತೆ ಎಡ ಮತ್ತು ಬಲ ಭಾಗದಲ್ಲಿ ಆನೆಯ ಚಿತ್ರವಿರುವ ಶಿಲ್ಪಗಳಿವೆ ಇವು ಸಹ ಭಗ್ನಗೊಂಡಿದ್ದು ಅವಸಾನದ ಹಂಚಿನಲ್ಲಿವೆ.

**ಅಧಿಷ್ಠಾನ:** ಅಧಿಷ್ಠಾನವು ಸರಳವಾಗಿದ್ದು ಉಪಾನ, ಜಗತಿ, ಪದ್ಮ, ಕಪೋತವನ್ನು ಹೊಂದಿದೆ. ಇಲ್ಲಿ ಯಾವುದೇ ತರಹದ ಕೆತ್ತನಗಳು ಇಲ್ಲದೇ ಸಾಧಾರಣ ಶೈಲಿಯಲ್ಲಿದೆ.

**ಭಿತ್ತಿ:** ಭಿತ್ತಿಯು ಸರಳವಾಗಿದ್ದು ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಲ್ಪಟ್ಟಿದೆ. ಇಲ್ಲಿ ಯಾವುದೇ ರೀತಿಯ ಅರೆಕಂಬಗಳಾಗಲಿ, ಭಿತ್ತಿ ಶಿಲ್ಪಗಳಾಗಲಿ, ದೇವಕೋಷ್ಠಕಗಳಾಗಲಿ ಇಲ್ಲದೇ ಸಾಧಾರಣವಾಗಿದೆ.

**ಕಪೋತ:** ಕಪೋತವೂ ಕೂಡ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟಿದ್ದು ಭಿತ್ತಿಯಿಂದ ಸುಮಾರು ೧ ಅಡಿ ಮುನ್‌ಚಾಚಿದ್ದು ದೇವಾಲಯದ ಸುತ್ತಲೂ ಇದೆ.

**ಶಿಖರ:** ಶಿಖರವು ಕೂಡ ಗಾರೆ ಮತ್ತು ಇಟ್ಟಿಗೆಯಿಂದಲೇ ನಿರ್ಮಿಸಲಾಗಿದ್ದು ದ್ರಾವಿಡ ಶೈಲಿಯನ್ನು ಹೋಲುತ್ತದೆ. ಒಟ್ಟು ನಾಲ್ಕು ಹಂತಗಳಿಂದ ಕೂಡಿದ್ದು ಈ ಭಾಗಗಳಲ್ಲಿ ಚಿಕ್ಕ ಚಿಕ್ಕದಾಗಿ ಕಂಬಗಳನ್ನು ಮತ್ತು ದೇವತಾ ಮೂರ್ತಿಶಿಲ್ಪಗಳನ್ನು ಕೂರಿಸಲಾಗಿದೆ. ಕಪೋತದ ಮೇಲ್ಭಾಗ ಮತ್ತು ಶಿಖರದ ತಳಭಾಗದಲ್ಲಿ ನಾಲ್ಕು ಮೂಲೆಯಲ್ಲಿ ಒಂದು ತಲೆ ಎರಡು ದೇಹವಿರುವ ನಂದಿಯ ಗಾರೆ ಶಿಲ್ಪಗಳನ್ನು ಕೆತ್ತಲಾಗಿದೆ. ಶಿಖರದ ಮೇಲ್ಭಾಗದಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ.

ಈ ದೇವಾಲಯದ ಸ್ತೂಪಿಯು ವೃತ್ತಾಕಾರವಾಗಿದ್ದು ಗಂಟೆಯಾಕಾರದಲ್ಲಿದೆ. ಮೇಲ್ಭಾಗದಲ್ಲಿ ಕಳಸವಿಲ್ಲ ಬಲಭಾಗ ಮತ್ತು ಎಡಭಾಗದ ಗರ್ಭಗೃಹಗಳ ಮೇಲ್ಭಾಗದಲ್ಲಿ ಶಿಖರವಿದ್ದು ಅವು ಕೂಡ ಸರಳವಾಗಿದ್ದು ನಾಲ್ಕು ಹಂತಗಳನ್ನು ಹೊಂದಿವೆ. ಈ ಶಿಖರಗಳಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದ್ದು, ಭಗ್ನಗೊಂಡಿದೆ. ಒಟ್ಟಾರೆ ಯಾಗಿ ಈ ಮೇಲೆ ತಿಳಿಸಿದ ದೇವಾಲಯವು ಶೈವಧರ್ಮವನ್ನು ಹೊರ ಜಗತ್ತಿಗೆ ತಿಳಿಸುವ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳ ಪರಂಪರೆಯ ಕಟ್ಟಡವಾಗಿ ಕಲಾ ವಾಸ್ತುಶಿಲ್ಪ ಕ್ಷೇತ್ರವನ್ನು ಉತ್ತೇಜಿಸುವ ಸಲುವಾಗಿ ನನ್ನ ಸಂಶೋಧನಾ ಕ್ಷೇತ್ರದ ಫಲವಾಗಿ ಕಂಡುಬಂದಿರುವುದೇ ಈ ವೀರಭದ್ರ ದೇವಾಲಯ.

ಹೀಗೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಕೀರ್ಣದಡಿಯಲ್ಲಿ ಬೆಳೆದು ಬಂದ ಈ ದೇವಾಲಯವು ಮುಜುರಾಯಿ ಇಲಾಖೆ ಮತ್ತು ಕರ್ನಾಟಕ ಪುರಾತತ್ವ ಇಲಾಖೆ ಹಾಗೂ ಜನಸಾಮಾನ್ಯರ ನಿರ್ಲಕ್ಷ್ಯಕ್ಕೆ ಒಳಗಾಗಿರುತ್ತದೆ. ಅವುಗಳನ್ನು ಸಂರಕ್ಷಿಸುವುದು ಮತ್ತು ದಾಖಲೀಕರಣ ಮಾಡುವುದು ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯ.

## ಗ್ರಂಥಋಣ


೧. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೪, ೧೯೭೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೨. ಮಲಿಯೂರು ಗುರುಸ್ವಾಮಿ, ಹೊನ್ನುಹೊಳೆ ಸ್ಮರಣ (ಸಂ) ೨೦೦೭, ಚಾಮರಾಜನಗರ ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.
೩. ವೆಂಕೋಬರಾವ್, ಬಿ., ಮೈಸೂರು ದೇಶದ ವಾಸ್ತುಶಿಲ್ಪ, ಮೈಸೂರು-೧೯೫೯.
೪. ಕೂ.ಸ. ಅರ್ಪಣ, ದೇವಾಲಯದ ವಾಸ್ತು ಪರಿಚಯ,೧೯೯೯, ಹಂಪಿ.
೫. ರಾಜಶೇಖರ್, ಎಸ್., ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ೧೯೮೫, ಧಾರವಾಡ.
೬. ಕನ್ನಡ ವಿಷಯ ವಿಶ್ವಕೋಶ ಪರಿಷ್ಕೃತ ಸಂ. ೧, ೨ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೭.
೭. ಜಾ.ರಾ.ಗೋಪಾಲ:ಕರ್ನಾಟಕದ ಕಲೆಗಳು ವಾಸ್ತು: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೩.
೮. C.Hayavadanarao: Mysore Gazetteer, vol-5, Bengaluru, 1930.



# ಅಥಣಿ ತಾಲ್ಲೂಕಿನ ಮುಸ್ಲಿಂ ಸ್ಮಾರಕಗಳು

**ಸುರೇಶಕುಮಾರ ಪಾಂಗಿ***

**ಬೆ**ಳಗಾವಿ ಜಿಲ್ಲೆಯ ಅಥಣಿ ಪ್ರದೇಶವು ೮೦ ಗ್ರಾಮಗಳನ್ನೊಳಗೊಂಡ ತಾಲೂಕು ಪ್ರದೇಶವಾಗಿದೆ. ಇದು ಬಿಜಾಪುರ, ಬೆಳಗಾವಿ, ಮಹಾರಷ್ಟ್ರ, ಗೋವಾಗಳ ನಡುವಿನ ಮುಖ್ಯ ವ್ಯಾಪಾರ ಕೇಂದ್ರವಾಗಿತ್ತೆಂದು ೧೬೭೫ರಲ್ಲಿ ಇಂಗ್ಲಿಷ್ ಪ್ರವಾಸಿ ಪ್ರೆಯರ್ ವರ್ಣಿಸಿದ್ದಾನೆ ಅಲ್ಲದೆ ಆದಿಲ್‌ಶಾಹಿಗಳ ರಾಜ್ಯದಲ್ಲಿ ಅಥಣಿ, ತೆಲಸಂಗ, ಐನಾಪೂರ ಪ್ರಮುಖ ಕೇಂದ್ರವಾಗಿದ್ದು. ೧೬೭೯ (ನವೆಂಬರ ೧೯) ರಲ್ಲಿ ಸಿಕಂದರ ಆದಿಲ್ ಶಾಯಿ ಅರಸರ ದಂಡನಾಯಕ ದಿಲೇವರಖಾನನು ತಿಕೋಟಾದಿಂದ ಯುದ್ಧ ಮಾಡುತ್ತ ಹೊನವಾಡ ಹಾಗೂ ತೆಲಸಂಗ ಮಾರ್ಗವಾಗಿ ದಾರಿಯಲ್ಲಿ ಲೂಟಿ ಮಾಡುತ್ತ ಊರಿನ ಜನರನ್ನು ಬಂಧಿಸುತ್ತ ಅಥಣಿಗೆ ಹೋದನು. ದಿನಾಂಕ ೨೭ರಂದು (೨೨, ನವೆಂಬರ ೧೬೭೭) ಅಥಣಿಯಿಂದ ಹೊರಟು ಐನಾಪುರಕ್ಕೆ ಹೋಗುತ್ತಿದ್ದನು. ದಾರಿಯಲ್ಲಿ, ಸಂಭಾಜಿಯು ತನ್ನ ಸೈನ್ಯದಿಂದ ಓಡಿ ವಿಜಾಪುರಕ್ಕೆ ಹೋಗಿದ್ದಾನೆಂದು ಸುದ್ದಿ ತಿಳಿದ ತಕ್ಷಣ ಅಲ್ಲಿಂದಲೇ ದಿಲೇರಖಾನನು ಹಿಂತಿರುಗಿ ವಿಜಾಪುರದ ಕಡೆಗೆ ಹೋದನೆಂದು ಮಹ್ಮದ ಇಬ್ರಾಹಿಮ ಜುಬೇರಿ ರಚಿತ ಬುಸಾತಿನೆ ಸಲಾತೀನ ಎಂಬ ಮೂಲ ಸಾಹಿತ್ಯ ಗ್ರಂಥದಲ್ಲಿ ಉಲ್ಲೇಖಿಸಿದೆ ಎಂಬುವದನ್ನು ಜುಬೇರಿಯುರು ವರ್ಣಿಸಿದ್ದಾರೆ.[1] ೧೬೭೭ರಲ್ಲಿ ಅಥಣಿಯನ್ನು ಛತ್ರಪತಿ ಶಿವಾಜಿಯು ದಿಲಾವರ ಖಾನ್‌ನಿಂದ ವಶಪಡಿಸಿಕೊಂಡಿದ್ದನು. ೧೭೨೦ರಲ್ಲಿ ನಿಜಾಮ ಉಲ್ಮುಲ್ಕನು ಅಥಣಿಯನ್ನು ವಶಪಡಿಸಿಕೊಂಡು, ಕೆಲದಿನಗಳಲ್ಲಿ ಕೊಲ್ಲಾಪುರದ ಅರಸರಿಗೆ ಕೊಟ್ಟನು. ಅನಂತರ ೧೭೩೦ ರಲ್ಲಿ ಸಾತಾರಾದ ಶಾಹೂ ಮಹರಾಜನಿಗೆ ಕೊಟ್ಟರು. ೧೮೪೮ರಲ್ಲಿ ಅಥಣಿ ಪ್ರದೇಶವನ್ನು ಆಳುವ ಅರಸರಿಗೆ ವಾರಸುದಾರರು ಇಲ್ಲದೆ ಕಾರಣ ಅದನ್ನು ಬ್ರಿಟಿಷರು ವಶಪಡಿಸಿಕೊಂಡರು.[2]

ಇತಿಹಾಸ ಕಾಲಘಟ್ಟದಲ್ಲಿ ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಈ ತಾಲೂಕಿನಾದ್ಯಂತ ಕಂಡುಬರುವ ಪುರಾತನ ಆಕರಗಳು ಇಸ್ಲಾಮಿಕ್ ಸ್ಮಾರಕಗಳು ಮತ್ತು ಶಾಸನಗಳು ಹಾಗೂ ವಿದೇಶಿಗರ ಬರಹಗಳಿಂದ ಸ್ಪಷ್ಟಗೊಳ್ಳುತ್ತದೆ. ಮುಖ್ಯವಾಗಿ ತಾಲೂಕಿನಲ್ಲಿ ಅಥಣಿ ಐನಾಪೂರ, ತೆಲಸಂಗ, ಕೊಟ್ಟಲಗಿ, ಕೊಕಟನೂರ, ಮಂಗಸೂಳಿ, ಸವದಿ, ಅನಂತರಪುರ, ಸತ್ತಿ, ನಂದಗಾಂವ, ಖಿಳೇಗಾಂವ, ಶಿರಹಟ್ಟಿ ಈ ಗ್ರಾಮಗಳಲ್ಲಿ ಹಳೆಯ ಕಾಲದ ಇಸ್ಲಾಮಿಕ್ ಸ್ಮಾರಕಗಳು ಕಂಡುಬರುವುವು. ಇವುಗಳನ್ನಾಧರಿಸಿ ಬಹುಮನಿ ಶಾಹಿಗಳು, ಬಿಜಾಪುರ ಆದಿಲ್‌ಶಾಹಿಗಳು, ಮೊಘಲರ ಕಾಲದಲ್ಲಿ ನಿರ್ಮಾಣವಾದ ಕೋಟೆ-ಕೊತ್ತಲ, ಕೆರೆ-ಬಾವಿ, ಗೋರಿ-ದರ್ಗಾ, ಮಸೀದಿ-ಈದ್ಗಾ ಮತ್ತು ಮಹಲ್‌ಗಳನ್ನು ಅಧ್ಯಯನ ಮಾಡುವುದರ ಮೂಲಕ ಈ ಭಾಗದ ಇಸ್ಲಾಮಿಕ ಸ್ಮಾರಕಗಳ ಕುರಿತು ಈ ಲೇಖನದಲ್ಲಿ ವಿಶ್ಲೇಷಣೆಗೆ ಒಳಪಡಿಸಿರುತ್ತೇನೆ.

**ಅಥಣಿ** : ಬೆಳಗಾವಿ ಜಿಲ್ಲೆಯ ಪ್ರಮುಖ ತಾಲೂಕು ಕೇಂದ್ರವಾದ ಅಥಣಿಯಲ್ಲಿ ಎರಡು ಸಿಹಿ ನೀರಿನ ಕೆರೆಗಳು ೧೧೧ ಬಾವಿಗಳು, ಕೋಟೆ-ಕೊತ್ತಲಗಳು ಕಂಡುಬರುವವು. ೧೮ನೇ ಶತಮಾನದ ವಿದೇಶಿಗರ ಬರಹಗಳಲ್ಲಿ ವರ್ಣಿಸಲ್ಪಟ್ಟ ಅಥಣಿ ಪಟ್ಟಣದಲ್ಲಿ ಸುಲ್ತಾನರ ಕಾಲದ ಇಂಡೋ ಇಸ್ಲಾಮಿಕ್ ವಾಸ್ತುಶೈಲಿಯಲ್ಲಿ ನಿರ್ಮಾಣವಾದ ಹಾಳುಬಿದ್ದ ಕೋಟೆಯ ಭಾಗಗಳು ಹುಡೆಗಳು ಜೋರ್ಣೋದ್ಧಾರಗೊಂಡ ಮಸೀದಿ ದರ್ಗಾಗಳು ನಮಗೆ ಇಂದಿಗೂ ಅಥಣಿ ಪಟ್ಟಣದಲ್ಲಿ ಕಂಡು ಬರುತ್ತವೆ. ೧೬೩೯ರಲ್ಲಿ ಅಥಣಿ ದೊಡ್ಡ ಪಟ್ಟಣವಾಗಿತ್ತೆಂದು ಫ್ರೆಂಚ್ ಪ್ರವಾಸಿ ಮತ್ತು ಜರ್ಮನಿ ಪ್ರವಾಸಿ ಮಂಡಲ್‌ಸ್ಲೇ ೧೬೩೯ರಲ್ಲಿ ಅಟೆನಿ ಎಂದು ಇಂಗ್ಲೀಷ್ ಪ್ರವಾಸಿ ಪ್ರೆಯರ್ ಇವರು ತಮ್ಮ ವರದಿಯಲ್ಲಿ ದಾಖಲಿಸಿದ್ದಾರೆ. ಇದು ೧೮೮೪ರಲ್ಲಿ ರಚಿತವಾದ ಮುಂಬಯಿ ಕರ್ನಾಟಕದ ಗೆಜೇಟಿಯರ್‌ನಲ್ಲಿ ಸಹ ದಾಖಲಾಗಿದೆ.[3]

## ಕರಿಮಸೀದಿ

ಆದಿಲ್‌ಶಾಹಿ ಕಾಲದ ಕರಿಮಸೀದಿ ಅಥಣಿಯಿಂದ ಬಿಜಾಪುರಕ್ಕೆ ಹೋಗುವ ಮುಖ್ಯ ಹೆದ್ದಾರಿಯಲ್ಲಿ ಬಲಭಾಗ ದಲ್ಲಿ ಎತ್ತರವಾದ ದಿಬ್ಬದ ಮೇಲೆ ಪೂರ್ವಾಭಿಮುಖವಾಗಿ ಕಟ್ಟಿಸಲಾಗಿದೆ. ಈ ಮಸೀದಿಯ ಸುತ್ತಲೂ ಕಲ್ಲಿನ ಗೋಡೆಯನ್ನು ಮೂರು ಬದಿಯಲ್ಲಿ ಕಟ್ಟಿಸಲಾಗಿದೆ.

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ಮತ್ತು ಪ್ರಾಚ್ಯವಸ್ತು ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗೋಡೆಯ ಪಶ್ಚಿಮದಲ್ಲಿ ಮೂರು ತ್ರಿಕೋನ ಆಕಾರದ ಗೋಡೆಗಳಿವೆ. ಮಸೀದಿಯ ಮುಂಭಾಗದಲ್ಲಿ ಇಸ್ಲಾಮಿಕ್ ಕೋನಾಕಾರದಲ್ಲಿ ಮೂರು ಕಮಾನುಗಳನ್ನು ನಿರ್ಮಿಸಿ ಒಳಗಡೆ ಪ್ರವೇಶಕ್ಕೆ ಅವಕಾಶ ಕಲ್ಪಿಸಲಾಗಿದೆ. ಈ ಮಸೀದಿಯು ಕರಿಕಲ್ಲು ಗಚ್ಚುಗಾರೆಯನ್ನು ಬಳಸಿ ಕಟ್ಟಿಸಲಾಗಿದೆ. ಕಟ್ಟಡಕ್ಕೆ ಬಳಸಿದ ಕಲ್ಲು ಅದೇ ಪ್ರದೇಶದಲ್ಲಿ ಲಭ್ಯವಾಗುತ್ತದೆ. ಈ ಮಸೀದಿಯ ಮೇಲಿನ ಮಿನಾರಗಳು, ಗುಮ್ಮಟಗಳು ಬಿದ್ದುಹೋಗಿರುತ್ತವೆ. ಮಸೀದಿಯ ಆದಿಷ್ಠಾನದವು ಎತ್ತರವಾಗಿದ್ದು ಅದರ ಮೇಲೆ ಕಟ್ಟಡ ನಿರ್ಮಿಸಲಾಗಿರುತ್ತದೆ. ಇದರ ಕುರಿತಾದ ಇತಿಹಾಸವನ್ನು ಸ್ಥಳೀಯ ಇಸ್ಲಾಮಿಕ್ ಧರ್ಮ ಗುರುಗಳು ಕ್ಷೇತ್ರಕಾರ್ಯಕ್ಕೆ ಹಹೋದ ಸಂದರ್ಭದಲ್ಲಿ ಈ ಕೆಳಗಿನಂತೆ ತಿಳಿಸಿರುತ್ತಾರೆ.

**ಅಥಣಿ ನಗರದಲ್ಲಿನ ದರ್ಗಾ ಮತ್ತು ಮಸೀದಿಗಳು**

ಅಥಣಿ ಪ್ರದೇಶವು ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟ ಸಂದರ್ಭದಲ್ಲಿ ಅಥಣಿ ನಗರದಲ್ಲಿ ಅನೇಕ ಮಸೀದಿ ಮತ್ತು ದರ್ಗಾಗಳು ನಿರ್ಮಾಣವಾಗಿದ್ದು ಅವುಗಳಲ್ಲಿ ಜತ್ ರಸ್ತೆಯಲ್ಲಿ ಅಗಸಿ ಬಾಗಿಲ ಹತ್ತಿರ ಹುಲಕಟ್ಟಿ ಓಣಿಯಲ್ಲಿ ಪುರಾತನ ಕಾಲದ ದರ್ಗಾ ಕಟ್ಟಿಸಲಾಗಿರುತ್ತದೆ.

ಈ ದರ್ಗಾವು ಎತ್ತರವಾದ ದಿಬ್ಬದ ಮೇಲೆ ಪೂರ್ವಾಭಿಮುಖವಾಗಿ ಕಲ್ಲು, ಗಚ್ಚು ಗಾರೆಗಳಿಂದ ಕಟ್ಟಿಸಲಾಗಿದ್ದು, ಮುಂದುಗಡೆ ಎತ್ತರವಾದ ಮಿನಾರಗಳು ಗುಮ್ಮಟ ಮತ್ತು ಕಮಾನು (ಆರ್ಚ್) ಗಳಿಂದ ನಿರ್ಮಿಸಲಾಗಿದೆ. ಇಲ್ಲಿ ಆದಿಲ್‌ಶಾಹಿಗಳ ಕಾಲದ ಸಂತರು ವಾಸಿಸುವ ನೆಲೆಯಾಗಿತ್ತೆಂದು ತಿಳಿದುಬರುತ್ತದೆ.

ಅದೇ ರೀತಿ ಪಂಡಾರಗಲ್ಲಿಯಲ್ಲಿ ಪಂಡಾರಗಳಲ್ಲಿ ಮಸೀದಿ, ಬಿಜಾಪೂರ ರೋಡದಲ್ಲಿ ಒಂದು ಮಸೀದಿ, ಬಸ್ಟ್ಯಾಂಡ್ ಹತ್ತಿರ ಒಂದು ಪುರಾತನ ಮಸೀದಿ ಹಾಗೂ ಇತ್ತೀಚೆಗೆ ನಿರ್ಮಾಣವಾದ ಹತ್ತಾರು ಮಸೀದಿ ಇದ್ದು, ದರ್ಗಾಗಳು ಕೂಡಾ ಅಥಣಿ ನಗರದಲ್ಲಿ ಕಂಡುಬರುತ್ತವೆ. ಹೀಗಾಗಿ ಪ್ರದೇಶದಲ್ಲಿ ಆದಿಲ್‌ಶಾಹಿಗಳ ಕಾಲದಿಂದಲೂ ಇಂದಿನ ವರೆಗಿನ ಇಸ್ಲಾಮಿಕ ಧರ್ಮದ ಇತಿಹಾಸ ಮತ್ತು ವಾಸ್ತುಶೈಲಿ ಬೆಳೆದು ಬಂದ ಚರಿತ್ರೆ ತಿಳಿಯಲು ಸಾಧ್ಯವಾಗುತ್ತದೆ.

**ಮದರಸಾಹೇಬ ದರ್ಗಾ**

ಯಲಹಡಗಿ ಗ್ರಾಮದ ಬಸ್ ನಿಲ್ದಾಣದ ಮುಂದುಗಡೆ ಮದರಸಾಹೇಬನ ದರ್ಗಾ ಕಟ್ಟಿಲಾಗಿದ್ದು ಅಲ್ಲಿ ದರ್ಗಾದೊಳಗೆ ಆದಿಲ್‌ಶಾಹಿಗಳ ಕಾಲದ ಸಮಾಧಿ ಇದ್ದು, ಇದರ ಸುತ್ತಲೂ ಗೋಡೆಯನ್ನು ಕಟ್ಟಿಸಿ ಮುಂದುಗಡೆ ಮಿನಾರಗಳನ್ನು ಕಟ್ಟಿಸಲಾಗಿದೆ. ಇದು ಇಸ್ಲಾಮಿಕ್ ಶೈಲಿಯಲ್ಲಿ ಕಟ್ಟಲ್ಪಟ್ಟಿದದೆ. ಈ ದರ್ಗಾದ ಎದುರಿಗೆ ಸುಮಾರು ೨೫ ಫೂಟ್, ಎತ್ತರದಲ್ಲಿ ಕಮಾನವುಳ್ಳ ಶೈಲಿಯನ್ನು ಬಳಸಿ ದ್ವಾರಗೋಪುರವನ್ನು ಕಟ್ಟಿಸಲಾಗಿದೆ. ಈ ದರ್ಗಾವು ಪೂರ್ವಾಭಿಮುಖವಾಗಿ ಇರುತ್ತದೆ. ದರ್ಗಾದ ಪಕ್ಕದಲ್ಲಿ ಸಣ್ಣದಾದ ಒಂದು ಹಳ್ಳ ಹರಿಯುತ್ತದೆ. ಗ್ರಾಮದ ಇನ್ನೊಂದು ಬದಿಯಲ್ಲಿ ಮುಸ್ಲಿಂರಿಗೆ ನಮಾಜ ಮಾಡಲು ಮಸೀದಿ ಕಟ್ಟಿಸಿದ್ದಾರೆ. ಈ ಮಸೀದಿಯ ಆಧುನಿಕ ಕಾಲದ್ದಾಗಿದೆ. ದರ್ಗಾ ೧೮ನೇ ಶತಮಾನದಲ್ಲಿ ಕಟ್ಟಿಸಲಾಗಿದೆ.

**ಐನಾಪೂರ :** ಅಥಣಿಯಿಂದ ನೈಋತ್ಯಕ್ಕೆ ೨೨ ಕಿ.ಮೀ. ದೂರದಲ್ಲಿ ಕೃಷ್ಣ ನದಿಯ ತೀರದಲ್ಲಿರುವ ಐನಾಪೂರ ಗ್ರಾಮವು ೧೬, ೧೭ನೇ ಶತಮಾನದಲ್ಲಿ ಬಿಜಾಪೂರ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿರುತ್ತದೆ. ನಂತರ ೧೮೪೨ರಲ್ಲಿ ಇದು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತೆಂದು ಈ ಗ್ರಾಮದಲ್ಲಿ ಕಂಡುಬರುವ ಸ್ಮಾರಕಗಳಿಂದ ತಿಳಿದು ಬರುತ್ತದೆ.[೪]

ಈ ಗ್ರಾಮದ ಮುಸ್ಲಿಂ ಓಣಿಯಲ್ಲಿ ಮಸೀದಿ, ದರ್ಗಾಗಳು ಕಂಡುಬರುತ್ತಿದ್ದು ಜೊತೆಗೆ ಸುಲ್ತಾನರ ಕಾಲದ ಫೀರ್ ಖಾಜಿ ಎಂಬ ಮುಸ್ಲಿಂ ಸಂತನ ಗೋರಿಯು ಸಹಿತ ಇದೆ.

**ಮಂಗಸೂಳಿ:** ಅಥಣಿಯಿಂದ ಪಶ್ಚಿಮಕ್ಕೆ ೨೭ ಕಿ.ಮೀ. ದೂರದಲ್ಲಿರುವ ಮತ್ತೊಂದು ಪ್ರಮುಖ ಗ್ರಾಮ ಮಂಗಸೂಳಿಯಲ್ಲಿ ಪ್ರಾಚೀನ ಕಾಲದ ದರ್ಗಾ ಇದ್ದು, ಪವಾರದೇಸಾಯಿಗಳು ಆದಿಲ್‌ಶಾಹಿಗಳಿಂದ ಫರಮಾನು ಪಡೆದು ಈ ಭಾಗವನ್ನು ಆಳುತ್ತಿದ್ದರೆಂದು ಆ ಗ್ರಾಮದ ಸ್ಥಳೀಯರಿಂದ ಕ್ಷೇತ್ರ ಕಾರ್ಯದಲ್ಲಿ ಮಾಹಿತಿ ಸಂಗ್ರಹಿಸಲಾಗಿದೆ. ಈ ದೇಸಾಯಿಗಳ ಕಾಲದಲ್ಲಿ ನಿರ್ಮಾಣವಾದ ಮಂಗಸೂಳಿ ಮಲ್ಲಯ್ಯನ ಗುಡಿಯಲ್ಲಿರುವ ಬಾವಿ ಇಂಡೋ– ಇಸ್ಲಾಮಕ್ ಶೈಲಿಯಲ್ಲಿದೆ. ಅದೇ ಕಾಲಘಟ್ಟದಲ್ಲಿ ನಿರ್ಮಾಣವಾದ ಕೋಟೆ–ಕೊತ್ತಲಗಳು ಸಹ ಇಲ್ಲಿವೆ. ಗ್ರಾಮದ ದರ್ಗಾದಲ್ಲಿ ಪರ್ಶಿಯನ್ ಶಾಸನವಿದ್ದು ಅದನ್ನು ಇನ್ನೂ ಓದಲಾಗಿಲ್ಲ. ಈ ಗ್ರಾಮಕ್ಕೆ ಸಂಬಂಧಿಸಿದಂತೆ ದೇಸಿಗತಿ ಮತ್ತು ಆದಿಲ್‌ಶಾಹಿಗಳ ದಾಖಲೆಗಳು ಪೂನಾ ಪತ್ರಾಗಾರ ಇಲಾಖೆಯಲ್ಲಿ ಇಡಲಾಗಿದೆಯೆಂದು ಸ್ಥಳೀಯರಿಂದ ತಿಳಿಯಲಾಗಿದೆ. ಈ ದರ್ಗಾದ ಉರುಸನ್ನು ಹಿಂದೂ ಮುಸ್ಲಿಂರು ಸೇರಿ ವೈಭವದಿಂದ ಆಚರಿಸುತ್ತಿರುವುದು ಕಾಣಬಹುದಾಗಿದೆ.[೫]

**ಕೊಕಟನೂರ:** ಅಥಣಿಯಿಂದ ಆಗ್ನೇಯಕ್ಕೆ ೨೦ ಕಿ.ಮೀ. ದೂರದಲ್ಲಿರುವ ಕೊಕಟನೂರ ಗ್ರಾಮವು ಪುರಾತನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿರುವ ಮುಸ್ಲಿಂ ಸ್ಮಾರಕಗಳು ದೇಶಗತ್ತಿಗಳ ವಾಡೆ, ದರ್ಗಾ, ಮಸೀದಿ, ಕೋಟೆ–ಕೊತ್ತಳ, ಇಂಡೋ ಇಸ್ಲಾಮಿಕ್ ಶೈಲಿಯಲ್ಲಿ ಕಂಡುಬರುತ್ತದೆ.

ಇಲ್ಲಿಯ ದೇಶಗತ್ತಿಗಳು ಆದಿಲ್‌ಶಾಹಿಗಳಿಂದ ಸನದು ಮತ್ತು ಫರಮಾನುಗಳನ್ನು ಪಡೆದು ಆಳುತ್ತಿದ್ದರೆಂದು ಕೊಕಟನೂರ ದೇಸಾಯಿ ಮನೆಯವರಿಂದ ಕ್ಷೇತ್ರಕಾರ್ಯದಲ್ಲಿ ಮಾಹಿತಿ ಪಡೆಯಲಾಗಿದೆ. ಈ ದೇಸಾಯಿಗಳ ಕಾಲದಲಿ ನಿರ್ಮಾಣವಾದ ವಾಡೆಗಳನ್ನು, ಇಂಡೋ–ಇಸ್ಲಾಮಿಕ್ ಶೈಲಿಯನ್ನು ಅಳವಡಿಸಿ ಕಟ್ಟಿರುವುದು ಕಂಡುಬರುತ್ತದೆ. ಈ ಕೋಟೆಯ ಹತ್ತಿರದಲ್ಲಿ ಪುರಾತನ ಕಾಲದ ಮಸೀದಿ, ದರ್ಗಾ ಹಾಗೂ ಗೋರಿಗಳಿದ್ದು ಊರ ಹೊರವಲಯದಲ್ಲಿ ಒಂದು ಈದ್ಗಾ ಇದ್ದು, ಆ ಗ್ರಾಮದ ಮುಸ್ಲಿಂಮರು ಇಂದಿಗೂ ಬಕ್ರಿದ್ ಮತ್ತು ರಂಜಾನ್ ಸಮಯದಲ್ಲಿ ನಮಾಜ್ (ಪ್ರಾರ್ಥನೆ) ಮಾಡುತ್ತಾರೆ. ವರ್ಷದಲ್ಲಿ ಹಿಂದೂ ಮುಸ್ಲಿಂ ಭಕ್ತರು ಸೇರಿ ಮೊಹರಂ ಆಚರಿಸುತ್ತಾರೆ. ಇಲ್ಲಿಯ ಹಬ್ಬ–ಉತ್ಸವಗಳಲ್ಲಿ ಇಲ್ಲಿಯ ದೇಸಾಯಿಗಳ ಗೌಡಕಿ ಮುಖ್ಯವಾಗಿರುತ್ತದೆ. ಈ ಗ್ರಾಮದಲ್ಲಿರುವ ಗೋರಿ ದರ್ಗಾಗಳು ಆದಿಲ್‌ಶಾಹಿಗಳ ಕಾಲದಲ್ಲಿ ನಿರ್ವಾರ್ಣವಾಗಿದ್ದು, ಈಗ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ.

**ಸವದಿ:** ಅಥಣಿಯಿಂದ ಆಗ್ನೇಯಕ್ಕೆ ೧೭ ಕಿ.ಮೀ. ದೂರದ ಕೃಷ್ಣಾ ನದಿಯ ದಂಡೆಯಲ್ಲಿ ಇದೆ. ಇಲ್ಲಿ ಮುಸ್ಲಿಂ ಫಕೀರನಾದ ಇಮಾಮ ಜಾಫರನ ದರ್ಗಾ ನಮಗೆ ಕಂಡು ಬರುತ್ತಿದ್ದು ಪ್ರತಿ ವರ್ಷ ಉರಸು ನಡೆಯುತ್ತದೆ.[೭]

**ಸತ್ತಿ:** ಈ ಗ್ರಾಮವು ಅಥಣಿಯಿಂದ ೧೬ ಕಿ.ಮೀ. ದೂರದಲ್ಲ ಕೃಷ್ಣಾ ನದಿಯ ದಂಡೆಯ ಮೇಲೆ ಇದೆ. ಕ್ರಿ.ಶ. ೧೧೮೩ನೇ ವರ್ಷದ ಉಲ್ಲೇಖದ ಪ್ರಕಾರ ಈ ಗ್ರಾಮಕ್ಕೆ 'ಸತ್ತತ್ತಿ' ಎನ್ನುತ್ತಿದ್ದರಂತೆ ಕ್ರಿ.ಶ. ಪೂರ್ವ ೨೦೦೦ ರಿಂದ ೧೦೦೦ ವರ್ಷದಷ್ಟು ಹಿಂದಿನದೆಂದು ಹೇಳಲಾದ ವರ್ಣಚಿತ್ರಗಳು ಚಿತ್ತಾರದ ಮಣ್ಣಿನ ಪಾತ್ರೆಗಳು ಇಲ್ಲಿ ದೊರೆತಿವೆ.[೮]

ಆ ಗ್ರಾಮದಲ್ಲಿ ಆದಿಲ್‌ಶಾಹಿ ಕಾಲಕ್ಕೆ ಸೇರಿದ ಸುಂದರವಾದ ಮಸೀದಿಯೊಂದಿದೆ. ಇದರ ಮಧ್ಯಭಾಗದಲ್ಲಿ ಆಕರ್ಷಕವಾದ ಗುಮ್ಮಟ ಹಾಗೂ ನಾಲ್ಕು ಮಿನಾರ್‌ಗಳಿವೆ. ಈ ಮಿನಾರ್‌ಗಳಲ್ಲಿ ಪರ್ಷಿಯನ್ ಭಾಷೆಯ ಶಾಸನ ಕಂಡುಬಂದಿದೆ.[೯]

**ಅನಂತಪುರ:** ಇದು ಅಥಣಿಯಿಂದ ೨೭ ಕಿ.ಮೀ. ದೂರದಲ್ಲಿದೆ. ಇಲ್ಲಿನ ಮರಾಠಾ ಸರದಾರ ಆನಂದರಾವ್ ರಾಸ್ತೆ ನೆನಪಿಗಾಗಿ ಈ ಊರಿನ ಹೆಸರು ಬಂದಿದೆ. ಮಣ್ಣಿನ ಕೋಟೆಯ ಇಲ್ಲಿದೆ. ಪೀರ ದಾವಲಸಾಬಲ ದರ್ಗಾ ಇಲ್ಲಿದ್ದು ಪ್ರತಿವರ್ಷ ಉರಸು ಜರಗುತ್ತದೆ. ಕೋಟೆಯ ಹಿತ್ತದಲ್ಲಿಯೇ ಇದ್ಗಾ ಇದ್ದು ಊರ ಪಕ್ಕದಲ್ಲಿ ಒಂದು ಮಸೀದಿಯು ಸಹ ನಮಗೆ ಕಂಡು ಬರುತ್ತದೆ.[೧೦]

**ಕೊಟ್ಟಲಗಿ:** ಅಥಣಿಯಿಂದ ೩೨ ಕಿ.ಮೀ. ದೂರದಲ್ಲಿರುವ ಕೊಟ್ಟಲಗಿಯನ್ನು ಚಾಲುಕ್ಯ ಅರಸು ಜಯಸಿಂಹನ ಕಾಲದಲ್ಲಿ ಈ ಗ್ರಾಮಕ್ಕೆ ಕೊಟ್ಟಲಿಗೆ ಎನ್ನುತ್ತಿದ್ದರಂತೆ, ಇಲ್ಲಿ ೩ ಮಸೀದಿಗಳಿವೆ. ಅವು ಈಗ ಜೀರ್ಣೋದ್ಧಾರಗೊಂಡಿದೆ.[೧೧]

**ಜುಗಲ:** ಅಥಣಿಯಿಂದ ೪೫ ಕಿ.ಮೀ. ದೂರದಲ್ಲಿ ಕೃಷ್ಣಾ ನದಿಯ ದಂಡೆಯಲ್ಲಿದೆ. ಜಗಳದೇವಿ (ಪಾರ್ವತಿ) ಹೆಸರಿನಿಂದ ಈ ಊರಿಗೆ ಜಗುಳ ಎಂಬ ಹೆಸರು ಬಂದಿದೆ. ಮಷಬತ್ತಿ ಎನ್ನುವ ದರ್ಗಾ ಇಲ್ಲಿದೆ. ಈ ಮಷಬತ್ತಿಯ ಉರುಸನ್ನು ರಮಜಾನ ದಿನದಂದು ಆಚರಿಸುತ್ತಾರೆ.[೧೨]

**ತತೆಲಸಂಗ:** ಅಥಣಿಯಿಂದ ೩೫ ಕಿ.ಮೀ. ದೂರದಲ್ಲಿರುವ ತೆಲಸಂಗ ಗ್ರಾಮದ ಬಗ್ಗೆ ದಾಖಲೆಗಳಲ್ಲಿ ಇದನ್ನು ತಿಲಸಂಗ ಎಂದು ಕರೆಯಲಾಗಿದೆ. ಇದು ಮೊದಲು ಕರಹಾಡ ದೇಶದ ಉಪವಿಭಾಗೀಯ ಮುಖ್ಯಸ್ಥಳವಾಗಿದ್ದು ಅನಂತರ ಮಹಾ ಅಗ್ರಹಾರವಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ.[೧೩]

**ಖಬರಸ್ತಾನ ಮಸೀದಿ (ತೆಲಸಂಗ):** ಸದರಿ ಖಬರಸ್ಥಾನ ಮಸೀದಿಯು ಹನುಮಾನ ದೇವಾಲಯದ ಮುಂದುಗಡೆ ಸುಮಾರು ೧೦೦೦ ಫೀಟ್ ಅಂತರದಲ್ಲಿ ಪೂರ್ವಾಭಿಮುಖವಾಗಿ ಇತ್ತೀಚೆಗೆ ಮಸೀದಿಯನ್ನು ಕಟ್ಟಿಸಲಾಗಿರುತ್ತದೆ.

ಈ ಮಸೀದಿಯು ಮೂಲತಃ ಕಲ್ಯಾಣದ ಚಾಲುಕ್ಯರ ಕಾಲದ ಶೈವ ದೇವಾಲಯವಾಗಿರುತ್ತದೆ. ಒಳಗಡೆ ೧೬ ಕಂಬಗಳಿರುತ್ತವೆ. ಗರ್ಭಗುಡಿಯ ಸ್ಥಾನದಲ್ಲಿ ನಮಾಜ ಮಾಡಲು ಅನುಕೂಲ ಕಲ್ಪಿಸಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ರಂಗಮಂಟಪದ ಮೇಲ್ಗಡೆ ಗುಮ್ಮಟವನ್ನು ನಿರ್ಮಿಸಲಾಗಿದೆ. ಮಸೀದಿಯ ಗುಮ್ಮಟದ ನಿರ್ಮಾಣದ ಶೈಲಿಯನ್ನು ಗಮನಿಸಿದಾಗ ಇದು ಇಸ್ಲೋಮಿಕ್ ಶೈಲಿಯಲ್ಲಿ ಕಟ್ಟಲಾಗಿದೆ.

ಗುಮ್ಮಟದ ಕುತ್ತಿಗೆ ಭಾಗ ಕಮಲ ಹೂವಿನಾಕಾರದ ಈ ಮಸೀದಿಯ ಪಕ್ಕದಲ್ಲಿ ಸಣ್ಣಪುಟ್ಟ ಗೋಪುರಗಳಿದ್ದುದರಿಂದ ಇದಕ್ಕೆ ಕಬರಸ್ತಾನದ ಮಸೀದಿ ಎಂದು ಕರೆಯುತ್ತಾರೆ.

**ಕರಿಮಸೀದಿ (ಪಾತರಗಿತ್ತಿ ಮಹಲ್) ತೆಲಸಂಗ:** ಖಬರಸ್ತಾನದ ಮಸೀದಿಯ ಹಿಂದೆ ಪೂರ್ವಕ್ಕೆ ಮುಖ ಮಾಡಿ ಈ ಮಸೀದಿ ರಚಿಸಲ್ಪಟ್ಟಿದೆ. ಈ ಮಸೀದಿಯ ಮುಂದೆ ಬಂಡನಹಳ್ಳ ಹರಿದಿದೆ. ಎಡಭಾಗದಲ್ಲಿ ಕೆರೆಯೂ ಕೂಡಾ ಹರಿದಿದೆ. ಇಂಡೋ ಇಸ್ಲಾಮಿಕ್ ಶೈಳಿಯಲ್ಲಿರುವ ಮಸೀದಿಯು ಮೂರು ಕಮಾನುಗಳು ತೆರೆದ ವಿಶಾಲವಾದ ಪ್ರಾಂಗಣವಿದೆ. ಬಿಜಾಪುರ ಆದಿಲ್‌ಶಾಹಿಗಳ ಕಾಲದ್ದಾಗಿದೆ. ಎಂದು ಹೇಳಬಹುದಾಗಿದೆ.

**ಹಾಯಸಾಲದರ್ಗಾ (ತೆಲಸಂಗ)**

ತೆಲಸಂಗ ಗ್ರಾಮದ ಹಹೊರಟ್ಟಿ ಓಣಿಯಲ್ಲಿ ಪೂರ್ವಾಭಿಮುಖವಾಗಿ ಎತ್ತರದ ಕಟ್ಟೆಯ ಮೇಲೆ ಸಿಕಂದದರ

ಭಾಷಾ ಮಸೀದಿ ಕಟ್ಟಿಸಲಾಗಿದೆ. ಈ ಮಸೀದಿಯು ಚೌಕಾಕಾರವಾಗಿದ್ದು, ಸುತ್ತಲೂ ಕಲ್ಲಿನ ಗೋಡೆಯಿಂದ ಕಟ್ಟಲಾಗಿರುತ್ತದೆ. ದರ್ಗಾದ ಪ್ರವೇಶ ಬಾಗಿಲು ಬಹಳ ಚಿಕ್ಕದಾಗಿದ್ದದು, ಅಂದರೆ ಮೂರು ಅಡಿ ಎತ್ತರ ಎರಡು ಅಡಿ ಅಗಲವಾಗಿರುತ್ತದೆ. ನಾಲ್ಕು ಮೂಲೆಯಲ್ಲಿ ಸಣ್ಣ ಗುಮ್ಮಟಾಕಾರದ ಗುಮ್ಮಟಗಳಿವೆ. ಮಧ್ಯದಲ್ಲಿ ದೊಡ್ಡ ಗುಮ್ಮಟವಿದೆ. ಕಮಲಹೂವಿನ ಆಕಾರದ ಮೇಲೆ ದೊಡ್ಡ ಗುಮ್ಮಟವಿದೆ. ಇದು ಇಂಡೊ-ಇಸ್ಲಾಮಿಕ್ ಶೈಲಿಯಲ್ಲಿದ್ದು, ಕಲ್ಲು ಗಚ್ಚು ಗಾರೆಯಿಂದ ಕಟ್ಟಲಾಗಿದೆ.

ದರ್ಗಾದ ಎಡಭಾಗದಲ್ಲಿ ಎರಡು ಸಂತರ ಸಮಾಧಿಗಳಿದ್ದು, ಪಕ್ಕದಲ್ಲಿ ಪೂರ್ವಕ್ಕೆ ಮುಖ ಮಾಡಿ ಲಕ್ಷೀದೇವಿ ಗುಡಿಯಿದ್ದು, ಗುಡಿಯ ಮುಂದೆ ಮುಕ್ಕಾದ ನಾಗಶಿಲ್ಪ, ೧೩ನೇ ಶತಮಾನಕ್ಕೆ ಸೇರಿದ ಲಿಂಗದ ಮುಂದೆ ಕೈ ಮುಗಿದು ಕುಳಿತ ಭಕ್ತನ ಶಿಲ್ಪ ಇದ್ದು ಮತ್ತು ವೀರನೊಬ್ಬನ ಶಿಲ್ಪವು ಕಂಡುಬರುತ್ತದೆ.

ಈ ಗ್ರಾಮದ ಮಸೀದಿ, ಗೋರಿಗಳುಮ ದರ್ಗಾಗಗಳು ಅತಿ ಪ್ರಾಮುಖ್ಯತೆಯನ್ನು ಪಡೆದಿವೆ. ಜಾಮಿಯಾ ಮಸೀದಿ (ಪಾತರಗಿತ್ತಿ) ಮೂರು ಕಮಾನುಗಳುಳ್ಳ ದ್ವಾರಬಾಗಿಲುನ್ನು ಇಸ್ಲಾಮಿಕ್ ಶೈಲಿಯನ್ನು ಹೊಂದಿವೆ. ಈ ಮಸೀದಿಯ ಮುಂದೆ ನೀರಿನ ಹೊಂಡ ಇದೆ. ಪಕ್ಕದ ಕೆರೆಯ ಮೂಲಕ ನೀರನ್ನು ಈ ಹೊಂಡಕ್ಕೆ ಪೈಪಲೈನ್ ಮಾಡಲಾಗಿದೆ. ಮತ್ತು ಇದರ ಪಕ್ಕದಲ್ಲಿ ಕರಿಮಸೀದಿ ಇದೆ. ಇಲ್ಲಿ ಮುಸ್ಲಿಂರು ಪ್ರಾರ್ಥನೆ ಸಲ್ಲಿಸುತ್ತಾರೆ. ಹಜರತ್ ಸಿಕಂದರಭಾಷಾ ದರ್ಗಾ ಕೂಡಾ ಈ ಗ್ರಾಮದಲ್ಲಿದೆ. ಇಸ್ಲಾಮಿಕ್ ಶೈಲಿಯಲ್ಲಿ ಈ ದರ್ಗಾವನ್ನು ಕಟ್ಟಲಾಗಿದೆ. ಹಾಜಿಮಸ್ತಾನ್ ದರ್ಗಾ ಮತ್ತು ಲಾಲಸಾಬ ಅಲಿ ದರ್ಗಾಗಳಿವೆ. ಮತ್ತು ಫಕೀರರ ಗೋರಿಗಳು ಪ್ರಾಮುಖ್ಯತೆಯನ್ನು ಹೊಂದಿವೆ. ಈ ಗ್ರಾಮದಲ್ಲಿ ಸುಲ್ತಾನರ ಆಳ್ವಿಕೆ ಬಹಳ ಪ್ರಾಮುಖ್ಯತೆ ಹೊಂದಿತ್ತೆಂದು ಹೇಳಬಹುದು.

ಒಟ್ಟಾರೆಯಾಗಿ ಈ ತಾಲೂಕಿನಲ್ಲಿ ದೊರೆಯುವ ಮುಸ್ಲಿಂ ಸ್ಮಾರಕಗಳು, ದರ್ಗಾಗಳು, ಈದ್ಗಾಗಳು ಕೆರೆ-ಬಾವಿಗಳನ್ನು ಅಧ್ಯಯನ ಮಾಡಲಾಗಿ ತಿಳಿಯುವುದೇನೆಂದರೆ, ಅಥಣಿ ಪ್ರದೇಶದಲ್ಲಿ ಕೆಲವು ಮಸೀದಿಗಳು ಹಿಂದೂ ದೇವಾಲಯವಾಗಿದ್ದುದು ತಿಳಿಯುತ್ತದೆ. ಅಲ್ಲಿನ ಕಂಬಗಳ ಶೈಲಿಯನ್ನು ನೊಡಿದರೆ ಕಲ್ಯಾಣ ಚಾಲುಕ್ಯರ ಕಾಲದ್ದಾಗಿವೆ ಎಂದು ತಿಳಿದುಬರುತ್ತದೆ. ಸುಲ್ತಾನರ ಕಾಲದಲ್ಲಿ ಅಂತಹ ವ್ಯತಿರಿಕ್ತವಾದ ಘಟನೆಗಳು ಜರುಗಿದ್ದು ನಮ್ಮ ಅಧ್ಯಯನದಲ್ಲಿ ಅರಿಯಲಾಗಿದೆ.

ಶಾಹಿ ಸುಲ್ತಾನರ ಕಾಲದಲ್ಲಿ ಮತ್ತು ಬ್ರಿಟಿಷರ ಆಳ್ವಿಕೆಯಲ್ಲಿ ವ್ಯಾಪರದ ಮುಖ್ಯ ಪಟ್ಟಣವಾಗಿದದು ಈಗಲೂ ವಿವಿಧ ಕ್ಷೇತ್ರದಲ್ಲಿ ಪ್ರಸಿದ್ಧಿಯಾಗಿದೆ. ಒಟ್ಟಾರೆಯಾಗಿ ಹೇಳುವದಾದರೆ ೩೦೦ ವರ್ಷಗಳ ಕಾಲ ಈ ಪ್ರದೇಶ ಸುಲ್ತಾರ ಆಳ್ವಿಕೆಗೆ ಒಳಪಟ್ಟಿರುವುದು ತಿಳಿದುಬರುತ್ತದೆ.

**ಅಡಿಟಿಪ್ಪಣಿ**

೧. ಕುಲಕರ್ಣಿ ಕೃಷ್ಣ ಕೊಲ್ಹಾರ (ಅನು) (೧೯೯೯) ಮಹಮ್ಮದ ಹಿಬ್ರಾಯಯಿಮ ಜುಬೇರಿ ರಚಿತ ಬುಸಾತಿನೆ ಸುಲಾತೀನ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ ಸಂಖ್ಯೆ ೪೫೭ ರಿಂದ ೪೫೮.
೨. ಪಾಟೀಲ ಮನೋಜ – (೧೯೮೬). ಬೆಳಗಾವಿ ಜಿಲ್ಲಾ ಮಾರ್ಗದರ್ಶಿ ಶೈಲಜಾ ಪ್ರಕಾಶನ, ಬೆಳಗಾವಿ ಪು.ಸಂ. ೧೫೭.
೩. ಕಟ್ಟಿ ವೆಂಕಟರಂಗೋ – (೧೮೯೩), 'ಮುಂಬಯಿ ಕರ್ನಾಟಕದ ಗೆಜೆಟಿಯರ್' ಗವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೋ, ಮುಂಬಯಿ ಪು.ಸಂ. ೪೮೮
೪. ಪಾಟೀಲ ಮನೋಜ – (೧೯೮೬) 'ಬೆಳಗಾವಿ ಜಿಲ್ಲಾ ಮಾರ್ಗದರ್ಶಿ' ಶೈಲಜಾ ಪ್ರಕಾಶನ, ಬೆಳಗಾವಿ ಪು.ಸಂ. ೧೫೮
೫. ಅದೇ.
೬. ಅದೇ ಪು.ಸಂ. ೫೮.
೭. ಕಾಮತ್ ಸೂರ್ಯನಾಥ ಯು – (೧೯೮೭) 'ಬೆಳಗಾವಿ ಜಿಲ್ಲಾ ಗೆಜೆಟಿಯರ್' ಕರ್ನಾಟಕ ರಾಜ್ಯ ಸರ್ಕಾರ ಗೆಜೆಟಿಯರ್, ಬೆಂಗಳೂರು, ಪು.ಸಂ. ೯೩೯.
೮. ಕಟ್ಟಿ ವೆಂಕಟರಂಗೋ – (೧೮೯೩) 'ಮುಂಬಯಿ ಕರ್ನಾಟಕದ ಗೆಜೆಟಿಯರ್' ಗವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೋ ಮುಂಬಯಿ, ಪು.ಸಂ. ೧೯೭.
೯. ಗೋಪಾಲ ಆರ್ (ಸಂ) (೨೦೧೦) 'ಬೆಳಗಾಪಿ ಜಿಲ್ಲೆಯ ಇತಿಹಾಸ ಮತ್ತು ಪುರತತ್ವ' ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ಪು.ಸಂ. ೧೯೭.
೧೦. ಪಾಟೀಲ ಮನೋಜ – (೧೯೮೬), 'ಬೆಳಗಾವಿ ಜಿಲ್ಲಾ ಮಾರ್ಗದರ್ಶಿ' ಶೈಲಜಾ ಪ್ರಕಾಶನ, ಬೆಳಗಾವಿ. ಪು.ಸಂ. ೩೪೧
೧೧. ಅದೇ ಪು.ಸಂ. ೩೪೧.
೧೨. ಕಾಮತ್ ಸೂರ್ಯನಾಥ ಯು– (೧೯೮೭), 'ಬೆಳಗಾವಿ ಜಿಲ್ಲಾ ಗೆಜೆಟೀಯರ್' ಕರ್ನಾಟಕ ರಾಜ್ಯ ಸರ್ಕಾರ ಗೆಜೆಟೀಯರ್, ಬೆಂಗಳೂರು ಪು.ಸಂ. ೮೯೬
೧೩. ಪಾಟೀಲ ಮನೋಜ – (೧೯೮೬), 'ಬೆಳಗಾವಿ ಜಿಲ್ಲಾ ಮಾರ್ಗದರ್ಶಿ', ಶೈಲಜಾ ಪ್ರಕಾಶನ, ಬೆಳಗಾವಿ ಪು.ಸಂ. ೩೪೨.

# ಕರ್ನಾಟಕ ಇತಿಹಾಸ ಅಕಾದೆಮಿ (ರಿ).

ನಂ. ೪೩/೧೩, ಮಾತೃಕೃಪಾ, ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ಮೌಂಟ್‌ಜಾಯ್ ಬಡಾವಣೆ, ಹನುಮಂತನಗರ, ಬೆಂಗಳೂರು – ೫೬೦ ೦೧೯

## ೨೦೧೫–೧೬ನೆಯ ಸಾಲಿನ ವಾರ್ಷಿಕ ವರದಿ

**ಪ್ರಿಯ ಸದಸ್ಯ ಬಂಧುಗಳೇ,**

ಕರ್ನಾಟಕ ಇತಿಹಾಸ ಅಕಾದೆಮಿಯ ೩೦ನೆಯ ವಾರ್ಷಿಕ ಸಮ್ಮೇಳನಕ್ಕಾಗಿ ನಾವೆಲ್ಲಾ ಧಾರವಾಡ ಜಿಲ್ಲೆಯ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆ (KRI) ಯ ಸಭಾಂಗಣದಲ್ಲಿ ಸಮಾವೇಶಗೊಂಡಿದ್ದೇವೆ. ಕಳೆದ ಮೂವತ್ತು ವರ್ಷಗಳಲ್ಲಿ ಅಕಾದೆಮಿಯ ಅಭ್ಯುದಯದಲ್ಲಿ ನಿರಂತರವಾಗಿ ಸಹಕರಿಸುತ್ತಾ ಬಂದಿರುವ ಎಲ್ಲರಿಗೂ ಅನಂತ ಧನ್ಯವಾದಗಳು. ಕಳೆದ ೨೯ ಸಮ್ಮೇಳನಗಳಿಗೆ ಆಶ್ರಯ ನೀಡಿ ಅಕಾದೆಮಿಯನ್ನು ಪೋಷಿಸಿರುವ ಎಲ್ಲಾ ಸಂಘ ಸಂಸ್ಥೆ ಹಾಗೂ ಧರ್ಮಪೀಠಗಳಿಗೆ ಅಕಾದೆಮಿಯು ಕೃತಜ್ಞವಾಗಿದೆ.

**ಐತಿಹಾಸಿಕ ಪರಂಪರೆ ಉಳಿಸಿ–೨೦೧೫**

೨೦೧೫ನೇ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಉದ್ಘಾಟನಾ ಸಮಾರಂಭವನ್ನು ದಿನಾಂಕ ೧೯–೦೮–೨೦೧೫ರ ಶನಿವಾರ ಸಂಜೆ ೪.೩೦ ಗಂಟೆಗೆ ಬೆಂಗಳೂರಿನ ಬಸವನಗುಡಿಯಲ್ಲಿರುವ ನರಸಿಂಹರಾಜ ಕಾಲೋನಿಯ ಬಿ.ಎಂ.ಶ್ರೀ. ಕಲಾಭವನದ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ವರ್ಷವೂ ಎಂದಿನಂತೆ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮಕ್ಕೆ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆರ್ಥಿಕ ಸಹಯೋಗ ದೊರೆತಿತ್ತು.

ಮೊದಲಿಗೆ ಡಾ. ಕೂ.ಸ.ಅಪರ್ಣ ಮತ್ತು ಸಂಗಡಿಗರಿಂದ ಪ್ರಾರ್ಥನೆ ಹಾಗೂ ಲಾವಣಿಯ ಗಾಯನದೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು. ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಪ್ರೊ. ಜಿ.ಕೆ. ದೇವರಾಜಸ್ವಾಮಿ ಅವರು ಸಭೆಗೆ ಸ್ವಾಗತ ಕೋರಿ ಪ್ರಾಸ್ತಾವಿಕ ಭಾಷಣ ಮಾಡಿದರು. ಕಾರ್ಯಕ್ರಮದ ಉದ್ಘಾಟನೆಯಲ್ಲಿ ಭಾಗವಹಿಸಿದ್ದ ಡಾ. ಆರ್.ಎಚ್. ಕುಲಕರ್ಣಿ, ಪ್ರಾಂಶುಪಾಲರು, ಕರ್ನಾಟಕ ಚಿತ್ರಕಲಾ ಪರಿಷತ್ ಬೆಂಗಳೂರು ಅವರು "ಐತಿಹಾಸಿಕ ಪರಂಪರೆ ಉಳಿಸಿ" ಸಪ್ತಾಹವನ್ನು ಜ್ಯೋತಿ ಬೆಳಗಿಸುವ ಮೂಲಕ ವಿಧಿವತ್ತಾಗಿ ಉದ್ಘಾಟಿಸಿ, ಪರಂಪರೆ–ಸಂಸ್ಕೃತಿ ಬಗ್ಗೆ ಹಾಗೂ ತಮ್ಮ ಊರಿನ ಸಾಂಸ್ಕೃತಿಕ ನೆಲೆಗಳು ತಮ್ಮ ಮೇಲೆ ಪ್ರಭಾವ ನೀಡಿದ್ದನ್ನು ತಿಳಿಸಿದರು. ಆ ಹಿನ್ನೆಲೆಯಲ್ಲಿ ಇತಿಹಾಸ ಮತ್ತು ಕಲೆಯ ಸಂಬಂಧಿ ವಿಷಯಗಳು ತಮ್ಮ ಮೇಲೆ ಪ್ರಭಾವ ಬೀರಿ ಅವುಗಳ ಅರಿವಿನ ಮೂಲಕ ಅಧ್ಯಯನದಲ್ಲಿ ತೊಡಗಿಕೊಂಡಿರುವುದನ್ನು ವಿವರಿಸಿದರು. ಆ ಮೂಲಕ ತಮ್ಮ ಊರಿನಲ್ಲಿ ಕಾರ್ಯಚಟುವಟಿಕೆಗಳನ್ನು ಮಾಡುತ್ತಿರುವುದನ್ನು ವಿವರಿಸಿದರು. ಹಾಗೂ ಕಲೆ, ಇತಿಹಾಸಗಳ ಅಧ್ಯಯನ, ಸಂರಕ್ಷಣೆ ಕುರಿತಾಗಿ ತಿಳಿಸಿದರು. ಅಕಾದೆಮಿಯು ಕಾರ್ಯಚಟುವಟಿಕೆ ಮೂಲಕ ಜನರಲ್ಲಿ ಜಾಗೃತಿ ಮೂಡಿಸುತ್ತಿರುವುದನ್ನು ಶ್ಲಾಘಿಸಿದರು. ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವಿಶ್ರಾಂತ ನಿರ್ದೇಶಕರಾದ ಡಾ. ಎಚ್.ಎಮ್. ಸಿದ್ದನಗೌಡರ್ ಅವರು, ಈ ಸಂದರ್ಭಕ್ಕೆಂದೇ ಅಕಾದೆಮಿಯ ಸದಸ್ಯರೂ, ಕಲಾವಿದರಾದ ಶ್ರೀ ತಾ.ಕೃ. ವೆಂಕಟೇಶ್ ಅವರು ಅಕಾದೆಮಿಗಾಗಿ ಸಿದ್ಧಪಡಿಸಿದ್ದ ವಿಶೇಷ ಭಿತ್ತಿ ಚಿತ್ರ ವಿನ್ಯಾಸವನ್ನು ಅನಾವರಣ ಮಾಡಿದರು. ಡಾ. ಎಚ್.ಎಮ್. ಸಿದ್ಧನಗೌಡರ್ ಅವರು ಐತಿಹಾಸಿಕ ಸ್ಮಾರಕಗಳ ರಕ್ಷಣೆಯ ಮಹತ್ವ ಅವುಗಳ ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ವಿವರಿಸಿದರು. ತಮ್ಮ ಕಾರ್ಯಾವಧಿಯಲ್ಲಿ ಪುರಾತತ್ವ ಇಲಾಖೆಯಲ್ಲಿ ಕೈಗೊಂಡ ಕಾರ್ಯಗಳನ್ನು ತಿಳಿಸಿದ್ದಲ್ಲದೆ, ಸ್ಮಾರಕಗಳ ರಕ್ಷಣೆ, ಜನರಲ್ಲಿ ಜಾಗೃತಿ, ವಿದ್ಯಾರ್ಥಿಗಳಲ್ಲಿ ಆಸಕ್ತಿ ಮೂಡಿಸುವ ಬಗ್ಗೆ ತಿಳಿಸಿದರು. ಪ್ರಸ್ತುತ ತಂತ್ರಜ್ಞಾನವನ್ನು ಪುರಾತತ್ವ ಇಲಾಖೆಯು ಬಳಸಿಕೊಳ್ಳುವ ಬಗ್ಗೆ ವಿವರಿಸಿದ್ದಲ್ಲದೆ, ಅಕಾದೆಮಿಯು ಪ್ರಾಚ್ಯವಸ್ತು ಪರಂಪರೆ ಇಲಾಖೆಯೊಂದಿಗೆ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ ನಿರಂತರವಾಗಿ ನಡೆಸಿಕೊಂಡು ಬರುತ್ತಿರುವುದನ್ನು ಶ್ಲಾಘಿಸಿದ್ದಲ್ಲದೆ, ಇನ್ನೂ ಹೆಚ್ಚಿನ ಸಹಕಾರದ ಅಗತ್ಯತೆ ಬಗ್ಗೆ ತಿಳಿಸಿದರು. ಅಕಾದೆಮಿಯ ಮೂಲಕ ಬೆಳೆದ ವಿದ್ವಾಂಸರು ದೇಶದಲ್ಲಿ ಖ್ಯಾತಿ ಪಡೆದಿದ್ದಾರೆಂದು ಶ್ಲಾಘಿಸಿದರು.

ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಡಾ. ದೇವರಕೊಂಡಾರೆಡ್ಡಿ, ಅಧ್ಯಕ್ಷರು, ಕರ್ನಾಟಕ ಇತಿಹಾಸ ಅಕಾದೆಮಿ, ಅವರು ಅಕಾದೆಮಿಯ ಕಾರ್ಯಚಟುವಟಿಕೆಗಳ ಬಗ್ಗೆ ಹಾಗೂ ಪರಂಪರೆ ಉಳಿಸಿ ಕಾರ್ಯಕ್ರಮಗಳ ಬಗ್ಗೆ ತಿಳಿಸಿದರು. ವಿದ್ಯಾರ್ಥಿಗಳು, ಕಾಲೇಜು ಉಪನ್ಯಾಸಕರು ಹೆಚ್ಚಿನ ಆಸಕ್ತಿ ವಹಿಸಿ ನಡೆಸುವಂತಾಗಬೇಕು. ಅಕಾದೆಮಿಯ ವೆಬ್‌ಸೈಟ್ ಮೂಲಕ ಇತಿಹಾಸ ಸಂಬಂಧಿ ಲೇಖನ, ದೇವಾಲಯಗಳ ಬಗ್ಗೆ, ಸ್ಮಾರಕಗಳ ಬಗ್ಗೆ, ಇತ್ಯಾದಿ ಕೆಲಸಗಳು ನಡೆಯುತ್ತಿದೆ. ಇದಕ್ಕೆ ಸದಸ್ಯರು ಹಾಗೂ ಆಸಕ್ತ ಜನರ ಸಹಕಾರ ಅಗತ್ಯವೆಂದರು. ಇದರಿಂದ ನಾಡಿಗೆ ಹಾಗೂ ದೇಶದ ಇತರ ಜನರಿಗೆ ಕರ್ನಾಟಕದ ಇತಿಹಾಸ ಹಾಗೂ ಸಾಂಸ್ಕೃತಿಕ ಪರಂಪರೆ ಬಗ್ಗೆ ಪರಿಚಯಿಸಬಹುದಾಗಿದೆ ಎಂದರು. ಅಕಾದೆಮಿಯೊಂದಿಗೆ ಸಹಕಾರ ನೀಡುತ್ತಿರುವ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಹಾಗೂ ಸಂಘ

ಸಂಸ್ಥೆಗಳನ್ನು ನೆನೆಯುತ್ತಾ ಅವುಗಳ ಸಹಕಾರದಿಂದ ಅಕಾದೆಮಿಯು ನಿರಂತರವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗಿದೆ ಎಂದರು.

ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು ಘಟಕದ ಅಧ್ಯಕ್ಷರಾದ ಡಾ. ಇಂದಿರಾ ಹೆಗ್ಗಡೆ ಅವರ ಅನುಪಸ್ಥಿತಿಯಲ್ಲಿ, ಪ್ರಧಾನ ಕಾರ್ಯದರ್ಶಿಯಾದ ಶ್ರೀ ತಾ.ಕೃ. ವೆಂಕಟೇಶ್ ಅವರ ನೇತೃತ್ವದಲ್ಲಿ, ಬೆಂಗಳೂರು ನಗರದ ಪ್ರೌಢಶಾಲೆ, ಪದವಿಪೂರ್ವ ಹಾಗೂ ಕಾಲೇಜು ವಿದ್ಯಾರ್ಥಿಗಳಿಗೆ ಏರ್ಪಡಿಸಿದ "ಸ್ಥಳದಲ್ಲೇ ಚಿತ್ರ ರಚಿಸುವ ಸ್ಪರ್ಧೆ" ಯಲ್ಲಿ ಕ್ರಮವಾಗಿ 'ನಾ ಕಂಡ ಕೋಟೆ' 'ಪರಿಸರದ ಚಿತ್ರಣ', 'ನಾ ಕಂಡ ದೇವಾಲಯಪರಿಸರ', ಐತಿಹಾಸಿಕ ಸ್ಮಾರಕಗಳ ಸ್ಥಿತಿಗತಿಯ ಕುರಿತು ವಾಸ್ತವದ ನಿಸರ್ಗ ಚಿತ್ರಣಗಳ ಚಿತ್ರ ಬರೆಯುವ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಡಾ. ಆರ್.ಎಚ್. ಕುಲಕರ್ಣಿ, ಡಾ. ಎಚ್.ಎಮ್. ಸಿದ್ಧನಗೌಡರ್ ಮತ್ತು ಡಾ. ದೇವರಕೊಂಡಾರೆಡ್ಡಿ ಅವರು ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ನೀಡಿದರು. ಚಿತ್ರ ಬರೆಯುವ ಸ್ಪರ್ಧೆಯಲ್ಲಿ ಒಟ್ಟು ೫೮ ಸ್ಪರ್ಧಿಗಳು ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ ಎಲ್ಲಾ ರೀತಿಯಲ್ಲಿ ಸಹಕರಿಸಿದ ಸ್ವಯಂಸೇವಕರು ಹಾಗೂ ತೀರ್ಪುಗಾರರಿಗೆ ತಾ.ಕೃ. ವೆಂಕಟೇಶ್ ಅವರು ಕೃತಜ್ಞತೆ ಸಲ್ಲಿಸಿದರು.

ಅಕಾದೆಮಿಯ ೨೦೧೫ನೇ ಸಾಲಿನ "ಐತಿಹಾಸಿಕ ಪರಂಪರೆ ಉಳಿಸಿ" ಸಪ್ತಾಹದ ಕಾರ್ಯಕ್ರಮ ಉದ್ಘಾಟನೆಗೆ ಸ್ಥಳಾವಕಾಶ ಮಾಡಿಕೊಟ್ಟ ಜಿ.ಎಂ.ಶ್ರೀ. ಪ್ರತಿಷ್ಠಾನ ಹಾಗೂ ಸ್ಪರ್ಧೆಗಳನ್ನು ನಡೆಸಲು ಅವಕಾಶ ಮಾಡಿಕೊಟ್ಟ ಬಸವನಗುಡಿ ನ್ಯಾಷನಲ್ ಕಾಲೇಜಿನ ಆಡಳಿತ ವರ್ಗಗಳಿಗೆ ಅಕಾದೆಮಿಯು ಕೃತಜ್ಞತೆ ಸಲ್ಲಿಸಿತು. ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಪ್ರೊ. ಜಿ.ಕೆ. ದೇವರಾಜಸ್ವಾಮಿ, ಕಾರ್ಯಕ್ರಮ ಸಂಯೋಜನೆ ಹಾಗೂ ನಿರೂಪಣೆ ಮಾಡಿದರು. ಈ ಕಾರ್ಯಕ್ರಮವು ಯಶಸ್ವಿಯಾಗುವಲ್ಲಿ ಸಹಕರಿಸಿದ ಸರ್ವರಿಗೂ ಅಕಾದೆಮಿಯ ಪರವಾಗಿ ಪ್ರೊ॥ ಅನಂತಪದ್ಮನಾಭ ರವರು ವಂದನೆ ಸಲ್ಲಿಸಿದರು.

ಬೆಂಗಳೂರು ನಗರದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ವತಿಯಿಂದ ರಾಜ್ಯಮಟ್ಟದಲ್ಲಿ "ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ" ಕಾರ್ಯಕ್ರಮವು ಉದ್ಘಾಟನೆಗೊಂಡು ಸದರಿ ವರ್ಷದಲ್ಲಿ ವಿಶೇಷ ಭಿತ್ತಿಪತ್ರಗಳ ಅನಾವರಣದ ನಂತರ ರಾಜ್ಯದಾದ್ಯಂತ ವಿವಿಧ ಸ್ಥಳಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳು ನಡೆದಿವೆ. ಅಕಾದೆಮಿಯ ಸದಸ್ಯರ ಅಪೇಕ್ಷೆಯಂತೆ ಅಗತ್ಯವಿರುವ ಭಿತ್ತಿಪತ್ರ, ಸಂಬಂಧಿತ ಸಾಹಿತ್ಯ ಹಾಗೂ ಪ್ರಚಾರಪತ್ರಗಳನ್ನು ಸದಸ್ಯರಿಗೆ ಮುಂಚಿತವಾಗಿ ಕಳುಹಿಸಲಾಗಿತ್ತು. ಆ ಪ್ರಕಾರ ಅಕಾದೆಮಿಯ ಸದಸ್ಯರು, ಇತಿಹಾಸ ಆಸಕ್ತರು ಹಾಗೂ ಸಂಘಸಂಸ್ಥೆಗಳು ನಾಡಿನಾದ್ಯಂತ ವರ್ಷದುದ್ದಕ್ಕೂ "ಐತಿಹಾಸಿಕ ಪರಂಪರೆ ಉಳಿಸಿ" ಕಾರ್ಯಕ್ರಮವನ್ನು ಹಮ್ಮಿಕೊಂಡು ಆಚರಿಸಿದ ಕಾರ್ಯಕ್ರಮಗಳ ವಿವರವನ್ನಿಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ.

**ದಿನಾಂಕ ೨೨-೮-೨೦೧೫, ಹೊನ್ನಾಳಿ**

ಶ್ರೀ ಮೃತ್ಯುಂಜಯ ಶಿವಾಚಾರ್ಯ ಪ್ರಥಮ ದರ್ಜೆ ಕಾಲೇಜು ಹೊನ್ನಾಳಿ ಇವರು ದಿನಾಂಕ : ೨೨.೮.೨೦೧೫ರಂದು ಶನಿವಾರ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ನಿವೃತ್ತ ಪ್ರಾಂಶುಪಾಲರಾದ ಡಾ. ಎಂ. ಶಿವಶಂಕರಯ್ಯ ಅವರು ಕಾರ್ಯಕ್ರಮ ಸಮಾರಂಭವನ್ನು ಉದ್ಘಾಟಿಸಿದರು.

ಇಂದಿನ ಯುವಕರು ಇತಿಹಾಸ ಪ್ರಜ್ಞೆ ಬೆಳೆಸಿಕೊಳ್ಳಬೇಕಿದೆ. ನಿನ್ನೆ ನಡೆದ ಇತಿಹಾಸವನ್ನು ಸ್ಮರಿಸಿಕೊಂಡು ನಾಳೆಯ ಹೆಜ್ಜೆ ಇಡಬೇಕಿದೆ. ಸ್ಮಾರಕಗಳ ರಕ್ಷಣೆ, ಅಧ್ಯಯನ ಮುಂತಾದವುಗಳ ಬಗ್ಗೆ ವಿದ್ಯಾರ್ಥಿಗಳಿಗೆ ಡಾ. ಎಂ. ಶಿವಶಂಕರಯ್ಯ ಅವರು ತಿಳಿಸಿದರು. ಹೊನ್ನಾಳಿಯ ಹೊನ್ನೆಲೆಗಳು ಅಕ್ಷಯ್ ಬಂಡಿಗಡಿ ನಿರ್ದೇಶನದ ಸಾಕ್ಷ್ಯ ಚಿತ್ರವನ್ನು ಡಾ. ನ. ಕೊಟ್ರೇಶ್, ಉತ್ತಂಗಿ ಗ್ರಂಥಾಧಿಕಾರಿಗಳು ಅವರು ಬಿಡುಗಡೆ ಮಾಡಿದರು. ಇತಿಹಾಸ, ಸಂಸ್ಕೃತಿಗಳ ದಾಖಲೀಕರಣ ಮಹತ್ವದ್ದಾಗಿದ್ದು, ಮುಂದಿನ ಅಧ್ಯಯನ ಹಾಗೂ ತಲೆಮಾರಿಗೆ ತಿಳಿಸುವಲ್ಲಿ ಈ ಸಾಕ್ಷ್ಯಚಿತ್ರಗಳು ಮಹತ್ವದ್ದಾಗಿದೆ ಎಂದು ತಿಳಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಚ್. ನರಸಪ್ಪ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಇತಿಹಾಸದಲ್ಲಿ ಸಾಕಷ್ಟು ಅಂಶಗಳು ಮರೆಮಾಚಿವೆ. ಅವುಗಳ ಅಧ್ಯಯನ, ಸಂಶೋಧನೆ, ಅಗತ್ಯಗಳ ಬಗ್ಗೆ ತಿಳಿಸಿದರು. ಹಾಗೂ ವಿದ್ಯಾರ್ಥಿಗಳು ಪರಂಪರೆ ಮತ್ತು ಸಂಸ್ಕೃತಿ ಬಗ್ಗೆ ಆಸಕ್ತಿ ಬೆಳೆಸಿಕೊಳ್ಳಬೇಕಿದೆ ಆದ್ದರಿಂದ ಇಂತಹ ಕಾರ್ಯಕ್ರಮದ ಮೂಲಕ ವಿದ್ಯಾರ್ಥಿಗಳಿಗೆ ತಿಳಿಸುವ ಅವಶ್ಯಕತೆ ಇದೆ ಎಂದು ತಮ್ಮ ಅಧ್ಯಕ್ಷ ಭಾಷಣದಲ್ಲಿ ಪ್ರೊ. ಎಚ್. ನರಸಪ್ಪ ಅವರು ತಿಳಿಸಿದರು. ಅತಿಥಿ ಉಪನ್ಯಾಸಕಿ ಸೌಮ್ಯ ಅವರು ಮಾತನಾಡಿ, ಇತಿಹಾಸ ದಾಖಲೆಗಳು, ಐತಿಹಾಸಿಕ ಸ್ಮಾರಕಗಳು, ನಾಣ್ಯಗಳು, ಸ್ಥಳನಾಮಗಳ ಮಹತ್ವದ ಬಗ್ಗ ತಿಳಿಸುತ್ತಾ ಅವುಗಳ ಅಧ್ಯಯನದ ಅವಶ್ಯಕತೆ ತಿಳಿಸಿದರು. ಅತಿಥಿಗಳಾಗಿ ಆಗಮಿಸಿದ್ದ ಡಾ. ಎಸ್. ವರದರಾಜ್ ಮುಖ್ಯಸ್ಥರು, ನಿವೃತ್ತ ಉಪನ್ಯಾಸಕರಾದ ಶ್ರೀ ಕೆ. ಸಿದ್ದಪ್ಪ ಹಾಲಿವಾಣ ಮತ್ತು ಶ್ರೀ ಪ್ರೇಮಕುಮಾರ್ ಬಂಡಿಗಡಿ ರಂಗಕರ್ಮಿಗಳು ಇವರುಗಳು ಇತಿಹಾಸದ ಮಹತ್ವ ಹಾಗೂ ಅಧ್ಯಯನದ ಬಗ್ಗೆ ವಿವರವಾಗಿ ವಿದ್ಯಾರ್ಥಿಗಳಿಗೆ ತಿಳಿಸಿದರು.

**ದಿನಾಂಕ ೨೯-೮-೨೦೧೫, ಹೂವಿನ ಹಡಗಲಿ**

ಹೂವಿನ ಹಡಗಲಿಯ ಜಿ.ಪಿ. ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ದಿನಾಂಕ : ೨೯.೦೮.೨೦೧೫ ಶನಿವಾರದಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಂಡಿದ್ದು ಪ್ರಾಚಾರ್ಯರಾದ ಶ್ರೀ ಷಣ್ಮುಖಪ್ಪ ಎಚ್.ಬಿ. ಇವರು ಅಧ್ಯಕ್ಷತೆ ವಹಿಸಿದ್ದರು. ಡಾ. ಸತೀಶ ಇತಿಹಾಸ ಉಪನ್ಯಾಸಕರು, ಇತಿಹಾಸದ ಮಹತ್ವ, ಸ್ಮಾರಕಗಳ ರಕ್ಷಣೆ ಹಾಗೂ

ಅಧ್ಯಯನದ ಬಗ್ಗೆ ವಿದ್ಯಾರ್ಥಿಗಳಿಗೆ ತಿಳಿಸಿದರು. ಶ್ರೀ ವಿರೂಪಾಕಪ್ಪ ಬಿ.ವಿ.ವಿ., ಶ್ರೀ ಮಾರುತಿ ಬಿ, ಶ್ರೀಮತಿ ಇರ್ಫಾನೋ ಬಾನೋ, ಕು. ಗಾಯಿತ್ರಿ, ಬಿ, ಶ್ರೀ ಬಿ. ನಟರಾಜ್ ಇವರುಗಳು ಹಾಜರಿದ್ದರು. ಶ್ರೀ ಶಂಕರ್ ಬೆಟಗೇರಿ, ಇತಿಹಾಸ ಉಪನ್ಯಾಸಕರು ಕಾರ್ಯಕ್ರಮುವನ್ನು ಸಂಯೋಜಸಿದ್ದರು.

**ದಿನಾಂಕ ೯-೯-೨೦೧೫, ಸುರಪುರ**

ಶ್ರೀ ನಿಂಗನಗೌಡ ಹ. ದೇಸಾಯಿ (ಹನಿ) ಸಂಶೋಧಕರು, ಶಿಕ್ಷಕರು ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಕೆಂಭಾವಿ ಇವರ ನೇತೃತ್ವದಲ್ಲಿ ಸುರಪುರ ತಾಲ್ಲೂಕಿನಲ್ಲಿ ನಡೆದ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ವಿವರ ಈ ಕೆಳಕಂಡಂತಿದೆ.

**೨೦೧೫-೧೬ನೇ ಸಾಲಿನಲ್ಲಿ ಸುರಪುರ ತಾಲೂಕಿನಲ್ಲಿ ನಡೆದ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ ಕಾರ್ಯಕ್ರಮಗಳ ವಿವರ**

| ದಿನಾಂಕ | ಸ್ಥಳ | ಅಧ್ಯಕ್ಷತೆ | ಮುಖ್ಯ ಅತಿಥಿ ಉಪನ್ಯಾಸಕರು | ಅತಿಥಿಗಳು |
|---|---|---|---|---|
| ೯-೯-೨೦೧೫ | ಖಾಸ್ಗತೇಶ್ವರ ಹಿ.ಪ್ರಾ.ಶಾಲೆ ಕಲದೇವನಹಳ್ಳಿ | ಅಂಬ್ರಯ್ಯ ಸ್ವಾಮಿ ಜಾಲಿಬೆಂಚಿ ಪ್ರಗು | ನಿಂಗನಗೌಡ ದೇಸಾಯಿ ಸಂಶೋಧಕರು | ಕನಕಪ್ಪ ವಾಗಣಗೇರಾ ಮತ್ತು ಶಾಂತಗೌಡ ಭಾಗವಹಿಸಿದ್ದರು. |
| ೯-೯-೨೦೧೫ | ಸರಕಾರಿ ಆದರ್ಶ ಪ್ರೌಢಶಾಲೆ ವಜ್ಜಲ್ | ಶಿವರಾಜ ಬಿರಾದಾರ ಪ್ರ ಗು | ನಿಂಗನಗೌಡ ದೇಸಾಯಿ ಸಂಶೋಧಕರು | ರಮೇಶ್ ಮತ್ತು ಶಾಂತಗೌಡ |
| ೯-೯-೨೦೧೫ | ಮೂರಾರ್ಜಿ ದೇಸಾಯಿ ವಸತಿ ಶಾಲೆ ಹುಣಸಗಿ | ಈರಣ್ಣ ಅರಕೇರಿ ಪ್ರಾಂಶುಪಾಲರು | ನಿಂಗನಗೌಡ ದೇಸಾಯಿ ಸಂಶೋಧಕರು | ಸಂಗನಗೌಡ ಮತ್ತು ಅಶೋಕ ಭಾಗವಹಿಸಿದ್ದರು. |
| ೨೪-೯-೨೦೧೫ | ಸರಕಾರಿ ಪ್ರೌಢ ಹಾಗೂ ಹಿರಿಯ ಪ್ರಾಥಮಿಕ ಶಾಲೆ ಅಗ್ನಿ | ಶ್ರೀಶೈಲ್‌ಸೋಮನಕಟ್ಟಿ ಪ್ರ ಗು | ನಿಂಗನಗೌಡ ದೇಸಾಯಿ ಸಂಶೋಧಕರು | ಹಣಮಂತ್ರಾಯ ಬಿರಾದಾರ ಶ್ರೀಶೈಲ್ ಸಗರ ಪ್ರಭುಗೌಡ ಹಾಗೂ ಸುರೇಶ್ ಮಾಳಗೆ ಹಾಗೂ ದಿಲೀಪ್ ಕುಮಾರ ಈರಣ್ಣ ಶಿಕ್ಷಕರ ಕಲಿಕಾ ಕೇಂದ್ರ, ಕೆಂಭಾವಿ ಭಾಗವಹಿಸಿದ್ದರು. |
| ೨೪-೯-೨೦೧೫ | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಅರಕೇರಾ ಜೆ | ಗುರುನಾಥ ನವದಗಿ ಪ್ರ ಗು | ನಿಂಗನಗೌಡ ದೇಸಾಯಿ ಸಂಶೋಧಕರು | ರಾಹುತಪ್ಪ ಹಾಗೂ ಈರಪ್ಪ ಮತ್ತು ಸಂತೋಷ ಕುಮಾರ ಹಾಗೂ ದಿಲೀಪ್ ಕುಮಾರ ಈರಣ್ಣ ಕಲಿಕಾ ಕೇಂದ್ರ ಕೆಂಭಾವಿ ಭಾಗವಹಿಸಿದ್ದರು. |

**ದಿನಾಂಕ ೯-೧೧-೨೦೧೫, ವಿಜಯಪುರ**

ಸರ್ಕಾರಿ ಪದವಿಪೂರ್ವ ಕಾಲೇಜು ಕಗ್ಗೊಡ, ವಿಜಯಪುರ ತಾಲ್ಲೂಕು ಕೇಂದ್ರದಲ್ಲಿ ದಿನಾಂಕ : ೯.೧೧.೨೦೧೫ರಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ ಕಾಲೇಜಿನ ಸಿಬ್ಬಂದಿ ವರ್ಗ ಹಾಗೂ ವಿದ್ಯಾರ್ಥಿಗಳನ್ನು ಕಮಟಗೆ ಕೆರೆಗೆ ಕರೆದೊಯ್ಯಲಾಯಿತು. ವೀರ ಪರಂಪರೆಯ ಪ್ರಾರ್ಥನೆಯನ್ನು ಕುಮಾರಿ ಸಾವಿತ್ರಿ ತಳವಾರ ಅವರು ಹಾಡಿದರು. ಇತಿಹಾಸ ಉಪನ್ಯಾಸಕರಾದ ಶ್ರೀ ಪಿ.ವಿ. ಕೋಟ್ಯಾಳ ಅವರು, ಐತಿಹಾಸಿಕ ಆಧಾರಗಳಾದ ಸ್ಮಾರಕಗಳು, ನಾಣ್ಯಗಳು, ಶಾಸನಗಳು, ದಾಖಲೆಗಳು, ಹಸ್ತಪ್ರತಿ, ಕೋಟೆ ಕೊತ್ತಲಗಳ ಮಹತ್ವ, ಸಂರಕ್ಷಣೆ ಹಾಗೂ ಅಧ್ಯಯನದ ಬಗ್ಗೆ ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರಾಂಶುಪಾಲರಾದ ಕೆ.ಆರ್. ಇನಾಮದಾರ ಅವರು ವಹಿಸಿದ್ದರು. ಐತಿಹಾಸಿಕ ಪರಂಪರೆ ಉಳಿಸಿ ಮಹತ್ವ ಕುರಿತು ಮಾತನಾಡಿದರು. ಶ್ರೀ ಎಂ.ಎಚ್. ಮೊಕಾಶಿ, ಶಿಕ್ಷಣ ಶಾಸ್ತ್ರ ಉಪನ್ಯಾಸಕರು ವಂದನಾರ್ಪಣೆ ಮಾಡಿದರು. ಕಾಲೇಜಿನ ಉಪನ್ಯಾಸಕರಾದ ಶ್ರೀ ಎವ್.ಬಿ. ಕೊಚಬಾಳ, ಶ್ರೀ ಬಿ.ಎಸ್. ಪಾಟೀಲ, ಶ್ರೀ ಎಸ್.ಎವ್. ಕಾರಜೋಳ ಇವರು ಹಾಜರಿದ್ದು ಕಾರ್ಯಕ್ರಮ ಯಶಸ್ವಿಗೊಳಿಸಿದರು.

**ದಿನಾಂಕ ೧೫-೯-೨೦೧೫, ಹೂವಿನ ಹಡಗಲಿ**

ಜಿ.ಬಿ.ಆರ್. ಪದವಿ ಮಹಾವಿದ್ಯಾಲಯದ ಎನ್.ಎಸ್.ಎಸ್. ಘಟಕಗಳೊಂದಿಗೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಅಧ್ಯಕ್ಷತೆಯನ್ನು ಪ್ರಾಚಾರ್ಯರಾದ ಡಾ. ಕೆ. ರೇವಣಸಿದ್ದಪ್ಪ ಅವರು ವಹಿಸಿದ್ದರು. ಕಾರ್ಯಕ್ರಮದಲ್ಲಿ ಎಂ. ದಿವಾಕರ್ ಅವರು ಐತಿಹಾಸಿಕ ಪರಂಪರೆಯ ಮಹತ್ವ, ಸಂರಕ್ಷಣೆ, ಸಂಶೋಧನೆ ಬಗ್ಗೆ ಬಿ.ಎಸ್ಸಿ. ಮತ್ತು ಬಿ.ಕಾಂ. ವಿದ್ಯಾರ್ಥಿಗಳಿಗೆ ತಿಳಿಸಿದರು. ಅರ್ಥಶಾಸ್ತ್ರ ಮುಖ್ಯಸ್ಥ ಪ್ರೊ. ಎಸ್.ಎಸ್. ಪಾಟೀಲ್, ಪದವಿಪೂರ್ವ ಕಾಲೇಜಿನ ಪ್ರಾಚಾರ್ಯ ಡಾ. ಎಂ.ಎಂ. ರಾಜಶೇಖರಯ್ಯ ಹಾಗೂ ಪದವಿ ಕಾಲೇಜು ಎನ್. ವರಕುಮಾರಗೌಡ ಅವರು ಪರಂಪರೆ ಸಂರಕ್ಷಣೆ ಹಾಗೂ ಅಧ್ಯಯನದ ಬಗ್ಗೆ ತಿಳಿಸಿದರು. ಅಕ್ಟೋಬರ್ ತಿಂಗಳಿನಲ್ಲಿ ಬಿ.ಎ. ವಿದ್ಯಾರ್ಥಿಗಳಿಗೆ ಹಮ್ಮಿಕೊಂಡಿದ್ದ ಪರಂಪರೆ ಕುರಿತ ಕಾರ್ಯಕ್ರಮದಲ್ಲಿ ಎಂಪಿಎಂ ಶಿವಪ್ರಕಾಶ್ ಅಮರೇಗೌಡ ಪಾಟೀಲ್, ಡಾ. ಎಸ್.ಎಸ್. ಪಾಟೀಲ್, ಪಿ.ಡಿ. ಕೆರೂರ್ ಅವರು ಸ್ಮಾರಕಗಳ ಸಂರಕ್ಷಣೆ, ಅಧ್ಯಯನ ಸಂಶೋಧನೆ ಕುರಿತು ವಿದ್ಯಾರ್ಥಿಗಳಿಗೆ ತಿಳಿಸಿದರು.

**ದಿನಾಂಕ ೨೬-೯-೨೦೧೫**

ಜಿ.ಬಿ.ಆರ್. ಪದವಿ ಮಹಾ ವಿದ್ಯಾಲಯದ ಇತಿಹಾಸ ಉಪನ್ಯಾಸಕರುಗಳಾದ ಎಂ. ದಿವಾಕರ್, ಬಸವರಾಜಯ್ಯ ಮಠದ, ಎಂ.ಪಿ.ಎಂ. ಶಿವಪ್ರಕಾಶ್, ಅಮರೆಗೌಡ ಪಟೇಲ್, ಜರ್ಮಲ್ಲಿ ಪಾಳೆಯಗಾರರ ಸ್ಮಾರಕಗಳನ್ನೂ ಪರಿಶೀಲಿಸಿ ಅವರ ವಂಶಸ್ಥರಾದ ಸಿಧ್ಧಪ್ಪ ನಾಯಕರಿಂದ ಮಾಹಿತಿ ಪಡೆದುಕೊಳ್ಳಲಾಯಿತು. ಡಿಸೆಂಬರ್ ೨೮ರಂದು ಇದೇ ತಂಡ ಇತಿಹಾಸ ಮೌಲ್ಯಮಾಪಕರ ತಂಡದೊಂದಿಗೆ ಜರ್ಮಲ್ಲಿ ಮತ್ತು ಗುಡೆಕೋಟೆಯ ಪಾಳೆಪಟ್ಟಗಳನ್ನು ಸಂರಕ್ಷಿಸಿ ಅವುಗಳನ್ನು ಪ್ರವಾಸಿ ತಾಣಗಳಾಗಿ ಅಭಿವೃದ್ಧಿಪಡಿಸಬೇಕೆಂದು ಸರ್ಕಾರಕ್ಕೆ ಒತ್ತಾಯಿಸಿ ತಹಶೀಲ್ದಾರರಿಗೆ ಮನವಿ ಸಲ್ಲಿಸಲಾಯಿತು.

**ದಿನಾಂಕ ೧೩-೪-೨೦೧೬**

ಹೊಸಪೇಟೆಯ ವಿಜಯನಗರ ಕಾಲೇಜಿನ ಬಸವರಾಜ ಮೇಟಿಯವರು "ಪರಂಪರೆ ರಕ್ಷಣೆಯಲ್ಲಿ ವಿದ್ಯಾರ್ಥಿಗಳ ಪಾತ್ರ" ಕುರಿತು ಮಾತನಾಡಿದರು.

ದಿನಾಂಕ : **೦೫.೧೦.೨೦೧೫ರಿಂದ ೦೮-೧೦-೨೦೧೫ ಕನ್ನಡ ವಿಶ್ವವಿದ್ಯಾಲಯ, ಹಂಪಿ,** ಡಾ. ಎಫ್.ಟಿ. ಹಳ್ಳಿಕೇರಿ, ಮುಖ್ಯಸ್ಥರು ಹಸ್ತಪ್ರತಿ ವಿಭಾಗ, ಮತ್ತು ಡಾ. ಕೆ. ರವೀಂದ್ರನಾಥ್, ಸಂಚಾಲಕ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ ಇವರ ನೇತೃತ್ವದಲ್ಲಿ ಈ ಕೆಳಗಿನಂತೆ ಕಾರ್ಯಕ್ರಮ ಯೋಜಿಸಿದ್ದರು.

**ದಿನಾಂಕ ೦೫-೧೦-೨೦೧೫, ರಾಣಿಬೆನ್ನೂರು**

ಜಿ.ಎ.ಜೆ.ಎಸ್.ಎಸ್. ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ರಾಣಿಬೆನ್ನೂರಿನ ದಿನಾಂಕ : ೫.೧೦.೨೦೧೫ರಂದು ಡಾ. ಕೆ. ರವೀಂದ್ರನಾಥ್ ಅವರ ಪ್ರಾಸ್ತಾವಿಕ ನುಡಿಯನ್ನು ಆಡಿದರು. ಕಾರ್ಯಕ್ರಮದ ಉದ್ಘಾಟನೆಯನ್ನು ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ. ಮಲ್ಲಿಕಾ ಎಸ್. ಘಂಟಿ ಉದ್ಘಾಟಿಸಿ ಚಾಲನೆ ನೀಡಿದರು. ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾದ ಡಾ. ಎಫ್.ಟಿ. ಹಳ್ಳಿಕೇರಿ ಅವರು ಹಸ್ತಪ್ರತಿ ಬಗ್ಗೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಮಹತ್ವದ ಬಗ್ಗೆ ವಿವರಿಸಿದರು. ಡಾ. ಎಸ್.ವೈ. ಸೋಮಶೇಖರ್, ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ ಇವರು ಉಪನ್ಯಾಸ ಮಾಡಿ ಪರಂಪರೆ, ಸಂಸ್ಕೃತಿಗಳ ಅಧ್ಯಯನ ಹಾಗೂ ಸ್ಮಾರಕಗಳ ಸಂರಕ್ಷಣೇ ಮುಂತಾದವುಗಳ ಬಗ್ಗೆ ವಿದ್ಯಾರ್ಥಿಗಳಿಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಡಾ. ಆರ್.ಎಂ. ಕುಬೇರಪ್ಪ ಆಡಳಿತಾಧಿಕಾರಿಗಳು, ಜಿ.ಎ.ಜೆ.ಎಸ್.ಎಸ್. ಸಮೂಹ ಶಿಕ್ಷಣ ಸಂಸ್ಥೆ, ಇವರು ಆಗಮಿಸಿದ್ದು ಕಾರ್ಯಕ್ರಮವನ್ನು ಯಶಸ್ವಿಗೊಳಿಸುವ ಬಗ್ಗೆ ತಿಳಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಎನ್.ಕೆ. ರಾಮಚಂದ್ರಪ್ಪ, ಪ್ರಾಚಾರ್ಯರು, ಬಿ.ಎಜೆ.ಎಸ್.ಎಸ್. ಮಹಿಳಾ ಮಹಾವಿದ್ಯಾಲಯ ರಾಣಿಬೆನ್ನೂರು ಇವರು ವಹಿಸಿ, ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲು ಕಾರಣರಾದರು.

**ದಿನಾಂಕ ೦೫-೧೦-೨೦೧೫, ಕಾಕೋಳ**

ಮಧ್ಯಾಹ್ನ ೨.೦೦ ಗಂಟೆಗೆ ಜೀರೇಶ್ವರ ಪ್ರೌಢಶಾಲೆ, ಕಾಕೋಳ ಇಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮಿಕೊಂಡಿದ್ದು, ಅಧ್ಯಕ್ಷರಾಗಿ ಶ್ರೀ ಗುಡ್ಡಪ್ಪ ಹಿತ್ತಲಮನಿ, ಮುಖ್ಯೋಪಾಧ್ಯಾಯರು, ಕಕೋಳ ಇವರು ವಹಿಸಿದ್ದರು. ಶ್ರೀ ಸಿದ್ದಪ್ಪ ಬಾತಿ ಕನ್ನಡ ಶಿಕ್ಷಕರು ಕಾಕೋಳ ಇವರು ಸ್ವಾಗತಿಸಿ ಕಾರ್ಯಕ್ರಮದ ರೂಪುರೇಷೆ ತಿಳಿಸಿದರು. ಡಾ. ಕೇಶವಮೂರ್ತಿ ಪಿ.ಡಿ.ಎಫ್. ಸಂಶೋಧನ ವಿದ್ಯಾರ್ಥಿ ಅವರು ಸ್ಮಾರಕಗಳು, ಇತಿಹಾಸದ ಅಧ್ಯಯನ, ಸಂಶೋಧನೆಗಳನ್ನು ಹಾಗೂ ಸ್ಮಾರಕಗಳ ಸಂರಕ್ಷಣೆ ಕುರಿತು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಕೆ.ಡಿ.ಕೆ. ಹಿತ್ತಲ ಮನಿ, ಅಧ್ಯಕ್ಷರು, ಜೀರೇಶ್ವರ ಪ್ರೌಢಶಾಲೆ, ಕಾಕೋಳ ಹಾಗೂ ಎ.ಪಿ.ಎಂ.ಸಿ. ಸದಸ್ಯರು, ರಾಣಿಬೆನ್ನೂರು, ಇವರು ಆಗಮಿಸಿದ್ದು ಸಾಂಸ್ಕೃತಿಕ ಪರಂಪರೆ, ಅವುಗಳನ್ನು ರಕ್ಷಿಸಿಕೊಂಡು ಹೋಗುವ ಬಗ್ಗೆ ತಿಳಿಸಿದರು.

**ದಿನಾಂಕ ೬-೧೦-೨೦೧೫, ಹಿರೇಕೆರೂರು**

ಬಿ.ಆರ್. ತಂಬಾಕದ ಪ್ರಥಮ ದರ್ಜೆ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನಲ್ಲಿ ದಿನಾಂಕ : ೬-೧೦-೨೦೧೫ರಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಂಡಿದ್ದು, ಡಾ. ಎಸ್. ಚನ್ನಗೌಡ್ರು, ಪ್ರಾಚಾರ್ಯರು ಹಾಗೂ ವಿದ್ಯಾ ವಿಷಯದ ಪರಿಷತ್ ಸದಸ್ಯರು ಕ.ವಿ.ವಿ. ಧಾರವಾಡ ಇವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಎಂ.ಎನ್. ನಾಗರಾಜಪ್ಪ, ಇತಿಹಾಸ ಪ್ರಾಧ್ಯಾಪಕರು ಮತ್ತು ಉಪ ಪ್ರಾಚಾರ್ಯರು ಇವರು ಸ್ವಾಗತ ಕೋರಿದರು. ಶ್ರೀ ಕಾಂತೇಶರೆಡ್ಡಿ, ಸಂಶೋದನ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಐತಿಹಾಸಿಕ ಸ್ಮಾರಕಗಳು, ಇತಿಹಾಸ ಸಂಶೋಧನೆ ಅಧ್ಯಯನ ಕುರಿತು ವಿದ್ಯಾರ್ಥಿಗಳಿಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎಸ್. ಪಾಟೀಲ, ಗೌರವ ಕಾರ್ಯದರ್ಶಿ, ಎಚ್.ಬಿ.ಈ.ಎಸ್. ನಿಯಮಿತ ಹಿರೇಕೇರೂರು ಇವರು ಆಗಮಿಸಿದ್ದರು.

**ದಿನಾಂಕ ೬-೧೦-೨೦೧೫, ರಟ್ಟಿಹಳ್ಳಿ**

ಪ್ರಿಯದರ್ಶಿನಿ ಪ್ರಥಮ ದರ್ಜೆ ಕಾಲೇಜು ರಟ್ಟಿಹಳ್ಳಿಯಲ್ಲಿ ದಿನಾಂಕ : ೦೬-೧೦-೨೦೧೫ರಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವು ಮಧ್ಯಾಹ್ನ ೧೨.೩೦ ಗಂಟೆಗೆ ಆರಂಭಗೊಂಡು, ಅಧ್ಯಕ್ಷತೆಯನ್ನು ಡಾ. ಎಂ.ಆರ್. ಅಂಚಿ ಪ್ರಾಚಾರ್ಯರು ರಟ್ಟಿಹಳ್ಳಿ ಇವರು ವಹಿಸಿದ್ದರು. ಪ್ರೊ. ಎಚ್.ಬಿ. ಕೆಂಚಳ್ಳಿ, ಮುಖ್ಯಸ್ಥರು, ಇತಿಹಾಸ ವಿಭಾಗ, ಇವರು ಕಾರ್ಯಕ್ರಮಕ್ಕೆ ಸ್ವಾಗತ ಕೋರಿದರು. ಶ್ರೀ ಕಾಂತೇಶ ಅಂಬಿಗೇರ, ಉಪನ್ಯಾಸಕರು, ಇವರು ಪರಂಪರೆ ಸಂಸ್ಕೃತಿ ಸಂರಕ್ಷಣೆ ಬಗ್ಗೆ ತಿಳಿಸಿದರು. ಶ್ರೀ ಡಿ.ಎಂ. ಸಾಲಿ, ಮಾಜಿ ಮುಖ್ಯ ಸಚೇತಕರು, ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸಾಂಸ್ಕೃತಿಕ ಪರಂಪರೆ ಅವುಗಳ ಅಧ್ಯಯನ ಮತ್ತು ಇತಿಹಾಸ ಸ್ಮಾರಕಗಳ ಸಂರಕ್ಷಣೆ ಬಗ್ಗೆ ತಿಳಿಸಿದರು.

**ದಿನಾಂಕ ೦೭-೧೦-೨೦೧೫, ಸಣಕಲ್ ಬಿದರಿ**

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಣಕಲ್ ಬಿದರಿಯಲ್ಲಿ ದಿನಾಂಕ : ೧.೧೦.೨೦೧೫ರಂದು ಬೆಳಿಗ್ಗೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ. ರಮೇಶ್.ಎಲ್. ರಾಠೋಡ, ಪ್ರಾಚಾರ್ಯರು, ಶ್ರೀ ಆ.ಶಿ.ಬ.ಸ. ಪ್ರಥಮ ದರ್ಜೆ ಕಾಲೇಜು, ಸಣಕಲ್ ಬಿದರಿ ಇವರು ವಹಿಸಿದ್ದರು. ಕನ್ನಡ ಉಪನ್ಯಾಸಕರಾದ ಶ್ರೀ ಕಾಂತೇಶರೆಡ್ಡಿ ಅವರು ಸ್ವಾಗತ ಕೋರಿದರು. ಡಾ. ಪಿ.ಕೆ. ರಾಠೋಡ, ಸಹಾಯಕ ಪ್ರಾಧ್ಯಾಪಕರು, ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ ಇವರು ಐತಿಹಾಸಿಕ ಪರಂಪರೆ ಮಹತ್ವ ಅಧ್ಯಯನ ಕುರಿತು ಮಾತನಾಡಿದರು. ಮುಖ್ಯ ಅತಿಥಿಗಳಾಗಿ ಡಾ. ಆನಂದ ಬೈರಾಪುರ, ಸಹಾಯಕ ಪ್ರಾಧ್ಯಾಪಕರು ಇವರು ಆಗಮಿಸಿದ್ದು, ಪರಂಪರೆ ಕುರಿತು ಮಾತನಾಡಿದರು.

**ದಿನಾಂಕ ೦೮-೧೦-೨೦೧೫, ಹಾನಗಲ್**

ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಾನಗಲ್‌ನಲ್ಲಿ ದಿನಾಂಕ : ೦೮-೧೦-೨೦೧೫ರಂದು ಪ್ರೊ. ಮಹಮದ್ ಶರೀಫ್, ಪ್ರಾಚಾರ್ಯರು, ಹಾನಗಲ್, ಇವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಡಾ. ಕೊಟ್ರೇಶ್ ಚಿರಬಿ, ಕನ್ನಡ ಪ್ರಾಧ್ಯಾಪಕರು ಇವರು ಕಾರ್ಯಕ್ರಮಕ್ಕೆ ಸ್ವಾಗತ ಕೋರಿದರು. ಡಾ. ಕೆ. ರವೀಂದ್ರನಾಥ್, ಸಂಚಾಲಕರು, ಐತಿಹಾಸಿಕ ಪರಂಪರೆ ಉಳಿಸ ಸಪ್ತಾಹ ಇವರು ವಿದ್ಯಾರ್ಥಿಗಳನ್ನು ಕುರಿತು ಸ್ಮಾರಕ, ನಾಣ್ಯ, ಹಸ್ತಪ್ರತಿ, ವೀರಪರಂಪರೆ, ಶಾಸನಗಳನ್ನು ಕುರಿತು ವಿದ್ಯಾರ್ಥಿಗಳಿಗೆ ತಿಳಿಸಿ ಅವುಗಳ ಅಧ್ಯಯನ, ಸಂರಕ್ಷಣೆ ಬಗ್ಗೆ ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಪ್ರೊ. ಹೆಚ್.ಜಿ. ಸಣ್ಣಗೌಡರ್ ಮುಖ್ಯಸ್ಥರು, ಇತಿಹಾಸ ವಿಭಾಗ, ಇವರು ಆಗಮಿಸಿದ್ದು, ಐತಿಹಾಸಿಕ ಪರಂಪರೆ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವ ಬಗ್ಗೆ ಮನದಟ್ಟು ಮಾಡಿದರು.

**ದಿನಾಂಕ ೦೮-೧೦-೨೦೧೫, ಹಾವೇರಿ**

ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರ ಹಾವೇರಿಯಲ್ಲಿ ದಿನಾಂಕ : ೦೮-೧೦-೨೦೧೫ರಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಡಾ. ಡಿ. ಪಾಂಡುರಂಗಬಾಬು, ಮಾನ್ಯ ಕುಲಸಚಿವರು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಅಧ್ಯಕ್ಷತೆ ವಹಿಸಿದ್ದರು. ಡಾ. ಅನಸೂಯ ಕಾಂಬಳೆ, ಸಹಾಯಕ ಪ್ರಾಧ್ಯಾಪಕರು, ಕ.ವಿ.ವಿ. ಸ್ನಾತಕೋತ್ತರ ಕೇಂದ್ರ, ಹಾವೇರಿ, ಇವರು ಸ್ವಾಗತ ಕೋರಿದರು. ಡಾ. ಎಸ್.ಎಸ್. ಅಂಗಡಿ, ಪ್ರಾಧ್ಯಾಪಕರು, ಹಸ್ತಪ್ರತಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಸ್ಮಾರಕಗಳು, ಹಸ್ತಪ್ರತಿಯ ಮಹತ್ವ, ಸಂರಕ್ಷಣೆ ಹಾಗೂ ಶಾಸನ, ನಾಣ್ಯ ಇತ್ಯಾದಿಗಳ ಅಧ್ಯಯನ, ಸಂರಕ್ಷಣೆ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿದರು. ಮುಖ್ಯ ಅತಿಥಿಗಳಾಗಿ ಡಾ. ನಾಗರಾಜಹಳ್ಳಿ, ಮಾನ್ಯ ಆಡಳಿತಾಧಿಕಾರಿಗಳು ಕ.ವಿ.ವಿ. ಸ್ನಾತಕೋತ್ತರ ಕೇಂದ್ರ, ಹಾವೇರಿ ಇವರು ಆಗಮಿಸಿದ್ದರು. ಇದರೊಂದಿಗೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹಸ್ತಪ್ರತಿ ವಿಭಾಗದ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ಸಮಾರೋಪ ಸಮಾರಂಭವು ಮುಕ್ತಾಯವಾಯಿತು.

**ದಿನಾಂಕ ೦೭-೧೦-೨೦೧೫, ಬೆಂಗಳೂರು**

ಸರ್ಕಾರಿ ಪ್ರಾಥಮಿಕ ಶಾಲೆ ಎಲೇನಹಳ್ಳಿ ಬೇಗೂರು ಅಂಚೆ, ಬೆಂಗಳೂರು ದಕ್ಷಿಣ ಇಲ್ಲಿ ದಿನಾಂಕ : ೦೭-೧೦-೨೦೧೫ರಂದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಶ್ರೀ ಆದಪ್ಪ ಪಾಸೋಡಿ ಅವರು ಉಪನ್ಯಾಸ ನೀಡಿ ಶಿಲಾಗೋರಿ, ಶಿಲಾಶಾಸನ, ದೇವಸ್ಥಾನ ವೀರಗಲ್ಲು, ಮಾಸ್ತಿಕಲ್ಲು, ಕೆರೆ, ಕುಂಟೆ ಪ್ರಾಚ್ಯ ಅವಶೇಷಗಳ ಬಗ್ಗೆ ತಿಳಿಸಿದ್ದಲ್ಲದೆ,

ಅವುಗಳ ಸಂರಕ್ಷಣೆಯಲ್ಲಿ ವಿದ್ಯಾರ್ಥಿಗಳಿಗೆ ತಿಳಿಸಿದರು. ಮುಖ್ಯ ಶಿಕ್ಷಕಿ, ಡಿ.ವಿ. ರಾಜೇಶ್ವರಿ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಸಹ ಶಿಕ್ಷಕಿ, ಸುಮತಿ, ಆರ್.ಪಿ. ರಾಜಣ್ಣ ಹಾಗೂ ಎಸ್.ಡಿ.ಎಂ.ಸಿ.ಯ ಸದಸ್ಯರಾದ ದೇವಕಿ, ದೇವಪ್ಪ ಭಾಗವಹಿಸಿದ್ದರು.

**ದಿನಾಂಕ : ೨೨-೦೯-೨೦೧೬ ದಾವಣಗೆರೆ**

ದಾವಣಗೆರೆಯ ಶ್ರೀ ಜೀರಲಿಂಗೇಶ್ವರ ಪದವಿಪೂರ್ವ ಕಾಲೇಜು ದಿನಾಂಕ ೨೨.೯.೨೦೧೬ರಂದು ಪ್ರಾಂಶುಪಾಲರಾದ ಪ್ರೊ. ಬಾಗೂರು ಆನಂದಪ್ಪ ಅವರ ಅಧ್ಯಕ್ಷತೆಯಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ನಡೆಸಿತು. ಕಾರ್ಯಕ್ರಮಕ್ಕೆ ಆಗಮಿಸಿದ್ದ ಖ್ಯಾತ ಸಂಶೋಧಕರಾದ ಶ್ರೀ ಬುರುಡೆಕಟ್ಟೆ ಮಂಜಪ್ಪ ಅವರು ಮಾತನಾಡಿ ಪರಂಪರೆಕಟ್ಟುವಲ್ಲಿ ಐತಿಹಾಸಿಕ ಸ್ಮಾರಕಗಳ ಮಹತ್ವ ಸಂರಕ್ಷಣೆ ನಾಣ್ಯ, ಹಸ್ತಪ್ರತಿಗಳ ಮಹತ್ವ ಕುರಿತು ವಿದ್ಯಾರ್ಥಿಗಳಿಗೆ ಮನದಟ್ಟುಮಾಡಿದರು. ಶ್ರೀ ರಾಘವೇಂದ್ರ ಆಚಾರ್ ಅವರು ತಮ್ಮ ವೃತ್ತಿ ಹಾಗೂ ಸಂಶೋಧನೆಗೆ ತೊಡಗಿಸಿಕೊಂಡ ರೀತಿ ತಿಳಿಸಿದ್ದಲ್ಲದೆ, ಪುರಾತತ್ವ ಅವಶೇಷಗಳ ರಕ್ಷಣೆ, ಅಧ್ಯಯನದ ಬಗ್ಗೆ ವಿದ್ಯಾರ್ಥಿಗಳಿಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಜಿ.ಟಿ. ಹನುಮಂತಪ್ಪ ಅಧ್ಯಕ್ಷರು ಜೀರಲಿಂಗೇಶ್ವರ ಪ.ಪೂ. ಕಾಲೇಜು ಮತ್ತು ಎಂ.ಜಿ. ದ್ಯಾಮಪ್ಪ, ಪ್ರಧಾನಕಾರ್ಯದರ್ಶಿಗಳು ಜೀರಲಿಂಗೇಶ್ವರ ಪ.ಪೂ. ಕಾಲೇಜು ಅವರು ಉಪಸ್ಥಿತರಿದ್ದ, ವಿದ್ಯಾರ್ಥಿಗಳಿಗೆ ಐತಿಹಾಸಿಕ ಸ್ಮಾರಕಗಳ ಬಗ್ಗೆ ಮನವರಿಕೆ ಮಾಡಿದರು.

**ದಿನಾಂಕ : ೨೪-೦೮-೨೦೧೬ರಿಂದ ೨೯-೦೮-೨೦೧೬ರವರೆಗೆ ರಾಮನಗರ ಜಿಲ್ಲೆ**

ಕನಕಪುರ ರೂರಲ್ ಪದವಿ ಕಾಲೇಜಿನ ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ, ರಾಮನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಕನಾಟಕ ಸಂಘ, ಕನಕಪುರ, ಸಹೃದಯ ಪ್ರತಿಷ್ಠಾನ ಮಾಗಡಿ, ಇವರ ಸಹಯೋಗದೊಂದಿಗೆ ದಿನಾಂಕ: ೨೪-೮-೨೦೧೬ ಬುಧವಾರದಿಂದ ದಿನಾಂಕ : ೨೯-೮-೨೦೧೬ ಸೋಮವಾರದವರೆಗೆ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವು ರಾಮನಗರ ಜಿಲ್ಲೆಯಲ್ಲಿ ಯಶಸ್ವಿಯಾಗಿ ನಡೆಸಲಾಯಿತು.

ದಿನಾಂಕ : ೨೪-೦೮-೨೦೧೬ ಬುಧವಾರ ರೂರಲ್ ಪದವಿ ಕಾಲೇಜಿನ ಶ್ರೀ ಎಸ್. ಕರಿಯಪ್ಪ ರೂರಲ್ ಸ್ನಾತಕೋತ್ತರ ಕೇಂದ್ರ ಕನಕಪುರದಲ್ಲಿ ಬೆಳಿಗ್ಗೆ ೧೨.೦೦ ಗಂಟೆಗೆ ಶ್ರೀ ಸಿ. ರಮೇಶ್, ಗೌರವ ಕಾರ್ಯದರ್ಶಿ, ಗ್ರಾ.ವಿ.ಪ್ರ. ಸಂಘ, ಕನಕಪುರ ಇವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮವು ಉದ್ಘಾಟನೆಗೊಂಡಿತು. ಡಾ. ಎಂ. ಗೋವಿಂದಪ್ಪ, ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಇವರು ಉಪನ್ಯಾಸ ನೀಡಿ, ಐತಿಹಾಸಿಕ ಪರಂಪರೆ ಮತ್ತು ಸಾಂಸ್ಕೃತಿಕ ಪರಂಪರೆ, ಅವುಗಳ ಅಧ್ಯಯನ ಕುರಿತು ವಿದ್ಯಾರ್ಥಿಗಳಿಗೆ ತಿಳಿಸಿದರು.

ಡಾ. ಮುನಿರಾಜಪ್ಪ, ಪ್ರಾಂಶುಪಾಲರು, ರೂರಲ್ ಕಾಲೇಜು, ಕನಕಪುರ ಇವರು ಶಾಸನಗಳು ಹಸ್ತಪ್ರತಿ, ನಾಣ್ಯ, ಕೋಟೆ ಕೊತ್ತಲ ಇತ್ಯಾದಿಗಳ ಸಾಂಸ್ಕೃತಿಕ ಇತಿಹಾಸ, ಪರಂಪರೆ ಮತ್ತು ಅವುಗಳ ಅಧ್ಯಯನದ ಅವಶ್ಯಕತೆ ಬಗ್ಗೆ ವಿದ್ಯಾರ್ಥಿಗಳಿಗೆ ತಿಳಿಸಿದರು. ಪ್ರೊ. ಎಂ. ವಿಕ್ರಂ, ಉಪಪ್ರಾಂಶುಪಾಲರು, ರೂರಲ್ ಕಾಲೇಜು, ಕನಕಪುರ ಇವರು ಪರಂಪರೆ ಬಗ್ಗೆ ವಿದ್ಯಾರ್ಥಿಗಳಿಗೆ ಮಾಹಿತಿ ನೀಡಿದರು.

ಕಾರ್ಯಕ್ರಮದ ಸಂಯೋಜನೆಯನ್ನು ಶ್ರೀ ಎಲ್ಲೇಗೌಡ ಬೆಸಗರಹಳ್ಳಿ, ಕ.ಇ.ಅ. ಸದಸ್ಯರು ಇವರು ಯೋಜಿಸಿ, ಇವರೊಂದಿಗೆ ಪ್ರೊ. ಜೋಗಯ್ಯ, ಮುಖ್ಯಸ್ಥರು, ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ ರೂರಲ್ ಕಾಲೇಜು, ಕನಕಪುರ, ಇವರು ಕಾರ್ಯಕ್ರಮದ ರೂಪುರೇಷೆಗಳನ್ನು ನಿರ್ವಹಿಸಿದ್ದರು. ಇವರ ನೇತೃತ್ವದಲ್ಲಿ ಕಾರ್ಯಕ್ರಮಗಳು ಯಶಸ್ವಿಯಾಗಿ ೧೮ ಶಾಲಾ-ಕಾಲೇಜುಗಳಲ್ಲಿ ನಡೆದಿದೆ. ಈ ಎಲ್ಲಾ ಕಾರ್ಯಕ್ರಮದ ಸಮಾರೋಪವು ದಿನಾಂಕ : ೨೯-೦೮-೨೦೧೬ ಸೋಮವಾರ, ಸರ್ಕಾರಿ ಪದವಿಪೂರ್ವ ಕಾಲೇಜು, ಸಾತನೂರು ಇಲ್ಲಿ ನಡೆಯಿತು. ಸಮಾರೋಪ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ರಾಮಚಂದ್ರಗೌಡ, ಪ್ರಾಂಶುಪಾಲರು ರೂರಲ್ ಪದವಿಪೂರ್ವ ಕಾಲೇಜು, ಸಾತನೂರು ಇವರು ವಹಿಸಿದ್ದರು. ಪ್ರೊ. ಎಸ್.ಪಿ. ರಮೇಶ್ ಸಹ ಪ್ರಾಧ್ಯಾಪಕರು, ರೂರಲ್ ಪದವಿ ಕಾಲೇಜು, ಕನಕಪುರ, ಇವರು ಐತಿಹಾಸಿಕ ಪರಂಪರೆ ಕಾರ್ಯಕ್ರಮದ ಧ್ಯೇಯೋದ್ದೇಶಗಳ ಬಗ್ಗೆ ವಿವರಿಸಿ ತಿಳಿಸಿದರು. ಶ್ರೀ ಸಿಂ.ಲಿಂ. ನಾಗರಾಜು, ಅಧ್ಯಕ್ಷರು, ರಾಮನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಇವರು ಉಪಸ್ಥಿತರಿದ್ದು ಕಾರ್ಯಕ್ರಮವು ಯಶಸ್ವಿಯಾಯಿತು. ಕಾರ್ಯಕ್ರಮ ವಿವರ ಈ ಕೆಳಕಂಡಂತಿದೆ.

**ಉಪನ್ಯಾಸ ಕಾರ್ಯಕ್ರಮ – ಕನಕಪುರ ತಾಲ್ಲೂಕು**

| ದಿನಾಂಕ | ಸ್ಥಳ | ಅಧ್ಯಕ್ಷತೆ | ಅತಿಥಿ ಉಪನ್ಯಾಸಕರು |
|---|---|---|---|
| ೨೪-೮-೨೦೧೬ರ ಬುಧವಾರ | ಶ್ರೀ ಗ್ರಾಮಾಂತರ ಬಾಲಕಿಯರ ಪ್ರೌಢಶಾಲೆ, ಕನಕಪುರ | ಶ್ರೀ ಬಿ.ಟಿ. ಕೃಷ್ಣೇಗೌಡ ಪ್ರಾಂಶುಪಾಲರು | ಪ್ರೊ. ಎಸ್.ಪಿ. ರಮೇಶ್ ಸಹ ಪ್ರಾಧ್ಯಾಪಕರು |
| ೨೪-೮-೨೦೧೬ರ ಬುಧವಾರ | ಗ್ರಾಮಾಂತರ ಬಾಲಕರ ಪ್ರೌಢಶಾಲೆ, ಕನಕಪುರ | ಶ್ರೀ ಮುನಿರಾಜು ಮುಖ್ಯೋಪಾಧ್ಯಾಯರು | ಶ್ರೀ ಎಂ.ಜೆ. ವಿಜೇಂದ್ರ ಸಹಾಯಕ ಪ್ರಾಧ್ಯಾಪಕರು |
| ೨೫-೮-೨೦೧೬ರ ಗುರುವಾರ | ಶ್ರೀ ನಿರ್ವಾಣಸ್ವಾಮಿ ವಸತಿ ಪ್ರೌಢಶಾಲೆ, ದೇಗುಲಮಠ ಕನಕಪುರ | ಶ್ರೀ ಎನ್.ಎಂ. ಬಸವರಾಜು ಮುಖ್ಯೋಪಾಧ್ಯಾಯರು | ಡಾ. ಹೆಚ್.ಜಿ. ಪಾರ್ಥಸಾರಥಿ ಸಹಾಯಕ ಪ್ರಾಧ್ಯಾಪಕರು |

| | | | |
|---|---|---|---|
| ೨೬-೮-೨೦೧೬ರ<br>ಶುಕ್ರವಾರ | ಸರ್ಕಾರಿ ಪ್ರೌಢಶಾಲೆ<br>ಹೊನ್ನಗನಹಳ್ಳಿ | ಶ್ರೀ ಲಕ್ಕಪ್ಪ<br>ಮುಖ್ಯೋಪಾಧ್ಯಾಯರು | ಪ್ರೊ. ಡಿ. ಕೃಷ್ಣಯ್ಯ<br>ಸಹಾಯಕ ಪ್ರಾಧ್ಯಾಪಕರು |
| ೨೭-೮-೨೦೧೬ರ<br>ಶನಿವಾರ | ಸರ್ಕಾರಿ ಪ್ರಥಮ ದರ್ಜೆ<br>ಕಾಲೇಜು, ಕನಕಪುರ | ಡಾ. ವೇಣುಗೋಪಾಲ್<br>ಪ್ರಾಂಶುಪಾಲರು | ಡಾ. ಎಂ. ಗೋವಿಂದಪ್ಪ<br>ಸಹ ಪ್ರಾಧ್ಯಾಪಕರು |

**ಉಪನ್ಯಾಸ ಕಾರ್ಯಕ್ರಮ – ರಾಮನಗರ ತಾಲ್ಲೂಕು**

| | | | |
|---|---|---|---|
| ೨೪-೮-೨೦೧೬ರ<br>ಬುಧವಾರ | ಸ.ಪ.ಪೂ. ಕಾಲೇಜು<br>ರಾಮನಗರ | ಶ್ರೀಮತಿ ಭಾರತಿ<br>ಪ್ರಾಂಶುಪಾಲರು | ಡಾ. ಕನ್ಯಾಕುಮಾರ್<br>ಉಪನ್ಯಾಸಕರು |
| ೨೪-೮-೨೦೧೬ರ<br>ಬುಧವಾರ | ಸ.ಪ.ಪೂ. ಕಾಲೇಜು<br>ಸುಗ್ಗನಹಳ್ಳಿ | ಶ್ರೀ ಎಂ. ಪ್ರದೀಪ್<br>ಪ್ರಾಂಶುಪಾಲರು | ಶ್ರೀಮತಿ ವಿಜಯಕುಮಾರಿ<br>ಉಪನ್ಯಾಸಕರು |
| ೨೪-೮-೨೦೧೬ರ<br>ಬುಧವಾರ | ಸ.ಪ.ಪೂ. ಕಾಲೇಜು<br>ಜಾಲಮಂಗಲ | ಶ್ರೀಮತಿ ವರಲಕ್ಷ್ಮಿ<br>ಪ್ರಾಂಶುಪಾಲರು | ಶ್ರೀಮತಿ ಮಮತ<br>ಉಪನ್ಯಾಸಕರು |
| ೨೫-೮-೨೦೧೬ರ<br>ಗುರುವಾರ | ಸ.ಪ.ಪೂ. ಕಾಲೇಜು<br>ಅವ್ವೇರಹಳ್ಳಿ | ಶ್ರೀಮತಿ ಸವಿತ<br>ಪ್ರಾಂಶುಪಾಲರು | ಶ್ರೀ ಕೆಂಡಶೆಟ್ಟಿ<br>ಉಪನ್ಯಾಸಕರು |
| ೨೫-೮-೨೦೧೬ರ<br>ಗುರುವಾರ | ಸ.ಪ.ಪೂ. ಕಾಲೇಜು<br>ಕೂನಗಲ್ | ಶ್ರೀಮತಿ ಗೀತಾ<br>ಪ್ರಾಂಶುಪಾಲರು | ಶ್ರೀ ನಾಗೇಶ್<br>ಉಪನ್ಯಾಸಕರು |
| ೨೬-೮-೨೦೧೬ರ<br>ಶುಕ್ರವಾರ | ಶ್ರೀ ಬಸವೇಶ್ವರ ಪ.ಪೂ.<br>ಕಾಲೇಜು, ಬಿಡದಿ | ಶ್ರೀ ಜಿ.ಹೆಚ್. ರಾಮಯ್ಯ<br>ಪ್ರಾಂಶುಪಾಲರು | ಶ್ರೀ ನಂಜುಂಡಯ್ಯ<br>ಉಪನ್ಯಾಸಕರು |

**ಉಪನ್ಯಾಸ ಕಾರ್ಯಕ್ರಮ – ಚನ್ನಪಟ್ಟಣ ತಾಲ್ಲೂಕು**

| | | | |
|---|---|---|---|
| ೨೫-೮-೨೦೧೬ರ<br>ಗುರುವಾರ | ಆದರ್ಶ ಪ್ರೌಢಶಾಲೆ<br>ಮತ್ತಿಕೆರೆ | ಶ್ರೀಮತಿ ಶಶಿಕಲ<br>ಮುಖ್ಯೋಪಾಧ್ಯಾಯರು | ಶ್ರೀ ನಂ. ಶಿವಲಿಂಗಯ್ಯ<br>ವಿಷಯ ಪರೀಕ್ಷಕರು |
| ೨೫-೮-೨೦೧೬ರ<br>ಗುರುವಾರ | ಸರ್ಕಾರಿ ಪ್ರೌಢಶಾಲೆ<br>ಹೊಂಗನೂರು | ಶ್ರೀ ಹರೀಶ್<br>ಮುಖ್ಯಪಾಧ್ಯಾಯರು | ಭೂಹಳ್ಳಿ ಪುಟ್ಟಸ್ವಾಮಿ<br>ಪರಿಸರ ಪ್ರೇಮಿ, ಸಾಹಿತಿಗಳು |
| ೨೬-೮-೨೦೧೬ರ<br>ಶುಕ್ರವಾರ | ಶ್ರೀ ಕುವೆಂಪು ಪ್ರ.ದ. ಕಾಲೇಜು<br>ಚನ್ನಪಟ್ಟಣ | ಪ್ರೊ. ಶಿವಲಿಂಗಪ್ಪ<br>ಪ್ರಾಂಶುಪಾಲರು, ಕು.ಪ್ರ.ದ.<br>ಕಾಲೇಜು | ಡಾ. ವೆಂಕಟೇಶ್<br>ಪ್ರಾಂಶುಪಾಲರು, ಸ.ಪ್ರದ. ಕಾಲೇಜು<br>ಸಾತನೂರು |

**ಉಪನ್ಯಾಸ ಕಾರ್ಯಕ್ರಮ – ಮಾಗಡಿ ತಾಲ್ಲೂಕು**

| | | | |
|---|---|---|---|
| ೨೫-೮-೨೦೧೬ರ<br>ಗುರುವಾರ | ಹೆಚ್.ಜಿ. ಚನ್ನಪ್ಪ ಪ.ಪೂ.<br>ಕಾಲೇಜು, ಹುಲಿಕಟ್ಟೆ | ಶ್ರೀ ಎಂ.ಸಿ. ಗೋವಿಂದರಾಜು<br>ಪ್ರಾಂಶುಪಾಲರು | ಪ್ರೊ. ತಿಮ್ಮಹನುಮಯ್ಯ<br>ಸಹಪ್ರಾಧ್ಯಾಪಕರು, ಸ.ಪ್ರ.ದ.<br>ಕಾಲೇಜು, ಮಾಗಡಿ |
| ೨೫-೮-೨೦೧೬ರ<br>ಗುರುವಾರ | ಸ.ಪ.ಪೂ. ಕಾಲೇಜು<br>ಮಾಗಡಿ | ಶ್ರೀ ರಾಜಶೇಖರ್<br>ಪ್ರಾಂಶುಪಾಲರು | ಡಾ: ಹೆಚ್. ಕೃಷ್ಣೇಗೌಡ<br>ಪ್ರಾಂಶುಪಾಲರು, ಸ.ಪ್ರ.ದ.<br>ಮಹಿಳಾ ಕಾಲೇಜು, ಮದ್ದೂರು |
| ೨೫-೮-೨೦೧೬ರ<br>ಗುರುವಾರ | ಶ್ರೀ ವಾಸವಿ ಪ್ರೌಢಶಾಲೆ<br>ಮಾಗಡಿ | ಶ್ರೀ ಎಸ್.ಜಿ. ರಮೇಶ ಗುಪ್ತ<br>ಅಧ್ಯಕ್ಷರು, ವಾಸವಿ ವಿದ್ಯಾ ಸಂಸ್ಥೆ | ಡಾ. ಚಿಕ್ಕಚನ್ನಯ್ಯ<br>ಸಹ ಪ್ರಾಧ್ಯಾಪಕರು, ಸ.ಪ್ರ.ದ.<br>ಕಾಲೇಜು, ರಾಜಾಜಿನಗರ,<br>ಬೆಂಗಳೂರು |

**ದಿನಾಂಕ : ೩೦.೮.೨೦೧೬ ತಿ.ನರಸೀಪುರ :**

ತಿ.ನರಸೀಪುರದ ಬಿನಕನಹಳ್ಳಿ ಗುರು ಮಲ್ಲೇಶ್ವರ ಪ್ರೌಢಶಾಲೆಯಲ್ಲಿ ಡಾ. ಎಚ್.ಎಸ್. ಉಷಾರಾಣಿ ಅವರು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಆಯೋಜಿಸಿದ್ದರು. ಅಧ್ಯಕ್ಷತೆವಹಿಸಿದ್ದ ಮುಖ್ಯಸ್ಥರಾದ ಶ್ರೀ.ಕೆ. ರಾಮು ಅವರು ವಿದ್ಯಾರ್ಥಿಗಳಿಗೆ, ಪ್ರಾಚ್ಯ ವಸ್ತುಗಳ ಬಗ್ಗೆ, ಅವುಗಳ ಅಧ್ಯಯನ ಮುಂತಾದವುಗಳ ಬಗ್ಗೆ ತಿಳಿಸಿ, ಅರಿವು ಮೂಡಿಸುವ ಬಗ್ಗೆ ಶ್ರಮಿಸುತ್ತಿರುವುದಾಗಿ ತಿಳಿಸಿದರು. ಹತ್ತನೇ ತರಗತಿ ವಿದ್ಯಾರ್ಥಿ ಪ್ರಜ್ವಲ್ ನಮ್ಮ ಸಂಸ್ಕೃತಿ, ಸ್ಮಾರಕಗಳು, ಪ್ರಾಚ್ಯವಶೇಗಳ ರಕ್ಷಣೆ. ಮುಂತಾದವುಗಳ ಬಗ್ಗೆ ಮಾತನಾಡಿ ಅವುಗಳ ರಕ್ಷಣೆ ಬಗ್ಗೆ ತೊಡಗಿಸಿಕೊಳ್ಳುವಂತೆ ಉತ್ತೇಜಿಸಿದನು. ಡಾ. ಉಷಾರಾಣಿಯವರು ವಿದ್ಯಾರ್ಥಿಗಳಿಗೆ, ಪರಂಪರೆ ಅವುಗಳ ಮಹತ್ವ ಅವುಗಳ ರಕ್ಷಣೆ, ಅಧ್ಯಯನದ ವಿಷಯವನ್ನು ಮನಮುಟ್ಟುವಂತೆ ತಿಳಿಸಿದರು. ವಿದ್ಯಾರ್ಥಿ ಪ್ರಜ್ವಲ್‌ಗೆ ಗಣ್ಯರು ಪ್ರಶಸ್ತಿಯನ್ನು ನೀಡಿದರು.

**ದಿನಾಂಕ ೮, ಸೆಪ್ಟೆಂಬರ್ ೨೦೧೬ ರಿವೈವಲ್ ಹೆರಿಟೇಜ್‌ಹಬ್, ಬೆಂಗಳೂರು**

ದಿ ಆಕ್ಸ್‌ಫರ್ಡ್ ಕಾಲೇಜಿನಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ ಭಿತ್ತಿ ಚಿತ್ರ'ದ ಬಿಡುಗಡೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ದಿ ಆಕ್ಸ್‌ಫರ್ಡ್ ಕಾಲೇಜಿನ ಪ್ರಾಂಶುಪಾಲರಾದ ಮಂಜುನಾಥ ಜಿ ಅವರು ಇತಿಹಾಸದ ಕುರಿತು ಮನದಾಳದ ಮಾತನ್ನು ನುಡಿದರು. ಇತಿಹಾಸವನ್ನು ವಿಜ್ಞಾನ ಕ್ಷೇತ್ರಕ್ಕೆ ಹೋಲಿಸಿ ವಿಜ್ಞಾನವನ್ನು ಯಾವ ರೀತಿ ಸಂಶೋದಿಸಿ ಮುಂದಿನ ಪೀಳಿಗೆಗೆ ಅದನ್ನು ಅನ್ವಯಿಸುವಂತೆ ತನಿಖೆ ಮಾಡುತ್ತಾರೆ. ಆದರೆ ಇತಿಹಾಸವು ಗತ ಕಾಲದ ಘಟನೆಗಳು ಅಂದರೆ ನಮ್ಮ ನಾಡಿನ ಹಾಗೂ ದೇಶದ ಸಂಸ್ಕೃತಿ ಪರಂಪರೆ ನಾಗರಿಕತೆಗಳ ಉದಯ ರಾಜ ಮನೆತನಗಳ ಆಗು–ಹೋಗು ಮತ್ತು ಜನಾಂಗದ ಬೆಳವಣಿಗೆಯ ಪ್ರಾಮುಖ್ಯತೆಯನ್ನು ಈ ಇತಿಹಾಸ ಕ್ಷೇತ್ರವು ತನಿಕೆಯ ಮೂಲಕ ಅಧ್ಯಯನ ಮಾಡುತ್ತದೆ. ವಿಜ್ಞಾನವನ್ನು ಯಾವ ರೀತಿ ಆಸಕ್ತಿಯಿಂದ ಸಂಶೋಧಿಸಿ ಕಾರ್ಯತಂತ್ರವನ್ನು ನಿರೂಪಿಸುತ್ತಾರೋ ಅದೇ ರೀತಿ ಇತಿಹಾಸವನ್ನು ಅಧ್ಯಯನ ಮಾಡಬೇಕು ಎಂದು ತಿಳಿಸಿಕೊಟ್ಟರು.

ಡಾ. ರಾಜೀವ್ ನೃಪತುಂಗ, ಇವರು ದಿ ಆಕ್ಸ್‌ಫಡ್ ಕಾಲೇಜಿನಲ್ಲಿ ಇತಿಹಾಸ ಶಿಕ್ಷಕರಾಗಿದು ಇವರು ಇತಿಹಾಸದ ಹಿನ್ನೆಲೆಯನ್ನು ಹಾಗೂ ಇತಿಹಾಸದ ಪ್ರಾಮುಖ್ಯತೆಯನ್ನು ತಿಳಿಸಿಕೊಟ್ಟರು. ಕರ್ನಾಟಕ ಐತಿಹಾಸಿಕ ಪರಂಪರೆಯ ಪ್ರಾಚಿನ ಆಧಾರಗಳಾದ ವೀರ ಗಲ್ಲುಗಳು, ಶಿಲಾ ಶಾಸನಗಳು, ಸ್ಮಾರಕಗಳು, ಉತ್ಖನನಗಳು ಇನ್ನು ಮುಂತಾದ ಆಧಾರಗಳನ್ನು ಬೆಳಕಿಗೆ ತಂದು ಆ ಆಧಾರಗಳ ಸಂಕ್ಷಿಪ್ತ ವಿವರಣೆಯನ್ನು ಸಂಗ್ರಹಿಸಿ ಅದರ ಸಂರಕ್ಷಣೆಯನ್ನು ಈ ಸಂಸ್ಥೆಯು ಮಾಡುತ್ತದೆ ಎಂದು ಭಿತ್ತಿ ಚಿತ್ರ ಕಾರ್ಯಕ್ರಮದಲ್ಲಿ ತಿಳಿಸಿಕೊಟ್ಟರು.

ರಿವೈವಲ್ ಹೆರಿಟೇಜ್ ಹಬ್ ಸಂಸ್ಥೆಯ ಪ್ರಶಾಂತ್ ಜಿ. ವೇಪುರಿ ರವರು ದಿ ಆಕ್ಸ್‌ಫರ್ಡ್ ಕಾಲೇಜಿನ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹದ ಮಾತನ್ನು ನುಡಿದರು. ಪ್ರಾಚೀನ ಐತಿಹಾಸಿಕ ಪರಂಪರೆ ಹಾಗೂ ರಿವೈವಲ್ ಹೆರಿಟೇಜ್ ಹಬ್ ಮತ್ತು ಇನ್ನಿತರ ಸಂಸ್ಥೆಗಳಂತೆ ನಿಮ್ಮ ವಿಭಾಗದಿಂದಲೂ ಒಂದು ಇತಿಹಾಸ ಸಂಸ್ಥೆ ಒಂದನ್ನು ಪ್ರಾರಂಭಿಸಬೇಕು ಎಂದು ತಿಳಿಸಿಕೊಟ್ಟರು.

**ಇಪ್ಪತ್ತೊಂಬತ್ತನೆಯ ವಾರ್ಷಿಕ ಸಮ್ಮೇಳನ**

ಕರ್ನಾಟಕ ಇತಿಹಾಸ ಅಕಾದೆಮಿಯು ಕರ್ನಾಟಕ ಸಂಘ (ರಿ) ಮಂಡ್ಯ ಹಾಗೂ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಮೈಸೂರು ಇವರ ಸಹಯೋಗದೊಂದಿಗೆ ೨೦೧೫ ಅಕ್ಟೋಬರ್ ೨೯ ರಿಂದ ೩೧ ರವರೆಗೆ ಮೂರು ದಿನಗಳ ಕಾಲ ಹಮ್ಮಿಕೊಂಡಿದ್ದ ೨೯ನೇ ವಾರ್ಷಿಕ ಸಮ್ಮೇಳನಕ್ಕೆ ಕರ್ನಾಟಕ ಸಂಘ ಮಂಡ್ಯ ಜಿಲ್ಲೆ ಆಶ್ರಯ ನೀಡಿತ್ತು.

ಉದ್ಘಾಟನಾ ಸಮಾರಂಭ ದಿನಾಂಕ: ೨೯–೧೦–೨೦೧೫ನೇ ಗುರುವಾರ ಬೆಳಿಗ್ಗೆ ೧೦ ಗಂಟೆಗೆ ಮಂಡ್ಯದ ಹಿಂದಿ ಭವನ ಪ್ರೇಮಚಂದ್ ಸಭಾಂಗಣದಲ್ಲಿ ಉದ್ಘಾಟನಾ ಸಮಾರಂಭ ಏರ್ಪಟ್ಟಿತ್ತು. ಶ್ರೀಮತಿ ಡಾ. ಸುಶ್ರಾವ್ಯ, ನಳಿನಿ ವೆಂಕಟೇಶ್ ಅವರ ಪ್ರಾರ್ಥನೆ ಹಾಗೂ ಡಾ. ರಾಮಕೃಷ್ಣೇಗೌಡ ಅವರ ನಾಡಗೀತೆಯೊಂದಿಗೆ ಚಾಲನೆ ದೊರಕಿತು. ಕರ್ನಾಟಕ ಸಂಘದ ಅಧ್ಯಕ್ಷರಾದ ಶ್ರೀ ಜಯಪ್ರಕಾಶ್‌ಗೌಡ ಅವರು ಅತಿಥಿಗಳಿಗೆ ಸ್ವಾಗತ ಕೋರಿದರು. ಇತ್ತೀಚೆಗೆ ಇಹಲೋಕವನ್ನಗಲಿದ ನಾಡಿನ ಹಿರಿಯ ಸಂಶೋಧಕರಾದ ಡಾ. ಸೂರ್ಯನಾಥ ಕಾಮತ್, ಡಾ. ಎಂ.ಎಂ. ಕಲ್ಬುರ್ಗಿ ಅವರಿಗೆ ಸಭೆಯು ಮೌನಾಚರಣೆಯ ಮೂಲಕ ಗೌರವ ಸಮರ್ಪಿಸಲಾಯಿತು.

ಡಾ. ಆರ್. ಗೋಪಾಲ್ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರು ಜ್ಯೋತಿ ಬೆಳಗಿಸುವ ಮೂಲಕ ೨೯ನೇ ವಾರ್ಷಿಕ ಸಮ್ಮೇಳನವನ್ನು ಉದ್ಘಾಟಿಸಿದರು. ಶ್ರೀಮತಿ ವಸುಂದರಾ ದೇಸಾಯಿ ಅವರು ಬರೆದ ಪುಸ್ತಕ 'ಉಳಿದ ಹಂಪಿ' ಮತ್ತು ಗುರು ಜೀಷ್ಟಪ್ಪಯ್ಯನವರು ಹಾಗೂ ಶ್ರೀ ಶಿವಪ್ಪ ನೀರಲಗಿ ಅವರ 'ತಾಳಿಯಕೋಟೆ' ಪುಸ್ತಕಗಳನ್ನು ಸಮ್ಮೇಳನದ ಸರ್ವಾಧ್ಯಕ್ಷರಾದ ಡಾ. ಹಂಪ ನಾಗರಾಜಯ್ಯ ಅವರು ಲೋಕಾರ್ಪಣೆ ಮಾಡಿದರು. ಡಾ. ಆರ್. ಗೋಪಾಲ್, ಆಯುಕ್ತರು ಪ್ರಾಚ್ಯವಸ್ತು ಇಲಾಖೆ ಇವರು ಐತಿಹಾಸಿಕ ಸ್ಮಾರಕಗಳ ರಕ್ಷಣೆ ಹಾಗೂ ಅಧ್ಯಯನ. ಹಸ್ತಪ್ರತಿ ಸಂರಕ್ಷಣೆ ಕುರಿತು ದೀರ್ಘ ಮಾತನಾಡಿದರು. ಅದಲ್ಲದೆ ಅಕಾದೆಮಿಯನ್ನು ಮೊದಲಿನಿಂದಲೂ ಗಮನಿಸಿದ್ದಲ್ಲದೆ, ಅಕಾದೆಮಿಯ ಕಾರ್ಯಗಳನ್ನು ಶ್ಲಾಘಿಸಿದರು. ಮತ್ತು ಪುರಾತತ್ವ ಇಲಾಖೆಯ ಸಹಾಯದ ಬಗ್ಗೆಯೂ ತಮ್ಮ ಉದ್ಘಾಟನಾ ಭಾಷಣದಲ್ಲಿ ತಿಳಿಸಿದರು.

ಡಾ. ದೇವರಕೊಂಡಾರೆಡ್ಡಿ ಹಾಗೂ ಪ್ರೊ. ಜಿ.ಕೆ. ದೇವರಾಜಸ್ವಾಮಿಯವರು ಸಂಪಾದಿಸಿದ 'ಇತಿಹಾಸ ದರ್ಶನ' ೩೦ನೇ ವಾರ್ಷಿಕ ಸಂಪುಟವನ್ನು ಶ್ರೀ ಎಂ. ಶ್ರೀನಿವಾಸ್, ಮಾಜಿ ಶಾಸಕರು, ಮಂಡ್ಯ ಅವರು ಬಿಡುಗಡೆ ಮಾಡಿದರು. ಸಂಶೋಧನಾ ಸಂಪುಟವು ನಿರಂತರವಾಗಿ ಬರುತ್ತಿರುವುದನ್ನು ಶ್ಲಾಘಿಸಿದರು. ಇತಿಹಾಸದೊಂದಿಗೆ ಜನಪದದ ತೌಲನಿಕ ಅವಶ್ಯಕತೆಯನ್ನು ತಿಳಿಸಿದರು.

ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯನ್ನು ಶಾಸನ ತಜ್ಞರಾದ ಶ್ರೀಯುತ ಡಾ. ಡಿ.ವಿ. ಪರಮಶಿವಮೂರ್ತಿ, ಪ್ರಾಧ್ಯಾಪಕರು, ತುಮಕೂರು ವಿಶ್ವವಿದ್ಯಾಲಯ ಅವರಿಗೆ, ಡಾ. ಹಂ.ಪ. ನಾಗರಾಜಯ್ಯ, ನಿವೃತ್ತ ಪ್ರಾಧ್ಯಾಪಕರು ಹಾಗೂ ಸಂಶೋಧಕರು ಹಾಗೂ ಡಾ. ಆರ್. ಗೋಪಾಲ್, ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರು ಪ್ರಶಸ್ತಿ ನೀಡಿ ಗೌರವಿಸಿದರು.

ಜೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ನೆನಪಿನಲ್ಲಿ ನೀಡುವ "ಇತಿಹಾಸ ಸಂಸ್ಕೃತಿ ಶ್ರೀ" ನಾಲ್ಕನೇ ಬಾರಿಯ ಪ್ರಶಸ್ತಿಯನ್ನು ಖ್ಯಾತ ಇತಿಹಾಸ, ಸಂಸ್ಕೃತಿ ತಜ್ಞರಾದ ಡಾ. ಎಂ.ಜಿ. ನಾಗರಾಜ್ ಅವರಿಗೆ ಬಿ.ಆರ್.ಆರ್. ಚಾರಿಟಬಲ್ ಟ್ರಸ್ಟ್‌ನ ಕಾರ್ಯದರ್ಶಿಗಳಾದ ಶ್ರೀಯುತ ಅಶೋಕ್‌ಕುಮಾರ್ ಅವರು ಇತರ ಗಣ್ಯರೊಂದಿಗೆ ಪ್ರಧಾನ ಮಾಡಿದರು.

ಸಂಶೋಧಕರನ್ನು ಗುರುತಿಸಿ ಪ್ರಶಸ್ತಿ ನೀಡುವ ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್‌ಗೆ ಕೃತಜ್ಞತೆ ಸಲ್ಲಿಸಿ, ಸಂಶೋಧನೆಯ ಮಹತ್ವ, ಅಕಾದೆಮಿಯ ಚಟುವಟಿಕೆಗಳು ಹಾಗೂ ವಿದ್ಯಾರ್ಥಿಗಳು ಸಂಶೋಧನೆಯಲ್ಲಿ ತೊಡಗಿಸಿಕೊಳ್ಳಬೇಕೆಂದು ಪ್ರಶಸ್ತಿ ಪುರಸ್ಕೃತ ಡಾ. ಎಂ.ಜಿ. ನಾಗರಾಜ್ ತಿಳಿಸಿದರು.

ಮೇಲಣ ಮಠದ ಶ್ರೀ ಎಸ್. ಸಿದ್ದಣ್ಣಯ್ಯ ಮತ್ತು ಶ್ರೀಮತಿ ಗಂಗಮ್ಮ ಸ್ಮಾರಕ ಟ್ರಸ್ಟ್ ನೀಡುವ "ನೊಳಂಬ ಶ್ರೀ" ಪ್ರಶಸ್ತಿಯನ್ನು ಟ್ರಸ್ಟ್‌ನ ಸಂಚಾಲಕರಾದ ಶ್ರೀ ಪರಶಿವಮೂರ್ತಿ, ಅರಸೀಕೆರೆ ಇವರು ಸಮ್ಮೇಳನಾಧ್ಯಕ್ಷರು ಹಾಗೂ ಇತರ ಗಣ್ಯರೊಂದಿಗೆ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರಿಗೆ ನೀಡಲಾಯಿತು. ಪ್ರಶಸ್ತಿ ಪುರಸ್ಕೃತರಾದ, ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ಟ್ರಸ್ಟ್‌ನ ಸಂಚಾಲಕರಾದ ಶ್ರೀ ಪರಶಿವಮೂರ್ತಿ ಅವರಿಗೆ ಕೃತಜ್ಞತೆ ಸಲ್ಲಿಸಿ ಅಕಾದೆಮಿಯ ಚಟುವಟಿಕೆ ಹಾಗೂ ಅದರೊಂದಿಗಿನ ನಿಕಟ ಸಂಬಂಧದ ಬಗ್ಗೆ ಮಾತನಾಡಿದರು. ವೇದಿಕೆಯನ್ನು ಅಲಂಕರಿಸಿದ್ದ ನಿಕಟಪೂರ್ವ ಸಮ್ಮೇಳನಾಧ್ಯಕ್ಷರಾದ ಡಾ. ಕೆ.ಜಿ. ವಸಂತಮಾಧವ ಅವರನ್ನು, ಡಾ. ದೇವರಕೊಂಡಾರೆಡ್ಡಿ ಅಧ್ಯಕ್ಷರು ಕ.ಇ.ಅ. ಅವರು ಗೌರವಿಸಿ ಸನ್ಮಾನಿಸಿದರು.

ಅಕಾದೆಮಿಯ ೨೯ನೇ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷ ಪದವಿಗೆ ಗೌರವ ಪಾತ್ರರಾದ ನಾಡೋಜ ಡಾ. ಹಂ.ಪ. ನಾಗರಾಜಯ್ಯ ಅವರ ಕಿರು ಪರಿಚಯವನ್ನು ಸಭೆಗೆ ಮಾಡಿಕೊಡಲಾಯಿತು.

೨೯ನೇ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷ ಪದವಿ ಗೌರವಕ್ಕೆ ಪಾತ್ರರಾಗಿದ್ದ ಪುರಾತತ್ವವಿದರೂ, ಸಾಹಿತಿಗಳು ಮತ್ತು ಸಂಶೋಧಕರೂ ಆದ ಡಾ. ಹಂ.ಪ. ನಾಗರಾಜಯ್ಯ ಅವರು ಸನ್ಮಾನವನ್ನು ಸ್ವೀಕರಿಸಿ, ಇತಿಹಾಸ ಮತ್ತು ಸಂಶೋಧನೆಯ ಮಹತ್ವ, ಮಂಡ್ಯ ಜಿಲ್ಲೆ ತಮ್ಮ ಮೇಲೆ ಪ್ರಭಾವ ಬೀರಿರುವ ವಿಷಯ ಹಾಗೂ ಹಿರಿಯ ವಿದ್ವಾಂಸರು ತಮ್ಮ ಮೇಲೆ ಪ್ರಭಾವ ನೀಡಿದ್ದು, ಆ ಮೂಲಕ ಸಾಹಿತ್ಯ, ಇತಿಹಾಸ, ಸಂಶೋಧನೆಯಲ್ಲಿ ಬೆಳೆದ ರೀತಿಯನ್ನು ತಮ್ಮ ಭಾಷಣದಲ್ಲಿ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎನ್. ಅಜಯ್ ನಾಗಭೂಷಣ, ಭಾ.ಆ.ಸೇ. ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ, ಇವರು ಆಗಮಿಸಿದ್ದಲ್ಲದೆ, ಕರ್ನಾಟಕದ ಸ್ಮಾರಕಗಳು, ದೇವಾಲಯಗಳು, ಇತಿಹಾಸದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಳ್ಳಬೇಕೆಂದು ತಮ್ಮ ಭಾಷಣದಲ್ಲಿ ತಿಳಿಸಿ ಕರ್ನಾಟಕದ ನೆಲೆಯನ್ನು ಕೊಂಡಾಡಿದರು. ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಅವರು ವಹಿಸಿದ್ದರು. ಉದ್ಘಾಟನಾ ಸಮಾರಂಭದ ಕಾರ್ಯಕ್ರಮದ ನಿರ್ವಹಣೆಯನ್ನು ಪ್ರೊ. ಜಿ.ಕೆ. ದೇವರಾಜಸ್ವಾಮಿ ಹಾಗೂ ಕರ್ನಾಟಕ ಸಂಘದ ಕು. ನಮಿತಾ ಅವರು ನಿರ್ವಹಿಸಿದರು.

ಅಕಾದೆಮಿಯ ಹಿಂದಿನ ಸಮ್ಮೇಳನ, ೨೦೧೪–೧೫ನೇ ಶೈಕ್ಷಣಿಕ ಸಾಲಿನ ನಂತರ ಸದಸ್ಯರು ಪಿ.ಎಚ್.ಡಿ/ಡಿ.ಲಿಟ್ ಪದವಿ ಪಡೆದು ಗೌರವಕ್ಕೆ ಸನ್ಮಾನಕ್ಕೆ ಪಾತ್ರರಾದ ಸದಸ್ಯರಿಗೆ ಶ್ರೀ ಎಂ.ಎನ್. ಅಜಯ್ ನಾಗಭೂಷಣ, ಭಾ.ಆ.ಸೆ. ಜಿಲ್ಲಾಧಿಕಾರಿಗಳು ಮಂಡ್ಯ ಅವರು ಸನ್ಮಾನಿಸಿ, ಸಂಶೋಧನೆ ಮತ್ತು ಅಕಾದೆಮಿಯ ಚಟುವಟಿಕೆ ಬಗ್ಗೆ ಶ್ಲಾಘಿಸಿದರು.

ಸತ್ಯವಿಠಲ ಕಾವ್ಯನಾಮದಿಂದ ಪ್ರಸಿದ್ಧರಾದ ಶ್ರೀ ಬಿ.ವಿ. ಸತ್ಯನಾರಾಯಣ ಅವರು ರಚಿಸಿದ ಐತಿಹಾಸಿಕ ಪರಂಪರೆ ಉಳಿಸಿ ಎಂಬ ಲಾವಣಿಯನ್ನು ಮಂಡ್ಯದಲ್ಲಿನ ಶಾಲಾ ಮಕ್ಕಳಿಂದ ಉದ್ಘಾಟನಾ ಸಮಾರಂಭದ ಮೊದಲಿಗೆ ಸುಶ್ರಾವ್ಯವಾಗಿ ಹಾಡಿಸಿದರು.

ಉದ್ಘಾಟನಾ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದವರೆಲ್ಲರಿಗೂ ಡಾ. ಪಿ.ಎನ್. ನರಸಿಂಹಮೂರ್ತಿ ಅವರು ವಂದನಾರ್ಪಣೆ ಅರ್ಪಿಸಿದರು.

**ಪಿ.ಎಚ್‌ಡಿ ಮತ್ತು ಡಿ.ಲಿಟ್ ಪದವಿ ಪಡೆದ ಸನ್ಮಾನಿತರು**

| ಕ್ರ. ಸಂ. | ಪಿಎಚ್.ಡಿ./ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯವರ್ಷ |
|---|---|---|---|---|
| ೧ | ಡಾ. ಸಿ. ಸುರೇಶ್ ಅಂಬೈ | ಡಾ. ಎನ್.ಎಸ್. ರಂಗರಾಜು | ಅರಸೀಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ: ಒಂದು ವಿವರಣಾತ್ಮಕ ಅಧ್ಯಯನ | ಮೈಸೂರು ವಿ.ವಿ. ಮಾರ್ಚ್ ೨೦೧೫ |
| ೨ | ಡಾ. ಮೋಹನ ಎಚ್.ಎಂ. | ಡಾ. ಎನ್. ಸರಸ್ವತಿ | ಹೊಯ್ಸಳ ರಾಜಸಂತತಿಯ ಅವನತಿ–ಒಂದು ಅಧ್ಯಯನ (ಕ್ರಿ.ಶ. ೧೦೦೦–೧೩೩೬) | ಮೈಸೂರು ವಿ.ವಿ. ಆಗಸ್ಟ್ ೨೦೧೫ |
| ೩ | ಡಾ. ಲಿಂಗರಾಜು | ಡಾ. ಎ. ಸೋಮಶೇಖರ್ | ಊಳಿಗಮಾನ್ಯ ವ್ಯವಸ್ಥೆಯ ವಿರೋಧಿ ಕೇಂದ್ರವಾಗಿ ಶ್ರೀರಂಗಪಟ್ಟಣದ ಬೆಳವಣಿಗೆ ಒಂದು ಐತಿಹಾಸಿಕ ಅಧ್ಯಯನ (ಕ್ರಿ.ಶ. ೧೭–೧೮ನೇ ಶತಮಾನ) | ಕರ್ನಾಟಕ ರಾಜ್ಯ ಮುಕ್ತ ವಿ.ವಿ. ಮೈಸೂರು ಆಗಸ್ಟ್, ೨೦೧೫ |
| ೪ | ಡಾ. ವಸುಧಾ | ಡಾ. ಎಂ. ಜಮುನ | Retrieving the Female voice -A study of Karnataka, 12th to 16th century A.D. | ಬೆಂಗಳೂರು ವಿ.ವಿ. ಮೇ ೨೦೧೫ |
| ೫ | ಡಾ. ಆಚಾರಿ ಮಂಜುಳಾ ಮಂಜಪ್ಪ | ಡಾ. ವಾಸುದೇವ ಬಡಿಗೇರ | ಕಾಳಾಮುಖ ಪರಂಪರೆ ಮತ್ತು ಮೂರು ಜಾವಿಪೀಠ–ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿ.ವಿ., ಹಂಪಿ ಮಾರ್ಚ್ ೨೦೧೫ |

| | | | | |
|---|---|---|---|---|
| ೬ | ಡಾ. ಪಾಟೀಲ್ ರಾಜಶ್ರೀ ಬಸನಗೌಡ | ಡಾ. ಎಫ್.ಟಿ. ಹಳ್ಳಿಕೇರಿ | Cultural Study on Beerappa Tradition | ಕನ್ನಡ ವಿ.ವಿ., ಹಂಪಿ ಜನವರಿ ೨೦೧೫ |
| ೭ | ಡಾ. ರಾಘವೇಂದ್ರ ನಾಯ್ಕ ಎಸ್.ಡಿ. | ಡಾ. ವಿರೂಪಾಕ್ಷಿ ಪೂಜಾರಹಳ್ಳಿ | ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ | ಕನ್ನಡ ವಿ.ವಿ., ಹಂಪಿ ಡಿಸೆಂಬರ್ ೨೦೧೪ |
| ೮ | ಡಾ. ಸವಿತ ಬಿ.ಸಿ. | ಡಾ. ಸಿ.ಆರ್. ಗೋವಿಂದರಾಜು | ಪ್ರೊ. ನಂಜುಂಡಸ್ವಾಮಿ ಅವರ ಹೋರಾಟ ಹಾಗೂ ಚಿಂತನೆಗಳ ಚಾರಿತ್ರಿಕ ವಿಶ್ಲೇಷಣೆ | ಕನ್ನಡ ವಿ.ವಿ., ಹಂಪಿ ಫೆಬ್ರವರಿ ೨೦೧೫ |
| ೯ | ಡಾ. ಧನರಾಜ್ ಎಸ್.ಎಂ. | ಡಾ. ಪುಟ್ಟಸ್ವಾಮಿ | ಪಾಂಡವಪುರ ತಾಲ್ಲೂಕಿನ ಸ್ಥಳನಾಮಗಳು | ಮೈಸೂರು ವಿ.ವಿ. ಮೇ ೨೦೧೫ |
| ೧೦ | ಡಾ. ಅರುಣಕುಮಾರಿ ಜಿ. | ಡಾ. ಸುಗೀತಾ ಸುವರ್ಣ | ಶಿವಗಂಗಾ ಕ್ಷೇತ್ರ – ಒಂದು ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೧೦೦೦–೧೯೦೦) | ಮೈಸೂರು ವಿ.ವಿ. ಜನವರಿ ೨೦೧೫ |
| ೧೧ | ಡಾ. ಸಾವಿತ್ರಿ ನೀಂ. ಓಲೇಕಾರ | ಡಾ. ಎಸ್.ಜಿ. ಛಲವಾದಿ | ಜಮಖಂಡಿ ಪ್ರದೇಶದ ಇತಿಹಾಸ ಮತ್ತು ಪುರಾತತ್ವ | ಕರ್ನಾಟಕ ವಿ.ವಿ. ಅಕ್ಟೋಬರ್ ೨೦೧೪ |
| ೧೨ | ಡಾ. ಶಂಕ್ರಪ್ಪ ಮೌನೇಶ್ವರ ಬಡಿಗೇರ | ಡಾ. ಎಸ್.ವೈ. ಸೋಮಶೇಖರ್ | ಗದಗ ಜಿಲ್ಲೆಯ ಕೆರೆ ಬಾವಿಗಳು ಚಾರಿತ್ರಿಕ ಅಧ್ಯಯನ | ಕನ್ನಡ ವಿ.ವಿ., ಹಂಪಿ ಮಾರ್ಚ್ ೨೦೧೫ |
| ೧೩ | ಡಾ. ಹಿರೇಮಠ ಸಿದ್ಧಲಿಂಗಯ್ಯ ವೀರಭದ್ರಯ್ಯ | ಡಾ. ಆಯ್.ಕೆ. ಪತ್ತಾರ | ಕರ್ನಾಟಕ ಕಲಚೂರಿಗಳ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಕರ್ನಾಟಕ ವಿ.ವಿ. ಧಾರವಾಡ, ನವೆಂಬರ್ ೨೦೧೪ |

**೨೯ನೇ ಸಮ್ಮೇಳನದಲ್ಲಿ ನಡೆದ ಗೋಷ್ಠಿಗಳು :** ಮೂರು ದಿನ ನಡೆದ ಸಮ್ಮೇಳನದಲ್ಲಿ ದಿನಾಂಕ : ೨೯ ಅಕ್ಟೋಬರ್ ೨೦೧೫ ಗುರುವಾರ ಮಧ್ಯಾಹ್ನ ೨.೦೦ ಗಂಟೆಯಿಂದ ದಿನಾಂಕ: ೩೧ ಅಕ್ಟೋಬರ್ ೨೦೧೫ ಶನಿವಾರ ೪ ಗಂಟೆವರೆಗೆ. ಕರ್ನಾಟಕ ಸಂಘದ ಆಶ್ರಯದಲ್ಲಿ 'ಹಿಂದಿ ಭವನ' ಪ್ರೇಮಚಂದ್ ಸಭಾಂಗಣದಲ್ಲಿ ಎರಡೂ ಕಡೆಗಳಲ್ಲಿ ನಡೆದ......ಸಮಾನಾಂತರ ಗೋಷ್ಠಿಗಳಲ್ಲಿ ಒಟ್ಟು ೧೯೬ ಪ್ರಬಂಧಗಳು ಮಂಡನೆಯಾದವು.

ಗೋಷ್ಠಿಗಳ ಅಧ್ಯಕ್ಷತೆಯಲ್ಲಿ ಕ್ರಮವಾಗಿ ಶ್ರು ಎಸ್.ಎ. ಕೃಷ್ಣಯ್ಯ, ಪ್ರೊ. ಲಕ್ಷ್ಮಣ ತೆಲಗಾವಿ, ಡಾ. ಕೆ. ರವೀಂದ್ರನಾಥ್, ಎಮ್.ಎನ್. ಪ್ರಭಾಕರ್, ಡಾ. ಸಿ. ಮಹದೇವ, ಶ್ರೀ ಎಂ.ಜಿ. ಪಾಟೀಲ, ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಪಿ.ವಿ. ಕೃಷ್ಣಮೂರ್ತಿ, ಡಾ. ಕೆ.ಆರ್. ಗಣೇಶ್, ಡಾ. ಎಂ.ಜಿ. ಮಂಜುನಾಥ್, ಡಾ. ಸಿ.ಎಸ್. ಮಹದೇವನ್, ಡಾ. ಮುರುಗೇಶಿ, ಶ್ರೀ ಎಸ್. ರಾಜೇಂದ್ರಪ್ಪ, ಡಾ. ಅಮರೇಶ್ ಯತಗಲ್, ಡಾ. ಎಸ್.ಕೆ. ಮೇಲಕಾರ, ಡಾ. ಎಸ್.ಡಿ. ಕುಮಾರಸ್ವಾಮಿ ಅವರುಗಳು ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿ, ಯುವ ಸಂಶೋಧಕರಿಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಸಂಶೋಧನೆಯಲ್ಲಿ ತೊಡಗಿಸಿಕೊಳ್ಳುವಂತೆ, ಹೊಸ ಶೋಧ ಮುಂದುವರಿಸುವಂತೆ ಸೂಚಿಸಿ ಗೋಷ್ಠಿಯನ್ನು ಯಶಸ್ವಿಗೊಳಿಸಿದರು.

ಗೋಷ್ಠಿಗಳನ್ನು ಕ್ರಮವಾಗಿ, ಶ್ರೀಮತಿ ಗಂಗಾಂಬಿಕೆ ಗೋವರ್ಧನ್, ಆದಪ್ಪ ಪಾಸೋಡಿ, ಸತೀಶ್ ಕುಮಾರ್.ಜಿ.ವಿ. ಶ್ರೀಮತಿ ಪದ್ಮಜಾ ದೇಸಾಯಿ, ಡಾ. ಮಂಜುಳಾ ಆಚಾರಿ, ಸಣ್ಣಪಾಲಯ್ಯ, ಜಿ.ಪಿ. ಶ್ರೀಶೈಲ ಮನಗುತ್ತಿ, ಎಸ್. ನಾಗರಾಜಪ್ಪ, ಶಶಿಕಲಾ ಇಂಜನಿ, ಮೇಕನಗದ್ದೆ ಲಕ್ಷ್ಮಣಗೌಡ, ಶ್ರೀಮತಿ ಡಿ. ಸ್ಮಿತಾರೆಡ್ಡಿ, ಪ್ರೊ. ಎಂ.ಎನ್. ಜೆನ್ನೂರ, ರೇವಣಸಿದ್ದಯ್ಯ.ಕೆ., ಮುರಳಿ ಕೆ.ವಿ. ಇವರುಗಳು ಗೋಷ್ಠಿಗಳಲ್ಲಿ ನಿರ್ವಹಣೆಯನ್ನು ಮಾಡಿ ಗೋಷ್ಠಿಗಳನ್ನು ಯಶಸ್ವಿಗೊಳಿಸಿದರು.

**ಸಮಾರೋಪ ಸಮಾರಂಭ**

ದಿನಾಂಕ: ೩೧ ಅಕ್ಟೋಬರ್ ರಂದು ಸಂಜೆ ೪.೩೦ ಗಂಟೆಗೆ ಸಮಾರೋಪ ಸಮಾರಂಭವು ಮಂಡ್ಯದ ಮಾನ್ವಿ ಪ್ರೇಮಚಂದ್ ಸಭಾಂಗಣದಲ್ಲಿ ಏರ್ಪಟ್ಟಿತು. ಶ್ರೀಮತಿ ಡಾ. ನಳಿನಿ ವೆಂಕಟೇಶ್ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು. ಮಂಡ್ಯ ಕರ್ನಾಟಕ ಸಂಘದ ಅಧ್ಯಕ್ಷರಾದ ಪ್ರೊ. ಜಯಪ್ರಕಾಶ್‌ಗೌಡ ಅವರು ಅತಿಥಿಗಳಿಗೆ ಸ್ವಾಗತ ಕೋರಿದರು.

ಅಮರೇಶ್ ಯತಗಲ್ ಅವರು ಸದಸ್ಯರ ಪರವಾಗಿ ಕಾರ್ಯಕ್ರಮದ ಕುರಿತಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಸಮ್ಮೇಳನದಲ್ಲಿಯ ವ್ಯವಸ್ಥೆ ಊಟೋಪಚಾರ ವ್ಯವಸ್ಥೆಯನ್ನು ಶ್ಲಾಘಿಸಿದರು. ಹಾಗೆಯೇ ಮತ್ತೊಬ್ಬ ಸದಸ್ಯರಾದ ಶ್ರೀಮತಿ ಪದ್ಮಜಾ ದೇಸಾಯಿಯವರೂ ಕಾರ್ಯಕ್ರಮದ ವ್ಯವಸ್ಥೆಯನ್ನು ಕೊಂಡಾಡಿದರು. ಡಾ. ಪಿ.ಎನ್. ನರಸಿಂಹಮೂರ್ತಿ, ಡಾ. ಲಿಂಗರಾಜು, ಡಾ. ಶಿವರಾಮ್, ಡಾ. ಪುಟ್ಟಸ್ವಾಮಿ, ಡಾ. ಪ್ರಕಾಶ್ ಮುಂತಾದವರುಗಳ ಶ್ರಮದಿಂದ ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಿತೆಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹಿರಿಯ ಜಾನಪದ ತಜ್ಞ ಡಾ. ರಾಮೇಗೌಡ ಅವರು ಆಗಮಿಸಿದ್ದರು. ಇತಿಹಾಸ, ಅದರ ರೂಪುರೇಶೆ, ಇತಿಹಾಸ ರಚನೆಕಾರರಿಗೆ ಇರಬೇಕಾದ ಬದ್ಧತೆ, ಇತಿಹಾಸ ರಚನೆಗೆ ಕವಿಗಳ ಕೊಡುಗೆ, ಇವುಗಳ ಅಂತರ್‌ಶಿಸ್ತಿನ ಅಧ್ಯಯನ, ಅಧ್ಯಯನದ ಸ್ವರೂಪಗಳು ಬದಲಾಗಬೇಕಾದ ಅವಶ್ಯಕತೆಗಳ ಬಗ್ಗೆ ತಿಳಿಸಿದರು.

ಸಮ್ಮೇಳನದ ಸರ್ವಾಧ್ಯಕ್ಷರಾದ ನಾಡೋಜ ಡಾ. ಹಂಪನಾ ಅವರು ಒಟ್ಟು ಮಂಡಿತವಾದ ಪ್ರಬಂಧಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಇದು ಅಂತರಾಷ್ಟ್ರೀಯ ಸಮ್ಮೇಳನವನ್ನು ನೆನಪಿಸಿತು ಎಂದು ತಿಳಿಸಿದ್ದಲ್ಲದೆ, ಆಧುನಿಕ ತಂತ್ರಜ್ಞಾನವನ್ನು ಹೆಚ್ಚಿನದಾಗಿ ಬಳಸಿಕೊಳ್ಳಬೇಕು, ಕಾರ್ಯಕ್ರಮದ ಅಚ್ಚುಕಟ್ಟುತನ, ಸಂಘಟಕರ ವಿನಯ, ಕಾರ್ಯಕ್ರಮದ ಒಟ್ಟು ಯಶಸ್ಸಿಗೆ ಕಾರಣರಾದವರಿಗೆ ತಮ್ಮ ಮೆಚ್ಚುಗೆ ಮಾತುಗಳನ್ನಾಡಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಡಾ. ದೇವರಕೊಂಡಾರೆಡಿ ಅವರು ಯಶಸ್ಸಿಗೆ ಕಾರಣರಾದವರಿಗೆ ಕೃತಜ್ಞತೆ ಸಲ್ಲಿಸಿದರು. ಕರ್ನಾಟಕದ ಸಂಘದ ವತಿಯಿಂದ ಡಾ. ಶಿವರಾಮ್ ವಂದನಾರ್ಪಣೆ ಮಾಡಿದರು. ಅಕಾದೆಮಿಯ ಪರವಾಗಿ ಪ್ರೊ. ಜಿ.ಕೆ. ದೇವರಾಜಸ್ವಾಮಿ, ಪ್ರಧಾನ ಕಾರ್ಯದರ್ಶಿ ಅವರು ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದವರೆಲ್ಲರಿಗೂ ವಂದನೆಗಳನ್ನು ತಿಳಿಸಿದರು. ಕಾರ್ಯಕ್ರಮದಲ್ಲಿ ಅತಿಥಿಗಳನ್ನು ಸನ್ಮಾನಿಸಲಾಯಿತು. ಇಲ್ಲಿಗೆ ೨೯ನೇ ವಾರ್ಷಿಕ ಸಮ್ಮೇಳನವು ಮುಕ್ತಾಯವಾಯಿತು.

**ಸರ್ವಸದಸ್ಯರ ಸಭೆಯ ವರದಿ: ೨೦೧೫-೨೦೧೬**

ದಿನಾಂಕ ೩೦ನೇ ಅಕ್ಟೋಬರ್ ೨೦೧೫ ಶುಕ್ರವಾರ ಸಂಜೆ ೬.೩೦ ಗಂಟೆಗೆ ಅಕಾದೆಮಿಯ ೨೯ನೇ ವಾರ್ಷಿಕ ಸಮ್ಮೇಳನದ ಮಂಡ್ಯದ ಸಭಾಸ್ಥಾನವಾದ ಶ್ರೀ ಮಾನ್ವಿ ಪ್ರೇಮಚಂದ್ ಸಭಾಂಗಣದಲ್ಲಿ ೨೦೧೫-೧೬ನೇ ಸಾಲಿನ ಸರ್ವಸದಸ್ಯರ ಸಭೆಯನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಸೂಚಿಯಂತೆ ನಡೆದ ಸರ್ವಸದಸ್ಯರ ಸಭೆಯ ನಡಾವಳಿಗಳು ಈ ರೀತಿ ಇದೆ.

ಡಾ. ಜಯಮ್ಮ ಕರಿಯಣ್ಣ ಅವರ ದೇವತಾ ಪ್ರಾರ್ಥನೆಯೊಂದಿಗೆ ಸಭೆಯು ಪ್ರಾರಂಭಗೊಂಡಿತು.

**ಸಭೆಯ ನಡವಳಿಕೆಗಳು**

**೧. ಸಂತಾಪ ಸೂಚಕ ಸಭೆ ಮತ್ತು ಶ್ರದ್ಧಾಂಜಲಿ:-** ಕಳೆದ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಿಧನರಾಗಿರುವ ಅಕಾದೆಮಿಯ ಸದಸ್ಯರು ಹಾಗೂ ರಾಷ್ಟ್ರದ/ನಾಡಿನ ಗಣ್ಯವ್ಯಕ್ತಿಗಳ ನಿಧನಕ್ಕಾಗಿ, ಸಭೆಯು ಒಂದು ನಿಮಿಷ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಿ, ಮೃತರ ಆತ್ಮಕ್ಕೆ ಶಾಂತಿ ಕೋರಲಾಯಿತು. ಸದಸ್ಯರ ಮತ್ತು ಗಣ್ಯವ್ಯಕ್ತಿಗಳ ಪಟ್ಟಿಯನ್ನು ಪ್ರೊ. ಜಿ.ಕೆ.ದೇವರಾಜಸ್ವಾಮಿಯವರು ಸಭೆಗೆ ತಿಳಿಸಿದರು.

ಸದಸ್ಯರು: ಡಾ. ಸೂರ್ಯನಾಥ.ಯು.ಕಾಮತ್, ಡಾ. ಎಂ.ಎಂ. ಕಲಬುರ್ಗಿ, ಶ್ರೀ ಎಂ.ಬಿ. ಜಾದವ್, ಶ್ರೀ ಎಂ.ಎಸ್. ದ್ವಾರಕನಾಥ್, ಶ್ರೀ ಅನಂತ್‌ರಾಜ್ ಇಂದ್ರ, ಶ್ರೀ ಎಸ್.ಆರ್. ಹೆಗಡೆ, ಪ್ರೊ. ಕ.ವೆಂ. ರಾಜಗೋಪಾಲ್, ಶ್ರೀಮತಿ ಪ್ರಭಾಮಣಿ ಮತ್ತು ಶ್ರೀಮತಿ ಬಿ. ನಾರಾಯಣಮ್ಮ.

ಇತರ ಗಣ್ಯವ್ಯಕ್ತಿಗಳು: ಡಾ. ಅಬ್ದುಲ್ ಕಲಾಂ-ಮಾಜಿ ರಾಷ್ಟ್ರಪತಿಗಳು, ಕೈಯ್ಯಾರ ಕಿಞ್ಞಣ್ಣರೈ-ಸಾಹಿತಿಗಳು, ವೆಂಕಟೇಶ ನಾಯಕ್-ದೇವದುರ್ಗ, ಅನ್ನದಾನಯ್ಯ ಪುರಾಣಿಕ್-ಸ್ವಾತಂತ್ರ್ಯ ಹೋರಾಟಗಾರರು, ವಕೀಲರು. ಜಿ.ಕೆ. ದೇವರಾಜಸ್ವಾಮಿ ಕಾರ್ಯದರ್ಶಿಯವರು, ಸರ್ವ ಸದಸ್ಯರ ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡು, ಸಭೆಯನ್ನು ಯಶಸ್ವಿಯಾಗಿ ನಡೆಸಿಕೊಡಲು, ಡಾ. ದೇವರಕೊಂಡಾರೆಡ್ಡಿಯವರನ್ನು ವೇದಿಕೆಗೆ ಆಹ್ವಾನಿಸಿ, ಕಾರ್ಯಕಾರಿ ಸಮಿತಿಯ ಸದಸ್ಯರನ್ನೂ ವೇದಿಕೆಗೆ ಆಹ್ವಾನಿಸಿ, ನೆರೆದಿದ್ದ ಎಲ್ಲಾ ಸದಸ್ಯರಿಗೂ ಸಭೆಗೆ ಸ್ವಾಗತ ಕೋರಿದರು. ಎಲ್ಲಾ ಸದಸ್ಯರಿಗೂ ೨೦೧೪-೧೫ನೇ ಸಾಲಿನ ವಾರ್ಷಿಕ ವರದಿ, ಲೆಕ್ಕಪತ್ರಗಳ ವರದಿಯನ್ನು ಕೊಡಲಾಗಿತ್ತು. ಸಭೆಯಲ್ಲಿ ಕೋರಂ ಇರದೆ ಸಭೆಯನ್ನು ಹತ್ತು ನಿಮಿಷಗಳ ಕಾಲ ಮುಂದೂಡಲಾಯಿತು. ಆನಂತರದಲ್ಲಿ ಸಭೆಯನ್ನು ಪ್ರಾರಂಭಿಸಲಾಯಿತು. ಸಭೆಯಲ್ಲಿ ೭೯ ಸದಸ್ಯರು ಹಾಜರಿದ್ದರು.

**೨. ೨೦೧೪-೧೫ನೆಯ ಸಾಲಿನ ವಾರ್ಷಿಕ ವರದಿಯ ವಾಚನ ಮತ್ತು ಅಂಗೀಕಾರ:** ಜಿ.ಕೆ. ದೇವರಾಜಸ್ವಾಮಿಯವರು ಸಭೆಗೆ ತಿಳುವಳಿಕೆ ಪತ್ರವನ್ನು ಓದಿ ಹೇಳಿದ ನಂತರ ೨೦೧೪-೧೫ನೇ ಸಾಲಿನ ವಾರ್ಷಿಕ ವರದಿಯ ವಾಚನ ಮಾಡಿದರು. ಅಕಾದೆಮಿ ಆಯೋಜಿಸಿದ ಕಾರ್ಯಕ್ರಮಗಳಿಗೆ ಸಂತಸ ವ್ಯಕ್ತಪಡಿಸಿದ ಸಭೆಯು, ನಂತರ ಯಾವ ರೀತಿಯ ಚರ್ಚೆಯಿಲ್ಲದೆ, ವಾರ್ಷಿಕ ವರದಿಯು ಸಭೆಯ ಒಪ್ಪಿಗೆ ಪಡೆಯಿತು. ಶ್ರೀ ಆದಪ್ಪ ಪಾಸೋಡಿಯವರ ಸೂಚನೆಯ ಮೇರೆಗೆ, ಶ್ರೀ ಸುಮತೀಂದ್ರ ನಾಡಿಗ್ ಮತ್ತು ಡಾ. ಎಚ್. ಚಂದ್ರಶೇಖರ್‌ರವರುಗಳು ಅನುಮೋದನೆಯೂ ದೊರೆಯಿತು.

**೩. ೨೦೧೪-೧೫ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರ ಮಂಡನೆ ಮತ್ತು ಸ್ವೀಕಾರ:** ಶ್ರೀ ಎಂ.ಬಿ. ಪಾಟೀಲ್, ಕೋಶಾಧಿಕಾರಿಗಳು, ತಾವು ಜೂನ್ ೨೦೧೫ರಿಂದ ಅಕ್ಟೋಬರ್ ೨೦೧೫ರವರೆಗೆ ಹೊರದೇಶಕ್ಕೆ ಭೇಟಿ ನೀಡಿದ್ದು, ತಮ್ಮ ಅನುಪಸ್ಥಿತಿಯಲ್ಲಿ, ತಮ್ಮ ಸ್ಥಾನದಲ್ಲಿ ಪ್ರಭಾರಿಯಾಗಿ ಕಾರ್ಯನಿರ್ವಹಿಸಿದ ಶ್ರೀ ಜಿ.ಎಸ್. ಗುರುಪ್ರಸಾದ್‌ರವರು, ಸದಸ್ಯರು ಕೇಳುವ ಮಾಹಿತಿಗಳಿಗೆ ಉತ್ತರ ನೀಡುತ್ತಾರೆಂದು ತಿಳಿಸಿದರು. ಅದರಂತೆ ಶ್ರೀ ಗುರುಪ್ರಸಾದ್‌ರವರು ಅಕಾದೆಮಿಯ ಆದಾಯದ ಬಗ್ಗೆ, ಸರ್ಕಾರದ ವತಿಯಿಂದ ಬಂದ ಅನುದಾನದ ಬಗ್ಗೆ ಮತ್ತು ದೆಹಲಿಯ ಐ.ಸಿ.ಎಚ್.ಆರ್.ನಿಂದ ಸ್ವೀಕೃತವಾದ ಹಣಕಾಸಿನ ಸಹಾಯವನ್ನು ಸಭೆಗೆ ಮಾಹಿತಿ ನೀಡಿದರು. ವಾರ್ಷಿಕ ವರದಿಯಲ್ಲೂ ಈ ಅಂಶಗಳು ನಮೂದಿಸಿವೆ ಎಂದು ಸಭೆಯ ಗಮನ ಸೆಳೆದರು. ನಂತರ ಅಕಾದೆಮಿಯ ಕಚೇರಿಯ ನಿರ್ವಹಣೆಗೆ ಬೇಕಾದ ಅಂದಾಜು ವೆಚ್ಚ, ಕಚೇರಿ ಬಾಡಿಗೆ, ಬಾಡಿಗೆಯಲ್ಲುಂಟಾದ ಏರಿಕೆ, ಅದರ ಕಾರಣ ಎಲ್ಲವನ್ನೂ ಸಭೆಗೆ ನೀಡಿದರು. ದತ್ತಿ ನಿಧಿಯ ಹಣವನ್ನು ಮತ್ತು ಅದರಿಂದ ಬರುವ ಆದಾಯವನ್ನು ಆಯಾ

ಕಾರ್ಯಕ್ರಮಗಳಿಗೆ ವಿನಿಯೋಗಿಸುವ ದೃಷ್ಟಿಯಿಂದ, ದತ್ತಿನಿಧಿಯ ಹಣವನ್ನು ಈಗಿರುವ ಎಫ್.ಡಿ. ಖಾತೆಯಿಂದ ಬೇರ್ಪಡಿಸಿ, ಪ್ರತ್ಯೇಕ ದತ್ತಿನಿಧಿಗಳ ಎಫ್.ಡಿ. ಖಾತೆಗೆ ವರ್ಗಾಯಿಸಬೇಕಾದ ಅನಿವಾರ್ಯತೆ ಇದೆ ಎಂಬ ಅಂಶವನ್ನು ವಿವರಿಸಿದರು. ದತ್ತಿನಿಧಿಗಳ ಎಫ್.ಡಿ. ಖಾತೆಯಿಂದ ಬಡ್ಡಿ ಹಣವು ಪ್ರತ್ಯೇಕ ಎಸ್.ಬಿ. ಖಾತೆಗೆ ವರ್ಗಾಯಿಸಬೇಕಾದ ಅವಶ್ಯಕತೆಯನ್ನು ಚರ್ಚಿಸಿದರು.

**೪. ಡಾ. ದೇವರಕೊಂಡಾರೆಡ್ಡಿ ಅಭಿನಂದನಾ ಸಮಿತಿಯ ದತ್ತಿ ನಿಧಿ ರೂ. ೧,೧೦,೦೦೦:–** ಈ ದತ್ತಿ ನಿಧಿಯ ಹಣವು ಒಂದು ವರ್ಷದಿಂದಲೂ ಎಫ್.ಡಿ. ಯಲ್ಲಿದ್ದು, ದತ್ತಿಯ ಧ್ಯೇಯೋದ್ದೇಶಗಳು ಮತ್ತು ದತ್ತಿಯ ರೂಪುರೇಷೆಗಳನ್ನು ಇನ್ನೂ ನೀಡಿಲ್ಲವಾಗಿ, ಈ ದತ್ತಿನಿಧಿಗೆ ಚಾಲನೆ ದೊರೆತಿಲ್ಲ, ಆದಷ್ಟು ಶೀಘ್ರವೇ ಇದರ ಬಗ್ಗೆ ಗಮನ ಹರಿಸಬೇಕು ಎಂದು ತಿಳಿಸಿದರು.

**೫. ಡಾ. ಎಂ.ಜಿ. ನಾಗರಾಜ್‌ರವರ ಕೊಡುಗೆ ರೂ. ೧,೨೦,೦೦೦:–** ತಮಗೆ ಈ ಸಾಲಿನಲ್ಲಿ ಸಂದ ಇತಿಹಾಸ ಸಂಸ್ಕೃತಿ ಶ್ರೀ ಪ್ರಶಸ್ತಿಯ ನಗದು ಮೊಬಲಿಗೆ (ರೂ. ಒಂದು ಲಕ್ಷ) ತಮ್ಮ ರೂ. ೨೦,೦೦೦/– ರೂಪಾಯಿಗಳನ್ನು ಸೇರಿಸಿ, ಒಂದು ದತ್ತಿ ನಿಧಿ ಸ್ಥಾಪಿಸುವ ಸಲುವಾಗಿ, ಡಾ. ಎಂ.ಜಿ. ನಾಗರಾಜ್‌ರವರು, ಅಕಾದೆಮಿಗೆ ಒಟ್ಟು ರೂ. ೧,೨೦,೦೦೦/– ರೂಪಾಯಿಗಳನ್ನು ನೀಡಿ, ಅಕಾದೆಮಿಯ ಬಗ್ಗೆ ತಮ್ಮ ಪ್ರೀತಿ, ಗೌರವವನ್ನು ವ್ಯಕ್ತಪಡಿಸಿದ್ದಕ್ಕಾಗಿ, ಸರ್ವಸದಸ್ಯರೂ ಶ್ರೀ ನಾಗರಾಜ್‌ರವರನ್ನು ಅಭಿನಂದಿಸಿದರು. ತಮ್ಮ ದತ್ತಿನಿಧಿಯ ರೂಪುರೇಶೆಗಳನ್ನು ಶೀಘ್ರದಲ್ಲೇ ಅಕಾದೆಮಿಗೆ ತಿಳಿಸುವ ಭರವಸೆಯನ್ನು ನೀಡಿದ ಶ್ರೀ ನಾಗರಾಜ್‌ರವರಿಗೆ, ಸಭೆಯು ಎದ್ದು ನಿಂತು ಗೌರವವನ್ನು ಮತ್ತು ಸಂತಸವನ್ನು ವ್ಯಕ್ತಪಡಿಸಿತು.

ಅಕಾದೆಮಿಯು ಆಗಸ್ಟ್ ೨೦೧೫ರಲ್ಲಿ ಕೇಂದ್ರ ಸರ್ಕಾರದ ಆದಾಯ ತೆರಿಗೆ ಇಲಾಖೆಗೆ ೮೦ಜಿ ಅರ್ಜಿಯನ್ನು ದಾಖಲಿಸಿದ್ದು, ಅಲ್ಲಿಂದ ಪ್ರತಿಕ್ರಿಯೆ ಬರಲು ಕಾಲಾವಕಾಶವಿದೆಯೆಂದು ಶ್ರೀ ಗುರುಪ್ರಸಾದ್‌ರವರು ಸಭೆಗೆ ತಿಳಿಸಿದರು. ವೆಬ್‌ಸೈಟ್ ನಿರ್ವಹಣೆ ವೆಚ್ಚ, ಡೊಮೇನ್ ಖರ್ಚು, ಇತರೆ ವಾರ್ಷಿಕ ರೂ. ೫೦೦೦ ಗಳಾಗಬಹುದೆಂದು ಸಭೆಗೆ ತಿಳಿಸಿದರು. ಇದನ್ನು ನಿರ್ವಹಿಸಲು ಕೋಶಾಧಿಕಾರಿಗಳಿಗೆ ಸಭೆಯು ಸರ್ವಾನುಮತದಿಂದ ಅನುಮತಿ ನೀಡಿತು.

**೬. ೨೦೧೫–೧೬ನೆಯ ಸಾಲಿನ ಲೆಕ್ಕಪರಿಶೋಧಕರ (ಆಡಿಟರ್) ನೇಮಕ ಕುರಿತು:–** ಆರಂಭದಿಂದಲೂ ಈವರೆಗೆ ಲೆಕ್ಕಪತ್ರಗಳನ್ನು ಪರಿಶೋಧಿಸಿ ಕೊಡುತ್ತಿರುವ ಮೆಸರ್ಸ್ ಕೆ.ವಿ. ಆಚಾರ್ಯ ಅಂಡ್ ಕಂಪನಿ, ಬೆಂಗಳೂರು ಅವರನ್ನು ೨೦೧೫–೧೬ನೆಯ ಸಾಲಿನ ಲೆಕ್ಕಪತ್ರಗಳ ಪರಿಶೋಧನೆಗೆ ಮುಂದುವರಿಸಿ ಅವರಿಗೆ ರೂ. ೧೦,೦೦೦/– ಸಂಭಾವನೆ ಮತ್ತು ಸೇವಾ ತೆರಿಗೆ ನೀಡಿ ನೇಮಿಸಿಕೊಳ್ಳಬಹುದೆಂದು ಡಾ. ಮುತ್ತುರಾಜ್ ಸೂಚಿಸಿದರು. ಡಾ. ಎಸ್.ಎ. ಕೃಷ್ಣಯ್ಯನವರು ಈ ಅಂಶವನ್ನು ಅನುಮೋದಿಸಿದರು. ಅಕಾದೆಮಿಯು ಸಲ್ಲಿಸಿರುವ ೮೦ ಜಿ ಅರ್ಜಿಗೆ, ಲೆಕ್ಕಪರಿಶೋಧಕರಿಗೆ ಅದರ ಬಾಬ್ತು ಖರ್ಚು ಮತ್ತು ಅವರ ಸಂಭಾವನೆ ನೀಡಬೇಕಾಗುವುದು ಎಂದು ತಿಳಿಸಿದರು. ಸರ್ವ ಸದಸ್ಯರ ಸಭೆಯು ಈ ಅಂಶಕ್ಕೂ ಒಪ್ಪಿಗೆ ನೀಡಿತು.

ಲೆಕ್ಕಪತ್ರಗಳ ಮಂಡನೆ ಮತ್ತು ಸ್ವೀಕಾರಕ್ಕೆ ಡಾ. ಎಸ್. ಚಂದ್ರಶೇಖರ್ ಅವರ ಸೂಚನೆಯನ್ನು ಡಾ. ಎಸ್.ಕೆ. ಜೋಷಿ ಮತ್ತು ಶ್ರೀಮತಿ ಲೀಲಾರವರು ಅನುಮೋದಿಸಿದರು.

ಹಾಲಿ ಲೆಕ್ಕಪರಿಶೋಧಕರನ್ನು ಮುಂದುವರಿಸಲು ಅವರ ಆಡಿಟ್ ಶುಲ್ಕವನ್ನು ಕೊಡಲು ಮತ್ತು ಅಂದಾಜು ಆಯವ್ಯಯ ಪತ್ರವನ್ನು ಒಪ್ಪಬಹುದೆಂದು ಸರ್ವಸದಸ್ಯರ ಸಭೆಯಲ್ಲಿ ಒಮ್ಮತ ಮೂಡಿಬಂದಿತು. ಇದನ್ನು ಸೂಚಿಸಿದವರು ಡಾ. ಮುತ್ತುರಾಜ್‌ರವರು ಮತ್ತು ಅನುಮೋದಿಸಿದವರು ಡಾ. ಎಸ್.ಎ. ಕೃಷ್ಣಯ್ಯನವರು.

**೭. ಅಧ್ಯಕ್ಷರ ಅಪ್ಪಣೆ ಮೇರೆಗೆ ಸ್ವೀಕೃತವಾದ ಕೆಲವು ಸಲಹೆ/ಸೂಚನೆಗಳು:**

ಅ) ಇತಿಹಾಸ ದರ್ಶನದ ಮುದ್ರಣದ ವೆಚ್ಚ ಕಡಿಮೆ ಮಾಡಲು ಇಡೀ ಸಂಪುಟದ ಪ್ರಾಯೋಜಕತ್ವ ಅಥವಾ ಲೇಖನಗಳಿಗೆ ಪ್ರಾಯೋಜಕತ್ವವನ್ನು ಪಡೆಯುವ ಸಲಹೆ [Sponsors for certain articles or sponsors for entire Volume]- ಸಲಹೆ ಡಾ. ಎಸ್.ಎ. ಕೃಷ್ಣಯ್ಯನವರು.

ಆ) ಹಲವರಿಂದ ಬಂದ ಸಲಹೆ– ಸದಸ್ಯರಿಗೆ/ ಲೇಖಕರಿಗೆ ಇತಿಹಾಸ ದರ್ಶನದ ಸಂಪುಟವನ್ನು ಸಿಡಿ ರೂಪದಲ್ಲಿ ನೀಡುವ ಬಗ್ಗೆ.

ಇ) ಇನ್ನೂ ಕೆಲವರಿಂದ ಸಿಡಿ ರೂಪದಲ್ಲೂ ಮತ್ತು ಪುಸ್ತಕ ರೂಪದಲ್ಲೂ ಕೊಡುವಂತೆ ಸೂಚನೆ.

ಈ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಇತಿಹಾಸ ದರ್ಶನದ ಲೇಖನಗಳಿಗೆ ಪ್ರಾಯೋಜಕತ್ವದ ಬಗ್ಗೆ [Sponsorship ಗಾಗಿ] ಬೇಡಿಕೆ ಇಡುವುದು.

ಉ) ಶಾಸನ ತಜ್ಞ ಬಾ.ರಾ. ಗೋಪಾಲ್‌ರವರು ಸಾಧನೆಗಳ ಬಗ್ಗೆ ಯುವ ಪೀಳಿಗೆಗೆ ಮಾಹಿತಿ ನೀಡುವ ಸಲುವಾಗಿ, ಉಪನ್ಯಾಸ ಕಾರ್ಯಕ್ರಮವನ್ನು ಸೂಕ್ತ ವೇದಿಕೆಯಲ್ಲಿ/ಸ್ಥಳಗಳಲ್ಲಿ ಹಮ್ಮಿಕೊಳ್ಳುವ ಕೆಲಸವಾಗಬೇಕೆಂದು ಸಲಹೆ ಡಾ. ಎಸ್.ಎ. ಕೃಷ್ಣಯ್ಯನವರಿಂದ ಬಂದಿದೆ.

ಊ) ಸದಸ್ಯರಿಗೆ ಗುರುತಿನ ಕಾರ್ಡ್ ನೀಡುವ ಕೆಲಸ.

ಮೇಲ್ಕಂಡ ಆರು ಸಲಹೆ ಸೂಚನೆಗಳ ಸಾಧಕ ಬಾಧಕಗಳ ಬಗ್ಗೆ ಚರ್ಚಿಸಿ, ನಿರ್ಧಾರಕ್ಕೆ ಬರುವ ಆಶ್ವಾಸನೆ ನೀಡಲಾಯಿತು ಮತ್ತು ಅಗತ್ಯವಿದ್ದಲ್ಲಿ ಸಲಹೆಗಾರರ ನೆರವನ್ನು ಪಡೆಯಬಹುದೆಂದು ತೀರ್ಮಾನಿಸಲಾಯಿತು.

**೮. ಇತಿಹಾಸ ದರ್ಶನದ ಹಿಂದಿನ ಸಂಪುಟಗಳನ್ನು ನೀಡುವ ಬಗ್ಗೆ:**

ಇತಿಹಾಸ ದರ್ಶನದ ಹಿಂದಿನ ಸಂಪುಟಗಳನ್ನು ಉಚಿತವಾಗಿ ವಿತರಿಸುವ ಸಲಹೆಗೆ ವ್ಯಾಪಕ ಒಮ್ಮತ ತೋರಿಬಂದಿದೆ. ವಿಶ್ವವಿದ್ಯಾಲಯಗಳು/ಕಾಲೇಜುಗಳು ಕೆಲವು ಸಂಘ ಸಂಸ್ಥೆಗಳು ತಮ್ಮ ಖರ್ಚಿನಲ್ಲಿ ತರಿಸಿಕೊಳ್ಳುವುದಾದರೆ, ಅಕಾದೆಮಿಯು ಆ ಕಾರ್ಯವನ್ನು ಕೈಗೆ ತೆಗೆದುಕೊಳ್ಳಬಹುದೆಂದು ಸರ್ವಸದಸ್ಯರ ಸಭೆ ತೀರ್ಮಾನಿಸಿತು.

**೯. ಪ್ರತಿನಿಧಿ ಶುಲ್ಕ ಮತ್ತು ಸದಸ್ಯರ ಲೇಖನ ಪ್ರಕಟಣೆ:**

ಸಮ್ಮೇಳನಗಳಲ್ಲಿ ಪ್ರತಿನಿಧಿ ಶುಲ್ಕ ಪಾವತಿಸದ ಸದಸ್ಯರ ಲೇಖನವನ್ನು ಪ್ರಕಟಿಸಬಾರದೆಂಬ ಸಲಹೆಗೆ ಸಭೆಯು ಸರ್ವಾನುಮತದಿಂದ ಒಪ್ಪಿಗೆ ಸೂಚಿಸಿತು.

**೧೦. ಕಾರ್ಯಕಾರಿ ಸಮಿತಿಗೆ ಪ್ರತಿನಿಧಿ ಶುಲ್ಕ ಮತ್ತು ಪ್ರಯಾಣಭತ್ಯದಿಂದ ರಿಯಾಯಿತಿ ಬೇಕೆ?**

ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರ ಪರವಾಗಿ, ಪ್ರೊ. ಮುರಿಗೇಶಿಯವರು ಮಾತನಾಡಿ, ಪ್ರತಿನಿಧಿ ಶುಲ್ಕ ಕೊಡಲು ಎಲ್ಲಾ ಕಾರ್ಯಕಾರಿ ಸಮಿತಿಯ ಸದಸ್ಯರು ಒಪ್ಪಿದ್ದಾರೆ ಮತ್ತು ಅವರಿಗೆ ಪ್ರತಿನಿಧಿ ಶುಲ್ಕ ಹೊರೆಯಲ್ಲ ಎಂದು ತಿಳಿಸಿದರು. ಹಾಗೆಯೇ ಗೌರವ ಪ್ರಯಾಣ ವೆಚ್ಚ ಬರಿಸುವ ಅಗತ್ಯವೇನಿಲ್ಲ ಎಂದೂ ತಿಳಿಸಿದರು. ಈ ಸೂಚನೆಗೆ ಶ್ರೀ ಗುರುಪ್ರಸಾದ್‌ರವರು ಅನುಮೋದಿಸಿದರು. ಸರ್ವ ಸದಸ್ಯರೂ ಇದನ್ನು ಒಪ್ಪಿದರು.

**೧೧. ಅಕಾದೆಮಿ ದೇಣಿಗೆ:**

ಅ) ಬಳ್ಳಾರಿಯ ನಮ್ಮ ಸದಸ್ಯರಾದ ಶ್ರೀ ಟಿ.ಎಂ.ಎಚ್. ಬಸವರಾಜ್‌ರವರು, ಈ ವರ್ಷವೂ ಸಹ, ತಮ್ಮ ಅನುಪಸ್ಥಿತಿಯಲ್ಲೂ ಅಕಾದೆಮಿಗೆ ನೀಡಿದ ರೂ. ೧೦೦೦/– ವನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿದೆ.

ಆ) ಬೆಂಗಳೂರಿನ ಸದಸ್ಯರಾದ ಶ್ರೀ ಕೆ. ಪುಟ್ಟಕಾಮಯ್ಯ ಅವರು ಸಭೆಯಲ್ಲಿ, ಅಕಾದೆಮಿಗೆ ಎರಡು ಸಾವಿರ ರೂಪಾಯಿಗಳನ್ನು ದೇಣಿಗೆ ನೀಡಿದ್ದಾರೆ. ಅವರ ದೇಣಿಗೆಯನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿದೆ.

ಸರ್ವಸದಸ್ಯರ ಸಭೆಯು, ಪ್ರೊ. ಜಿ.ಕೆ. ದೇವರಾಜಸ್ವಾಮಿಯವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

**ಕಾರ್ಯಕಾರಿ ಸಮಿತಿ ಸಭೆಗಳು**

೨೦೧೫–೧೬ನೇ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರಿ ಸಮಿತಿಯ ಸಭೆಗಳು ಒಟ್ಟು ೩ ಬಾರಿ ನಡೆದಿದೆ. ಸದಸ್ಯರು ಕಾರ್ಯಕಾರಿ ಸಮಿತಿಯ ಸಭೆಗಳಲ್ಲಿ ಖುದ್ದು ಹಾಜರಿದ್ದು ಅಥವಾ ಪತ್ರದ ಮೂಲಕ ಇಲ್ಲವೆ ದೂರವಾಣಿ ಎಸ್.ಎಂ.ಎಸ್. ವಿದ್ಯುನ್ಮಾನ ಟಪಾಲುಗಳ ಮೂಲಕ ಸೂಚನೆ ಒಪ್ಪಿಗೆಗಳನ್ನು ನೀಡಿ ಅಕಾದೆಮಿಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ. ಅದಕ್ಕಾಗಿ ಅವರಿಗೆ ಧನ್ಯವಾದಗಳು.

**ಅಕಾದೆಮಿಯ ಸದಸ್ಯಬಲ**

ಸಮ್ಮೇಳನದ ಆರಂಭದ ವೇಳೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯತ್ವ ಬಲ : ಆಜೀವ ಸದಸ್ಯತ್ವ ಹೊಂದಿರುವವರು ಒಟ್ಟು ೧೮೩೫.

**ಕ್ಷೇತ್ರ ಕಾರ್ಯ ಪ್ರವಾಸ**

ಕರ್ನಾಟಕ ಇತಿಹಾಸ ಅಕಾದೆಮಿಯ ಬೆಂಗಳೂರಿನ ಸದಸ್ಯರು ದಿನಾಂಕ : ೨೪.೨೫.೨೬. ಜೂನ್ ೨೦೧೬ರಲ್ಲಿ ಮೂರುದಿನಗಳ ಪ್ರವಾಸ ಹಮ್ಮಿಕೊಂಡಿದ್ದರು. ಇಪ್ಪತ್ತೊಂದು ಜನರು ಪ್ರವಾಸದಲ್ಲಿ ಪಾಲ್ಗೊಂಡಿದ್ದರು. ಜಯಮ್ಮಕರಿಯಣ್ಣ ಅವರ ನೇತೃತ್ವದಲ್ಲಿ ಪ್ರವಾಸವನ್ನು, ಅರಸೀಕೆರೆ, ಅಮೃತಾಪುರ, ಬನವಾಸಿ, ತಾಳಗುಂದ, ಕುಪ್ಪಗದ್ದೆ, ಕುಪಟೂರು, ಬೆಳಗಾವಿ, ಬಂದಳಿಕೆ, ಅಬ್ಬಲೂರು ಮುಂತಾದ ಸ್ಥಳಗಳಿಗೆ ಹಮ್ಮಿಕೊಳ್ಳಲಾಗಿತ್ತು. ಪ್ರವಾಸದಲ್ಲಿ ಡಾ. ದೇವರಕೊಂಡಾರೆಡ್ಡಿ ಅವರು ದೇವಾಲಯಗಳ ಬಗೆಗಿನ ಇತಿಹಾಸ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮುಂತಾದವುಗಳ ಬಗ್ಗೆ ವಿವರಣೆಯನ್ನು ಆಯಾಸ್ಥಳಗಳಲ್ಲಿ ನೀಡಿದರು. ವಾಸ್ತು ಶಿಲ್ಪದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಶ್ರೀ ಎಂ.ಎನ್. ಪ್ರಭಾಕರ್ ಅವರು ನೀಡಿದರು. ಪ್ರವಾಸವು ಜ್ಞಾನಪ್ರದವೂ, ಯಶಸ್ವಿಯೂ ಆಗಿತ್ತು.

**ಜಿಲ್ಲಾ ಘಟಕಗಳು** : ಪ್ರತಿಜಿಲ್ಲಾ ಘಟಕಗಳು ಹೊಸ ಕಾರ್ಯಕಾರಿ ಸಮಿತಿಯೊಂದಿಗೆ ಕಾರ್ಯ ಕ್ರಮುಗಳನ್ನು ರಚಿಸಿಕೊಳ್ಳಬೇಕಾಗಿದೆ.

**ಕೃತಜ್ಞತೆಗಳು:** ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಸೋದರ ಸಂಸ್ಥೆ ಎಂಬಂತೆ ಪರಿಗಣಿಸಿ ಸಹಕರಿಸುತ್ತಾ ಬಂದಿರುವ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು, ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗ, ಅಕಾದೆಮಿಯ ವಾರ್ಷಿಕ ಸಮ್ಮೇಳನ ಸಂದರ್ಭದಲ್ಲಿ ವಸ್ತುಪ್ರದರ್ಶನ ಏರ್ಪಡಿಸಿ, ಸಹಕರಿಸುತ್ತಿರುವ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗ, ೨೦೧೫ರ "ಐತಿಹಾಸಿಕ ಪರಂಪರೆ

ಉಳಿಸಿ ಸಪ್ತಾಹ ಕಾರ್ಯಕ್ರಮದ ಉದ್ಘಾಟನಾ ಸಮಾರಂಭಕ್ಕೆ ಆಶ್ರಯನೀಡಿ ಸಹಕರಿಸಿರುವ ಬೆಂಗಳೂರಿನ ಜಿ.ಎಂ.ಶ್ರೀ ಪ್ರತಿಷ್ಠಾನ ಬಸವನಗುಡಿಯ ಆಡಳಿತ ಮಂಡಳಿ, ಅಧಿಕಾರಿ ಮತ್ತು ಸಿಬ್ಬಂದಿ ವರ್ಗ, ಬೆಂಗಳೂರಿನ ದಿ ಮಿಥಿಕ್ ಸೊಸೈಟಿಯ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗ, ಶ್ರೀ ಬೈಸಾನಿ ರುಕ್ಮಿಣಮ್ಮ ರತ್ನಂಶೆಟ್ಟಿ ಕುಟುಂಬದ ಸೇವಾ ಟ್ರಸ್ಟ್‌ನ ಶ್ರೀ ಅಶೋಕ ಕುಮಾರ್, ವಾಗ್ದೇವಿ ಮುದ್ರಣಾಲಯದ ಶ್ರೀ ಪ್ರಭು ಮತ್ತು ಸಿಬ್ಬಂದಿ ವರ್ಗ, ಡಾ. ಬಾ.ರಾ.ಗೋಪಾಲ ಪ್ರಶಸ್ತಿಗೆ ದತ್ತಿ ನೀಡಿರುವ ಡಾ. ಬಾ.ರಾ.ಗೋಪಾಲ್ ಕುಟುಂಬ ವರ್ಗ, ಸಮ್ಮೇಳನಾಧ್ಯಕ್ಷರ ಗೌರವಸ್ಮರಣ ಫಲಕವನ್ನು ಪ್ರಾಯೋಜಿಸಿರುವ ಶ್ರೀ ಕೆ. ಅಭಿಶಂಕರ ಕುಟುಂಬ ವರ್ಗ, "ಇತಿಹಾಸ ಸಂಸ್ಕೃತಿ ಶ್ರೀ" ಪ್ರಶಸ್ತಿಯನ್ನು ಪ್ರಾಯೋಜಿಸುತ್ತಿರುವ ಬೈಸಾನಿ ಶ್ರೀಮತಿ ರುಕ್ಮಿಣಮ್ಮ ಶ್ರೀ ರತ್ನಂಶೆಟ್ಟಿ ಟ್ರಸ್ಟಿನವರಿಗೆ, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯ ಸ್ಮರಣಫಲಕವನ್ನು ಪ್ರಾಯೋಜಿಸುತ್ತಾ ಬಂದಿರುವ ಶ್ರೀ ವೇಮಗಲ್ ಸೋಮಶೇಖರ್, ಪಿಎಚ್.ಡಿ ಪದವಿದರರಿಗೆ ಉತ್ತೇಜನ ನೀಡುವ ಸಲುವಾಗಿ ದತ್ತಿ ಸ್ಥಾಪಿಸಿರುವ ಶ್ರೀ ರಾಜನ್ ತುಮಕೂರು, ವೆಬ್‌ಸೈಟ್‌ನ ನಿರ್ವಹಣೆ ಮಾಡಲು ದತ್ತಿ ಸ್ಥಾಪಿಸಿರುವ ಡಾ॥ ದೇವರಕೊಂಡಾರೆಡ್ಡಿ ಅಭಿನಂದನಾಸಮಿತಿಗೆ, ಸೂರ್ಯನಾಥ ಕಾಮತ್ ನೆನಪಿನ ದತ್ತಿ ಸ್ಥಾಪಿಸಿರುವ ಶ್ರೀಮತಿ ಅರ್ಚನ ಎಸ್.ರಾವ್, ಅವರಿಗೆ ಶ್ರೀಮತಿ ವಿ.ಗೌರಮ್ಮ ಗಂಗಾಧರಯ್ಯ ಅವರ ಮಕ್ಕಳಾದ ಡಾ. ಎಂ.ಜಿನಾಗರಾಜ್, ಶ್ರೀಮತಿ ಎಂ.ಜಿ. ಪದ್ಮವಿರೂಪಾಕ್ಷಯ್ಯ, ಡಾ. ಎಂ.ಜಿ. ಚಂದ್ರಕಾಂತ್ ಅವರುಗಳು 'ಸಂಶೋಧನ ಶ್ರೀ' ಪ್ರಶಸ್ತಿಗಾಗಿ ದತ್ತಿ ನಿಡಿದ್ದಾರೆ. ಈ ಮೇಲಿನ ಎಲ್ಲರಿಗೂ ಅಕಾದೆಮಿಯು ಆಭಾರಿಯಾಗಿದೆ. ಇತಿಹಾಸ ದರ್ಶನ ವಾರ್ಷಿಕ ಸಂಚಿಕೆಯ ಮುದ್ರಣಕ್ಕೆ ಆಶೀರ್ವಾದಪೂರ್ವಕವಾಗಿ ಪ್ರತಿ ವರ್ಷದಂತೆ ಈ ವರ್ಷವೂ ರೂ.೨೫,೦೦೦/- (ಇಪ್ಪತ್ತೈದು ಸಾವಿರ ರೂ.) ನೆರವು ನೀಡಿರುವ ಬಾಳೆಹೊನ್ನೂರಿನ ಶ್ರೀಮದ್ರಂಭಾಪುರಿ ಮಹಾಸಂಸ್ಥಾನದ ಜ.ಶ್ರೀ.ಪ್ರಸನ್ನರೇಣುಕ ವೀರಸೋಮೇಶ್ವರ ರಾಜದೇಶೀಕೇಂದ್ರ ಶಿವಾಚಾರ್ಯ ಮಹಾಸ್ವಾಮೀಜಿ ಅವರಿಗೆ ಅಕಾದೆಮಿಯ ೨೯ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ ಸಮ್ಮೇಳನದ ಯಶಸ್ವಿಗೆ ಕಾರಣರಾದ ಕರ್ನಾಟಕ ಸಂಘ ಮಂಡ್ಯ (ರಿ). ಜಿಲ್ಲೆಯ ಆಡಳಿತಾಧಿಕಾರಿಗಳು ಹಾಗೂ ಇತರ ಕಾರ್ಯಕರ್ತರಿಗೂ ಅಕಾದೆಮಿಯು ಆಭಾರಿಯಾಗಿದೆ. ಇತಿಹಾಸ ದರ್ಶನ ಸಂಚಿಕೆಯ ೩೧ನೆಯ ಸಂಪುಟವನ್ನು ಸಂಪಾದಿಸಿಕೊಟ್ಟಿರುವ ಸಂಪಾದಕರಾದ ಡಾ. ದೇವರಕೊಂಡಾರೆಡ್ಡಿ, ಪ್ರೊ. ಜಿ.ಕೆ. ದೇವರಾಜಸ್ವಾಮಿ ಅವರಿಗೆ, ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ಎಸ್. ಮಂಜು ಹಾಗೂ ಸಿಬ್ಬಂದಿ ವರ್ಗದವರಿಗೆ ಅಕಾದೆಮಿಯು ಆಭಾರಿಯಾಗಿದೆ.

**ಕಾರ್ಯಕಾರಿ ಸಮಿತಿಯ ಅನುಮತಿ ಮೇರೆಗೆ**

**ಡಾ. ದೇವರಕೊಂಡಾರೆಡ್ಡಿ**
ಅಧ್ಯಕ್ಷರು

**ಡಾ. ಎಂ.ಜಿ. ನಾಗರಾಜ್**
**ಡಾ. ಎಚ್.ಎಸ್. ಗೋಪಾಲರಾವ್**
ಉಪಾಧ್ಯಕ್ಷರುಗಳು

**ಪ್ರೊ. ಜಿ.ಕೆ. ದೇವರಾಜಸ್ವಾಮಿ**
ಪ್ರಧಾನ ಕಾರ್ಯದರ್ಶಿ

**ಶ್ರೀ ಎಂ.ಬಿ. ಪಾಟೀಲ**
ಕೋಶಾಧಿಕಾರಿ

**ಡಾ. ಪಿ.ವಿ. ಕೃಷ್ಣಮೂರ್ತಿ**
**ಡಾ. ಜಯಮ್ಮ ಹೆಚ್. ಕರಿಯಣ್ಣ**
ಕಾರ್ಯದರ್ಶಿಗಳು

ಕನ್ನಡ ವಿವಿಯ ಕುಲಪತಿ ಡಾ. ಮಲ್ಲಿಕಾಘಂಟಿಯವರಿಂದ ರಾಣಿಬೆನ್ನೂರಿನಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಉದ್ಘಾಟನೆ.



ನಿಂಗನಗೌಡ ಹ ದೇಸಾಯಿ ಅವರ ಭಾಷಣ – ಪರಂಪರೆ ಉಳಿಸಿ ಕಾರ್ಯಕ್ರಮ ಕಲ್ಲದೇವನಹಳ್ಳಿ



ರಿವೈವಲ್ ಹೆರಿಟೇಜ್ ಹಬ್ – ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ದಿ ಆಕ್ಸ್‌ಫರ್ಡ್ ಕಾಲೇಜು, ಬೆಂಗಳೂರು



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ – ಸರ್ಕಾರಿ ಪ.ಪೂ. ಕಾಲೇಜು ಕಗ್ಗೋಡ, ವಿಜಯಪುರ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ – ಆದ್ದಪ್ಪ ಪಾಸೋಡಿ ಅವರಿಂದ ಐತಿಹಾಸಿಕ ಸ್ಮಾರಕಗಳ ರಕ್ಷಣೆ ಬಗ್ಗೆ ವಿವರಣೆ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ – ಬಿನಕನಹಳ್ಳಿ ಗುರುಮಲ್ಲೇಶ್ವರ ಪ್ರೌಢಶಾಲೆ, ತಿ.ನರಸೀಪುರ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ – ಎಸ್.ಎಂ.ಎಫ್.ಸಿ. ಕಾಲೇಜು, ಹೊನ್ನಾಳಿ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ – ಬಿನಕನ ಹಳ್ಳಿಯಲ್ಲಿ ಸ್ಮಾರಕಗಳನ್ನು ರಕ್ಷಿಸಿರುವುದು

## ಅಕಾದೆಮಿಯಲ್ಲಿ ಈವರೆಗೂ ಸ್ಥಾಪಿಸಿರುವ ದತ್ತಿಗಳ ವಿವರ.

| ಕ್ರ.ಸಂ. | ದತ್ತಿನಿಧಿಯನ್ನು ನೀಡಿರುವವರ ವಿವರ/ದತ್ತಿಯ ವಿವರ | ದತ್ತಿ ನಿಧಿ ಮೊತ್ತ | ಪ್ರಾರಂಭದ ವರ್ಷ |
|---|---|---|---|
| 1. | ಡಾ॥ ಬಾ.ರಾ.ಗೋಪಾಲ್ ನೆನಪಿನ ದತ್ತಿ ನಿಧಿ–ಶಾಸನ ತಜ್ಞರಿಗೆ | 1,10,000 | 2001 |
| 2. | ಡಾ॥ ಅಭಿಶಂಕರ್ ಅವರ ನೆನಪಿನಲ್ಲಿ ನೀಡುತ್ತಿರುವ ಸಮ್ಮೇಳನಾಧ್ಯಕ್ಷರ ಸ್ಮರಣಿಕೆ ಮತ್ತು ಸನ್ಮಾನ | 20,000 | 1998 |
| 3. | ಶ್ರೀ ಕೆ. ರಾಜನ್, ತುಮಕೂರು– ಪಿಎಚ್.ಡಿ ಪಡೆದ ವಿದ್ಯಾರ್ಥಿಗಳಿಗೆ ಉತ್ತೇಜನವಾಗಿ ನೀಡುವ ನಗದು ಬಹುಮಾನ | 50,000 | 2014 |
| 4. | ಡಾ॥ ದೇವರಕೊಂಡಾರೆಡ್ಡಿ ಅಭಿನಂದನಾ ಸಮಿತಿಯವರು ನೀಡಿರುವ ದತ್ತಿ (ವೆಬ್ ಸೈಟ್ ನ ವಾರ್ಷಿಕ ನಿರ್ವಹಣಾ ವೆಚ್ಚ ಬರಿಸಲು) | 1,10,000 | 2016 |
| 5. | ಶ್ರೀಮತಿ ಅರ್ಚನ. ಎಸ್. ರಾವ್ ಅವರು ನೀಡಿರುವ ದಿ॥ ಡಾ॥ ಸೂರ್ಯನಾಥ್ ಕಾಮತ್ ಅವರ ನೆನಪಿನ ದತ್ತಿ ನಿದಿ | 50,000 (ವಿವರಗಳು ಬರಬೇಕಿದೆ) | 2016 |
| 6. | ಶ್ರೀಮತಿ ವಿ. ಗೌರಮ್ಮ ಗಂಗಾಧರಯ್ಯ ಅವರ ಮಕ್ಕಳಾದ ಡಾ॥ ಎಂ.ಜಿ. ನಾಗರಾಜ್, ಶ್ರೀಮತಿ ಎಂ.ಜಿ. ಪದ್ಮ ವಿರೂಪಾಕ್ಷಯ್ಯ ಮತ್ತು ಡಾ॥ ಎಂ.ಜಿ. ಚಂದ್ರಕಾಂತ್ ಅವರುಗಳು ಸ್ಥಾಪಿಸಿರುವ "ಸಂಶೋಧನ ಶ್ರೀ" ಪ್ರಶಸ್ತಿ (ಶ್ರೇಷ್ಠ ಸಂಶೋಧಕರಿಗೆ ನೀಡುವ ಪ್ರಶಸ್ತಿ) | 1,80,000 | 2016 |
| | ಒಟ್ಟು | **5,20,000** | |

## ದಿನಾಂಕ 9.10.2015ರಿಂದ 21.10.2016ವರೆಗೆ ದಾನಿಗಳು

| ಕ್ರ.ಸಂ. | ದಾನಿಗಳು | ಮೊತ್ತ ರೂ. |
|---|---|---|
| 1. | ಶ್ರೀ ಸನತ್, ಚಾಮರಾಜಪೇಟೆ | 2000 |
| 2. | ಶ್ರೀ ಟಿ.ಎಂ.ಎಚ್. ಬಸವರಾಜ | 1000 |
| 3. | ಶ್ರೀ ಕೆ.ಪುಟ್ಟ ಕಾಮಯ್ಯ | 2000 |
| 4. | ಡಾ. ಹಂ.ಪ. ನಾಗರಾಜಯ್ಯ | 500 |
| 5. | ಶ್ರೀಮದ್ರಂಭಾಪುರಿ ಮಠ, ಬಾಳೆಹೊನ್ನೂರು | 25000 |
| 6. | ಶ್ರೀಮತಿ ಶಾಂತಿ ಪ್ರಭು ಬೆಂಗಳೂರು | 10000 |
| 7. | ಶ್ರೀ ಮಂಜು, ಲಕ್ಷ್ಮೀಮುದ್ರಣಾಲಯ | 10000 |
| 8. | ಶ್ರೀ ಟಿ. ಶ್ರೀನಿವಾಸ, ಬೆಂಗಳೂರು | 5000 |
| 9. | ಸಿದ್ದರಗಿರಿ ಚಂದ್ರೇಗೌಡರು, ಜಾಗರ ಚಿಕ್ಕಮಗಳೂರು, ಜಿಲ್ಲೆ | 5000 |
| 10. | ಡಾ. ಎಂ.ಜಿ. ನಾಗರಾಜ್ | 380 |
| | ಒಟ್ಟು | 60,880 |



# ಕರ್ನಾಟಕ ಇತಿಹಾಸ ಅಕಾದೆಮಿ(ರಿ.)

ಬೆಂಗಳೂರು




ಸಹಯೋಗ

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು

ಕೋಟೆ ಕೊತ್ತಲದ ಕಲ್ಲು ಕಿತ್ತರೆ
ಪ್ರಾಚೀನ ಪರಂಪರೆಯ ಪಂಚಾಂಗ ಕಿತ್ತಂತೆ

ತಾಳೆಗರಿಯ ರಕ್ಷಣೆ
ಹಳೆಯ ಪರಂಪರೆಗೆ ಪೋಷಣೆ

ಪ್ರಾಚೀನ ಶಾಸನಗಳ ನಾಶ
ಇತಿಹಾಸ ಪರಂಪರೆಯ ನಾಶ







# ಐತಿಹಾಸಿಕ
## ಪರಂಪರೆ ಉಳಿಸಿ

ಹಳೆಯಕೋಟೆ ಹಳೆದೇಗುಲ ಹಳೆಕಾಗದ ಕಡತ
ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ

ಇತಿಹಾಸದ ಸಂಶೋಧನೆ
ನಮ್ಮ ತಿಳಿವಿನ ವರ್ಧನೆ

ಪ್ರಾಚೀನ ಚರ್ಚ್, ಮಸೀದಿ, ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ

ಮನುಷ್ಯನಿಗೆ ನೆನಪು ಹೇಗೋ
ದೇಶಕ್ಕೆ ಇತಿಹಾಸ ಹಾಗೆ



ಹಳೆಯ ಕೆರೆಗಳ ನಿರ್ಲಕ್ಷ
ತಂದಿತೆಮಗೆ ದುರ್ಭಿಕ್ಷ

ವಿನ್ಯಾಸ : ಶ್ರೀನಿವಾಸ ಬಿ. - 2016

ಐತಿಹಾಸಿಕ ಪರಂಪರೆ ಉಳಿಸಿ ಭಿತ್ತಿ ಪತ್ರ - 2016

ISBN-978-81-921255-6-5




E-mail : karnatakaitihasaacademy25@gmail.com
Blog : itihasaacademy.blogspot.in
web : www.karnatakaitihasaacademy.org